# ಭಾಗ - 12

# ಪರಿಪೂರ್ಣ ಚಂದ್ರಿಕಾ

ಸೂತ್ರ - ಭಾಷ್ಯ - ಟೀಕಾ - ಟಿಪ್ಪಣಿ - ಮೊದಲಾದ ಗ್ರಂಥಗಳೊಂದಿಗೆ
ಶ್ರೀವ್ಯಾಸತೀರ್ಥರ ತಾತ್ಪರ್ಯಚಂದ್ರಿಕಾ ಸಂಸ್ಕೃತಮೂಲ ಹಾಗೂ ಕನ್ನಡಾನುವಾದ




ಎರಡನೆಯ ಅಧ್ಯಾಯದ ತೃತೀಯ ಪಾದದಿಂದ
ಎರಡನೆಯ ಅಧ್ಯಾಯದ ಚತುರ್ಥಪಾದ ಪರ್ಯಂತ

ಪ್ರಕಾಶನ :
ಶ್ರೀಪಾದರಾಜಮಠ
ರಾಘವೇಂದ್ರ ಕಾಲೋನಿ, ಬೆಂಗಳೂರು.

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

## ಭಾಗ -12

# ಪರಿಪೂರ್ಣಚಂದ್ರಿಕಾ

**ಎರಡನೆಯ ಅಧ್ಯಾಯ ತೃತೀಯಪಾದ ಮತ್ತು -**
**ಎರಡನೆಯ ಅಧ್ಯಾಯ ಚತುರ್ಥಪಾದ ಪರ್ಯಂತ**

ಬ್ರಹ್ಮಸೂತ್ರ , ಬ್ರಹ್ಮಸೂತ್ರಭಾಷ್ಯ, ಸೂತ್ರದೀಪಿಕಾ, ತತ್ವಪ್ರಕಾಶಿಕಾ,
ತಾತ್ಪರ್ಯಚಂದ್ರಿಕಾ, ಪ್ರಕಾಶ
ಸಂಸ್ಕೃತ ಮೂಲ ಹಾಗೂ ಕನ್ನಡ ಅನುವಾದ

* * * * * *

ಪ್ರಧಾನಸಂಪಾದಕರು :
**ವಿ॥ ಆರ್. ವೇಂಕಟೇಶಾಚಾರ್ಯ**
ಶ್ರೀರಂಗವ್

ಸಂಪಾದನೆ ಮತ್ತು ಅನುವಾದ :
**ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯ**
ಬೆಂಗಳೂರು

\- - - - - -

ಪ್ರಕಾಶಕರು
**ಶ್ರೀಪಾದರಾಜಮಠ**
ರಾಘವೇಂದ್ರಕಾಲೋನಿ, ಬೆಂಗಳೂರು.

ದಿನಾಂಕ : 21, 22, 23 ಮಾರ್ಚ್ 2017 ರಂದು ಶ್ರೀರಂಗಕ್ಷೇತ್ರದಲ್ಲಿ ಶ್ರೀಪಾದರಾಜಮಠದ ವತಿಯಿಂದ ಹಮ್ಮಿಕೊಂಡ ವ್ಯಾಸೋತ್ಸವದಲ್ಲಿ ಈ ಸಂಪುಟವು ಯತಿವರೇಣ್ಯರುಗಳಿಂದ ಲೋಕೇಶಾರ್ಪಣೆ ಲೊಕಾರ್ಪಣೆ ಆಯಿತು.

ಸಹಯೋಗ : ಶ್ರೀಮತಿ ಲೀಲಾ ಮತ್ತು ಶ್ರೀನಿವಾಸ ಪ್ರಹ್ಲಾದ
ಡಾಯಲ್ಸ್ ಟೌನ್, ಪೆನ್ಸಿಲ್ವೆನಿಯಾ, ೧೮೯೦೧,
ಯು.ಎಸ್.ಎ.

ಪ್ರಥಮಮುದ್ರಣ : 2017

ಬೆಲೆ : 1000

ಪ್ರತಿಗಳು : 1000





ಅಕ್ಷರಜೋಡಣೆ :
ಶ್ರೀ ಶರತ್, ಮೈಸೂರು.
ನಾಗಲತಾ(ಸುಧಾ)ಗಿರಿ,

ಮುದ್ರಣ
ಮುಕ್ತಿಪಥ ಮುದ್ರಣಾಲಯ, ಬೆಂಗಳೂರು.

# ವಿಷಯಾನುಕ್ರಮಣಿಕೆ

## ಎರಡನೆಯ ಅಧ್ಯಾಯ ಮೂರನೆಯ ಪಾದ

## ಪೃಥಿವ್ಯಧಿಕರಣ



## ತದಭಿಧ್ಯಾನಾಧಿಕರಣ



## ವಿಪರ್ಯಯಾಧಿಕರಣ



## ಅಂತರಾವಿಜ್ಞಾನಾಧಿಕರಣ



## ಆತ್ಮಾಧಿಕರಣ



## ಜ್ಞಾಧಿಕರಣ



## ಉತ್ಕ್ರಾಂತ್ಯಧಿಕರಣ

## ವ್ಯತಿರೇಕಾಧಿಕರಣ



## ಪೃಥಗುಪದೇಶಾಧಿಕರಣ



## ಯಾವದಧಿಕರಣ



## ಪುಂಸ್ತ್ವಾಧಿಕರಣ



## ಕರ್ತೃತ್ವಾಧಿಕರಣ



## ಅಂಶಾಧಿಕರಣ



## ಅದೃಷ್ಟಾಧಿಕರಣ

# ಎರಡನೆಯ ಅಧ್ಯಾಯ ಚತುರ್ಥಪಾದ

## ಚಕ್ಷುರಾದ್ಯಧಿಕರಣ



## ಪಂಚವೃತ್ತ್ಯಧಿಕರಣ



## ಪ್ರಾಣಾಣುತ್ವಾಧಿಕರಣ



## ಜ್ಯೋತಿರಾದ್ಯಧಿಕರಣ



## ತ ಇಂದ್ರಿಯಾಧಿಕರಣ



## ಸಂಜ್ಞಾಮೂರ್ತಿಕ್ಲೃಪ್ತ್ಯಧಿಕರಣ



## ಮಾಂಸಾಧಿಕರಣ



* * * *

# ನಿಜವಾಗಿಯೂ ಪರಿಪೂರ್ಣಚಂದ್ರಿಕಾ ಬೃಹತ್ ಯೋಜನೆ ನಡೆದದ್ದು ಹೇಗೆ ... ?

ಅದೊಂದು ದಿನ.... ಅರಳುತ್ತಿದ್ದ ಸಾವಿರ ಕನಸುಗಳು ನುಚ್ಚು ನೂರಾದವು. ಬೆಟ್ಟದಂಥ ಹುರುಪು ಒಮ್ಮೆಲೇ ಕುಸಿಯಿತು. ಜೀವನದ ನೂರಾರು ಮಾರ್ಗಗಳಿಗೆ ವಿಧಿಯೇ ಬಾಗಿಲು ಜಡಿಯಿತು. ಇದ್ದ ಒಡನಾಡಿಗಳೆಲ್ಲರೂ ದೂರಾದರು. ಇದ್ದ ಶ್ರೀಮಂತಿಕೆಯು ಹೆದರಿ ಓಡಿ ಹೋಯಿತು. ಮನೆ, ಮಠ, ವಾಹನಗಳು ಬರಿದಾದವು. ಸ್ವತಃ ಶಿಷ್ಯರೆಲ್ಲರೂ ಒಗ್ಗಟ್ಟಾಗಿ ''ಬಹಿಷ್ಕಾರ'' ಎಂದರು. ಎಂದೂ ಊಹಿಸದ ದುರ್ದೈವದ ವಿಶ್ವರೂಪದರ್ಶನವಾಯಿತು. ನೂರರಲ್ಲಿ ಬರಬೇಕಾದ ಭಯ ಇಪ್ಪತ್ತೇಳರಲ್ಲೇ ಬಂದಿತ್ತು.

ಯಾರೂ ಬಾರದ, ಯಾರಿಗೂ ಕಾಣದ ಕೋಣೆಯೊಂದರಲ್ಲಿ ವಾಸ ಅನಿವಾರ್ಯವಾಯಿತು. ಎರಡು ಹೊತ್ತು ರುಚಿಸದ ಅನ್ನ ಗಂಟಲಲ್ಲಿ ತುರುಕಬೇಕಾಯಿತು. ನಿರಂತರ ಜನಸಂಪರ್ಕದಲ್ಲಿ ಕಾಲ ಕಳೆಯುತ್ತಿದ್ದ ಮನಕ್ಕೆ ಇದ್ದಕ್ಕಿದ್ದಂತೆ ನಿರ್ಜನದೇಶ ಹೇಗೆ ತಾನೇ ಒಗ್ಗೀತು !!! ಏಕೆ ಹೇಗೆ ? ಈಗ ಹೇಗೆ ? ಮುಂದೆ ಹೇಗೆ ? ಕೊನೆ ಹೇಗೆ ? ಎಂಬುದರ ಚಿಂತೆಯಲ್ಲಿ ಇರುಳೆಲ್ಲಾ ಹಗಲೇ ಆಯಿತು.

ಕಡು ಅಚ್ಚರಿ .... !!! ಆಗೊಬ್ಬ ನನಗಾಗಿ ಕಾಯುತ್ತಿದ್ದ. ನಾ ಕುಳಿತಲ್ಲಿ, ಹೋದಲ್ಲಿ, ಬಂದಲ್ಲಿ ಅವನಿಗೆ ನನ್ನದೇ ಚಿಂತೆ. ನಾ ಮಾತ್ರ ಅವನ ಬಗ್ಗೆ ಅರಿಯದೇ ದಿಕ್ಕು ತಪ್ಪಿದ್ದೆ. ಜೀವನವನ್ನೇ ಧೂಳೀಪಟ ಮಾಡಿಕೊಳ್ಳುತ್ತಿದ್ದೆ. ಆದರೆ ಉಳಿದೆಲ್ಲ ದಿಕ್ಕುಗಳು ಮುಚ್ಚಿದಾಗ ಇವನಿರುವ ದಿಕ್ಕು ಕಂಡಿತು. ಬೇರಾರೂ ಗತಿಯಿಲ್ಲದೇ ಇವನೇ ಗತಿಯಾಯಿತು.

ಅಂದು ವ್ಯಯ ಸಂವತ್ಸರದ ಮಾಘಶುದ್ಧ ಪಂಚಮಿ. ಪ್ರಾತಃಕಾಲದಲ್ಲಿ ಆ ಆಪದ್ಬಾಂಧವನೆಡೆ ಸಾಗಿದೆ. ತಾಯಿಯನ್ನು ಕಳೆದುಕೊಂಡ ಮಗು, ಜಗತ್ತನ್ನೇ ಮರೆತು ತಾಯಿ ಸಿಕ್ಕಾಗ ಅವಳೆಡೆ ಧಾವಿಸುವಂತೆ ಇವನೆಡೆ ಸಾಗಿದೆ... ಶರಣೆಂದೆ... ವರ ನೀಡೆಂದೆ... ಯಾರೂ ಬೇಡವೆಂದೆ.... ಅಂತರಂಗದಲ್ಲಿ ಅವನಿಂದ ಉತ್ತರ ಸ್ಫುರಿಸಿತು -

''ನಾ ಬಯಸುವವ ನನ್ನಿಂದ ದೂರಾದಾಗ, ಅವ ಬಯಸಿದ್ದನ್ನೆಲ್ಲಾ ಕಡಿತಗೊಳಿಸುವುದು ಎನ್ನ ಸ್ವಭಾವ. ನಿನ್ನ ದುಃಖಕ್ಕೆ ಯಾರೂ ಹೊಣೆಗಾರರಲ್ಲ. ನೇರ ಹೊಣೆಗಾರ ನಾನೊಬ್ಬ ಮಾತ್ರ. ಬಾ... ಎನ್ನೆಡೆ... ನಿನ್ನ ಯೋಗಕ್ಷೇಮದ ಜವಾಬ್ದಾರಿ ಎನ್ನದು... ಬಿಡು ಚಿಂತೆ... ಎನ್ನ ನಂಬಿ ನೀ ನಡೆ ಮುಂದೆ''

'ದಾರಿಯೇ ಇಲ್ಲದಲ್ಲಿ ಕುಂಟನು ನಡೆಯಲು ಹೇಗೆ ಸಾಧ್ಯ ?' ಎಂದು ಪ್ರಶ್ನಿಸಿದೆ. 'ಅಜ್ಞಾನದ ಕೂಸು ಜ್ಞಾನದೆಡೆಗೆ ಸಾಗುವುದು ಹೇಗೆ ಸಾಧ್ಯ ?' ಎಂದು ಮರು ಪ್ರಶ್ನಿಸಿದೆ.

ಅಂತಿಮ ಉತ್ತರ ಹೀಗಿತ್ತು -

ನನ್ನ ಅನುಗ್ರಹವನ್ನು ಪಡೆದವನು ಏನನ್ನು ಬೇಕಾದರೂ ಸಾಧಿಸಲು ಸಮರ್ಥನಾಗುವನು. ಕೀಟವೂ ರಾಜ್ಯಭಾರ ಮಾಡುತ್ತದೆ. ವ್ಯಭಿಚಾರಿಪುರುಷನೂ ಮಹಾಸಾಧಕನಾಗುವನು. ನಿದ್ದೆ ಮಾಡುವವನೂ ಮೋಕ್ಷ ಐದುವನು. ಸಾಮಾನ್ಯ ಮನುಷ್ಯನಾಗಿದ್ದರೂ ದೇವತೆಗಳಿಂದ ಮಾನ್ಯನಾಗುವನು. ಪುಟ್ಟ ಮಗುವೂ ಕೂಡ ಕೋಟ್ಯಂತರ ಶತ್ರುಗಳನ್ನು ಎದುರಿಸುವನು. ಕಡು ಅಜ್ಞಾನಿಯೂ ದಿವ್ಯಜ್ಞಾನಿಯಾಗುವನು.

ಹೀಗೆ ಅಘಟಿತವಾದದ್ದನ್ನು ಘಟನೆ ಮಾಡುವುದೇ ಎನ್ನ ಸಾಮರ್ಥ್ಯ. ಶ್ರೀವ್ಯಾಸರಾಜರು ರಚಿಸಿರುವ ತಾತ್ಪರ್ಯಚಂದ್ರಿಕಾಗ್ರಂಥದ ಮೂಲಕ ನನ್ನ ಸರ್ವೋತ್ತಮತ್ವವನ್ನು ಸಾಬೀತು ಪಡಿಸುವುದು ನಿನ್ನ ಕರ್ತವ್ಯ.

ಅವ್ಯಕ್ತವಾಗಿ ಅಂತರಂಗದಲ್ಲಿ ಹೀಗೆ ವರ ನೀಡಿದ ಅಪದ್ಬಾಂಧವ ಬೇರೆ ಯಾರೂ ಅಲ್ಲ. ಹಯಗ್ರೀವದೇವರು.

ಹಯಗ್ರೀವದೇವರ ಅನುಗ್ರಹವೇನೋ ಆಯಿತು. ಆದರೆ ತಾತ್ಪರ್ಯಚಂದ್ರಿಕಾ ಅಧ್ಯಯನ ಸುಲಭವಲ್ಲ.

ತಾತ್ಪರ್ಯಚಂದ್ರಿಕೆಯ ಶೈಲಿ ಬಲು ಕಠಿಣ. ವಿಷಯಗಳು ಬಲು ಅಗಾಧ. ಶ್ರೀವ್ಯಾಸರಾಜರ ನಿಜವಾದ ಭಕ್ತರಿಗಷ್ಟೇ ಅರ್ಥವಾಗಲು ಸಾಧ್ಯ. ಇದರ ಮಧ್ಯೆ ಮುದ್ರಿತಪುಸ್ತಕಗಳಲ್ಲಿ ಹಲವಾರು ದೋಷಗಳಿವೆ. ಕೆಲವೊಮ್ಮೆ ವಾಕ್ಯಗಳು ನಿರ್ದುಷ್ಟವಾಗಿದ್ದರೂ ಅರ್ಥವಾಗದಿದ್ದಾಗ ಆ ವಾಕ್ಯದ ಯಾಥಾರ್ಥ್ಯದಲ್ಲೇ ಸಂಶಯವುಂಟಾಗುವುದು. ಕೆಲವೊಮ್ಮೆ ಅರ್ಥಮಾಡಿಕೊಂಡ ವಿಷಯದಲ್ಲೂ ದಾರ್ಢ್ಯವಿರುವುದಿಲ್ಲ. ಇಂಥ ಸಂದರ್ಭಗಳಲ್ಲಿ ಹತ್ತಾರು ವಿದ್ವಾಂಸರುಗಳನ್ನು ಉಪಸತ್ತಿ ಮಾಡಬೇಕು. ಅವರೆಲ್ಲರ ಬಳಿ ತೆರಳಿ, ಜಟಿಲ ವಾಕ್ಯಗಳ ಬಗ್ಗೆ ವಿಮರ್ಶೆ ನಡೆಸಬೇಕು. ಅರ್ಥವಾದ ವಾಕ್ಯಗಳನ್ನು ಪುನಃ ದೃಢಪಡಿಸಿಕೊಳ್ಳಬೇಕು. ಇಷ್ಟಿದ್ದರೂ ಸಾಲದು. ಹತ್ತಾರು ವಾಕ್ಯಾರ್ಥಗೋಷ್ಠಿಗಳಲ್ಲಿ ಪಾಲ್ಗೊಂಡಿರಬೇಕು. ಹತ್ತಾರು ವಿದ್ಯಾರ್ಥಿಗಳಿಗೆ ಚಂದ್ರಿಕಾಪಾಠ ಮಾಡಿರಬೇಕು. ಸ್ವತಃ ಸಂಶಯವಿಲ್ಲದೇ, ಮತ್ತೊಬ್ಬರ ಸಂಶಯವನ್ನು ಪರಿಹಾರ ಮಾಡುವ ಸಾಮರ್ಥ್ಯ ಇರಬೇಕು. ಇಂಥ ಸಾಮರ್ಥ್ಯ ಇರುವವನು ಮಾತ್ರ ತಾತ್ಪರ್ಯಗ್ರಂಥವನ್ನು ಅರ್ಥಮಾಡಿಕೊಳ್ಳಲು ಸಾಧ್ಯ. ಮತ್ತು ಅನುವಾದ ಮಾಡಿ ಮತ್ತೊಬ್ಬರಿಗೆ ಅರ್ಥ ಮಾಡಿಸಲು ಸಾಧ್ಯ.

ಅಷ್ಟೇ ಅಲ್ಲದೇ ಜಗತ್ತಿನಲ್ಲಿ ಉತ್ತಮ ವಿದ್ವಾಂಸನೆಂಬ ಹೆಸರಿರಬೇಕು. ಆರ್ಥಿಕವಾಗಿ ಅತ್ಯಂತ ಬಲಿಷ್ಠನಾಗಿರಬೇಕು. ಹಲವು ಸೇವಕರಿರಬೇಕು. ಆಗ ಒಂದು ಜ್ಞಾನಪ್ರಸಾರದ ಯೋಜನೆಯನ್ನು ಕೈಗೆತ್ತಿಕೊಂಡು ಮುಕ್ತಾಯ ಮಾಡಲು ಸಾಧ್ಯವಾಗುತ್ತದೆ. ನಾನಾದರೋ, ಒಬ್ಬ ಸಾಮಾನ್ಯ ವಿದ್ವಾಂಸ. ಇರುವ ಸಾಮರ್ಥ್ಯವೂ ಕೂಡ ಅಡಗಿ ಹೋಗಿದೆ. ನೂರಾರು ಸ್ನೇಹಿತ ವಿದ್ವಾಂಸರ ಬಳಿ ತೆರಳಿ ಉಪಸತ್ತಿ ಮಾಡುವ ಸಂದರ್ಭವೂ ಇಲ್ಲ. ಹೀಗಿರುವಾಗ ತಾತ್ಪರ್ಯಚಂದ್ರಿಕಾ ಗ್ರಂಥವನ್ನು

ಅರ್ಥಮಾಡಿಕೊಂಡು ಅನುವಾದ ಮಾಡುವುದು ಎನ್ನ ಪಾಲಿಗೆ ಅಷ್ಟಮರಸವೇ ಎನಿಸಿತು. ಆದರೂ ಕೇವಲ ಹಯಗ್ರೀವದೇವರ ಅನುಗ್ರಹದಿಂದ ಅದೇ ಮಾಘಶುದ್ಧ ಪಂಚಮಿಯ ಪ್ರಾತಃಕಾಲದ ಸುಮಾರು ಒಂಬತ್ತು ಗಂಟೆಗೆ ಲೇಖನೀ ಹಿಡಿದು ಮಂಗಳಾಚರಣೆ ಪ್ರಾರಂಭವೂ ಆಯಿತು.

ಅಸ್ಪೃಷ್ಟದೋಷಗಂಧಾಯ ಕಲ್ಯಾಣಗುಣಸಿಂಧವೇ ।
ನಮೋನಮೋ ಭಕ್ತಮುಕ್ತಿದಾಯಿನೇ ಶೇಷಶಾಯಿನೇ ॥

2007 ರಲ್ಲಿ ಅಂದು ಹಾಡಿದ ಮಂಗಳಕ್ಕೆ, ವಿಶ್ರಾಂತಿ ದೊರತದ್ದು ದುರ್ಮುಖಿ ನಾಮಸಂವತ್ಸರ 2017 ಫಾಲ್ಗುಣ, ಬಹುಳ ಚತುರ್ಥಿ. (ಮಾರ್ಚ್ 16, 2017). ಹತ್ತು ವರ್ಷಗಳ ಕಾಲ ನಿರಂತರ ಪರಿಶ್ರಮದ ಫಲವೇ ಈ ಹನ್ನೆರಡು ಸಂಪುಟಗಳ ಬೃಹತ್ ಯೋಜನೆ.

'ನಾನು ಬರೆದೆ'. 'ನಾನು ತಾತ್ಪರ್ಯಚಂದ್ರಿಕೆಯನ್ನು ಅರ್ಥಮಾಡಿಕೊಂಡಿರುವೆ' ಎಂಬ ಹಮ್ಮು ಕಿಂಚಿತ್ತೂ ನನ್ನಲ್ಲಿಲ್ಲ. ಅಂತರ್ಯಾಮಿಯಾದ ಹಯಗ್ರೀವದೇವರೇ ಸ್ವತಃ ಕುಳಿತು ಪ್ರೇರಣೆ ಮಾಡಿ, ಬರೆಸಿದ್ದಾರೆ. ಇದರಲ್ಲಿ ಎಳ್ಳಷ್ಟೂ ಪಾತ್ರ ನನ್ನದಿಲ್ಲ. ಆದ್ದರಿಂದ ಒಬ್ಬ ಸಾಮಾನ್ಯ ವಿದ್ವಾಂಸನಿಂದ ಇಷ್ಟೊಂದು ದೊಡ್ಡ ಕೆಲಸ ಹೇಗಾಯಿತು ? ಎಂಬ ಪ್ರಶ್ನೆಗೆ ಹಯಗ್ರೀವದೇವರ ಅನುಗ್ರಹವೆಂಬುದೇ ಉತ್ತರ.

ಹಯಗ್ರೀವದೇವರ ಅನುಗ್ರಹ ಎಂಬ ಉತ್ತರವೇನೋ ಸರಿ. ಲೌಕಿಕವಾಗಿ ಹೇಗೆ ನಡೆಯಿತು. ಹತ್ತಾರು ವಿದ್ವಾಂಸರುಗಳ ಸಂಪರ್ಕ ಹೇಗಾಯಿತು ? ಸಾಮಾನ್ಯನಿಗೆ ಉತ್ತಮ ವೈದುಷ್ಯ ಹೇಗೆ ಬಂದಿತು? ಈ ಎಲ್ಲಾ ಪ್ರಶ್ನೆಗಳು ಹಾಗೇ ಉಳಿದವು ?

ಈ ಗೊಂದಲ ಅಂದು ನನನ್ನೂ ಕಾಡಿತ್ತು. ಆಗ ನನ್ನ ಸ್ನೇಹಿತರೊಬ್ಬರಿಂದ ಉತ್ತರ ಹೀಗೆ ದೊರಕಿತು -

ಶ್ರೀರಂಗಮ್ ಕ್ಷೇತ್ರದಲ್ಲಿ ರಾಮಾಚಂದ್ರಾಚಾರ್ಯರೆಂಬ ಉತ್ತಮ ಸಾಧಕವಿದ್ವಾಂಸ-ರೊಬ್ಬರಿದ್ದಾರೆ. ಅವರ ಮಕ್ಕಳೇ ಆರ್. ವೇಂಕಟೇಶಾಚಾರ್ಯರು. ಬಾಲ್ಯದಲ್ಲಿ ಮೂರ್ನಾಕು ವರ್ಷಗಳಿಂದಲೇ ತಂದೆಯ ಬಳಿ ಇವರಿಗೆ ವಿದ್ಯಾಭ್ಯಾಸ ಪ್ರಾರಂಭವಾಯಿತು. ಹತ್ತನೆಯ ವರ್ಷದಲ್ಲಿ ಮೂವತ್ತೈದರ ವಿದ್ವತ್ತು ದಕ್ಕುವಂತೆ ಪಾಠ ಹೇಳಿದರು. ಹದಿನಾಕನೆಯ ವರ್ಷದಲ್ಲೇ ಸುಧಾಮಂಗಳವಾಗಿ ವಿದ್ವಾಂಸರು, ಪೀಠಾಧಿಪತಿಗಳು

ಮೆಚ್ಚುವಂತೆ ಪರೀಕ್ಷೆ ನೀಡಿದರು. ಅಚ್ಚರಿ ಎಂದರೆ ಉಳಿದ ವೇದಾಂತ ಗುರುಕುಲಗಳಲ್ಲಿ ನಡೆಯುವ ಪಾಠಕ್ರಮ ಇವರದ್ದಲ್ಲ. ತರ್ಕ, ವ್ಯಾಕರಣ, ಮೀಮಾಂಸಾ, ಕಾಳಿದಾಸಾದಿ ಕವಿಗಳಿಂದ ರಚಿತವಾದ ಕಾವ್ಯಗಳನ್ನು ಪಾಠ ಮಾಡುವ ಕ್ರಮವೇ ಇವರಲ್ಲಿಲ್ಲ. ಕೇವಲ ಸರ್ವಮೂಲಗ್ರಂಥಗಳ ಪಾಠವನ್ನಷ್ಟೇ ತಂದೆಯ ಬಳಿ ಕೇಳಿದ್ದಾರೆ. ಹಾಗೂ ಸರ್ವಮೂಲಗ್ರಂಥಗಳಿಗೆ ಸಂಬಂಧಪಟ್ಟ ಎಲ್ಲಾ ಟೀಕೆಗಳನ್ನು, ಟಿಪ್ಪಣಿಗಳನ್ನು ಶ್ರದ್ಧೆಯಿಂದ ಅಧ್ಯಯನ ಮಾಡಿದ್ದಾರೆ. ಇದರಿಂದ ದೊರಕಿದ ವಿದ್ವತ್ತು ಅವರಲ್ಲಿ ಎಷ್ಟಿದೇ ಎಂದರೆ ಕಲ್ಪನೆಗೂ ಸಿಗಲು ಸಾಧ್ಯವಿಲ್ಲ. ಚತುಃಶಾಸ್ತ್ರಪಾಂಡಿತ್ಯವೇ ಇದರಿಂದ ದೊರಕಿದೆ. ತರ್ಕ, ವ್ಯಾಕರಣಾದಿ ಶಾಸ್ತ್ರಗಳನ್ನು ಅಧ್ಯಯನ ಮಾಡಿದವರೂ ಕೂಡ ತಮ್ಮ ಗೊಂದಲಗಳನ್ನು ಇವರ ಬಳಿ ಪರಿಹರಿಸಿಕೊಳ್ಳುತ್ತಾರೆ. ಇದರಿಂದ ತಿಳಿಯುವ ಅಚ್ಚರಿ ಸಂಗತಿ ಎಂದರೆ ನಮ್ಮ ದ್ವೈತಶಾಸ್ತ್ರವನ್ನು ಅನನ್ಯವಾಗಿ ನಂಬಿ, ಹಗಲಿರುಳೂ ಅದೊಂದನ್ನೇ ಅಧ್ಯಯನ ಮಾಡಿದರೆ ಸಾಕು, ಉಳಿದದ್ದನ್ನು ಅಧ್ಯಯನ ಮಾಡುವ ಅವಶ್ಯಕತೆಯಿರುವುದಿಲ್ಲ. ಹೀಗೆ ದ್ವೈತಸಿದ್ಧಾಂತದಲ್ಲಿ ಬಾಲ್ಯದಿಂದಲೇ ಅತ್ಯಂತ ನಿಷ್ಠಾವಂತರಾದ ಆರ್. ವೇಂಕಟೇಶಾಚಾರ್ಯರು ತಮ್ಮ ಮೂವತ್ತನೆಯ ವರ್ಷದಲ್ಲಿ ತಾವು ಪಾಠ ಕೇಳಿದ್ದೆಲ್ಲವನ್ನು ಶಿಷ್ಯಂದಿರಿಗೆ ಅಧ್ಯಾಪನ ಮಾಡಿದ್ದಾಗಿತ್ತು. ವ್ಯಾಸತ್ರಯಗಳನ್ನೂ ಕೂಡ ಪಾಠ ಮಾಡಿದ್ದಾಗಿತ್ತು. ಮಧ್ವಮತಾನುಯಾಯಿಗಳೆಲ್ಲರೂ ಇವರನ್ನು ಕಂಡು ಸಂತೋಷ ಪಡಲೇಬೇಕು. ಅವರನ್ನು ಸಂಪರ್ಕ ಮಾಡಿದಾಗ ನಿಮ್ಮೆಲ್ಲಾ ಸಮಸ್ಯೆಗಳಿಗೆ ಉತ್ತರ ಸಿಗುತ್ತದೆಂದು ತಿಳಿಸಿದರು. ಅದರಂತೆ ನಡೆದುಕೊಂಡೆ.

ಈಗ ತಾತ್ಪರ್ಯಚಂದ್ರಿಕೆಯ ಲೇಖನದಿಂದ ಆನಂದಕ್ಕೆ ಪಾರವೇ ಇಲ್ಲ. ಅಂದು ಎಲ್ಲವೂ ಬೇಕಿತ್ತು. ಇಂದು ಯಾವುದೂ ಬೇಡ. ಬೇಕಿನಲ್ಲಿರುವ ದುಃಖದಷ್ಟೇ ಸುಖ ಈ ಬೇಡದಲ್ಲಿದೆ. ತಾತ್ಪರ್ಯಚಂದಿಕೆಯ ಹಿರಿಮೆ, ಮಹಿಮೆ, ವಿಶಾಲತೆ, ಗಾಢತೆಗಳಲ್ಲಿ ಮುಳುಗಿದಾಗ ಉಳಿದೆಲ್ಲವೂ ನಶ್ವರ, ಅಲ್ಪವೆನಿಸಿದವು. ಸತತ ಮೂರು ವರ್ಷಗಳ ನಿರಂತರ ಪರಿಶ್ರಮದಿಂದ ಕೇವಲ ಐದು ಅಧಿಕರಣಗಳ ಲೇಖನಯಜ್ಞ ಸಮಾಪ್ತಿಗೊಂಡಿತು. ತಿರುಗಿ ನೋಡಿದಾಗ ಸಾವಿರಾರು ಪುಟಗಳ ರಾಶಿಯೇ ಬಿದ್ದಿತ್ತು. ಒಮ್ಮೆ ನನಗೇ ಅಚ್ಚರಿಯಾಯಿತು. ಮುದ್ರಣ ಮಾಡಿಸಿ, ಪ್ರಕಾಶನ ಮಾಡಬೇಕೆಂಬ ಅಪೇಕ್ಷೆ ಇರಲಿಲ್ಲ. ''ಜೀವನದಲ್ಲಿ ಸಾಧನೆಯ ದೃಷ್ಟಿಯಿಂದ ಪರಿಪೂರ್ಣವಾಗಿ ತಾತ್ಪರ್ಯಚಂದ್ರಿಕೆಯನ್ನು ಬರೆದು ಮುಗಿಸೋಣ. ಅನಂತರ ಮುದ್ರಣದ ವಿಚಾರ'' ಎಂದಷ್ಟೇ ಮನದಲ್ಲಿತ್ತು. ಆದರೆ ಹರಿಚಿತ್ತ ಬೇರೆಯೇ ಇತ್ತು.

ಒಮ್ಮೆ ಇದ್ದಕ್ಕಿದ್ದಂತೆ ಮನೆಗೆ ಅಣ್ಣ ವಿಜಯೀಂದ್ರಾಚಾರ್ಯರು ಬಂದರು. ಬರೆದಿಟ್ಟ ಪುಸ್ತಕ ರಾಶಿಯನ್ನು ಕಂಡು ಅಚ್ಚರಿಗೊಂಡರು. 'ಇಂದೇ ಮುದ್ರಣ ಮಾಡಿಸೋಣ. ಎಷ್ಟು ಲಕ್ಷವಾದರೂ ಖರ್ಚಾಗಲಿ. ನಾನೇ ಭಾರ ನಿರ್ವಹಿಸುತ್ತೇನೆ' ಎಂದರು. ಆಗ ಅವರು ತಮ್ಮ ಹರಿವಾಯುಪ್ರಕಾಶನದಿಂದ ಮೊದಲೆರಡು ಸಂಪುಟಗಳನ್ನು ಮುದ್ರಿಸಿದರು. 2500 ಪುಟಗಳಿಂದ ಕೂಡಿದ ಎರಡು ಸಂಪುಟಗಳು ಜಿಜ್ಞಾಸುಗಳ ಕೈ ಸೇರಿದವು.

ಮುಂದೆ ಮತ್ತೊಂದು ಅಚ್ಚರಿ ಎದುರಾಯಿತು. ಎರಡನೆಯ ಸಂಪುಟ ಮುದ್ರಣವಾಗುತ್ತಿದ್ದಾಗ, ಶ್ರೀಪಾದರಾಜಮಠದಿಂದ ಶ್ರೀ ಹೆಚ್. ಬಿ. ಲಕ್ಷ್ಮೀನಾರಾಯಣಾಚಾರ್ಯರು ದೂರವಾಣಿಯ ಮೂಲಕ ಪುಸ್ತಕವನ್ನು ಪ್ರಶಂಸಿಸಿ ಭೇಟಿ ಮಾಡಲು ಅಪೇಕ್ಷಿಸಿದರು. ಅವರ ಅಪೇಕ್ಷೆಯಂತೆ ಮಠಕ್ಕೆ ತೆರಳಿ ಭೇಟಿ ಮಾಡಿದೆ. 'ನೀವು ಬರೆಯುತ್ತಿರುವ ಎಲ್ಲಾ ಪುಸ್ತಕಗಳನ್ನು ನಮ್ಮ ಮಠದಿಂದ ಮುದ್ರಣ ಮಾಡುತ್ತೇವೆ. ನೀವು ಚಿಂತಿಸಬೇಡಿ' ಎಂದರು. ಇವರ ಮಾತನ್ನು ಕೇಳಿದ ನನ್ನ ಮನ ಒಮ್ಮೆಲೇ ಸಂತೋಷದಿಂದ ಒಪ್ಪಲಿಲ್ಲ. ಲೋಕದ ಹಲವಾರು ಅನುಭವಗಳ ಹಿನ್ನೆಲೆಯಲ್ಲಿ ಸಂಶಯದೃಷ್ಟಿಯಲ್ಲೇ ಕಂಡು ಸಣ್ಣದಾಯಿತು. ಅವರ ಧಾರಾಳತನ ಒಮ್ಮೆಲೇ ಅರ್ಥಮಾಡಿಕೊಳ್ಳಲಾಗಲಿಲ್ಲ. ಕಾಲಾಂತರದಲ್ಲಿ ಅನೇಕ ಪ್ರಸಂಗಗಳಿಂದ ಶ್ರೀ ಹೆಚ್. ಬಿ. ಲಕ್ಷ್ಮೀನಾರಾಯಣಾಚಾರ್ಯರ ವಿಶಾಲಹೃದಯ ಅರ್ಥವಾಯಿತು. ಮುಂದಿನ ಎಲ್ಲಾ ಸಂಪುಟಗಳ ಸಮರ್ಪಣೆ. ಶ್ರೀಪಾದರಾಜರಿಗೆ ಮಾಡುವ ಸೌಭಾಗ್ಯ ದೊರಕಿತು. ಮೂರನೆಯ ಸಂಪುಟದಿಂದ ಹನ್ನೆರಡನೆಯ ಸಂಪುಟದ ತನಕ ಎಲ್ಲಾ ಸಂಪುಟಗಳ ಜವಾಬ್ದಾರಿಯನ್ನು ತೆಗೆದುಕೊಂಡು ಮುದ್ರಣ ಮಾಡುತ್ತಿದ್ದಾರೆ. ಇದರಿಂದ ಶ್ರೀಪಾದರಾಜರಿಗೆ ಅತ್ಯಂತ ಸಂತೋಷವಾಗುತ್ತದೆಂಬುದಷ್ಟೇ ಇವರ ಹೆಬ್ಬಾಸೆ. ಪೂಜ್ಯ ಶ್ರೀ ಹೆಚ್. ಬಿ.ಲಕ್ಷ್ಮೀನಾರಾಯಣಾಚಾರ್ಯರು ಈ ಸಂಪುಟಗಳ ಮುದ್ರಣದ ಜವಾಬ್ದಾರಿಯನ್ನು ತೆಗೆದುಕೊಳ್ಳದಿದ್ದರೆ ಈ ಪರಿಪೂರ್ಣಚಂದ್ರಿಕೆಯು ಪ್ರಕಾಶನಗೊಳ್ಳಲು ಸಾಧ್ಯವೇ ಆಗುತ್ತಿರಲಿಲ್ಲ. ಇವರ ಉಪಕಾರಕ್ಕೆ ಎಂದೆಂದೂ ಚಿರಋಣಿ.

ಪರಿಪೂರ್ಣಚಂದ್ರಿಕಾ ಗ್ರಂಥವು ಮೊದಲು ಪ್ರಕಾಶನಗೊಂಡಾಗ ಎಲ್ಲಾ ನಗರಗಳಿಂದ ಅನೇಕ ಜಿಜ್ಞಾಸುಗಳು ಪುಸ್ತಕಗಳನ್ನು ಖರೀದಿ ಮಾಡಿದರು. ಹನ್ನೆರಡನೆಯ ಸಂಪುಟ ಮುದ್ರಣವಾಗುವಷ್ಟರಲ್ಲಿ ಪ್ರಾರಂಭದ ಸಂಪುಟಗಳ ಸಾವಿರ ಪ್ರತಿಗಳು ಮುಗಿದುಹೋಗಿವೆ. ಪುನರ್ಮುದ್ರಣಗೊಂಡಿವೆ. ಅನೇಕ ಜಿಜ್ಞಾಸುಗಳು ಮುಕ್ತಕಂಠದಿಂದ ಪ್ರಶಂಸೆ ಮಾಡಿದ್ದಾರೆ. ಈ ಎಲ್ಲಾ ಜಿಜ್ಞಾಸುವೃಂದಕ್ಕೂ ನನ್ನ ಅನಂತ ಕೃತಜ್ಞತೆಗಳು.

ಪ್ರಾರಂಭದಿಂದ ಕೊನೆಯ ತನಕ ಆರ್ಥಿಕವಾಗಿ ಸಮಸ್ಯೆ ಬಾರದಂತೆ ನೋಡಿಕೊಂಡವರು ಶ್ರೀನಿವಾಸ ಪ್ರಹ್ಲಾದ್, ಡಾಯಲ್ಸ್ ಟೌನ್, ಪೆನ್ಸಿಲ್‌ವೆನಿಯಾ, 18901, ಯು.ಎಸ್.ಎ. ಇವರು. ಪ್ರತಿಯೊಂದು ಸಂಪುಟಗಳಲ್ಲೂ ನಾನು ಇವರನ್ನು ಪ್ರಶಂಸೆ ಮಾಡುತ್ತಲೇ ಇದ್ದೇನೆ. ಶ್ರೀವ್ಯಾಸರಾಜರ ಭಕ್ತರಾದ ಪ್ರಾರಂಭದಿಂದಲೂ ಸ್ವತಃ ತಾವಾಗಿಯೇ ಇಚ್ಛೆಪಟ್ಟು ಪ್ರತಿಯೊಂದು ಸಂಪುಟಕ್ಕೂ ತಮ್ಮ ಸೇವೆಯನ್ನು ಸಲ್ಲಿಸಿದ್ದಾರೆ. ಎಂದೂ ಯಾವಕ್ಷಣದಲ್ಲೂ ಬೇಸರ ಪಡದೇ ಸಂತೋಷದಿಂದ ಸೇವೆ ಮಾಡಿ, ಇದರ ಮೂಲಕ ಜ್ಞಾನಪ್ರಚಾರವಾಗಲಿ ಎಂದಷ್ಟೇ ಬಯಸಿದ್ದಾರೆ. ಹನ್ನೊಂದನೇ ಹಾಗೂ ಹನ್ನೆರಡನೇ ಸಂಪುಟಗಳು ಮುದ್ರಣವಾಗಲು ಬಹಳ ವಿಳಂಬವಾಯಿತು. ಈ ವಿಳಂಬಕ್ಕೆ ಕಾರಣವನ್ನು ಸ್ವತಃ ಅವರೇ ಅರ್ಥಮಾಡಿಕೊಂಡು ಅದರ ಸಮಸ್ಯೆಯನ್ನೂ ಕೂಡ ಪರಿಹಾರ ಮಾಡಿದ್ದಾರೆ. ಮತ್ತು ಹನ್ನೆರಡನೆಯ ಸಂಪುಟಕ್ಕೆ ವಿಶೇಷವಾಗಿ ಸೇವೆ ಸಲ್ಲಿಸಿದ್ದಾರೆ. ಈ ಹನ್ನೆರಡು ಸಂಪುಟಗಳ ಮೂಲಕ ದೊರೆಯುವ ಜ್ಞಾನದಾನದ ಪುಣ್ಯದ ಲಾಭ ಶ್ರೀಮತಿ ಲೀಲಾ ಹಾಗೂ ಶ್ರೀನಿವಾಸ ಪ್ರಹ್ಲಾದ್ ಇವರಿಗೆ ದೊರೆಯಬೇಕು. ಇವರ ಜೀವನ ಸಾರ್ಥಕವಾಗಿ ಹರಿವಾಯುಗುರುಗಳು ಮೆಚ್ಚುವಂತಾಗಬೇಕು. ಜನ್ಮಜನ್ಮಾಂತರದಲ್ಲೂ ಶ್ರೀಮಧ್ವಾಚಾರ್ಯರ ಸಿದ್ಧಾಂತದಲ್ಲಿ ದೀಕ್ಷೆ ಹುಟ್ಟುವಂತಾಗಿ ಭಗವಂತನನ್ನು ತಲುಪುವ ಸೌಭಾಗ್ಯ ಇವರಿಗೆ ದೊರಕಬೇಕು ಎಂದಷ್ಟೇ ನಾನು ಶ್ರೀಹರಿವಾಯುಗುರುಗಳಲ್ಲಿ ಭಕ್ತಿಯಿಂದ ಪ್ರಾರ್ಥಿಸುತ್ತೇವೆ. ಶ್ರೀಮತಿ ಲೀಲಾ ಹಾಗೂ ಶ್ರೀನಿವಾಸ ಪ್ರಹ್ಲಾದ್ ಅವರ ಸಹಕಾರವಿಲ್ಲದಿದ್ದರೆ ಪರಿಪೂರ್ಣಚಂದ್ರಿಕೆಯ ಈ ಸಂಪುಟಗಳು ಜಿಜ್ಞಾಸುಗಳಿಗೆ ತಲುಪುವುದೇ ಕಷ್ಟವಾಗುತ್ತಿತ್ತು. ಹನ್ನೊಂದು, ಹನ್ನೆರಡನೆಯ ಸಂಪುಟಗಳು ಮುದ್ರಣವಾಗುವುದು ಮತ್ತಷ್ಟೂ ವಿಳಂಬವಾಗುತ್ತಿತ್ತು. ಹೀಗೆ ಅನೇಕ ರೀತಿಯಲ್ಲಿ ಉಪಕರಿಸಿದ ಇವರಿಗೆ ಅನಂತ ಕೃತಜ್ಞತೆಗಳು.

ಪ್ರಾರಂಭದ ನಾಕು ಸಂಪುಟಗಳನ್ನು ಟೈಪ್ ಮಾಡಿಕೊಟ್ಟು ಹಲವಾರು ರೀತಿಯಲ್ಲಿ ಬೆಂಬಲವಾಗಿ ನಿಂತ ಅಣ್ಣ ಶ್ರೀನಿವಾಸ ಇವರ ಉಪಕಾರವನ್ನು ಮರೆಯಲಾರೆ. ಹಾಗೂ ಐದನೆಯ ಸಂಪುಟದಿಂದ ಹನ್ನೆರಡನೆಯ ಸಂಪುಟದ ತನಕ ಏಕೈಕರಾಗಿ ಡಿ.ಟಿ.ಪಿ ಮಾಡಿಕೊಟ್ಟು ನನ್ನಷ್ಟೇ ಅಥವಾ ನನಗಿಂತ ಹೆಚ್ಚು ಶ್ರಮವಹಿಸಿದ ಎಸ್. ನಾಗಲತಾ ಇವರ ಬಗ್ಗೆ ಎಷ್ಟು ಹೇಳಿದರೂ ಕಮ್ಮಿ. ಇವರ ತ್ಯಾಗ, ಇವರ ಶ್ರಮ, ಇವರ ನಿಷ್ಠೆ ಎಲ್ಲವೂ ಕೂಡ ಅತ್ಯಂತ ಆದರ್ಶವಾಗಿವೆ. ಇವರ ಸಂಪೂರ್ಣ ಸಹಕಾರ ಹಾಗೂ ಪರಿಶ್ರಮದಿಂದ ಈ ಸಂಪುಟಗಳು ಅಚ್ಚುಕಟ್ಟಾಗಿ ಮತ್ತು ಶೀಘ್ರವಾಗಿ ಜಗತ್ತಿಗೆ ದೊರಕಲು ಸಾಧ್ಯವಾಗಿವೆ.

ಇವರಿಗೆ ಶ್ರೀಹರಿವಾಯುಗುರುಗಳು ಮತ್ತಷ್ಟು ಅನುಗ್ರಹವನ್ನುಂಟು ಮಾಡಿ, ಜೀವನ ಸಾರ್ಥಕಗೊಳಿಸಲಿ.

ತಾತ್ಪರ್ಯಚಂದ್ರಿಕೆಯ ಎರಡನೆಯ ಅಧ್ಯಾಯದ ಮೂರು ಹಾಗೂ ನಾಕನೆಯ ಭಾಗವನ್ನು ಮೈಸೂರಿನಲ್ಲಿರುವ ಶರತ್‌ಚಂದ್ರ ಅತ್ಯಂತ ಶೀಘ್ರವಾಗಿ ಟೈಪ್ ಮಾಡಿ ನೀಡಿದ್ದಾರೆ. ಇವರಿಗೂ ಕೂಡ ಅನಂತ ಕೃತಜ್ಞತೆಗಳು.

ನನ್ನ ಬಳಿ ಚಂದ್ರಿಕಾ ಪಾಠವನ್ನು ಕೇಳಲು ಆಗಮಿಸುತ್ತಿದ್ದ ಅಭಿಜಿತ್ ಎಂಬ ವಿದ್ಯಾರ್ಥಿಯು ಕೊನೆಯ ಸಂಪುಟದ ಕೆಲವು ಭಾಗಗಳನ್ನು ಸ್ವತಃ ಅನುವಾದ ಮಾಡಿರುವನು. ಇವನಿಗೂ ಕೂಡ ತುಂಬು ಹೃದಯದ ಅಭಿನಂದನೆಗಳು. ಪರೋಕ್ಷವಾಗಿ ಮತ್ತು ಪ್ರತ್ಯಕ್ಷವಾಗಿ ಸಹಕರಿಸಿದ ಎಲ್ಲಾ ಜಿಜ್ಞಾಸುವೃಂದಕ್ಕೆ, ತಂದೆ, ತಾಯಿಗಳಾದ ಪೂಜ್ಯ ಪಿ. ಎಸ್. ನಾಗರಾಜರಾವ್, ಶ್ರೀಮತಿ ಬಿ.ಎನ್. ಪರಿಮಳ ಇವರಿಗೆ ಅನಂತ ಕೃತಜ್ಞತೆಗಳು ಹಾಗೂ ನಮಸ್ಕಾರಗಳು. ಸಹಧರ್ಮಿಣಿಯಾಗಿ ಸಂಪೂರ್ಣ ಸಹಕಾರ ನೀಡುತ್ತಿರುವ ಪದ್ಮಾವತಿಗೆ ವಿ. ಆಶೀರ್ವಾದಗಳು.

ಸಾಯಿಪ್ರಿಂಟರ್ಸ್ ಮಾಲೀಕರಾದ ಪ್ರಭಾಕರ್ ಇವರು ಸುಂದರವಾಗಿ ಮುದ್ರಣ ಮಾಡಿ ನೀಡಿದ್ದಾರೆ. ಇವರಿಗೂ ಹಾಗೂ ಉಳಿದೆಲ್ಲಾ ಉಪಕಾರಿಗಳಿಗೂ ಅಭಿನಂದನೆಗಳು.

*ಲೇಖಕ -*

*ವಿ. ಬೆಟ್ಟಸ್ವಿ ವೇಂಕಟೇಶಾಚಾರ್ಯ*

## ಜಿಜ್ಞಾಸುಗಳಲ್ಲಿ ಮನವಿ

ಪರಿಪೂರ್ಣಚಂದ್ರಿಕೆಯ ಪ್ರಾರಂಭದ ಸಂಪುಟಗಳಲ್ಲಿ
ಹದಿನೆಂಟು ಗ್ರಂಥಗಳ ಅನುವಾದವು ಸೇರಿತ್ತು. ಕೊನೆಯಲ್ಲಿ ಕೆಲವೇ ಕೆಲವು
ಗ್ರಂಥಗಳ ಅನುವಾದದಲ್ಲಿ ಮೊಟಕುಗೊಳಿಸಲಾಗಿದೆ. ಇದಕ್ಕೆ ಕಾರಣವಿಷ್ಟೇ.
ಗುರುಸಾರ್ವಭೌಮಸಂಶೋಧನಾಮಂದಿರದಿಂದ ಮಂತ್ರಾಲಯ ಮಠಾಧೀಶರಾದ
ಪರಮಪೂಜ್ಯ ಶ್ರೀಸುಬುಧೇಂದ್ರತೀರ್ಥಶ್ರೀಪಾದಂಗಳವರು
ಭಾವದೀಪ ಯೋಜನೆಯನ್ನು ನನ್ನಿಂದಲೇ ಮಾಡಿಸುತ್ತಿದ್ದಾರೆ.
ಈಗಾಗಲೇ ಹತ್ತು ಸಂಪುಟಗಳು ಮುದ್ರಣಗೊಂಡಿವೆ.
ಆ ಭಾವದೀಪ ಎಂಬ ಯೋಜನೆಯಲ್ಲಿ ಈ ಉಳಿದೆಲ್ಲಾ ಗ್ರಂಥಗಳ ಅನುವಾದವಿದೆ.
ಆದ್ದರಿಂದ ಪುನಃ ಈ ಸಂಪುಟಗಳಲ್ಲಿ ಪ್ರತ್ಯೇಕವಾಗಿ ಅದನ್ನು ಸೇರಿಸಿರುವುದಿಲ್ಲ.
ಮತ್ತು ಪ್ರಾರಂಭದಲ್ಲೇ ಹದಿನೆಂಟು ಗ್ರಂಥಗಳ ಅನುವಾದವನ್ನು ನೀಡಿದ್ದರೆ,
ಇನ್ನು ಅದೆಷ್ಟೋ ಸಂಪುಟಗಳಾಗಬೇಕಾಗಿತ್ತು.
ಗ್ರಂಥಗೌರವದ ಭಯದಿಂದಲೂ ಈ ಪರಿಪೂರ್ಣಚಂದ್ರಿಕಾ ಕೃತಿಯಲ್ಲಿ ಅವುಗಳನ್ನು
ಸೇರಿಸಿರುವುದಿಲ್ಲ. ಆದ್ದರಿಂದ ಪ್ರಾರಂಭದ ಭಾಗದಲ್ಲಿರುವ ಇತರ ಗ್ರಂಥಗಳ
ಅಪೇಕ್ಷೆಯಿರುವವರು ಮಂತ್ರಾಲಯ ಮಠದಿಂದ ಮುದ್ರಣವಾಗುತ್ತಿರುವ
ಭಾವದೀಪ ಕೃತಿಯನ್ನು ತೆಗೆದುಕೊಳ್ಳಬೇಕು.

# ವಿಯದಧಿಕರಣ

(೨-೩-೧)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

***

॥ ಶ್ರೀಗುರುಭ್ಯೋ ನಮಃ ॥

# ವಿಯದಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – न वियदश्रुतेः ।।**

ಆಕಾಶವು ಅನುತ್ಪನ್ನವಾದ ಪದಾರ್ಥವಲ್ಲ. ಈಶ್ವರನಿಂದ ಉತ್ಪತ್ತಿಯನ್ನು ಹೊಂದಿರುತ್ತದೆ. ಆಕಾಶವು ಹುಟ್ಟುವುದಿಲ್ಲವೆನ್ನಲು ಯಾವುದೇ ಶ್ರುತಿಪ್ರಮಾಣಗಳಿರುವುದಿಲ್ಲ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका – वियत्** आकाशमनुत्पत्तिमन्न किन्त्वीशादुत्पत्तिमेव । कुतः । **अश्रुतेः** वियदनुत्पत्तौ श्रुत्यभावादित्यर्थः ।।१।।

ವಿಯತ್ = ಆಕಾಶವು, ನ = ಅನುತ್ಪತ್ತಿಯನ್ನು ಹೊಂದಿರುವುದಿಲ್ಲ. ಹೊರತಾಗಿ ಈಶ್ವರನಿಂದ ಉತ್ಪತ್ತಿಯನ್ನೇ ಹೊಂದಿರುತ್ತದೆ. ಏಕೆಂದರೆ ಅಶ್ರುತೇಃ = ಆಕಾಶವು ಹುಟ್ಟುವುದಿಲ್ಲವೆನ್ನಲು ಯಾವುದೇ ಶ್ರುತಿಗಳಿರುವುದಿಲ್ಲ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – जीवपरमात्माधिभूताधिदैवेषु श्रुतीनां परस्परविरोधमपाकरोत्यनेन पादेन ।**

ಅನುವಾದ - ಜೀವ, ಪರಮಾತ್ಮ, ಅಧಿಭೂತ, ಅಧಿದೈವ ಇವೇ ಮೊದಲಾದ ಉತ್ಪತ್ತ್ಯಾದಿಗಳ ವಿಷಯದಲ್ಲಿ ಆಪಾತತಃ ತೋರುವ ಶ್ರುತಿಗಳ ಪರಸ್ಪರ ವಿರೋಧವನ್ನು ಈ ಪಾದದಲ್ಲಿ ನಿರಾಕರಣೆ ಮಾಡುತ್ತಿದ್ದಾರೆ.

ಪ್ರತಿಪದಾರ್ಥ -- ಮೂರನೇಪಾದದ ಪ್ರಮೇಯವನ್ನು ಹೇಳುತ್ತಿದ್ದಾರೆ. ಜೀವಪರಮಾತ್ಮಾಧಿಭೂತಾಧಿದೈವೇಷು = ಜೀವ, ಪರಮಾತ್ಮ, ಅಧಿಭೂತ, ಅಧಿದೈವ ಇವುಗಳ ಉತ್ಪತ್ತಿಯ ವಿಷಯದಲ್ಲಿ, ಶ್ರುತೀನಾಂ = ಶ್ರುತಿಗಳ, ಪರಸ್ಪರವಿರೋಧಮ್ = ಆಪಾತತಃ ಕಾಣುವ ಪರಸ್ಪರ ವಿರೋಧವನ್ನು, ಅನೇನ = ಈ, ಪಾದೇನ = ಪಾದದಿಂದ, ಅಪಾಕರೋತಿ = ಸೂತ್ರಕಾರರು ನಿರಾಕರಣೆ ಮಾಡುತ್ತಿದ್ದಾರೆ.

**भाष्यम् – ।। न विदयश्रुतेः ।।१।।**

**न वियदनुत्पत्तिमत्, तथाऽश्रुतेः ।।१।।**

ಅನುವಾದ - ಭೂತಾಕಾಶ, ಅವ್ಯಾಕೃತಾಕಾಶ, ತದಭಿಮಾನಿದೇವತೆಗಳು, ಪ್ರಕೃತಿ, ಜೀವ, ಕಾಲ ಮಹತ್ತತ್ವ ಅಹಂಕಾರತತ್ವ ಇವುಗಳಿಗೆ ಉತ್ಪತ್ತಿಯು ಇರುವುದಿಲ್ಲಎಂದು ಹೇಳಬಾರದು.ಏಕೆಂದರೆ ಉತ್ಪತ್ತಿ ಇಲ್ಲವೆಂದು ಹೇಳುವ ಶ್ರುತಿಗಳೇ ಇರುವುದಿಲ್ಲ.

ಪ್ರತಿಪದಾರ್ಥ -- ವಿಯತ್ = ಆಕಾಶವು, ಉಪಲಕ್ಷಣಯ = ಅವ್ಯಾಕೃತಾಕಾಶ, ಪ್ರಕೃತಿ, ಜೀವ, ಕಾಲ ಮಹತತ್ವ, ಅಹಂಕಾರತತ್ವ ಅಭಿಮಾನಿದೇವತೆಗಳು ಇವುಗಳಿಗೆ, ನ ಉತ್ಪತ್ತಿಮತ್ = ಉತ್ಪತ್ತಿಯು ಇಲ್ಲವೆಂದು, ತಥಾ = ಹಾಗೆ, ಶ್ರುತೇಃ = ಎಲ್ಲಿಯೂ ಕೇಳಿಸುತ್ತಿಲ್ಲ.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**श्रीमद्धनुमद्भीममध्वान्तर्गतरामकृष्णवेदव्यासात्मकलक्ष्मीहयग्रीवाय नमः ॥ हरिः ॐ ॥ एतत्पादार्थं दर्शयति – जीवेति ॥ युक्तिसमयविरोधाभावेऽपि न वेदसमन्वयेन विष्णोर्जगत्कारणत्वं सिध्यति । वेदानां परस्परविराधेनाप्रमाणत्वात्। न ह्यप्रमाणसिद्धोऽर्थः सिध्यतीत्याशङ्कानिवृत्यर्थं श्रुतीनां विरोधः परिहरणीयो भवति।**

ಈ ಪಾದದ ಪ್ರಮೇಯವನ್ನು ಜೀವ ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಯುಕ್ತಿವಿರೋಧ, ಸಮಯವಿರೋಧಗಳು ಇಲ್ಲದಿದ್ದರೂ ವೇದಸಮನ್ವಯದ ಮೂಲಕ ವಿಷ್ಣುವಿಗೆ ಜಗತ್ಕಾರಣತ್ವವನ್ನು ಸಾಧನೆ ಮಾಡಲಾಗದು. ವೇದಗಳು ಪರಸ್ಪರ ವಿರುದ್ಧವಾಗಿರುವುದರಿಂದ ಅಪ್ರಮಾಣವಾಗಿವೆ. ಪ್ರಮಾಣವಿಲ್ಲದೆ ಅರ್ಥವು ಸಿದ್ಧವಾಗುವುದಿಲ್ಲ.

ಈ ಆಶಂಕೆಯನ್ನು ಪರಿಹಾರ ಮಾಡುವುದಕ್ಕಾಗಿ ಶ್ರುತಿಗಳ ಪರಸ್ಪರ ವಿರೋಧವನ್ನು ಪರಿಹಾರ ಮಾಡಲೇಬೇಕು.

**तत्वप्रकाशिका – श्रुतिविरोधश्चाधिभूतादिविषयोऽध्यात्मविषयश्च । तत्र जिज्ञासोरध्यात्मविषय विचारस्यान्तिमत्वदधिभूतादिविषयश्रुतीनां परस्पर-विरोधमस्मिन् पादे परिहरतीति भावः ।**

ಶ್ರುತಿಗಳ ವಿರೋಧವು ಅಧಿಭೂತವಿಷಯ ಹಾಗೂ ಅಧ್ಯಾತ್ಮವಿಷಯ ಎಂಬುದಾಗಿ ಎರಡು ವಿಧ. ಇವೆರಡರಲ್ಲಿ ಜಿಜ್ಞಾಸುವಿನ ಅಧ್ಯಾತ್ಮ ವಿಷಯದ ವಿಚಾರವು ಅಂತಿಮವಾಗಿದೆ. ಆದ್ದರಿಂದ ಈ ಪಾದದಲ್ಲಿ ಅಧಿಭೂತಾದಿವಿಷಯವಾದ ಶ್ರುತಿಗಳ ಪರಸ್ಪರ ವಿರೋಧವನ್ನು ಪರಿಹಾರ ಮಾಡುತ್ತಿದ್ದಾರೆ.

ವಿವರಣೆ – ಸಕಲ ವಿರೋಧಗಳು ಯುಕ್ತಿಮೂಲಕವಾಗಿವೆ. ಆದ್ದರಿಂದ ಯುಕ್ತಿವಿರೋಧವನ್ನು ಪ್ರಥಮ ಪಾದದಲ್ಲಿ ಪರಿಹಾರ ಮಾಡಿದ್ದಾಯಿತು. ಅದನ್ನೇ ವಿವರಿಸುವ ಮೂಲಕ ಸಮಯವಿರೋಧವನ್ನು ತದನಂತರ ಪರಿಹರಿಸಿದ್ದಾಯಿತು. ಈಗ ಶ್ರುತಿಗಳ ಪರಸ್ಪರವಿರೋಧವು ಅವಸರ ಪ್ರಾಪ್ತವಾಗಿದೆ. ಆದ್ದರಿಂದ ಈ ಪಾದಕ್ಕೆ ಆನಂತರ್ಯಸಂಗತಿ ಇರುತ್ತದೆ. ಮತ್ತು ಅಧ್ಯಾಯಾಂತರ್ಭಾವಸಂಗತಿಯೂ ಕೂಡ ಇರುತ್ತದೆ.

ನಾಕನೆಯ ಪಾದದಲ್ಲೂ ಕೂಡ ಶ್ರುತಿವಿರೋಧವನ್ನು ಪರಿಹಾರ ಮಾಡುವುದರಿಂದ ಈ ಎರಡು ಪಾದಗಳಲ್ಲಿ ಏನು ವಿಷಯವ್ಯತ್ಯಾಸವಿದೆ ? ಈ ಆಶಂಕೆಯನ್ನು ಪರಿಹಾರ ಮಾಡುವುದಕ್ಕಾಗಿ ಹಾಗೂ ಮೂರನೇ ಪಾದಕ್ಕೆ ಪ್ರಾಥಮ್ಯ ನಿರೂಪಣೆ ಮಾಡುವುದಕ್ಕಾಗಿ 'ಶ್ರುತಿವಿರೋಧಶ್ಚ' ಇತ್ಯಾದಿ ಟೀಕೆಯು ಹೊರಟಿದೆ.

ಅಧಿಭೂತವಿಷಯಕವಾದ ಶ್ರುತಿವಿರೋಧದ ಪರಿಹಾರವನ್ನು ಈ ಪಾದದಲ್ಲಿ ಮಾಡುತ್ತಿದ್ದಾರೆ. 'ಅಧ್ಯಾತ್ಮ ವಿಚಾರಸ್ಯ ಅಂತಿಮತ್ವಾತ್' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ - ಸ್ಥೂಲವಾದ ಪೃಥಿವ್ಯಾದಿಬಾಹ್ಯ ಪದಾರ್ಥಗಳಲ್ಲಿ ದೋಷವನ್ನು ಕಂಡು ಕ್ರಮವಾಗಿ ವೈರಾಗ್ಯ ಹುಟ್ಟುತ್ತದೆ. ಅನಂತರ ಅತಿಸೂಕ್ಷ್ಮವಾದ ದೇಹಕ್ಕೆ ಸಂಬಂಧಪಟ್ಟ ಪ್ರಾಣ, ಇಂದ್ರಿಯ ಮೊದಲಾದವುಗಳಲ್ಲಿ ವೈರಾಗ್ಯ ಹುಟ್ಟುತ್ತದೆ ಎಂದು.

ಅಥವಾ ಸ್ಥೂಲವಾದ ವಿಚಾರಗಳನ್ನು ಮಾಡಿ ಅನಂತರ ಅತಿಸೂಕ್ಷ್ಮವಾದ ಅಧ್ಯಾತ್ಮಿಕ ಚರ್ಚೆಯಲ್ಲಿ ಬುದ್ಧಿಯು ಉಂಟಾಗುತ್ತದೆ. ಆದ್ದರಿಂದ ಅಧ್ಯಾತ್ಮವಿಚಾರವು ಅಂತಿಮವಾಗಿದೆ.

**तत्वप्रकाशिका – न च वाच्यं श्रुतीनां जीवादिविषय एव विरुद्धत्वेनोक्तबाधाभावात् व्यर्थः पादद्वयारम्भ इति । अभ्युपगतार्थद्वयेऽन्यतरार्थेऽप्रामाण्यप्राप्तावन्यार्थे नाश्वासप्रसङ्गात् ।।**

ಶ್ರುತಿಗಳು ಜೀವಾದಿವಿಷಯದಲ್ಲಿ ಮಾತ್ರ ವಿರುದ್ಧವಾಗಿರುತ್ತವೆ. ಆದ್ದರಿಂದ ಜಗಜ್ಜನ್ಮಾದಿಕರ್ತೃತ್ವ ವಿಷಯದಲ್ಲಿ ವಿರೋಧವು ಇರುವುದಿಲ್ಲ. ಹಾಗಾಗಿ ಈ ಎರಡು ಪಾದಗಳು ಹೊರಟಿದ್ದೇ ವ್ಯರ್ಥ.

ಹೀಗೆ ಆಕ್ಷೇಪ ಮಾಡಬಾರದು. ಏಕೆಂದರೆ ಅಂಗೀಕರಿಸಲ್ಪಟ್ಟ ಎರಡು ಪ್ರಮೇಯಗಳಲ್ಲಿ ಒಂದು ಅಪ್ರಮಾಣವಾದರೂ ಕೂಡ ಮತ್ತೊಂದರಲ್ಲಿ ಅಪ್ರಾಮಾಣ್ಯ ಶಂಕೆಯು ಬಂದೇ ಬರುತ್ತದೆ. ಆದ್ದರಿಂದ ಈ ಎರಡು ಪಾದಗಳು ಹೊರಟಿದ್ದು ಸಾರ್ಥಕ.

ವಿವರಣೆ – ಶ್ರುತಿಗಳು ಜೀವಾದಿ ವಿಷಯಗಳಲ್ಲಿ ಮಾತ್ರ ವಿರುದ್ಧವಾಗುತ್ತವೆ. ಕರ್ತೃತ್ವಾದಿವಿಷಯದಲ್ಲಿ ವಿರುದ್ಧವಲ್ಲ ಎಂದು ಪೂರ್ವಪಕ್ಷ ಮಾಡಿದರೆ 'ಅಭ್ಯುಪಗತಾರ್ಥದ್ವಯೇ' ಎಂಬ ಟೀಕೆಯಿಂದ ಉತ್ತರಿಸುತ್ತಿದ್ದಾರೆ. ಪರತತ್ವ, ಅಪರತತ್ವಗಳೆರಡೂ ಶ್ರುತ್ಯರ್ಥವೇ ಆಗಿರುತ್ತವೆ. ಈ ಎರಡರಲ್ಲಿ ಅಪರತತ್ವವೆನಿಸಿದ ಜಗತ್ತಿನ ವಿಷಯದಲ್ಲಿ ಶ್ರುತಿಗೆ ಅಪ್ರಾಮಾಣ್ಯವು ಪ್ರಾಪ್ತವಾದರೆ ಪರತತ್ವವೆನಿಸಿದ ಪರಮಾತ್ಮನ ಗುಣಪೂರ್ಣವಿಷಯತ್ವದಲ್ಲೂ ಕೂಡ ಅಪ್ರಾಮಾಣ್ಯವಿರಬಹುದೆಂಬ ಅವಿಶ್ವಾಸ ಮೂಡುತ್ತದೆ. ಆದ್ದರಿಂದ ಈ ಅವಿಶ್ವಾಸವನ್ನು ಪರಿಹಾರ ಮಾಡುವುದಕ್ಕಾಗಿ ಈ ಎರಡು ಪಾದಗಳು ಹೊರಟಿದ್ದು ಸಾರ್ಥಕ.

**तत्वप्रकाशिका – जगत्स्वरूपानिर्णये तत्कारणत्वानिर्णयाच्च । अत्र 'ज्ञोऽत एव' इत्यारभ्याऽपादसमाप्तेर्जीवविचारः । 'असम्भवस्तु' 'नात्माश्रुतेः' इत्याधिकरणद्वये परमात्मविचारः । एकैकस्मिन्नेवाधिकरणेऽधिभूतादिविचारः । अतो विचारबाहुल्याभिप्रायेण क्रमोल्लङ्घनम् ।**

ಜಗತ್ತಿನ ಸ್ವರೂಪವು ನಿರ್ಣಯವಾಗದಿದ್ದರೆ ಅದರ ಕಾರಣತ್ವವೂ ಕೂಡ ನಿರ್ಣಯವಾಗುವುದಿಲ್ಲ. ಆದ್ದರಿಂದ 'ಜ್ಞೋತ ಏವ' ಎಂಬ ಸೂತ್ರದಿಂದ ಪಾದವು ಮುಗಿಯುವ

ತನಕ ಜೀವನ ಬಗ್ಗೆ ವಿಚಾರವನ್ನು ಮಾಡಲಾಗಿದೆ. 'ಅಸಂಭವಸ್ತು' ಹಾಗೂ 'ನಾತ್ಮಾಶ್ರುತೇಃ' ಎಂಬ ಎರಡು ಅಧಿಕರಣದಲ್ಲಿ ಪರಮಾತ್ಮನ ವಿಚಾರವನ್ನು ಮಾಡಲಾಗಿದೆ. ಒಂದೊಂದು ಅಧಿ ಕರಣಗಳಲ್ಲಿ ಅಧಿಭೂತಾದಿವಿಚಾರಗಳನ್ನು ಮಾಡಲಾಗಿದೆ. ಹೀಗೆ ವಿಚಾರಬಾಹುಲ್ಯದ ಅಭಿಪ್ರಾಯದಿಂದ ಕ್ರಮವನ್ನು ಉಲ್ಲಂಘನೆ ಮಾಡಿದ್ದಾರೆ.

ವಿವರಣೆ - ಭಾಷ್ಯದಲ್ಲಿ 'ಜೀವ ಪರಮಾತ್ಮಾಧಿಭೂತ ಅಧಿದೇವೇಷು' ಎಂಬುದಾಗಿ ಹೇಳಿದ್ದಾರೆ. ಆದರೆ ಈ ಪಾದದಲ್ಲಿ ಅನುಸರಿಸಿದ ಕ್ರಮದಂತೆ 'ಅಧಿಭೂತ ಅಧಿದೈವ ಪರಮಾತ್ಮ ಜೀವೇಷು' ಎಂಬುದಾಗಿ ಭಾಷ್ಯಕಾರರು ಹೇಳಬೇಕಿತ್ತು. ಏಕೆಂದರೆ ಮೊದಲನೆಯ ಎರಡು ಅಧಿಕರಣಗಳಲ್ಲಿ ಅಧಿಭೂತದ ಬಗ್ಗೆ, ಮೂರು ಹಾಗೂ ಹತ್ತನೆಯ ಅಧಿಕರಣಗಳಲ್ಲಿ ಪರಮಾತ್ಮನ ಬಗ್ಗೆ ವಿಚಾರವನ್ನು ಮಾಡಿ ಹದಿನೆಂಟನೆಯ ಅಧಿಕರಣದಿಂದ ಪಾದವು ಮುಗಿಯುವ ತನಕ ಜೀವಸ್ವರೂಪದ ಬಗ್ಗೆ ವಿಚಾರವನ್ನು ಮಾಡಿದ್ದಾರೆ. ಆದ್ದರಿಂದ 'ಜೀವಪರಮಾತ್ಮಾಧಿಭೂತ ಅಧಿದೇವೇಷು' ಎಂದು ಹೇಗೆ ಹೇಳಿದರು?

ಉತ್ತರ - ಜೀವಸ್ವರೂಪದ ಬಗ್ಗೆ ಇರುವ ಅಧಿಕರಣಗಳು ಅನೇಕವಿರುವುದರಿಂದ ಮೊದಲು ಜೀವ ಎಂದು ಭಾಷ್ಯದಲ್ಲಿ ಕ್ರಮವನ್ನು ಉಲ್ಲಂಘನೆ ಮಾಡಿ ಹೇಳಿರುತ್ತಾರೆ. ಉಳಿದ ಐದು ವಿಚಾರಗಳು ಕ್ರಮವಾಗಿ ಪರಸ್ಪರ ಉಪಯೋಗಿಯಾಗಿರುವುದರಿಂದ ಭಾಷ್ಯದಲ್ಲಿ ಹಾಗೆ ಹೇಳಿದ್ದಾರೆ. ಸೂತ್ರಕಾರರು ಮಂದಮತಿಗಳ ಉಪಕಾರಕ್ಕೋಸ್ಕರ 'ಸೂಚಿಕಟಾಹ ನ್ಯಾಯದಿಂದ' ಹಾಗೆ ಹೇಳಿದ್ದಾರೆ. (ಗುವರ್ಥದೀಪಿಕಾ)

**तत्वप्रकाशिका – अधिभूतं नाम सकारणकार्यभूतानि । तदभिमानिदेवता अधिदैवम् । अत्र भूतेष्वाकाशस्योत्पत्त्याद्यष्टके चोत्पत्तेः प्राथम्याद् ब्रह्मणि श्रुतिसमन्वयसिद्ध्यर्थमाकाशोत्पत्तिविषयश्रुतिविरोधपरिहारादस्ति शास्त्रादिसङ्गतिः ।**

ಅಧಿಭೂತವೆಂದರೆ ಕಾರಣಕಾರ್ಯಗಳಿಂದ ಕೂಡಿದ ಸಮಸ್ತಜಗತ್ತು ಎಂದರ್ಥ. ತದಭಿಮಾನಿ ದೇವತೆಗಳು ಅಧಿದೈವರು.

ಈ ಅಧಿಕರಣದಲ್ಲಿ ಪಂಚಭೂತಗಳಲ್ಲಿ ಉತ್ಪತ್ತಿ ಕ್ರಮವನ್ನು ವಿವಕ್ಷಿಸಿದಾಗ ಆಕಾಶದ ಉತ್ಪತ್ತಿಯು ಪ್ರಥಮ ಪ್ರಾಪ್ತವಾಗುತ್ತದೆ. ಜನ್ಮಾದ್ಯಷ್ಟಕಗಳಲ್ಲಿ ಸೃಷ್ಟಿಯು ಮೊದಲಿರುವುದರಿಂದ ಬ್ರಹ್ಮನಲ್ಲಿ ಶ್ರುತಿಸಮನ್ವಯದ ಸಿದ್ಧಿಗೋಸ್ಕರ ಆಕಾಶದ ಉತ್ಪತ್ತಿ ವಿಷಯಕವಾದ ಶ್ರುತಿವಿರೋಧವನ್ನು ಇಲ್ಲಿ ಪರಿಹಾರ ಮಾಡಲಾಗಿದೆ. ಆದ್ದರಿಂದ ಶಾಸ್ತ್ರಾದಿ ಸಂಗತಿಗಳು ಇರುತ್ತವೆ.

ವಿವರಣೆ - ಆಕಾಶ, ವಾಯು, ತೇಜಸ್ಸು, ಅಪ್, ಪೃಥಿವೀ ಎಂಬುದಾಗಿ ಪಂಚಭೂತಗಳಲ್ಲಿ ಪ್ರಥಮ ಪ್ರಾಪ್ತವಾದುದು ಆಕಾಶ. ಇದರಂತೆ ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷ ಈ ಎಂಟರಲ್ಲಿ ಪ್ರಥಮಪ್ರಾಪ್ತವಾದುದು ಸೃಷ್ಟಿ. ಇವೆರಡರಲ್ಲೂ ಮೊದಲನೆಯದ್ದನ್ನು ವಿವಕ್ಷಿಸಿದಾಗ ಆಕಾಶದ ಉತ್ಪತ್ತಿಯ ಬಗ್ಗೆ ಇರುವ ಶ್ರುತಿಯ ವಿರೋಧವನ್ನು ಪರಿಹಾರ ಮಾಡಬೇಕು. ಆದ್ದರಿಂದ ಈ ಅಧಿಕರಣದಲ್ಲಿ ಅದನ್ನೇ ಮಾಡುತ್ತಿರುವುದರಿಂದ ಶಾಸ್ತ್ರಾದಿಸಂಗತಿಗಳು ಕೂಡುತ್ತವೆ.
ಪರಿಪೂರ್ಣಚಂದ್ರಿಕಾ

**तत्वप्रकाशिका** – सकलजगज्जन्मादिकर्ता विष्णुरित्युक्तम् । तच्चाकाशस्य नित्यत्वेऽसम्भवि स्यात् । श्रुतिविरोधेन गुणान्तरस्य चाभावापातात् । श्रुत्यविरोधेनाकाशस्योत्पत्तिः समर्थनीया । आकाशोऽत्र विषयः । उत्पत्तिमान्न वेति सन्देहः । 'आत्मन आकाशः सम्भूतः' । 'अनादिर्वा अयमाकाशः' इति श्रुतिविप्रतिपत्तिः सन्देहबीजम् ।

ಸಕಲ ಜಗತ್ತಿಗೆ ಕಾರಣನಾದವನು ವಿಷ್ಣುವೆಂದು ಹೇಳಲಾಯಿತು. ಇದು ಆಕಾಶವು ನಿತ್ಯವಾದಲ್ಲಿ ಈ ಲಕ್ಷಣವೇ ಅಸಂಭಾವಿತವಾಗುತ್ತದೆ. ಶ್ರುತಿವಿರೋಧವಿರುವುದರಿಂದ ಆನಂದ ಮೊದಲಾದ ಗುಣಗಳೂ ಕೂಡ ಇಲ್ಲವೆಂದಾಗುತ್ತದೆ. ಶ್ರುತಿಗೆ ವಿರೋಧ ಬಾರದಂತೆ ಆಕಾಶಕ್ಕೆ ಉತ್ಪತ್ತಿಯನ್ನು ಸಮರ್ಥನೆ ಮಾಡಬೇಕು.

ಈ ಅಧಿಕರಣಕ್ಕೆ ಆಕಾಶವೇ ವಿಷಯ. ಆಕಾಶವು ಉತ್ಪತ್ತಿ ಉಳ್ಳದ್ದೋ, ಇಲ್ಲವೋ? ಎಂಬುದು ಸಂದೇಹ. 'ಆತ್ಮನಃ ಆಕಾಶಃ ಸಂಭೂತಃ' 'ಆತ್ಮನಿಂದ ಆಕಾಶವು ಹುಟ್ಟಿತು', 'ಅನಾದಿರ್ವಾ ಅಯಮಾಕಾಶಃ' 'ಈ ಆಕಾಶವು ಅನಾದಿಯಾಗಿದೆ' ಇದೇ ಮೊದಲಾದ ಶ್ರುತಿಗಳ ಪರಸ್ಪರ ವಿರೋಧವು ಸಂದೇಹ ಬೀಜ.

**तत्वप्रकाशिका** – वियदनुत्पत्तिमदेवेति पूर्वः पक्षः । आकाशस्योत्पत्त्यङ्गीकारेऽनुभूतियुक्तिबहुवाग्विरोधात् । न ह्यवकाशस्योत्पत्तिरनुभवानुसारिणी । वियदनुत्पत्तिमद्विभुत्वादित्यादियुक्तिः । 'अनादिर्वाऽयमाकाशः' इत्यादिबहुश्रुतयः । नच 'आत्मन आकाशः सम्भूतः' इति श्रुत्या तदुत्पत्तिसिद्धिः । अनुभूत्यादिविरुद्धायास्तस्याः प्रामाण्यानुपपत्तेः ।

ಆಕಾಶಕ್ಕೆ ಉತ್ಪತ್ತಿ ಇರುವುದೇ ಇಲ್ಲ ಎಂಬುದು ಪೂರ್ವಪಕ್ಷ. ಒಂದುವೇಳೆ ಆಕಾಶಕ್ಕೆ ಉತ್ಪತ್ತಿಯನ್ನು ಅಂಗೀಕಾರ ಮಾಡಿದರೆ ಅನುಭವ ವಿರೋಧ, ಯುಕ್ತಿವಿರೋಧ, ಅನೇಕ ಶ್ರುತಿಗಳ ವಿರೋಧ ಪ್ರಾಪ್ತವಾಗುತ್ತದೆ. ಏಕೆಂದರೆ ಅವಕಾಶಕ್ಕೆ ಉತ್ಪತ್ತಿ ಇರುವುದು ಅನುಭವಕ್ಕೆ ಅನುಸಾರಿಯಾಗಿಲ್ಲ.

'ವಿಯತ್, ಅನುತ್ಪತ್ತಿಮತ್ ವಿಭುತ್ವಾತ್' ವಿಭುವಾಗಿರುವುದರಿಂದ ಆಕಾಶವು ಉತ್ಪತ್ತಿ ಉಳ್ಳದ್ದಲ್ಲ ಇವೇ ಮೊದಲಾದ ಯುಕ್ತಿಗಳೂ ಕೂಡ ಉತ್ಪತ್ತಿ ಇಲ್ಲವೆನ್ನುತ್ತಿವೆ.

'ಅನಾದಿರ್ವಾ ಅಯಮಾಕಾಶಃ' 'ಈ ಆಕಾಶವು ಅನಾದಿಯಾಗಿದೆ' ಇತ್ಯಾದಿ ಬಹುಶ್ರುತಿಗಳೂ ಕೂಡ ಆಕಾಶಕ್ಕೆ ಉತ್ಪತ್ತಿ ಇಲ್ಲ ಎಂದು ಸಮರ್ಥನೆ ಮಾಡುತ್ತಿವೆ.

'ಆತ್ಮನಃ ಆಕಾಶಃ ಸಂಭೂತಃ' ಇತ್ಯಾದಿ ಶ್ರುತಿಗಳಿರುವುದರಿಂದ ಆಕಾಶಕ್ಕೆ ಉತ್ಪತ್ತಿ ಇದೆ ಎಂದು ಹೇಳಬೇಕಲ್ಲವೇ? ಎಂದು ಹೇಳಬಾರದು. ಅನುಭವ ವಿರುದ್ಧವಾದ ಶ್ರುತಿಯನ್ನು ಅಪ್ರಮಾಣವೆಂದೇ ಹೇಳಬೇಕು.

**तत्वप्रकाशिका – अत एवानुत्पत्तिश्रुतेर्भाक्तत्ववर्णनं च परास्तम् । तस्मादाकाशोत्पत्तिश्रुतेरप्रमाण्यादयुक्तं श्रुतिसमन्वयेनाकाशकारणत्वं ब्रह्मणः । न च सम्भूतश्रुतेरन्यार्थतया विरोधाभावः । तथा सति वाय्वादावप्यन्यार्थतापात्। न ह्यस्ति सम्भवशब्दो यत्र श्रूयते तत्रामुख्यो यत्रापकृष्यते तत्र मुख्य इति । अतो दुष्परिहरं श्रुत्यप्रामाण्यमिति प्राप्ते सिद्धान्तयत्सूत्रमुपन्यस्य व्याचष्टे – नेति।।**

ಆದ್ದರಿಂದಲೇ ಅನುತ್ಪತ್ತಿ ಶ್ರುತಿಗೆ ಗೌಣತ್ವ ಹೇಳಿದ್ದನ್ನು ನಿರಾಕರಣೆ ಮಾಡಿದಂತಾಯಿತು. ಆದ್ದರಿಂದ ಆಕಾಶೋತ್ಪತ್ತಿಶ್ರುತಿಯು ಅಪ್ರಮಾಣವಾಗಿರುವುದರಿಂದ ಶ್ರುತಿಸಮನ್ವಯದ ಮೂಲಕ ಆಕಾಶಕಾರಣತ್ವವನ್ನು ಬ್ರಹ್ಮನಿಗೆ ಹೇಳಿದ್ದು ಅಯುಕ್ತವಾಗಿದೆ.

'ಆತ್ಮನಃ ಆಕಾಶಸ್ಸಂಭೂತಃ' ಎಂಬ ಶ್ರುತಿಗೆ ಬೇರೆ ಅರ್ಥವನ್ನು ಮಾಡುವ ಮೂಲಕ ವಿರೋಧವನ್ನು ಪರಿಹರಿಸಬಹುದಲ್ಲವೇ? ಎನ್ನಬಾರದು. ಹಾಗಾದಲ್ಲಿ ವಾಯು ಮೊದಲಾದ ವಿಷಯಗಳಲ್ಲೂ ಕೂಡ ಹಾಗೆಯೇ ಅನ್ಯಾರ್ಥವನ್ನು ಕಲ್ಪನೆ ಮಾಡಬೇಕಾಗುತ್ತದೆ.

ಆಕಾಶಾದಿಗಳಲ್ಲಿ ಶ್ರುತವಾದ ಸಂಭವ ಶಬ್ದಕ್ಕೆ ಅಮುಖ್ಯಾರ್ಥವನ್ನು ಮಾಡಬೇಕು. ವಾಯು ಮೊದಲಾದ ಉತ್ಪತ್ತಿಯನ್ನು ಹೇಳುವಾಗ ಸಂಭವ ಶಬ್ದವು ಇಲ್ಲದ ಕಾರಣ ಅದನ್ನು ಆಕರ್ಷಣೆ ಮಾಡಬೇಕು. ಆಗ ಅದಕ್ಕೆ ಮುಖ್ಯಾರ್ಥವನ್ನು ಹೇಳಬಹುದು ಎಂಬುದು ತಪ್ಪು. ಎಲ್ಲಿ ಸಂಭವ ಶಬ್ದವಿದೆಯೋ ಅಲ್ಲಿ ಅಮುಖ್ಯಾರ್ಥವನ್ನು, ಎಲ್ಲಿ ಆಕೃಷ್ಟವಾದ ಸಂಭವ ಶಬ್ದವಿದೆಯೋ ಅಲ್ಲಿ ಮುಖ್ಯಾರ್ಥವನ್ನು ಹೇಳಲು ನಿಯಾಮಕವಿಲ್ಲ. ಆದ್ದರಿಂದ ಶ್ರುತಿಯ ಅಪ್ರಾಮಾಣ್ಯವು ದುಷ್ಪರಿಹರವಾಯಿತು. ಇಷ್ಟು ಪೂರ್ವಪಕ್ಷ.

ಈ ಪೂರ್ವಪಕ್ಷವನ್ನು ಪರಿಹಾರ ಮಾಡುವ ಸಿದ್ಧಾಂತಸ್ಥಾಪಕವಾದ ಸೂತ್ರವನ್ನು 'ನ ವಿಯತ್' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - 'ಆತ್ಮನಃ ಆಕಾಶಸ್ಸಂಭೂತಃ' ಎಂಬ ಶ್ರುತಿಯು ಅಪ್ರಮಾಣವಾಗಿದೆ. ಆದ್ದರಿಂದ ಅನುತ್ಪತ್ತಿ ಶ್ರುತಿಗೆ ಗೌಣತ್ವವನ್ನು ವರ್ಣನೆ ಮಾಡಬೇಕೆಂದು ಹೇಳಿದ್ದು ನಿರಸ್ತವಾಯಿತು. ಆಕಾಶವು ಅನಾದಿ ಎಂದು ಹೇಳುವ ಶ್ರುತಿಗೆ ಅನೇಕ ಕಾಲದಲ್ಲಿದೆ ಎಂಬುದಾಗಿ ಗೌಣಾರ್ಥವನ್ನು ಮಾಡಬೇಕು ಎಂಬುದಾಗಿ ಅಥವಾ ವಿರುದ್ಧವಾದ ಎರಡು ಶ್ರುತಿಗಳಿರುವುದರಿಂದ ಒಂದು ಶ್ರುತಿ ಅವ್ಯಾಕೃತಾಕಾಶಕ್ಕೆ ನಿತ್ಯತ್ವವನ್ನು ಹೇಳುತ್ತದೆ. ಮತ್ತೊಂದು ಶ್ರುತಿ ಭೂತಾಕಾಶಕ್ಕೆ ನಿತ್ಯತ್ವವನ್ನು ಹೇಳುತ್ತದೆ. ಹೀಗೆ ಎರಡು ರೀತಿಯಲ್ಲಿ ವ್ಯವಸ್ಥೆಯನ್ನು ಮಾಡಬಹುದಲ್ಲವೇ? ಎಂಬ ಪ್ರಶ್ನೆಗೆ ನ್ಯಾಯವಿವರಣದ ಪ್ರಕಾರ 'ಅತ ಏವ' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ. ಸಂಭೂತಶ್ರುತಿಯು ಅಪ್ರಮಾಣವಾಗಿರುವುದರಿಂದಲೇ ವ್ಯವಸ್ಥೆಯನ್ನು ಮಾಡುವ ಅವಶ್ಯಕತೆ ಇರುವುದಿಲ್ಲ ಎಂಬುದು ಪೂರ್ವಪಕ್ಷಿಗಳ ಅಭಿಪ್ರಾಯ.

ಆಕಾಶದ ವಿಷಯದಲ್ಲಿ ಇರುವ ಸಂಭೂತಶಬ್ದಕ್ಕೆ ಅಭಿವ್ಯಕ್ತಿ ಎಂಬರ್ಥವನ್ನು ವಿವಕ್ಷಿಸಿ, ವಾಯು ಮೊದಲಾದವುಗಳಲ್ಲಿ ಉತ್ಪತ್ತಿ ಎಂಬರ್ಥವನ್ನು ವಿವಕ್ಷಿಸಿ ವ್ಯವಸ್ಥೆಯನ್ನು ಮಾಡಬಾರದು ಎಂಬ ಅರ್ಥಾಂತರವನ್ನು ಒಪ್ಪಿ ಶಂಕಾಪೂರ್ವಕ ವ್ಯಾಖ್ಯಾನ ಮಾಡಲು 'ನ ಚ' ಇತ್ಯಾದಿ ಟೀಕೆಯು ಹೊರಟಿದೆ. (ಭಾವದೀಪ)

**तत्वप्रकाशिका – अत्रोत्पत्त्यसम्भवादिति प्रकृतानुत्पत्तिः सम्बध्यते । यदुक्तं वियदनुत्पत्तिमदिति न तद्युक्तम् । तथा अनुत्पत्तौ श्रुत्यभावादित्यर्थः ।।१।।**

'ಉತ್ಪತ್ತ್ಯಸಂಭವಾತ್' ಎಂಬ ಸೂತ್ರದ ಅರ್ಥವೆನಿಸಿದ ಅನುತ್ಪತ್ತಿಯನ್ನು ಇಲ್ಲಿ ಶಬ್ದದಿಂದ ಸೇರಿಸಿಕೊಳ್ಳಬೇಕು. ಆದ್ದರಿಂದ 'ವಿಯತ್ ಅನುತ್ಪತ್ತಿಮತ್ ನ' 'ಆಕಾಶವು ಉತ್ಪತ್ತಿವುಳ್ಳದ್ದಲ್ಲ' ಎಂದು ಪೂರ್ವಪಕ್ಷ ಹೇಳಿದ್ದು ಅಯುಕ್ತವಾಗಿದೆ. ಏಕೆಂದರೆ ಹಾಗೆ ಉತ್ಪತ್ತಿ ಇಲ್ಲ ಎನ್ನಲು ಯಾವುದೇ ಶ್ರುತಿಗಳಿರುವುದಿಲ್ಲ ಎಂಬುದಾಗಿ ಸೂತ್ರದ ಅರ್ಥವನ್ನು ಹೇಳಿದಂತಾಯಿತು.

## ಬ್ರಹ್ಮಸೂತ್ರ

**सूत्रम् – अस्ति तु**

ಆಕಾಶಕ್ಕೆ ಉತ್ಪತ್ತಿ ಹೇಳುವ ಶ್ರುತಿಯು ಇದ್ದೇ ಇರುತ್ತದೆ.

## ಸೂತ್ರದೀಪಿಕಾ

**सूत्रदीपिका –** आकाशोत्पत्तौ 'आत्मन आकाशः सम्भूतः' इति श्रुतिरस्त्येवेत्यर्थः ।।२।।

ಅಸ್ತಿತು = ಆಕಾಶದ ಉತ್ಪತ್ತಿಯ ವಿಷಯದಲ್ಲಿ 'ಆತ್ಮನ ಆಕಾಶಃ ಸಂಭೂತಃ' ಎಂಬ ಶ್ರುತಿಯು ಪ್ರಮಾಣವಾಗಿದೆ.

## ಬ್ರಹ್ಮಸೂತ್ರಭಾಷ್ಯ

**भाष्यम् –।। अस्ति तु ।।२।।**

**अस्त्येव चोत्पत्तिश्रुतिः, 'आत्मन आकाशः सम्भूतः' (तै.२.१.) इत्यादि ।।२।।**

ಅನುವಾದ - ಆಕಾಶಾದಿಗಳಿಗೆ ಉತ್ಪತ್ತಿಯನ್ನು ಹೇಳುವ ಶ್ರುತಿ 'ಆತ್ಮನ ಆಕಾಶಸ್ಸಂಭೂತಃ' ಇತ್ಯಾದಿಯಾಗಿ ಇದೆ.

ಪ್ರತಿಪದಾರ್ಥ -- ಒಂದುವೇಳೆ ಆಕಾಶಕ್ಕೆ ಉತ್ಪತ್ತಿ ಇರುವುದಾದರೆ ಪ್ರಮಾಣವನ್ನು ಹೇಳಬೇಕು. ಹಾಗೆ ಪ್ರಮಾಣ ಇರುವುದಿಲ್ಲ ಎಂಬ ಆಶಂಕೆಗೆ ಉತ್ತರಿಸುತ್ತಿದ್ದಾರೆ - ಉತ್ಪತ್ತಿಶ್ರುತಿಃ = ಆಕಾಶಕ್ಕೆ ಉತ್ಪತ್ತಿಯನ್ನು

ಹೇಳುವ ಶ್ರುತಿಯು, ಅಸ್ತ್ಯೇವ = ಇದ್ದೇ ಇರುತ್ತದೆ. ಅದು ಹೀಗಿದೆ - ಆತ್ಮನಃ = ಆತ್ಮನಿಂದ, ಆಕಾಶಃ = ಆಕಾಶವು, ಸಂಭೂತಃ = ಹುಟ್ಟಿತು, ಇತ್ಯಾದಿ = ಇವೇ ಮೊದಲಾದವು.

## ತತ್ವಪ್ರಕಾಶಿಕಾ

**तत्वप्रकाशिका – न वियत उत्पत्त्यभावे प्रमाणं नियमेन वक्तव्यम् । उत्पत्तौ प्रमाणाभावादेव तत्सिद्धेः । न हि घटे प्रमाणाभावे पुनस्तदभावे प्रमाणापेक्षा स्यादित्याशङ्कां परिहरत्सूत्रमुपन्यस्य व्याचष्टे – अस्तीति ।। नोत्पत्तौ प्रमाणाभावः। श्रुतेरेव विद्यमानत्वादिति भावः ।। २ ।।**

ಆಕಾಶಕ್ಕೆ ಉತ್ಪತ್ತಿ ಇಲ್ಲ ಎಂಬ ವಿಷಯದಲ್ಲಿ ಪ್ರಮಾಣವನ್ನು ನಿಯಮೇನ ಹೇಳಬೇಕಾಗಿಲ್ಲ. ಉತ್ಪತ್ತಿ ವಿಷಯದಲ್ಲಿ ಪ್ರಮಾಣ ಇಲ್ಲದಿರುವುದರಿಂದಲೇ ಉತ್ಪತ್ತ್ಯಭಾವವು ಸಿದ್ಧವಾಗುತ್ತದೆ. ಘಟವಿಷಯದಲ್ಲಿ ಪ್ರಮಾಣವಿಲ್ಲವೆಂದರೆ ಸಾಕು. ಪುನಃ ತದಭಾವವಿಷಯದಲ್ಲಿ ಪ್ರಮಾಣದ ಅಪೇಕ್ಷೆ ಇರುವುದಿಲ್ಲ. ಈ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು 'ಅಸ್ತಿ ತು' ಎಂಬುದಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನವನ್ನು ಮಾಡುತ್ತಿದ್ದಾರೆ.

ಉತ್ಪತ್ತಿ ವಿಷಯದಲ್ಲಿ ಪ್ರಮಾಣವಿಲ್ಲ ಎಂದಿಲ್ಲ. ಆಕಾಶಕ್ಕೆ ಉತ್ಪತ್ತಿಯಿದೆ ಎಂದು ಶ್ರುತಿಯೇ ಹೇಳುತ್ತಿದೆ.

ವಿವರಣೆ – ಹಿಂದಿನ ಸೂತ್ರದಲ್ಲಿ ಆಕಾಶಕ್ಕೆ ಉತ್ಪತ್ತಿ ಇಲ್ಲ ಎಂಬಲ್ಲಿ ಪ್ರಮಾಣವಿಲ್ಲ ಎಂದು ಹೇಳಲಾಯಿತು. ಇದರ ಮೇಲೆ ಪೂರ್ವಪಕ್ಷಿಯು ಅಧಿಕಾಕ್ಷೇಪವನ್ನು ಮಾಡುತ್ತಿದ್ದಾನೆ. ಉತ್ಪತ್ತಿ ಇಲ್ಲವೆನ್ನಲು ಪ್ರಮಾಣವೇಕೆ ಬೇಕು? ಉತ್ಪತ್ತಿ ಇರುವ ವಿಷಯದಲ್ಲಿ ಪ್ರಮಾಣ ಇಲ್ಲದ್ದರಿಂದಲೇ ಸಿದ್ಧವಾಗುತ್ತದಲ್ಲವೇ? ಎಂದು. ಈ ಅಧಿಕಾಕ್ಷೇಪದ ಪರಿಹಾರಕ್ಕಾಗಿ 'ಅಸ್ತಿ ತು' ಎಂಬ ಸೂತ್ರ ಹೊರಟಿದೆ. 'ಆತ್ಮನಃ ಆಕಾಶಃಸಂಭೂತಃ' ಶ್ರುತಿಯು ಆಕಾಶಕ್ಕೆ ಉತ್ಪತ್ತಿ ಇದೆ ಎಂದು ಹೇಳುತ್ತಿರುವುದರಿಂದ ಪ್ರಮಾಣ ಇಲ್ಲವೆಂಬುದು ತಪ್ಪು.

## ಬ್ರಹ್ಮಸೂತ್ರ

**सूत्रम् – ।। गौण्यसम्भवात् ।।३।।**

ಆಕಾಶಕ್ಕೆ ಉತ್ಪತ್ತಿಯನ್ನು ಹೇಳುವ ಶ್ರುತಿಗೆ ವಿರೋಧ ಬರುವುದರಿಂದ ಅನಾದಿತ್ವ ಶ್ರುತಿಗೆ ಗೌಣಾರ್ಥವನ್ನು ಮಾಡಬೇಕು.

ಪರಿಪೂರ್ಣಚಂದ್ರಿಕಾ

## ಸೂತ್ರದೀಪಿಕಾ

**सूत्रदीपिका** — 'अनादिर्वाऽयमाकाशः' इति श्रुतिर्गौणी अमुख्यानादित्वपरा । कुतः । **असम्भवात्** तस्याः मुख्यार्थत्वे बहुलोत्पत्ति-श्रुत्ययोगादित्यर्थः ।।३।।

'ಅನಾದಿರ್ವಾऽಯಮಾಕಾಶಃ' ಎಂಬ ಶ್ರುತಿಯು ಗೌಣೀ = ಅಮುಖ್ಯವಾದ ಅನಾದಿತ್ವವನ್ನು ಹೇಳುತ್ತದೆ. ಏಕೆಂದರೆ ಅಸಂಭವಾತ್ = 'ಅನಾದಿರ್ವಾऽಯಂ' ಎಂಬ ಶ್ರುತಿಗೆ ಮುಖ್ಯಾರ್ಥವನ್ನು ಹೇಳಿದರೆ ಆಕಾಶಕ್ಕೆ ಉತ್ಪತ್ತಿಯನ್ನು ಹೇಳುವ ಅನೇಕ ಶ್ರುತಿಗಳು ಅಯುಕ್ತವಾಗುತ್ತವೆ.

## ಬ್ರಹ್ಮಸೂತ್ರಭಾಷ್ಯ

**भाष्यम् — ।। गौण्यसम्भवात् ।।३।।**

**अनादिर्वा अयमाकाशः 'शून्योऽलौकिकः इत्यादिश्रुतिर्गौणी । अन्यथोत्पत्तिश्रुतिबाहुल्या-सम्भवात् ।।३।।**

ಅನುವಾದ - 'ಅನಾದಿರ್ವಾ ಅಯಮಾಕಾಶ ಶೂನ್ಯ ಅಲೌಕಿಕಃ' ಎಂಬ ಶ್ರುತಿಯಲ್ಲಿ ಆಕಾಶಕ್ಕೆ ನಿತ್ಯತ್ವವನ್ನು ಹೇಳಿದಂತೆ ಕಾಣಿಸುತ್ತದೆ. ಆದರೆ ಈ ಶ್ರುತಿಗೆ ಗೌಣಾರ್ಥವನ್ನು ಮಾಡಬೇಕು.

ಪ್ರತಿಪದಾರ್ಥ -- 'ಅನಾದಿರ್ವಾ' ಎಂಬ ಶ್ರುತಿಯು ಆಕಾಶಕ್ಕೆ ನಿತ್ಯತ್ವವನ್ನು ಪ್ರತಿಪಾದನೆ ಮಾಡುತ್ತಿದೆಯಲ್ಲವೆ ? ಎಂಬ ಆಶಂಕೆಗೆ ಉತ್ತರಿಸಲು ಮುಂದಿನ ಸೂತ್ರ ಹೊರಟದೆ- ಅಯಂ = ಈ, ಆಕಾಶಃ = ಆಕಾಶವು, ಅನಾದಿರ್ವಾ = ಅನಾದಿಯಾಗಿದೆ, ಶೂನ್ಯಃ = ಸೂಕ್ಷ್ಮವಾಗಿದೆ, ಅಲೌಕಿಕಃ = ಅತೀಂದ್ರಿಯವಾಗಿದೆ, ಇತ್ಯಾದಿಶ್ರುತಿಃ = ಇವೇ ಮೊದಲಾದ ಶ್ರುತಿಯನ್ನು, ಗೌಣೀ = ಗೌಣವಾಗಿ ವ್ಯಾಖ್ಯಾನ ಮಾಡಬೇಕು. ಅನ್ಯಥಾ = ಇಲ್ಲದಿದ್ದರೆ, ಉತ್ಪತ್ತಿಶ್ರುತಿಬಾಹುಲ್ಯ ಅಸಂಭವಾತ್ = ಆಕಾಶಕ್ಕೆ ಉತ್ಪತ್ತಿಯನ್ನೇ ಹೇಳುವ ಅನೇಕ ಶ್ರುತಿಗಳು ಅಸಂಭವವಾಗಬೇಕಾದೀತು.

## ತತ್ವಪ್ರಕಾಶಿಕಾ

**तत्वप्रकाशिका** — न वियतोऽनया श्रुत्योत्पत्तिः साधयितुं शक्या, अनादित्वाभिधायकश्रुतिविरोधादित्याशङ्कां परिहरत्सूत्रमुपन्यस्य व्याचष्टे — **गौणीति** ।।

ಆಕಾಶಕ್ಕೆ ಸಂಭೂತ ಶ್ರುತಿಯಿಂದ ಉತ್ಪತ್ತಿಯನ್ನು ಸಾಧನೆ ಮಾಡಲು ಸಾಧ್ಯವಿಲ್ಲ. ಏಕೆಂದರೆ ಅನಾದಿತ್ವವನ್ನು ಪ್ರತಿಪಾದನೆ ಮಾಡುವ ಶ್ರುತಿವಿರೋಧವು ಬರುತ್ತದೆ. ಈ ಆಕ್ಷೇಪವನ್ನು ಪರಿಹಾರ ಮಾಡುವ ಸೂತ್ರವನ್ನು 'ಗೌಣ್ಯಸಂಭವಾತ್' ಎಂದು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿಯದಧಿಕರಣ (೨-೩-೧)

**तत्वप्रकाशिका – शून्यः सूक्ष्मः अलौकिकोऽतीन्द्रियः । नोत्पत्तिश्रुतेरनादित्व श्रुतिविरोधः । अनादित्वश्रुतिर्गौणानादित्वपरा । उत्पत्तिश्रुतिस्तु मुख्यार्थेति व्यवस्थायोगात्।**

ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಯಲ್ಲಿರುವ ಶೂನ್ಯಶಬ್ದಕ್ಕೆ ಸೂಕ್ಷ್ಮವಾದುದು ಎಂದರ್ಥ. ಅಲೌಕಿಕಃ' ಎಂಬ ಶಬ್ದಕ್ಕೆ ಅತೀಂದ್ರಿಯವಾದುದು ಎಂದರ್ಥ. ಉತ್ಪತ್ತಿ ಪ್ರತಿಪಾದಕ ಶ್ರುತಿಗೆ ಅನಾದಿತ್ವ ಶ್ರುತಿಯ ವಿರೋಧವು ಬರುವುದಿಲ್ಲ. ಏಕೆಂದರೆ ಅನಾದಿತ್ವಶ್ರುತಿಯು ಗೌಣವಾದ ಅನಾದಿತ್ವವನ್ನೇ ಹೇಳುತ್ತಿದೆ. ಉತ್ಪತ್ತಿ ಶ್ರುತಿಯು ಮುಖ್ಯಾರ್ಥವನ್ನು ಹೇಳುತ್ತಿದೆ. ಹೀಗೆ ವ್ಯವಸ್ಥೆಯನ್ನು ಮಾಡಬೇಕು.

**तत्वप्रकाशिका – तथा हि । आकाशपदेन भूतावकाशतद्देवता उच्यन्ते । तत्र भूतं स्वरूपत एवोत्पत्तिमत् रूपित्वात् । 'आकाशे नीलिमोदेति' इति श्रुतेः । तदभिमानिनोऽपि शरीरोत्पत्तिद्वाराऽस्त्येवोत्पत्तिः । अवकाशतदभिमानि-नोरप्यस्ति पराधीनविशेषलाभलक्षणोत्पत्तिरिति सर्वविषयत्वादुत्पत्ति-श्रुतिर्मुख्यर्था । अनादित्वश्रुतिस्तु न सर्वविषयेति भवति गौणी । भूते कथमप्यवृत्तेः ।**

ಅದು ಹೀಗೆ - ಆಕಾಶ ಪದದಿಂದ ಭೂತಾಕಾಶ ಹಾಗೂ ತದಭಿಮಾನಿದೇವತೆಯನ್ನು ವಿವಕ್ಷಿಸಬೇಕು. ಇವೆರಡರಲ್ಲಿ ಭೂತಾಕಾಶಕ್ಕೆ ಸ್ವರೂಪತಃ ಉತ್ಪತ್ತಿ ಇದೆ ಹಾಗೂ ರೂಪಿತ್ವವೂ ಇದೆ. 'ಆಕಾಶೇ ನೀಲಿಮೋದೇತಿ' ಎಂಬ ಶ್ರುತಿಯಿಂದ ಇದು ಸಿದ್ಧವಾಗಿದೆ.

ಆಕಾಶಕ್ಕೆ ಅಭಿಮಾನಿಯಾದ ದೇವತೆಗೂ ಕೂಡ ಶರೀರದ ಉತ್ಪತ್ತಿಯ ಮೂಲಕ ಉತ್ಪತ್ತಿಯು ಇದ್ದೇ ಇರುತ್ತದೆ. ಆಕಾಶಕ್ಕೆ ಅಭಿಮಾನಿಯಾದ ಲಕ್ಷ್ಮೀದೇವಿಗೂ ಕೂಡ 'ಪರಾಧೀನವಿಶೇಷ ಅವಾಪ್ತಿ' ಎಂಬ ಉತ್ಪತ್ತಿಯು ಇರುವುದರಿಂದ ಉತ್ಪತ್ತಿ ಶ್ರುತಿಯು ಸರ್ವವಿಷಯಕವಾಗಿದೆ. ಆದ್ದರಿಂದ ಅದು ಮುಖ್ಯವಾದ ಅರ್ಥವುಳ್ಳದ್ದೆಂದು ವ್ಯಾಖ್ಯಾನ ಮಾಡಬೇಕು. ಅನಾದಿತ್ವ ಶ್ರುತಿಯಾದರೂ ಸರ್ವವಿಷಯಕವಲ್ಲ. ಗೌಣವಾಗಿಯೇ ಅದನ್ನು ವ್ಯಾಖ್ಯಾನ ಮಾಡಬೇಕು. ಏಕೆಂದರೆ ಭೂತಾಕಾಶದಲ್ಲಿ ಅನಾದಿತ್ವವು ಯಾವುದೇ ರೀತಿಯಲ್ಲಿಯೂ ಕೂಡ ಯುಕ್ತವಾಗುವುದಿಲ್ಲ.

ವಿವರಣೆ - 'ಆತ್ಮನಃ ಆಕಾಶಸಂಭೂತಃ' ಎಂಬಲ್ಲಿರುವ ಆಕಾಶ ಶಬ್ದದಿಂದ ಭೂತಾಕಾಶ, ತದಭಿಮಾನಿಯಾದ ಗಣಪತಿ, ಅವನಿಗಿಂತಲೂ ಮುಖ್ಯವಾಗಿ ಅಭಿಮಾನಿ ಎನಿಸಿದ ಲಕ್ಷ್ಮೀ ಇವರು ಪ್ರತಿಪಾದ್ಯರಾಗುತ್ತಾರೆ. ಈ ಮೂವರಲ್ಲಿಯೂ ಉತ್ಪತ್ತಿಯನ್ನು ಉಪಪಾದನೆ ಮಾಡಬಹುದು. ಭೂತಾಕಾಶಕ್ಕೆ ಸ್ವರೂಪತಃ ಉತ್ಪತ್ತಿ ಇರುತ್ತದೆ. ತದಭಿಮಾನಿಯಾದ ಗಣಪತಿಗೆ ಶರೀರದ ಉತ್ಪತ್ತಿಯ ಮೂಲಕ ಉತ್ಪತ್ತಿ ಇರುತ್ತದೆ. ಲಕ್ಷ್ಮೀದೇವಿಗೆ ಪರಾಧೀನ ವಿಶೇಷವಾಪ್ತಿ ಎಂಬ ಉತ್ಪತ್ತಿ ಇರುತ್ತದೆ ಎಂದು. ಭಗವದ್- ವ್ಯತಿರಿಕ್ತವಾದ ಸಕಲ ಪದಾರ್ಥಗಳಲ್ಲಿ ಪರಾಧೀನವಿಶೇಷಾವಾಪ್ತಿ ಎಂಬ ಉತ್ಪತ್ತಿಯು ಸಾಧಾರಣವಾಗಿದೆ.

'ಅನಾದಿತ್ವಶ್ರುತಿಸ್ತು' ಇತ್ಯಾದಿ ವಾಕ್ಯಗಳ ಅಭಿಪ್ರಾಯ ಹೀಗಿದೆ - 'ಪರಾಧೀನ-ವಿಶೇಷಾವಾಪ್ತಿ' ಎಂಬ ಉತ್ಪತ್ತಿಯೂ ಇಲ್ಲದ ಅನಾದಿತ್ವವು ಕೇವಲ ಬ್ರಹ್ಮನಲ್ಲಿ ಮಾತ್ರ ಸಿದ್ಧವಾಗುತ್ತದೆ. ಬ್ರಹ್ಮವ್ಯತಿರಿಕ್ತವಾದ ಯಾವುದೇ ಆಕಾಶವಿರಲಿ ಅದು ಉತ್ಪತ್ತಿಯನ್ನು ಹೊಂದಿಯೇ ಇರುತ್ತದೆ. ಅಭೂತ್ವಾಭಾವಿತ್ವ ಅಥವಾ ದೇಹಸಂಬಂಧ ಅಥವಾ ಪರಾಧೀನವಿಶೇಷಾವಾಪ್ತಿ ಎಂಬುದಾಗಿ ಮೂರುಬಗೆಯ ಉತ್ಪತ್ತಿಯನ್ನು ಹೇಳಬಹುದು. ಈ ಮೂರರಲ್ಲಿ ಯಾವುದಾದರೂ ಒಂದು ಭಗವದತಿರಿಕ್ತದಲ್ಲಿ ಇದ್ದೇ ಇರುತ್ತದೆಂಬುದು ಅಭಿಪ್ರಾಯ.

ಈ ಅಧಿಕರಣದಲ್ಲಿ ಆಕಾಶ ಎಂದರೆ ಭೂತಾಕಾಶ ಹಾಗೂ ಅವ್ಯಾಕೃತಾಕಾಶ ಎರಡನ್ನೂ ಕೂಡ ವಿವಕ್ಷಿಸಬೇಕು. ಭೂತಾಕಾಶಕ್ಕೆ ಅಭಿಮಾನಿ ಗಣಪತಿ. ಅವ್ಯಾಕೃತಾಕಾಶಕ್ಕೆ ಅಭಿಮಾನಿ ಲಕ್ಷ್ಮೀ. ಇಬ್ಬರಲ್ಲಿಯೂ ಕೂಡ ಪರಾಧೀನ ವಿಶೇಷಾವಾಪ್ತಿರೂಪವಾದ ಉತ್ಪತ್ತಿ ಇರುತ್ತದೆಂಬುದು ಅಭಿಪ್ರಾಯ.

ಅನಾದಿ ಶಬ್ದವು ಛತ್ರಿ ನ್ಯಾಯದಿಂದ ಭೂತಾಕಾಶದಲ್ಲಿಯೂ ಅನ್ವಯವನ್ನು ಹೊಂದುತ್ತದೆ. ಅವ್ಯಾಕೃತಾಕಾಶ ಅನಾದಿಯಾಗಿರುವುದರಿಂದ ಅದರ ಜೊತೆ ಭೂತಾಕಾಶವನ್ನೂ ಕೂಡ ಅನಾದಿ ಎಂದು ಹೇಳಲಾಗಿದೆ. ಹೀಗೆ ಅನಾದಿತ್ವವನ್ನು ಕೂಡಿಸಬಹುದು.

**तत्वप्रकाशिका – स्यादेतत् । किमेतया व्यवस्थयाऽनादित्वश्रुत्यनुसारेणानुत्पत्तिरेव किं नाऽश्रीयते । मैवम् । तथा सत्युत्पत्तिश्रुतेर्विषयाभावेनाप्रामाण्यापातात् । अनुभवाद्यनुसारिश्रुतिविरोधेनाप्रामाण्यं युक्तमिति चेन्न । उत्पत्तिश्रुतीनामपि बाहुल्येन प्रबलत्वादिति भावः । अनेनानुभवादिविरोधोऽपि निरस्तः ।। ३ ।।**

ಇದು ಕೂಡುತ್ತಿತ್ತು. ಈ ವ್ಯವಸ್ಥೆಯಿಂದ ಏನು ಉಪಯೋಗ? ಅನಾದಿತ್ವ ಶ್ರುತಿಗೆ ಅನುಸಾರಿಯಾಗಿ ಅನುತ್ಪತ್ತಿಯನ್ನೇ ಏಕೆ ಆಶ್ರಯಿಸಬಾರದು?

ಇದು ತಪ್ಪು. ಹಾಗಾದರೆ ಉತ್ಪತ್ತಿ ಶ್ರುತಿಗೆ ವಿಷಯವಿಲ್ಲದ ಕಾರಣ ಅಪ್ರಾಮಾಣ್ಯವು ಬರಬೇಕಾಗುತ್ತದೆ. ಅನುಭವಕ್ಕೆ ಅನುಸಾರಿಯಾಗಿ ಶ್ರುತಿಯ ವಿರೋಧ ಬರುವುದರಿಂದ ಉತ್ಪತ್ತಿ ಶ್ರುತಿಗೆ ಅಪ್ರಾಮಾಣ್ಯವನ್ನು ಹೇಳುವುದು ಯುಕ್ತವಾಗುತ್ತದಲ್ಲವೇ ? ಎಂಬುದು ತಪ್ಪು. ಉತ್ಪತ್ತಿಪ್ರತಿಪಾದಕವಾದ ಶ್ರುತಿಗಳೂ ಕೂಡ ಅನೇಕವಿರುವುದರಿಂದ ಪ್ರಬಲವಾಗಿವೆ. ಆದ್ದರಿಂದ ಅನುಭವಾದಿವಿರೋಧಗಳು ನಿರಸ್ತವಾದವು.

## ಬ್ರಹ್ಮಸೂತ್ರ

**सूत्रम् – शब्दाच्च ।।**

'ಅಥ ಹ ವಾವ ನಿತ್ಯಾನಿ' ಇತ್ಯಾದಿ ಶ್ರುತಿಗಳು ಆಧಾರವಾಗಿರುವುದರಿಂದ ಅನಾದಿತ್ವಶ್ರುತಿಗೆ ಗೌಣಾರ್ಥವನ್ನೇ ಆಶ್ರಯಿಸಬೇಕು.

ವಿಯದಧಿಕರಣ (೨-೩-೧)

## ಸೂತ್ರದೀಪಿಕಾ

**सूत्रदीपिका** — 'अथ ह वाव नित्यानि' इति श्रुतिबलाच्चानादित्वश्रुतिर्गौणार्थेत्यर्थः ।।४।।

ಶಬ್ದಾಚ್ಚ = 'ಅಥ ಹ ವಾವ ನಿತ್ಯಾನಿ' ಎಂಬ ಶ್ರುತಿಯ ಬಲದಿಂದ ಅನಾದಿತ್ವಶ್ರುತಿಗೆ ಗೌಣಾರ್ಥವನ್ನು ಮಾಡಬೇಕು.

## ಬ್ರಹ್ಮಸೂತ್ರಭಾಷ್ಯ

**भाष्यम् — ।। शब्दाच ।।४।।**

**'अथ ह वाव नित्यानि पुरुषः प्रकृतिरात्मा काल इति । अथ यान्यनित्यानि प्राणः श्रद्धा भूतानि भौतिकानीति ।**

**'यानि ह वाव उत्पत्तिमन्ति तान्यनित्यानि । यानि ह वा अनुत्पत्तिमन्ति तानि नित्यानि, न ह्येतानि कदाचनोत्पद्यन्ते न लीयन्ते पुरुषः प्रकृतिरात्मा काल इति । अथैतान्युत्पत्तिमन्ति च अनुत्पत्तिमन्ति च प्राणः श्रद्धाऽऽकाश इति भागशो ह्युत्पद्यन्ते' इति भाल्लवेयश्रुतेः ।।४।।**

ಅನುವಾದ - ಭಾಲ್ಲವೇಯ ಶ್ರುತಿಯಿಂದಲೂ ಆಕಾಶವು ಉತ್ಪತ್ತಿಯುಳ್ಳದ್ದೆಂದು ಸ್ಪಷ್ಟವಾಗುತ್ತದೆ -

ಪುರುಷ, ಪ್ರಕೃತಿ, ಆತ್ಮ, ಕಾಲ, ಇವುಗಳು ನಿತ್ಯವಾಗಿವೆ. ಪ್ರಾಣ, ಶ್ರದ್ಧಾ, ಪಂಚಭೂತಗಳು ಪಂಚಭೂತಗಳಿಂದ ಹುಟ್ಟುವ ವಸ್ತುಗಳು ಇವುಗಳು ಅನಿತ್ಯವಾಗಿವೆ. ಯಾವ ವಸ್ತುಗಳಿಗೆ ಉತ್ಪತ್ತಿಯು ಇರುತ್ತದೋ ಅವುಗಳೆಲ್ಲವೂ ಅನಿತ್ಯವೇ ಆಗಿರುತ್ತವೆ. ಯಾವ ವಸ್ತುಗಳಿಗೆ ಉತ್ಪತ್ತಿ ಇರುವುದಿಲ್ಲವೊ ಅವುಗಳು ನಿತ್ಯವಾಗಿರುತ್ತವೆ. ಪುರುಷ, ಪ್ರಕೃತಿ, ಆತ್ಮ, ಕಾಲ ಇವುಗಳು ಯಾವಾಗಲೂ ಹುಟ್ಟಲಾರವು ನಾಶವನ್ನು ಹೊಂದಲಾರವು. ಪ್ರಾಣ ಅವನ ಪತ್ನಿ ಶ್ರದ್ಧಾ(ಭಾರತಿ) ಆಕಾಶ ಇವುಗಳ ಏಕದೇಶಕ್ಕೆ ಉತ್ಪತ್ತಿಯು ಇರುತ್ತದೆ. ಹೀಗೆ ಭಾಲ್ಲವೇಯ ಶ್ರುತಿಯು ಹೇಳುತ್ತಿದೆ.

ಪ್ರತಿಪದಾರ್ಥ -- ಅಥ = ಮತ್ತೊಂದು ಪ್ರಮೇಯ ಹೀಗಿದೆ - ಪುರುಷಃ = ಪುರುಷನು, ಪ್ರಕೃತಿಃ = ಪ್ರಕೃತಿಯು, ಆತ್ಮಾ = ಆತ್ಮನು, ಕಾಲ = ಕಾಲವು, ಅಥ = ಅನಂತರ, ಹ ವಾವ ನಿತ್ಯಾನಿ = ಇವುಗಳು ನಿತ್ಯವೇ ಆಗಿವೆ. ಅಥ = ಅನಂತರ, ಯಾನಿ = ಯಾವ, ಪ್ರಾಣಃ = ಪ್ರಾಣನು, ಶ್ರದ್ಧಾ = ಅವನ ಪತ್ನಿಯಾದ ಭಾರತೀ, ಭೂತಾನಿ = ಆಕಾಶ ಇವುಗಳು, ಭೌತಿಕಾನಿ = ಭೌತಿಕಪದಾರ್ಥಗಳು, ಅನಿತ್ಯಾನಿ = ಅನಿತ್ಯವಾಗಿವೆ, ಯಾನಿ = ಯಾವುಗಳು ಉತ್ಪತ್ತಿಮಂತಿ = ಉತ್ಪತ್ತಿಶಾಲಿಗಳಾಗಿವೆಯೋ, ತಾನಿ = ಅವುಗಳು, ಅನಿತ್ಯಾನಿ

= ಅನಿತ್ಯವಾಗಿ, ಹ ವಾ = ಇರುತ್ತವೆ. ಯಾನಿ = ಯಾವ ಪದಾರ್ಥಗಳು, ಅನುತ್ಪತ್ತಿಮಂತಿ = ಉತ್ಪತ್ತಿಯನ್ನು ಹೊಂದಲಾರವೋ, ತಾನಿ = ಅವುಗಳು, ನಿತ್ಯಾನಿ ಹ ವಾ = ನಿತ್ಯಗಳೇ ಆಗಿರುತ್ತವೆ, ಪುರುಷಃ = ಪುರುಷನು, ಪ್ರಕೃತಿಃ = ಪ್ರಕೃತಿಯು, ಆತ್ಮಾ = ಆತ್ಮನು, ಕಾಲಃ = ಕಾಲವು, ಏತಾನಿ = ಇವುಗಳು, ಕದಾಚನ = ಯಾವಾಗಲೂ, ನ ಹಿ ಉತ್ಪದ್ಯಂತೇ = ಹುಟ್ಟಲಾರವು, ನ ವಿಲೀಯಂತೇ = ನಾಶವನ್ನು ಹೊಂದಲಾರವು, ಅಥ = ಅನಂತರ, ಪ್ರಾಣಃ = ಪ್ರಾಣನು, ಶ್ರದ್ಧಾ = ಭಾರತಿಯು, ಆಕಾಶಃ = ಆಕಾಶವು, ಇತಿ = ಇವುಗಳು, ಬಾಗಶಃ = ಏಕದೇಶದಿಂದ, ಹ್ಯುತ್ಪದ್ಯಂತೇ = ಹುಟ್ಟುತ್ತವಷ್ಟೇ, ಅಥ = ಅನಂತರ, ಏತಾನಿ = ಈ ಪ್ರಕೃತಿ ಮೊದಲಾದವು, ಉತ್ಪತ್ತಿಮಂತಿ ಚ = ಹುಟ್ಟುತ್ತವೆ, ಅನುತ್ಪತ್ತಿಮಂತಿ ಚ = ನಾಶವನ್ನು ಕೂಡ ಹೊಂದುತ್ತವೆ. ಇತಿ = ಹೀಗೆ ಭಾಲ್ಲವೇಯಶ್ರುತಿಶ್ಚ = ಭಾಲ್ಲವೇಯ ಶ್ರುತಿಯು ಪ್ರಮಾಣವಾಗಿರುವುದರಿಂದ ಆಕಾಶಾದಿ ಉತ್ಪತ್ತಿಯು ಸಿದ್ಧವಾಯಿತು.

## ತತ್ವಪ್ರಕಾಶಿಕಾ

**तत्वप्रकाशिका – न केवलमुक्तव्यवस्थाऽसम्भवयुक्तिसिद्धा । अपि तु श्रुतिसिद्धा चेत्यर्थप्रतिपादकं सूत्रमुपन्यस्य तां श्रुतिमुदाहरति – शब्दाच्चेति ।।**

ಹಿಂದೆ ಹೇಳಲ್ಪಟ್ಟ ವ್ಯವಸ್ಥೆಯು ಅಸಂಭವಯುಕ್ತಿಯಿಂದಷ್ಟೆ ಸಿದ್ಧವಾಗಿಲ್ಲ, ಶ್ರುತಿಸಿದ್ಧವೂ ಕೂಡ ಆಗಿದೆ. ಹೀಗೆ ಪ್ರತಿಪಾದನೆ ಮಾಡುವ ಸೂತ್ರವನ್ನು 'ಶಬ್ದಾಚ್ಚ' ಎಂದು ಪಠಿಸಿ ಆ ಶ್ರುತಿಯನ್ನು ಉದಾಹರಣೆ ಮಾಡುತ್ತಿದ್ದಾರೆ.

ವಿವರಣೆ - 'ಅನಾದಿರ್ವಾಽಯಮಾಕಾಶಃ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಆಕಾಶದ ನಿತ್ಯತ್ವವು ಗೌಣವಾಗಿದೆ. 'ಆತ್ಮನಃ ಆಕಾಶಸ್ಸಂಭೂತಃ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಆಕಾಶದ ಉತ್ಪತ್ತಿಯು ಮುಖ್ಯವಾಗಿದೆ ಎಂಬುದಾಗಿ ಹಿಂದಿನ ಸೂತ್ರದಲ್ಲಿ ವ್ಯವಸ್ಥೆಯನ್ನು ಮಾಡಲಾಯಿತು. ಈ ವ್ಯವಸ್ಥೆಯು ಕೇವಲ ಆಕಾಶಕ್ಕೆ ಉತ್ಪತ್ತಿಯನ್ನು ಹೇಳುವ ಶ್ರುತಿಗಳಿಗೆ ಬಾಹುಲ್ಯವು ಕೂಡುವುದಿಲ್ಲ ಎಂಬ ಯುಕ್ತಿಯಿಂದಷ್ಟೆ ಸಿದ್ಧವಾಗಿಲ್ಲ, ಶ್ರುತಿಯಿಂದಲೂ ಕೂಡ ಸಿದ್ಧವಾಗಿದೆ.

**तत्वप्रकाशिका –आत्मा = परमात्मा । पुरुषादिपदैर्जीवचैतन्य-प्रकृतिमुस्वरूपकालप्रवाहा उच्यन्ते । तदभिमानिप्रकृतिश्च। प्राणो मुख्यवायुः । श्रद्धा तत्पत्नी । पुरुषपदेन गृहीतयोरप्यनयोश्चैतन्यमात्रादधिकमपि नित्यत्वमस्तीति दर्शयितुं पनः सपरिकरयोर्ग्रहणम् ।**

ಶ್ರುತಿಯಲ್ಲಿರುವ ಆತ್ಮ ಎಂಬ ಶಬ್ದಕ್ಕೆ ಪರಮಾತ್ಮನೆಂದರ್ಥ. ಪುರುಷ ಮೊದಲಾದ ಪದಗಳಿಂದ ಜೀವಚೈತನ್ಯ ಪ್ರಕೃತಿಸ್ವರೂಪ, ಕಾಲಪ್ರವಾಹಗಳು ಪ್ರತಿಪಾದ್ಯವಾಗಿವೆ.

ಮತ್ತು ಇವುಗಳ ಅಭಿಮಾನಿಯಾದ ಪ್ರಕೃತಿ ಎನಿಸಿದ ಲಕ್ಷ್ಮಿಯನ್ನೂ ಕೂಡ ವಿವಕ್ಷಿಸಬೇಕು. ಪ್ರಾಣ ಶಬ್ದಕ್ಕೆ ಮುಖ್ಯಪ್ರಾಣನೆಂದರ್ಥ. ಶ್ರದ್ಧಾ ಎಂದರೆ ಅವನ ಪತ್ನಿ.

ಪುರುಷ ಪದದಿಂದ ಮುಖ್ಯಪ್ರಾಣ ಹಾಗೂ ಮುಖ್ಯಪ್ರಾಣನ ಪತ್ನಿ ಇವರಿಬ್ಬರು ಗೃಹೀತರಾಗಿದ್ದರೂ ಕೂಡ ಚೈತನ್ಯವರ್ಗಕ್ಕಿಂತ ಆಧಿಕ್ಯ ಇರುವುದರಿಂದ ನಿತ್ಯತ್ವವೂ ಕೂಡ ಇರುತ್ತದೆ. ಇದನ್ನು ತೋರಿಸುವುದಕ್ಕಾಗಿ ಪುನಃ ಚೈತನ್ಯಾದಿಗಳಿಂದ ಸಹಿತವಾದ ಪ್ರಾಣ ಹಾಗೂ ಶ್ರದ್ಧಾದೇವಿಯನ್ನು ವಿವಕ್ಷಿಸಲಾಗಿದೆ.

ವಿವರಣೆ - ಪುರುಷ, ಪ್ರಕೃತಿ, ಕಾಲ ಇವುಗಳಿಗೆ ದೇಹದ ಉತ್ಪತ್ತಿ ಇರುವುದರಿಂದ ನಿತ್ಯತ್ವವು ಹೇಳಿದ್ದು ಹೇಗೆ ಸಮಂಜಸವಾಗುತ್ತದೆ ? ಎಂಬ ಪ್ರಶ್ನೆಗೆ 'ಪುರುಷಾದಿಪದೈಃ' ಇತ್ಯಾದಿ ಟೀಕೆಯು ಹೊರಟದೆ.

ಪ್ರಾಣ ಹಾಗೂ ಶ್ರದ್ಧಾದೇವಿ ಇವರು ಜೀವಚೈತನ್ಯವನ್ನು ಸಂಗ್ರಹ ಮಾಡುವ ಪುರುಷ ಪದದಿಂದಲೇ ಸಂಗೃಹೀತರಾಗುತ್ತಾರೆ. ಇವರ ದೇಹವು ಅನಿತ್ಯವರ್ಗವಾದ ಭೌತಿಕಾನಿ ಎಂಬುದರಿಂದ ಸಂಗ್ರಹವಾಗುತ್ತದೆ. ಹೀಗಿರುವಾಗ ಪ್ರತ್ಯೇಕವಾಗಿ ಏಕೆ ಗ್ರಹಣ ಮಾಡಿದ್ದು ? ಈ ಪ್ರಶ್ನೆಗೆ 'ಪುರುಷಪದೇನ' ಇತ್ಯಾದಿ ಟೀಕೆಯಿಂದ ಉತ್ತರಿಸಿದ್ದಾರೆ.

**तत्वप्रकाशिका – उक्तप्रतिज्ञाद्वयसमर्थनाय व्याप्तिरुच्यते – यानीति ।। नित्यत्वव्याप्तस्याऽनादित्वहेतोरुपनयः न हीति । न विलीयन्त इति निगमनम् । एवमनित्येष्वपि प्राणादीन्युत्पत्तिमन्ति तस्माल्लीयन्ते इत्युपनयनिगमने द्रष्टव्ये ।**

ಹಿಂದೆ ಹೇಳಲ್ಪಟ್ಟ ಎರಡು ಪ್ರತಿಜ್ಞೆಗಳನ್ನು ಸಮರ್ಥನೆ ಮಾಡುವುದಕ್ಕಾಗಿ ವ್ಯಾಪ್ತಿಯನ್ನು ಹೇಳುತ್ತಿದ್ದಾರೆ 'ಯಾನಿ' ಇತ್ಯಾದಿ ಭಾಷ್ಯದಿಂದ.

ನಿತ್ಯತ್ವವ್ಯಾಪ್ತವಾದ ಅನಾದಿತ್ವಹೇತುವಿಗೆ ಉಪನಯನವು 'ನಹ್ಯೇತಾನಿ' ಎಂಬುದಾಗಿ ಹೇಳಲ್ಪಟ್ಟಿದೆ. 'ನ ವಿಲೀಯಂತೆ' ಎಂಬುದು ನಿಗಮನ. ಇದೇ ರೀತಿಯಾಗಿ ಹೀಗೆ ಅನಿತ್ಯವಾದವುಗಳಲ್ಲೂ ಕೂಡ ಪ್ರಾಣಾದಿಗಳು ಉತ್ಪತ್ತಿವುಳ್ಳಗಳು. ಅವುಗಳಿಂದಲೇ ಲಯವನ್ನು ಹೊಂದುತ್ತದೆ. ಹೀಗೆ ಉಪನಯ ಹಾಗೂ ನಿಗಮನಗಳನ್ನು ತಿಳಿಯಬೇಕು.

ವಿವರಣೆ - ತಾರ್ಕಿಕರ ಮತಕ್ಕೆ ಅನುಸಾರಿಯಾಗಿ ಇಲ್ಲಿ ಅನುಮಾನ ಪ್ರಯೋಗವನ್ನು ಮಾಡಿದ್ದಾರೆಂದು ಭಾಷ್ಯವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ಅದು ಹೀಗೆ - ಪಂಚಾವಯವ ವಾಕ್ಯಗಳಿಂದ ಕೂಡಿದ್ದೇ ಅನುಮಾನವೆಂಬುದು ತಾರ್ಕಿಕರ ಅಭಿಪ್ರಾಯ. ಭಾಷ್ಯದಲ್ಲಿ ಪ್ರಯೋಗಿಸಲ್ಪಟ್ಟ ಅನುಮಾನವೂ ಕೂಡ ಪಂಚಾವಯವಗಳಿಂದ ಯುಕ್ತವಾಗಿದೆ. 'ಪ್ರಕೃತಿಪುರುಷಕಾಲಾದೀನಿ ನಿತ್ಯಾನಿ' ಎಂಬುದು ಪ್ರತಿಜ್ಞೆ. 'ಅನಾದಿತ್ವಾತ್' ಎಂಬುದು ಹೇತು. 'ಯಾನಿ ಯಾನಿ ಅನುತ್ಪತ್ತಿಮಂತಿ ತಾನಿ ನಿತ್ಯಾನಿ' ಎಂಬುದು ವ್ಯಾಪ್ತಿ. 'ವ್ಯತಿರೇಕೇಣ ಘಟವತ್' ಎಂಬುದು ಉದಾಹರಣೆ. 'ನಿತ್ಯತ್ವವ್ಯಾಪ್ಯ ಅನಾದಿತ್ವವಂತಿ ಪುರುಷಾದೀನಿ' ಎಂಬುದು ಉಪನಯ. 'ತಸ್ಮಾನ್ನಿತ್ಯಾನಿ ಏತಾನಿ ನ ವಿಲೀಯಂತೇ' ಎಂಬುದು ನಿಗಮನ.

ಇದೇ ರೀತಿಯಾಗಿ 'ಪ್ರಾಣಾಃ ಶ್ರದ್ಧಾ ಭೂತಾನಿ ಅನಿತ್ಯಾನಿ' ಎಂಬುದು ಪ್ರತಿಜ್ಞೆ. 'ಉತ್ಪತ್ತಿಮತ್ವಾತ್' ಎಂಬುದು ಹೇತು. 'ಯಾನಿ ಉತ್ಪತ್ತಿಮಂತಿ ತಾನಿ ಅನಿತ್ಯಾನಿ' ಎಂಬುದು ವ್ಯಾಪ್ತಿ. 'ಉತ್ಪತ್ತಿಮತ್ವವ್ಯಾಪ್ತಃ ಅನಿತ್ಯತ್ವವಂತಃ ಪ್ರಾಣಾದಯ' ಎಂಬುದು ಉಪನಯ. 'ತಸ್ಮಾದೇತೇ ವಿಲೀಯಂತೇ' ಎಂಬುದು ನಿಗಮನ. ಎಂಬುದಾಗಿಯೂ ತಿಳಿಯಬೇಕು.

**तत्वप्रकाशिका – प्राणादिषु न सर्वेषामनित्यत्वमेवेत्युच्यते – अथेति ।। तस्मान्नित्यानित्यनीति शेषः । तत्र उपपत्तिः भागश इति । बहुभागैरुत्पद्यन्ते कैश्चिन्नोत्पद्यन्त इत्यर्थः । तत्प्रकारश्चाऽकाशस्योक्तः । प्राणस्योपरि वक्ष्यते ।।४।।**

ಪ್ರಾಣಾದಿಗಳಲ್ಲಿ ಎಲ್ಲವೂ ಕೂಡ ಅನಿತ್ಯವಲ್ಲ ಎಂಬುದನ್ನು 'ಅಥ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಆದ್ದರಿಂದ ಇವುಗಳು ನಿತ್ಯಾನಿತ್ಯ ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಈ ವಿಷಯದಲ್ಲಿ ಉಪಪತ್ತಿಯನ್ನು 'ಭಾಗಶಃ' ಎಂಬುದರಿಂದ ಹೇಳಿದ್ದಾರೆ.

ಇವುಗಳಿಗೆ ಉತ್ಪತ್ತಿಯು ಭಾಗಶಃ ಇರುತ್ತದೆ. ಕೆಲವು ಭಾಗಗಳಿಂದ ಉತ್ಪತ್ತಿಯು ಇರುವುದಿಲ್ಲ. ಇದರ ಪ್ರಕಾರವನ್ನು ಆಕಾಶಕ್ಕೆ ಈಗಾಗಲೇ ಹೇಳಲಾಗಿದೆ. ಪ್ರಾಣನ ವಿಷಯದಲ್ಲಿ ಮುಂದೆ ಹೇಳಲಾಗುತ್ತದೆ.

ವಿವರಣೆ - ಅಭಿಮಾನಿದೇವತೆಗಳು ಶರೀರತಃ ಉತ್ಪನ್ನರಾಗುತ್ತಾರೆ. ಜಡವಾದ ಭೂತಗಳು ಸ್ವರೂಪತಃ ಉತ್ಪನ್ನವಾಗುತ್ತವೆ. ಅವ್ಯಾಕೃತಾಕಾಶಕ್ಕೆ ಮೂರ್ತಸಂಬಂಧ- ವಾಗುವಿಕೆಯು ಉತ್ಪತ್ತಿ ಎನಿಸುತ್ತದೆ. ಚಿತ್‌ಪ್ರಕೃತಿಗೆ ತದಭಿಮಾನವೇ ಉತ್ಪತ್ತಿ ಎನಿಸುತ್ತದೆ. ಹೀಗೆ ಉತ್ಪತ್ತಿಯ ಕ್ರಮವನ್ನು ತಿಳಿಯಬೇಕು. ಇದನ್ನೇ 'ಭಾಗಶಃ ಉತ್ಪತ್ತಿಮಂತಿ' ಹಾಗೂ 'ಅನುತ್ಪತ್ತಿಮಂತಿ' ಎಂಬುದಾಗಿ ಭಾಷ್ಯದಲ್ಲಿ ಕರೆದಿದ್ದಾರೆ.

## ಬ್ರಹ್ಮಸೂತ್ರ

**सूत्रम् – स्याच्चैकस्य ब्रह्मशब्दवत् ।।**

ಆಕಾಶಕ್ಕೆ ಉತ್ಪತ್ತಿ ಇಲ್ಲವೆಂದು ಹೇಳುವ ಶಬ್ದವು ಒಂದೇ ಆಗಿದ್ದರು ಅದಕ್ಕೆ ವಿಷ್ಣುವಿನಲ್ಲಿ ಮುಖ್ಯಾರ್ಥತ್ವವನ್ನು ಆಕಾಶದಲ್ಲಿ ಗೌಣಾರ್ಥವನ್ನು ಹೇಳಬಹುದು. ಬ್ರಹ್ಮಶಬ್ದದಂತೆ.

## ಸೂತ್ರದೀಪಿಕಾ

**सूत्रदीपिका –** चोऽवधारणे । ब्रह्मशब्दवत् यथा एकस्यैव ब्रह्मशब्दस्य विष्णौ मुख्यत्वं जीवे त्वमुख्यताऽस्ति । तथा एकस्यैव नित्यत्वबोधकशब्दस्य ब्रह्मणि मुख्यार्थता स्यात् भवेदित्यर्थः ।।५।।

ವಿಯದಧಿಕರಣ (೨-೩-೧)

'ಚ' ಶಬ್ದವು ಅವಧಾರಣಾರ್ಥದಲ್ಲಿ ಇರುತ್ತದೆ. ಬ್ರಹ್ಮಶಬ್ದವತ್ = ಒಂದೇ ಬ್ರಹ್ಮಶಬ್ದಕ್ಕೆ ವಿಷ್ಣುವಿನಲ್ಲಿ ಮುಖ್ಯಾರ್ಥತ್ವವನ್ನು, ಜೀವನಲ್ಲಿ ಅಮುಖ್ಯಾರ್ಥತ್ವವನ್ನು ಹೇಗೆ ಒಪ್ಪಲಾಗಿದೆಯೋ, ಅದರಂತೆ ಏಕಸ್ಯೈವ = ಆಕಾಶಕ್ಕೆ ನಿತ್ಯತ್ವವನ್ನು ಬೋಧನೆ ಮಾಡುವ ಶಬ್ದಕ್ಕೆ ಬ್ರಹ್ಮನಲ್ಲೇ ಮುಖ್ಯಾರ್ಥತ್ವವನ್ನು, ಸ್ಯಾತ್ = ಒಪ್ಪಬಹುದು.

## ಬ್ರಹ್ಮಸೂತ್ರಭಾಷ್ಯ

**भाष्यम् — ।। स्याच्चैकस्य ब्रह्मशब्दवत् ।।९।।**

**स्यादेवैकस्योत्पत्तिमत्त्वमनुत्पत्तिमत्त्वं च गौणमुख्यत्वापेक्षया । यथा ब्रह्मशब्दः । 'अथ कस्मादुच्यते परं ब्रह्म बृहति बृंहयति च' इति श्रुतेः परे ब्रह्मणि मुख्योऽपि गौणत्वेन विरिञ्चादिष्वपि वर्तते । अत एवाब्रह्मत्वं च तेषाम् । एवमत्राप्यनुत्पत्तिमच्छब्दः ।।९।।**

ಅನುವಾದ - ಒಂದೇ ಆಕಾಶಕ್ಕೆ ಕೆಲವು ಶ್ರುತಿಯಲ್ಲಿ ಉತ್ಪತ್ತಿಯನ್ನು ಇನ್ನು ಕೆಲವು ಶ್ರುತಿಯಲ್ಲಿ ಅನಾದಿತ್ವವನ್ನು ಹೇಳಲಾಗಿದೆ. ಉತ್ಪತ್ತಿಯನ್ನು ಹೇಳಿರುವುದು ಮುಖ್ಯವೆಂದು ಅನಾದಿತ್ವವನ್ನು ಹೇಳಿರುವುದು ಗೌಣವೆಂದು ವಿರೋಧವನ್ನು ಪರಿಹಾರ ಮಾಡಬೇಕು.

ಉದಾಹರಣೆ - 'ಅಥ ಕಸ್ಮಾದುಚ್ಯತೇ ಪರಂ ಬ್ರಹ್ಮೇತಿ ಬೃಹತಿ ಬೃಹ್ಮಯತಿ ಚ' ಎಂಬ ಶ್ರುತಿಯಲ್ಲಿ ಬ್ರಹ್ಮ ಶಬ್ದವನ್ನು ಪರಬ್ರಹ್ಮನಲ್ಲಿ ಮುಖ್ಯವಾಗಿ ಹೇಳಲಾಗಿದೆ. ಆದರೂ ಚತುರ್ಮುಖಾದಿಗಳಲ್ಲಿ ಈ ಬ್ರಹ್ಮಶಬ್ದವು ಶ್ರುತವಾಗಿದೆ. ಅಪೂರ್ಣರಾದ ಚತುರ್ಮುಖಾದಿಗಳಲ್ಲಿ ಬ್ರಹ್ಮಶಬ್ದವನ್ನು ಗೌಣವಾಗಿ ಹೇಗೆ ತಿಳಿಯುತ್ತೇವೋ ಅದರಂತೆ ಆಕಾಶದಲ್ಲಿ ಅನುತ್ಪತ್ತಿಶಬ್ದವನ್ನು ಗೌಣವಾಗಿ ವ್ಯಾಖ್ಯಾನ ಮಾಡಿಕೊಳ್ಳಬೇಕು.

ಪ್ರತಿಪದಾರ್ಥ -- ಏಕಸ್ಯ = ಒಂದೇ ಆಕಾಶಕ್ಕೆ, ಉತ್ಪತ್ತಿಮತ್ವಮ್ = ಹುಟ್ಟುವಿಕೆಯನ್ನು, ಅನುತ್ಪತ್ತಿಮತ್ವಂ ಚ - ಹುಟ್ಟದಿರುವಿಕೆಯನ್ನು, ಗೌಣಮುಖ್ಯತ್ವಾಪೇಕ್ಷಯಾ = ಗೌಣ ಹಾಗೂ ಮುಖ್ಯತ್ವದ ದೃಷ್ಟಿಯಿಂದ ಎರಡನ್ನು ಕೂಡಿಸಬೇಕು. ಯಥಾ = ಹೇಗೆ, ಬ್ರಹ್ಮಶಬ್ದಃ = ಬ್ರಹ್ಮಶಬ್ದ ಇದೆಯೋ ಹಾಗೆ, ಅಥ = ಅನಂತರ, ಕಸ್ಮಾದ್ = ಯಾವ ಕಾರಣಕ್ಕೋಸ್ಕರ, ಪರಂಬ್ರಹ್ಮ = ಪರಬ್ರಹ್ಮನೆಂದು, ಉಚ್ಯತೇ = ಹೇಳಲಾಗುತ್ತದೆ. ಬೃಹತಿ = ಬೃಹಧಾತುವಿಗೆ ಬೃಹ್ಮಯತಿ = ಗುಣಗಳಿಂದ ತುಂಬಿದ್ದಾನೆ, ಇತಿ = ಹೀಗೆ, ಶ್ರುತೇಃ = ಶ್ರುತಿಯು ಹೇಳುತ್ತಿದೆ. ಹೀಗೆ ಪರೇಬ್ರಹ್ಮಣಿ = ಪರಬ್ರಹ್ಮನಲ್ಲಿ ಬ್ರಹ್ಮಶಬ್ದವು, ಮುಖ್ಯೋऽಪಿ = ಮುಖ್ಯವಾಗಿದ್ದರೂ, ವಿರಿಚಾಂದಿಷ್ವಪಿ = ವಿರಿಂಚಾದಿಗಳಲ್ಲಿಯೂ, ಗೌಣತ್ವೇನ = ಗೌಣವಾಗಿ, ವರ್ತತೇ = ಇರುತ್ತದೆ. ಅತ ಏವ = ಆದ್ದರಿಂದಲೇ, ತೇಷಾಂ = ವಿರಿಂಚಾದಿಗಳಿಗೆ, ಅಬ್ರಹ್ಮತ್ವಂಚ =

ಅಬ್ರಹ್ಮತ್ವವು ಯುಕ್ತವಾಗುತ್ತದೆ, ಏವಂ = ಈ ದೃಷ್ಟಾಂತದಂತೆ, ಅತ್ರಾಪಿ = ಆಕಾಶಾದಿ ವಿಷಯದಲ್ಲಿಯೂ, ಅನುತ್ಪತ್ತಿಮಚ್ಛಬ್ದಃ = ಶ್ರುತಿಯಲ್ಲಿ ಹೇಳಿರುವ ಅನುತ್ಪತ್ತಿ ಶಬ್ದವನ್ನು ಕೂಡಿಸಬೇಕು.

## ತತ್ವಪ್ರಕಾಶಿಕಾ

**तत्वप्रकाशिका – भवेदाकाशस्य गौणमनादित्वमुत्पत्तिर्मुख्यत इति व्यवस्था यद्यनादित्वश्रुतिर्भाक्ता भवेत् । नैतदस्ति । 'न जायते म्रियते' इत्यादावनुत्पत्तिमच्छब्दस्य मुख्यार्थत्वदर्शनादित्याशङ्कां परिहरत्सूत्रमुपन्यस्य व्याचष्टे – स्यादिति ।।**

ಹಿಂದಿನ ಸೂತ್ರದಲ್ಲಿ ಹೇಳಿದಂತೆ ಆಕಾಶಕ್ಕೆ ಅನಾದಿತ ಗೌಣವಾಗಿದೆ, ಉತ್ಪತ್ತಿಯು ಮುಖ್ಯವಾಗಿದೆ ಎಂಬ ವ್ಯವಸ್ಥೆಯು ಕೂಡುತ್ತಿತ್ತು. ಯಾವಾಗ ಎಂದರೆ ಅನಾದಿತ್ವಶ್ರುತಿಯು ಗೌಣ ಎಂದು ಹೇಳಲು ಸಾಧ್ಯವಾಗಿದ್ದಲ್ಲಿ. ಆದರೆ 'ನ ಜಾಯತೇ ಮ್ರಿಯತೇ' ಇತ್ಯಾದಿ ಶ್ರುತಿಯಲ್ಲಿ ಅನುತ್ಪತ್ತಿಯನ್ನು ಹೇಳುವ 'ನ ಜಾಯತೇ' ಇತ್ಯಾದಿ ಪದಗಳು ಮುಖ್ಯವಾದ ಅರ್ಥವುಳ್ಳವುಗಳಾಗಿವೆ. ಆದ್ದರಿಂದ ಇಲ್ಲಿಯೂ ಕೂಡ ಮುಖ್ಯವಾದ ಅನಾದಿತ್ವವನ್ನೇ ಏಕೆ ಹೇಳಬಾರದು. ಈ ಆಕ್ಷೇಪವನ್ನು ಪರಿಹಾರ ಮಾಡುವಂತಹ ಸೂತ್ರವನ್ನು 'ಸ್ಯಾತ್' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - 'ನ ಜಾಯತೇ' ಎಂಬಲ್ಲಿರುವ ಎರಡು ಪದಗಳು ಬ್ರಹ್ಮನಲ್ಲಿ ಮುಖ್ಯವಾದ ಅನಾದಿತ್ವಸಂಸರ್ಗಬೋಧಕವಾಗಿವೆ ಎಂದು ತಿಳಿಯಬೇಕು. ವಾಸ್ತವಿಕವಾಗಿ ಈ ಮಂತ್ರವು ಗೀತಾಭಾಷ್ಯದಲ್ಲಿ ಜೀವಪರವಾಗಿ ವ್ಯಾಖ್ಯಾನ ಮಾಡಲ್ಪಟ್ಟಿವೆ. ಆದರೂ ಕೂಡ ಗೀತಾತಾತ್ಪರ್ಯದಲ್ಲಿ ಭಗವತ್ಪರವಾಗಿ ವ್ಯಾಖ್ಯಾನ ಮಾಡಿರುವುದರಿಂದ ಅದಕ್ಕನುಸಾರಿಯಾಗಿ ಟೀಕೆಯಲ್ಲಿ ಇದನ್ನು ಉಲ್ಲೇಖಿಸಿದ್ದಾರೆ.

**तत्वप्रकाशिका – एकस्यैवाऽकाशस्य गौणमुख्यत्वापेक्षयाऽनुत्पत्तिमत्व-मुत्पत्तिमत्वं चेत्युक्तव्यवस्था युक्तैव । अनुत्पत्तिमच्छब्दस्य ब्रह्मणि मुख्यार्थस्याप्याकाशे ब्रह्मशब्दवदमुख्यत्वोपपत्तेरिति भावः ।**

ಒಂದೇ ಆಕಾಶಕ್ಕೆ ಗೌಣ ಹಾಗೂ ಮುಖ್ಯತ್ವಾಪೇಕ್ಷೆಯಿಂದ ಅನುತ್ಪತ್ತಿಮತ್ವವನ್ನು ಹಾಗೂ ಉತ್ಪತ್ತಿಮತ್ವವನ್ನು ಹೇಳಬಹುದಾದ್ದರಿಂದ ಹಿಂದೆ ಮಾಡಿದ ವ್ಯವಸ್ಥೆಯು ಯುಕ್ತವೇ ಆಗಿದೆ. 'ಅನುತ್ಪತ್ತಿಮತ್' ಎಂಬ ಶಬ್ದಕ್ಕೆ ಬ್ರಹ್ಮನಲ್ಲಿ ಮುಖ್ಯಾರ್ಥವನ್ನು ಹೊಂದಿದ್ದರೂ ಆಕಾಶದಲ್ಲಿ ಬ್ರಹ್ಮ ಶಬ್ದದಂತೆ ಅಮುಖ್ಯವಾದ ಅರ್ಥವನ್ನು ಹೊಂದಿದೆ. ಆದ್ದರಿಂದ ಹಿಂದೆ ಮಾಡಲ್ಪಟ್ಟ ವ್ಯವಸ್ಥೆಯು ಯುಕ್ತವೇ ಆಯಿತು. 'ಅನುತ್ಪತ್ತಿಮತ್' ಎಂಬುದು ಸೂತ್ರದ ಅಭಿಪ್ರಾಯ.

**तत्वप्रकाशिका** – ब्रह्मशब्दः परे ब्रह्मणि कुतो मुख्य इत्यत उक्तम् – अथेति।। शब्दप्रवृत्तिनिमित्तसद्भावादिति भावः । विरिञ्चादिष्वमुख्यता कुत इत्यत उक्तम् ।। अत एवेति ।। ब्रह्मशब्दस्य तत्रामुख्यत्वादेव हि तेषामपूर्णत्वमन्यथा तन्न स्यादित्यर्थः ।। ५ ।।

ಬ್ರಹ್ಮ ಶಬ್ದವು ಪರಬ್ರಹ್ಮನಲ್ಲಿ ಹೇಗೆ ಮುಖ್ಯವಾಗಿದೆ? ಎಂಬುದಕ್ಕೆ 'ಅಥ' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ. ಬ್ರಹ್ಮ ಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಗುಣಪೂರ್ಣತ್ವವು ಪರಬ್ರಹ್ಮನಲ್ಲಿದೆ ಎಂಬುದು ಇದರ ಅಭಿಪ್ರಾಯ. ಚತುರ್ಮುಖಾದಿಗಳಲ್ಲಿ ಬ್ರಹ್ಮ ಶಬ್ದವು ಹೇಗೆ ಅಮುಖ್ಯವಾಗಿದೆ? ಎಂದರೆ 'ಅತ ಏವ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

ಬ್ರಹ್ಮ ಶಬ್ದವು ಚತುರ್ಮುಖಾದಿಗಳಲ್ಲಿ ಅಮುಖ್ಯವಾಗಿರುವುದರಿಂದಲೇ ಅವರಲ್ಲಿ ಅಪೂರ್ಣತ್ವವಿದೆ. ಇಲ್ಲದಿದ್ದರೆ ಅವರಲ್ಲಿಯೂ ಬ್ರಹ್ಮ ಶಬ್ದವು ಮುಖ್ಯವಾಗಿ ಅಪೂರ್ಣತ್ವ ಬರದೇ ಇರಬೇಕಾದೀತು.

## ಬ್ರಹ್ಮಸೂತ್ರ

### सूत्रम् – प्रतिज्ञाहानिरव्यतिरेकाच्छब्देभ्यः ।।

ಆಕಾಶಕ್ಕೆ ಉತ್ಪತ್ತಿಯಿಲ್ಲವೆಂದು ಹೇಳುವ ಶ್ರುತಿಗೆ ಮುಖ್ಯಾರ್ಥತ್ವವನ್ನು ಪರಿಗಣಿಸಬಾರದು. ಹಾಗೇನಾದರೂ ಮುಖ್ಯಾರ್ಥತ್ವವನ್ನೇ ಒಪ್ಪಿದರೆ 'ಸ ಇದಂ ಸರ್ವಮಸೃಜತ' ಎಂಬ ಪ್ರತಿಜ್ಞಾವಾಕ್ಯದ ವಿರೋಧ ಬರುತ್ತದೆ. ಮತ್ತು 'ಆತ್ಮಾ ವಾ ಇದಮ್ ಅಗ್ರೇ' ಎಂಬ ಶ್ರುತಿಯಲ್ಲಿ ಪ್ರಳಯಕಾಲದಲ್ಲಿ ಬ್ರಹ್ಮನನ್ನು ಬಿಟ್ಟು, ಬೇರೆ ಯಾವ ಪದಾರ್ಥಗಳು ಇರಲಿಲ್ಲ ಎಂದು ಹೇಳಿದಾಗ ಆಕಾಶಾದಿಗಳಿಗೂ ಕೂಡ ನಾಶವನ್ನು ಒಪ್ಪಬೇಕು. ಹೀಗೆ ಅನೇಕ ಶ್ರುತಿಗಳು ಆಕಾಶಕ್ಕೆ ಉತ್ಪತ್ತಿಯನ್ನು ಹೇಳುತ್ತಿರುವುದರಿಂದ ಆಕಾಶವು ಸಾದಿಯಾಗಿದೆ.

## ಸೂತ್ರದೀಪಿಕಾ

**सूत्रदीपिका** – आकाशस्य मुख्यानुत्पत्त्युक्तौ **प्रतिज्ञाहानिः** 'स इदं सर्वमसृजत' इति विष्णोः स्रष्टृत्वप्रतिज्ञाहानिः स्यातः। कुतः? **अव्यतिरेकात्** आकाशस्य सर्वशब्दार्थानतिरिक्तत्वात् । किञ्च यतः शब्देभ्यः 'आत्मा वा इदम्' इत्यादिस्पष्टश्रुतिभ्यश्च ब्रह्मण एव मुख्यानुत्पत्तिः । न त्वन्यस्येत्यवसीयते अत उक्तं युक्तमित्यर्थः ।।६।।

ಆಕಾಶಕ್ಕೆ ಅನುತ್ಪತ್ತಿಯನ್ನು ಹೇಳುವ ಶ್ರುತಿಗೆ ಮುಖ್ಯಾರ್ಥತ್ವವನ್ನು ಸ್ವೀಕರಿಸಿದರೆ ಪ್ರತಿಜ್ಞಾಹಾನಿಃ = 'ಸ ಇದಂ ಸರ್ವಮಸೃಜತ' ಎಂಬ ಸೃಷ್ಟಿಪ್ರತಿಪಾದಕಪ್ರತಿಜ್ಞೆಗೆ ಹಾನಿಯುಂಟಾಗುತ್ತದೆ. ಏಕೆಂದರೆ ಅವ್ಯತಿರೇಕಾತ್ = ಸರ್ವಶಬ್ದಾರ್ಥದಲ್ಲಿ ಆಕಾಶವೂ ಕೂಡ ಸೇರಿರುತ್ತದೆ. ಮತ್ತು ಯಾವ ಕಾರಣದಿಂದ ಶಬ್ದೇಭ್ಯಃ = 'ಆತ್ಮಾ ವಾ

ಇದಮ್' ಇತ್ಯಾದಿಯಾದ ಸ್ಪಷ್ಟ ಶ್ರುತಿಗಳಿಂದ ಬ್ರಹ್ಮನೊಬ್ಬನೇ ಮುಖ್ಯವಾದ ಅನುತ್ಪತ್ತಿವುಳ್ಳವನು. ಬೇರೆ ಯಾವ ಪದಾರ್ಥವು ಮುಖ್ಯವಾದ ಅನುತ್ಪತ್ತಿಯನ್ನು ಹೊಂದಿರುವುದಿಲ್ಲ ಎಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಆಕಾಶಕ್ಕೆ ಅನುತ್ಪತ್ತಿಯನ್ನು ಹೇಳುವ ಶ್ರುತಿಗೆ ಗೌಣಾರ್ಥವನ್ನೇ ಹೇಳಬೇಕು.

## ಬ್ರಹ್ಮಸೂತ್ರಭಾಷ್ಯ

**ಭಾಷ್ಯಮ್ —।। प्रतिज्ञाहानिरव्यतिरेकाच्छब्देभ्यः ।।६।।**

**ब्रह्मणोऽन्यस्य नित्यत्वे 'स इदं सर्वमसृजत' (तै.२.३.) इत्यादि-प्रतिज्ञाहानिः । आकाशस्यापि सर्वस्मादव्यतिरेकात् ।**

ಅನುವಾದ - ಬ್ರಹ್ಮನಿಗಿಂತ ಭಿನ್ನವಾದ ಆಕಾಶಕ್ಕೆ ನಿತ್ಯತ್ವವನ್ನು ಹೇಳಿದರೆ 'ಸ ಇದಂ ಸರ್ವಮಸೃಜತ' ಎಂಬ ಪ್ರತಿಜ್ಞೆಗೆ ಹಾನಿಬರುತ್ತದೆ.ಆಕಾಶವೂ ಕೂಡ ಶ್ರುತಿ ಹೇಳಿದ ಸರ್ವಪದಾರ್ಥದ ಮಧ್ಯದಲ್ಲಿ ಸೇರಿರುತ್ತದೆ.

ಪ್ರತಿಪದಾರ್ಥ -- ಬ್ರಹ್ಮಣಃ = ಬ್ರಹ್ಮನಿಗಿಂತ ಅನ್ಯಸ್ಯ ಬೇರೆಯಾದ್ದಕ್ಕೆ, ನಿತ್ಯತ್ವೇ = ನಿತ್ಯತ್ವವನ್ನು ಒಪ್ಪುವುದಾದರೆ, ಸ ಇದಂ ಸರ್ವಮಸೃಜತ = ಬ್ರಹ್ಮನು ಎಲ್ಲವನ್ನು ಸೃಷ್ಟಿ ಮಾಡಿದನು, ಇತ್ಯಾದಿ = ಇವೇ ಮೊದಲಾದ, ಪ್ರತಿಜ್ಞಾಹಾನಿಃ = ಪ್ರತಿಜ್ಞೆಗೆ ಹಾನಿ ಬರುತ್ತದೆ. ಆಕಾಶಸ್ಯಾಪಿ = ಆಕಾಶಕ್ಕೂ ಕೂಡ, ಸರ್ವಸ್ಮಾತ್ = ಎಲ್ಲ ಪದಾರ್ಥಗಳಿಗಿಂತ, ಅವ್ಯತಿರೇಕಾತ್ = ಪ್ರತ್ಯೇಕವಾಗಿ ಹೇಳಿರುವುದಿಲ್ಲ.

**ಭಾಷ್ಯಮ್ — 'आत्मा वा इदमेक एवाग्र आसीत्' (ऐ.१.१.), 'सदेव सोम्येदमग्र आसीदेकमेवाद्वितीयम्' (छां. ६.२.१.) 'इदं वा अग्रे नैव किञ्चनाऽसीत्' (तै.ब्रा.२.२.९.) इत्यादिश्रुतिभ्यः ।।६।।**

ಅನುವಾದ - ಪ್ರಳಯಕಾಲದಲ್ಲಿ ಬ್ರಹ್ಮನೊಬ್ಬನೇ ಇದ್ದನು. ಸದ್ರೂಪನಾದ ಬ್ರಹ್ಮನೇ ಪ್ರಳಯಕಾಲದಲ್ಲಿ ಇದ್ದನು ಇತ್ಯಾದಿಯಾಗಿ ಹೇಳುವ ''ಆತ್ಮಾ ವಾ ಇದಮೇಕ ಏವಾಗ್ರ ಆಸೀತ್' 'ಸದೇವ ಸೋಮ್ಯೇದಮಗ್ರ ಆಸೀತ್' 'ಏಕಮೇವಾದ್ವಿತೀಯಮ್' 'ಇದಂ ವಾ ಅಗ್ರೇ ನೈವ ಕಿಂಚನಾऽಸೀತ್' ಇವೇ ಮೊದಲಾದ ಶ್ರುತಿಗಳಿಂದ ಆಕಾಶಕ್ಕೆ ಉತ್ಪತ್ತಿಯು ತಿಳಿಯುತ್ತದೆ.

ಪ್ರತಿಪದಾರ್ಥ -- ಅಗ್ರೇ = ಪ್ರಳಯಕಾಲದಲ್ಲಿ, ಆತ್ಮಾ ವಾ = ಆತ್ಮನೊಬ್ಬನೇ, ಆಸೀತ್ = ಇದ್ದನು. ಅಗ್ರೇ = ಪ್ರಳಯಕಾಲದಲ್ಲಿ, ಇದಂ ಸದೇವ = ಸತ್ ಪದಾರ್ಥವಾಚ್ಯವಾದ ಇವನು ಮಾತ್ರ, ಆಸೀತ್ = ಇದ್ದನು. ಏಕಮೇವಾದ್ವಿತೀಯಮ್ = ಅವನೊಬ್ಬನೇ ಅದ್ವಿತೀಯನಾದ ಪುರುಷನು, ಅಗ್ರೇ = ಪ್ರಳಯಕಾಲದಲ್ಲಿ, ಇದಂ ವಾ = ಕಣ್ಣಿಗೆ ಕಾಣಿಸುತ್ತಿರುವ

ಯಾವುದೇ ವಸ್ತುವು, ನೈವ ಕಿಂಚನ ಆಸೀತ್ = ಯಾವುದೂ ಇರಲಿಲ್ಲ.
ಇತ್ಯಾದಿ ಶ್ರುತಿಭ್ಯಃ = ಇವೇ ಮೊದಲಾದ ಶ್ರುತಿಗಳಿಂದ ಸಿದ್ಧವಾಗುತ್ತದೆ.

## ತತ್ವಪ್ರಕಾಶಿಕಾ

**ತत्वप्रकाशिका – युक्तं ब्रह्मशब्दस्य परब्रह्मणि मुख्यत्वमन्यत्रामुख्यत्वम् । कारणसद्भावात्। न च प्रकृते कारणमुपलभ्यत इत्याशङ्कां परिहरत्सूत्रमुपन्यस्य व्याचष्टे ।। प्रतिज्ञेति ।।**

ಬ್ರಹ್ಮ ಶಬ್ದವು ಪರಬ್ರಹ್ಮನಲ್ಲಿ ಮುಖ್ಯವಾಗಿದೆ, ಅನ್ಯತ್ರ ಅಮುಖ್ಯವಾಗಿದೆ ಎಂಬುದು ಯುಕ್ತ. ಏಕೆಂದರೆ ಕಾರಣವಿದೆ. ಪ್ರಕೃತದಲ್ಲಿ ಅಂತಹ ಕಾರಣ ಯಾವುದೂ ಇರುವುದಿಲ್ಲ. ಈ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು 'ಪ್ರತಿಜ್ಞಾಹಾನಿ' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ಹಿಂದಿನ ಸೂತ್ರದಲ್ಲಿ ಬ್ರಹ್ಮಶಬ್ದವು ಚತುರ್ಮುಖಾದಿಗಳಲ್ಲಿ ಅಮುಖ್ಯವಾಗಿದೆ ಎಂದು ಹೇಳಲಾಯಿತು. ಇದರ ಮೇಲೆ ಅಧಿಕಾಕ್ಷೇಪವನ್ನು ಮಾಡುತ್ತಿದ್ದಾರೆ. ಚತುರ್ಮುಖಾದಿಗಳಲ್ಲಿ ಬ್ರಹ್ಮಶಬ್ದದ ಪ್ರವೃತ್ತಿನಿಮಿತ್ತವಾದ ಗುಣಪೂರ್ಣತ್ವವು ಅಧಿಕವಾಗಿರುವುದಿಲ್ಲ. ಅದೇ ಪರಬ್ರಹ್ಮನಲ್ಲಿ ಅಧಿಕವಾಗಿರುತ್ತದೆ. ಆದ್ದರಿಂದ ವಿಷ್ಣುವಿನಲ್ಲಿ ಬ್ರಹ್ಮಶಬ್ದವು ಮುಖ್ಯವಾಗಿದೆ, ಚತುರ್ಮುಖಾದಿಗಳಲ್ಲಿ ಅಮುಖ್ಯವಾಗಿದೆ ಎಂದು ಹೇಳಲು ಕಾರಣವಿದೆ. ಆದರೆ ಪ್ರಕೃತ ಅಂತಹ ಯಾವುದೇ ಕಾರಣ ಇರುವುದಿಲ್ಲ. ಆದ್ದರಿಂದ 'ಅನುತ್ಪತ್ತಿಮತ್' ಎಂಬ ಶಬ್ದವು ಬ್ರಹ್ಮನಲ್ಲಿ ಮುಖ್ಯವಾಗಿದ್ದರೂ ಆಕಾಶದಲ್ಲಿ ಅಮುಖ್ಯವಾಗಿದೆ. ಈ ಆಶಂಕೆಗೆ ಸೂತ್ರದಿಂದ ಉತ್ತರಿಸುತ್ತಿದ್ದಾರೆ.

'ಸ ಇದಂ ಸರ್ವಮಸೃಜತ' ಎಂಬ ಶ್ರುತಿಯಲ್ಲಿ ಸರ್ವಸ್ರಷ್ಟೃತ್ವವೆಂಬ ಪ್ರತಿಜ್ಞೆಗೆ ಹಾನಿಯಾಗುವುದರಿಂದ ಆಕಾಶಕ್ಕೆ ಉತ್ಪತ್ತಿಯನ್ನು ಹೇಳಬೇಕು.

**तत्वप्रकाशिका – यदि ब्रह्माकाशयोरुभयोरप्यनुत्पत्तिमच्छब्दो मुख्योऽङ्गीक्रियते तर्हि 'ब्रह्मेदं सर्वमसृजत' इति प्रतिज्ञाविरोधः स्यात् । अतो ब्रह्मण्येव मुख्योऽनुत्पत्तिमत् शब्दोऽन्यत्रामुख्यः । न च वाच्यमत्रकाश-शब्दाश्रवणात्तस्य मुख्यानुत्पत्तावपि न प्रतिज्ञाहानिरिति । आकाशस्यापि सर्वमध्यपतितत्वात् । सङ्कोचे कारणाभावात् ।**

ಬ್ರಹ್ಮ ಮತ್ತು ಆಕಾಶ ಎರಡರಲ್ಲಿಯೂ 'ಅನುತ್ಪತ್ತಿಮತ್' ಎಂಬ ಶಬ್ದವನ್ನು ಮುಖ್ಯವಾಗಿ ಸ್ವೀಕಾರ ಮಾಡಿದರೆ ಆಗ 'ಬ್ರಹ್ಮೇದಂ ಸರ್ವಮಸೃಜತ' 'ಬ್ರಹ್ಮನು ಎಲ್ಲವನ್ನು ಸೃಷ್ಟಿ ಮಾಡಿದನು' ಎಂಬ ಪ್ರತಿಜ್ಞೆಗೆ ವಿರೋಧ ಬರುತ್ತದೆ. ಆದ್ದರಿಂದ 'ಅನುತ್ಪತ್ತಿಮತ್' ಎಂಬ ಶಬ್ದವು ಬ್ರಹ್ಮನಲ್ಲಿಯೇ ಮುಖ್ಯವಾಗಿದೆ, ಬೇರೆಡೆ ಅಮುಖ್ಯವಾಗಿದೆ ಎಂದು ಒಪ್ಪಬೇಕು. 'ಬ್ರಹ್ಮೇದಂ ಸರ್ವಮಸೃಜತ' ಎಂಬ ಶ್ರುತಿಯಲ್ಲಿ ಆಕಾಶವು ಕೇಳಿಸುತ್ತಿಲ್ಲ, ಆದ್ದರಿಂದ ಮುಖ್ಯವಾದ ಅನುತ್ಪತ್ತಿಯನ್ನು ಆಕಾಶಕ್ಕೆ

ಹೇಳಿದರೂ ಕೂಡ ಪ್ರತಿಜ್ಞಾಹಾನಿ ಬರುವುದಿಲ್ಲವಲ್ಲವೇ? ಹೀಗೆ ಆಕ್ಷೇಪ ಮಾಡಬಾರದು. ಸರ್ವಪದಾರ್ಥದಲ್ಲಿ ಆಕಾಶವೂ ಕೂಡ ಸೇರಿದೆ. ಸರ್ವಪದಕ್ಕೆ ಆಕಾಶವನ್ನು ಬಿಟ್ಟು ಎಂಬುದಾಗಿ ಸಂಕೋಚ ಮಾಡಲು ಯಾವುದೇ ವಿನಿಗಮಕವಿಲ್ಲ.

**तत्वप्रकाशिका – तथाप्यत्राकाशब्रह्मणोः सादित्वानादित्वे स्फुटं न प्रतीयेते इति चेन्न । आत्मेत्यादि श्रुतीनां स्पष्टं तद्वाचकानां सद्भावात् । बहुश्रुतिविरोधे चैकस्या अमुख्यत्वं नियतमिति भावः । अनेनासम्भवादित्युक्तमेव विवृतं भवति। इदमस्येत्यर्थः ।। ६ ।।**

ಆಕಾಶಕ್ಕೆ ಸಾದಿತ್ವವನ್ನು ಬ್ರಹ್ಮನಿಗೆ ಅನಾದಿತ್ವವನ್ನು ಹೇಳಿರುವುದು ಶ್ರುತಿಯಲ್ಲಿ ಸ್ಪಷ್ಟವಾಗಿ ಪ್ರತೀತವಾಗುತ್ತಿಲ್ಲ. ಹೀಗೂ ಪ್ರಶ್ನಿಸಬಾರದು. 'ಆತ್ಮಾ ವಾ' ಇತ್ಯಾದಿ ಶ್ರುತಿಯಲ್ಲಿ ಬ್ರಹ್ಮನಿಗೆ ಅನಾದಿತ್ವವನ್ನು ಹೇಳುವ ಸ್ಪಷ್ಟವಾದ ಶಬ್ದಗಳಿವೆ. ಅನೇಕ ಶ್ರುತಿಗಳು ವಿರೋಧ ಬಂದಾಗ ಒಂದಕ್ಕೆ ಅಮುಖ್ಯಾರ್ಥವನ್ನು ಮಾಡುವುದು ನಿಯತವಾಗಿದೆ ಎಂದಭಿಪ್ರಾಯ. ಈ ಸೂತ್ರದಿಂದ 'ಗೌಣ್ಯಸಂಭವಾತ್' ಎಂಬ ಸೂತ್ರದಲ್ಲಿ ಹೇಳಿದ ಪ್ರಮೇಯವನ್ನೇ ವಿವರಿಸಿದಂತಾಗಿದೆ. 'ಇದಂ' ಎಂದರೆ ಈ ಜಗತ್ತಿಗೆ ಎಂದರ್ಥ.

## ಬ್ರಹ್ಮಸೂತ್ರ

## सूत्रम् – यावद्विकारं तु विभागो लोकवत् ।।

ಯಾವ ಕಾರಣದಿಂದ ವಿಕಾರವನ್ನು ಹೊಂದುವ ವಸ್ತು ಅಲ್ಪಶಕ್ತಿಯುಳ್ಳದ್ದಾಗಿರುತ್ತದೆಂಬ ನಿಯಮವಿದೆಯೋ, ಆ ಕಾರಣದಿಂದ ಘಟಾದಿ ವಸ್ತುಗಳಂತೆ ಆಕಾಶವೂ ಕೂಡ ವಿಕಾರವನ್ನು ಹೊಂದುತ್ತದೆ.

## ಸೂತ್ರದೀಪಿಕಾ

**सूत्रदीपिका** – **यावच्छब्दोऽवधारणे** । **यावद्विकारमित्यव्ययम्** । तुशब्दश्चशब्दार्थे । तथाच यतः **यावद्विकारं** विक्रियमाणमेव वस्तु । **विभागः** विभागशब्दिताल्पशक्तिमत् । न त्वन्यदिति नियमः सिद्धः । अतो **लोकवत्** लोक इव । यथा लोके घटादौ विभक्तत्वाद् विकारित्वमङ्गीकृतं तथाऽऽकाशादेरपि विभक्तत्वहेतुना विकारित्वं सिद्ध्यति । तत एव सादित्वमपि सिद्ध्यतीत्यर्थः ।।७।।

'ಯಾವತ್' ಶಬ್ದವು ಅವಧಾರಣಾರ್ಥದಲ್ಲಿ ಪ್ರಯುಕ್ತವಾಗಿದೆ. 'ಯಾವದ್ವಿಕಾರಮ್' ಎಂಬುದು ಅವ್ಯಯ. 'ತು' ಶಬ್ದವು ಚಶಬ್ದದ ಅರ್ಥದಲ್ಲಿ ಪ್ರಯುಕ್ತವಾಗಿದೆ. ಆದ್ದರಿಂದ 'ಯಾವದ್ವಿಕಾರಮ್' ವಿಕಾರವನ್ನು ಹೊಂದುವ ಪದಾರ್ಥವಷ್ಟೇ, ವಿಭಾಗಃ = ಅಲ್ಪಶಕ್ತಿಯುಳ್ಳದ್ದು ಎಂಬ ನಿಯಮವಿದೆ.

ವಿಕಾರವನ್ನು ಹೊಂದದ ಪದಾರ್ಥವು ಅಲ್ಪಶಕ್ತಿಯನ್ನು ಹೊಂದಿರುವುದಿಲ್ಲ. ಆದ್ದರಿಂದ ಯಾವರೀತಿಯಾಗಿ ಘಟಾದಿವಸ್ತುಗಳು ಅಲ್ಪಶಕ್ತಿಯುಳ್ಳದರಿಂದ ವಿಕಾರಕ್ಕೆ ಒಳಗಾಗುತ್ತವೋ, ಅದರಂತೆ ಆಕಾಶಾದಿಗಳೂ ಕೂಡ ಅಲ್ಪಶಕ್ತಿಯನ್ನು ಹೊಂದಿರುವ ಕಾರಣ ವಿಕಾರವನ್ನು ಹೊಂದುತ್ತವೆ.ಆದ್ದರಿಂದ ಭೂತಾಕಾಶಕ್ಕೆ ಉತ್ಪತ್ತಿಯು ಸಿದ್ಧವಾಯಿತು.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ವಿಯದಧಿಕರಣವು ಮುಗಿಯಿತು.

## ಬ್ರಹ್ಮಸೂತ್ರಭಾಷ್ಯ

**भाष्यम् – ।। यावद्विकारं तु विभागो लोकवत् ।।७।।**

**विभक्तत्वाच्च विकारित्वं युक्तम् । विकारिण एव हि विभक्ता लोके दृश्यन्ते ।**

**'एकोऽविभक्तः परमः पुरुषो विष्णुरुच्यते ।**
**प्रकृतिः पुरुषः कालस्त्रय एते विभागतः ।।**
**चतुर्थस्तु महान् प्रोक्तः पञ्चमाहङ्कृतिर्मता ।**
**तद्विभागेन जायन्त आकाशाद्याः पृथक् पृथक् ।।**
**यो विभागी विकारः स सोऽविकारः परो हरिः ।**
**अविभागात् परानन्दो नित्यो नित्यगुणात्मकः ।।**
**विभागो ह्यल्पशक्तित्वं नहि तत्परमात्मनः ।।'**

**इति च बृहत्संहितायाम् ।।७।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये वियदधिकरणम् ।। १ ।।**

ಅನುವಾದ - ಆಕಾಶಶಬ್ದದಿಂದ ಯಾವುದು ಪ್ರತಿಪಾದ್ಯವಾಗಿದೆಯೋ ಅದು ಅಲ್ಪಶಕ್ತಿಯನ್ನು ಮತ್ತು ವಿಕಾರವನ್ನು ಪಡೆದಿದೆ. ಏಕೆಂದರೆ ಯಾವುದು ವಿಕಾರವಾದುದ್ದಾಗಿರುವುದೋ ಅದೇ ಲೋಕದಲ್ಲಿ ಅಲ್ಪ ಶಕ್ತಿಯನ್ನು ಪಡೆದಿರುತ್ತದೆ.

ಪರಮಾತ್ಮನೊಬ್ಬನೇ ಪೂರ್ಣಶಕ್ತಿಯನ್ನು ಪಡೆದಿರುವನು. ಆ ವಿಷ್ಣುವೇ ಪರಮಪುರುಷ ಎಂದು ಕರೆಸಿಕೊಳ್ಳುತ್ತಾನೆ. ಪ್ರಕೃತಿ, ಪುರುಷ, ಕಾಲ ಇವುಗಳು ಅಪೂರ್ಣಶಕ್ತಿಯುಳ್ಳವುಗಳಾಗಿವೆ. ನಾಲ್ಕನೆಯದು ಮಹತ್ತತ್ವ, ಐದನೆಯದು ಅಹಂಕಾರತತ್ವ ಅಲ್ಪಶಕ್ತಿಯ ತಾರತಮ್ಯದಿಂದ ಕ್ರಮವಾಗಿ ಆಕಾಶಾದಿಗಳು ಪ್ರತ್ಯೇಕವಾಗಿ ಹುಟ್ಟುತ್ತವೆ. ಯಾವುದು ಅಲ್ಪಶಕ್ತಿವುಳ್ಳುದ್ದೋ ಅದಕ್ಕೆ ವಿಕಾರವಿದೆ. ಶ್ರೀಹರಿಯು ಅವಿಕಾರಿಯಾದ ಪರಮಪುರುಷನಾಗಿದ್ದಾನೆ. ಆದ್ದರಿಂದ ಅವನಿಗೆ ಅಲ್ಪಶಕ್ತಿಯು

ಇರುವುದಿಲ್ಲ. ಪೂರ್ಣಾನಂದಸ್ವರೂಪನಾಗಿದ್ದಾನೆ. ನಿತ್ಯನಾಗಿದ್ದಾನೆ. ನಿತ್ಯವಾದ ಗುಣಗಳುಳ್ಳವನಾಗಿದ್ದಾನೆ. ಆದ್ದರಿಂದ ಅಲ್ಪಶಕ್ತಿಯು ಪರಮಾತ್ಮನಲ್ಲಿ ಸರ್ವಥಾ ಇರುವುದಿಲ್ಲ. ಹೀಗೆ ಬೃಹತ್‌ಸಂಹಿತೆಯು ಹೇಳಿದೆ.

ಪ್ರತಿಪದಾರ್ಥ -- ಅನುಮಾನದಿಂದಲೂ ಬ್ರಹ್ಮನಿಗೆ ಅನಾದಿತ್ವವು ಸಿದ್ಧವಾಗುತ್ತದೆ. ಉಳಿದ ಪದಾರ್ಥಗಳಿಗೆ ಸಾದಿತ್ವವು ಸಿದ್ಧವಾಗುತ್ತದೆ ಎಂಬುದನ್ನು ಹೇಳುತ್ತಾ ಶ್ರುತಿಪ್ರಮಾಣವನ್ನು ಈ ವಿಷಯದಲ್ಲಿ ಹೇಳುತ್ತಿದ್ದಾರೆ - ವಿಭಕ್ತತ್ವಾಚ್ಚ = ಅಲ್ಪಶಕ್ತಿಯನ್ನು ಹೊಂದಿರುವುದರಿಂದ, ವಿಕಾರಿತ್ವಂ = ವಿಕಾರಿ ಎಂಬ ಪ್ರಸಿದ್ಧಿಯು, ಯುಕ್ತಂ = ಆಕಾಶಾದಿಗಳಿಗೆ ಯುಕ್ತವಾಗುತ್ತದೆ. ಏಕೆಂದರೆ ವಿಕಾರಿಣ ಏವ ಹಿ = ವಿಕಾರ ಹೊಂದುವ ಪದಾರ್ಥವಷ್ಟೇ, ಲೋಕೇ = ಲೋಕದಲ್ಲಿ, ವಿಭಕ್ತಾಃ = ಅಲ್ಪಗುಣವುಳ್ಳದ್ದೆಂದು, ದೃಶ್ಯಂತೇ = ಕಂಡಿದೆ. ಪರಮಪುರುಷಃ = ಉತ್ತಮ ಪುರುಷನಾದ, ವಿಷ್ಣುಃ = ವಿಷ್ಣುವು, ಏಕಃ = ಒಬ್ಬನೇ, ಅವಿಭಕ್ತಃ = ಪರಿಪೂರ್ಣನು, ಉಚ್ಯತೇ = ಹೀಗೆ ಹೇಳುತ್ತಾರೆ. ಪ್ರಕೃತಿಃ = ಪ್ರಕೃತಿಯು, ಪುರುಷಃ = ಪುರುಷನು, ಕಾಲಃ = ಕಾಲವು, ಏತೇ ತ್ರಯಃ = ಇವು ಮೂರು, ವಿಭಾಗತಃ = ಪೂರ್ಣಶಕ್ತಿಯನ್ನು ಪಡೆದಿರುವುದಿಲ್ಲ. ಚತುರ್ಥಸ್ತು = ನಾಲ್ಕನೆಯದಾಗಿ, ಮಹಾನ್ = ಮಹತ್ತತ್ವವು, ಪ್ರೋಕ್ತಃ = ಹೇಳಲ್ಪಟ್ಟಿದೆ. ಪಂಚಮಾ = ಐದನೆಯದು, ಅಹಂಕೃತಿಃ = ಅಹಂಕಾರತತ್ವವು, ಮತಾ = ಹೀಗೆ ಸಮ್ಮತವಾಗಿದೆ. ತತ್ = ಅಲ್ಪಶಕ್ತಿಯಿರುವ ಕಾರಣದಿಂದ, ಆಕಾಶಾದ್ಯಾಃ = ಆಕಾಶ ಮೊದಲಾದವುಗಳು, ವಿಭಾಗೇನ = ಅಲ್ಪಶಕ್ತಿಯಿರುವ ಕ್ರಮದಂತೆ, ಪೃಥಕ್‌ಪೃಥಕ್ = ಪ್ರತ್ಯೇಕವಾಗಿ ಹುಟ್ಟುತ್ತವೆ. ಯಃ = ಯಾವುದು, ವಿಭಾಗೀ = ಅಲ್ಪಶಕ್ತಿಯುಳ್ಳದ್ದೋ, ಸಃ = ಅದು, ವಿಕಾರಃ = ವಿಕಾರವೆಂದು ಕರೆಸಿಕೊಳ್ಳಲ್ಪಡುತ್ತದೆ. ಪರಃ = ಸರ್ವೋತ್ತಮನಾದ, ಸಃ = ಆ, ಹರಿಃ = ಶ್ರೀಹರಿಯು, ಅವಿಕಾರಃ = ವಿಕಾರವನ್ನು ಪಡೆದಿರುವುದಿಲ್ಲ. ಅವಿಭಾಗಾತ್ = ಪರಿಪೂರ್ಣನಾದ್ದರಿಂದ, ಪರಾನಂದಃ = ಸಂಪೂರ್ಣವಾದ ಆನಂದವುಳ್ಳವನು, ನಿತ್ಯಃ = ನಿತ್ಯಸ್ವರೂಪನು, ನಿತ್ಯಗುಣಾತ್ಮಕಃ = ನಿತ್ಯವಾದ ಗುಣಗಳುಳ್ಳವನು ಆಗಿರುತ್ತಾನೆ. ತತ್ = ಆದ್ದರಿಂದ, ಪರಮಾತ್ಮನಃ = ಪರಮಾತ್ಮನಿಗೆ, ವಿಭಾಗಃ = ಅಪರಿಪೂರ್ಣತೆಯು, ಅಲ್ಪಶಕ್ತಿತ್ವಂ = ಅಲ್ಪವಾದ ಶಕ್ತಿಯು, ನಹಿ = ಸರ್ವಥಾ ಕೂಡುವುದಿಲ್ಲ. ಇತಿ ಚ = ಹೀಗೆ, ಬೃಹತ್‌ಸಂಹಿತಾಯ = ಬೃಹತ್‌ಸಂಹಿತಾ ಎಂಬ ಗ್ರಂಥದಲ್ಲಿ ಹೇಳಲಾಗಿದೆ.

ಇಲ್ಲಿಗೆ ವಿಯದಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.
ವಿಯದಧಿಕರಣ (೨-೩-೧)

## ತತ್ವಪ್ರಕಾಶಿಕಾ

**तत्वप्रकाशिका – अनुमानेनापि ब्रह्मण एवानादित्वमन्येषां सादित्वमनुत्पत्तिश्रुतेः मुख्यामुख्यत्वसिध्यर्थं साधयत्सूत्रमुपन्यस्य प्रतिज्ञाहेतू बहिरेव दर्शयित्वा व्याप्तिप्रदर्शनपरतया व्याचष्टे – यावदिति ।।**

'ಅನುತ್ಪತ್ತಿ ಶ್ರುತಿಯು ಬ್ರಹ್ಮನಲ್ಲಿ ಮುಖ್ಯವಾಗಿದೆ ಬೇರೆ ಕಡೆ ಅಮುಖ್ಯವಾಗಿದೆ'. ಈ ಪ್ರಮೇಯವನ್ನು ಸಾಧಿಸುವುದಕ್ಕಾಗಿ ಅನುಮಾನದಿಂದಲೂ ಕೂಡ ಬ್ರಹ್ಮನೊಬ್ಬನೇ ಅನಾದಿಯಾಗಿರುತ್ತಾನೆ. ಆಕಾಶಾದಿಗಳು ಸಾಧಿಯಾಗಿವೆ ಎಂಬುದನ್ನು ಸಾಧಿಸುವ ಸೂತ್ರವನ್ನು 'ಯಾವದ್ವಿಕಾರಂ ತು' ಇತ್ಯಾದಿಯಾಗಿ ಪಠಿಸುತ್ತಿದ್ದಾರೆ. ಮತ್ತು ಅನುಮಾನಕ್ಕೆ ಉಪಯುಕ್ತವಾದ ಪ್ರತಿಜ್ಞಾ ಹಾಗೂ ಹೇತುಗಳನ್ನು ಕಂಠತಃ ಹೇಳದೆ ತೋರಿಸಿ ವ್ಯಾಪ್ತಿಪ್ರದರ್ಶನ ಪೂರ್ವಕವಾಗಿ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – अत्रेमौ प्रयोगौ भवतः । वियदुत्पत्तिमद्विभक्तत्वाद्घटादिवत् । ब्रह्म नोत्पत्तिमदविभक्तत्वद् व्यतिरेकेण घटादिवदिति । विकारिण एव विभक्ता दृश्यन्ते न त्वविकारिणोऽतो विभक्तत्वस्य न विपक्षवृत्तितेति भावः ।**

ಈ ವಿಷಯದಲ್ಲಿ ಎರಡು ಅನುಮಾನ ಪ್ರಯೋಗಗಳನ್ನು ಹೀಗೆ ತಿಳಿಯಬೇಕು - 'ವಿಯತ್ ಉತ್ಪತ್ತಿಮತ್ ವಿಭಕ್ತತ್ವಾತ್ ಘಟಾದಿವತ್' 'ಘಟಾದಿಗಳು ವಿಭಕ್ತವಾಗಿವೆ ಮತ್ತು ಉತ್ಪತ್ತಿಯುಳ್ಳವುಗಳಾಗಿವೆ'. ಅದರಂತೆ ಆಕಾಶವೂ ಕೂಡ ವಿಭಕ್ತವಾದ್ದರಿಂದ ಉತ್ಪತ್ತಿವುಳ್ಳದ್ದಾಗಬೇಕು ಎಂದು. ಮತ್ತು 'ಬ್ರಹ್ಮ ನ ಉತ್ಪತ್ತಿಮತ್ ಅವಿಭಕ್ತತ್ವಾತ್ ವ್ಯತಿರೇಕೇಣ ಘಟಾದಿವತ್' 'ಘಟಾದಿಗಳು ಅವಿಭಕ್ತವಾಗಿಲ್ಲ ಹಾಗೆ ಅನುತ್ಪತ್ತಿವುಳ್ಳವುಗಳೂ ಕೂಡ ಅಲ್ಲ. ಅದರಂತೆ ಬ್ರಹ್ಮನು ಅವಿಭಕ್ತನಾಗಿರುವುದರಿಂದ ಉತ್ಪತ್ತಿವುಳ್ಳವನಲ್ಲ' ಎಂದು.

ವಿಕಾರವುಳ್ಳವುಗಳು ಮಾತ್ರ ವಿಭಕ್ತಗಳಾಗುವುದು ಕಂಡಿದೆ. ವಿಕಾರ ಇಲ್ಲದವುಗಳಿಗೆ ವಿಭಕ್ತತ್ವವು ಇರುವುದಿಲ್ಲ. ಆದ್ದರಿಂದ ಹೇತುವು ವಿಪಕ್ಷದಲ್ಲಿ ವೃತ್ತಿಯಾಗಿಲ್ಲ.

ವಿವರಣೆ - 'ವಿಯತ್ ಉತ್ಪತ್ತಿಮತ್ ವಿಭಕ್ತತ್ವಾತ್' ಎಂಬ ಅನುಮಾನದಲ್ಲಿ ಮತ್ಸ್ಯ ಕೂರ್ಮಾದ್ಯವತಾರದಿಂದ ಜೀವರಿಗಿಂತ ವಿಭಕ್ತನಾದ ಪರಮಾತ್ಮನಲ್ಲಿ ವ್ಯಭಿಚಾರ ಬರುವುದಿಲ್ಲ. ಏಕೆಂದರೆ ವಿಕಾರಿತ್ವವು ಪರಮಾತ್ಮನಲ್ಲಿ ಇರುವುದಿಲ್ಲ. ಯಾವುದು ವಿಕಾರವುಗಳುಳ್ಳವುಗಳೋ, ಅವು ಮಾತ್ರ ವಿಭಕ್ತವುಳ್ಳವುಗಳು ಎಂದು ಕರೆಸಿಕೊಳ್ಳುತ್ತವೆ.

**तत्वप्रकाशिका – अत्रैव स्मृतिसम्मतिं चाह – एक इति ।। विष्णुरविभक्तः प्रकृत्यादयस्त्रयो विभागत्वेन प्रोक्ताः । महानपि तथा प्रोक्तः । अहंकृतिरपि विभक्तत्वेन मता । यद्येवं किं तर्हीत्यत आह – तदिति ।।**

ಈ ವಿಚಾರದಲ್ಲಿ ಸ್ಮೃತಿಸಮ್ಮತಿಯನ್ನು 'ಏಕಃ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ವಿಷ್ಣುವು ಅವಿಭಕ್ತನಾಗಿದ್ದಾನೆ. ಪ್ರಕೃತಿ, ಪುರುಷ, ಕಾಲ ಇವುಗಳು ವಿಭಾಗವುಳ್ಳವುಗಳಾಗಿವೆ. ಮಹತ್ತತ್ವವು

ವಿಭಾಗವುಳ್ಳದ್ದಾಗಿದೆ. ಅಹಂಕಾರತತ್ವವೂ ಕೂಡ ವಿಭಾಗವುಳ್ಳದ್ದಾಗಿದೆ. ಇದರಿಂದೇನಾಯಿತು? ಎಂಬ ಪ್ರಶ್ನೆಗೆ 'ತತ್' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ.

ವಿವರಣೆ - ಬ್ರಹ್ಮನಿಗೆ ಉತ್ಪತ್ತಿಯಿಲ್ಲ. ಆಕಾಶಾದಿಗಳಿಗೆ ಉತ್ಪತ್ತಿಯಿದೆ ಎಂಬ ವಿಷಯದಲ್ಲಿ ಬೃಹತ್‌ಸಂಹಿತಾ ಸ್ಮೃತಿಯು 'ಏಕೋ ವಿಭಕ್ತಃ' ಇತ್ಯಾದಿಯಾಗಿ ಹೇಳುತ್ತಿದೆ.

ಈ ಸ್ಮೃತಿವಾಕ್ಯದಲ್ಲಿ ವಿಷ್ಣುಮಾತ್ರ ಅವಿಭಕ್ತನಾಗಿದ್ದಾನೆ. ಉಳಿದೆಲ್ಲವೂ ಕೂಡ ವಿಭಕ್ತವಾಗಿವೆ ಎಂದು ಹೇಳಲಾಗಿದೆ. ಈ ಸ್ಮೃತಿವಾಕ್ಯದಲ್ಲಿ ಮಹತ್ ಶಬ್ದದಿಂದ ತದಭಿಮಾನಿಯಾದ ಚತುರ್ಮುಖಬ್ರಹ್ಮನನ್ನು 'ಅಹಂಕೃತಿಃ' ಎಂಬುದರಿಂದ ಅಹಂಕಾರಕ್ಕೆ ಅಭಿಮಾನಿಯಾದ ರುದ್ರನನ್ನೂ ಕೂಡ ವಿವಕ್ಷಿಸಬೇಕು. ಪ್ರಕೃತಿ, ಪುರುಷ, ಕಾಲ, ಮಹತ್, ಅಹಂಕಾರ ಈ ಐದು ಪದಾರ್ಥಗಳು ವಿಭಕ್ತವಾಗಿವೆ ಎಂದು ಸ್ಮೃತಿಯು ಹೇಳಿದೆ.

**तत्वप्रकाशिका – स चासौ विभागश्चेति तथोक्तस्तेन हेतुना आकाशाद्याः पृथक्पृथगिति परम्परया नैकस्मात् । विभागत्वेऽपि कुतो जन्मेति तत्राह – य इति ।। विष्णुरविभक्तश्चेत्ततः किमित्यत्राह – स इति ।।**

ಶ್ರುತಿಯಲ್ಲಿರುವ 'ತದ್ವಿಭಾಗೇನ' ಎಂಬುದಕ್ಕೆ 'ಸ ಚಾಸೌ ವಿಭಾಗಶ್ಚ ತದ್ವಿಭಾಗಃ ತೇನ ತದ್ವಿಭಾಗೇನ' ಎಂಬುದಾಗಿ ವಿಗ್ರಹ ವಾಕ್ಯವನ್ನು ತಿಳಿಯಬೇಕು. ವಿಭಕ್ತತ್ವರೂಪ ಹೇತುವಿನಿಂದ ಎಂಬುದು ಇದರ ಅರ್ಥ. ಈ ಹೇತುವಿನಿಂದ ಆಕಾಶಾದಿಗಳು ಪ್ರತ್ಯೇಕ ಪ್ರತ್ಯೇಕವಾಗಿ ಹುಟ್ಟುತ್ತವೆ. ಇವುಗಳೂ ಕೂಡ ಪರಂಪರೆಯಿಂದ ಹುಟ್ಟುತ್ತವೆ ಹೊರತು ಒಂದರಿಂದಲೇ ಹುಟ್ಟುವುದಿಲ್ಲ.

ಆಕಾಶಾದಿಗಳು ವಿಭಕ್ತವಾಗುತ್ತವೆ ಎಂದ ಮಾತ್ರಕ್ಕೆ ಉತ್ಪತ್ತಿಯು ಹೇಗೆ ಸಿದ್ಧವಾಗುತ್ತದೆ? ಎಂಬ ಪ್ರಶ್ನೆಗೆ 'ಯಃ' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ. ವಿಷ್ಣುವು ಅವಿಭಕ್ತನಾದ್ದರಿಂದ ನಿತ್ಯನೆಂದು ಹೇಗೆ ಸಿದ್ಧವಾಗುತ್ತದೆ? ಎಂಬ ಪ್ರಶ್ನೆಗೆ 'ಸಃ' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ.

ವಿವರಣೆ - 'ತದ್ವಿಭಾಗೇನ' ಎಂಬ ತೃತೀಯಾಂತಪದವನ್ನು ಭಾವಪ್ರಧಾನವನ್ನಾಗಿ ನಿರ್ದೇಶ ಮಾಡಿದಾಗ 'ತದ್ವಿಭಕ್ತತ್ವೇನ' ಎಂದು ಹೇಳಿದಂತಾಗುತ್ತದೆ. ಆಗ ಆ ವಿಭಕ್ತತ್ವವೆಂಬ ಹೇತುವಿನಿಂದ ಆಕಾಶಾದಿಗಳು ಪ್ರತ್ಯೇಕವಾಗಿ ಹುಟ್ಟುತ್ತವೆಂದು ಸಾಧಿಸಿದಂತಾಗುತ್ತದೆ. ಪ್ರತ್ಯೇಕವಾಗಿ ಹುಟ್ಟುವುದಾದರೂ ಕೂಡ ಪರಂಪರೆಯಿಂದ ಹುಟ್ಟುತ್ತದೆ. ಪ್ರಕೃತಿಯಿಂದ ಮಹತ್ತತ್ವ, ಮಹತ್ತತ್ವದಿಂದ ಅಹಂಕಾರತತ್ವ, ಅಹಂಕಾರತತ್ವದಿಂದ ಆಕಾಶ, ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ನೀರು, ನೀರಿನಿಂದ ಪೃಥಿವೀ. ಇದೇ ಕ್ರಮದಿಂದಲೇ ವಿಭಕ್ತವಾಗುತ್ತದೆಂದು ತಿಳಿಯಬೇಕು. ಯಾವುದು ವಿಭಾಗಕ್ಕೆ ಅರ್ಹವಾಗಿದೆಯೋ ಅದು ಅಲ್ಪಶಕ್ತಿ ಉಳ್ಳದ್ದಾಗಿರುತ್ತದೆ. ವಿಭಾಗ ಇಲ್ಲದ್ದಾದರೆ ಸಂಪೂರ್ಣ ಶಕ್ತಿವುಳ್ಳದ್ದು ಎಂದು ತಿಳಿಯಬೇಕು.

ಆಕಾಶಾದಿಗಳು ವಿಭಕ್ತವಾದ್ದರಿಂದಲೇ ಉತ್ಪತ್ತಿವುಳ್ಳವುಗಳಾಗಿವೆ. ಏಕೆಂದರೆ ಯಾವುದು ವಿಭಾಗವುಳ್ಳದ್ದೋ ಅದು ವಿಕಾರವುಳ್ಳದ್ದು. ಯಾವುದು ವಿಕಾರವುಳ್ಳದ್ದೋ ಅದು ಅನಿತ್ಯವಾದುದು ಎಂಬುದಾಗಿ ವ್ಯಾಪ್ತಿಯಿದೆ. ಅದರಂತೆ ಯಾವುದು ವಿಭಕ್ತವಲ್ಲವೋ ಅದು ವಿಕಾರಿಯಾಗಿರುವುದಿಲ್ಲ. ಯಾವುದು ವಿಕಾರಿಯಲ್ಲವೋ ಅದು ನಿತ್ಯವಾಗಿರುತ್ತದೆಂದೂ ಕೂಡ ವ್ಯಾಪ್ತಿ ಇರುತ್ತದೆ. ಇದರಿಂದ ಅವಿಭಕ್ತತ್ವ ಎಂಬ ಹೇತುವಿನಿಂದ ವಿಷ್ಣುವಿನಲ್ಲಿ ನಿತ್ಯತ್ವವು, ವಿಭಕ್ತತ್ವ ಎಂಬ ಹೇತುವಿನಿಂದ ಆಕಾಶಾದಿಗಳಲ್ಲಿ ಅನಿತ್ಯತ್ವವು ಸಿದ್ಧವಾಗುತ್ತದೆ.

**तत्वप्रकाशिका – द्रव्यत्वादविभागादित्यसिद्धमित्यत आह – विभाग इति ।। न चास्य प्राचीनश्रुतिविरोधः । तत्र स्वरूपत एवोत्पत्तेरभावस्योक्तत्वात् । अनेन वियत्पदमनादित्वेन प्रसिद्धानां प्रकृत्यादीनामुपलक्षणार्थमिति सूचितं भवति । अतः श्रुत्यविरोधेन भगवदितरस्योत्पत्तिसिद्धेर्युक्तः सर्वकारणे ब्रह्मणि श्रुतिसमन्वय इति सिद्धम् ।। ७ ।।**

ದ್ರವ್ಯತ್ವ ಇರುವುದರಿಂದ ಶ್ರೀಹರಿಯಲ್ಲಿ ಅವಿಭಾಗವು ಸಿದ್ಧವಾಗುತ್ತದೆಂದು ಹೇಳಿದ್ದು ತಪ್ಪು. ಈ ಆಕ್ಷೇಪಕ್ಕೆ 'ವಿಭಾಗಃ' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ.

'ಪ್ರಕೃತಿ ಪುರುಷಃ ಕಾಲಃ' ಎಂಬ ಶ್ರುತಿಗೆ 'ಅಥ ಹ ವಾವಾ' ಇತ್ಯಾದಿ ಶ್ರುತಿಯಿಂದ ವಿರೋಧವು ಬರುತ್ತದೆ ಎಂದು ಹೇಳಬಾರದು. 'ಅಥ ಹ ವಾವಾ' ಎಂಬ ಶ್ರುತಿಯಲ್ಲಿ ಸ್ವರೂಪತಃ ಉತ್ಪತ್ತಿಯೇ ಇಲ್ಲವೆಂದು ಹೇಳಲಾಗಿದೆ. ಪ್ರಕೃತ 'ಪ್ರಕೃತಿ ಪುರುಷಃ' ಇತ್ಯಾದಿ ಶ್ರುತಿಯಲ್ಲಿ ಪರಾಧೀನವಿಶೇಷ-ಅವಾಪ್ತಿರೂಪವಾದ ಉತ್ಪತ್ತಿಯನ್ನು ಹೇಳಲಾಗಿದೆ. ಆದ್ದರಿಂದ ಎರಡು ವಾಕ್ಯಗಳಿಗೆ ವಿರೋಧವಿಲ್ಲ. ಹೀಗೆ ಹೇಳಿದ್ದರಿಂದ ಸೂತ್ರದಲ್ಲಿರುವ ವಿಯತ್‌ಪದವು ಅನಾದಿತ್ವೇನ ಪ್ರಸಿದ್ಧವಾದ ಪ್ರಕೃತ್ಯಾದಿಗಳಿಗೆ ಉಪಲಕ್ಷಕವಾಗಿದೆ ಎಂಬುದನ್ನು ಸೂಚಿಸಿದಂತಾಯಿತು.

ಹೀಗೆ ಶ್ರುತಿಗಳ ವಿರೋಧ ಇಲ್ಲದ್ದರಿಂದ ಭಗವಂತನಿಗಿಂತ ಅತಿರಿಕ್ತವಾದ ವಸ್ತುಗಳು ಉತ್ಪತ್ತಿ ಉಳ್ಳವುಗಳೆಂದು ಸಿದ್ಧವಾಗುತ್ತದೆ. ಆದ್ದರಿಂದ ಸರ್ವಕಾರಣನಾದ ಬ್ರಹ್ಮನಲ್ಲಿ ಶ್ರುತಿಸಮನ್ವಯವು ಸಿದ್ಧವಾಯಿತು.

ವಿವರಣೆ - 'ಶ್ರೀಹರಿಃ ಅನುತ್ಪತ್ತಿಮಾನ್ ಅವಿಭಕ್ತತ್ವಾತ್' ಎಂಬ ಅನುಮಾನದಲ್ಲಿ ಅವಿಭಕ್ತತ್ವ ಎಂಬ ಹೇತುವಿಗೆ ಅಸಿದ್ಧಿದೋಷವು ಬರುತ್ತದೆ. ಏಕೆಂದರೆ ಶ್ರೀಹರಿ ದ್ರವ್ಯನಾಗಿರುವುದರಿಂದ ಎಲ್ಲಾ ದ್ರವ್ಯಗಳಲ್ಲೂ ವಿಭಾಗ ಎಂಬ ಗುಣವು ಇದ್ದೇ ಇರುತ್ತದ್ದಾದ್ದರಿಂದ ಶ್ರೀಹರಿಯಲ್ಲೂ ಕೂಡ ವಿಭಕ್ತತ್ವವು ಬರಲೇಬೇಕು. ಆದ್ದರಿಂದ ಅವಿಭಕ್ತತ್ವವು ಬರುವುದಿಲ್ಲವೆಂದು ಅಸಿದ್ಧಿದೋಷವು ಬರುತ್ತದೆಂಬುದನ್ನು ಪೂರ್ವಪಕ್ಷಕಾರನು ಆಕ್ಷೇಪ ಮಾಡುತ್ತಾನೆ. ಆದರೆ ಇದು ತಪ್ಪು. ಇಲ್ಲಿ ವಿಭಾಗ ಶಬ್ದದಿಂದ ತಾರ್ಕಿಕರು ಹೇಳುವ ವಿಭಾಗವೆಂಬ ಗುಣವನ್ನು ವಿವಕ್ಷಿಸಿಲ್ಲ. ಕೇವಲ ಅಲ್ಪಶಕ್ತಿಯನ್ನು ವಿವಕ್ಷಿಸಲಾಗಿದೆ. ಆದ್ದರಿಂದ ಶ್ರೀಹರಿಯು ದ್ರವ್ಯನಾಗಿದ್ದರೂ ಕೂಡ ಅವಿಭಕ್ತತ್ವ ಎಂಬ ಹೇತುವು ಅವನಲ್ಲಿ ಬಂದೇ ಬರುತ್ತದೆ (ವಾಕ್ಯಾರ್ಥಮುಕ್ತಾವಳಿ).

'ಪ್ರಕೃತಿ ಪುರುಷಃ ಕಾಲಃ ತ್ರಯ ಏತೇ ವಿಭಾಗಿನಃ' ಎಂಬುದಾಗಿ ಬೃಹತ್ಸಂಹಿತೆಯಲ್ಲಿ ಪ್ರಕೃತಿ, ಪುರುಷ, ಕಾಲ ಈ ಮೂರು ಪದಾರ್ಥಗಳು ಉತ್ಪತ್ತಿ ಉಳ್ಳವುಗಳೆಂದು ಹೇಳಲಾಗಿದೆ. ಆದರೆ 'ಅಥ ಹ ವಾವ ನಿತ್ಯಾನಿ ಪುರುಷಃ ಪ್ರಕೃತಿಃ ಆತ್ಮಾ ಕಾಲಃ' ಎಂಬ ಭಾಲ್ಲವೇಯ ಶ್ರುತಿಯಲ್ಲಿ ಇವುಗಳನ್ನು ನಿತ್ಯವೆಂದು ಹೇಳಲಾಗಿದೆ. ಆದ್ದರಿಂದ ಶ್ರುತಿಸ್ಮೃತಿಗಳಿಗೆ ಪರಸ್ಪರ ವಿರೋಧ ಬರುತ್ತದಲ್ಲವೇ?

ಈ ಆಕ್ಷೇಪವು ತಪ್ಪು. 'ಅಥ ಹ ವಾವ' ಎಂಬ ಶ್ರುತಿಯಲ್ಲಿ ಸ್ವರೂಪತಃ ಉತ್ಪತ್ತಿಯೇ ಇಲ್ಲವೆಂದು ಹೇಳಲಾಗಿದೆ. 'ಪ್ರಕೃತಿ ಪುರುಷಃ ಕಾಲಃ' ಎಂಬಲ್ಲಿ ಪರಾಧೀನವಿಶೇಷಾವಾಪ್ತಿರೂಪವಾದ ಉತ್ಪತ್ತಿ ಇದೆ ಎಂದು ಹೇಳಲಾಗಿದೆ. ಆದ್ದರಿಂದ ವಿರೋಧಕ್ಕೆ ಅವಕಾಶವಿಲ್ಲ.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ವಿಯದಧಿಕರಣ ಮುಗಿಯಿತು

ಪರಿಪೂರ್ಣಚಂದ್ರಿಕಾ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ द्वितीयाध्यायः ॥

## तृतीयः पादः

## वियदधिकरणम्

ಶ್ರುತಿವಿರೋಧಪರಿಹಾರಕ್ಕಾಗಿ ತೃತೀಯಪಾದ

**समयाविरोध उक्तः । श्रुत्यविरोध उच्यतेऽस्मिन् पादे ॥ न वियदश्रुतेः ॥**

ಹಿಂದಿನ ಪಾದದಲ್ಲಿ ಸಮಯಗಳ ವಿರೋಧವನ್ನು ಪರಿಹಾರ ಮಾಡಿದ್ದಾಯಿತು. ಈಗ ವಿಷ್ಣುವೇ ಸರ್ವಜಗತ್‌ಕರ್ತಾ ಎಂಬ ವಿಷಯದಲ್ಲಿ ಶ್ರುತಿಯ ವಿರೋಧವಿಲ್ಲ ಎಂಬುದನ್ನು ಹೇಳುತ್ತಾರೆ.

**अत्र समन्वयाध्यायोक्तं विष्णोः सर्वस्रष्टृत्वं वियदनुत्पत्तिश्रुतिविरुद्धं न वेति चिन्ता । तदर्थं वियदनादित्वश्रुतिर्मुख्योत गौणीति ॥ तदर्थमनादित्वश्रुतिरनुभवाद्यनुगृहीतत्वेन प्रबलोत नेति ॥**

ಈಗ ತದರ್ಥಚಿಂತಾವನ್ನು ಹೇಳುತ್ತಿದ್ದಾರೆ ಮೊದಲು, ಸಮನ್ವಯಾಧ್ಯಾಯದಲ್ಲಿ ವಿಷ್ಣುವೇ ಸರ್ವಜಗತ್‌ಸ್ರಷ್ಟಾ ಎಂದು ಹೇಳಿದ್ದಾರೆ, ಅದಕ್ಕೆ 'ಆಕಾಶಕ್ಕೆ ಉತ್ಪತ್ತಿ ಇಲ್ಲ' ಎಂಬ ಶ್ರುತಿಯ ವಿರೋಧ ಬರುತ್ತದೆಯೋ ಇಲ್ಲವೋ ? ಎಂಬ ವಿಚಾರ. (ವಿಷ್ಣುವೇ ಸರ್ವಜಗತ್‌ಕರ್ತಾ ಎಂದಾದ ಮೇಲೆ ಆಕಾಶಕ್ಕೆ ಉತ್ಪತ್ತಿ ಇಲ್ಲ ಎಂದರೆ ಆಗ ವಿಷ್ಣುವಿಗೆ ಸರ್ವಜಗತ್‌ಕರ್ತೃತ್ವ ಬರುವುದಿಲ್ಲ ಎಂದು ಅಭಿಪ್ರಾಯ) ಇದರ ನಂತರ ಆಕಾಶವು ಅನಾದಿ ಎಂದು ಹೇಳುವ ಶ್ರುತಿಗೆ ಮುಖ್ಯಾರ್ಥವನ್ನು ಮಾಡಬೇಕೋ, ಗೌಣ (ಅಮುಖ್ಯ) ಅರ್ಥವನ್ನು ಮಾಡಬೇಕೋ? ಎಂದು ವಿಚಾರ. ಅನಂತರ ಈ ಆಕಾಶಕ್ಕೆ ಅನಾದಿತ್ವವನ್ನು ಹೇಳುವ ಶ್ರುತಿಯು ಅನುಭವದ ಬೆಂಬಲ ಹೊಂದಿದೆಯಾದ್ದರಿಂದ ಅದು ಪ್ರಬಲ ಹೌದೋ ಅಲ್ಲವೋ ? ಎಂಬ ವಿಚಾರ.

**अधिभूतादिविचार इति ।। एकैकाधिभूतविचार इत्यर्थः ।।**

ಒಂದೊಂದು ಅಧಿಭೂತದ ವಿಚಾರ ಒಂದೊಂದು ಅಧಿಕರಣದಲ್ಲಿ ಮಾಡಲಾಗಿದೆ.

**विचारबाहुल्याभिप्रायेण क्रमोल्लङ्घनमिति ।। सूचीकटाहन्यायेन वर्तिष्यमाणक्रमानुसारेणाधिभूताधिदैवपरमात्मजीवेति वक्तव्ये ''जीवपरमात्माधिभूताधिदैवेषु'' इति जीवादिशब्दानां पूर्वनिपातोऽत्र जीवादिविचारस्य बह्वर्थविषयकत्वेन जिज्ञासुं प्रत्यभ्यर्हितत्वादल्पाच्तरत्वाच्चेत्यर्थः ।**

ಸೂತ್ರಕಾರರು ಸೂಚೀಕಟಾಹ ನ್ಯಾಯದಿಂದ ಮೊದಲು ಅಧಿಭೂತ ನಂತರ ಅಧಿದೈವ, ಪರಮಾತ್ಮ, ಜೀವ ವಿಷಯವಾದ ಶ್ರುತಿವಿರೋಧ ಪರಿಹಾರ ಮಾಡಿದ್ದಾರೆ. ಆದರೆ ಆಚಾರ್ಯರು ಹೇಳುವಾಗ ಜೀವ ಪರಮಾತ್ಮ, ಅಧಿಭೂತ ಅಧಿದೈವವಿಷಯ ಶ್ರುತಿವಿರೋಧಪರಿಹಾರ ಎಂದು ಸೂತ್ರಕ್ರಮವನ್ನು ಮೀರಿ ಹೇಳಿದ್ದಾರೆ. ಹೀಗೆ ಆಚಾರ್ಯರು ಹೇಳಿರುವುದು ಮಹಾಮಲ್ಲಭಂಗ-ನ್ಯಾಯವನ್ನು ಅನುಸರಿಸಿ. ಜೀವವಿಷಯವು ಬಹಳವಾಗಿದೆಯಾದ್ದರಿಂದ ಅದನ್ನು ಮೊದಲು ಹೇಳಿದ್ದಾರೆ. (ಅಂದರೆ ಜೀವ ವಿಷಯಶ್ರುತಿ ವಿರೋಧವನ್ನು ಅನೇಕ ಅಧಿಕರಣಗಳಲ್ಲಿ ಪರಿಹಾರ ಮಾಡಿದ್ದಾರೆ. ಹಾಗಾಗಿ, ಇದು ಬಹ್ವರ್ಥಕ. ನಂತರ ಪರಮಾತ್ಮವಿಷಯಶ್ರುತಿವಿರೋಧ ನಂತರ ಅಧಿಭೂತ ಅಧಿದೈವವಿಚಾರ) ಇನ್ನೊಂದು ಕಾರಣ ಏನೆಂದರೆ ಜೀವವಿಷಯಶ್ರುತಿವಿರೋಧಪರಿಹಾರವು ಜೀವರಾದ ಜಿಜ್ಞಾಸುಗಳಿಗೆ ಅಭ್ಯರ್ಹಿತ (ಪ್ರಥಮಪ್ರಾಪ್ತ). ಹಾಗಾಗಿ, ಅದನ್ನು ಮೊದಲು ಹೇಳಿದ್ದಾರೆ. ಇನ್ನೊಂದು ಕಾರಣ 'ಅಲ್ಪಾಚ್‌ತರತ್ವ' ಎಂಬ ವ್ಯಾಕರಣ ನಿಯಮ. ಕಡಿಮೆ ಅಚ್ (ಸ್ವರ) ವರ್ಣವಿರುವ ಶಬ್ದವನ್ನು ಮೊದಲು ಸಮಾಸದಲ್ಲಿ ಹೇಳಬೇಕು ನಂತರ ಅದಕ್ಕಿಂತ ಹೆಚ್ಚಿರುವುದನ್ನು ಹೇಳಬೇಕು. ಹೀಗೆ ಜೀವ ಎಂಬ ಶಬ್ದದಲ್ಲಿ ಅತಿಕಡಿಮೆ ಸ್ವರ ಇರುವುದರಿಂದ ಮೊದಲು ನಿರ್ದೇಶ ಮಾಡಲಾಗಿದೆ.

**''अनुभूतियुक्तिबहुवाग्विरोधः'' इति न्यायविवरणोक्तपूर्वपक्षयुक्तिं विवृणोति ।। न ह्यवकाशस्योत्पत्तिरित्यादिना ।।**

'ಅನುಭೂತಿಯುಕ್ತಿಬಹುವಾಗ್ವಿರೋಧಃ' ಅಂದರೆ ಆಕಾಶಕ್ಕೆ ಉತ್ಪತ್ತಿಯನ್ನು ಹೇಳಿದರೆ ಆಗ ಅನುಭವ, ಯುಕ್ತಿ, ಅನೇಕಶ್ರುತಿ, ಇವುಗಳ ವಿರೋಧ ಬರುತ್ತದೆ ಎಂದು. ನ್ಯಾಯವಿವರಣದಲ್ಲಿ ಹೇಳಿರುವ ಪೂರ್ವಪಕ್ಷದವರ ಯುಕ್ತಿಯನ್ನು ವಿವರಿಸುತ್ತಿದ್ದಾರೆ 'ನ ಹಿ' ಎಂಬುದಾಗಿ.

**अत्र न्यायविवरणे ''अवकाशमात्रस्याव्याकृतात्मकत्वादनुत्पत्तिश्रुतीनां तद्विषयत्वम्।**

ಈ ಸೂತ್ರದ ನ್ಯಾಯವಿವರಣದಲ್ಲಿ ಅವಕಾಶವು ಅವ್ಯಾಕೃತರೂಪವಾದ್ದರಿಂದ ಆಕಾಶಕ್ಕೆ ಉತ್ಪತ್ತಿ ಇಲ್ಲ ಎಂದು ಹೇಳುವ ಶ್ರುತಿಗಳು ಅವ್ಯಾಕೃತ ಆಕಾಶವನ್ನು ವಿಷಯವಾಗಿ ಹೊಂದಿದೆ ಎಂದು ಹೇಳಬೇಕು.

**उत्पत्तिवचनानामसितवर्णभूततदभिमानशरीरविषयत्वं पराधीनविशेषवत्त्वमात्र विषयत्वं वेति व्यवस्थ'' इति सिद्धान्तयुक्तिरुक्ता ।**

ಆಕಾಶಕ್ಕೆ ಉತ್ಪತ್ತಿಯನ್ನು ಹೇಳುವ ವಾಕ್ಯಗಳು ನೀಲವರ್ಣವುಳ್ಳ ಭೂತಾಕಾಶ, ಭೂತಾಕಾಶದ ಅಭಿಮಾನಿದೇವತೆಯ ಶರೀರ ಇದನ್ನು ಕುರಿತಾದದ್ದು. ಅಥವಾ ಪರಾಧೀನವಿಶೇಷ-ಅವಾಪ್ತಿಯನ್ನು ಕುರಿತಾದದ್ದು ಎಂದು ವ್ಯವಸ್ಥೆ ಉಂಟು. ಹೀಗೆ ಸಿದ್ಧಾಂತಯುಕ್ತಿಯು ಹೇಳಲ್ಪಟ್ಟಿದೆ.

**तां विवृणोति ।। तथा हीत्यादिना ।। नन्वत्राकाशद्वित्वमज्ञात्वा ''आत्मन आकाशः सम्भूत'' इत्यभूत्वाभवनरूपोत्पत्तिश्रुतेः ''अनादिर्वा अयमाकाश'' इत्यनुभवाद्यनुगृहीतश्रुतिविरोधेनाप्रामाण्ये पूर्वपक्षिते द्वावाकाशौ । तत्रोत्पत्तिश्रुतिर्भूतविषया । अनुत्पत्ति श्रुतिस्त्ववकाशविषया । तस्मान्नविरोध इति।**

**श्रुतिद्वयस्यापि मुख्यार्थत्वेन व्यवस्थेति न्यायविवरणोक्तं पक्षान्तरं टीकायां कस्मान्नोक्तमिति चेत् उच्यते ।**

ಹಿಂದೆ ಹೇಳಿದ್ದನ್ನೇ ವಿವರಿಸುತ್ತಿದ್ದಾರೆ 'ತಥಾಹಿ ' ಎಂಬುದಾಗಿ.

ಪ್ರಶ್ನೆ - ಆಕಾಶವು ಎರಡು ವಿಧ ಎಂದು ತಿಳಿಯದೆ ಆಕ್ಷೇಪ ಮಾಡಲಾಗಿದೆ. 'ಆತ್ಮನಃ ಆಕಾಶ ಸಂಭೂತಃ' ಎಂಬ ಶ್ರುತಿಯು ಅಭೂತ್ವಾಭವನ (ಇಲ್ಲದಿರುವುದು ಹುಟ್ಟುತ್ತದೆ) ಎಂಬ ಉತ್ಪತ್ತಿಯನ್ನು ಹೇಳುತ್ತದೆ. ಆದರೆ 'ಅನಾದಿರ್ವಾऽಯಮಾಕಾಶಃ' ಎಂಬ ಶ್ರುತಿಯು ಆಕಾಶಕ್ಕೆ ಅನಾದಿತ್ವವನ್ನು ಹೇಳುತ್ತಿದೆ. ಈ ಅನಾದಿತ್ವಶ್ರುತಿಗೆ ಅನುಭವ, ಯುಕ್ತಿ ಮೊದಲಾದುದರ ಬೆಂಬಲವೂ ಇದೆ. ಹೀಗೆ ಈ ಎರಡೂ ಶ್ರುತಿಗಳಿಗೆ ವಿರೋಧ ಬರುವುದರಿಂದ ಶ್ರುತಿ (ಉತ್ಪತ್ತಿ)ಗೆ ಅಪ್ರಾಮಾಣ್ಯ ಎಂದು ಪೂರ್ವಪಕ್ಷ ಮಾಡಿಕೊಂಡು ಆಕಾಶ ಎರಡು ವಿಧ - ಅದರಲ್ಲಿ ಉತ್ಪತ್ತಿಯನ್ನು ಹೇಳುವ ಶ್ರುತಿಯು ಭೂತಾಕಾಶ ವಿಷಯವಾಗಿದೆ. ಅನುತ್ಪತ್ತಿಯನ್ನು ಹೇಳುವ ಶ್ರುತಿಯು ಅವ್ಯಾಕೃತ-ಆಕಾಶವಿಷಯವಾಗಿದೆ. ಆದ್ದರಿಂದ ವಿರೋಧವಿಲ್ಲ. ಹೀಗೆ ಎರಡೂ ಶ್ರುತಿಗಳಿಗೆ ಮುಖ್ಯಾರ್ಥವನ್ನೇ ಹೇಳಿ ವ್ಯವಸ್ಥೆ ಕೂಡಿಸಬಹುದು ಎಂದು ನ್ಯಾಯವಿವರಣದಲ್ಲಿ ಹೇಳಲಾಗಿದೆ. ಆದರೆ ಈ ಪಕ್ಷವನ್ನು ಟೀಕಾದಲ್ಲಿ ಏಕೆ ಪ್ರಸ್ತಾಪ ಮಾಡಿಲ್ಲ?

**तथात्वे गुणपूर्तिसिद्धये जन्मादिसूत्राभिप्रेतस्वेतरसर्वकारणत्वासिद्धिः ।**

ಉತ್ತರ - (ನ್ಯಾಯವಿವರಣದಲ್ಲಿ ಹೇಳಿರುವ ಪಕ್ಷದಲ್ಲಿ ಅಸ್ವಾರಸ್ಯವಿದೆ. ಅದನ್ನೇ ವಿವರಿಸುತ್ತಿದ್ದಾರೆ) ನ್ಯಾಯವಿವರಣದ ಪ್ರಕಾರ ಹೇಳಿದರೆ ಆಗ 'ಜನ್ಮಾದ್ಯಸ್ಯ ಯತಃ' ಎಂಬಲ್ಲಿ ವಿಷ್ಣುವಿಗೆ ತನ್ನನ್ನು ಹೊರತಾಗಿ ಇತರ ಸಕಲಕಾರಣತ್ವವನ್ನು ಹೇಳಲಾಗಿದೆ. ಅದು ಸಿದ್ಧಿಸುವುದಿಲ್ಲ. (ಆಕಾಶಕ್ಕೆ ಉತ್ಪತ್ತಿ ಇಲ್ಲ ಎಂದರೆ ನ್ಯೂನತೆ ಬಂದಿತು)

**अत्राप्याद्यसूत्रस्थवियत्पदस्य सङ्कोचः ।**

ಈ ನ್ಯಾಯವಿವರಣಪಕ್ಷದಲ್ಲೂ 'ನ ವಿಯದಶ್ರುತೇಃ' ಎಂಬ ಮೊದಲನೇ ಸೂತ್ರದಲ್ಲಿರುವ 'ವಿಯತ್' ಪದಕ್ಕೆ ಅರ್ಥಸಂಕೋಚ ಮಾಡಬೇಕು (ಇಲ್ಲಿರುವ 'ವಿಯತ್' ಪದ ಭೂತಾಕಾಶಪರ ಎನ್ನಬೇಕು)

**द्वितीयसूत्रेऽनादित्वश्रुतेर्गौणत्वोक्तिविरोधः ।**

ಹಾಗೆಯೇ ಎರಡನೇ ಸೂತ್ರ ('ಗೌಣ್ಯಸಂಭವಾತ್')ದಲ್ಲಿ ಉದಾಹರಿಸಿರುವ ಅನಾದಿತ್ವಶ್ರುತಿಯು ಗೌಣ ಎಂದು ಏನು ಹೇಳಿದ್ದಾರೋ, ಅದು ತಪ್ಪಾಗುತ್ತದೆ. (ಈ ಶ್ರುತಿಗೂ ಮುಖ್ಯಾರ್ಥವನ್ನೇ ಹೇಳಿರುವುದರಿಂದ)

**''ईशाधीनविशेषेण जन्या इत्येव कीर्तिताः'' इत्यनुव्याख्यानविरोधः ।**

ಮತ್ತೂ, ಈಶ್ವರನ ಅಧೀನತ್ವ ಎಂಬ ಹುಟ್ಟು ಎಲ್ಲಕ್ಕೂ ಇದೆ ಎಂದು ಅನುವ್ಯಾಖ್ಯಾನದಲ್ಲಿ ಹೇಳಿರುವುದು ಕೂಡುವುದಿಲ್ಲ.

**षष्ठसूत्रीयभाष्योदाहृतश्रुतिस्थस्य ''स इदं सर्वमसृजत'' इति सर्वशब्दस्य सङ्कोचः ।**

ಆರನೇ ಸೂತ್ರದ ಭಾಷ್ಯದಲ್ಲಿ ಹೇಳಿರುವ ಶ್ರುತಿ 'ಸ ಇದಂ ಸರ್ವಮಸೃಜತ' ಎಂಬಲ್ಲಿ 'ಸರ್ವ' ಪದಕ್ಕೆ ಅರ್ಥಸಂಕೋಚ ಮಾಡಬೇಕು. (ಸರ್ವ ಎಂದರೆ ಅವ್ಯಾಕೃತ-ಆಕಾಶ ಬಿಟ್ಟು ಎಂದು ಹೇಳಬೇಕು)

**''आत्मा वा इदमेक एवाग्र आसीत्'' इत्यवधारणादिविरोधः ।**

ಎಲ್ಲಕ್ಕೂ ಮೊದಲು ಆತ್ಮ (ಈಶ್ವರ)ನೊಬ್ಬನೇ ಇದ್ದನು ಎಂಬ ಶ್ರುತಿವಿರೋಧವೂ ಬರುತ್ತದೆ. (ಅವ್ಯಾಕೃತ ಆಕಾಶವೂ ಇದ್ದಿತು ಎಂದು ಹೇಳಬೇಕಾದ್ದರಿಂದ)

**इत्यनेकदोषप्रसङ्गान्नोक्तम् ।**

ಹೀಗೆ ನ್ಯಾಯವಿವರಣದಲ್ಲಿ ಹೇಳಿರುವ ಪಕ್ಷಕ್ಕೆ ಅನೇಕ ದೋಷಗಳು ಬರುವುದರಿಂದ ಟೀಕಾದಲ್ಲಿ ಅದನ್ನು ಹೇಳಿಲ್ಲ. (ನ್ಯಾಯವಿವರಣದಲ್ಲಿ ಈ ದೋಷ ಇರುವ ಪಕ್ಷವನ್ನು ಏಕೆ ಹೇಳಿದ್ದಾರೆ ಎಂದರೆ ಈ ಎಲ್ಲಾ ದೋಷಗಳೂ ಸಹ್ಯದೋಷಗಳೇ)

**अत एव न्यायविवरणेऽपि पूर्वत्रारुच्या ''पराधीनविशेषवत्त्वमात्रविषयत्वं व'' इति पक्षान्तरमुक्तम् ।**

ಆದ್ದರಿಂದಲೇ ನ್ಯಾಯವಿವರಣದಲ್ಲಿಯೂ ಈ ಮೊದಲಿನ ಪಕ್ಷದಲ್ಲಿ ಅಸ್ವಾರಸ್ಯವನ್ನು ತಂದು ಪರಾಧೀನವಿಶೇಷ-ಅವಾಪ್ತಿಯನ್ನು ಮಾತ್ರ ಕುರಿತಾದದ್ದು ಎಂದು ಇನ್ನೊಂದು ಪಕ್ಷವನ್ನು ಹೇಳಿದ್ದಾರೆ.

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

प्रागुक्तसङ्गतिस्मरणायाह – **समयेति** ।। आद्यसूत्रसूचितां चिन्तामाह – **अत्रेति**।। ''गौणि'' इति सूत्रसूचितामाह – **तदर्थं वियदिति** ।। ''अस्ति तु'' इत्यादि सूत्रसूचितामाह – **तदर्थमनादित्वेति** ।। अनुभवयुक्तयनुगृहीतत्वेनेत्यर्थः। स्पष्टःफलफलिभावः ।

ಹಿಂದೆ ಹೇಳಿದ ಸಂಗತಿಯ ಸ್ಮರಣೆಗಾಗಿ ಹೇಳುತ್ತಿದ್ದಾರೆ 'ಸಮಯ' ಎಂಬುದಾಗಿ. ಮೊದಲನೇ ಸೂತ್ರದಲ್ಲಿ ಸೂಚಿತವಾಗಿರುವ ಚಿಂತಾವನ್ನು ಹೇಳುತ್ತಿದ್ದಾರೆ 'ಅತ್ರ' ಎಂಬುದಾಗಿ. ಮೂರನೇ ಸೂತ್ರದಲ್ಲಿ ಸೂಚಿತವಾಗಿರುವ ಚಿಂತಾವನ್ನು ಹೇಳುತ್ತಿದ್ದಾರೆ 'ತದರ್ಥಂ' ಎಂಬುದಾಗಿ. 'ಅಸ್ತಿ ತು' ಎಂಬ ಸೂತ್ರದಲ್ಲಿ ಸೂಚಿತವಾದ ಚಿಂತಾವನ್ನು ಹೇಳುತ್ತಿದ್ದಾರೆ 'ತದರ್ಥಮನಾದಿತ್ವ' ಎಂಬುದಾಗಿ. ಅನುಭವ ಹಾಗೂ ಯುಕ್ತಿಯ ಬೆಂಬಲ ಇರುವುದರಿಂದ ಎಂದರ್ಥ. ಈ ಚಿಂತಾಗಳ ಫಲಫಲಿಭಾವ ಸ್ಪಷ್ಟವಾಗಿದೆ. (ಇಲ್ಲಿ ಫಲಫಲಿಭಾವ ಹೀಗೆ, ಅನುಭವಯುಕ್ತಿಗಳಿಂದ ಬೆಂಬಲವುಳ್ಳ ಅನಾದಿತ್ವಶ್ರುತಿಯು ಪ್ರಬಲ ಎಂದಾದರೆ ಆಗ ಅನಾದಿತ್ವಶ್ರುತಿಗೆ ಮುಖ್ಯಾರ್ಥ ಒಪ್ಪಬೇಕು. ಆಗ ಸಮನ್ವಯ ಅಧ್ಯಾಯದಲ್ಲಿ ಹೇಳಿರುವ ವಿಷ್ಣುವಿನ ಸರ್ವಜಗತ್‌ಕರ್ತೃತ್ವ ಈ ಶ್ರುತಿವಿರುದ್ಧ ಎಂದಾಗುತ್ತದೆ. ಅಥವಾ ಆಕಾಶಕ್ಕೆ ಅನಾದಿತ್ವವನ್ನು ಹೇಳುವ ಶ್ರುತಿಯು ದುರ್ಬಲ ಎಂದಾದರೆ ಆಗ ಆ ಶ್ರುತಿಗೆ ಗೌಣಾರ್ಥವನ್ನು ಒಪ್ಪಬೇಕು. ಆಗ ಈ ಶ್ರುತಿಯ ವಿರೋಧ ವಿಷ್ಣುವಿನ ಸರ್ವಜಗತ್‌ಕರ್ತೃತ್ವಕ್ಕೆ ಬರುವುದಿಲ್ಲ)

**प्रकाशः – टीकाक्षरार्थमाह – अधिभूतेति ।। तामिति ।।** पराधीनेत्यादिनोक्तां युक्तिम् । पूर्वांशोक्तिस्त्वग्रेतनशङ्कोत्थानाय ।। इति न्यायविवरणोक्तं पक्षान्तरमिति।। इति भावेनोक्तमित्यर्थः ।

ಟೀಕಾದಲ್ಲಿರುವ ಪದಗಳ ವಿವರಣೆಯನ್ನು ಮಾಡುತ್ತಿದ್ದಾರೆ 'ಅಧಿಭೂತ' ಎಂಬುದಾಗಿ. 'ತಾಂ' ಎಂದರೆ ಪರಾಧೀನವಿಶೇಷಾವಾಪ್ತಿ ಎಂಬ ಯುಕ್ತಿಯನ್ನು ಎಂದರ್ಥ. ನ್ಯಾಯವಿವರಣದಲ್ಲಿ ಹೇಳಿರುವುದನ್ನು ಹೇಳಿದ್ದು ಮುಂದಿನ ಶಂಕಾದೃಷ್ಟಿಯಿಂದ. ನ್ಯಾಯವಿವರಣದಲ್ಲಿ ಹೇಳಿರುವ ಇನ್ನೊಂದು ಪಕ್ಷವನ್ನು ಎಂದರ್ಥ.

**प्रकाशः –** ''अवकाशमात्रस्य'' इत्यादि प्रागुदाहृतमेव न्यायविवरणमुक्त पक्षान्तरपरतयापि वाशब्दात्स्पष्टं प्रतीयत इति टीकायां तथैव कस्मान्न व्याख्यातमित्यर्थः ।।

**अत एवेति** ।। अनेकदोषप्रसङ्गादेवेत्यर्थः । पूर्वत्र आकाशद्वित्वोपगमेन व्यवस्थापक्ष इत्यर्थः ।

'ಅವಕಾಶಮಾತ್ರಸ್ಯ' ಎಂದು ನ್ಯಾಯವಿವರಣದಲ್ಲಿ ಹೇಳಿರುವ ಇನ್ನೊಂದು ಪಕ್ಷವು 'ವಾ' ಶಬ್ದದಿಂದ ಸ್ಪಷ್ಟವಾಗಿ ತೋರುತ್ತಿರಲು ಅದನ್ನು ಟೀಕಾದಲ್ಲಿ ಏಕೆ ಹೇಳಿಲ್ಲ. 'ಅತ ಏವ' ಎಂದರೆ ಅನೇಕ ದೋಷ ಬರುವ ಸಂಭವ ಇರುವುದರಿಂದಲೇ ಎಂದರ್ಥ. 'ಪೂರ್ವತ್ರ' ಶಬ್ದಕ್ಕೆ ಆಕಾಶಕ್ಕೆ ದ್ವಿತ್ವವನ್ನು ಒಪ್ಪಿದ ಪಕ್ಷದಲ್ಲಿ ಎಂದರ್ಥ.

### ಆಕಾಶಕ್ಕೆ ಉತ್ಪತ್ತಿ ಇದೆಯೇ ?

## तात्पर्यचन्द्रिका

**न्यायविवरणेऽनुत्पत्तिवचनानामव्याकृताकाशविषयत्वोक्तिस्तु तस्य भूताकाश स्येवाभूत्वाभवनरूपोत्पत्तिर्नास्तीत्यभिप्राया ।**

ನ್ಯಾಯವಿವರಣದಲ್ಲಿ ಅನುತ್ಪತ್ತಿಯನ್ನು ಹೇಳುವ (ಆಕಾಶಕ್ಕೆ) ಶ್ರುತಿವಾಕ್ಯಗಳು ಅವ್ಯಾಕೃತ ಆಕಾಶವನ್ನು ಕುರಿತಾದದ್ದು ಎಂದು ಹೇಳಿರುವುದು, ಅವ್ಯಾಕೃತ ಆಕಾಶಕ್ಕೆ ಭೂತಾಕಾಶಕ್ಕೆ ಇರುವಂತೆ ಅಭೂತ್ವಾಭವನ ಎಂಬ ಉತ್ಪತ್ತಿ ಇಲ್ಲ ಎಂಬ ಅಭಿಪ್ರಾಯದಿಂದ.

**अत्र यद्यप्यव्याकृताकाशस्य तदभिमानिचित्प्रकृतेश्च ''स इदं सर्वमसृजत'' इत्यादिश्रुत्युक्तोत्पत्तिः पराधीनविशेषावाप्तिरूपा । भूताकाशस्य तु ''आकाशः सम्भूतः'' इति श्रुत्युक्ताऽभूत्वाभवनरूपा । एवं चाव्याकृताकाशादेर्ब्रह्मवच्चतुर्विध-नाशराहित्यरूपस्य ''स्वयं नित्यः परात्परः'' इत्युत्तराधिकरणभाष्योदाहृतस्मृत्यादि-सिद्धस्य परात्परनित्यत्वरूपस्य मुख्यनित्यत्वस्यासम्भवादनादित्वश्रुतिः स्वरूपानादित्वमात्रेण गौणी । भूताकाशादेस्तु स्वरूपानादित्वस्याप्यसम्भवात्सूक्ष्म-रूपनित्यत्वादिमात्रेण गौणी । ''भूतेन्द्रियप्राणगुणसूक्ष्मरूपं तु नित्यकम्'' इत्यादिवचनादित्येवं गौणीति सूत्रार्थः । अत एव ''शब्दाच्च'' इति सूत्रे भाष्योदाहृता ''भागशो ह्युत्पद्यन्ते'' इति श्रुतिरपि भूताकाशस्य सूक्ष्मरूपेण नित्यत्वमुपचितरूपेण तु सादित्वमित्यभिप्राया सती प्रकृतोपयोगिनीत्येवमुत्पत्त्यनुत्पत्तिश्रुत्योर्व्यवस्था वक्तुं शक्या ।**

ಪ್ರಶ್ನೆ - (ಇನ್ನೊಂದು ರೀತಿಯಿಂದ ಉತ್ಪತ್ತಿ ಅನುತ್ಪತ್ತಿ ಶ್ರುತಿಗಳಿಗೆ ವ್ಯವಸ್ಥೆ ಹೇಳಬಹುದು. ಹೇಗೆಂದರೆ ಅವ್ಯಾಕೃತ ಆಕಾಶಕ್ಕೆ ಹಾಗೂ ಅದಕ್ಕೆ ಅಭಿಮಾನಿಯಾದ ಚಿತ್‌ಪ್ರಕೃತಿಗೆ 'ಸ ಇದಂ ಸರ್ವಮಸೃಜತ' ಎಂಬ ಶ್ರುತಿಯಲ್ಲಿ ಹೇಳಿರುವ ಉತ್ಪತ್ತಿ ಪರಾಧೀನವಿಶೇಷಾವಾಪ್ತಿರೂಪವಾದದ್ದು. ಆದರೆ ಭೂತಾಕಾಶಕ್ಕೆ 'ಆಕಾಶಃ ಸಂಭೂತಃ' ಎಂಬ ಶ್ರುತಿಯಲ್ಲಿ ಹೇಳಿರುವ ಉತ್ಪತ್ತಿ ಅಭೂತ್ವಾಭವನ ರೂಪವಾದದ್ದು. ಹಾಗಾಗಿ ಅವ್ಯಾಕೃತ ಆಕಾಶ ಹಾಗೂ ತದಭಿಮಾನಿ, ಇದಕ್ಕೆ ಪರಬ್ರಹ್ಮನಿಗೆ ಇರುವಂತೆ

ಚತುರ್ವಿಧನಾಶರಾಹಿತ್ಯ ಎಂಬ ಮುಖ್ಯ ಅನಾದಿತ್ವ ಬರಲು ಸಾಧ್ಯವಿಲ್ಲ. (ಪರಾಧೀನತೆ ಎಂಬ ಉತ್ಪತ್ತಿ ಇರುವುದರಿಂದ) ಆದ್ದರಿಂದ ಇವುಗಳಿಗೆ ಅನಾದಿತ್ವವನ್ನು ಹೇಳುವ ಶ್ರುತಿಗಳಿಗೆ ಗೌಣಾರ್ಥವನ್ನು ಹೇಳಬೇಕು. ಅನಾದಿತ್ವ ಎಂದರೆ ಸ್ವರೂಪತಃ ಅನಾದಿ ಎಂದರ್ಥ. ಇನ್ನು ಭೂತಾಕಾಶವೂ ಅನಾದಿತ್ವ ಶ್ರುತಿಗೆ ವಿಷಯವಾಗುತ್ತದೆ. ಭೂತಾಕಾಶಕ್ಕೆ ಸ್ವರೂಪತಃ ಕೂಡ ಅನಾದಿತ್ವ ಇಲ್ಲ. ಆದರೆ ಸೂಕ್ಷ್ಮರೂಪದಿಂದ ಅನಾದಿತ್ವ ಉಂಟು. ಇಂತಹ ಅನಾದಿತ್ವವೇ ಈ ಶ್ರುತಿಯ ವಿಷಯ. ಹೀಗೆ ಭೂತಾಕಾಶಕ್ಕೂ ಸೂಕ್ಷ್ಮರೂಪೇಣ ಅನಾದಿತ್ವವನ್ನು ಹೇಳಿದಾಗಲೇ ಮುಂದೆ 'ಭಾಗಶೋ ಹ್ಯುತ್ಪದ್ಯಂತೇ' ಎಂಬ ಶ್ರುತಿಯು ಭೂತಾಕಾಶಕ್ಕೆ ಸೂಕ್ಷ್ಮರೂಪದಿಂದ ಅನಾದಿತ್ವವನ್ನು ಹಾಗೂ ಉಪಚಿತ ರೂಪದಿಂದ ಸಾದಿತ್ವವನ್ನು ಹೇಳುತ್ತಿದೆ ಎಂದು ಇಟ್ಟುಕೊಂಡಾಗ ಅದು ಪ್ರಕೃತಕ್ಕೆ ಉಪಯೋಗವಾಗುತ್ತದೆ. (ಅನುತ್ಪತ್ತಿ ಶ್ರುತಿಗೆ ವಿಷಯವಾದದ್ದು ಅವ್ಯಾಕೃತ ಆಕಾಶ ಹಾಗೂ ತದಭಿಮಾನಿ ಸ್ವರೂಪದಿಂದ ಅನಾದಿ. ಭೂತಾಕಾಶ ತದಭಿಮಾನಿದೇಹ. ಸೂಕ್ಷ್ಮರೂಪದಿಂದ ಅನಾದಿಯಾದ್ದರಿಂದ ಈ ಶ್ರುತಿಗೆ ವಿಷಯ. ಹೀಗೆ ಅನಾದಿತ್ವಶ್ರುತಿ ಗೌಣ. ಮುಖ್ಯ ಅನಾದಿ ಪರಬ್ರಹ್ಮ ಮಾತ್ರ. ಉತ್ಪತ್ತಿಶ್ರುತಿ ಮುಖ್ಯವಾಗಿ ಭೂತಾಕಾಶಕ್ಕೆ ತದಭಿಮಾನಿ ದೇವತೆಯ ದೃಷ್ಟಿಯಿಂದ ಪರಾಧೀನ- ವಿಶೇಷ-ಅವಾಪ್ತಿ ಎಂಬ ಉತ್ಪತ್ತಿ)

**तथापि सोत्तरसूत्रेऽतिस्पष्टेत्युपेक्ष्य सर्वविषयत्वासर्वविषयत्वाभ्यां तामाह – सर्वविषयत्वादुत्पत्तिश्रुतिर्मुख्यार्थेत्यादिना ।।**

ನಿಜ, ಆದರೂ ಈ ವ್ಯವಸ್ಥೆಯು ಮುಂದಿನ ಸೂತ್ರದಲ್ಲಿ ಸ್ಪಷ್ಟವಾಗಿದೆ. ಹಾಗಾಗಿ ಅದನ್ನು ನಿರ್ಲಕ್ಷಿಸಿ ಇಲ್ಲಿ ಸರ್ವವಿಷಯತ್ವ ಅಸರ್ವವಿಷಯತ್ವವನ್ನು ಇಟ್ಟುಕೊಂಡು ವ್ಯವಸ್ಥೆಯನ್ನು ಟೀಕಾದಲ್ಲಿ ಹೇಳಿದ್ದಾರೆ. (ಉತ್ಪತ್ತಿಶ್ರುತಿಗೆ ಎಲ್ಲವೂ ವಿಷಯವಾದ್ದರಿಂದ ಅದು ಮುಖ್ಯ. ಅನುಪತ್ಪತ್ತಿಶ್ರುತಿಗೆ ಹಾಗಲ್ಲವಾದ್ದರಿಂದ ಅದು ಅಮುಖ್ಯ)

**पराधीनविशेषावाप्तिरूपोत्पत्तिर्हि भूतावकाशतद्देवतारूपचतुष्टयेऽप्यस्ति ।**

(ಸರ್ವವಿಷಯತ್ವವನ್ನು ವಿವರಿಸುತ್ತಿದ್ದಾರೆ) ಉತ್ಪತ್ತಿ ಎಂದರೆ ಪರಾಧೀನವಿಶೇಷವಾಪ್ತಿ ಎಂದಿಟ್ಟುಕೊಂಡರೆ ಆಗ ಭೂತಾಕಾಶ, ಅವ್ಯಾಕೃತ, ಭೂತಾಕಾಶದೇವತಾ, ಅವ್ಯಾಕೃತಾಕಾಶದೇವತಾ, ಇದೆಲ್ಲಕ್ಕೂ ಇದೆ. ಹಾಗಾಗಿ ಉತ್ಪತ್ತಿಶ್ರುತಿ ಸರ್ವವಿಷಯ.

**अनुत्पत्तिस्तूक्तोत्पत्त्यभावरूपा चेन्न काप्यब्रह्मणि । स्वरूपानादित्वरूपा त्ववकाशादावस्ति । नतु भूते ।**

ಆದರೆ ಅನುತ್ಪತ್ತಿಯನ್ನು ಚತುರ್ವಿಧನಾಶರಾಹಿತ್ಯ ಎಂದಿಟ್ಟುಕೊಂಡರೆ ಆಗ ಅದು ಬ್ರಹ್ಮನನ್ನು ಬಿಟ್ಟು ಬೇರೆ ಎಲ್ಲೂ ಇಲ್ಲ. ಸ್ವರೂಪದಿಂದ ಅನಾದಿ ಎಂದರ್ಥ ಹೇಳಿದರೆ ಆಗ ಅವ್ಯಾಕೃತ ಆಕಾಶ ಮತ್ತು ತದಭಿಮಾನಿಯಲ್ಲಿ ಬರುತ್ತದೆ, ಆದರೆ ಭೂತಾಕಾಶದಲ್ಲಿ ಬರುವುದಿಲ್ಲ.

**तथा च भूतेऽनुत्पत्तिश्रुतिः छत्रिवल्लाक्षणिकी वा चिरन्तनत्वमात्रेण गौणी वा स्यात् ।**

ಹಾಗಾಗಿ ಅನುತ್ಪತ್ತಿ ಶ್ರುತಿಯು ಭೂತಾಕಾಶವಿಷಯದಲ್ಲಿ ಗೌಣವಾಗುತ್ತದೆ. ಅಂದರೆ ಲಕ್ಷಣಾವೃತ್ತಿಯನ್ನು ಆಶ್ರಯಿಸಬೇಕು ಎಂದರ್ಥ. ಈ ಲಕ್ಷಣಾ ಯಾವ ಬಗೆಯದು ಎಂದರೆ ಅದಕ್ಕೆ 'ಛತ್ರಿವತ್' ಎಂದಿದ್ದಾರೆ. ಅಂದರೆ ಜಹದಲ್ಲಕ್ಷಣಾ ಎಂದರ್ಥ. ಛತ್ರಿಗಳು ಪ್ರವೇಶಿಸಲಿ ಎಂದರೆ ಛತ್ರಿ ಹಿಡಿದವರು ಪ್ರವೇಶಿಸಲಿ ಎಂದರ್ಥ. ಹಾಗೇ ಆಕಾಶ(ಭೂತ)ಅನಾದಿ ಎಂದರೆ ಸೂಕ್ಷ್ಮರೂಪವು ಅನಾದಿ ಎಂದರ್ಥ ಅಥವಾ ಬಹಳಕಾಲ ಇರುವುದರಿಂದ ಅನಾದಿ ಎಂದು ವ್ಯವಹಾರ (ಹೇಗೆ ಚಿರಂಜೀವಿ ಎಂಬ ವ್ಯವಹಾರ ಇದೆಯೋ ಹಾಗೆ)

**उक्तचतुष्टयार्थक आकाशशब्दो वा भूतेतरस्मिन्न मुख्यः स्यादिति भावः ।**

ಹೀಗೆ ಆಕಾಶಶಬ್ದಕ್ಕೆ ನಾಲ್ಕು ಅರ್ಥಗಳನ್ನು ಹೇಳಿದ್ದೇವೆ. ಅವ್ಯಾಕೃತಾಕಾಶ, ತದಭಿಮಾನಿ, ಭೂತಾಕಾಶ, ತದಭಿಮಾನಿ ಇದ್ದಲ್ಲಿ ಆಕಾಶಶಬ್ದಕ್ಕೆ ಭೂತಾಕಾಶವೇ ಮುಖ್ಯಾರ್ಥ. ಬೇರೆಯದಲ್ಲ.

**तत्प्रकारश्चाकाशस्योक्त इति ।। चतुष्टयात्मक आकाशश्चतुर्भिरपि भागैरुत्पद्यते । उक्ताया उत्पत्तेश्चतुर्ष्वपि सत्त्वादिति सर्वविषयत्वादुत्पत्तिश्रुतिर्मुख्येत्यत्रोक्तमित्यर्थः ।।**

'ತತ್ಪ್ರಕಾರಶ್ಚಾಕಾಶಸ್ಯೋಕ್ತಃ' ಎಂಬ ಟೀಕಾವಾಕ್ಯಕ್ಕೆ ಹೀಗೆ ಅರ್ಥ - ಆಕಾಶವು ನಾಕು ಎಂದು ಹೇಳಿದ್ದೇವೆ. ಅವ್ಯಾಕೃತ ಆಕಾಶ, ತದಭಿಮಾನಿ, ಭೂತಾಕಾಶ ಹಾಗೂ ತದಭಿಮಾನಿ ಎಂಬುದಾಗಿ. ಈ ನಾಕೂ ಆಕಾಶಕ್ಕೆ ಉತ್ಪತ್ತಿ ಇದೆ. ಹಿಂದೆ ಹೇಳಿದ ಪರಾಧೀನವಿಶೇಷಾವಾಪ್ತಿ ಎಂಬ ಉತ್ಪತ್ತಿ ನಾಕರಲ್ಲೂ ಇದೆ. ಹಾಗಾಗಿ ಉತ್ಪತ್ತಿಶ್ರುತಿಯು ಸರ್ವವಿಷಯವಾದ್ದರಿಂದ ಅದು ಮುಖ್ಯ ಎಂಬಲ್ಲಿ ಈ ವಿಷಯ ಹೇಳಲಾಗಿದೆ ಎಂದರ್ಥ.

**प्राणस्योपरि वक्ष्यत इति ।। भूततन्मुख्यामुख्याभिमानिरूपत्रितयात्मको वायुस्त्रिभिरपि भागैरुत्पद्यत इत्युत्तराधिकरणे वक्ष्यत इत्यर्थः ।।**

'ಪ್ರಾಣಸ್ಯೋಪರಿ ವಕ್ಷ್ಯತೇ' ಎಂಬುದು ಟೀಕಾವಾಕ್ಯ. ಪ್ರಾಣನಿಗೆ ಉತ್ಪತ್ತಿ ಅನುತ್ಪತ್ತಿ ಹೇಗೆ ಎಂಬುದನ್ನು ಮುಂದೆ ಹೇಳುತ್ತೇವೆ ಎಂದರ್ಥ. ಪ್ರಾಣ ಮೂರುವಿಧ, ಮುಖ್ಯಪ್ರಾಣ, ಭೂತವಾಯು, ಅದರ ಅಭಿಮಾನಿ ಎಂಬುದಾಗಿ. ಈ ವಾಯುವೂ ಮೂರು ಭಾಗಗಳಿಂದ ಉತ್ಪತ್ತಿ ಹೊಂದುತ್ತಾನೆ. ಇದನ್ನು ಮುಂದಿನ ಅಧಿಕರಣದಲ್ಲಿ ಹೇಳಲಾಗುವುದು.

(ಮುಖ್ಯಪ್ರಾಣನಿಗೆ ಸ್ವರೂಪೋತ್ಪತ್ತಿ ಇಲ್ಲ. ಹಾಗೆಯೇ ಭೂತವಾಯುವಿನ ಅಭಿಮಾನಿಯಾದ ಪ್ರವಹನಿಗೂ ಇಲ್ಲ.ಆದರೆ ಇಬ್ಬರಿಗೂ ಪರಾಧೀನವಿಶೇಷಾವಾಪ್ತಿ ಇದ್ದೇ ಇದೆ. ಭೂತವಾಯುವಿಗೆ ಸ್ವರೂಪದಿಂದಲೇ ಉತ್ಪತ್ತಿ ಇದೆ)

**अनुत्पत्तिमच्छब्दस्य मुख्यार्थत्वदर्शनादिति ।। यद्यप्येक एव शब्दः प्रयोगभेदेन प्रवृत्तिनिमित्तवति मुख्योऽन्यत्रामुख्यश्च दृष्टः ।**

ಚತುರ್ವಿಧನಾಶರಾಹಿತ್ಯ ಎಂಬ ಮುಖ್ಯ ಅನಾದಿತ್ವ ಬರಲು ಸಾಧ್ಯವಿಲ್ಲ. (ಪರಾಧೀನತೆ ಎಂಬ ಉತ್ಪತ್ತಿ ಇರುವುದರಿಂದ) ಆದ್ದರಿಂದ ಇವುಗಳಿಗೆ ಅನಾದಿತ್ವವನ್ನು ಹೇಳುವ ಶ್ರುತಿಗಳಿಗೆ ಗೌಣಾರ್ಥವನ್ನು ಹೇಳಬೇಕು. ಅನಾದಿತ್ವ ಎಂದರೆ ಸ್ವರೂಪತಃ ಅನಾದಿ ಎಂದರ್ಥ. ಇನ್ನು ಭೂತಾಕಾಶವೂ ಅನಾದಿತ್ವ ಶ್ರುತಿಗೆ ವಿಷಯವಾಗುತ್ತದೆ. ಭೂತಾಕಾಶಕ್ಕೆ ಸ್ವರೂಪತಃ ಕೂಡ ಅನಾದಿತ್ವ ಇಲ್ಲ. ಆದರೆ ಸೂಕ್ಷ್ಮರೂಪದಿಂದ ಅನಾದಿತ್ವ ಉಂಟು. ಇಂತಹ ಅನಾದಿತ್ವವೇ ಈ ಶ್ರುತಿಯ ವಿಷಯ. ಹೀಗೆ ಭೂತಾಕಾಶಕ್ಕೂ ಸೂಕ್ಷ್ಮರೂಪೇಣ ಅನಾದಿತ್ವವನ್ನು ಹೇಳಿದಾಗಲೇ ಮುಂದೆ 'ಭಾಗಶೋ ಹ್ಯುತ್ಪದ್ಯಂತೇ' ಎಂಬ ಶ್ರುತಿಯು ಭೂತಾಕಾಶಕ್ಕೆ ಸೂಕ್ಷ್ಮರೂಪದಿಂದ ಅನಾದಿತ್ವವನ್ನು ಹಾಗೂ ಉಪಚಿತ ರೂಪದಿಂದ ಸಾದಿತ್ವವನ್ನು ಹೇಳುತ್ತಿದೆ ಎಂದು ಇಟ್ಟುಕೊಂಡಾಗ ಅದು ಪ್ರಕೃತಕ್ಕೆ ಉಪಯೋಗವಾಗುತ್ತದೆ. (ಅನುತ್ಪತ್ತಿ ಶ್ರುತಿಗೆ ವಿಷಯವಾದದ್ದು ಅವ್ಯಾಕೃತ ಆಕಾಶ ಹಾಗೂ ತದಭಿಮಾನಿ ಸ್ವರೂಪದಿಂದ ಅನಾದಿ. ಭೂತಾಕಾಶ ತದಭಿಮಾನಿದೇಹ. ಸೂಕ್ಷ್ಮರೂಪದಿಂದ ಅನಾದಿಯಾದ್ದರಿಂದ ಈ ಶ್ರುತಿಗೆ ವಿಷಯ. ಹೀಗೆ ಅನಾದಿತ್ವಶ್ರುತಿ ಗೌಣ. ಮುಖ್ಯ ಅನಾದಿ ಪರಬ್ರಹ್ಮ ಮಾತ್ರ. ಉತ್ಪತ್ತಿಶ್ರುತಿ ಮುಖ್ಯವಾಗಿ ಭೂತಾಕಾಶಕ್ಕೆ ತದಭಿಮಾನಿ ದೇವತೆಯ ದೃಷ್ಟಿಯಿಂದ ಪರಾಧೀನ- ವಿಶೇಷ-ಅವಾಪ್ತಿ ಎಂಬ ಉತ್ಪತ್ತಿ)

**तथापि सोत्तरसूत्रेऽतिस्पष्टेत्युपेक्ष्य सर्वविषयत्वासर्वविषयत्वाभ्यां तामाह – सर्वविषयत्वादुत्पत्तिश्रुतिर्मुख्यार्थेत्यादिना ।।**

ನಿಜ, ಆದರೂ ಈ ವ್ಯವಸ್ಥೆಯು ಮುಂದಿನ ಸೂತ್ರದಲ್ಲಿ ಸ್ಪಷ್ಟವಾಗಿದೆ. ಹಾಗಾಗಿ ಅದನ್ನು ನಿರ್ಲಕ್ಷಿಸಿ ಇಲ್ಲಿ ಸರ್ವವಿಷಯತ್ವ ಅಸರ್ವವಿಷಯತ್ವವನ್ನು ಇಟ್ಟುಕೊಂಡು ವ್ಯವಸ್ಥೆಯನ್ನು ಟೀಕಾದಲ್ಲಿ ಹೇಳಿದ್ದಾರೆ. (ಉತ್ಪತ್ತಿಶ್ರುತಿಗೆ ಎಲ್ಲವೂ ವಿಷಯವಾದ್ದರಿಂದ ಅದು ಮುಖ್ಯ. ಅನುಪತ್ಪತ್ತಿಶ್ರುತಿಗೆ ಹಾಗಲ್ಲವಾದ್ದರಿಂದ ಅದು ಅಮುಖ್ಯ)

**पराधीनविशेषावाप्तिरूपोत्पत्तिर्हि भूतावकाशतद्देवतारूपचतुष्टयेऽप्यस्ति ।**

(ಸರ್ವವಿಷಯತ್ವವನ್ನು ವಿವರಿಸುತ್ತಿದ್ದಾರೆ) ಉತ್ಪತ್ತಿ ಎಂದರೆ ಪರಾಧೀನವಿಶೇಷವಾಪ್ತಿ ಎಂದಿಟ್ಟುಕೊಂಡರೆ ಆಗ ಭೂತಾಕಾಶ, ಅವ್ಯಾಕೃತ, ಭೂತಾಕಾಶದೇವತಾ, ಅವ್ಯಾಕೃತಾಕಾಶದೇವತಾ, ಇದೆಲ್ಲಕ್ಕೂ ಇದೆ. ಹಾಗಾಗಿ ಉತ್ಪತ್ತಿಶ್ರುತಿ ಸರ್ವವಿಷಯ.

**अनुत्पत्तिस्तूक्तोत्पत्त्यभावरूपा चेन्न काप्यब्रह्मणि । स्वरूपानादित्वरूपा त्ववकाशादावस्ति । नतु भूते ।**

ಆದರೆ ಅನುತ್ಪತ್ತಿಯನ್ನು ಚತುರ್ವಿಧನಾಶರಾಹಿತ್ಯ ಎಂದಿಟ್ಟುಕೊಂಡರೆ ಆಗ ಅದು ಬ್ರಹ್ಮನನ್ನು ಬಿಟ್ಟು ಬೇರೆ ಎಲ್ಲೂ ಇಲ್ಲ. ಸ್ವರೂಪದಿಂದ ಅನಾದಿ ಎಂದರ್ಥ ಹೇಳಿದರೆ ಆಗ ಅವ್ಯಾಕೃತ ಆಕಾಶ ಮತ್ತು ತದಭಿಮಾನಿಯಲ್ಲಿ ಬರುತ್ತದೆ, ಆದರೆ ಭೂತಾಕಾಶದಲ್ಲಿ ಬರುವುದಿಲ್ಲ.

**तथा च भूतेऽनुत्पत्तिश्रुतिः छत्रिवल्लाक्षणिकी वा चिरन्तनत्वमात्रेण गौणी वा स्यात् ।**

ಹಾಗಾಗಿ ಅನುತ್ಪತ್ತಿ ಶ್ರುತಿಯು ಭೂತಾಕಾಶವಿಷಯದಲ್ಲಿ ಗೌಣವಾಗುತ್ತದೆ. ಅಂದರೆ ಲಕ್ಷಣಾವೃತ್ತಿಯನ್ನು ಆಶ್ರಯಿಸಬೇಕು ಎಂದರ್ಥ. ಈ ಲಕ್ಷಣಾ ಯಾವ ಬಗೆಯದು ಎಂದರೆ ಅದಕ್ಕೆ 'ಛತ್ರಿವತ್' ಎಂದಿದ್ದಾರೆ. ಅಂದರೆ ಜಹದಲ್ಲಕ್ಷಣಾ ಎಂದರ್ಥ. ಛತ್ರಿಗಳು ಪ್ರವೇಶಿಸಲಿ ಎಂದರೆ ಛತ್ರಿ ಹಿಡಿದವರು ಪ್ರವೇಶಿಸಲಿ ಎಂದರ್ಥ. ಹಾಗೇ ಆಕಾಶ(ಭೂತ)ಅನಾದಿ ಎಂದರೆ ಸೂಕ್ಷ್ಮರೂಪವು ಅನಾದಿ ಎಂದರ್ಥ ಅಥವಾ ಬಹಳಕಾಲ ಇರುವುದರಿಂದ ಅನಾದಿ ಎಂದು ವ್ಯವಹಾರ (ಹೇಗೆ ಚಿರಂಜೀವಿ ಎಂಬ ವ್ಯವಹಾರ ಇದೆಯೋ ಹಾಗೆ)

**उक्तचतुष्टयार्थक आकाशशब्दो वा भूतेतरस्मिन्न मुख्यः स्यादिति भावः ।**

ಹೀಗೆ ಆಕಾಶಶಬ್ದಕ್ಕೆ ನಾಲ್ಕು ಅರ್ಥಗಳನ್ನು ಹೇಳಿದ್ದೇವೆ. ಅವ್ಯಾಕೃತಾಕಾಶ, ತದಭಿಮಾನಿ, ಭೂತಾಕಾಶ, ತದಭಿಮಾನಿ ಇದ್ದಲ್ಲಿ ಆಕಾಶಶಬ್ದಕ್ಕೆ ಭೂತಾಕಾಶವೇ ಮುಖ್ಯಾರ್ಥ. ಬೇರೆಯದಲ್ಲ.

**तत्प्रकारश्चाकाशस्योक्त इति ।। चतुष्टयात्मक आकाशश्चतुर्भिरपि भागैरुत्पद्यते । उक्ताया उत्पत्तेश्चतुर्ष्वपि सत्त्वादिति सर्वविषयत्वादुत्पत्तिश्रुतिर्मुख्येत्यत्रोक्तमित्यर्थः ।।**

'ತತ್ಪ್ರಕಾರಶ್ಚಾಕಾಶಸ್ಯೋಕ್ತಃ' ಎಂಬ ಟೀಕಾವಾಕ್ಯಕ್ಕೆ ಹೀಗೆ ಅರ್ಥ - ಆಕಾಶವು ನಾಕು ಎಂದು ಹೇಳಿದ್ದೇವೆ. ಅವ್ಯಾಕೃತ ಆಕಾಶ, ತದಭಿಮಾನಿ, ಭೂತಾಕಾಶ ಹಾಗೂ ತದಭಿಮಾನಿ ಎಂಬುದಾಗಿ. ಈ ನಾಕೂ ಆಕಾಶಕ್ಕೆ ಉತ್ಪತ್ತಿ ಇದೆ. ಹಿಂದೆ ಹೇಳಿದ ಪರಾಧೀನವಿಶೇಷಾವಾಪ್ತಿ ಎಂಬ ಉತ್ಪತ್ತಿ ನಾಕರಲ್ಲೂ ಇದೆ. ಹಾಗಾಗಿ ಉತ್ಪತ್ತಿಶ್ರುತಿಯು ಸರ್ವವಿಷಯವಾದ್ದರಿಂದ ಅದು ಮುಖ್ಯ ಎಂಬಲ್ಲಿ ಈ ವಿಷಯ ಹೇಳಲಾಗಿದೆ ಎಂದರ್ಥ.

**प्राणस्योपरि वक्ष्यत इति ।। भूततन्मुख्यामुख्याभिमानिरूपत्रितयात्मको वायुस्त्रिभिरपि भागैरुत्पद्यत इत्युत्तराधिकरणे वक्ष्यत इत्यर्थः ।।**

'ಪ್ರಾಣಸ್ಯೋಪರಿ ವಕ್ಷ್ಯತೇ' ಎಂಬುದು ಟೀಕಾವಾಕ್ಯ. ಪ್ರಾಣನಿಗೆ ಉತ್ಪತ್ತಿ ಅನುತ್ಪತ್ತಿ ಹೇಗೆ ಎಂಬುದನ್ನು ಮುಂದೆ ಹೇಳುತ್ತೇವೆ ಎಂದರ್ಥ. ಪ್ರಾಣ ಮೂರುವಿಧ, ಮುಖ್ಯಪ್ರಾಣ, ಭೂತವಾಯು, ಅದರ ಅಭಿಮಾನಿ ಎಂಬುದಾಗಿ. ಈ ವಾಯುವೂ ಮೂರು ಭಾಗಗಳಿಂದ ಉತ್ಪತ್ತಿ ಹೊಂದುತ್ತಾನೆ. ಇದನ್ನು ಮುಂದಿನ ಅಧಿಕರಣದಲ್ಲಿ ಹೇಳಲಾಗುವುದು.

(ಮುಖ್ಯಪ್ರಾಣನಿಗೆ ಸ್ವರೂಪೋತ್ಪತ್ತಿ ಇಲ್ಲ. ಹಾಗೆಯೇ ಭೂತವಾಯುವಿನ ಅಭಿಮಾನಿಯಾದ ಪ್ರವಹನಿಗೂ ಇಲ್ಲ.ಆದರೆ ಇಬ್ಬರಿಗೂ ಪರಾಧೀನವಿಶೇಷಾವಾಪ್ತಿ ಇದ್ದೇ ಇದೆ. ಭೂತವಾಯುವಿಗೆ ಸ್ವರೂಪದಿಂದಲೇ ಉತ್ಪತ್ತಿ ಇದೆ)

**अनुत्पत्तिमच्छब्दस्य मुख्यार्थत्वदर्शनादिति ।। यद्यप्येक एव शब्दः प्रयोगभेदेन प्रवृत्तिनिमित्तवति मुख्योऽन्यत्रामुख्यश्च दृष्टः ।**

'ಸ್ಯಾಚ್ಚೈಕಸ್ಯ ಬ್ರಹ್ಮಶಬ್ದವತ್' ಎಂಬ ಸೂತ್ರಭಾಷ್ಯಟೀಕಾದಲ್ಲಿ ಅವತಾರಿಕೆ ಕೊಡುವಾಗ ಒಂದು ಶಂಕಾ ಮಾಡಿದ್ದಾರೆ. ಅದರ ಮೇಲೆ ಪ್ರಶ್ನೆ ಹಾಗೂ ಪರಿಹಾರ, ಟೀಕಾದಲ್ಲಿ ಮಾಡಿರುವ ಶಂಕೆ ಹೇಗೆ ಸರಿ ಎಂಬುದು. 'ನ ಜಾಯತೇ..' ಎಂಬಲ್ಲಿ ಅನುತ್ಪತ್ತಿಮತ್ ಶಬ್ದ ಮುಖ್ಯಾರ್ಥವಾದ್ದರಿಂದ ಎಲ್ಲ ಕಡೆಯೂ ಮುಖ್ಯಾರ್ಥವೇ ಆಗಬೇಕು ಎಂದು ಶಂಕೆ. ಆದರೆ ಇದು ಅನುಭವವಿರುದ್ಧ ಎಂಬುದು ಪ್ರಶ್ನೆ

ಒಂದೇ ಶಬ್ದ ಅದು ಪ್ರಯೋಗಭೇದದಿಂದ ಮುಖ್ಯಾರ್ಥ ಅಮುಖ್ಯಾರ್ಥ ಆಗಬಹುದು. ಎಲ್ಲಿ ಪ್ರವೃತ್ತಿನಿಮಿತ್ತ ಇದೆಯೋ ಅಲ್ಲಿ ಮುಖ್ಯ, ಬೇರೆ ಕಡೆ ಅಮುಖ್ಯ. ಹೇಗೆಂದರೆ 'ಗಂಗಾಯಾಂ ಮೀನಃ' ಎಂಬಲ್ಲಿ ಗಂಗಾಶಬ್ದಕ್ಕೆ ಮುಖ್ಯಾರ್ಥ 'ಗಂಗಾಯಾ ಘೋಷಃ' ಎಂಬಲ್ಲಿ ಅಮುಖ್ಯಾರ್ಥ.

**तथापीह शब्दैकगम्ये शब्दादेव प्रवृत्तिनिमित्तस्यापि कल्प्यत्वादनेकार्थत्व-स्यान्याय्यत्वाच्च ब्रह्मणि नित्यशब्दप्रवृत्तौ यन्निमित्तं तदेवान्यत्रापि वक्तव्यमिति वा ''आकाशवत्सर्वगतश्च नित्य'' इत्यादौ सकृत्प्रयुक्तस्य नित्यशब्दस्य ब्रह्मतदन्ययोर्मुख्यत्वामुख्यत्वेन युक्ते इति वा शङ्काभिप्रायः ।**

ಉತ್ತರ - ನಿಜ, ಆದರೂ ಇಲ್ಲಿ ಪ್ರಸ್ತುತವಾದ ಅನಾದಿನಿತ್ಯ ಮೊದಲಾದ ಪ್ರಮೇಯವು ಶಬ್ದದಿಂದ ಮಾತ್ರ ವೇದ್ಯವಾದವು. ಪ್ರತ್ಯಕ್ಷಕ್ಕೆ ಗೋಚರವಾಗುವುದಿಲ್ಲ. ಅಂತಹ ಕಡೆಗಳಲ್ಲಿ ಆ ಶಬ್ದದ ಪ್ರವೃತ್ತಿನಿಮಿತ್ತ (ಧರ್ಮ)ವೂ ಶಬ್ದದಿಂದ ಮಾತ್ರ ವೇದ್ಯ. ಹಾಗಿರುವಾಗ ಇಂತಹ ಶಬ್ದವು ಒಂದು ಕಡೆ ಮುಖ್ಯ ಮತ್ತೊಂದು ಕಡೆ ಅಮುಖ್ಯ ಎಂದು ಹೇಳಬಾರದು. ಕಾರಣವಿಲ್ಲದೆ ಒಂದು ಶಬ್ದಕ್ಕೆ ಅನೇಕಾರ್ಥ ಹೇಳಬಾರದು. ಬ್ರಹ್ಮನಲ್ಲಿ ನಿತ್ಯಶಬ್ದವು ಪ್ರಯುಕ್ತವಾದಾಗ ಯಾವ ಪ್ರವೃತ್ತಿನಿಮಿತ್ತವನ್ನು ಹೇಳುತ್ತೀರೋ ಅದೇ ಪ್ರವೃತ್ತಿನಿಮಿತ್ತವನ್ನೇ ಆಕಾಶದಲ್ಲಿ ಪ್ರಯುಕ್ತವಾದಾಗಲೂ ಹೇಳಬೇಕು.

'ಆಕಾಶವತ್ ಸರ್ವಗತಶ್ಚ ನಿತ್ಯಃ' ಎಂಬಲ್ಲಿ ಆಕಾಶ ಹಾಗೂ ಬ್ರಹ್ಮನಲ್ಲಿ ಒಂದೇ ಬಾರಿ ಪ್ರಯುಕ್ತವಾದ ಆಕಾಶಶಬ್ದವು ಬ್ರಹ್ಮನಲ್ಲಿ ಮಾತ್ರ ಮುಖ್ಯ, ಬೇರೆ ಕಡೆ ಅಮುಖ್ಯ ಎಂದು ಹೇಳುವುದು ಸರಿಯಲ್ಲ.

**परिहाराभिप्रायस्तु प्रवृत्तिनिमित्तस्य शब्दैकगम्यत्वेऽपि विरिञ्चिपरब्रह्मणोर्ब्रह्म-शब्दवदाकाशब्रह्मणोरनुत्पत्तिमच्छब्दस्य बाधाबाधाभ्यां व्यवस्था ।**

ಇದಕ್ಕೆ ಪರಿಹಾರವ್ಯವಸ್ಥೆ ಏನೆಂದರೆ, ಪ್ರವೃತ್ತಿನಿಮಿತ್ತ ಎಂಬುದು. ಶಬ್ದದಿಂದ ಮಾತ್ರ ವೇದ್ಯವಾಗಿದ್ದರೂ ಹೇಗೆ ಚತುರ್ಮುಖ ಹಾಗೂ ಪರಬ್ರಹ್ಮ ಇಬ್ಬರಲ್ಲಿ ಪ್ರಯುಕ್ತವಾದ ಬ್ರಹ್ಮ ಶಬ್ದವು ಚತುರ್ಮುಖನಲ್ಲಿ ಅಮುಖ್ಯ, ಬ್ರಹ್ಮನಲ್ಲಿ ಮುಖ್ಯ ಎಂದಾಗುತ್ತದೋ ಹಾಗೇ. ಅನುತ್ಪತ್ತಿಮತ್ ಶಬ್ದವೂ ಕೂಡ ಒಂದು ಕಡೆ ಬಾಧ ಇರುವುದರಿಂದ ಅಮುಖ್ಯ. ಇನ್ನೊಂದು ಕಡೆ ಬಾಧ ಇಲ್ಲದಿರುವುದರಿಂದ ಮುಖ್ಯ.

**अस्ति चात्राब्रह्मणि मुख्यत्वे प्रतिज्ञाहान्यादिकं बाधकम् ।**

ಅಬ್ರಹ್ಮವಾದ ಆಕಾಶದಲ್ಲಿ ಅನುತ್ಪತ್ತಿಯನ್ನು ಹೇಳುವ ಅನಾದಿ ಎಂಬ ಶಬ್ದವು ಮುಖ್ಯ ಎಂದರೆ ಆಗ ಪ್ರತಿಜ್ಞಾಹಾನಿಯೇ ಮೊದಲಾದ ಬಾಧಕ ಬರುತ್ತದೆ. ('ಸ ಇದಂ ಸರ್ವಮಸೃಜತ್' ಎಂಬುದಾಗಿ ಪ್ರತಿಜ್ಞಾ ಮಾಡಲಾಗಿದೆ. ಹಾಗಿರುವಾಗ ಆಕಾಶಕ್ಕೆ ಸರ್ವಾತ್ಮನಾ ಉತ್ಪತ್ತಿ ಇಲ್ಲ ಎಂದರೆ ಆಗ ಪ್ರತಿಜ್ಞಾ ದುಷ್ಟವಾಗುತ್ತದೆ)

**दृश्यते च द्वे ब्रह्मणी इत्यादौ सकृत्प्रयुक्तस्यापि ब्रह्मशब्दस्य जीवेष्वमुख्यतेति।**

ಇನ್ನು ಒಂದೇ ಶಬ್ದ ಒಂದೇ ಸಾರಿ ಪ್ರಯುಕ್ತವಾಗಿದ್ದರೂ ಒಂದು ಕಡೆ ಮುಖ್ಯ ಇನ್ನೊಂದು ಕಡೆ ಅಮುಖ್ಯವಾಗಿರುವುದು 'ದ್ವೇ ಬ್ರಹ್ಮಣೀ' ಎಂಬಲ್ಲಿ ಕಂಡಿದೆ. ಹಾಗಾಗಿ ಹಿಂದೆ ಮಾಡಿದ ಆಕ್ಷೇಪಕ್ಕೆ ಅವಕಾಶವಿಲ್ಲ.

**इह च प्रकरणे सूत्रे पराधीनविशेषावाप्तिरेवोत्पत्तिर्विवक्षिता ।**

ಈ ಪ್ರಕರಣದಲ್ಲಿ ಪರಾಧೀನವಿಶೇಷ-ಅವಾಪ್ತಿರೂಪವಾದ ಉತ್ಪತ್ತಿಯನ್ನೇ ಇಟ್ಟುಕೊಳ್ಳಬೇಕು ಹೊರತು ಅಭೂತ್ವಾಭವನ (ಇಲ್ಲದಿದ್ದದ್ದು ಹುಟ್ಟುವುದು) ಎಂಬ ಉತ್ಪತ್ತಿಯನ್ನಲ್ಲ.

**न त्वभूत्वाभवनम् । तथात्वे मम मते ''ज्ञोत एव'' इत्युत्तरत्र जीवोत्पत्त्युक्तेः तथेह ''प्रतिज्ञा'' इति सूत्रे ''इदं सर्वमसृजत'' इति प्रतिज्ञाहान्युक्तेः परमत एकविज्ञानेन सर्वविज्ञानप्रतिज्ञाहान्युक्तेः तथा ''यावत्'' इति सूत्रे मम मतेऽल्पशक्तित्वस्य परमते भिन्नत्वस्य हेतुत्वोक्तेश्चायोगात् ।**

ಒಂದು ವೇಳೆ ಉತ್ಪತ್ತಿ ಎಂದರೆ ಅಭೂತ್ವಾಭವನ ಎಂದು ಇಟ್ಟುಕೊಂಡರೆ ಆಗ ನಮ್ಮ ಪ್ರಕಾರ ಅದ್ವೈತಿಗಳ ಪ್ರಕಾರವೂ ಅನೇಕ ಅನುಪಪತ್ತಿ ಉಂಟಾಗುತ್ತದೆ. ನಮ್ಮ ಪ್ರಕಾರ ಹೇಳುವುದಾದರೆ 'ಜ್ಞೋತ ಏವ' ಎಂಬ ಸೂತ್ರದಲ್ಲಿ ಜೀವನಿಗೆ ಉತ್ಪತ್ತಿಯನ್ನು ಹೇಳಿದ್ದಾರೆ ಹಾಗೆಯೇ 'ಪ್ರತಿಜ್ಞಾಹಾನ' ಎಂಬ ಸೂತ್ರದಲ್ಲಿ 'ಇದಂ ಸರ್ವಮಸೃಜತ' ಎಂಬ ಪ್ರತಿಜ್ಞಾಭಂಗವಾಗುತ್ತದೆ ಎಂದು ಹೇಳಿದ್ದಾರೆ. ಹಾಗೆಯೇ ಪರರು (ಅದ್ವೈತಿಗಳು) ಒಂದರ ಜ್ಞಾನದಿಂದ ಎಲ್ಲದರ ಜ್ಞಾನ ಎಂಬ ಪ್ರತಿಜ್ಞಾಭಂಗವನ್ನು ಹೇಳಿದ್ದಾರೆ. ಹಾಗೆಯೇ 'ಯಾವದ್ವಿಕಾರಂ' ಎಂಬ ಸೂತ್ರದಲ್ಲಿ ನಮ್ಮ ಪ್ರಕಾರ ವಿಯದಾದಿಗಳಿಗೆ ಅಲ್ಪಶಕ್ತಿತ್ವ ಹಾಗೂ ಪರರ ಪ್ರಕಾರ ಭಿನ್ನತ್ವವು ಹೇಳಲ್ಪಟ್ಟಿದೆ. ಇದೆಲ್ಲವೂ ಕೂಡದೇ ಹೋಗಬೇಕಾದೀತು.

(ಅಭೂತ್ವಾಭವನರೂಪವಾದ ಉತ್ಪತ್ತಿ ಎಂದಿಟ್ಟುಕೊಂಡರೆ ಆಗ ಜೀವನಿಗೆ ಈ ರೀತಿಯಾದ ಉತ್ಪತ್ತಿ ಇಲ್ಲವಾದ್ದರಿಂದ ಜೀವನಿಗೆ ಉತ್ಪತ್ತಿ ಹೇಳಿದ್ದು ತಪ್ಪಾಗುತ್ತದೆ. 'ಇದಂ ಸರ್ವಂ ಅಸೃಜತ' ಎಂಬಲ್ಲಿ ಸರ್ವಶಬ್ದಕ್ಕೆ ಅರ್ಥಸಂಕೋಚ ಮಾಡಬೇಕಾಗುತ್ತದೆ. ಪರರು ಹೇಳುವಂತೆ ಏಕವಿಜ್ಞಾನೇನ ಸರ್ವವಿಜ್ಞಾನ ಎಂಬುದೂ ಕೂಡುವುದಿಲ್ಲ. ಏಕೆಂದರೆ ಬ್ರಹ್ಮ ಎಲ್ಲದಕ್ಕೂ ಉಪಾದಾನನಾದ್ದರಿಂದ ಅವರು ಹಾಗೆ ಹೇಳುತ್ತಾರೆ. ಆದರೆ ಈ ಅಭೂತ್ವಾಭವನರೂಪವಾದ ಉತ್ಪತ್ತಿ ಎಂದಿಟ್ಟುಕೊಂಡರೆ ಇಂತಹ ಉತ್ಪತ್ತಿ ಅನಾದಿಯಾದ ವಸ್ತುಗಳಲ್ಲಿ ಬರುವುದಿಲ್ಲ, ಆಗ ಅಂತಹ ಕಡೆ ಏಕವಿಜ್ಞಾನೇನ ಎಂಬುದಕ್ಕೆ ವ್ಯಭಿಚಾರ.)

ವಿಯದಧಿಕರಣ (೨-೩-೧)

**नहि परमतेऽपि ब्रह्मणोऽन्यदविद्यादिकमभूत्वा भवति ।**

ಅದ್ವೈತಿಗಳ ಪ್ರಕಾರವೂ ಬ್ರಹ್ಮನಲ್ಲದೇ ಅವಿದ್ಯಾದಿಗಳೂ ಅಭೂತ್ವಾ ಭವತಿ ಎಂದು ಒಪ್ಪಲಾಗಿಲ್ಲ. (ಬ್ರಹ್ಮನಂತೆ ಅವಿದ್ಯಾದಿಗಳೂ ಅನಾದಿ ಎಂದೇ ಅವರ ಮತ)

**उक्तं च श्रीभाष्येऽपि ''कार्यत्वं हि नामद्रव्यस्यावस्थान्तरापत्तिः । तच्च जीवस्य ज्ञानसङ्कोचविकासलक्षणम् । वियदादेस्तु स्वरूपान्यथाभावलक्षणम्'' इति।**

ಶ್ರೀಭಾಷ್ಯದಲ್ಲಿ ಹೀಗೆ ಹೇಳಲಾಗಿದೆ. ಕಾರ್ಯತ್ವ ಎಂದರೆ ದ್ರವ್ಯಕ್ಕೆ ಇನ್ನೊಂದು ಅವಸ್ಥೆ ಒದಗುವುದು. ಅದು ಜೀವನಿಗೆ ಜ್ಞಾನಸಂಕೋಚವಿಕಾರರೂಪವಾಗಿದೆ. ಆಕಾಶಾದಿಗಳಿಗೆ ಸ್ವರೂಪದಲ್ಲಿನ ಅನ್ಯಥಾಭಾವರೂಪವಾಗಿದೆ.

**अस्ति च विशेषणस्योत्पत्तौ विशिष्टस्योत्पत्तिः । पाकेन घटो रक्तो जात इत्यनुभवात् । विशिष्टं च विशेष्याभिन्नम् ।**

ವಿಶೇಷಣದ ಉತ್ಪತ್ತಿಯಿಂದ ವಿಶೇಷ್ಯದ ಉತ್ಪತ್ತಿ ಎಂಬುದು ಸಿದ್ಧವಷ್ಟೆ. ಕಾಯಿಸಿದಾಗ ಘಟವು ಕೆಂಪಾಯಿತು ಎಂದು ಅನುಭವ ಇರುವುದರಿಂದ. ವಿಶಿಷ್ಟವು ವಿಶೇಷ್ಯದಿಂದ ಬೇರೆಯಲ್ಲ. ಘಟ ಮೊದಲೇ ಇದ್ದರೂ ಅದು ಕಾಯಿಸಿದಾಗ ಕೆಂಪಾಗುತ್ತದೆ, ಆಗ ಕೆಂಪು ಘಟ ಹುಟ್ಟಿತು ಎನ್ನುತ್ತೇವೆ.

**यत्र च स्वरूपनित्यत्वं प्रमितं तत्रैवोत्पत्तिश्रुतिः पराधीनविशेषावाप्तिपरा । अन्यत्र त्वभूत्वा भवनपरापीति नातिप्रसङ्गः ।**

ಎಲ್ಲಿ ಸ್ವರೂಪತಃ ಒಂದು ವಸ್ತು ನಿತ್ಯ ಎಂದು ಪ್ರಮಿತವಾಗಿದೆಯೋ ಅಂತಹ ಕಡೆ ಉತ್ಪತ್ತಿಯನ್ನು ಹೇಳಿದರೆ ಆಗ ಪರಾಧೀನವಿಶೇಷಾವಾಪ್ತಿ ಎಂದು ಅರ್ಥ ಹೇಳಬೇಕು. ಎಲ್ಲಿ ಸ್ವರೂಪನಿತ್ಯತ್ವ ಪ್ರಮಿತವಲ್ಲವೋ ಅಂತಹ ಕಡೆಗಳಲ್ಲಿ ಅಭೂತ್ವಾಭವನರೂಪವಾದ ಉತ್ಪತ್ತಿಯನ್ನೇ ಹೇಳಬೇಕು. ಹಾಗಾಗಿ ಎಲ್ಲಾ ಕಡೆಯಲ್ಲೂ ಪರಾಧೀನವಿಶೇಷಾವಾಪ್ತಿರೂಪವಾದ ಉತ್ಪತ್ತಿಯನ್ನು ಹೇಳಬಹುದಲ್ಲವೆ? ಎಂಬ ಪ್ರಶ್ನೆಗೆ ಅವಕಾಶವಿಲ್ಲ.

**न चाकाशद्वित्वे मानाभावः । भूताकाशातिरिक्ता या देशकाला-परिच्छिन्नायास्तार्किकाद्यभिमतदिश एवास्मन्मतेऽव्याकृताकाशत्वात् ।**

ಭೂತಾಕಾಶ, ಅವ್ಯಾಕೃತ ಆಕಾಶ ಎಂಬುದಾಗಿ ಆಕಾಶವು ಎರಡು ವಿಧ ಎಂಬುದಕ್ಕೆ ಪ್ರಮಾಣವಿಲ್ಲ ಎನ್ನಬಾರದು. ಭೂತಾಕಾಶಕ್ಕಿಂತ ಭಿನ್ನವಾದ ದೇಶಕಾಲಗಳಿಂದ ಅತೀತವಾದ ತಾರ್ಕಿಕರು ಹೇಳುವ 'ದಿಕ್' ಎಂಬುದೇ ನಮ್ಮ ಪ್ರಕಾರ ಅವ್ಯಾಕೃತ ಆಕಾಶವಾಗಿದೆ.

**प्राच्यादयो दिग्विशेषास्तु तद्भागाः । उक्तं हि टीकाकारैः ''अवकाशमात्रं हि दिगित्युच्यते । अवकाशभागा एव दिग्विशेषा'' इति ।**

ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ ಎಂಬ ದಿಕ್ಕಿನಲ್ಲಿನ ವಿಭಾಗಗಳೂ ಅವ್ಯಾಕೃತಆಕಾಶದ್ದೇ ಆಗಿವೆ . ಟೀಕಾದಲ್ಲಿಯೂ ಹೀಗೇ ಹೇಳಿದೆ - ದಿಕ್ ಎಂದರೆ ಅವಕಾಶ. ಅವಕಾಶ(ಅವ್ಯಾಕೃತ ಆಕಾಶ) ಭಾಗಗಳನ್ನೇ ದಿಕ್ಕಿನ ಭಾಗಗಳು ಎಂದು ಕರೆಯುತ್ತಾರೆ.

**प्रकाशः –**

नन्वेवं पराधीनविशेषावाप्तिरूपोत्पत्तेरव्याकृताकाशेऽपि सम्भवात् ''अव्याकृताकाशस्य'' इत्यादि पूर्वभागोक्तिः कथमित्यत आह – **न्यायविवरण इति ।।**

ಪ್ರಶ್ನೆ - ಪರಾಧೀನವಿಶೇಷಾವಾಪ್ತಿ ಎಂಬ ಉತ್ಪತ್ತಿಯು ಅವ್ಯಾಕೃತ ಆಕಾಶಕ್ಕೂ ಇರಲು ಹಿಂದೆ ಅವ್ಯಾಕೃತ ಆಕಾಶವು ಅನುತ್ಪತ್ತಿಶ್ರುತಿಗಳಿಗೆ ವಿಷಯ ಎಂದು ಹೇಳಿದ್ದು ಹೇಗೆ ಕೂಡುತ್ತದೆ?. ಇದಕ್ಕೆ ಉತ್ತರವಾಗಿ ಹೇಳುತ್ತಿದ್ದಾರೆ 'ನ್ಯಾಯವಿವರಣೇ' ಎಂಬುದಾಗಿ.

**प्रकाशः –** प्रकारान्तरेण श्रुत्योर्व्यवस्थितत्वं वक्तुं शक्यमित्याक्षिप्य टीकोक्तं समाधत्ते ।। अत्र यद्यपीत्यादिना मुख्यार्थेत्यादिनेत्यन्तेन ।।

ಇನ್ನೊಂದು ರೀತಿಯಿಂದಲೂ ಈ ಉತ್ಪತ್ತಿ-ಅನುತ್ಪತ್ತಿ ಶ್ರುತಿಗಳಿಗೆ ಅರ್ಥ ಹೇಳಲು ಬರುತ್ತದೆ ಎಂದು ಪಶ್ನೆ ಮಾಡಿಕೊಂಡು ಟೀಕಾದಲ್ಲಿ ಹೇಳಿರುವ ಸಮಾಧಾನ ಹೇಳುತ್ತಿದ್ದಾರೆ 'ಅತ್ರ' ಎಂಬುದಾಗಿ ಆರಂಭಿಸಿ 'ಮುಖ್ಯಾರ್ಥ' ಎನ್ನುವಲ್ಲಿಯವರೆಗೆ.

**प्रकाशः – इत्यादिवचनादिति** ।। तत्वविवेकवचनादित्यर्थः । सर्वासर्वविषयत्व-विवरणपूर्वं गौणतां व्यनक्ति ।। **पराधीनेति** ।।

'ಇತ್ಯಾದಿವಚನಾತ್' ಎಂಬುದಕ್ಕೆ ತತ್ವವಿವೇಕವಚನದಿಂದ ಎಂದರ್ಥ. (ಇಲ್ಲಿ ತತ್ವವಿವೇಕ ಎಂದರೆ ಪಂಚರಾತ್ರಗ್ರಂಥ ಎಂದರ್ಥ ಹೊರತು ಸರ್ವಮೂಲದಲ್ಲಿ ಒಂದಾದ ಗ್ರಂಥವಲ್ಲ) ಉತ್ಪತ್ತಿಶ್ರುತಿಯು ಸರ್ವವಿಷಯ ಆದ್ದರಿಂದ ಮುಖ್ಯ, ಅನುತ್ಪತ್ತಿಶ್ರುತಿಯು ಅಸರ್ವವಿಷಯ ಹಾಗಾಗಿ ಗೌಣ, ಎಂಬ ವ್ಯವಸ್ಥೆಯನ್ನು ಹೇಳುತ್ತಿದ್ದಾರೆ 'ಪರಾಧೀನ' ಎಂಬುದಾಗಿ.

**प्रकाशः – उक्ताया इति** ।। पराधीनविशेषावाप्तिरूपाया इत्यर्थः । पराधीन-विशेषावाप्तिरूपैवोत्पत्तिरत्राभिमतेत्येतत्समर्थयते ।। **इहचेति** ।। परेणाप्येतत् स्वीकार्यमिति भावेनाह – **परमत इति** ।। तद्यनक्ति ।। नहि परमतेऽपीति ।। केषाञ्चिदप्येतत्संमतमित्याह – **उक्तं चेति** ।। ''नात्मा श्रुतेर्नित्यत्वाच्च ताभ्यः'' इत्यत्रोक्तमित्यर्थः ।

'ಉಕ್ತಾಯಾಃ' ಎಂದರೆ ಪರಾಧೀನವಿಶೇಷಾವಾಪ್ತಿರೂಪವಾದ ಎಂದರ್ಥ. ಇಲ್ಲಿ ಪರಾಧೀನ-ವಿಶೇಷಾವಾಪ್ತಿರೂಪವಾದ ಉತ್ಪತ್ತಿಯೇ ಅಭಿಮತವಾದದ್ದು ಎಂಬುದನ್ನು ಹೇಳುತ್ತಿದ್ದಾರೆ 'ಇಹ ಚ'

ಎಂಬುದರಿಂದ. ಅದ್ವೈತಿಗಳು ಇದನ್ನು ಒಪ್ಪಬೇಕು ಎಂಬುದನ್ನು ಹೇಳುತ್ತಿದ್ದಾರೆ 'ಪರಮತ' ಎಂಬುದರಿಂದ. ಹಿಂದೆ ಹೇಳಿದ್ದನ್ನೇ ವಿವರಿಸುತ್ತಿದ್ದಾರೆ 'ನಹಿ' ಎಂಬುದಾಗಿ. ರಾಮಾನುಜರಿಗೂ ಇದು ಸಮ್ಮತವೇ ಎಂಬುದನ್ನು ಹೇಳುತ್ತಿದ್ದಾರೆ 'ಉಕ್ತಂ ಚ' ಎಂಬುದಾಗಿ. ರಾಮಾನುಜರು ಎಲ್ಲಿ ಹೇಳಿದ್ದಾರೆ ಎಂದರೆ 'ನಾತ್ಮಾ ಶ್ರುತೇರ್ನಿತ್ಯತ್ವಾಚ್ಚ' ಎಂಬ ಸೂತ್ರದಲ್ಲಿ ಹೇಳಿದ್ದಾರೆ ಎಂದರ್ಥ.

**प्रकाशः** – एवं हि तत्र वाक्यक्रमः ''कार्यत्वं हि नामैकस्य द्रव्यस्यावस्थान्तरापत्तिः। तज्जीवस्याप्यस्त्येव । इयांस्तु विशेषः । वियदादेरचेतनस्य यादृशोऽन्यथाभावो न तादृशो जीवस्य । ज्ञानसङ्कोचविकासलक्षणो जीवस्यान्यथाभावः। वियदादेस्तु स्वरूपान्यथाभावलक्षण'' इति ।

ರಾಮಾನುಜರ ಗ್ರಂಥದಲ್ಲಿ ವಾಕ್ಯಕ್ರಮ ಹೀಗಿದೆ - ಕಾರ್ಯತ್ವ ಎಂದರೆ ಒಂದು ದ್ರವ್ಯಕ್ಕೆ ಹಿಂದಿನ ಅವಸ್ಥೆಗಿಂತ ಬೇರೊಂದು ಅವಸ್ಥೆ ಬರುವುದು ಎಂದರ್ಥ. ಇಂತಹ 'ಕಾರ್ಯತ್ವ ಜೀವನಿಗೂ ಇದೆ'. ಆದರೆ ಇಷ್ಟು ಮಾತ್ರ ಭೇದ, ಆಕಾಶಾದಿಗಳಿಗೆ ಯಾವ ರೀತಿಯಾದ ಅನ್ಯಥಾಭಾವ ಇದೆಯೋ ಆ ರೀತಿಯಾದ ಅನ್ಯಥಾಭಾವ ಜೀವನಿಗಿಲ್ಲ, ಜೀವನಿಗೆ ಜ್ಞಾನಸಂಕೋಚ-ವಿಕಾಸ ಎಂಬ ಅನ್ಯಥಾಭಾವವಿದೆ. ಆದರೆ ಆಕಾಶಾದಿಗಳಿಗೆ ಸ್ವರೂಪದ ಅನ್ಯಥಾಭಾವ ರೂಪವಾದ ಕಾರ್ಯತ್ವವಿದೆ.

**प्रकाशः** – भाष्याद्युक्तमाकाशद्वैतं समर्थयते ।। न चाकाशद्वित्व इति ।। उक्तं हीति ।। ''अन्धकारेऽपि दिङ्मात्रप्रतीतेः'' इति तत्वनिर्णयवाक्यव्याख्यावसर इत्यर्थः।

ಭಾಷ್ಯ ಅನುವ್ಯಾಖ್ಯಾನಗಳಲ್ಲಿ ಹೇಳಿರುವ ಆಕಾಶದಲ್ಲಿನ ಎರಡು ಪ್ರಕಾರವನ್ನು ಸಮರ್ಥಿಸುತ್ತಿದ್ದಾರೆ 'ನ ಚ' ಎಂಬುದಾಗಿ. ಟೀಕಾಕಾರರೂ ವಿಷ್ಣುತತ್ವನಿರ್ಣಯಟೀಕಾದಲ್ಲಿ ಇದನ್ನು ಹೇಳಿದ್ದಾರೆ. 'ಅಂಧಕಾರೇऽಪಿ ದಿಗ್ಮಾತ್ರಪ್ರತೀತೇಃ' ಎಂಬಲ್ಲಿ ಎಂದರ್ಥ.

## तात्पर्यचन्द्रिका

**किञ्च प्रदेशरूप आकाशो नीरूपः साक्षिसिद्धश्च ।**

ಪ್ರದೇಶರೂಪವಾದ ಅವ್ಯಾಕೃತ ಆಕಾಶವು ನೀರೂಪ(ರೂಪರಹಿತ) ಹಾಗೂ ಸಾಕ್ಷಿಸಿದ್ಧವಾಗಿದೆ.

**अन्यथाऽवकाशे सन्देहेनान्धकारादौ हस्तचालनादिकं न स्यात् ।**

ಅವ್ಯಾಕೃತ ಆಕಾಶವು ಸಾಕ್ಷಿಸಿದ್ಧ ಎಂದಾಗದೇ ಇದ್ದರೆ ಆಗ ಅದರ ವಿಷಯದಲ್ಲಿ ಸಂದೇಹ ಇರುವುದರಿಂದ ಕತ್ತಲೆಯಲ್ಲಿ ಹಸ್ತಪ್ರಸಾರ ಮೊದಲಾದ ಕ್ರಿಯೆಗಳು ಆಗುತ್ತಿರಲಿಲ್ಲ. ಅಂಧಕಾರವಿದ್ದಾಗಲೂ ಹಸ್ತಚಲನಾದಿಗಳು ಆಗುವುದರಿಂದ ಅವ್ಯಾಕೃತ ಆಕಾಶವು ಸಾಕ್ಷಿಸಿದ್ಧವೇ ಹೊರತು ಪ್ರತ್ಯಕ್ಷಾದಿಗಳಿಂದಲ್ಲ.

**नच मूर्तविशेषाभाव इव तदाश्रये देशे कश्चित्सन्दिग्घे ।**

ಅಂಧಕಾರವಿದ್ದಲ್ಲಿ ಮೂರ್ತವಿಶೇಷ (ಘಟ, ಪಟ, ಗೋಡೆ) ಇದೆಯೋ ಇಲ್ಲವೋ? ಎಂಬ ಸಂದೇಹ ಬಂದರೂ ಈ ಮೂರ್ತವಿಶೇಷಗಳಿಗೆ ಆಶ್ರಯವಾದ ಪ್ರದೇಶ(ಜಾಗ) ಇದೆಯೋ ಇಲ್ಲವೋ? ಎಂಬ ಸಂದೇಹ ಬರುವುದಿಲ್ಲ.

**भूताकाशं तु ''भूतमप्यसितं दिव्यदृष्टिगोचरमेव च'' इत्यादिरूपश्रुत्या रूपि।**

ಇನ್ನು ಭೂತಾಕಾಶವಾದರೋ ರೂಪವುಳ್ಳದ್ದು. 'ಭೂತಮಪ್ಯಸಿತಂ ದಿವ್ಯದೃಷ್ಟಿಗೋಚರಮೇವ ಚ' ಎಂಬ ಶ್ರುತಿಯಲ್ಲಿ ಭೂತಾಕಾಶವು ಅಸಿತ ರೂಪವುಳ್ಳದ್ದು ಹಾಗೂ ದಿವ್ಯದೃಷ್ಟಿಗೆ ಗೋಚರವಾಗುವುದು ಎಂದು ಹೇಳಿರುವುದರಿಂದ.

**अप्रत्यक्षं च । किञ्च भूताकाशं ''सर्वं पञ्चभिराविष्टं भूतैरीश्वरबुद्धिजैः । पञ्चभूतात्मके देहे'' इत्यादिस्मृतिभिर्देहाकारेण विकारि ।**

ಭೂತಾಕಾಶವು ಪ್ರತ್ಯಕ್ಷಗೋಚರವಲ್ಲ. ಭೂತಾಕಾಶವು ವಿಕಾರವುಳ್ಳದ್ದು. 'ಸರ್ವಂ ಪಂಚಭಿರಾವಿಷ್ಟಂ ಭೂತೈರೀಶ್ವರಬುದ್ಧಿಜೈಃ' ಎಂಬ ಶ್ರುತಿಯಲ್ಲಿ ಭೂತಾಕಾಶವು ಉಳಿದ ಭೂತಪದಾರ್ಥಗಳಂತೆ ದೇಹರೂಪದಿಂದ ವಿಕಾರ ಹೊಂದುತ್ತದೆ ಎಂದು ಹೇಳಲಾಗಿದೆ.

**अवकाशस्तु कूटस्थनित्यत्वेन साक्षिसिद्धः ।**

ಅವ್ಯಾಕೃತ ಆಕಾಶವು ಕೂಟಸ್ಥನಿತ್ಯ ಎಂಬುದಾಗಿ ಸಾಕ್ಷಿಸಿದ್ಧವಾಗಿದೆ. ಕೂಟಸ್ಥ ಎಂದರೆ ನಿರ್ವಿಕಾರ ಎಂದರ್ಥ.

**नच सर्वाधारभूतौ देशकालौ किञ्चिद्द्रव्यात्मना विकुरुतः ।**

ಎಲ್ಲ ಪದಾರ್ಥಗಳಿಗೂ ಆಧಾರಭೂತವಾದ ದೇಶಕಾಲಗಳು ಪದಾರ್ಥಗಳ ಆಕಾರರೂಪವಾಗಿ ವಿಕಾರ ಹೊಂದುವುದು ಎಲ್ಲಿಯೂ ಕಂಡಿಲ್ಲ.

**कथं वाऽवकाशस्य पञ्चीकरणम् ।**

ಹೀಗಿರುವಾಗ ಅವಕಾಶರೂಪವಾದ ಆಕಾಶಕ್ಕೆ ಪಂಚೀಕರಣ ಎಂದರೆ ಪಂಚಭೂತಗಳೊಂದಿಗೆ ಮಿಶ್ರಣ ಎಂಬುದು ಹೇಗೆ ಸಾಧ್ಯ ? ಸಾಧ್ಯವಿಲ್ಲ ಎಂದರ್ಥ.

**किञ्चावकाशः ''अनादिर्वा अयमाकाश'' इत्यादिश्रुतिभिरवकाशोपादानप्रागभावयोर्बुद्ध्यनारोहादियुक्तिभिश्चानादिः ।**

ಅವಕಾಶವು ಅನಾದಿ ಎಂದು ಶ್ರುತಿಯುಕ್ತಿಗಳಿಂದ ಸಿದ್ಧವಾಗಿದೆ. ಶ್ರುತಿ ಯಾವುದೆಂದರೆ 'ಅನಾದಿರ್ವಾಽಯಮಾಕಾಶಃ' ಎಂಬುದು. ಯುಕ್ತಿ ಯಾವುದೆಂದರೆ ಅವಕಾಶವು ಅನಾದಿ ಉಪಾದಾನಕಾರಣವಿಲ್ಲವಾದ್ದರಿಂದ ಹಾಗೂ ಪ್ರಾಗಭಾವವಿಲ್ಲವಾದ್ದರಿಂದ ಎಂಬುದು. (ಅವಕಾಶದ ಉಪಾದಾನಕಾರಣ ಹಾಗೂ ಪ್ರಾಗಭಾವವು ಯಾರ ಕಲ್ಪನೆಗೂ ಬರಲು ಸಾಧ್ಯವಿಲ್ಲ. ಆ ಉಪಾದಾನಕಾರಣ ಹಾಗೂ ಪ್ರಾಗಭಾವವು ಇದೆ ಎಂದರೆ ಅದು ಯಾವುದಾದರೂ ಕಾಲದಲ್ಲೇ ಜಾಗದಲ್ಲೇ ಇರಬೇಕಾದ್ದರಿಂದ ಆಗಲೂ ದೇಶಕಾಲಗಳು ಇದ್ದೇ ಇರಬೇಕು)

ವಿಯದಧಿಕರಣ (೨-೩-೧)

**नतु तामसाहंकारकार्यम् ।**

ಅವಕಾಶವು ಭೂತಾಕಾಶದಂತೆ ತಾಮಸಾಹಂಕಾರದ ಕಾರ್ಯರೂಪವಲ್ಲ.

**नहि पूर्वमाकाशो नासीत् । किन्तु सर्वत्र वा कुत्रचिद्वा घनीभाव एवासीदिति धीर्युक्ता।**

ಆಕಾಶವು ಮೊದಲು ಇರಲಿಲ್ಲ. ಅದು ಕೆಲವು ಕಡೆ ಅಥವಾ ಎಲ್ಲಕಡೆ ಘನೀಭೂತ(ನಿಬಿಡ) ವಾಗಿಯೇ ಇತ್ತು ಎಂದು ತಿಳಿಯುವುದು ಸರಿಯಲ್ಲ.

**सर्वत्रेत्यादिनैवाकाशनिर्देशात् ।**

ಏಕೆಂದರೆ, 'ಎಲ್ಲ ಕಡೆ' ಎಂಬ ನಿರ್ದೇಶ(ವ್ಯವಹಾರ) ಮಾಡುವುದರಿಂದಲೇ ಆಕಾಶವನ್ನು ಒಪ್ಪಿದಂತಾಯಿತು.

**भूतं तु ''आत्मन आकाशः सम्भूत'' इत्यादिप्रकरणानुगृहीतश्रुतिभिः**
**तामसाच्च विकुर्वाणाद्भगवद्वीर्यचोदितात् ।**
**शब्दमात्रमभूत्तस्मान्नभःश्रोत्रं तु शब्दजम् ।।**

**इत्यादिस्मृतिभिश्च तामसाहंकारं कार्यम् ।**

ಭೂತಾಕಾಶವಾದರೋ ತಾಮಸ ಅಹಂಕಾರದ ಕಾರ್ಯವಾಗಿದೆ. ಇದು ಶ್ರುತಿಸಿದ್ಧ. 'ಆತ್ಮನ ಆಕಾಶಃ ಸಂಭೂತಃ' ಎಂಬುದಾಗಿ ಶ್ರುತಿ ಇದೆ. ಈ ಶ್ರುತಿಯಿಂದ ಭೂತಾಕಾಶಕ್ಕೆ ಉತ್ಪತ್ತಿ ಇದೆ ಎಂಬುದು ಸಿದ್ಧವಾಗುತ್ತದೆ. ಭೂತಾಕಾಶವು ತಾಮಸ ಅಹಂಕಾರದ ಕಾರ್ಯ ಎಂಬುದು 'ತಾಮಸಾಚ್ಚ ವಿಕುರ್ವಾಣಾತ್......' ಎಂಬ ಸ್ಮೃತಿಯಿಂದ ಸಿದ್ಧವಾಗುತ್ತದೆ.

**किञ्च एतदण्डं विशेषाख्यं क्रमाद्वृद्धैर्दशोत्तरैः । तोयादिभिः परिवृतम्'' इत्यादिस्मृतिभिरेकमविभु ।**

ಭೂತಾಕಾಶವು ಅವಿಭು (ಪರಿಚ್ಛಿನ್ನ)ಎಂಬುದು 'ಏತದಂಡಂ ವಿಶೇಷಾಖ್ಯಂ ಕ್ರಮಾದ್ವೃದ್ಧೈರ್ದಶೋತ್ತರೈಃ ತೋಯಾದಿಭಿಃ ಪರಿವೃತಂ' ಎಂಬ ಸ್ಮೃತಿಯಿಂದ ಸಿದ್ಧವಾಗುತ್ತದೆ. ಬ್ರಹ್ಮಾಂಡದ ಹತ್ತು ಆವರಣಗಳಲ್ಲಿ ಕೊನೆಯ ಆವರಣವೇ ಆಕಾಶ. ಎಂದ ಮೇಲೆ ಅದು ಬ್ರಹ್ಮಾಂಡದ ಹೊರಗೆ ಇಲ್ಲ ಎಂದು ಸಿದ್ಧವಾಯಿತು. ಹಾಗಾಗಿ ಅದು ಅವಿಭು.

**अन्यत्तु विभु । ''आकाशवत्सर्वगतश्च नित्यः । स यथाऽनन्तोऽयमाकाश'' इत्यादिश्रुतेः।**

ಆದರೆ ಅವ್ಯಾಕೃತ ಆಕಾಶವು ವಿಭು (ಅಪರಿಚ್ಛಿನ್ನ). ಇದೂ ಶ್ರುತಿಸಿದ್ಧ. 'ಆಕಾಶವತ್ಸರ್ವಗತಶ್ಚ ನಿತ್ಯಃ । ಸ ಯಥಾऽನಂತೋऽಯಮಾಕಾಶಃ' ಎಂಬುದೇ ಆ ಶ್ರುತಿಗಳು. ಆಕಾಶದಂತೆ ಪರಮಾತ್ಮನು ಸರ್ವಗತ ಹಾಗೂ ನಿತ್ಯ. ಹೇಗೆ ಆಕಾಶವು ಅನಂತವೋ ಹಾಗೇ ಅವನೂ ಕೂಡ.

**तथा अत्र देशो नास्तीत्येतदिदानीं कालो नास्तीतिवद्व्याहतम् ।**

'ಇಲ್ಲಿ ದೇಶವಿಲ್ಲ' ಎಂಬುದು 'ಈಗ ಕಾಲವಿಲ್ಲ' ಎಂಬ ವ್ಯವಹಾರದಂತೆ ಅಬದ್ಧ.

**अत्रेत्यनेनैव देशनिर्देशात् ।**

'ಇಲ್ಲಿ' ಎಂಬುದರಿಂದಲೇ ದೇಶವನ್ನು ಹೇಳುತ್ತಿರುವುದರಿಂದ.

**एवं ब्रह्मवाऽन्यद्वादेशं विना क्वचिदस्तीत्येतदपि व्याहृतम् ।**

ಹಾಗೇ ಬ್ರಹ್ಮನು ಅಥವಾ ಇನ್ನೊಂದು ವಸ್ತು ದೇಶವನ್ನು ಬಿಟ್ಟು ಇದೆ ಎಂದರೂ ಅದು ವ್ಯಾಹತವೇ. (ಅಸ್ತಿ=ಇದೆ ಎಂಬುದರಿಂದಲೇ ದೇಶಸಿದ್ಧವಾಗುವುದರಿಂದ)

**अत एव ''स एवाधस्तात्स उपरिष्टात्स पश्चात्सपुरस्तात्स दक्षिणतः स उत्तरतः'' इत्यादिश्रुतिः । ''व्याप्तं त्वयैकेन दिशश्च सर्वा'' इत्यादिस्मृतिश्च ब्रह्मणो विभुदेशसम्बन्धेनैव विभुत्वमाहेत्यादियुक्तेश्च ।**

ಆಕಾಶವು(ಅವ್ಯಾಕೃತ) ವಿಭು ಆದ್ದರಿಂದಲೇ, ಬ್ರಹ್ಮನಿಗೆ ವಿಭುತ್ವವನ್ನು ಹೇಳುವ 'ಸ ಏವಾಧಸ್ತಾತ್ಸ ಉಪರಿಷ್ಟಾತ್ಸ ಪಶ್ಚಾತ್ಸಪುರಸ್ತಾತ್ಸ ದಕ್ಷಿಣತಃ ಸ ಉತ್ತರತಃ' ಎಂಬ ಶ್ರುತಿಯು ಹಾಗೂ 'ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ' ಎಂಬ ಸ್ಮೃತಿಯೂ ವಿಭುವಾದ ಆಕಾಶದ ಸಂಬಂಧ ಇರುವುದರಿಂದಲೇ ವಿಭುತ್ವವನ್ನು ಹೇಳುತ್ತಿದೆ. (ಬ್ರಹ್ಮನು ವಿಭುವಾಗಿದ್ದಾನೆ ಏಕೆಂದರೆ ವಿಭುವಾದ ಆಕಾಶದ ಸಂಬಂಧ ಇರುವುದರಿಂದ. ಇದೇ ಯುಕ್ತಿ)

**किञ्च**

**मृतिकाले जहत्येनं प्राणा भूतानि पञ्च च ।**
**भागशो भागतस्त्वेनमनुगच्छन्ति सर्वशः ।।**
**इत्यादिस्मृतिभिर्भूताकाशं गत्यादियोग्यभागवत् ।**

(ಇವೆರಡಕ್ಕೂ ಇರುವ ಇನ್ನೊಂದು ಭೇದ ಹೇಳುತ್ತಿದ್ದಾರೆ) ಭೂತಾಕಾಶವು ಗತಿ(ಚಲನೆ) ವುಳ್ಳದ್ದು. ಈ ವಿಷಯವು 'ಮೃತಿಕಾಲೇ ಜಹತ್ಯೇನಂ ಪ್ರಾಣಾ ಭೂತಾನಿ ಪಂಚ ಚ । ಭಾಗಶೋ ಭಾಗತಸ್ತ್ವೇನಮನುಗಚ್ಛಂತಿ ಸರ್ವಶಃ' ಎಂಬ ಸ್ಮೃತಿಯಿಂದ ಸಿದ್ಧವಾಗುತ್ತಿದೆ. ಮರಣವಾಗುವಾಗ ಈ ಜೀವನನ್ನು ಇಂದ್ರಿಯಗಳು, ಪಂಚಭೂತಗಳು ಬಿಟ್ಟುಹೋಗುತ್ತವೆ. ಆದರೆ ಭಾಗಶಃ ಇವೆಲ್ಲವೂ ಇವನ ಜೊತೆಗೇ ಹೋಗುತ್ತವೆ. (ಹಾಗಾಗಿ ಪಂಚಭೂತಗಳಲ್ಲಿ ಒಂದಾದ ಭೂತಾಕಾಶವೂ ಜೀವನ ಜೊತೆ ಹೋಗುವುದರಿಂದ ಅದಕ್ಕೆ ಗಮನ ಒಪ್ಪಿದಂತಾಯಿತು)

**अवकाशस्तु न गत्यादियोग्यभागवान् । नहि प्रदेशविशेष एतद्देशं त्यक्त्वा प्रदेशान्तरं गच्छति ।**

ಆದರೆ ಅವಕಾಶದ ವಿಷಯದಲ್ಲಿ ಹೀಗೆ ಗತಿ(ಚಲನೆ) ಹೇಳಲು ಸಾಧ್ಯವಿಲ್ಲ. ಈ ಪ್ರದೇಶವು ಇಲ್ಲಿಂದ ಅಲ್ಲಿಗೆ ಹೋಯಿತು ಎಂದು ಯಾರೂ ತಿಳಿದಿಲ್ಲ.

ವಿಯದಧಿಕರಣ (೨-೩-೧)

**किञ्च "आकाशो नीलिमोदेति न प्रदेशः कथञ्चन" इति श्रुत्यैवाकाशद्वित्वं कण्ठोक्तम्। तस्मादाकाशद्वित्वं प्रामाणिकमेवेति ॥**

ಶ್ರುತಿಯೇ ಸ್ಪಷ್ಟವಾಗಿ ಆಕಾಶವು ಎರಡು ವಿಧ ಎಂದು ಹೇಳುತ್ತಿದೆ. ಆಕಾಶವು (ಭೂತಾಕಾಶವು) ನೀಲರೂಪವುಳ್ಳದ್ದಾಗಿ ಹುಟ್ಟುತ್ತದೆ. ಆದರೆ ಪ್ರದೇಶ(ಅವ್ಯಾಕೃತ)ವು ಯಾವರೀತಿಯಿಂದಲೂ ಹುಟ್ಟುವುದಿಲ್ಲ.

ಹಾಗಾಗಿ ಆಕಾಶ ಎರಡುವಿಧ ಎಂಬುದು ಪ್ರಾಮಾಣಿಕ ಎಂಬುದು ಸಿದ್ಧವಾಯಿತು.

**प्रकाशः –**

भूतमप्यसितं दिव्यदृष्टिगोचरमेव तु ।
उत्पद्यतेऽव्याकृतं हि गगनं साक्षिगोचरम् ॥

इत्यनुव्याख्यां हृदि कृत्वाऽऽह – **किञ्च प्रदेशेति** ॥ साक्षिगोचरमित्युक्तिसूचितं युक्त्यन्तरमाह – **किञ्च भूतेति** ॥

'ಭೂತಮಪ್ಯಸಿತಂ ದಿವ್ಯದೃಷ್ಟಿಗೋಚರಮೇವ ತು । ಉತ್ಪದ್ಯತೇऽವ್ಯಾಕೃತಂ ಹಿ ಗಗನಂ ಸಾಕ್ಷಿಗೋಚರಂ' ಎಂಬ ಅನುವ್ಯಾಖ್ಯಾನದ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡು ಹೇಳುತ್ತಿದ್ದಾರೆ 'ಕಿಂಚ' ಎಂಬುದಾಗಿ. 'ಸಾಕ್ಷಿಗೋಚರ' ಎಂಬಲ್ಲಿ ಸೂಚಿತವಾಗಿರುವ ಇನ್ನೊಂದು ಯುಕ್ತಿಯನ್ನು ಹೇಳುತ್ತಿದ್ದಾರೆ 'ಕಿಂಚ' ಎಂಬುದಾಗಿ.

**प्रकाशः –** "यत्किञ्चिदिह लोके वै देहबद्धं विशां पते । सर्वम्" इति मोक्षधर्मे । "पञ्चभूतात्मक" इति तृतीयस्कन्धे कपिलवाक्यम् ॥ **कथं वेति** ॥ निबिडताप्रसङ्गादिति भावः । "अभावो हि प्रदेशस्य न ह्यत्राभाव इत्यपि" इति न्यायविवरणोदाहृत श्रुत्युक्तयुक्तिं व्यनक्ति ॥ **किञ्चावकाश इति** ॥

ಮೂಲದಲ್ಲಿ 'ಸರ್ವಂ ಪಂಚಭಿಃ....' ಎಂಬುದು ಸ್ಮೃತಿಯ ಮೊದಲಭಾಗ 'ಯತ್ಕಿಂಚಿದಿಹ ಲೋಕೇ ವೈ ದೇಹಬದ್ಧಂ ವಿಶಾಂ ಪತೇ' ಎಂಬುದು ಮೋಕ್ಷಧರ್ಮದಲ್ಲಿನ ಸ್ಮೃತಿ. 'ಪಂಚಭೂತಾತ್ಮಕೇ' ಎಂಬುದು ತೃತೀಯಸ್ಕಂಧ ಭಾಗವತದಲ್ಲಿ ಕಪಿಲನ ಮಾತು. ಅವ್ಯಾಕೃತ ಆಕಾಶವೂ ಇತರ ಭೂತಗಳೊಂದಿಗೆ ಮಿಶ್ರಣಹೊಂದಿದರೆ ಆಗ ನಿಬಿಡತೆ ಬರಬೇಕಾಗುತ್ತದೆ ಎಂದು ಭಾವ. 'ಅಭಾವೋ ಹಿ ಪ್ರದೇಶಸ್ಯ ನ ಹ್ಯತ್ರಾಭಾವಃ' ಎಂಬ ನ್ಯಾಯವಿವರಣದಲ್ಲಿ ಉದಾಹರಿಸಿರುವ ಶ್ರುತಿಯಲ್ಲಿ ಅಭಿಪ್ರೇತವಾದ ಯುಕ್ತಿಯನ್ನು ಹೇಳುತ್ತಿದ್ದಾರೆ 'ಕಿಂಚ' ಎಂಬುದಾಗಿ.

**प्रकाशः – न त्विति** ॥ भूतमित्यर्थः । युक्तिसूचनाय तामसाहंकारकार्यमित्युक्तिः। प्राणगतेश्चेत्यत्र भाष्योक्तस्मृतिमाह – **मृतिकाल इति** ॥ न्यायविवरणोक्तश्रुतिमाह – **आकाशो नीलमेति** ॥

'ನ ತು' ಎಂಬಲ್ಲಿ ಭೂತಾಕಾಶ ಎಂದು ಅರ್ಥ. ಯುಕ್ತಿಯನ್ನು ಸೂಚಿಸುವುದಕ್ಕಾಗಿ ತಾಮಸಾಹಂಕಾರಕಾರ್ಯ ಎಂದಿದ್ದಾರೆ. (ಭೂತಾಕಾಶವು ತಾಮಸಾಹಂಕಾರಕಾರ್ಯ ಎಂಬುದು ಸಿದ್ಧವಾಗಿರುವಾಗ ಅದು ಅನಾದಿನಿತ್ಯ ಎಂದು ಹೇಳಲು ಸಾಧ್ಯವಿಲ್ಲ) 'ಪ್ರಾಣಗತೇಶ್ಚ' ಎಂಬ ಸೂತ್ರಭಾಷ್ಯದಲ್ಲಿ ಹೇಳಿರುವ ಸ್ಮೃತಿಯನ್ನು ಹೇಳುತ್ತಿದ್ದಾರೆ 'ಮೃತಕಾಲೇ' ಎಂಬುದಾಗಿ. ನ್ಯಾಯವಿವರಣದಲ್ಲಿ ಹೇಳಿರುವ ಶ್ರುತಿಯನ್ನು ಹೇಳುತ್ತಿದ್ದಾರೆ 'ಆಕಾಶೋ ನೀಲಂ' ಎಂಬುದಾಗಿ.

## तात्पर्यचन्द्रिका

**अन्ये तु ।। अस्ति हि ''आत्मन आकाशः सम्भूत'' इति तैत्तिरीय आकाशस्य प्रथमं जन्म । ''तत्तेजोऽसृजत'' इति छान्दोग्ये तु तेजसः । तथा च तयोरन्योन्यं विरोध इति द्वितीयसूत्रेण पूर्वपक्षयित्वा**

(ಅದ್ವೈತಿಗಳ ಪ್ರಕಾರ ಈ ಅಧಿಕರಣದ ಅರ್ಥ ಹೇಳುತ್ತಿದ್ದಾರೆ). 'ಆತ್ಮನ ಆಕಾಶಃ ಸಂಭೂತಃ' ಎಂಬ ತೈತ್ತಿರೀಯ ಶ್ರುತಿಯು ಆಕಾಶಕ್ಕೆ ಪ್ರಥಮಜನ್ಮ ಹೇಳುತ್ತಿದೆ. 'ತತ್ತೇಜೋಽಸೃಜತ' ಎಂಬ ಛಾಂದೋಗ್ಯ ಶ್ರುತಿಯು ತೇಜಸ್ಸಿಗೆ ಪ್ರಥಮಜನ್ಮ ಹೇಳುತ್ತಿದೆ. ಹಾಗಾಗಿ ಈ ಎರಡು ಶ್ರುತಿಗಳಿಗೆ ಪರಸ್ಪರ ವಿರೋಧ ಎಂಬುದಾಗಿ ಎರಡನೇ ಸೂತ್ರದ ಅರ್ಥ. ಇದು ('ಅಸ್ತಿ ತು') ಪೂರ್ವಪಕ್ಷಸೂತ್ರ.

**वियत उत्पत्तिर्न श्रूयते । सम्भूतश्रुतिस्त्वघुनाऽवकाशो जात इतिवद्गौणी । विभोराकाशस्योत्पत्त्यसम्भवात् ।**

ಹೀಗೆ ಪೂರ್ವಪಕ್ಷ ಮಾಡಿಕೊಂಡು ಸಿದ್ಧಾಂತ ಹೇಳುತ್ತಿದ್ದಾರೆ. ಆಕಾಶಕ್ಕೆ ಉತ್ಪತ್ತಿ ಎಂಬುದು ಶ್ರುತಿಯ ಅರ್ಥವಲ್ಲ. 'ಸಂಭೂತಃ' ಎಂಬುದಾಗಿ ಉತ್ಪತ್ತಿ ಕೇಳಿಸುತ್ತಿದೆಯಲ್ಲವೆ? ಎಂದರೆ ಅದು ಗೌಣೀ ಎಂದು ಉತ್ತರ. ಹೇಗೆ ಲೌಕಿಕವ್ಯವಹಾರದಲ್ಲಿ 'ಈಗ ಅವಕಾಶ(ಸ್ಥಳ) ಉಂಟಾಯಿತು' ಎಂದು ಹೇಳುತ್ತೇವೋ ಹಾಗೇ. (ಅವಕಾಶ ಮೊದಲೇ ಇರುತ್ತದೆ, ಆದರೂ ಜಗಜಂಗುಳಿ ಕಡಿಮೆಯಾದರೆ ಅವಕಾಶ ಎಂದು ಹೇಗೆ ಹೇಳುತ್ತೇವೋ ಅದರಂತೆ). ಹೀಗೆ ಗೌಣಾರ್ಥವನ್ನು ಏಕೆ ಹೇಳಬೇಕು ಎಂದರೆ ಆಕಾಶ ವಿಭು (ಸರ್ವವ್ಯಾಪ್ತ) ಅದಕ್ಕೆ ಉತ್ಪತ್ತಿ ಎಂಬುದು ಅಸಂಭವ ಆದ್ದರಿಂದ. (ಇದು ಪ್ರಥಮ ಸೂತ್ರಾರ್ಥ ಹಾಗೂ ತೃತೀಯ ಸೂತ್ರಾರ್ಥ)

**''आकाशवत्सर्वगतश्च नित्य'' इत्यादिशब्दाच ।**

'ಶಬ್ದಾಚ್ಚ' ಎಂಬುದು ನಾಕನೇ ಸೂತ್ರಾರ್ಥ. 'ಆಕಾಶವತ್ಸರ್ವಗತಶ್ಚ ನಿತ್ಯಃ' ಎಂಬ ಶ್ರುತಿ ಇರುವುದರಿಂದ ಆಕಾಶಕ್ಕೆ ಉತ್ಪತ್ತಿ ಇಲ್ಲ.

**स्याच्चैकस्यैव सम्भूतशब्दस्याकाशे गौणत्वम् । वाय्वादौ तु मुख्यत्वम् । यथाऽऽनन्दमयप्रकरणे ब्रह्मशब्दस्यान्नादौ गौणत्वमानन्दे तु मुख्यत्वम् ।**

'ಸ್ಯಾಚ್ಚೈಕಸ್ಯೈವ ಬ್ರಹ್ಮಶಬ್ದವತ್'ಎಂಬ ಐದನೇ ಸೂತ್ರಾರ್ಥ ಹೀಗಿದೆ - ಒಂದೇ 'ಸಂಭೂತ' ಶಬ್ದವು ಆಕಾಶದ ವಿಷಯದಲ್ಲಿ ಗೌಣೀ(ಅಪ್ರಧಾನ). ಆದರೆ ವಾಯು, ತೇಜಸ್, ಅಪ್ ಇತ್ಯಾದಿ

ವಿಷಯದಲ್ಲಿ ಪ್ರಧಾನ, ಇದು ಹೇಗೆ ? ಎಂಬ ಪ್ರಶ್ನೆ ಬಂದರೆ ಅದಕ್ಕೆ ಉತ್ತರ ಬ್ರಹ್ಮಶಬ್ದದಂತೆ ಎಂದು. ಹೇಗೆ ಒಂದೇ ಬ್ರಹ್ಮಶಬ್ದವು ಆನಂದಮಯಪ್ರಕರಣದಲ್ಲಿ ಶ್ರುತವಾದದ್ದು, ಅನ್ನ, ಪ್ರಾಣ, ಮನಸ್ಸು, ಇತ್ಯಾದಿಗಳಲ್ಲಿ ಅಮುಖ್ಯ ಆದರೆ ಆನಂದ ಎಂಬಲ್ಲಿ ಮುಖ್ಯವೋ, ಹಾಗೇ ಇಲ್ಲಿಯೂ.

**तस्मान्न श्रुत्योर्विरोध इत्याद्यतृतीयचतुर्थपञ्चमैः सिद्धान्त्येकदेशिमतमुक्त्वा**

ಆದ್ದರಿಂದ ಹಿಂದೆ ಹೇಳಿದ ಶ್ರುತಿಗಳಿಗೆ ವಿರೋಧವಿಲ್ಲ (ಆಕಾಶಕ್ಕೆ ಉತ್ಪತ್ತಿ ಹೇಳುವ ಶ್ರುತಿ ಗೌಣೀ, ಹಾಗಾಗಿ ತೇಜಸ್ಸಿಗೇ ಪ್ರಥಮ ಜನ್ಮ). ಹೀಗೆ ಅದ್ವೈತಿಗಳು ಮೊದಲನೇ, ಮೂರನೇ, ನಾಲ್ಕನೇ ಹಾಗೂ ಐದನೇ ಸೂತ್ರಗಳಿಂದ ಸಿದ್ಧಾಂತ್ಯೇಕದೇಶೀಯ ಮತವನ್ನು ಹೇಳಿದ್ದಾರೆ. (ಇದು ಅವರ ಮುಖ್ಯಸಿದ್ಧಾಂತವಲ್ಲ ಎಂದು ಅಭಿಪ್ರಾಯ)

**आकाशस्य ब्रह्मकार्यत्वाभावे तद्व्यतिरेकापत्त्यैकविज्ञानेन सर्वविज्ञानप्रतिज्ञाहानिः। प्रतिज्ञा हि ''यथा सौम्यैकेन मृत्पिण्डेन'' इत्यादिशब्दैरव्यतिरेकाभिप्राया ।**

('ಪ್ರತಿಜ್ಞಾಹಾನಿರವ್ಯತಿರೇಕಾತ್ ಶಬ್ದೇಭ್ಯಃ' ಎಂಬ ಆರನೇ ಸೂತ್ರದಲ್ಲಿ ತಮ್ಮ ಸಿದ್ಧಾಂತ ಹೇಳುತ್ತಿದ್ದಾರೆ). ಆಕಾಶವು ಬ್ರಹ್ಮಕಾರ್ಯವಾಗದೇ ಹೋದರೆ ಆಗ ಅದು ಬ್ರಹ್ಮನಿಗಿಂತ ಭಿನ್ನ ಎಂದಾಗುತ್ತದೆ. 'ಒಂದನ್ನು ತಿಳಿದರೆ ಎಲ್ಲವನ್ನೂ ತಿಳಿದಂತೆ ಆಯಿತು' ಎಂಬ ಪ್ರತಿಜ್ಞಾಭಂಗ ಬರುತ್ತದೆ. ಪ್ರತಿಜ್ಞೆಯು 'ಯಥಾ ಸೌಮ್ಯೈಕೇನ ಮೃತ್ಪಿಂಡೇನ' ಎಂಬ ಶ್ರುತಿಯಿಂದ ಅವ್ಯತಿರೇಕ(ಅಭೇದ) ಅಭಿಪ್ರಾಯದ್ದಾಗಿದೆ.

(ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಕೂಡಿಸಬೇಕಾದರೆ ಆಗ ಬ್ರಹ್ಮನಿಗೂ ಸರ್ವಜಗತ್ತಿಗೂ ಅಭೇದವನ್ನು ಹೇಳಬೇಕು. ಆ ಅಭೇದವು ಜಗತ್ತು ಬ್ರಹ್ಮಕಾರ್ಯವಾದರೆ ಅಂದರೆ ಜಗತ್ತಿಗೆ ಬ್ರಹ್ಮನು ಉಪಾದಾನಕಾರಣವಾದರೆ ಕೂಡುತ್ತದೆ. ಇಲ್ಲವಾದರೆ ಇಲ್ಲ)

**किञ्चाकाशः विकारः कार्यं विभक्तत्वाद्भिन्नत्वाद्घटवदिति षष्ठसप्तमाभ्यां सिद्धान्तितमित्याहुः ।**

'ಯಾವದ್ವಿಕಾರಂತು ವಿಭಾಗೋ..' ಎಂಬ ಏಳನೇ ಸೂತ್ರದಿಂದಲೂ ಸಿದ್ಧಾಂತವನ್ನು ಹೇಳುತ್ತಿದ್ದಾರೆ. ಆಕಾಶವು ವಿಕಾರದಿಂದ(ಕಾರ್ಯ) ವಿಭಕ್ತವಾದ್ದರಿಂದ (ಭಿನ್ನವಾದ್ದರಿಂದ) ಘಟದಂತೆ. ಯಾವುದೆಲ್ಲಾ ಭಿನ್ನವೋ ಅದು ಕಾರ್ಯ. ಹೀಗೆ ಅದ್ವೈತಿಗಳು ಈ ಅಧಿಕರಣದ ಅರ್ಥವನ್ನು ಹೇಳುತ್ತಾರೆ.

**तत्र विरोधेन पूर्वपक्ष इति तावदयुक्तम् । छान्दोग्ये ह्याकाशस्योत्पत्त्यनुक्तिमात्रम्। न त्वनादित्वोक्तिः । न चानुक्तिस्तैत्तिरीयस्योत्पत्त्युक्त्या विरुद्धा ।**

'ಆತ್ಮನ ಆಕಾಶಃ ಸಂಭೂತಃ' 'ತತ್ತೇಜೋಽಸೃಜತ' ಎಂಬ ಈ ಎರಡು ಶ್ರುತಿಗಳಿಗೆ ವಿರೋಧ ಬಂದಿದೆ ಎಂದ ಮಾತ್ರಕ್ಕೆ ಪೂರ್ವಪಕ್ಷ ಮಾಡುವುದು ಸರಿಯಲ್ಲ. ಛಾಂದೋಗ್ಯದಲ್ಲಿ ಆಕಾಶಕ್ಕೆ

ಉತ್ಪತ್ತಿಪ್ರಸಕ್ತಿ ಬಂದಿಲ್ಲ. ಅಲ್ಲಿ ಕೇವಲ ಪೃಥಿವೀ, ಅಪ್, ತೇಜಸ್ ಇದರ ಪ್ರಸಕ್ತಿ ಬಂದಿದೆ. ಅಲ್ಲಿ ಆಕಾಶದ ಉತ್ಪತ್ತಿ ಹೇಳಿಲ್ಲ. ಆದ್ದರಿಂದ ಆಕಾಶವು ಅನಾದಿ. ತೈತ್ತಿರೀಯಶ್ರುತಿಯಿಂದ ವಿರೋಧ ಎಂಬುದು ಸರಿಯಲ್ಲ. ಛಾಂದೋಗ್ಯದಲ್ಲಿ ಆಕಾಶದ ಉತ್ಪತ್ತಿ ಹೇಳಿಲ್ಲ ಎಂದ ಮಾತ್ರಕ್ಕೆ ಆಕಾಶವು ಅನಾದಿ ಎಂದು ಸಿದ್ಧವಾಗುವುದಿಲ್ಲ. ಛಾಂದೋಗ್ಯದಲ್ಲಿನ ಅನುಕ್ತಿ(ಅಪ್ರಸಕ್ತಿ)ಗೂ ತೈತ್ತಿರೀಯದಲ್ಲಿನ ಆಕಾಶದ ಉತ್ಪತ್ತಿ- ವಚನಕ್ಕೂ ವಿರೋಧವಿಲ್ಲ.

**ननु तैत्तिरीय आकाशस्य पूर्वं जन्मोक्तं छान्दोग्ये तु तेजस इति विरोध इति चेन्न ।**

ಪ್ರಶ್ನೆ - ತೈತ್ತಿರೀಯದಲ್ಲಿ ಆಕಾಶಕ್ಕೆ ಮೊದಲು ಜನ್ಮ ಎಂದು ಹೇಳಿದೆ. ಆದರೆ ಛಾಂದೋಗ್ಯದಲ್ಲಿ ತೇಜಸ್ಸಿಗೆ ಮೊದಲು ಜನ್ಮ ಎಂದು ತಿಳಿದುಬರುತ್ತಿದೆ. ಹಾಗಾಗಿ ವಿರೋಧ ಬರುತ್ತದೆ?

ಉತ್ತರ - ಇದು ಸರಿಯಲ್ಲ.

**त्वन्मते जगतो मिथ्यात्वेनात्यन्ताभावप्रतियोगिनो जन्मासम्भवात् । आरोपितस्य जन्मादेः श्रुत्यबोध्यत्वात् ।**

ನಿನ್ನ ಮತದಲ್ಲಿ ಬ್ರಹ್ಮಾತಿರಿಕ್ತವಾದ ಎಲ್ಲ ಪ್ರಪಂಚವೂ ಮಿಥ್ಯಾ ಆದ್ದರಿಂದ ಜಗತ್ತು ಅತ್ಯಂತಾಭಾವಪ್ರತಿಯೋಗಿ ಆಗಿದೆ. ಆಗ ಅಂತಹ ಜಗತ್ತಿಗೆ ಉತ್ಪತ್ತಿ ಎಂಬುದೇ ಅಸಂಭವ. (ಹಾಗಾಗಿ ಆಕಾಶಕ್ಕೆ ಮೊದಲು ಜನ್ಮವೋ, ತೇಜಸ್ಸಿಗೋ ? ಎಂಬ ಪ್ರಶ್ನೆಯೇ ಅಸಂಗತ). ಅತ್ಯಂತಾಭಾವ-ಪ್ರತಿಯೋಗಿಗೆ ಉದಾ:- ಶಶವಿಷಾಣ(ಮೊಲದ ಕೊಂಬು). ಶಶವಿಷಾಣಕ್ಕೆ ಎಂದಿಗೂ ಉತ್ಪತ್ತಿ ಎಂಬುದು ಸಾಧ್ಯವಿಲ್ಲ.

**छान्दोग्ये क्रमानुक्तावपि तैत्तिरीयोक्तस्य ''स इदं सर्वमसृजत'' इत्यादाविव ग्राह्यत्वेनाविरोधित्वाच्च ।**

ಛಾಂದೋಗ್ಯದಲ್ಲಿ ಸೃಷ್ಟಿಯ ಕ್ರಮವನ್ನು ಹೇಳದಿದ್ದರೂ ತೈತ್ತಿರೀಯದಲ್ಲಿ 'ಸ ಇದಂ ಸರ್ವಮಸೃಜತ' ಎಂಬುದಾಗಿ ಸೃಷ್ಟಿಯ ಕ್ರಮವನ್ನು ಹೇಳಿರುವಂತೆ ತಿಳಿದರೆ ಯಾವುದೇ ವಿರೋಧವಿಲ್ಲ.

**श्रुत्यन्तरोक्तोपसंहारश्च सर्ववेदान्ताधिकरणसिद्धः ।**

ಒಂದು ಶ್ರುತಿಯಲ್ಲಿ ಹೇಳಿದ ವಿಷಯವನ್ನು ಇನ್ನೊಂದು ಕಡೆ ಅನುಸಂಧಾನ ಮಾಡುವುದು 'ಸರ್ವವೇದಾಂತ' ಎಂಬ ಅಧಿಕರಣದಲ್ಲಿ ಸಿದ್ಧವಾಗಿದೆ.

**यद्यपि ''तत्तेजोऽसृजत वायोरग्निः'' इति श्रुत्योर्विरोधधीः तथापि ''तेजोऽतस्तथा ह्याह'' इत्यत्रैव स निरसिष्यते ।**

'ತತ್ತೇಜೋಽಸೃಜತ' ಎಂಬಲ್ಲಿ ಭಗವಂತನಿಂದ ತೇಜಸ್ಸಿನ ಸೃಷ್ಟಿಯಾಗಿದೆ ಎಂದು ಉಕ್ತವಾಗಿದೆ. ಆದರೆ 'ವಾಯೋರಗ್ನಿಃ' ಎಂಬಲ್ಲಿ ವಾಯುವಿನಿಂದ ತೇಜಸ್ಸಿನ ಸೃಷ್ಟಿ ಎಂದು ತಿಳಿಯುತ್ತಿದೆ. ಹಾಗಾಗಿ

ಈ ಎರಡು ಶ್ರುತಿಗಳಿಗೆ ವಿರೋಧ ಬರುತ್ತದಲ್ಲವೇ ? ಎಂಬ ಪ್ರಶ್ನೆಗೆ ಉತ್ತರವನ್ನು 'ತೇಜೋಽತಸ್ತಥಾಹ್ಯಾಹ' ಎಂಬ ಸೂತ್ರದಲ್ಲಿ ಕೊಡುತ್ತೇವೆ.

**किञ्चायं विरोधस्त्वन्मत आद्यस्य चतुर्थपादे ''कारणत्वेन'' इत्यत्र शङ्कित इति तत्रैव निरस्यः । न त्वत्र ।**

ನಾವು ಈಗ ಹೇಳಿದ ಪ್ರಶ್ನೆಯ(ವಿರೋಧ)ನ್ನು ನೀವು ಮೊದಲನೇ ಅಧ್ಯಾಯದ ನಾಲ್ಕನೇ ಪಾದದಲ್ಲಿ 'ಕಾರಣತ್ವೇನ' ಎಂಬ ಸೂತ್ರದಲ್ಲಿ ಮಾಡಿಕೊಂಡಿದ್ದೀರಿ. ಅಲ್ಲೇ ಆ ಪ್ರಶ್ನೆಗೆ ಉತ್ತರವನ್ನು ಕೊಡಬೇಕು. ಇಲ್ಲಿ ಅಲ್ಲ.

**प्रपञ्चितं चैतदस्माभिस्तत्रैव ।**

ನಾವು ಈ ವಿರೋಧ ಹಾಗೂ ಅದರ ಪರಿಹಾರವನ್ನು ಅಲ್ಲಿಯೇ 'ಕಾರಣತ್ವೇನ' ಎಂಬಲ್ಲಿಯೇ ಹೇಳಿದ್ದೇವೆ.

**किञ्च मम रीत्या ''अनादिर्वा अयमाकाशः आकाशवत्सर्वगतश्च नित्यः स यथाऽनन्तोऽयमाकाशः आकाशः सम्भूत'' इत्यनादित्वसादित्वश्रुत्योः स्पष्टविरोधेन पूर्वपक्षसम्भवे नास्पष्टश्रुतिविरोधेन स युक्तः ।**

ನಮ್ಮ ಪ್ರಕಾರ 'ಅನಾದಿರ್ವಾಽಯಮಾಕಾಶಃ' 'ಆಕಾಶವತ್ಸರ್ವಗತಶ್ಚ ನಿತ್ಯಃ' 'ಸ ಯಥಾ ಅನಂತೋಽಯಮಾಕಾಶಃ' ಇದೇ ಮೊದಲಾದ ಶ್ರುತಿಗಳಲ್ಲಿ ಆಕಾಶಕ್ಕೆ ಅನಾದಿತ್ವ ಗೋಚರವಾಗುತ್ತಿದೆ. 'ಆತ್ಮನ ಆಕಾಶಃ ಸಂಭೂತಃ' ಎಂಬಲ್ಲಿ ಆಕಾಶಕ್ಕೆ ಉತ್ಪತ್ತಿ ಪ್ರತೀತವಾಗುತ್ತಿದೆ. ಹೀಗೆ ಅನಾದಿತ್ವವನ್ನು ಸಾದಿತ್ವವನ್ನು ಹೇಳುವ ಶ್ರುತಿಗಳಿಗೆ ಪರಸ್ಪರ ವಿರೋಧ ಎಂಬುದು ಸ್ಪಷ್ಟವಾಗಿದೆ. ಆದರೆ ನೀವು ಹೇಳುವ ವಿರೋಧ ಅಸ್ಪಷ್ಟವಾಗಿದೆ. ಹಾಗಾಗಿ ಅದು ಯುಕ್ತವಲ್ಲ.

**किञ्चाद्येन सिद्धान्त्येकदेशिमतं प्रक्रम्य द्वितीयेन विरोधपूर्वपक्षमुक्त्वा पुनस्तृतीयादिभिरेकदेशिमतस्य विक्षिप्योक्तौ न हेतुरस्ति ।**

ನೀವು ಹೇಳುವಂತೆ ಈ ಅಧಿಕರಣದ ಮೊದಲನೇ ಸೂತ್ರ ಸಿದ್ಧಾಂತಗಳ ಏಕದೇಶೀಯರದ್ದು. ಎರಡನೇ ಸೂತ್ರ ಪೂರ್ವಪಕ್ಷಸೂತ್ರ. ಮತ್ತೆ ಪುನಃ ಮೂರನೇ, ನಾಲ್ಕನೇ, ಐದನೇ ಸೂತ್ರಗಳಲ್ಲಿ ಸಿದ್ಧಾಂತ್ಯೇಕದೇಶೀಯರ ಮತಪ್ರಸ್ತಾಪ. ಹೀಗೆ ವಿಪರೀತಕ್ರಮವಾಗಿ ಅರ್ಥ ಹೇಳುವುದರಲ್ಲಿ ಯಾವುದೇ ಕಾರಣವಿಲ್ಲ.

**किञ्च चेदित्यादिपूर्वपक्षचिह्नस्य नेत्यादिसिद्धान्तचिह्नस्य एक इत्याद्येकदेशिमत-चिह्नस्याभावेऽपि**

(ನೀವು ಹೇಳುವಂತೆ ಅರ್ಥ ಹೇಳಲು ಸೂತ್ರದಲ್ಲಿ ಯಾವುದೇ ಸೂಚನೆಗಳಿಲ್ಲ) 'ಚೇತ್' ಎಂಬುದು ಪೂರ್ವಪಕ್ಷವನ್ನು ಸೂಚಿಸುವ ಚಿಹ್ನೆ. ಅದು ಎರಡನೇ ಸೂತ್ರದಲ್ಲಿ ಇಲ್ಲ. 'ನ' ಇದು

ಸಿದ್ಧಾಂತಸೂಚಕವಾದ ಚಿಹ್ನೆ. ಅದು ಸಿದ್ಧಾಂತವನ್ನು ಹೇಳುವ ಸೂತ್ರಗಳಲ್ಲಿ ಇಲ್ಲ. 'ಏಕೆ' ಎಂಬುದು ಸಿದ್ಧಾಂತ್ಯೇಕದೇಶೀಯರ ಮತವನ್ನು ಸೂಚಿಸುವ ಚಿಹ್ನೆ, ಅದೂ ಕೂಡ ಇಲ್ಲ.

**तथा मम रीत्याऽऽद्ये पूर्वाधिकरणादनुवृत्तमुत्पत्त्यसम्भवं न वियदनुत्पत्तिमदिति वियति नञा निषिध्य ''अश्रुतेः'' इत्यनेन तत्रानुत्पत्तिश्रुत्यभावहेतुमुक्त्वा तृतीय-आद्योक्तहेतुसिद्ध्यर्थमनुत्पत्तिश्रुतेर्गौणत्वोक्तिरित्येवं सर्वेषां सिद्धान्तसूत्रत्वसम्भवे**

ನಮ್ಮ ಪ್ರಕಾರ 'ನ ವಿಯದಶ್ರುತೇಃ' ಎಂಬ ಸೂತ್ರದಲ್ಲಿ ಹಿಂದಿನ ಅಧಿಕರಣದಿಂದ 'ಉತ್ಪತ್ತ್ಯಸಂಭವಃ' ಎಂಬ ಪದದ ಅನುವೃತ್ತಿ ಇದೆ. ಆಗ 'ವಿಯತ್ತಿಗೆ ಉತ್ಪತ್ತಿ ಇಲ್ಲ' ಎಂಬುದಾಗಿ 'ನ' ಶಬ್ದಕ್ಕೆ 'ವಿಯತ್' ನೊಂದಿಗೆ ಸಂಬಂಧ ಹೇಳಿ ಅದಕ್ಕೆ ಕಾರಣವಾಗಿ 'ಅಶ್ರುತೇಃ' ಎಂಬುದನ್ನು ಇಟ್ಟುಕೊಟ್ಟು ವಿಯತ್(ಆಕಾಶ)ನ ಉತ್ಪತ್ತಿ ಎಲ್ಲಿಯೂ ಶ್ರುತವಾಗಿಲ್ಲ ಎಂದು ಹೇಳುವುದು ಸಮಂಜಸವಾಗುತ್ತದೆ.

**न सूत्राणि छित्त्वा पूर्वपक्षत्वादिवर्णनं युक्तम् ।**

ಹೀಗೆ ನಮ್ಮ ಪ್ರಕಾರ ಅರ್ಥ ಹೇಳಲು ಬರುವಾಗ ನೀವು ಹೇಳುವಂತೆ ಸೂತ್ರಗಳನ್ನು ಅಕ್ರಮವಾಗಿ ಸಿದ್ಧಾಂತಪೂರ್ವಪಕ್ಷಸೂತ್ರ ಎಂದಿರುವುದು ಸರಿಯಲ್ಲ.

**सिद्धान्तेऽपि षष्ठोक्तो हेतुरयुक्तः । त्वदुक्तस्यैकविज्ञानेन सर्वविज्ञानस्य प्रकृत्यधिकरणादौ निरस्तत्वात् ।**

ನಿಮ್ಮ ಸಿದ್ಧಾಂತದಲ್ಲಿ ಆರನೇ ಸೂತ್ರದಲ್ಲಿ ಹೇಳಿದ ಹೇತುವು ಸರಿಯಲ್ಲ. ಏಕೆಂದರೆ ನೀವು ಹೇಳುವ 'ಒಂದರ ಜ್ಞಾನದಿಂದ ಎಲ್ಲದರಜ್ಞಾನ' ಎಂಬ ಹೇತುವನ್ನು (ನಿಮ್ಮ ರೀತಿಯಿಂದ) ನಾವು ಪ್ರಕೃತ್ಯಧಿಕರಣದಲ್ಲಿ ನಿರಾಕರಿಸಿದ್ದೇವೆ.

**भावरूपाज्ञानादीनामिवाकाशस्याप्यनादित्वेऽप्येकविज्ञानेन सर्वविज्ञानोपपत्तेश्च ।**

ನೀವು ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಹೊಂದಿಸುವುದಕ್ಕಾಗಿ ಆಕಾಶಕ್ಕೆ ಅನಾದಿತ್ವವನ್ನು ಒಪ್ಪದೆ ಉತ್ಪತ್ತಿಯನ್ನು ಹೇಳುತ್ತೀರಿ. ಭಾವರೂಪ ಅಜ್ಞಾನಕ್ಕೆ ಉತ್ಪತ್ತಿಯನ್ನು ಹೇಳುವುದಿಲ್ಲ. ಆದರೆ ಈ ಭಾವರೂಪ ಅಜ್ಞಾನವೂ ಸರ್ವದಲ್ಲಿ ಸೇರಿದೆ. ಆಗ ಭಾವರೂಪ ಅಜ್ಞಾನದ ವಿಷಯದಲ್ಲಿ ಹೇಗೆ ಈ ಹೇತುವನ್ನು ಕೂಡಿಸುತ್ತೀರೋ ಹಾಗೇ ಆಕಾಶಕ್ಕೂ ಅನಾದಿತ್ವವನ್ನು ಒಪ್ಪಿ ಕೂಡಿಸಬಹುದು.

**कार्यत्वमारोपितत्वं चेच्छ्रुतिसूत्रविरोधः ।**

ಹಾಗಲ್ಲ, ಕಾರ್ಯತ್ವ (ಉತ್ಪತ್ತಿ) ಎಂದರೆ ಆರೋಪಿತತ್ವ ಎಂದು ಹೇಳುತ್ತೇವೆ. ಆಗ ಈ ಆರೋಪಿತತ್ವರೂಪವಾದ ಕಾರ್ಯತ್ವ ಭಾವರೂಪ ಅಜ್ಞಾನಕ್ಕೂ ಇದೆ. ಆದ್ದರಿಂದ ಹಿಂದೆ ಹೇಳಿದ ಆಕ್ಷೇಪಕ್ಕೆ ಅವಕಾಶವಿಲ್ಲ ಎಂದರೆ ಅದು ಸರಿಯಲ್ಲ. ಕಾರ್ಯತ್ವ ಎಂದರೆ ಆರೋಪಿತತ್ವ ಎಂದಿಟ್ಟುಕೊಂಡರೆ ಆಗ ಶ್ರುತಿ, ಸೂತ್ರ ಇವುಗಳಿಂದ ವಿರೋಧ ಬರುತ್ತದೆ.

ವಿಯದಧಿಕರಣ (೨-೩-೧)

**नहि ''आत्मन आकाशः सम्भूत'' इत्यादिविषयवाक्येषु तदनुसारिसूत्रेषु चाकाशादेरारोप उच्यते ।**

(ಅದನ್ನೇ ವಿವರಿಸುತ್ತಾರೆ) 'ಆತ್ಮನ ಆಕಾಶಃ ಸಂಭೂತಃ' ಎಂಬ ಶ್ರುತಿಗಳಲ್ಲಾಗಲೀ ಅಥವಾ ಇದನ್ನು ವಿಷಯವಾಗಿ ಹೊಂದಿರುವ ಸೂತ್ರಗಳಲ್ಲಾಗಲೀ ಆಕಾಶಾದಿಗಳು ಆರೋಪಿತ ಎಂದು ಹೇಳಿಲ್ಲ.

**तथात्व आकाशादेरप्युत्पत्तौ मानाभावेनाविद्यादिवदनाद्यारोपितत्वमेव स्यात्।**

ಹಾಗೊಂದು ವೇಳೆ ಕಾರ್ಯತ್ವ ಎಂದರೆ ಆರೋಪಿತತ್ವ ಎಂದಿಟ್ಟುಕೊಂಡರೆ ಆಗ ಆಕಾಶಾದಿಗಳಿಗೂ ಉತ್ಪತ್ತಿ ಇದೆ ಎಂಬ ವಿಷಯದಲ್ಲಿ ಯಾವುದೇ ಪ್ರಮಾಣ ಇರುವುದಿಲ್ಲವಾದ್ದರಿಂದ ಆಕಾಶವೂ ಕೂಡ ಭಾವರೂಪ ಅಜ್ಞಾನದಂತೆ ಅನಾದ್ಯಾರೋಪಿತ ಎಂದಾಗಬೇಕಾಗುತ್ತದೆ. (ಆದರ ನೀವು ಹಾಗೆ ಒಪ್ಪಿಲ್ಲ).

**नात्मा श्रुतेरित्यत्र जीवस्योत्पत्तिनिषेधोऽप्ययुक्तः स्यात् ।**

'ನಾತ್ಮಾ ಶ್ರುತೇರ್ನಿತ್ಯತ್ವಾಚ್ಚ ತಾಭ್ಯಃ' ಎಂಬ ಸೂತ್ರದಲ್ಲಿ ಜೀವನ ಉತ್ಪತ್ತಿಯನ್ನು ನಿಷೇಧ ಮಾಡಿರುವುದೂ ಸರಿಯಾಗುವುದಿಲ್ಲ.

**विशिष्टरूपस्य जीवस्याप्यारोपितत्वात् ।**

ವಿಶಿಷ್ಟರೂಪವಾದ ಜೀವನೂ ಕೂಡ ಆರೋಪಿತನಾಗಿದ್ದಾನೆ. ಇಂತಹ ಉತ್ಪತ್ತಿ ಜೀವನಿಗೂ ಇದೆ. ಆದ್ದರಿಂದ ಜೀವನಿಗೆ ಉತ್ಪತ್ತಿ ನಿಷೇಧಮಾಡಿದ್ದು ಸರಿಯಾಗದೇ ಹೋಗಬೇಕಾಗುತ್ತದೆ.

**असम्भवस्तु सतोऽनुपपत्तेरित्यत्र च ब्रह्मण आरोपमात्रस्य निषेधः स्यात् । न तूत्पत्तेः ।**

'ಅಸಂಭವಸ್ತು ಸತೋಽನುಪಪತ್ತೇಃ' ಎಂಬಲ್ಲಿ ಬ್ರಹ್ಮನಿಗೆ ಆರೋಪಿತತ್ವವಿಲ್ಲ ಎಂದಷ್ಟೇ ಹೇಳಬೇಕಾಗುತ್ತದೆ ಹೊರತು ಉತ್ಪತ್ತಿ ಇಲ್ಲ ಎಂದು ಹೇಳಿದ್ದು ಸರಿಯಾಗದೇ ಹೋಗಬೇಕಾಗುತ್ತದೆ (ಏಕೆಂದರೆ ಉತ್ಪತ್ತಿ ಎಂದರೆ ಆರೋಪ. ಆರೋಪವಿಲ್ಲ ಎಂದರೆ ಉತ್ಪತ್ತಿಯಿಲ್ಲ ಎಂದೇ ಅರ್ಥ. ಪುನಃ ಉತ್ಪತ್ತಿ ಇಲ್ಲ ಎಂದು ಹೇಳುವುದು ವ್ಯರ್ಥ)

**अपि च मम रीत्या ''स इदं सर्वमसृजत'' इति प्रतिज्ञया साक्षात्सर्वजन्मसिद्धावेकविज्ञानेन सर्वविज्ञानप्रतिज्ञयाऽर्थात्तदुक्तिरयुक्ता ।**

ನಾವು ಹೇಳುವಂತೆ 'ಸ ಇದಂ ಸರ್ವಮಸೃಜತ' ಎಂಬ ಪ್ರತಿಜ್ಞೆಯಿಂದ ಸಾಕ್ಷಾತ್ತಾಗಿ ಈಶ್ವರನಿಂದ ಎಲ್ಲ ಜಗತ್ತು ಹುಟ್ಟಿದೆ ಎಂದು ಸಿದ್ಧವಾಗುವಾಗ ನೀವು 'ಏಕವಿಜ್ಞಾನೇನ ಸರ್ವವಿಜ್ಞಾನ' ಎಂಬ ಪ್ರತಿಜ್ಞೆಯನ್ನು ಕೂಡಿಸುವುದಕ್ಕಾಗಿ ಸಕಲಜಗತ್ತಿಗೂ ಬ್ರಹ್ಮ ಉಪಾದಾನಕಾರಣ ಎಂದು ಹೇಳುವುದು ಸರಿಯಲ್ಲ. ಹೀಗೆ ಹೇಳುವುದು ಅರ್ಥಾತ್‌ಸಿದ್ಧ.

**सप्तमे विभागशब्दोक्तोभिन्नत्वरूपो हेतुरप्ययुक्तः ।**

ಏಳನೇ ಸೂತ್ರದಲ್ಲಿ ವಿಭಾಗಶಬ್ದದಿಂದ ಹೇಳಲ್ಪಟ್ಟ 'ಭಿನ್ನತ್ವ' ಎಂಬ ಹೇತುವೂ ಅಸಿದ್ಧ.

**आरोपितस्य धर्मिसत्तासमानसत्ताकस्य तस्याधिष्ठानेऽनृतव्यावृत्तेश्च ब्रह्मण्यपि सत्त्वात् । दृष्टो हि शुक्तौ स्वारोपिताद्रूप्याद्धर्मिसत्तासमानसत्ताको भेदः । सत्यस्य च तस्याकाशेऽप्यभावात् ।**

(ಅವರ ಪ್ರಕಾರ ಅನುಮಾನ ಪ್ರಯೋಗ ಹೀಗೆ - ಆಕಾಶವು ಉತ್ಪತ್ತಿವುಳ್ಳದ್ದು ವಿಭಕ್ತವಾದ್ದರಿಂದ (ಭಿನ್ನವಾದ್ದರಿಂದ). ಈ ಭೇದ ಆಕಾಶಕ್ಕೆ ಪೃಥಿವೀ ಮೊದಲಾದವುಗಳಿಂದ ಎಂದು ತಿಳಿಯಬೇಕು. ಯಾವುದು ಭೇದವುಳ್ಳದ್ದೋ ಅದು ಉತ್ಪತ್ತಿವುಳ್ಳದ್ದು ಎಂದು ವ್ಯಾಪ್ತಿ ಘಟಾದಿಗಳಂತೆ). ಈಗ ಈ ಹೇತುವು ಸರಿಯಲ್ಲ ಏಕೆಂದರೆ ಈ ಭೇಧ ಉತ್ಪತ್ತಿ ಇಲ್ಲದ (ಸಾಧ್ಯಾಭಾವ) ಅಧಿಷ್ಠಾನದಲ್ಲಿ ಹಾಗೂ ಬ್ರಹ್ಮನಲ್ಲಿ ಇದೆ. ಹಾಗಾಗಿ ನಿಮ್ಮ ಹೇತುವಿಗೆ ವ್ಯಭಿಚಾರ.

ಈ ಭೇದವು ಆರೋಪಿತ. ಅಥವಾ ಧರ್ಮಿಸತ್ತಾಸಮಾನಸತ್ತಾಕ. ಎಂದರೆ ಆಗ ರಜತಾರೋಪಕ್ಕೆ ಅಧಿಷ್ಠಾನವಾದ ಶುಕ್ತಿಯಲ್ಲಿ ವ್ಯಭಿಚಾರ. ಶುಕ್ತಿಯಲ್ಲಿ ರಜತಭೇಧ ಆರೋಪಿತ ಹಾಗೂ ಧರ್ಮಿಸತ್ತಾ-ಸಮಾನಸತ್ತಾಕ ಶುಕ್ತಿ ವ್ಯಾವಹಾರಿಕ, ರಜತಭೇದವೂ ವ್ಯಾವಹಾರಿಕ. ಈ ಭೇದವು ಸತ್ಯ ಎಂದಾಗ ಅಂತಹ ಭೇಧ ಆಕಾಶದಲ್ಲಿಯೂ ಇಲ್ಲ. ಆಗ ಹೇತುವಿಗೆ ಅಸಿದ್ಧಿ ಎಂಬ ದೋಷ.

**केचित्तु । आकाशस्याजन्यत्वमित्याद्येन पूर्वपक्षे जन्यत्वमिति द्वितीयेन सिद्धान्तः ।**

ರಾಮಾನುಜರು ಹೀಗೆ ಹೇಳುತ್ತಾರೆ. ಈ ಅಧಿಕರಣದ ಮೊದಲನೇ 'ನ ವಿಯದಶ್ರುತೇ' ಎಂಬುದು ಪೂರ್ವಪಕ್ಷ ಸೂತ್ರ. ಆಕಾಶಕ್ಕೆ ಉತ್ಪತ್ತಿ ಇಲ್ಲ ಎಂದರ್ಥ. ಏಕೆಂದರೆ 'ಅಶ್ರುತಃ' ಹಾಗೆ ಹೇಳಲು ಪ್ರಮಾಣವಿಲ್ಲ. ಎರಡನೇ 'ಅಸ್ತಿ ತು' ಎಂಬ ಸೂತ್ರ ಸಿದ್ಧಾಂತಸೂತ್ರ. ಆಕಾಶಕ್ಕೆ ಉತ್ಪತ್ತಿ ಇದೆ ಎಂದು ಸಿದ್ಧಾಂತ.

**पुनस्त्रिभिरुत्पत्तिश्रुतिर्गौणीति पूर्वपक्षे एकविज्ञानेन सर्वविज्ञानादियुक्तिभिर्न गौणीति । द्वाभ्यां सिद्धान्त इत्याहुः ।**

ಮತ್ತೆ ಮುಂದಿನ ಮೂರು ಸೂತ್ರಗಳಿಂದ ಪೂರ್ವಪಕ್ಷ. ಹಿಂದೆ ಹೇಳಿದ ಉತ್ಪತ್ತಿ ಶ್ರುತಿ ಗೌಣ(ಅಪ್ರಧಾನ). ಆದ್ದರಿಂದ ಪುನಃ ಆಕಾಶಕ್ಕೆ ಉತ್ಪತ್ತಿ ಇಲ್ಲ ಎಂದು ಮುಂದಿನ ಎರಡು ಸೂತ್ರಗಳಿಂದ ಈ ಆಕ್ಷೇಪಕ್ಕೆ ಉತ್ತರ. ಉತ್ಪತ್ತಿ ಶ್ರುತಿಯು ಗೌಣೀ ಅಲ್ಲ ಎನ್ನುವುದಕ್ಕೆ ಅನೇಕ ಯುಕ್ತಿಗಳು. ಅದರಲ್ಲಿ ಒಂದು ಏಕವಿಜ್ಞಾನದಿಂದ ಸರ್ವವಿಜ್ಞಾನ ಎಂಬ ಪ್ರತಿಜ್ಞೆ. ಇದೇ ಸಿದ್ಧಾಂತವೆಂದು ಹೇಳುವರು.

**तन्न । जीवप्रकृत्यादीनामिवाकाशस्यानादित्वेऽप्येकविज्ञानेन सर्वविज्ञानोपपत्तेरित्याद्युक्तदोषसाम्यात् ।**

ಇವರು ಮಾಡಿರುವ ಅಧಿಕರಣಾರ್ಥ ಸರಿಯಲ್ಲ. ಜೀವ, ಪ್ರಕೃತಿ ಇವೆಲ್ಲ ನಿಮ್ಮ ಮತದಲ್ಲೂ ಅನಾದಿ, ಆದರೂ ಕೂಡ ಏಕವಿಜ್ಞಾನದಿಂದ ಸರ್ವವಿಜ್ಞಾನ ಎಂಬ ಪ್ರತಿಜ್ಞೆಯನ್ನು ಹೇಗೆ ಕೂಡಿಸುತ್ತೀರೋ ಅದೇ ರೀತಿ ಆಕಾಶವೂ ಅನಾದಿ ಆದರೂ ಕೂಡಿಸಬಹುದು. ಈ ಪ್ರತಿಜ್ಞೆಗೆ ಭಂಗ ಬರುತ್ತದೆ ಎಂಬ ಭಯದಿಂದ ಆಕಾಶಕ್ಕೆ ಉತ್ಪತ್ತಿ ಒಪ್ಪಬೇಕಿಲ್ಲ. ಅದ್ವೈತಿಗಳಿಗೆ ಹೇಳಿದ ಇದೇ ಮೊದಲಾದ ದೋಷಗಳು ನಿಮಗೂ ಬರುತ್ತವೆ.

**मन्मते तु अयमिह शक्तोऽत्र तु नेति विभागरूपः सौत्रो हेतुः ''विभागो ह्यल्पशक्तिः स्यात्'' इति स्मृत्याऽल्पशक्तित्वरूपः । स च पराधीनविशेषावाप्तिरूप विकारव्याप्य एवेति न कश्चिद्दोषः**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् वियदधिकरणं सम्पूर्णम् ।।१।।**

ನಮ್ಮ ಮತದಲ್ಲಿ 'ಯಾವದ್ವಿಕಾರಂ ತು ವಿಭಾಗಃ..' ಎಂಬ ಸೂತ್ರದಲ್ಲಿ ಹೇಳಿದ ವಿಭಾಗ ಎಂಬುದೇ ಹೇತು. ಆಕಾಶಕ್ಕೆ ಉತ್ಪತ್ತಿ ಇದೆ ಎಂಬ ವಿಷಯದಲ್ಲಿ ವಿಭಾಗ ಎಂದರೆ ಅಲ್ಪಶಕ್ತಿತ್ವ ಎಂಬ ಅರ್ಥ. 'ವಿಭಾಗೋ ಹ್ಯಲ್ಪಶಕ್ತಿಃ ಸ್ಯಾತ್' ಎಂಬ ಪ್ರಮಾಣದಿಂದ ಸಿದ್ಧ. ಇವನು (ಇದು) ಇದರಲ್ಲಿ ಸಮರ್ಥ ಅಲ್ಲ ಎಂಬುದು ವಿಭಾಗ. ಅದು ಅಲ್ಪಶಕ್ತಿತ್ವದಲ್ಲಿ ಪರ್ಯವಸಾನವಾಗುತ್ತದೆ. ಈ ಅಲ್ಪಶಕ್ತಿತ್ವ ಎಂಬ ವಿಭಾಗವು ಪರಾಧೀನವಿಶೇಷಾವಾಪ್ತಿರೂಪ ಎಂಬ ವಿಕಾರದಿಂದ ವ್ಯಾಪ್ತವಾಗಿದೆ. ಹಾಗಾಗಿ ಯಾವುದೇ ದೋಷವಿಲ್ಲ.

(ಧೂಮವು ಅಗ್ನಿವ್ಯಾಪ್ಯ, ಅಗ್ನಿಯು ಧೂಮವ್ಯಾಪಕ. ಅಂದರೆ ಧೂಮ ಇದ್ದಲ್ಲೆಲ್ಲಾ ಅಗ್ನಿ ಇರಲೇಬೇಕು. ಹಾಗೆಯೇ ವಿಭಾಗವು ವಿಕಾರವ್ಯಾಪ್ಯ ಎಂದರೆ ವಿಭಾಗ ಇದ್ದಲ್ಲೆಲ್ಲಾ ವಿಕಾರ ಇರಲೇಬೇಕು ಎಂದರ್ಥ. ಅನುಮಾನಪ್ರಯೋಗ ಹೀಗೆ - ಆಕಾಶವು ವಿಕಾರವುಳ್ಳದ್ದು ವಿಭಾಗವಿರುವುದರಿಂದ)

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ವಿಯದಧಿಕರಣವು ಸಂಪೂರ್ಣವಾಯಿತು

**प्रकाशः —**

**अन्ये त्विति** ।। ''अस्ति तु'' इति सूत्रार्थमनुवदति ।। **अस्ति हीति** ।। पूर्वपक्षयित्वेति ।। पूर्वपक्षसूत्रमित्युक्त्वा भामत्यां तत्सूत्रभाष्यस्य तथैव व्याख्यानादिति भावः ।

'ಅಸ್ತಿ ತು' ಎಂಬ ಸೂತ್ರದ ಅರ್ಥವನ್ನು ಅನುವಾದ ಮಾಡುತ್ತಿದ್ದಾರೆ 'ಅಸ್ತಿ ಹಿ' ಎಂಬುದಾಗಿ. 'ಪೂರ್ವಪಕ್ಷಯಿತ್ವಾ' ಎಂಬುದಕ್ಕೆ ಪೂರ್ವಪಕ್ಷ ಸೂತ್ರವಾಗಿ ಹೇಳಿ ಎಂದರ್ಥ. ಭಾಮತಿಗ್ರಂಥದಲ್ಲಿ ಈ ಸೂತ್ರಭಾಷ್ಯವನ್ನು ಹೀಗೇ ವ್ಯಾಖ್ಯಾನಿಸಿರುವುದರಿಂದ ಎಂದು ಅಭಿಪ್ರಾಯ.

**प्रकाशः** – न वियदश्रुतेरित्येतदर्थमन्वाह – **वियत इति** ।। गौण्यसम्भवादिति तृतीयसूत्रार्थमाह – **सम्भूतेति** ।। शब्दाच्चेति चतुर्थार्थमाह –**आकाशवदिति** ।। स्याच्चैकस्य ब्रह्मशब्दवदिति पञ्चमार्थमाह – **स्याच्चेति** ।। **अन्नादाविति** ।।

'ನ ವಿಯದಶ್ರುತೇ:' ಎಂಬ ಸೂತ್ರದ ಅರ್ಥವನ್ನು ಅನುವಾದ ಮಾಡುತ್ತಿದ್ದಾರೆ 'ವಿಯತಃ' ಎಂಬುದಾಗಿ. 'ಗೌಣ್ಯಸಂಭವಾತ್' ಎಂಬ ಮೂರನೇ ಸೂತ್ರದ ಅರ್ಥವನ್ನು ಹೇಳುತ್ತಿದ್ದಾರೆ 'ಸಂಭೂತ' ಎಂಬುದಾಗಿ. 'ಶಬ್ದಾಚ್ಚ' ಎಂಬ ನಾಲ್ಕನೇ ಸೂತ್ರದ ಅರ್ಥ ಹೇಳುತ್ತಿದ್ದಾರೆ 'ಆಕಾಶವತ್' ಎಂಬುದಾಗಿ. 'ಸ್ಯಾಚ್ಚೈಕಸ್ಯಬ್ರಹ್ಮಶಬ್ದವತ್' ಎಂಬ ಐದನೇ ಸೂತ್ರಾರ್ಥವನ್ನು ಹೇಳುತ್ತಿದ್ದಾರೆ 'ಸ್ಯಾತ್' ಎಂಬುದಾಗಿ.

**प्रकाशः** – ''अन्नं ब्रह्मेति व्यजानात् प्राणो ब्रह्मेति व्यजानात्'' इत्यन्नप्राणमनोविज्ञानेष्वित्यर्थः ।

(ಅನ್ನಾದಿ ಎಂಬಲ್ಲಿರುವ ಆದಿಶಬ್ದದ ಅರ್ಥ ವಿವರಿಸುತ್ತಿದ್ದಾರೆ) 'ಅನ್ನ ಬ್ರಹ್ಮೇತಿ ವ್ಯಜಾನಾತ್ ಪ್ರಾಣೋ ಬ್ರಹ್ಮೇತಿ ವ್ಯಜಾನಾತ್' ಎಂಬುದಾಗಿ. ಉಪನಿಷತ್ತಿನಲ್ಲಿ ಅನ್ನ, ಪ್ರಾಣ, ಮನಸ್ಸು, ವಿಜ್ಞಾನ ಇವುಗಳಲ್ಲಿ ಬ್ರಹ್ಮಶಬ್ದ ಪ್ರಯೋಗವಾಗಿದೆ.

**प्रकाशः** – तेषां ''आनन्दो ब्रह्म'' इत्युक्तानन्दरूपे ब्रह्मणि द्वारत्वेनाब्रह्मत्वादिति भावः ।।

ಈ ಅನ್ನ, ಪ್ರಾಣ ಮೊದಲಾದವುಗಳಲ್ಲಿ ಪ್ರಯುಕ್ತವಾದ ಬ್ರಹ್ಮಶಬ್ದ ಗೌಣ. 'ಆನಂದೋ ಬ್ರಹ್ಮ' ಎಂಬಲ್ಲಿ ಆನಂದರೂಪವಾದ ಬ್ರಹ್ಮನಲ್ಲಿ ಬ್ರಹ್ಮಶಬ್ದ ಮುಖ್ಯ. ಅನ್ನಾದಿಗಳು ದ್ವಾರ(ಕಾರಣ)ಭೂತವಾದ್ದರಿಂದ ಅದೆಲ್ಲಾ ಬ್ರಹ್ಮ ಅಲ್ಲ.

**प्रकाशः** – **सिद्धान्तीति** ।। ''एवं सिद्धान्त्येकदेशिमते प्राप्त इदमाह'' इति ''प्रतिज्ञाहानिरव्यतिरेकाच्छब्देभ्य'' इत्येतद्भामत्यामवतार्य तत्सूत्रभाष्यस्य व्याख्यानादिति भावः :।

'ಪ್ರತಿಜ್ಞಾಹಾನಿರವ್ಯತಿರೇಕಾಚ್ಛಬ್ದೇಭ್ಯಃ' ಎಂಬ ಸೂತ್ರಭಾಷ್ಯದ ಅವತಾರಿಕೆಯಲ್ಲಿ ಭಾಮತಿಗ್ರಂಥದಲ್ಲಿ ಹೀಗೆ ಸಿದ್ಧಾಂತ್ಯೇಕದೇಶೀಯರ ಮತವು ಇರಲಾಗಿ ಹೀಗೆ ಹೇಳುತ್ತಿದ್ದಾರೆ ಭಾಷ್ಯಕಾರರು ಎಂಬುದಾಗಿ ಅವತಾರಿಕೆಯನ್ನು ಕೊಟ್ಟು ಈ ಸೂತ್ರಭಾಷ್ಯವನ್ನು ವ್ಯಾಖ್ಯಾನಿಸಲಾಗಿದೆ

**प्रकाशः** – तत्सूत्रार्थमाह – **आकाशस्येति** ।।

यावद्विकारं तु विभागो लोकवदित्येतदर्थमन्वाह – **किञ्चेति** ।।

ವಿಯದಧಿಕರಣ (೨-೩-೧)

ಈ 'ಪ್ರತಿಜ್ಞಾಹಾನಿ' ಎಂಬ ಸೂತ್ರದ ಅರ್ಥವನ್ನು ಹೇಳುತ್ತಿದ್ದಾರೆ 'ಆಕಾಶಸ್ಯ' ಎಂಬುದಾಗಿ. 'ಯಾವದ್ವಿಕಾರಂ ತು ವಿಭಾಗೋ ಲೋಕವತ್' ಎಂಬ ಸೂತ್ರದ ಅರ್ಥವನ್ನು ಅನುವಾದ ಮಾಡುತ್ತಿದ್ದಾರೆ 'ಕಿಂಚ' ಎಂಬುದಾಗಿ.

**प्रकाशः – अत्यन्ताभावेति ।।** तात्विकत्वेनात्यन्ताभावप्रतियोगित्वस्य मिथ्यार्थत्वे तस्य निर्धर्मकब्रह्मण्यतिव्याप्त्या स्वरूपेण तथात्वे वाच्येऽत्यन्तासत्त्वापत्तेरिति भावः ।

ಜಗತ್ತು ಮಿಥ್ಯಾ ಎಂದು ಹೇಳುವ ಮಾಯಾವಾದಿಗಳು ಮಿಥ್ಯಾತ್ವದ ಲಕ್ಷಣವನ್ನು ತ್ರೈಕಾಲಿಕನಿಷೇಧಪ್ರತಿಯೋಗಿತ್ವ ಎಂದು ಹೇಳಿದ್ದಾರೆ. ಆಗ ಅತ್ಯಂತಾಭಾವಪ್ರತಿಯೋಗಿತ್ವ ಎಂದೇ ಹೇಳಿದಂತಾಯಿತು. ಈ ಅತ್ಯಂತಾಭಾವಪ್ರತಿಯೋಗಿತ್ವ ಎಂಬ ಮಿಥ್ಯಾತ್ವ ತಾತ್ವಿಕತ್ವೇನ (ಪಾರಮಾರ್ಥಿಕರೂಪೇಣ) ಹೇಳುತ್ತೀರೋ, ಸ್ವರೂಪೇಣ ಹೇಳುತ್ತೀರೋ ? ಎಂದು ಪ್ರಶ್ನೆ. ಮೊದಲನೇ ವಿಕಲ್ಪ ಒಪ್ಪಿದರೆ ಆಗ ಬ್ರಹ್ಮನಲ್ಲಿ ಅತಿವ್ಯಾಪ್ತಿ ಅದಕ್ಕೆ ಕಾರಣ, ಬ್ರಹ್ಮ ನಿರ್ಗುಣ (ನಿರ್ಧರ್ಮ). ಅವನಲ್ಲಿ ಪಾರಮಾರ್ಥಿಕವಾದ ಯಾವ ಧರ್ಮವೂ ಇಲ್ಲ. ಹಾಗಾಗಿ ಪಾರಮಾರ್ಥಿಕತ್ವೇನ ಅತ್ಯಂತಾಭಾವಪ್ರತಿಯೋಗಿ ಬ್ರಹ್ಮನೂ ಆಗುತ್ತಾನೆ. ಆಗ ಅತಿವ್ಯಾಪ್ತಿ. ಎರಡನೇ ವಿಕಲ್ಪ ಒಪ್ಪಿದರೆ ಆಗ ಸ್ವರೂಪವೇ ಇಲ್ಲ ಎಂದಾಗಿ ಅತ್ಯಂತ ಅಸತ್ (ಶಶವಿಷಾಣದಂತೆ) ಆಗಬೇಕಾಗುತ್ತದೆ.

(ಹಾಗಾಗಿ ಅತ್ಯಂತ ಅಸತ್ ಆದ ಜಗತ್ತಿಗೆ ಜನ್ಮ ಎಲ್ಲಿ ಬಂದೀತು?)

**प्रकाशः –** श्रुत्यन्तरोक्तोपसंहारः श्रुत्यन्तरे सङ्ग्रहश्च ''सर्ववेदान्तप्रत्ययं चोदनाद्यविशेषात्'' इति तार्तीयाधिकरणसिद्ध इत्यर्थः । पूर्वपक्षसम्भव इति पदच्छेदः। नास्पृष्टेत्यत्र नञो युक्त इत्यनेनान्वयः । उदाहरणानौचित्यासाङ्गत्य-पूर्वपक्षानुत्थानान्युक्त्वा सूत्रयोजनां प्रत्याह – **किञ्चाद्येनेति ।।** अभावेऽपीत्यस्य न सूत्राणीत्यादिनाऽन्वयः ।

ಬೇರೊಂದು ಶ್ರುತಿಯಲ್ಲಿ ಹೇಳಲ್ಪಟ್ಟ ವಿಷಯವನ್ನು ಇನ್ನೊಂದು ಶ್ರುತಿಯಲ್ಲಿ ಅನುಸಂಧಾನ ಮಾಡಿಕೊಳ್ಳಬಹುದು ಎಂಬುದನ್ನು ಮೂರನೇ ಅಧ್ಯಾಯದ ಅಧಿಕರಣದಲ್ಲಿ ಹೇಳಲಾಗಿದೆ. ಚಂದ್ರಿಕಾದಲ್ಲಿ 'ಪೂರ್ವಪಕ್ಷಸಂಭವೇನಾಸ್ಪಷ್ಟ' ಎಂಬಲ್ಲಿ 'ಪೂರ್ವಪಕ್ಷ ಸಂಭವೇನ ನ' ಎಂದು ಪದವಿಭಾಗ ಮಾಡಬೇಕು, 'ಪೂರ್ವಪಕ್ಷಸಂಭವೇನ' ಎಂಬುದಾಗಿ ಅಲ್ಲ. 'ನಾಸ್ಪಷ್ಟ' ಎಂಬಲ್ಲಿರುವ 'ನ' ಎಂಬ ಪದಕ್ಕೆ ಮುಂದೆ ಇರುವ 'ಯುಕ್ತಃ' ಎಂಬ ಪದದೊಂದಿಗೆ ಅನ್ವಯ. ಇದುವರೆಗೆ ಅದ್ವೈತಿಗಳಿಗೆ ಉದಾಹರಣೆಯು ಅನುಚಿತ, ಅಸಂಗತ ಹಾಗೂ ಪೂರ್ವಪಕ್ಷದ ಅನುದ್ಭವ ಎಂಬ ದೋಷಗಳನ್ನು ಹೇಳಿ ಈಗ ಅವರ ಸೂತ್ರಯೋಜನೆಯನ್ನು ನಿರಾಕರಿಸುತ್ತಿದ್ದಾರೆ 'ಕಿಂಚ' ಎಂಬುದಾಗಿ. 'ಅಭಾವೇऽಪಿ' ಎಂಬುದನ್ನು ಮುಂದೆ ಇರುವ 'ಸೂತ್ರಾಣಿ' ಎಂಬ ಪದದ ಜೊತೆಗೆ ಅನ್ವಯ ಮಾಡಿಕೊಳ್ಳಬೇಕು.

**प्रकाशः** – छित्वा विक्षिप्येत्यर्थः । ऐककण्ठ्यमनुपेत्येति वा ।। **प्रकृतीति** ।। आदिपदेनारम्भणाधिकरणम् ।। **भावरूपेति** ।। तेषां यथा ब्रह्मण्यारोपितत्वेनैकज्ञानेन सर्वज्ञाननिर्वाहस्तथेत्यर्थः । तथा चात्र नये कार्यत्वोक्तिर्व्यर्थेति भावः ।

'ಛಿತ್ವಾ' ಎಂಬ ಶಬ್ದಕ್ಕೆ 'ವಿಕ್ಷಿಪ್ಯ' ಎಂದರ್ಥ ಅಂದರೆ ಅಲ್ಲಿಷ್ಟು ಇಲ್ಲಿಷ್ಟು ಎಂದು. ಅಥವಾ 'ಛಿತ್ವಾ' ಎಂದರೆ ಏಕಕಂಠತೆಯನ್ನು ಅನುಸರಿಸದೆ, ಅಂದರೆ ಪೂರ್ವಪಕ್ಷವನ್ನು ಪೂರ್ತಿ ಮುಗಿಸದೆ ಮೊದಲು ಒಂದು ಸೂತ್ರದಿಂದ ಸಿದ್ಧಾಂತ್ಯೇಕದೇಶೀಯಮತ ಹೇಳುವುದು ಪುನಃ ವಿರೋಧ ಹೇಳುವುದು ಪುನಃ ಸಿದ್ಧಾಂತ್ಯೇಕದೇಶೀಯಮತ ಹೇಳುವುದು ಎಂದರ್ಥ. 'ಪ್ರಕೃತ್ಯಾಧಿಕರಣಾದೌ' ಎಂಬಲ್ಲಿ ಆದಿ ಪದದಿಂದ ಆರಂಭಣಾಧಿಕರಣವನ್ನು ಇಟ್ಟುಕೊಳ್ಳಬೇಕು. ಭಾವರೂಪಾಜ್ಞಾನ ಮೊದಲಾದವುಗಳು ಬ್ರಹ್ಮನಲ್ಲಿ ಆರೋಪಿತ ಎಂದರೂ ಹೇಗೆ ಏಕವಿಜ್ಞಾನೇನ ಸರ್ವವಿಜ್ಞಾನವನ್ನು ಕೂಡಿಸುತ್ತೀರೋ ಹಾಗೇ ಆಕಾಶದ ವಿಷಯದಲ್ಲೂ ನಿರ್ವಾಹ ಮಾಡಬಹುದು ಎಂದರ್ಥ. ಹಾಗಾಗಿ ಈ ಅಧಿಕರಣದಲ್ಲಿ ಆಕಾಶಕ್ಕೆ ಉತ್ಪತ್ತಿಯನ್ನು ಹೇಳಿದ್ದು ವ್ಯರ್ಥ.

**प्रकाशः** – तदेव तदित्युक्तावनेकं दोषमाह – **कार्यत्वमिति** ।। तथात्वे कार्यत्वस्यारोपितत्वरूपत्वे ।। **मानाभावेनेति** ।। सम्भूत शब्दस्यासृजतेत्यादिशब्दस्य चारोपार्थत्वावश्यम्भावादिति भावः । प्रतिज्ञेति सूत्राक्षरार्थं चानूद्य निराह – **अपि च ममेति** ।। आरोपितस्येति व्यधिकरणषष्ठी । आरोपितप्रतियोगिकस्येत्यर्थः ।

ಆರೋಪಿತತ್ವವೇ ಕಾರ್ಯತ್ವವು ಅನೇಕ ದೋಷಗಳನ್ನು ಹೇಳುತ್ತಿದ್ದಾರೆ 'ಕಾರ್ಯತ್ವಂ' ಎಂಬುದಾಗಿ. 'ತಥಾತ್ವೇ' ಎಂದರೆ ಕಾರ್ಯತ್ವ ಎಂದರೆ ಆರೋಪಿತತ್ವ ಎಂದಾದರೆ ಎಂದರ್ಥ. ಮಾನಾಭಾವ ಎಂದರೆ ಶ್ರುತಿಯಲ್ಲಿ ಕೇಳಿಸುತ್ತಿರುವ 'ಸಂಭೂತ', 'ಅಸೃಜತ' ಮೊದಲಾದ ಶಬ್ದಗಳಿಗೆ ಆರೋಪಿತ ಎಂದು ಅರ್ಥ ಹೇಳುವುದು ಅಸಾಧ್ಯ ಎಂದರ್ಥ. 'ಪ್ರತಿಜ್ಞಾಹಾನಿ..' ಎಂಬ ಸೂತ್ರದ ಅಕ್ಷರಾರ್ಥವನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ಅಪಿ ಚ' ಎಂಬುದರಿಂದ. 'ಆರೋಪಿತಸ್ಯ ತಸ್ಯ' ಎಂಬಲ್ಲಿ 'ಆರೋಪಿತಸ್ಯ' ಎನ್ನುವಾಗ ವ್ಯಧಿಕರಣಷಷ್ಠೀವಿಭಕ್ತಿ ಅಂದರೆ ಆರೋಪಿತ ಭೇದ ಎಂದರ್ಥವಲ್ಲ, ಆರೋಪಿತದ ಕಡೆಯಿಂದ ಭೇದ ಎಂದರ್ಥ.

**प्रकाशः** – यद्वा भिन्नत्वादिति किमारोपितभेदो हेतुरथ धर्मिसत्तासमानसत्ताकोऽथ पारमार्थिक इति विकल्पाद्यद्वये दोषोक्तिः आरोपितस्येत्यादिना । तत्र धर्मिसत्तासमसत्त्वं भेदस्य व्यनक्ति ।। **दृष्टो हीति** ।। अन्त्य आह – **सत्यस्य चेति**।।

ಅಥವಾ, ಭಿನ್ನತ್ವ ಎಂದು ಹೇತುವನ್ನು ಹೇಳಿದ್ದೀರಿ. ಅದರರ್ಥ ಆರೋಪಿತಭೇದವು ಹೇತುವೋ ಅಥವಾ ಧರ್ಮಿಸತ್ತಾಸಮಾನಸತ್ತಾವುಳ್ಳ ಭೇದವು ಹೇತುವೋ ಅಥವಾ ಪಾರಮಾರ್ಥಿಕವಾದ ಭೇದವು ಹೇತುವೋ ? ಎಂದು ವಿಕಲ್ಪ ಮಾಡುತ್ತೇವೆ. ಅವುಗಳಲ್ಲಿ ಮೊದಲೆರಡು ವಿಕಲ್ಪಗಳಲ್ಲಿ ದೋಷ ಹೇಳುತ್ತಿದ್ದಾರೆ 'ಆರೋಪಿತಸ್ಯ' ಎಂಬುದಾಗಿ. ಧರ್ಮಿಸತ್ತಾಸಮಾನಸತ್ವ ಎಂಬುದಕ್ಕೆ ವಿವರಣೆ ಕೊಡುತ್ತಿದ್ದಾರೆ 'ದೃಷ್ಟ' ಎಂಬುದರಿಂದ. ಕೊನೆಯ ವಿಕಲ್ಪ ಒಪ್ಪಿದರೆ ಹೇಳುತ್ತಿದ್ದಾರೆ 'ಸತ್ಯ' ಎಂಬುದಾಗಿ.

**प्रकाशः – केचित्त्विति ।।** तन्मतेऽपि ''न वियत्'' इत्यारभ्य ''असम्भवस्तु सतोऽनुपपत्तेः'' इत्यन्तं नवसूत्र्येकमधिकरणम् । गौण्यसम्भवाच्छब्दाच्चेत्येकं सूत्रम्। प्रतिज्ञाहानिरव्यतिरेकादित्येकम् । शब्देभ्य इत्यपरम् ।

ರಾಮಾನುಜರ ಪ್ರಕಾರ 'ವಿಯದಶ್ರುತೇಃ' ಎಂಬಲ್ಲಿಂದ 'ಅಸಂಭವಸ್ತು ಸತೋಽನುಪಪತ್ತೇಃ' ಅನ್ನುವಲ್ಲಿಯತನಕ ಒಂಬತ್ತು ಸೂತ್ರಗಳು ಒಂದು ಅಧಿಕರಣ. 'ಗೌಣ್ಯಸಂಭವಾಚ್ಛಬ್ದಾಚ್ಚ' ಇದು ಎರಡೂ ಸೇರಿ ಒಂದು ಸೂತ್ರ. 'ಪ್ರತಿಜ್ಞಾಹಾನಿರವ್ಯತಿರೇಕಾತ್' ಎಂಬುದು ಬೇರೆ ಸೂತ್ರ. 'ಶಬ್ದೇಭ್ಯಃ' ಎಂಬುದು ಬೇರೆ ಸೂತ್ರ.

1. ನ ವಿಯಶ್ರುತೇಃ, 2. ಅಸ್ತಿ ತು, 3. ಗೌಣ್ಯಸಂಭವಾಚ್ಛಬ್ದಾಚ್ಚ, 4. ಸ್ಯಾಚ್ಚೈಕಸ್ಯ ಬ್ರಹ್ಮಶಬ್ದವತ್, 5 ಪ್ರತಿಜ್ಞಾಹಾನಿರವ್ಯತಿರೇಕಾತ್, 6. ಶಬ್ದೇಭ್ಯ, 7. ಯಾವದ್ವಿಕಾರಂ ತು ವಿಭಾಗೋ ಲೋಕವತ್, 8. ಏತೇನ ಮಾತರಿಶ್ವಾ ವ್ಯಾಖ್ಯಾತಃ, 9. ಅಸಂಭವಸ್ತು ಸತೋಽನುಪಪತ್ತೇಃ.

**प्रकाशः –** वियन्नोत्पद्यते । छान्दोग्ये सृष्टिप्रकरणे वियदुत्पत्त्यश्रुतेरिति प्राप्ते ''अस्ति तु'' । ''आत्मन आकाशस्सम्भूतः खं वायुर्ज्योतिः'' इत्यादि तैत्तिरीयाथर्वणादावाकाशोत्पत्तिश्रुतिरस्तीति द्वितीयार्थः ।

ಆಕಾಶಕ್ಕೆ ಉತ್ಪತ್ತಿ ಇಲ್ಲ. ಛಾಂದೋಗ್ಯದಲ್ಲಿ ಆಕಾಶದ ಉತ್ಪತ್ತಿಯು ಶ್ರುತವಾಗಿಲ್ಲವಾದ್ದರಿಂದ ಎಂಬ ಶಂಕೆ ಬಂದರೆ ಆಕಾಶಕ್ಕೆ ಉತ್ಪತ್ತಿ ಇದೆ ಎಂದು ಉತ್ತರ. ತೈತ್ತಿರೀಯ ಹಾಗೂ ಅಥರ್ವಣವೇ ಮೊದಲಾದ ಉಪನಿಷತ್ತುಗಳಲ್ಲಿ 'ಆತ್ಮನ ಆಕಾಶ ಸಂಭೂತಃ' ಇತ್ಯಾದಿ ವಾಕ್ಯಗಳಿಂದ ಆಕಾಶಕ್ಕೆ ಉತ್ಪತ್ತಿ ಸಿದ್ಧವಾಗುತ್ತದೆ ಎಂಬುದು ಎರಡನೇ ಸೂತ್ರದ ಅರ್ಥ.

**प्रकाशः –** सम्भूतादिश्रुतिर्गौणी । ''तत्तेजोऽसृजत'' इति सृष्टेस्तेजआदितायाः प्रतिपादनेन वियदुत्पत्तिप्रतिपादनासम्भवात् ।

ಆಕಾಶಕ್ಕೆ ಉತ್ಪತ್ತಿಯನ್ನು ಹೇಳುವ ಶ್ರುತಿಯು ಗೌಣೀ (ಅಪ್ರಧಾನ). ಏಕೆಂದರೆ ಛಾಂದೋಗ್ಯದಲ್ಲಿ 'ಅವನು ತೇಜಸ್ಸನ್ನು ಸೃಷ್ಟಿ ಮಾಡಿದ' ಎಂಬುದಾಗಿ ಸೃಷ್ಟಿಯ ಆರಂಭವು ತೇಜಸ್ಸಿನಿಂದ ಎಂಬುದಾಗಿ ತಿಳಿಯುತ್ತದೆ. ಹಾಗಾಗಿ ಆಕಾಶಕ್ಕೆ ಉತ್ಪತ್ತಿಯನ್ನು ಹೇಳುವುದು ಅಸಾಧ್ಯ.

**प्रकाशः –** ''वायुश्चान्तरिक्षं चैतदमृतम्'' इत्यमृतत्वशब्दाच्च ।

ವಾಯು ಅಂತರಿಕ್ಷ(ಆಕಾಶ) ಇವೆರಡೂ ಅಮೃತ(ಅನಾದ್ಯನಂತ) ಎಂದು ಹೇಳಿರುವುದರಿಂದಲೂ ಆಕಾಶಕ್ಕೆ ಉತ್ಪತ್ತಿ ಕೂಡುವುದಿಲ್ಲ.

**प्रकाशः –** एकस्यापि सम्भूतशब्दस्याकाशे गौणत्वं वाय्वादौ मुख्यत्वं ''ब्रह्मनामरूपमन्नं च जायत'' इत्यत्र प्रधाने गौणस्यापि ब्रह्मशब्दस्य ''तपसा चीयते ब्रह्म'' इत्यत्र मुख्यत्वमिव युक्तम् ।

ಪ್ರಶ್ನೆ - ತೈತ್ತಿರೀಯದಲ್ಲಿ ಕೇಳಿಸುತ್ತಿರುವ ಸಂಭೂತಶ್ರುತಿ ಗೌಣೀ ಎಂದು ಹೇಳಿದ್ದೀರಿ. ಆದರೆ ಈ ಸಂಭೂತಶಬ್ದ ಒಂದು ಕಡೆ(ಆಕಾಶದಲ್ಲಿ) ಗೌಣ ಆದರೆ ವಾಯು, ತೇಜಸ್ಸು ಮೊದಲಾದಕಡೆ ಪ್ರಧಾನ ಹೇಗೆ ಆಗುತ್ತದೆ ?

ಉತ್ತರ - ಒಂದೇ ಶಬ್ದ ಒಂದು ಕಡೆ ಗೌಣವಾದಾಗ ಮತ್ತೊಂದು ಕಡೆ ಪ್ರಧಾನವಾಗಿ ಪ್ರಯೋಗಿಸಲ್ಪಟ್ಟಿರುವುದು ಕಂಡಿದೆ.

'ಬ್ರಹ್ಮನಾಮರೂಪಮನ್ನಂ ಚ ಜಾಯತೇ' ಎಂಬಲ್ಲಿ ಪ್ರಧಾನ(ಪ್ರಕೃತ)ವನ್ನು ಹೇಳುವಾಗ ಬ್ರಹ್ಮಶಬ್ದ ಗೌಣ. ಅದೇ ಬ್ರಹ್ಮಶಬ್ದ 'ತಪಸಾ ಚೀಯತೇ ಬ್ರಹ್ಮ' ಎಂಬಲ್ಲಿ ಮುಖ್ಯಾರ್ಥಕ.ಇದರಂತೆ ಪ್ರಕೃತದಲ್ಲೂ ಕೂಡ ತಿಳಿಯಬೇಕು.

**ಪ್ರಕಾಶಃ** – तथा चाकाशस्य ब्रह्माकार्यत्वान्नैकविज्ञानेन सर्वविज्ञानोप-पत्तिरिति पुनश्शङ्कायां एकविज्ञानेन सर्वविज्ञानप्रतिज्ञाहानिः । आकाशस्यापि ब्रह्मकार्यत्वेन तदव्यतिरेकात् । ''सदेव सोम्य'' इत्यादिशब्देभ्यश्चाकाशोत्पत्ति-प्रतीतेः ।

ಹಾಗಾದರೆ ಆಕಾಶಕ್ಕೆ ಉತ್ಪತ್ತಿ ಇಲ್ಲ ಎಂಬುದು ಸಿದ್ಧವಾದರೆ ಆಗ ಆಕಾಶವು ಬ್ರಹ್ಮನ ಕಾರ್ಯ ಅಲ್ಲವೆಂದಾಯಿತು. ಆಗ 'ಒಂದರ ಜ್ಞಾನದಿಂದ ಎಲ್ಲದರ ಜ್ಞಾನ' ಎಂಬ ಪ್ರತಿಜ್ಞಾಭಂಗ ಬರುತ್ತದೆ ಎಂದು ಶಂಕಾ ಬಂದರೆ ಈ ಶಂಕಾಗೆ ಅವಕಾಶವಿಲ್ಲ. ಏಕೆಂದರೆ 'ಸದೇವ ಸೋಮ್ಯ' ಎಂಬ ಶ್ರುತಿಯಿಂದ ಸೃಷ್ಟಿಗೆ ಮೊದಲು ಬ್ರಹ್ಮನೊಬ್ಬನೇ ಇದ್ದ ಎಂಬುದಾಗಿ ತಿಳಿಯುತ್ತಿದೆ. ಹಾಗಾಗಿ ಆಕಾಶಕ್ಕೆ ಉತ್ಪತ್ತಿ ಇದೆ ಎಂಬುದಾಗಿ ಸಿದ್ಧವಾಗುತ್ತದೆ. ಹಾಗಾಗಿ ಆಕಾಶವೂ ಬ್ರಹ್ಮನ ಕಾರ್ಯವೇ ಆಯಿತು.

**ಪ್ರಕಾಶಃ** – किञ्च यावद्विकारं तु सर्वोऽपि विकारः । विभागः उत्पत्तिमान् । ''ऐतदात्म्यमिदं सर्वम्'' इत्याकाशस्यापि विकारवचनादिति सूत्राणामर्थः ।

ಮತ್ತೇನೆಂದರೆ 'ಯಾವದ್ವಿಕಾರಂ...' ಎಂಬ ಸೂತ್ರದಿಂದ ಎಲ್ಲ ವಿಕಾರವುಳ್ಳ ವಸ್ತುಗಳೂ ಉತ್ಪತ್ತಿವುಳ್ಳವುಗಳು (ವಿಭಾಗ ಶಬ್ದಕ್ಕೆ ಉತ್ಪತ್ತಿ ಎಂದರ್ಥ). 'ಐತದಾತ್ಮ್ಯಮಿದಂ ಸರ್ವಂ' ಎಂಬಲ್ಲಿ ಆಕಾಶಕ್ಕೂ ವಿಕಾರವಿದೆ ಎಂದು ಹೇಳಿರುವುದರಿಂದ ಆಕಾಶಕ್ಕೆ ಉತ್ಪತ್ತಿ ಇದೆ. ಇದು ಮೊದಲ ಏಳು ಸೂತ್ರಗಳಿಗೆ ಅರ್ಥ.

**ಪ್ರಕಾಶಃ** – ''एतेन'' इति सूत्रद्वयार्थोऽग्रे व्यक्तः ।। **द्वाभ्यामिति** ।। राद्धान्तसूत्रमवतारयतीति श्रुतप्रकाशोक्तेरिति भावः। इत्याद्युक्तेत्यादिपदेन ''अपि च'' इत्युक्तदोषः, सर्वेषां सिद्धान्तसूत्रत्वसम्भव इत्यादिदोषश्च ग्राह्यः ।

ಇನ್ನೆರಡು ಸೂತ್ರಗಳ ಅರ್ಥ ಮುಂದೆ ಸ್ಪಷ್ಟವಾಗುವುದು. ಆರನೇ ಹಾಗೂ ಏಳನೇ ಸೂತ್ರಗಳಿಂದ ಸಿದ್ಧಾಂತವನ್ನು ಹೇಳುತ್ತಿದ್ದಾರೆ. ಹೀಗೆ ರಾಮಾನುಜಭಾಷ್ಯಕ್ಕೆ ಟೀಕಾಗ್ರಂಥವಾದ ಶ್ರುತಪ್ರಕಾಶ ಎಂಬಲ್ಲಿ ಹೇಳಿದೆ. ಚಂದ್ರಿಕಾದಲ್ಲಿ ರಾಮಾನುಜರಿಗೆ ಅದ್ವೈತಿಗಳಿಗೆ ಹೇಳಿದ ದೋಷಗಳೆಲ್ಲಾ ಬರುತ್ತವೆ ಎಂದಿದೆ. ಅಲ್ಲಿ ಒಂದು ದೋಷ ತೋರಿಸಿದ್ದಾರೆ, ಆದಿಪದದಿಂದ 'ಅಪಿ ಚ' ಎಂಬುದಾಗಿ ಚಂದ್ರಿಕಾದಲ್ಲಿ ಅದ್ವೈತಿಗಳಿಗೆ

ಯಾವ ದೋಷ ಹೇಳಿದ್ದಾರೋ ಅದೂ ಬರುತ್ತದೆ. ಹಾಗೇ ಎಲ್ಲಿ ಸೂತ್ರಗಳೂ ಸಿದ್ಧಾಂತಸೂತ್ರಗಳು ಎಂದಿಟ್ಟುಕೊಳ್ಳಲು ಬರುವಾಗ ಕೆಲವು ಪೂರ್ವಪಕ್ಷಗಳು ಮತ್ತೆ ಕೆಲವು ಸಿದ್ಧಾಂತಸೂತ್ರಗಳು ಎಂದು ಹೇಳಿರುವುದು ತಪ್ಪು ಎಂಬ ದೋಷವೂ ಹಾಗೇ, ಇನ್ನೂ ಅನೇಕದೋಷಗಳು ಬರುತ್ತವೆ ಎಂದು ಭಾವ.

**प्रकाशः –** यत्तु श्रुतप्रकाशे ''यावद्विकारं तु'' इति सूत्रं विभक्तत्वेन हेतुना घटादिवन्नभसः कार्यत्वानुमानपरं वर्णितम् । तदयुक्तमित्यादिना विभक्तत्वस्य हेतुत्वखण्डनं तत्परमत एव । न त्वस्मन्मत इत्याह – **मन्मते त्विति** ।। इति स्मृत्येति ।। भाष्योक्तस्मृत्येत्यर्थः ।

इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते

चन्द्रिकाप्रकाशे वियदधिकरणं सम्पूर्णम् ।।१।।

ಶ್ರುತಪ್ರಕಾಶದಲ್ಲಿ 'ಯಾವದ್ವಿಕಾರಂ ತು' ಎಂಬ ಸೂತ್ರವನ್ನು ವ್ಯಾಖ್ಯಾನ ಮಾಡುವಾಗ ಆಕಾಶವು ಘಟಾದಿಗಳಂತೆ ಕಾರ್ಯರೂಪವಾಗಿದೆ. ಏಕೆಂದರೆ ವಿಭಕ್ತವಾದ್ದರಿಂದ ಎಂಬ ಅನುಮಾನವನ್ನು ಖಂಡನೆ ಮಾಡಿದ್ದಾರೆ. ಈ ಖಂಡನೆಯು ನಮ್ಮನ್ನು ಉದ್ದೇಶಿಸಿ ಮಾಡಿರುವುದಲ್ಲ. ಅದ್ವೈತಿಗಳನ್ನು ಕುರಿತು ಮಾಡಿರುವುದು. ಏಕೆಂದರೆ ಇಲ್ಲಿ ವಿಭಕ್ತಶಬ್ದಕ್ಕೆ ಭಿನ್ನ ಎಂಬ ಅರ್ಥ ಹೇಳಿರುವುದು ಅದ್ವೈತಿಗಳೇ ಹೊರತು ನಾವಲ್ಲ, ನಾವು ವಿಭಾಗ ಶಬ್ದಕ್ಕೆ ಅಲ್ಪಶಕ್ತಿತ್ವ ಎಂಬ ಅರ್ಥ ಹೇಳಿದ್ದೇವೆ. ಈ ಅರ್ಥವು ಭಾಷ್ಯದ ಸ್ಮೃತಿಯಿಂದ ಸಿದ್ಧವಾಗುತ್ತದೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ವಿಯದಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

# ಮಾತರಿಶ್ವಾಧಿಕರಣ

(೨-೩-೨)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

॥ ಶ್ರೀಗುರುಭ್ಯೋ ನಮಃ ॥

# ಮಾತರಿಶ್ವಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – एतेन मातरिश्वा व्याख्यातः ।।**

ಹಿಂದಿನ ಅಧಿಕರಣದಲ್ಲಿ ಹೇಳಿದ ಕಾರಣಗಳಿಂದಲೇ ಮುಖ್ಯವಾಯುವು ಅನುತ್ಪತ್ತಿವುಳ್ಳವನು ಎಂಬ ವಾಕ್ಯಕ್ಕೆ ವ್ಯಾಖ್ಯಾನ ಮಾಡಿದಂತಾಯಿತು. ಎಂದರೆ ಅಮುಖ್ಯವಾದ ಅನುತ್ಪತ್ತಿಯನ್ನೇ ವಿವಕ್ಷಿಸಬೇಕು, ಅನಾದಿತ್ವವನ್ನು ಹೇಳಬಾರದು.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका – एतेन** पूर्वोक्तविभक्तत्वदिहेतुना । **मातरिश्वा** मुख्यवायुः । **व्याख्यातः** उत्पत्तिमत्वेनोक्त इत्यर्थः ।।१।।

ಏತೇನ = ಹಿಂದಿನ ಅಧಿಕರಣದಲ್ಲಿ ಹೇಳಿದ ವಿಭಕ್ತತ್ವ ಮೊದಲಾದ ಕಾರಣಗಳಿಂದ, ಮಾತರಿಶ್ವಾ = ಮುಖ್ಯವಾಯುವಿಗೆ, ಅನುತ್ಪತ್ತಿಯನ್ನು ಹೇಳುವ ಶ್ರುತಿಯು, ವ್ಯಾಖ್ಯಾತಃ= ಉತ್ಪತ್ತಿಯುಳ್ಳದ್ದಾಗಿ ವ್ಯಾಖ್ಯಾನಿಸಲ್ಪಟ್ಟಿತು.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ಮಾತರಿಶ್ವಾಧಿಕರಣವು ಮುಗಿಯಿತು.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – 'अथ ह नित्याश्चानित्याश्च तेजोऽबन्नान्याकाश इति तान्यनित्यानि वायुर्वाव नित्यो वायुना हि सर्वाणि भूतानि नेनीयन्ते' ।**

ಅನುವಾದ - ಪದಾರ್ಥಗಳು ಎರಡುವಿಧ ನಿತ್ಯ , ಅನಿತ್ಯೇ ಎಂದು. ತೇಜಸ್ಸು, ನೀರು, ಪೃಥಿವೀ, ಆಕಾಶ ಇವುಗಳು ಅನಿತ್ಯ. ವಾಯು ನಿತ್ಯಪದಾರ್ಥ. ಏಕೆಂದರೆ ವಾಯುವಿನಿಂದಲೇ ಸಮಸ್ತ ಭೂತಪದಾರ್ಥಗಳು ಪ್ರೇರಿತವಾಗಿವೆ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ಮುಖ್ಯವಾಯುವಿಗೆ ಉತ್ಪತ್ತಿಯನ್ನು ಹೇಳುವ ಶ್ರುತಿಗಳ ವಿರೋಧವನ್ನು ಪರಿಹರಿಸಲಾಗಿದೆ. ಮೊದಲು ಹಿಂದಿನ ಅಧಿಕರಣದಿಂದ ಗತಾರ್ಥತ್ವದ ಶಂಕೆಯನ್ನು ಪರಿಹರಿಸಲು ಮುಖ್ಯವಾಯುವಿಗೆ ಉತ್ಪತ್ತಿ ಇಲ್ಲವೆಂದು ಹೇಳುವ ಶ್ರುತಿಯನ್ನು ಉಲ್ಲೇಖ ಮಾಡುತ್ತಿದ್ದಾರೆ. ಅಥ = ಅನಂತರ, ನಿತ್ಯಾಶ್ಚ = ನಿತ್ಯಪದಾರ್ಥಗಳೆಂದು, ಅನಿತ್ಯಾಶ್ಚ = ಅನಿತ್ಯಪದಾರ್ಥಗಳೆಂದು ಎರಡುಬಗೆಯ ಪದಾರ್ಥಗಳಿವೆ. ತೇಜಃ = ಬೆಂಕಿ, ಅಪ್ = ನೀರು, ಅನ್ನಾನಿ = ಪೃಥಿವೀ, ಆಕಾಶಃ = ಆಕಾಶವು, ಇತಿ = ಹೀಗೆ, ತಾನಿ = ಆ ಪದಾರ್ಥಗಳು, ಅನಿತ್ಯಾನಿ = ಅನಿತ್ಯವಾಗಿವೆ ಎಂದು ಪ್ರಸಿದ್ಧಿ ಪಡೆದಿವೆ. ವಾಯುರ್ವಾವ = ವಾಯುವಾದರೂ, ನಿತ್ಯಃ = ನಿತ್ಯಪದಾರ್ಥವಾಗಿದೆ. ಹಿ = ಏಕೆಂದರೆ, ಸರ್ವಾಣಿ ಭೂತಾನಿ = ಸಕಲ ಭೂತಪದಾರ್ಥಗಳು, ವಾಯುನಾ = ವಾಯುವಿನಿಂದ, ನೇನೀಯಂತೇ = ಪ್ರೇರಿತವಾಗಿವೆ.

**भाष्यम् – 'अथ ह चेतनाश्चाचेतनाश्च तेजोऽबन्नान्याकाश इति तान्यचेतनानि वायुर्वाव चेतनो वायुना हि सर्वाणि भूतानि विज्ञायन्ते'।**

ಅನುವಾದ - ತತ್ವಗಳು ಎರಡುವಿಧ. ಚೇತನ ಮತ್ತು ಅಚೇತನ ಎಂದು. ತೇಜಸ್ಸು, ನೀರು, ಪೃಥಿವೀ, ಆಕಾಶ ಇವುಗಳು ಅಚೇತನಪದಾರ್ಥಗಳು. ಚೇತನಪದಾರ್ಥ ವಾಯುವು ಏಕೆಂದರೆ ಉಳಿದ ನಾಕು ಭೂತಪದಾರ್ಥಗಳನ್ನು ವಾಯು ಸಂಪೂರ್ಣವಾಗಿ ತಿಳಿಯುತ್ತಾನೆ.

ಪ್ರತಿಪದಾರ್ಥಃ -- ವಾಯುವಿಗೆ ಉತ್ಪತ್ತಿ ಇಲ್ಲವೆಂದು ಹೇಳುವ ಶ್ರುತಿಗೆ ಗೌಣಾರ್ಥ ಮಾಡಬಾರದು ಎನ್ನಲು ಮತ್ತೊಂದು ಯುಕ್ತಿಯನ್ನು ತಿಳಿಸಲು ಶ್ರುತಿಪ್ರಮಾಣವನ್ನು ನೀಡುತ್ತಿದ್ದಾರೆ. ಅಥಹ = ಅನಂತರ, ಚೇತನಾಶ್ಚ = ಚೇತಗಳ, ಅಚೇತನಾಶ್ಚ = ಅಚೇತಗಳು ಎಂಬುದಾಗಿ ತತ್ವಗಳು ಎರಡುವಿಧ. ಅವುಗಳಲ್ಲಿ, ತೇಜಃ = ತೇಜಸ್ಸು, ಅಪ್ = ನೀರು, ಅನ್ನಾನಿ = ಪೃಥಿವಿಗಳು, ಆಕಾಶಃ = ಆಕಾಶವು, ಇತಿ = ಹೀಗೆ, ತಾನಿ = ಅವುಗಳ ನಡುವೆ ಅಚೇತನಾನಿ = ಅಚೇತನಗಳೆಂದು ಪರಿಗಣಿತವಾಗಿವೆ. ವಾಯುರ್ವಾವ = ವಾಯುವಾದರೂ, ಚೇತನಃ = ಚೇತನವೆಂದು ಕರೆಸಿಕೊಳ್ಳುತ್ತದೆ. ಹಿ = ಏಕೆಂದರೆ, ವಾಯುನಾ = ವಾಯುವಿನಿಂದ, ಸರ್ವಾಣಿ = ಸಕಲವಿಧವಾದ, ಭೂತಾನಿ = ಭೂತಗಳು, ವಿಜ್ಞಾಯಂತೇ = ತಿಳಿಯಲ್ಪಡುತ್ತವೆ.

ಮಾತರಿಶ್ವಾಧಿಕರಣ (೨-೩-೨)

॥ ಶ್ರೀಗುರುಭ್ಯೋ ನಮಃ ॥

# ಮಾತರಿಶ್ವಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – एतेन मातरिश्वा व्याख्यातः ।।**

ಹಿಂದಿನ ಅಧಿಕರಣದಲ್ಲಿ ಹೇಳಿದ ಕಾರಣಗಳಿಂದಲೇ ಮುಖ್ಯವಾಯುವು ಅನುತ್ಪತ್ತಿವುಳ್ಳವನು ಎಂಬ ವಾಕ್ಯಕ್ಕೆ ವ್ಯಾಖ್ಯಾನ ಮಾಡಿದಂತಾಯಿತು. ಎಂದರೆ ಅಮುಖ್ಯವಾದ ಅನುತ್ತಿಯನ್ನೇ ವಿವಕ್ಷಿಸಬೇಕು, ಅನಾದಿತ್ವವನ್ನು ಹೇಳಬಾರದು.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका – एतेन पूर्वोक्तविभक्तत्वदिहेतुना । मातरिश्वा मुख्यवायुः । व्याख्यातः** उत्पत्तिमत्वेनोक्त इत्यर्थः ।।१।।

ಏತೇನ = ಹಿಂದಿನ ಅಧಿಕರಣದಲ್ಲಿ ಹೇಳಿದ ವಿಭಕ್ತತ್ವ ಮೊದಲಾದ ಕಾರಣಗಳಿಂದ, ಮಾತರಿಶ್ವಾ = ಮುಖ್ಯವಾಯುವಿಗೆ, ಅನುತ್ಪತ್ತಿಯನ್ನುಹೇಳುವ ಶ್ರುತಿಯು, ವ್ಯಾಖ್ಯಾತಃ= ಉತ್ಪತ್ತಿಯುಳ್ಳದ್ದಾಗಿ ವ್ಯಾಖ್ಯಾನಿಸಲ್ಪಟ್ಟಿತು.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ಮಾತರಿಶ್ವಾಧಿಕರಣವು ಮುಗಿಯಿತು.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – 'अथ ह नित्याश्चानित्याश्च तेजोऽबन्नान्याकाश इति तान्यनित्यानि वायुर्वाव नित्यो वायुना हि सर्वाणि भूतानि नेनीयन्ते' ।**

ಅನುವಾದ - ಪದಾರ್ಥಗಳು ಎರಡುವಿಧ ನಿತ್ಯ , ಅನಿತ್ಯೇ ಎಂದು. ತೇಜಸ್ಸು, ನೀರು, ಪೃಥಿವೀ, ಆಕಾಶ ಇವುಗಳು ಅನಿತ್ಯ. ವಾಯು ನಿತ್ಯಪದಾರ್ಥ. ಏಕೆಂದರೆ ವಾಯುವಿನಿಂದಲೇ ಸಮಸ್ತ ಭೂತಪದಾರ್ಥಗಳು ಪ್ರೇರಿತವಾಗಿವೆ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ಮುಖ್ಯವಾಯುವಿಗೆ ಉತ್ಪತ್ತಿಯನ್ನು ಹೇಳುವ ಶ್ರುತಿಗಳ ವಿರೋಧವನ್ನು ಪರಿಹರಿಸಲಾಗಿದೆ. ಮೊದಲು ಹಿಂದಿನ ಅಧಿಕರಣದಿಂದ ಗತಾರ್ಥತ್ವದ ಶಂಕೆಯನ್ನು ಪರಿಹರಿಸಲು ಮುಖ್ಯವಾಯುವಿಗೆ ಉತ್ಪತ್ತಿ ಇಲ್ಲವೆಂದು ಹೇಳುವ ಶ್ರುತಿಯನ್ನು ಉಲ್ಲೇಖ ಮಾಡುತ್ತಿದ್ದಾರೆ. ಅಥ = ಅನಂತರ, ನಿತ್ಯಾಶ್ಚ = ನಿತ್ಯಪದಾರ್ಥಗಳೆಂದು, ಅನಿತ್ಯಾಶ್ಚ = ಅನಿತ್ಯಪದಾರ್ಥಗಳೆಂದು ಎರಡುಬಗೆಯ ಪದಾರ್ಥಗಳಿವೆ. ತೇಜಃ = ಬೆಂಕಿ, ಅಪ್ = ನೀರು, ಅನ್ನಾನಿ = ಪೃಥಿವೀ, ಆಕಾಶಃ = ಆಕಾಶವು, ಇತಿ = ಹೀಗೆ, ತಾನಿ = ಆ ಪದಾರ್ಥಗಳು, ಅನಿತ್ಯಾನಿ = ಅನಿತ್ಯವಾಗಿವೆ ಎಂದು ಪ್ರಸಿದ್ಧಿ ಪಡೆದಿವೆ. ವಾಯುರ್ವಾವ = ವಾಯುವಾದರೂ, ನಿತ್ಯಃ = ನಿತ್ಯಪದಾರ್ಥವಾಗಿದೆ. ಹಿ = ಏಕೆಂದರೆ, ಸರ್ವಾಣಿ ಭೂತಾನಿ = ಸಕಲ ಭೂತಪದಾರ್ಥಗಳು, ವಾಯುನಾ = ವಾಯುವಿನಿಂದ, ನೇನೀಯಂತೇ = ಪ್ರೇರಿತವಾಗಿವೆ.

**भाष्यम् – 'अथ ह चेतनाश्चाचेतनाश्च तेजोऽबन्नान्याकाश इति तान्यचेतनानि वायुर्वाव चेतनो वायुना हि सर्वाणि भूतानि विज्ञायन्ते'।**

ಅನುವಾದ - ತತ್ವಗಳು ಎರಡುವಿಧ. ಚೇತನ ಮತ್ತು ಅಚೇತನ ಎಂದು. ತೇಜಸ್ಸು, ನೀರು, ಪೃಥಿವೀ, ಆಕಾಶ ಇವುಗಳು ಅಚೇತನಪದಾರ್ಥಗಳು. ಚೇತನಪದಾರ್ಥ ವಾಯುವು ಏಕೆಂದರೆ ಉಳಿದ ನಾಕು ಭೂತಪದಾರ್ಥಗಳನ್ನು ವಾಯು ಸಂಪೂರ್ಣವಾಗಿ ತಿಳಿಯುತ್ತಾನೆ.

ಪ್ರತಿಪದಾರ್ಥಃ -- ವಾಯುವಿಗೆ ಉತ್ಪತ್ತಿ ಇಲ್ಲವೆಂದು ಹೇಳುವ ಶ್ರುತಿಗೆ ಗೌಣಾರ್ಥ ಮಾಡಬಾರದು ಎನ್ನಲು ಮತ್ತೊಂದು ಯುಕ್ತಿಯನ್ನು ತಿಳಿಸಲು ಶ್ರುತಿಪ್ರಮಾಣವನ್ನು ನೀಡುತ್ತಿದ್ದಾರೆ. ಅಥಹ = ಅನಂತರ, ಚೇತನಾಶ್ಚ = ಚೇತಗಳ, ಅಚೇತನಾಶ್ಚ = ಅಚೇತಗಳು ಎಂಬುದಾಗಿ ತತ್ವಗಳು ಎರಡುವಿಧ. ಅವುಗಳಲ್ಲಿ, ತೇಜಃ = ತೇಜಸ್ಸು, ಅಪ್ = ನೀರು, ಅನ್ನಾನಿ = ಪೃಥಿವಿಗಳು, ಆಕಾಶಃ = ಆಕಾಶವು, ಇತಿ = ಹೀಗೆ, ತಾನಿ = ಅವುಗಳ ನಡುವೆ ಅಚೇತನಾನಿ = ಅಚೇತನಗಳೆಂದು ಪರಿಗಣಿತವಾಗಿವೆ. ವಾಯುರ್ವಾವ = ವಾಯುವಾದರೂ, ಚೇತನಃ = ಚೇತನವೆಂದು ಕರೆಸಿಕೊಳ್ಳುತ್ತದೆ. ಹಿ = ಏಕೆಂದರೆ, ವಾಯುನಾ = ವಾಯುವಿನಿಂದ, ಸರ್ವಾಣಿ = ಸಕಲವಿಧವಾದ, ಭೂತಾನಿ = ಭೂತಗಳು, ವಿಜ್ಞಾಯಂತೇ = ತಿಳಿಯಲ್ಪಡುತ್ತವೆ.

ಮಾತರಿಶ್ವಾಧಿಕರಣ (೨-೩-೨)

**भाष्यम् – 'कुविदङ्ग नमसा ये वृधासः पुरा देवा अनवद्यास आसन् ।**
**ते वायवे मनवे बाधितायाऽऽवासयन्नुषसं सूर्येण' ।। (ऋ.७.९१.१)**

ಅನುವಾದ - ಸಕಲ ದೇವತೆಗಳು ಸೂರ್ಯನಿಂದ ಕೂಡಿಕೊಂಡು ರಹಸ್ಯವಾಗಿ ಜ್ಞಾನಕ್ಕಾಗಿ ವಾಯುದೇವನನ್ನು ಕುರಿತು ಉಪಾಸನೆ ಮಾಡಿದರು. ಎಲ್ಲಾ ದೇವತೆಗಳಿಗೂ ವಾಯುದೇವನು ಜ್ಞಾನವನ್ನು ಕರುಣಿಸಿದನು.

ಪ್ರತಿಪದಾರ್ಥ -- ಯೇ ವೃಧಾಸಃ = ಗುಣಪೂರ್ಣನಾದ, ಹೇ ಅಂಗ = ಪ್ರಿಯನೇ, ಪುರಾ = ಹಿಂದೆ, ಸೂರ್ಯೇಣ = ಸೂರ್ಯನ ಜೊತೆ, ದೇವಾ = ದೇವತೆಗಳು, ಕುವಿತ್ = ರಹಸ್ಯವಾಗಿ, ನಮಸಾ = ಮನಸ್ಸಿನಿಂದ, ಅನವದ್ಯಾಸಃ = ನಿರ್ದುಷ್ಟರು, ಆಸನ್ = ಆದರು, ತೇ = ಆ ದೇವತೆಗಳು, ವಾಯುವೇ = ವಾಯುವಿಗೆ, ಮನವೇ = ಜ್ಞಾನವನ್ನು ಪಡೆದುಕೊಳ್ಳಲು, ಬಾಧಿತಾಯಾ = ಸಂಸಾರದಲ್ಲಿ ಬಳಲಿದವರಿಗೆ, ಉಷಸಂ = ಜ್ಞಾನಕ್ಕಾಗಿ, ಆವಾಸಯನ್ = ಆಶ್ರಯಿಸಿದರು.

**भाष्यम् – 'सा वा एषा देवताऽनादिर्योऽयं पवते' इति ।।**

ಅನುವಾದ - ವಾಯುದೇವನಿಗೆ ಶರೀರದ ಉತ್ಪತ್ತಿಯಾಗಲಿ ನಾಶವಾಗಲಿ ಇರುವುದಿಲ್ಲ. ಅನಾದಿಯಾಗಿರುವುದರಿಂದಲೇ ಇವನು ದೇವೋತ್ತಮನಾಗಿದ್ದಾನೆ.

ಪ್ರತಿಪದಾರ್ಥ -- ಯೋಽಯಂ = ಯಾವ, ಪವತೇ = ಜಗತ್ತನ್ನು ಪವಿತ್ರವನ್ನಾಗಿ ಮಾಡುವ, ಸಾ ವಾ = ಅಂಥ, ಏಷಾ ದೇವತಾ = ಪ್ರಸಿದ್ಧವಾದ ವಾಯುದೇವತೆಯು, ಅನಾದಿಃ = ಆದಿ ಇಲ್ಲದವನು ಆಗಿದ್ದಾನೆ.

**भाष्यम् – 'यस्य नाऽदिर्न मध्यं नान्तो नोदयो न निम्लोचः' इत्यादिश्रुतिभ्यो वायोरनुत्पत्तिरिति ।।**

ಅನುವಾದ - ಯಾರಿಗೆ ಆದಿ ಮಧ್ಯ ನಾಶಗಳು ಇರುವುದಿಲ್ಲವೋ ಪಾರ್ದುಭಾವ-ತಿರೋಭಾವಗಳೂ ಕೂಡ ಇರುವುದಿಲ್ಲವೋ ಅವನೇ ವಾಯುದೇವನು ಇವೇ ಮೊದಲಾದ ಶ್ರುತಿಗಳಿಂದಲೂ ವಾಯುದೇವನಿಗೆ ಉತ್ಪತ್ತಿ ಇಲ್ಲವೆಂದು ತಿಳಿಯುತ್ತಾರೆ.

ಪ್ರತಿಪದಾರ್ಥ-- ಆದಿಃ = ಉತ್ಪತ್ತಿಯು, ನ = ಇರುವುದಿಲ್ಲ. ಮಧ್ಯಂ = ಮಧ್ಯವಯಸ್ಸು, ನ = ಇರುವುದಿಲ್ಲ. ಅಂಥ = ನಾಶವೂ ಕೂಡ, ನ = ಇರುವುದಿಲ್ಲ. ನ ಉದಯಃ = ಪ್ರಾರ್ದುಭಾವ ಇರುವುದಿಲ್ಲ, ನ ನಿಮ್ಲೋಚಃ = ತಿರೋಭಾವವು ಕೂಡ ಇರುವುದಿಲ್ಲ. ಇತ್ಯಾದಿ ಶ್ರುತಿಭ್ಯಃ = ಇವೆ ಮೊದಲಾದ ಶ್ರುತಿಗಳ ಆಧಾರದಿಂದ, ವಾಯೋಃ = ವಾಯುವಿಗೆ, ಅನುತ್ಪತ್ತಿಃ = ಉತ್ಪತ್ತಿ ಇಲ್ಲವೆಂದು ಸಿದ್ಧವಾಗುತ್ತದೆ.

**भाष्यम् – अतो ब्रवीति –**

**।। एतेन मातरिश्वा व्याख्यातः ।।८।।**

**एतेन मुख्यामुख्यानुत्पत्तिवचनेन विभक्तात्वाच्च वाय्वनुत्पत्तिश्रुतिरपि व्याख्याता ।।**

ಪರಿಪೂರ್ಣಚಂದ್ರಿಕಾ

ಅನುವಾದ - ಇವೇ ಮೊದಲಾದ ಶ್ರುತಿಗಳ ಆಧಾರದಿಂದ ವಾಯುದೇವನಿಗೆ ಉತ್ಪತ್ತಿ ಇಲ್ಲವೆಂದು ಹೇಳಿದರೆ, ಸೂತ್ರಕಾರರು ಸ್ಪಷ್ಟವಾದ ನಿರ್ಣಯವನ್ನು ನೀಡುತ್ತಿದ್ದಾರೆ.
ಹಿಂದಿನ ಅಧಿಕರಣವೂ ಉತ್ಪತ್ತಿಯಲ್ಲಿ ಮುಖ್ಯ ಹಾಗೂ ಅಮುಖ್ಯವೆಂದು ಪ್ರಭೇದವನ್ನು ಹೇಳಿರುವುದರಿಂದ ವಾಯುವಿಗೆ ಅನುತ್ಪತ್ತಿಯನ್ನು ಹೇಳುವ ಶ್ರುತಿಯನ್ನು ಕೂಡ ವ್ಯಾಖ್ಯಾನ ಮಾಡಿದಂತಾಯಿತು.

ಪ್ರತಿಪದಾರ್ಥ -- ಅತಃ = ವಾಯುದೇವನಿಗೆ ಉತ್ಪತ್ತಿಯೇ ಇಲ್ಲವೆಂಬ ಗೊಂದಲ ಉಂಟಾದಾಗ, ಬ್ರವೀತಿ = ಸೂತ್ರಕಾರರೇ ಉತ್ತರಿಸುತ್ತಿದ್ದಾರೆ - ಏತೇನ = ಮುಖ್ಯಾಮುಖ್ಯ ಅನುತ್ಪತ್ತಿವಚನೇನ = ಹಿಂದಿನ ಅಧಿಕರಣದಲ್ಲಿ, ಮುಖ್ಯ ಹಾಗೂ ಅಮುಖ್ಯವಾದ ಅನುತ್ಪತ್ತಿಯನ್ನು ಹೇಳಿರುವುದರಿಂದ. ವಿಭಕ್ತತ್ವಾಚ್ಚ = ಶ್ರುತಿಯನ್ನು ವಿಭಾಗ ಮಾಡಿದ್ದರಿಂದ, ವಾಯ್ವನುತ್ಪತ್ತಿಶ್ರುತಿರಪಿ = ವಾಯುವಿಗೆ ಅನುತ್ಪತ್ತಿಯನ್ನು ಹೇಳುವ ಶ್ರುತಿಯನ್ನು ಕೂಡ, ವ್ಯಾಖ್ಯಾತಾ = ವ್ಯಾಖ್ಯಾನ ಮಾಡಿದಂತಾಯಿತು.

**भाष्यम् –**

**‘नित्यः परमनित्यश्च तथाऽनित्यः परस्तथा ।**
**चतुर्धैतज्जगत्सर्वं परानित्यं तु पार्थिवम् ॥**
**अनित्यानि तु भूतानि नित्यो वायुरुदाहृतः ।**
**परस्तु नित्यः पुरुषः प्रकृतिः काल एव च ॥**

ಅನುವಾದ - ಜಗತ್ತು ನಾಲ್ಕು ವಿಧವಾಗಿದೆ. ೧ ನಿತ್ಯ.೨ಪರಮನಿತ್ಯ ೩.ಅನಿತ್ಯ. ೪ಪರಮಾನಿತ್ಯ ಎಂದು. ಪಾರ್ಥಿವಪದಾರ್ಥಗಳೆಲ್ಲವೂ ಕೂಡ ಪರಮ ಅನಿತ್ಯವಾಗಿವೆ. ಭೂತಪದಾರ್ಥಗಳು ಮತ್ತು ಅಭಿಮಾನಿದೇವತೆಗಳು ಅನಿತ್ಯವಾಗಿವೆ. ಮುಖ್ಯಪ್ರಾಣನು ನಿತ್ಯನಾಗಿದ್ದಾನೆ. ಶ್ರೀದೇವಿ ಭೂದೇವಿ ದುರ್ಗಾದೇವಿಯರು ಪರಮನಿತ್ಯರಾಗಿದ್ದಾರೆ.

ಪ್ರತಿಪದಾರ್ಥ -- ನಿತ್ಯಃ = ಅನಿತ್ಯನು, ಚ = ಮತ್ತು ಪರಮನಿತ್ಯ = ಪರಮನಿತ್ಯನು, ತಥಾ = ಹಾಗೂ ಅನಿತ್ಯಃ = ಅನಿತ್ಯವು, ಪರಮಃ = ಪರಮವಾದ ಅನಿತ್ಯನು, ಸರ್ವಂ = ಸಕಲವಿಧವಾದ, ಏತಜ್ಜಗತ್ = ಈ ಜಗತ್ತು, ಚತುರ್ಧಾ = ನಾಲ್ಕು ಬಗೆಯನ್ನು ಹೊಂದಿದೆ. ಪರಾನಿತ್ಯಂತು = ಪರಮ ಅನಿತ್ಯವೆಂದರೆ, ಪಾರ್ಥಿವಮ್ = ಪಾರ್ಥಿವ ವಸ್ತುಗಳು, ಭೂತಾನಿ ತು = ಭೂತವಸ್ತುಗಳಾದರು, ಅನಿತ್ಯಾನಿ = ಅನಿತ್ಯ-ಪದಾರ್ಥಗಳು, ಪುರುಷಃ = ಜೀವನು, ಪ್ರಕೃತಿಃ = ಪ್ರಕೃತಿಯು, ಕಾಲಃ = ಕಾಲವು, ಪರಸ್ತು ನಿತ್ಯಃ = ಪರಮನಿತ್ಯವಾಗಿದೆ. ಅಥವಾ ಶ್ರೀ ಭೂ ದುರ್ಗಾತ್ಮಕಳಾದ ಚಿತ್‌ಪ್ರಕೃತಿಯು ಪರಮನಿತ್ಯಳೆಂದು ತಿಳಿಯಬೇಕು.

**एतच्चतुष्टयं विष्णुः स्वयं नित्यः परात् परः ।**
**प्रतिव्यूह्य व्यूह्य चासावतीत्य च जनार्दनः ॥**
**धारयत्यनिशं देवो नित्यानन्दैकलक्षणः ॥’ इति कौर्मे ॥८॥**

**॥ इति श्रीमदानन्दतीर्थभगवत्पादाचार्यविरचिते**
**ब्रह्मसूत्रभाष्ये मातरिश्वाधिकरणम् ॥ २ ॥**

ಮಾತರಿಶ್ವಾಧಿಕರಣ (೨-೩-೨)

ಅನುವಾದ - ಈ ನಾಕು ಬಗೆಯ ಪ್ರಪಂಚಕ್ಕಿಂತಲೂ ಅತಿಶಯಿತವಾದ ನಿತ್ಯತ್ವವನ್ನು ಮಹಾವಿಷ್ಣುವು ಪಡೆದಿದ್ದಾನೆ. ಅವನು ನಾಕು ವಿಭಾಗ ಮಾಡಿ ನಿಯಮನ ಮಾಡುತ್ತಾ ಅವುಗಳಲ್ಲಿ ನಿಂತು ಆ ಎಲ್ಲಾ ಪದಾರ್ಥಗಳನ್ನು ಮೀರಿ ನಿರಂತರವಾಗಿ ಅವುಗಳನ್ನು ಧಾರಣೆ ಮಾಡಿರುತ್ತಾನೆ. ಜನಾರ್ದನನಾದ ಅವನು ನಿತ್ಯವಾದ ಆನಂದೈಕಸ್ವರೂಪವುಳ್ಳವನಾಗಿದ್ದಾನೆ. ಹೀಗೆ ಕೂರ್ಮಪುರಾಣವು ಹೇಳುತ್ತಿದೆ.

ಪ್ರತಿಪದಾರ್ಥ -- ವಿಷ್ಣುः = ಮಹಾವಿಷ್ಣುವು, ಯಾವ ಕಾರಣದಿಂದ, ನಿತ್ಯಾನಂದೈಕಲಕ್ಷಣः = ನಿತ್ಯಾನಂದಸ್ವರೂಪವೇ ಮುಖ್ಯಲಕ್ಷಣವಾದ ಸ್ವರೂಪವುಳ್ಳವನಾಗಿದ್ದಾನೋ ಮತ್ತು ಜನಾರ್ದನः = ದುಷ್ಟರನ್ನು ಸದೆ ಬಡಿಯುತ್ತಾನೊ ಆದ್ದರಿಂದ ಏತಚ್ಚತುಷ್ಟಯಂ = ನಾಕು ಬಗೆಯ ವಿಶ್ವವನ್ನು, ವ್ಯೂಹ್ಯ = ಅನಿತ್ಯಾದಿ ಪ್ರಭೇದಗಳಿಂದ ವಿಭಾಗಮಾಡಿ, ಸ್ವಯಂ = ತಾನು, ಪ್ರತಿವ್ಯೂಹ್ಯ = ತನ್ನನ್ನು ಜಗತ್ತಿಗೆ ನಿಯಾಮಕನನ್ನಾಗಿ ಮಾಡಿ, ಅಸೌ = ಈ ವಿಷ್ಣುವು, ಅತೀತ್ಯ ಚ = ತನ್ನ ಗುಣಗಳಿಂದ ಮತ್ತು ಶಕ್ತಿಯಿಂದ ಈ ಎಲ್ಲಾ ಪದಾರ್ಥಗಳನ್ನು ದಾಟನಿಂತು, ಅನಿಶಂ = ನಿರಂತರವಾಗಿ, ಧಾರಯತಿ = ಈ ಜಗತ್ತನ್ನು ಧಾರಣೆ ಮಾಡಿದ್ದಾನೆ. ಆದ್ದರಿಂದ ಪರಾತ್ಪರः ನಿತ್ಯः = ಪರಾತ್ಪರನಿತ್ಯನೆಂದು ಕರೆಸಿಕೊಳ್ಳುತ್ತಾನೆ.

ಇಲ್ಲಿಗೆ ಮಾತರಿಶ್ವಾಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

## ತತ್ವಪ್ರಕಾಶಿಕಾ

**तत्वप्रकाशिका – अत्रेश्वरे वेदसमन्वयसिद्धये मुख्यवायूत्पत्तिविषय-श्रुतिविरोधपरिहारादस्ति शास्त्रादिसङ्गतिः । सर्वोत्पादको हरिरित्यभिहितम् । तत्र मुख्यवायोरुत्पत्त्यभावे तदयुक्तं स्यादिति तदुत्पत्तिः समर्थनीया । मुख्यवायुर्विषयः। उत्पत्तिमान्न वेति सन्देहः । 'तासां वायुर्वत्सः 'सा वा एषा देवतानाऽदिर्योऽयं पवते' इति श्रुतिविगानं सन्देहबीजम् ।**

ಈ ಅಧಿಕರಣದಲ್ಲಿ ಈಶ್ವರನಲ್ಲಿ ವೇದಸಮನ್ವಯವು ಸಿದ್ಧವಾಗುವುದಕ್ಕಾಗಿ ಮುಖ್ಯಪ್ರಾಣನ ಬಗ್ಗೆ ಇರುವ ಉತ್ಪತ್ತಿ ವಿಷಯಕವಾದ ಶ್ರುತಿವಿರೋಧವನ್ನು ಪರಿಹಾರ ಮಾಡುತ್ತಿರುವುದರಿಂದ ಶಾಸ್ತ್ರಾದಿ ಸಂಗತಿಗಳು ಇರುತ್ತವೆ.

ಸರ್ವೋತ್ಪಾದಕನಾದವನು ಶ್ರೀಹರಿಯಾಗಿದ್ದಾನೆಂದು ಹೇಳಲಾಯಿತು. ಆ ವಿಷಯದಲ್ಲಿ ಮುಖ್ಯಪ್ರಾಣನಿಗೆ ಉತ್ಪತ್ತಿಯು ಇಲ್ಲದಿದ್ದರೆ ಅಯುಕ್ತವಾಗುತ್ತದೆ. ಆದ್ದರಿಂದ ಮುಖ್ಯಪ್ರಾಣನಿಗೆ ಉತ್ಪತ್ತಿಯನ್ನು ಸಮರ್ಥನೆ ಮಾಡಬೇಕು.

ಮುಖ್ಯಪ್ರಾಣನೇ ವಿಷಯನು. ಉತ್ಪತ್ತಿ ಇದೆಯೋ ಇಲ್ಲವೋ ಎಂಬುದು ಸಂದೇಹ. 'ತಾಸಾಂ ವಾಯುರ್ವತ್ಸಃ' ಎಂಬುದಾಗಿ ವಾಯುವಿಗೆ ಉತ್ಪತ್ತಿಯನ್ನು ಹೇಳುವ ಶ್ರುತಿ ಹಾಗೂ 'ಸಾ ವಾ ಏಷಾ ದೇವತಾನಾऽದಿರ್ಯೋऽಯಂ ಪವತೇ' ಎಂಬುದಾಗಿ ವಾಯುವಿಗೆ ನಿತ್ಯತ್ವವನ್ನು ಹೇಳುವ ಶ್ರುತಿ ಇವುಗಳ ಪರಸ್ಪರ ವಿರೋಧವು ಸಂದೇಹಕ್ಕೆ ಕಾರಣ.

**ವಿವರಣೆ** - ಹಿಂದಿನ ಅಧಿಕರಣದಲ್ಲಿ ಆಕಾಶಕ್ಕೆ ಉತ್ಪತ್ತಿಯನ್ನು ಸಮರ್ಥನೆ ಮಾಡಲಾಯಿತು. ಈ ಅಧಿಕರಣದಲ್ಲಿ ವಾಯುವಿಗೆ ಉತ್ಪತ್ತಿಯನ್ನು ಸಮರ್ಥನೆ ಮಾಡುತ್ತಿದ್ದಾರೆ. 'ಆಕಾಶಾದ್ವಾಯುಃ' ಎಂಬುದಾಗಿ ಶ್ರುತಿ ಇರುವುದರಿಂದ ಆಕಾಶದ ಅನಂತರ ವಾಯುವಿನ ಉಪಸ್ಥಿತಿಯು ಉಂಟಾಗುತ್ತದೆ. ಆದ್ದರಿಂದ ಈ ಅಧಿಕರಣಕ್ಕೆ ಆನಂತರ್ಯ ಸಂಗತಿ ಇರುತ್ತದೆ. ಇಲ್ಲಿ ವಾಯು ಎಂದರೆ ಭೂತವಾಯುವನ್ನು ವಿವಕ್ಷಿಸಬಾರದು, ಮುಖ್ಯಪ್ರಾಣನನ್ನು ವಿವಕ್ಷಿಸಬೇಕು. ಏಕೆಂದರೆ ಭೂತವಾಯುವಿನ ಬಗ್ಗೆ ಹೆಚ್ಚಿನ ಆಕ್ಷೇಪವು ಇರುವುದಿಲ್ಲ.

'ತಾಸಾಂ ವಾಯುರ್ವತ್ಸಃ' ಎಂಬ ಶ್ರುತಿಯು ಭಗವಂತನ ಬಾಹುಗಳಿಂದ ಪುತ್ರನಾದ ವಾಯುವು ಹುಟ್ಟಿದನು ಎಂದು ಹೇಳುತ್ತಿದೆ. 'ಪ್ರಾಣಾದ್ವಾಯುರಜಾಯತ' ಎಂಬ ಪುರುಷಸೂಕ್ತವೂ ಕೂಡ ಭಗವಂತನ ಪ್ರಾಣನಿಂದ ಮುಖ್ಯಪ್ರಾಣವು ಜನಿಸಿದನೆಂದು ಹೇಳುತ್ತಿದೆ. ಆದರೆ 'ಸಾ ವಾ ಏಷಾ ದೇವತಾऽನಾದಿಃ' ಎಂಬ ಶ್ರುತಿಯು ಮುಖ್ಯಪ್ರಾಣನು ಅನಾದಿನಿತ್ಯನೆಂದು ಹೇಳುತ್ತಿದೆ. ಹೀಗೆ ಶ್ರುತಿಗಳಲ್ಲೇ ಪರಸ್ಪರ ವಿರೋಧ ಪ್ರಾಪ್ತವಾಗುತ್ತದೆ. ಈ ವಿರೋಧಗಳನ್ನು ಪರಿಹಾರ ಮಾಡದೇ ಮುಖ್ಯಪ್ರಾಣನಿಗೆ ಉತ್ಪತ್ತಿ ಇದೆ ಎಂಬ ವಿಚಾರವು ಸಿದ್ಧವಾಗುವುದಿಲ್ಲ.

**तत्वप्रकाशिका – सयुक्तिकं पूर्वपक्षयति – अथेति ।। वायोरनुत्पत्तिरेव । 'वायुर्वाव नित्यः सा वा एषा देवताऽनादिः' इत्यादिश्रुतेः । न चाकाशानुत्पत्तिश्रुतिवद् गौणार्थत्वम् । तथा सत्याकाशादिवन्मुख्यवायोरुत्पत्त्यनुत्पत्तिमत्त्वे तेजोऽबन्नाकाशानामनित्यत्वमुक्त्वा वायोर्नित्यत्वोक्तिरयुक्ता स्यात् । न चाकाशपदेन भूतमेवोच्यत इत्यत्र नियामकमस्ति ।**

ಯುಕ್ತಿಬದ್ಧವಾದ ಪೂರ್ವಪಕ್ಷವನ್ನು 'ಅಥ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ವಾಯುವಿಗೆ ಉತ್ಪತ್ತಿಯೇ ಇರುವುದಿಲ್ಲ. 'ವಾಯುರ್ವಾವ ನಿತ್ಯಃ ಸಾ ವಾ ಏಷಾ ದೇವತಾऽನಾದಿಃ' ಎಂಬ ಶ್ರುತಿಯು ವಾಯುದೇವನಿಗೆ ನಿತ್ಯತ್ವವನ್ನು ಸ್ಪಷ್ಟವಾಗಿ ಹೇಳುತ್ತಿದೆ. ಹಿಂದಿನ ಅಧಿಕರಣದಲ್ಲಿ ಆಕಾಶಕ್ಕೆ ನಿತ್ಯತ್ವವನ್ನು ಹೇಳುವ ಶ್ರುತಿಗೆ ಹೇಗೆ ಗೌಣಾರ್ಥವನ್ನು ಮಾಡಲಾಯಿತೋ ಆದರಂತೆ 'ವಾಯುರ್ವಾವ ನಿತ್ಯಃ' ಎಂಬ ಶ್ರುತಿಗೂ ಕೂಡ ಗೌಣಾರ್ಥವನ್ನು ಮಾಡಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಹಾಗೇನಾದರೂ ಗೌಣಾರ್ಥವನ್ನು ಕಲ್ಪನೆ ಮಾಡಿದರೆ ಆಕಾಶಾದಿಗಳಂತೆ ಮುಖ್ಯವಾಯುವಿಗೆ ಉತ್ಪತ್ತಿ ಹಾಗೂ ಅನುತ್ಪತ್ತಿಗಳು ಇರುವುದಾದರೆ ತೇಜಸ್ಸು, ನೀರು, ಅನ್ನ, ಆಕಾಶ ಮೊದಲಾದವುಗಳಿಗೆ ಅನಿತ್ಯತ್ವವನ್ನು ಹೇಳಿ ವಾಯುವಿಗೆ ನಿತ್ಯತ್ವವನ್ನು ಹೇಳಿದ್ದು ಅಸಂಗತವಾಗುತ್ತಿತ್ತು.

ಆಕಾಶ ಪದದಿಂದ ಭೂತಾಕಾಶವನ್ನಷ್ಟೆ ಏಕೆ ವಿವಕ್ಷಿಸಬಾರದು? ಈ ವಿಷಯದಲ್ಲಿ ನಿಯಾಮಕ ಪ್ರಮಾಣವಿಲ್ಲ.

ವಿವರಣೆ - 'ವಾಯುರ್ವಾವ ನಿತ್ಯಃ' ಎಂಬ ಶ್ರುತಿಯು ವಾಯುವಿಗೆ ನಿತ್ಯತ್ವವನ್ನು ಹೇಳುತ್ತಿದೆ. ಇದರ ಹಿಂದಿನ ಪ್ರಕರಣದಲ್ಲಿ ತೇಜಸ್ಸು, ಅಪ್, ಆಕಾಶ ಇವುಗಳಿಗೆ ಅದೇ ಶ್ರುತಿಯು ಅನಿತ್ಯತ್ವವನ್ನು ಹೇಳಿದೆ. ಒಂದುವೇಳೆ ಆಕಾಶಕ್ಕೆ ನಿತ್ಯತ್ವವನ್ನು ಹೇಳುವ ಶ್ರುತಿಗೆ ಗೌಣಾರ್ಥವನ್ನು ಕಲ್ಪನೆ ಮಾಡಿದಂತೆ ಇಲ್ಲೂ ಗೌಣಾರ್ಥವನ್ನು ಕಲ್ಪನೆ ಮಾಡಿದರೆ 'ವಾಯುರ್ವಾವ ನಿತ್ಯಃ' ಎಂಬುದಾಗಿ ಪ್ರತ್ಯೇಕವಾಗಿ ಶ್ರುತಿಯಲ್ಲಿ ಹೇಳಿದ್ದೇ ಅಸಂಗತವಾಗುತ್ತಿತ್ತು. ಹೀಗೆ ಹೇಳಿದ್ದರಿಂದಲೇ ಪೂರ್ವಾಧಿಕರಣದಿಂದ ಈ ಅಧಿಕರಣಕ್ಕೆ ಗತಾರ್ಥತ್ವಶಂಕೆಯೂ ಕೂಡ ಪರಿಹಾರವಾಯಿತು. ಏಕೆಂದರೆ ಪೂರ್ವಾಧಿಕರಣದ ಮೇಲೆ ಅಭ್ಯಧಿಕಾಶಂಕೆಯು ಇಲ್ಲಿ ಇರುತ್ತದೆ.

ಆಕಾಶಪದದಿಂದ ಭೂತಾಕಾಶವನ್ನು ವಿವಕ್ಷಿಸಿದರೆ ಅದಕ್ಕೆ ಸ್ವರೂಪತಃ ನಿತ್ಯತ್ವ ಇಲ್ಲ. ಆದರೆ ವಾಯುವಿಗೆ ಸ್ವರೂಪತಃ ನಿತ್ಯತ್ವ ಇದೆ. ಈ ಅಭಿಪ್ರಾಯದಿಂದ 'ವಾಯುರ್ವಾವ ನಿತ್ಯಃ' ಎಂದು ಪ್ರತ್ಯೇಕವಾಗಿ ಹೇಳಿರಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಎಲ್ಲವನ್ನು ಬಿಟ್ಟು ಭೂತವಾಯುವನ್ನೇ ಹೇಳಿದ್ದಾರೆನ್ನಲು ಯಾವುದೇ ನಿಯಾಮಕ ಪ್ರಮಾಣವಿಲ್ಲ.

**तत्वप्रकाशिका – किं च वायोरनुत्पत्तिर्गौणीति स्वरूपमात्रविषयेति वक्तव्यम् । तथा सति तस्य सर्वचेतनसाम्येनातिशयितचेतनत्वमयुक्तं स्यात् । सर्वदेवतोपास्यता च नोत्पत्तिमत्त्वे घटते । तस्योदयनिम्लोचाभावे च कुतो जन्मसम्भवः ।**

ಮತ್ತು ವಾಯುವಿಗೆ ಅನುತ್ಪತ್ತಿಯನ್ನು ಹೇಳುವ ಶ್ರುತಿಯು ಗೌಣವೆಂದರೆ ಆ ಶ್ರುತಿಯು ಸ್ವರೂಪತಃ ಅನಾದಿತ್ವವನ್ನು ವಿಷಯೀಕರಿಸುತ್ತದೆಂದು ಹೇಳಿದಂತಾಯಿತು. ಹಾಗಾದಲ್ಲಿ ಇದು ಸರ್ವಚೇತನರಲ್ಲೂ ಸಮಾನವಾದ್ದರಿಂದ ವಾಯುವಿಗೆ ಅತಿಶಯಿತಚೇತನತ್ವ ಅಯುಕ್ತವಾಗಬೇಕಾಗುತ್ತದೆ. ವಾಯುವಿಗೆ ಜನ್ಮವನ್ನು ಹೇಳಿದರೆ ಆಗ ಸರ್ವದೇವತೋಪಾಸ್ಯತ್ವವು ಯುಕ್ತವಾಗುವುದಿಲ್ಲ. ಮತ್ತು ಉತ್ಪತ್ತಿಯು ಕೂಡ ಕೂಡುವುದಿಲ್ಲ. ಉತ್ಪತ್ತಿ ಮತ್ತು ಅಸ್ತವು ಇಲ್ಲದಿರುವುದರಿಂದ ಜನ್ಮವಾದರೂ ಹೇಗೆ ಯುಕ್ತವಾಗುತ್ತದೆ?

**तत्वप्रकाशिका – एवंविधस्य चोत्पत्त्यङ्गीकारेऽनुभवव्याकोपः स्यात् । अतोऽत्यन्तमनुभूतियुक्तिबहुवाग्विरोधेन वायोरुत्पत्त्ययोगादुत्पत्तिश्रुतिरप्रमाणमेवेति न जगत्कारणेब्रह्मणि श्रुतिसमन्वयो युक्त इति भावः ।**

ಇಂತಹ ವಾಯುವಿಗೆ ಉತ್ಪತ್ತಿಯನ್ನು ಅಂಗೀಕಾರ ಮಾಡಿದರೆ ಅನುಭವವಿರೋಧವು ಬರುತ್ತದೆ. ಆದ್ದರಿಂದ ಪ್ರಬಲವಾದ ಅನುಭವವಿರೋಧ, ಯುಕ್ತಿವಿರೋಧ ಮತ್ತು ಅನೇಕ ವಾಕ್ಯಗಳ ವಿರೋಧ ಬರುವುದರಿಂದ ವಾಯುವಿಗೆ ಉತ್ಪತ್ತಿಯು ಕೂಡುವುದಿಲ್ಲ. ಉತ್ಪತ್ತಿಯನ್ನು ಹೇಳುವ ಶ್ರುತಿಗಳಿಗೆ ಅಪ್ರಾಮಾಣ್ಯವನ್ನೇ ಹೇಳಬೇಕು. ಹೀಗೆ ಜಗತ್ಕಾರಣನಾದ ಬ್ರಹ್ಮನಲ್ಲಿ ಶ್ರುತಿಸಮನ್ವಯವು ಕೂಡುವುದಿಲ್ಲ ಎಂಬುದು ಪೂರ್ವಪಕ್ಷಿಗಳ ಅಭಿಪ್ರಾಯ.

**तत्वप्रकाशिका – एवमभ्यधिकाशङ्कया पूर्वपक्षितेऽतिदेशेन सिद्धान्तयत्सूत्रमवतार्य व्याचष्टे – अत इति ।। मुख्यवायुरप्युत्पत्तिमानेव । अनुत्पन्नत्वेनाश्रुतत्वात् । 'प्राणाद्वायुरजायत' इत्यादावुत्पन्नत्वेन श्रुतत्वाच । न**

**चोदाहृतश्रुतिविरोधः । तस्याः स्वरूपविषयत्वेनाकाशानुत्पत्तिश्रुतिव्याख्यानेनैव व्याख्यातत्वात् । उत्पत्तिश्रुतेः पुनः शरीरविषयत्वाद् व्यावस्थोपपत्तेः ।**

ಹೀಗೆ ಅಭ್ಯಧಿಕಾಶಂಕೆಯಿಂದ ಪೂರ್ವಪಕ್ಷವನ್ನು ಮಾಡಿದರೆ ಅತಿದೇಶದ ಮೂಲಕ ಸಿದ್ಧಾಂತಸ್ಥಾಪಕವಾದ ಸೂತ್ರಕ್ಕೆ ಅವತಾರಿಕೆಯನ್ನು ನೀಡಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಮುಖ್ಯವಾಯುವಿಗೂ ಕೂಡ ಉತ್ಪತ್ತಿ ಇದ್ದೇ ಇದೆ. ಉತ್ಪತ್ತಿ ಇಲ್ಲವೆಂಬುದು ಶ್ರುತಿಸಿದ್ಧವಲ್ಲ. 'ಪ್ರಾಣಾದ್ವಾಯುರಜಾಯತ' ಎಂಬಲ್ಲಿ ಭಗವಂತನ ಪ್ರಾಣದಿಂದ ವಾಯುವು ಹುಟ್ಟಿದನು ಎಂದು ಶ್ರುತಿ ಹೇಳುತ್ತಿದೆ. 'ವಾಯುರ್ವಾವ ನಿತ್ಯಃ' ಎಂದು ಹಿಂದೆ ಉದಾಹರಿಸಲ್ಪಟ್ಟ ಶ್ರುತಿಗಳ ವಿರೋಧಕ್ಕೆ ಅವಕಾಶವಿಲ್ಲ. ಆ ಶ್ರುತಿಗಳು ಸ್ವರೂಪವಿಷಯಕವಾದ್ದರಿಂದ ಆಕಾಶಕ್ಕೆ ಅನುತ್ಪತ್ತಿಯನ್ನು ಹೇಳುವ ಶ್ರುತಿಯ ವ್ಯಾಖ್ಯಾನದಿಂದಲೇ ಇವುಗಳನ್ನೂ ಕೂಡ ವ್ಯಾಖ್ಯಾನ ಮಾಡಿದಂತಾಗಿದೆ. ಉತ್ಪತ್ತಿಶ್ರುತಿಯು ವಾಯುದೇವನ ಶರೀರ ವಿಷಯಕವಾದ್ದರಿಂದ ವ್ಯವಸ್ಥೆಯನ್ನು ಮಾಡಬಹುದು.

ವಿವರಣೆ - ಮುಖ್ಯಪ್ರಾಣನಿಗೆ ಉತ್ಪತ್ತಿ ಇಲ್ಲವೆಂದು ಹೇಳುವ ಶ್ರುತಿಗಳು ಅಮುಖ್ಯಾರ್ಥವುಳ್ಳವುಗಳು. ಉತ್ಪತ್ತಿ ಇದೆ ಎಂದು ಹೇಳುವ ಶ್ರುತಿಯು ಮುಖ್ಯಾರ್ಥವುಳ್ಳವುಗಳು. ವಾಯುದೇವರ ಜೀವಸ್ವರೂಪಕ್ಕೆ ಉತ್ಪತ್ತಿ ಇಲ್ಲದ್ದರಿಂದ 'ವಾಯುರ್ವಾವ ನಿತ್ಯಃ' ಇತ್ಯಾದಿ ಶ್ರುತಿಗಳು ಹೊರಟವೆ. ಆದರೆ ಶರೀರಕ್ಕೆ ಉತ್ಪತ್ತಿ ಇರುವುದರಿಂದ 'ಪ್ರಾಣಾದ್ವಾಯುರಜಾಯತ' ಇತ್ಯಾದಿ ಶ್ರುತಿಗಳು ಹೊರಟಿದೆ.

**तत्वप्रकाशिका – न चैवं व्यवस्थाभ्युपगमे कारणाभावः । 'अथैतान्युत्पत्तिमन्ति चानुत्पत्तिमन्ति च प्राणः श्रद्धाऽकाश इति भागशो ह्युत्पद्यन्ते' इति वायोर्मुख्यामुख्योत्पत्त्यनुत्पत्त्यभिधायकवचनात् । अनुत्पत्तिश्रुतिर्ब्रह्मण्येव मुख्याऽन्यत्रामुख्येत्यस्य 'स्याच्चैकस्य' इत्यादिना कथितत्वाच्च । विभक्तशक्तित्वाच्च। वायोर्मुख्यानुत्पत्त्यनुपपत्तेः ।**

ಹೀಗೆ ವ್ಯವಸ್ಥೆಯನ್ನು ಅಂಗೀಕಾರ ಮಾಡಲು ಕಾರಣವಿಲ್ಲ ಎನ್ನಬಾರದು. 'ಅಥ ಏತಾನಿ ಉತ್ಪತ್ತಿಮಂತಿ ಅನುತ್ಪತ್ತಿಮಂತಿ ಚ ಪ್ರಾಣಃ ಶ್ರದ್ಧಾ ಆಕಾಶ ಇತಿ ಭಾಗಶೋ ಹಿ ಉತ್ಪದ್ಯಂತೇ' ಎಂಬುದಾಗಿ ವಾಯುದೇವನಿಗೆ ಉತ್ಪತ್ತಿಯು ಮುಖ್ಯವಾದದು, ಅನುತ್ಪತ್ತಿಯು ಅಮುಖ್ಯವಾದದ್ದು ಎಂದು ಹೇಳುವ ವಚನವು ಸ್ಪಷ್ಟವಾಗಿದೆ. ಅನುತ್ಪತ್ತಿ ಶ್ರುತಿಯು ಬ್ರಹ್ಮನಲ್ಲಿ ಮಾತ್ರ ಮುಖ್ಯವಾಗಿದೆ. ಇತರರಲ್ಲಿ ಅಮುಖ್ಯವಾಗಿದೆ ಎಂಬುದನ್ನು 'ಸ್ಯಾಚ್ಚೈಕಸ್ಯ ಬ್ರಹ್ಮಶಬ್ದವತ್' ಎಂಬ ಹಿಂದಿನ ಅಧಿಕರಣದ ಸೂತ್ರದಲ್ಲಿ ಹೇಳಿದ್ದಾಗಿದೆ.

ವಾಯುವಿನಲ್ಲಿ ವಿಭಕ್ತವಾದ ಶಕ್ತಿ ಇರುವುದರಿಂದಲೇ ಮುಖ್ಯವಾದ ಅನುತ್ಪತ್ತಿಯು ಕೂಡುವುದಿಲ್ಲ.

**तत्वप्रकाशिका – किं च वायोरनुत्पत्तिं वदन् प्रष्टव्यो जायते । किं वायुरेवानादिरीशोऽपि वा । नाद्यः । प्रमाणविरोधेन वायोरेवानुत्पत्त्यनुपपत्तेः । न द्वितीयः । द्वयोरपि स्वातन्त्र्यापातात् । पराधीनविशेषलाभो ह्युत्पत्तिः । न च**

**स्वातन्त्र्यं द्वयोर्युक्तम् । अन्योन्यानुरोधाननुरोधयोर्विरोधात् । अतो वायोर्मुख्यानुत्पत्तौ बाधकसद्भावाद्युक्तैवोक्तव्यवस्थेति भावः ।**

ಮತ್ತು ವಾಯುವಿಗೆ ಉತ್ಪತ್ತಿ ಇಲ್ಲವೆಂದು ಹೇಳುವ ಪೂರ್ವಪಕ್ಷಿಯನ್ನು ಕುರಿತು ಪ್ರಶ್ನಿಸುತ್ತೇವೆ. ವಾಯು ಒಬ್ಬನೇ ಅನಾದಿಯೋ? ಅಥವಾ ವಾಯುವಿನ ಜೊತೆ ವಿಷ್ಣುವೂ ಕೂಡ ಅನಾದಿಯೋ? ಮೊದಲನೇ ಪಕ್ಷ ತಪ್ಪು. ಪ್ರಮಾಣವಿರೋಧವಿರುವುದರಿಂದ ವಾಯುವಿಗೆ ಮಾತ್ರ ನಿತ್ಯತ್ವವು ಯುಕ್ತವಾಗುವುದಿಲ್ಲ. ಎರಡನೇ ಪಕ್ಷವೂ ತಪ್ಪು. ಇಬ್ಬರಿಗೂ ಸ್ವಾತಂತ್ರ್ಯವು ಬರಬೇಕಾಗುತ್ತದೆ.

ಉತ್ಪತ್ತಿ ಎಂದರೆ ಪರಾಧೀನವಿಶೇಷದ ಅವಾಪ್ತಿ. ಸ್ವಾತಂತ್ರ್ಯವು ಇಬ್ಬರಲ್ಲಿ ಯುಕ್ತವಾಗುವುದಿಲ್ಲ. ಪರಸ್ಪರವಾಗಿ ಇಬ್ಬರು ಅಪೇಕ್ಷಿಸುವಿಕೆ ಅಥವಾ ಅಪೇಕ್ಷಿಸದಿರುವಿಕೆ ಎಂಬುದು ವಿರುದ್ಧವಾಗುತ್ತದೆ. ಆದ್ದರಿಂದ ವಾಯುವಿಗೆ ಮುಖ್ಯವಾದ ಅನುತ್ಪತ್ತಿಯನ್ನು ವಿವಕ್ಷಿಸಿದರೆ ಬಾಧಕವಿರುವುದರಿಂದ ನಾವು ಮಾಡಿದ ವ್ಯವಸ್ಥೆ ಯುಕ್ತವೇ ಆಗಿದೆ.

ವಿವರಣೆ - ವಾಯು ಒಬ್ಬನೇ ಅನಾದಿ ಎಂದು ಹೇಳಿದರೆ ಪರಮಾತ್ಮನಿಗೆ ಅನಾದಿತ್ವವನ್ನು ಪ್ರತಿಪಾದನೆ ಮಾಡುವ ಶ್ರುತಿಗಳ ವಿರೋಧವು ಬರುತ್ತದೆ. ಇಬ್ಬರನ್ನೂ ಅನಾದಿ ಎಂದು ಹೇಳಿದರೆ ಇಬ್ಬರು ಸ್ವತಂತ್ರರೆಂದಂತಾಯಿತು. ಉತ್ಪತ್ತಿ ಎಂದರೆ ಮತ್ತೊಂದನ್ನು ಅಪೇಕ್ಷಿಸುವಿಕೆ ಎಂದರ್ಥ. ಇದು ಇಬ್ಬರಿಗೂ ಇರದೇ ಇದ್ದರೆ ಇಬ್ಬರೂ ಸ್ವತಂತ್ರರೆಂದಂತಾಯಿತು. ಆಗ ವಾಯು ಹಾಗೂ ವಿಷ್ಣು ಇಬ್ಬರು ಪರಸ್ಪರವಾಗಿ ಒಬ್ಬರನ್ನೊಬ್ಬರನ್ನು ಅಪೇಕ್ಷಿಸಿದರೆ ಇಬ್ಬರಿಗೂ ಪರಾಧೀನತ್ವ ಬಂದಿತು. ಪರಸ್ಪರವಾಗಿ ಇಬ್ಬರು ಅಪೇಕ್ಷಿಸದಿದ್ದರೆ ವಾಯು ಈಶ್ವರನಿಂದ ನಿಯಮ್ಯನಾಗಲಿಲ್ಲ, ಈಶ್ವರನೂ ಕೂಡ ವಾಯುವಿನಿಂದ ನಿಯಮ್ಯನಾಗಲಿಲ್ಲ. ಆಗ ಇಬ್ಬರಿಗೂ ಕೂಡ ನಿಯಾಮಕತ್ವವೇ ಇಲ್ಲದಂತಾಗಬೇಕಾಗುತ್ತದೆ. ಆದ್ದರಿಂದ ವಾಯುವಿಗೆ ಅನಾದಿತ್ವವನ್ನು ಹೇಳಲೇಬಾರದು.

**तत्वप्रकाशिका – वायोर्मुख्यानुत्पत्यभावे वियदादिभ्य उत्पत्यनुत्पत्तिमद्भ्यः विशेषेणानुत्पत्तिश्रुतिर्मुख्यचेतनत्वादियुक्तिश्च विरूणद्धीत्याशङ्कां परिहर्तुं स्मृतिमुदाहरति – नित्य इति ।।**

ಆಕ್ಷೇಪ - ವಾಯುವಿಗೆ ಮುಖ್ಯವಾದ ಅನುತ್ಪತ್ತಿಯನ್ನು ಹೇಳಲೇಬೇಕು. ಇಲ್ಲದಿದ್ದರೆ ಆಕಾಶವೇ ಮೊದಲಾದ ಉತ್ಪತ್ತಿ ಹಾಗೂ ಉತ್ಪತ್ತಿ ಇಲ್ಲದ ಪದಾರ್ಥಗಳಿಂದ ವಿಲಕ್ಷಣವಾಗಿ ವಾಯುವಿಗೆ ಅನುತ್ಪತ್ತಿಯನ್ನು ಹೇಳುವ ಶ್ರುತಿಯ ವಿರೋಧವು ಬರುತ್ತದೆ. ಅಷ್ಟೇ ಅಲ್ಲದೇ, ಮುಖ್ಯಚೇತನತ್ವ ಯುಕ್ತಿಯ ವಿರೋಧವೂ ಕೂಡ ಬರುತ್ತದೆ. ಈ ಆಕ್ಷೇಪವನ್ನು ಪರಿಹರಿಸುವುದಕ್ಕಾಗಿ ಭಾಷ್ಯದಲ್ಲಿ ನಿತ್ಯಃ ಇತ್ಯಾದಿಯಾಗಿ ಸ್ಮೃತಿಯಲ್ಲಿ ಉದಾಹರಿಸುತ್ತಿದ್ದಾರೆ.

ವಿವರಣೆ - ಉತ್ಪತ್ತಿ ಹಾಗೂ ಅನುತ್ಪತ್ತಿಯನ್ನು ವಿಯದಾದಿಗಳಿಗೆ ಹೇಳುವ ಸಂದರ್ಭದಲ್ಲಿ ಮುಖ್ಯವಾಯುವಿಗೆ ಅನುತ್ಪತ್ತಿಯನ್ನು ವಿಶೇಷವಾಗಿ ಹೇಳಲಾಗಿದೆ. ಪ್ರಕೃತ ಅನುತ್ಪತ್ತಿಯನ್ನು ಗೌಣವನ್ನಾಗಿ ವ್ಯಾಖ್ಯಾನ ಮಾಡಬೇಕೆಂದು ನೀವು ಹೇಳಿದರೆ ಈ ಶ್ರುತಿಯ ವಿರೋಧ ಬರುತ್ತದೆಂಬುದು ಪೂರ್ವಪಕ್ಷಿಗಳ ಅಭಿಪ್ರಾಯ. ಹಾಗೂ ಸಕಲ ಚೇತನರಿಗೆ ಮುಖ್ಯವಾದ ಚೇತನತ್ವವು ವಾಯುದೇವರಿಗೆ ಇರುವುದರಿಂದ ನಿತ್ಯತ್ವ ಒಪ್ಪದಿದ್ದರೆ ಮುಖ್ಯಚೇತನತ್ವವೇ ಯುಕ್ತವಾಗುವುದಿಲ್ಲ ಎಂಬುದು ಇವರ ಯುಕ್ತಿ. ಈ ಎರಡರ ವಿರೋಧವನ್ನು ಪ್ರಕೃತ ಪರಿಹರಿಸುತ್ತಿದ್ದಾರೆ.

**तत्वप्रकाशिका – परः परानित्यः एतन्व्यूह्य स्वात्मानं च तत्र प्रतिव्यूह्य स्वगुणैस्तदतिक्रम्य धारयतीत्यर्थः । तत्र वायोः परात्परनित्यत्वं स्वातन्त्र्यलक्षणं परनित्यत्वं देहादेरपि नित्यत्वं च नास्त्येव । तथापि सम्यगनित्यताशून्येभ्यो नित्येभ्यो वियदादिभ्यः स्वरूपातिक्तज्ञाननित्यत्वाभिप्रायेणातिशयेन नित्यतोच्यते। अतः श्रुत्यविरोधेन वायोरुत्पत्तिसिद्धेर्युक्तो ब्रह्मणि श्रुतिसमन्वय इति सिद्धम्।**

ಭಾಷ್ಯದಲ್ಲಿರುವ 'ಪರಃ' ಎಂಬ ಶಬ್ದಕ್ಕೆ 'ಪರಾನಿತ್ಯ' ಎಂದರ್ಥ. ಪದಾರ್ಥಗಳನ್ನು ವ್ಯವಸ್ಥೆಗೊಳಿಸಿ ಅವುಗಳಲ್ಲಿ ತನ್ನ ರೂಪಗಳನ್ನು ಇಟ್ಟು ತನ್ನ ಗುಣಗಳಿಂದ ಅವುಗಳನ್ನು ಮೀರಿ ಆ ವಸ್ತುಗಳನ್ನು ಧರಿಸಿರುತ್ತಾನೆ ಎಂಬುದು ಶ್ರುತಿಯ ಅಭಿಪ್ರಾಯ.

ಅಲ್ಲಿ ವಾಯುವಿಗೆ ಪರಾತ್ಪರನಿತ್ಯತ್ವವು ಹಾಗೂ ಸ್ವಾತಂತ್ರ್ಯರೂಪವಾದ ಪರನಿತ್ಯತ್ವವು ಇರುವುದೇ ಇಲ್ಲ. ಇದನ್ನು ಒಪ್ಪಿದರೆ ದೇಹಾದಿಗಳಿಗೂ ನಿತ್ಯತ್ವವನ್ನು ಒಪ್ಪಿದಂತಾಗುತ್ತದೆ. ಇದು ವಾಯುವಿಗೆ ಇರುವುದಿಲ್ಲ. ಆದರೂ ಕೂಡ ಅನಿತ್ಯತ್ವವಿಲ್ಲದ ನಿತ್ಯವಾದ ಆಕಾಶಾದಿ ಪದಾರ್ಥಗಳಿಂದ ವಾಯುವಿನಲ್ಲಿ ಸ್ವರೂಪಾತಿರಿಕ್ತವಾದ ಮನೋವೃತ್ತಿರೂಪವಾದ ಜ್ಞಾನವು ನಿತ್ಯವಾಗಿದೆ ಎಂಬ ಅಭಿಪ್ರಾಯದಿಂದ ವಾಯುವಿಗೆ ನಿತ್ಯತ್ವವಿದೆ ಎಂದು ಹೇಳಿದ್ದಾರೆ. ಹಾಗಾಗಿ ಶ್ರುತಿಯ ವಿರೋಧವಿಲ್ಲದ್ದರಿಂದ ವಾಯುವಿಗೆ ಉತ್ಪತ್ತಿಯು ಸಿದ್ಧವಾಗುತ್ತದೆ. ಆದ್ದರಿಂದ ಬ್ರಹ್ಮನಲ್ಲಿ ಶ್ರುತಿಸಮನ್ವಯವು ಸಿದ್ಧವಾಯಿತು.

ವಿವರಣೆ - ಈ ಜಗತ್ತು ನಾಲ್ಕುವಿಧವಾಗಿದೆ. (1) ನಿತ್ಯ, (2) ಪರಮನಿತ್ಯ, (3) ಅನಿತ್ಯ, (4) ಪರಾನಿತ್ಯ ಎಂದು. ಇವುಗಳನ್ನು ಕ್ರಮವಾಗಿ ಭಾಷ್ಯದಲ್ಲಿ ಉದಾಹರಿಸಿದ್ದಾರೆ. ಪಾರ್ಥಿವ ವಸ್ತುಗಳು ಪರಾನಿತ್ಯವಾಗಿವೆ. ತದಭಿಮಾನಿಗಳಾದ ದೇವತೆಗಳು ಅನಿತ್ಯರು. ಕಾಲ ಮೊದಲಾದವುಗಳು ನಿತ್ಯವಾಗಿವೆ. ವಾಯುವು ನಿತ್ಯನಾಗಿದ್ದಾನೆ. ವಿಷ್ಣುವು ಪರಾತ್ಪರ ನಿತ್ಯನಾಗಿದ್ದಾನೆ ಎಂದು. ಇಂತಹ ಜಗತ್ತನ್ನು ಮಹಾವಿಷ್ಣುವು ಧಾರಣೆ ಮಾಡಿದ್ದಾನೆ. ಈ ಚತುರ್ವಿಧವಾದ ಜಗತ್ತನ್ನು ವಿಭಾಗ ಮಾಡಿ ಆ ಗುಂಪಿಗೆ ತಾನು ನಿಯಾಮಕನಾಗಿದ್ದಾನೆಂದು ತಿಳಿಯಬೇಕು. ಈ ನಾಲ್ಕುವಿಧ ಜಗತ್ತಿನಲ್ಲಿ ತನ್ನ ನಾಲ್ಕು ರೂಪಗಳನ್ನು ಅಭಿವ್ಯಕ್ತಗೊಳಿಸಿ ನಿಯಮನ ಮಾಡುತ್ತಾನೆ.

**तत्वप्रकाशिका – नन्वत्राकाशानन्तरं भूतवायोः प्राप्तिर्न मुख्यस्येति । मैवम्। वायुशब्देन खलु भूतं तदमुख्यमुख्याभिमानिनौ चोच्यन्ते । तत्र मुख्यवायुविषय एव विवादप्राप्तेः। न हि भूतादिविषये श्रुतिविरोधोऽस्ति ।**

ಆಕಾಶದ ಅನಂತರ ಭೂತವಾಯುವೇ ಶ್ರುತಿಯಲ್ಲಿ ಪ್ರಾಪ್ತವಾಗಿದೆ ಹೊರತು ಮುಖ್ಯಪ್ರಾಣನಲ್ಲ.

ಇದು ತಪ್ಪು. ವಾಯುಶಬ್ದದಿಂದ ಅಮುಖ್ಯವಾದ ಭೂತವಾಯುವು ಮುಖ್ಯಾಭಿಮಾನಿಗಳಾದ ಪ್ರವಾಹವಾಯು ಹಾಗೂ ಮುಖ್ಯಪ್ರಾಣರು ಪ್ರತಿಪಾದ್ಯರಾಗುತ್ತಾರೆ. ಇವುಗಳಲ್ಲಿ ಮುಖ್ಯವಾಯುವಿನ ವಿಷಯದಲ್ಲಿ ಮಾತ್ರ ವಿವಾದ. ಭೂತಾದಿವಿಷಯದಲ್ಲಿ ಶ್ರುತಿವಿರೋಧವು ಬರುವುದಿಲ್ಲ.

ವಿವರಣೆ - 'ಆಕಾಶಾದ್ವಾಯುಃ ವಾಯೋರಗ್ನಿಃ' ಇತ್ಯಾದಿ ಶ್ರುತಿಯ ಪ್ರಕರಣವನ್ನು ಗಮನಿಸಿದಾಗ ಭೂತವಾದ ಆಕಾಶದಿಂದ ಭೂತವಾದ ವಾಯುವು ಹುಟ್ಟುತ್ತದೆ. ಭೂತವಾದ ವಾಯುವಿನಿಂದ

ಅಗ್ನಿ ಮೊದಲಾದವುಗಳು ಹುಟ್ಟುತ್ತವೆ ಎಂದು ತಿಳಿಯುತ್ತದೆ. ಹೀಗೆ ಭೂತಪದಾರ್ಥಗಳ ಸೃಷ್ಟಿಯೇ ಪ್ರಸಕ್ತವಾಗಿರುವಾಗ ನೀವು ವಾಯು ಶಬ್ದದಿಂದ ಮುಖ್ಯಪ್ರಾಣನನ್ನು ವಿವಕ್ಷಿಸುವುದು ಹೇಗೆ ಸಮಂಜಸವಾಗುತ್ತದೆಂಬುದು ಪೂರ್ವಪಕ್ಷಿಗಳ ಅಭಿಪ್ರಾಯ. ಭೂತವಾಯುವು ಅಮುಖ್ಯವಾಗಿ ಮಾತ್ರ ಪ್ರತಿಪಾದ್ಯ ಹೊರತು ಮುಖ್ಯವಾಗಿ ಪ್ರತಿಪಾದ್ಯವಾದವನು ಮುಖ್ಯಪ್ರಾಣನೇ ಎಂಬುದು ಸಿದ್ಧಾಂತದ ಅಭಿಪ್ರಾಯ.

**ತತ್ವಪ್ರಕಾಶಿಕಾ – तैत्तिरीयश्रुतावाकाशाद्वायुरिति श्रूयते । छन्दोगश्रुतौ तु तेजःपूर्वैव सृष्टिरिति चेत् मैवम् । उक्त्यनुक्त्योर्विरोधाभावात् । किं च नित्यविभुवियदुत्पत्तौ निर्णीतायां वायुभूतविषये शङ्कासाम्यस्याप्यभावेनाधिकाशङ्का प्रागेव नास्तीत्युक्त एव सूत्रार्थ इति ।। ८ ।।**

ತೈತ್ತರೀಯೋಪನಿಷತ್ತಿನಲ್ಲಿ 'ಆಕಾಶಾದ್ವಾಯುಃ' ಎಂದು ಶ್ರುತವಾಗುತ್ತಿದೆ. ಛಾಂದೋಗ್ಯಶ್ರುತಿಯಲ್ಲಿ 'ತದೈಕ್ಷತ ಬಹುಸ್ಯಾಂ ಪ್ರಜಾಯೇಯ' ಇತ್ಯಾದಿಯಾಗಿ ತೇಜಸ್ಸು ಮೊದಲು ಹುಟ್ಟಿತ್ತಿದೆ ಎಂದು ಶ್ರುತವಾಗುತ್ತಿದೆ. ಆದ್ದರಿಂದ ಪರಸ್ಪರ ವಿರೋಧವು ಬರುತ್ತದಲ್ಲವೇ?

ಈ ಆಕ್ಷೇಪವು ತಪ್ಪು. ಏಕೆಂದರೆ ಉಕ್ತಿ ಹಾಗೂ ಅನುಕ್ತಿಗಳಿಗೆ ವಿರೋಧವು ಬರುವುದಿಲ್ಲ. ಮತ್ತು ನಿತ್ಯವಿಭುವಾದ ಆಕಾಶಕ್ಕೆ ಉತ್ಪತ್ತಿಯನ್ನು ಈಗಾಗಲೇ ಸಮರ್ಥನೆ ಮಾಡಿದ್ದರಿಂದ ಭೂತವಾಯುವಿನಲ್ಲಿ ಸಮಾನವಾದ ಆಶಂಕೆಯು ಪ್ರಾಪ್ತವಾಗುತ್ತದೆ. ಆದ್ದರಿಂದ ಅಧಿಕಾಶಂಕೆಯೇ ಬರುವುದಿಲ್ಲ. ಆದ್ದರಿಂದ ವಾಯು ಪದವು ಮುಖ್ಯಪ್ರಾಣವಿಷಯಕವೆಂದೇ ಹೇಳಬೇಕು. ಇಷ್ಟು ಸೂತ್ರಾರ್ಥ.

ವಿವರಣೆ - ತೈತ್ತಿರೀಯೋಪನಿಷತ್ತಿನಲ್ಲಿ ಆಕಾಶದಿಂದ ವಾಯು ಹುಟ್ಟುತ್ತದೆಂದು ಹೇಳಿದರೆ, ಛಾಂದೋಗ್ಯ ಉಪನಿಷತ್ತಿನಲ್ಲಿ ಆಕಾಶದಿಂದ ತೇಜಸ್ಸು ಹುಟ್ಟುತ್ತದೆಂದು ಹೇಳಲಾಗಿದೆ. ಹೀಗೆ ಪರಸ್ಪರ ವಿರೋಧ ಬರುತ್ತದಲ್ಲವೇ? ಎಂದರೆ ಛಾಂದೋಗ್ಯೋಪನಿಷತ್ತಿನಲ್ಲಿ ಆಕಾಶದ ಅನಂತರ ವಾಯುವಿನ ಸೃಷ್ಟಿಯನ್ನು ಹೇಳಿಯೇ ಇಲ್ಲ. ಹೇಳದಿರುವುದು ದೋಷವಲ್ಲ. ಅರ್ಥಾತ್ ಆಕಾಶದಿಂದ ವಾಯುವು ಹುಟ್ಟಿತು, ವಾಯುವಿನಿಂದ ತೇಜಸ್ಸು ಹುಟ್ಟಿತು ಎಂದೇ ಛಾಂದೋಗ್ಯ ಉಪನಿಷತ್ತಿಗೆ ಅರ್ಥೈಸಬೇಕು. ಆದ್ದರಿಂದ ಉಕ್ತಿ ಅನುಕ್ತಿಗಳಿಗೆ ವಿರೋಧವನ್ನು ಆಶಂಕೆ ಮಾಡಬಾರದು. ಛಾಂದೋಗ್ಯೋಪನಿಷತ್ತಿನಲ್ಲಿ ಸೃಷ್ಟಿಯ ಕ್ರಮವನ್ನು ಸ್ಪಷ್ಟವಾಗಿ ಹೇಳದಿದ್ದರೂ ತೈತ್ತಿರೀಯೋಪನಿಷತ್ತಿನಲ್ಲಿ ಹೇಳಿರುವುದರಿಂದ ವಿರೋಧ ಬರುವುದಿಲ್ಲ.

ಈಗಾಗಲೇ ಹಿಂದಿನ ಅಧಿಕರಣದಲ್ಲಿ ಭೂತಾಕಾಶಕ್ಕೆ ಉತ್ಪತ್ತಿ ಇದೆ ಎಂಬುದನ್ನು ನಿರ್ಧಾರ ಮಾಡಿದ್ದಾಗಿದೆ. ಪುನಃ ಈ ಅಧಿಕರಣದಲ್ಲಿ ಭೂತವಾಯುವಿಗೆ ಉತ್ಪತ್ತಿಯನ್ನು ನಿರ್ಣಯ ಮಾಡುವುದರಲ್ಲಿ ಅರ್ಥವೇ ಇಲ್ಲ. ಏಕೆಂದರೆ ಹಿಂದಿನ ಅಧಿಕರಣದ ನ್ಯಾಯದಿಂದಲೇ ಭೂತವಾಯುವಿಗೂ ಕೂಡ ಉತ್ಪತ್ತಿ ಇದೆ ಎಂಬುದು ಸಿದ್ಧವಾಗುತ್ತದೆ. ಅಧಿಕಾಶಂಕೆಯೇ ಬಾರದಿದಾಗ ಈ ಅಧಿಕರಣ ಹೊರಟಿರುವುದು ವ್ಯರ್ಥವಾಗುತ್ತಿತ್ತು. ಆದ್ದರಿಂದ ವಾಯುಶಬ್ದಕ್ಕೆ ಮುಖ್ಯಪ್ರಾಣ ಎಂಬರ್ಥವನ್ನು ವಿವಕ್ಷಿಸಿದಾಗ ಉಳಿದೆಲ್ಲ ಚೇತನರಿಗಿಂತ ಆದಿತ್ಯ ಮುಖ್ಯಪ್ರಾಣನಲ್ಲಿರುವುದರಿಂದ ಮುಖ್ಯಪ್ರಾಣ ನಿತ್ಯನಾಗಬಹುದಲ್ಲವೇ? ಎಂಬ ಅಧಿಕಾಶಂಕೆಯು ಬಂದಾಗ ಈ ಅಧಿಕರಣ ಹೊರಟದ್ದು ಸಾರ್ಥಕವಾಗುತ್ತದೆ. ಹಾಗಾಗಿ ವಾಯು ಶಬ್ದದಿಂದ ಭೂತವಾಯುವನ್ನು ಇಟ್ಟುಕೊಳ್ಳದೇ ಮುಖ್ಯಪ್ರಾಣನೆಂಬ ಅರ್ಥವನ್ನೇ ಇಟ್ಟುಕೊಳ್ಳಬೇಕು.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಮಾತರಿಶ್ವಾಧಿಕರಣ ಮುಗಿಯಿತು

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## ಮಾತರಿಶ್ವಾಧಿಕರಣ

**एतेन मातरिश्वा व्याख्यातः ॥**

**अत्राधिकरणक्रम ''आकाशाद्वायुः'' इति श्रुतिक्रमात्पूर्वोक्तन्यायातिदेशाद्वा ।**

ಅಧಿಕರಣಕ್ರಮ ಹೇಗೆ ? 'ಆಕಾಶಾದ್ವಾಯುಃ' ಎಂಬ ಶ್ರುತಿಯಲ್ಲಿ ಮೊದಲು ಆಕಾಶದ ಪ್ರಸ್ತಾವ ಅನಂತರ ವಾಯುವಿನ ಪ್ರಸ್ತಾವ. ಅದರಂತೆ ಇಲ್ಲಿಯೂ ಕೂಡ ಅಧಿಕರಣಕ್ರಮ. ಅಥವಾ ಹಿಂದೆ ವಿಯದಧಿಕರಣದಲ್ಲಿ ಹೇಳಿರುವ ನ್ಯಾಯವನ್ನೇ ಇಲ್ಲಿಯೂ ಅತಿದೇಶ(ಆರೋಪ) ಮಾಡುವುದರಿಂದ ಅದರ ನಂತರ ಈ ಅಧಿಕರಣ ಬಂದಿದೆ.

**अत्रोक्तं ब्रह्मणः सर्वस्रष्टृत्वं किं मुख्यवाय्वनुत्पत्ति श्रुतिविरुद्धं न वेति चिन्ता। तदर्थं तदनादित्वश्रुतिर्मुख्योत गौणीति । तदर्थं तस्यागौणत्वे तेजोऽबन्नानाम-नित्यत्वमुक्त्वा वायोर्नित्यत्वोक्तिर्न घटत उत घटत इति । तदर्थमनित्येभ्यस्तेजोऽबन्नेभ्यो वायोर्विशेषः किं स्वातन्त्र्यरूपेण परात्परनित्यत्वेन किं वा स्वरूपातिरिक्तज्ञाननित्यत्व(रूपे)मात्रेणेति ।**

(ತದರ್ಥಚಿಂತಾವನ್ನು ಹೇಳುತ್ತಿದ್ದಾರೆ) ಇಲ್ಲಿ ಮೊದಲು ಬ್ರಹ್ಮನಿಗೆ ಹೇಳಿರುವ ಸರ್ವಜಗತ್ ಸ್ರಷ್ಟೃತ್ವಕ್ಕೂ ಮುಖ್ಯವಾಯುವಿಗೆ ಅನುತ್ಪತ್ತಿಯನ್ನು ಹೇಳುವ ಶ್ರುತಿಗೂ ವಿರೋಧವಿದೆಯೇ? ಎಂಬ ವಿಚಾರ. ಅದಕ್ಕಾಗಿ ಈ ಅನಾದಿತ್ವವನ್ನು ಹೇಳುವ ಶ್ರುತಿಯು ಮುಖ್ಯವೋ, ಗೌಣವೋ ಎಂಬ

ವಿಚಾರ. ಅದಕ್ಕಾಗಿ ಈ ಅನಾದಿತ್ವಶ್ರುತಿಯು ಗೌಣವಾದರೆ ಆಗ ತೇಜಸ್, ಅಪ್(ಜಲ) ಇವುಗಳಿಗೆ ಅನಿತ್ಯತ್ವವನ್ನು ಹೇಳಿ ನಂತರ ವಾಯುವಿಗೆ ನಿತ್ಯತ್ವವನ್ನು ಹೇಳಿದ್ದು ಸರಿಯೋ ತಪ್ಪೋ ? ಎಂಬ ವಿಚಾರ. ಅದಕ್ಕಾಗಿ ಅನಿತ್ಯಗಳಾದ ತೇಜಸ್, ಅಪ್ ಮೊದಲಾದವುಗಳಿಗೂ ವಾಯುವಿಗೂ ಇರುವ ವಿಶೇಷ ಪರಾತ್ಪರನಿತ್ಯತ್ವರೂಪವಾದ ಸ್ವಾತಂತ್ರ್ಯವೋ ಅಥವಾ ಸ್ವರೂಪನಿತ್ಯತ್ವವಲ್ಲದೇ ವೃತ್ತಿಜ್ಞಾನನಿತ್ಯತ್ವವೂ ಕೂಡ ಎಂಬುದೋ ? ಎಂಬ ವಿಚಾರ.

(ಇಲ್ಲಿ ಸಿದ್ಧಾಂತಕ್ರಮ ಹೀಗೆ; ವಾಯುವಿಗೆ ಸ್ವರೂಪನಿತ್ಯತ್ವವನ್ನು ಹೊರತುಪಡಿಸಿ ಬೇರೆಯವರಿಗೆ ಇಲ್ಲದ ವೃತ್ತಿಜ್ಞಾನನಿತ್ಯತ್ವವನ್ನು ವಿಶೇಷವಾಗಿ ಹೇಳುವುದಕ್ಕೋಸ್ಕರ ಶ್ರುತಿಯು ತೇಜಸ್, ಅಪ್, ಅನ್ನಗಳಿಂದ ವಾಯುವನ್ನು ಬೇರೆಯಾಗಿ ಹೇಳಿದೆ. ಹಾಗಾಗಿ ವಾಯುವಿಗೆ ಅನುತ್ಪತ್ತಿಯನ್ನು ಹೇಳುವ ಶ್ರುತಿಯು ಗೌಣ (ಅಂದರೆ ಅದು ವೃತ್ತಿಜ್ಞಾನವಿಷಯವೇ ಹೊರತು ಪರಮಾತ್ಮನಂತೆ ಅನುತ್ಪತ್ತಿಯನ್ನು ಹೇಳುತ್ತಿಲ್ಲ ಎಂದರ್ಥ) ಎಂದರೆ ತಪ್ಪಿಲ್ಲ. ಆಗ ವಿಷ್ಣುವಿಗೆ ಶ್ರುತಿಯು ಯಾವ ಸರ್ವಜಗತ್ಸೃಷ್ಟಿಕರ್ತೃತ್ವ ಹೇಳುತ್ತಿದೆ ಅದಕ್ಕೆ ಯಾವುದೇ ವಿರೋಧವಿಲ್ಲ)

**अतिदेशत्वसिद्धये भाष्योक्तमभ्यधिकाशङ्काचतुष्टयं विवृणोति – तथा सतीत्यादिना ॥**

ಹಿಂದಿನ ನ್ಯಾಯದ ಅತಿದೇಶವನ್ನು ಹೇಳುವುದಕ್ಕಾಗಿ ಭಾಷ್ಯದಲ್ಲಿ ಹೇಳಿರುವ ನಾಲ್ಕು ಅಭ್ಯಧಿಕಾ-(ಹೆಚ್ಚಿನ) ಶಂಕಾವನ್ನು ಹೇಳುತ್ತಿದ್ದಾರೆ 'ತಥಾ ಸತಿ' ಎಂಬುದಾಗಿ ಟೀಕಾಕಾರರು.

**ननु भाष्योदाहृतश्रुतावाकाशदिपदैर्भूतान्येवोच्यन्ते । तेभ्यश्च मुख्यवायोः स्वरूपनित्यत्वमेव विशेष इति नेत्याह – न चात्राकाशपदेनेति ॥**

ಪ್ರಶ್ನೆ - ಭಾಷ್ಯದಲ್ಲಿ ಹೇಳಿರುವ ಶ್ರುತಿಯಲ್ಲಿ ಆಕಾಶ, ತೇಜಸ್, ಅಪ್ ಇತ್ಯಾದಿಗಳಲ್ಲಿ ಆಕಾಶ ಶಬ್ದದಿಂದ ಭೂತಾಕಾಶವನ್ನೇ ಇಟ್ಟುಕೊಂಡಿದ್ದಾರೆ. ವಾಯುವನ್ನು ಬೇರೆಯಾಗಿ ಹೇಳಿದ್ದರ ಕಾರಣ ವಾಯುವಿಗೆ ಸ್ವರೂಪನಿತ್ಯತ್ವವನ್ನು ಹೇಳುವುದೇ ಆಗಿದೆ. ಹೀಗೇಕೆ ಅರ್ಥ ಹೇಳಬಾರದು ? ಎಂಬ ಪ್ರಶ್ನೆಗೆ ಟೀಕಾಕಾರರು ಹೇಳುತ್ತಿದ್ದಾರೆ 'ನ ಚಾತ್ರಾಕಾಶಪದೇನ' ಎಂಬುದಾಗಿ.

**''अधिकमनुभूत्यादिविरुद्धत्वम्'' इति न्यायविवरणोक्तं पूर्वपक्षहेतुमुपपादयितुं श्रुतियुक्तिविरोधमुक्त्वाऽनुभवविरोधमप्याह – एवंविधस्य चेति ॥ नित्यत्व व्याप्तोक्तबहुहेतुमतउत्पत्तिरनुभवबाधितेत्यर्थः ॥**

'ಅಧಿಕಮನುಭೂತ್ಯಾದಿವಿರುದ್ಧತ್ವಂ' ಎಂಬುದಾಗಿ ನ್ಯಾಯವಿವರಣದ ವಾಕ್ಯ. ಇದು ಪೂರ್ವಪಕ್ಷ-ಹೇತುವಾಕ್ಯ. ಇದನ್ನು ವಿವರಿಸಲು ಮೊದಲು ಶ್ರುತಿ, ಯುಕ್ತಿವಿರೋಧವನ್ನು ಹೇಳಿ ಈಗ

ಅನುಭವವಿರೋಧವನ್ನು ಹೇಳುತ್ತಿದ್ದಾರೆ 'ಏವಂವಿಧಸ್ಯ' ಎಂಬುದಾಗಿ. ನಿತ್ಯತ್ವವ್ಯಾಪ್ತವಾದ ಅನೇಕ ಧರ್ಮಗಳನ್ನು ಒಪ್ಪಿ ನಿತ್ಯತ್ವವನ್ನು ಒಪ್ಪದಿದ್ದರೆ ಅನುಭವವಿರೋಧ ಎಂದರ್ಥ.

(ವಾಯುವಿಗೆ ಸರ್ವದೇವತೆಗಳಿಂದ ಉಪಾಸ್ಯತ್ವ ಹಾಗೂ ಅಸ್ತಮಯ ಇರುವುದಿಲ್ಲ. ಈ ಎಲ್ಲಾ ಧರ್ಮಗಳೂ ಅನುತ್ಪತ್ತಿಯನ್ನು ಒಪ್ಪಿದರೆ ಕೂಡುತ್ತದೆ. ಇಲ್ಲವಾದರೆ ಇಲ್ಲ. ಈ ಧರ್ಮಗಳನ್ನು ಒಪ್ಪಿ ಅನುತ್ಪತ್ತಿ ಒಪ್ಪದಿದ್ದರೆ ಆಗ ಅನುಭವವಿರೋಧ. ವ್ಯಾಪ್ಯವಿದೆ ಎಂದರೆ ವ್ಯಾಪಕವಿದೆ ಎಂದು ಸಾಕ್ಷಿಸಿದ್ಧವಾಗಿದೆ. ಪುನಃ ವ್ಯಾಪಕವಿಲ್ಲ ಎಂದರೆ ಸಾಕ್ಷ್ಯನುಭವ ವಿರೋಧ)

**अत्यन्तमिति ।। आकाशादेरनित्यत्वमुक्त्वा वायोर्नित्यत्वायुक्तिराकाशादधिकेत्यर्थः।**

ಆಕಾಶಕ್ಕೆ ಅನಿತ್ಯತ್ವವನ್ನು ಹೇಳಿ ವಾಯುವಿಗೆ ವಿಶೇಷವಾಗಿ ನಿತ್ಯತ್ವವನ್ನು ಹೇಳಿರುವುದರಿಂದ ನೀವು ವಾಯುವಿಗೆ ಅನುತ್ಪತ್ತಿಯನ್ನು ಒಪ್ಪದಿದ್ದರೆ ಆಗ ಅತ್ಯಂತ(ಬಹಳವಾಗಿ) ಅನುಭವ, ಶ್ರುತಿ ಯುಕ್ತಿ ವಿರೋಧ ಬರುತ್ತದೆ ಎಂದರ್ಥ.

**सौत्रेण ''एतेन'' इत्यनेन पूर्वाधिकरणोक्तः सर्वोऽपि हेतुर्विवक्षित इत्याह – अनुत्पन्नत्वेनाश्रुतत्वादित्यादिना ।।**

'ಏತೇನ ಮಾತರಿಶ್ವಾ ವ್ಯಾಖ್ಯಾತಃ' ಎಂಬ ಸೂತ್ರದಲ್ಲಿ 'ಏತೇನ'ಎಂಬ ಶಬ್ದದಿಂದ ಹಿಂದಿನ ಅಧಿಕರಣದಲ್ಲಿ ಹೇಳಿರುವ ಎಲ್ಲಾ ಹೇತುಗಳನ್ನೂ ಇಟ್ಟುಕೊಳ್ಳಬೇಕು ಎಂದು ಹೇಳುತ್ತಿದ್ದಾರೆ 'ಅನುತ್ಪನ್ನತ್ವೇನಾಶ್ರುತತ್ವಾತ್' ಎಂಬ ವಾಕ್ಯದಿಂದ. (ವಿಯದಧಿಕರಣದಲ್ಲಿ ಹೇಳಿರುವ ಹೇತುಗಳನ್ನು ಹೀಗೆ ತಿಳಿಯಬಹುದು. 'ನ ವಿಯಶ್ರುತೇಃ' ಎಂಬಲ್ಲಿ ಹೇಳಿರುವ 'ಅಶ್ರುತಃ' ಎಂಬ ಹೇತುವು ಇಲ್ಲಿಯೂ ಬರುತ್ತದೆ. ಅಂದರೆ ಮುಖ್ಯವಾಯುವಿಗೆ ಅನುತ್ಪತ್ತಿ ಇಲ್ಲ. ಏಕೆಂದರೆ ಹಾಗೆಂದು ಕೇಳಿಸುತ್ತಿಲ್ಲ. ನಂತರ 'ಅಸ್ತಿ ತು' ಎಂಬಲ್ಲಿ ಹೇಳಿರುವ ಹೇತು. ಉತ್ಪತ್ತಿವಾಕ್ಯಗಳಿರುವುದರಿಂದ ಎಂಬುದು. ಅದು ಇಲ್ಲಿಯೂ ಬರುತ್ತದೆ. ಮುಖ್ಯವಾಯುವಿಗೆ ಉತ್ಪತ್ತಿ ಇದೆ ಎಂಬ ವಾಕ್ಯಗಳಿರುವುದರಿಂದ ಎಂಬುದಾಗಿ ಮೂರನೇ ಸೂತ್ರ 'ಗೌಣ್ಯಸಂಭವಾತ್' ಎಂಬುದು. ಅಲ್ಲಿ ಅನುತ್ಪತ್ತಿಶ್ರುತಿಯು ಇದೆಯಲ್ಲವೆ? ಎಂದರೆ ಅದು ಗೌಣೀ ಎಂಬ ಉತ್ತರ. ಅದೇ ಇಲ್ಲಿಯೂ ಅನ್ವಯಿಸುತ್ತದೆ. ಹಾಗೇ 'ಶಬ್ದಾಚ್ಚ' ಎಂಬಲ್ಲಿ ಹಿಂದೆ ಹೇಳಿದ ಗೌಣ ಮುಖ್ಯವ್ಯವಸ್ಥೆಯಲ್ಲ. ಶ್ರುತಿಯೂ ಪ್ರಮಾಣವಿದೆ ಎಂಬ ಹೇತುವಿದೆ. ಅದೇ ಇಲ್ಲಿಯೂ ಅನ್ವಯವಾಗುತ್ತದೆ. ಇನ್ನು 'ಸ್ಯಾಚ್ಚೇಕಸ್ಯ..'ಎಂಬಲ್ಲಿ ಒಂದೇ ಶಬ್ದ ಒಂದು ಕಡೆ ಗೌಣ, ಇನ್ನೊಂದು ಕಡೆ ಮುಖ್ಯ ಹೇಗೆ ಸಾಧ್ಯ? ಎಂಬ ಪ್ರಶ್ನೆಗೆ ಬ್ರಹ್ಮಶಬ್ದದಂತೆ ಎಂದು ಉತ್ತರ ಕೊಡಲಾಗಿದೆ. ಇಲ್ಲಿಯೂ ಆ ಪ್ರಶ್ನೆ ಬಂದರೆ ಅದೇ ಉತ್ತರ. 'ಪ್ರತಿಜ್ಞಾ...' ಎಂಬಲ್ಲಿ ಬ್ರಹ್ಮನು 'ಸರ್ವಜಗತ್‌ಕರ್ತಾ' ಎಂಬ ಪ್ರತಿಜ್ಞಾಹಾನಿಯುಂಟಾಗುತ್ತದೆ ಎಂದು ಹೇಳಲಾಗಿದೆ. ಅದು ಇಲ್ಲಿಯೂ ಸಮಾನ. ಕೊನೆಯದಾಗಿ 'ಯಾವದ್ವಿಕಾರಂ...' ಎಂಬಲ್ಲಿ ಹೇಳಿರುವ ವಿಭಕ್ತತ್ವ(ಅಲ್ಪಶಕ್ತಿತ್ವ) ಎಂಬ ಹೇತು ಅದು ಮುಖ್ಯವಾಯುವಿನಲ್ಲೂ ಸಮಾನವಾಗಿದೆ)

''मुख्यामुख्य'' इति भाष्यं व्याचष्टे – अथैतानीति ।।

'ಮುಖ್ಯಾಮುಖ್ಯ' ಎಂಬ ಭಾಷ್ಯವಚನವನ್ನು ವ್ಯಾಖ್ಯಾನಿಸುತ್ತಿದ್ದಾರೆ 'ಅಥೈತಾನಿ'ಎಂಬುದಾಗಿ.

तदेवान्यथापि व्याचष्टे ।। अनुत्पत्तिश्रुतिरिति ।।

'ಮುಖ್ಯಾಮುಖ್ಯ' ಎಂಬುದಕ್ಕೆ ಇನ್ನೊಂದು ಅರ್ಥ ಹೇಳುತ್ತಿದ್ದಾರೆ 'ಅನುತ್ಪತ್ತಿಶ್ರುತಿಃ' ಎಂಬುದಾಗಿ.

''उभयोरपि पराधीनत्वप्राप्तेश्चान्योन्यानुरोधे । अननुरोधे तु न सर्वैश्वर्यम्'' इति न्यायविवरणोक्तां युक्तिं सङ्गृह्णाति ।। अन्योन्येति ।।

ಇಬ್ಬರು ಸ್ವತಂತ್ರ ವ್ಯಕ್ತಿಗಳನ್ನು ಒಪ್ಪಿ ಅವರಿಬ್ಬರಿಗೂ ಅನ್ಯೋನ್ಯ ಅನುರೋಧ (ಅನುಸರಣ) ಇದೆ ಎಂದರೆ ಆಗ ಒಬ್ಬರು ಇನ್ನೊಬ್ಬರ ಅಧೀನ ಎಂದಾಗುತ್ತದೆ. ಅನುರೋಧವಿಲ್ಲ ಎಂದರೆ ಆಗ ಇಬ್ಬರೂ ಸರ್ವಸಮರ್ಥರಾಗಿ ವಿರೋಧ ಏರ್ಪಡಬಹುದು ಎಂಬ ನ್ಯಾಯವಿವರಣದ ವಾಕ್ಯದಲ್ಲಿ ಹೇಳಿರುವ ಯುಕ್ತಿಯನ್ನು ಸಂಗ್ರಹಿಸುತ್ತಿದ್ದಾರೆ 'ಅನ್ಯೋನ್ಯ' ಎಂಬುದಾಗಿ.

यद्यपि –

पुरुषः प्रकृतिः कालो देवास्तदभिमानिनः ।
महदाद्याश्च जायन्ते पराधीनविशेषिताः ।
इदं सर्वं ससर्जेति जनिमत्त्वमिहोदितम् ।।

इति पूर्वाधिकरणीयानुव्याख्याने चित्प्रकृतेरपि पराधीनविशेषावाप्तिरूपोत्पत्तेरुक्तत्वान्मुख्यवायोरपि सा कैमुत्यन्यायसिद्धा ।

ಪ್ರಶ್ನೆ - ಹಿಂದಿನ ಅಧಿಕರಣದ ಅನುವ್ಯಾಖ್ಯಾನದಲ್ಲಿ ಆಚಾರ್ಯರು ಹೇಳಿರುವ ಮಾತಿನ ಪ್ರಕಾರ ಪುರುಷ (ಜೀವ) ಪ್ರಕೃತಿ ಇವೆಲ್ಲವೂ ಪರಾಧೀನತೆ ಹೊಂದಿಯೇ ಹುಟ್ಟುತ್ತದೆ ಎಂದು ಸಿದ್ಧವಾಗುತ್ತದೆ. ಇಲ್ಲಿ ಚಿತ್‌ಪ್ರಕೃತಿಗೇ (ಲಕ್ಷ್ಮೀದೇವಿ) ಪರಾಧೀನವಿಶೇಷಾವಾಪ್ತಿ ಎಂಬುದು ಇರುವಾಗ ಅವಳಿಗಿಂತ ಕೆಳಗಿನವರಾದ ಮುಖ್ಯಪ್ರಾಣರಿಗೆ ಇದ್ದೇ ಇದೆ ಎಂಬುದು ಕೈಮುತ್ಯ ಎಂಬ ಲೋಕನ್ಯಾಯದಿಂದ ಸಿದ್ಧವಾಗುವಾಗ ಮುಖ್ಯಪ್ರಾಣರಿಗೆ ಈ ಪರಾಧೀನವಿಶೇಷಾವಾಪ್ತಿ ಇದೆ ಎಂದು ಹೇಳಲು ಈ ಸೂತ್ರದ ಆವಶ್ಯಕತೆ ಏನಿದೆ?

(ಕೈಮುತ್ಯನ್ಯಾಯ - ಹೆಗಣ ಕೋಲನ್ನೇ ತಿಂದಿದೆ ಎಂದ ಮೇಲೆ ಕೋಲಿಗೆ ನೇತುಹಾಕಿದ್ದ ಕೋಡಬಳೆ ತಿಂದಿದೆ ಎಂದು ಮತ್ತೆ ಹೇಳಬೇಕೆ ಎಂಬುದು)

**तथापि मुख्यवायोर्न पार्थिवादिवत्परानित्यत्वम् । नापि भूताकाशाभिमानि विनायकादिवत् स्वरूपानादित्वेऽपिस्वरूपातिरिक्तज्ञानसादित्वरूपमनित्यत्वम् । प्रलयेऽपि प्रतिभातपरावरत्वात् । नापीश्वरवत्स्वातन्त्र्यरूपं परात्परनित्यत्वम् । परतन्त्रत्वात् । नापि चित्प्रकृतिवद्देहादिनित्यत्वरूपं परनित्यत्वम् । देहोत्पत्तेः सत्त्वात् । किन्तु स्वरूपातिरिक्तज्ञानस्यापि नित्यत्वमिति विशेषं वक्तुमिदमधिकरणमिति द्रष्टव्यम् ।।**

ಉತ್ತರ - ನಿಜ, ಆದರೆ ಮುಖ್ಯವಾಯುವಿಗೆ ಪಾರ್ಥಿವ ವಸ್ತುಗಳಿಗೆ ಇರುವಂತೆ ಪರ ಅನಿತ್ಯತ್ವ ಇಲ್ಲ. ಮತ್ತೆ ಭೂತಾಕಾಶಕ್ಕೆ ಅಭಿಮಾನಿಯಾದ ಗಣೇಶನು ಸ್ವರೂಪತಃ ನಿತ್ಯನಾದರೂ ಅವನ ಸ್ವರೂಪಕ್ಕಿಂತ ಅತಿರಿಕ್ತವಾದ ವೃತ್ತಿಜ್ಞಾನ ಅನಿತ್ಯವೇ ಆಗಿದೆ. ಅವನಂತೆ (ಇತರ ಅಭಿಮಾನಿದೇವತೆಗಳಂತೆ) ಮುಖ್ಯಪ್ರಾಣರ ವೃತ್ತಿಜ್ಞಾನ ಅನಿತ್ಯವಲ್ಲ. ಹಾಗಾಗಿ ಅಂತರ ಅನಿತ್ಯತ್ವವೂ ಇವರಿಗೆ ಇಲ್ಲ. ಏಕೆಂದರೆ ಪ್ರಳಯಕಾಲದಲ್ಲೂ ಇವರ ವೃತ್ತಿಜ್ಞಾನದ ಪ್ರವಾಹ ಹಾಗೇ ಮುಂದುವರೆಯುತ್ತದೆ. ಹಾಗೆಂದು ಈಶ್ವರನಿಗೆ ಇರುವ ಹಾಗೆ ಸ್ವಾತಂತ್ರ್ಯ ಎಂಬ ಪರನಿತ್ಯತ್ವವೂ ಇವರಿಗೆ ಇಲ್ಲ, ಇವರು ಪರತಂತ್ರರಾದ್ದರಿಂದ. ಅದರಂತೆ ಚಿತ್‌ಪ್ರಕೃತಿಗೆ(ಲಕ್ಷ್ಮೀದೇವಿ) ಇರುವಂತೆ ದೇಹದಿಂದ ನಿತ್ಯತ್ವವೂ ಇಲ್ಲ. ಇವರಿಗೂ ದೇಹದ ಉತ್ಪತ್ತಿ ಇದೆ. ಹಾಗಾದರೆ ಯಾವ ವಿಶೇಷವನ್ನು ಮುಖ್ಯವಾಯುವಿಗೆ ಹೇಳಲು ಈ ಅಧಿಕರಣ ಹೊರಟಿದೆ ? ಎಂದರೆ ಸ್ವರೂಪಕ್ಕಿಂತ ಬೇರೆಯಾದ ಮನೋವೃತ್ತಿಜ್ಞಾನವು ಇವರಿಗೆ ನಿತ್ಯ. ಅದು ಬೇರೆ ಯಾವ ಅಭಿಮಾನಿ- ದೇವತೆಗಳಿಗೂ ಇಲ್ಲ. ಅವರ ವೃತ್ತಿಜ್ಞಾನ ಪ್ರಳಯಕಾಲದಲ್ಲಿ ನಷ್ಟವಾಗುತ್ತದೆ. ಈ ವಿಶೇಷವನ್ನು ಹೇಳುವುದಕ್ಕಾಗಿಯೇ ಈ ಅಧಿಕರಣ ಹೊರಟಿದೆ.

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**एतेन मातरिश्वा व्याख्यातः ।।** भाष्योक्ताभ्यधिकशङ्कोपयुक्तां चिन्तामाह – **तदर्थं तस्या इति ।।**

ಭಾಷ್ಯದಲ್ಲಿ ಹೇಳಿರುವ ಹೆಚ್ಚಿನ ಶಂಕೆಗೆ ಉಪಯುಕ್ತವಾದ ಚಿಂತೆ(ವಿಚಾರ)ಯನ್ನು ಹೇಳುತ್ತಿದ್ದಾರೆ 'ತದರ್ಥಂ' ಎಂಬುದಾಗಿ.

**प्रकाशः** – ''तदभाव उभयोस्स्वातन्त्र्यं विरुद्धमेव'' इत्यादि न्यायविवरणोप युक्तचिन्तामाह – **तदर्थमनित्येभ्य इति ।। स्पष्टः फलफलिभावः ।**

ಹಾಗಲ್ಲದೇ ಹೋದರೆ (ಮುಖ್ಯವಾಯುವಿಗೂ ಅನುತ್ಪತ್ತಿ ಒಪ್ಪಿದರೆ) ಆಗ ಮುಖ್ಯವಾಯುವಿಗೂ ಈಶ್ವರನಿಗೂ ಸ್ವಾತಂತ್ರ್ಯ ಬಂದು ವಿರೋಧ ಉಂಟಾಗುವುದು ಎಂಬ ನ್ಯಾಯವಿವರಣದಲ್ಲಿ ಹೇಳಿರುವುದಕ್ಕೆ ಅನುಕೂಲವಾದ ಚಿಂತಾವನ್ನು ಹೇಳುತ್ತಿದ್ದಾರೆ 'ತದರ್ಥಂ'ಎಂಬುದಾಗಿ. ಈ ತದರ್ಥಚಿಂತಾದಲ್ಲಿ ಫಲಫಲಿಭಾವ ಸ್ಪಷ್ಟವಾಗಿದೆ. (ಈ ವಿಷಯ ಮೂಲದಲ್ಲಿ ವಿವರಿಸಲಾಗಿದೆ)

**प्रकाशः** – ''तत्र वायोः परात्परनित्यत्वम्'' इत्यादिटीकां शंकापूर्वं व्यनक्ति।। **यद्यपीत्यादिना ।।**

'ವಾಯೋಃ ಪರಾತ್ಪರನಿತ್ಯತ್ವಂ' ಎಂಬ ಟೀಕಾವಾಕ್ಯವನ್ನು ಶಂಕಾ ಮಾಡಿಕೊಳ್ಳುವುದರ ಮೂಲಕ ಸ್ಪಷ್ಟಪಡಿಸುತ್ತಿದ್ದಾರೆ 'ಯದ್ಯಪಿ' ಎಂಬುದರಿಂದ.

**प्रकाशः** – ''महदाद्याश्च जायन्ते पराधीनविशेषिता'' इत्यनुव्याख्यान उक्तत्वादित्यर्थः ।।

ಮಹದಾದಿ ಎಲ್ಲಾ ವಸ್ತುಗಳೂ ಪರಾಧೀನವಿಶೇಷಿತಾ ಎಂಬ ಧರ್ಮದಿಂದ ಕೂಡಿಯೇ ಹುಟ್ಟುತ್ತವೆ ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಹೇಳಿರುವುದರಿಂದ ಎಂದರ್ಥ.

**प्रकाशः** – **प्रलयेऽपीति** ।। ''एवं प्रलयकालेऽपि प्रतिभातपरावरः'' इत्यनुव्याख्यानोक्तेरिति भावः ।।

ಪ್ರಳಯಕಾಲದಲ್ಲಿಯೂ ವೃತ್ತಿಜ್ಞಾನ ಹಾಗೆಯೇ ಇರುವುದರಿಂದ ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಹೇಳಿರುವುದರಿಂದ ಎಂದು ಅಭಿಪ್ರಾಯ.

**प्रकाशः** – **देहोत्पत्तेरिति** ।। ''शरीरोत्पत्तिकारणात् । पराधीनविशेषेण जनिमानेव शब्दित'' इत्यनुव्याख्यानोक्तेरिति भावः ।।

ವಾಯುದೇವರಿಗೂ ಶರೀರದ ಉತ್ಪತ್ತಿ ಇರುವುದರಿಂದ ಅವರನ್ನೂ ಹುಟ್ಟು ಉಳ್ಳವರು ಎಂಬುದಾಗಿಯೇ ಕರೆಯುತ್ತಾರೆ ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಹೇಳಿರುವುದರಿಂದ ಎಂಬುದು ಅಭಿಪ್ರಾಯ.

**प्रकाशः** – **नित्यत्वमिति** ।। ''मुख्यवायुर्नित्यसम'' इत्युक्तेरिति भावः । एतेनानुव्याख्याने टीकायां च ज्ञाननित्यत्वेनैव ''नित्यो वायुरुदाहृत'' इति स्मार्तनित्यत्वनिर्वाहस्सयुक्तिको दर्शितः ।

ಮಾತರಿಶ್ವಾಧಿಕರಣ (೨-೩-೨)

ಹೀಗೆ ಅನುವ್ಯಾಖ್ಯಾನದ ಮಾತುಗಳನ್ನು ಉದಾಹರಿಸಿದ್ದರಿಂದ ಟೀಕಾದಲ್ಲಿ ಹಾಗೂ ಅನುವ್ಯಾಖ್ಯಾನದಲ್ಲಿಯೂ ವಾಯುವಿಗೆ ನಿತ್ಯತ್ವವನ್ನು ಸ್ಮೃತಿಗಳಲ್ಲಿ ಏನು ಹೇಳಿದ್ದಾರೋ ಅದು ಅವರ ವೃತ್ತಿಜ್ಞಾನದ ನಿತ್ಯತ್ವವನ್ನು ಲಕ್ಷಿಸಿ ಹೇಳಿದ್ದಾರೆ ಎಂಬ ವಿಷಯವನ್ನು ಯುಕ್ತಿಸಹಿತವಾಗಿ ತೋರಿಸಿದಂತಾಯಿತು.

**ಪ್ರಕಾಶಃ** – परानित्यत्वानित्यत्वयोरसम्भवोपपादनेन ''वायोर्मुख्यानुत्पत्त्यभाव'' इति टीकोक्तशङ्कानिरासः कृतः । तथा टीकायां परात्परनित्यत्वपरनित्यत्वयोरभावोक्तौ हेतुश्चोक्तो भवति ॥

ಪರ ಅನಿತ್ಯತ್ವ, ಪರನಿತ್ಯತ್ವವನ್ನು ವಾಯುವಿಗೆ ನಿರಾಕರಿಸಿದ್ದರಿಂದ 'ವಾಯೋರ್ಮುಖ್ಯಾನುತ್ಪತ್ತ್ಯಭಾವೇ' ಎಂಬುದಾಗಿ ಟೀಕಾದಲ್ಲಿ ಮಾಡಿಕೊಂಡಿದ್ದ ಪ್ರಶ್ನೆಗೆ ಉತ್ತರವನ್ನು ಹೇಳಿದಂತೆ ಆಯಿತು. ಹಾಗೆಯೇ ಟೀಕಾದಲ್ಲಿ ಪರಾತ್‌ಪರನಿತ್ಯತ್ವ ಹಾಗೂ ಪರನಿತ್ಯತ್ವ ವಾಯುವಿಗೆ ಇಲ್ಲ ಎಂಬ ವಿಷಯದಲ್ಲಿ ಕಾರಣವನ್ನು ಹೇಳಿದಂತಾಯಿತು. (ಭಾಷ್ಯದಲ್ಲಿ ಹೇಳಿರುವ ಸ್ಮೃತಿವಾಕ್ಯದಿಂದ ಚಂದ್ರಿಕಾದಲ್ಲಿನ ವಿವರಣೆಯಿಂದ ಈ ಆಕ್ಷೇಪಗಳಿಗೂ ಸಮಾಧಾನ ದೊರೆಯುತ್ತದೆ ಎಂದು ಅಭಿಪ್ರಾಯ. ಆಕಾಶಾದಿಗಳಿಗಿಂತ ಬೇರೆಯಾಗಿ ವಾಯುವನ್ನು ಹೇಳಿ ಅವರಿಗೆ ನಿತ್ಯತ್ವವನ್ನು ಹೇಳಿದ್ದರಿಂದ ಮುಖ್ಯ ಅನಿತ್ಯತ್ವವನ್ನೇ ಹೇಳಬೇಕು ಎಂಬುದು ಶಂಕೆಯ ಅಭಿಪ್ರಾಯ. ಅದಕ್ಕೆ ಉತ್ತರ ಹಾಗೇ ಆಕಾಶಾದಿಗಳಿಂದ ಬೇರೆಯಾಗಿ ಹೇಳಲು ಕಾರಣವೇನೆಂದರೆ ಆಕಾಶಾದಿಗಳ ಅಭಿಮಾನಿಗಳಂತೆ ವಾಯುವಿಗೆ ವೃತ್ತಿಜ್ಞಾನ ಅನಿತ್ಯತ್ವವಲ್ಲ ಎಂಬುದು. ಹಾಗಾಗಿ ಆಕ್ಷೇಪಕ್ಕೆ ಅವಕಾಶವಿಲ್ಲ).

ಟೀಕಾದಲ್ಲಿ ಕೇವಲ ವಾಯುವಿಗೆ ಪರಾತ್‌ಪರನಿತ್ಯತ್ವ ಪರನಿತ್ಯತ್ವ ಇಲ್ಲ ಎಂದಷ್ಟೇ ಹೇಳಿದ್ದಾರೆ. ಅದಕ್ಕೆ ಕಾರಣ ಚಂದ್ರಿಕಾದಲ್ಲಿ ಹೇಳಲಾಗಿದೆ. ಅದೇನೆಂದರೆ ವಾಯುವಿಗೆ ಸ್ವಾತಂತ್ರ್ಯವಿಲ್ಲ. ಹಾಗಾಗಿ ಪರಾತ್ ಪರನಿತ್ಯತ್ವವಿಲ್ಲ. ದೇಹತಃ ಉತ್ಪತ್ತಿ ಇದೆ ಹಾಗಾಗಿ ಪರನಿತ್ಯತ್ವ ಇಲ್ಲ.

## तात्पर्यचन्द्रिका

**अन्ये तु ॥ छान्दोग्ये वायोर्भूतस्योत्पत्त्यश्रवणात्तैत्तिरीये तु तच्छ्रवणाच्छ्रुत्योर्विरोध इति पूर्वपक्ष इत्याहुः । तन्न । उक्तयनुक्तयोरविरोधादित्युक्तत्वात् ।**

(ಶಂಕರಾಚಾರ್ಯರ ಪ್ರಕಾರ ಈ ಅಧಿಕರಣದ ಅರ್ಥ ಹೇಳುತ್ತಿದ್ದಾರೆ) ಛಾಂದೋಗ್ಯದಲ್ಲಿ ಭೂತವಾಯುವಿಗೆ ಉತ್ಪತ್ತಿ ಕೇಳಿಸುತ್ತಿಲ್ಲ. ಆದರೆ ತೈತ್ತಿರೀಯದಲ್ಲಿ ಭೂತವಾಯುವಿಗೆ ಉತ್ಪತ್ತಿ ಕೇಳಿಸುತ್ತಿದೆ. ಹೀಗಾಗಿ ಈ ಎರಡು ಶ್ರುತಿಗಳಿಗೆ ಪರಸ್ಪರ ವಿರೋಧ ಎಂಬುದಾಗಿ ಪೂರ್ವಪಕ್ಷ. ಇದು ಸರಿಯಲ್ಲ. ನಾವು ಹಿಂದೆಯೇ ಹೇಳಿರುವಂತೆ ಉಕ್ತಿ ಹಾಗೂ ಅನುಕ್ತಿಗಳಲ್ಲಿ ವಿರೋಧವಿಲ್ಲ. ಒಂದು ಕಡೆ ಹೇಳಿದ್ದನ್ನು ಹೇಳಿರದ ಕಡೆ ಅನುಸಂಧಾನ ಮಾಡಿಕೊಳ್ಳಬೇಕು ಹಾಗಾಗಿ ಈ ಪೂರ್ವಪಕ್ಷ ಸರಿಯಲ್ಲ.

**भूतपरत्वेऽस्याधिकरणस्य ''आकाशाद्वायुः'' इत्याकाशजे वायावाकाश-साम्यस्याप्यभावेन सुतरामधिकाशङ्काभावेनातिदेशायोगाच्च ।**

ಈ ಅಧಿಕರಣವು ಭೂತವಾಯುಪರ ಎಂದಾದರೆ ಆಗ 'ಆಕಾಶದಿಂದ ವಾಯು ಹುಟ್ಟಿತು' ಎಂಬಲ್ಲಿ ವಾಯುವಿಗೆ ಆಕಾಶಜತ್ವ ಕೇಳಿಬರುತ್ತದೆ. ಹೀಗಾಗಿ ಆಕಾಶಕ್ಕಿಂತ ವಾಯುವಿನಲ್ಲಿ ಯಾವ ಹೆಚ್ಚುಗಾರಿಕೆಯೂ ಇಲ್ಲ ಹೊರತಾಗಿ ಸಾಮ್ಯವೂ ಇಲ್ಲ. ಹೀಗಿರುವಾಗ ಅಭ್ಯಧಿಕ ಶಂಕೆ ಬರಲು ಸಾಧ್ಯವೇ ಇಲ್ಲ. ಆಗ ಈ ಅಧಿಕರಣದಲ್ಲಿ ಹಿಂದೆ ಹೇಳಿದ ನ್ಯಾಯದ ಅತಿದೇಶ ಮಾಡಲಾಗುತ್ತದೆ ಎಂಬುದು ಕೂಡುವುದಿಲ್ಲ.

(ಆಕಾಶದಿಂದ ವಾಯು ಹುಟ್ಟಿದೆ ಎಂದ ಮೇಲೆ ಆಕಾಶ ಶ್ರೇಷ್ಠ, ವಾಯು ಅದಕ್ಕಿಂತ ಕನಿಷ್ಠ ಎಂದಾಯಿತು. ಹಾಗಾಗಿ ಆಕಾಶದಲ್ಲಿ ಇಲ್ಲದ ಯಾವುದೋ ಒಂದು ವಿಶೇಷ ವಾಯುವಿನಲ್ಲಿದೆ ಎಂದು ಅಭ್ಯಧಿಕಾಶಂಕಾ ಬರಲು ಸಾಧ್ಯವೇ ಇಲ್ಲ ಎಂದರ್ಥ)

**यद्यपि ''वायुश्चान्तरिक्षं चैतदमृतम्'' इति द्वयोरप्यमृतत्वमुक्त्वा ''सैषाऽनस्तमिता देवता यद्वायुः'' इति वायोर्विशिष्यानस्तमितत्वोक्तिरधिका ।**

ಪ್ರಶ್ನೆ - ಆಕಾಶಕ್ಕಿಂತ ವಾಯುವಿನಲ್ಲಿ ವಿಶೇಷವಿದೆ. ಏನೆಂದರೆ, ವಾಯು ಹಾಗೂ ಅಂತರಿಕ್ಷ(ಆಕಾಶ) ಇವೆರಡೂ ಅಮೃತ(ನಾಶರಹಿತ) ಎಂದು ಹೇಳಿ ಪುನಃ ಈ ವಾಯುವು ಅನಸ್ತಮಿತಾ(ನಾಶವಿಲ್ಲದ) ದೇವತೆ ಎಂದು ಹೇಳಿರುವುದರಿಂದ ವಾಯುವಿನಲ್ಲಿ ಆಕಾಶದಲ್ಲಿನ ಒಂದು ವಿಶೇಷ ಇದೆ. ಹಾಗಾಗಿ ಅಭ್ಯಧಿಕಾಶಂಕಾ ಕೂಡುತ್ತದೆ.

**तथापि सा देवताविषया । त्वन्मते त्विदं भूतविषयम् ।**

ಉತ್ತರ - ನಿಜ, ಆದರೂ ಈ ವಿಶೇಷ ವಾಯುವಿನ ಅಭಿಮಾನಿಯಾದ ದೇವತೆಯನ್ನು ಕುರಿತಾದದ್ದು. ಭೂತವಾಯುವನ್ನಲ್ಲ. ನಿನ್ನ ಮತದಲ್ಲಿ ಈ ಅಧಿಕರಣವು ಭೂತವಾಯುಪರವಾಗಿದೆ.

**न चास्याधिकरणस्य देवताविषयत्वे प्रकरणविरोधः । उक्तरीत्या वियदधिकरणे ''तत्तेजोऽसृजत तत्तेज ऐक्षत तदपोऽसृजत ता आप ऐक्षन्त'' इति वाक्यद्वयविषय उत्तराधिकरणद्वये च देवताया अपि प्रकृतत्वात् । परं त्विदं देवतामात्रविषयम् । पूर्वमुत्तरद्वयं चोभयविषयमिति भेदः ।**

ಈ ಅಧಿಕರಣವು ದೇವತಾವಿಶೇಷ ಎಂದರೆ ಪ್ರಕರಣವಿರೋಧ ಬರುತ್ತದೆ ಎಂದು ಕೇಳಬಾರದು. (ಇದು ಭೂತಪ್ರಕರಣ. ಇಲ್ಲಿ ದೇವತಾ ವಿಚಾರ ಬರುವುದು ಸರಿಯಲ್ಲ ಎಂಬುದು ಪ್ರಶ್ನೆಯ ಭಾವ) ಏಕೆಂದರೆ ನಮ್ಮ ಪ್ರಕಾರ ವಿಯದಧಿಕರಣದಲ್ಲಿ ಹಾಗೂ 'ತೇಜಸ್ಸು ಸೃಷ್ಟಿಯಾಯಿತು ಅದು ನೋಡಿತು, ಅಪ್ ಸೃಷ್ಟಿಯಾಯಿತು ಅದು ಕಂಡಿತು' ಎಂದು ಮುಂದಿನ ಅಧಿಕರಣದಲ್ಲಿಯೂ ದೇವತೆಯು ಪ್ರಕೃತವಾಗಿದೆ. ಆದರೆ ಈ ಅಧಿಕರಣ ಮಾತ್ರ ಕೇವಲ ದೇವತಾವಿಷಯ ಎಂಬುದು ವಿಶೇಷ. ಹಿಂದಿನ

ಮಾತರಿಶ್ವಾಧಿಕರಣ (೨-೩-೨)

ಹಾಗೂ ಮುಂದಿನ ಎರಡು ಅಧಿಕರಣಗಳು ಉಭಯ (ಭೂತ ಹಾಗೂ ತದಭಿಮಾನಿದೇವತಾ) ವಿಷಯ ಎಂದು ವ್ಯತ್ಯಾಸ ಇದೆ. (ಒಟ್ಟಿನಲ್ಲಿ ಎಲ್ಲಾ ಅಧಿಕರಣಗಳಲ್ಲೂ ದೇವತೆಯ ಪ್ರಸ್ತಾಪ ಬರುವುದರಿಂದ ಪ್ರಕರಣವಿರೋಧವಿಲ್ಲ)

**केचित्तु अधिकाशङ्काभावान्नेदमधिकरणान्तरम् । किन्तु पूर्वाधिकरणशेषभूतं सङ्गतविषयमेवेत्याहुः । तन्न ।**

ರಾಮಾನುಜರು ಈ ಎರಡು ಅಧಿಕರಣಗಳಲ್ಲಿ (ವಿಯತ್ ಹಾಗೂ ಮಾತರಿಶ್ವಾ) ಯಾವುದೇ ಅಧಿಕವಾದ ಶಂಕಾಗೆ ಅವಕಾಶವಿಲ್ಲವಾದ್ದರಿಂದ ಇದು ಒಂದೇ ಅಧಿಕರಣ ಎಂದು ಹೇಳುತ್ತಾರೆ. ಈ 'ಏತೇನ' ಎಂಬ ಸೂತ್ರವು ಹಿಂದಿನ ಅಧಿಕರಣದ ಶೇಷಭಾಗವಾಗಿ ಬಂದಿದೆ ಹಾಗೂ ಇದು ಭೂತವಾಯು- ವಿಶೇಷವಾಗಿದೆ ಎಂದೂ ಹೇಳುತ್ತಾರೆ. ಇದು ಸರಿಯಲ್ಲ.

**अस्मद्रीत्याऽधिकाशङ्काचतुष्टयसद्भावात् । ''सैषानस्तमित'' इति श्रुतौ देवतापदस्य ''कुविदङ्ग'' इत्यृचि देवोपास्यत्वस्य श्रवणाच्च ।**

ನಮ್ಮ ಪ್ರಕಾರ ಈ ಅಧಿಕರಣದಲ್ಲಿ ನಾಲ್ಕು ವಿಧವಾದ ಅಧಿಕಶಂಕೆ ಇರುತ್ತದೆ. 1. ಆಕಾಶಾದಿಗಳಿಗೆ ಅನಿತ್ಯತ್ವವನ್ನು ಹೇಳಿ ವಿಶೇಷವಾಗಿ ವಾಯುವಿಗೆ ನಿತ್ಯತ್ವವನ್ನು ಹೇಳಿರುವುದು. 2. ಸರ್ವದೇವತೋಪಾಸ್ಯತ್ವ, 3. ಮುಖ್ಯಚೇತನತ್ವ, 4. ಉದಯ ನಿಲ್ಮೋಚ್ಚಾಭಾವ, ಇನ್ನು ಈ ಸೂತ್ರವು ಭೂತವಾಯುವಿಷಯ ಎಂದು ಹೇಳಿದ್ದೂ ತಪ್ಪು. ಏಕೆಂದರೆ 'ಸೈಷಾನಸ್ತಮಿತಾ' ಎಂಬಲ್ಲಿ ದೇವತಾಪದ ಹಾಗೂ 'ಕುವಿದಂಗಂ' ಎಂಬ ಶ್ರುತಿಯಲ್ಲಿ ದೇವತೋಪಾಸ್ಯತ್ವ ಕೇಳಿಬರುತ್ತಿರುವುದರಿಂದ.

**अधिकाशङ्काभावे पूर्वन्यायेनैव सिद्ध्यैकाधिकरणत्वेऽप्यस्य सूत्रस्य वैयर्थ्याच्च।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् मातरिश्वाधिकरणं सम्पूर्णम् ।।२।।**

ಅಧಿಕವಾದ ಶಂಕಾ ಇಲ್ಲವೆಂದರೆ ಆಗ ಆಕಾಶಾಧಿಕರಣದ ನ್ಯಾಯದಿಂದಲೇ ಭೂತವಾಯುವಿಷಯವಾದ ಪ್ರಶ್ನೆಗೂ ಉತ್ತರ ಹೇಳಿದಂತಾಗಿ ಈ ಸೂತ್ರವು ಒಂದೇ ಅಧಿಕರಣದಲ್ಲಿ ಬಂದರೂ ವ್ಯರ್ಥವೇ .

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಮಾತರಿಶ್ವಾಧಿಕರಣವು ಸಂಪೂರ್ಣವಾಯಿತು

ಪರಿಪೂರ್ಣಚಂದ್ರಿಕಾ

**प्रकाशः –**

**अन्ये त्विति ।।** ''उक्तयनुक्तयोर्विरोधाभावात्'' इति टीकोक्तमेव हेतुमाह – **उक्त्यनुक्तयोरिति ।।** ''तत्र विरोधेन पूर्वपक्ष इति तावदयुक्तम्'' इत्यादिना पूर्वत्रोक्तत्वादित्यर्थः । ''किञ्च नित्यविभुवियदुत्पत्ता''वित्यादिटीकार्थमाह – **भूतपरत्व इति ।।**

ಉಕ್ತಿ ಅನುಕ್ತಿಗಳಿಗೆ ವಿರೋಧವಿಲ್ಲ ಎಂಬ ಟೀಕಾದಲ್ಲಿ ಹೇಳಿರುವ ಹೇತುವನ್ನೇ ಹೇಳುತ್ತಿದ್ದಾರೆ 'ಉಕ್ತ್ಯನುಕ್ತಯೋರ್ವಿರೋಧಾಭಾವಾತ್' ಎಂಬುದಾಗಿ. ಹಿಂದೆ ವಿರೋಧವನ್ನು ಇಟ್ಟುಕೊಂಡು ಪೂರ್ವಪಕ್ಷ ಹೇಳುವುದು ಸರಿಯಲ್ಲ ಎಂದು ಹೇಳಿರುವುದರಿಂದ ಎಂದರ್ಥ. ನಿತ್ಯವಾದ, ವಿಭುವಾದ ಆಕಾಶದ ಉತ್ಪತ್ತಿಯು ಹಿಂದೆ ನಿರ್ಣೀತವಾಗಿರುವುದರಿಂದ ಭೂತವಾಯುವಿನ ವಿಷಯದಲ್ಲಿ ಶಂಕಾ ಬರುವುದಿಲ್ಲ ಎಂದು ಟೀಕಾದಲ್ಲಿ ಹೇಳಿರುವುದನ್ನು ಹೇಳುತ್ತಿದ್ದಾರೆ 'ಭೂತಪರತ್ವ' ಎಂಬುದಾಗಿ.

**प्रकाशः –** भाष्यभामत्योरुक्तमाशङ्कते **।। यद्यपीति ।। अधिकेति ।।** एतेन यदुक्तं श्रुतप्रकाशे ''अनस्तमितशब्दस्यामृतशब्दतुल्यार्थतया पृथक्परिहरणीयत्वाभावात्'' इति तन्निरस्तम् ।

ಶಾಂಕರಭಾಷ್ಯ ಹಾಗೂ ಭಾಮತಿಗ್ರಂಥದಲ್ಲಿ ಹೇಳಿರುವ ಅಂಶವನ್ನು ಶಂಕಾ ಮಾಡಿಕೊಳ್ಳುತ್ತಿದ್ದಾರೆ 'ಯದ್ಯಪಿ' ಎಂಬುದಾಗಿ. ಚಂದ್ರಿಕಾದಲ್ಲಿ ಭಾಮತೀಕಾರರು ಹೇಳಿರುವ ಅಧಿಕಾಶಂಕಾವನ್ನು ಪ್ರಶ್ನೆ ಮಾಡಿಕೊಂಡಿರುವುದರಿಂದ ಶ್ರುತಪ್ರಕಾಶ(ರಾಮಾನುಜಭಾಷ್ಯಟೀಕಾ)ದಲ್ಲಿ ಹೇಳಿರುವುದು ಸರಿಯಲ್ಲ ಎಂದು ಹೇಳಿದಂತಾಯಿತು. ಶ್ರುತಪ್ರಕಾಶದಲ್ಲಿ ಅಧಿಕಾಶಂಕಾ ಬರುವುದೇ ಇಲ್ಲ ಎಂದಿದ್ದಾರೆ. ಏಕೆಂದರೆ 'ಅನಸ್ತಮಿತಾ' ಹಾಗೂ 'ಅಮೃತ' ಶಬ್ದಗಳಿಗೆ ಅರ್ಥಸಮಾನ. ಹಾಗಾಗಿ ಎರಡಕ್ಕೂ ಬೇರೆ ಪರಿಹಾರ ಹೇಳುವ ಅವಶ್ಯಕತೆಯಿಲ್ಲ ಎಂದು ಅಭಿಪ್ರಾಯಪಟ್ಟಿದ್ದಾರೆ.

**प्रकाशः –** ''वायुश्चान्तरिक्षं चैतदमृतमिति वायोरमृतत्वमुक्त्वा पुनः पवनस्य विशेषेणाह सैषानस्तमिता देवता यद्वायुरिति ।। तस्मादभ्यासान्नापेक्षिकं वायोरमृतत्वमपि त्वात्यन्तिकमेव'' इति भामत्युक्तस्यापरिहारात् ।

ಶ್ರುತಪ್ರಕಾಶದ ಮಾತು ಸರಿಯಲ್ಲ. ಏಕೆಂದರೆ ಶ್ರುತಿಯು ವಾಯು ಹಾಗೂ ಅಂತರಿಕ್ಷ(ಆಕಾಶ ) ಇವೆರಡೂ ಅಮೃತ ಎಂದು ಹೇಳಿ ಪುನಃ ವಾಯುವಿಗೆ ವಿಶೇಷವಾಗಿ ಅನಸ್ತಮಿತತ್ವವನ್ನು ಹೇಳುತ್ತಿದೆ. ಹಾಗಾಗಿ ಎರಡು ಸಾರಿ ವಾಯುವಿಗೆ ನಾಶರಾಹಿತ್ಯವನ್ನು ಹೇಳಿದ್ದರಿಂದ ವಾಯುವಿಗೆ ಆಕಾಶದಂತೆ ಆಪೇಕ್ಷಿತವಾದ ಅಮೃತತ್ವವಿಲ್ಲ ಬದಲಾಗಿ ಆತ್ಯಂತಿಕವಾದ ಅಮೃತತ್ವ ಇದೆ ಎಂದು ತಿಳಿಯುತ್ತಿದೆ ಎಂಬ ಭಾಮತೀಕಾರರ ಪ್ರಶ್ನೆಗೆ ಉತ್ತರ ಶ್ರುತಪ್ರಕಾಶದಲ್ಲಿಲ್ಲ.

ಆಪೇಕ್ಷಿತ ಎಂದರೆ ಒಂದನ್ನು ಅಪೇಕ್ಷಿಸಿ ಇರುವುದು (ದೇಶ, ಕಾಲ ಇತ್ಯಾದಿ).

**प्रकाशः –** देवताविषयेत्येव समाधानं युक्तम् ।

ಮಾತರಿಶ್ವಾಧಿಕರಣ (೨-೩-೨)

ಹಿಂದೆ ಭಾಮತೀಕಾರನ ಮತವನ್ನು ಒಪ್ಪಿದಂತೆ ಕಂಡರೂ ಅದು ಸರಿಯಲ್ಲ. ಈ ಅಧಿಕರಣವು ದೇವತಾಪರ ಎಂಬ ನಮ್ಮ ಅಭಿಪ್ರಾಯವೇ ಸರಿ.

**प्रकाशः – श्रुतप्रकाशोक्तं हेतुमाह – अधिकाशङ्काभावादिति ।।**

ಶ್ರುತಪ್ರಕಾಶದಲ್ಲಿ ಹೇಳಿರುವ ಹೇತುವನ್ನು ಹೇಳುತ್ತಿದ್ದಾರೆ 'ಅಧಿಕಾಶಂಕಾಭಾವಾತ್' ಎಂಬುದಾಗಿ.

**प्रकाशः – वैयर्थ्याच्चेति** ।। एतेन यदुक्तं श्रीभाष्यतद्व्याख्यानयोः ''वियन्मातरिश्वनोरुभयोरप्युत्पत्तिर्वक्तव्या । तत्रैकसूत्रेण वक्तुं शक्यऽपि पृथग्योगकरणं ''तेजोऽतस्तथा ह्याह'' इति मातरिश्वपरामर्शार्थम्'' इति तन्निरस्तम्।

ಅಧಿಕಾಶಂಕಾ ಇಲ್ಲವಾದ ಮೇಲೆ ಬೇರೆ ಸೂತ್ರ ಮಾಡಿದ್ದೇ ವ್ಯರ್ಥ. ಈ ಪ್ರಶ್ನೆಗೆ ಶ್ರೀಭಾಷ್ಯ ಹಾಗೂ ಅದರ ವ್ಯಾಖ್ಯಾನದಲ್ಲಿ ಯಾವ ಉತ್ತರ ಕೊಟ್ಟಿದ್ದಾರೋ ಅದು ಸರಿಯಲ್ಲ. ಆಕಾಶ ಹಾಗೂ ವಾಯು ಇಬ್ಬರಿಗೂ ಉತ್ಪತ್ತಿಯನ್ನು ಹೇಳಬೇಕು. ಇದನ್ನು ಒಂದೇ ಸೂತ್ರದಿಂದ ಹೇಳಲು ಸಾಧ್ಯವಿದ್ದರೂ ಬೇರೆ ಬೇರೆ ಸೂತ್ರದಲ್ಲಿ ಹೇಳುವುದಕ್ಕೆ ಕಾರಣ ಮುಂದೆ 'ತೇಜೋऽತಸ್ತಥಾ ಹ್ಯಾಹ' ಎಂಬ ಸೂತ್ರದಲ್ಲಿರುವ 'ಅತಃ' ಎಂಬ ಶಬ್ದದಿಂದ ಮಾತರಿಶ್ವಾ ಎಂಬುದನ್ನು ಪರಾಮರ್ಶೆ ಮಾಡುವುದೇ ಆಗಿದೆ. ಈ ಸಮಾಧಾನ ತಪ್ಪು.

**प्रकाशः –** वियत्तुल्यन्यायतया मातरिश्वनोऽप्युपलक्षणतयोत्पत्तिसिद्धावप्युत्तर-सूत्रपरामर्शमात्रार्थं पृथक् सूत्रकरणस्यानुचितत्वात् ।

ಆಕಾಶಕ್ಕೆ ಸಮ ಎಂದಮೇಲೆ ವಾಯುವಿಗೂ ಅದೇ ಸೂತ್ರದಿಂದ ಉತ್ಪತ್ತಿ ಹೇಳಲು ಬರುವಾಗ ಮುಂದಿನ ಸೂತ್ರದಲ್ಲಿ ಪರಾಮರ್ಶ ಮಾಡುವ ಉದ್ದೇಶದಿಂದಲೇ ಒಂದು ಪ್ರತ್ಯೇಕ ಸೂತ್ರ ಹೇಳುವುದು ಉಚಿತವಲ್ಲ.

**प्रकाशः –** वायोस्तेजस्तथा ह्याहेति सूत्रणेऽपि सामञ्जस्यात् ।

(ಇನ್ನೊಂದು ಆಕ್ಷೇಪ) ನಿಮಗೆ ಮುಂದಿನ ಸೂತ್ರದಲ್ಲಿ 'ಅತ' ಎಂಬುದರಿಂದ ವಾಯುವಿನ ಪರಾಮರ್ಶೆ ಇಷ್ಟವಾದಲ್ಲಿ ಪ್ರತ್ಯೇಕ ಸೂತ್ರ ಹೇಳುವ ಬದಲು ಅದೇ ಸೂತ್ರವನ್ನು 'ವಾಯೋಸ್ತೇಜಸ್ತಥಾ ಹ್ಯಾಹ' ಎಂದು ಹೇಳಿಬಿಡಬಹುದು. ಹೀಗೆ ಹೇಳಿದರೆ ಲಾಘವೂ ಇದೆ.

**प्रकाशः –** अत इत्यस्य वायुपरामर्शित्वाभावाच्चेति भावः।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे मातरिश्वाधिकरणं सम्पूर्णम् ।।२।।**

ಸಿದ್ಧಾಂತದಲ್ಲಿ 'ಅತಃ' ಎಂಬುದರಿಂದ ವಾಯುವಿಗೆ ಪರಾಮರ್ಶವು ಅಭಿಮತವಲ್ಲ. ಅಲ್ಲಿರುವ 'ಅತಃ' ಶಬ್ದದಿಂದ ಪರಮಾತ್ಮನ ಪರಾಮರ್ಶೆಯೇ ಮಾಡಲಾಗಿದೆ. ಈ ಕಾರಣದಿಂದಲೂ ನಿಮ್ಮ ಮತ ಸರಿಯಲ್ಲ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಮಾತರಿಶ್ವಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

ಪರಿಪೂರ್ಣಚಂದ್ರಿಕಾ

# ಅಸಂಭವಾಧಿಕರಣ

(೨-೩-೩)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

***

॥ ಶ್ರೀಗುರುಭ್ಯೋ ನಮಃ ॥

# ಅಸಂಭವಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् — असम्भवस्तु सतोऽनुपपत्तेः ।।**

ವಿಷ್ಣುವಿಗೆ ಯಾವ ರೀತಿಯಿಂದಲೂ ಉತ್ಪತ್ತಿ ಇರುವುದಿಲ್ಲ. ಏಕೆಂದರೆ ಅಸತ್ತಿನಿಂದ ಕಾರ್ಯದ ಉತ್ಪತ್ತಿಯು ಅನುಪಪನ್ನವಾಗಿದೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका —** तु शब्दोऽवधारणे । **सतः** विष्णोः **असम्भवः** अनुत्पत्तिरेव । न तु 'असतः सदजायत' इति श्रुत्या असतः साकाशादुत्पत्तिर्वाच्या । कुतः ? **अनुपपत्तेः** । अतो विष्णोरसदुत्पत्तेरयोगादित्यर्थः ।।१।।

'ತು'ಶಬ್ದವು ಅವಧಾರಣಾರ್ಥದಲ್ಲಿದೆ. ಸತಃ = ವಿಷ್ಣುವಿಗೆ, ಅಸಂಭವಸ್ತು = ಉತ್ಪತ್ತಿಯು ಸರ್ವಥಾ ಇರುವುದಿಲ್ಲ. 'ಅಸತಃ ಸದಜಾಯತ' ಅಸತ್ತಿನಿಂದ ಸತ್‌ಪದಾರ್ಥವು ಹುಟ್ಟುತ್ತದೆ ಎಂಬ ಶ್ರುತಿಯಿಂದ ಅಸತ್ ಪದಾರ್ಥದಿಂದ ವಿಷ್ಣುವಿಗೆ ಉತ್ಪತ್ತಿಯನ್ನು ಹೇಳಬೇಕು. ಆದರೆ ಅನುಪಪತ್ತೇಃ = ವಿಷ್ಣುವಿಗೆ ಅಸತ್ತಿನಿಂದ ಹುಟ್ಟುವಿಕೆಯು ಸರ್ವಥಾ ಯುಕ್ತವಾಗುವುದಿಲ್ಲ.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ಅಸಂಭವಾಧಿಕರಣವು ಮುಗಿಯಿತು.

ಪರಿಪೂರ್ಣಚಂದ್ರಿಕಾ

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् — असम्भवस्तु सतोऽनुपपत्तेः ।।१।।**

**'असद्वा इदमग्र आसीत् । ततो वै सदजायत' (तै.२.७.) 'असतस्सदजायत' (ऋ. १०.७२.२.) इत्यादिश्रुतिभ्यः सतोऽप्युत्पत्तिरिति चेत् —**

ಅನುವಾದ - 'ಅಸದ್ವಾ ಇದಮಗ್ರ ಆಸೀತ್' ಇವೇ ಮೊದಲಾದ ಶ್ರುತಿಗಳ ಆಧಾರದಿಂದ ಸತ್ ಪದಾರ್ಥದಿಂದ ಪ್ರತಿಪಾದ್ಯನಾದ ಮಹಾವಿಷ್ಣುವಿಗೂ ಉತ್ಪತ್ತಿಯನ್ನು ಹೇಳಬೇಕಲ್ಲವೇ? ಎಂಬುದು ಪೂರ್ವಪಕ್ಷ.

ಪ್ರತಿಪದಾರ್ಥ -- ಅಗ್ರೇ = ಪ್ರಳಯಕಾಲದಲ್ಲಿ, ಅಸದ್ವಾ ಇದಂ = ಅಸತ್‌ಪದಾರ್ಥವು ಮಾತ್ರ, ಆಸೀತ್ = ಇತ್ತು. ತತೋ ವೈ = ಅಸತ್‌ಪದಾರ್ಥದಿಂದ, ಸತ್ = ಸತ್ ಪದಾರ್ಥವು, ಅಜಾಯತ = ಹುಟ್ಟಿತು. ಅಸತಃ = ಅಸತ್‌ಪದಾರ್ಥದಿಂದ, ಸತ್ = ಸತ್‌ಪದಾರ್ಥವು, ಅಜಾಯತ = ಹುಟ್ಟಿತು. ಇತ್ಯಾದಿ ಶ್ರುತಿಭ್ಯಃ = ಇವೇ ಮೊದಲಾದ ಶ್ರುತಿಗಳಿಂದ, ಸತೋಽಪಿ = ಸತ್‌ಪದಾರ್ಥಕ್ಕೂ, 'ಸತ್' = ಶಬ್ದದಿಂದ ಪ್ರತಿಪಾದ್ಯನಾದ ವಿಷ್ಣುವಿಗೂ, ಉತ್ಪತ್ತಿಃ = ಉತ್ಪತ್ತಿಯನ್ನು ಹೇಳಬೇಕು. ಇತಿ ಚೇತ್ = ಇಷ್ಟು ಪೂರ್ವಪಕ್ಷ.

**भाष्यम् — न, अनुत्पत्तिरेव सतः । तुशब्देनोक्तव्यवस्थामपाकरोति ।**

ಅನುವಾದ - ಮೇಲಿನ ಆಕ್ಷೇಪವು ತಪ್ಪು. ಮಹಾವಿಷ್ಣುವಿಗೆ ಎಂದೂ ಕೂಡ ಯಾವ ವಿಧದಿಂದಲೂ ಉತ್ಪತ್ತಿಯು ಇರುವುದಿಲ್ಲ. ಸೂತ್ರದಲ್ಲಿರುವ 'ತು' ಶಬ್ದದಿಂದ ಆಕಾಶಾದಿಗಳಿಗೆ ಹೇಳಿದ ಸ್ವರೂಪತಃ ಉತ್ಪತ್ತಿ ಇರುವುದಿಲ್ಲ. ದೇಹತಃ ಉತ್ಪತ್ತಿ ಇರುತ್ತದೆಂಬ ವ್ಯವಸ್ಥೆಯು ಬ್ರಹ್ಮನಲ್ಲಿ ಇಲ್ಲವೆಂದು ನಿರಾಕರಣೆ ಮಾಡುತ್ತಿದ್ದಾರೆ.

ಪ್ರತಿಪದಾರ್ಥ -- ನ = ಮೇಲಿನ ಆಕ್ಷೇಪವು ತಪ್ಪು. ಸ್ವತಃ = ಮಾಹಾವಿಷ್ಣುವಿಗೆ, ಅನುತ್ಪತ್ತಿರೇವ = ಯಾವ ಬಗೆಯಿಂದಲೂ ಉತ್ಪತ್ತಿ ಇರುವುದೇ ಇಲ್ಲ. ತುಶಬ್ದೇನ = ಸೂತ್ರದಲ್ಲಿರುವ ತುಶಬ್ದದಿಂದ, ಉಕ್ತವ್ಯವಸ್ಥಾಮ್ = ಸ್ವರೂಪತಃ = ಉತ್ಪತ್ತಿಯಿರುವುದಿಲ್ಲ. ದೇಹತಃ ಉತ್ಪತ್ತಿ ಇರುತ್ತದೆಂಬುದನ್ನು, ಅಪಾಕರೋತಿ = ನಿರಾಕರಣೆ ಮಾಡುತ್ತಿದ್ದಾರೆ.

**भाष्यम् — न ह्यसतः सदुत्पद्यतेऽदृष्टत्वादनुपपत्तेः ।**

ಅನುವಾದ - ಅಸತ್‌ಪದಾರ್ಥದಿಂದ ಸತ್‌ಪದಾರ್ಥವು ಎಂದೂ ಕೂಡ ಹುಟ್ಟಲು ಸಾಧ್ಯವಿಲ್ಲ. ಹಾಗೆ ಹುಟ್ಟುವುದು ಎಲ್ಲಿಯೂ ಕಂಡಿರುವುದಿಲ್ಲ.

ಅಸಂಭವಾಧಿಕರಣ (೨-೩-೩)

ಪ್ರತಿಪದಾರ್ಥ -- ಹಿ = ಯಾವ ಕಾರಣದಿಂದ, ಅಸತಃ = ಅಸತ್‌ಪದಾರ್ಥದ ದೆಸೆಯಿಂದ, ಸತ್ = ಸತ್‌ಪದಾರ್ಥವು, ನ ಉತ್ಪದ್ಯತೇ = ಹುಟ್ಟುವುದು ಸಾಧ್ಯವಿಲ್ಲ. ಅದೃಷ್ಟತ್ವಾತ್ = ಅಸತ್ ಪದಾರ್ಥದಿಂದ ಸತ್‌ಪದಾರ್ಥ ಹುಟ್ಟುವುದು ಎಲ್ಲಿಯೂ ಕಂಡಿಲ್ಲ. ಅನುಪಪತ್ತೇಃ = ಆದ್ದರಿಂದ ಪೂರ್ವಪಕ್ಷದಲ್ಲಿ ಹೇಳಿದ್ದು ಅನುಪಪನ್ನವಾಗಿದೆ.

**भाष्यम् — 'तद्वा एतद्ब्रह्माऽहुर्बृहति बृंहयति चेति । तद्वा एतदसदाहुः न ह्यासादयति कश्चन । तद्वा एतत्परमाहुः परतो हि तदुदीक्ष्यते' इति श्रुतेरसच्छब्दो ब्रह्मवाची ।**

ಅನುವಾದ - ಈ ಭಗವಂತನನ್ನು ಎಲ್ಲರೂ ಬ್ರಹ್ಮ ಎಂದು ಕರೆಯುತ್ತಾರೆ. ಏಕೆಂದರೆ ನಿರಂತರವಾಗಿ ಅವನು ಅಭಿವೃದ್ಧಿಶಾಲಿಯಾಗಿದ್ದಾನೆ. ಮತ್ತು ಮತ್ತೊಬ್ಬರನ್ನು ಅಭಿವೃದ್ಧಿಪಡಿಸುತ್ತಾನೆ. ಇಂಥ ಭಗವಂತನನ್ನೇ ಅಸತ್ ಎನ್ನುತ್ತಾರೆ. ಅವನನ್ನು ಯಾರೂ ಕೂಡ ನಾಶ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಅಸತ್ ಎಂದು ಕರೆಯುತ್ತಾರೆ. ಎಲ್ಲರಿಗಿಂತ ಉತ್ತಮನಾಗಿರುವುದರಿಂದ ಅವನನ್ನು ಪರ ಎಂದು ಕರೆಯುತ್ತಾರೆ.

ಪ್ರತಿಪದಾರ್ಥ -- ತದ್ವಾ = ಆ ಬ್ರಹ್ಮನನ್ನೇ, ಬೃಹತಿ = ನಿರಂತರ ಅಭಿವೃದ್ಧಿ ಶಾಲಿಯಾಗಿದ್ದಾನೆ. ಚ = ಮತ್ತು, ಬೃಹ್ಮಯತಿ = ಮತ್ತೊಬ್ಬರನ್ನು ಅಭಿವೃದ್ಧಿಪಡಿಸುತ್ತಾನೆ. ಇತಿ = ಈ ಕಾರಣದಿಂದ, ಏತತ್ = ಈ ಬ್ರಹ್ಮನೆಂದು, ಆಹುಃ = ಕರೆಯುತ್ತಾರೆ. ತದ್ವಾ = ಆ ಬ್ರಹ್ಮನನ್ನು, ಕಶ್ಚನ = ಯಾರೊಬ್ಬನು ಕೂಡ, ನಹಿ ಆಸಾದಯತಿ = ನಾಶಮಾಡಲಾರನು ಇತಿ = ಈ ಕಾರಣದಿಂದ, ಏತತ್ = ಈ ಬ್ರಹ್ಮನನ್ನು, ಅಸತ್ = ಅಸತ್ ಎಂದು, ಆಹುಃ = ಕರೆಯುತ್ತಾರೆ. ತದ್ವಾ = ಆ ಬ್ರಹ್ಮನನ್ನಾದರೂ, ಪರತೋಹಿ = ಸರ್ವೋತ್ತಮನಾಗಿರುವುದರಿಂದ, ತತ್ = ಆ ಬ್ರಹ್ಮನನ್ನು, ಉದಿಕ್ಷ್ಯತೇ = ವಿಚಾರದಿಂದ ತಿಳಿಯುತ್ತಾರೆ. ಆದ್ದರಿಂದ ಪರಂ ಆಹುಃ = ಶ್ರೇಷ್ಠನೆಂದು ಹೇಳುತ್ತಾರೆ. ಏತತ್ = ಈ ಬ್ರಹ್ಮನನ್ನು, ಆಹುಃ = ಕರೆಯುತ್ತಾರೆ. ಇತಿ = ಹೀಗೆ, ಶ್ರುತೇಃ = ಶ್ರುತಿ ಇರುವುದರಿಂದ, ಅಸತ್ ಶಬ್ದಃ = ಅಸತ್ ಎಂಬ ಶಬ್ದವು, ಬ್ರಹ್ಮವಾಚೀ = ಬ್ರಹ್ಮನನ್ನು ಪ್ರತಿಪಾದನೆ ಮಾಡುತ್ತದೆ

**भाष्यम् — 'देवानां पूर्वे युगेऽसतः सदजायतेति । ब्रह्म वा असत् सद्वाव प्राणः प्राणं वाव महान् सह ओजो बलमित्याचक्षते' इति पैङ्गिश्रुतिः।।**

ಅನುವಾದ - ದೇವತೆಗಳು ಹುಟ್ಟುವ ಮೊದಲು ಅಸತ್‌ನಿಂದ ಸತ್‌ಪದಾರ್ಥವು ಹುಟ್ಟಿತು ಅಸತ್ ಎಂದರೆ ಬ್ರಹ್ಮನೇ ಆಗಿರುತ್ತಾನೆ. ಸತ್ ಎಂದರೆ ಪ್ರಾಣನಾಗಿರುತ್ತಾನೆ ಅಂಥ ಪ್ರಾಣನನ್ನು ಜ್ಞಾನಿಗಳು ಪೂಜ್ಯನೆಂದು ಸಹನ ಶಕ್ತಿಯುಳ್ಳವನೆಂದು ಆತ್ಮ ಶಕ್ತಿಯಿರುವನೆಂದು ಎಲ್ಲಾ ಬಗೆಯ ಸಾಮರ್ಥ್ಯವನ್ನು ಪಡೆದವನೆಂದು ಹೇಳುತ್ತಾರೆ. ಹೀಗೆ ಪೈಂಗಿ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ.

ಪ್ರತಿಪದಾರ್ಥ -- ಅಸತ್ ಶಬ್ದಕ್ಕೆ ಬ್ರಹ್ಮ ಎಂಬ ಅರ್ಥವನ್ನು ಒಪ್ಪಿ ಸಮಸ್ತ ಶ್ರುತ್ಯರ್ಥವನ್ನು ಹೇಳುತ್ತಿದ್ದಾರೆ - ದೇವಾನಾಂ = ದೇವತೆಗಳ, ಪೂರ್ವೇಯುಗೇ = ಹುಟ್ಟುವ ಮೊದಲು,

ಅಸತಃ = ಅಸತ್‌ನಿಂದ, ಸತ್ = ಸತ್‌ಪದಾರ್ಥವು, ಅಜಾಯತ = ಹುಟ್ಟಿತು. ಬ್ರಹ್ಮ ವಾ = ಬ್ರಹ್ಮನೇ, ಅಸತ್ = ಅಸತ್ ಎಂದು ಕರೆಸಿಕೊಳ್ಳುತ್ತಾನೆ. ಪ್ರಾಣಃ = ಪ್ರಾಣನು, ಸದ್ವಾವಾ = ಸತ್ ಎಂದು ಕರೆಸಿಕೊಳ್ಳುತ್ತಾನೆ. ಪ್ರಾಣಂ ವಾವ ಮಹಾನ್ = ಮುಖ್ಯಪ್ರಾಣನೇ ಜೀವೋತ್ತಮನು, ಸಹಃ = ಸಹನ ಶಕ್ತಿಯುಳ್ಳವನು, ಓಜಃ = ಆತ್ಮಶಕ್ತಿ ಇರುವವನು ಬಲಮ್ = ಶಾರೀರಕ ಶಕ್ತಿಯಿರುವವನು, ಇತಿ = ಹೀಗೆ, ಆಚಕ್ಷತೇ = ಜ್ಞಾನಿ ಜನರು ಕರೆಯುತ್ತಾರೆ.

**ಭಾಷ್ಯಮ್ –'त्वं देव शक्त्यां गुणकर्मयोनौ रेतस्त्वजायां कविरादधेऽजः ।**
**ततो वयं सत्प्रमुखा यदर्थे बभूविमाऽत्मन् करवाम किं ते ।।'**
**इति च भागवते ।।**

ಅನುವಾದ - ಓ ದೇವನೇ! ನೀನು ಎಲ್ಲವನ್ನು ಮೀರಿದ್ದನ್ನು ತಿಳಿಯುವವನು ದೇಹದಿಂದ ಉತ್ಪತ್ತಿ ಇಲ್ಲದವನು ಜ್ಞಾನಾದಿಗುಣಗಳಿಗೆ ಕರ್ಮಗಳಿಗೆ ಕಾರಣಳಾದ ಚಿತ್‌ಪ್ರಕೃತಿಯಲ್ಲಿ ಗರ್ಭವನ್ನು ಆಧಾನ ಮಾಡಿರುವಿ. ಎಲೈ ಸ್ವಾಮಿಯೇ ! ಆದರಿಂದ ವಾಯುದೇವರೇ ಮೊದಲಾದ ನಾವೆಲ್ಲರೂ ಆವಿರ್ಭೂತರಾದೆವು. ನಿನ್ನಿಂದ ಆವಿರ್ಭೂತರಾದ ನಾವು ನಿನಗೆ ಪ್ರಿಯವಾದ ಯಾವ ಕೆಲಸವನ್ನು ತಾನೆ ಮಾಡಲು ಸಮರ್ಥರಾಗುತ್ತೇವೆ.

ಪ್ರತಿಪದಾರ್ಥ -- ದೇವ = ಓ ದೇವನೇ, ತ್ವಂ = ನೀನು, ಕವಿಃ = ಎಲ್ಲವನ್ನು ಮೀರಿದ್ದನ್ನು ತಿಳಿದವನು, ಅಜಃ = ದೇಹದಿಂದ ಉತ್ಪತ್ತಿ ಇಲ್ಲದವನು ಆದರೂ, ಗುಣಕರ್ಮಯೋನೌ = ಜ್ಞಾನಾದಿಗುಣಗಳಿಗೆ ಹಾಗು ಕರ್ಮಗಳಿಗೆ ಕಾರಣಳಾದ, ಅಜಾಯಾಂ = ನಿತ್ಯಳಾದ ಚಿತ್ ಪ್ರಕೃತಿ ಎನಿಸಿದ ಲಕ್ಷ್ಮಿಯಲ್ಲಿ, ರೇತಃ = ಗರ್ಭವನ್ನು, ಆದಧೇ = ಆಧಾನ ಮಾಡಿದಿ, ತತಃ = ಆದ್ದರಿಂದ, ಸತ್‌ಪ್ರಮುಖಾಃ = ವಾಯುದೇವರೇ ಮೊದಲಾದ, ವಯಂ = ನಾವೆಲ್ಲರೂ, ಯದರ್ಥೇ = ಯಾವ ನಿನ್ನ ಸೇವೆಗಾಗಿ, ಬಭೂವಿಮಾ = ಆವಿರ್ಭೂತರಾದವೋ, ಆತ್ಮನ್ = ಸ್ವಾಮಿಯೇ, ತೇ = ಅಂಥ ನಿನಗೆ, ಕಿಂಕರವಾಮ = ಏನನ್ನು ತಾನೆ ಮಾಡಲು ಸಮರ್ಥರಾದೇವು, ಇತಿ = ಹೀಗೆ, ಭಾಗವತೇ = ಭಾಗತದಲ್ಲಿ ಹೇಳಲಾಗಿದೆ.

**ಭಾಷ್ಯಮ್ –'अजायमानो बहुधा विजायते' (तै. आ.३.१३) इति च ।**

ಅನುವಾದ - ಪರಮಾತ್ಮನಿಗೆ ಯಾವುದೇ ರೀತಿಯಿಂದ ಹುಟ್ಟಿಲ್ಲ. ಆದರೂ ರಾಮಕೃಷ್ಣ ಮೊದಲಾದ ರೂಪಗಳಿಂದ ಕಾಣಿಸಿಕೊಳ್ಳುತ್ತಾನೆ.

ಪ್ರತಿಪದಾರ್ಥ -- ಅಜಾಯಮಾನಃ = ಹುಟ್ಟಿಲ್ಲದವನಾದರೂ, ಬಹುಧಾ = ರಾಮಕೃಷ್ಣರೂಪಗಳಿಂದ, ವಿಜಾಯತೇ = ಪ್ರಾದುರ್ಭೂತನಾಗುತ್ತಾನೆ. ಇತಿ ಚ = ಹೀಗೂ ಪ್ರಮಾಣವಿದೆ.

**ಭಾಷ್ಯಮ್ –**

**'प्रत्यक्षत्वं हरेर्जन्म न विकारः कथञ्चन ।**
**पुरुषः प्रकृतिः कालो महानित्यादिषु क्रमात् ।।**

ಅಸಂಭವಾಧಿಕರಣ (೨-೩-೩)

**विकार एव जननं पुरुषे तद्विशेषणम् ।**
**परतन्त्रविशेषो हि विकार इति कीर्तितः ।।' इति च पाद्मे ।।**

ಅನುವಾದ - ಜಡವಾದ ಕಣ್ಣಿಗೆ ಕಾಣಿಸಿಕೊಳ್ಳುವುದೇ ಶ್ರೀಹರಿಯ ಜನ್ಮ. ಇದನ್ನು ಬಿಟ್ಟು ಬೇರೆ ಯಾವ ರೀತಿಯಲ್ಲಿಯೂ ವಿಕಾರವು ಅವನಿಗೆ ಇರುವುದಿಲ್ಲ. ಜೀವ, ಪ್ರಕೃತಿ, ಕಾಲ, ಮಹತ್ತತ್ವ ಇವುಗಳಿಗೆಲ್ಲಾ ಕ್ರಮವಾಗಿ ವಿಕಾರ ಇರುತ್ತದೆ. ಅದೇ ಅವುಗಳ ಜನ್ಮ. ಪುರುಷನಿಗೆ ಮಾತ್ರ ವಿಕಾರವಾದ ಸಂಬಂಧ ಬರುವುದು ಉತ್ಪತ್ತಿ ಎನಿಸುತ್ತದೆ. ಪರಮಾತ್ಮನ ಅಧೀನವಾಗಿ ಇಂಥ ವಿಕಾರವು ಚೇತನರಿಗೆ ಬರುತ್ತದೆ.

ಪ್ರತಿಪದಾರ್ಥ -- ಹರೇಃ = ಶ್ರೀಹರಿಯ, ಜನ್ಮ = ಜನ್ಮವೆಂದರೆ, ಪ್ರತ್ಯಕ್ಷತ್ವಂ = ಜಡವಾದ ಕಣ್ಣಿಗೆ ಕಾಣಸುವಿಕೆ ಇದನ್ನು ಹೊರತಾಗಿ, ಕಥಂಚನ = ಯಾವುದೇ ರೀತಿಯಲ್ಲಿಯೂ, ವಿಕಾರಃ = ವಿಕಾರವು, ನ = ಇರುವುದಿಲ್ಲ, ಪುರುಷಃ = ಜೀವನು, ಪ್ರಕೃತಿಃ = ಪ್ರಕೃತಿಯು, ಕಾಲಃ = ಕಾಲವು, ಮಹಾನ್ = ಮಹತ್ತತ್ವವು, ಇತ್ಯಾದಿಷು = ಇವುಗಳಲ್ಲಿ, ಕ್ರಮಾತ್ = ಕ್ರಮವಾಗಿ, ವಿಕಾರಃ ಏವ = ವಿಕಾರವು ಇರುವುದೇ, ಜನನಂ = ಹುಟ್ಟು ಎಂದು ಕರೆಸಿಕೊಳ್ಳುತ್ತದೆ. ಪುರುಷೇ = ಜೀವನಲ್ಲಿ, ತದ್ವಿಶೇಷಣಂ = ವಿಕಾರ ಹೊಂದುವ ಶರೀರದ ಸಂಪರ್ಕ ಬರುವಿಕೆಯು, ಜನನಂ = ಹುಟ್ಟು ಎಂದು ಕರೆಸಿಕೊಳ್ಳುತ್ತದೆ. ಹಿ = ಏಕೆಂದರೆ, ವಿಕಾರಃ = ವಿಕಾರವು, ಪರತಂತ್ರವಿಶೇಷಃ = ಪರಮಾತ್ಮನ ಆಧೀನವೆಂದು, ಕೀರ್ತಿತಃ = ಪ್ರಸಿದ್ಧವಾಗಿದೆ, ಇತಿ ಚ = ಹೀಗೆ, ಪಾದ್ಮೇ = ಪದ್ಮ ಪುರಾಣದಲ್ಲಿ ಹೇಳಿದೆ.

**भाष्यम् –**

**'अविकारोऽपि भगवान् सर्वशक्तित्वहेतुतः ।**
**विकारहेतुकं सर्वं कुरुते निर्विकारवान् ।।**
**शक्तिशक्तिमतोश्चापि न विभागः कथञ्चन ।**
**अविभिन्नाऽपि सेच्छादिर्भेदैरपि विभाष्यते ।।' इति भागवततन्त्रे ।।१।।**

**।। इति श्रीमदानन्दतीर्थभगवत्पादाचार्यविरचिते**
**ब्रह्मसूत्रभाष्ये असम्भवाधिकरणम् ।। ३ ।।**

ಅನುವಾದ - ಪರಮಾತ್ಮನಿಗೆ ಯಾವುದೇ ವಿಕಾರಗಳಿರುವುದಿಲ್ಲ. ಅಪ್ರತಿಮಶಕ್ತಿಯು ಇರುವುದರಿಂದ ವಿಕಾರಕ್ಕೆ ಕಾರಣವಾದ ಕೆಲಸಗಳನ್ನೆಲ್ಲಾ ಮಾಡುತ್ತಾನೆ. ಸರ್ವಶಕ್ತನಾದ ಕಾರಣ ಅವನು ನಿರ್ವಿಕಾರನಾಗಿಯೇ ಇರುತ್ತಾನೆ. ಜಗತ್‌ಸೃಷ್ಟ್ಯಾದಿ ಶಕ್ತಿಯುಳ್ಳ ಪರಮಾತ್ಮನಲ್ಲಿ ಯಾವುದೇ ಭೇದ ಇರುವುದಿಲ್ಲ. ಈ ಎಲ್ಲ ಗುಣಗಳ ಜೊತೆ ಅಭೇದವಿದ್ದರೂ ಮಿಥ್ಯಾಜ್ಞಾನ ಮೊದಲಾದ ಬೇರೆ ಬೇರೆ ಗುಣಗಳುಳ್ಳವನೆಂದು ಕರೆಸಿಕೊಳ್ಳುತ್ತಾನೆ. ವಿಶೇಷದ ಬಲದಿಂದ ಭೇದವ್ಯವಹಾರವು ಯುಕ್ತವಾಗುತ್ತದೆ. ಹೀಗೆ ಭಾಗವತತಂತ್ರವು ಹೇಳಿದೆ.

ಪ್ರತಿಪದಾರ್ಥ-- ಭಗವಾನ್ = ಪರಮಾತ್ಮನು, ಅವಿಕಾರೋಽಪಿ = ವಿಕಾರವಿಲ್ಲದವನಾಗಿದ್ದರೂ, ಸರ್ವಶಕ್ತತ್ವಹೇತುತಃ = ಅಪ್ರತಿಮಶಕ್ತಿ ಇರುವ ಕಾರಣ, ಸರ್ವಂ = ಎಲ್ಲಾ ವಸ್ತುವನ್ನು, ವಿಕಾರಹೇತುಕಂ = ವಿಕಾರವನ್ನಾಗಿ ಮಾಡುತ್ತಾನೆ. ಆದರೂ ಕೂಡ, ನಿರ್ವಿಕಾರವಾನ್ = ಸ್ವತಃ ನಾನು ನಿರ್ವಿಕಾರಶೀಲನಾಗಿರುತ್ತಾನೆ. ಶಕ್ತಿಶಕ್ತಿಮತೋಶ್ಚ = ಶಕ್ತಿಗೂ ಶಕ್ತಿಯುಳ್ಳ ಪರಮಾತ್ಮನಿಗೂ, ಕಥಂಚನ = ಯಾವುದೇ ರೀತಿಯಲ್ಲಿಯೂ, ನವಿಭಾಗಃ= ಭೇದವಿರುವುದಿಲ್ಲ. ಅವಿಭಿನ್ನಾಪಿ= ಭೇದವಿಲ್ಲದಿದ್ದರೂ, ಸೇಚ್ಛಾದಿಭೇದೈರಪಿ = ಜ್ಞಾನ ಇಚ್ಛೆ ಮೊದಲಾದವುಗಳು ಇರುತ್ತವೆ ಎಂಬ ಭೇದವ್ಯವಹಾರವು ಕೂಡ, ವಿಭಾಷ್ಯತೇ = ಪರಾಸ್ಯ ಶಕ್ತಿಃ ಇತ್ಯಾದಿ ಶ್ರುತಿಗಳಿಂದ ಯುಕ್ತವಾಗುತ್ತದೆ.

ಇಲ್ಲಿಗೆ ಅಸಂಭವಾಧಿಕರಣ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**तत्वप्रकाशिका – अत्र सर्वजगत्कारणे ब्रह्मणि श्रुतिसमन्वयसिध्यर्थं तदुत्पत्तिविषय-श्रुतिविरोधपरिहारादस्ति शास्त्रादिसङ्गतिः । सकलजगत्कारणं ब्रह्मेत्युक्तम् । तस्य चोत्पत्तिमत्त्वे कारणत्वानुपपत्तेस्तन्निराकार्यमेव । ब्रह्मात्र विषयः । उत्पत्तिमन्न वेति सन्देहः । 'असतः सदजायत' 'सदेव सोम्येदमग्र आसीत्' इति श्रुतिविरोधः सन्देहबीजम् ।**

ಈ ಅಧಿಕರಣದಲ್ಲಿ ಸರ್ವಜಗತ್ಕಾರಣನಾದ ಬ್ರಹ್ಮನಲ್ಲಿ ಶ್ರುತಿಸಮನ್ವಯವು ಸಿದ್ಧವಾಗುವುದಕ್ಕಾಗಿ ಬ್ರಹ್ಮನಿಗೆ ಉತ್ಪತ್ತಿಯನ್ನು ಹೇಳುವ ಶ್ರುತಿಗಳ ವಿರೋಧವನ್ನು ಪರಿಹಾರ ಮಾಡಲಾಗಿದೆ. ಆದ್ದರಿಂದ ಶಾಸ್ತ್ರ, ಅಧ್ಯಾಯ, ಪಾದ, ಅಧಿಕರಣಗಳಿಗೆ ಸಂಗತಿಗಳು ಇರುತ್ತವೆ.

ಸಕಲ ಜಗತ್ತಿಗೆ ಬ್ರಹ್ಮನೇ ಕಾರಣನಾಗಿದ್ದಾನೆಂದು ಹೇಳಲಾಯಿತು. ಇಂತಹ ಬ್ರಹ್ಮನಿಗೆ ಉತ್ಪತ್ತಿಯು ಇರುವುದಾದರೆ ಕಾರಣತ್ವವೇ ಉಪಪನ್ನವಾಗುವುದಿಲ್ಲ. ಆದ್ದರಿಂದ ಬ್ರಹ್ಮನಿಗೆ ಉತ್ಪತ್ತಿಯನ್ನು ನಿರಾಕರಣೆ ಮಾಡಲೇಬೇಕು.

ಅಧಿಕರಣಕ್ಕೆ ಬ್ರಹ್ಮನೇ ವಿಷಯ. ಉತ್ಪತ್ತಿ ಉಳ್ಳವನೋ ಇಲ್ಲವೋ? ಎಂಬುದು ಸಂದೇಹ. 'ಅಸತಃ ಸದಜಾಯತ' 'ಸದೇವ ಸೋಮ್ಯೇದಮಗ್ರ ಆಸೀತ್' ಇತ್ಯಾದಿ ಶ್ರುತಿಗಳ ವಿರೋಧವು ಸಂದೇಹ ಬೀಜ.

ವಿವರಣೆ - ಶ್ರುತಿಯ ಆಧಾರದಿಂದ ಆಕಾಶ, ವಾಯುದೇವ ಇವರಿಗೆ ಉತ್ಪತ್ತಿಯನ್ನು ಶ್ರುತಿಯ ಬಲದಿಂದ ಒಪ್ಪುವುದಾದರೆ ಬ್ರಹ್ಮನಿಗೂ ಕೂಡ ಉತ್ಪತ್ತಿಯನ್ನು ಶ್ರುತಿಯ ಸಾಮ್ಯದಿಂದ ಒಪ್ಪಬೇಕಾಗುತ್ತದೆ. ಹೀಗೆ ಈ ಅಧಿಕರಣದಲ್ಲಿ ಪೂರ್ವಪಕ್ಷ ಮಾಡುತ್ತಿರುವುದರಿಂದ ಹಿಂದಿನ ಅಧಿಕರಣದಿಂದ ಆನಂತರ್ಯ

ಸಂಗತಿ ಇರುತ್ತದೆ.

'ಅಸತಃ ಸದಜಾಯತ' ಎಂಬ ಶ್ರುತಿಯು ಸಕಲ ಸತ್ಪದಾರ್ಥಗಳಿಗೆ ಕಾರಣವಾದುದು ಯಾವುದೂ ಇಲ್ಲವೆಂದು ಹೇಳುತ್ತಿದೆ. 'ಸದೇವ ಸೋಮ್ಯೇದಮಗ್ರ ಆಸೀತ್' ಎಂಬ ಶ್ರುತಿಯು ಸತ್ ಪದಾರ್ಥದಿಂದ ಜಗತ್ತು ಹುಟ್ಟಿತು ಎಂದು ಹೇಳುತ್ತಿದೆ. ಹೀಗೆ ಈ ಎರಡು ಶ್ರುತಿಗಳಿಗೆ ಪರಸ್ಪರ ವಿರೋಧವಿದೆ. 'ಅಸತಃ ಸದಜಾಯತ' ಎಂಬ ಶ್ರುತಿಯ ಆಧಾರದಿಂದ ಬ್ರಹ್ಮನು ಜಗತ್ತಿಗೆ ಕಾರಣನಾಗುವುದು ಬೇಡ ಎಂಬುದಾಗಿ ಪೂರ್ವಪಕ್ಷಿಗಳು ಆಕ್ಷೇಪ ಮಾಡುತ್ತಿದ್ದಾರೆ.

**तत्वप्रकाशिका – तत्र सूत्रमेवोदाहृत्य पूर्वपक्षं तावद् बहिराह (बहिरेवाह) – असंभवस्त्विति ।। अस्त्येवोत्पत्तिर्ब्रह्मणः 'सदजायत' इति श्रुतेः ।**

ಈ ವಿಷಯದಲ್ಲಿ ಸೂತ್ರವನ್ನೇ ಉದಾಹರಿಸಿ ಪೂರ್ವಪಕ್ಷವನ್ನು ಸೂತ್ರದಿಂದ ಹೊರಗೆ ಸಮರ್ಥಿಸುತ್ತಿದ್ದಾರೆ 'ಅಸಂಭವಸ್ತು' ಇತ್ಯಾದಿಯಾಗಿ.

ಬ್ರಹ್ಮನಿಗೆ ಉತ್ಪತ್ತಿ ಇದೆ ಎಂಬುದು 'ಸದಜಾಯತ' ಎಂಬ ಶ್ರುತಿಯಿಂದ ಸಿದ್ಧವಾಗುತ್ತದೆ.

**तत्वप्रकाशिका – न च ब्रह्मणः सर्वकारणस्योत्पत्तौ कारणाभावः। असतस्तत्कारणतया श्रुतत्वात् । न चानादित्वेऽपि श्रुतिरस्तीति वाच्यम् । असम्भवदुद्भवयोर्नभोनभस्वतोरुत्पत्तावनादितया समस्य ब्रह्मणोऽनुत्पत्तिरयुक्तेति जन्मश्रुतेः सयुक्तिकत्वेन प्राबल्यात् ।**

ಸರ್ವಕಾರಣನಾದ ಬ್ರಹ್ಮನು ಉತ್ಪನ್ನನಾಗಲು ಕಾರಣವಿಲ್ಲ ಎನ್ನಬಾರದು. ಅಸತ್‌ಪದಾರ್ಥವೇ ಕಾರಣವೆಂದು ಶ್ರುತವಾಗಿದೆ. ಬ್ರಹ್ಮನು ಅನಾದಿಯಾಗಿದ್ದಾನೆ ಎಂಬ ವಿಷಯದಲ್ಲೂ ಕೂಡ ಶ್ರುತಿಪ್ರಮಾಣವಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಇದು ಆಕಾಶ ಹಾಗೂ ವಾಯುವಿನಲ್ಲೂ ಕೂಡ ಸಮಾನವಾಗಿದೆ. ಉತ್ಪತ್ತಿಯು ಅಸಂಭಾವಿತವಾದ ಆಕಾಶ ಹಾಗೂ ಮುಖ್ಯವಾಯುಗಳಲ್ಲೂ ಉತ್ಪತ್ತಿ ಇದೆ ಎಂದು ಹೇಳುವುದಾದರೆ ಆಕಾಶಾದಿಗಳಂತೆ ಅನಾದಿತ್ವವು ಬ್ರಹ್ಮನಲ್ಲೂ ಸಮಾನವಾದಾಗ ಅನುತ್ಪತ್ತಿಯು ಅಯುಕ್ತವಾಗುತ್ತದೆಂಬುದಾಗಿ ಜನ್ಮವನ್ನು ಹೇಳುವ ಶ್ರುತಿಯು ಯುಕ್ತಿಬದ್ಧವಾಗಿ ಪ್ರಬಲವಾಗಿದೆ.

ವಿವರಣೆ - ಆಕಾಶ ಹಾಗೂ ವಾಯುದೇವ ಈ ಎರಡರಲ್ಲಿಯೂ ಅನಾದಿತ್ವವಿದೆ. ಆದರೂ ಉತ್ಪತ್ತಿ ಶ್ರುತಿಗೆ ಅನುಗುಣವಾಗಿ ಉತ್ಪತ್ತಿ ಇದೆ ಎಂದು ಹಿಂದಿನ ಅಧಿಕರಣದಲ್ಲಿ ಸಮರ್ಥಿಸಲಾಯಿತು. ಅದೇ ರೀತಿಯಾಗಿ ಬ್ರಹ್ಮನಲ್ಲೂ ಕೂಡ ಅನಾದಿತ್ವವು ಸಮಾನವಾಗಿದ್ದರೂ ಯುಕ್ತಿಯ ಆಧಾರದಿಂದ ಉತ್ಪತ್ತಿ ಇದೆ ಎಂದು ಹೇಳಬಹುದು. ಬ್ರಹ್ಮನಲ್ಲಿರುವ ಅನಾದಿತ್ವವು ಉತ್ಪತ್ತಿಯನ್ನು ಒಪ್ಪಲು ವಿರುದ್ಧವಲ್ಲ. 'ಬ್ರಹ್ಮ ಉತ್ಪತ್ತಿಮತ್ ಉತ್ಪತ್ತ್ಯವಿರೋಧ ಅನಾದಿಕತ್ವಾತ್' ಎಂಬ ಯುಕ್ತಿಯನ್ನು ತಿಳಿಯಬೇಕು. ಹೀಗೆ ಯುಕ್ತಿ ಸಹಿತವಾದ ಶ್ರುತಿಯ ಬಲದಿಂದ ಬ್ರಹ್ಮನಿಗೆ ಉತ್ಪತ್ತಿ ಇದೆ ಎಂದು ಸಾಧಿಸುತ್ತೇವೆ.

**तत्वप्रकाशिका – अनुत्पत्तिश्रुतिस्तु सर्वात्मनाऽनुत्पत्तिवादिनीत्यभिमानाश्चेत् तर्ह्यप्रमाणमेव। न चेदाकाशादाविव व्यवस्था स्यात् । अतो**

**ब्रह्मणोऽप्युत्पत्तिमत्त्वान्न तत्राशेषकारणतया श्रुतिसमन्वयो युक्त इति भावः।**

ಅನುತ್ಪತ್ತಿ ಶ್ರುತಿಯು ಸರ್ವಥಾ ಅನುತ್ಪತ್ತಿಯನ್ನು ಹೇಳುವುದಾದರೆ ಆಗ ಅನಾದಿತ್ವ ಶ್ರುತಿಯು ಅಪ್ರಮಾಣವೇ ಆಗುತ್ತದೆ. ಸರ್ವಾತ್ಮನಾ ಅನುತ್ಪತ್ತಿಯನ್ನು ಹೇಳದಿದ್ದರೆ ಆಕಾಶಾದಿಗಳಂತೆ ಇಲ್ಲೂ ಕೂಡ ವ್ಯವಸ್ಥೆಯನ್ನು ಮಾಡಬಹುದು. ಆದ್ದರಿಂದ ಬ್ರಹ್ಮನಿಗೂ ಕೂಡ ಉತ್ಪತ್ತಿ ಇರುವುದರಿಂದ ಅಶೇಷಜಗತ್ಕಾರಣತ್ವದ ಮೂಲಕವಾಗಿ ಶ್ರುತಿಸಮನ್ವಯವನ್ನು ಮಾಡಲು ಬರುವುದಿಲ್ಲ. ಇಷ್ಟು ಪೂರ್ವಪಕ್ಷದ ಅಭಿಪ್ರಾಯ.

**तत्वप्रकाशिका – सिद्धान्तयत्सूत्रं व्याचष्टे – नेति ।। मयापि वियदादिवद् व्यावस्थया ब्रह्मणोऽनुत्पत्तेरङ्गीकृतत्वात् सिद्धार्था प्रतिज्ञेत्यत आह – तुशब्देनेति।।**

ಸಿದ್ಧಾಂತವನ್ನು ಹೇಳುವ ಸೂತ್ರವನ್ನು 'ನ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ನಾನೂ ಕೂಡ ಆಕಾಶಾದಿಗಳಂತೆ ವ್ಯವಸ್ಥೆಯನ್ನು ಕಲ್ಪನೆ ಮಾಡಿ ಬ್ರಹ್ಮನಿಗೆ ಉತ್ಪತ್ತಿ ಇಲ್ಲ ಎಂದು ಅಂಗೀಕರಿಸುತ್ತೇನೆ. ಆದ್ದರಿಂದ ನಿಮ್ಮ ಪ್ರತಿಜ್ಞೆಯು ನಮಗೆ ಸಿದ್ಧವೇ ಆಗಿದೆ. ಈ ಪ್ರಶ್ನೆಗೆ 'ತು ಶಬ್ದೇನ' ಎಂಬುದರಿಂದ ಉತ್ತರಿಸುತ್ತಿದ್ದಾರೆ.

**तत्वप्रकाशिका – न व्यवस्थया ब्रह्मणोऽनुत्पत्तिः सूत्रे प्रतिज्ञायते येन सिद्धार्था प्रतिज्ञा स्यात् । किं तु सर्वात्मनाऽनुत्पत्तिरेवेति भावः ।**

ವಿಯದಾದಿಗಳಂತೆ ಬ್ರಹ್ಮನ ವಿಷಯದಲ್ಲೂ ವ್ಯವಸ್ಥೆಯನ್ನು ಕಲ್ಪನೆ ಮಾಡಿ ಸೂತ್ರದಲ್ಲಿ ಅನುತ್ಪತ್ತಿಯನ್ನು ಪ್ರತಿಜ್ಞೆ ಮಾಡಿರುವುದಿಲ್ಲ. ಹಾಗೆ ಮಾಡಿದ್ದಲ್ಲಿ ಪ್ರತಿಜ್ಞೆಯು ಸಿದ್ಧವಾಗುತ್ತಿತ್ತು. ಮತ್ತೇನೆಂದರೆ ಸರ್ವಾತ್ಮನ ಅನುತ್ಪತ್ತಿಯನ್ನೇ ಸೂತ್ರದಲ್ಲಿ ಪ್ರತಿಜ್ಞೆ ಮಾಡಲಾಗಿದೆ.

**तत्वप्रकाशिका – अत एव तुशब्दमेवेति व्याचष्टे । अस्यां च प्रतिज्ञायां सत इत्यनेनैव स्वातन्त्र्याख्यो व्यतिरेकी हेतुः सूचितः । तेनैव पूर्वपक्ष-युक्तेर्गतिश्चोक्ता भवति । गगानपवनादीनामस्वातन्त्र्यादेवोत्पत्तिरिति।**

ಆದ್ದರಿಂದಲೇ ಸೂತ್ರದಲ್ಲಿರುವ ತುಶಬ್ದವನ್ನು ಅವಧಾರಣಾರ್ಥವಾಗಿ ವ್ಯಾಖ್ಯಾನ ಮಾಡಿದ್ದಾರೆ. 'ಸ್ವತಃ ಅನುತ್ಪತ್ತಿರೇವ' ಎಂಬ ಪ್ರತಿಜ್ಞೆಯಲ್ಲಿ 'ಸ್ವತಃ' ಎಂಬುದರಿಂದಲೇ ಸ್ವಾತಂತ್ರ್ಯವೆಂಬ ವ್ಯತಿರೇಕಿಯಾದ ಹೇತುವನ್ನು ಸೂಚನೆ ಮಾಡಿದಂತಾಯಿತು. ಇದರಿಂದಲೇ ಪೂರ್ವಪಕ್ಷದಲ್ಲಿ ಹೇಳಲ್ಪಟ್ಟ ಯುಕ್ತಿಗೆ ಗತಿಯನ್ನೂ ಕೂಡ ಹೇಳಿದಂತಾಯಿತು. ಆಕಾಶ ಮತ್ತು ವಾಯುಗಳಿಗೆ ಅಸ್ವಾತಂತ್ರ್ಯ ಇರುವುದರಿಂದಲೇ ಉತ್ಪತ್ತಿ ಇದೆ ಎಂಬ ವ್ಯತಿರೇಕ ವ್ಯಾಪ್ತಿಯನ್ನು ತಿಳಿಯಬೇಕು.

ವಿವರಣೆ - 'ಯತ ಸತ್ ತತ್ ನೋತ್ಪದ್ಯತೇ' ಎಂಬುದಾಗಿ ಭಾಷ್ಯದಲ್ಲಿ ಹೇಳಿರುತ್ತಾರೆ. ಸತ್ತಾವುಳ್ಳದ್ದಕ್ಕೆ ಜನ್ಮವಿಲ್ಲ ಎಂಬುದರ ಅಭಿಪ್ರಾಯವೇನೆಂದರೆ, ಯಾವುದು ಸ್ವತಂತ್ರವೋ ಅದಕ್ಕೆ ಉತ್ಪತ್ತಿಯು ಇರುವುದಿಲ್ಲ ಎಂದು. ಅಸ್ವಾತಂತ್ರ್ಯವಿದ್ದಲ್ಲಿ ಉತ್ಪತ್ತಿಯು ಇದ್ದೇ ಇರುತ್ತದೆ. ಘಟಪಟಾದಿಗಳು

ಇದಕ್ಕೆ ಉದಾಹರಣೆ. ಸತ್‌ಪದಕ್ಕೆ ಸ್ವಾತಂತ್ರ್ಯ ಎಂಬರ್ಥವು ಹೇಗೆ ದೊರಕುತ್ತದೆಂದರೆ 'ಸತ್ವಂ ಸ್ವಾತಂತ್ರ್ಯಮುದ್ದಿಷ್ಟಮ್' ಎಂಬ ಮಹಾಭಾರತದ ವಾಕ್ಯದಿಂದ ಸತ್ ಶಬ್ದಕ್ಕೆ ಸ್ವಾತಂತ್ರ್ಯ ಎಂಬರ್ಥವು ಇರುತ್ತದೆ.

**तत्वप्रकाशिका – ननु 'असतः सदजायत' इत्यादिश्रुतौ ब्रह्मणोऽप्युत्पत्तिश्रवणात् कथं सर्वात्मनाऽनुत्पत्तिरुच्यत इत्यत आह – न हीति ।। नानया श्रुत्या ब्रह्मणो जनिः सिद्ध्यति । असतः सकाशात् पदार्थोत्पत्तेरदृष्टत्वेन प्रातीतिकार्थस्याप्यनुपपन्नत्वादिति भावः । तर्ह्येतच्छ्रुतेरप्रामाण्यप्रसङ्ग इत्यतः श्रुत्यन्तरेण तां सम्यग् व्याचष्टे – तदिति ।।**

'ಅಸತಃ ಸದಜಾಯತ' ಎಂಬ ಶ್ರುತಿಯಲ್ಲಿ ಬ್ರಹ್ಮನಿಗೂ ಕೂಡ ಉತ್ಪತ್ತಿಯನ್ನು ಹೇಳಲಾಗಿದೆ. ಆದ್ದರಿಂದ ಸರ್ವಾತ್ಮನಾ ಬ್ರಹ್ಮನಿಗೆ ಉತ್ಪತ್ತಿ ಇಲ್ಲ ಎಂಬುದು ಹೇಗೆ ಸರಿಯಾಗುತ್ತದೆ? ಈ ಆಶಂಕೆಗೆ 'ನ ಹಿ' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

ಈ ಶ್ರುತಿಯಿಂದ ಬ್ರಹ್ಮನಿಗೆ ಉತ್ಪತ್ತಿಯು ಸಿದ್ಧವಾಗುವುದಿಲ್ಲ. ಏಕೆಂದರೆ ಅಸತ್ತಿನಿಂದ ಯಾವುದೇ ಒಂದು ಪದಾರ್ಥವು ಹುಟ್ಟುವುದೇ ಲೋಕದಲ್ಲಿ ಕಂಡಿಲ್ಲ. ಹೀಗೆ ಆಪಾತತಃ ತೋರುವ ಅರ್ಥವು ಅನುಪಪನ್ನವಾಗಿದೆ. ಹಾಗಾದರೆ ಶ್ರುತಿಗೆ ಅಪ್ರಾಮಾಣ್ಯವು ಬರಬೇಕಲ್ಲವೇ? ಎಂಬ ಪ್ರಶ್ನೆಗೆ ಮತ್ತೊಂದು ಶ್ರುತಿಯಿಂದ ಈ ಶ್ರುತಿಯನ್ನು ಯಥಾರ್ಥವಾಗಿ 'ತತ್' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – 'तद्वा एतदसदाहुः । न ह्यासादयति कश्चन' इत्यस्यैव अत्रोपयोगित्वेऽपि तस्य ब्रह्मपरत्वज्ञापनायाऽन्यांशोदाहरणम् । असच्छब्दस्य ब्रह्मपरत्वेऽपि कः समस्तश्रुत्यर्थ इत्यत आह – देवानामिति ।।**

ಭಾಷ್ಯದಲ್ಲಿ 'ತದ್ವಾ ಏತದಸದಾಹುಃ ನ ಹಿ ಆಸಾದಯತಿ ಕಶ್ಚನ' ಎಂದಷ್ಟೇ ಶ್ರುತಿಯನ್ನು ಉಲ್ಲೇಖ ಮಾಡಿದ್ದರೆ ಸಾಕಾಗುತ್ತಿತ್ತು. ಇಷ್ಟು ಮಾತ್ರ ಪ್ರಕೃತ ಉಪಯುಕ್ತವಾಗಿದೆ. ಹೀಗೆ ಪ್ರಶ್ನಿಸಬಾರದು. ಇಷ್ಟೇ ಶ್ರುತಿಯನ್ನು ಉಲ್ಲೇಖ ಮಾಡಿದರೆ ಈ ಶ್ರುತಿಯು ಬ್ರಹ್ಮಪರವೆಂದು ತಿಳಿಯುವುದಿಲ್ಲ. ಆದಕ್ಕೋಸ್ಕರ ಉಳಿದ ಅಂಶವನ್ನೂ ಕೂಡ ಉಲ್ಲೇಖ ಮಾಡಲಾಗಿದೆ.

ಅಸತ್‌ಶಬ್ದವು ಬ್ರಹ್ಮಪರವಾದರೆ ಸಮಸ್ತ ಶ್ರುತಿಯ ಅರ್ಥವನ್ನು ಏನು ಹೇಳಿದಂತಾಗುತ್ತದೆ? ಈ ಪ್ರಶ್ನೆಗೆ 'ದೇವಾನಾಂ' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

ವಿವರಣೆ - 'ತದ್ವಾ ಏತದ್ಬ್ರಹ್ಮಾಹುಃ ಬೃಹತಿ ಬೃಂಹಯತಿ ಚ' ಎಂಬ ಅಂಶವನ್ನು ಹಾಗೂ 'ತದ್ವಾ ಏತತ್ ಪರಮಾಹುಃ ಪರತೋ ಹಿ ತದುದೀಕ್ಷ್ಯ' ಎಂಬ ಅಂಶವನ್ನು ಭಾಷ್ಯದಲ್ಲಿ ಉಲ್ಲೇಖಿಸುವ ಆವಶ್ಯಕತೆ ಇರಲಿಲ್ಲ. ಕೇವಲ 'ತದ್ವಾ ಏತದಸದಾಹುಃ ನ ಹಿ ಆಸಾದಯತಿ ಕಶ್ಚನ' ಎಂದಷ್ಟೇ ಉಲ್ಲೇಖಿಸಿದ್ದರೆ ಸಾಕಾಗುತ್ತಿತ್ತು ಎಂಬುದು ಪ್ರಶ್ನೆಯ ಅಭಿಪ್ರಾಯ. ಸಮಸ್ತ ಶ್ರುತಿಯು ಬ್ರಹ್ಮಪರವೆಂದು ತಿಳಿಸುವುದಕ್ಕಾಗಿ ಹಿಂದಿನ ಮುಂದಿನ ವಾಕ್ಯಗಳನ್ನು ಉಲ್ಲೇಖ ಮಾಡಿರುತ್ತಾರೆ ಎಂಬ ಉತ್ತರವನ್ನು ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

**तत्वप्रकाशिका – कथं प्राणः सदिति महत्वादिसद्गुणत्वादित्याह – प्राण इति ।। एतच्छ्रुत्यैवोक्तार्थसिद्धावप्यसच्छब्दस्य ब्रह्मणि निर्वचनार्थं पूर्वश्रुत्युदाहरणम्। सच्छब्दवाच्यस्य वायोर्ब्रह्मजातत्वे स्मृतिं चाह – त्वमिति ।।**

ಪ್ರಾಣನು ಹೇಗೆ 'ಸತ್' ಎಂಬ ಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ? ಎಂಬ ಪ್ರಶ್ನೆಗೆ ಮಹತ್ವಾದಿ ಸದ್ಗುಣಶಾಲಿಯಾದ್ದರಿಂದ ಸತ್‌ಶಬ್ದದಿಂದ ಪ್ರತಿಪಾದ್ಯನಾಗುತ್ತಾನೆಂಬುದನ್ನು 'ಪ್ರಾಣಃ' ಇತ್ಯಾದಿ ಭಾಷ್ಯದಿಂದ ಹೇಳುತ್ತಿದ್ದಾರೆ. ಈ ಶ್ರುತಿಯಿಂದಲೇ ಪ್ರಾಣನು 'ಸತ್' ಎಂಬ ಶಬ್ದದಿಂದ ಪ್ರತಿಪಾದ್ಯನೆಂದೂ, ಬ್ರಹ್ಮನು 'ಅಸತ್' ಎಂಬ ಶಬ್ದದಿಂದ ಪ್ರತಿಪಾದ್ಯನೆಂದು ಸಿದ್ಧವಾಗುತ್ತದೆ. ಬ್ರಹ್ಮನಲ್ಲಿ ಅಸತ್ ಶಬ್ದದ ನಿರ್ವಚನವನ್ನು 'ತದ್ವಾ ಏತದಸದಾಹುಃ' ಎಂಬ ಶ್ರುತಿಯಿಂದ ಉದಾಹರಿಸಲಾಗಿದೆ. 'ಸತ್' ಶಬ್ದದಿಂದ ವಾಯುವು ಪ್ರತಿಪಾದ್ಯನಾಗುತ್ತಾನೆ. ಇವನು 'ಅಸತ್' ಶಬ್ದದಿಂದ ಪ್ರತಿಪಾದ್ಯನಾದ ಬ್ರಹ್ಮನಿಂದ ಪ್ರಾದುರ್ಭೂತನಾಗಿದ್ದಾನೆ ಎಂಬ ವಿಷಯದಲ್ಲಿ 'ತ್ವಂ' ಇತ್ಯಾದಿಯಾಗಿ ಶ್ರುತಿವಾಕ್ಯವನ್ನು ಉಲ್ಲೇಖ ಮಾಡಿದ್ದಾರೆ.

**तत्वप्रकाशिका – रामकृष्णादिरूपेण हरे र्जायमानत्वात् कथं जन्माभाव इत्यत आह – अजायमान इति ।। अजायमानस्य कीदृशं जन्मेत्यत आह – प्रत्यक्षत्वमिति ।**

ರಾಮ, ಕೃಷ್ಣ ಮೊದಲಾದ ರೂಪಗಳಿಂದ ಶ್ರೀಹರಿಯು ಹುಟ್ಟುತ್ತಾನೆ. ಹಾಗಾಗಿ ಜನ್ಮವಿಲ್ಲವೆಂದು ಹೇಳಿದ್ದು ಹೇಗೆ ಕೂಡುತ್ತದೆ? ಈ ಪ್ರಶ್ನೆಗೆ 'ಅಜಾಯಮಾನಃ' ಎಂಬ ಭಾಷ್ಯದಿಂದ ಉತ್ತರಿಸಿದ್ದಾರೆ. ಜನ್ಮವಿಲ್ಲದವನಿಗೆ ಎಂತಹ ಜನ್ಮವನ್ನು ಹೇಳುತ್ತೀರಿ ? ಎಂಬ ಪ್ರಶ್ನೆಗೆ 'ಪ್ರತ್ಯಕ್ಷತ್ವಂ' ಎಂಬುದರಿಂದ ಉತ್ತರಿಸಿದ್ದಾರೆ.

**तत्वप्रकाशिका – क्रमादित्युपचयाधिक्यक्रमात् । पुरुषस्य चेतनत्वात् कथं विकार इत्यत आह – पुरुष इति ।। तेन विकारेण विशेषितत्त्वं भवतीत्यर्थः । तर्हि तस्य नोत्पत्तिरित्यत आह – परतन्त्रेति ।।**

'ಕ್ರಮಾತ್' ಎಂದರೆ ಉಪಚಯಾದಿಕ್ಯದ ಕ್ರಮದಿಂದ ಎಂದರ್ಥ. ಪುರುಷನು ಚೇತನನಾಗಿರುವುದರಿಂದ ವಿಕಾರವು ಹೇಗೆ ಬರುತ್ತದೆ? ಎಂಬ ಪ್ರಶ್ನೆಗೆ 'ಪುರುಷಃ' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ. ವಿಕಾರದಿಂದ ವಿಶೇಷಿತನಾಗಿದ್ದಾನೆ ಎಂದರ್ಥ. ಹಾಗಾದರೆ ಅವನಿಗೆ ಉತ್ಪತ್ತಿಯೇ ಇಲ್ಲವೆಂದಾಯಿತಲ್ಲವೇ? ಎಂಬ ಪ್ರಶ್ನೆಗೆ 'ಪರತಂತ್ರ' ಇತ್ಯಾದಿಯಾಗಿ ಉತ್ತರಿಸಿದ್ದಾರೆ.

ವಿವರಣೆ - ಪುರುಷ, ಪ್ರಕೃತಿ, ಕಾಲ ಮತ್ತು ಮಹತ್ತತ್ವ ಇವುಗಳಿಗೆ ಉಪಚಯಾಧಿಕ್ಯದಿಂದ ವಿಕಾರವುಂಟಾಗುತ್ತದೆ. ಇದನ್ನೇ ಉತ್ಪತ್ತಿ ಎಂದು ಕರೆಯಬೇಕು. ಪುರುಷನಿಗೆ ಪ್ರಕೃತಿಯ ಸಂಬಂಧವು ಬರುವುದನ್ನೇ ವಿಕಾರ ಎಂದು ತಿಳಿಯಬೇಕು. ಜೀವನಲ್ಲಿ ಇರುವ ಈ ವಿಕಾರವೆಂಬ ವಿಶೇಷವು ಪರಮಾತ್ಮನ ಅಧೀನವಾಗಿದೆ.

ಅಸಂಭವಾಧಿಕರಣ (೨-೩-೩)

**तत्वप्रकाशिका – जगत्कारणत्वात् परमेश्वरस्य कथमविकारित्वमित्यत आह – अविकारोऽपीति ।। सर्वशक्तित्वेन सर्वं करोतीत्यनेन निमित्तमित्युक्तं भवति । विकारहेतुकं प्रकृत्याद्युपादानकं । निर्विकारवानिति तद्धर्मादिरविकार उच्यते । शक्त्या चेज्जगत्कारणत्वं तद्विनाशे तदभावः स्यादित्यत आह – शक्तीति ।। इच्छाज्ञानप्रयत्नानां कर्तृत्वोपयोगित्वात् कथं शक्त्या तदित्यत आह – अविभिन्नापीति ।। एकैवेत्यर्थः । एतेनेच्छादिपूर्वककारणत्वं नोपादानस्येत्युक्तं भवति । अतः श्रुत्यविरोधेन ब्रह्मणोऽनादित्वसिद्धेर्युक्तः श्रुतिसमन्वयस्तत्रेति सिद्धम् ।। ९ ।।**

ಪರಮಾತ್ಮನೇ ಜಗತ್ತಿಗೆ ಕಾರಣನಾದರೆ ಅವಿಕಾರಿತ್ವ ಅವನಿಗೆ ಹೇಗೆ ಕೂಡುತ್ತದೆ? ಎಂಬ ಪ್ರಶ್ನೆಗೆ 'ಅವಿಕಾರೋऽಪಿ ಭಗವಾನ್' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ.

ಕರ್ತೃತ್ವವೆಂಬ ನಿಮಿತ್ತದಿಂದ ಸುಖದುಃಖ ಅನುಭವವೆಂಬ ವಿಕಾರವಿಲ್ಲದಿದ್ದರೂ ಸರ್ವಶಕ್ತನಾದ ಪರಮಾತ್ಮನು ಎಲ್ಲವನ್ನೂ ಮಾಡುತ್ತಾನೆ. ಆದ್ದರಿಂದ ಪರಮಾತ್ಮನು ನಿಮಿತ್ತಕಾರಣನೇ ಆಗಿದ್ದಾನೆಂದು ಹೇಳಿದಂತಾಯಿತು. ವಿಕಾರಕ್ಕೆ ಕಾರಣವಾದ ಪ್ರಕೃತಿ ಮೊದಲಾದವುಗಳನ್ನು ಉಪಾದಾನಕಾರಣವನ್ನಾಗಿ ಮಾಡಿಕೊಂಡು ಎಲ್ಲವನ್ನೂ ಸೃಷ್ಟಿ ಮಾಡುತ್ತಾನೆ. ಆದ್ದರಿಂದ ಶ್ರೀಹರಿ ನಿರ್ವಿಕಾರನೇ ಆಗಿದ್ದಾನೆ.

'ವಿಕಾರಹೇತುಕಂ' ಎಂದರೆ ಪ್ರಕೃತ್ಯಾದಿಗಳನ್ನು ಉಪಾದಾನಕಾರಣವನ್ನಾಗಿ ಮಾಡಿಕೊಂಡು ಜಗತ್ತನ್ನು ಸೃಷ್ಟಿ ಮಾಡುತ್ತಾನೆ ಎಂದರ್ಥ. 'ನಿರ್ವಿಕಾರವಾನ್' ಎಂದರೆ ಗುಣಕರ್ಮಾದಿಗಳು ಪ್ರಕೃತಿ ವಿಕಾರವಲ್ಲ ಎಂದರ್ಥ. ಶಕ್ತಿಯಿಂದ ಜಗತ್ಕಾರಣನಾಗುವುದಾದರೆ ಶಕ್ತಿಯು ನಾಶವಾದರೆ ಜಗತ್ತೂ ಕೂಡ ನಾಶವಾಗಬೇಕಾಗುತ್ತದೆ. ಶಕ್ತಿಯು ಇಲ್ಲವೆಂದಾದರೆ ಜಗತ್ತು ಇಲ್ಲವೆಂದಾಗುತ್ತದೆ. ಈ ಪ್ರಶ್ನೆಗೆ 'ಶಕ್ತಿ' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

ಇಚ್ಛೆ, ಜ್ಞಾನ, ಪ್ರಯತ್ನ ಇವುಗಳು ಕರ್ತೃತ್ವಕ್ಕೆ ಉಪಯುಕ್ತವಾಗಿವೆ. ಆದ್ದರಿಂದ ಶಕ್ತಿಯಿಂದ ಮಾತ್ರ ಕಾರ್ಯವು ಉಂಟಾಗಲು ಹೇಗೆ ಸಾಧ್ಯ ? ಎಂಬ ಪ್ರಶ್ನೆಗೆ 'ಅವಿಭಿನ್ನಾಪಿ' ಎಂಬುದರಿಂದ ಉತ್ತರಿಸಿದ್ದಾರೆ.

ಶಕ್ತಿಯು ಒಂದೇ ಆದರೂ ಇಚ್ಛಾ, ಜ್ಞಾನ ಇತ್ಯಾದಿಯಾಗಿ ಹೇಳಿದ್ದು 'ಪರಾಚ ಶಕ್ತಿರ್ವಿವಿಧೈವ ಶ್ರೂಯತೇ' ಎಂಬ ಪ್ರಮಾಣಕ್ಕೆ ಅನುಸಾರಿಯಾಗಿ. ಆದ್ದರಿಂದ ಇಚ್ಛಾದಿಪೂರ್ವಕವಾದ ಕಾರಣತ್ವವು ಉಪಾದಾನ ಕಾರಣಕ್ಕೆ ಇರಲು ಸಾಧ್ಯವಿಲ್ಲ ಎಂದು ಹೇಳಿದಂತಾಯಿತು.

ಹೀಗೆ ಶ್ರುತಿಯ ವಿರೋಧವಿಲ್ಲದ ಕಾರಣ ಬ್ರಹ್ಮನಿಗೆ ಅನಾದಿತ್ವವು ಸಿದ್ಧವಾಗುತ್ತದೆ. ಆದ್ದರಿಂದ ಶ್ರುತಿಸಮನ್ವಯವು ಬ್ರಹ್ಮನಲ್ಲಿ ಸಿದ್ಧವಾಯಿತು.

**ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಅಸಂಭವಾಧಿಕರಣ ಮುಗಿಯಿತು**

**ಪರಿಪೂರ್ಣಚಂದ್ರಿಕಾ**

ಅಸಂಭವಾಧಿಕರಣ

(೨-೩-೩)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## ಅಸಂಭವಾಧಿಕರಣ

**असम्भवस्तु सतोऽनुपपत्तेः।।**

**एवमधिकरणद्वयेनाब्रह्मणोऽसम्भवदुत्पत्तिकस्यापि नभःप्रभृतेः सर्वस्योत्पत्तौ श्रुत्योक्तायां तर्हि तद्वदेव ब्रह्मणोऽप्युत्पत्तिरस्त्विति पूर्वपक्षोदयात्सङ्गतिः ।**

ಇಲ್ಲಿಯವರೆಗೆ ಎರಡು ಅಧಿಕರಣಗಳಲ್ಲಿ ಬ್ರಹ್ಮನಿಂದ ಬೇರೆಯಾದ (ಆಕಾಶ ಹಾಗೂ ವಾಯು) ಭೂತ, ತದಭಿಮಾನಿಗಳಿಗೆ ಉತ್ಪತ್ತಿ ಅಸಂಭವ ಎನಿಸಿದರೂ ಶ್ರುತಿಯಿಂದ ಉತ್ಪತ್ತಿ ಇದೆ ಎಂದು ಹೇಳಿಯಾಯಿತು. ಹಾಗಾದರೆ ಬ್ರಹ್ಮನಿಗೂ ಉತ್ಪತ್ತಿ ಇರಲಿ ಎಂದು ಪೂರ್ವಪಕ್ಷ ಬರುವುದರಿಂದ ಈ ಅಧಿಕರಣಕ್ಕೆ ಸಂಗತಿ ಕೂಡುತ್ತದೆ.

**अत्रोक्तं ब्रह्मणः सर्वस्रष्टृत्वादिकं ब्रह्मण उत्पत्तिमत्त्वश्रुतिविरुद्धं न वेति चिन्ता। तदर्थं ''असतः सदजायत'' इति श्रुतिः किमसतः सकाशाद्ब्रह्मण उत्पत्तिपरा किं वा ब्रह्मणः सकाशाद्वायोरुत्पत्तिपरेति । तदर्थं ब्रह्मानुत्पत्तिश्रुतिरपि किं वाय्वाद्यनुत्पत्तिश्रुतिवत्पराधीनविशेषावाप्तिलक्षणोत्पत्तिसद्भावेऽपि स्वरूपोत्पत्ति-मात्रस्य निषेधिका किं वा पराधीनविशेषावाप्तिरूपोत्पत्तेरपीति ।**

ಬ್ರಹ್ಮನು ಸರ್ವಜಗತ್ಸ್ರಷ್ಟಾ ಎಂದು ಹೇಳಿಯಾಗಿದೆ. ಈ ವಿಷಯಕ್ಕೂ ಬ್ರಹ್ಮನಿಗೆ ಉತ್ಪತ್ತಿಯನ್ನು ಹೇಳುವ ಶ್ರುತಿಗೂ ವಿರೋಧ ಇದೆಯೋ ಇಲ್ಲವೋ ? ಎಂಬುದು ವಿಚಾರ. ಇದಕ್ಕೋಸ್ಕರ 'ಅಸತಃ ಸದಜಾಯತ' ಎಂಬ ಶ್ರುತಿಗೆ ಅಸತ್ತಿನಿಂದ ಸತ್ ಹುಟ್ಟಿತು (ಸತ್=ಬ್ರಹ್ಮ) ಎಂದು ಅರ್ಥವೋ ಎಂಬುದು ವಿಚಾರ. ಇದಕ್ಕೋಸ್ಕರ ಬ್ರಹ್ಮನಿಗೆ ಅನುತ್ಪತ್ತಿಯನ್ನು ಹೇಳುವ ಶ್ರುತಿಯಂತೆ ಪರಾಧೀನವಿಶಷಾವಾಪ್ತಿ ಎಂಬ ಉತ್ಪತ್ತಿ ಇದ್ದರೂ ಕೂಡ ಸ್ವರೂಪತಃ ಉತ್ಪತ್ತಿ ಇಲ್ಲ ಎಂದು ಹೇಳುತ್ತದೆ ಎಂದರ್ಥವೋ ಅಥವಾ ಪರಾಧೀನವಿಶೇಷಾವಾಪ್ತಿ ಎಂಬ ಉತ್ಪತ್ತಿಯೂ ಇಲ್ಲ ಎಂದು ಹೇಳುತ್ತದೆಯೋ? ಎಂಬ ವಿಚಾರ.

**''असदिति चेत्'' इत्यत्र ब्रह्मकारणत्वश्रुतेः 'असतः सदजायत' इत्यादि-प्रागभावकारणत्वश्रुतिसंवादियुक्तिविरोधो निरस्तः । ''नासतो दृष्टत्वात्'' इत्यत्र समयप्राप्तं शून्यस्य हेतुत्वं निरस्तम् ।**

(ಪುನರುಕ್ತಿ ಎಂಬ ಶಂಕೆಯನ್ನು ಪರಿಹರಿಸುತ್ತಿದ್ದಾರೆ). 'ಅಸದಿತಿ ಚೇನ್ನ ಪ್ರತಿಷೇಧಮಾತ್ರತ್ವಾತ್' ಎಂಬಲ್ಲಿ ಬ್ರಹ್ಮನಿಗೆ ಕಾರಣತ್ವವನ್ನು ಹೇಳುವ ಶ್ರುತಿಗೆ 'ಅಸತಃ ಸದಜಾಯತ' ಎಂಬುದಾಗಿ ಅಸತ್ ಶಬ್ದವಾಚ್ಯನಾದ ಪ್ರಾಗಭಾವಕ್ಕೆ ಕಾರಣತ್ವವನ್ನು ಹೇಳುವ ಶ್ರುತಿಗೆ ಸಂವಾದಿಯಾದ ಯುಕ್ತಿವಿರೋಧವನ್ನು ಪರಿಹಾರ ಮಾಡಲಾಗಿತ್ತು. ಹಾಗೆಯೇ 'ನಾಸತೋ ದೃಷ್ಟತ್ವಾತ್' ಎಂಬಲ್ಲಿ ಶೂನ್ಯವಾದದಿಂದ ಪ್ರಾಪ್ತವಾದ ಶೂನ್ಯವೇ ಜಗತ್ಕಾರಣ ಎಂಬುದು ನಿರಾಕೃತವಾಗಿತ್ತು.

**अत्र तु तस्या एव ''असतः सदजायत'' इत्यादिकया ब्रह्मणोऽसत्कार्यत्वश्रुत्यैव विरोधो निरस्यत इति भेदः ।।**

ಈ ಅಧಿಕರಣದಲ್ಲಾದರೋ ಬ್ರಹ್ಮಕಾರಣತ್ವವನ್ನು ಹೇಳುವ ಶ್ರುತಿಗೆ 'ಅಸತಃ ಸದಜಾಯತ' ಎಂಬ ಶ್ರುತಿವಿರೋಧ ಪರಿಹಾರ ಮಾಡಲಾಗಿದೆ. ಈ ಶ್ರುತಿಯು ಬ್ರಹ್ಮನು ಅಸತ್‌ಕಾರ್ಯ ಎಂದು ಹೇಳುತ್ತದೆ ಎಂದು ಭಾವಿಸಿ ವಿರೋಧ ಹೇಳಲಾಗಿದೆ.

(ಮೊದಲು ಬ್ರಹ್ಮಕಾರಣತ್ವಶ್ರುತಿಗೆ ಯುಕ್ತಿವಿರೋಧಪರಿಹಾರ ನಂತರ ಸಮಯವಿರೋಧ ಪರಿಹಾರ ಇಲ್ಲಿ ಶ್ರುತಿವಿರೋಧ ಪರಿಹಾರ ಹೀಗೆ ಈ ಅಧಿಕರಣಗಳಿಗೆ ಪರಸ್ಪರ ಭೇದವನ್ನು ತಿಳಿಯಬೇಕು)

**अनादितया समस्येति ।। देहानादित्वादिना चित्प्रकृतिसमस्येत्यर्थः ।**

ಟೀಕಾದಲ್ಲಿರುವ 'ಅನಾದಿತಯಾ ಸಮಸ್ಯ' ಎಂಬುದಕ್ಕೆ ಬ್ರಹ್ಮನ ದೇಹವೂ ಚಿತ್‌ಪ್ರಕೃತಿಯಂತೆ ಅನಾದಿಯಾದ್ದರಿಂದ ಚಿತ್‌ಪ್ರಕೃತಿಸಮನಾಗಿದ್ದಾನೆ ಎಂದರ್ಥ.

**अनेन ''चित्प्रकृतेश्च सममेतत्'' इति न्यायविवरणोक्ता पूर्वपक्षयुक्तिर्विवृता।।**

ಹೀಗೆ ನ್ಯಾಯವಿವರಣದಲ್ಲಿ ಹೇಳಿರುವ 'ಚಿತ್‌ಪ್ರಕೃತೇಶ್ಚ ಸಮಮೇತತ್' ಎಂಬ ಪೂರ್ವಪಕ್ಷ ಯುಕ್ತಿಯು ವಿವರಿಸಲ್ಪಟ್ಟಿತು. (ಹೀಗೆ ಚಿತ್‌ಪ್ರಕೃತಿಸಮ ಎಂದರೆ ದೇಹಾನಾದಿತ್ವದಿಂದ ಎಂದು)

**स्वातन्त्र्याख्यो हेतुरिति ।। ''सत्त्वं स्वातन्त्र्यमुद्दिष्टम्'' इति भारतोक्तेरिति भावः ।**

ಈ ಸೂತ್ರದಲ್ಲಿರುವ 'ಸತ್' ಶಬ್ದದಿಂದ ಸ್ವಾತಂತ್ರ್ಯ ಎಂಬ ಸಿದ್ಧಾಂತಯುಕ್ತಿಯು ಸೂಚಿತವಾಗಿದೆ. ಸತ್ ಶಬ್ದಕ್ಕೆ ಸ್ವಾತಂತ್ರ್ಯ ಎಂಬ ಅರ್ಥ ಹೇಗೆ ಸಿದ್ಧವಾಯಿತು ಎಂದರೆ 'ಸತ್ವಂ ಸ್ವಾತಂತ್ರ್ಯಮುದ್ದಿಷ್ಟಂ' ಎಂಬುದಾಗಿ ಭಾರತದಲ್ಲಿ ಹೇಳಿರುವುದರಿಂದಲೇ.

**अनेन न्यायविवरणोक्तः स्वातन्त्र्यरूपो हेतुः सूत्रारूढो दर्शितः ।।**

ಹೀಗೆ ನ್ಯಾಯವಿವರಣದಲ್ಲಿ ಹೇಳಿರುವ ಸ್ವಾತಂತ್ರ್ಯ ಎಂಬ ಹೇತುವು ಸೂತ್ರಾರೂಢ ಎಂದು ಹೇಳಿದಂತಾಯಿತು.

ಅಸಂಭವಾಧಿಕರಣ (೨-೩-೩)

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## ಅಸಂಭವಾಧಿಕರಣ

**असम्भवस्तु सतोऽनुपपत्तेः।।**

**एवमधिकरणद्वयेनाब्रह्मणोऽसम्भवदुत्पत्तिकस्यापि नभःप्रभृतेः सर्वस्योत्पत्तौ श्रुत्योक्तायां तर्हि तद्वदेव ब्रह्मणोऽप्युत्पत्तिरस्त्विति पूर्वपक्षोदयात्सङ्गतिः ।**

ಇಲ್ಲಿಯವರೆಗೆ ಎರಡು ಅಧಿಕರಣಗಳಲ್ಲಿ ಬ್ರಹ್ಮನಿಂದ ಬೇರೆಯಾದ (ಆಕಾಶ ಹಾಗೂ ವಾಯು) ಭೂತ, ತದಭಿಮಾನಿಗಳಿಗೆ ಉತ್ಪತ್ತಿ ಅಸಂಭವ ಎನಿಸಿದರೂ ಶ್ರುತಿಯಿಂದ ಉತ್ಪತ್ತಿ ಇದೆ ಎಂದು ಹೇಳಿಯಾಯಿತು. ಹಾಗಾದರೆ ಬ್ರಹ್ಮನಿಗೂ ಉತ್ಪತ್ತಿ ಇರಲಿ ಎಂದು ಪೂರ್ವಪಕ್ಷ ಬರುವುದರಿಂದ ಈ ಅಧಿಕರಣಕ್ಕೆ ಸಂಗತಿ ಕೂಡುತ್ತದೆ.

**अत्रोक्तं ब्रह्मणः सर्वस्रष्टृत्वादिकं ब्रह्मण उत्पत्तिमत्त्वश्रुतिविरुद्धं न वेति चिन्ता। तदर्थं ''असतः सदजायत'' इति श्रुतिः किमसतः सकाशाद्ब्रह्मण उत्पत्तिपरा किं वा ब्रह्मणः सकाशाद्वायोरुत्पत्तिपरेति । तदर्थं ब्रह्मानुत्पत्तिश्रुतिरपि किं वाय्वाद्यनुत्पत्तिश्रुतिवत्पराधीनविशेषावाप्तिलक्षणोत्पत्तिसद्भावेऽपि स्वरूपोत्पत्तिमात्रस्य निषेधिका किं वा पराधीनविशेषावाप्तिरूपोत्पत्तेरपीति ।**

ಬ್ರಹ್ಮನು ಸರ್ವಜಗತ್ಸ್ರಷ್ಟಾ ಎಂದು ಹೇಳಿಯಾಗಿದೆ. ಈ ವಿಷಯಕ್ಕೂ ಬ್ರಹ್ಮನಿಗೆ ಉತ್ಪತ್ತಿಯನ್ನು ಹೇಳುವ ಶ್ರುತಿಗೂ ವಿರೋಧ ಇದೆಯೋ ಇಲ್ಲವೋ ? ಎಂಬುದು ವಿಚಾರ. ಇದಕ್ಕೋಸ್ಕರ 'ಅಸತಃ ಸದಜಾಯತ' ಎಂಬ ಶ್ರುತಿಗೆ ಅಸತ್ತಿನಿಂದ ಸತ್ ಹುಟ್ಟಿತು (ಸತ್=ಬ್ರಹ್ಮ) ಎಂದು ಅರ್ಥವೋ ಎಂಬುದು ವಿಚಾರ. ಇದಕ್ಕೋಸ್ಕರ ಬ್ರಹ್ಮನಿಗೆ ಅನುತ್ಪತ್ತಿಯನ್ನು ಹೇಳುವ ಶ್ರುತಿಯಂತೆ ಪರಾಧೀನವಿಶಷಾವಾಪ್ತಿ ಎಂಬ ಉತ್ಪತ್ತಿ ಇದ್ದರೂ ಕೂಡ ಸ್ವರೂಪತಃ ಉತ್ಪತ್ತಿ ಇಲ್ಲ ಎಂದು ಹೇಳುತ್ತದೆ ಎಂದರ್ಥವೋ ಅಥವಾ ಪರಾಧೀನವಿಶೇಷಾವಾಪ್ತಿ ಎಂಬ ಉತ್ಪತ್ತಿಯೂ ಇಲ್ಲ ಎಂದು ಹೇಳುತ್ತದೆಯೋ? ಎಂಬ ವಿಚಾರ.

''असदिति चेत्'' इत्यत्र ब्रह्मकारणत्वश्रुतेः 'असतः सदजायत' इत्यादि-प्रागभावकारणत्वश्रुतिसंवादियुक्तिविरोधो निरस्तः । ''नासतो दृष्टत्वात्'' इत्यत्र समयप्राप्तं शून्यस्य हेतुत्वं निरस्तम् ।

(ಪುನರುಕ್ತಿ ಎಂಬ ಶಂಕೆಯನ್ನು ಪರಿಹರಿಸುತ್ತಿದ್ದಾರೆ). 'ಅಸದಿತಿ ಚೇನ್ನ ಪ್ರತಿಷೇಧಮಾತ್ರತ್ವಾತ್' ಎಂಬಲ್ಲಿ ಬ್ರಹ್ಮನಿಗೆ ಕಾರಣತ್ವವನ್ನು ಹೇಳುವ ಶ್ರುತಿಗೆ 'ಅಸತಃ ಸದಜಾಯತ' ಎಂಬುದಾಗಿ ಅಸತ್ ಶಬ್ದವಾಚ್ಯನಾದ ಪ್ರಾಗಭಾವಕ್ಕೆ ಕಾರಣತ್ವವನ್ನು ಹೇಳುವ ಶ್ರುತಿಗೆ ಸಂವಾದಿಯಾದ ಯುಕ್ತಿವಿರೋಧವನ್ನು ಪರಿಹಾರ ಮಾಡಲಾಗಿತ್ತು. ಹಾಗೆಯೇ 'ನಾಸತೋ ದೃಷ್ಟತ್ವಾತ್' ಎಂಬಲ್ಲಿ ಶೂನ್ಯವಾದದಿಂದ ಪ್ರಾಪ್ತವಾದ ಶೂನ್ಯವೇ ಜಗತ್ಕಾರಣ ಎಂಬುದು ನಿರಾಕೃತವಾಗಿತ್ತು.

अत्र तु तस्या एव ''असतः सदजायत'' इत्यादिकया ब्रह्मणोऽसत्कार्यत्वश्रुत्यैव विरोधो निरस्यत इति भेदः ।।

ಈ ಅಧಿಕರಣದಲ್ಲಾದರೋ ಬ್ರಹ್ಮಕಾರಣತ್ವವನ್ನು ಹೇಳುವ ಶ್ರುತಿಗೆ 'ಅಸತಃ ಸದಜಾಯತ' ಎಂಬ ಶ್ರುತಿವಿರೋಧ ಪರಿಹಾರ ಮಾಡಲಾಗಿದೆ. ಈ ಶ್ರುತಿಯು ಬ್ರಹ್ಮನು ಅಸತ್ಕಾರ್ಯ ಎಂದು ಹೇಳುತ್ತದೆ ಎಂದು ಭಾವಿಸಿ ವಿರೋಧ ಹೇಳಲಾಗಿದೆ.

(ಮೊದಲು ಬ್ರಹ್ಮಕಾರಣತ್ವಶ್ರುತಿಗೆ ಯುಕ್ತಿವಿರೋಧಪರಿಹಾರ ನಂತರ ಸಮಯವಿರೋಧ ಪರಿಹಾರ ಇಲ್ಲಿ ಶ್ರುತಿವಿರೋಧ ಪರಿಹಾರ ಹೀಗೆ ಈ ಅಧಿಕರಣಗಳಿಗೆ ಪರಸ್ಪರ ಭೇದವನ್ನು ತಿಳಿಯಬೇಕು)

अनादितया समस्येति ।। देहानादित्वादिना चित्प्रकृतिसमस्येत्यर्थः ।

ಟೀಕಾದಲ್ಲಿರುವ 'ಅನಾದಿತಯಾ ಸಮಸ್ಯ' ಎಂಬುದಕ್ಕೆ ಬ್ರಹ್ಮನ ದೇಹವೂ ಚಿತ್ಪ್ರಕೃತಿಯಂತೆ ಅನಾದಿಯಾದ್ದರಿಂದ ಚಿತ್ಪ್ರಕೃತಿಸಮನಾಗಿದ್ದಾನೆ ಎಂದರ್ಥ.

अनेन ''चित्प्रकृतेश्च सममेतत्'' इति न्यायविवरणोक्ता पूर्वपक्षयुक्तिर्विवृता।।

ಹೀಗೆ ನ್ಯಾಯವಿವರಣದಲ್ಲಿ ಹೇಳಿರುವ 'ಚಿತ್ಪ್ರಕೃತೇಶ್ಚ ಸಮಮೇತತ್' ಎಂಬ ಪೂರ್ವಪಕ್ಷ ಯುಕ್ತಿಯು ವಿವರಿಸಲ್ಪಟ್ಟಿತು. (ಹೀಗೆ ಚಿತ್ಪ್ರಕೃತಿಸಮ ಎಂದರೆ ದೇಹಾನಾದಿತ್ವದಿಂದ ಎಂದು)

स्वातन्त्र्याख्यो हेतुरिति ।। ''सत्त्वं स्वातन्त्र्यमुद्दिष्टम्'' इति भारतोक्तेरिति भावः ।

ಈ ಸೂತ್ರದಲ್ಲಿರುವ 'ಸತ್' ಶಬ್ದದಿಂದ ಸ್ವಾತಂತ್ರ್ಯ ಎಂಬ ಸಿದ್ಧಾಂತಯುಕ್ತಿಯು ಸೂಚಿತವಾಗಿದೆ. ಸತ್ ಶಬ್ದಕ್ಕೆ ಸ್ವಾತಂತ್ರ್ಯ ಎಂಬ ಅರ್ಥ ಹೇಗೆ ಸಿದ್ಧವಾಯಿತು ಎಂದರೆ 'ಸತ್ವಂ ಸ್ವಾತಂತ್ರ್ಯಮುದ್ದಿಷ್ಟಂ' ಎಂಬುದಾಗಿ ಭಾರತದಲ್ಲಿ ಹೇಳಿರುವುದರಿಂದಲೇ.

अनेन न्यायविवरणोक्तः स्वातन्त्र्यरूपो हेतुः सूत्रारूढो दर्शितः ।।

ಹೀಗೆ ನ್ಯಾಯವಿವರಣದಲ್ಲಿ ಹೇಳಿರುವ ಸ್ವಾತಂತ್ರ್ಯ ಎಂಬ ಹೇತುವು ಸೂತ್ರಾರೂಢ ಎಂದು ಹೇಳಿದಂತಾಯಿತು.

ಅಸಂಭವಾಧಿಕರಣ (೨-೩-೩)

**महत्त्वादिसत् गुणत्वादिति ।। ''सद्भावे साधुभावे च सदित्येतत्प्रयुज्यते'' इति गीतोक्तेरिति भावः ।।**

ಶ್ರುತಿಯಲ್ಲಿ ಸತ್ ಶಬ್ದಕ್ಕೆ ವಾಯು ಎಂದು ಅರ್ಥ. (ಅದನ್ನು ವಿವರಿಸುತ್ತಿದ್ದಾರೆ) ಏಕೆಂದರೆ ಮಹತ್ವವೇ ಮೊದಲಾದ ಸದ್ಗುಣಗಳು ಅವರಿಗೆ ಇರುವುದರಿಂದ ಗೀತೆಯಲ್ಲಿ ಸತ್ ಶಬ್ದವು ಸಾಧು ಎಂಬ ಅರ್ಥವುಳ್ಳದ್ದು ಎಂದು ಹೇಳಲಾಗಿದೆ.

**एकैवेत्यर्थ इति ।। यद्यविभिन्नेत्यस्य भेदरहितेत्यर्थः स्यात्तर्हि तत्प्रतियोगिसमर्पकस्य ''भेदैरपि विभा(व्य)ष्यते'' इत्यस्य भेदोऽर्थः स्यात् । नच तद्युक्तम् । निर्भेदत्वात् । भेदैरिति बहुवचनायोगाच्च ।**

'ಅವಿಭಿನ್ನಾऽಪಿ ಸಾ ದೃಷ್ಟಾದಿಭೇದೈಃ ವಿಭಾಷ್ಯತೇ' ಎಂಬ (ಅನುವ್ಯಾಖ್ಯಾನದ) ಭಾಷ್ಯದಲ್ಲಿರುವ 'ಅವಿಭಿನ್ನಾ' ಎಂಬ ಶಬ್ದಕ್ಕೆ ಟೀಕಾದಲ್ಲಿ 'ಏಕೈವ' ಎಂದು ಅರ್ಥ ಹೇಳಲಾಗಿದೆ. 'ಅವಿಭಿನ್ನಾ' ಎಂದರೆ ಭೇದರಹಿತ ಎಂಬ ಅರ್ಥ ತಿಳಿಯಬಾರದು. ಭೇದರಹಿತ ಎಂದರ್ಥ ಮಾಡಿದರೆ ಆಗ ಭೇದ ಎಂಬುದು ಪ್ರತಿಯೋಗಿಯಾಯಿತು. ಆ ಪ್ರತಿಯೋಗಿಯಾದ ಭೇದವನ್ನು ತಿಳಿಸಿಕೊಡುವ 'ಭೇದೈಃ' ಎಂಬಲ್ಲಿ ಭೇದ ಶಬ್ದಕ್ಕೆ (ಅನ್ಯೋನ್ಯಾಭಾವ) ಭಿನ್ನ ಎಂದರ್ಥವಾಗುತ್ತದೆ. ಆದರೆ ಇದು ತಪ್ಪು. ಪರಮಾತ್ಮನ ಗುಣಗಳಲ್ಲಿ ಭೇದವಿಲ್ಲದಿರುವುದರಿಂದ. 'ಭೇದೈಃ' ಎಂದು ಬಹುವಚನ ಹೇಳಿದ್ದೂ ಸರಿಯಾಗುವುದಿಲ್ಲ 'ಭೇದೇನ' ಎಂದು ಏಕವಚನವೇ ಪರ್ಯಾಪ್ತವಾಗಿತ್ತು.

**एकेत्यर्थत्वे तु भेदैरित्यस्यापि द्वित्वत्रित्वादिसंख्याभिरित्यर्थो भवति । तथा च निर्भेदेऽपि द्वित्वादिसंख्यानां सत्त्वान्न दोष इति भावः ।**

ಹಾಗಾಗಿ 'ಅವಿಭಿನ್ನಾ' ಎಂದರೆ 'ಏಕಾ ಏವ' ಎಂದರ್ಥ ಹೇಳಬೇಕು. ಆಗ 'ಭೇದೈಃ' ಎಂಬುದಕ್ಕೆ ದ್ವಿತ್ವ, ತ್ರಿತ್ವ ಮುಂತಾದ ಸಂಖ್ಯಾಗಳಿಂದ ಎಂದರ್ಥವಾಗುತ್ತದೆ. ಹಾಗಾಗಿ ಪರಮಾತ್ಮನಿಗೂ ಗುಣಗಳಿಗೂ ಗುಣಗಳಲ್ಲಿ ಪರಸ್ಪರ ಅಭೇದವಿದ್ದರೂ ವಿಶೇಷಬಲದಿಂದ ದ್ವಿತ್ವಾದಿಸಂಖ್ಯೆಗಳೂ ಇರುವುದರಿಂದ ಎಂದರ್ಥ ಹೇಳಿದರೆ ದೋಷವಿಲ್ಲ.

## ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**असम्भवस्तु** ।। ''असम्भवदुद्भवयोर्नभोनभस्वतोरुत्पत्तौ'' इति टीकायां द्विवचनमुपलक्षणमिति भावेन तत्सूचितां सङ्गतिमाह – **एवमिति** ।।

'ಅಸಂಭವದುದ್ಭವಯೋಃ ನಭೋನಭಸ್ವತೋಃ' ಎಂಬ ಟೀಕಾದಲ್ಲಿ 'ನಭೋನಭಸ್ವತೋಃ' ಎಂಬ ದ್ವಿವಚನ ಉಪಲಕ್ಷಣ ಎಂದು ತಿಳಿಸಿ ಅದರಿಂದ ಸೂಚಿತವಾಗುವ ಸಂಗತಿಯನ್ನು ಹೇಳುತ್ತಿದ್ದಾರೆ 'ಏವಂ' ಎಂಬುದಾಗಿ. (ಉಪಲಕ್ಷಣ ಎಂಬುದು ಚಂದ್ರಿಕಾದಲ್ಲಿರುವ 'ಅಬ್ರಹ್ಮಣಃ' ಎಂಬುದರಿಂದ ತಿಳಿಯುತ್ತದೆ)

**प्रकाशः – सर्वस्येति ।।** ''प्रकृतिः पुरुष'' इत्यादि प्रागुक्तानुव्याख्यानात् ''एवं सर्वस्यापि ब्रह्मेतरस्योत्पत्तौ सिद्धायाम्'' इत्युत्तराधिकरणटीकोक्तेश्चेति भावः।

ಬ್ರಹ್ಮಾತಿರಿಕ್ತವಾದ ಸರ್ವಕ್ಕೂ ಉತ್ಪತ್ತಿ ಇದೆ ಎಂಬುದು 'ಪ್ರಕೃತಿಃ ಪುರುಷ' ಎಂಬ ಅನುವ್ಯಾಖ್ಯಾನದಿಂದಲೂ 'ಏವಂ ಸರ್ವಸ್ಯಾಪಿ ಬ್ರಹ್ಮೇತರಸ್ಯ ಉತ್ಪತ್ತೌ ಸಿದ್ಧಾಯಾಂ' ಎಂಬ ಮುಂದಿನ ಅಧಿಕರಣದ ಟೀಕಾದಿಂದಲೂ ತಿಳಿಯುತ್ತಿದೆ.

**प्रकाशः – सङ्गतिः** अवसरप्राप्तिरूपाऽपवादरूपा वेत्यर्थः ।

ಇಲ್ಲಿ ಸಂಗತಿ ಎರಡು ವಿಧವಾಗಿ ತಿಳಿಯಬಹುದು. ಒಂದು ಅವಸರಸಂಗತಿ (ಪ್ರಸಂಗ ಸಂಗತಿ). ಅಥವಾ ಅಪವಾದ ಸಂಗತಿ. ಎಲ್ಲಾ ವಸ್ತುಗಳಿಗೂ ಉತ್ಪತ್ತಿ ಇದ್ದರೂ ಬ್ರಹ್ಮ ಮಾತ್ರ ಅಪವಾದ ಎಂಬುದಾಗಿ.

**प्रकाशः –** ''ब्रह्मात्र विषय'' इत्यादिटीकां व्यनक्ति ।। **अत्रोक्तमिति ।।**

'ಬ್ರಹ್ಮಾತ್ರ ವಿಷಯಃ' ಎಂಬ ಟೀಕಾವನ್ನು ವಿವರಿಸುತ್ತಿದ್ದಾರೆ 'ಅತ್ರೋಕ್ತಂ' ಎಂಬುದಾಗಿ.

**प्रकाशः –** अत्राद्या चिन्ता ''असम्भव'' इति सूत्रांशसूचिता । द्वितीया ''अनुपपत्तेः'' इत्यंशसूचिता । तृतीया त्ववधारणार्थकतुशब्दसूचिता । सदेव सोम्येत्याद्यनुत्पत्तिश्रुतिः ।

ಮೊದಲನೆಯ ಚಿಂತಾ ಭಾಗವು ಸೂತ್ರದಲ್ಲಿರುವ 'ಅಸಂಭವ' ಎಂಬ ಪದದಿಂದ ಸೂಚಿತವಾಗಿದೆ. ಎರಡನೆಯ ಚಿಂತಾವು 'ಅನುಪಪತ್ತೇಃ' ಎಂಬ ಸೂತ್ರದ ಅಂಶದಿಂದ ಸೂಚಿತವಾಗಿದೆ. ಮೂರನೇ ಚಿಂತಾವು ಸೂತ್ರದಲ್ಲಿರುವ ಅವಧಾರಣೆ ಎಂಬ ಅರ್ಥವನ್ನು ಹೊಂದಿರುವ 'ತು' ಎಂಬ ಪದದಿಂದ ಸೂಚಿತವಾಗಿದೆ. 'ಅನುತ್ಪತ್ತಿಃ ಶ್ರುತಿ' ಎಂದರೆ 'ಸದೇವ ಸೌಮ್ಯ ...' ಎಂಬ ಶ್ರುತಿ ಎಂದು ತಿಳಿಯಬೇಕು.

**प्रकाशः –** पौनरुक्त्यं निराह – **असदिति चेदित्यत्रेति ।। सत्त्वमिति ।।**

ಈ ಅಧಿಕರಣಕ್ಕೆ ಹಿಂದಿನ ಬೇರೆ ಬೇರೆ ಅಧಿಕರಣಗಳಿಂದ ಬರಬಹುದಾದ ಪುನರುಕ್ತಿ ಎಂಬ ದೋಷವನ್ನು ಪರಿಹರಿಸುತ್ತಿದ್ದಾರೆ 'ಅಸತ್' ಎಂಬ ಗ್ರಂಥದಿಂದ.

**प्रकाशः –**

सत्त्वं स्वातन्त्र्यमुद्दिष्टं तच्च कृष्णे न चापरे ।
अस्वातन्त्र्यात्तदन्येषामसत्त्वं विद्धि भारत ।।

इत्येकादशस्कन्धतात्पर्योक्तं वाक्यम् ।।

ಸತ್ವ ಎಂದರೆ ಸ್ವಾತಂತ್ರ್ಯ ಎಂದರ್ಥ. ಅದು ಕೃಷ್ಣನಲ್ಲಿ ಬಿಟ್ಟರೆ ಬೇರೆಯವರಲ್ಲಿ ಇಲ್ಲ. ಕೃಷ್ಣನನ್ನು ಹೊರತುಪಡಿಸಿ ಬೇರೆ ಎಲ್ಲರೂ ಅಸ್ವತಂತ್ರರಾದ್ದರಿಂದ ಅವರನ್ನು ಅಸತ್ವ ಎಂದು ತಿಳಿಯಬೇಕು. ಇದು ಏಕಾದಶಸ್ಕಂಧತಾತ್ಪರ್ಯದಲ್ಲಿ ಹೇಳಿರುವ ಮಹಾಭಾರತವಾಕ್ಯ.

**प्रकाशः – न्यायेति ।।** ''नच सतः पराधीनविशेषवत्त्वम् । स्वातन्त्र्यात्'' इत्युक्त इत्यर्थः ।

ನ್ಯಾಯವಿವರಣದಲ್ಲಿ ಪರಮಾತ್ಮನಿಗೆ ಉತ್ಪತ್ತಿ ಇಲ್ಲ ಎಂಬುದಕ್ಕೆ ಸ್ವಾತಂತ್ರ್ಯ ಎಂಬ ಹೇತುವನ್ನು ಹೇಳಿದ್ದಾರೆ. ಅದು ಸೂತ್ರಾನುಗುಣವೇ ಆಗಿದೆ. ಏಕೆಂದರೆ ಸೂತ್ರದಲ್ಲಿರುವ ಸತ್ ಶಬ್ದಕ್ಕೆ ಸ್ವಾತಂತ್ರ್ಯ ಎಂದರ್ಥ. ನ್ಯಾಯವಿವರಣದಲ್ಲಿ ಪರಮಾತ್ಮನಿಗೆ ಪರಾಧೀನವಿಶೇಷ ಎಂಬ ಉತ್ಪತ್ತಿಯೂ ಇಲ್ಲ. ಅವನು ಸ್ವತಂತ್ರನಾದ್ದರಿಂದ ಎಂದು ಹೇಳಿದೆ.

**प्रकाशः – ''एकैव'' इति व्याख्याने बीजं वदन्नेव ''भेदैः'' इत्यस्याप्यर्थमाह – यदीति ।।**

ಚಂದ್ರಿಕಾದಲ್ಲಿ 'ಏಕೈವ' ಎಂಬ ಟೀಕಾವಾಕ್ಯಕ್ಕೆ ಅರ್ಥ ಹೇಳುವುದರ (ಹೀಗೆ ವ್ಯಾಖ್ಯಾನ ಮಾಡಲು ಕಾರಣ) ಜೊತೆಗೇ ಎಂದು ಭಾಷ್ಯದಲ್ಲಿರುವ ಪದಕ್ಕೂ ಅರ್ಥ ಹೇಳುತ್ತಿದ್ದಾರೆ 'ಯದಿ' ಎಂಬುದಾಗಿ.

## तात्पर्यचन्द्रिका

**अन्ये तु ब्रह्म कार्यं कारणत्वात् पटादिवदिति प्राप्ते सन्मात्रं हि ब्रह्म । तस्य न तावत्सन्मात्रादुत्पत्तिः । अतिशयाभावे कार्यकारणभावायोगात् । नापि सत् विशेषात् । विशेषात्सामान्यस्यानुत्पत्तेः । नाप्यसतः । तस्य निरात्मकत्वादिति सिद्धान्त इत्याहुः ।**

(ರಾಮಾನುಜರ ಪ್ರಕಾರ ಸೂತ್ರಾರ್ಥವನ್ನು ಹೇಳುತ್ತಿದ್ದಾರೆ) ಬ್ರಹ್ಮನು ಕಾರ್ಯನಾಗಿದ್ದಾನೆ. ಏಕೆಂದರೆ ಅವನು ಕಾರಣನಾದ್ದರಿಂದ ಪಟದಂತೆ. ಪಟವು ಕಾರ್ಯವಾಗಿದೆ ಹಾಗೇ ಪಟದಲ್ಲಿರುವ ರೂಪಕ್ಕೆ ಕಾರಣವೂ ಆಗಿದೆ ಅದರಂತೆ ಬ್ರಹ್ಮನೂ ಕೂಡ ಕಾರಣ(ಜಗತ್)ನಾದ್ದರಿಂದ ಕಾರ್ಯನಾಗಬೇಕು. ಇಂತಹ ಬ್ರಹ್ಮನಿಗೆ ಸನ್‌ಮಾತ್ರದಿಂದ ಉತ್ಪತ್ತಿ ಹೇಳಲು ಸಾಧ್ಯವಿಲ್ಲ. ಅತಿಶಯ ಇಲ್ಲದೇ ಹೋದರೆ ಕಾರ್ಯಕಾರಣಭಾವವೇ ಕೂಡುವುದಿಲ್ಲ. ಬ್ರಹ್ಮನೂ ಸತ್‌ಸಾಮಾನ್ಯ. ಅವನಿಗೆ ಕಾರಣವೂ ಸತ್‌ಸಾಮಾನ್ಯ ಎಂದರೆ ಆಗ ಕಾರ್ಯಕಾರಣಗಳಿಗೆ ಅತಿಶಯ(ವಿಶೇಷ) ಇಲ್ಲ ಎಂದಾಯಿತು. ಹೀಗೆ ಅತಿಶಯ ಇಲ್ಲದ ಕಡೆ ಕಾರ್ಯಕಾರಣಭಾವ ಇರಲು ಸಾಧ್ಯವಿಲ್ಲ. ಹಾಗಾಗಿ ಸದ್ವಿಶೇಷದಿಂದ ಬ್ರಹ್ಮನು ಹುಟ್ಟುತ್ತಾನೆ ಎನ್ನೋಣ ಎಂದರೆ ಅದು ಸರಿಯಲ್ಲ, ಏಕೆಂದರೆ ವಿಶೇಷದಿಂದ ಸಾಮಾನ್ಯ ಹುಟ್ಟುವುದು ಕಂಡಿಲ್ಲ.(ಸಾಮಾನ್ಯದಿಂದಲೇ ವಿಶೇಷದ ಉತ್ಪತ್ತಿ ಕಂಡಿರುವುದು) ಹಾಗಾದರೆ ಅಸತ್ತಿನಿಂದ ಬ್ರಹ್ಮ ಹುಟ್ಟುತ್ತಾನೆ ಎಂದು ಹೇಳೋಣ ಎಂದರೆ ಅದೂ ತಪ್ಪು. ಅಸತ್ ಎಂಬುದು ನಿರಾತ್ಮಕ(ನಿಃಸ್ವರೂಪ)ವಾದ್ದರಿಂದ ಅದರಿಂದ ಹುಟ್ಟಲು ಸಾಧ್ಯವಿಲ್ಲ. ಹಾಗಾಗಿ ಬ್ರಹ್ಮನು ಸನ್‌ಮಾತ್ರ, ಅವನಿಗೆ ಉತ್ಪತ್ತಿ ಇಲ್ಲ ಎಂದು ಸಿದ್ಧಾಂತ ಎಂದು ಹೇಳುತ್ತಾರೆ.

**तन्न । मम रीत्या ''असतः सदजायत'' इत्यादिश्रुत्या ब्रह्मणः कार्यत्वशङ्कायाः पादसङ्गतायाः सम्भवेऽप्रयोजकेन कारणत्वेन तदसङ्गततच्छङ्कायोगात् ।**

ನೀವು ಹೇಳಿದ್ದು ಸರಿಯಲ್ಲ. ನಮ್ಮ ಪ್ರಕಾರ 'ಅಸತಃ ಸದಜಾಯತ' ಎಂಬ ಶ್ರುತಿಯಿಂದ ಬ್ರಹ್ಮನಿಗೆ ಕಾರ್ಯತ್ವಶಂಕಾ ಬರುತ್ತದೆ. ಈ ಕಾರ್ಯತ್ವಶಂಕಾ ಪಾದಸಂಗತವೂ ಆಗಿದೆ. ಇದು ಶ್ರುತಿವಿರೋಧ ಪರಿಹಾರಮಾಡುವ ಪಾದವಾದ್ದರಿಂದ ಶ್ರುತಿಯಿಂದಲೇ ಕಾರ್ಯತ್ವಶಂಕಾ ಮಾಡುವುದು ಸಂಗತ. ಅದನ್ನು ಹೊರತುಪಡಿಸಿ ನೀವು ಹೇಳುವ ಕಾರಣತ್ವಯುಕ್ತಿಯಿಂದ ಕಾರ್ಯತ್ವಶಂಕೆಯು ಈ ಪಾದದಲ್ಲಿ ಅಸಂಗತ. ಆಗ ಯುಕ್ತಿ ವಿರೋಧ ಪರಿಹಾರ ಮಾಡಿದಂತಾಗುತ್ತದೆ. ಅಲ್ಲದೇ ಈ ಕಾರಣತ್ವಯುಕ್ತಿಯು ಅಪ್ರಯೋಜಕ. ಅಂದರೆ ಬ್ರಹ್ಮನಿಗೆ ಕಾರಣತ್ವ ಇರಲಿ ಕಾರ್ಯತ್ವ ಇರುವುದು ಬೇಡ ಎಂದರೆ ಆಗ ನಿಮ್ಮ ಹತ್ತಿರ ಯಾವುದೇ ಅನುಕೂಲತರ್ಕ ಇಲ್ಲ

**यच्चोक्तं सत्सामान्यं ब्रह्मेति । तन्न । परमार्थसतो ब्रह्मणो व्यावहारिकसदाद्यनुगत्ययोगात् ।**

ಬ್ರಹ್ಮನು ಸತ್‌ಸಾಮಾನ್ಯ ಎಂದು ಹೇಳಿದ್ದಾರೆ. ಅದು ತಪ್ಪು. ಬ್ರಹ್ಮನು ಪರಮಾರ್ಥಸತ್ ಆಗಿದ್ದಾನೆ. ಹಾಗಾಗಿ ಬ್ರಹ್ಮನಿಗೆ ವ್ಯಾವಹಾರಿಕ ಅಥವಾ ಪ್ರಾತಿಭಾಸಿಕಸತ್ತಾಶ್ರಯತ್ವ ಕೂಡುವುದಿಲ್ಲ.

**परमार्थसति च सामान्यविशेषभावाभावात् । सद्व्यक्तीनां च सत्त्वाविशेषेऽपि शक्तशक्यत्वादिविशेषेणैव द्रव्यादिव्यक्तीनामिव कार्यकारणतोपपत्तेः ।**

ಬ್ರಹ್ಮನು ಪರಮಾರ್ಥಸತ್. ಪರಮಾರ್ಥಸತ್ತಿನಲ್ಲೇ ಸಾಮಾನ್ಯವಿಶೇಷ ಎಂಬುದಿದೆ. ಅದರಲ್ಲಿ ಅನುಗತವಾದ ಸತ್ವವುಳ್ಳವನು ಬ್ರಹ್ಮ ಎಂದರೆ ಅದು ತಪ್ಪು. ಪರಮಾರ್ಥಸತ್ತಿನಲ್ಲಿ ಸಾಮಾನ್ಯವಿಶೇಷಭಾವ ಎಂಬುದು ಇಲ್ಲ. ಸತ್ ಆದ ವಸ್ತುಗಳಲ್ಲಿ ಒಂದೇ ವಿಧವಾದ ಸತ್ವ ಇದ್ದರೂ ಒಂದು ವಸ್ತುವು ಶಕ್ತ ಇನ್ನೊಂದು ಶಕ್ಯ ಎಂಬುದಾಗಿ ದ್ರವ್ಯಗಳಲ್ಲಿ (ಘಟ, ದಂಡ ಮೊದಲಾದಲ್ಲಿ) ಹೇಗೋ ಹಾಗೇ ಕಾರ್ಯಕಾರಣಗಳನ್ನು ಕೂಡಿಸಬಹುದು.

**यत्तूक्तं भामत्यां अधिष्ठानार्थमपेक्षितेन सत्त्वेन ब्रह्मण आरोपितत्वमिह निषिध्यते । आरोपितता हि कार्यतेति ।**

ಭಾಮತಿಯಲ್ಲಿ ಹೇಳಿದ್ದಾರೆ, ಬ್ರಹ್ಮನು ಜಗದಾರೋಪಕ್ಕೆ ಅಧಿಷ್ಠಾನನಾಗಿದ್ದಾನೆ. ಅಧಿಷ್ಠಾನ ಎಂದಾಗಬೇಕಾದರೆ ಅದು ಸತ್ ಆಗಲೇಬೇಕು. ಹಾಗಾಗಿ ಬ್ರಹ್ಮನಿಗೆ ಆರೋಪಿತತ್ವ ಕೂಡುವುದಿಲ್ಲ. ಆರೋಪಿತತ್ವ ಎಂದರೆ ಕಾರ್ಯತ್ವ. ಹಾಗಾಗಿ ಬ್ರಹ್ಮನಿಗೆ ಕಾರ್ಯತ್ವ-ಉತ್ಪತ್ತಿ ಇಲ್ಲ ಎಂದು. ಇದು ತಪ್ಪು.

**तत्र प्रक्रमानानुगुण्यम् । नहि पूर्वाधिकरणयोः ''आत्मन आकाशः सम्भूत'' इत्यादिश्रुत्याऽऽकाशवाय्वादेरात्माकाशादावारोपितत्वमुक्तम् । येनेह ब्रह्मणि तदाशङ्क्य निषिध्येत।**

ಹೀಗೆ ಹೇಳಿದರೆ ಪ್ರಕ್ರಮ(ಪ್ರಾರಂಭ) ಅನಾನುಗುಣ್ಯ ಬರುತ್ತದೆ. ಹಿಂದಿನ ಅಧಿಕರಣಗಳಲ್ಲಿ ಆಕಾಶ, ವಾಯು ಇವುಗಳಿಗೆ ಉತ್ಪತ್ತಿಯನ್ನು ಹೇಳುವಾಗ ಆಕಾಶ, ವಾಯು ಇವುಗಳು ಕ್ರಮವಾಗಿ ಆತ್ಮ, ಆಕಾಶ ಇವುಗಳಲ್ಲಿ ಆರೋಪಿತ ಎಂದು ಹೇಳಿಲ್ಲ. ಹಾಗೆಂದು ಹಿಂದೆ ಹೇಳಿದ್ದರೆ ಆಗ ಬ್ರಹ್ಮನೂ ಆರೋಪಿತ ಎಂದಾಗಬಹುದೇ ಎಂದು ಪ್ರಶ್ನೆ ಬಂದು ಅದರ ಪರಿಹಾರ ಸರಿಯಾಗುತ್ತಿತ್ತು. ಆದರೆ ಹಾಗೆ ಹೇಳಿಲ್ಲ. (ಅಂದರೆ ಹಿಂದೆ ಆಕಾಶ ವಾಯುಗಳಿಗೆ ಆರೋಪಿತತ್ವದಿಂದ ಉತ್ಪತ್ತಿಯನ್ನು ಸಮರ್ಥನೆ ಮಾಡಿಲ್ಲ ಎಂದರ್ಥ).

**सौत्रासम्भवपदास्वारस्यं च । ''नात्मा श्रुतेः'' इत्यनेन पौनरुक्तयं च ।**

ಹೀಗೆ 'ಅಸಂಭವ' ಎಂಬ ಸೂತ್ರದಲ್ಲಿರುವ ಪದಕ್ಕೆ 'ಅನುತ್ಪತ್ತಿ' ಎಂಬ ಅರ್ಥ ಹೇಳುವುದು ಸ್ವರಸವಲ್ಲ. ಇನ್ನು 'ನಾತ್ಮಾ ಶ್ರುತೇಃ' ಎಂಬ ಅಧಿಕರಣದಲ್ಲಿಯೂ ಇದೇ ವಿಚಾರ ಬಂದಿರುವುದರಿಂದ ಆ ಅಧಿಕರಣದಿಂದ ಈ ಅಧಿಕರಣಕ್ಕೆ ಪುನರುಕ್ತಿ ಎಂಬ ದೋಷ ಬರುತ್ತದೆ.

**न चात्र ब्रह्मणोऽनुत्पत्त्युक्तिः । नात्मेत्यत्र तु तस्माद्भिन्नस्य जीवस्येति वाच्यम् ।**

ಪುನರುಕ್ತಿ ಬರುವುದಿಲ್ಲ ಏಕೆಂದರೆ ಇಲ್ಲಿ ಅನುತ್ಪತ್ತಿಯನ್ನು ಹೇಳಲಾಗಿದೆ. ಆದರೆ 'ನಾತ್ಮಾ ಶ್ರುತೇಃ' ಎಂಬಲ್ಲಿ ಈ ಬ್ರಹ್ಮನಿಗಿಂತ ಭಿನ್ನವಾದ ಜೀವನಿಗೆ ಅನುತ್ಪತ್ತಿಯನ್ನು ಹೇಳಲಾಗಿದೆ. ಈ ರೀತಿ ಹೇಳುವುದು ಸರಿಯಲ್ಲ.

**विशिष्टरूपस्य जीवस्य ब्रह्मणश्चारोपितत्वात् । आरोपितस्य च निवृत्तिनियमात् ।**

ಇಲ್ಲಿ ಬ್ರಹ್ಮ ಶಬ್ದದಿಂದ ವಿಶಿಷ್ಟಬ್ರಹ್ಮ(ಶಬಲಬ್ರಹ್ಮ)ನನ್ನು ಇಟ್ಟುಕೊಂಡರೆ ಅವನು ಆರೋಪಿತ. ಜೀವನೂ ಆರೋಪಿತ. ಹೀಗೆ ವಿಶಿಷ್ಟಚಿತ್‌ಗೆ ಅನುತ್ಪತ್ತಿಯನ್ನು ಹೇಳಲು ಸಾಧ್ಯವಿಲ್ಲ. ಬ್ರಹ್ಮ(ವಿಶಿಷ್ಟ) ಹಾಗೂ ಜೀವ ಇವರು ಆರೋಪಿತ ಎಂದರೆ ಅನುತ್ಪತ್ತಿ ಹೇಳುವುದೇ ಸರಿಯಲ್ಲ. ಆರೋಪಿತವಾದದ್ದೆಲ್ಲಾ ನಿವೃತ್ತಿಯನ್ನು ಹೊಂದಲೇಬೇಕಾದ್ದರಿಂದ.

**चिन्मात्रानारोपस्य चैकेनैव सिद्धेः ।**

ಹಾಗಲ್ಲ. ಬ್ರಹ್ಮ ಹಾಗೂ ಜೀವ ಶಬ್ದದಿಂದ ಚಿನ್‌ಮಾತ್ರವನ್ನು ಗ್ರಹಿಸುತ್ತೇವೆ ಎಂದರೆ ಆಗ ಚಿನ್ ಮಾತ್ರಕ್ಕೆ ಅನುತ್ಪತ್ತಿಯನ್ನು ಹೇಳಲು ಒಂದು ಅಧಿಕರಣ ಸಾಕು. ಎರಡೆರಡು ಅಧಿಕರಣಗಳ ಆವಶ್ಯಕತೆ ಇಲ್ಲ. (ಈ ವಿಕಲ್ಪದಲ್ಲಿ ಪುನರುಕ್ತಿ ಎಂಬ ದೋಷ).

**केचित्तु असम्भवोऽनुत्पत्तिः सत एव ब्रह्मण एव । अन्यत्तु महदादिकमुत्पद्यत इत्येवं महदादेरुत्पत्त्यर्थमिदं सूत्रमित्याहुः । तन्न ।**

ರಾಮಾನುಜಾಚಾರ್ಯರು ಹೀಗೆ ಅರ್ಥ ಹೇಳುತ್ತಾರೆ. 'ಅಸಂಭವ' ಶಬ್ದಕ್ಕೆ ಅನುತ್ಪತ್ತಿ ಎಂದರ್ಥ. 'ಸತಃ ಏವ' ಎಂಬುದಕ್ಕೆ ಬ್ರಹ್ಮನಿಗೆ ಮಾತ್ರ ಎಂದರ್ಥ. ಅಂದರೆ ಬ್ರಹ್ಮನಿಗೆ ಮಾತ್ರ ಉತ್ಪತ್ತಿ ಅಸಾಧ್ಯ. ಉಳಿದ ಮಹತ್ತತ್ವಾದಿ ಎಲ್ಲಕ್ಕೂ ಉತ್ಪತ್ತಿ ಇದೆ ಎಂದು. ಹೀಗೆ ಬ್ರಹ್ಮನಿಗಿಂತ ಬೇರೆಯಾದ ಮಹದಾದಿ ಎಲ್ಲಕ್ಕೂ ಉತ್ಪತ್ತಿ ಇದೆ ಎಂದು ಹೇಳಲು ಈ ಸೂತ್ರ ಹೊರಟಿದೆ. ಇದು ತಪ್ಪು.

**अवक्तव्योक्तेरवश्यवक्तव्यानुक्तेश्च ।**

ಹೇಳಬಾರದನ್ನು ಹೇಳಿ ಹೇಳಬೇಕಾದ್ದನ್ನು ಹೇಳದಂತೆ ಆಗುವುದರಿಂದ.

**वियदधिकरणोक्तैरेकविज्ञानेन सर्वविज्ञानादिन्यायैः सिद्धा हि महदादेरुत्पत्तिः पृथगवक्तव्या । अवश्यवक्तव्या च सतोऽनुत्पत्तिः ''सदजायत'' इत्यादिश्रुत्यविरोधाय**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् असम्भवाधिकरणं सम्पूर्णम् ।।३।।**

ವಿಯದಧಿಕರಣದಲ್ಲಿ ಹೇಳಿರುವ 'ಏಕವಿಜ್ಞಾನೇನ ಸರ್ವವಿಜ್ಞಾನ' ಎಂಬುದೇ ಮೊದಲಾದ ನ್ಯಾಯಗಳಿಂದ ಮಹದಾದಿಗಳಿಗೆ ಉತ್ಪತ್ತಿ ಸಿದ್ಧವಾಗಿದೆ. ಹಾಗಾಗಿ ಅದನ್ನು ಇಲ್ಲಿ ಪುನಃ ಹೇಳಬೇಕಾಗಿಲ್ಲ. 'ಸತ್' ಎಂಬುದಕ್ಕೆ ಅನುತ್ಪತ್ತಿಯನ್ನು ಅವಶ್ಯವಾಗಿ ಹೇಳಲೇಬೇಕು. ಹಾಗೆ ಅನುತ್ಪತ್ತಿಯನ್ನು ಹೇಳದೇ ಹೋದರೆ 'ಅಸತಃ ಸದಜಾಯತ' ಎಂಬ ಶ್ರುತಿಯ ವಿರೋಧ ಬರುತ್ತದೆ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಅಸಂಭವಾಧಿಕರಣವು ಸಂಪೂರ್ಣವಾಯಿತು

**प्रकाशः –**

**अन्ये त्विति ।।** ''सदेकस्वभावस्योत्पत्त्यसम्भवः । कुतः । अनुपपत्तेः'' इति सूत्रार्थो भामत्यां व्यक्तः । तत्र सतोऽनुपपत्तेरित्यंशार्थो भाष्य उपपादितः । तमनुवदति ।। **सन्मात्रं हीति ।।**

ಭಾಮತೀ ಗ್ರಂಥದಲ್ಲಿ ಸದೇಕ(ಸನ್ ಮಾತ್ರ) ಸ್ವಭಾವನಾದ ಬ್ರಹ್ಮನಿಗೆ ಉತ್ಪತ್ತಿ ಅಸಂಭವ ಕೂಡುವುದಿಲ್ಲವಾದ್ದರಿಂದ ಎಂದು ಸೂತ್ರಕ್ಕೆ ಅರ್ಥ ಬರೆದಿದ್ದಾರೆ. ಅದು ಸ್ಪಷ್ಟವಾಗಿದೆ. ಸೂತ್ರದಲ್ಲಿರುವ 'ಸತೋಽನುಪಪತ್ತೇಃ' ಎಂಬ ಅಂಶದ ಅರ್ಥವು ಶಾಂಕರಭಾಷ್ಯದಲ್ಲಿ ವಿವರಿಸಲ್ಪಟ್ಟಿದೆ. ಅದನ್ನು ಅನುವಾದ ಮಾಡುತ್ತಿದ್ದಾರೆ 'ಸನ್ಮಾತ್ರಂ' ಎಂಬುದಾಗಿ.

**प्रकाशः – पादसङ्गताया इति ।।** श्रुतिविप्रतिषेधशङ्काया एव पादसङ्गतत्वेन युक्तिविरोधशङ्काया असङ्गतत्वादित्यर्थः ।

ಶ್ರುತಿಯ ವಿರೋಧವನ್ನು ಪ್ರಶ್ನೆ ಮಾಡುವುದೇ ಈ ಪಾದಕ್ಕೆ ಸಂಗತವಾದ ವಿಷಯ. ಅದನ್ನು ಬಿಟ್ಟು ನೀವು ಯುಕ್ತಿವಿರೋಧವನ್ನು ಶಂಕಾ ಮಾಡಿರುವುದರಿಂದ ನಿಮ್ಮ ಪ್ರಕಾರ ಪಾದಸಂಗತಿಯೂ ಬರುವುದಿಲ್ಲ ಎಂದರ್ಥ.

**प्रकाशः – सन्मात्रमित्यस्य किं व्यावहारिक प्रातिभासिकरूप सद्विशेषानुगत-सन्मात्रमित्यर्थ उत पारमार्थिक सद्विशेषायावन्तस्तावदनुगत परमार्थसन्मात्रं वेत्यर्थ इति विकल्पौ हृदि कृत्वाऽऽद्य आह – परमार्थसत इति ।।**

ಬ್ರಹ್ಮ 'ಸನ್‌ಮಾತ್ರ' ಎಂದರೆ ಏನು ಅಭಿಪ್ರಾಯ. ವ್ಯಾವಹಾರಿಕ, ಪ್ರಾತಿಭಾಸಿಕರೂಪವಾದ ಸದ್ವಿಶೇಷಗಳಲ್ಲಿ ಅನುಗತವಾದ ಸನ್‌ಮಾತ್ರ ಎಂದರ್ಥವೋ ? ಅಥವಾ ಎಷ್ಟು ಪಾರಮಾರ್ಥಿಕ ಸದ್ವಿಶೇಷಗಳು ಇವೆಯೋ ಅವುಗಳಲ್ಲಿ ಅನುಗತವಾದ ಪರಮಾರ್ಥಸನ್‌ಮಾತ್ರ ಎಂದರ್ಥವೋ ? ಎಂಬುದಾಗಿ ಎರಡು ವಿಕಲ್ಪಗಳನ್ನು ಮಾಡಿಕೊಂಡು ಮೊದಲನೆಯದನ್ನು ಹೇಳುತ್ತಿದ್ದಾರೆ 'ಪರಮಾರ್ಥಸತಃ' ಎಂಬುದಾಗಿ.

**प्रकाशः – द्वितीय आह – परमार्थसतीति ।। तथा च सन्मात्रमित्यस्य परमार्थसन्मात्रमित्यर्थो न युक्त इति भावः ।**

ಎರಡನೆಯ ವಿಕಲ್ಪವನ್ನು ಕುರಿತು ಹೇಳುತ್ತಿದ್ದಾರೆ 'ಪರಮಾರ್ಥಸತಿ' ಎಂಬುದಾಗಿ. ಹಾಗಾಗಿ (ಎರಡನೇ ವಿಕಲ್ಪ ಕೂಡುವುದಿಲ್ಲವಾದ್ದರಿಂದ) 'ಸನ್‌ಮಾತ್ರ' ಎಂದರೆ ಪರಮಾರ್ಥಸನ್‌ಮಾತ್ರ ಎಂಬ ಅರ್ಥ ಹೊಂದುವುದಿಲ್ಲ ಎಂದು ಅಭಿಪ್ರಾಯ. (ಪರಮಾರ್ಥಸತ್ ಒಂದೇ ಆದ್ದರಿಂದ ಅದರಲ್ಲಿ ಸಾಮಾನ್ಯವಿಶೇಷ ಎಂಬುದೇ ಕೂಡುವುದಿಲ್ಲ)

**प्रकाशः – यदपि तस्य न तावत्सन्मात्रादुत्पत्तिरिति तदपि नेति भावेनाह – सद्व्यक्तीनां चेति ।।**

ಹಿಂದೆ, ಬ್ರಹ್ಮನು ಸನ್‌ಮಾತ್ರನಾದ್ದರಿಂದ ಸನ್‌ಮಾತ್ರದಿಂದ ಅವನಿಗೆ ಉತ್ಪತ್ತಿ ಕೂಡುವುದಿಲ್ಲ, ಏಕೆಂದರೆ ಕಾರ್ಯಕಾರಣಗಳಿಗೆ ಅತಿಶಯ ಇರಬೇಕು. ಅದು ಪ್ರಕೃತ ಇಲ್ಲವಾಗುವುದರಿಂದ ಎಂದು ಹೇಳಿದ್ದರು. ಅದನ್ನು ನಿರಾಕರಿಸುತ್ತಿದ್ದಾರೆ 'ಸದ್ವ್ಯಕ್ತೀನಾಂ' ಎಂಬುದಾಗಿ.

**प्रकाशः – यथा दण्डघटतन्तुपटादिद्रव्यव्यक्तीनां द्रव्यत्वाविशेषेऽपि दण्डादिघटादिजनने शक्तं घटादिकं तु दण्डादिनिष्ठशक्तिविषय इति शक्तशक्यत्वरूपविशेषेण पूर्वापरीभावलक्षणविशेषेण वा कार्यकारणभाववद्भवति तथा सत्त्वाविशेषेऽपि शक्तशक्यत्वादिविशेषेणैव तथाभावोपपत्तेरित्यर्थः ।।**

ಹೀಗೆ ದಂಡ, ಘಟ ಇತ್ಯಾದಿ ದ್ರವ್ಯಗಳಲ್ಲಿ ದ್ರವ್ಯತ್ವ ಎಂಬುದು ಸಮಾನವಾಗಿದ್ದರೂ ದಂಡಾದಿಗಳು ಘಟಾದಿಗಳ ಉತ್ಪತ್ತಿಯಲ್ಲಿ ಶಕ್ತ(ಕಾರಣ)ವಾಗಿವೆ. ಹಾಗೇ ಘಟಾದಿಗಳು ದಂಡಾದಿಗಳಲ್ಲಿರುವ ಘಟಜನಕಶಕ್ತಿಗೆ ವಿಷಯವಾಗಿವೆ. ಹೀಗೆ ಒಂದು ಶಕ್ತ ಇನ್ನೊಂದು ಶಕ್ಯ ಎಂಬ ವಿಶೇಷದಿಂದ, ಅಥವಾ ದಂಡಾದಿಗಳು ಪೂರ್ವಕ್ಷಣದಲ್ಲಿರುತ್ತವೆ, ಘಟಾದಿಗಳು ಉತ್ತರಕ್ಷಣದಲ್ಲಿರುತ್ತವೆ ಎಂಬ ವಿಶೇಷದಿಂದ ಹೇಗೆ ಅವುಗಳಿಗೆ ಕಾರ್ಯಕಾರಣಭಾವ ಕೂಡುತ್ತದೋ ಹಾಗೇ ಬ್ರಹ್ಮನಲ್ಲಿಯೂ ಅವನಿಗೆ ಕಾರಣವಾದದ್ದರಲ್ಲಿಯೂ ಸತ್ವ(ಸನ್ ಮಾತ್ರ) ಎಂಬುದು ಸಮಾನವಾಗಿದ್ದರೂ ಕಾರ್ಯಕಾರಣಭಾವ ಕೂಡಿಸಬಹುದು. ಆದ್ದರಿಂದ

ಕಾರ್ಯಕಾರಣಗಳಲ್ಲಿ ಅತಿಶಯವಿರಬೇಕೆಂಬ ಕಾರಣದಿಂದ ಬ್ರಹ್ಮನು ಕಾರ್ಯವಾಗಲು ಸಾಧ್ಯವಿಲ್ಲ ಎಂದು ಹೇಳಿದ್ದು ಸರಿಯಲ್ಲ ಎಂದು ಅಭಿಪ್ರಾಯ.

**प्रकाशः – अधिष्ठानार्थमिति** ।। जगदारोपस्य निरधिष्ठानत्वानुपपत्त्या ब्रह्मणोऽधिष्ठानस्य सत्त्वमवश्यमपेक्षितमिति तेन सत्त्वेन हेतुनाऽऽरोपितत्वं ब्रह्मणो नेत्युच्यतेऽसम्भवस्त्विति सूत्र इत्यर्थः ।

ಜಗತ್ತು ಆರೋಪಿತ. ಆರೋಪಿಸಲು ಅಧಿಷ್ಠಾನ ಇರಲೇಬೇಕು. (ರಜತಾರೋಪಕ್ಕೆ ಶುಕ್ತಿಯಂತೆ) ಜಗತ್ತಿನ ಆರೋಪಕ್ಕೆ ಅಧಿಷ್ಠಾನ ಬ್ರಹ್ಮನೇ. ಅಧಿಷ್ಠಾನ ಸತ್ಯವೇ ಆಗಬೇಕು. ಹಾಗಾಗಿ ಬ್ರಹ್ಮನು ಅಧಿಷ್ಠಾನನಾದ್ದರಿಂದ ಸತ್ವ ಎಂಬ ಹೇತುವಿನಿಂದ ಅವನು ಆರೋಪಿತನಲ್ಲ ಎಂಬುದು ಈ ಸೂತ್ರದ ಅರ್ಥ ಎಂದು ನಾವು ಹೇಳುತ್ತೇವೆ (ಅದ್ವೈತಿಗಳು).

**प्रकाशः –** ''विवर्तता हि कार्यत'' इति कल्पतरूक्तमाह **– आरोपितता हीति** ।।

ಬ್ರಹ್ಮನು ಕಾರ್ಯ ಅಲ್ಲ ಎಂದರೆ ಬ್ರಹ್ಮನು ಆರೋಪಿತ ಅಲ್ಲ ಎಂದರ್ಥ. ಏಕೆಂದರೆ ಆರೋಪಿತತ್ವವೇ ಕಾರ್ಯತ್ವ. ಹೀಗೆಂದು 'ಕಲ್ಪತರು' ಎಂಬ ಗ್ರಂಥದಲ್ಲಿ ಹೇಳಿದೆ.

**प्रकाशः – सौत्रासम्भवपदेति** ।। यद्यपि भामत्यां ''उत्पत्त्यसम्भव'' इत्येवार्थ उक्तः । न त्वसम्भवपदस्यैवानुत्पत्त्यर्थकत्वम् । येनासम्भवपदस्यानारोपार्थत्वमस्वरसं स्यात् । तथा चारोपासम्भव इत्येवार्थोऽभिमतः ।

(ಸೂತ್ರದಲ್ಲಿರುವ 'ಅಸಂಭವ' ಎಂಬ ಪದಕ್ಕೆ ಅದ್ವೈತಿಗಳು 'ಅನುತ್ಪತ್ತಿ' ಎಂಬ ಅರ್ಥ ಹೇಳಿರುವುದು ಸರಿಯಲ್ಲ ಎಂದು ಮೂಲದಲ್ಲಿದೆ. ಅದರ ಮೇಲೆ ಪ್ರಶ್ನೆ) ಭಾಮತಿಯಲ್ಲಿ 'ಅಸಂಭವ' ಪದಕ್ಕೆ ಉತ್ಪತ್ತಿಯು ಅಸಂಭವ ಎಂದೇ ಅರ್ಥ ಹೇಳಿದ್ದಾರೆ ಹೊರತು ಅಸಂಭವ ಪದಕ್ಕೆ ಅನುತ್ಪತ್ತಿ ಎಂದು ಅರ್ಥ ಹೇಳಿಲ್ಲ. ಹಾಗೆ ಹೇಳಿದ್ದರೆ ನೀವು ಹೇಳಿರುವ 'ಅಸ್ವರಸ' ಎಂಬ ದೋಷ ಕೂಡುತ್ತಿತ್ತು. ನಮಗೆ 'ಅಸಂಭವ' ಎಂದರೆ ಆರೋಪಾಸಂಭವ ಎಂಬರ್ಥವೇ ಇಷ್ಟ ಹೊರತು 'ಅಸಂಭವ' ಪದಕ್ಕೆ ಅನಾರೋಪಿತ ಎಂಬರ್ಥವಲ್ಲ.

**प्रकाशः** – तथापि भाष्ये ''सत उत्पत्तिर्नाशङ्कितव्य'' इत्युक्तयाऽसम्भवपदस्यैवानुत्पत्तिरर्थः परभाष्येऽभिमत इति तद्रीत्या वा उत्पत्त्यसम्भव इत्यर्थवर्णनापेक्षया श्रुतासम्भवपदस्यैवानुत्पत्त्यर्थत्वमुचितमित्युपेत्य वाऽऽरोपार्थत्वे तत्पदास्वारस्यमिदमुक्तमिति ध्येयम् ।

ಉತ್ತರ - ಶಾಂಕರಭಾಷ್ಯದಲ್ಲಿ ಸತ್ ಆದದ್ದಕ್ಕೆ ಉತ್ಪತ್ತಿಯನ್ನು ಶಂಕಿಸಬಾರದು ಎಂದು ಹೇಳುವುದರ ಮೂಲಕ ಸೂತ್ರದಲ್ಲಿರುವ 'ಅಸಂಭವ' ಪದಕ್ಕೆ ಅನುತ್ಪತ್ತಿ ಎಂಬ ಅರ್ಥವನ್ನು ಹೇಳುತ್ತಿದ್ದಾರೆ. ಅವರ ಪ್ರಕಾರ ನಾವು ಅಸ್ವರಸ ಎಂಬ ದೋಷ ಹೇಳಿದ್ದು ಅಥವಾ 'ಅಸಂಭವ' ಎಂಬುದಕ್ಕೆ 'ಉತ್ಪತ್ತಿಯು ಅಸಂಭವ' ಎಂದು ಅಧ್ಯಾಹಾರ ಮಾಡಿ ಅರ್ಥ ಹೇಳುವುದಕ್ಕಿಂತ ಸೂತ್ರದಲ್ಲಿ ಸಾಕ್ಷಾತ್ ಇರುವ 'ಅಸಂಭವ' ಪದಕ್ಕೇ 'ಅನುತ್ಪತ್ತಿ' ಎಂಬ ಅರ್ಥ ಹೇಳಬಹುದು ಎಂಬುದಾಗಿ ತಿಳಿದು ಮೂಲದಲ್ಲಿ ಸೌತ್ರ 'ಅಸಂಭವ' ಪದಕ್ಕೆ ಅಸ್ವಾರಸ್ಯ ದೋಷ ಎಂದು ಹೇಳಿದ್ದಾರೆ.

ಅಸಂಭವಾಧಿಕರಣ (೨-೩-೩)

**प्रकाशः** – यत्तु कल्पतरावेतदेव पौनरुक्तयमाशङ्क्य ''तत्र हि ब्रह्मनित्यत्वमुपेत्यैव जीवस्य तदुत्पत्तिराशङ्किष्यते'' इत्यादिना समाहितं तदनूद्य निराह – **न चात्रेति** ।।

'ಕಲ್ಪತರು' ಎಂಬ ಗ್ರಂಥದಲ್ಲಿ ಇಲ್ಲಿ ವ್ಯಾಸರಾಜರು ಮಾಡಿರುವ ಪುನರುಕ್ತಿ ಎಂಬ ಪ್ರಶ್ನೆಯನ್ನೇ ಮಾಡಿಕೊಂಡು ಅದಕ್ಕೆ ಸಮಾಧಾನವನ್ನು ಹೇಳಿದ್ದಾರೆ. 'ನಾತ್ಮಾಶ್ರುತೇಃ' ಎಂಬಲ್ಲಿ ಬ್ರಹ್ಮನು ನಿತ್ಯ ಎಂದು ಒಪ್ಪಿಕೊಂಡು ಜೀವನು ಬ್ರಹ್ಮನಿಂದ ಉತ್ಪತ್ತಿಯನ್ನು ಹೊಂದುವನು ಎಂದು ಪ್ರಶ್ನೆ ಮಾಡಿಕೊಳ್ಳಲಾಗಿದೆ. ಇಲ್ಲಿಯಾದರೋ ಬ್ರಹ್ಮನೇ ಉತ್ಪತ್ತಿಯನ್ನು ಹೊಂದುವನು ಎಂದು ಪ್ರಶ್ನೆ ಮಾಡಿಕೊಳ್ಳಲಾಗಿದೆ. ಹಾಗಾಗಿ ಈ ಎರಡು ಅಧಿಕರಣಗಳಿಗೆ ಭೇದವಿದೆ ಎಂದು. ಇದನ್ನು ಅನುವಾದ ಮಾಡಿಕೊಂಡು ನಿರಾಕರಿಸುತ್ತಿದ್ದಾರೆ 'ನ ಚಾತ್ರೇ' ಎಂಬುದಾಗಿ.

**प्रकाशः – अनुत्पत्त्युक्तिरिति** ।। तत एव नित्यत्वोक्तिश्चेत्यपि ध्येयम् ।

ಅನುತ್ಪತ್ತಿಯನ್ನು ಹೇಳುವುದರಿಂದಲೇ ನಿತ್ಯತ್ವವನ್ನು ಹೇಳಿದಂತಾಯಿತು ಎಂದು ತಿಳಿಯಬೇಕು.

**प्रकाशः** – किं ब्रह्मजीवशब्दाभ्यां विशिष्टमभिमतमुत चिन्मात्रमिति कल्पौ हृदि कृत्वा क्रमेण प्रत्याह – **विशिष्टेति** ।।

ಇಲ್ಲಿ 'ಬ್ರಹ್ಮ', 'ಜೀವ' ಶಬ್ದಗಳಿಂದ ವಿಶಿಷ್ಟಬ್ರಹ್ಮ(ಶಬಲ) ವಿಶಿಷ್ಟಜೀವ ಎಂದು ಅರ್ಥ ಹೇಳುತ್ತೀರೋ ಅಥವಾ ಎರಡೂ ಶಬ್ದಗಳು ಚಿತ್‌ಮಾತ್ರಪರ ಎಂದು ಹೇಳುತ್ತೀರೋ ? ಎಂದು ವಿಕಲ್ಪ ಮಾಡಿಕೊಂಡು ಕ್ರಮವಾಗಿ ನಿರಾಕರಿಸುತ್ತಿದ್ದಾರೆ 'ವಿಶಿಷ್ಟ' ಎಂಬುದಾಗಿ.

**प्रकाशः – आरोपितत्वादिति** ।। आरोपस्यैवोत्पत्तिपदार्थत्वोक्तेरनुत्पत्त्युक्तिरयुक्तेत्यर्थः ।

ನಿಮ್ಮಲ್ಲಿ 'ಆರೋಪ' ಶಬ್ದಕ್ಕೆ ಉತ್ಪತ್ತಿ ಎಂಬ ಅರ್ಥ ಇರುವುದರಿಂದ ಬ್ರಹ್ಮ ಹಾಗೂ ಜೀವನಿಗೆ ಅನುತ್ಪತ್ತಿಯನ್ನು ಹೇಳುವುದು ಸರಿಯಲ್ಲ ಎಂದರ್ಥ.

**प्रकाशः** – नित्यत्वोपगमश्चायुक्त इत्याह – **आरोपितस्य चेति** ।।

ಹಾಗೇ ಬ್ರಹ್ಮ ಹಾಗೂ ಜೀವರಿಗೆ ನಿತ್ಯತ್ವವನ್ನು ಒಪ್ಪಿರುವುದೂ ತಪ್ಪು ಎಂದು ಹೇಳುತ್ತಿದ್ದಾರೆ 'ಆರೋಪಿತಸ್ಯ' ಎಂಬುದರಿಂದ.

**प्रकाशः** – एकेनैव अधिकरणेनेत्यर्थः । ''अन्ये त्वेवं व्याकुर्वत'' इत्यादिसुधोक्तं विवरितुमाह – **केचित्त्विति** ।। तन्मते हि नेदमधिकरणान्तरम् । अपि तु ''एतेन'' इति सूत्रवदिदमपि पूर्वशेष एव ।

ಮೂಲದಲ್ಲಿರುವ 'ಏಕೇನ' ಎಂಬ ಶಬ್ದಕ್ಕೆ ಒಂದೇ ಅಧಿಕರಣದಿಂದ ಎಂದರ್ಥ. ಸುಧಾದಲ್ಲಿ 'ಅನ್ಯೇ ತು ಏವಂ ವ್ಯಾಕುರ್ವತೇ' ಎಂಬುದಾಗಿ ಏನು ಹೇಳಿದ್ದಾರೋ ಅದನ್ನೇ ವಿವರಿಸುತ್ತಾ ಹೇಳುತ್ತಿದ್ದಾರೆ 'ಕೇಚಿತ್' ಎಂಬುದಾಗಿ. ರಾಮಾನುಜರ ಮತದಲ್ಲಿ ಈ ಸೂತ್ರವು ಪ್ರತ್ಯೇಕ ಅಧಿಕರಣವೇ ಅಲ್ಲ. ಹಿಂದೆ 'ಏತೇನ

ಮಾತರಿಶ್ವಾ ವ್ಯಾಖ್ಯಾತಾಃ' ಎಂಬುದು ಹೇಗೆ ಆಕಾಶಾಧಿಕರಣದ ಭಾಗವಾಗಿತ್ತೋ ಅದೇ ರೀತಿ ಈ 'ಅಸಂಭವಸ್ತು ಸತಃ' ಎಂಬುದೂ ಕೂಡ ಅದೇ ಅಧಿಕರಣದ ಪರಿಶೇಷ.

**प्रकाशः** – तत्र ''असम्भवस्तु सत'' इत्येतदंशार्थमनुवदति ।। **असम्भवोऽनुत्पत्तिरिति** ।। तुशब्दोऽवधारणार्थः । असम्भवः अनुत्पत्तिः । सतः ब्रह्मण एव'' इति सद्भाष्योक्तेरिति भावः ।

ಅವರ ಪ್ರಕಾರ 'ಅಸಂಭವಸ್ತು ಸತಃ' ಎಂಬ ಈ ಸೂತ್ರದ ಭಾಗವನ್ನು ಅನುವಾದ ಮಾಡುತ್ತಿದ್ದಾರೆ 'ಅಸಂಭವ' ಎಂಬುದಾಗಿ. ಅಸಂಭವ ಎಂದರೆ ಅನುತ್ಪತ್ತಿ ಎಂದರ್ಥ. ಸತಃ ಎಂದರೆ ಬ್ರಹ್ಮನಿಗೆ ಎಂದರ್ಥ. ಹೀಗೆ ಅವರ ಭಾಷ್ಯದಲ್ಲಿ ಹೇಳಲಾಗಿದೆ.

**प्रकाशः** – अनुपपत्तेरित्यस्यैकविज्ञानेन सर्वविज्ञानानुपपत्तेरित्यर्थकस्य एवकारव्यावर्त्यतया प्राप्तेन महदादिकमुत्पद्यत इति साध्येनान्वयः ।

'ಅನುಪಪತ್ತೇಃ' ಎಂಬುದಕ್ಕೆ 'ಒಂದರ ಜ್ಞಾನದಿಂದ ಸರ್ವಜ್ಞಾನ' ಎಂಬ ಪ್ರತಿಜ್ಞೆ ಕೂಡುವುದಿಲ್ಲವಾದ್ದರಿಂದ ಎಂದರ್ಥ. ಈ ಅನುಪಪತ್ತೇಃ ಎಂಬ ಪದಕ್ಕೆ 'ಏವ' ಎಂಬ ಅರ್ಥವನ್ನು ಕೊಡುವ 'ತು' ಎಂಬ ಶಬ್ದದಿಂದ ವ್ಯಾವರ್ತ್ಯ(ಹೊರಹಾಕಲ್ಪಡುವ)ವಾದ ಮಹದಾದಿಗಳು ಉತ್ಪತ್ತಿಯನ್ನು ಹೊಂದುತ್ತವೆ ಎಂಬ ಸಾಧ್ಯದ ಜೊತೆಗೆ ಅನ್ವಯ. (ಅಂದರೆ ಮಹದಾದಿಗಳು ಉತ್ಪತ್ತಿವುಳ್ಳವುಗಳು, ಏಕವಿಜ್ಞಾನದಿಂದ ಸರ್ವವಿಜ್ಞಾನ ಎಂಬ ಪ್ರತಿಜ್ಞೆ ಕೂಡುವುದಿಲ್ಲವಾದ್ದರಿಂದ)

**प्रकाशः** – ब्रह्मणोऽनुत्पत्तेरदृश्यत्वाधिकरणे ''नित्यं विभुं सर्वगतं सुसूक्ष्मं स बाह्याभ्यन्तरो ह्यज'' इति नित्यत्वाजत्वयोरुक्त्या सिद्धत्वेनावक्तव्यत्वाद्वियन्मातरिश्वनोरुत्पत्तेरुक्तत्वात् परिशेषान्महदादेरुत्पत्त्यर्थमिदं सूत्रमित्याहुरित्यर्थः ।।

ಬ್ರಹ್ಮನಿಗೆ ಅನುತ್ಪತ್ತಿಯನ್ನು ಹೇಳಬೇಕಿಲ್ಲ, ಏಕೆಂದರೆ ಬ್ರಹ್ಮನಿಗೆ ಉತ್ಪತ್ತಿ ಇಲ್ಲ ಎಂಬುದು ಅದೃಶ್ಯತ್ವಾಧಿಕರಣದಲ್ಲಿ ಹೇಳಿಯಾಗಿದೆ. ಹಾಗೆಯೇ ಬ್ರಹ್ಮನು ನಿತ್ಯ, ವಿಭು, ಸರ್ವಗತ, ಸುಸೂಕ್ಷ್ಮ, ಅಜ ಎಂಬುದಾಗಿ ನಿತ್ಯತ್ವ ಹಾಗೂ ಅಜ ಎಂದು ಹೇಳಿಯಾಗಿದೆ. ಹಾಗಾಗಿ ಇದು ಸಿದ್ಧ. ಸಿದ್ಧವಾದದ್ದನ್ನು ಹೇಳುವ ಆವಶ್ಯಕತೆ ಇಲ್ಲ. ಹಾಗೆಯೇ ಆಕಾಶ ಹಾಗೂ ಮಾತರಿಶ್ವ(ವಾಯು) ಇವುಗಳಿಗೆ ಉತ್ಪತ್ತಿ ಇದೆ ಎಂದೂ ಹೇಳಲಾಗಿದೆ. ಈಗ ಉಳಿದಿರುವುದು ಮಹದಾದಿ (ಮಹತತ್ವ ಮೊದಲಾದದು)ಗಳು. ಅವುಗಳಿಗೆ ಉತ್ಪತ್ತಿಯನ್ನು ಹೇಳುವುದಕ್ಕಾಗಿ ಈ ಸೂತ್ರ ಹೊರಟಿದೆ ಎಂದು ಹೇಳುತ್ತಾರೆ.

**प्रकाशः** – **पृथगवक्तव्येति** ।। प्रागुक्तस्योपरि मन्मते ''एतेन'' इत्यत्रेव ''ज्ञोत एव'' इत्यत्रेव च त्वन्मते विशेषशङ्कानुक्तेरिति भावः । अवश्यवक्तव्यत्वे बीजमाह – **सदजायतेति** ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते**

**चन्द्रिकाप्रकाशे असम्भवाधिकरणं सम्पूर्णम् ।।३।।**

ಅಸಂಭವಾಧಿಕರಣ (೨-೩-೩)

ಮಹದಾದಿಗಳಿಗೆ ಬೇರೆಯಾಗಿ ಉತ್ಪತ್ತಿಯನ್ನು ಹೇಳಬೇಕಿಲ್ಲ. ಏಕೆಂದರೆ ವಿಶೇಷಶಂಕಾ ಇಲ್ಲವಾದ್ದರಿಂದ. ನಮ್ಮ ಮತದಲ್ಲಿ 'ಏತೇನ ಮಾತರಿಶ್ವಾ' ಎಂಬಲ್ಲಿ ಮುಖ್ಯಪ್ರಾಣನಿಗೆ ಉತ್ಪತ್ತಿಯನ್ನು ಹೇಳಲು ಒಂದು ಬೇರೆ ಅಧಿಕರಣ ಎಂದು ಹೇಳುವಾಗ ವಿಶೇಷಶಂಕಾ ಮಾಡಿಕೊಂಡಿದ್ದೇವೆ. ಹಾಗೆಯೇ, 'ಜ್ಯೋತ ಏವ' ಎಂಬಲ್ಲಿಯೂ ಕೂಡ. ಆ ರೀತಿ ನೀವು ಮಹದಾದಿಗಳಿಗೆ ಉತ್ಪತ್ತಿಯನ್ನು ಹೇಳಲು ಪ್ರತ್ಯೇಕ ಸೂತ್ರ ಎಂದು ಹೇಳುವವರು ವಿಶೇಷಶಂಕಾ ಏನೂ ಹೇಳಿಲ್ಲ ಎಂದರ್ಥ. ಬ್ರಹ್ಮನಿಗೆ ಉತ್ಪತ್ತಿ ಇಲ್ಲ ಎಂದು ಅವಶ್ಯಕವಾಗಿ ಹೇಳಬೇಕು. ಅದಕ್ಕೆ ಕಾರಣ 'ಅಸತಃ ಸದಜಾಯತ' ಎಂಬ ಶ್ರುತಿಯ ವಿರೋಧ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಅಸಂಭವಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

# ತೇಜೋಽಧಿಕರಣ

(೨-೩-೪)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

***

॥ ಶ್ರೀಗುರುಭ್ಯೋ ನಮಃ ॥

# ತೇಜೋಽಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् — तेजोऽतस्तथा ह्याह ।।**

ತೇಜಸ್ಸೂ ಕೂಡ ಆಕಾಶಾದಿಗಳಂತೆ ಪರಮಾತ್ಮನಿಂದಲೇ ಹುಟ್ಟಿದೆ. 'ತತ್ತೇಜೋಽಸೃಜತ' ಎಂಬ ಶ್ರುತಿಯು ಇದನ್ನೇ ಹೇಳುತ್ತಿದೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका — तेजोऽतस्तथा ह्याह ।। तेजस्तेजोभूतम् । अतः ब्रह्मण एवोत्पद्यते न वायोः । कुतः? हि यस्मात् । 'तत्तेजः' इति श्रुतिः तथा उक्तप्रकारेणाऽह वक्ति तस्मादित्यर्थः ।।१।।**

ತೇಜಃ = ತೇಜಸ್ಸೆಂಬ ಭೂತಪದಾರ್ಥವು, ಅತಃ = ಬ್ರಹ್ಮನಿಂದಲೇ ಉತ್ಪತ್ತಿಯನ್ನು ಹೊಂದುತ್ತದೆ. ವಾಯುವಿನಿಂದಲ್ಲ. ಹಿ = ಏಕೆಂದರೆ, 'ತತ್ತೇಜಃ' ಎಂಬ ಶ್ರುತಿಯು, ತಥಾ = ಹಿಂದೆ ಹೇಳಿದಂತೆ, ಆಹ = ಹೇಳಿದೆ

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ತೇಜೋಧಿಕರಣವು ಮುಗಿಯಿತು.

ಪರಿಪೂರ್ಣಚಂದ್ರಿಕಾ

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – ।। तेजोऽतस्तथा ह्याह ।।१।।**

**'वायोरग्निः' (तै.२.१.) इत्यादेर्नान्यत उत्पत्तिर्ग्राह्या । अत एव परात् तदपि जायते । 'तत्तेजोऽसृजत' इति ह्याह ।**

ಅನುವಾದ - 'ವಾಯೋರಗ್ನಿಃ' ಎಂಬ ಶ್ರುತಿಯಿಂದ ಅಗ್ನಿಗೆ ವಾಯುವಿನಿಂದ ಉತ್ಪತ್ತಿ ಎಂದು ತಿಳಿಯುತ್ತದೆ. ಆದರೆ ಇದು ತಪ್ಪು. ಏಕೆಂದರೆ ಅಗ್ನಿಯು ಪರಮಾತ್ಮನಿಂದಲೇ ಹುಟ್ಟುತ್ತದೆ. ಹೀಗೆ ಶ್ರುತಿಯೇ ಹೇಳುತ್ತಿದೆ. 'ತತ್ತೇಜೋಽಸೃಜತ' ಪರಮಾತ್ಮನಿಂದ ತೇಜಸ್ಸು ಹುಟ್ಟಿತು ಎಂದು.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ತೇಜಸ್ಸಿನ ಜನ್ಮವಿಷಯದಲ್ಲಿರುವ ಶ್ರುತಿ ವಿರೋಧವನ್ನು ಪರಿಹಾರ ಮಾಡುತ್ತಿದ್ದಾರೆ. ವಾಯೋರಗ್ನಿಃ ಇತ್ಯಾದೇಃ = ವಾಯುವಿನಿಂದ ಅಗ್ನಿ ಹುಟ್ಟಿತು ಇವೇ ಮೊದಲಾದ ಶ್ರುತಿಗೆ, ಅನ್ಯತಃ = ವಾಯುವಿನಿಂದ, ಉತ್ಪತ್ತಿಃ = ಅಗ್ನಿಯ ಉತ್ಪತ್ತಿಯನ್ನು, ನಗ್ರಾಹ್ಯಾ = ಸರ್ವಥಾ ತಿಳಿಯಬಾರದು. ಅತಃ ಏವ ಪರಾತ್ = ಪರಮಾತ್ಮನ ದೆಸೆಯಿಂದಲೇ, ತತ್ = ಅಗ್ನಿಯು, ಜಾಯತೇ = ಹುಟ್ಟುತ್ತದೆ. ತತ್ = ಪರಮಾತ್ಮನಿಂದ, ತೇಜಃ = ತೇಜಸ್ಸು, ಅಸೃಜತ್ = ಹುಟ್ಟಿತು. ಇತಿ = ಹೀಗೆ, ಹ್ಯಾಹ = ಸೂತ್ರಕಾರರು ಹೇಳುತ್ತಿದ್ದಾರೆ.

**भाष्यम् – कारणत्वेनेत्युक्तेऽप्यमुख्यतयाऽन्येषामपि शब्दोक्तत्वात् पुनरुक्तिरुभयकारणत्वनिवृत्त्यर्थम् च ।।१।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये तेजोऽधिकरणम् ।। ४ ।।**

ಅನುವಾದ - 'ಕಾರಣತ್ವೇನ ಚಾಽಕಾಶಾದಿಷು' ಎಂಬ ಸೂತ್ರದಲ್ಲಿ 'ಆಕಾಶಾದ್‌ವಾಯುಃ' ಎಂಬ ಶ್ರುತಿಯಲ್ಲಿರುವ ಆಕಾಶಾದಿಶಬ್ದಗಳಿಂದ ಮಹಾವಿಷ್ಣುವೇ ಪ್ರತಿಪಾದ್ಯನೆಂದು ಹೇಳಲಾಗಿದೆ. ಆದರೂ ಕೂಡ ಅಮುಖ್ಯವೃತ್ತಿಯಿಂದ ಭೂತಾಕಾಶಾದಿಗಳೂ ಕೂಡ ಪ್ರತಿಪಾದ್ಯವಾಗುತ್ತವೆ. ವಾಯುವಿಗೆ ಪರಮಾತ್ಮನು ಕಾರಣ ಭೂತಾಕಾಶವೂ ಕಾರಣ ಎಂಬ ಭ್ರಾಂತಿ ಬರುತ್ತದೆ. ಇದರ ಪರಿಹಾರಕ್ಕಾಗಿ ಈ ಅಧಿಕರಣವು ಹೊರಟಿದೆ. ಪುನರುಕ್ತಿಯು ಬರುವುದಿಲ್ಲ.

ಪ್ರತಿಪದಾರ್ಥ -- ಕಾರಣತ್ವೇನ = ಕಾರಣತ್ವೇನ ಚಾಽಕಾಶಾದಿಷು ಎಂಬ ಸೂತ್ರದಲ್ಲಿ, ಇತ್ಯುಕ್ತೇಽಪಿ = ಪರಮಾತ್ಮನೇ ಮುಖ್ಯವಾಗಿ ಆಕಾಶಾದಿ ಶಬ್ದದಿಂದ ಪ್ರತಿಪಾದ್ಯನೆಂದು

ಹೇಳಿದರೂ, ಆಮುಖ್ಯತಯಾ = ಅಮುಖ್ಯವೃತ್ತಿಯಿಂದ, ಅನ್ಯೇಷಾಮಪಿ = ಭೂತಾಕಾಶ ಮೊದಲಾದವುಗಳು ಕೂಡ, ಶಬ್ದೋಕ್ತತ್ವಾತ್ = ಆಯಾ ಶಬ್ದದಿಂದ ಪ್ರತಿಪಾದ್ಯವಾಗುವ ಕಾರಣ, ಪುನರುಕ್ತಿಃ = ಪುನರುಕ್ತಿಯು ಬರುತ್ತದೆ. ಉಭಯಕಾರಣನಿವೃತ್ತ್ಯರ್ಥಮ್ = ಪರಮಾತ್ಮ ಹಾಗೂ ಭೂತಾಕಾಶ ಎರಡು ಕೂಡ ಪ್ರತಿಪಾದ್ಯವೆಂಬ ಭ್ರಮೆಯ ನಿವೃತ್ತಿಗಾಗಿ ಈ ಅಧಿಕರಣವು ಹೊರಟದ್ದು ಸಾರ್ಥಕವಾಗಿದೆ.

ಇಲ್ಲಿಗೆ ತೇಜೋಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**ತತ್ವಪ್ರಕಾಶಿಕಾ – एवं सर्वस्यापि ब्रह्मेतरस्योत्पत्तौ सिद्धायां वियदादीनां च परमात्मनो जन्मेत्यत्र विवादाभावेऽत्र ब्रह्मणि श्रुतिसमन्वयसिध्यर्थं तेचोजन्मविषयश्रुतिविरोधपरिहारादस्ति शास्त्रादिसङ्गतिः।**

ಹೀಗೆ ಬ್ರಹ್ಮನಿಗಿಂತ ಭಿನ್ನವಾದ ಸಕಲ ಪದಾರ್ಥಗಳೂ ಕೂಡ ಉತ್ಪನ್ನವಾಗುತ್ತವೆ ಎಂಬುದನ್ನು ಸಮರ್ಥಿಸಿದ್ದಾಯಿತು. ಈಗ ಆಕಾಶ ಮೊದಲಾದವುಗಳಿಗೆ ಪರಮಾತ್ಮನಿಂದಲೇ ಜನ್ಮವು ಇರುತ್ತದೆಂಬ ವಿಷಯದಲ್ಲಿ ವಿವಾದವಿಲ್ಲ. ಅದಕ್ಕಾಗಿ ಬ್ರಹ್ಮನಲ್ಲಿ ಶ್ರುತಿಸಮನ್ವಯವನ್ನು ಸಾಧನೆ ಮಾಡಬೇಕು. ಅದಕ್ಕೋಸ್ಕರ ತೇಜೋಜನ್ಮವಿಷಯಕವಾದ ಶ್ರುತಿವಿರೋಧವನ್ನು ಈ ಅಧಿಕರಣದಲ್ಲಿ ಪರಿಹಾರ ಮಾಡುತ್ತಿದ್ದಾರೆ. ಹಾಗಾಗಿ ಶಾಸ್ತ್ರಾದಿಸಂಗತಿಗಳು ಇರುತ್ತವೆ.

ವಿವರಣೆ - ಈ ಅಧ್ಯಾಯದ ಮೊದಲನೆಯ ಅಧಿಕರಣದಲ್ಲಿ ಉತ್ಪತ್ತಿಯೇ ಅಸಿದ್ಧವಾದಾಗ ಕಾರಣವಿಶೇಷ ಸಂಗತಿಯಿಂದ ಮೊದಲಿನ ಎರಡು ಅಧಿಕರಣಗಳಲ್ಲಿ ಸಕಲಕ್ಕೂ ಕೂಡ ಉತ್ಪತ್ತಿ ಇದೆ ಎಂದು ಸಾಧನೆ ಮಾಡಿದ್ದಾಯಿತು. ಬ್ರಹ್ಮನಿಗೂ ಕೂಡ ಉತ್ಪತ್ತಿ ಬರುತ್ತದಲ್ಲವೇ? ಎಂಬ ಆಶಂಕೆಯ ಪರಿಹಾರಕ್ಕಾಗಿ ಮೂರನೇ ಅಧಿಕರಣ ಹೊರಟಿತು. ಹೀಗೆ ಬ್ರಹ್ಮೇತರವಾದ ಸಕಲಕ್ಕೂ ಉತ್ಪತ್ತಿಯಿದೆ ಎಂದು ಸಿದ್ಧವಾದ ಮೇಲೆ ಈ ಅಧಿಕರಣವು ಹೊರಟಿದೆ. ಎರಡು ಅಧಿಕರಣಗಳಲ್ಲಿ ಪ್ರತಿಪಾದಿತವಾದ ಆಕಾಶ, ವಾಯುದೇವ ಮೊದಲಾದವರಿಗೆ ಬ್ರಹ್ಮನಿಗಿಂತ ಭಿನ್ನವಾದ್ದರಿಂದ ಹುಟ್ಟುವಿಕೆಯು ಕೂಡುವುದಿಲ್ಲ. ಈ ವಿಷಯದಲ್ಲಿ ವಿವಾದವೂ ಕೂಡ ಇರಬೇಕಾಗಿಲ್ಲ. ಆದ್ದರಿಂದ ಈ ಅಧಿಕರಣವನ್ನು ಆರಂಭಿಸಬೇಕಾಗಿಲ್ಲ. ಅಥವಾ ಹಿಂದಿನ ಅಧಿಕರಣದಲ್ಲಿ 'ಸ್ವತಃ' ಎಂದು ಹೇಳಲ್ಪಟ್ಟ ಬ್ರಹ್ಮನನ್ನು ಈ ಸೂತ್ರದಲ್ಲಿ 'ಅತಃ' ಎಂದು ಪರಾಮರ್ಶೆ ಮಾಡುತ್ತಿರುವುದರಿಂದ ಇದಕ್ಕೆ ಆನಂತರ್ಯಸಂಗತಿ ಇರುತ್ತದೆ. ಶ್ರುತಿಕ್ರಮದಿಂದಲೂ ಆನಂತರ್ಯಸಂಗತಿಯನ್ನು ತೋರಿಸುತ್ತಾ ಅಧಿಕರಣದ ವಿಷಯವನ್ನು 'ವಾಯೋಃ' ಇತ್ಯಾದಿಯಾಗಿ ಹೇಳಿದ್ದಾರೆ. (ಭಾವಬೋಧ)

ಪರಿಪೂರ್ಣಚಂದ್ರಿಕಾ

**तत्वप्रकाशिका – सकलजगत्कारणं ब्रह्मेत्युक्तम् । तत्र तेजसो वायुजातत्वे तदभावप्रसङ्ग इति तन्निरसनीयमेव । वायोरनन्तरप्राप्तं तेजोऽत्र विषयः । किं वायोर्जायते ब्रह्मणो वेति सन्देहः । वायोरग्निः 'तत्तेजोऽसृजत' इति श्रुतिविरोधः सन्देहबीजम् ।**

ಸಕಲಜಗತ್ತಿಗೆ ಕಾರಣನಾದವನು ಬ್ರಹ್ಮನಾಗಿದ್ದಾನೆಂದು ಹೇಳಲಾಯಿತು. ಹೀಗಿರುವಾಗ ತೇಜಸ್ಸು ವಾಯುವಿನಿಂದ ಹುಟ್ಟುತ್ತದೆಂದು ಶ್ರುತಿಯು ಹೇಳಿದರೆ ಬ್ರಹ್ಮನಿಂದ ಹುಟ್ಟಿತು ಎಂಬುದು ಯುಕ್ತವಾಗುವುದಿಲ್ಲ. ಆದ್ದರಿಂದ ವಾಯುಜಾತತ್ವವನ್ನು ನಿರಾಕರಣೆ ಮಾಡಲೇಬೇಕು.

ವಾಯುವಿನ ಅನಂತರ ತೇಜಸ್ಸೇ ಪ್ರಾಪ್ತವಾಗುವುದರಿಂದ ಅದು ಈ ಅಧಿಕರಣಕ್ಕೆ ವಿಷಯವಾಗಿದೆ. ತೇಜಸ್ಸು ವಾಯುವಿನಿಂದ ಹುಟ್ಟುತ್ತದೋ? ಬ್ರಹ್ಮನಿಂದಲೋ? ಎಂಬುದು ಅಧಿಕರಣದ ಸಂದೇಹ. 'ವಾಯೋರಗ್ನಿಃ' 'ವಾಯುವಿನಿಂದ ತೇಜಸ್ಸು ಹುಟ್ಟಿತು'. 'ತತ್ತೋಜೋಽಸೃಜತ' 'ಬ್ರಹ್ಮನು ತೇಜಸ್ಸನ್ನು ಸೃಷ್ಟಿಮಾಡಿದನು'- ಈ ಎರಡು ಶ್ರುತಿಗಳು ಪರಸ್ಪರ ವಿರುದ್ಧವಾಗಿವೆ. ಇದೇ ಸಂದೇಹ ಬೀಜ.

**तत्वप्रकाशिका – वायोर्जायत इति पूर्वः पक्षः । 'वायोरग्निः' इति श्रुतेः। नच तेजसो वायुद्वारा परमात्मजातत्वाभिधायकत्वं श्रुतेर्वाच्यम् । किं ब्रह्म वायुद्वारमन्तरेण तेजः स्रष्टुमीष्टे न वा । आद्ये व्यर्थं वायुद्वारा सर्जनम् ।**

ವಾಯುವಿನಿಂದಲೇ ತೇಜಸ್ಸು ಹುಟ್ಟುತ್ತದೆಂಬುದು ಅಧಿಕರಣದ ಪೂರ್ವಪಕ್ಷ. 'ವಾಯೋರಗ್ನಿಃ' ಎಂಬ ಶ್ರುತಿಯು ಇದಕ್ಕೆ ಆಧಾರವಾಗಿದೆ. ತೇಜಸ್ಸು ವಾಯುವಿನ ಮೂಲಕ ಪರಮಾತ್ಮನಿಂದಲೇ ಹುಟ್ಟುತ್ತದೆಂದು ಶ್ರುತಿಗೆ ಅರ್ಥೈಸಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಪರಮಾತ್ಮನು ವಾಯುವನ್ನು ಬಿಟ್ಟು ತೇಜಸ್ಸನ್ನು ಹುಟ್ಟಿಸಲು ಸಮರ್ಥನಾಗಿದ್ದಾನೋ? ಇಲ್ಲವೋ? ಸಮರ್ಥನಾಗಿದ್ದಾನೆಂದರೆ ವಾಯುವನ್ನು ಮಧ್ಯಸ್ಥಿಕೆ ಮಾಡಿಕೊಳ್ಳುವುದು ವ್ಯರ್ಥ.

**तत्वप्रकाशिका – द्वितीये सिद्धं नः समीहितं यावताऽस्माभिरप्युभय-कारणत्वमेवोच्यते । न च 'तत्तेजोऽसृजत' इति श्रुतिविरोधः । तस्या उभयकारणत्वेऽप्यविरोधात् ।**

ಪರಮಾತ್ಮನು ವಾಯುವನ್ನು ಬಿಟ್ಟು ತೇಜಸ್ಸನ್ನು ಹುಟ್ಟಿಸಲು ಸಮರ್ಥನಲ್ಲ ಎಂದು ಹೇಳಿದರೆ ನಮಗೆ ಇಷ್ಟವಾದದ್ದು ಸಿದ್ಧವಾಯಿತು. ಏಕೆಂದರೆ ನಾವೂ ಕೂಡ ಎರಡರಿಂದಲೂ ಅಗ್ನಿಯು ಹುಟ್ಟುತ್ತದೆಂದು ಹೇಳುತ್ತೇವೆ. ಹಾಗಾದರೆ ಪರಮಾತ್ಮನು ತೇಜಸ್ಸನ್ನು ಸೃಷ್ಟಿ ಮಾಡಿದನು ಎಂಬುದಕ್ಕೆ ವಿರೋಧ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ತೇಜಸ್ಸಿಗೆ ವಾಯು ಹಾಗೂ

ಪರಮಾತ್ಮ ಇಬ್ಬರೂ ಕೂಡ ಸ್ವತಂತ್ರಕಾರಣರೆಂದು ಉತ್ತರಿಸುತ್ತೇವೆ. ಆದ್ದರಿಂದ ಶ್ರುತಿಗಳಿಗೆ ವಿರೋಧ ಬರುವುದಿಲ್ಲ.

**तत्वप्रकाशिका – ब्रह्ममात्रकारणत्वाभिधायकत्वे निरवकाशैतच्छ्रुतिविरोधेना प्रामाण्यापातात् अतो न जगत्कारणत्वेन ब्रह्मणः सर्वश्रुतिवेद्यतेति प्राप्ते सिद्धान्तयत्सूत्रमुपन्यस्य व्याचष्टे – तेज इति ॥**

ತೇಜಸ್ಸಿಗೆ ಬ್ರಹ್ಮನೊಬ್ಬನೇ ಕಾರಣನೆಂದು ಹೇಳಿದರೆ ನಿರವಕಾಶವಾದ 'ವಾಯೋರಗ್ನಿಃ' ಎಂಬ ಶ್ರುತಿಯ ವಿರೋಧವು ಬರುವುದರಿಂದ ಅಪ್ರಾಮಾಣ್ಯವು ಬರಬೇಕಾಗುತ್ತದೆ. ಆದ್ದರಿಂದ ಬ್ರಹ್ಮನು ಜಗತ್ಕಾರಣತ್ವೇನ ಸಕಲ ಶ್ರುತಿಪ್ರತಿಪಾದ್ಯನಲ್ಲ. ಇಷ್ಟು ಅಧಿಕರಣದ ಪೂರ್ವಪಕ್ಷ.

ಸಿದ್ಧಾಂತ ಸ್ಥಾಪಕವಾದ ಸೂತ್ರವನ್ನು 'ತೇಜಃ' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – न 'वायोरग्निः' इत्यादिश्रुत्या तेजसो वायोरुत्पत्तिर्ग्राह्या । किं तु ब्रह्मणः सकाशादेव तेजो जायते । 'तत्तेजोऽसृजत' इति श्रुतेः । न च 'वायोरग्निः' इत्यादिश्रुतिविरोधः । तत्र वायुद्वारा तेजसो ब्रह्मजातत्वोक्तेः।**

'ವಾಯೋರಗ್ನಿಃ' ಇತ್ಯಾದಿ ಶ್ರುತಿಯಿಂದ ತೇಜಸ್ಸು ವಾಯುವಿನಿಂದಲೇ ಹುಟ್ಟುತ್ತದೆಂದು ಹೇಳಬಾರದು. ಮತ್ತೇನೆಂದರೆ ಬ್ರಹ್ಮನ ದೆಸೆಯಿಂದಲೇ ತೇಜಸ್ಸು ಹುಟ್ಟುತ್ತದೆಂದು ಹೇಳಬೇಕು. 'ತತ್ತೇಜೋಽಸೃಜತ' ಎಂಬ ಶ್ರುತಿಯು ಬ್ರಹ್ಮನಿಂದಲೇ ತೇಜಸ್ಸು ಹುಟ್ಟಿತ್ತೆಂದು ಸ್ಪಷ್ಟವಾಗಿ ಹೇಳುತ್ತಿದೆ. 'ವಾಯೋರಗ್ನಿಃ' ಇತ್ಯಾದಿ ಶ್ರುತಿಗಳ ವಿರೋಧವಿಲ್ಲ. ವಾಯುವಿನ ಮೂಲಕ ಪರಮಾತ್ಮನೇ ತೇಜಸ್ಸನ್ನು ಸೃಷ್ಟಿ ಮಾಡುತ್ತಾನೆಂದು ಅದಕ್ಕೆ ವ್ಯಾಖ್ಯಾನ ಮಾಡಬಹುದು.

**तत्वप्रकाशिका – न च द्वारवैयर्थ्यादुभयकारणत्वं वाच्यम् । वाय्वादेरकारणत्वेऽपि वाय्वादिद्वारमनुसृत्य ब्रह्मणः स्वेच्छयैव लीलया तेजःप्रभृतिकारणत्वस्य श्रुत्यादिसिद्धत्वात् । श्रुत्यादिकं चोत्तराधिकारणे दर्शयिष्यत इति भावः ।**

ವಾಯುವಿನ ಮೂಲಕ ತೇಜಸ್ಸನ್ನು ಸೃಷ್ಟಿ ಮಾಡುತ್ತಾನೆಂದು ಹೇಳುವುದು ವ್ಯರ್ಥ. ತೇಜಸ್ಸು ವಾಯುವಿನಿಂದಲೂ ಹುಟ್ಟುತ್ತದೆ, ಬ್ರಹ್ಮನಿಂದಲೂ ಹುಟ್ಟುತ್ತದೆ ಎಂದು ಉಭಯಕಾರಣತ್ವವನ್ನು ಹೇಳುವುದು ಸುಲಭವಲ್ಲವೇ?

ವಾಯು ಮೊದಲಾದವುಗಳು ಕಾರಣವಾಗದಿದ್ದರೂ ವಾಯು ಮೊದಲಾದವುಗಳ ಮೂಲಕ ಬ್ರಹ್ಮನು ತನ್ನ ಇಚ್ಛೆಯಿಂದಲೇ ಲೀಲೆಗೋಸ್ಕರ ತೇಜಸ್ಸು ಮೊದಲಾದವುಗಳಿಗೆ

ಕಾರಣನಾಗಿರುತ್ತಾನೆ. ಹೀಗೆ ಶ್ರುತಿಗಳು ಪ್ರತಿಪಾದನೆ ಮಾಡುತ್ತಿವೆ. ಈ ಶ್ರುತಿಗಳನ್ನು ಮುಂದಿನ ಅಧಿಕರಣದಲ್ಲಿ ತೋರಿಸುತ್ತೇವೆ.

ವಿವರಣೆ - ಸರ್ವಸಮರ್ಥನಾಗಿರುವ ಪರಮಾತ್ಮನಿಗೆ ವಾಯುವಿನ ಅವಶ್ಯಕತೆ ಏನು? ನೇರವಾಗಿಯೇ ತೇಜಸ್ಸನ್ನು ಸೃಷ್ಟಿ ಮಾಡಬಹುದಲ್ಲವೇ? ಎಂಬುದು ಪೂರ್ವಪಕ್ಷಕಾರನ ಪ್ರಶ್ನೆ. ವಾಸ್ತವಿಕವಾಗಿ ತೇಜಸ್ಸಿಗೆ ವಾಯು ಕಾರಣವೇ ಅಲ್ಲ. ಪರಮಾತ್ಮನೇ ಕಾರಣನು. ಆದರೂ ಕೂಡ ವಾಯುವನ್ನು ದ್ವಾರವನ್ನಾಗಿ ಮಾಡಿಯೇ ತೇಜಸ್ಸನ್ನು ಸೃಷ್ಟಿಮಾಡುತ್ತಾನೆ. ಇದೊಂದು ಅವನ ಲೀಲೆ. ಹೀಗೆ ಶ್ರುತಿಗಳೇ ಹೇಳುತ್ತಿವೆ. 'ಕಾರಣತ್ವೇನ ಚ ಆಕಾಶಾದಿಷು' ಎಂಬ ಮುಂದಿನ ಅಧಿಕರಣದಲ್ಲಿ ಶ್ರುತಿಪ್ರಮಾಣಗಳನ್ನು ಉಲ್ಲೇಖಿಸಲಾಗಿದೆ. ವಾಮನಪುರಾಣವು ಲೀಲೆಯಿಂದಲೇ ದ್ವಾರವನ್ನು ಅಪೇಕ್ಷಿಸುತ್ತಾನೆಂದು ಹೇಳಿದೆ.

**तत्वप्रकाशिका – ननु 'कारणत्वेन चाकाशादिषु यथा व्यपदिष्टोक्तेः' इत्यधिकरणे वाय्वादिशब्दानां ब्रह्मणि समन्वयस्योक्तत्वेन तेजसो ब्रह्मजातत्वस्य सिद्धत्वात् किं पुनरुक्त्येत्यत आह – कारणत्वेनेति॥**

'ಕಾರಣತ್ವೇನ ಚ ಆಕಾಶಾದಿಷು ಯಥಾ ವ್ಯಪದಿಷ್ಟೋಕ್ತೇಃ' ಎಂಬ ಮುಂದಿನ ಅಧಿಕರಣದಲ್ಲಿ ವಾಯು ಮೊದಲಾದ ಸಮನ್ವಯವನ್ನು ಬ್ರಹ್ಮನಲ್ಲಿ ಹೇಳಲಾಗುತ್ತದೆ. ಇದರಿಂದಲೇ ತೇಜಸ್ಸು ಬ್ರಹ್ಮನಿಂದ ಹುಟ್ಟಿದೆ ಎಂದು ಸಿದ್ಧವಾಗುತ್ತದೆ. ಹಾಗಿದ್ದರೆ ಈ ಅಧಿಕರಣವು ವ್ಯರ್ಥವಲ್ಲವೇ? ಈ ಪ್ರಶ್ನೆಗೆ 'ಕಾರಣತ್ವೇನ' ಇತ್ಯಾದಿ ಸೂತ್ರದಿಂದ ಉತ್ತರಿಸುತ್ತಿದ್ದಾರೆ.

**तत्वप्रकाशिका – कारणत्वेनेत्यत्रैव ब्रह्मणस्तेजःकारणत्वसिद्धावपि तस्य पुनरुक्तिर्युक्ता उभयकारणत्वनिवृत्त्यर्थत्वात् । न च तत्तेन निरस्तं भवति । तत्र वाय्वादीनामप्यमुख्यतया वाय्वादिशब्दवाच्यत्वस्याङ्गीकृतत्वेनोभयकारणत्वाविरोधादिति भावः ।**

'ಕಾರಣತ್ವೇನ' ಎಂಬ ಅಧಿಕರಣದಲ್ಲಿಯೇ ಬ್ರಹ್ಮನು ತೇಜಸ್ಸು ಮೊದಲಾದವುಗಳಿಗೆ ಕಾರಣನಾಗಿದ್ದಾನೆಂದು ಸಿದ್ಧವಾಗಿದೆ. ಆದರೂ ಕೂಡ ಅದನ್ನೇ ಇಲ್ಲಿ ಹೇಳುವುದು ಯುಕ್ತವೇ ಆಗಿದೆ. ಏಕೆಂದರೆ ವಾಯು ಹಾಗೂ ಬ್ರಹ್ಮ ಇಬ್ಬರಿಗೂ ಕಾರಣತ್ವವು ಬರುವುದಿಲ್ಲ ಎಂದು ಸಮರ್ಥಿಸುವುದಕ್ಕಾಗಿ ಈ ಅಧಿಕರಣ ಹೊರಟಿದೆ. ಹೀಗೆ ಉಭಯಕಾರಣತ್ವ ನಿರಾಸಕವಾದ್ದರಿಂದ 'ಕಾರಣತ್ವೇನ ಚ ಆಕಾಶಾದಿಷು' ಎಂಬ ಅಧಿಕರಣದಲ್ಲಿ ವಾಯು ಮೊದಲಾದವುಗಳು ಅಮುಖ್ಯವಾಗಿ ವಾಯು ಮೊದಲಾದ ಪದಗಳಿಂದ ಪ್ರತಿಪಾದ್ಯವಾಗಿದೆ ಎಂದು ಅಂಗೀಕರಿಸಲಾಗಿದೆ. ಆದ್ದರಿಂದ ಉಭಯಕಾರಣತ್ವಕ್ಕೆ ಯಾವುದೇ ವಿರೋಧವಿರುವುದಿಲ್ಲ.

**तत्वप्रकाशिका – अतः श्रुत्यविरोधेन तेजसो ब्रह्मकारणत्वे सिद्धे युक्तो ब्रह्मणि वेदसमन्वय इति सिद्धम् । स्यादेतत् । एतच्छ्रुतीनामुपादाननिमित्त-**

**विषयतया स्वत एव व्यवस्थितत्वात् किमेतेनाऽयासेनेति । मैवम् । वायुप्रभृतीनां देवतात्वादुपादानशक्तेश्च परमात्माधीनत्वादिति ।।**

ಆದ್ದರಿಂದ ಶ್ರುತಿಯ ವಿರೋಧವು ಬಾರದ ಕಾರಣ ತೇಜಸ್ಸಿಗೆ ಬ್ರಹ್ಮನೇ ಕಾರಣನೆಂದು ಸಿದ್ಧವಾಯಿತು. ಆದ್ದರಿಂದ ಬ್ರಹ್ಮನಲ್ಲಿ ವೇದಸಮನ್ವಯ ಮಾಡಿರುವುದು ಸಮಂಜಸವೆಂದು ಸಿದ್ಧವಾಯಿತು.

ನೀವು ಹೇಳಿದ್ದನ್ನು ಒಪ್ಪಬಹುದಿತ್ತು. 'ವಾಯೋರಗ್ನಿಃ' ಇತ್ಯಾದಿ ಶ್ರುತಿಗಳಲ್ಲಿ ಉಪಾದಾನಕಾರಣ ಹಾಗೂ ನಿಮಿತ್ತಕಾರಣಗಳನ್ನು ವ್ಯವಸ್ಥೆ ಮಾಡಲಾಗಿದೆ. ಆದ್ದರಿಂದ ವಿರೋಧವಿಲ್ಲ. ಆದರೂ ವಿರೋಧಪರಿಹಾರಕ್ಕಾಗಿ ಈ ಅಧಿಕರಣ ಹೊರಟಿರುವುದು ವ್ಯರ್ಥವಲ್ಲವೇ? ಈ ಪ್ರಶ್ನೆಯೂ ಕೂಡ ತಪ್ಪು. ಏಕೆಂದರೆ ವಾಯು ಮೊದಲಾದ ಪದಗಳು ದೇವತೆಗಳನ್ನೇ ಪ್ರತಿಪಾದನೆ ಮಾಡುತ್ತಿರುವುದರಿಂದ ಮತ್ತು ಉಪಾದಾನತ್ವಶಕ್ತಿಯು ಪರಮಾತ್ಮನ ಅಧೀನವಾದ್ದರಿಂದ ಈ ಅಧಿಕರಣ ಹೊರಟಿದ್ದು ವ್ಯರ್ಥವಲ್ಲ.

**ವಿವರಣೆ**– 'ಭೂತಂ ಭೂತಾಭಿಮಾನಿ ಚ ತದ್ದೇಹೋऽಂತರ್ನಿಯಾಮಕಃ ಹರಿಶ್ಚಾಕಾಶಬ್ದೋಕ್ತೋ ಮುಖ್ಯತೋ ಅಧಿದೇವತೋ' 'ಭೂತ, ಭೂತಾಭಿಮಾನಿ ಹಾಗೂ ತದ್ದೇಹನಿಯಾಮಕನಾದ ಹರಿ. ಈ ನಾಲ್ಕು ಆಕಾಶಶಬ್ದ ಪ್ರತಿಪಾದ್ಯವಾಗಿವೆ. ಆದರೆ ಶ್ರೀಹರಿಯೇ ಮುಖ್ಯವಾಗಿ ಪ್ರತಿಪಾದ್ಯನು' ಹೀಗೆ ಅನುವ್ಯಾಖ್ಯಾನದಲ್ಲಿ ಹೇಳಿರುವುದರಿಂದ ವಾಯು ಮೊದಲಾದ ಶಬ್ದಗಳಿಂದ ಉಳಿದವುಗಳೆಲ್ಲವೂ ಅಮುಖ್ಯವಾಗಿಯೇ ಪ್ರತಿಪಾದ್ಯವಾಗಿವೆ.

'ತದಧೀನತ್ವಾದರ್ಥವತ್' ಎಂಬ ನ್ಯಾಯದಿಂದ ವಾಯುವಿನಿಂದ ಅಗ್ನಿಯು ಹುಟ್ಟುತ್ತದೆಂಬ ವಿಷಯದಲ್ಲಿ ವಾಯುವಿನಲ್ಲಿರುವ ಅಗ್ನಿಕಾರಣತ್ವವು ಶ್ರೀಹರಿಯ ಅಧೀನವೆಂದು ಹೇಳಲಾಗಿದೆ.

ಇಲ್ಲಿಗೆ ತತ್ತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ತೇಜೋಧಿಕರಣ ಮುಗಿಯಿತು

## ತೇಜೋಽಧಿಕರಣ

## (೨-೩-೪)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## ತೇಜೋಧಿಕರಣ

**तेजोऽतस्तथा ह्याह ।। एवं ब्रह्मान्यस्य सर्वस्योत्पत्तौ ब्रह्मणश्चानुत्पत्तौ सिद्धायामिदानीं कार्यविशेषे कारणविशेषविप्रतिपत्तिर्निरस्यत इति सङ्गतिः ।**

ಹಿಂದಿನ ಅಧಿಕರಣಗಳಲ್ಲಿ ಬ್ರಹ್ಮನನ್ನು ಬಿಟ್ಟು ಎಲ್ಲಕ್ಕೂ ಉತ್ಪತ್ತಿ ಇದೆ ಎಂದು ಸಿದ್ಧವಾಯಿತು. ಹಾಗೆಯೇ ಬ್ರಹ್ಮನಿಗೆ ಉತ್ಪತ್ತಿ ಇಲ್ಲ ಎಂಬುದೂ ಸಿದ್ಧವಾಯಿತು. ಈ ಅಧಿಕರಣದಲ್ಲಿ ಕಾರ್ಯವಿಶೇಷಕ್ಕೆ ಕಾರಣವಿಶೇಷವಿಪ್ರತಿಪತ್ತಿಯನ್ನು ನಿರಾಕರಿಸಲಾಗುತ್ತದೆ. (ಅಂದರೆ ಅ॥, ಅಪ್ ಇತ್ಯಾದಿ ಸರ್ವಕಾರ್ಯಗಳಿಗೂ ಉತ್ಪತ್ತಿ ಇದೆ ಎಂದು ಸಿದ್ಧವಾದರೂ ಅಗ್ನಿಗೆ ಬ್ರಹ್ಮ ಕಾರಣನೋ ಅಥವಾ ವಾಯು ಕಾರಣನೋ ಎಂಬ ವಿಪ್ರತಿಪತ್ತಿ (ವಿವಾದ) ಬಂದರೆ ಅದನ್ನು ಈ ಅಧಿಕರಣದಲ್ಲಿ ನಿರಾಕರಿಸಲಾಗುವುದು)

**अत्रोक्तं ब्रह्मण एव सर्वस्रष्टृत्वं वायुदेवतातस्तेजोजन्मश्रुतिविरुद्धं न वेति चिन्ता ।**

(ತದರ್ಥಚಿಂತಾವನ್ನು ಹೇಳುತ್ತಿದ್ದಾರೆ) 'ಜನ್ಮಾದ್ಯಸ್ಯ' ಎಂಬ ಸೂತ್ರದಲ್ಲಿ ಹೇಳಿದ ಬ್ರಹ್ಮನೇ ಸರ್ವಸೃಷ್ಟಿಕರ್ತಾ ಎಂಬುದಕ್ಕೆ ಇಲ್ಲಿ ಹೇಳಿರುವ ವಾಯುವಿನಿಂದ ತೇಜಸ್ಸಿನ ಉತ್ಪತ್ತಿ ಎಂಬ ಶ್ರುತಿಯ ವಿರೋಧ ಬರುತ್ತದೋ ಇಲ್ಲವೋ ? ಎಂಬ ವಿಚಾರ.

**तदर्थं ''वायोरग्निः'' इति श्रुतिः किं वायोर्द्वारत्वमात्रेणायुक्तोत युक्तेति ।**

ಅದಕ್ಕಾಗಿ 'ವಾಯೋರಗ್ನಿಃ' ಎಂಬ ಶ್ರುತಿಯಲ್ಲಿ ವಾಯುವು ತೇಜಸ್ಸಿನ ಉತ್ಪತ್ತಿಯಲ್ಲಿ ದ್ವಾರ ಮಾತ್ರ ಎಂದು ಸಿದ್ಧಾಂತಿಯು ಹೇಳುತ್ತಾನೆ. ಅದಕ್ಕೆ ಪೂರ್ವಪಕ್ಷಿಯು ಹೀಗೆ ದ್ವಾರಕಾರಣತ್ವವನ್ನು ಹೇಳುವುದು ಅಯುಕ್ತವೆನ್ನುತ್ತಾನೆ. ಹಾಗಾಗಿ ಈ ವಾಯುವಿನ ದ್ವಾರಕಾರಣತ್ವವು ಅಯುಕ್ತವೋ ಯುಕ್ತವೋ ? ಎಂಬುದು ವಿಚಾರ.

**तदर्थं ब्रह्मणो द्वारोपादानं किं द्वाररहितस्याशक्त्या किं वा शक्तस्यापि लीलयेति ।।**

ವಾಯು ಮೊದಲಾದವರನ್ನು ದ್ವಾರವಾಗಿ ಸ್ವೀಕರಿಸುವುದು ಬ್ರಹ್ಮನಿಗೆ ಈ ದ್ವಾರಗಳನ್ನು ಬಿಟ್ಟು ಸೃಷ್ಟಿಮಾಡಲು ಸಾಧ್ಯವಿಲ್ಲ ಎಂಬ ದೃಷ್ಟಿಯಿಂದಲೋ ಅಥವಾ ದ್ವಾರವಿಲ್ಲದೆಯೇ ಸೃಷ್ಟಿಮಾಡಲು ಸಮರ್ಥನಾಗಿದ್ದರೂ ಲೀಲೆಯಿಂದ ವಾಯು ಮೊದಲಾದವರನ್ನು ದ್ವಾರವಾಗಿ ಸ್ವೀಕಾರಮಾಡುತ್ತಾನೆಯೋ? ಎಂಬ ವಿಚಾರ.

**विवादाभाव इति ।। यद्यपि ''आकाशाद्वायुः एतस्माज्जायते प्राणो मनः सर्वेन्द्रियाणि च । खं वायुर्ज्योतिः'' इति श्रुत्योर्विवादोऽस्ति ।**

ಪ್ರಶ್ನೆ - ಈ ಅಧಿಕರಣದಲ್ಲಿ ತೇಜಸ್ಸು ವಾಯುವಿನಿಂದ ಹುಟ್ಟಿದೆಯೋ ಬ್ರಹ್ಮನಿಂದಲೋ ಎಂಬ ವಿಚಾರ ಮಾಡಲಾಗಿದೆ. ಆದರೆ ಈ ಹಿಂದೆ ಪ್ರಕೃತವಾದ ವಾಯುವಿನ ವಿಷಯದಲ್ಲಿಯೇ ಈ ಪ್ರಶ್ನೆ ಬರುತ್ತದೆ. ವಾಯುವು ಆಕಾಶದಿಂದ ಹುಟ್ಟಿದೆಯೊ? 'ಆಕಾಶಾತ್ ವಾಯುಃ' ಎಂಬ ಶ್ರುತಿಯು ಹೇಳುವಂತೆ. ಅಥವಾ ವಾಯುವು ಬ್ರಹ್ಮನಿಂದ ಹುಟ್ಟಿದೆಯೋ 'ಏತಸ್ಮಾತ್ ಜಾಯತೇ ಪ್ರಾಣಾಃ... ವಾಯುಃ'ಎಂಬ ಶ್ರುತಿಯು ಹೇಳುವಂತೆ ಎಂದು. ಹಾಗಾಗಿ ಈ ಪ್ರಶ್ನೆಯನ್ನು ಹಿಂದೆಯೇ ಏಕೆ ಮಾಡಿಕೊಳ್ಳಲಿಲ್ಲ.

**तथाप्यतिव्यवहितस्य तेजसो ब्रह्मजत्वसाधकैतदधिकरणन्यायेनैवाव्यवहितस्य वायोस्तत्सिद्धेः पृथग्विवादाभाव इति भावः ।**

ನಿಜ, ವಾಯುವಿಗಿಂತಲೂ ವ್ಯವಹಿತವಾಗಿರುವುದು (ಬ್ರಹ್ಮನಿಂದ) ತೇಜಸ್ಸು. ಇಂತಹ ಅತಿದೂರದಲ್ಲಿರುವ ತೇಜಸ್ಸೇ ಬ್ರಹ್ಮನಿಂದ ಸೃಷ್ಟವೆಂದಮೇಲೆ ತೇಜಸ್ಸಿಗಿಂತ ಸಮೀಪದಲ್ಲಿರುವ (ಸೃಷ್ಟಿಕ್ರಮದಲ್ಲಿ) ವಾಯು ಬ್ರಹ್ಮನಿಂದ ಸೃಷ್ಟ ಎಂಬ ವಿಷಯದಲ್ಲಿ ಸಂಶಯ ಬರಲಾರದು ಎಂಬ ದೃಷ್ಟಿಯಿಂದ ತೇಜಸ್ಸಿನ ವಿಷಯದಲ್ಲಿ ಈ ಪ್ರಶ್ನೆ ಮಾಡಿಕೊಳ್ಳಲಾಗಿದೆ.

**''विष्णोरेव तेजस उत्पत्तौ द्वारकारणवैयर्थ्यम्'' इति न्यायविवरणोक्तां पूर्वपक्षयुक्तिमाह – किं ब्रह्म वायुद्वारमिति ।।**

ವಿಷ್ಣುವಿನಿಂದಲೇ ತೇಜಸ್ಸು ಹುಟ್ಟುತ್ತದೆ ಎಂದರೆ ಆಗ ತೇಜಸ್ಸಿನ ಉತ್ಪತ್ತಿಗೆ ವಾಯುವು ದ್ವಾರಕಾರಣ ಎಂಬುದು ವ್ಯರ್ಥಕಲ್ಪನೆಯಾಗುತ್ತದೆ ಎಂಬ ನ್ಯಾಯವಿವರಣದಲ್ಲಿರುವ ಪೂರ್ವಪಕ್ಷಯುಕ್ತಿಯನ್ನು ಹೇಳುತ್ತಿದ್ದಾರೆ 'ಕಿಂ ಬ್ರಹ್ಮ' ಎಂಬುದರಿಂದ.

**''द्वारमनुसृत्यैव विष्णोः प्रवृत्तिः'' इति न्यायविवरणोक्तां सिद्धान्तयुक्तिमाह – वाय्वादेरकारणत्वेऽपीति ।।**

ವಿಷ್ಣುವು ತೇಜಸ್ಸು ಮೊದಲಾದವನ್ನು ಸಾಕ್ಷಾತ್ ಸೃಷ್ಟಿಮಾಡಲು ಸಮರ್ಥನಾದರೂ ಕೂಡ ವಾಯು ಮೊದಲಾದವುಗಳನ್ನು ದ್ವಾರವಾಗಿಸಿಕೊಂಡೇ ಸೃಷ್ಟಿ ಮಾಡುತ್ತೇನೆ ಎಂದು

ಸಂಕಲ್ಪವುಳ್ಳವನಾದ್ದರಿಂದ ಎಂಬ ನ್ಯಾಯವಿವರಣದಲ್ಲಿರುವ ಸಿದ್ಧಾಂತಯುಕ್ತಿಯನ್ನು ಹೇಳುತ್ತಿದ್ದಾರೆ, 'ವಾಯ್ವಾದೇಃ' ಎಂಬುದರಿಂದ.

**स्वतन्त्रकारणत्वाभावेऽपीत्यर्थः ।।**

ಟೀಕಾದಲ್ಲಿರುವ ವಾಯು ಮೊದಲಾದವುಗಳು ಅಕಾರಣವಾದರೂ ಎಂಬ ಪದಕ್ಕೆ ಸ್ವತಂತ್ರಕಾರಣ- ವಲ್ಲವಾದರೂ ಎಂದು ಅಭಿಪ್ರಾಯ. ಸರ್ವಥಾ ಕಾರಣವೇ ಅಲ್ಲ ಎಂದಲ್ಲ.

**उभयकारणत्वनिवृत्त्यर्थत्वादिति ।। ब्रह्मवद्वायुरपि स्वतन्त्रकारणमिति शङ्कानिवृत्त्यर्थत्वादित्यर्थः ।**

ಟೀಕಾದಲ್ಲಿರುವ ಉಭಯಕಾರಣನಿವೃತ್ತಿ ಎಂಬಲ್ಲಿ ಉಭಯ ಎಂದರೆ ಬ್ರಹ್ಮ ಹಾಗೂ ವಾಯು ಇಬ್ಬರೂ ಸ್ವತಂತ್ರವಾಗಿ ತೇಜಸ್ಸಿಗೆ ಕಾರಣ ಎಂಬ ಶಂಕಾನಿವೃತ್ತಿಗಾಗಿ ಎಂದರ್ಥ.

**अत एव वक्ष्यति ''उपादानशक्तेश्च परमात्माधीनत्वात्'' इति ।**

ವಾಯುವಿಗೆ ಸ್ವತಂತ್ರಕಾರಣ ಇಲ್ಲವಾದ್ದರಿಂದಲೇ ಮುಂದೆ ವಾಯುವಿನಲ್ಲಿರುವ ಉಪಾದಾನಶಕ್ತಿಯೂ ಕೂಡ ಪರಮಾತ್ಮನ ಅಧೀನವಾಗಿದೆ ಎಂದು ಹೇಳುತ್ತಾರೆ.

**तदनन्यत्वमित्यत्र कारणान्तरस्य युक्तिप्राप्तं स्वातन्त्र्यं निरस्तम् । अत्र तु श्रुतिप्राप्तमिति भेदः ।।**

'ತದನನ್ಯತ್ವಮಾರಂಭಣಶಬ್ದಾದಿಭ್ಯಃ'. ಈ ಸೂತ್ರದಲ್ಲಿ ಬ್ರಹ್ಮನು ಸ್ವತಂತ್ರಕಾರಣ ಎಂಬ ವಿಷಯದಲ್ಲಿ ಬಂದ ಯುಕ್ತಿವಿರೋಧವನ್ನು ಪರಿಹಾರ ಮಾಡಲಾಗಿದೆ. ಅಂದರೆ ಬ್ರಹ್ಮನಿಗಿಂತ ಅತಿರಿಕ್ತವಾದ ಕಾರಣಗಳಿಗೆ ಸ್ವಾತಂತ್ರ್ಯವಿದೆ ಎಂಬ ಯುಕ್ತಿಯನ್ನು ನಿರಾಕರಿಸಲಾಗಿದೆ. ಆದರೆ ಈ ಅಧಿಕರಣದಲ್ಲಿ ಇದೇ ವಿಷಯದಲ್ಲಿ ಶ್ರುತಿವಿರೋಧ ಪರಿಹಾರಮಾಡಲಾಗಿದೆ. ಹಾಗಾಗಿ ಈ ಎರಡು ಅಧಿಕರಣಗಳಿಗೆ ವ್ಯತ್ಯಾಸ ತಿಳಿಯಬೇಕು.

**वायुप्रभृतीनां देवतात्वादिति ।। देवतानां चोपादानोपादेयत्वाभावादिति भावः ।।**

**इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् तेजोधिकरणं सम्पूर्णम् ।।४।।**

'ವಾಯೋರಗ್ನಿಃ' ಎಂಬಲ್ಲಿರುವ ವಾಯುಶಬ್ದವು ದೇವತಾಪರವಾಗಿದೆ. ದೇವತೆಯಾದ ವಾಯುವು ಅಗ್ನಿಗೆ ಉಪಾದಾನಕಾರಣವಾಗಲು ಸಾಧ್ಯವಿಲ್ಲ. 'ಕಾರಣತ್ವೇನ...' ಅಧಿಕರಣಕ್ಕೂ ಈ ಅಧಿಕರಣಕ್ಕೂ

ಪುನರುಕ್ತಿ ಶಂಕಾ ಬಂದಾಗ ಆದಕ್ಕೆ ಉತ್ತರವಾಗಿ ಪುನರುಕ್ತಿ ಇಲ್ಲ. ಏಕೆಂದರೆ ಇಲ್ಲಿ ಬ್ರಹ್ಮ ವಾಯುಗಳಿಗೆ ಅಗ್ನಿಯನ್ನು ಕುರಿತು ಸ್ವತಂತ್ರಕಾರಣತ್ವವಿದೆಯೇ? ಎಂಬ ಪ್ರಶ್ನೆ ಬಂದರೆ ಅದನ್ನು ಪರಿಹರಿಸಲು ಈ ಅಧಿಕರಣ ಹೊರಟಿದೆ ಎಂದು ಉತ್ತರ ಕೊಟ್ಟರು. (ಅಂದರೆ ಬ್ರಹ್ಮನು ಸ್ವತಂತ್ರಕಾರಣ, ವಾಯುವು ದ್ವಾರಕಾರಣ ಎಂದು) ಆದರ ಬದಲು ಈ ಪುನರುಕ್ತಿಯನ್ನು ಹೀಗೂ ಪರಿಹರಿಸಬಹುದಾಗಿತ್ತು. 'ಕಾರಣತ್ವೇನ ..' ಎಂಬಲ್ಲಿ ಬ್ರಹ್ಮನು ಅಗ್ನಿಗೆ ನಿಮಿತ್ತಕಾರಣ ಎಂದು ಅಲ್ಲಿ ಹೇಳಿದೆ. ಇಲ್ಲಿ ವಾಯುವು ಅಗ್ನಿಗೆ ಉಪಾದಾನಕಾರಣ ಎಂದು ಹೇಳಲಾಗಿದೆ. ಹಾಗಾಗಿ ಪುನರುಕ್ತಿ ಇಲ್ಲ. ಹೀಗೆ ಹೇಳಲು ಸಾಧ್ಯವಿಲ್ಲ ಏಕೆಂದರೆ ಇಲ್ಲಿ ಬಂದಿರುವ ವಾಯುಶಬ್ದಕ್ಕೆ ವಾಯುದೇವತಾ ಎಂದರ್ಥವೇ ಹೊರತು ಭೂತವಾಯು ಎಂದಲ್ಲ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ತೇಜೋಧಿಕರಣವು ಸಂಪೂರ್ಣವಾಯಿತು

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**तेजोऽतः** ।। ''एवं सर्वस्यापि ब्रह्मेतरस्योत्पत्तौ सिद्धायाम्'' इति टीकोक्तिसूचितामवान्तरसङ्गतिमाह – **एवमिति** ।।

ಹೀಗೆ ಬ್ರಹ್ಮನನ್ನು ಬಿಟ್ಟು ಉಳಿದ ಎಲ್ಲಕ್ಕೂ ಉತ್ಪತ್ತಿ ಇದೆ ಎಂದು ಸಿದ್ಧವಾದ ಮೇಲೆ ಎಂದು ಟೀಕಾದಲ್ಲಿ ಸೂಚಿತವಾಗಿರುವ ಅವಾಂತರ ಸಂಗತಿಯನ್ನು ಹೇಳುತ್ತಿದ್ದಾರೆ 'ಏವಂ' ಎಂಬುದಾಗಿ.

**प्रकाशः** – कार्यविशेषे अग्न्यादिरूपे ।। **कारणविशेषेति** ।। वायुब्रह्मरूपकारण-विशेषेत्यर्थः ।

ಕಾರ್ಯವಿಶೇಷ ಎಂದರೆ ಅಗ್ನಿ, ವಾಯು ಮೊದಲಾದವು ಎಂದರ್ಥ. ಕಾರಣವಿಶೇಷ ಎಂದರೆ ವಾಯು, ಬ್ರಹ್ಮ ಎಂಬ ಕಾರಣಗಳು ಎಂದರ್ಥ.

**प्रकाशः** – ''तेजोऽत्र विषयः'' इत्यादिटीकां व्यनक्ति ।। **अत्रेति** ।। चिन्तेत्यन्वयः । उक्तं जन्मादिसूत्र इत्यर्थः ।

ಈ ಅಧಿಕರಣಕ್ಕೆ ತೇಜಸ್ಸು ವಿಷಯ ಎಂದು ಟೀಕಾದಲ್ಲಿ ಹೇಳಿರುವುದನ್ನು ವಿವರಿಸುತ್ತಿದ್ದಾರೆ 'ಅತ್ರ' ಎಂಬುದಾಗಿ. 'ಅತ್ರ' ಎಂಬ ಪದವನ್ನು ಮುಂದಿರುವ 'ಚಿಂತಾ' ಎಂಬ ಪದದೊಂದಿಗೆ ಅನ್ವಯಿಸಿಕೊಳ್ಳಬೇಕು. 'ಉಕ್ತಂ' ಎಂದರೆ ಜನ್ಮಾದಿಸೂತ್ರದಲ್ಲಿ ಹೇಳಿದ ಎಂದರ್ಥ.

**प्रकाशः** – यद्वा पूर्वत्र ब्रह्मतदन्ययोरनुत्पत्त्युत्पत्त्योरुक्तयार्थादुक्तमित्यर्थः ।

ಅಥವಾ 'ಉಕ್ತಂ' ಎಂದರೆ, ಹಿಂದಿನ ಅಧಿಕರಣಗಳಲ್ಲಿ ಬ್ರಹ್ಮನಿಗೆ ಉತ್ಪತ್ತಿ ಇಲ್ಲ. ಬ್ರಹ್ಮಾತಿರಿಕ್ತವಾದ ಎಲ್ಲಕ್ಕೂ ಉತ್ಪತ್ತಿ ಇದೆ ಎಂದು ಪ್ರತಿಪಾದಿಸಿದ್ದರಿಂದ ಅರ್ಥಾತ್ ಉಕ್ತವಾದ ಎಂದರ್ಥ. (ಅರ್ಥಾತ್ ಬ್ರಹ್ಮನೇ ಸರ್ವಸ್ರಷ್ಟಾ ಎಂದು ಸಿದ್ಧವಾದ ಎಂದರ್ಥ)

**प्रकाशः** – वायुतस्तेजो जन्म श्रुतिविरुद्धं न वेत्येवोक्तौ वायूपादानकत्वोक्तिपरतयाप्युपपत्तेरविरोधकत्वप्रसङ्गाच्छतेरुक्तार्थविरोधस्फोरणाय वायुदेवतात इत्युक्तम् । तथा च वायुदेवताया अग्निस्रष्टृत्वप्राप्तेः श्रुतेरुक्तार्थविरोधित्वं लभ्यते ।

(ಚಂದ್ರಿಕಾದಲ್ಲಿ 'ವಾಯುದೇವತಾತಃ' ಎಂದು ಹೇಳಿರುವುದಕ್ಕೆ ಕಾರಣವನ್ನು ಹೇಳುತ್ತಿದ್ದಾರೆ) ಮೂಲದಲ್ಲಿ ವಾಯುತಃ ಎಂದಷ್ಟೇ ಹೇಳಿ ವಾಯುವಿನಿಂದ ತೇಜಸ್ಸಿನ ಜನ್ಮ ಎಂಬ ಶ್ರುತಿವಿರೋಧ ಎಂದಿದ್ದರೆ ಆಗ ಈ ಶ್ರುತಿಯನ್ನು ವಾಯು ಎಂಬ ಉಪಾದಾನಕಾರಣದಿಂದ ತೇಜಸ್ಸಿನ ಜನ್ಮ ಎಂಬುದಾಗಿ ಅರ್ಥೈಸಿ ವಿರೋಧ ಪರಿಹಾರ ಮಾಡಬಹುದಿತ್ತು. ಆಗ ಶ್ರುತಿವಿರೋಧವೇ ಬರುತ್ತಿರಲಿಲ್ಲ. ಅದಕ್ಕಾಗಿ ವಾಯುತಃ ಎಂದು ಹೇಳದೇ ವಾಯುದೇವತಾತಃ ಎಂದಿದ್ದಾರೆ. ಆಗ ವಾಯು ಎಂಬ ದೇವತೆಯಿಂದ ತೇಜಸ್ಸಿನ ಜನ್ಮ ಎಂದು ಶ್ರುತಿಯ ಅರ್ಥವಾಗುತ್ತದೆ. ಆಗ ಬ್ರಹ್ಮನೇ ಸರ್ವಜಗತ್‌ಸ್ರಷ್ಟಾ ಎಂಬುದಕ್ಕೆ ಈ ಶ್ರುತಿಯ ವಿರೋಧ ಬರುತ್ತದೆ.

**प्रकाशः** – अत एव देवतानयटीकायां ''वायुप्रभृतीनां देवतात्वात्'' इत्युक्तमिति भावः ।

ಶ್ರುತಿಯಲ್ಲಿ ವಾಯು ಶಬ್ದಕ್ಕೆ ವಾಯುದೇವತೆ ಎಂಬರ್ಥವು ಅಭಿಪ್ರೇತವಾದ್ದರಿಂದಲೇ ಟೀಕಾದಲ್ಲಿ ವಾಯು ಮೊದಲಾದವರು ದೇವತೆಗಳು ವಿವಕ್ಷಿತ ಎಂದಿದ್ದಾರೆ.

**प्रकाशः** – वायुदेवतात इत्युपलक्षणम् । वायुजडात्तेजः परिणामरूपतेजो जन्म श्रुतिविरुद्धं न वेत्यपि ध्येयम् । पूर्वत्र च स्वातन्त्र्येण सर्वस्रष्टृत्वमित्यस्मिन्पक्षे ध्येयम् ।

ವಾಯು ಶಬ್ದಕ್ಕೆ ವಾಯುದೇವತೆಯಿಂದ ಎಂಬರ್ಥವು ಉಪಲಕ್ಷಣ. (ಒಂದು ರೀತಿಯಿಂದ) ವಾಯು ಶಬ್ದಕ್ಕೆ ಜಡವಾಯು ಎಂಬರ್ಥವನ್ನು ಇಟ್ಟುಕೊಂಡು ಜಡವಾಯುವಿನಿಂದ ತೇಜಸ್ಸಿನ ಜನ್ಮ ಎಂದು ಹೇಳುವ ಶ್ರುತಿಯ ವಿರೋಧ ಇದೆಯೋ ಇಲ್ಲವೋ ಎಂಬುದೂ ವಿವಕ್ಷಿತ. ಈ ಅರ್ಥದಲ್ಲಿ ಹಿಂದೆ ಬ್ರಹ್ಮನಿಗೆ ಸ್ವತಂತ್ರ ಸ್ರಷ್ಟೃತ್ವವನ್ನು ಹೇಳಲಾಗಿದೆ. ಈಗ ವಾಯುವಿನಿಂದ ತೇಜಸ್ಸಿನ ಜನ್ಮ ಒಪ್ಪಿದರೆ ಆಗ ವಿರೋಧ. (ಸ್ವತಂತ್ರ ಸ್ರಷ್ಟಾ ಎಂದರೆ ಅವನೊಬ್ಬನೇ ಎಂದರ್ಥ)

**प्रकाशः** – ''किं वायुद्वारमन्तरेणः'' इत्यादि टीकासूचितचिन्तामाह – **किं वायोरिति** ।। वायुदेवताया वायुभूतस्य चेत्यर्थः । ''उपादानशक्तेश्च परमात्माधीनत्वात्'' इति टीकोक्तेः ।

ವಾಯುವನ್ನು ಮಧ್ಯವಾಗಿರಿಸಿಕೊಳ್ಳದೇ ಬ್ರಹ್ಮನು ತೇಜಸ್ಸನ್ನು ಸೃಷ್ಟಿ ಮಾಡುತ್ತಾನೋ ಇಲ್ಲವೋ? ಎಂಬ ಟೀಕಾದಲ್ಲಿ ಹೇಳಿರುವ ವಿಕಲ್ಪವನ್ನು ಹೇಳುತ್ತಿದ್ದಾರೆ 'ಕಿಂ ವಾಯೋಃ' ಎಂಬುದಾಗಿ. ಇಲ್ಲಿ ವಾಯು ಶಬ್ದದಿಂದ ವಾಯುದೇವತೆ ಹಾಗೂ ಭೂತವಾಯು ಎರಡನ್ನೂ ಗ್ರಹಿಸಬೇಕು. ಇಲ್ಲಿ ವಾಯು ಶಬ್ದದಿಂದ ಭೂತವಾಯುವನ್ನು ಇಟ್ಟುಕೊಳ್ಳಲು ಕಾರಣ ಟೀಕಾದಲ್ಲಿ 'ಉಪಾದಾನಶಕ್ತಿಯೂ ಪರಮಾತ್ಮನ ಅಧೀನವಾಗಿದೆ ಎಂದು ಹೇಳಿರುವುದರಿಂದ' ಎಂಬುದು. (ವಾಯುವು ತೇಜಸ್ಸಿಗೆ ಉಪಾದಾನವಾದರೂ ಆ ಉಪಾದಾನವಾದ ವಾಯುವಿನಲ್ಲಿರುವ ಉಪಾದಾನಶಕ್ತಿಯೂ ಪರಮಾತ್ಮನಿಂದ ಎಂದಾಗಿರುವುದರಿಂದ ಪರಮಾತ್ಮನೇ ಸ್ವತಂತ್ರಕರ್ತಾ ಎಂದು ಸಿದ್ಧವಾಗುವುದು)

**प्रकाशः** – ''स्वेच्छयैव लीलय'' इति टीकासूचितमाह – **किं द्वाररहितस्येति**।।

ಟೀಕಾದಲ್ಲಿ ಪರಮಾತ್ಮನಿಗೆ ತಾನೇ ಸ್ವತಂತ್ರವಾಗಿ ನಿರ್ಮಾಣ ಮಾಡಲು ಸಾಮರ್ಥ್ಯವಿದ್ದರೂ ತನ್ನ ಇಚ್ಛೆಯಿಂದ ಲೀಲಾರೂಪವಾಗಿ ವಾಯು ಮೊದಲಾದವನ್ನು ದ್ವಾರವಾಗಿ ಸ್ವೀಕರಿಸುತ್ತಾನೆ ಎಂದು ಹೇಳಿರುವುದನ್ನು ವಿವರಿಸುತ್ತಿದ್ದಾರೆ 'ಕಿಂ ದ್ವಾರ' ಎಂಬುದಾಗಿ.

**प्रकाशः** – यद्यशक्त्या तदेश्वरे तदभावेन द्वारवैयर्थ्येन श्रुतिस्तन्मात्रेणायुक्तेति तद्विरुद्धं ब्रह्मण एव स्रष्टृत्वम् । यदि तु लीलयेति तदा तु नेति व्यक्तमिति भावः।

ಈಶ್ವರನಿಗೆ ಸ್ವತಂತ್ರವಾಗಿ ಸೃಷ್ಟಿ ಮಾಡಲು ಶಕ್ತಿ ಇಲ್ಲ ಎಂದು ಹೇಳಲು ಸಾಧ್ಯವಿಲ್ಲವಾದ್ದರಿಂದ ವಾಯುವನ್ನು ದ್ವಾರವಾಗಿ ಅಂಗೀಕರಿಸುವುದು ವ್ಯರ್ಥ. ಹೀಗೆ ಶ್ರುತಿಯು ಈ ಅಂಶದಲ್ಲಿ ಅಯುಕ್ತವಾಗುತ್ತದೆ. ಆಗ ಇಂತಹ ಶ್ರುತಿಯ ವಿರೋಧ ಬ್ರಹ್ಮನೇ ಜಗತ್ಕರ್ತಾ ಎಂಬುದಕ್ಕೆ ಬರುತ್ತದೆ. ಆದರೆ ಬ್ರಹ್ಮನು ಲೀಲೆಯಿಂದ ವಾಯು ಮೊದಲಾದವನ್ನು ದ್ವಾರವಾಗಿ ಸ್ವೀಕರಿಸುತ್ತಾನೆ ಎಂದಾಗ ಈ ವಿರೋಧಕ್ಕೆ ಅವಕಾಶವಿಲ್ಲ. (ಹಿಂದೆ ಹೇಳಿದ ತದರ್ಥಚಿಂತಾದ ಫಲಫಲಿಭಾವವನ್ನು ಸ್ಪಷ್ಟಪಡಿಸಿದ್ದಾರೆ)

ತೇಜೋಧಿಕರಣ (೨-೩-೪)

**प्रकाशः** – टीकाक्षरार्थमाह – **विवादाभाव इतीत्यादिना** । पौनरुक्त्यं निराह – **तदनन्यत्वमिति** ।। कथं टीकोक्तशङ्कानिरासोऽनेनेत्यतो भावमाह – **देवतानां चेति**

**।। इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे तेजोधिकरणं सम्पूर्णम् ।।४।।**

ಟೀಕಾದಲ್ಲಿರುವ ಪದಗಳಿಗೆ ಅರ್ಥ ಹೇಳುತ್ತಿದ್ದಾರೆ 'ವಿವಾದ' ಎಂಬುದಾಗಿ. ಈ ಅಧಿಕರಣಕ್ಕೆ ಪುನರುಕ್ತಿ ಶಂಕಾ ಬಂದರೆ ಅದನ್ನು ನಿರಾಕರಿಸುತ್ತಿದ್ದಾರೆ 'ತದನನ್ಯತ್ವ' ಎಂಬುದಾಗಿ. ಟೀಕಾದಲ್ಲಿ ಹೇಳಿರುವ ಪ್ರಶ್ನೆಗೆ ಇದರಿಂದ ಹೇಗೆ ಪರಿಹಾರ ದೊರೆತಂತಾಯಿತು ಎಂದರೆ ಅದರ ಅಭಿಪ್ರಾಯ ಸ್ಪಷ್ಟಪಡಿಸುತ್ತಿದ್ದಾರೆ 'ದೇವತಾನಾಂ' ಎಂಬುದಾಗಿ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ತೇಜೋಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

# ಅಬಧಿಕರಣ

(೨-೩-೫)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

***

॥ ಶ್ರೀಗುರುಭ್ಯೋ ನಮಃ ॥

# ಅಬಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् — आपः ॥**

ಭೂತಪದಾರ್ಥವಾದ ಜಲವೂ ಕೂಡ ಬ್ರಹ್ಮನಿಂದಲೇ ಹುಟ್ಟಿದೆ. ಅಗ್ನಿಯಿಂದಲ್ಲ. ಏಕೆಂದರೆ 'ತದಪೋऽಸೃಜತ' ಎಂಬ ಶ್ರುತಿಯು ಬ್ರಹ್ಮನಿಂದಲೇ ಜಲವು ಹುಟ್ಟಿದೆ ಎಂದು ಹೇಳುತ್ತಿದೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका —** अत्रापि **अतः** तथाह्याहेत्यनुवर्तते । तथाच **आपः** अतः विष्णोरेवोत्पत्तिमत्यः । न त्वन्यतः । कुतः? **हि** यस्मात् ब्रह्मैवेदमिति श्रुतिस्तथाऽऽह तस्मादित्यर्थः ॥१॥

ಈ ಸೂತ್ರದಲ್ಲಿ 'ಅತಃ ತಥಾಹ್ಯಾಹ' ಎಂಬ ಹಿಂದಿನ ಸೂತ್ರಗಳಲ್ಲಿರುವ ಪದಗಳನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಆಪಃ = ಜಲವು ಅತಃ = ವಿಷ್ಣುವಿನಿಂದಲೇ ಹುಟ್ಟುತ್ತದೆ, ಅಗ್ನಿಯಿಂದಲ್ಲ. ಹಿ = ಏಕೆಂದರೆ 'ಬ್ರಹ್ಮೈವೇದಂ' ಎಂಬ ಶ್ರುತಿಯು, ತಥಾऽऽಹ = ಹಾಗೆಯೇ ಹೇಳುತ್ತಿದೆ.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ಅಬಧಿಕರಣವು ಮುಗಿಯಿತು.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् — ।। आपः ।।१।।**

**'ब्रह्मैवेदमग्र आसीत् तदपोऽसृजत तदिदं सर्वम्' इति श्रुतेः 'अग्नेरापः' (तै.२.१.) इत्युक्तेऽपि ब्रह्मण एवाबादिसृष्टिः ।**

ಅನುವಾದ - ಹಿಂದಿನ ಅಧಿಕರಣದಲ್ಲಿ ತೇಜಸ್ಸಿನ ಉತ್ಪತ್ತಿಗೆ ಪರಮಾತ್ಮನೇ ಕಾರಣನೆಂದು ಹೇಳಲಾಯಿತು. ಈಗ ನೀರಿನ ಉತ್ಪತ್ತಿಗೆ ಪರಮಾತ್ಮನೇ ಕಾರಣನೆಂದು ಪ್ರತಿಪಾದಿಸುತ್ತಿದ್ದಾರೆ. ಪ್ರಳಯ ಕಾಲದಲ್ಲಿ ಬ್ರಹ್ಮನೊಬ್ಬನೇ ಇದ್ದನು ಅವನು ನೀರನ್ನು ಸೃಷ್ಟಿ ಮಾಡಿದನು. ಇದೆಲ್ಲವೂ ಬ್ರಹ್ಮನೇ ಆಗಿದೆ. ಹೀಗೆ ಶ್ರುತಿಯಿರುವುದರಿಂದ 'ಅಗ್ನೇರಾಪಃ' ಅಗ್ನಿಯಿಂದ ನೀರು ಹುಟ್ಟಿತು ಎಂದು ಶ್ರುತಿಯಲ್ಲಿ ಹೇಳಿದ್ದರೂ ನೀರಿಗೆ ಅಗ್ನಿಯು ಕಾರಣವಲ್ಲ ಬ್ರಹ್ಮನೇ ಕಾರಣನೆಂದು ತಿಳಿಯಬೇಕು.

ಪ್ರತಿಪದಾರ್ಥ -- ಬ್ರಹ್ಮೈವ = ಬ್ರಹ್ಮನೇ, ಅಗ್ರೇ = ಸೃಷ್ಟಿಯ ಮೊದಲು, ಆಸೀತ್ = ಇದ್ದನು, ಇದಂ = ಈ, ಬ್ರಹ್ಮೈವ = ಬ್ರಹ್ಮನೊಬ್ಬನೇ, ಆಸೀತ್= ಇದ್ದನು, ತತ್ = ಆ ಬ್ರಹ್ಮನ ದೆಸೆಯಿಂದ, ಅಪಃ = ನೀರು, ಅಸೃಜತ = ಹುಟ್ಟಿತು. ಇದಂ ಸರ್ವಂ = ಈ ಜಗತ್ತು ಬ್ರಹ್ಮನಿಂದಲೇ ಆಗಿದೆ. ಇತಿ = ಹೀಗೆ, ಶ್ರುತೇಃ = ಶ್ರುತಿ ಇರುವುದರಿಂದ, ಅಗ್ನೇರಾಪಃ = ಅಗ್ನಿಯಿಂದ ನೀರು ಹುಟ್ಟಿತು. ಇತಿ ಉಕ್ತೇಪಿ = ಹೀಗೆ ಶ್ರುತಿಯಲ್ಲಿ ಹೇಳಿದ್ದರೂ, ಬ್ರಹ್ಮಣ ಏವ = ಬ್ರಹ್ಮನಿಗೆ ಮಾತ್ರ, ಅಬಾದಿಸೃಷ್ಟಿಃ = ನೀರು ಮೊದಲಾದವುಗಳಿಗೆ ಕಾರಣತ್ವವು ಯುಕ್ತವಾಗುತ್ತದೆ.

**भाष्यम् —**

**'एतस्माज्जायते प्राणो मनस्सर्वेन्द्रियाणि च ।**
**खं वायुर्ज्योतिरापः पृथिवी विश्वस्य धारिणी ।।' (मुं २.१.३.)**

**इत्यादि च ।**

ಅನುವಾದ - ಪರಮಾತ್ಮನಿಂದಲೇ ಮುಖ್ಯಪ್ರಾಣನ ಮನಸ್ಸು, ಸಕಲ ಇಂದ್ರಿಯಗಳು ಆಕಾಶ, ವಾಯು, ಜ್ಯೋತಿ, ನೀರು, ವಿಶ್ವಧಾರಕವಾದ ಭೂಮಿ ಎಲ್ಲವೂ ಕೂಡ ಹುಟ್ಟುತ್ತವೆ. ಹೀಗೆ ಸಕಲಕ್ಕೂ ಬ್ರಹ್ಮನೇ ಕಾರಣವೆನ್ನಲು ಪ್ರಮಾಣಗಳಿವೆ.

ಪ್ರತಿಪದಾರ್ಥ -- ಏತಸ್ಮಾದ್ = ಬ್ರಹ್ಮನ ದೆಸೆಯಿಂದ, ಪ್ರಾಣಃ = ಮುಖ್ಯಪ್ರಾಣನು, ಮನಃ = ಮನಸ್ಸು, ಚ = ಮತ್ತು, ಸರ್ವೇಂದ್ರಿಯಾಣಿ = ಸಕಲ ಇಂದ್ರಿಯಗಳು, ಖಂ = ಆಕಾಶವು, ವಾಯುಃ = ಗಾಳಿ, ಜ್ಯೋತಿಃ = ಬೆಂಕಿ, ಆಪಃ = ನೀರು, ವಿಶ್ವಸ್ಯ ಧಾರಿಣೀ = ಸಮಗ್ರ ವಿಶ್ವಕ್ಕೆ ಧಾರಕವಾದ, ಪೃಥಿವೀ = ಭೂಮಿಯು, ಜಾಯತೇ =

ಹುಟ್ಟುತ್ತದೆ. ಇತ್ಯಾದಿ ಚ = ಇವೇ ಮೊದಲಾದ ಶ್ರುತಿಪ್ರಮಾಣಗಳಿಂದ ಸಕಲಕ್ಕೂ ಬ್ರಹ್ಮನೇ ಕಾರಣನೆಂದು ತಿಳಿಯುತ್ತದೆ.

**भाष्यम् –**

**'कर्ता सर्वस्य वै विष्णुः एक एव न संशयः ।**
**इतरेषां तु सत्ताद्या यत एव तदाज्ञया ।।'** **इति भविष्यत्पुराणे ।**

ಅನುವಾದ - ಸಕಲಕ್ಕೂ ಬ್ರಹ್ಮನೇ ಕರ್ತೃ. ಆ ವಿಷ್ಣು ಒಬ್ಬನೇ ಎಲ್ಲಡೆ ನೆಲೆಸಿದ್ದಾನೆ. ಈ ವಿಷಯದಲ್ಲಿ ಸಂದೇಹವಿಲ್ಲ. ಮುಖ್ಯಪ್ರಾಣ ಮೊದಲಾದವರ ಸತ್ತಾ, ಪ್ರವೃತ್ತಿ, ಪ್ರತೀತಿ ಎಲ್ಲವೂ ಭಗವಂತನ ಆಜ್ಞೆಯಿಂದಲೇ ಇರುತ್ತವೆ. ಹೀಗೆ ಭವಿಷ್ಯತ್‌ಪುರಾಣವು ಹೇಳುತ್ತಿದೆ.

ಪ್ರತಿಪದಾರ್ಥ -- ಏಕಏವ = ಒಬ್ಬನೇ ಆದ, ವಿಷ್ಣುಃ = ಮಹಾವಿಷ್ಣುವು, ಸರ್ವಸ್ಯ ವೈ = ಸಕಲಕ್ಕೂ ಕೂಡ, ಕರ್ತೃ = ಕರ್ತನಾಗಿರುತ್ತಾನೆ. ನ ಸಂಶಯಃ = ಈ ವಿಷಯದಲ್ಲಿ ಸಂಶಯವಿಲ್ಲ. ಇತರೇಷಾಂ = ವಾಯು ಮೊದಲಾದವರ, ಸತ್ತಾದ್ಯಾ = ಸತ್ತಾ, ಪ್ರತೀತಿ, ಪ್ರವೃತ್ತಿ ಮೊದಲಾದವು, ತದಾಜ್ಞಾಯಾ ಏವ = ವಿಷ್ಣುವಿನ ಆಜ್ಞೆಯಿಂದಲೇ ನಡೆಯುತ್ತವೆ. ಇತಿ = ಹೀಗೆ, ಭವಿಷ್ಯತ್‌ಪುರಾಣೇ = ಭವಿಷ್ಯತ್ ಪುರಾಣದಲ್ಲಿ ಹೇಳಲಾಗಿದೆ.

**भाष्यम् – वामने च –**

**'तत्र तत्र स्थितो विष्णुः तत्तच्छक्तीः प्रबोधयन् ।**
**एक एव महाशक्तिः कुरुते सर्वमञ्जसा ।। इति ।।'**

ಅನುವಾದ - ಪ್ರತಿಯೊಂದು ಪದಾರ್ಥಗಳಲ್ಲಿ ನೆಲೆಸಿರುವ ವಿಷ್ಣುವು ಆಯಾ ಪದಾರ್ಥಗಳ ಶಕ್ತಿಯನ್ನು ಉದ್ಭವಗೊಳಿಸಿ ಪ್ರೇರಣೆ ಮಾಡುತ್ತಾನೆ. ತಾನೊಬ್ಬನೇ ಮಹಾಶಕ್ತಿಯಾಗಿದ್ದಾನೆ. ಮತ್ತು ಪ್ರತಿಯೊಂದು ಕಾರ್ಯಗಳನ್ನು ಸಮಂಜಸವಾಗಿ ಮಾಡುತ್ತಾನೆ. ಹೀಗೆ ವಾಮನಪುರಾಣದಲ್ಲಿ ಹೇಳಿದ್ದಾರೆ.

ಪ್ರತಿಪದಾರ್ಥ -- ತತ್ರತತ್ರ = ಅಗ್ನಿ ಮೊದಲಾದ ಪ್ರತಿಯೊಂದು ವಸ್ತುಗಳಲ್ಲಿ, ಸ್ಥಿತಃ = ನೆಲೆಸಿರುವ, ವಿಷ್ಣುಃ = ಮಹಾವಿಷ್ಣುವು, ತತ್ತಚ್ಛಕ್ತೀಃ = ಅಗ್ನಿ ಮೊದಲಾದವುಗಳಿಗೆ ಸಾಮರ್ಥ್ಯಗಳನ್ನು, ಪ್ರಬೋಧಯನ್ = ಉದ್‌ಬೋಧನೆ ಮಾಡುತ್ತಾ ನೆಲೆಸಿದ್ದಾನೆ. ಸರ್ವಂ = ಸಕಲ ಬಗೆಯ ಕಾರ್ಯಗಳನ್ನು, ಅಂಜಸಾ = ಚೆನ್ನಾಗಿ, ಕುರುತೇ = ಮಾಡುತ್ತಾನೆ. ಇತಿ = ಹೀಗೆ, ವಾಮನೇ ಚ = ವಾಮನಪುರಾಣದಲ್ಲಿಯೂ ಕೂಡ ಹೇಳಲಾಗಿದೆ.

**भाष्यम् – प्रत्यक्षत एव घर्मात् स्वेदादिदृष्टेः आपः इति पृथग्वचनम् (पुनः प्रतिषेधः) ।।१।।**

**।। इति श्रीमदानन्दतीर्थभगवत्पादाचार्यविरचिते**

**ब्रह्मसूत्रभाष्ये अबधिकरणम् ।। ५ ।।**

ಪರಿಪೂರ್ಣಚಂದ್ರಿಕಾ

ಅನುವಾದ - ತಾಪವಾದಾಗ ಬೆವರುತ್ತದೆ. ಅಳುವುದರಿಂದ ಕಣ್ಣೀರು ಬರುತ್ತದೆ. ಇದು ಪ್ರತಿಯೊಬ್ಬರ ಅನುಭಸಿದ್ಧವಾಗಿರುವುದರಿಂದ ಅಗ್ನಿಯಿಂದಲೇ ನೀರು ಹುಟ್ಟಿತು ಎನ್ನುವುದು ಹೇಗೆ ? ಈ ಆಕ್ಷೇಪಕ್ಕೆ ಉತ್ತರ ನೀಡಲು ಈ ಅಧಿಕರಣ ಹೊರಟಿದೆ. ಆದ್ದರಿಂದ ಪುರುಕ್ತಿಗೆ ಅವಕಾಶವಿಲ್ಲ.

ಪ್ರತಿಪದಾರ್ಥ -- ಘರ್ಮಾತ್ = ತಾಪದಿಂದ ಭಯದಿಂದ ದುಃಖದಿಂದ, ಸ್ವೇದಾದಿದೃಷ್ಟೇಃ = ಬೆವರುವುದು ಕಣ್ಣೀರು ಬರುವುದು ಮೊದಲಾದವುಗಳು ಬರುವುದು ಎಲ್ಲರ ಅನುಭವಸಿದ್ಧವಾಗಿರುವುದರಿಂದ, ಆಪಃ ಇತಿ = 'ಆಪಃ' ಎಂಬ ಸೂತ್ರವು, ಪೃಥಗ್ ವಚನಮ್ = ಪ್ರತ್ಯೇಕವಾಗಿ ಹೇಳಲ್ಪಟ್ಟಿದೆ.

ಇಲ್ಲಿಗೆ ಅಬಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**तत्वप्रकाशिका – अत्र ब्रह्मणि श्रुतिसमन्वयसिद्ध्यर्थमपां जन्मविषय-श्रुतिविरोधपरिहारादस्ति शास्त्रादिसङ्गतिः । सकलकारणं ब्रह्मेत्युक्तम् । तत्रापां तेजोजातत्वे तद्विरुद्धं स्यादिति तन्निराकरणीयम् ।**

ಈ ಅಧಿಕರಣದಲ್ಲಿಯೂ ಪರಬ್ರಹ್ಮನಲ್ಲಿ ಶ್ರುತಿಸಮನ್ವಯವು ಸಿದ್ಧವಾಗಬೇಕು. ಅದಕ್ಕಾಗಿ ನೀರಿಗೆ ತೇಜಸ್ಸಿನಿಂದ ಸೃಷ್ಟಿಯನ್ನು ಹೇಳುವ ಶ್ರುತಿವಿರೋಧವನ್ನು ಪರಿಹಾರ ಮಾಡಬೇಕು. ಆದ್ದರಿಂದ ಶಾಸ್ತ್ರಾದಿ ಸಂಗತಿಗಳು ಇರುತ್ತವೆ.

ಸಕಲ ಜಗತ್ತಿಗೆ ಕಾರಣನಾದವನು ಬ್ರಹ್ಮನಾಗಿದ್ದಾನೆಂದು ಹೇಳಲಾಗಿದೆ. ಜಗತ್ತಿನಲ್ಲಿ ಸೇರಿರುವ ನೀರು ತೇಜಸ್ಸಿನಿಂದ ಉತ್ಪತ್ತಿಯನ್ನು ಹೊಂದಿದೆ ಎಂದು ಹೇಳಿದರೆ ಸಕಲ ಕಾರಣತ್ವಕ್ಕೆ ವಿರುದ್ಧವಾಗುತ್ತವೆ. ಆದ್ದರಿಂದ ನೀರು ತೇಜಸ್ಸಿನಿಂದ ಹುಟ್ಟಿದೆ ಎಂಬುದನ್ನು ನಿರಾಕರಣೆ ಮಾಡಲೇಬೇಕು.

ವಿವರಣೆ - 'ಆಕಾಶಾದ್ವಾಯುಃ ವಾಯೋರಗ್ನಿಃ ಅಗ್ನೇರಾಪಃ' ಎಂಬ ಶ್ರುತಿಕ್ರಮದಲ್ಲಿಯೇ ಅಧಿಕರಣಗಳ ಕ್ರಮವೂ ಕೂಡ ಪ್ರಸಕ್ತವಾಗುತ್ತಿವೆ. ಹಿಂದಿನ ಅಧಿಕರಣದಲ್ಲಿ ತೇಜಸ್ಸಿನ ಸೃಷ್ಟಿಯ ಬಗ್ಗೆ ಹೇಳಲಾಯಿತು. ಪ್ರಕೃತ 'ಅಗ್ನೇರಾಪಃ' ಎಂಬ ವಾಕ್ಯವನ್ನು ವಿಷಯವನ್ನಾಗಿ ಪರಿಗಣಿಸಿ ಇದರ ಬಗ್ಗೆ ವಿಚಾರ ಮಾಡುತ್ತಿದ್ದಾರೆ. ಆದ್ದರಿಂದ ಈ ಅಧಿಕರಣಕ್ಕೆ ತೇಜೋಧಿಕರಣದಿಂದ ಆನಂತರ್ಯಸಂಗತಿಯು ಇರುತ್ತದೆ.

**तत्वप्रकाशिका – तेजसोऽनन्तरप्राप्ता आपोऽत्र विषयः । किं तेजसो जायन्ते ब्रह्मणो वेति सन्देहः । 'अग्नेरापः' 'तदपोऽसृजत' इति श्रुतिविगानं सन्देहबीजम् ।**

ತೇಜಸ್ಸಿನ ಅನಂತರ ನೀರು ಶ್ರುತಿಯಲ್ಲಿ ಪ್ರಸಕ್ತವಾಗಿರುವುದರಿಂದ ಈ ಅಧಿಕರಣದಲ್ಲಿ ನೀರು ವಿಷಯವಾಗಿದೆ. ಇದು ತೇಜಸ್ಸಿನಿಂದ ಹುಟ್ಟುತ್ತದೋ ಅಥವಾ ಬ್ರಹ್ಮನಿಂದಲೋ ? ಎಂಬುದು ಸಂದೇಹ. 'ಅಗ್ನೇರಾಪಃ' ಎಂಬ ಶ್ರುತಿಯು ಅಗ್ನಿಯಿಂದ ನೀರು ಹುಟ್ಟಿತು ಎನ್ನುತ್ತಿದೆ. 'ತದಪೋऽಸೃಜತ' ಎಂಬ ಶ್ರುತಿಯು ಬ್ರಹ್ಮನಿಂದ ನೀರು ಹುಟ್ಟಿತು ಎನ್ನುತ್ತಿದೆ. ವಿರುದ್ಧವಾದ ಈ ಎರಡು ಶ್ರುತಿಗಳೇ ಸಂದೇಹಬೀಜ.

**तत्वप्रकाशिका – अग्नेरेवापो जायन्त इति पूर्वः पक्षः । 'अग्नेरापः' इति श्रुतेः। न चान्यश्रुतिविरोधः । विमता आपस्तेजसो जायन्ते अस्वात् स्वेदादिवदिति युक्तियुक्तत्वेन तेजोजातत्वश्रुतेः प्राबल्यात् । बलवदेतच्छ्रुतिविरुद्धायास्तस्या एवाप्रामाण्योपपत्तेः ।**

ಅಗ್ನಿಯಿಂದಲೇ ನೀರು ಹುಟ್ಟಿತು ಎಂಬುದು ಅಧಿಕರಣದ ಪೂರ್ವಪಕ್ಷ. 'ಅಗ್ನೇರಾಪಃ' ಎಂಬ ಶ್ರುತಿಯೇ ಇದಕ್ಕೆ ಆಧಾರ. ಈ ಶ್ರುತಿಗೆ 'ತದಪೋऽಸೃಜತ' ಎಂಬ ಮತ್ತೊಂದು ಶ್ರುತಿಯಿಂದ ವಿರೋಧ ಬರುವುದಿಲ್ಲ. ಏಕೆಂದರೆ 'ವಿಮತಾಃ ಆಪಃ ತೇಜಸಃ ಜಾಯಂತೇ ಅಪ್ತ್ವಾತ್ ಸ್ವೇದಾದಿವತ್' 'ಬೆವರು ನೀರಾಗಿದೆ ತೇಜಸ್ಸಿನಿಂದ ಹುಟ್ಟುತ್ತದೆ. ಅದರಂತೆ ವಿವಾದಕ್ಕೆ ವಿಷಯವಾದ ನೀರೂ ಕೂಡ ನೀರಾಗಿರುವುದರಿಂದ ತೇಜಸ್ಸಿನಿಂದಲೇ ಹುಟ್ಟಬೇಕು' ಎಂಬ ಯುಕ್ತಿಯಿಂದ ನೀರಿಗೆ ತೇಜೋಜಾತತ್ವವನ್ನು ಸಮರ್ಥಿಸಬಹುದು. ಹೀಗೆ 'ಅಗ್ನೇರಾಪಃ' ಎಂಬ ಶ್ರುತಿಯು ಯುಕ್ತಿಯಿಂದ ಉಪೋದ್ಬಲಿತವಾದ್ದರಿಂದ ಪ್ರಬಲವಾಗಿದೆ.

ಹೀಗೆ ಬಲಿಷ್ಠವಾದ 'ಅಗ್ನೇರಾಪಃ' ಎಂಬ ಶ್ರುತಿಗೆ ವಿರುದ್ಧವಾಗಿರುವುದರಿಂದ 'ತದಪೋऽಸೃಜತ' ಎಂಬ ಶ್ರುತಿಗೆ ಪರಮಾತ್ಮನಿಂದ ನೀರು ಹುಟ್ಟಿತು ಎಂಬರ್ಥದಲ್ಲಿ ಅಪ್ರಾಮಾಣ್ಯವನ್ನೇ ಹೇಳಬೇಕು.

**तत्वप्रकाशिका – तथा च श्रुत्यन्तरं 'तत्तेज ऐक्षत बहु स्यां प्रजायेयेति तदपोऽसृजत । तस्माद्यत्र क्व च शोचति स्वेदते वा पुरुषस्तेजस एव तद्ध्यापो जायन्ते' इति । अतो न सर्वकारणे ब्रह्मणि श्रुतिसमन्वयसिद्धिरिति प्राप्ते सिद्धान्तयत्युत्रमुपन्यस्य व्याचष्टे – आप इति ।।**

ಆದ್ದರಿಂದ 'ತತ್ತೇಜೋ ಐಕ್ಷತ ಬಹು ಸ್ಯಾಂ ಪ್ರಜಾಯೇಯೇತಿ ತದಪೋऽಸೃಜತ ತಸ್ಮಾದ್ಯತ್ರ ಕ್ವಚ ಶೋಚತಿ ಸ್ವೇದತೇ ವಾ ಪುರುಷಸ್ತೇಜಸ ಏವ ತದ್ಧ್ಯಾಪೋ ಜಾಯಂತೇ' 'ಆ ತೇಜಸ್ಸು ನೋಡಿತು. ಅನೇಕ ರೂಪವನ್ನು ತಾಳುತ್ತೇನೆ ಎಂದು ಆಲೋಚಿಸಿ ನೀರನ್ನು ಸೃಷ್ಟಿ ಮಾಡಿತು.

ಆದ್ದರಿಂದ ಎಲ್ಲಿಯಾದರೂ ಯಾರಾದರೂ ದುಃಖವನ್ನು ಅನುಭವಿಸಿದರೆ ಅಥವಾ ಬೆವರಿದರೆ ಅಲ್ಲಿ ತೇಜಸ್ಸಿನಿಂದಲೇ ನೀರು ಹುಟ್ಟುತ್ತದೆ ಎಂಬ ಈ ಶ್ರುತಿಯೂ ಕೂಡ ತೇಜಸ್ಸಿನಿಂದಲೇ ನೀರಿನ ಸೃಷ್ಟಿಯನ್ನು ಹೇಳುತ್ತಿದೆ.

ಆದ್ದರಿಂದ ಪರಬ್ರಹ್ಮನು ಸಕಲಕಾರಣನಾಗಿದ್ದಾನೆಂಬ ವಿಷಯದಲ್ಲಿ ಶ್ರುತಿಸಮನ್ವಯವನ್ನು ಬಾಧಿಸಲಾಗದು. ಇಷ್ಟು ಅಧಿಕರಣದ ಪೂರ್ವಪಕ್ಷ.

ಸಿದ್ಧಾಂತಸ್ಥಾಪಕವಾದ ಸೂತ್ರವನ್ನು 'ಆಪಃ' ಎಂಬುದಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ಪ್ರತ್ಯಕ್ಷ ಹಾಗೂ ವ್ಯಾಪ್ತಿ ಎರಡರ ಬಲದಿಂದ ಯುಕ್ತಿಯು ಪ್ರಬಲವಾಗಿದೆ ಎಂಬುದನ್ನು ಪೂರ್ವಪಕ್ಷಕಾರರು ಸಮರ್ಥಿಸಿ ಶ್ರುತಿಸಂವಾದಿಯಾಗಿರುವುದರಿಂದಲೂ ಯುಕ್ತಿಯು ಪ್ರಬಲವಾಗಿದೆ ಎನ್ನುವುದಕ್ಕಾಗಿ 'ತಥಾಚ ಶ್ರುತ್ಯಂತರಂ' ಎಂಬುದಾಗಿ ಹೇಳುತ್ತಿದ್ದಾರೆ. (ಭಾವಬೋಧ).

**तत्वप्रकाशिका – अत्राप्यतस्तथा ह्याहेति ग्राह्यम् । नाग्नेराप इति श्रुतेरपामन्यत उत्पत्तिर्ग्राह्या किं त्वापोऽपि ब्रह्मण एव जायन्ते ब्रह्मैवेति श्रुतेरित्यर्थः।**

ಈ ಸೂತ್ರದಲ್ಲಿಯೂ ಕೂಡ ಹಿಂದಿನ ಸೂತ್ರದಿಂದ 'ಅತಃ' 'ತಥಾ' 'ಹಿ' 'ಆಹ' ಈ ಪದಗಳನ್ನು ಅಧ್ಯಾಹಾರ ಮಾಡಬೇಕು. 'ಅಗ್ನೇರಾಪಃ' ಎಂಬ ಶ್ರುತಿಯ ಆಧಾರದಿಂದ ನೀರಿಗೆ ಬ್ರಹ್ಮನಿಂದ ಭಿನ್ನವಾದ ವಸ್ತುವಿನಿಂದ ಉತ್ಪತ್ತಿಯನ್ನು ಒಪ್ಪಬಾರದು. ಮತ್ತೇನೆಂದರೆ ನೀರೂ ಕೂಡ ಬ್ರಹ್ಮನಿಂದಲೇ ಹುಟ್ಟುತ್ತದೆಂದೇ ಹೇಳಬೇಕು. ಏಕೆಂದರೆ 'ಬ್ರಹ್ಮೈವೇದಂ' ಎಂಬ ಶ್ರುತಿಯು ಬ್ರಹ್ಮನಿಂದಲೇ ಸಕಲವು ಹುಟ್ಟುತ್ತಿದೆ ಎಂದು ಹೇಳುತ್ತಿರುವುದರಿಂದ ಎಂಬುದು ಭಾಷ್ಯದ ಅರ್ಥ.

ವಿವರಣೆ - 'ಬ್ರಹ್ಮೈವ' ಇತ್ಯಾದಿ ಭಾಷ್ಯವು ಉತ್ಸೂತ್ರಿತವಾಯಿತಲ್ಲವೇ? ಎಂಬ ಆಶಂಕೆಯ ಪರಿಹಾರಕ್ಕಾಗಿ 'ಅತ್ರಾಪಿ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. 'ಬ್ರಹ್ಮೇವೇತಿ ಶ್ರುತೇಃ ಇತ್ಯರ್ಥಃ' ಎಂಬುದಾಗಿ ಟೀಕೆಯಲ್ಲಿ 'ಬ್ರಹ್ಮನಿಂದಲೇ ಎಲ್ಲವೂ ಹುಟ್ಟಿತು' ಎಂದು ಶ್ರುತಿ ಇರುವುದರಿಂದ ಎಂದು ಹೇಳಿದ್ದಾರೆ. ಇದು ಉಪಲಕ್ಷಣ. ಮುಖ್ಯಾರ್ಥ ತ್ಯಾಗವನ್ನೂ ಕೂಡ ಮಾಡಬೇಕಾಗುತ್ತದೆ ಎಂಬ ನ್ಯಾಯವಿವರಣಕ್ಕೆ ಅನುಸಾರಿಯಾಗಿ 'ಸ ಇದಂ ಸರ್ವಮಸೃಜತ' ಎಂಬ ಶ್ರುತಿಯಲ್ಲಿರುವ ಸರ್ವಶಬ್ದಕ್ಕೂ ಮುಖ್ಯಾರ್ಥವನ್ನು ತ್ಯಾಗ ಮಾಡಬೇಕಾಗುತ್ತದೆಂದು ಇಲ್ಲಿ ವಿವಕ್ಷಿಸಬೇಕು. ಇಲ್ಲದಿದ್ದರೆ ಭಾಷ್ಯದಲ್ಲಿ ಈ ಶ್ರುತಿಯನ್ನು ಉಲ್ಲೇಖ ಮಾಡುತ್ತಿರಲಿಲ್ಲ. (ಭಾವಬೋಧ).

**तत्वप्रकाशिका – अत्र न्यायप्राप्तभूतवायुपृथिव्योषध्यादीनां ब्रह्मजातत्वज्ञाप नार्थमादिपदं भाष्ये । सूत्रेऽप्पदमन्योपलक्षणम् । वाय्वादेः सर्वस्य ब्रह्मजातत्वं कुत इत्यत आह – एतस्मादिति ।।**

ಭಾಷ್ಯದಲ್ಲಿ ನ್ಯಾಯಪ್ರಾಪ್ತವಾದ ಭೂತವಾಯು, ಪೃಥಿವೀ, ಓಷಧಿ ಇವುಗಳೂ ಕೂಡ ಬ್ರಹ್ಮನಿಂದಲೇ ಹುಟ್ಟುತ್ತವೆ ಎಂದು ತಿಳಿಸುವುದಕ್ಕಾಗಿ ಆದಿ ಪದವನ್ನು ಪ್ರಯೋಗಿಸಿದ್ದಾರೆ. ಸೂತ್ರದಲ್ಲಿರುವ 'ಅಪ್' ಎಂಬ ಪದವು ಇವುಗಳಿಗೆಲ್ಲ ಉಪಲಕ್ಷಣವಾಗಿದೆ.

ವಾಯು ಮೊದಲಾದವುಗಳು ಬ್ರಹ್ಮನಿಂದಲೇ ಉತ್ಪತ್ತಿಯನ್ನು ಪಡೆದಿವೆ ಎಂಬುದನ್ನು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಗೆ 'ಏತಸ್ಮಾತ್' ಇತ್ಯಾದಿ ಭಾಷ್ಯವಾಕ್ಯವು ಹೊರಟಿದೆ.

ವಿವರಣೆ - 'ಅಬಾದಿಸೃಷ್ಟಿಃ' ಎಂದು ಭಾಷ್ಯದಲ್ಲಿ ಹೇಳಿದ್ದಾರೆ. ಇಲ್ಲಿರುವ ಆದಿಪದದಿಂದ ಉಳಿದವುಗಳನ್ನು ವಿವಕ್ಷಿಸಬೇಕು. 'ಆಕಾಶಾದ್ವಾಯುಃ' 'ವಾಯೋರಗ್ನಿಃ' 'ಅಗ್ನೇರಾಪಃ' 'ಅದ್ಭ್ಯಃಪೃಥಿವೀ' 'ಪೃಥಿವ್ಯಾ ಓಷಧಯಃ' 'ಓಷಧೀಭ್ಯೋಽನ್ನಂ' 'ಅನ್ನಾತ್ ಪುರುಷಃ' ಎಂಬ ತೈತ್ತಿರೀಯದ ಪ್ರಕರಣದಲ್ಲಿ ಪೃಥಿವೀ, ಓಷಧಿ, ಅನ್ನಗಳನ್ನು ವಿವಕ್ಷಿಸಿ ಇವುಗಳೂ ಕೂಡ ಬ್ರಹ್ಮನಿಂದಲೇ ಉತ್ಪತ್ತಿಯನ್ನು ಪಡೆದಿವೆ ಎಂಬುದನ್ನು ಇಲ್ಲಿ ಇಟ್ಟುಕೊಳ್ಳಬೇಕು. ಸೂತ್ರದಲ್ಲಿರುವ 'ಅಪ್' ಪದವೂ ಕೂಡ ಇವುಗಳಿಗೆ ಉಪಲಕ್ಷಕವಾಗಿದೆ.

ವಾಸ್ತವಿಕವಾಗಿ ಹಿಂದಿನ ಅಧಿಕರಣದಲ್ಲೇ 'ತೇಜಃ' ಎಂಬ ಪದದಿಂದ ಇವುಗಳೆಲ್ಲವೂ ಉಪಲಕ್ಷಿತವಾಗಿ ಸಂಗೃಹೀತವಾಗಿವೆ. ಈ ಅರ್ಥವನ್ನು ವಿವಕ್ಷಿಸಿಯೇ ಭಾಷ್ಯದಲ್ಲಿ ಆದಿ ಪದವನ್ನು ಪ್ರಯೋಗ ಮಾಡಬೇಕು. ಏಕೆಂದರೆ 'ಪ್ರಥಮಾತಿಕ್ರಮೇ ಕಾರಣಾಭಾವಾತ್' ಎಂಬ ನ್ಯಾಯವಿರುವುದರಿಂದ. ಆದರೂ ಕೂಡ ಈ ಎರಡು ಅಧಿಕರಣಗಳ ಅರ್ಥವಿಷಯದಲ್ಲಿ ಪ್ರಮಾಣವನ್ನು ಉಲ್ಲೇಖ ಮಾಡಬೇಕು. ಆ ಪ್ರಮಾಣದಲ್ಲಿ ವಾಯು ಮೊದಲಾದವುಗಳನ್ನು ಸ್ವೀಕರಿಸಿರುವುದರಿಂದ ಅದಕ್ಕನುಸಾರಿಯಾಗಿಯೇ ಇಲ್ಲಿ ಆದಿಪದ ಪ್ರಯೋಗವನ್ನು ಮಾಡಿದ್ದಾರೆಂದು ತಿಳಿಯತಕ್ಕದ್ದು (ಭಾವಬೋಧ).

**तत्वप्रकाशिका – ननु विष्णोरिवान्येषामपि कारणत्वं किं न स्यात्तथा श्रुतेरिति । शक्त्याभावादित्याह – कर्तेति ।। उक्तयुक्त्युपेता श्रुतिः कथं तर्ह्युपपद्यत इत्यत आह – वामने चेति ।।**

ವಿಷ್ಣುವಿನಂತೆ ತೇಜಸ್ಸು ಮೊದಲಾದವುಗಳಿಗೂ ಕೂಡ ಕಾರಣತ್ವವನ್ನು ಏಕೆ ಒಪ್ಪಬಾರದು? ಈ ವಿಷಯದಲ್ಲಿಯೂ ಶ್ರುತಿಪ್ರಮಾಣವಿದೆಯಲ್ಲವೇ? ಎಂಬ ಪ್ರಶ್ನೆಗೆ ಉತ್ಪತ್ತಿ ಮಾಡುವ ಶಕ್ತಿ ತೇಜಸ್ಸು ಮೊದಲಾದವುಗಳಿಗೆ ಇಲ್ಲ ಎಂಬುದನ್ನು 'ಕರ್ತಾ' ಇತ್ಯಾದಿ ಭಾಷ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ.

ಹಿಂದೆ ಹೇಳಲ್ಪಟ್ಟ ಯುಕ್ತಿಯಿಂದ ಉಪೋದ್ಬಲಿತವಾದ ಶ್ರುತಿಯು ಹೇಗೆ ನಿಮ್ಮ ಪ್ರಕಾರ ಯುಕ್ತವಾಗುತ್ತದೆ ? ಎಂಬ ಪ್ರಶ್ನೆಗೆ 'ವಾಮನೇ ಚ' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

ವಿವರಣೆ - ಬಾಧಕಪ್ರಮಾಣವಿಲ್ಲದ ಕಾರಣ ವಿಷ್ಣುವಿನಿಂದಲೇ ನೀರು ಹುಟ್ಟಿತು ಎಂದು ಹೇಳಬೇಕೆಂದು ಸಿದ್ಧಾಂತಿಗಳಿಂದ ಸಮರ್ಥಿಸಲಾಯಿತು. ಇದರ ಮೇಲೆ ಪೂರ್ವಪಕ್ಷಿಯು ಬಾಧಕವಿಲ್ಲವೆಂದು ಹೇಗೆ ಹೇಳುತ್ತೀರಿ? 'ಅಗ್ನೇರಾಪಃ' ಎಂಬ ಶ್ರುತಿ ಬಾಧಕವಾಗಿದೆಯಲ್ಲವೇ? ಎಂಬುದಾಗಿ 'ನನು' ಇತ್ಯಾದಿ ವಾಕ್ಯದಿಂದ ಆಶಂಕಿಸುತ್ತಿದ್ದಾರೆ.

ತೇಜಸ್ಸು ಮೊದಲಾದವುಗಳಿಗೆ ನೀರು ಮೊದಲಾದವುಗಳನ್ನು ಹುಟ್ಟಿಸಲು ಶಕ್ತಿಯೇ ಇರುವುದಿಲ್ಲ. ಆದ್ದರಿಂದಲೇ ಸೂತ್ರದಲ್ಲಿ 'ಸತಃ' ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಆಗ ಸ್ವತಂತ್ರಪೂರ್ಣವಾದ ಶಕ್ತಿ ಇರುವವನು ಪರಮಾತ್ಮನು ಮಾತ್ರ. ಇವನಿಂದಲೇ ನೀರು ಮೊದಲಾದವುಗಳು ಜನ್ಮವನ್ನು ತಾಳಲು ಸಮರ್ಥವಾಗುತ್ತವೆ. ಸ್ವತಂತ್ರಪೂರ್ಣವಾಗದ ತೇಜಸ್ಸು ಮೊದಲಾದವುಗಳು ಶಕ್ತವಾಗಲಾರವು ಎಂದು ಹೇಳಿದಂತಾಗುತ್ತದೆ (ವಾಕ್ಯಾರ್ಥಮುಕ್ತಾವಳಿ).

ಪರಿಪೂರ್ಣಚಂದ್ರಿಕಾ

**तत्वप्रकाशिका – महाशक्तिरपि हरिर्लीलयैवाग्न्यादिषु स्थित्वाऽबादिकं जनयतीति श्रुत्यादि तद्विषयमिति भावः।**

ಶ್ರೀಹರಿಯು ಮಹಾಶಕ್ತಿವುಳ್ಳವನಾದರೂ ಕೂಡ ಲೀಲೆಯಿಂದಲೇ ಅಗ್ನಿ ಮೊದಲಾದವುಗಳಲ್ಲಿ ನೆಲೆಸಿ ನೀರು ಮೊದಲಾದವುಗಳನ್ನು ಹುಟ್ಟಿಸುತ್ತಾನೆ. ಹೀಗೆ 'ಅಗ್ನೇರಾಪಃ' ಇತ್ಯಾದಿ ಶ್ರುತಿಗಳು ಹೇಳುತ್ತಿವೆ ಎಂಬುದು ಭಾಷ್ಯದ ಅಭಿಪ್ರಾಯ.

**तत्वप्रकाशिका – ननु कारणत्वेनेत्यत्रैवापां ब्रह्मणो जन्मनः सिद्धत्वाद् व्यर्थमेवेदमधिकरणम् । अथो भयकारणत्वनिवृत्त्यर्थमुच्यते । तदपि पूर्वन्यायेन निवृत्तमित्यत आह – घर्मादिति ।।**

'ಕಾರಣತ್ವೇನ ಚ ಆಕಾಶಾದಿಷು' ಇತ್ಯಾದಿ ಸೂತ್ರದಲ್ಲಿ ನೀರು ಮೊದಲಾದವುಗಳು ಬ್ರಹ್ಮನಿಂದಲೇ ಹುಟ್ಟುತ್ತದೆಂದು ಹೇಳಲಾಗಿದೆ. ಆದ್ದರಿಂದ ಈ ಅಧಿಕರಣವು ವ್ಯರ್ಥವೇ ಆಗಿದೆ. ಇನ್ನು ಬ್ರಹ್ಮ ಹಾಗೂ ತೇಜಸ್ಸು ಎರಡೂ ಕೂಡ ಕಾರಣಗಳಾಗಿವೆ ಎಂಬ ಆಶಂಕೆಯ ನಿರಾಕರಣೆಗಾಗಿ ಈ ಅಧಿಕರಣವು ಹೊರಟದೆ ಎಂದು ಹೇಳಬೇಕು. ಆದರೆ ಇದನ್ನೂ ಕೂಡ ಹಿಂದಿನ ಅಧಿಕರಣದಲ್ಲೇ ನಿರಾಕರಣೆ ಮಾಡಿದ್ದಾಗಿದೆ. ಆದ್ದರಿಂದ ಈ ಅಧಿಕರಣ ವ್ಯರ್ಥವಲ್ಲವೇ? ಈ ಪ್ರಶ್ನೆಗೆ 'ಘರ್ಮಾತ್' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

ವಿವರಣೆ - ಆತ್ಮನಿಂದ ಆಕಾಶವು ಹುಟ್ಟಿತು. ಆಕಾಶದಿಂದ ವಾಯು ಮೊದಲಾದವುಗಳು ಹುಟ್ಟಿದವು ಎಂದು ಶ್ರುತಿಯು ಹೇಳುತ್ತಿದೆ. ಆದರೆ ಆತ್ಮಾ, ಆಕಾಶ, ವಾಯು, ತೇಜಸ್ಸು ಇವೆಲ್ಲ ಶಬ್ದಗಳಿಂದ ಮುಖ್ಯವಾಗಿ ಪರಮಾತ್ಮನೇ ವಾಚ್ಯನಾಗಿದ್ದಾನೆ. ಬೇರೆ ಯಾವ ಪದಾರ್ಥವೂ ವಾಚ್ಯವಾಗಿಲ್ಲ ಎಂಬುದಾಗಿ 'ಕಾರಣತ್ವೇನ ಚ ಆಕಾಶಾದಿಷು' ಎಂಬ ಸೂತ್ರದಲ್ಲಿ ನಿರ್ಣಯ ಮಾಡಿದ್ದಾಗಿದೆ. ಆದ್ದರಿಂದ ನೀರು ತೇಜಸ್ಸಿನಿಂದ ಹುಟ್ಟಿತು ಎಂದು ಶ್ರುತಿಯು ಹೇಳಿದರೆ 'ತೇಜಸ್' ಎಂಬ ಶಬ್ದಕ್ಕೆ ಬ್ರಹ್ಮನೆಂದರ್ಥ. ಆದ್ದರಿಂದ ಬ್ರಹ್ಮನಿಂದಲೇ ನೀರು ಹುಟ್ಟಿತು ಎಂಬ ಪ್ರಮೇಯವು ಅದೇ ಸೂತ್ರದಿಂದಲೇ ಸಿದ್ಧವಾಗುತ್ತದೆ. ಹೀಗಿರುವಾಗ ಈ ಅಧಿಕರಣ ಹೊರಟದ್ದು ವ್ಯರ್ಥ ಎಂಬುದು ಪ್ರಶ್ನಿಸುವವನ ಅಭಿಪ್ರಾಯ.

**तत्वप्रकाशिका – भवतु वायोरग्न्युत्पत्तौ द्वारत्वप्रतिपादकता तच्छ्रुतेः । अत्र पुनरग्नेः कारणत्वमेव प्रत्यक्षानुकूल्यात् इति विशेषाकाङ्क्षानिवृत्त्यर्थमेतदधिकरणमिति भावः । तस्माच्छ्रुत्यविरोधेनापां ब्रह्मजातत्वसिद्धेर्युक्तो हरौ वेदसमन्वय इति सिद्धम् ।।**

'ವಾಯೋರಗ್ನಿಃ' ಎಂಬ ಶ್ರುತಿಯಿಂದ ವಾಯುವಿನಿಂದ ಅಗ್ನಿಯು ಹುಟ್ಟಿತು ಎಂದು ತಿಳಿಯುತ್ತದೆ. ಇಲ್ಲಿ ವಾಯು ಎಂಬುದು ಕೇವಲ ದ್ವಾರವಾಗಿದೆ ಎಂಬ ಅರ್ಥವನ್ನು ಶ್ರುತಿಗೆ ಹೇಳುತ್ತೀರಿ. ಇದಿರಲಿ. ಆದರೆ 'ಅಗ್ನೇರಾಪಃ' ಎಂಬ ಶ್ರುತಿಯಲ್ಲಿ ಅಗ್ನಿಗೆ ಮುಖ್ಯಕಾರಣತ್ವವನ್ನೇ

ಹೇಳಬೇಕು. ಏಕೆಂದರೆ ಪ್ರತ್ಯಕ್ಷದ ಆನುಕೂಲ್ಯವಿದೆ. ಈ ವಿಶೇಷವಾದ ಆಕಾಂಕ್ಷೆಯನ್ನು ಪರಿಹಾರ ಮಾಡುವುದಕ್ಕಾಗಿ ಈ ಅಧಿಕರಣವು ಸಾರ್ಥಕವಾಗಿದೆ ಎಂಬುದು ಭಾಷ್ಯದ ಅಭಿಪ್ರಾಯ.

ಆದ್ದರಿಂದ ಶ್ರುತಿಯ ವಿರೋಧವಿಲ್ಲದ ಕಾರಣ ನೀರು ಬ್ರಹ್ಮನಿಂದ ಹುಟ್ಟುತ್ತದೆಂಬ ಪ್ರಮೇಯವು ಸಿದ್ಧವಾಯಿತು. ಆದ್ದರಿಂದ ಶ್ರೀಹರಿಯಲ್ಲಿ ವೇದಸಮನ್ವಯವು ಸಮಂಜಸವಾಗಿ ಸಿದ್ಧವಾಯಿತು.

**ವಿವರಣೆ** - ವಾಸ್ತವಿಕವಾಗಿ ಹಿಂದಿನ ಅಧಿಕರಣದ ನ್ಯಾಯದಿಂದಲೇ ನೀರಿಗೂ ಕೂಡ ಪರಮಾತ್ಮನೇ ಮುಖ್ಯಕಾರಣನು ಎಂಬ ಪ್ರಮೇಯವು ಸಿದ್ಧವಾಗುತ್ತದೆ. ಆದರೆ 'ಅಗ್ನೇರಾಪಃ' ಎಂಬ ಶ್ರುತಿಯನ್ನು ನೋಡಿದಾಗ ನೀರಿಗೆ ಅಗ್ನಿಯು ಅವಾಂತರ ಕಾರಣವೆಂದು ಹಿಂದಿನ ಅಧಿಕರಣದಂತೆ ವಿವಕ್ಷಿಸಲಾಗುವುದಿಲ್ಲ. ಏಕೆಂದರೆ ಶಕೆ ಆದಾಗ ಬೆವರು ಬರುವುದು ಪ್ರತ್ಯಕ್ಷ ಸಿದ್ಧವಾಗಿದೆ. ಈ ಪ್ರತ್ಯಕ್ಷ ಪ್ರಮಾಣದಿಂದ ತೇಜಸ್ಸನ್ನು ಅವಾಂತರಕಾರಣನೆಂದು, ಪರಬ್ರಹ್ಮನನ್ನು ಮುಖ್ಯಕಾರಣನೆಂದು ಹಿಂದಿನ ಅಧಿಕರಣದಂತೆ ಹೇಳಲಾಗದು ಎಂಬ ಅಧಿಕಾಕ್ಷೇಪವು ಪ್ರಾಪ್ತವಾಗುತ್ತದೆ. ಇದರ ನಿರಾಕರಣೆಗಾಗಿ ಅಬಧಿಕರಣ ಹೊರಟದ್ದು ಸಾರ್ಥಕ. ನೀರೂ ಕೂಡ ಪರಬ್ರಹ್ಮನಿಂದಲೇ ಹುಟ್ಟಿದೆ ಎಂದು ಹೇಳುವ ಶ್ರುತಿಗೆ ಯಾವುದೇ ಬಾಧಕವಿಲ್ಲದ ಕಾರಣ ಅವನಿಂದಲೇ ನೀರು ಹುಟ್ಟಿತು. ಬೆವರು ಮೊದಲಾದವೂ ಕೂಡ ಶ್ರೀಹರಿಯಿಂದಲೇ ಹುಟ್ಟುತ್ತದೆ ಎಂದು ಹೇಳಬೇಕು.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಅಬಧಿಕರಣ ಮುಗಿಯಿತು

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## ಅಬಧಿಕರಣ

**आपः ।। अधिकरणसङ्गतिमाह ।। तेजसोऽनन्तरप्राप्ता इति ।। अत्रोक्तं ब्रह्मण एव सर्वस्रष्टृत्वं तेजोदेवतातोऽब्जन्मश्रुतिविरुद्धं न वेति चिन्ता । तदर्थं किं ''अग्नेराप'' इति श्रुतिः प्रबलोत ''ब्रह्मैवेदमग्र आसीत् तदपोऽसृजत'' इति । तदर्थं ''अग्नेराप'' इति श्रुत्यनुग्राहिका घर्मात्स्वेदादिदृष्टिरूपा युक्तिः किं तेजसो द्वारत्वमात्रेण न युक्तोत युक्तेति ।**

ಈ ಅಧಿಕರಣಕ್ಕೆ ಸಂಗತಿಯನ್ನು ಹೇಳುತ್ತಿದ್ದಾರೆ. 'ತೇಜಸೋಽನಂತರಪ್ರಾಪ್ತಾಃ' ಎಂಬುದಾಗಿ. 'ಅಗ್ನೇರಾಪಃ' ಎಂಬಲ್ಲಿ ಅಗ್ನಿಯಿಂದ ಅಪ್ ಹುಟ್ಟಿದ್ದು ಎಂದಿರುವುದರಿಂದ ತೇಜಸ್ಸಿನ ನಂತರ ಅಪ್ ಪ್ರಾಪ್ತವಾಯಿತು.

ಜನ್ಮಾಧಿಕರಣದಲ್ಲಿ ಬ್ರಹ್ಮನೇ ಸರ್ವಸ್ರಷ್ಟಾ ಎಂದಿದ್ದಾರೆ. ಆದರೆ 'ಅಗ್ನೇರಾಪಃ' ಎಂಬಲ್ಲಿ ಅಗ್ನಿದೇವತೆಯಿಂದ ಅಪ್ ಹುಟ್ಟುತ್ತದೆ ಎಂದಿದೆ. ಹಾಗಾಗಿ ಇವೆರಡಕ್ಕೂ ವಿರೋಧ ಇದೆಯೋ, ಇಲ್ಲವೋ ಎಂಬುದು ವಿಚಾರ. ಇದಕ್ಕಾಗಿ 'ಅಗ್ನೇರಾಪಃ' ಎಂಬ ಶ್ರುತಿಯು ಪ್ರಬಲವೋ ಅಥವಾ 'ಬ್ರಹ್ಮೈವೇದಮಗ್ರ ಆಸೀತ್ ತದಪೋಽಸೃಜತ' ಎಂಬ ಶ್ರುತಿಯು ಪ್ರಬಲವೋ ಎಂಬುದು ವಿಚಾರ. ಇದಕ್ಕಾಗಿ 'ಅಗ್ನೇರಾಪಃ' ಎಂಬ ಶ್ರುತಿಗೆ ಅನುಗ್ರಾಹಕವಾದ ಘರ್ಮ(ಶೆಖೆ)ದಿಂದ ಸ್ವೇದ(ಬೆವರು) ಸೃಷ್ಟಿಯ ಪ್ರತ್ಯಕ್ಷ ಎಂಬ ಯುಕ್ತಿಯು (ಅಪ್ ತೇಜಸ್ಸಿನಿಂದ ಹುಟ್ಟುತ್ತದೆ. ಅದೇರೀತಿ ಪ್ರತ್ಯಕ್ಷವಿರುವುದರಿಂದ) ತೇಜಸ್ಸು ಅಪ್‌ಸೃಷ್ಟಿಯಲ್ಲಿ ದ್ವಾರವಾಗಿದೆ ಎಂಬ ಕಾರಣದಿಂದ ಅಯುಕ್ತವಾಗುತ್ತದೆಯೋ ಅಥವಾ ಯುಕ್ತವೇ ಆಗುತ್ತದೆಯೋ ಎಂಬುದು ವಿಚಾರ.

**अन्ये तु ''तेजः आपः'' इत्यधिकरणद्वये तेजोजलयोर्ब्रह्मकार्यत्वमिति प्राप्ते वायुतेजःकार्यत्वमिति सिद्धान्तः । न चैवमपसिद्धान्तः । तेजोजलयोर्वायुतेजोभावापन्नब्रह्मकार्यत्वमुपेत्य शुद्धब्रह्मकार्यत्वनिषेधादित्याहुः । तन्न ।**

(ಅದ್ವೈತಿಗಳ ಅಧಿಕರಣಾರ್ಥವನ್ನು ನಿರಾಕರಿಸುತ್ತಿದ್ದಾರೆ) ಅವರು 'ತೇಜಃ' 'ಆಪಃ' ಎಂಬ ಈ ಎರಡೂ ಅಧಿಕರಣಗಳಲ್ಲಿ ತೇಜಸ್ಸು ಹಾಗೂ ಅಪ್ ಇವು ಬ್ರಹ್ಮನ ಕಾರ್ಯ ಎಂಬುದು ಪೂರ್ವಪಕ್ಷ.

ಇವೆರಡು ವಾಯು ಹಾಗೂ ತೇಜಸ್ಸಿನ ಕಾರ್ಯ ಎಂದು ಸಿದ್ಧಾಂತ. ಹೀಗೆ ಹೇಳಿದರೆ ಅಪಸಿದ್ಧಾಂತ ಬರುತ್ತದಲ್ಲವೇ? ಎಂದು ತಿಳಿಯಬಾರದು. (ಹಿಂದೆ ಎಲ್ಲವೂ ಬ್ರಹ್ಮಕಾರ್ಯ, ಬ್ರಹ್ಮ ಉಪಾದಾನಕ ಎಂದು ಅವರು ಹೇಳಿದ್ದಾರೆ.) ತೇಜಸ್ಸು ಹಾಗೂ ಜಲಗಳು ಶುದ್ಧ ಬ್ರಹ್ಮನ ಕಾರ್ಯದಲ್ಲಿ, ವಾಯುಭಾವಾಪನ್ನೇ ತೇಜೋಭಾವಾಪನ್ನನಾದ ಬ್ರಹ್ಮನಕಾರ್ಯ ಎಂದು ಹೇಳುತ್ತೇವೆ. ಹಾಗಾಗಿ ವಿರೋಧವಿಲ್ಲ. ಇದು ಸರಿಯಲ್ಲ ಎಂದು ಉತ್ತರ.

## ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**आपः** ।। टीकायामवसरसङ्गतिर्व्यक्तेति भावेनाह – **अधिकरणेति** ।। तदपोऽसृजतेतीति ।। श्रुतिःप्रबलेत्यनुकर्षः । इयं च ''युक्तियुक्तत्वेन तेजोजातत्वश्रुतेः प्राबल्यात्'' इति टीकासूचिता ।

ಟೀಕಾದಲ್ಲಿ ಅವಸರಸಂಗತಿ ಸ್ಪಷ್ಟವಾಗಿದೆಯಾದ್ದರಿಂದ ಅಧಿಕರಣಸಂಗತಿಯನ್ನು ಹೇಳುತ್ತಿದ್ದಾರೆ ಎಂದಿದ್ದಾರೆ 'ಅಧಿಕರಣ' ಎಂಬುದಾಗಿ. ಮೂಲದಲ್ಲಿ 'ತದಪೋऽಸೃಜತ' ಎಂದಾದ ಮೇಲೆ 'ಶ್ರುತಿಃ ಪ್ರಬಲಾ' ಎಂಬುದನ್ನು ಹಿಂದೆ ಹೇಳಿದ್ದನ್ನು ಸೇರಿಸಿಕೊಳ್ಳಬೇಕು. ಈ ಚಿಂತಾವು ಟೀಕಾದಲ್ಲಿ ಸೂಚಿತವಾಗಿದೆ. ಅಲ್ಲಿ ತೇಜಸ್ಸಿನಿಂದ ಅಪ್ ಹುಟ್ಟುತ್ತದೆ ಎಂಬುದು ಯುಕ್ತಿಯುಕ್ತವಾಗಿದೆ ಹಾಗಾಗಿ ಪ್ರಬಲ ಎಂದಿದೆ.

**प्रकाशः –** ''भवतु वायोरग्न्युत्पत्तौ द्वारत्वप्रतिपादकता तच्छतेः । अत्र पुनरग्नेः कारणत्वमेव'' इत्यादिटीकासूचितामाह – **किं तेजस इति** ।।

ಹಿಂದಿನ ಅಧಿಕರಣದಲ್ಲಿ ವಾಯುವಿನಿಂದ ತೇಜಸ್ಸು ಹುಟ್ಟುತ್ತದೆ ಎಂಬುದಕ್ಕೆ ವಾಯು ದ್ವಾರಕಾರಣ ಎಂದು ಕೂಡಿಸಿದ್ದೀರಿ. ಅದು ಹಾಗಿದ್ದರೂ ಇಲ್ಲಿ ತೇಜಸ್ಸು ಅಪ್‌ನಲ್ಲಿ ದ್ವಾರಕಾರಣ ಎಂದು ಹೇಳಲು ಸಾಧ್ಯವಿಲ್ಲ. ಪ್ರತ್ಯಕ್ಷಸಿದ್ಧವಾದ್ದರಿಂದ ಎಂಬ ಯುಕ್ತಿಯುಕ್ತವಾಗಿರುವುದರಿಂದ ಎಂಬುದಾಗಿ ಟೀಕಾದಲ್ಲಿ ಸೂಚಿತವಾಗಿರುವ ಚಿಂತಾವನ್ನು ಹೇಳುತ್ತಿದ್ದಾರೆ 'ಕಿಂ ತೇಜಸಃ' ಎಂಬುದಾಗಿ.

**प्रकाशः – उत युक्तेति** ।। ''महाशक्तिरपि हरिर्लीलया'' इत्यादिटीकोक्तदिशेति भावः ।। **अन्ये त्विति** ।। आकाशाद्वायुरिति श्रुतेराकाशानन्तरं वायुरुत्पन्नः । वायोरनन्तरमग्निरुत्पन्न इति निर्वाहसम्भवात् ''तज्जलान् एतस्माज्जायते प्राणः स इदं सर्वममृजत'' इत्यादिश्रुतिभिरविशेषेण सर्वस्य ब्रह्मजत्वावगमात् ''तत्तेजोसृजत'' इति श्रुत्यनुरोधेन तेजसो ब्रह्मजत्वमिति प्राप्ते

(ಪೂರ್ವಪಕ್ಷವನ್ನು ವಿವರಿಸುತ್ತಿದ್ದಾರೆ.) ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ ಎಂಬ ಶ್ರುತಿಯಲ್ಲಿ 'ಅನಂತರ' ಎಂಬ ಪದವನ್ನು ಇಟ್ಟುಕೊಳ್ಳಬೇಕು. ಆಗ ಆಕಾಶದ ಅನಂತರ ವಾಯು, ವಾಯುವಿನ ಅನಂತರ

ಅಗ್ನಿ ಎಂದರ್ಥವಾಗುತ್ತದೆ. ಆಗ ಸರ್ವವೂ ಬ್ರಹ್ಮನಿಂದಲೇ ಹುಟ್ಟಿದ್ದು ಎಂಬುದಕ್ಕೆ ವಿರೋಧವಿಲ್ಲ. ಒಂದರ ಅನಂತರ ಇನ್ನೊಂದು ಬ್ರಹ್ಮನಿಂದ ಹುಟ್ಟುತ್ತದೆ ಎಂದರ್ಥ ಬರುವುದರಿಂದ 'ಸ ಇದಂ ಸರ್ವಂ ಅಸೃಜತ' ಎಂಬುದರಿಂದ ಬ್ರಹ್ಮನಿಂದಲೇ ಸರ್ವಜಗತ್ತು ಉತ್ಪನ್ನವಾಗಿದೆ ಎಂದು ಸಿದ್ಧವಾಗಿದೆ. ಮತ್ತು 'ತತ್ತೇಜೋಽಸೃಜತ' ಎಂಬ ಶ್ರುತಿಯಿಂದಲೂ ತೇಜಸ್ಸು ಬ್ರಹ್ಮನಿಂದ ಹುಟ್ಟಿದೆ ಎಂದು ಸಿದ್ಧವಾಗುತ್ತದೆ. ಹಾಗಾಗಿ ಎಲ್ಲವೂ ಬ್ರಹ್ಮನಿಂದಲೇ ಹುಟ್ಟುತ್ತದೆ ಎಂಬುದು ಪೂರ್ವಪಕ್ಷ.

**प्रकाशः –''आत्मन आकाशस्सम्भूतः पृथिव्या ओषधयः'' इति पूर्वापर- पञ्चम्योरुपादानविषयत्वदर्शनादुपपदविभक्तितोऽपि कारकविभक्तेर्बलीयस्त्वाच्च वायुजत्वं तेजसः । ब्रह्मजत्वं तु वायुभावापन्नब्रह्मणो जातत्वेनेति सिद्धान्त इत्याहुरित्यर्थः।**

ಸಿದ್ಧಾಂತವು ಹೀಗಿದೆ - ಶ್ರುತಿಯಲ್ಲಿ 'ಆತ್ಮನ ಆಕಾಶಃ ಸಂಭೂತಃ' ಎಂಬುದಾಗಿ ಮೊದಲು ಹಾಗೂ 'ಪೃಥಿವ್ಯಾ ಓಷಧಯಃ' ಎಂಬುದಾಗಿ ಅನಂತರ ಆತ್ಮ ಹಾಗೂ ಪೃಥಿವೀ ಇವೆರಡೂ ಉಪಾದಾನಕಾರಣ ಎಂಬ ಅರ್ಥವೇ ವಿವಕ್ಷಿತವಾಗಿದೆ. ಹಾಗಾಗಿ ಉಳಿದ ಕಡೆಯಲ್ಲೂ ಈ ಅರ್ಥವೇ ಉಪಾದೇಯವಾಗಬೇಕು. ಮತ್ತೇನೆಂದರೆ 'ಆತ್ಮನಃ' ಇತ್ಯಾದಿ ಸ್ಥಳಗಳಲ್ಲಿ ಪಂಚಮೀ ವಿಭಕ್ತಿಯು ಪ್ರಯುಕ್ತವಾಗಿದೆ. ಈ ಪಂಚಮೀ ವಿಭಕ್ತಿಯು ಕಾರಕಪಂಚಮೀ ಉಪಪದಪಂಚಮೀ ಎಂದು ಎರಡು ವಿಧ. ಇವುಗಳಲ್ಲಿ ಕಾರಕಪಂಚಮಿಯೇ ಪ್ರಬಲ. ಆದ್ದರಿಂದ ಎಲ್ಲ ಕಡೆಯಲ್ಲೂ ಈ ಕಾರಕಪಂಚಮೀಯನ್ನೇ ಆಶ್ರಯಿಸಬೇಕು ಹೊರತು 'ಅನಂತರ' ಎಂಬ ಪದನಿಮಿತ್ತವಾಗಿ ಬರುವ ಉಪಪದ ಪಂಚಮಿಯನ್ನಲ್ಲ. (ಹಾಗಾಗಿ ಇಲ್ಲಿ ಎರಡು ದೋಷ, ಒಂದು 'ಆತ್ಮನಃ ಪೃಥಿವ್ಯಾಃ' ಎಂಬಲ್ಲಿ ಮಾತ್ರ ಪಂಚಮೀ ವಿಭಕ್ತಿಗೆ ಉಪಾದಾನ ವಿಷಯತ್ವ ಒಪ್ಪಿ ಉಳಿದ ಕಡೆ ಅನಂತರ್ಯಾರ್ಥ ಒಪ್ಪಿರುವುದು ಸರಿಯಲ್ಲ. ಎರಡನೆಯದು ಎಲ್ಲ ಕಡೆಯೂ ಕಾರಕ ಪಂಚಮಿಯನ್ನೇ ಇಟುಕೊಳ್ಳಲು ಬರುವಾಗ ಉಪಪದ ಪಂಚಮೀಯನ್ನು ಆಶ್ರಯಿಸಿರುವುದು ತಪ್ಪು.)

ಹಾಗಾಗಿ ತೇಜಸ್ಸು ಹಾಗೂ ಅಪ್ ಕ್ರಮವಾಗಿ ವಾಯು ಹಾಗು ತೇಜಸ್ಸಿನಿಂದಲೇ ಹುಟ್ಟಿದ್ದು ಎಂಬುದು ಸಿದ್ಧಾಂತ.

ಹಾಗಾದರೆ ಅಪಸಿದ್ಧಾಂತ ಬರುವುದಲ್ಲಾ ? ಎಂದರೆ ಅದಕ್ಕೆ ವಾಯುಭಾವಾಪನ್ನ ಬ್ರಹ್ಮಜಾತತ್ವ ಒಪ್ಪಿರುವುದರಿಂದ ವಿರೋಧವಿಲ್ಲ. (ಅಂದರೆ ಜಗತ್ತು ಬ್ರಹ್ಮಜಾತವೂ ಹೌದು, ಬ್ರಹ್ಮನಿಂದ ಅಜಾತವೂ ಹೌದು. ಬ್ರಹ್ಮಜಾತ ಎಂದರೆ ವಾಯು ಮೊದಲಾದ ರೂಪದಲ್ಲಿರುವ ಬ್ರಹ್ಮನಿಂದ ಜಾತ ಎಂದರ್ಥ. ಬ್ರಹ್ಮಜಾತವಲ್ಲ ಎಂದರೆ ಶುದ್ಧಬ್ರಹ್ಮಜಾತವಲ್ಲ ಎಂದರ್ಥ.)

(''ಉಪಪದವಿಭಕ್ತೇಃ ಕಾರಕವಿಭಕ್ತಿರ್ಬಲೀಯಸೀ' ಎಂಬುದು ವಾಚನಿಕಪರಿಭಾಷೆ - ಮಹಾಭಾಷ್ಯ -೧-೪-೯೫)

**प्रकाशः – 'अतिदेशोऽयम् । अत आपः किं सतोऽजायन्त उत तेजस इति संशयादि पूर्ववत् ।**

'ಆಪಃ' ಎಂಬುದು ಅತಿದೇಶಸೂತ್ರ. ಹಿಂದೆ 'ತೇಜಃ' ಎಂಬಲ್ಲಿ ಹೇಳಿದ ನ್ಯಾಯವನ್ನೇ ಇಲ್ಲಿಯೂ ಇಟ್ಟುಕೊಳ್ಳಬೇಕು ಎಂದರ್ಥ. 'ಅಪ್' ಸತ್‌ಶಬ್ದವಾಚ್ಯನಾದ ಬ್ರಹ್ಮನಿಂದ ಹುಟ್ಟುತ್ತದೆಯೋ ಅಥವಾ

ತೇಜಸ್ಸಿನಿಂದಲೋ ಎಂಬ ಪೂರ್ವಪಕ್ಷವನ್ನು ಹಿಂದಿನಂತೆಯೇ ತಿಳಿಯಬೇಕು.

**प्रकाशः** – अपामग्निदाह्यत्वादग्नेरपामुत्पत्त्ययोगादिति शङ्काऽत्र निवर्त्यत'' इति कल्पतरूक्तेस्सहैव पूर्वोत्तरपक्षावनुवदति ।।

ಹಿಂದಿನ ಅಧಿಕರಣದ ಅತಿದೇಶ ಮಾತ್ರವಾದರೆ ಅದರಿಂದಲೇ ಗತಾರ್ಥವಾಗುವುದರಿಂದ ಈ ಸೂತ್ರ ವ್ಯರ್ಥ ಎಂದರೆ ಹಾಗಲ್ಲ. ಇಲ್ಲಿ ಒಂದು ಹೆಚ್ಚಿನ ಶಂಕಾಗೆ ಉತ್ತರ ಇದೆ. ಅದೇನೆಂದರೆ, ಅಪ್ ತೇಜಸ್ಸಿನಿಂದ ಹುಟ್ಟಲು ಸಾಧ್ಯವಿಲ್ಲ. ಏಕೆಂದರೆ ಅಪ್(ಜಲ)ವು ಅಗ್ನಿಯಿಂದ ನಾಶವಾಗುವಂತಹದು. ನೀರು ಬೆಂಕಿಯಲ್ಲಿ ಆವಿಯಾಗಿ ಹೋಗುತ್ತದೆ. ಹೀಗಿರುವಾಗ ಆ ಬೆಂಕಿಯಿಂದಲೇ ನೀರು ಹುಟ್ಟುವುದು ಹೇಗೆ ? ಎಂಬ ಪ್ರಶ್ನೆ ಬಂದರೆ ಅದಕ್ಕೆ ಇಲ್ಲಿ ಉತ್ತರ ಹೇಳಲಾಗುತ್ತದೆ. ಹಾಗಾಗಿ ವೈಯರ್ಥ್ಯದೋಷ ಇಲ್ಲ. ಹೀಗೆ ಕಲ್ಪತರು ಎಂಬ ಗ್ರಂಥದಲ್ಲಿ ಹೇಳಿದೆ. ಹಾಗಾಗಿ ಈ ಎರಡೂ ಅಧಿಕರಣಗಳಿಗೆ ಒಟ್ಟಿಗೇ ಪೂರ್ವಪಕ್ಷ ಸಿದ್ಧಾಂತಗಳನ್ನು ಹೇಳಿದ್ದಾರೆ.

**प्रकाशः** – तेजः आपः इत्यधिकरणद्वय इति ।। तात्पर्यार्थमाह – **शुद्धेति** ।। वाय्वादिभावानापन्नेत्यर्थः ।

ಮೂಲದಲ್ಲಿ ಅಧಿಕರಣದ್ವಯ ಎಂದರೆ 'ತೇಜಃ' ಹಾಗೂ 'ಆಪಃ' ಎಂಬ ಈ ಅಧಿಕರಣಗಳು ಎಂದರ್ಥ.

'ಶುದ್ಧ' ಎಂದರೆ 'ವಾಯುವೇ ಮೊದಲಾದ ಭಾವವನ್ನು ಹೊಂದದ ಬ್ರಹ್ಮ' ಎಂದರ್ಥ.

## तात्पर्यचन्द्रिका

**तथात्वे शुद्धवाय्वादिकार्यत्वेन जन्मादिसूत्रं वियदधिकरणोक्तां प्रतिज्ञाहानिं चाक्षिप्य पूर्वपक्षस्य, तेजो वायुभावापन्नब्रह्मकार्यत्वमिति तत्समाधानेन सिद्धान्तस्य च सम्भवे तदनाक्षेपादिना पूर्वपक्षाद्ययोगात् ।**

ಅದ್ವೈತಿಗಳು ಹೇಳುವ ಹಾಗೆ ಅರ್ಥ ಹೇಳಿದರೆ ಆಗ ಅಸ್ವಾರಸ್ಯಗಳನ್ನು ಹೇಳುತ್ತಿದ್ದಾರೆ. ನೀವು ಹೇಳುವ ಹಾಗೆ ಪೂರ್ವಪಕ್ಷ, ಸಿದ್ಧಾಂತಗಳು ಇದ್ದಿದ್ದರೆ, ಸ್ವಾರಸ್ಯವಿರುತ್ತಿತ್ತು. ತೇಜಸ್, ಅಪ್ ಮೊದಲಾದವು ಕೇವಲ ವಾಯು ತೇಜಸ್ಸಿನಿಂದ ಹುಟ್ಟುತ್ತವೆ ಎಂದರೆ ಆಗ ಜನ್ಮಾದಿಸೂತ್ರದ ವಿರೋಧ ಹಾಗೂ ವಿಯದಧಿಕರಣದಲ್ಲಿ ಹೇಳಿದ ಏಕವಿಜ್ಞಾನದಿಂದ ಸರ್ವವಿಜ್ಞಾನ ಎಂಬ ಪ್ರತಿಜ್ಞಾವಿರೋಧ ಎಂದು ಪೂರ್ವಪಕ್ಷ. ಅದಕ್ಕೆ ಸಿದ್ಧಾಂತ, ತೇಜಸ್ಸೇ ಮೊದಲಾದವು ಕೇವಲ ವಾಯು ಮೊದಲಾದರಿಂದ ಹುಟ್ಟಿದ್ದಲ್ಲ ವಾಯುಭಾವಾಪನ್ನ ಬ್ರಹ್ಮನಿಂದ ಹುಟ್ಟುತ್ತದೆ ಎಂದು. ಹೀಗೆ ಆಕ್ಷೇಪ ಮಾಡಲು ಬರುವಾಗ ನೀವು ಹೇಳುವಂತೆ ಹೇಳಿದರೆ ಸ್ವಾರಸ್ಯವಿಲ್ಲ. (ಹಿಂದೆ ಹೇಳಿದ್ದನ್ನು ಆಕ್ಷೇಪಿಸಿ ಪೂರ್ವಪಕ್ಷ ಮಾಡಬೇಕು ಆಗಲೇ ಸ್ವಾರಸ್ಯ ಎಂದು ಅಭಿಪ್ರಾಯ).

**किञ्चैवं हि ''तेजोतः'' इति सौत्रोऽतश्शब्दः स्वस्थाने आप इत्यनुवृत्तिस्थले**

**चाव्यवहितप्रकृतसदाख्यब्रह्मरूपैकार्थपरो भवति । अन्यथा हि स्वस्थाने व्यवहितप्रकृत मातरिश्वपरोऽनुवृत्तिस्थले तेजःपरः स्यात् ।**

(ಇನ್ನೊಂದು ಅಸ್ವಾರಸ್ಯ ಹೇಳುತ್ತಿದ್ದಾರೆ) ನಾವು ಹೇಳಿದಂತೆ ಪೂರ್ವಪಕ್ಷ ಸಿದ್ಧಾಂತ ಮಾಡಿದ್ದರೆ ಆಗ ''ತೇಜೋऽತಃ' ಎಂಬಲ್ಲಿರುವ 'ಅತಃ' ಎಂಬ ಶಬ್ದಕ್ಕೆ ಸ್ವಸ್ಥಾನ (ಪ್ರಕೃತ ಸೂತ್ರ) ಹಾಗೂ ಅನುವೃತ್ತಿ ಸ್ಥಾನ ('ಆಪಃ' ಎಂಬ ಸೂತ್ರ) ಎರಡು ಕಡೆಯಲ್ಲೂ ಸತ್ ಶಬ್ದವಾಚ್ಯನಾದ ಬ್ರಹ್ಮ ಎಂಬ ಒಂದೇ ಅರ್ಥವಾಗುತ್ತದೆ. ಆದರೆ ನೀವು ಹೇಳಿದಂತೆ ಮಾಡಿದರೆ ಆಗ ಸ್ವಸ್ಥಾನದಲ್ಲಿ 'ಅತಃ' ಎಂಬುದಕ್ಕೆ ಮಾತರಿಶ್ವಾ ಎಂದರ್ಥ. ಅದು ದೂರದಲ್ಲಿದೆ. ಅನುವೃತ್ತಿಸ್ಥಾನದಲ್ಲಿ ತೇಜಸ್ ಎಂದರ್ಥ. ಹೀಗೆ ಬೇರೆ ಬೇರೆ ಅರ್ಥವಾಗುತ್ತದೆ.

**किं च तेजआदेर्वाय्वादि भावापन्नविशिष्टभिन्नब्रह्मकार्यत्वे एकविज्ञानेन सर्वविज्ञानं स्यात् ।**

ಇನ್ನೂ ಒಂದು ಅಸ್ವಾರಸ್ಯ. ತೇಜಸ್ ಮೊದಲಾದುದು ವಾಯುಭಾವಾಪನ್ನ ವಿಶಿಷ್ಟಬ್ರಹ್ಮ ಕಾರ್ಯ ಎಂದರೆ ಆಗ ಹಿಂದೆ ಹೇಳಿದ ಏಕವಿಜ್ಞಾನದಿಂದ ಸರ್ವವಿಜ್ಞಾನ ಎಂಬ ಪ್ರತಿಜ್ಞೆ ಕೂಡುವುದಿಲ್ಲ. ಏಕೆಂದರೆ ವಾಯುಭಾವಾಪನ್ನ ಬ್ರಹ್ಮ ಹಾಗೂ ಅವನ ಕಾರ್ಯವಾದ ತೇಜಸ್ಸು ಇವೆರಡೂ ಭಿನ್ನ. ನೀವು ಐಕ್ಯದಿಂದ ಈ ಪ್ರತಿಜ್ಞೆಯನ್ನು ಕೂಡಿಸಿದ್ದೀರಿ.

**विवर्तमते शुक्तितत्वज्ञानेन रूप्यस्येव वाय्वादितत्वज्ञानेन तेज आदेर्निवृत्तिश्च स्यात् ।**

ಇನ್ನು ಕಾರ್ಯ ಎಂದರೆ ಆರೋಪ ಎಂದು ಹೇಳಿ ವಾಯುಭಾವಾಪನ್ನ ಬ್ರಹ್ಮನಲ್ಲಿ ತೇಜಸ್ಸು ಆರೋಪಿತ ಎಂದರೆ ಆಗ ಶುಕ್ತಿಯಲ್ಲಿ ಆರೋಪಿತವಾದ ರಜತವು ಶುಕ್ತಿಯ ಯಥಾರ್ಥಜ್ಞಾನದಿಂದ ತೊಲಗುವಂತೆ ವಾಯುವಿನ ಯಥಾರ್ಥಜ್ಞಾನದಿಂದ ತೇಜಸ್ಸಿನ ನಿವೃತ್ತಿ ಆಗಬೇಕಾಗುತ್ತದೆ.

**केचित्तु ''तेज'' इत्यादिसूत्रैस्तेज आदीनां केवलवाय्वादिजत्वमिति पूर्वपक्षयित्वा ''तदभिध्यानात्'' इत्यादिभिस्सूत्रैः ''बहुस्याम्'' इत्यभिध्यानादिना वाय्वादिशरीरकब्रह्मजत्वमिति सिद्धान्तितमित्याहुः । तन्न ।**

(ರಾಮಾನುಜರ ಪ್ರಕಾರ ಸೂತ್ರಾರ್ಥವನ್ನು ನಿರಾಕರಿಸುತ್ತಿದ್ದಾರೆ) ಅವರು ಹೀಗೆ ಹೇಳುತ್ತಾರೆ - 'ತೇಜಃ' ಇದೇ ಆದಿಯಾದ ನಾಕು ಸೂತ್ರಗಳಿಂದ ಪೂರ್ವಪಕ್ಷ. ತೇಜಸ್ಸೇ ಮೊದಲಾದುದು ವಾಯು ಮೊದಲಾದುದರಿಂದಲೇ ಹುಟ್ಟುತ್ತದೆ ಎಂದು. ಅದಕ್ಕೆ 'ತದಭಿಧ್ಯಾನಾತ್' ಎಂಬುದೇ ಮೊದಲಾದ ಸೂತ್ರಗಳಿಂದ ಸಿದ್ಧಾಂತ. ತೇಜಸ್ಸು ಕೇವಲ ವಾಯುವಿನಿಂದ ಹುಟ್ಟುವುದಿಲ್ಲ. ಕಿಂತು ವಾಯುಶರೀರಕನಾದ (ವಾಯುಶರೀರದಲ್ಲಿರುವ) ಬ್ರಹ್ಮನಿಂದ ಹುಟ್ಟುತ್ತದೆ ಎಂದು. ಇದಕ್ಕೆ ಪ್ರಮಾಣ 'ಬಹುಸ್ಯಾಂ ಪ್ರಜಾಯೇಯ' ಎಂಬ ಶ್ರುತಿ.

ಈ ಸೂತ್ರಾರ್ಥಕ್ರಮ ಸರಿಯಲ್ಲ.

**अतश्शब्दस्याव्यवहितप्रकृतैकब्रह्मपरत्वेन तेज इत्यादिसूत्राणां सिद्धान्तत्वेनानेकाधिकरणत्वसम्भवे तत्त्यागेन पूर्वपक्षत्वाद्ययोगात् ।**

ಪರಿಪೂರ್ಣಚಂದ್ರಿಕಾ

ನಿಮ್ಮ ಪ್ರಕಾರ 'ಅತಃ' (ತೇಜೋಽತಸ್ತಥಾಹ್ಯಾಹ) ಎಂಬ ಶಬ್ದಕ್ಕೆ ಅನೇಕ ಕಡೆಗಳಲ್ಲಿ ಬೇರೆ ಬೇರೆ ಅರ್ಥವಾಗುತ್ತದೆ. 'ತೇಜಃ' ಎಂಬಲ್ಲಿ ವಾಯುವಿನಿಂದ ಎಂದು 'ಆಪಃ' ಎಂಬಲ್ಲಿ ತೇಜಸ್ಸಿನಿಂದ ಎಂದು ಹೀಗೆ. ಆಗ ಇದರ ಬದಲು ನಮ್ಮ ಪ್ರಕಾರ ಅರ್ಥಮಾಡಿದರೆ ಎಲ್ಲ ಕಡೆಯಲ್ಲಿ ಅನುವೃತ್ತವಾಗುವ 'ಅತಃ' ಶಬ್ದಕ್ಕೂ ಬ್ರಹ್ಮನಿಂದ ಎಂದು ಒಂದೇ ಅರ್ಥವಾಗಬಹುದು. ಅದಲ್ಲದೇ 'ತೇಜಃ' ಇತ್ಯಾದಿ ಸೂತ್ರಗಳನ್ನು ನಮ್ಮ ರೀತ್ಯಾ ಸಿದ್ಧಾಂತಸೂತ್ರಗಳೆಂದು ವ್ಯಾಖ್ಯಾನಿಸಿ ಅನೇಕ ಅಧಿಕರಣಗಳನ್ನು ಮಾಡಲು ಬರುವಾಗ ನೀವು ಅದೆಲ್ಲವನ್ನೂ ಪೂರ್ವಪಕ್ಷ ಸೂತ್ರವೆಂದು ಗಣಿಸಿ ಒಂದೇ ಅಧಿಕರಣವನ್ನಾಗಿ ಮಾಡಿರುವುದು ಸರಿಯಲ್ಲ.

**''तदभिध्यानात्'' इति सूत्रे तुशब्ददर्शनात्ततः पूर्वेषां पूर्वपक्षत्वे च ''असम्भवस्तु'' इत्यत्र तद्दर्शनात्ततः पूर्वेषां ''एतेन'' इत्यादीनां तत्त्वं स्यात् ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् अबधिकरणं सम्पूर्णम् ।।५।।**

(ಅದಕ್ಕೆ ಅವರು ಹೀಗೆ ಉತ್ತರಿಸಬಹುದು). 'ತದಭಿಧ್ಯಾನಾತ್' ಎಂಬಲ್ಲಿ 'ತು' ಎಂಬ ಶಬ್ದವಿರುವುದರಿಂದ ಅದಕ್ಕೆ ಹಿಂದಿರುವೆಲ್ಲ ಪೂರ್ವಪಕ್ಷ ಸೂತ್ರವೆಂದು ತಿಳಿಯುತ್ತದೆ. ಹಾಗಾಗಿ ನಾವು ಹೇಳುವ ಅರ್ಥ ಸರಿಯಿದೆ ಎಂದು ಹೇಳುವುದಾದರೆ ಆಗ 'ಅಸಂಭವಸ್ತು' ಎಂಬಲ್ಲಿಯೂ 'ತು' ಎಂಬ ಶಬ್ದವಿರುವುದರಿಂದ, ಅದಕ್ಕಿಂತ ಹಿಂದಿರುವ 'ಏತೇನ ಮಾತರಿಶ್ವಾ ವ್ಯಾಖ್ಯಾನಃ' ಎಂದು ಮೊದಲಾದ ಸೂತ್ರಗಳೂ ಪೂರ್ವಪಕ್ಷ ಸೂತ್ರಗಳೆಂದು ಹೇಳಬೇಕಾಗುತ್ತದೆ. (ಆದರೆ ರಾಮಾನುಜರು ಹಾಗೆ ಒಪ್ಪಿಲ್ಲ).

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಅಬಧಿಕರಣವು ಸಂಪೂರ್ಣವಾಯಿತು

**प्रकाशः –**

सूत्राक्षरास्वारस्यं चाह – **किञ्चैवमिति** ।। वाय्वादिभावापन्नाज्जनिर्नाम किं वाय्वादिविशिष्टाज्जातत्वं किं वा वाय्वादिविवर्तत्वमिति कल्पौ हृदि निधाय सिद्धान्तप्रमेयं निराह – **किञ्च तेज आदेरिति** ।। **विशिष्टेति** ।। अत एव भिन्नेत्यर्थः।। **सूत्रैरिति** ।। तेजोतस्तथा ह्याह, आपः पृथिव्यधिकाररूपशब्दान्तरेभ्यः इति चतुर्भिः सूत्रैरित्यर्थः ।

ರಾಮಾನುಜರ ಪ್ರಕಾರ 'ತೇಜೋಽಸ್ತಥಾಹ್ಯಾಹ' 'ಆಪಃ', 'ಪೃಥಿವೀ', 'ಅಧಿಕಾರರೂಪ ಶಬ್ದಾಂತೇರಭ್ಯಃ' ಎಂಬುದಾಗಿ ನಾಲ್ಕು ಪೂರ್ವಪಕ್ಷ ಸೂತ್ರಗಳು.

**प्रकाशः – तन्मते पृथिवीत्यस्य पार्थक्यात् ।**

ಅವರ ಪ್ರಕಾರ 'ಪೃಥಿವ್ಯಾಧಿಕರರೂಪಶಬ್ದಾಂತರೇಭ್ಯಃ' ಎಂಬಲ್ಲಿ 'ಪೃಥಿವೀ' ಎನ್ನುವುದು ಬೇರೆ ಸೂತ್ರ. 'ಅಧಿಕಾರರೂಪಶಬ್ದಾಂತರೇಭ್ಯಃ' ಎಂಬುದು ಬೇರೆ ಸೂತ್ರ.

**प्रकाशः – इत्यादिभिरिति । चराचरेत्यन्तैरित्यर्थः ॥**

ಸಿದ್ಧಾಂತ ಸೂತ್ರಗಳು -

'ತದಭಿಧ್ಯಾನಾತ್ತು ತಲ್ಲಿಂಗಾತ್ ಸ'
'ವಿಪರ್ಯಯೇಣ ತು ಕ್ರಮೋऽತ ಉಪಪದ್ಯತೇಚ'
'ಅಂತರಾ ವಿಜ್ಞಾನಮನಸೀ ಕ್ರಮೇಣ ತಲ್ಲಿಂಗಾತ್ ಇತಿ ಚೆನ್ನ ಅವಿಶೇಷಾತ್'
'ಚರಾಚರವ್ಯಪಾಶ್ರಯಸ್ತು ಸ್ಯಾತ್ ತದ್ವ್ಯಪದೇಶೋ ಭಾಕ್ತಸ್ತಭಾವಭಾವಿತ್ವಾತ್' ಎಂಬುದಾಗಿ.

**प्रकाशः – पूर्वपक्षत्वादीति ॥** अतश्शब्दस्य व्यवहितपरत्वं स्वस्थाने वायुपरत्वमनुवृत्तिस्थले च तेजःप्रभृतिपरत्वमित्यादिपदार्थः ।

ಆದಿ ಪದದಿಂದ 'ಅತಃ' ಶಬ್ದಕ್ಕೆ ವ್ಯವಹಿತವಾದ 'ಮಾತರಿಶ್ವಾ' ಎಂಬುದರ ಪರಾಮರ್ಶ ಹಾಗೂ "ತೇಜೋऽತಸ್ತಥಾಹ್ಯಾಹ' ಎನ್ನುವಲ್ಲಿ ವಾಯುಪರಾಮರ್ಶ ಅನುವೃತ್ತಿಸ್ಥಳವಾದ 'ಆಪಃ' ಎಂಬಲ್ಲಿ ತೇಜಸ್ ಪರಾಮರ್ಶ ಹೀಗೆ ಭಿನ್ನ ಭಿನ್ನ ಪರಾಮರ್ಶ ಎಂಬ ದೋಷವೂ ಬರುತ್ತದೆ ಎಂಬುದನ್ನು ಇಟ್ಟುಕೊಳ್ಳಬೇಕು.

**प्रकाशः –** त्वयापि आपोतस्तथा ह्याह पृथिव्यतस्तथा ह्याह इत्युत्तरत्राप्यनुवृत्त्याऽत इत्यस्य तेजसः अद्भ्यः इत्यर्थवर्णनादिति भावः ।

ನೀನೂ ಕೂಡ 'ಆಪಃ' ಎಂಬಲ್ಲಿ 'ಅತಃ ತಥಾಹ್ಯಾಹ' ಎಂಬುದನ್ನು ಅನುವೃತ್ತಿ ಮಾಡಿಕೊಂಡು ಹಾಗೇ 'ಪೃಥಿವೀ' ಎಂಬಲ್ಲಿಯೂ ಇದನ್ನು ಅನುವೃತ್ತಿ ಮಾಡಿಕೊಂಡು 'ಅತಃ' ಎಂಬುದಕ್ಕೆ ತೇಜಸ್ಸಿನಿಂದ ಅಪ್‌ನಿಂದ ಎಂದು ಅರ್ಥ ಹೇಳಿರುವುದರಿಂದ ಎಂದು ಅಭಿಪ್ರಾಯ.

**प्रकाशः –** "तुशब्दात्पक्षो व्यावृत्त" इति श्रीभाष्योक्तिसूचितमाशङ्क्य निराह – **तुशब्देति ॥**

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे अबधिकरणं सम्पूर्णम् ॥९॥**

ಶ್ರೀಭಾಷ್ಯದಲ್ಲಿ 'ತುಶಬ್ದಾತ್‌ಪಕ್ಷೋ ವ್ಯಾವೃತಃ' ಅಂದರೆ 'ತು' ಎಂಬ ಶಬ್ದ ಎಲ್ಲಿ ಬಂದರೂ ಅಲ್ಲಿ ಹಿಂದಿನದು ಪೂರ್ವಪಕ್ಷ ನಂತರದ್ದು ಸಿದ್ಧಾಂತ ಎಂದು ತಿಳಿಯಬೇಕು ಎಂದು ಹೇಳಿದ್ದಾರೆ. ಅದನ್ನು ಪ್ರಶ್ನಿಸಿಕೊಂಡು ನಿರಾಕರಿಸುತ್ತಿದಾದರೆ. 'ತುಶಬ್ದ' ಎಂಬುದಾಗಿ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಅಬಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

# ಪೃಥಿವ್ಯಧಿಕರಣ

(೨-೩-೬)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

***

॥ ಶ್ರೀಗುರುಭ್ಯೋ ನಮಃ ॥

# ಪೃಥಿವ್ಯಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् — पृथिव्यधिकाररूपशब्दान्तरादिभ्यः ॥**

'ತಾ ಅನ್ನಮಸೃಜಂತ' ಎಂಬ ಶ್ರುತಿಯಲ್ಲಿ ಅನ್ನಶಬ್ದದಿಂದ ಪೃಥಿವಿಯು ಹೇಳಲ್ಪಟ್ಟಿದೆ. ಏಕೆಂದರೆ ಭೂತಪ್ರಕರಣವಾಗಿರುವುದರಿಂದ ಕೃಷ್ಣರೂಪವು ಶ್ರುತವಾಗಿದೆ. ವಿಶೇಷಶ್ರುತಿಗಳಿರುವುದರಿಂದ ಅಪೌರುಷೇಯವಾದ್ದರಿಂದ ವೇದವು ಅಪ್ರಮಾಣವಲ್ಲ ಎಂಬ ಯುಕ್ತಿಯಿಂದಲೂ ಅನ್ನವೆಂದರೆ ಪೃಥಿವೀಯನ್ನೇ ವಿವಕ್ಷಿಸಬೇಕು.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका—पृथिवी** पृथिव्येव 'ता अन्नमसृजन्त' इति श्रुतिः। तथाऽन्नशब्देनोच्यते न प्रसिद्धान्नम् । कुतः ? **अधिकाररूपशब्दान्तरादिभ्यः** अधिकारशब्दितभूतप्रकरणात् रूपशब्दोक्तकृष्णरूपस्य च श्रवणात् । **शब्दान्तरं** शब्दविशेषः 'पृथिवी वा अन्नम्' इति श्रुतिविशेषाच्चेत्यर्थः । अपौरुषेयत्वेनादोषस्य वाक्यस्य नाप्रामाण्यमित्यादियुक्तिरादि**शब्दार्थः** ॥१॥

ಪೃಥಿವೀ = 'ತಾ ಅನ್ನಮಸೃಜಂತ' ಎಂಬ ಶ್ರುತಿಯಲ್ಲಿ ಅನ್ನವೆಂದರೆ ಪೃಥಿವಿಯೇ ಆಗಿದೆ. ಪ್ರಸಿದ್ಧವಾದ ಅನ್ನವಲ್ಲ. ಏಕೆಂದರೆ 'ಅಧಿಕಾರರೂಪಶಬ್ದಾಂತರಾದಿಭ್ಯಃ' ಭೂತಪ್ರಕರಣವಾದ್ದರಿಂದ, ಕೃಷ್ಣರೂಪವು ಶ್ರುತವಾದ್ದರಿಂದ, ವೇದವು ಅಪೌರುಷೇಯವಾದ್ದರಿಂದ ಅಪ್ರಮಾಣವಲ್ಲ ಎಂಬ ಯುಕ್ತಿಯಿರುವುದರಿಂದ.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ಪೃಥಿವ್ಯಧಿಕರಣವು ಮುಗಿಯಿತು.
ಪರಿಪೂರ್ಣಚಂದ್ರಿಕಾ

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – 'ता आप ऐक्षन्त बह्व्यः स्याम प्रजायेमहीति । ता अन्नमसृजन्त' (छा. ६.२.)**

**इत्यद्भ्योऽन्नसृष्टिः श्रूयते । 'अद्भ्यः पृथिवी' (तै.२.१) इति कुत्रचित् पृथिवीसृष्टिः । अतो विरुद्धत्वादप्रामाण्यमिति ।**

ಅನುವಾದ - ನೀರುಗಳೆಲ್ಲ ಸೇರಿ ಆಲೋಚನೆ ಮಾಡಿದವು (ನೀರಿನ ಅಭಿಮಾನಿ ದೇವತೆಗಳು) ನಾವು ಬಹುರೂಪವನ್ನು ತಾಳೋಣ. ಅನೇಕ ಜನರನ್ನು ಉತ್ಪತ್ತಿ ಮಾಡೋಣ ಎಂದು. ಅವಾಗ ನೀರುಗಳು ಅನ್ನವನ್ನು ಸೃಷ್ಟಿ ಮಾಡಿದವು. ಹೀಗೆ ಛಾಂದ್ಯೋಗ್ಯಶ್ರುತಿಯಲ್ಲಿ ನೀರಿನಿಂದ ಅನ್ನದ ಸೃಷ್ಟಿಯು ಶ್ರುತವಾಗಿದೆ. ಆದರೆ 'ಅದ್‌ಭ್ಯಃ ಪೃಥಿವೀ' ಎಂಬ ಶ್ರುತಿಯು ನೀರಿನಿಂದ ಪೃಥಿವಿಯು ಹುಟ್ಟಿತೆಂದು ಹೇಳುತ್ತಿದೆ. ಹೀಗೆ ವಿರುದ್ಧವಾದ್ದರಿಂದ ಶ್ರುತಿಗಳಿಗೆ ಅಪ್ರಾಮಾಣ್ಯವನ್ನು ಹೇಳಬೇಕಲ್ಲವೆ.

ಪ್ರತಿಪದಾರ್ಥ -- ಶ್ರುತಿಗಳ ಪರಸ್ಪರ ವಿರೋಧವನ್ನು ಪರಿಹರಿಸಲು ಈ ಅಧಿಕರಣ ಹೊರಟಿದೆ ತಾ ಆಪಃ = ಆ ನೀರುಗಳು (ಅಭಿಮಾನಿದೇವತೆಗಳು), ಐಕ್ಷಂತ = ಆಲೋಚನೆ ಮಾಡಿದವು, ಬಹ್ವ್ಯಃ = ಅನೇಕ ರೂಪಗಳನ್ನು, ಸ್ಯಾಮ = ತಾಳೋಣ, ಪ್ರಜಾಯೇಮಹಿ = ಅನೇಕ ಪ್ರಜೆಗಳನ್ನು ಉತ್ಪತ್ತಿ ಮಾಡೋಣ, ಇತಿ = ಹೀಗೆ, ತಾಃ = ಆ ನೀರುಗಳು, ಅನ್ನಂ = ಅನ್ನವನ್ನು, ಅಸೃಜಂತ = ಹುಟ್ಟಿಸಿದವು. ಇತಿ = ಹೀಗೆ, ಅದ್‌ಭ್ಯಃ = ನೀರಿನಿಂದ, ಅನ್ನಸೃಷ್ಟಿಃ = ಅನ್ನದ ಸೃಷ್ಟಿಯು, ಶ್ರೂಯತೇ = ಶ್ರುತವಾಗಿದೆ.

ಆದರೆ ಮತ್ತೊಂದು ಕಡೆ ಅದ್‌ಭ್ಯಃ = ನೀರಿನಿಂದ, ಪೃಥಿವೀ = ಪೃಥಿವಿಯು, ಇತಿ = ಹೀಗೆ ಕುತ್ರಚಿತ್ = ಮತ್ತೊಂದು ಕಡೆ, ಪೃಥಿವೀಸೃಷ್ಟಿ = ಪೃಥಿವಿಯ ಸೃಷ್ಟಿಯು ಶ್ರುತವಾಗಿದೆ. ಅತಃ = ಆದ್ದರಿಂದ, ವಿರುದ್ಧತ್ವಾತ್ = ವಿರುದ್ಧ ಆಗಿರುವುದರಿಂದ, ಅಪ್ರಾಮಾಣ್ಯಂ = ಶ್ರುತಿಗೆ ಅಪ್ರಾಮಾಣ್ಯವನ್ನು ಹೇಳಬೇಕು.

**भाष्यम् – अतो वक्ति –**

**।। पृथिव्यधिकाररूपशब्दान्तरादिभ्यः ।।१।।**

**पृथिवी तत्रान्नशब्दोनोच्यते । भूताधिकारत्वात् ।**

ಅನುವಾದ - ಈ ಪೂರ್ವಪಕ್ಷದ ನಿರಾಕರಣೆಗಾಗಿ ಮುಂದಿನ ಸೂತ್ರ ಹೊರಟಿದೆ. 'ತಾ ಅನ್ನಮ್ ಅಸೃಜಂತ' ಎಂಬಲ್ಲಿರುವ ಅನ್ನಶಬ್ದದಿಂದ ಪೃಥಿವಿ ಪ್ರತಿಪಾದ್ಯವಾಗಿದೆ. ಏಕೆಂದರೆ ಎಲ್ಲಾ ಭೂತವಸ್ತುಗಳಿಗೆ ಉತ್ಪತ್ತಿ ಕಾರಣವಾಗಿರುವುದರಿಂದ

ಪೃಥಿವ್ಯಧಿಕರಣ (೨-೩-೬)

ಪ್ರತಿಪದಾರ್ಥ -- ಅತಃ = ಪೂರ್ವಪಕ್ಷದ ನಿರಾಕರಣೆಗಾಗಿ, ವಕ್ತಿ = ಸೂತ್ರಕಾರರು ಹೇಳುತ್ತಿದ್ದಾರೆ. ತಾ ಅನ್ನಮ್ ಅಸೃಜಂತ ಎಂಬಲ್ಲಿ, ಅನ್ನಶಬ್ದೇನ = ಅನ್ನಶಬ್ದದಿಂದ, ಪೃಥಿವೀ = ಪೃಥಿವಿಯು, ಉಚ್ಯತೇ = ಪ್ರತಿಪಾದ್ಯವಾಗಿದೆ, ಭೂತಾಧಿಕಾರತ್ವಾತ್ = ಭೂತವಸ್ತುಗಳ ಉತ್ಪತ್ತಿಗೆ ಪೃಥಿವಿಯು ಕಾರಣವಾದ್ದರಿಂದ.

**भाष्यम् — कार्ष्ण्यप्रचुरा च पृथिवी । नान्नस्य तथा विशेषः । 'आपश्च पृथिवी चान्नम्' (ऐ.आ.२.३.१.) पृथिवी वा अन्नम् (तै.३.९.) 'ता आपोऽन्नमसृजन्त पृथिवी वा अन्नम्' इत्यादिशब्दान्तराच ।**

ಅನುವಾದ - ಪೃಥಿವಿಯು ಬಹಳವಾಗಿ ಕೃಷ್ಣವರ್ಣದಿಂದಲೇ ಕೂಡಿರುತ್ತದೆ. ಆದರೆ ಅನ್ನಕ್ಕೆ ಇಂಥ ಯಾವುದೇ ವಿಶೇಷಗುಣವನ್ನು ಹೇಳಲು ಸಾಧ್ಯವಿಲ್ಲ.

ಮತ್ತು 'ಆಪಶ್ಚ ಪೃಥಿವೀ ಚಾನ್ನಮ್' ಎಂಬ ಶ್ರುತಿಯಲ್ಲಿ ಮತ್ತು 'ಪೃಥಿವೀ ವಾ ಅನ್ನಮ್' ಎಂಬ ಶ್ರುತಿಯಲ್ಲಿ 'ತಾ ಆಪೋಽನ್ನಮಸೃಜಂತ ಪೃಥಿವೀ ವಾ ಅನ್ನಮ್' ಎಂಬ ಶ್ರುತಿಯಲ್ಲಿಯೂ ಅನ್ನ ಶಬ್ದಕ್ಕೆ ಪೃಥಿವೀ ಎಂದೇ ಹೆಸರಿಸಲಾಗಿದೆ.

ಪ್ರತಿಪದಾರ್ಥ -- ಕಾರ್ಷ್ಣ್ಯಪ್ರಚುರಾಚ = ಹೆಚ್ಚಾಗಿ ಕಪ್ಪಾಗಿರುವಿಕೆಯು, ಪೃಥಿವೀ = ಪೃಥಿವಿಯ ವಿಶೇಷಧರ್ಮವಾಗಿದೆ, ತಥಾ = ಈ ರೀತಿಯಾಗಿ, ಅನ್ನಸ್ಯ = ಅನ್ನಕ್ಕೆ, ನವಿಶೇಷಃ = ಯಾವುದೇ ವಿಶೇಷಧರ್ಮ ಇರುವುದಿಲ್ಲ.

ಆಪಃ = ನೀರು, ಚ = ಮತ್ತು, ಪೃಥಿವೀ = ಪೃಥಿವಿಯು, ಅನ್ನಮ್ = ಅನ್ನವೆಂದು ಕರೆಸಿಕೊಳ್ಳುತ್ತದೆ. ಪೃಥಿವೀ ವಾ = ಪೃಥಿವೀಯಾದರೂ, ಅನ್ನಮ್ = ಅನ್ನವೆಂದು ಕರೆಸಿಕೊಳ್ಳುತ್ತದೆ. ತಾ ಆಪಃ = ಆ ನೀರು, ಅನ್ನಮ್ = ಅನ್ನವನ್ನು, ಅಸೃಜಂತ = ಸೃಷ್ಟಿ ಮಾಡಿದವು, ಪೃಥಿವೀ ವಾ = ಪೃಥಿವಿಯೇ ಅನ್ನವಾಗಿದೆ, ಇತ್ಯಾದಿ ಶಬ್ದಾಂತರಾಚ್ಚ = ಇವೇ ಮೊದಲಾದ ಶ್ರುತಿಗಳ ಬಲದಿಂದ ಅನ್ನವೆಂದರೆ ಪೃಥಿವೀ ಎಂದೇ ತಿಳಿಯಬೇಕು.

**भाष्यम् — आदिशब्दाद् युक्तिः अपौरुषेयत्वेनादोषस्य वाक्यस्य नाप्रामाण्यमित्यादि । कौर्मे च — 'विरोधो वाक्ययोर्यत्र नाप्रामाण्यं तदेष्यते । यथाऽविरुद्धता च स्यात् तथाऽर्थः कल्प्य एतयोः ।।' इति ।।**

ಅನುವಾದ - ಸೂತ್ರದಲ್ಲಿರುವ ಆದಿಶಬ್ದದಿಂದ ಯುಕ್ತಿಯನ್ನು ಸೂಚನೆ ಮಾಡಿದ್ದಾರೆ. ಅಪೌರುಷೇಯವಾದ್ದರಿಂದ ನಿರ್ದೋಷವಾದ ವೇದವಾಕ್ಯಕ್ಕೆ ಅಪ್ರಾಮಾಣ್ಯವನ್ನು ಹೇಳಲು ಸಾಧ್ಯವಿಲ್ಲ.

ಯಾವ ಶ್ರುತಿವಾಕ್ಯಗಳಿಗೆ ಪರಸ್ಪರ ವಿರೋಧವಿದೆಯೊ ಅವೆರಡರಲ್ಲಿ ಒಂದಕ್ಕೆ ಅಪ್ರಾಮಾಣ್ಯವನ್ನು ಹೇಳಬಾರದು. ಎರಡು ವಾಕ್ಯಗಳಿಗೆ ವಿರೋಧ ಬಾರದಂತೆ ಅರ್ಥವನ್ನು ಕಲ್ಪನೆ ಮಾಡಬೇಕು.

ಪ್ರತಿಪದಾರ್ಥ -- ಆದಿಶಬ್ದಾತ್ = ಸೂತ್ರದಲ್ಲಿರುವ ಆದಿಶಬ್ದದಿಂದ, ಯುಕ್ತಿಃ = ಯುಕ್ತಿಯು ಸೂಚಿತವಾಗಿದೆ, ಅಪೌರುಷೇಯತ್ವೇನ = ಅಪೌರುಷೇಯ ಎಂಬ

ಹೇತುವಿನಿಂದ ಅದೋಷಸ್ಯ - ನಿರ್ದುಷ್ಟವಾದ, ವಾಕ್ಯಸ್ಯ = ವಾಕ್ಯಕ್ಕೆ, ಅಪ್ರಾಮಾಣ್ಯಮ್ = ಅಪ್ರಾಮಾಣ್ಯವನ್ನು, ನ = ಹೇಳಬಾರದು.

(ವೇದಃ ನಾಪ್ರಮಾಣಮ್ ಅಪ್ರಾಮಾಣ್ಯದೋಷಶೂನ್ಯತ್ವಾತ್) ಎಂಬ ಯುಕ್ತಿಯನ್ನು ತಿಳಿಯಬೇಕು.

ವಾಕ್ಯಯೋಃ = ಎರಡು ವಾಕ್ಯಗಳಿಗೆ, ಯತ್ರ = ಯಾವ ಸಂದರ್ಭದಲ್ಲಿ, ವಿರೋಧಃ = ವಿರೋಧವು ಪ್ರಾಪ್ತವಾಗುತ್ತದೋ, ತದಾ = ಆವಾಗ, ಅಪ್ರಾಮಾಣ್ಯಮ್ = ಅಪ್ರಾಮಾಣ್ಯವನ್ನು, ನ = ಹೇಳಬಾರದು. ಯಥಾ = ಹೇಗೆ ಅರ್ಥವನ್ನು ಮಾಡುವುದರಿಂದ ವಿರುದ್ಧತಾ = ಎರಡು ವಾಕ್ಯಗಳಿಗೆ ವಿರೋಧವು, ನ ಸ್ಯಾತ್ = ಬರುವುದಿಲ್ಲವೋ, ತಥಾ = ಹಾಗೆ, ಏತಯೋಃ = ಎರಡು ವಾಕ್ಯಗಳ, ಅರ್ಥಃ = ಅರ್ಥವನ್ನು, ಕಲ್ಪ್ಯಃ = ಕಲ್ಪನೆ ಮಾಡಬೇಕು.

**भाष्यम् –**

**'रक्तोऽग्निरुदकं शुक्लं कृष्णैव पृथिवी स्वतः ।**
**नाभिपद्माभिसम्बन्धात् पीता सेत्यभिधीयते ।।**
**क्षत्ररक्ताभिसम्बन्धाद् रक्तोदकबहुत्वतः ।**
**शुक्लत्वमेत्येवमेव वर्णान्तरगतिर्भवेत् ।।**
**विष्णुवीर्याभियोगाच्च पीतत्वं भुव इष्यते ।**
**स्वर्णवीर्यो हि भगवाननादिः पुरुषोत्तमः ।।'**

**इति व्योमसंहितायाम् ।।१।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये पृथिव्यधिकरणम् ।। ६ ।।**

ಅನುವಾದ - ಅಗ್ನಿಯು ಕೆಂಪು ಬಣ್ಣದ್ದು, ನೀರು ಬಿಳಿಬಣ್ಣದ್ದು, ಪೃಥಿವೀಯಾದರೂ ಸ್ವಾಭಾವಿಕವಾಗಿ ಕಪ್ಪು ಬಣ್ಣದ್ದೇ ಆಗಿರುತ್ತದೆ. ಆದರೆ ಔಪಾಧಿಕವಾಗಿ ಬೇರೆ ಬಣ್ಣಗಳು ಕೂಡ ಪೃಥಿವಿಯಲ್ಲಿ ಬರುತ್ತವೆ. ಭಗವಂತನ ನಾಭಿಕಮಲದ ಸಂಪರ್ಕದಿಂದ ಹಳದಿಯಾಗಿದೆ ಕ್ಷತ್ರಿಯರ ರಕ್ತದ ಸಂಪರ್ಕದಿಂದ ಕೆಂಪಾಗಿದೆ. ನೀರಿನ ಅಂಶ ಬಹಳವಾಗಿರುವುದರಿಂದ ಬಿಳಿಬಣ್ಣವನ್ನು ತಾಳುತ್ತದೆ. ಹೀಗೆ ಔಪಾಧಿಕವಾಗಿ ಬೇರೆ ಬಣ್ಣಗಳು ಪೃಥಿವಿಯಲ್ಲಿ ಇವೆ. ಭಗವಂತನ ವೀರ್ಯವು ಹಳದಿಯಾದ್ದರಿಂದ ಆ ವೀರ್ಯದ ಸಂಪರ್ಕ ಪೃಥಿವೀಯಲ್ಲಿ ಇರುವುದರಿಂದ ಇದೂ ಕೂಡ ಹಳದಿಯಾಗಿದೆ. ಏಕೆಂದರೆ ಅನಾದಿಪುರುಷೋತ್ತಮನಾದ ಭಗವಂತನ ವೀರ್ಯವು ಬಂಗಾರವರ್ಣದ್ದಾಗಿದೆ ಎಂದು ವ್ಯೋಮಸಂಹಿತೆಯು ಹೇಳುತ್ತದೆ.

ಪ್ರತಿಪದಾರ್ಥ -- ಅಗ್ನಿಃ = ಅಗ್ನಿಯು, ರಕ್ತಃ = ಕೆಂಪುಬಣ್ಣದ್ದು, ಉದಕಂ = ನೀರು, ಶುಕ್ಲಂ = ಬಿಳಿಯಬಣ್ಣದ್ದು, ಪೃಥಿವೀ = ಪೃಥಿವೀಯು, ಸ್ವತಃ = ಸ್ವಾಭಾವಿಕವಾಗಿ,

ಕೃಷ್ಣೈವ = ಕಪ್ಪುಬಣ್ಣದ್ದು ಆಗಿದೆ. ನಾಭಿಪದ್ಮಸಂಬಂಧಾತ್ = ಭಗವಂತನ ನಾಭಿಕಮಲದ ಸಂಪರ್ಕದಿಂದ, ಸಾ = ಆ ಪೃಥಿವೀಯು, ಪೀತಾ = ಹಳದಿ ಎಂದು, ಅಭಿಧೀಯತೇ = ಕರೆಸಿಕೊಳ್ಳುತ್ತದೆ. ಕ್ಷತ್ರರಕ್ತಾಭಿಸಂಬಂಧಾತ್ = ಕ್ಷತ್ರಿಯರ ರಕ್ತದ ಸಂಬಂಧದಿಂದ, ರಕ್ತ = ಕೆಂಪುಬಣ್ಣವನ್ನು ಹೊಂದಿದೆ, ಉದಕಬಹುತ್ವತಃ = ನೀರಿನ ಬಹುಭಾಗವನ್ನು ಪಡೆದಿದ್ದರಿಂದ, ಶುಕ್ಲತ್ವಮ್ = ಬಿಳಿಯಾಗಿದೆ. ಇತಿ = ಹೀಗೆ, ಏವಮೇವ = ಔಪಾಧಿಕವಾಗಿ, ವರ್ಣಾಂತರಗತಿಃ = ಬೇರೆ ವರ್ಣಗಳ ಬರುವಿಕೆಯು, ಭವೇತ್ = ಉಂಟಾಗುತ್ತದೆ. ವಿಷ್ಣುವೀರ್ಯಾಭಿಯೋಗಾಚ್ಚ = ಭಗವಂತನ ವೀರ್ಯದ ಸಂಬಂಧದಿಂದ, ಭುವಃ = ಭೂಮಿಗೆ, ಪೀತತ್ವಂ = ಹಳದಿ ಬಣ್ಣವೆಂದು, ಇಷ್ಯತೇ = ಅಂಗೀಕರಿಸಲಾಗಿದೆ. ಹಿ = ಏಕೆಂದರೆ, ಅನಾದಿಃ ಪುರುಷೋತ್ತಮಃ = ಅನಾದಿಪುರುಷೋತ್ತಮನಾದ, ಭಗವಾನ್ = ಷಡ್ಗುಣೈಶ್ವರ್ಯಸಂಪನ್ನನಾದ ಭಗವಂತನು, ಸ್ವರ್ಣವೀರ್ಯಃ = ಬಂಗಾರದ ವೀರ್ಯವುಳ್ಳವನು, ಇತಿ = ಹೀಗೆ, ವ್ಯೋಮಸಂಹಿತಾಯಾಮ್ = ವ್ಯೋಮಸಂಹಿತಾದಲ್ಲಿ ಹೇಳಿದ್ದಾರೆ.

ಇಲ್ಲಿಗೆ ಪೃಥಿವ್ಯಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**तत्वप्रकाशिका – एवं सर्वस्य साक्षादन्यद्वारा वा ब्रह्मजातत्वे सिद्धेऽत्रोक्तसमन्वयसिद्ध्यर्थं द्वारविषयश्रुतिरोधपरिहारादस्ति शास्त्रादिसङ्गतिः ।**

ಹೀಗೆ ಸಕಲ ಪದಾರ್ಥಗಳು ನೇರವಾಗಿ ಅಥವಾ ಮತ್ತೊಂದರ ಮೂಲಕ ಪರಬ್ರಹ್ಮನಿಂದಲೇ ಉತ್ಪತ್ತಿಯನ್ನು ಪಡೆಯುತ್ತವೆ ಎಂಬುದನ್ನು ಸಾಧಿಸಿದ್ದಾಯಿತು. ಈ ಶ್ರುತ್ಯರ್ಥವು ಪರಬ್ರಹ್ಮನಲ್ಲಿ ಸಮನ್ವಯವಾಗಬೇಕು. ಅದಕ್ಕಾಗಿ ದ್ವಾರವಿಷಯಕವಾದ ಶ್ರುತಿಗಳ ವಿರೋಧವನ್ನು ಈ ಅಧಿಕರಣದಲ್ಲಿ ಪರಿಹರಿಸುತ್ತಿದ್ದಾರೆ. ಆದ್ದರಿಂದ ಶಾಸ್ತ್ರಾದಿಸಂಗತಿಗಳು ಇರುತ್ತವೆ.

ವಿವರಣೆ – ವಿಯದಧಿಕರಣದಲ್ಲಿ ಹಾಗೂ ಮಾತರಿಶ್ವಾಧಿಕರಣದಲ್ಲಿ ಆಕಾಶ, ವಾಯು ಮೊದಲಾದ ಸಕಲ ಪದಾರ್ಥಗಳು ಪರಬ್ರಹ್ಮನಿಂದಲೇ ಉತ್ಪನ್ನವಾಗುತ್ತವೆ ಎಂಬುದನ್ನು ಸಮರ್ಥಿಸಿದ್ದಾಯಿತು. ತೇಜೋಧಿಕರಣದಲ್ಲಿ ಹಾಗೂ ಅಬಧಿಕರಣದಲ್ಲಿ ತೇಜಸ್ಸು, ನೀರು ಮೊದಲಾದವುಗಳು ಆಕಾಶಾದಿಗಳ ಮೂಲಕ ಪರಬ್ರಹ್ಮನಿಂದಲೇ ಹುಟ್ಟುತ್ತವೆ ಎಂಬುದನ್ನು ಹೇಳಿದ್ದಾಯಿತು. ಈ ಎಲ್ಲ ವಿಷಯದಲ್ಲಿ ಯಾವ ಶ್ರುತಿಯು ಪ್ರಮಾಣವಾಗಿದೆಯೋ ಅದನ್ನು ಈ ಅಧಿಕರಣದಲ್ಲಿ ಬ್ರಹ್ಮನಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಆಗ 'ಅಗ್ನಿಃ ಪೃಥಿವೀ ತಾ ಅನ್ನಮಸೃಜತ' ಇತ್ಯಾದಿ ದ್ವಾರವಿಷಯಕವಾದ ಶ್ರುತಿವಿರೋಧವು ಪ್ರಾಪ್ತವಾಗುತ್ತದೆ. ಅದನ್ನು ಪರಿಹಾರ ಮಾಡುವುದು ಈ ಅಧಿಕರಣದ ಮುಖ್ಯ ಉದ್ದೇಶ.

ಪರಿಪೂರ್ಣಚಂದ್ರಿಕಾ

ಅವ್ಯಾಕೃತಾಕಾಶ, ಮುಖ್ಯವಾಯು ಇವುಗಳು ಪರಮಾತ್ಮನಿಂದ ನೇರವಾಗಿ ಸೃಷ್ಟವಾಗುತ್ತವೆ. ಭೂತವಾಯು ಮೊದಲಾದವುಗಳು ಭೂತಾಕಾಶಾದಿಗಳ ಮೂಲಕ ಉತ್ಪತ್ತಿ ಪಡೆಯುತ್ತವೆಂದು ತಿಳಿಯಬೇಕು. ಮತ್ತೊಂದರ ಮೂಲಕ ಬ್ರಹ್ಮನೇ ಕಾರಣನಾಗುತ್ತಾನೆಂಬ ಪ್ರಮೇಯವು ನಿಶ್ಚಯವಾಗದಿದ್ದರೆ ದ್ವಾರವಿಷಯಕವಾದ ಶ್ರುತಿವಿಚಾರವೇ ಅಸಂಗತವಾಗುತ್ತದೆ. ಆದ್ದರಿಂದ ಈ ಅಧಿಕರಣಕ್ಕೆ ಆನಂತರ್ಯಸಂಗತಿಯು ಇರುತ್ತದೆ.

**ತत्वप्रकाशिका – वस्त्वन्तरद्वारा साक्षाद्वा ब्रह्म जगत्कारणमित्युक्तम् । तत्र द्वारकारणविषयश्रुतीनां विरोधेन अप्राभाण्ये समन्वयासम्भवात् तन्निरासः कार्य एव। प्रकृता आप एवात्र विषयः । किमन्नस्य द्वारकारणं उत पृथिव्या इति सन्देहः।**

ಮತ್ತೊಂದು ವಸ್ತುವಿನ ಮೂಲಕ ಅಥವಾ ಸಾಕ್ಷಾತ್ತಾಗಿ ಪರಮಾತ್ಮನು ಜಗತ್ತಿಗೆ ಕಾರಣನಾಗುತ್ತಾನೆಂದು ಹೇಳಲಾಯಿತು. ಮತ್ತೊಂದು ವಸ್ತುವಿನ ಮೂಲಕ ಬ್ರಹ್ಮನಿಗೆ ಕಾರಣತ್ವವನ್ನು ಹೇಳುವ ಶ್ರುತಿಗಳಿಗೆ ಪರಸ್ಪರ ವಿರೋಧವು ಬರುವುದರಿಂದ ಅಪ್ರಾಮಾಣ್ಯವು ಪ್ರಾಪ್ತವಾಗುತ್ತದೆ. ಆಗ ಭಗವಂತನಲ್ಲಿ ಶ್ರುತಿಸಮನ್ವಯವೇ ಅಸಂಭಾವಿತವಾಗುತ್ತದೆ. ಅದಕ್ಕಾಗಿ ಈ ಶ್ರುತಿಗಳ ವಿರೋಧವನ್ನು ಪರಿಹಾರ ಮಾಡಲೇಬೇಕು.

ಪ್ರಕೃತವಾದ ನೀರು ಈ ಅಧಿಕರಣದ ವಿಷಯ. ಇದರಿಂದ ಅನ್ನಕ್ಕೆ ದ್ವಾರವು ಕಾರಣವೋ? ಅಥವಾ ಪೃಥಿವಿಗೆ ದ್ವಾರವು ಕಾರಣವೋ?

ವಿವರಣೆ - ಪರಬ್ರಹ್ಮನೇ ಸಮಸ್ತ ಜಗತ್ತಿಗೆ ಕಾರಣನಾಗಿದ್ದಾನೆಂದು ಜನ್ಮಾಧಿಕರಣದಲ್ಲಿ ಸಮರ್ಥಿಸಲಾಗಿದೆ. ಆದರೆ ಮತ್ತೊಂದು ವಸ್ತುವಿನ ಮೂಲಕ ಕಾರಣನಾಗುತ್ತಾನೆಂದು ಈ ಹಿಂದಿನ ಎರಡು ಅಧಿಕರಣಗಳಲ್ಲಿ ಸಮರ್ಥಿಸಲಾಗಿದೆ. ಅಂತಹ ಶ್ರುತಿಗಳಿಗೆ ಪರಸ್ಪರ ವಿರೋಧವು ಬರುವುದರಿಂದ ಅಪ್ರಾಮಾಣ್ಯವು ಬರುತ್ತದೆ. ಹಾಗಾಗಿ ಜಗತ್ಕಾರಣತ್ವ ಪ್ರತಿಪಾದಕ ಶ್ರುತಿಗಳನ್ನು ಪರಬ್ರಹ್ಮನಲ್ಲಿ ಸಮನ್ವಯ ಮಾಡಲು ಆಗುವುದಿಲ್ಲ. ಶ್ರುತಿಗಳ ವಿರೋಧವನ್ನು ಪರಿಹಾರ ಮಾಡಿದಾಗ ಮಾತ್ರ ಜಗತ್ಕಾರಣತ್ವ ಪ್ರತಿಪಾದಕವಾದ ಶ್ರುತಿಗಳು ಪರಬ್ರಹ್ಮನಲ್ಲಿ ಸಮನ್ವಯಗೊಳ್ಳುತ್ತವೆ. ಆದ್ದರಿಂದ ಅನ್ನಕ್ಕೆ ದ್ವಾರವು ಕಾರಣವೋ? ಪೃಥಿವಿಗೆ ದ್ವಾರವು ಕಾರಣವೋ? ಎಂಬುದನ್ನು ವಿಚಾರ ಮಾಡಲಾಗಿದೆ.

**ತत्वप्रकाशिका – किमस्य सन्देहस्य बीजं किं च तत्र प्राप्तमिति । तत्र श्रुतिविगानं सन्देहबीजं दर्शयन् पूर्वपक्षयति – ता इति ।।**

ಈ ಸಂದೇಹಕ್ಕೆ ಕಾರಣವೇನು? ಪೂರ್ವಪಕ್ಷವಾದರೂ ಏನು? ಎಂಬುದಾಗಿ ಪ್ರಶ್ನೆಯು ಬಂದರೆ ಶ್ರುತಿಯ ವಿರೋಧವನ್ನು ತೋರಿಸುವ ಮೂಲಕ ಸಂದೇಹಬೀಜವನ್ನು ತೋರಿಸುತ್ತಾ 'ತಾ ಆಪಃ' ಇತ್ಯಾದಿಯಾಗಿ ಭಾಷ್ಯಕಾರರು ಹೇಳುತ್ತಿದ್ದಾರೆ.

ವಿವರಣೆ - 'ತಾ ಆಪಃ' ಇತ್ಯಾದಿ ಕೆಲವು ಶ್ರುತಿಯಲ್ಲಿ ನೀರಿನಿಂದ ಅನ್ನವು ಹುಟ್ಟಿತು ಎಂದು ಹೇಳಲಾಗಿದೆ. 'ಅದ್‌ಭ್ಯಃಪೃಥಿವೀ' ಇತ್ಯಾದಿ ಕೆಲವು ಶ್ರುತಿಗಳಲ್ಲಿ ನೀರಿನಿಂದ ಪೃಥಿವಿ ಹುಟ್ಟಿತು ಎಂದು

ಹೇಳಲಾಗಿದೆ. ಹಾಗಾಗಿ ಪರಮಾತ್ಮನು ಎಲ್ಲಕ್ಕೂ ಕಾರಣವಾಗಿದ್ದರೂ ಕೂಡ ದ್ವಾರಭೂತವಾದ ನೀರಿನಿಂದ ಅನ್ನವನ್ನು ಸೃಷ್ಟಿಸುತ್ತಾನೋ? ಪೃಥಿವಿಯನ್ನು ಸೃಷ್ಟಿಸುತ್ತಾನೋ? ಎಂಬ ಸಂಶಯವು ಬರುತ್ತದೆ. ಹೀಗೆ ಬೇರೆ ಬೇರೆ ಕ್ರಮದಿಂದ ನೀರಿನಿಂದಾಗುವ ಸೃಷ್ಟಿಯು ಕೇಳಿಸುತ್ತಿರುವುದರಿಂದ ಎರಡೂ ಶ್ರುತಿಗಳಿಗೆ ಅಪ್ರಾಮಾಣ್ಯವು ಪ್ರಾಪ್ತವಾಗುತ್ತದೆಂಬುದು ಪೂರ್ವಪಕ್ಷ.

**तत्वप्रकाशिका – नापः पृथिव्याः कारणं नाप्यन्नस्य । श्रुतिद्वयस्य परस्परविरुद्धत्वात् । निरवकाशत्वेनान्यतरग्रहणायोगात् । न चान्नशब्दस्य पृथिव्यर्थत्वेनाविरोधः । अन्नश्रुतेः प्रसिद्धान्नपरत्वेन स्वीकारे बहुवाक्यानुसारित्वगुणलाभात्।**

ನೀರು ಪೃಥಿವಿಗೂ ಕೂಡ ಕಾರಣವಲ್ಲ, ಅನ್ನಕ್ಕೂ ಕೂಡ ಕಾರಣವಲ್ಲ. ಏಕೆಂದರೆ ಎರಡೂ ಶ್ರುತಿಗಳು ಪರಸ್ಪರ ವಿರುದ್ಧವಾಗಿವೆ. ತಮ್ಮ ತಮ್ಮ ಅರ್ಥದಲ್ಲಿ ನಿರವಕಾಶವಾಗಿರುವುದರಿಂದ ಒಂದನ್ನು ಸ್ವೀಕಾರ ಮಾಡಲು ಆಗುವುದಿಲ್ಲ. ಅನ್ನ ಶಬ್ದಕ್ಕೆ ಪೃಥಿವೀ ಎಂಬ ಅರ್ಥವನ್ನು ಸ್ವೀಕರಿಸಿ ವಿರೋಧವನ್ನು ಪರಿಹರಿಸಲಾಗದು. ಏಕೆಂದರೆ ಅನ್ನ ಶ್ರುತಿಗೆ ಪ್ರಸಿದ್ಧವಾದ ಅನ್ನ ಎಂಬರ್ಥವನ್ನೇ ಸ್ವೀಕರಿಸಬೇಕು. ಆಗ ಮಾತ್ರ ಅನೇಕ ವಾಕ್ಯಗಳನ್ನು ಅನುಸರಿಸಿದಂಥ ಗುಣವು ಲಾಭವಾಗುತ್ತದೆ.

**तत्वप्रकाशिका – तस्मायत्र क्व च वर्षति तदेव भयिष्ठमन्नं भवत्यभ्य एव तद्ध्यन्नाद्यं जायते अन्नमशितं त्रेधा विधीयत इति प्रसिद्धान्नलिङ्गाच्च । न च पृथिवीपदेनान्नग्रहः । अभ्य एवान्नसृष्ट्यङ्गीकारे 'अभ्यः पृथिवी पृथिव्या ओषधयः ओषधीभ्योऽन्नम्' इति श्रुतिविरोधात् । नापि पृथिव्यन्नयोरभ्य एवोत्पत्तिः उक्तश्रुतिविरोधादेव ।**

'ಯತ್ರ ಕ್ವ ಚ ವರ್ಷತಿ ತದೇವ ಭೂಯಿಷ್ಠಮನ್ನಂ ಭವತಿ ಅದ್‌ಭ್ಯಃ ಏವ ತದ್ಧಿ ಅನ್ನಾದ್ಯಂ ಜಾಯತೇ' 'ಎಲ್ಲಿ ಮಳೆಯು ಬರುತ್ತದೋ ಅಲ್ಲಿ ಅನ್ನವು ಹೆಚ್ಚಾಗಿ ಬರುತ್ತದೆ' 'ಅನ್ನಮಶಿತಂ ತ್ರೇಧಾ ವಿಧೀಯತೇ' 'ತಿಂದ ಅನ್ನವು ಮೂರು ಬಗೆಯಲ್ಲಿ ವಿಭಕ್ತವಾಗುತ್ತದೆ'. ಇವೇ ಮೊದಲಾದ ಶ್ರುತಿಗಳಲ್ಲಿ ಪ್ರಸಿದ್ಧವಾದ ಅನ್ನಲಿಂಗವು ಇರುವುದರಿಂದ ಅನ್ನ ಶಬ್ದಕ್ಕೆ ಪ್ರಸಿದ್ಧವಾದ ಅನ್ನ ಎಂಬರ್ಥವನ್ನೇ ಸ್ವೀಕರಿಸಬೇಕು.

ಪೃಥಿವೀ ಪದದಿಂದ ಅನ್ನವನ್ನು ಸ್ವೀಕರಿಸಬಹುದಲ್ಲವೇ? ಎಂದು ಕೇಳಬಾರದು. ನೀರಿನಿಂದಲೇ ಅನ್ನವು ಹುಟ್ಟುತ್ತದೆಂದು ಒಪ್ಪಿದರೆ 'ಅದ್‌ಭ್ಯಃಪೃಥಿವೀ ಪೃಥಿವ್ಯಾ ಓಷಧಯಃ ಓಷಧೀಭ್ಯೋ ಅನ್ನಂ' ನೀರಿನಿಂದ ಪೃಥಿವೀ ಹುಟ್ಟಿತು, ಪೃಥಿವಿಯಿಂದ ಓಷಧಿ, ಓಷಧಿಗಳಿಂದ ಅನ್ನವು ಹುಟ್ಟಿತು ಎಂಬ ಶ್ರುತಿಗೆ ವಿರೋಧವು ಬರುತ್ತದೆ. ಪೃಥಿವೀ ಹಾಗೂ ಅನ್ನಗಳು ನೀರಿನಿಂದಲೇ ಹುಟ್ಟುತ್ತವೆಂದು ಹೇಳಬಾರದು. ಹಿಂದೆ ಹೇಳಿದ ಶ್ರುತಿಯ ವಿರೋಧವು ಬರುತ್ತದೆ.

**ವಿವರಣೆ** - ಅನ್ನ ಶಬ್ದಕ್ಕೆ ಪ್ರಸಿದ್ಧವಾದ ಅನ್ನ ಎಂಬರ್ಥವನ್ನೇ ಸ್ವೀಕರಿಸಬೇಕು. ಅನೇಕ ಶ್ರುತಿವಾಕ್ಯಗಳಿಂದ ನೀರಿಗೆ ಅನ್ನಕಾರಣತ್ವವು ಸಿದ್ಧವಾಗಿದೆ. ಹಾಗಾಗಿ ಬಹುವಾಕ್ಯಾನುಸಾರಿತ್ವ ಎಂಬ ಗುಣದ ಲಾಭಕ್ಕಾಗಿ ಪ್ರಸಿದ್ಧ ಅನ್ನವನ್ನೇ ಸ್ವೀಕರಿಸಬೇಕು. ಈ ವಿಷಯದಲ್ಲಿ ಎರಡು ಲಿಂಗಗಳೂ ಕೂಡ ಆಧಾರವಾಗಿವೆ. 'ತಸ್ಮಾದ್ಯತ್ರ' ಇತ್ಯಾದಿ ಶ್ರುತಿಯಲ್ಲಿ 'ವರ್ಷಜತ್ವ' ಎಂಬ ಲಿಂಗವು 'ಅನ್ನಮಶಿತಂ' ಇತ್ಯಾದಿ ಶ್ರುತಿಯಲ್ಲಿ 'ಅಶ್ಯಮಾನತ್ವ' ಎಂಬ ಲಿಂಗವು ಶ್ರುತವಾಗಿದೆ. ಇದರ ಬಲದಿಂದಲೂ ಅನ್ನ ಪದವು ಪ್ರಸಿದ್ಧವಾದ ಅನ್ನಪರವೆಂದು ನಿರ್ಣಯವಾಗುತ್ತದೆ.

ಪೃಥಿವೀ ಶಬ್ದದಿಂದ ಅನ್ನವನ್ನೂ ಕೂಡ ಸ್ವೀಕರಿಸಲಾಗದು. ಏಕೆಂದರೆ ನೀರಿನಿಂದ ಪೃಥಿವೀ ಹುಟ್ಟುತ್ತದೆ. ಪೃಥಿವಿಯಿಂದ ಓಷಧ್ಯಾದಿಗಳು ಓಷಧಿಗಳಿಂದ ಅನ್ನವು ಹುಟ್ಟುತ್ತದೆಂದು ಶ್ರುತಿಯು ಹೇಳುತ್ತಿದೆ. ಪ್ರಕೃತ ಪೃಥಿವೀ ಶಬ್ದಕ್ಕೆ ಅನ್ನ ಎಂಬರ್ಥವನ್ನು ಸ್ವೀಕರಿಸಿದರೆ ಈ ಶ್ರುತಿಯ ವಿರೋಧವು ಅತ್ಯಂತ ಸ್ಪಷ್ಟ. ಆದ್ದರಿಂದ ಪ್ರಸಿದ್ಧವಾದ ಅನ್ನವು ಓಷಧಿ ಸಸ್ಯಗಳಿಂದ ಉಂಟಾಗುತ್ತದೆ ಹೊರತು ನೀರಿನಿಂದ ಉಂಟಾಗುವುದಿಲ್ಲ. ಆದ್ದರಿಂದ ನೀರಿನಿಂದಲೇ ಪೃಥಿವೀ ಹಾಗೂ ಅನ್ನಗಳ ಸೃಷ್ಟಿಯಾಯಿತು ಎನ್ನುವುದು ತಪ್ಪು.

**तत्वप्रकाशिका – न चान्नस्यैवाप्य इव ओषधीभ्योऽपि जन्म । बहुकल्पनापातात् । न चाप्यः परम्परयान्नमुत्पद्यत इत्यविरोधः । मुख्यार्थत्यागेका रणाभावात् । अतः श्रुतिद्वयस्य परस्परविरुद्धत्वाद प्रामाण्यमेवेति न श्रुतिसमन्वयो ब्रह्मणि युक्त इति भावः । सिद्धान्तयत्सूत्रमवतार्य व्याचष्टे –अत इति ।।**

ಅನ್ನವು ನೀರಿನಿಂದ ಹುಟ್ಟಿದಂತೆ ಓಷಧಿಗಳಿಂದಲೂ ಕೂಡ ಹುಟ್ಟುತ್ತದೆ ಎಂಬ ಸಮಾಧಾನವೂ ಕೂಡ ತಪ್ಪು. ಹಾಗೆ ಹೇಳಿದರೆ ಅನೇಕ ಅರ್ಥಗಳನ್ನು ಕಲ್ಪನೆ ಮಾಡಿದಂತಾಗುತ್ತದೆ. ನೀರು ಪರಂಪರಾಕಾರಣದಿಂದ ಅನ್ನವನ್ನು ಹುಟ್ಟಿಸುತ್ತದೆ. ಆದ್ದರಿಂದ ವಿರೋಧವಿಲ್ಲವೆಂದು ಹೇಳಬಾರದು. ಮುಖ್ಯಾರ್ಥವನ್ನು ಪರಿತ್ಯಾಗ ಮಾಡಲು ಕಾರಣವಿಲ್ಲ.

ಆದ್ದರಿಂದ ಎರಡು ಶ್ರುತಿಗಳು ಪರಸ್ಪರ ವಿರುದ್ಧವಾಗಿರುವುದರಿಂದ ಅಪ್ರಮಾಣವಾಗುತ್ತವೆ. ಹೀಗಿರುವಾಗ ಶ್ರುತಿಸಮನ್ವಯವನ್ನು ಬ್ರಹ್ಮನಲ್ಲಿ ಮಾಡುವುದು ಯುಕ್ತವಾಗುವುದಿಲ್ಲ.

**ವಿವರಣೆ** - ಒಂದುವೇಳೆ ಅನ್ನವು ನೀರಿನಿಂದ ಹುಟ್ಟುವಂತೆ ಓಷಧಿಗಳಿಂದಲೂ ಕೂಡ ಹುಟ್ಟುತ್ತದೆಂದು ಒಪ್ಪಿದರೆ ಅನ್ನವು ನೀರಿನಿಂದ ಹುಟ್ಟುತ್ತದೆ. ಓಷಧಿಗಳಿಂದಲೂ ಹುಟ್ಟುತ್ತದೆ. ನೀರಿನಿಂದ ಪೃಥಿವಿ ಹುಟ್ಟುತ್ತದೆ. ಹೀಗೆ ಅನೇಕ ಅರ್ಥಗಳನ್ನು ಕಲ್ಪನೆ ಮಾಡಬೇಕಾಗುತ್ತದೆ. ಪರಂಪರೆಯಿಂದ ನೀರಿನಿಂದ ಅನ್ನ ಹುಟ್ಟಿತು ಎಂಬುದು ನಮ್ಮ ಅಭಿಪ್ರಾಯವೆಂದು ಹೇಳಲಾಗದು. ನೀರಿನಿಂದ ಪೃಥಿವಿಯು ನೇರವಾಗಿ ಹುಟ್ಟಿತು ಎಂಬ ಶ್ರುತಿಯ ಮುಖ್ಯಾರ್ಥವನ್ನು ಪರಿತ್ಯಾಗ ಮಾಡಬೇಕಾಗುತ್ತದೆ. ಹಾಗಾಗಿ 'ತ ಅನ್ನಮಸೃಜತ' ಎಂಬ ಶ್ರುತಿಗೂ 'ಅದ್ಭ್ಯಃಪೃಥಿವಿ' ಎಂಬ ಶ್ರುತಿಗೆ ಪರಸ್ಪರ ವಿರೋಧವಿರುವುದರಿಂದ ಎರಡೂ ಕೂಡ ಅಪ್ರಮಾಣವಾಗುತ್ತವೆ. ಇಷ್ಟು ಪೂರ್ವಪಕ್ಷಕಾರರ ಅಭಿಪ್ರಾಯ.

ಪೃಥಿವ್ಯಧಿಕರಣ (೨-೩-೬)

**तत्वप्रकाशिका – नात्रापां द्वारकारणत्वानिर्णयाच्छ्रुतिद्वयस्याप्रामाण्यं कल्प्यम् । अपां पृथिवीकारणत्वात् । न च 'ता अन्नमसृजन्त' इति श्रुतिविरोधः । यतस्तत्र पृथिव्यन्नशब्देनोच्यत इत्यर्थः । कुतोऽसावन्नशब्दः पृथिवीपर इत्यत आह – भूतेति ॥**

ನೀರು ಯಾವುದಕ್ಕೆ ದ್ವಾರಭೂತವಾದ ಕಾರಣವಾಗಿದೆ ಎಂಬುದು ನಿರ್ಣಯವೇ ಆಗಿಲ್ಲ. ಆದ್ದರಿಂದ ಎರಡೂ ಶ್ರುತಿಗಳಿಗೆ ಅಪ್ರಾಮಾಣ್ಯವನ್ನು ಹೇಳಬೇಕೆಂದು ಆಕ್ಷೇಪ ಮಾಡಬಾರದು. ನೀರು ಪೃಥಿವಿಗೆ ದ್ವಾರಭೂತವಾಗಿ ಕಾರಣವಾಗಿದೆ ಎಂದೇ ಹೇಳುತ್ತೇವೆ. ಹಾಗಾದರೆ 'ತಾ ಅನ್ನಮಸೃಜಂತ' ಎಂಬ ಶ್ರುತಿಯಿಂದ ವಿರೋಧ ಬರುತ್ತದಲ್ಲವೇ? ಎನ್ನಬಾರದು. ಏಕೆಂದರೆ ಈ ಶ್ರುತಿಯಲ್ಲಿ ಅನ್ನ ಶಬ್ದದಿಂದ ಪೃಥಿವಿಯೇ ಪ್ರತಿಪಾದ್ಯವಾಗಿದೆ.

ಅನ್ನ ಶಬ್ದವು ಪೃಥಿವಿಯನ್ನು ಪ್ರತಿಪಾದನೆ ಮಾಡಲು ಹೇಗೆ ಸಾಧ್ಯ ? ಎಂಬ ಪ್ರಶ್ನೆಗೆ 'ಭೂತ' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

ವಿವರಣೆ - 'ತತ್ತೇಜೋऽಸೃಜತ ತದಪೋऽಸೃಜತ' ಇವೇ ಮೊದಲಾದ ವಾಕ್ಯಗಳು ಭೂತಪದಾರ್ಥವನ್ನೇ ಪ್ರತಿಪಾದನೆ ಮಾಡುತ್ತಿವೆ. ಈ ಪ್ರಕರಣವು ಪಂಚಭೂತಗಳನ್ನು ಪ್ರತಿಪಾದನೆ ಮಾಡಲು ಹೊರಟರುವುದರಿಂದ ಅನ್ನ ಶಬ್ದಿಂದಲೂ ಕೂಡ ಪೃಥಿವಿಯೇ ಪ್ರತಿಪಾದ್ಯವಾಗುತ್ತದೆ. ಇದು ಸೂತ್ರದಲ್ಲಿರುವ ಅಧಿಕಾರ ಶಬ್ದದ ವ್ಯಾಖ್ಯಾನವಾಗಿದೆ.

**तत्वप्रकाशिका – 'तत्तेजोऽसृजत' 'तदपोऽसृजत' 'तासां त्रिवृतं त्रिवृतमेकैकामकरोत्' इत्यादेरस्य प्रकरणस्य भूतविषयत्वादित्यर्थः ।**

'ತತ್ತೇಜೋऽಸೃಜತ' 'ಆ ಬ್ರಹ್ಮನು ಭೂತವಾದ ತೇಜಸ್ಸನ್ನು ವಾಯುವಿನ ಮೂಲಕ ಸೃಷ್ಟಿ ಮಾಡಿದನು' 'ತದಪೋऽಸೃಜತ' 'ಆ ಬ್ರಹ್ಮನು ತೇಜಸ್ಸಿನ ಮೂಲಕ ನೀರನ್ನು ಸೃಷ್ಟಿ ಮಾಡಿದನು' 'ತಾಸಾಂ ತ್ರಿವೃತಂ ತ್ರಿವೃತಮೇಕೈಕಾಮಕರೋತ್' 'ತೇಜಸ್ಸು, ನೀರು, ಪೃಥಿವೀ' ಎಂಬ ಮೂರುಭೂತಪದಾರ್ಥಗಳನ್ನು ಸೃಷ್ಟಿ ಮಾಡಿ ವಿಷ್ಣುವು ಅವುಗಳ ನಾಮ ಹಾಗೂ ರೂಪಗಳ ನಿರ್ಮಾಣಕ್ಕಾಗಿ ಒಂದೊಂದು ಭೂತಪದಾರ್ಥವನ್ನು ಪುನಃ ಮೂರು ಅಂಶಗಳುಳ್ಳದ್ದಾಗಿ ಮಾಡಿದನು. ಇವೇ ಮೊದಲಾದ ಶ್ರುತಿಗಳ ಆಧಾರದಿಂದ ಈ ಪ್ರಕರಣವು ಪೃಥಿವ್ಯಾದಿ ಪಂಚಭೂತಗಳನ್ನು ಪ್ರತಿಪಾದನೆ ಮಾಡುವುದಕ್ಕಾಗಿ ಹೊರಟಿದೆ ಎಂಬುದು ಭಾಷ್ಯದ ಅಭಿಪ್ರಾಯ.

**तत्वप्रकाशिका – नन्वन्नश्रुतौ जाग्रत्यां कथं प्रकरणमात्रेण निर्णय इत्यत आह – कार्ष्ण्येति ॥ 'यदग्ने रोहितं रूपं तत्तेजसो यच्छुक्लं तदपां यत्कृष्णं तदन्नस्य'**

**इत्यस्यां श्रुतावन्नस्य कृष्णरूपं प्रतीयते । तच्च प्राचुर्येण पृथिव्या एव लिङ्गम् । अतः प्रकरणलिङ्गाभ्यामुक्तश्रुतिबाध इति भावः । ननु कार्ष्ण्यस्य चान्नेऽपि सम्भवतः कथं पृथिवीलिङ्गत्वमित्यत आह – नेति ।।**

ಅನ್ನವನ್ನು ಪ್ರತಿಪಾದನೆ ಮಾಡುವ 'ತಾ ಅನ್ನಮಸೃಜಂತ' ಎಂಬ ಶ್ರುತಿಯು ಜಾಗೃತವಾಗಿರುವಾಗ ಕೇವಲ ಪ್ರಕರಣ ಪ್ರಮಾಣದಿಂದ ನಿರ್ಣಯವನ್ನು ಹೇಗೆ ಮಾಡುವಿರಿ? ಈ ಆಶಂಕೆಯ ಪರಿಹಾರಕ್ಕಾಗಿ 'ಕಾರ್ಷ್ಣ್ಯ' ಇತ್ಯಾದಿ ಭಾಷ್ಯವು ಹೊರಟಿದೆ.

'ಯದಗ್ನೇ ರೋಹಿತಂ ರೂಪಂ ತತ್ತೇಜಸೋ ಯಚ್ಛುಕ್ಲಂ ತದಪಾಂ ಯತ್ಕೃಷ್ಣಂ ತದನ್ನಸ್ಯ' ಎಂಬ ಶ್ರುತಿಯಲ್ಲಿ ಅನ್ನದಲ್ಲಿ ಹೇಳಿದ ಕೃಷ್ಣರೂಪವು ಪೃಥಿವಿಯಲ್ಲಿಯೇ ಹೆಚ್ಚಾಗಿ ಕಾಣಸುತ್ತಿದೆ. ಆದ್ದರಿಂದ ಇದನ್ನೇ ಅಸಾಧಾರಣ ಲಿಂಗವೆಂದು ತಿಳಿಯಬೇಕು. ಆದ್ದರಿಂದ ಪ್ರಕರಣ ಹಾಗೂ ಲಿಂಗಗಳಿಂದ ಬಾಧಿತವಾಗಿರುವ ಕಾರಣ ಅನ್ನ ಶ್ರುತಿಯು ಅಪ್ರಮಾಣವಾಗಿದೆ ಎಂಬುದು ಭಾಷ್ಯದ ಅಭಿಪ್ರಾಯ.

ವಿವರಣೆ - 'ಯದಗ್ನೇ ರೋಹಿತಂ' ಇತ್ಯಾದಿ ಶ್ರುತಿಯ ಅಭಿಪ್ರಾಯ ಹೀಗಿದೆ- 'ಅಗ್ನಿಯ ಯಾವ ಕೆಂಪು ಬಣ್ಣವಿದೆಯೋ ಅದು ತೇಜಸ್ಸಿನ ರೂಪದಿಂದ ಹುಟ್ಟಿರುತ್ತದೆ. ಅದರಂತೆ ತೇಜಸ್ಸಿನ ಅಭಿಮಾನಿಯಾದ ಶ್ರೀದೇವಿಯ ಅಧೀನವೂ ಕೂಡ ಆಗಿದೆ. ತೇಜಸ್ಸಿನಲ್ಲಿರುವ ಬಿಳಿರೂಪವು ನೀರಿನ ರೂಪದಿಂದ ಹುಟ್ಟುತ್ತದೆ. ಮತ್ತು ನೀರಿನ ಅಭಿಮಾನಿಯಾದ ಮುಖ್ಯಪ್ರಾಣನ ಅಧೀನವಾಗಿದೆ. ಬೆಂಕಿಯಲ್ಲಿ ಯಾವ ಕೃಷ್ಣವರ್ಣವಿದೆಯೋ ಅದು ಭೂಮಿಯ ರೂಪದಿಂದ ಹುಟ್ಟಿದೆ. ಹಾಗೂ ಪೃಥಿವಿಯ ಅಭಿಮಾನಿಯಾದ ಶಿವನ ಅಧೀನವೂ ಆಗಿದೆ ಎಂದು.

**तत्वप्रकाशिका – तथा विशेषः पृथिवीवत् कार्ष्ण्यप्राचुर्यम् । न केवलं प्रकरणलिङ्गाभ्यामन्नश्रुतेरवाचिकाया एव पृथिवीपरत्वमुच्यते अपि तु पृथिव्यामपि तस्या विद्यते वाचकत्वशक्तिः श्रौतप्रयोगादिति भावे नाह – आपश्चेति ।।**

ಅನ್ನದಲ್ಲಿ ಪೃಥಿವಿಯಲ್ಲಿರುವ ಅಸಾಧಾರಣಧರ್ಮವೆನಿಸಿದ ಕೃಷ್ಣರೂಪವು ಇರುವುದಿಲ್ಲ ಎಂಬುದು ಭಾಷ್ಯ ವಾಕ್ಯದ ಅರ್ಥ. ಕೇವಲ ಪ್ರಕರಣ ಹಾಗೂ ಲಿಂಗಗಳ ಬಲದಿಂದಷ್ಟೇ ಅವಾಚಕವಾದರೂ ಪೃಥಿವಿಪರವಾಗುತ್ತದೆಂದು ಹೇಳುತ್ತಿಲ್ಲ. ಪೃಥಿವಿಯಲ್ಲಿ ಅನ್ನಶಬ್ದಕ್ಕೆ ವಾಚಕತ್ವಶಕ್ತಿಯೂ ಕೂಡ ಇದೆ. ಹಾಗೇ ಶ್ರುತಿಗಳೇ ಪ್ರಯೋಗ ಮಾಡಿವೆ ಎಂಬ ಅಭಿಪ್ರಾಯದಿಂದ 'ಆಪಶ್ಚ' ಇತ್ಯಾದಿ ಭಾಷ್ಯವು ಹೊರಟಿದೆ.

ವಿವರಣೆ - ಅನ್ನ ಶಬ್ದದಿಂದ ಪೃಥಿವಿಯು ಕೇವಲ ಪ್ರಕರಣ ಹಾಗೂ ಲಿಂಗಗಳೆಂಬ ಕಾರಣದಿಂದಷ್ಟೆ ಪ್ರತಿಪಾದ್ಯವಲ್ಲ. ಶಬ್ದಾಂತರ ಕಾರಣ ಎಂಬುದರಿಂದಲೂ ಅನ್ನ ಶಬ್ದವು ಪೃಥಿವಿಗೆ ವಾಚಕವಾಗಿದೆ ಪೃಥಿವ್ಯಧಿಕರಣ (೨-೩-೬)

**तत्वप्रकाशिका – नात्रापां द्वारकारणत्वानिर्णयाच्छ्रुतिद्वयस्याप्रामाण्यं कल्प्यम् । अपां पृथिवीकारणत्वात् । न च 'ता अन्नमसृजन्त' इति श्रुतिविरोधः । यतस्तत्र पृथिव्यन्नश्शब्देनोच्यत इत्यर्थः । कुतोऽसावन्नशब्दः पृथिवीपर इत्यत आह – भूतेति ।।**

ನೀರು ಯಾವುದಕ್ಕೆ ದ್ವಾರಭೂತವಾದ ಕಾರಣವಾಗಿದೆ ಎಂಬುದು ನಿರ್ಣಯವೇ ಆಗಿಲ್ಲ. ಆದ್ದರಿಂದ ಎರಡೂ ಶ್ರುತಿಗಳಿಗೆ ಅಪ್ರಾಮಾಣ್ಯವನ್ನು ಹೇಳಬೇಕೆಂದು ಆಕ್ಷೇಪ ಮಾಡಬಾರದು. ನೀರು ಪೃಥಿವಿಗೆ ದ್ವಾರಭೂತವಾಗಿ ಕಾರಣವಾಗಿದೆ ಎಂದೇ ಹೇಳುತ್ತೇವೆ. ಹಾಗಾದರೆ 'ತಾ ಅನ್ನಮಸೃಜಂತ' ಎಂಬ ಶ್ರುತಿಯಿಂದ ವಿರೋಧ ಬರುತ್ತದಲ್ಲವೇ? ಎನ್ನಬಾರದು. ಏಕೆಂದರೆ ಈ ಶ್ರುತಿಯಲ್ಲಿ ಅನ್ನ ಶಬ್ದದಿಂದ ಪೃಥಿವಿಯೇ ಪ್ರತಿಪಾದ್ಯವಾಗಿದೆ.

ಅನ್ನ ಶಬ್ದವು ಪೃಥಿವಿಯನ್ನು ಪ್ರತಿಪಾದನೆ ಮಾಡಲು ಹೇಗೆ ಸಾಧ್ಯ ? ಎಂಬ ಪ್ರಶ್ನೆಗೆ 'ಭೂತ' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

ವಿವರಣೆ - 'ತತ್ತೇಜೋಽಸೃಜತ ತದಪೋಽಸೃಜತ' ಇವೇ ಮೊದಲಾದ ವಾಕ್ಯಗಳು ಭೂತಪದಾರ್ಥವನ್ನೇ ಪ್ರತಿಪಾದನೆ ಮಾಡುತ್ತಿವೆ. ಈ ಪ್ರಕರಣವು ಪಂಚಭೂತಗಳನ್ನು ಪ್ರತಿಪಾದನೆ ಮಾಡಲು ಹೊರಟಿರುವುದರಿಂದ ಅನ್ನ ಶಬ್ದದಿಂದಲೂ ಕೂಡ ಪೃಥಿವಿಯೇ ಪ್ರತಿಪಾದ್ಯವಾಗುತ್ತದೆ. ಇದು ಸೂತ್ರದಲ್ಲಿರುವ ಅಧಿಕಾರ ಶಬ್ದದ ವ್ಯಾಖ್ಯಾನವಾಗಿದೆ.

**तत्वप्रकाशिका – 'तत्तेजोऽसृजत' 'तदपोऽसृजत' 'तासां त्रिवृतं त्रिवृतमेकैकामकरोत्' इत्यादेरस्य प्रकरणस्य भूतविषयत्वादित्यर्थः ।**

'ತತ್ತೇಜೋಽಸೃಜತ' 'ಆ ಬ್ರಹ್ಮನು ಭೂತವಾದ ತೇಜಸ್ಸನ್ನು ವಾಯುವಿನ ಮೂಲಕ ಸೃಷ್ಟಿ ಮಾಡಿದನು' 'ತದಪೋಽಸೃಜತ' 'ಆ ಬ್ರಹ್ಮನು ತೇಜಸ್ಸಿನ ಮೂಲಕ ನೀರನ್ನು ಸೃಷ್ಟಿ ಮಾಡಿದನು' 'ತಾಸಾಂ ತ್ರಿವೃತಂ ತ್ರಿವೃತಮೇಕೈಕಾಮಕರೋತ್' 'ತೇಜಸ್ಸು, ನೀರು, ಪೃಥಿವೀ' ಎಂಬ ಮೂರುಭೂತಪದಾರ್ಥಗಳನ್ನು ಸೃಷ್ಟಿ ಮಾಡಿ ವಿಷ್ಣುವು ಅವುಗಳ ನಾಮ ಹಾಗೂ ರೂಪಗಳ ನಿರ್ಮಾಣಕ್ಕಾಗಿ ಒಂದೊಂದು ಭೂತಪದಾರ್ಥವನ್ನು ಪುನಃ ಮೂರು ಅಂಶಗಳುಳ್ಳದ್ದಾಗಿ ಮಾಡಿದನು. ಇವೇ ಮೊದಲಾದ ಶ್ರುತಿಗಳ ಆಧಾರದಿಂದ ಈ ಪ್ರಕರಣವು ಪೃಥಿವ್ಯಾದಿ ಪಂಚಭೂತಗಳನ್ನು ಪ್ರತಿಪಾದನೆ ಮಾಡುವುದಕ್ಕಾಗಿ ಹೊರಟಿದೆ ಎಂಬುದು ಭಾಷ್ಯದ ಅಭಿಪ್ರಾಯ.

**तत्वप्रकाशिका – नन्वन्नश्रुतौ जाग्रत्यां कथं प्रकरणमात्रेण निर्णय इत्यत आह – काष्र्ण्येति ।। 'यदग्ने रोहितं रूपं तत्तेजसो यच्छुक्लं तदपां यत्कृष्णं तदन्नस्य'**

**इत्यस्यां श्रुतावन्नस्य कृष्णरूपं प्रतीयते । तच्च प्राचुर्येण पृथिव्या एव लिङ्गम् । अतः प्रकरणलिङ्गाभ्यामुक्तश्रुतिबाध इति भावः । ननु कार्ष्ण्यस्य चान्नेऽपि सम्भवतः कथं पृथिवीलिङ्गत्वमित्यत आह – नेति ।।**

ಅನ್ನವನ್ನು ಪ್ರತಿಪಾದನೆ ಮಾಡುವ 'ತಾ ಅನ್ನಮಸೃಜಂತ' ಎಂಬ ಶ್ರುತಿಯು ಜಾಗೃತವಾಗಿರುವಾಗ ಕೇವಲ ಪ್ರಕರಣ ಪ್ರಮಾಣದಿಂದ ನಿರ್ಣಯವನ್ನು ಹೇಗೆ ಮಾಡುವಿರಿ? ಈ ಆಶಂಕೆಯ ಪರಿಹಾರಕ್ಕಾಗಿ 'ಕಾರ್ಷ್ಣ್ಯ' ಇತ್ಯಾದಿ ಭಾಷ್ಯವು ಹೊರಟಿದೆ.

'ಯದಗ್ನೇ ರೋಹಿತಂ ರೂಪಂ ತತ್ತೇಜಸೋ ಯಚ್ಛುಕ್ಲಂ ತದಪಾಂ ಯತ್ಕೃಷ್ಣಂ ತದನ್ನಸ್ಯ' ಎಂಬ ಶ್ರುತಿಯಲ್ಲಿ ಅನ್ನದಲ್ಲಿ ಹೇಳಿದ ಕೃಷ್ಣರೂಪವು ಪೃಥಿವಿಯಲ್ಲಿಯೇ ಹೆಚ್ಚಾಗಿ ಕಾಣಿಸುತ್ತಿದೆ. ಆದ್ದರಿಂದ ಇದನ್ನೇ ಅಸಾಧಾರಣ ಲಿಂಗವೆಂದು ತಿಳಿಯಬೇಕು. ಆದ್ದರಿಂದ ಪ್ರಕರಣ ಹಾಗೂ ಲಿಂಗಗಳಿಂದ ಬಾಧಿತವಾಗಿರುವ ಕಾರಣ ಅನ್ನ ಶ್ರುತಿಯು ಅಪ್ರಮಾಣವಾಗಿದೆ ಎಂಬುದು ಭಾಷ್ಯದ ಅಭಿಪ್ರಾಯ.

ವಿವರಣೆ - 'ಯದಗ್ನೇ ರೋಹಿತಂ' ಇತ್ಯಾದಿ ಶ್ರುತಿಯ ಅಭಿಪ್ರಾಯ ಹೀಗಿದೆ- 'ಅಗ್ನಿಯ ಯಾವ ಕೆಂಪು ಬಣ್ಣವಿದೆಯೋ ಅದು ತೇಜಸ್ಸಿನ ರೂಪದಿಂದ ಹುಟ್ಟಿರುತ್ತದೆ. ಅದರಂತೆ ತೇಜಸ್ಸಿನ ಅಭಿಮಾನಿಯಾದ ಶ್ರೀದೇವಿಯ ಅಧೀನವೂ ಕೂಡ ಆಗಿದೆ. ತೇಜಸ್ಸಿನಲ್ಲಿರುವ ಬಿಳಿರೂಪವು ನೀರಿನ ರೂಪದಿಂದ ಹುಟ್ಟುತ್ತದೆ. ಮತ್ತು ನೀರಿನ ಅಭಿಮಾನಿಯಾದ ಮುಖ್ಯಪ್ರಾಣನ ಅಧೀನವಾಗಿದೆ. ಬೆಂಕಿಯಲ್ಲಿ ಯಾವ ಕೃಷ್ಣವರ್ಣವಿದೆಯೋ ಅದು ಭೂಮಿಯ ರೂಪದಿಂದ ಹುಟ್ಟಿದೆ. ಹಾಗೂ ಪೃಥಿವಿಯ ಅಭಿಮಾನಿಯಾದ ಶಿವನ ಅಧೀನವೂ ಆಗಿದೆ ಎಂದು.

**तत्वप्रकाशिका – तथा विशेषः पृथिवीवत् कार्ष्ण्यप्राचुर्यम् । न केवलं प्रकरणलिङ्गाभ्यामन्नश्रुतेरवाचिकाया एव पृथिवीपरत्वमुच्यते अपि तु पृथिव्यामपि तस्या विद्यते वाचकत्वशक्तिः श्रौतप्रयोगादिति भावे नाह – आपश्चेति ।।**

ಅನ್ನದಲ್ಲಿ ಪೃಥಿವಿಯಲ್ಲಿರುವ ಅಸಾಧಾರಣಧರ್ಮವೆನಿಸಿದ ಕೃಷ್ಣರೂಪವು ಇರುವುದಿಲ್ಲ ಎಂಬುದು ಭಾಷ್ಯ ವಾಕ್ಯದ ಅರ್ಥ. ಕೇವಲ ಪ್ರಕರಣ ಹಾಗೂ ಲಿಂಗಗಳ ಬಲದಿಂದಷ್ಟೇ ಅವಾಚಕವಾದರೂ ಪೃಥಿವಿಪರವಾಗುತ್ತದೆಂದು ಹೇಳುತ್ತಿಲ್ಲ. ಪೃಥಿವಿಯಲ್ಲಿ ಅನ್ನಶಬ್ದಕ್ಕೆ ವಾಚಕತ್ವಶಕ್ತಿಯೂ ಕೂಡ ಇದೆ. ಹಾಗೇ ಶ್ರುತಿಗಳೇ ಪ್ರಯೋಗ ಮಾಡಿವೆ ಎಂಬ ಅಭಿಪ್ರಾಯದಿಂದ 'ಆಪಶ್ಚ' ಇತ್ಯಾದಿ ಭಾಷ್ಯವು ಹೊರಟಿದೆ.

ವಿವರಣೆ - ಅನ್ನ ಶಬ್ದದಿಂದ ಪೃಥಿವಿಯು ಕೇವಲ ಪ್ರಕರಣ ಹಾಗೂ ಲಿಂಗಗಳೆಂಬ ಕಾರಣದಿಂದಷ್ಟೆ ಪ್ರತಿಪಾದ್ಯವಲ್ಲ. ಶಬ್ದಾಂತರ ಕಾರಣ ಎಂಬುದರಿಂದಲೂ ಅನ್ನ ಶಬ್ದವು ಪೃಥಿವಿಗೆ ವಾಚಕವಾಗಿದೆ

ಪೃಥಿವ್ಯಧಿಕರಣ (೨-೩-೬)

ಎಂಬುದಾಗಿ ಹೇಳುತ್ತಿದ್ದಾರೆ. ಮತ್ತು 'ತಾ ಆಪೋ ಅನ್ನಮಸೃಜಂತ' ಎಂಬ ಶ್ರುತಿಯು ತನ್ನಲ್ಲಿರುವ ಅನ್ನ ಶಬ್ದವನ್ನು ತಾನೇ ವ್ಯಾಖ್ಯಾನ ಮಾಡಿದೆ. ಆದ್ದರಿಂದ ಪೃಥಿವಿಯು ಅನ್ನವೆಂದು ತಿಳಿಯಬೇಕು.

**तत्वप्रकाशिका – न च वृष्टिजत्वलिङ्गविरोधः । पार्थिवपदार्थानां वृष्ट्युत्पन्नार्थत्वेनोपपत्तेः। नाप्यन्नमशितमिति लिङ्गविरोधः । तेजोऽशितमिति-वत्पार्थिवार्थत्वोपपत्तेः । किमन्नश्रुतेरर्थान्तरकल्पनया श्रुतिद्वयाप्रामाण्यमेव किं नाभ्युपेयते इत्यत आह – आदीति ।।**

ಮಳೆಯಿಂದ ಹುಟ್ಟುವಿಕೆ ಎಂಬ ಲಿಂಗದಿಂದ ವಿರೋಧವು ಬರುವುದಿಲ್ಲ. ಏಕೆಂದರೆ ಪಾರ್ಥಿವ ಪದಾರ್ಥಗಳಿಗೆ ವೃಷ್ಟಿಜನ್ಯತ್ವ ಎಂಬ ಲಿಂಗವು ವಿರುದ್ಧವಾಗುವುದಿಲ್ಲ.

ಅಶಿತತ್ವ ಎಂಬ ಲಿಂಗದ ವಿರೋಧವೂ ಕೂಡ ಬರುವುದಿಲ್ಲ. ಏಕೆಂದರೆ 'ತೇಜೋಽಶಿತಂ' ಎಂಬ ಶ್ರುತಿಯಂತೆ 'ಅನ್ನಮಶಿತಂ' ಎಂಬ ಶ್ರುತಿಗೂ ಕೂಡ ಅರ್ಥವನ್ನು ಮಾಡಬೇಕು.

ಅನ್ನಶ್ರುತಿಗೆ ಪೃಥಿವೀ ಎಂಬ ಬೇರೆ ಅರ್ಥವನ್ನು ಏಕೆ ಕಲ್ಪನೆ ಮಾಡಬೇಕು? ಎರಡು ಶ್ರುತಿಗಳಿಗೆ ಅಪ್ರಾಮಾಣ್ಯವನ್ನು ಏಕೆ ಒಪ್ಪಬಾರದು? ಎಂಬ ಪ್ರಶ್ನೆಗೆ 'ಆದಿಶಬ್ದ' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

ವಿವರಣೆ - ಎಲ್ಲಾ ಬಗೆಯ ಸಸ್ಯ ಪದಾರ್ಥಗಳು ಮಳೆಯಿಂದಲೇ ಹುಟ್ಟುತ್ತವೆ. ಎಲ್ಲಿ ಮಳೆ ಹೆಚ್ಚು ಬರುತ್ತದೋ ಅಲ್ಲಿ ಬೆಳೆಯೂ ಹೆಚ್ಚು ಬರುತ್ತದೆ ಎಂಬುದಾಗಿ 'ಯತ್ರ ಕ್ವಚ ವರ್ಷತಿ ತದೇವ ಭೂಯಿಷ್ಠಮನ್ನಂ ಭವತಿ' ಎಂಬ ಶ್ರುತಿಯೂ ಕೂಡ ಹೇಳುತ್ತಿದೆ. ಆದ್ದರಿಂದ ಅನ್ನದಲ್ಲಿ ವೃಷ್ಟಿ ಜನ್ಯತ್ವ ಎಂಬ ಲಿಂಗವು ಅಸಾಧಾರಣವಾಗಿದೆ. ಇದು ಪೃಥಿವಿಯಲ್ಲೂ ಕೂಡ ಬರುತ್ತದೆ.

ಇದರಂತೆ 'ಅನ್ನಮಶಿತಂ ತ್ರೇಧಾ ವಿಧೀಯತೇ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಲಿಂಗವಿರೋಧವೂ ಕೂಡ ಇರುವುದಿಲ್ಲ. ಈ ಶ್ರುತಿಯಲ್ಲಿ 'ಅಶಿತತ್ವ' ಎಂಬ ಲಿಂಗವನ್ನು ಹೇಳಲಾಗಿದೆ. ಇದು ಪ್ರಸಿದ್ಧವಾದ ಅನ್ನದಲ್ಲಿ ಮಾತ್ರ ಬರುತ್ತದೆ ಭೂಮಿಯಲ್ಲಿ ಬರುವುದಿಲ್ಲ. ಆದ್ದರಿಂದ ಪೃಥಿವಿಯು ಅನ್ನಪದದಿಂದ ಹೇಗೆ ಪ್ರತಿಪಾದ್ಯವಾಗಲು ಸಾಧ್ಯ ? ಎಂಬುದು ಆಕ್ಷೇಪ.

ಇದೂ ಕೂಡ ತಪ್ಪು. ಏಕೆಂದರೆ 'ತೇಜೋಽಶಿತಂ' ಎಂಬ ಶ್ರುತಿಗೆ ಬಿಸಿಲು, ಶೆಕೆ ಮೊದಲಾದ ತೇಜಸ್ಸುಗಳಲ್ಲಿ ಅಶಿತತ್ವ ಇಲ್ಲದಿದ್ದರೂ ತೇಜಸ್ಸೇ ಪ್ರಧಾನವಾಗಿ ಉಳ್ಳ ತುಪ್ಪ ಮೊದಲಾದವುಗಳಲ್ಲಿ ಅಶಿತತ್ವವು ಇರುವುದರಿಂದ ಶ್ರುತ್ಯರ್ಥವು ಹೇಗೆ ಸಂಗತವಾಗುತ್ತದೋ ಅದರಂತೆ 'ಅನ್ನಮಶಿತಂ' ಎಂಬ ಶ್ರುತಿಗೂ ಕೂಡ ಪೃಥಿವಿಯಲ್ಲಿ ಬೆಳೆಯಲ್ಪಟ್ಟ ಧಾನ್ಯ ಮೊದಲಾದವುಗಳಲ್ಲಿ ಅಶಿತತ್ವವು ಇರುತ್ತದೆಂದು ತಿಳಿಯಬೇಕು. ಆದ್ದರಿಂದ 'ತೇಜೋಽಶಿತಂ' ಎಂಬ ಶ್ರುತಿಯನ್ನು ವ್ಯಾಖ್ಯಾನ ಮಾಡುವಂತೆ 'ಅನ್ನಮಶಿತಂ' ಎಂಬ ಶ್ರುತಿಯನ್ನು ವ್ಯಾಖ್ಯಾನ ಮಾಡಿದಾಗ ಪೃಥಿವಿಗೂ ಕೂಡ ಅಶಿತತ್ವವು ಯುಕ್ತವಾಗುತ್ತದೆ.

**तत्वप्रकाशिका – सूचितेति शेषः । अत्रायं प्रयोगः । वेदो नाप्रमाणं अप्रमाण्यकारणदोषशून्यत्वात्प्रत्यक्षवदिति । न च हेतोरसिद्धिः । अपौरुषेवाक्ये दोषासम्भवात् । आदिपदेनाप्तवाक्यानुसारित्वादिति ।**

'ಸೂಚಿತ' ಎಂಬ ಪದವನ್ನು ಶೇಷಪೂರಣ ಮಾಡಿಕೊಳ್ಳಬೇಕು. ಅನುಮಾನ ಪ್ರಯೋಗ ಹೀಗಿದೆ - 'ವೇದಃ ನಾಪ್ರಮಾಣಂ ಅಪ್ರಾಮಾಣ್ಯಕಾರಣದೋಷಶೂನ್ಯತ್ವಾತ್ ಪ್ರತ್ಯಕ್ಷವತ್' 'ಪ್ರತ್ಯಕ್ಷವು ಅಪ್ರಾಮಾಣ್ಯಕಾರಣವಾದ ದೋಷದಿಂದ ಶೂನ್ಯವಾಗಿದೆ. ಆದ್ದರಿಂದ ಅಪ್ರಮಾಣವಲ್ಲ. ಅದರಂತೆ ವೇದವು ಅಪ್ರಾಮಾಣ್ಯಕಾರಣವಾದ ದೋಷಶೂನ್ಯವಾದ್ದರಿಂದ ಅಪ್ರಮಾಣವಾಗುವುದಿಲ್ಲ' ಎಂದು. ಇಲ್ಲಿರುವ ಹೇತುವಿಗೆ ಅಸಿದ್ಧಿದೋಷವನ್ನು ಹೇಳಬಾರದು. ಏಕೆಂದರೆ ಅಪೌರುಷೇಯವಾಕ್ಯದಲ್ಲಿ ದೋಷ ಬರಲು ಸಾಧ್ಯವಿಲ್ಲ. ಆದಿ ಪದದಿಂದ 'ಆಪ್ತವಾಕ್ಯಾನುಸಾರಿತ್ವ' ಮೊದಲಾದ ಯುಕ್ತಿಗಳನ್ನು ವಿವಕ್ಷಿಸಬೇಕು.

ವಿವರಣೆ - 'ಶಬ್ದಾಂತರಾದಿಭ್ಯಃ' ಎಂಬ ಸೂತ್ರದಲ್ಲಿ ಆದಿ ಶಬ್ದದಿಂದ ಯುಕ್ತಿಯನ್ನು ಉಲ್ಲೇಖ ಮಾಡಿದ್ದಾರೆ. ಆ ಯುಕ್ತಿಯನ್ನು ಟೀಕೆಯಲ್ಲಿ 'ವೇದಃ' ಇತ್ಯಾದಿಯಾಗಿ ಉಲ್ಲೇಖಿಸಿದ್ದಾರೆ. ಭಾಷ್ಯದಲ್ಲೂ ಕೂಡ 'ನ ಅಪ್ರಾಮಾಣ್ಯಂ' ಇತ್ಯಾದಿಯಾಗಿ ಪ್ರಯೋಗಿಸಿದ್ದಾರೆ. ಇಲ್ಲಿರುವ ಆದಿ ಪದದಿಂದ 'ಆಪ್ತವಾಕ್ಯಾನುಸಾರಿತ್ವ' ಮೊದಲಾದ ಲಿಂಗಗಳನ್ನೂ ಕೂಡ ವಿವಕ್ಷಿಸಬೇಕು. 'ವೇದಃ ನ ಅಪ್ರಮಾಣಂ ಆಪ್ತವಾಕ್ಯಾನುಸಾರಿತ್ವಾತ್' ಇತ್ಯಾದಿಯಾಗಿ. ಆದ್ದರಿಂದ ವೇದದಲ್ಲಿ ಆಪಾತತಃ ವಿರೋಧ ಬಂದರೆ ಅಪ್ರಾಮಾಣ್ಯವನ್ನು ಹೇಳಬಾರದು ಎಂಬುದು ಭಾಷ್ಯದ ಅಭಿಪ್ರಾಯ.

**तत्वप्रकाशिका – एवं युक्तिबलाद्वेदप्रामाण्यसिद्धौ विरोधावभासेऽन्यार्थतैव कल्प्या नाप्रामाण्यमिति भावः । अत्रैव स्मृतिमाह – कौर्मे चेति ।। यदुक्तं प्राचुर्येण कृष्णा पृथिवीति तत्र प्रमाणमाह – रक्त इति ।।**

ಹೀಗೆ ಯುಕ್ತಿಯ ಬಲದಿಂದ ವೇದಕ್ಕೆ ಪ್ರಾಮಾಣ್ಯವು ಸಿದ್ಧವಾದ ಮೇಲೆ ಮೇಲ್ನೋಟಕ್ಕೆ ವಿರೋಧ ಕಂಡುಬಂದರೆ ವೇದಕ್ಕೆ ಬೇರೆ ಅರ್ಥವನ್ನೇ ಕಲ್ಪನೆ ಮಾಡಬೇಕು. ವೇದಕ್ಕೆ ಅಪ್ರಾಮಾಣ್ಯವನ್ನು ಕಲ್ಪನೆ ಮಾಡಬಾರದು ಎಂಬುದು ಭಾಷ್ಯದ ಅಭಿಪ್ರಾಯ.

ಇದೇ ವಿಷಯದಲ್ಲಿ ಕೂರ್ಮಸ್ಮೃತಿಯನ್ನು ಆಧಾರವಾಗಿ ನೀಡುತ್ತಿದ್ದಾರೆ 'ಕೌರ್ಮೇ' ಇತ್ಯಾದಿಯಾಗಿ.

ಪೃಥಿವಿಯಲ್ಲಿ ಕಪ್ಪುಬಣ್ಣವೇ ಪ್ರಚುರವಾಗಿರುತ್ತದೆಂದು ಹಿಂದೆ ಹೇಳಿದ್ದಾಯಿತು. ಇದಕ್ಕೆ ಪ್ರಮಾಣವಾಗಿ 'ರಕ್ತಃ' ಇತ್ಯಾದಿಯಾಗಿ ಉಲ್ಲೇಖ ಮಾಡುತ್ತಿದ್ದಾರೆ.

ವಿವರಣೆ - ಶ್ರುತಿವಾಕ್ಯಗಳಿಗೆ ಆಪಾತತಃ ವಿರೋಧವು ಪ್ರಾಪ್ತವಾದಾಗ ಒಂದನ್ನು ಅಪ್ರಮಾಣವೆಂದು ಹೇಳದೇ ವಿರೋಧ ಬಾರದಂತೆ ಅರ್ಥವನ್ನು ಕಲ್ಪನೆ ಮಾಡಬೇಕೆಂಬುದು ಸಿದ್ಧಾಂತದ ಅಭಿಪ್ರಾಯ.

ಪೃಥಿವಿಯಲ್ಲಿ ಬೇರೆ ಬೇರೆ ರೂಪಗಳಿವೆ ಎಂದು ಭಾಷ್ಯದಲ್ಲಿ ಉಲ್ಲೇಖಿಸಿದ್ದಾರೆ. ಆದರೆ ಕಪ್ಪು ಬಣ್ಣವು ಪೃಥಿವಿಯ ಸ್ವಾಭಾವಿಕಗುಣವೆಂದು ತಿಳಿಯಬೇಕು.

ಪೃಥಿವ್ಯಧಿಕರಣ (೨-೩-೬)

**तत्वप्रकाशिका – एवमेवेत्युक्तमेव दर्शयति – विष्ण्वति ।। एवं श्रुत्यविरोधेनापां पृथिवीकारणत्वसिद्धेर्युक्तः श्रुतिसमन्वयो हराविति सिद्धम् ।।१२।।**

'ಏವಮೇವ' ಎಂದು ಹೇಳಿದ್ದನ್ನೇ 'ವಿಷ್ಣು' ಇತ್ಯಾದಿಯಾಗಿ ಸ್ಪಷ್ಟಪಡಿಸುತ್ತಿದ್ದಾರೆ. ಶ್ರುತಿಯ ವಿರೋಧ ಇಲ್ಲದಕಾರಣ ನೀರಿಗೆ ಪೃಥಿವೀಕಾರಣತ್ವವು ಸಿದ್ಧವಾಗುತ್ತದೆ. ಆದ್ದರಿಂದ ಶ್ರುತಿಸಮನ್ವಯವು ಶ್ರೀಹರಿಯಲ್ಲಿ ಸಿದ್ಧವಾಯಿತು.

**ವಿವರಣೆ** - 'ವಿಷ್ಣುವೀರ್ಯಾಭಿಯೋಗಾಚ್ಚ' ಎಂಬ ಪ್ರಮಾಣದಂತೆ 'ಏವಮೇವ ವರ್ಣಾಂತರ್ಗತಿರ್ಭವೇತ್' ಬೇರೆ ಬಣ್ಣವೂ ಕೂಡ ಪೃಥಿವಿಯಲ್ಲಿರುತ್ತದೆ ಎಂದರ್ಥ. ಹೀಗೆ ಪೃಥಿವಿಯನ್ನು ಕುರಿತು ನೀರು ಅವಾಂತರಕಾರಣವಾಗಿದೆ ಎಂದು ಹೇಳುವ ಶ್ರುತಿಗೆ ಯಾವುದೇ ವಿರೋಧವಿಲ್ಲ. ಆದ್ದರಿಂದ ಭಗವಂತನು ನೀರಿನ ಮೂಲಕ ಪೃಥಿವಿಯನ್ನು ಹುಟ್ಟಿಸುತ್ತಾನೆಂಬ ಪ್ರಮೇಯವು ಸಿದ್ಧವಾಯಿತು.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಪೃಥಿವ್ಯಧಿಕರಣ ಮುಗಿಯಿತು

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## ಪೃಥಿವ್ಯಧಿಕರಣ

**पृथिव्यधिकाररूपशब्दान्तरादिभ्यः ।। अधिकरणसङ्गतिमाह – एवं सर्वस्येति ।।**

ಅಧಿಕರಣ ಸಂಗತಿಯನ್ನು ಹೇಳುತ್ತಿದ್ದಾರೆ ಟೀಕಾಕಾರರು 'ಏವಂ ಸರ್ವಸ್ಯ' ಎಂಬ ವಾಕ್ಯದಿಂದ.

**अत्र श्रुतिसमन्वयेनोक्तस्य ब्रह्मणस्सर्वस्रष्टृत्वस्य सिद्ध्यै ''ता आप ऐक्षन्त ता अन्नमसृजन्त अद्भ्यः पृथिवी'' इति श्रुतिद्वयं परस्परविरुद्धं सदप्रमाणमुत नेति चिन्ता । (अत्र श्रुतिसमन्वयेनोक्तं ब्रह्मणः सर्वस्रष्टृत्वादिकं किमयुक्तमुत युक्तमिति चिन्ता ।**

ಭಗವಂತನಲ್ಲಿ ಸರ್ವ ಶ್ರುತಿ ಸಮನ್ವಯ ಮಾಡುವುದರ ಮೂಲಕ ಸರ್ವಜಗತ್‌ಸೃಷ್ಟಿಕರ್ತೃತ್ವವನ್ನು ಹೇಳಲಾಗಿತ್ತು. ಅದರ ಸಿದ್ಧಿಗಾಗಿ, 'ತಾ ಆಪ ಐಕ್ಷಂತ ತಾ ಅನ್ನಮಸೃಜಂತ' ಎಂಬುದು ಹಾಗೂ 'ಅದ್ಭ್ಯಃ ಪೃಥಿವೀ' ಎಂಬ ಎರಡು ಶ್ರುತಿಗಳು ಪರಸ್ಪರ ವಿರುದ್ಧವಾಗಿ ಅಪ್ರಮಾಣವಾಗುವವೋ ಅಥವಾ ಪ್ರಮಾಣಗಳೇ ಆಗುವುವೋ ? ಎಂಬುದು ಸಂಶಯ.

ವಿವರಣೆ - 'ತಾ ಆಪ ಐಕ್ಷಂತ ತಾ ಅನ್ನಮಸೃಜಂತ' ಎಂಬ ಶ್ರುತಿಯು ಅಪ್ (ನೀರು)ನಿಂದ ಅನ್ನ ಸೃಷ್ಟಿಯಾಯಿತು ಎಂದು ಹೇಳುತ್ತಿದೆ. 'ಅದ್ಭ್ಯಃ ಪೃಥಿವೀ' ಎಂಬ ಶ್ರುತಿಯು ಅಪ್‌ನಿಂದ ಪೃಥಿವೀ ಸೃಷ್ಟಿಯಾಯಿತು ಎಂದು ಹೇಳುತ್ತಿದೆ. ಹೀಗೆ ಪರಸ್ಪರ ವಿರೋಧ. ಎರಡೂ ಶ್ರುತಿಗಳು ಸಮಬಲಗಳಾದ್ದರಿಂದ ಪರಸ್ಪರ ಬಾಧ್ಯಬಾಧಕಭಾವವಿಲ್ಲ. 'ಶಶವಿಷಾಣವು ಶುಕ್ಲ' 'ಶಶವಿಷಾಣವು ಕೃಷ್ಣ' ಎಂಬ ಎರಡು ವಾಕ್ಯಗಳಂತೆ ಎರಡೂ ಶ್ರುತಿಗಳು ಅಪ್ರಮಾಣವಾಗಲಿ ಎಂದು ಅಭಿಪ್ರಾಯ.

**तदर्थं ''ता अन्नमसृजन्त अद्भ्यः पृथिवी'' इति श्रुतिद्वयं किं परस्परविरुद्धमुत नेति) तदर्थं ''ता अन्नम्'' इति श्रुतावन्नशब्दः किं प्रसिद्धान्नपरः किं वा प्रकरणादिना पृथिवीपर इति ।**

ಮೇಲಿನ ಸಂಶಯ ಪರಿಹಾರಕ್ಕಾಗಿ 'ತಾ ಅನ್ನಮಸೃಜಂತ' ಎಂಬ ಶ್ರುತಿಯಲ್ಲಿರುವ 'ಅನ್ನ' ಶಬ್ದಕ್ಕೆ ಪ್ರಸಿದ್ಧವಾದ 'ಅನ್ನ' ಎಂಬರ್ಥ ಮಾಡಬೇಕೋ ಅಥವಾ 'ಪೃಥಿವೀ' ಎಂಬ ಅರ್ಥ ಮಾಡಬೇಕೋ? ಎಂಬುದು ಸಂಶಯ. ಪೃಥಿವೀ ಎಂಬ ಅರ್ಥವು ಪ್ರಕರಣಾದಿಗಳಿಂದ ಸಿದ್ಧವಾಗುವುದು. ಆದಿಪದದಿಂದ ಕೃಷ್ಣರೂಪ, ಶಬ್ದಾಂತರವನ್ನು ಇಟ್ಟುಕೊಳ್ಳಬೇಕು.

ವಿವರಣೆ - ಇಲ್ಲ 'ತಾ ಅನ್ನಮಸೃಜಂತ' ಎಂಬ ಶ್ರುತಿಯಲ್ಲಿರುವ 'ಅನ್ನ' ಶಬ್ದಕ್ಕೆ ಪ್ರಸಿದ್ಧ ಅನ್ನ ಎಂಬರ್ಥ ಇಟ್ಟುಕೊಂಡರೆ ಎರಡೂ ಶ್ರುತಿಗಳು ಅಪ್ರಮಾಣ ಎಂದಾಗಿ ಅದರ ದೃಷ್ಟಾಂತದಿಂದ ಸಕಲ ಶ್ರುತಿಗಳೂ ಅಪ್ರಮಾಣವೆಂದಾಗಿ ಸರ್ವಶ್ರುತಿ ಸಮನ್ವಯ ಕೊಡದೇ ಹೋಗಿ ಭಗವಂತನಲ್ಲಿ ಸರ್ವಜಗತ್ ಸೃಷ್ಟಿಕರ್ತೃತ್ವ ಸಿದ್ಧಿಸುವುದಿಲ್ಲ ಎಂಬುದು ಪೂರ್ವಪಕ್ಷ ರೀತಿಯಿಂದ ಫಲಫಲಿಭಾವ.

'ತಾ ಅನ್ನಮಸೃಜಂತ' ಎಂಬ ಶ್ರುತಿಗೆ ಪೃಥಿವೀ ಎಂಬರ್ಥ ಇಟ್ಟುಕೊಂಡರೆ ಆಗ ಎರಡೂ ಶ್ರುತಿಗಳಿಗೆ ವಿರೋಧವಿಲ್ಲವಾದುದರಿಂದ ಪ್ರಮಾಣವೆಂಬುದಾಗಿ ಸಕಲ ಶ್ರುತಿಗಳೂ ಪ್ರಮಾಣವೆಂದೆನಿಸಿ. ತನ್ಮೂಲಕ ಸಕಲಜಗಜ್ಜನ್ಮಾದಿಕಾರಣತ್ವ ಭಗವಂತನಿಗೆ ಸಿದ್ಧಿಸುವುದು. ಇದು ಸಿದ್ಧಾಂತರೀತ್ಯಾ ಫಲಫಲಿಭಾವ.

**अत्र ''ता अन्नमसृजन्त अद्भ्यः पृथिवी'' इति श्रुत्योरन्यतराप्रामाण्यमात्रेण जन्मादिसूत्राक्षेपायोगात्, द्वयोः समबलत्वेनागृह्यमाणविशेषत्वाच्चोभयाप्रामाण्येन पूर्वपक्षितम् ।**

ಪ್ರಶ್ನೆ - 'ತಾ ಅನ್ನಮಸೃಜಂತ' 'ಅದ್ಭ್ಯಃ ಪೃಥಿವೀ' ಈ ಎರಡೂ ಶ್ರುತಿಗಳಿಗೆ ಅಪ್ರಾಮಾಣ್ಯವನ್ನು ಹೇಳುವುದು ಸರಿಯಲ್ಲ. ಯಾವುದಾದರೂ ಒಂದನ್ನು ಪ್ರಮಾಣ ಎಂದೊಪ್ಪಿ ಇನ್ನೊಂದನ್ನು ಅಪ್ರಮಾಣ ಎಂದು ಹೇಳಬಹುದಲ್ಲವೇ ?

ಉತ್ತರ - ನಿಜ, ಅಷ್ಟರಿಂದಲೇ ಜನ್ಮಾದಿಸೂತ್ರದ ಮೇಲೆ ಯಾವ ಆಕ್ಷೇಪವೂ ಮಾಡಿದಂತಾಗುವುದಿಲ್ಲ. ಜನ್ಮಾದಿಸೂತ್ರದಲ್ಲಿ ಭಗವಂತನಿಗೆ ಸಕಲಜಗಜ್ಜನ್ಮಾದಿಕಾರಣತ್ವವನ್ನು ಹೇಳಿದ್ದಾರೆ. ಪ್ರಕೃತ ಉದಾ: 'ತಾ ಅನ್ನಮಸೃಜಂತ' ಎಂಬ ಶ್ರುತಿಯನ್ನು ಪ್ರಮಾಣವೆಂದೊಪ್ಪಿದರೆ ಅದರಿಂದ ಜನ್ಮಾದಿಕಾರಣತ್ವಕ್ಕೇನೂ ಹಾನಿಯಿಲ್ಲ. ಅನ್ನವನ್ನೋ, ಪೃಥಿವಿಯನ್ನೋ ಅನಾದಿ ಎಂದು ಹೇಳದಿರುವುದರಿಂದ.

ವಾಸ್ತವವಾಗಿ ಈ ಎರಡೂ ಶ್ರುತಿಗಳು ಸಮಬಲಗಳಾದ್ದರಿಂದ ಯಾವ ಶ್ರುತಿಗೂ ಯಾವುದೇ ವಿಶೇಷ ತಿಳಿಯದಿರುವುದರಿಂದ ಒಂದು ಇನ್ನೊಂದನ್ನು ಬಾಧಿಸುತ್ತದೆ ಎಂದು ಹೇಳಲು ಸಾಧ್ಯವಿಲ್ಲ. ಹಾಗಾಗಿ ಎರಡೂ ಅಪ್ರಮಾಣ ಎಂದೇ ಹೇಳಬೇಕು. ಆಗ ಇದರ ದೃಷ್ಟಾಂತದಿಂದ ಸಕಲಶ್ರುತಿಗಳೂ ಅಪ್ರಮಾಣವಾಗಿ ಶ್ರುತಿಸಿದ್ಧವಾದ ಜನ್ಮಾದಿಕಾರಣತ್ವ ಸರಿಯಲ್ಲ ಎಂದು ಆಕ್ಷೇಪಿಸಬಹುದು.

**वियदाद्यधिकरणेषु तु वियदाद्युत्पत्तिश्रुतिमात्राप्रामाण्येन जन्मादिसूत्राक्षेपसम्भवादनुत्पत्तिश्रुतेः प्रबलत्वेन गृह्यमाणविशेषत्वाच्चैकाप्रामाण्येन पूर्वपक्षितम् ।**

ಪೃಥಿವ್ಯಧಿಕರಣ (೨-೩-೬)

ಪ್ರಶ್ನೆ - ಹಾಗಾದರೆ ವಿಯದಧಿಕರಣದಲ್ಲಿಯೂ ಹೀಗೆ ಪೂರ್ವಪಕ್ಷ ಮಾಡಬಹುದಿತ್ತಲ್ಲವೇ?

ಉತ್ತರ - ಇಲ್ಲ. ವಿಯದಧಿಕರಣವೇ ಮೊದಲಾದ ಕಡೆ ಒಂದು ಶ್ರುತಿಗೆ ಅಪ್ರಾಮಾಣ್ಯವನ್ನು ಹೇಳಿ ಜನ್ಮಾದಿಸೂತ್ರದ ಮೇಲೆ ಆಕ್ಷೇಪ ಮಾಡಬಹುದು. ಹೇಗೆಂದರೆ ವಿಯತ್ (ಆಕಾಶ)ಗೆ ಉತ್ಪತ್ತಿ ಹಾಗೂ ಅನುತ್ಪತ್ತಿಯನ್ನು ಹೇಳುವ ಎರಡು ಶ್ರುತಿಗಳಿವೆ. ಅವುಗಳಲ್ಲಿ ಉತ್ಪತ್ತಿಶ್ರುತಿಯು ಅಪ್ರಮಾಣ ಎಂದರೆ ಆಗ ಆಕಾಶವು ಅನಾದಿ (ಜನ್ಮರಹಿತ) ಎಂದಾಯಿತು. ಆಗ ಭಗವಂತನು ಸಕಲಜಗತ್ತಿಗೂ ಜನ್ಮಪ್ರದ ಎಂಬುದು ಸರಿಯಲ್ಲ ಎಂದಾಗುತ್ತದೆ.

ಮತ್ತೇನೆಂದರೆ ಆಕಾಶಕ್ಕೆ ಉತ್ಪತ್ತಿ ಹಾಗೂ ಅನುತ್ಪತ್ತಿಯನ್ನು ಹೇಳುವ ಶ್ರುತಿಗಳಲ್ಲಿ ಅನುತ್ಪತ್ತಿಶ್ರುತಿಯು ಗೃಹ್ಯಮಾಣವಿಶೇಷವಾದ್ದರಿಂದ ಪ್ರಬಲವಾಗುತ್ತದೆ. ಹಾಗಾಗಿ ಉತ್ಪತ್ತಿ ಶ್ರುತಿಗೆ ಬಾಧವನ್ನು ಹೇಳಬಹುದು. ಪ್ರಕೃತದಲ್ಲಿ ಇದು ಸಾಧ್ಯವಿಲ್ಲ.

**अत एव तत्र न्यायविवरणेऽनुत्पत्तिश्रुतेः प्राबल्यायानुभवाद्यनुगृहीतत्वमुक्तम्।**

ಒಂದನ್ನು ಅಪ್ರಮಾಣ ಎಂದು ಹೇಳಿ ಪೂರ್ವಪಕ್ಷ ಮಾಡಲು ಬರುವುದರಿಂದಲೇ ವಿಯದಧಿಕರಣದ ನ್ಯಾಯವಿವರಣದಲ್ಲಿ ಅನುತ್ಪತ್ತಿಶ್ರುತಿಯು ಪ್ರಬಲ ಎಂದು ಹೇಳುವುದಕ್ಕಾಗಿ ಅನುಭವಾನುಗ್ರಹವನ್ನು ಹೇಳಿದ್ದಾರೆ. ಆಕಾಶವು ಹುಟ್ಟುವುದಿಲ್ಲ ಎಂಬುದಕ್ಕೆ ಅನುಭವವೇ ಪ್ರಮಾಣ. ಯಾರೂ ಆಕಾಶ ಹುಟ್ಟಿದ್ದನ್ನು ಕಂಡಿಲ್ಲ ಎಂದರ್ಥ.

**न चेहापि न्यायविवरणेऽन्नश्रुतेः प्राबल्याय बहुवाक्यानुसारितोक्तेति शङ्क्यम् ।**

ಈ ಪೃಥಿವ್ಯಧಿಕರಣದ ನ್ಯಾಯವಿವರಣದಲ್ಲಿ ಅನ್ನಶ್ರುತಿಗೆ ಬಹುವಾಕ್ಯಾನುಸಾರಿತಾ, ಅಂದರೆ ಅನ್ನಶಬ್ದಕ್ಕೆ ಪ್ರಸಿದ್ಧ ಅನ್ನ ಎಂದರ್ಥ ಹೇಳಿದರೆ ಆಗ ಅನೇಕ ವಾಕ್ಯಗಳ ಅನುಸರಣೆ ಎಂಬ ಗುಣವನ್ನು ಹೇಳಿದ್ದಾರೆ. ಇದು ಅನ್ನ ಶ್ರುತಿಯು ಪ್ರಬಲ ಎಂದು ಹೇಳುವ ಉದ್ದೇಶದಿಂದಲೇ ಹೇಳಿದ್ದು ಎಂಬುದಾಗಿ ಶಂಕಿಸಬಾರದು.

**यतोऽन्नश्रुतेः प्रकरणानुगृहीतपृथिवीश्रुतिविरोधोपयुक्तसमबलत्वायैव बहुवाक्यानुसारितोक्ता । नतु प्राबल्याय ।**

ಏಕೆಂದರೆ ಈ ನ್ಯಾಯವಿವರಣದಲ್ಲಿ ಅನ್ನಶ್ರುತಿಗೆ ಬಹುವಾಕ್ಯಾನುಸಾರಿತಾ ಎಂಬ ಗುಣವನ್ನು ಹೇಳಿರುವುದು. ಅದು ಪೃಥಿವೀ ಶ್ರುತಿಯೊಂದಿಗೆ ಸಮಬಲವಾಗಲಿ ಎಂಬ ಉದ್ದೇಶದಿಂದ. ಏಕೆಂದರೆ ಪೃಥಿವೀಶ್ರುತಿಯು ಪ್ರಕರಣ (ಭೂತಪ್ರಕರಣ)ದ ಸಹಾಯ ಹೊಂದಿದೆ. ಹಾಗಾಗಿ ಅದು ಪ್ರಬಲವಾದ್ದರಿಂದ ಬಿಡಬಹುದು. ಈಗ ಅನ್ನಶ್ರುತಿಗೆ ಬಹುವಾಕ್ಯಾನುಸಾರಿತಾ ಎಂಬ ಗುಣ ಹೇಳಿದ್ದರಿಂದ ಎರಡೂ ಸಮಬಲಗಳಾದವು.

**अत एवोक्तं टीकायां ''न चान्नशब्दस्य पृथिव्यर्थत्वेनाविरोधः । प्रसिद्धान्नपरत्वस्वीकारे बहुवाक्यानुसारित्वगुणलाभात्'' इति ।**

ಆದ್ದರಿಂದಲೇ ಟೀಕಾದಲ್ಲಿಯೂ, ಅನ್ನ ಶಬ್ದಕ್ಕೆ ಪೃಥಿವೀ ಎಂಬ ಅರ್ಥ ಹೇಳಿ ವಿರೋಧ ಪರಿಹಾರ ಮಾಡಬಹುದಲ್ಲವೇ ? ಎಂದು ಪ್ರಶ್ನಿಸಿಕೊಂಡು, ಅಲ್ಲಿ, ಪ್ರಸಿದ್ಧ 'ಅನ್ನ' ಎಂದು ಇಟ್ಟುಕೊಂಡರೆ ಬಹುವಾಕ್ಯಾನುಸಾರಿತಾ ಎಂಬ ಗುಣಪ್ರಾಪ್ತಿಯಾಗುವುದರಿಂದ ಪೃಥಿವೀ ಎಂಬ ಅರ್ಥ ಹೇಳಲು ಸಾಧ್ಯವಿಲ್ಲ ಎಂದಿದ್ದಾರೆ.

**''अद्भ्यो वा अन्नम्'' इत्यादि न्यायविवरणोदाहृतबहुवाक्यानां प्रसिद्धार्थपरत्वरूपगुणलाभादित्यर्थः । (हेत्वन्तरमाह ।। तस्मादिति ।।)**

'ಬಹುವಾಕ್ಯಾನುಸಾರಿತಾ' ಎಂದರೆ 'ಅದ್ಭ್ಯೋ ವಾ ಅನ್ನಮ್' ಇದೇ ಮೊದಲಾದ ಅನೇಕ ವಾಕ್ಯಗಳಲ್ಲಿ ಅನ್ನಶಬ್ದಕ್ಕೆ ಪ್ರಸಿದ್ಧ ಅನ್ನ ಎಂಬ ಅರ್ಥವನ್ನೇ ಇಟ್ಟುಕೊಂಡಿದ್ದಾರೆ. ಇಲ್ಲಿಯೂ ಹಾಗೇ ಮಾಡಿದರೆ ಆ ಎಲ್ಲಾ ವಾಕ್ಯಗಳ ಅನುಸರಣೆ ಮಾಡುವಿಕೆ ಎಂಬ ಗುಣಪ್ರಾಪ್ತವಾಗುತ್ತದೆ ಎಂದರ್ಥ.

**न केवलं प्रसिद्धान्नपरत्वे बहुवाक्यानुसारिता । किन्तु लिङ्गद्वयमप्यस्तीत्याह – तस्मादित्यादिना ।।**

'ಅನ್ನ' ಶಬ್ದಕ್ಕೆ ಪ್ರಸಿದ್ಧಾನ್ನ ಎಂಬ ಅರ್ಥ ಇಟ್ಟುಕೊಂಡರೆ ಹಿಂದೆ ಹೇಳಿದಂತೆ ಬಹುವಾಕ್ಯಾನುಸಾರಿತಾ ಎಂಬ ಗುಣ ಬರುತ್ತದೆ. ಅಷ್ಟೇ ಅಲ್ಲ ಹಾಗೇ ಅರ್ಥ ಹೇಳುವುದಕ್ಕೆ ಎರಡು ಲಿಂಗ(ಗಮಕ)ಗಳೂ ಇವೆ ಎಂದು ಹೇಳುತ್ತಿದ್ದಾರೆ 'ತಸ್ಮಾತ್' ಎಂಬ ಗ್ರಂಥದಿಂದ.

**उक्तश्रुतिविरोधादिति ।। ''ओषधीभ्योन्नम्'' इति श्रुतिविरोधादित्यर्थः ।।**

'ಉಕ್ತಶ್ರುತಿವಿರೋಧಾತ್' ಎಂಬಲ್ಲಿ ಉಕ್ತಶ್ರುತಿ ಅಂದರೆ ಉದಾಹರಿಸಿದ ಶ್ರುತಿ ಯಾವುದು ಎಂದರೆ 'ಓಷಧೀಭ್ಯೋಽನ್ನಮ್' ಎಂಬ ಶ್ರುತಿ. ಇದರ ವಿರೋಧ ಎಂದರ್ಥ.

**भूतविषयत्वादिति ।। अनेन प्रसिद्धान्नविषयतैव निरस्यते । नतु भूताभिमानिदेवताविषयतापीति ज्ञेयम् ।।**

'ತಾ ಅನ್ನಮಸೃಜಂತ' ಎಂಬ ಶ್ರುತಿಯು ಭೂತಪ್ರಕರಣದಲ್ಲಿ ಬಂದಿದೆ. ಹಾಗಾಗಿ ಇಲ್ಲಿರುವ 'ಅನ್ನ' ಶಬ್ದಕ್ಕೂ ಪಂಚಭೂತಗಳಲ್ಲಿ ಒಂದಾದ ಪೃಥಿವೀ ಎಂದೇ ಅರ್ಥ. ಹೀಗೆ ಹೇಳುವುದರಿಂದ 'ಅನ್ನ' ಶಬ್ದಕ್ಕೆ ಪ್ರಸಿದ್ಧಾನ್ನ ಎಂಬ ಅರ್ಥ ಹೇಳಬಾರದು ಎಂದಷ್ಟೇ ಹೇಳಿದಂತಾಗುತ್ತದೆ. ಭೂತಾಭಿಮಾನಿದೇವತಾವಿಷಯ ಅಲ್ಲ ಎಂದಲ್ಲ. (ಅಂದರೆ ಇಲ್ಲಿರುವ 'ಅನ್ನ' ಶಬ್ದಕ್ಕೆ ಪೃಥಿವೀ ಮತ್ತು ಅದಕ್ಕೆ ಅಭಿಮಾನಿದೇವತೆ ಈ ಎರಡೂ ಅರ್ಥ ಇಟ್ಟುಕೊಳ್ಳಬೇಕೆಂದು ಅರ್ಥ.)

**तेजोशितमितिवदिति ।। तत्र यथा तेजश्शब्दस्तैजसपरस्तथा पृथिवीवाचकोऽन्नशब्दः पार्थिवपर इत्यर्थः ।**

ಪ್ರಶ್ನೆ - 'ಅನ್ನ' ಶಬ್ದಕ್ಕೆ ಪೃಥಿವೀ ಎಂಬರ್ಥ ಮಾಡಿದರೆ ಆಗ 'ಅನ್ನಮಶಿತಂ ತ್ರೇಧಾ ಭವತಿ' ಎಂಬ ಶ್ರುತಿಗೆ ಏನು ಗತಿ ? ಪೃಥಿವಿಯನ್ನು ತಿನ್ನಲು ಹೇಗೆ ಸಾಧ್ಯ ?

ಉತ್ತರ - ಹಿಂದೆ 'ತೇಜೋಽತಿತಂ' ಎಂಬಲ್ಲಿರುವ ತೇಜಸ್ ಶಬ್ದಕ್ಕೆ ಹೇಗೆ ತೈಜಸ ಪದಾರ್ಥ ಎಂದು ಅರ್ಥ ಹೇಳಿದ್ದೇವೋ ಹಾಗೆ ಇಲ್ಲಿರುವ ಪೃಥಿವೀ ಶಬ್ದಕ್ಕೂ ಪಾರ್ಥಿವಪದಾರ್ಥ ಎಂದು ಅರ್ಥ. ಆಗ ಯಾವುದೇ ವಿರೋಧವಿಲ್ಲ.

**अत्र सूत्रे परव्याख्या न विरुद्धा ॥**

**॥ इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् पृथिव्यधिकरणं सम्पूर्णम् ॥६॥**

ಈ ಸೂತ್ರಕ್ಕೆ ಪರವಾದಿಗಳು ಮಾಡಿದ ಅರ್ಥವನ್ನು ಏಕೆ ವಿಮರ್ಶೆ ಮಾಡಲಿಲ್ಲವೆಂದರೆ ಅವರು ಹೇಳಿರುವ ಅರ್ಥ ನಾವು ಹೇಳಿದ ಅರ್ಥಕ್ಕೆ ವಿರುದ್ಧವಲ್ಲ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಪೃಥಿವ್ಯಧಿಕರಣವು ಸಂಪೂರ್ಣವಾಯಿತು

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**पृथिवी** ॥ ''प्रकृता आप एवात्र विषयः'' इत्यादिटीकां पूर्वपक्षटीकाद्यनुरोधेन व्यनक्ति ॥ **अत्रेति** ॥ फलद्योतनाय सिद्धय इत्यन्तोक्तिः । एतेन ''द्वारकारण-विषयश्रुतीनां विरोधेनाप्रामाण्ये समन्वयासम्भवात्'' इति पूर्वटीका विवृता ।

'ಪ್ರಕೃತಾ ಆಪ ಏವಾತ್ರ ವಿಷಯಃ' ಎಂಬ ಟೀಕೆಯ ಅರ್ಥವನ್ನು ಪೂರ್ವಪಕ್ಷಟೀಕಾ ಹಾಗೂ ಸಿದ್ಧಾಂತ ಟೀಕಾ ಇವೆರಡರ ಅನುಗುಣವಾಗಿ ವ್ಯಾಖ್ಯಾನಿಸುತ್ತಿದ್ದಾರೆ. ಚಂದ್ರಿಕಾದಲ್ಲಿ 'ಸರ್ವಸ್ರಷ್ಟೃತ್ವಸ್ಯ ಸಿದ್ಧಯೇ' ಎಂಬಲ್ಲಿ ಸಿದ್ಧಿಪರ್ಯಂತ ಹೋಗಲು ಕಾರಣವೇನು ? ಎಂದರೆ ಫಲವನ್ನು ತಿಳಿಸುವುದಕ್ಕಾಗಿ ಎಂದರ್ಥ. ಹೀಗೆ ಹೇಳಿದ್ದರಿಂದ 'ದ್ವಾರಕಾರಣವಿಷಯಶ್ರುತೀನಾಂ ವಿರೋಧೇನಾಪ್ರಾಮಾಣ್ಯೇ ಸಮನ್ವಯಾಸಂಭವಾತ್' ಎಂಬ ಹಿಂದಿನ ಟೀಕಾವಾಕ್ಯವನ್ನು ವಿವರಿಸಿದಂತಾಯಿತು.

ಪರಿಪೂರ್ಣಚಂದ್ರಿಕಾ

**ವಿವರಣೆ** - ಹಿಂದೆಯೇ ವಿವರಿಸಿದಂತೆ ಈ ಅಧಿಕರಣದಲ್ಲಿ ನೇರವಾಗಿ ಸಮನ್ವಯ ಸೂತ್ರದ ಮೇಲೆ ಆಕ್ಷೇಪ ಮಾಡಿಲ್ಲ. ಹೊರತಾಗಿ ಸಮನ್ವಯ ಸಾಧ್ಯವಿಲ್ಲದಾಗಿ ಸರ್ವಜಗತ್‌ಸೃಷ್ಟಿಕರ್ತೃತ್ವ ಕೂಡುವುದಿಲ್ಲ ಎಂಬುದಾಗಿ ಜನ್ಮಾದಿಸೂತ್ರದ ಮೇಲೆ ಆಕ್ಷೇಪ ಮಾಡಲಾಗಿದೆ.

**प्रकाशः** – ''ता अन्नम्'' इत्यत्र तच्छब्दपरामर्शद्योतनाय ''ता आप'' इति पूर्वांशोक्तिः ।। **प्रकरणादिनेति** ।। भूतप्रकरण, कृष्णरूप, ''आपश्च पृथिवी चान्नम्'' इत्यादिशब्दान्तरैरित्यर्थः ।

ಭಾಷ್ಯದಲ್ಲಿ ಪ್ರಕೃತಕ್ಕೆ ಉಪಯುಕ್ತವಾದ 'ತಾ ಅನ್ನಮಸೃಜಂತ' ಎಂಬ ಶ್ರುತಿಖಂಡವೇ ಪರ್ಯಾಪ್ತವಾಗಿತ್ತು. ಅದರ ಹಿಂದಿನ ಅಂಶ ಅಂದರೆ 'ತಾಃ ಆಪ ಐಕ್ಷಂತ' ಇತ್ಯಾದಿ ಏಕೆ ಹೇಳಲಾಗಿದೆ ಎಂದರೆ 'ತಾ ಅನ್ನಮಸೃಜಂತ' ಎಂಬಲ್ಲಿರುವ 'ತತ್' ಶಬ್ದಕ್ಕೆ ಯಾವ ಅರ್ಥ ಮಾಡಬೇಕು ಎಂದು ತಿಳಿಸುವುದಕ್ಕಾಗಿ ಹಿಂದಿನ ಶ್ರುತಿ ಅಂಶವನ್ನು ಹೇಳಿದ್ದಾರೆ. 'ಪ್ರಕರಣಾದಿನಾ' ಎಂಬಲ್ಲಿರುವ ಪ್ರಕರಣ ಶಬ್ದಕ್ಕೆ ಭೂತಪ್ರಕರಣ ಎಂದರ್ಥ. ಆದಿಶಬ್ದದಿಂದ ಕೃಷ್ಣರೂಪ 'ಆಪಶ್ಚ ಪೃಥಿವೀ ಚಾನ್ನಮ್' ಮೊದಲಾದ ಶ್ರುತಿವಿಶೇಷವನ್ನು ಇಟ್ಟುಕೊಳ್ಳಬೇಕು. ('ಅನ್ನ' ಶಬ್ದಕ್ಕೆ ಪೃಥಿವೀ ಎಂಬ ಅರ್ಥ ವೇದದಲ್ಲಿ ಪ್ರಸಿದ್ಧವೇ ಎಂದರ್ಥ)

**प्रकाशः** – व्यक्तोऽत्र फलफलिभावः ।

ಚಂದ್ರಿಕಾದಲ್ಲಿ ಹೇಳಿರುವ ತದರ್ಥಚಿಂತಾದ ಫಲಫಲಿಭಾವ ಸ್ಪಷ್ಟವಾಗಿದೆ. (ಇದನ್ನು ಹಿಂದೆಯೇ ವಿವರಿಸಲಾಗಿದೆ.)

**प्रकाशः** – अत्र टीकायां पूर्वाधिकरणपूर्वपक्षापेक्षया वैषम्योक्तौ बीजोक्तया तात्पर्यं न्यायविवरणफलत्वं च दर्शयति ।। **अत्रेत्यादिना** ।।

ಈ ಅಧಿಕರಣದ ಟೀಕಾದಲ್ಲಿ ಪೂರ್ವಪಕ್ಷ ಮಾಡುವಾಗ ಹಿಂದಿನ ಅಧಿಕರಣಕ್ಕಿಂತ ವಿಲಕ್ಷಣವಾಗಿ ಮಾಡಿದ್ದಾರೆ. ಅದಕ್ಕೆ ಕಾರಣವೇನು? ಎಂಬುದನ್ನು ವಿವರಿಸುತ್ತಾ ತಾತ್ಪರ್ಯವನ್ನು ಹೇಳುತ್ತಿದ್ದಾರೆ. ಜೊತೆಗೆ ಈ ಅರ್ಥ ನ್ಯಾಯವಿವರಣದಲ್ಲಿ ಹೇಳಿದೆ ಎಂಬುದಾಗಿಯೂ ನಿರೂಪಿಸುತ್ತಿದ್ದಾರೆ.

**प्रकाशः** – ''न चान्नशब्दस्य'' इत्यादिटीकातात्पर्यं शङ्कापूर्वं व्यनक्ति – **न चेहापीति** ।।

'ನ ಚಾನ್ನಶಬ್ದಸ್ಯ' ಎಂದು ಆರಂಭವಾಗುವ ಟೀಕಾವಾಕ್ಯದಲ್ಲಿ ತಾತ್ಪರ್ಯವನ್ನು ಶಂಕಾ ಮಾಡಿಕೊಳ್ಳುವುದರ ಮೂಲಕ ವಿವರಿಸುತ್ತಿದ್ದಾರೆ.

**प्रकाशः** – अक्षरार्थमाह – **अद्भ्यो वेति** ।। न्यायविवरणोदाहृतेति ।।

'ನ ಚಾನ್ನಶಬ್ದಸ್ಯ' ಎಂಬ ಟೀಕಾದಲ್ಲಿರುವ 'ಬಹುವಾಕ್ಯಾನುಸಾರಿತ್ವರೂಪಗುಣಲಾಭಾತ್' ಎಂಬ ಪದಕ್ಕೆ ಅರ್ಥವನ್ನು ಹೇಳುತ್ತಿದ್ದಾರೆ 'ಅದ್ಭ್ಯೋ ವಾ' ಎಂಬುದಾಗಿ.

**प्रकाशः –** ''अद्भ्यो वा अन्नमित्याद'' इत्यादिपदोक्तानां ''ता अन्नमसृजन्त ता आपोऽन्नमसृजन्त'' इत्यादिबहुवाक्यानामित्यर्थः ।।

'ಅನ್ನಮಿತ್ಯಾದಿ' ಎಂಬಲ್ಲಿರುವ ಆದಿಪದದಿಂದ 'ತಾ ಅನ್ನಮಸೃಜಂತ'' 'ತಾ ಆಪೋನ್ನಮಸೃಜಂತ' ಎಂಬ ವಾಕ್ಯಗಳನ್ನು ಇಟ್ಟುಕೊಳ್ಳಬೇಕು.

**प्रकाशः – परव्याख्येति** ।। मतान्तरे तु पृथिवीत्यसांप्रदायिकं विच्छेदमङ्गीकृत्यात इत्यनुवर्त्यात इत्यस्याद्भ्य इत्यर्थवर्णनादनेकार्थत्वमतश्शब्दस्य दोष इति भावः।।

इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे पृथिव्यधिकरणं सम्पूर्णम् ।।६।।

ಚಂದ್ರಿಕಾದಲ್ಲಿ 'ಪರವ್ಯಾಖ್ಯಾ' ಎಂಬಲ್ಲಿ ಪರಶಬ್ದಕ್ಕೆ ಅದ್ವೈತಿ ಎಂದರ್ಥ. ರಾಮಾನುಜರ ಪ್ರಕಾರ ದೋಷ ಇದ್ದೇ ಇದೆ. ಏಕೆಂದರೆ ಅವರು ಈ ಸೂತ್ರವನ್ನು ಒಡೆದು 'ಪೃಥಿವೀ' ಎಂಬ ಒಂದು ಬೇರೆ ಸೂತ್ರವನ್ನು ಮಾಡಿದ್ದಾರೆ. ಇದು ಸಂಪ್ರದಾಯವಿರುದ್ಧ. ಜೊತೆಗೆ ಹಿಂದಿನಿಂದ 'ಅತಃ' ಎಂಬ ಪದವನ್ನು ಅನುವೃತ್ತಿ ಮಾಡಿಕೊಂಡಿದ್ದಾರೆ. ಆ 'ಅತಃ' ಎಂಬ ಶಬ್ದಕ್ಕೆ 'ಅದ್ಭ್ಯಃ' ಎಂದರ್ಥ ಹೇಳಿದ್ದಾರೆ. ಹಾಗಾಗಿ ಅವರ ಪ್ರಕಾರ 'ಅತಃ' ಎಂಬ ಶಬ್ದಕ್ಕೆ ಅನೇಕಾರ್ಥವನ್ನು ಕಲ್ಪನೆ ಮಾಡುವಿಕೆ ಎಂಬ ದೋಷ ಬರುತ್ತದೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಪೃಥಿವ್ಯಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

# ತದಭಿಧ್ಯಾನಾಧಿಕರಣ

(೨-೩-೭)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

॥ ಶ್ರೀಗುರುಭ್ಯೋ ನಮಃ ॥

# ತದಭಿಧ್ಯಾನಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ

ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ

ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् — तदभिध्यानादेव तु तल्लिङ्गात् सः ।।**

ಜಗತ್ತಿಗೆ ಸಂಹಾರಕ ಮಹಾವಿಷ್ಣುವೇ ಆಗಿದ್ದಾನೆ. ಏಕೆಂದರೆ ಈಶ್ವರನ ಇಚ್ಛೆಯಿಂದಲೇ ಅನಾದಿಯಾದ ಸಂಸಾರಬಂಧನವನ್ನು ನಾಶ ಮಾಡುವ ಇಚ್ಛೆಯು ವಿಷ್ಣುವಿಗೆ ಇರುತ್ತದೆ. ಆದ್ದರಿಂದ ಸಾದಿಯಾದ ಜಗತ್ತಿಗೂ ಅವನೇ ಸಂಹಾರಕನು.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका —** तु शब्दोऽवधारणे । **अभिध्यानशब्देनेच्छोच्यते** । **तच्छब्देन** विष्णुर्गृह्यते । तथाच स विष्णुरेव संहारकर्ता न रुद्रः । कुतः? **तदभिध्यानात्** 'तस्याभिध्यानात्' इति श्रुत्युक्तत्वात् तस्य विष्णोः **अभिध्यानरूपशब्दज्ञापित-सञ्जिहीर्षाशेषितादनादिबन्धसंहारेच्छारूपात्तल्लिङ्गादेव** सादिजगत्संहर्तृत्व-साधकादेवेत्यर्थः । **एवकारस्तु** भाष्यरीत्या किमु श्रुतिभ्य इति कैमुत्यसूचकः ।।१।।

'ತು' ಶಬ್ದವು ಅವಧಾರಣಾರ್ಥದಲ್ಲಿದೆ. 'ಅಭಿಧ್ಯಾನ' ಶಬ್ದಕ್ಕೆ 'ಇಚ್ಛೆ' ಎಂದರ್ಥ. 'ತತ್' ಶಬ್ದದಿಂದ ವಿಷ್ಣುವನ್ನು ಸ್ವೀಕರಿಸಬೇಕು. ಆದ್ದರಿಂದ ಆ ವಿಷ್ಣುವೇ ಸಂಹಾರಕರ್ತೃ ಆಗಿದ್ದಾನೆ, ರುದ್ರನಲ್ಲ. ಏಕೆಂದರೆ ತದಭಿಧ್ಯಾನಾತ್ 'ತಸ್ಯಾಭಿಧ್ಯಾನಾತ್' ಎಂಬ ಶ್ರುತಿಯಲ್ಲಿ ಹೇಳಿದಂತೆ ಆ ವಿಷ್ಣುವಿಗೆ ಅನಾದಿಯಾದ

ಸಂಸಾರಬಂಧನವನ್ನು ನಾಶಮಾಡುವ ಇಚ್ಛೆಯು ಇರುವುದರಿಂದ 'ತಲ್ಲಿಂಗಾತ್' = ಸಾದಿಯಾದ ಜಗತ್ತಿಗೂ ಸಂಹಾರಕನಾಗಿದ್ದಾನೆನ್ನಲು ಸಾಧಕವಾಗುವುದರಿಂದ ವಿಷ್ಣುವೇ ಜಗತ್‌ಸಂಹಾರಕನು.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ತದಭಿಧ್ಯಾನಾಧಿಕರಣವು ಮುಗಿಯಿತು.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – 'प्राणानां ग्रन्थिरसि रुद्रो मा विशान्तकः । तेनान्नेनाऽप्यायस्व' (महाना.१६.२.) इत्यादिनाऽन्यः संहर्ता प्रतीयत इति ।**

ಅನುವಾದ - ಎಲೈ ರುದ್ರನೇ! ನೀನು ಇಂದ್ರಿಯಗಳಿಗೆ ಆಶ್ರಯನಾಗಿರುವಿ. ಸಂಹಾರಕಾರಣನೂ ಆಗಿರುವಿ. ಅಂಥ ನೀನು ನನ್ನನ್ನು ಪ್ರವೇಶಮಾಡು. ನನ್ನಲ್ಲಿ ಸನ್ನಿಧಾನವನ್ನು ಹೊಂದು. ಹೀಗೆ ಮಹಾನಾರಾಯಣೋಪನಿಷತ್ತಿನ ಶ್ರುತಿಯು ರುದ್ರನು ಜಗತ್‌ಸಂಹಾರಕರ್ತೃವೆಂದು ಹೇಳುತ್ತಿದೆ. ಇಷ್ಟು ಪೂರ್ವಪಕ್ಷ.

ಪ್ರತಿಪದಾರ್ಥ -- ರುದ್ರ = ಎಲೈರುದ್ರನೇ! ಪ್ರಾಣಾನಾಂ = ಇಂದ್ರಿಯಗಳಿಗೆ, ಗ್ರಂಥಿಃ = ಆಶ್ರಯನು, ಅಸಿ = ಆಗಿರುವಿ, ಅಂತಕಃ = ಸಂಹಾರಕನು ಆಗಿರುವಿ. ಅಂಥ ನೀನು ಮಾ = ನನ್ನನ್ನು, ವಿಶ = ಪ್ರವೇಶಮಾಡು, ತೇನಾನ್ನೇನಾ = ಅವರು ಕೊಡುವ ಅನ್ನದಿಂದ, ಆಪ್ಯಾಯಸ್ವ = ತೃಪ್ತನಾಗು.

**भाष्यम् – अतो ब्रूते –**

**।। तदभिध्यानादेव तु तल्लिङ्गात् सः ।।१।।**

**'तस्याभिध्यानाद् योजनात् तत्वभावाद् भूयश्चान्ते विश्वमायानिवृत्तिः' (श्वे.१.१०) इति बन्धलयस्य तदभिध्याननिमित्तत्वलिङ्गात् तत्कर्तृत्वं प्रतीयते, किमु सादेर्जगतः । इत्येतस्मादेव सर्वसंहारकर्ता विष्णुरिति प्रतीयते ।**

ಮೇಲಿನ ಪೂರ್ವಪಕ್ಷಕ್ಕೆ ಸೂತ್ರಕಾರರು ಉತ್ತರಿಸುತ್ತಿದ್ದಾರೆ - ಪರಮಾತ್ಮನಲ್ಲಿ ಮನಸ್ಸನ್ನು ಸ್ಥಿರವಾಗಿ ಇಡುವುದರಿಂದ ಮತ್ತು ಅವನ ಯಥಾರ್ಥಜ್ಞಾನದಿಂದ ಭಗವಂತನ ಪ್ರಸಾದವು ಉಂಟಾಗುತ್ತದೆ. ಆ ಪ್ರಸಾದದಿಂದ ಪ್ರಾರಬ್ಧಕರ್ಮವು ನಾಶವಾಗಿ ಸಂಸಾರಬಂಧಕವಾದ ಅವಿದ್ಯೆಯು ಪರಿಹಾರವಾಗುತ್ತದೆ. ಹೀಗೆ ಶ್ವೇತಾಶ್ವತರಶ್ರುತಿಯಲ್ಲಿ ಭಗವಂತನ ಇಚ್ಛೆಯಿಂದಲೇ ಅನಾದಿಯಾದ ಸಂಸಾರ ಬಂಧನಕ್ಕೆ ನಿವೃತ್ತಿಯನ್ನು ಹೇಳಲಾಗಿದೆ. ಹೀಗಿರುವಾಗ ಸಾದಿಯಾದ ಜಗತ್ತಿಗೆ ವಿಷ್ಣುವಿನಿಂದ ನಿವೃತ್ತಿ ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕೇನು? ಈ ಕಾರಣದಿಂದ ವಿಷ್ಣು ಒಬ್ಬನೇ ಸರ್ವಸಂಹಾರಕರ್ತೃ ಎಂದು ಸ್ಪಷ್ಟವಾಗಿ ತಿಳಿಯುತ್ತದೆ.

ತದಭಿಧ್ಯಾನಾಧಿಕರಣ (೨-೩-೭)

ಪ್ರತಿಪದಾರ್ಥ -- ಅತಃ = ಪೂರ್ವಪಕ್ಷಕ್ಕೆ ಉತ್ತರರೂಪವಾಗಿ, ಬ್ರೂತೇ = ಸೂತ್ರಕಾರರು ಹೇಳುತ್ತಿದ್ದಾರೆ -

ತಸ್ಯ = ಪರಮಾತ್ಮನ, ಅಭಿಧ್ಯಾನಾತ್ = ಸೂತ್ರದಲ್ಲಿರುವ ಅಭಿಧ್ಯಾನಾತ್ ಎಂಬ ಪದಕ್ಕೆ, ಯೋಜನಾತ್ = ಸ್ಥಿರವಾಗಿ ನೆಲೆಗೊಳಿಸುವುದರಿಂದ, ತತ್ವಭಾವಾತ್ = ಅವನ ಬಗ್ಗೆ ಯಥಾರ್ಥಜ್ಞಾನವನ್ನು ಹೊಂದುವುದರಿಂದ, ಅಭಿಧ್ಯಾನಾತ್ = ಇಚ್ಛಾರೂಪವಾದ ಪ್ರಸಾದದಿಂದ ಪ್ರಾರಬ್ಧಕರ್ಮವು ಮುಗಿದ ಮೇಲೆ, ವಿಶ್ವಮಾಯಾನಿವೃತ್ತಿಃ = ಪ್ರಪಂಚದ ಅವಿದ್ಯೆಯು ನಿವೃತ್ತವಾಗುತ್ತದೆ. ಇತಿ = ಹೀಗೆ, ಬಂಧಲಯಸ್ಯ = ಅನಾದಿಯಾದ ಸಂಸಾರದ ಬಂಧನಕ್ಕೆ ಲಯವನ್ನು, ತದಭಿಧ್ಯಾನನಿಮಿತ್ತತ್ವಲಿಂಗಾತ್ = ಭಗವಂತನ ಇಚ್ಛಾಮಾತ್ರಕ್ಕೆ ಕಾರಣತ್ವವನ್ನು ಹೇಳಿದ್ದರಿಂದ, ತತ್ಕರ್ತೃತ್ವಂ = ಬಂಧನದ ನಾಶಕ್ಕೆ ವಿಷ್ಣುವೇ ಕರ್ತೃವೆಂದು, ಪ್ರತೀಯತೇ = ತಿಳಿಯುತ್ತದೆ. ಹೀಗಿರುವಾಗ ಸಾದೇಃ = ಸಾದಿಯಾದ, ಜಗತಃ = ಜಗತ್ತಿಗೆ, ಕಿಮು = ಭಗವಂತನೇ ಕರ್ತೃವೆಂದು ಹೇಳಬೇಕೇನು? ಇತ್ಯೇತಸ್ಮಾದೇವ = ಈ ಕಾರಣದಿಂದಲೇ, ವಿಷ್ಣೋಃ = ಮಹಾವಿಷ್ಣುವು, ಸರ್ವಸಂಹಾರಕರ್ತಾ = ಸಮಸ್ತ ಜಗತ್ತಿನ ಸಂಹಾರಕರ್ತನು, ಇತಿ = ಹೀಗೆ, ಪ್ರತೀಯತೇ = ತಿಳಿಯುತ್ತದೆ.

**भाष्यम् — किमु 'यमप्येति भुवनं साम्पराये स नो हरिर्घृतमिहाऽयुषेऽस्तु देवः', 'य इदं सर्वं विलाययति स हरिः परः परमात्मा' इत्यादिश्रुतिभ्य इत्येवशब्दः ।**

ಅನುವಾದ - ಪ್ರಳಯಕಾಲದಲ್ಲಿ ಈ ಜಗತ್ತು ಯಾರಲ್ಲಿ ಲಯವನ್ನು ಹೊಂದುತ್ತದೋ ಆ ಭಗವಂತನು ನಮ್ಮ ಆಯುಷ್ಯದ ಅಭಿವೃದ್ಧಿಗಾಗಿ ಹವಿಸ್ಸನ್ನು ಸ್ವೀಕಾರ ಮಾಡಲಿ.

ಯಾವನು ಸಮಸ್ತ ಜಗತ್ತನ್ನು ದುಃಖದ ಮಡುವಿನಲ್ಲಿ ಮುಳಿಗಿಸಿದ್ದಾನೋ ಅಂಥ ಶ್ರೀಹರಿಯೇ ಶ್ರೇಷ್ಠನಾದ ಪರಮಾತ್ಮನಾಗಿದ್ದಾನೆ. ಇವೇ ಮೊದಲಾದ ಶ್ರುತಿಗಳಿಂದಲೂ ಅವನೇ ಸಂಹಾರಕನೆಂದು ಸಿದ್ಧವಾಗುತ್ತದೆಂದು ಪ್ರತ್ಯೇಕವಾಗಿ ಹೇಳಬೇಕೇನು ?

ಪ್ರತಿಪದಾರ್ಥ -- ಸಾಂಪರಾಯೇ = ಪ್ರಳಯಕಾಲದಲ್ಲಿ, ಭುವನಂ = ಈ ಜಗತ್ತು, ಯಂ = ಯಾರನ್ನು, ಅಪ್ಯೇತಿ = ಲಯವನ್ನು ಹೊಂದುತ್ತದೋ, ಸಃ = ಅಂಥ, ದೇವಃ = ದೇವನಾದ, ಹರಿಃ = ಶ್ರೀಹರಿಯು, ನಃ = ನಮ್ಮ, ಆಯುಷೇ = ಆಯುಷ್ಯವೃದ್ಧಿಗಾಗಿ, ಘೃತಂ = ಹವಿಸ್ಸನ್ನು, ಅಸ್ತು = ಸ್ವೀಕರಿಸಲಿ.

ಯಃ = ಯಾವ ಪರಮಾತ್ಮನು, ಇದಂ ಸರ್ವಂ = ಈ ಸಮಸ್ತ ಜಗತ್ತನ್ನು, ವಿಲಾಪಯತಿ = ದುಃಖದ ಮಡುವಿನಲ್ಲಿ ಮುಳುಗಿಸಿದ್ದಾನೊ, ಸಃ = ಅಂಥ, ಹರಿಃ = ಶ್ರೀಹರಿಯು, ಪರಃ = ಶ್ರೇಷ್ಠನಾದ, ಪರಮಾತ್ಮಾ = ಪರಮಾತ್ಮನಾಗಿದ್ದಾನೆ. ಇತ್ಯಾದಿಶ್ರುತಿಭ್ಯಃ = ಇವೇ ಮೊದಲಾದ ಶ್ರುತಿಗಳಿಂದ, ಕಿಮು = ಭಗವಂತನು ಸಂಹಾರಕನೆಂದು ಎಂದು ಪ್ರತ್ಯೇಕವಾಗಿ ಹೇಳಬೇಕೇನು? ಇತಿ = ಹೀಗೆ, ಏವಶಬ್ದಃ = ಸೂತ್ರದಲ್ಲಿ ಏವಶಬ್ದವನ್ನು ಹೇಳಿರುತ್ತಾರೆ.

**भाष्यम् —**

**'स्रष्टा पाता च संहर्ता स एको हरिरीश्वरः ।**
**स्रष्टृत्वादिकमन्येषां दारुयोषावदुच्यते ।।**

ಪರಿಪೂರ್ಣಚಂದ್ರಿಕಾ

**एकदेशक्रिया चात्र न तु सर्वात्मनेरितम् ।**
**सृष्ट्यादिकं समस्तं तु विष्णोरेव परात् भवेत् ।।' इति च स्कादे ।।**

ಅನುವಾದ - ಸರ್ವೋತ್ತಮನಾದ ಶ್ರೀಹರಿಯೊಬ್ಬನೇ ಸೃಷ್ಟಿಕರ್ತಾ ಸರ್ವರಕ್ಷಕ, ಸರ್ವಸಂಹಾರಕನು. ಬೇರೆಯರಲ್ಲಿ ಅಂಥ ಸೃಷ್ಟ್ಯಾದಿಕ್ರಿಯೆಗಳು ನಡೆದರೂ ಮರದ ಹೆಣ್ಣುಬೊಂಬೆಯಂತೆ ಅಸ್ವತಂತ್ರವಾಗಿವೆ. ಮತ್ತು ಬೇರೆ ದೇವತೆಗಳ ಸೃಷ್ಟಿಪ್ರಕ್ರಿಯೆಯು ಕೇವಲ ಏಕದೇಶಕ್ಕೆ ಮಾತ್ರ ಸಂಬಂಧಪಟ್ಟಿರುತ್ತದೆ. ಸಮಸ್ತಕ್ಕೂ ಸಂಬಂಧಪಟ್ಟ ಸೃಷ್ಟಿಕ್ರಿಯೆಯು ಭಗವಂತನನ್ನು ಬಿಟ್ಟು ಬೇರೆ ಯಾರಿಗೂ ಸಾಧ್ಯವಿಲ್ಲ. ಹೀಗೆ ಸ್ಕಾಂದಪುರಾಣವು ಹೇಳಿದೆ.

ಪ್ರತಿಪದಾರ್ಥ -- ಸ್ರಷ್ಟಾ = ಸೃಷ್ಟಿ ಮಾಡುವವನು, ಚ = ಮತ್ತು, ಪಾತಾ = ರಕ್ಷಣೆ ಮಾಡುವವನು, ಸಂಹರ್ತಾ = ಸಂಹಾರ ಮಾಡುವವನು, ಸಃ = ಅ, ಏಕಃ = ಒಬ್ಬನೇ, ಈಶ್ವರಃ = ಈಶ್ವರನಾದ, ಹರಿಃ = ಶ್ರೀಹರಿಯು, ಅನ್ಯೇಷಾಂ = ಬ್ರಹ್ಮ ರುದ್ರಾದಿಗಳಿಗೆ, ಸ್ರಷ್ಟೃತ್ವಾದಿ = ಜಗತ್ತಿನ ಸೃಷ್ಟಿ ಮಾಡುವಿಕೆಯು, ದಾರುಯೋಷಾವತ್ = ಮರದ ಹೆಣ್ಣಿನ ಬೊಂಬೆಯಂತೆ, ಉಚ್ಯತೇ = ಅಸ್ವತಂತ್ರವಾಗಿ ಇರುತ್ತದೆ ಎಂದು ಹೇಳಲಾಗಿದೆ. ಚ = ಮತ್ತು, ಏಕದೇಶಕ್ರಿಯಾ = ಏಕದೇಶದಲ್ಲಿ ಮಾತ್ರ ಸೃಷ್ಟಿಕ್ರಿಯೆಯು ಇರುತ್ತದೆ. ಸರ್ವಾತ್ಮನಾ = ಎಲ್ಲಾ ರೀತಿಯಿಂದ, ನನು ಈರಿತಮ್ = ಸೃಷ್ಟಿಕ್ರಿಯೆಯು ಇರುವುದಿಲ್ಲ. ಸಮಸ್ತಮ್ = ಸಂಪೂರ್ಣವಾದ, ಸೃಷ್ಟ್ಯಾದಿಕಂ = ಸೃಷ್ಟ್ಯಾದಿ ವ್ಯಾಪಾರಗಳು, ಪರಾತ್ = ಸರ್ವೋತ್ತಮನಾದ, ವಿಷ್ಣೋರೇವ = ವಿಷ್ಣುವಿಗೆ ಮಾತ್ರ, ಭವೇತ್ = ಯುಕ್ತವಾಗುತ್ತದೆ. ಇತಿಚ = ಹೀಗೆ, ಸ್ಕಾಂದೇ = ಸ್ಕಾಂದಪುರಾಣದಲ್ಲಿ ಹೇಳಲಾಗಿದೆ.

**भाष्यम् —**

**'निमित्तमात्रमीशस्य विश्वसर्गनिरोधयोः ।**
**हिरण्यगर्भश्शर्वश्च कालाख्यारूपिणस्तव ।।' इति च भागवते ।।**

**'स ब्रह्मणा विसृजति स रुद्रेण विलाययति सोऽनुत्पत्तिरलय एक एव हरिः परः परानन्दः' इति च महोपनिषदि ।।१३।।**

**।। इति श्रीमदानन्दतीर्थभगवत्पादाचार्यविरचिते**
**ब्रह्मसूत्रभाष्ये तदभिध्यानाधिकरणम् ।। ७ ।।**

ಅನುವಾದ - ಬ್ರಹ್ಮದೇವರ ಸೃಷ್ಟಿಕ್ರಿಯೆಯು ರುದ್ರದೇವರ ಸಂಹಾರಕ್ರಿಯೆಯು ಕಾಲಸ್ವರೂಪನಾದ ಬ್ರಹ್ಮದೇವರ ಸೃಷ್ಟಿಕ್ರಿಯೆಯು ರುದ್ರದೇವರ ಸಂಹಾರಕ್ರಿಯೆಯು ಕಾಲಸ್ವರೂಪನಾದ ಶ್ರೀಹರಿಯ ಅಧೀನವಾಗಿದೆ. ಇವರು ಕಾಲರೂಪನಾದ ಶ್ರೀಹರಿಗೆ ಕೇವಲ ನಿಮಿತ್ತರಾಗಿದ್ದಾರೆ.

ಬ್ರಹ್ಮನ ಮೂಲಕವಾಗಿ ಮಹಾವಿಷ್ಣುವು ಜಗತ್ತನ್ನು ಸೃಷ್ಟಿ ಮಾಡುತ್ತಾನೆ. ರುದ್ರನ ಮೂಲಕ ಸಂಹಾರ ಮಾಡುತ್ತಾನೆ. ಅಂಥ ಮಹಾವಿಷ್ಣುವಿಗೆ ಉತ್ಪತ್ತಿ ಹಾಗೂ ಭಯ ಎರಡೂ

ಇರುವುದಿಲ್ಲ. ಅವನೊಬ್ಬನೇ ಸರ್ವೋತ್ತಮನು ಪರಿಪೂರ್ಣಾನಂದ ಉಳ್ಳವನು ಆಗಿದ್ದಾನೆ. ಹೀಗೆ ಮಹೋಪನಿಷತ್ತು ಹೇಳುತ್ತಿದೆ.

ಪ್ರತಿಪದಾರ್ಥ -- ಕಾಲಾಖ್ಯರೂಪಿಣಃ = ಕಾಲ ಎಂಬ ರೂಪವನ್ನು ತಾಳಿದ, ಈಶಸ್ಯ = ಸಕಲಕ್ಕೂ ಒಡೆಯನಾದ, ತವ = ಎಲೈ ಶ್ರೀಕೃಷ್ಣನಾದ ನಿನ್ನ, ವಿಶ್ವಸರ್ಗನಿರೋಧಯೋಃ = ಜಗತ್ತಿನ ಸೃಷ್ಟಿ ಹಾಗೂ ಸಂಹಾರಗಳಿಗೆ, ಹಿರಣ್ಯಗರ್ಭಃ = ಚತುರ್ಮುಖನು, ಶರ್ವಶ್ಚ = ರುದ್ರನೂ ಕೂಡ, ನಿಮಿತ್ತಮಾತ್ರಮ್ = ಕೇವಲ ನಿಮಿತ್ತಭೂತರಾಗಿದ್ದಾರೆ. ಇತಿ ಚ = ಹೀಗೆ, ಭಾಗವತೇ = ಭಾಗವತದಲ್ಲಿ ಹೇಳಲಾಗಿದೆ.

ಸ = ಆ ವಿಷ್ಣುವು, ಬ್ರಹ್ಮಣಾಃ = ಚತುರ್ಮುಖನ ದೆಸೆಯಿಂದ, ವಿಸೃಜತಿ = ಸೃಷ್ಟಿ ಮಾಡುತ್ತಾನೆ. ಸಃ = ಆ ವಿಷ್ಣುವು, ರುದ್ರೇಣ = ರುದ್ರನ ದೆಸೆಯಿಂದ, ವಿಲಾಪಯತಿ = ಸಂಹಾರ ಮಾಡುತ್ತಾನೆ. ಸಃ = ಆ ವಿಷ್ಣುವು, ಅನುತ್ಪತ್ತಿಃ = ಹುಟ್ಟಿಲ್ಲದವನು, ಅಲಯಃ = ನಾಶವಿಲ್ಲದವನು, ಸಃ ಏಕ ಏವ ಹರಿಃ = ಅಂಥವನು ಶ್ರೀಹರಿ ಮಾತ್ರ, ಪರಃ = ಉತ್ತಮನು, ಪರಾನಂದಃ = ಪರಿಪೂರ್ಣವಾದ ಆನಂದವುಳ್ಳವನು, ಇತಿ ಚ = ಹೀಗೂ, ಮಹೋಪನಿಷದಿ = ಮಹೋಪನಿಷತ್‌ನಲ್ಲಿ ಹೇಳಲಾಗಿದೆ.

ಇಲ್ಲಿಗೆ ತದಭಿಧ್ಯಾನಾಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

## ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**तत्वप्रकाशिका – एवमधिभूताधिदैवोत्पत्तिविषयश्रुतिविरोधं पराकृत्यात्र ब्रह्मणि श्रुतिसमन्वय सिद्ध्यर्थं तत्संहारविषयश्रुतिविररोधपरिहारादस्ति शास्त्रादिसङ्गतिः ।**

ಹೀಗೆ ಅಧಿಭೂತ ಹಾಗೂ ಅಧಿದೈವಗಳ ಉತ್ಪತ್ತಿ ವಿಷಯದಲ್ಲಿ ಶ್ರುತಿವಿರೋಧವನ್ನು ಪರಿಹಾರ ಮಾಡಿದ್ದಾಯಿತು. ಪ್ರಕೃತ ಬ್ರಹ್ಮನಲ್ಲಿ ಶ್ರುತಿಸಮನ್ವಯವು ಸಿದ್ಧವಾಗುವುದಕ್ಕಾಗಿ ಅದಿಭೂತ ಹಾಗೂ ಅಧಿದೈವಗಳ ಸಂಹಾರ ವಿಷಯಕವಾದ ವಿರೋಧವನ್ನು ಪರಿಹಾರ ಮಾಡುತ್ತಿರುವುದರಿಂದ ಶಾಸ್ತ್ರಾದಿಸಂಗತಿಗಳು ಇರುತ್ತವೆ.

ವಿವರಣೆ - ಇಲ್ಲಿಯ ತನಕ ಎಲ್ಲಾ ಭೂತಗಳ ಹಾಗೂ ದೇವತೆಗಳ ಸೃಷ್ಟಿಕಾರಕನು ಪರಮಾತ್ಮನೇ ಆಗಿದ್ದಾನೆಂದು ಸಮರ್ಥಿಸಿದ್ದಾಯಿತು. ತನ್ಮೂಲಕ ಅಧಿಭೂತ ಹಾಗೂ ಅಧಿದೈವವಿಷಯಕವಾದ ಶ್ರುತಿಗಳ ಪರಸ್ಪರ ವಿರೋಧವು ಪರಿಹಾರವಾಯಿತು. ಪ್ರಕೃತ ಈ ಅಧಿಕರಣದಲ್ಲಿ ಅಧಿಭೂತ ಹಾಗೂ ಅಧಿದೈವ ವಿಷಯಕವಾದ ಸಂಹಾರ ವಿಷಯಕವಾದ ಶ್ರುತಿಗಳ ವಿರೋಧವನ್ನು ಪರಿಹಾರ ಮಾಡುತ್ತಿದ್ದಾರೆ. ಆದ್ದರಿಂದ ಈ ಅಧಿಕರಣಕ್ಕೆ ಅನಂತರ್ಯ ಸಂಗತಿ ಇರುತ್ತದೆ.

ಪರಿಪೂರ್ಣಚಂದ್ರಿಕಾ

ಸೃಷ್ಟಿಯ ಅನಂತರ ಸರ್ವಸ್ಥಿತಿ ಕರ್ತೃತ್ವವು ಪ್ರಸಕ್ತವಾಗುತ್ತದೆ. ಆದ್ದರಿಂದ ಸರ್ವಸ್ಥಿತಿಕರ್ತೃತ್ವವಿಷಯಕವಾದ ಶ್ರುತಿಗಳ ವಿರೋಧ ಪರಿಹಾರವನ್ನು ಮಾಡಬೇಕು ಆದರೂ ಕೂಡ ಸರ್ವಸಂಹರ್ತೃತ್ವವು ವಿಷ್ಣುನಿಷ್ಠವೆಂದು ವಿಚಾರ ಮಾಡಿದರೆ ಮಾತ್ರ ಮತ್ತೊಬ್ಬರು ರಕ್ಷಕರಿಲ್ಲ ಎಂಬ ಪೂರ್ವಪಕ್ಷಿಯುಕ್ತಿಯು ಹುಟ್ಟುವುದರಿಂದ ಸಂಹಾರಕರ್ತೃತ್ವಕ್ಕಿಂತ ವ್ಯತಿರಿಕ್ತವಾದ ಪಾಲಕತ್ವವನ್ನೇ ಸಮರ್ಥನೆ ಮಾಡಬೇಕು. ಆದ್ದರಿಂದ ಪಾಲಕತ್ವಕ್ಕಿಂತ ಮೊದಲು ಸಂಹಾರಕರ್ತೃತ್ವವನ್ನು ವಿಷ್ಣುನಿಷ್ಠವೆಂದು ನಿಷ್ಠವೆಂದು ಸಮರ್ಥನೆ ಮಾಡುತ್ತಿದ್ದಾರೆ.

**तत्वप्रकाशिका – जगत्सृष्ट्यादिकर्ता हरिरित्यभिहितम् । तत्र संहारकर्तृत्वेऽन्यगते तदभावापातात्तन्निषध्यमेव । प्रकृताधिभूताधिदैवानि विषयः । उत्पत्तिमत्त्वाल्लीयन्त इति सिद्धम् । किं भगवता लीयन्ते रुद्रेण वेति सन्देहः ।**

ಸಮಸ್ತ ಜಗತ್ತಿಗೆ ಸೃಷ್ಟ್ಯಾದಿಗಳನ್ನು ಮಾಡುವವನು ಶ್ರೀಹರಿಯೇ ಆಗಿದ್ದಾನೆಂದು ಸಮರ್ಥಿಸಲಾಯಿತು. ಸೃಷ್ಟ್ಯಾದಿಕರ್ತೃತ್ವದ ಮಧ್ಯದಲ್ಲಿ ಸಂಹಾರಕರ್ತೃತ್ವವು ಬೇರೆ ವ್ಯಕ್ತಿಯಲ್ಲಿ ಬರುವುದಾದರೆ ಶ್ರೀಹರಿಯಲ್ಲಿ ಸರ್ವಕರ್ತೃತ್ವವು ಇಲ್ಲವೆಂದಾಗುತ್ತದೆ. ಆದ್ದರಿಂದ ಸಂಹಾರಕರ್ತೃತ್ವವು ಅನ್ಯಗತವಾಗಿದೆ ಎಂಬುದನ್ನು ನಿರಾಕರಣೆ ಮಾಡಲೇಬೇಕು.

ಈ ಅಧಿಕರಣದಲ್ಲಿ ಪ್ರಕೃತವಾದ ಅಧಿಭೂತ ಹಾಗೂ ಅಧಿದೈವಗಳು ವಿಷಯವಾಗಿವೆ. ಉತ್ಪತ್ತಿವುಳ್ಳವುಗಳಾದ್ದರಿಂದ ನಾಶವಾಗುತ್ತವೆ ಎಂಬುದು ಸಿದ್ಧವಾಗಿದೆ. ಈ ನಾಶವು ಭಗವಂತನಿಂದಾಗುತ್ತದೋ ಅಥವಾ ರುದ್ರನಿಂದಲೋ ? ಎಂಬುದು ಅಧಿಕರಣದ ಸಂದೇಹ.

**तत्वप्रकाशिका – 'यत्प्रयन्त्यभिसंविशन्ति' 'रुद्रो माविशान्तकः' इति श्रुतिविरोधः सन्देहबीजम् । पूर्वपक्षयति – प्राणानामिति ।।**

'ಯತ್ಪ್ರಯಂತ್ಯಭಿಸಂವಿಶಂತಿ' ಎಂಬ ಶ್ರುತಿಯು ವಿಷ್ಣುವಿನಿಂದ ಸಂಹಾರವನ್ನು ಹೊಂದುತ್ತವೆಂದು ಹೇಳುತ್ತಿವೆ. 'ರುದ್ರೋ ಮಾವಿಶಾಂತಕಃ' ಎಂಬ ಶ್ರುತಿಯು ರುದ್ರನಿಂದ ಸಂಹಾರ ಹೊಂದುತ್ತವೆಂದು ಹೇಳುತ್ತದೆ. ಈ ಎರಡು ಶ್ರುತಿಯ ಪರಸ್ಪರ ವಿರೋಧವು ಸಂದೇಹಕ್ಕೆ ಕಾರಣ. ರುದ್ರನೇ ಸರ್ವಸಂಹಾರಕನೆಂಬುದು ಪೂರ್ವಪಕ್ಷ. ಇದನ್ನು 'ಪ್ರಾಣಾನಾಮ್' ಇತ್ಯಾದಿಯಾಗಿ ಭಾಷ್ಯದಲ್ಲಿ ಹೇಳುತ್ತಿದ್ದಾರೆ.

ವಿವರಣೆ - 'ಯತ್ಪ್ರಯಂತ್ಯಭಿಸಂವಿಶಂತಿ' ಎಂಬ ತೈತ್ತಿರೀಯಶ್ರುತಿಯು ವಿಷ್ಣುವನ್ನೇ ಹೊಂದುತ್ತವೆ, ವಿಷ್ಣುವಿನಲ್ಲೇ ಪ್ರವೇಶಿಸುತ್ತವೆ ಎಂದು ಹೇಳುತ್ತಿದೆ. 'ರುದ್ರೋ ಮಾವಿಶಾಂತಕಃ' ಎಂಬ ಮಹಾನಾರಾಯಣೋಪನಿಷತ್ತು 'ಎಲೈ ರುದ್ರನೇ ಸರ್ವಸಂಹಾರಕನಾದ ನೀನು ನನ್ನನ್ನು ಪ್ರವೇಶಿಸಬೇಡ' ಎಂದು ಹೇಳುತ್ತಿದೆ. ಈ ಎರಡು ಶ್ರುತಿಗಳನ್ನು ನೋಡಿದಾಗ ರುದ್ರನು ಸಂಹಾರಕನೋ? ವಿಷ್ಣುವೋ? ಎಂಬ ಸಂಶಯವು ಬರುತ್ತದೆ.

**तत्वप्रकाशिका – रुद्र एव संहारकः । श्रुतौ तस्यान्तकत्वश्रवणात् । नच वाच्यं रुद्रादिनाम्नां विष्णुपरत्वादियं श्रुतिस्तत्परा किं न स्यात् । रुद्रविषयत्वे वा रुद्रस्य संहारद्वारत्वाभिघात्री किं न स्यादिति ।**

ರುದ್ರನೇ ಸಂಹಾರಕನಾಗಿದ್ದಾನೆ. ಏಕೆಂದರೆ ಶ್ರುತಿಯಲ್ಲಿ ರುದ್ರನನ್ನು 'ಅಂತಕ' ಎಂದು ಕರೆಯಲಾಗಿದೆ.

ರುದ್ರ ಮೊದಲಾದ ಹೆಸರುಗಳು ವಿಷ್ಣುಪರವಾಗಿರುವುದರಿಂದ 'ಅಂತಕತ್ವ' ಶ್ರುತಿಯೂ ಕೂಡ ವಿಷ್ಣುಪರ ಏಕಾಗಬಾರದು? ರುದ್ರವಿಷಯಕವಾಗುವುದಾದರೂ ಕೂಡ ರುದ್ರನ ಮೂಲಕ ಸಂಹಾರ ಮಾಡುತ್ತಾನೆಂದು ಶ್ರುತಿ ಏಕೆ ಹೇಳಬಾರದು?

ವಿವರಣೆ - 'ಅನ್ಯಃ ಸಂಹಾರಕರ್ತಾ ಪ್ರತೀಯತೇ' ಎಂಬ ಭಾಷ್ಯದಲ್ಲಿರುವ 'ಅನ್ಯಃ' ಎಂಬ ಪದಕ್ಕೆ 'ರುದ್ರಃ' ಎಂಬರ್ಥವನ್ನು 'ರುದ್ರ ಏವ ಸಂಹಾರಕ' ಎಂಬ ಟೀಕೆಯಲ್ಲಿ ಹೇಳಿದ್ದಾರೆ.

'ರುಜಂ ಜಾಯತೇ ಯಸ್ಮಾತ್ ರುದ್ರಸ್ತಸ್ಮಾತ್ ಜನಾರ್ದನಃ' ಎಂಬ ಸ್ಮೃತಿವಾಕ್ಯದಲ್ಲಿ ಹಾಗೂ 'ಸೋಂತಕಃ ಸ ರುದ್ರಃ ಯೋ ಹರಿಃ' ಇತ್ಯಾದಿ ಶ್ರುತಿ ವಾಕ್ಯದಲ್ಲಿ ರುದ್ರ, ಅಂತಕ ಈ ಎಲ್ಲ ಶಬ್ದಗಳೂ ಶ್ರೀಹರಿಯಲ್ಲಿಯೇ ಮುಖ್ಯವಾಗಿವೆ ಎಂದು ಹೇಳಲಾಗಿದೆ. ತದಧೀನತ್ವನ್ಯಾಯದಿಂದ ರುದ್ರನಲ್ಲಿ ಅಮುಖ್ಯವೃತ್ತಿಯಿಂದ ಇರುತ್ತದೆ ಎಂದು ಅಂಗೀಕಾರ ಮಾಡಿದರೂ ಕೂಡ ದ್ವಾರಭೂತನಾಗಿ ರುದ್ರನು ಸಂಹಾರಕಾರಣನಾಗಿದ್ದಾನೆ ಎಂಬುದು ತೇಜೋಧಿಕರಣದ ನ್ಯಾಯದಿಂದಲೇ ಸಿದ್ಧವಾಗುತ್ತದೆ. ಆದ್ದರಿಂದ ಪುನಃ ಈ ಅಧಿಕರಣದಲ್ಲಿ ಹೊಸ ಪ್ರಮೇಯವನ್ನೇನು ಸಮರ್ಥಿಸುತ್ತಿದ್ದಾರೆ? ಎಂಬ ಆಶಂಕೆಯನ್ನು 'ನಚ' ಇತ್ಯಾದಿ ಟೀಕೆಯಿಂದ ತೋರಿಸುತ್ತಿದ್ದಾರೆ.

**तत्वप्रकाशिका – यथाकथञ्चिद्विष्णोः संहर्तृत्वाभ्युपगमे लोकदृष्टिविरोधात्। तस्य जगदुत्पादकत्वात् । लोके च पितुरन्यस्यैव मारकत्वदर्शनात् ।**

ಮೇಲೆ ಮಾಡಿದ ಆಕ್ಷೇಪವು ತಪ್ಪು. ಯಾವುದೇ ಕಾರಣದಿಂದಲೂ ವಿಷ್ಣುವಿಗೆ ಸಂಹರ್ತೃತ್ವವನ್ನು ಅಂಗೀಕಾರ ಮಾಡಲು ಸಾಧ್ಯವಿಲ್ಲ. ಹಾಗೇನಾದರೂ ಅಂಗೀಕರಿಸಿದರೆ ಲೋಕದ ಅನುಭವಕ್ಕೆ ವಿರೋಧ ಬರುತ್ತದೆ. ಮಹಾವಿಷ್ಣುವು ಜಗತ್ತಿಗೆ ಉತ್ಪಾದಕನಾಗಿದ್ದಾನೆ. ಅವನೇ ಸಂಹಾರಕನಾಗಲು ಸಾಧ್ಯವಿಲ್ಲ. ಲೋಕದಲ್ಲಿ ತಂದೆಯನ್ನು ಬಿಟ್ಟು ಮತ್ತೊಬ್ಬನೇ ಮಾರಕನಾಗುವುದು ಕಂಡಿದೆ.

**तत्वप्रकाशिका – नच रुद्रस्य संहर्तृत्वेऽत्यन्तसुप्रसिद्धेऽङ्गीकृते विरोधोऽस्ति । येन श्रुतेरन्यार्थता कल्प्यते ।**

ಲೋಕಪ್ರಸಿದ್ಧವಾದ ಸಂಹಾರಕರ್ತೃತ್ವವನ್ನು ರುದ್ರನಿಗೆ ಅಂಗೀಕಾರ ಮಾಡಿದರೆ ಯಾವುದೇ ವಿರೋಧವೂ ಕೂಡ ಇರುವುದಿಲ್ಲ. ಹಾಗೇನಾದರೂ ವಿರೋಧವಿದ್ದಲ್ಲಿ ಶ್ರುತಿಗೆ ಮತ್ತೊಂದು ಅರ್ಥವನ್ನು ಕಲ್ಪನೆ ಮಾಡಬಹುದಿತ್ತು.

**तत्वप्रकाशिका – नच श्रुतिविरोधः । तस्या युक्तिसहितैतच्छ्रुति-विरोधात् । न च भाक्तार्थत्वेनाविरोधः । युक्तिविरोधानिस्तारात् । अतो रुद्रस्यैव संहर्तृत्वादन्या श्रुतिरप्रमाणमेवेति न विष्णौ श्रुतिसमन्वयो युक्त इति भावः ।**

'ಯತ್‌ಪ್ರಯಂತಿ' ಇತ್ಯಾದಿ ಶ್ರುತಿಗಳ ವಿರೋಧವೂ ಕೂಡ ಬರುವುದಿಲ್ಲ. ಏಕೆಂದರೆ 'ರುದ್ರೋ ಮಾವಿಶಾಂತಕಃ' ಎಂಬ ಶ್ರುತಿಯಿಂದ 'ಯತ್‌ಪ್ರಯಂತಿ' ಎಂಬ ಶ್ರುತಿಯೇ ವಿರುದ್ಧವಾಗುತ್ತದೆ. 'ರುದ್ರೋ ಮಾ' ಇತ್ಯಾದಿ ಶ್ರುತಿಯಾದರೂ ಯುಕ್ತಿಯಿಂದ ಬಲಿಷ್ಠವಾಗಿದೆ.

ರುದ್ರನಿಗೆ ಸಂಹಾರಕರ್ತೃತ್ವವನ್ನು ಹೇಳುವ ಶ್ರುತಿಗೆ ಗೌಣಾರ್ಥವನ್ನು ಮಾಡಬಹುದಾದ್ದರಿಂದ ವಿರೋಧ ಬರುವುದಿಲ್ಲ ಎನ್ನಬಾರದು? ಯುಕ್ತಿಯ ವಿರೋಧವನ್ನು ಪರಿಹಾರ ಮಾಡಿದಂತಾಗುವುದಿಲ್ಲ. ಆದ್ದರಿಂದ ರುದ್ರನೇ ಸಂಹಾರಕನಾಗಿದ್ದಾನೆ. ಉಳಿದ ಶ್ರುತಿಗಳು ಅಪ್ರಮಾಣವಾಗಿವೆ. ಮಹಾವಿಷ್ಣುವಿನಲ್ಲಿ ಶ್ರುತಿಸಮನ್ವಯವು ಯುಕ್ತವಾಗುವುದಿಲ್ಲ ಎಂಬುದು ಪೂರ್ವಪಕ್ಷದ ಅಭಿಪ್ರಾಯ.

ವಿವರಣೆ - 'ರುದ್ರೋ ಮಾವಿಶಾಂತಕಃ' ಎಂಬ ಶ್ರುತಿಯು 'ಯತ್ರ ಉತ್ಪಾದಕತ್ವಂ ನ ತತ್ರ ಮಾರಕತ್ವಂ' ಎಂಬ ಯುಕ್ತಿಯಿಂದ ಉಪೋದ್‌ಬಲಿತವಾಗಿದೆ.

ರುದ್ರನಿಗೆ ಸಂಹಾರಕತ್ವವನ್ನು ಹೇಳುವ ಶ್ರುತಿಗೆ ಗೌಣಾರ್ಥವನ್ನು ಮಾಡಬಹುದು. ವಿಷ್ಣುವು ಯಾವ ಪದಾರ್ಥಗಳನ್ನು ಸಂಹಾರ ಮಾಡುತ್ತಾನೋ, ಅದನ್ನು ಬಿಟ್ಟು ಉಳಿದ ಪದಾರ್ಥಗಳನ್ನು ಸಂಹಾರ ಮಾಡುತ್ತಾನೆಂದು ಅಥವಾ ರುದ್ರನ ಮೂಲಕ ಸಂಹಾರ ಮಾಡುತ್ತಾನೆಂದು ಗೌಣಾರ್ಥ ಮಾಡಬಹುದಲ್ಲವೇ? ಎಂಬುದು ಪ್ರಶ್ನೆ. ಆದರೆ ಇದು ತಪ್ಪು. ಹೀಗೆ ಹೇಳಿದರೆ ಉತ್ಪಾದಕನಾದವನು ಸಂಹಾರಕನಾಗಲಾರ ಎಂಬ ಯುಕ್ತಿಯ ವಿರೋಧವು ಇದ್ದೇ ಇರುತ್ತದೆ.

**ತತ್ವಪ್ರಕಾಶಿಕಾ – रुद्र त्वं प्रामणानामाश्रयोऽन्तकश्चासि । स त्वं मा मां विश। आहुतिरूपेणान्नेन दत्तेन निमित्तेन । मामाप्यायस्वेत्यर्थः । सिद्धान्तयत्सूत्रमवतार्य व्याचष्टे ।। अत इति ।।**

ಓ ರುದ್ರನೇ, ನೀನು ಇಂದ್ರಿಯಗಳಿಗೆ ಆಶ್ರಯನಾಗಿರುವಿ, ಅಂತಕನೂ ಕೂಡ ಆಗಿರುವಿ. ಅಂತಹ ನೀನು ನನ್ನನ್ನು ಪ್ರವೇಶಿಸಬೇಡ. ಆಹುತಿರೂಪದಿಂದ ನೀಡಿದ ಅನ್ನದ ಕಾರಣದಿಂದ ನನಗೆ ಸಂತೋಷವನ್ನು ನೀಡು ಎಂಬುದು ಶ್ರುತಿಯ ಅರ್ಥ.

ಸಿದ್ಧಾಂತ ಸ್ಥಾಪಕವಾದ ಸೂತ್ರಕ್ಕೆ ಅವತಾರಿಕೆ ನೀಡಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಅತಃ' ಇತ್ಯಾದಿಯಾಗಿ.

**ತತ್ವಪ್ರಕಾಶಿಕಾ – विष्णुरेव संहारकर्ता । तस्याभिध्यानादिति श्रुतौ संसारमोक्षो भगवदभिध्यानात् भवतीति हि श्रूयते ।**

ವಿಷ್ಣುವೇ ಸಂಹಾರಕರ್ತೃ ಆಗಿದ್ದಾನೆ. 'ತಸ್ಯಾಭಿಧ್ಯಾನಾತ್' ಎಂಬ ಶ್ರುತಿಯಲ್ಲಿ ಸಂಸಾರದಿಂದ ಮೋಕ್ಷವು ಭಗವಂತನ ಇಚ್ಛೆಯಿಂದ ಉಂಟಾಗುತ್ತದೆಂದು ಕೇಳಿ ಬರುತ್ತಿದೆ.

ವಿವರಣೆ - 'ತದಭಿಧ್ಯಾನನಿಮಿತ್ತತ್ವಲಿಂಗಾತ್ ತತ್‌ಕರ್ತೃಕತ್ವಂ' ಎಂಬ ಭಾಷ್ಯವನ್ನು 'ತದಿಚ್ಛಾಧಿ ೕನತ್ವಲಿಂಗೇನ' ಎಂಬ ಟೀಕಾ ವಾಕ್ಯದಿಂದ ವ್ಯಾಖ್ಯಾನ ಮಾಡಿದ್ದಾರೆ.

ತದಭಿಧ್ಯಾನಾಧಿಕರಣ (೨-೩-೭)

ಸಂಸಾರದಿಂದ ಮೋಕ್ಷವು ಭಗವಂತನ ಇಚ್ಛೆಯಿಂದಲೇ ಆಗುತ್ತದೆಂಬುದು ಶ್ರುತಿಸಿದ್ಧವಾಗಿದೆ ಎಂದು ಹೇಳಿದರೆ. ಭಗವಂತನ ಕರ್ತೃತ್ವವು ಆಗಮದಿಂದಲೇ ಪ್ರಾಪ್ತವಾಯಿತು. ಆಗ ತದಿಚ್ಛಾಧೀನತ್ವಲಿಂಗದಿಂದ ಅನುಮಾನ ಮಾಡಲು ಹೇಗೆ ಸಾಧ್ಯವಾಗುತ್ತದೆ?

ಎಂದರೆ ಇಚ್ಛೆಯಿಂದ ಸಂಸಾರಬಂಧನ ಹಾಗೂ ಲಯಗಳು ಉಂಟಾಗುತ್ತವೆಂದು ಹೇಳಲಾಯಿತು. ಇದು ಯುಕ್ತವಾಗುವುದಿಲ್ಲ. ಏಕೆಂದರೆ ಪ್ರಯತ್ನ ಮಾಡದೇ ಕೇವಲ ಇಚ್ಛೆಯಿಂದ ಕಾರ್ಯವಾಗುವುದು ಕಂಡಿಲ್ಲ. ಈ ಆಕ್ಷೇಪದ ಪರಿಹಾರಕ್ಕಾಗಿ ಅನುಮಾನವನ್ನು ಮಾಡಲೇಬೇಕು.

**तत्वप्रकाशिका – किं चातः तदिच्छाधीनत्वलिङ्गेन तत्कृतोऽनुमीयते । एवं चानादेर्बन्ध(न)स्य लयकर्ता सुतरां सादेर्जगतः संहारकर्तेति सिध्यतीत्यर्थः । भगवति मनोयोजनाद् भूयो भूयो यथार्तध्यानाच्च जाताद्भगवदभिध्यानात् परिपाककाले विश्वबन्धकमायानिवृत्तिर्भवतीत्यर्थः ।**

ಮತ್ತು ತದಿಚ್ಛಾಧೀನತ್ವಲಿಂಗದಿಂದ ಭಗವಂತನೇ ಸಂಹಾರಕಾರಣನಾಗಿದ್ದಾನೆಂದು ಅನುಮಾನ ಮಾಡುತ್ತೇವೆ. ಅನಾದಿಯಾದ ಬಂಧವನ್ನು ಸಂಹಾರ ಮಾಡುವ ಶ್ರೀಹರಿಯು ಸಾದಿಯಾದ ಜಗತ್ತಿನ ಸಂಹಾರಕನೂ ಕೂಡ ಆಗಿದ್ದಾನೆಂಬರ್ಥವು ಸಿದ್ಧವಾಯಿತು.

ಭಗವಂತನಲ್ಲಿ ಮನಸ್ಸನ್ನು ಸಂಯೋಜನೆ ಮಾಡುವುದರಿಂದ ಪುನಃ ಪುನಃ ಅವನನ್ನೇ ಧ್ಯಾನ ಮಾಡುವುದರಿಂದ ಭಗವದನುಗ್ರಹವು ಉಂಟಾಗುತ್ತದೆ. ಅನಂತರ ಪರಿಪಕ್ವಕಾಲದಲ್ಲಿ ಜಗತ್ತಿಗೆ ಬಂಧಕವಾದ ಅಜ್ಞಾನದ ನಿವೃತ್ತಿಯು ಆಗುತ್ತದೆಂಬುದು ಶ್ರುತಿಯ ಅರ್ಥ.

ವಿವರಣೆ - 'ಸಂಸಾರಮೋಕ್ಷಃ ಭಗವದಿಚ್ಛಾಭಿಜ್ಞಾನಾತ್ ಭವತಿ ತದಿಚ್ಛಾಧೀನತ್ವಾತ್' ಎಂಬ ಅನುಮಾನದಿಂದ ಸಂಹಾರವು ಭಗವಂತನಿಂದಲೇ ಆಗುತ್ತದೆಂದು ಸಿದ್ಧವಾಗುತ್ತದೆ.

ಅಭಿಧ್ಯಾನ ಎಂಬ ಶಬ್ದಕ್ಕೆ ಇಚ್ಛೆ ಎಂದರ್ಥ. ಸೂತ್ರದಲ್ಲಿರುವ 'ತು' ಶಬ್ದವು ಇಚ್ಛೆಯಲ್ಲಿರುವ ಧರ್ಮವಿಶೇಷವನ್ನು ಹೇಳುತ್ತಿದೆ. 'ಏವ' ಶಬ್ದವು ಕೈಮುತ್ಯವನ್ನು ಸೂಚಿಸುತ್ತಿದೆ. ತಲ್ಲಿಂಗಾತ್ ಎಂಬಲ್ಲಿರುವ 'ತತ್' ಶಬ್ದವು ಜಗತ್ಕರ್ತೃತ್ವವನ್ನು ತಿಳಿಸುತ್ತಿದೆ. 'ಸಃ' ಎಂಬ ಶಬ್ದವು ವಿಷ್ಣುವನ್ನು ಹೇಳುತ್ತಿದೆ. ಆದ್ದರಿಂದ ಬಂಧದ ನಾಶಕ್ಕೆ 'ತಸ್ಯಾಭಿಧ್ಯಾನಾತ್' ಎಂಬ ಶ್ರುತಿಯಲ್ಲಿ ವಿಷ್ಣುವಿನ ಇಚ್ಛೆಯೇ ಕಾರಣವೆಂದು ಹೇಳಿರುವುದರಿಂದ ಅವನ ಇಚ್ಛೆಗೆ ಅಧೀನವಾಗಿದೆ ಎಂಬ ಹೇತುವಿನ ಮೂಲಕ ವಿಷ್ಣುವು ಬಂಧಕ್ಕೆ ಸಂಹಾರಕನಾಗಿದ್ದಾನೆಂದು ಅನುಮಾನದಿಂದ ಸಿದ್ಧವಾಗುತ್ತದೆ. ಇಂತಹ ವಿಷ್ಣುವೇ ಸಾದಿಯಾದ ಜಗತ್ತಿಗೂ ಕೂಡ ಸಂಹಾರಕನಾಗಿದ್ದಾನೆಂಬುದು ಕೈಮುತ್ಯ ನ್ಯಾಯದಿಂದ ಸಿದ್ಧವಾಗುತ್ತದೆ. ಹೀಗೆ ಸೂತ್ರದ ಅರ್ಥವನ್ನು ಭಾಷ್ಯದಲ್ಲಿ ವ್ಯಾಖ್ಯಾನ ಮಾಡಿದ್ದನ್ನು ಟೀಕೆಯಲ್ಲಿ ಸ್ಪಷ್ಟಪಡಿಸಿದ್ದಾರೆ.

**तत्वप्रकाशिका – नन्वस्तु विष्णोरनादिभवभेत्तुर्विश्वसंहारे सामर्थ्यं । संहर्तृत्वं कुत इत्यत आह – इत्येतस्मादिति ।।**

ಅನಾದಿಯಾದ ಸಂಸಾರಕ್ಕೆ ವಿಷ್ಣುವೇ ನಾಶಕನಾಗಲಿ, ಆದರೆ ಸಮಗ್ರ ವಿಶ್ವದ ಸಂಹಾರವನ್ನು ಮಾಡಲು ಸಾಮರ್ಥ್ಯವನ್ನು ಏಕೆ ಒಪ್ಪಬೇಕು? ಸಂಹಾರಕರ್ತೃತ್ವಕ್ಕೆ ಏನು ಆಧಾರ? ಎಂಬ ಪ್ರಶ್ನೆಗೆ 'ಇತ್ಯೇತಸ್ಮಾತ್' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

ವಿವರಣೆ - ಸೂತ್ರದಲ್ಲಿರುವ 'ಏವ' ಶಬ್ದವನ್ನು ಎರಡುಬಾರಿ ವಿವಕ್ಷಿಸಿದಾಗ ಕೈಮುತ್ಯನ್ಯಾಯವು ಲಭಿಸುತ್ತದೆ. ಲಿಂಗದಿಂದಲೇ ಸಂಹಾರಕರ್ತೃವು ವಿಷ್ಣುವೇ ಆಗಿದ್ದಾನೆಂದು ಸಿದ್ಧವಾಗುವಾಗ ಸ್ಪಷ್ಟ ಶ್ರುತಿಯು ಇದ್ದಾಗ ಪುನಃ ಇದನ್ನು ಪ್ರತ್ಯೇಕವಾಗಿ ಹೇಳಬೇಕೇನು? ಎಂಬುದು ಕೈಮುತ್ಯನ್ಯಾಯ. ಸ್ಪಷ್ಟವಾದ ಒಂದೇ ಶ್ರುತಿಯಿಂದ ಸಂಹಾರಕರ್ತೃತ್ವವು ವಿಷ್ಣುವಿನಲ್ಲಿ ಸಿದ್ಧವಾಗುವಾಗ ಅನೇಕ ಶ್ರುತಿಗಳು ಅದನ್ನೇ ಹೇಳುತ್ತಿರುವಾಗ ಈ ವಿಷಯವನ್ನು ಪ್ರತ್ಯೇಕವಾಗಿ ಹೇಳಬೇಕೇನು? ಎಂಬುದು ಮತ್ತೊಂದು ಕೈಮುತ್ಯನ್ಯಾಯ. ಈ ಎರಡು ಕೈಮುತ್ಯನ್ಯಾಯಗಳನ್ನು 'ಏವ'ಕಾರವು ಸೂಚಿಸುತ್ತಿದೆ.

**तत्वप्रकाशिका – उक्तादेतस्मादेव हेतोः संहारकर्ता विष्णुरिति प्रतीयते। शक्तस्यैव तत्सम्भवात् । अथैतावताप्यपरितोषे सुतरां स्पष्टश्रुतिभ्यो ज्ञायत इत्यर्थः। इत्यर्थमेवशब्दः सूचयतीति शेषः । विष्णोरेव संहर्तृत्वे प्रागुक्तश्रुतिविरोध इत्यत आह – स्रष्टेति ।।**

ಹಿಂದೆ ಹೇಳಿದ ಹೇತುವಿನಿಂದಲೇ ಸಂಹಾರಕರ್ತೃವು ವಿಷ್ಣುವೇ ಆಗಿದ್ದಾನೆಂದು ತಿಳಿಯುತ್ತದೆ. ಸಮರ್ಥನಾದವನಲ್ಲಿಯೇ ಸಂಹಾರಕರ್ತೃತ್ವವು ಕೂಡುತ್ತದೆ.

ಇಷ್ಟು ಸಮರ್ಥನೆ ಮಾಡಿದರೂ ಮನಸ್ಸಿಗೆ ಸಂತೋಷವಾಗದಿದ್ದಾಗ ಅತ್ಯಂತ ಸ್ಪಷ್ಟವಾಗಿ ಹೇಳುವ ಶ್ರುತಿಗಳಿಂದಲೂ ಈ ವಿಷಯವು ತಿಳಿಯುತ್ತದೆಂಬುದು ಅಭಿಪ್ರಾಯ.

ಈ ಅರ್ಥವನ್ನು ಸೂತ್ರದಲ್ಲಿರುವ 'ಏವ' ಶಬ್ದವು ಸೂಚನೆ ಮಾಡುತ್ತಿದೆ. ವಿಷ್ಣುವೇ ಸಂಹಾರಕನಾದರೆ ಹಿಂದೆ ಹೇಳಿದ 'ರುದ್ರೋ ಮಾವಿಶಾಂತಕಃ' ಎಂಬ ಶ್ರುತಿಯ ವಿರೋಧ ಬರುತ್ತದಲ್ಲವೇ? ಎಂಬ ಆಕ್ಷೇಪಕ್ಕೆ 'ಸ್ರಷ್ಟಾ ಪಾತಾ' ಎಂಬ ಶ್ರುತಿಯಲ್ಲಿ ಉಲ್ಲೇಖಿಸುವ ಮೂಲಕ ಉತ್ತರಿಸುತ್ತಿದ್ದಾರೆ.

**तत्वप्रकाशिका – अत्र परतन्त्रेऽपि । सृष्ट्यादिकमितिं पूर्वत्र सम्बध्यते । परतन्त्रसंहर्तृत्वपरा श्रुतिरिति भावः । पारतन्त्र्यं च संहारद्वारत्वमिति भावेनाह – निमित्तेति ।।**

ಸ್ಮೃತಿಯಲ್ಲಿರುವ 'ಅತ್ರ' ಎಂಬ ಪದಕ್ಕೆ ಪರತಂತ್ರಚೇತನರಲ್ಲಿಯೂ ಕೂಡ ಎಂದರ್ಥ. 'ಸ್ರಷ್ಟ್ಯಾದಿಕಂ' ಎಂಬುದು ಹಿಂದೆಯೂ ಅನ್ವಯವನ್ನು ಹೊಂದುತ್ತದೆ. ಪರತಂತ್ರಸಂಹರ್ತೃತ್ವ ಪರವಾಗಿದೆ ಶ್ರುತಿ ಎಂದರ್ಥ. ಪಾರತಂತ್ರ್ಯವು ಸಂಹಾರದ್ವಾರಾ ತಿಳಿಯಬೇಕೆಂದು 'ನಿಮಿತ್ತ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

ವಿವರಣೆ-'ಏಕದೇಶಕ್ರಿಯಾಚಾತ್ರ'ಎಂಬಲ್ಲಿರುವ'ಅತ್ರ'ಎಂಬಶಬ್ದಕ್ಕೆಪರತಂತ್ರಚೇತನರಲ್ಲಿಯೂ ಎಂದರ್ಥ. ಮತ್ತು ಇಲ್ಲಿ ಸೃಷ್ಟ್ಯಾದಿಕಂ ಎಂಬ ಕ್ರಿಯೆಯನ್ನು ಇಟ್ಟುಕೊಳ್ಳಬೇಕು. ಆಗ ಪರತಂತ್ರಚೇತನವರ್ಗದಲ್ಲಿ ಜಗತ್ತಿನ ಒಂದು ಭಾಗದ ಸಂಬಂಧಪಟ್ಟ ಸೃಷ್ಟ್ಯಾದಿಗಳನ್ನು ಹೇಳಲ್ಪಟ್ಟಿಲ್ಲ. ಸಮಸ್ತ ಜಗತ್ತಿನ ಸೃಷ್ಟ್ಯಾದಿಗಳನ್ನು ಹೇಳಿದಂತಾಗುತ್ತದೆ.

ತದಭಿಧ್ಯಾನಾಧಿಕರಣ (೨-೩-೭)

**तत्वप्रकाशिका – काल इत्याख्यारूपे यस्यासौ तथोक्तः । रूपस्य कालत्वं संहर्तृत्वादिगुणसम्पन्नत्वम् । स्मृतेर्मूलभूतां श्रुतिं चाह – स इति ।।**

ಭಾಗವತದಲ್ಲಿರುವ 'ಕಾಲಾಖ್ಯರೂಪಿಣಃ' ಎಂಬುದಕ್ಕೆ 'ಕಾಲ ಇತಿ ಆಖ್ಯಾ ಯಸ್ಯಾಸೌ' ಎಂಬ ನಿಷ್ಪತ್ತಿಯಂತೆ ಕಾಲ ಎಂಬ ಹೆಸರು ಮತ್ತು ರೂಪವನ್ನು ಪಡೆದಿರುವವನು ಎಂದರ್ಥ. ರೂಪಕ್ಕೆ ಕಾಲತ್ವ ಎಂದರೆ ಸಂಹರ್ತೃತ್ವಾದಿ ಗುಣಗಳಿರುವಿಕೆ ಎಂದರ್ಥ. ಸ್ಮೃತಿಗೆ ಮೂಲಭೂತವಾದ ಶ್ರುತಿಯನ್ನು 'ಸಃ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

ವಿವರಣೆ - 'ಆಖ್ಯ' ಎಂದರೆ ಹೆಸರು ಎಂದರ್ಥ. ಆದ್ದರಿಂದ ಭಗವಂತನಿಗೆ ಕಾಲ ಎಂದು ಹೆಸರಿದೆ ಮತ್ತು ರೂಪವಿದೆ ಎಂದು ತಿಳಿಯಬೇಕು. ರೂಪವನ್ನು ಸಂಹಾರಕರ್ತೃ ಎಂದಿದ್ದಾರೆ. ಜಗತ್ಬಂಧಕತ್ವ, ಸಂಸಾರಹೇತುತ್ವ ಮೊದಲಾದ ಧರ್ಮವಿಶಿಷ್ಟವಾದ ರೂಪವು ಭಗವಂತನ ಆಕಾರ ಎಂದು ತಿಳಿಯಬೇಕು. ರೂಪವೇ ಕಾಲ ಎನಿಸಿದರೆ ಪುನಃ ಕಾಲ ಎಂಬ ಹೆಸರು ಪುನರುಕ್ತವಾಗುತ್ತದಲ್ಲವೇ? ಎಂಬ ಪ್ರಶ್ನೆಗೆ 'ರೂಪಸ್ಯ ಕಾಲತ್ವಂ' ಎಂಬ ಟೀಕಾವಾಕ್ಯವು ಹೊರಟಿದೆ. (ವಾಕ್ಯಾರ್ಥ ಮುಕ್ತಾವಳಿ).

**तत्वप्रकाशिका – न चोक्तयुक्तिविरोधः । ममत्वादिदोषराहित्येन लोकपितृवैलक्षण्याद्विष्णोर्लोकविरोधस्यादोषत्वात् । अतः श्रुत्यविरोधेन संहारस्य भगवत्कर्तृत्वसिद्धेर्युक्तस्तस्मिन् श्रुतिसमन्वय इति सिद्धम् ।। १३ ।।**

ಹಿಂದೆ ಹೇಳಲ್ಪಟ್ಟ ಯುಕ್ತಿಯ ವಿರೋಧವು ಬರುವುದಿಲ್ಲ. ಏಕೆಂದರೆ 'ಮಮತಾ' ಮೊದಲಾದ ದೋಷಗಳು ಇಲ್ಲದ ಕಾರಣ ಲೋಕದಲ್ಲಿರುವ ತಂದೆಗಿಂತ ವೈಲಕ್ಷಣ್ಯವು ವಿಷ್ಣುವಿನಲ್ಲಿದೆ. ಆದ್ದರಿಂದ ಲೋಕವಿರೋಧವು ದೋಷವೇ ಆಗುವುದಿಲ್ಲ. ಹೀಗೆ ಶ್ರುತಿಯ ವಿರೋಧವಿಲ್ಲದ ಕಾರಣ ಸಂಹಾರವು ಭಗವಂತನಿಂದಲೇ ಆಗುತ್ತದೆಂಬುದು ಸಿದ್ಧವಾಯಿತು. ಆದ್ದರಿಂದ ಆ ಭಗವಂತನಲ್ಲಿ ಶ್ರುತಿಸಮನ್ವಯವೂ ಕೂಡ ಅವಿರುದ್ಧವಾಗಿ ಸಿದ್ಧವಾಯಿತು.

ವಿವರಣೆ - 'ಭಗವಾನ್ ನ ಸಂಹರ್ತಾ ತದುತ್ಪಾದಕತ್ವೇನ ತತ್‌ಸೃಷ್ಟಿತ್ವಾತ್ ಲೋಕಪಿತೃವತ್' ಲೋಕದಲ್ಲಿರುವ ತಂದೆಯು ಪುತ್ರನಿಗೆ ಉತ್ಪಾದಕನಾಗಿ ಅವನಿಗೆ ತಂದೆಯಾಗಿದ್ದಾನೆ. ಆದ್ದರಿಂದ ಅವನಿಗೆ ಸಂಹಾರಕನಾಗಿರುವುದಿಲ್ಲ. ಅದರಂತೆ ಭಗವಂತನು ಜಗತ್ತಿಗೆ ಉತ್ಪಾದಕನಾಗಿ ತತ್-ಪಿತೃನಾಗಿರುವುದರಿಂದ ಸಂಹಾರಕನಾಗಿರುವುದಿಲ್ಲ. ಹೀಗೆ ಲೋಕದಲ್ಲಿರುವ ತಂದೆಯ ದೃಷ್ಟಾಂತದಂತೆ ಭಗವಂತನು ಜಗತ್ತಿನ ಸಂಹಾರಕನಲ್ಲವೆಂಬುದು ಯುಕ್ತಿಸಿದ್ಧವಾಗಿದೆ. ಒಂದುವೇಳೆ ಪರಮಾತ್ಮನೇ ಸಂಹಾರಕನೆಂದು ಒಪ್ಪಿದರೆ ಈ ಯುಕ್ತಿಯವಿರೋಧವು ಬರುತ್ತದೆಂಬುದು ಆಕ್ಷೇಪದ ಅಭಿಪ್ರಾಯ. ಆದರೆ ಇದು ಸರಿಯಲ್ಲ. ಏಕೆಂದರೆ ಲೋಕದಲ್ಲಿ 'ಮಮತಾ' ಮೊದಲಾದ ದೋಷಗಳಿವೆ. ಭಗವಂತನಲ್ಲಿ ಈ ದೋಷಗಳಿಲ್ಲದಿರುವುದರಿಂದ ಉತ್ಪಾದಕನೂ ಆಗಿದ್ದಾನೆ, ಸಂಹಾರಕನೂ ಆಗಿದ್ದಾನೆಂಬುದು ಸಿದ್ಧವಾಗುತ್ತದೆ.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ತದಭಿಧ್ಯಾನಾಧಿಕರಣ ಮುಗಿಯಿತು

ತದಭಿಧ್ಯಾನಾಧಿಕರಣ

(೨-೩-೭)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## ತದಭಿಧ್ಯಾನಾಧಿಕರಣ

**तदभिध्यानादेव तु तल्लिङ्गात्सः ।। अधिकरणसङ्गतिमाह – एवमिति ।।**

ಅಧಿಕರಣ ಸಂಗತಿಯನ್ನು ಹೇಳುತ್ತಿದ್ದಾರೆ 'ಏವಂ' ಎಂಬುದಾಗಿ.

**अत्र पूर्वोक्तं विष्णोः सर्वसंहर्तृत्वं किं रुद्रस्य सर्वसंहर्तृत्वश्रुतिविरुद्धं न वेति चिन्ता ।**

ಹಿಂದೆ ಜನ್ಮಾದಿಸೂತ್ರದಲ್ಲಿ ವಿಷ್ಣುವೇ ಸಂಹಾರಕರ್ತಾ ಎಂದು ಹೇಳಿದ್ದಾರೆ. ಅದು ರುದ್ರನೇ ಸಂಹಾರಕರ್ತಾ ಎಂದು ಹೇಳುವ ಶ್ರುತಿಗೆ ವಿರುದ್ಧವೋ ? ಅಲ್ಲವೋ ? ಎಂಬದು ಪ್ರಶ್ನೆ.

**तदर्थं ''प्राणानां ग्रन्थिरसि रुद्रो मा विशान्तक'' इति रुद्रस्य संहर्तृत्वश्रुतिः किं स्वातन्त्र्येण सर्वसंहर्तृत्वपरा उत कतिपयसंहारे रुद्रस्य द्वारत्वमात्रपरेति ।**

ಈ ಪ್ರಶ್ನೆಯ ಪರಿಹಾರಕ್ಕಾಗಿ ಪುನಃ ರುದ್ರನಿಗೆ ಸಂಹಾರಕರ್ತೃತ್ವವನ್ನು ಹೇಳುವ ಶ್ರುತಿ 'ಪ್ರಾಣಾನಾಂ ಗ್ರಂಥಿರಸಿ ರುದ್ರೋ ಮಾ ವಿಶಾಂತಕಃ' ಎಂಬುದು. ರುದ್ರನು ಸ್ವತಂತ್ರವಾಗಿ ಸಂಹಾರಕರ್ತಾ ಎಂದು ಹೇಳುತ್ತಿದೆಯೋ ಅಥವಾ ಕೆಲವು ರೀತಿಯ ಸಂಚಾರದಲ್ಲಿ ರುದ್ರನು ದ್ವಾರಮಾತ್ರ (ಅಪ್ರಧಾನ) ಎಂದು ಹೇಳುತ್ತಿದೆಯೋ ? ಎಂಬುದು ಪ್ರಶ್ನೆ.

**तदर्थं पितुरन्यस्यैव मारकत्वदर्शनयुक्त्यनुगृहीता रुद्रस्य संहर्तृत्वश्रुतिः किं ''यमप्येति भुवनं सांपराये स नो हरिः'' इति विष्णोः सर्वसंहर्तृत्वश्रुतितः प्रबलोत नेति ।**

ಇದರ ಮೇಲೆ, ರುದ್ರನು ಸಂಹಾರಕ ಎಂಬ ಶ್ರುತಿಯು ಯುಕ್ತಿಯ ಸಹಾಯ ಹೊಂದಿದೆ. ಆ ಯುಕ್ತಿ ಏನೆಂದರೆ ಜಗತ್ತಿನಲ್ಲಿ ತಂದೆಗಿಂತ (ಹುಟ್ಟಿಸಿದವನಿಂತ) ಬೇರೆಯಾದವರೇ ಸಂಹಾರಕರಾಗಿರುವುದು ಕಂಡಿದೆ, ಎಂಬುದೇ. ಹಾಗಾಗಿ ಈ ಶ್ರುತಿಯು ಯುಕ್ತಿಸಹಕೃತವಾದ್ದರಿಂದ

ವಿಷ್ಣುವಿಗೆ ಸಂಹಾರಕತ್ವವನ್ನು ಹೇಳುವ ಶ್ರುತಿಗಿಂತ ಪ್ರಬಲವೋ, ದುರ್ಬಲವೋ ಎಂಬುದು ಸಂಶಯ. ವಿಷ್ಣುವಿಗೆ ಸರ್ವಸಂಹಾರ- ಕರ್ತೃತ್ವವನ್ನು ಹೇಳುವ ಶ್ರುತಿ - 'ಯಮಪ್ಯೇತಿ ಭುವನಂ ಸಾಂಪರಾಯೇ ಸ ನೋ ಹರಿಃ' ಎಂಬುದು.

**तदर्थं लोके पितुरमारकत्वे पितृत्वमेव तन्त्रं (उत्पादकस्यामारकत्वे किमुत्पादकत्वमेव प्रयोजकम्) किं वा ममतादिदोषयुक्तत्वमिति ।**

ಇದರ ಮೇಲೆ ಲೋಕದಲ್ಲಿ ತಂದೆಯೇ ಮಗನನ್ನು ಕೊಲ್ಲದಿರುವುದಕ್ಕೆ ಕಾರಣ ಅವನು ಮಗನಿಗೆ ಜನಕನಾಗಿರುವುದೋ, ಅಥವಾ ಮಗನ ಮೇಲೆ ಮಮತೆಯೇ ಮೊದಲಾದ ದೋಷ ಇರುವುದೋ? ಎಂಬುದು ಸಂಶಯ.

ವಿವರಣೆ - ಇಲ್ಲಿ ಫಲಫಲಿಭಾವ ಹೀಗೆ - ಪೂರ್ವಪಕ್ಷ ಪ್ರಕಾರ ತಂದೆಯು ಜನಕನಾಗಿರುವುದರಿಂದಲೇ ಮಾರಕನಲ್ಲ. ಆದ್ದರಿಂದ ಯುಕ್ತಿ ಸಾಧುವಾಗಿದೆ. ಅದರ ಅನುಗ್ರಹ ಹೊಂದಿರುವ ಶ್ರುತಿ (ರುದ್ರನಿಗೆ ಸಂಹಾರಕರ್ತೃತ್ವ ಹೇಳುವ) ಪ್ರಬಲ. ಅದು ರುದ್ರನಿಗೆ ಸ್ವತಂತ್ರವಾಗಿ ಸಂಹಾರಕತ್ವವನ್ನು ಹೇಳುತ್ತಿದೆ. ಹಾಗಾಗಿ ಹಿಂದೆ ವಿಷ್ಣುವಿಗೆ ಸರ್ವಸಂಹರ್ತೃತ್ವವನ್ನು ಹೇಳಿದ್ದು ವಿರುದ್ಧ.

ಸಿದ್ಧಾಂತ ಪ್ರಕಾರ - ತಂದೆಯು ಮಗನನ್ನು ಕೊಲ್ಲದಿರುವುದಕ್ಕೆ ಅವನಿಗೆ ಮಗನ ಮೇಲಿರುವ ಅತಿಶಯವಾದ ಮಮತೆಯೇ ಕಾರಣ. ಹಾಗಾಗಿ ಪೂರ್ವಪಕ್ಷದವರ ಯುಕ್ತಿ ಅಪ್ರಯೋಜಕ. ಹಾಗಾಗಿ ರುದ್ರನಿಗೆ ಸಂಹಾರಕತ್ವವನ್ನು ಹೇಳುವ ಶ್ರುತಿ ದುರ್ಬಲ. ಹಾಗಾಗಿ ರುದ್ರನು ಸಂಹಾರದಲ್ಲಿ ದ್ವಾರಮಾತ್ರನಾಗಿದ್ದಾನೆ. ಸ್ವತಂತ್ರನಲ್ಲ. ಹಾಗಾಗಿ ಹಿಂದೆ ವಿಷ್ಣುವಿಗೆ ಸರ್ವಸಂಹರ್ತೃತ್ವ ಹೇಳಿದ್ದು ಸರಿಯಾಗಿದೆ.

**यद्यपि सृष्टेरनन्तरा स्थितिः तथापि विष्णोः स्थितिहेतुतायामविवादात्पितुरन्यस्यैव मारकत्ववत्स्थापकत्वस्यादृष्टेश्च सृष्ट्यनन्तरं लयविचारो युक्तः ।**

ಪ್ರಶ್ನೆ - ಹಿಂದೆ ಜಗತ್ತಿನಲ್ಲಿ ಸೃಷ್ಟಿಕರ್ತಾ ವಿಷ್ಣುವೋ, ಬೇರೆಯವರೋ? ಎಂಬ ವಿಚಾರ ಮಾಡಲಾಗಿದೆ. ಸೃಷ್ಟಿಯ ನಂತರ ಸ್ಥಿತಿ ಉಪಸ್ಥಿತವಾಗುತ್ತದೆ. ಹಾಗಾಗಿ ಸೃಷ್ಟಿ ವಿಚಾರದ ಮೇಲೆ ಸ್ಥಿತಿ ವಿಚಾರ ಮಾಡಬೇಕಿತ್ತು. ಅದನ್ನು ಬಿಟ್ಟು ಲಯವಿಚಾರ ಮಾಡುತ್ತಿರುವುದು ಸರಿಯಲ್ಲ.

ಉತ್ತರ - ನಿಜ, ಆದರೂ ವಿಷ್ಣುವು ಸ್ಥಿತಿಪ್ರದ ಅನ್ನುವ ವಿಷಯದಲ್ಲಿ ವಿವಾದವೇ ಇಲ್ಲ. ಮತ್ತೇನೆಂದರೆ ಯಾರು ಜನಕನೋ ಅವನಿಗಿಂತ ಬೇರೆಯವನೇ ಮಾರಕನಾಗಬೇಕು ಎಂಬ ಯುಕ್ತಿ ಇರುವಂತೆ ಯಾರು ಜನಕನೋ ಅವನಿಗಿಂತ ಬೇರೆಯವನೇ ಸ್ಥಾಪಕನಾಗಬೇಕು ಎಂಬ ಯುಕ್ತಿಗೆ ಅವಕಾಶವಿಲ್ಲ. ಯಾರು ಜನಕನೋ, ಅವನೇ ಪಾಲಕನೂ ಆಗಿರುವುದು ಲೋಕದಲ್ಲಿ ಸಿದ್ಧ. ಹಾಗಾಗಿ ಸೃಷ್ಟಿಯ ನಂತರ ಲಯ ವಿಚಾರ ಮಾಡಲಾಗುತ್ತಿದೆ.

**''पितुरन्यस्यैव मारकत्वदृष्टेः'' इति न्यायविवरणोक्तां पूर्वपक्षयुक्तिं विवृणोति – पितुरन्यस्यैवेत्यादिना ।।**

ನ್ಯಾಯವಿವರಣದಲ್ಲಿ ಹೇಳಿರುವ 'ಪಿತುರನ್ಯಸ್ಯೈವ ಮಾರಕತ್ವದೃಷ್ಟೇಃ' ಎಂಬ ಪೂರ್ವಪಕ್ಷದವರ ಯುಕ್ತಿಯನ್ನು ವಿವರಿಸುತ್ತಿದ್ದಾರೆ 'ಪಿತುರನ್ಯಸ್ಯೈವ' ಎಂಬುದಾಗಿ.

**अत्र पितृशब्देन न केवलं जनको विष्णुः किन्तु रक्षकश्च । नच रक्षकस्य संहर्तृत्वं युक्तमिति सूचितम् ।**

ನ್ಯಾಯವಿವರಣದ ವಾಕ್ಯದಲ್ಲಿರುವ ಪಿತೃ ಶಬ್ದದಿಂದ ಕೇವಲ ಜನಕನಾದ ವಿಷ್ಣು ಎಂದಷ್ಟೇ ಅರ್ಥ ಇಟ್ಟುಕೊಳ್ಳಬಾರದು. ರಕ್ಷಕನಾದ ವಿಷ್ಣು ಎಂದೂ ಗ್ರಹಿಸಬೇಕು. ಏಕೆಂದರೆ ಯಾರು ರಕ್ಷಕನೋ ಅವನು ಭಕ್ಷಕನಾಗಲು ಸಾಧ್ಯವಿಲ್ಲ ಎಂಬ ಯುಕ್ತಿಯೂ ಕೂಡ ಇದೆ. ಇದೂ ಕೂಡ ನ್ಯಾಯವಿವರಣದಲ್ಲಿ ಸೂಚಿತವಾಗಿದೆ.

**''तस्याभिध्यानात्'' इत्यस्येच्छावत्त्वरूपेऽभिध्यातृत्वे श्रुतित्वेऽपि जन्मादिसूत्रोक्ते प्रयत्नवत्त्वरूपे कर्तृत्वे लिङ्गत्वात्सूत्रे लिङ्गशब्दो युक्त इत्यभिप्रेत्य इच्छायाः प्रयत्ने लिङ्गत्वं प्रश्नपूर्वकं दर्शयति ।। किं चात इत्यादिना ।।**

ಪ್ರಶ್ನೆ - ಸೂತ್ರದಲ್ಲಿರುವ 'ಅಭಿಧ್ಯಾನ' ಶಬ್ದಕ್ಕೆ ಇಚ್ಛಾ ಎಂದರ್ಥ. ಸಂಹಾರದ ಅಭಿಧ್ಯಾನ ಅಂದರೆ ಭಗವಂತನಿಗೆ ಇಚ್ಛೆ ಇದೆ ಎಂಬ ವಿಷಯದಲ್ಲಿ 'ತಸ್ಯಾಭಿಧ್ಯಾನಾತ್' ಎಂಬ ಶ್ರುತಿಯು ಪ್ರಮಾಣವಾಗಿ ಹೇಳಲ್ಪಟ್ಟಿದೆ. ಹಾಗಾಗಿ ಭಗವಂತನಿಗೆ ಸಂಹಾರೇಚ್ಛಾ ಇದೆ ಎಂಬುದಕ್ಕೆ ಇಲ್ಲಿ ಕೊಟ್ಟಿರುವ ಶ್ರುತಿಯು ಶ್ರುತಿತ್ವೇನ ಪ್ರಮಾಣವಾಗುತ್ತದೆ. ಆದರೆ ಸೂತ್ರದಲ್ಲಿ ಲಿಂಗತ್ವೇನ ಪ್ರಮಾಣ ಎಂದು ಹೇಳಿರುವುದು ಸರಿಯಲ್ಲ.

ಉತ್ತರ - ನಿಜ, ಭಗವಂತನಿಗೆ ಸಂಹಾರದ ಇಚ್ಛೆ ಇದೆ ಎಂಬುದಕ್ಕೆ ಈ ಶ್ರುತಿಯು ಶ್ರುತಿತ್ವೇನ ಪ್ರಮಾಣವಾಗುತ್ತದೆ. ಆದರೆ ಭಗವಂತನು ಸಂಹಾರ ಪ್ರಯತ್ನವನ್ನು ಮಾಡುತ್ತಾನೆ ಎಂದು ಜನ್ಮಾದಿಸೂತ್ರದಲ್ಲಿ ಹೇಳಿದೆ. ಆ ವಿಷಯದಲ್ಲಿ ಈ ಶ್ರುತಿಯು ಲಿಂಗತ್ವೇನ ಪ್ರಮಾಣವಾಗುತ್ತದೆ. ಹಾಗಾಗಿ ಸೂತ್ರದಲ್ಲಿ 'ಲಿಂಗ'ಶಬ್ದವನ್ನು ಹಾಕಿದ್ದಾರೆ.

ವಿವರಣೆ - ಕರ್ತೃತ್ವ ಅನೇಕವಿಧ. ಇಚ್ಛಾವತ್ವ, ಪ್ರಯತ್ನವತ್ವ, ಕೃತಿಮತ್ವ ಎಂದು. ಈ ಶ್ರುತಿಯು ಭಗವಂತನಿಗೆ ಇಚ್ಛಾವತ್ವರೂಪವಾದ ಕರ್ತೃತ್ವ ಇದೆ ಎಂಬುದಕ್ಕೆ ಶ್ರುತಿತ್ವೇನ ಪ್ರಮಾಣವನ್ನು. ಪ್ರಯತ್ನವತ್ವರೂಪಕರ್ತೃತ್ವ ಇದೆ ಎನ್ನುವುದಕ್ಕೆ ಲಿಂಗತ್ವೇನ ಪ್ರಮಾಣವನ್ನು. ಸಂಹಾರದ ಇಚ್ಛೆ ಇರುವುದರಿಂದ ಸಂಹಾರ ಪ್ರಯತ್ನವನ್ನು ತಿಳಿಸುತ್ತಿದೆ.

ಈ ವಿಷಯವನ್ನೇ ಟೀಕಾಕಾರರು 'ಕಿಂ ಚಾತಃ' ಎಂಬುದರಿಂದ ತೋರಿಸುತ್ತಿದ್ದಾರೆ.

**तत्वभावादित्यस्य व्याख्या यथार्थध्यानादिति ।**

'ತತ್ವಭಾವಾತ್' ಎಂಬ ಶಬ್ದಕ್ಕೆ 'ಯಥಾರ್ಥಧ್ಯಾನಾತ್' ಎಂದರ್ಥ. 'ತತ್ವ' ಎಂದರೆ ಯಥಾರ್ಥ. ಭಾವ ಶಬ್ದಕ್ಕೆ ಧ್ಯಾನ ಎಂದರ್ಥ.

**ननु ''किमु सादेर्जगत'' इति पूर्वभाष्येऽनुषक्तेन ''तत्कर्तृत्वं प्रतीयत'' इत्यनेनैव जगत्संहर्तृतोक्ता । सैव ''इत्येतस्मादेव संहारकर्ता'' इत्युत्तरभाष्ये**

**संहारकर्तृत्वे हेतुत्वेनोच्येत । तदयुक्तम् । साध्यावैशिष्ट्यादित्याशङ्क्य पूर्ववाक्योक्त्या शकतयोत्तरवाक्योक्तः प्रयत्नः साध्यते । अतो न दोष इत्याह – कर्ता विष्णुरिति प्रतीयते ।**

ಪ್ರಶ್ನೆ - ಭಾಷ್ಯದಲ್ಲಿ ಭಗವಂತನು ಅನಾದಿ ಸಂಸಾರಬಂಧನವನ್ನೇ ನಾಶಮಾಡುತ್ತಾನಾದ್ದರಿಂದ ಈ ಸಾದಿಯಾದ ಜಗತ್ ಸಂಹಾರ ಮಾಡುತ್ತಾನೆಂದು ಮತ್ತೇನು ಹೇಳಬೇಕು ಎಂದಿದೆ. ಅಲ್ಲಿ 'ಕಿಮು ಸಾದೇರ್ಜಗತಃ' ಎಂಬಲ್ಲಿ ಹಿಂದಿರುವ 'ತತ್‌ಕರ್ತೃತ್ವಂ ಪ್ರತೀಯತೇ' ಎಂಬ ವಾಕ್ಯಖಂಡವನ್ನು ಅನುವೃತ್ತಿ ಮಾಡಿಕೊಂಡು, ಭಗವಂತನೇ ಸರ್ವಜಗತ್‌ಸಂಹಾರಕರ್ತಾ ಎಂದು ಸಾಧಿಸಲಾಗಿದೆ.

ಇದಾದ ಮೇಲೆ ಪುನಃ ಅದನ್ನೇ ಹೇತುವನ್ನಾಗಿಸಿಕೊಂಡು ಸಂಹಾರಕರ್ತಾ ಎಂದು ಹೇಳಲಾಗಿದೆ. ಆಗ ಹೇತುಸಾಧ್ಯಗಳು ಒಂದೇ ಆಗಿ ಸಾಧ್ಯಾವಿಶಿಷ್ಟತಾ ಎಂಬ ದೋಷ ಬರುತ್ತದೆ.

ವಿಶೇಷ - ಸಾಧ್ಯಾವಿಶಿಷ್ಟತಾ ಹೇಗೆಂದರೆ, 'ಭಗವಂತನು ಸರ್ವಜಗತ್‌ಸಂಹಾರಕನಾಗಿದ್ದಾನೆ ಸಾದಿಸರ್ವಜಗತ್‌ಸಂಹಾರಕನಾದ್ದರಿಂದ' ಎಂದು ಅನುಮಾನ ಪ್ರಯೋಗ ಮಾಡಿದರೆ ಆಗ ಹೇತು ಸಾಧ್ಯಗಳಲ್ಲಿ ವ್ಯತ್ಯಾಸವಿಲ್ಲ. ಸಾಧ್ಯ ಹೇಗೆ ಅಸಿದ್ಧವೋ, ಹಾಗೇ ಹೇತುವೂ ಅಸಿದ್ಧವಾಗುತ್ತದೆ ಎಂಬುದೇ ಇದರಲ್ಲಿ ದೋಷ.

ಉತ್ತರ - ಆಕ್ಷೇಪ ಸರಿಯಲ್ಲ. ಏಕೆಂದರೆ ಮೊದಲ ಅನುಮಾನ ಪ್ರಯೋಗದಿಂದ ಸಾಧನೆ ಮಾಡಿದ್ದು, ಭಗವಂತನಿಗೆ ಸರ್ವಜಗತ್‌ಸಂಹಾರಶಕ್ತಿ ಇದೆ ಎಂದು. ಅದನ್ನು ಹೇತುವಾಗಿಸಿಕೊಂಡು ಎರಡನೇ ಅನುಮಾನದಲ್ಲಿ ಸರ್ವಜಗತ್‌ಸಂಹಾರಕರ್ತಾ ಆಗಿದ್ದಾನೆ ಎಂದು ಸಾಧಿಸಿದ್ದು. ಹಾಗಾಗಿ ದೋಷವಿಲ್ಲ. ಪ್ರಯತ್ನವನ್ನೇ ಸಾಧಿಸಬೇಕಾದ್ದರಿಂದ ಟೀಕಾದಲ್ಲಿ 'ಕರ್ತಾ ವಿಷ್ಣುರಿತಿ ಪ್ರತೀಯತೇ' ಎಂದು ಹೇಳುತ್ತಿದ್ದಾರೆ.

**शक्तस्यैव तत्सम्भवादिति ।। अत्रेति भाष्यप्रतीकम् । तस्यार्थः परतन्त्रेऽपीति ।।**

ಸಂಹಾರಶಕ್ತಿಯುಳ್ಳವನೇ ಸಂಹಾರ ಪ್ರಯತ್ನ ಮಾಡಲು ಸಾಧ್ಯ, ಇಲ್ಲವಾದಲ್ಲಿ ಮಾಡಲಾರ. ಟೀಕಾದಲ್ಲಿ 'ಅತ್ರ' ಎಂದು ಭಾಷ್ಯ ಪ್ರತೀಕ ಗ್ರಹಣ ಮಾಡಿದ್ದಾರೆ. ಅದಕ್ಕೆ ಅರ್ಥವನ್ನು 'ಪರತಂತ್ರೇऽಪಿ' ಎಂದು ಹೇಳಿದ್ದಾರೆ.

**पूर्वत्र सम्बध्यत इति ।। पूर्वत्रापि सम्बध्यत इत्यर्थः । अन्यथा ''नतु सर्वात्मनेरितम्'' इत्यस्य पूर्वस्य विशेषणस्य ''एकदेशक्रिया च'' इत्यनेन विशेष्येणानन्वयादसङ्गतिः स्यात् । उत्तरं च समस्तमिति विशेषणं विशेष्यसाकाङ्क्षत्वादनन्वितं स्यादिति भावः ।**

ಟೀಕಾದಲ್ಲಿ 'ಪೂರ್ವತ್ರ ಸಂಬಧ್ಯತೇ' ಅಂದರೆ ಭಾಷ್ಯದಲ್ಲಿರುವ 'ಸೃಷ್ಟ್ಯಾದಿಕಂ' ಎಂಬ ಪದವು ಹಿಂದಕ್ಕೆ ಅನ್ವಯವಾಗುತ್ತದೆ ಎಂದರ್ಥ. ಅಂದರೆ 'ಏಕದೇಶಕ್ರಿಯಾ ಚಾತ್ರ ನ ತು ಸರ್ವಾತ್ಮನೇರಿತಮ್' ಎಂಬುದರ ಜೊತೆ ಅನ್ವಯವಾಗುತ್ತದೆ ಎಂದರ್ಥ. ಇಲ್ಲಿ 'ಪೂರ್ವತ್ರ' ಎಂಬುದಕ್ಕೆ ಪೂರ್ವತ್ರಾಪಿ' ಎಂದು ಪರಿಷ್ಕಾರ ಮಾಡಿಕೊಳ್ಳಬೇಕು. ಆಗ 'ಸೃಷ್ಟ್ಯಾದಿಕಂ' ಎಂಬುದು ಮುಂದೆಯೂ

ಅನ್ವಯವಾಗುತ್ತದೆ ಎಂದಾಗುತ್ತದೆ. ಆಗ 'ಸಮಸ್ತಂ' ಎಂಬ ಮುಂದಿನ ವಾಕ್ಯದ ಅರ್ಥ ಅನ್ವಿತವಾಗುತ್ತದೆ. ಹೀಗೆ ಅರ್ಥ ಮಾಡದೇ ಹೋದರೆ ಅನನ್ವಯ ಉಂಟಾಗುತ್ತದೆ.

**''लोकपितृवैरूप्याद्विष्णोः'' इति न्यायविवरणोक्तां सिद्धान्तयुक्तिं विवृणोति – ममत्वादिदोषराहित्येन लोकपितृवैलक्षण्यादिति ।।**

ಹಿಂದೆ ಪೂರ್ವಪಕ್ಷದವರು ಜನಕನು ಸಂಹಾರಕನಾಗಲು ಸಾಧ್ಯವಿಲ್ಲ ಎಂಬ ಯುಕ್ತಿ ಹೇಳಿದ್ದರು. ಆದರೆ ಭಗವಂತನು ಲೋಕದಲ್ಲಿನ ತಂದೆಗಿಂತ ವಿಭಿನ್ನ. ಅದನ್ನೇ ನ್ಯಾಯವಿವರಣದಲ್ಲಿ 'ಲೋಕಪಿತೃವೈಲಕ್ಷಣ್ಯಾತ್' ಎಂಬುದಾಗಿ ಹೇಳಿದ್ದಾರೆ. ಅಲ್ಲಿ ಹೇಳಿದ ಸಿದ್ಧಾಂತಯುಕ್ತಿಯನ್ನೇ ಟೀಕಾಕಾರರು ವಿವರಿಸುತ್ತಿದ್ದಾರೆ 'ಮಮತ್ವಾದಿದೋಷರಾಹಿತ್ಯೇನ' ಮುಂತಾಗಿ. ಭಗವಂತನಿಗೆ ಲೋಕಪಿತೃವಿನಂತೆ ಮಮತ್ವವೇ ಮೊದಲಾದ ದೋಷ ಇಲ್ಲವಾದ್ದರಿಂದ ಅವನು ವಿಲಕ್ಷಣಜನಕ. ಹಾಗಾಗಿ ಸಂಹಾರಕನೂ ಆಗುತ್ತಾನೆ.

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**तदभिध्यानात् ।। ''प्रकृताधिभूताधिदैवानि विषयः'' इत्यादिटीकां तात्पर्यतो विवृणोति – अत्रेति ।।**

ಟೀಕಾದಲ್ಲಿ ಹೇಳಿರುವ ಪ್ರಕೃತವಾದ ಅಧಿಭೂತ, ಅಧಿದೈವ ಇವೇ ಈ ಅಧಿಕರಣದ ವಿಷಯ ಎಂಬುದರ ತಾತ್ಪರ್ಯವನ್ನು ವಿವರಿಸುತ್ತಿದ್ದಾರೆ 'ಅತ್ರ' ಎಂಬುದಾಗಿ.

**प्रकाशः – पूर्वोक्तं जन्मादिसूत्रोक्तम् ।**

ಚಂದ್ರಿಕಾದಲ್ಲಿರುವ 'ಪೂರ್ವೋಕ್ತಂ' ಎಂಬುದರ ಅರ್ಥವನ್ನು 'ಜನ್ಮಾದಿಸೂತ್ರೋಕ್ತಂ' 'ಜನ್ಮಾದಿ ಸೂತ್ರದಲ್ಲಿ ಹೇಳಿದ' ಎಂಬುದು.

**प्रकाशः – ''प्राणानां ग्रन्थिरस'' इत्यादिभाष्यादिसूचितां चिन्तामाह – प्राणानामिति ।।**

'ಪ್ರಾಣಾನಾಂ ಗ್ರಂಥಿರಸಿ' ಎಂಬುದೇ ಮೊದಲಾದ ಭಾಷ್ಯದಲ್ಲಿ ಸೂಚ್ಯವಾಗಿ ಹೇಳಿರುವ ಎರಡನೇ ತದರ್ಥಚಿಂತಾವನ್ನು ಹೇಳುತ್ತಿದ್ದಾರೆ 'ಪ್ರಾಣಾನಾಮ್' ಎಂಬುದಾಗಿ.

**प्रकाशः – ''लोके पितुरन्यस्यैव'' इत्यादिटीकासूचितामाह – पितुरिति ।।**

'ಲೋಕೇ ಪಿತುರನ್ಯಸ್ಯೈವ' ಎಂಬುದಾಗಿ ಟೀಕಾದಲ್ಲಿ ಸೂಚಿಸಲಾಗಿರುವ ಚಿಂತಾವನ್ನು ಹೇಳುತ್ತಿದ್ದಾರೆ 'ಪಿತುಃ' ಎಂಬುದಾಗಿ.

**प्रकाशः – मारकत्वेति ।। सापेक्षत्वात्समासः ।**

'ಮಾರಕತ್ವದರ್ಶನಾತ್' ಎಂಬಲ್ಲಿ ಸಮಾಸ ಹೇಗೆ ? ಎಂಬ ಪ್ರಶ್ನೆ ಬಂದರೆ ಅದಕ್ಕೆ ಉತ್ತರ 'ನಿತ್ಯಸಾಪೇಕ್ಷತ್ವಾತ್' ಎಂಬುದಾಗಿ.

**ವಿವರಣೆ** - 'ಸಾಪೇಕ್ಷಮ್ ಅಸಮರ್ಥವದ್-ಭವತಿ' ಎಂಬ ವ್ಯಾಕರಣವಚನದಂತೆ ಸಾಪೇಕ್ಷವಾದ ಪದ ಇನ್ನೊಂದು ಪದದೊಡನೆ ಸಮಾಸವನ್ನು ಹೊಂದುವುದಿಲ್ಲ. ಪ್ರಕೃತ 'ಮಾರಕತ್ವ' ಎಂಬುದು ಸಾಪೇಕ್ಷವಾದ ಪದ. 'ಕಸ್ಯ' ಎಂಬ ಪ್ರಶ್ನೆ ಬರುತ್ತದೆ. 'ಗುರುಕುಲಂ' ಎಂಬಲ್ಲಿ ಗುರು ಪದದಂತೆ. ಯಾರ(ಕಸ್ಯ) ಗುರು ಎಂಬ ಆಕಾಂಕ್ಷೆ ಬರುವಂತೆ. ಆದರೆ ಎಲ್ಲಿ ಆ ಪದವು ನಿತ್ಯಸಾಪೇಕ್ಷವಾಗಿರುತ್ತದೋ ಅಲ್ಲಿ ಅದು ಸಮಾಸವನ್ನು ಹೊಂದಬಹುದು ಎಂಬ ನಿಯಮವೂ ಇದೆ. ಅದೇ ರೀತಿ ಇಲ್ಲಿಯೂ 'ಮಾರಕತ್ವ' ಎಂಬುದು ನಿತ್ಯಸಾಪೇಕ್ಷವಾದ ಪದ. ಹಾಗಾಗಿ ಸಮಾಸವನ್ನು ಹೊಂದಬಹುದು. ನಿಯಮೇನ 'ಯಾರಿಗೆ' ಎಂಬ ಪ್ರಶ್ನೆ ಬರುವುದರಿಂದ.

**प्रकाशः – ''ममत्वादिदोष'' इत्यादिसिद्धान्तटीकासुचितामाह – लोके पितुरिति ।।**

'ಮಮತ್ವಾದಿದೋಷಃ' ಎಂಬುದಾಗಿ ಸಿದ್ಧಾಂತಭಾಗದ ಟೀಕಾದಲ್ಲಿ ಸೂಚಿಸಲಾಗಿರುವ ಚಿಂತಾವನ್ನು ಹೇಳುತ್ತಿದ್ದಾರೆ 'ಲೋಕೇ ಪಿತುಃ' ಎಂಬುದಾಗಿ.

**प्रकाशः – लयचिन्ताया असङ्गतत्वमाशङ्क्य निराह – यद्यपीति ।।**

ಸೃಷ್ಟಿ ವಿಚಾರವಾದ ಮೇಲೆ ಲಯ ವಿಚಾರ ಮಾಡುವುದು ಅಸಂಗತ, ಸ್ಥಿತಿ ವಿಚಾರ ಮಾಡಬೇಕಿತ್ತು ಎಂಬ ಆಕ್ಷೇಪವನ್ನು ನಿರಾಕರಿಸುತ್ತಿದ್ದಾರೆ 'ಯದ್ಯಪಿ' ಎಂಬುದಾಗಿ.

**प्रकाशः – ''न स्वयमुत्पाद्य पालयितुर्विष्णोर्जगत्संहरणं न्याय्यम्'' इति तत्वप्रदीपदिशा पितृशब्दार्थमाह – अत्र पितृशब्देनेति ।।**

ತತ್ವಪ್ರದೀಪದಲ್ಲಿ 'ನ ಸ್ವಯಮುತ್ಪಾದ್ಯ ಪಾಲಯಿತುರ್ವಿಷ್ಣೋರ್ಜಗತ್‌ಸಂಹರಣಂ ನ್ಯಾಯ್ಯಮ್' ಎಂಬುದಾಗಿ ಪಿತೃಶಬ್ದಕ್ಕೆ ಪಾಲಯಿತಾ = ರಕ್ಷಿತಾ ಎಂಬರ್ಥ ಮಾಡಿದ್ದಾರೆ. ಅದರ ಪ್ರಕಾರ ಪಿತೃಶಬ್ದದ ಅರ್ಥ ಹೇಳುತ್ತಿದ್ದಾರೆ 'ಅತ್ರ ಪಿತೃಶಬ್ದೇನ' ಎಂಬುದಾಗಿ.

**प्रकाशः – पूर्वत्रेति ।। पूर्वत्रापीति कुतो व्याख्येत्यत आह – अन्यथेति ।।**

ಟೀಕಾದಲ್ಲಿ 'ಪೂರ್ವತ್ರ' ಎಂಬುದಕ್ಕೆ 'ಪೂರ್ವತ್ರಾಪಿ' ಎಂದು ಏಕೆ ಅರ್ಥ ಹೇಳಬೇಕು ಎಂದರೆ ಅದಕ್ಕೆ ಉತ್ತರ 'ಅನ್ಯಥಾ' ಎಂಬ ಗ್ರಂಥ ಹೇಳಿದೆ.

## तात्पर्यचन्द्रिका

**अन्ये तु ।। ''आकाशाद्वायुः'' इत्यादावाकाशाद्यभिमानिदेवानामीश्वरा नधिष्ठितानां स्वतन्त्राणामेवोत्तरोत्तरभूतकर्तृतोच्यत इति प्राप्ते ईश्वराधिष्ठितानां परतन्त्राणामेव सोच्यत इत्याहुः तन्न ।**

(ಪರಭಾಷ್ಯ ನಿರಾಕರಣೆ ಮಾಡುತ್ತಿದ್ದಾರೆ) 'ಆಕಾಶಾದ್ವಾಯುಃ' ಎಂಬಲ್ಲಿ ಆಕಾಶದಿಂದ ವಾಯು ಹುಟ್ಟಿತು ಎನ್ನುವಾಗ ಆಕಾಶಾಭಿಮಾನಿದೇವತೆಯಿಂದ ವಾಯುವಿನ ಸೃಷ್ಟಿಯಾಯಿತು.

ಆಕಾಶಾಭಿಮಾನಿಯು ಈಶ್ವರನ ಸಹಕಾರವಿಲ್ಲದೆ ಸ್ವತಂತ್ರನಾಗಿ ವಾಯುಸೃಷ್ಟಿಯನ್ನು ಮಾಡುತ್ತಾನೆ ಎಂದು ಪೂರ್ವಪಕ್ಷ. ಅದಕ್ಕೆ ಉತ್ತರ - ಆಕಾಶಾಭಿಮಾನಿಯು ಈಶ್ವರನ ಅಣತಿಗೆ ಒಳಪಟ್ಟು ಅವನ ಅಧೀನವಾಗಿಯೇ ವಾಯುಸೃಷ್ಟಿಯನ್ನು ಮಾಡುತ್ತಾನೆ. ಹೀಗೆ ವಾಯುವಿನ ಅಭಿಮಾನಿ ಅಗ್ನಿಯನ್ನು ಎಂಬುದಾಗಿ ಸಿದ್ಧಾಂತವನ್ನು ಹೇಳುತ್ತಾರೆ. ಇದು ತಪ್ಪು.

**त्वयाऽऽकाशादिशब्दानां भूतार्थत्वस्य पञ्चम्याश्चोपादानार्थत्वस्योक्तत्वेनाभिमान्यर्थत्वस्य निमित्तार्थत्वस्य चाभावात् ।**

ಏಕೆಂದರೆ, ನೀವು 'ಆಕಾಶಾತ್ ವಾಯುಃ' ಎಂಬಲ್ಲಿರುವ ಆಕಾಶಶಬ್ದಕ್ಕೆ ಪಂಚಭೂತಗಳಲ್ಲೊಂದಾದ ಆಕಾಶ ಎಂದು ಅರ್ಥ ಮಾಡಿದ್ದೀರಿ. ಹಾಗೆಯೇ 'ಆಕಾಶಾತ್' ಎಂಬಲ್ಲಿರುವ ಪಂಚಮೀ ವಿಭಕ್ತಿಗೆ 'ಉಪಾದಾನ' ಎಂಬ ಅರ್ಥ ಹೇಳಿದ್ದೀರಿ. ಈಗ ಅದೇ ಆಕಾಶ ಶಬ್ದಕ್ಕೆ ಆಕಾಶಾಭಿಮಾನಿ ಎಂದು ಹಾಗೂ ಪಂಚಮೀಗೆ ನಿಮಿತ್ತ ಎಂಬ ಅರ್ಥ ಹೇಳುತ್ತಿದ್ದೀರಿ. ಇದು ನಿಮಗೆ ಸಮ್ಮತವಲ್ಲ.

**अभ्युपगमवादेन सिद्धान्तोक्तेश्च क्लिष्टत्वात् ।**

ಹಾಗಲ್ಲ ನಾವು ಆಕಾಶಶಬ್ದಕ್ಕೆ ಅಭಿಮಾನಿ ಎಂಬರ್ಥ ಹಾಗೂ ಪಂಚಮೀಗೆ ನಿಮಿತ್ತ ಎಂಬ ಅರ್ಥವನ್ನೂ ಒಪ್ಪುತ್ತೇವೆ ಎಂದರೆ ಅದು ಕ್ಲಿಷ್ಟಕಲ್ಪನೆಯಾಗುತ್ತದೆ. (ಅಭ್ಯುಪಗಮವಾದದಿಂದ ಸಿದ್ಧಾಂತವನ್ನು ಹೇಳುವುದೇ ಕ್ಲೇಶ.)

**किञ्च ''यः पृथिवीमन्तरो यमयति'' इति त्वदुक्तस्य नियन्तृत्वलिङ्गस्य ''तल्लिङ्गात्'' इत्यनेनैवोक्तत्वात् ''सोकामयत'' इत्यभिधानस्य च देवतानामीश्वराधिष्ठितत्वे लिङ्गत्वायोगात्सूत्रे ''तदभिध्यानात्'' इति व्यर्थम् ।**

ಮತ್ತೇನೆಂದರೆ, ನೀವು ಹೇಳುವ 'ಯಃ ಪೃಥಿವೀಮಂತರೋ ಯಮಯತಿ' ಎಂಬಲ್ಲಿ ಹೇಳಿರುವ ನಿಯಂತೃತ್ವ (ನಿಯಾಮಕತ್ವ) ಲಿಂಗ (ಗಮಕ)ವನ್ನು ಸೂತ್ರದಲ್ಲಿ 'ತಲ್ಲಿಂಗಾತ್' ಎಂಬ ಪದವೇ ಹೇಳುತ್ತಿದೆ. ಇನ್ನು ಆಕಾಶಾದಿ ಅಭಿಮಾನಿದೇವತೆಗಳು ಈಶ್ವರನನ್ನು ಆಶ್ರಯಿಸಿದ್ದಾರೆ ಎಂಬುದಕ್ಕೆ 'ಸೋಽಕಾಮಯತ' ಎಂಬುದು ಗಮಕವನ್ನು ಒದಗಿಸುತ್ತಿಲ್ಲ. ಹಾಗಾಗಿ ನಿಮ್ಮ ಪ್ರಕಾರ ಸೂತ್ರದಲ್ಲಿರುವ 'ತದಭಿಧ್ಯಾನಾತ್' ಎಂಬ ಪದ ವ್ಯರ್ಥ.

ವಿವರಣೆ - 'ಸೋಽಕಾಮಯತ' ಎಂಬ ಶ್ರುತಿಯಿಂದ ಈಶ್ವರನು ಸರ್ವಭಾವವನ್ನು ಹೊಂದಬೇಕೆಂದು ಇಚ್ಛಿಸಿದ ಎಂದಷ್ಟೇ ತಿಳಿಯುತ್ತದೆ. ಅಭಿಮಾನಿದೇವತೆಗಳು ಈಶ್ವರನನ್ನು ಆಶ್ರಯಿಸಿದ್ದಾರೆ ಎಂಬುದು ತಿಳಿಯುವುದಿಲ್ಲ.

**न चाकाशादित्यादिवाक्यं तत्तद्देवतानां कर्तृत्वपरं तत्तद्भूतानामुपादानत्वपरं चेति द्वेधा पूर्वपक्षे प्राप्ते तत्तद्भावापन्नस्य ब्रह्मण उपादानत्वपरत्वमिति सिद्धान्त इति युक्तम् ।**

(ಇನ್ನೊಂದು ರೀತಿಯಿಂದ ಪೂರ್ವಪಕ್ಷ) 'ಆಕಾಶಾತ್ ವಾಯುಃ' ಎಂಬ ವಾಕ್ಯವು ಆಕಾಶಾದಿ ಅಭಿಮಾನಿದೇವತೆಗಳಿಗೆ ವಾಯು ಮೊದಲಾದವುಗಳಲ್ಲಿ ಕರ್ತೃತ್ವವನ್ನು ಹೇಳುತ್ತಿದೆ ಎಂದು ಒಂದು

ಪೂರ್ವಪಕ್ಷ. ಅಥವಾ ಆಕಾಶಾದಿಶಬ್ದಗಳು ಆಕಾಶವೇ ಮೊದಲಾದ ಭೂತಗಳು ವಾಯು ಮೊದಲಾದವುಗಳಿಗೆ ಉಪಾದಾನ ಆಗಿವೆ ಎಂದು ಹೇಳುತ್ತಿದೆ ಎಂಬುದು ಇನ್ನೊಂದು ಪೂರ್ವಪಕ್ಷ.

ವಿವರಣೆ - ಹಿಂದೆ 'ಆಕಾಶಾತ್ ವಾಯುಃ' ಎಂಬಲ್ಲಿ ಆಕಾಶಾದಿ ಶಬ್ದಗಳಿಗೆ ಅಭಿಮಾನಿ ಎಂಬ ಅರ್ಥವನ್ನು ಪಂಚಮೀಗೆ ನಿಮಿತ್ತ ಎಂಬ ಅರ್ಥವನ್ನು ಒಪ್ಪಿ ಆ ದೇವತೆಗಳು ಈಶ್ವರ ಅಧಿಷ್ಠಿತರೋ, ಅಲ್ಲವೋ ? ಎಂದು ಪೂರ್ವಪಕ್ಷ ಮಾಡಲಾಗಿತ್ತು. ಹೀಗೆ ಹೇಳಿದರೆ ಹಿಂದೆ ಹೇಳಿದ ದೋಷ ಬರುತ್ತದೆ. (ಈ ರೀತಿಯ ಅರ್ಥ ನೀವು ಒಪ್ಪಿಲ್ಲ ಎಂಬುದಾಗಿ) ಆದರೆ ಈಗ ವಿಕಲ್ಪದಿಂದ ಪೂರ್ವಪಕ್ಷ ಮಾಡುತ್ತಿದ್ದಾರೆ. ಅಂದರೆ ಆಕಾಶ ಶಬ್ದಕ್ಕ ಆಕಾಶಾಭಿಮಾನಿ ಎಂದರ್ಥವೋ ಅಥವಾ ಭೂತ ಎಂದರ್ಥವೋ? ಪಂಚಮೀಗೆ ನಿಮಿತ್ತ ಎಂದರ್ಥವೋ? ಉಪಾದಾನ ಎಂದರ್ಥವೋ? ಎಂದು. ಹೀಗೆ ಪೂರ್ವಪಕ್ಷ ಮಾಡಿದಾಗ ಹಿಂದೆ ಹೇಳಿದ ದೋಷ ಬರುವುದಿಲ್ಲ.

ಇದಕ್ಕೆ ಸಿದ್ಧಾಂತ ಏನೆಂದರೆ, ಆಕಾಶಾದಿಭಾವವನ್ನು ಹೊಂದಿದ ಬ್ರಹ್ಮನಿಗೇ ವಾಯು ಮೊದಲಾದವುಗಳಲ್ಲಿ ಉಪಾದಾನತ್ವ ಎಂಬುದಾಗಿ.

ವಿವರಣೆ - ಬ್ರಹ್ಮನೇ ಜಡವಾದ ಆಕಾಶಭಾವವನ್ನು ಹೊಂದಿ ವಾಯುವಿಗೆ ಉಪಾದಾನನಾಗಿದ್ದಾನೆ. ಅವನೇ ಆಕಾಶಾಭಿಮಾನಿಭಾವವನ್ನು ಹೊಂದಿ ನಿಮಿತ್ತನೂ ಆಗಿದ್ದಾನೆ.

**त्वदीयभाष्योक्तस्यास्य पक्षस्य भामतीकल्पतरुभ्यामेव ''तेजोतः'' इत्यनेन गतार्थत्वेन निरस्तत्वात् ।**

ಹಿಂದೆ ಹೇಳಿದ ಪೂರ್ವಪಕ್ಷ ಸಿದ್ಧಾಂತಗಳೂ ಯುಕ್ತವಲ್ಲ. ಏಕೆಂದರೆ ನೀವು ಹೇಳಿದ ಪಕ್ಷವು ನಿಮ್ಮ ಭಾಷ್ಯವ್ಯಾಖ್ಯಾನಕಾರರಾದ ಭಾಮತೀಕಾರರು ಹಾಗೂ ಕಲ್ಪತರುಕಾರರು ಈ ಪಕ್ಷವು 'ತೇಜೋತಸ್ತಥಾಹ್ಯಾಹ' ಎಂಬ ಸೂತ್ರದಿಂದಲೇ ಹೇಳಲ್ಪಟ್ಟದೆಯಾದ್ದರಿಂದ ಸರಿಯಲ್ಲ. (ಗೌಣಾರ್ಥ) ಎಂದು ಹೇಳಿದ್ದಾರೆ.

**अपि च मम रीत्या सयुक्तिकया (पितुरन्यस्य मारकत्वयुक्त्यनुगृहीतया ''रुद्रोमाविशान्तकः'' इति भाष्योदाहृतया) ब्रह्मणोऽन्यस्य लयकर्तृत्वश्रुत्या ब्रह्मणो लयकर्तृत्वश्रुतेरवश्यनिरसनीयं विरोधं ''तस्याभिध्यानात्'' इति समानाक्षर-श्रुतिविषयेण ''तदभिध्यानात्'' इति सूत्रेण निरस्य ब्रह्मणो लयकर्तृत्व इह स्थापिते उत्तराधिकरणे लयक्रमविचारः सङ्गतो नान्यथा ।**

ನಮ್ಮ ಪ್ರಕಾರ ಯಾವ ಅನುಪಪತ್ತಿಯೂ ವೈಯರ್ಥ್ಯವೂ ಇಲ್ಲ. ಬ್ರಹ್ಮನಿಗಿಂತ ಬೇರೆಯವನೇ ಲಯಕರ್ತಾ ಎಂಬ ಶ್ರುತಿಯು ಯುಕ್ತಿಸಹಿತವಾಗಿದೆ. (ತಂದೆಗಿಂತ ಬೇರೆಯವನೇ ಮಾರಕನಾಗಬೇಕು ಎಂಬುದೇ ಯುಕ್ತಿ. 'ರುದ್ರೋಮಾವಿಶಾಂತಕಃ' ಎಂಬುದೇ ಆ ಶ್ರುತಿ. ಭಾಷ್ಯದಲ್ಲಿ ಹೇಳಲ್ಪಟ್ಟದೆ) ಇದರ ವಿರೋಧ ಬ್ರಹ್ಮನಿಗೆ ಲಯವನ್ನು ಹೇಳುವ ಶ್ರುತಿಗೆ ಬಂದಿದೆ. ಆದ್ದರಿಂದ ಇದು ಅವಶ್ಯವಾಗಿ ನಿರಸನೀಯ. ಈ ವಿರೋಧಪರಿಹಾರವನ್ನು 'ತದಭಿಧ್ಯಾನಾತ್' ಎಂಬ ಸೂತ್ರದಿಂದ ಮಾಡುತ್ತಿದ್ದಾರೆ. ಶ್ರುತಿಯಲ್ಲಿರುವ 'ತಸ್ಯ ಅಭಿಧ್ಯಾನಾತ್' ಎಂಬ ಪದಕ್ಕೆ ಸಮನಾವಾದ ಆನುಪೂರ್ವಿಯನ್ನು ಸೂತ್ರ

ಹೇಳಿದೆ. ಹೀಗೆ ಬ್ರಹ್ಮನಿಗೆ ಲಯಕರ್ತೃತ್ವ ಸ್ಥಾಪನೆ ಮಾಡಲಾಗಿದೆ. ಮುಂದಿನ ಅಧಿಕರಣದಲ್ಲಿ ಲಯದ ಕ್ರಮವಿಚಾರ ಮಾಡಲ್ಪಡುತ್ತದೆ. ಇದೇ ಸಂಗತ. ಬೇರೆ ರೀತಿಯಲ್ಲಿ ಹೇಳಿದರೆ ಸಂಗತಿಯೇ ಬರುವುದಿಲ್ಲ.

**सूत्राक्षरार्थस्तु ।**

ಸೂತ್ರದಲ್ಲಿರುವ ಪದಗಳ ವಿವರಣೆ ಹೀಗಿದೆ -

**तदभिध्यानात् तस्याभिध्यानादिति श्रुत्युक्ताद्धरेरनादि बन्धसञ्जिहीर्षारूपात् ।**

'ತದಭಿಧ್ಯಾನಾತ್' ಎಂಬ ಪದವು 'ತಸ್ಯ ಅಭಿಧ್ಯಾನಾತ್' ಎಂಬುದರ ವಿವರಣೆ. ಆ ಅಭಿಧ್ಯಾನ ಎಂತಹದು ಎಂದರೆ, ಶ್ರುತಿಯಲ್ಲಿ ಹೇಳಿರುವ ಅನಾದಿಬಂಧವನ್ನು ನಿರ್ಮೂಲ ಮಾಡುವ ಭಗವಂತನ ಇಚ್ಛೆ.

**तल्लिङ्गात् सादिजगत्संहर्तृत्वसाधकलिङ्गात् ।**

'ತಲ್ಲಿಂಗಾತ್' ಎಂಬ ಶಬ್ದಕ್ಕೆ ಸಾದಿಯಾದ ಈ ಜಗತ್ತನ್ನು ಸಂಹಾರ ಮಾಡುವಿಕೆ ಎಂಬುದನ್ನು ಸಾಧಿಸುವ ಲಿಂಗ (ಹೇತು)ದಿಂದ ಎಂದರ್ಥ.

(ಇಲ್ಲಿ ತದಭಿಧ್ಯಾನವೇ ತಲ್ಲಿಂಗ)

**योऽबादिस्रष्टृत्वेन प्रकृतः यश्च जनकत्वेनामारकतया शङ्कितः यश्च ''तत्सदिति निर्देशो ब्रह्मणस्त्रिविधः स्मृत'' इति स्मृतौ तच्छब्दवाच्यत्वेनोक्तः ''स नो हरिर्घृतम्'' इति श्रुतौ च स इत्युक्तः स एव हरिः संहर्ता ।**

(ಸೂತ್ರದಲ್ಲಿ ಶೇಷಪೂರ್ತಿಯನ್ನು (ಸಾಧ್ಯವನ್ನು) ಹೇಳುತ್ತಿದ್ದಾರೆ) ಹಿಂದೆ ಯಾರು ಅಪ್(ತು) ಮೊದಲಾದ ಸೃಷ್ಟಿಕರ್ತಾ ಎಂದು ಪ್ರಸಿದ್ಧನಾಗಿದ್ದಾನೋ, ಯಾರು ಜಗತ್ತಿನ ಜನಕನಾದ್ದರಿಂದ ಮಾರಕನಾಗಲು ಸಾಧ್ಯವಿಲ್ಲ ಎಂದು ಶಂಕಿಸಲ್ಪಟ್ಟಿದ್ದಾನೋ, ಯಾರು 'ತತ್ಸದಿತಿ ನಿರ್ದೇಶೋ ಬ್ರಹ್ಮಣಃ ತ್ರಿವಿಧಃ ಸ್ಮೃತಃ' ಎಂಬಲ್ಲಿ 'ತತ್' ಶಬ್ದದಿಂದ ವಾಚ್ಯ ಎಂದು ಹೇಳಲ್ಪಟ್ಟಿದ್ದಾನೋ, ಯಾರು 'ಸ ನೋ ಹರಿರ್ಘೃತಮ್' ಎಂಬಲ್ಲಿ 'ಸ' ಎಂಬ ಶಬ್ದದಿಂದ ವಾಚ್ಯನಾಗಿದ್ದಾನೋ, ಆ ಹರಿಯೇ ಜಗತ್ತಿನ ಸಂಹರ್ತಾ. (ಇದೇ ಸಾಧ್ಯ ನಿರ್ದೇಶ)

**तुशब्दस्त्वभिध्यानगतस्य संजिहीर्षात्वरूपविशेषस्य द्योतकः ।**

ಸೂತ್ರದಲ್ಲಿರುವ 'ತು' ಎಂಬ ಶಬ್ದವು ಅಭಿಧ್ಯಾನ (ಇಚ್ಛಾ)ದಲ್ಲಿರುವ ಸಂಜಿಹೀರ್ಷಾ (ಸಂಹಾರೇಚ್ಛಾ) ಎಂಬ ವಿಶೇಷವನ್ನು ತಿಳಿಸುತ್ತಿದೆ.

(ಅಭಿಧ್ಯಾನ ಎಂಬ ಇಚ್ಛಾಸಾಮಾನ್ಯ ಇಲ್ಲಿ ಇಚ್ಛಾವಿಶೇಷ ವಿವಕ್ಷಿತ ಎಂಬುದನ್ನು 'ತು' ಶಬ್ದ ಹೇಳುತ್ತಿದೆ ಎಂದರ್ಥ.)

एवकारस्तु कैमुत्यन्यायसूचक इति भाष्य एवोक्तम् ।।

।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् तदभिध्यानाधिकरणं सम्पूर्णम् ।।७।।

'ಏವ' ಶಬ್ದವು ಕೈಮುತ್ಯನ್ಯಾಯ ಸೂಚಕ. ಅದು ಭಾಷ್ಯದಲ್ಲಿಯೇ ಹೇಳಲ್ಪಟ್ಟಿದೆ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ತದಭಿಧ್ಯಾನಾಧಿಕರಣವು ಸಂಪೂರ್ಣವಾಯಿತು

**प्रकाशः —**

**अन्ये त्विति** ।। पूर्वत्र सृष्टिक्रमे भूतानामविरोध उक्तः । अत्र तु तदधिष्ठातृदेवतासु स उच्यते । तत्राकाशाद्यधिष्ठात्र्यो देवताः किं स्वतन्त्रा एव वाय्वादिसर्गे वर्तन्त उतेश्वराधिष्ठिता इति सन्देहे आकाशाद्वायुरित्यादिस्वस्ववाक्ये निरपेक्षाणां श्रुतेः चेतनानां चेतनान्तरापेक्षायां कारणाभावाच्च स्वतन्त्रा एवेति जगतो ब्रह्मजत्वव्याघात इति प्राप्ते आकाशादिविकारात्मनाऽवतिष्ठमानस्य तस्येश्वरस्याभिध्यानात् ''सोकामयत'' इत्यादिनाऽभिध्यानपूर्वं सर्वात्मकत्वाभिधानात् ''यः पृथिव्यां तिष्ठन् यः पृथिवीमन्तरो यमयति'' इत्यादिनियन्तृत्वरूपतल्लिङ्गात्स परमेश्वरस्सर्वस्य कर्तेति सिद्धान्तसूत्रार्थं चाहुरित्यर्थः ।

(ಅದ್ವೈತಿಗಳ ಅನುವಾದ) ಹಿಂದಿನ ಅಧಿಕರಣಗಳಲ್ಲಿ ಸೃಷ್ಟಿಕ್ರಮದಲ್ಲಿ ಭೂತಗಳಿಗೆ ವಿರೋಧ ಬಂದರೆ ಅದನ್ನು ಪರಿಹರಿಸಿಯಾಯಿತು. (ಬ್ರಹ್ಮನೇ ಜಗತ್ತಿಗೆ ಕಾರಣ ಎಂದು ಹೇಳಿ, ಅದರ ಮೇಲೆ, ಭೂತಗಳಲ್ಲಿ ಕೆಲವು ಅನಾದಿ, ಕೆಲವು ಇತರ ಭೂತಗಳಿಂದ ಹುಟ್ಟುತ್ತವೆ ಎಂಬುದಾಗಿ ಬ್ರಹ್ಮನ ಜಗತ್ಕಾರಣತ್ವಕ್ಕೆ ವಿರೋಧ ಬಂದಾಗ ಅದನ್ನು ಹಿಂದೆ ಪರಿಹರಿಸಿಯಾಗಿದೆ ಎಂದರ್ಥ.) ಇಲ್ಲಿಯಾದರೋ ಆ ಭೂತಗಳಿಗೆ ಅಧಿಷ್ಠಾತೃಗಳಾದ ದೇವತೆಗಳ ವಿಷಯದಲ್ಲಿ ವಿರೋಧ ಬಂದಾಗ ಅದನ್ನು ಪರಿಹರಿಸುತ್ತಿದ್ದಾರೆ. ಆಕಾಶಾದಿಗಳಿಗೆ ಆಶ್ರಯರಾದ ದೇವತೆಗಳು ಸ್ವತಂತ್ರವಾಗಿ ವಾಯು ಮೊದಲಾದವುಗಳನ್ನು ಸೃಷ್ಟಿಸುತ್ತಾರೋ, ಅಥವಾ ಬ್ರಹ್ಮನ ಆಶ್ರಯ (ಪಾರತಂತ್ರ್ಯ)ದಿಂದಲೋ ಎಂಬ ಸಂದೇಹ ಬರುತ್ತದೆ. ಈ ಸಂಶಯದ ಮೇಲೆ ಹೀಗೆ ಪೂರ್ವಪಕ್ಷ ಹುಟ್ಟುತ್ತದೆ - 'ಆಕಾಶಾತ್ ವಾಯುಃ' ಎಂಬ ಶ್ರುತಿಯಲ್ಲಿ ಆಕಾಶಾದಿಗಳಿಗೆ ಬೇರೆಯವರ ಸಹಾಯ ಬೇಕಿದೆ ಎಂದೇನೂ ತಿಳಿಯುತ್ತಿಲ್ಲ. ಜೊತೆಗೆ ಆಕಾಶಾದಿ ದೇವತೆಗಳು ಚೇತನರಾದ್ದರಿಂದ, ಚೇತನನ ಪ್ರವೃತ್ತಿಗೆ ಇನ್ನೊಂದು ಚೇತನದ ಅಪೇಕ್ಷೆ ಬೇಕಿಲ್ಲ, ಹೀಗಾಗಿ ಅವರೆಲ್ಲರೂ ಸ್ವತಂತ್ರರೇ. ಆದ್ದರಿಂದ ಬ್ರಹ್ಮನು ಜಗತ್ತಿನ

ಜನಕ ಎಂಬುದು ತಪ್ಪು, ಎಂದು ಇದರ ಮೇಲೆ ಸಿದ್ಧಾಂತ ಹೀಗೆ - ಬ್ರಹ್ಮನೇ ಆಕಾಶಾದಿ ವಿಕಾರರೂಪವಾಗಿ ಇರುತ್ತಾನೆ. ಅಂತಹ ಬ್ರಹ್ಮನ ಅಭಿಧ್ಯಾನ ಅಂದರೆ 'ಸೋಕಾಮಯತ' ಎಂಬ ಶ್ರುತಿಯಲ್ಲಿ ಹೇಳಿದ ಸರ್ವಭಾವವನ್ನು ಹೊಂದಬೇಕೆಂಬ ಇಚ್ಛೆ ಇದರಿಂದಲೂ, ಮತ್ತು 'ಯಃ ಪೃಥಿವ್ಯಾಂ ತಿಷ್ಠನ್ ಯಃ ಪೃಥಿವೀಮ್ ಅಂತರೋ ಯಮಯತಿ' ಮೊದಲಾದ ಶ್ರುತಿಗಳಲ್ಲಿ ನಿಯಾಮಕತ್ವ ಎಂಬ ಲಿಂಗ (ಹೇತು) ತಿಳಿಯುತ್ತಿರುವುದರಿಂದಲೂ ಪರಮೇಶ್ವರನೇ ಸರ್ವಕರ್ತಾ ಎಂಬುದಾಗಿ ಸಿದ್ಧವಾಗುತ್ತದೆ.

**प्रकाशः** – सूत्रार्थं च प्रत्याचष्टे ।। **किञ्च य इति** ।। **व्यर्थमिति** ।। तल्लिङ्गात्स इत्येतावतैव पूर्तेरिति भावः ।

ಅದ್ವೈತಿಗಳ ಸೂತ್ರಾರ್ಥವೂ ಸರಿಯಲ್ಲ ಎಂದು ಹೇಳುತ್ತಿದ್ದಾರೆ. 'ಕಿಂ ಚ' ಎಂಬುದಾಗಿ ಅವರ ಪ್ರಕಾರ ಸೂತ್ರದಲ್ಲಿರುವ 'ತದಭಿಧ್ಯಾನಾತ್' ಎಂಬ ಪದ ವ್ಯರ್ಥ. ಅಂದರೆ 'ತಲ್ಲಿಂಗಾತ್' ಎಂದಿಷ್ಟೇ ಸಾಕು. ಅಷ್ಟರಿಂದಲೇ ನೀವು ಹೇಳುವ ಅರ್ಥ ಬರುತ್ತದೆ ಎಂದರ್ಥ.

**प्रकाशः** – कल्पतरौ हि ''एतदुक्तं भवति । यथाऽऽकाशात्मना ईश्वरो वाय्वाद्युपादानमेवं तदभिमानिदेवतात्मनाधिष्ठात'' इति भाष्यादिभाव उक्तः । तमनूद्य निराह – **नचेति** ।।

ಕಲ್ಪತರು ಎಂಬ ಗ್ರಂಥದಲ್ಲಿ ಶಾಂಕರಭಾಷ್ಯದ ಅಭಿಪ್ರಾಯ ಹೇಳುವಾಗ ಹೀಗೆ ಹೇಳಿದ್ದಾರೆ - ಹೇಗೆ ಬ್ರಹ್ಮನೇ ಆಕಾಶಾದಿ ವಿಕಾರರೂಪದಿಂದ ವಾಯು ಮೊದಲಾದವುಗಳಿಗೆ ಉಪಾದಾನಕಾರಣನಾಗುತ್ತಾನೆ ಹಾಗೇ ಅಭಿದೇವತೆಯ ರೂಪದಿಂದ ನಿಮಿತ್ತಕಾರಣನೂ ಆಗುತ್ತಾನೆ ಎಂದು. ಅದನ್ನು ಅನುವಾದ ಮಾಡಿ ಖಂಡಿಸುತ್ತಿದ್ದಾರೆ 'ನ ಚ' ಎಂಬುದಾಗಿ.

**प्रकाशः** – भाष्याद्युक्तमाह – **तत्तद्भावेति** ।। **निरस्तत्वादिति** ।। ''न तावदिह भूतानां ब्रह्मानधिष्ठितानां स्रष्टृत्वाभावश्चिन्त्यते । ईक्षत्याद्यधिकरणैर्गतार्थत्वात् । नापि ब्रह्मण एव तत्तद्भूतात्मना स्थितस्योत्तरकार्योपादानत्वम् । तेजोत इत्यत्र तन्निर्णयात् । अतोऽधिकरणानारम्भ'' इति कल्पतरावुक्तेः । भामत्यां केवलदेवतापूर्वपक्षस्यैव वर्णनादिति भावः ।

ಶಾಂಕರಭಾಷ್ಯದಲ್ಲಿ ಹೇಳಿರುವ ಇನ್ನೊಂದು ರೀತಿಯ ಪೂರ್ವಪಕ್ಷವನ್ನು ಹೇಳುತ್ತಿದ್ದಾರೆ 'ತತ್ತದ್‌ಭಾವಃ' ಎಂಬುದಾಗಿ. ಈ ಅರ್ಥವು ಕಲ್ಪತರು ಹಾಗೂ ಭಾಮತಿಗಳಲ್ಲಿ ನಿರಾಕರಿಸಲ್ಪಟ್ಟಿದೆ. ಹೇಗೆಂದರೆ - ಈ ಅಧಿಕರಣದಲ್ಲಿ ಬ್ರಹ್ಮನಿಂದ ಅಧಿಷ್ಠಿತವಲ್ಲದ (ಆಶ್ರಿತವಲ್ಲದ) ಭೂತಗಳಿಗೆ ಉತ್ಪಾದಕತ್ವ ಇಲ್ಲ ಎಂಬ ವಿಷಯ ಪ್ರಸ್ತುತವಲ್ಲ. ಏಕೆಂದರೆ ಈ ವಿಷಯವು ಈಕ್ಷತ್ಯಧಿಕರಣದಲ್ಲಿಯೇ ವಿವರಿಸಲ್ಪಟ್ಟಿದೆ. ಇನ್ನು ಬ್ರಹ್ಮನೇ ಆಯಾ ಭೂತರೂಪಗಳಿಂದ ಇದ್ದು ಮುಂದಿನ ಮುಂದಿನ ಭೂತಗಳಿಗೆ ಉಪಾದಾನಕಾರಣನಾಗಿದ್ದಾನೆ ಎಂಬ ವಿಷಯ ಪ್ರಸ್ತುತ ಎಂದರೆ ಅದೂ ಸರಿಯಲ್ಲ. ಏಕೆಂದರೆ ಈ ವಿಷಯ 'ತೇಜೋತಸ್ತಥಾ ಹ್ಯಾಹ' ಎಂಬಲ್ಲಿ ನಿರ್ಣಿತವಾಗಿದೆ. ಆದ್ದರಿಂದ ಈ ಅಧಿಕರಣ ಅನಾರಂಭಣೀಯ ಎಂದು.

ಪರಿಪೂರ್ಣಚಂದ್ರಿಕಾ

**ವಿವರಣೆ** - (ಬ್ರಹ್ಮನು ಭೂತಸೃಷ್ಟಿಯಲ್ಲಿ ನಿಮಿತ್ತಕಾರಣ ಎಂಬ ಪಕ್ಷವು ಈಕ್ಷತ್ಯಾದ್ಯಧಿ- ಕರಣಗಳಲ್ಲಿ ವಿಚಾರಿಸಲ್ಪಟ್ಟಿದೆ. ಉಪಾದಾನಕಾರಣ ಎಂಬ ಪಕ್ಷವು ತೇಜೋಧಿಕರಣದಲ್ಲಿ ನಿರ್ಣಯಿಸಲ್ಪಟ್ಟಿದೆ ಎಂದರ್ಥ.

ಇನ್ನು ಭಾಮತಿಯಲ್ಲಿ ಕೇವಲ ದೇವತಾಪೂರ್ವಪಕ್ಷವನ್ನು ಮಾತ್ರ ವಿವರಿಸಲಾಗಿದೆ. ಹಾಗಾಗಿ ಇನ್ನೊಂದು ರೀತಿಯ ಪೂರ್ವಪಕ್ಷ ಭಾಷ್ಯದಲ್ಲಿ ಹೇಳಿದ್ದು ಅವರಿಗೆ (ಭಾಮತೀಕಾರರಿಗೆ) ಅಭಿಪ್ರೇತವಲ್ಲ ಎಂದಾಯಿತು.

टीका भाष्ययोजनापरेति भावेनाक्लेशेनैव सूत्राक्षरयोजनामाह – **सूत्रेति** ।।

ಜಯತೀರ್ಥರ ಟೀಕೆಯು ಭಾಷ್ಯವನ್ನು ವಿವರಿಸಲು ಹೊರಟಿದೆ. ಸೂತ್ರಾಕ್ಷರ ಅಲ್ಲಿ ಸುಲಭವಾಗಿದೆಯೆಂದು ಹೇಳಿಲ್ಲ. ಅದನ್ನು ಚಂದ್ರಿಕಾಕಾರರು ಹೇಳುತ್ತಿದ್ದಾರೆ 'ಸೂತ್ರ' ಎಂಬುದಾಗಿ.

**प्रकाशः** – **इति श्रुत्युक्तादिति** ।। एतेन ''आकाशाद्वायुरित्यादौ पूर्वपूर्वभूतशरीरः स एव पुरुषोत्तम उत्तरोत्तरभूतकारणम् । नतु केवलं भूतम् । तत्तेज ऐक्षत बहुस्यां प्रजायेयेति बहुभावरूपात्परमात्मलिङ्गात्'' इति केषाञ्चिदर्थः प्रत्युक्तः ।

'ತದಭಿಧ್ಯಾನಾತ್'ಎಂಬ ಶಬ್ದಕ್ಕೆ 'ತಸ್ಮಾಭಿಧ್ಯಾನಾತ್' ಎಂಬ ಶ್ರುತಿಯಲ್ಲಿ ಹೇಳಿರುವ ಸಂಜಿಹೀರ್ಷಾರೂಪವಾದ ಅಭಿಧ್ಯಾನದಿಂದ ಎಂಬ ಅರ್ಥ ಹೇಳಿರುವುದರಿಂದ ರಾಮಾನುಜರ ಪಕ್ಷವು ನಿರಾಕೃತವಾಯಿತು. ಹೇಗೆಂದರೆ -

ರಾಮಾನುಜರು ಈ ಸೂತ್ರಕ್ಕೆ ಅರ್ಥ ಹೇಳುವಾಗ, ಭಗವಂತನು ಆಕಾಶಾದಿಗಳ ಶರೀರರೂಪನಾಗಿ ಮುಂದಿನ ಭೂತಗಳ ಉತ್ಪತ್ತಿಗೆ ಕಾರಣನಾಗಿದ್ದಾನೆ. ಹಾಗಲ್ಲದೇ ಕೇವಲ ಜಡವಾದ ಆಕಾಶಾದಿ ಭೂತಗಳು ಕಾರಣಗಳಲ್ಲ. ಏಕೆಂದರೆ 'ತೇಜ ಐಕ್ಷತ' (ತೇಜಸ್ಸು ಕಂಡಿತು) 'ಬಹುಸ್ಯಾಂ ಪ್ರಜಾಯೇಯ' (ಬಹುಭಾವವನ್ನು ಹೊಂದಬೇಕೆಂದು) ಎಂಬುದಾಗಿ ಪರಮಾತ್ಮನ ಲಿಂಗವಿರುವುದರಿಂದ ಎಂದು ಹೇಳಲಾಗಿದೆ.

ಇದು ವ್ಯಾಸರಾಜರ ವಾಕ್ಯದಿಂದ ನಿರಾಕೃತವಾಯಿತು.

**प्रकाशः** – त्वन्मते तदभिध्यानादित्यस्य मन्मत इव श्रुतिसमानाक्षरत्वाभावात्। तदीक्षणादित्युक्तौ त्वदुदाहृतश्रुतिसमानाक्षरत्वलाघवयोर्लभेन तथैव निर्देष्टव्यत्वाच्च।

ನಿಮ್ಮ ಪ್ರಕಾರ (ರಾಮಾನುಜರ) ಸೂತ್ರದಲ್ಲಿರುವ 'ತದಭಿಧ್ಯಾನಾತ್' ಎಂಬುದಕ್ಕೆ ಸಮಾನ ಆನುಪೂರ್ವಿವುಳ್ಳ ಶ್ರುತಿಯು ಇಲ್ಲ. ನಮ್ಮ ಮತದಲ್ಲಿ ಇರುತ್ತದೆ.

ಇನ್ನು ನಿಮ್ಮ ರೀತಿಯಿಂದ ಹೇಳುವುದಾದರೆ, ಸೂತ್ರದಲ್ಲಿ 'ತದೀಕ್ಷಣಾತ್' ಎಂಬ ಪದ ಇರಬೇಕಿತ್ತು. ಆಗ ಸಮಾನ ಆನುಪೂರ್ವಿ ಸಿದ್ಧವಾಗುತ್ತಿತ್ತು. ಮತ್ತು 'ತದಭಿಧ್ಯಾನಾತ್' ಎಂಬ ಪದಕ್ಕಿಂತ 'ತದೀಕ್ಷಣಾತ್' ಎಂಬಲ್ಲಿ ಅಲ್ಪಾಕ್ಷರವಿರುವುದರಿಂದ ಲಾಘವ ಎಂಬ ಗುಣವೂ ಸಿದ್ಧಿಸುತ್ತಿತ್ತು.

**प्रकाशः** – श्रुत्यन्तरेऽभिध्यानभावेऽपि विप्रतिपन्ने ''आकाशाद्वायुः'' इत्यत्र तदभावाच्च ।

'ತತ್ತೇಜ ಐಕ್ಷತ ಬಹುಸ್ಯಾಂ ಪ್ರಜಾಯೇಯ' ಎಂಬ ಶ್ರುತಿಯಲ್ಲಿ ಅಭಿಧ್ಯಾನವಿದ್ದರೂ ವಿವಾದಗ್ರಸ್ತವಾದ 'ಆಕಾಶಾದ್ವಾಯುಃ' ಎಂಬ ಶ್ರುತಿಯಲ್ಲಿ ಅಭಿಧ್ಯಾನದ ಪ್ರಸ್ತಾಪ ಇಲ್ಲ.

**प्रकाशः – अभिध्यानात्तल्लिङ्गात्स इति वा तदभिध्यानात्स इत्येतावतावा पूर्तेश्च।**

ನಿಮ್ಮ ಪ್ರಕಾರ ಸೂತ್ರ ಇಷ್ಟಿದ್ದರೆ ಸಾಕಾಗಿತ್ತು. ''ಅಭಿಧ್ಯಾನಾತ್ತಲ್ಲಿಂಗಾತ್ ಸಃ' ಎಂದು ಅಥವಾ 'ತದಭಿಧ್ಯಾನಾತ್ ಸಃ' ಎಂದು.

ವಿವರಣೆ - (ನಮ್ಮ ಪ್ರಕಾರ ಹೇಗೆ ಸೂತ್ರದಲ್ಲಿರುವ 'ತದಭಿಧ್ಯಾನಾತ್' ಎಂಬ ಪದವು ಸಮಾನ ಆನುಪೂರ್ವಿವುಳ್ಳ ಶ್ರುತಿಗೆ ಸೂಚಕವಾಗಿದೆಯೋ, ಹಾಗೆ ರಾಮಾನುಜರ ಪ್ರಕಾರ ಇರುವುದಿಲ್ಲ. ಹಾಗಾಗಿ 'ಅಭಿಧ್ಯಾನಾತ್' ಎಂದಿದ್ದರೆ ಸಾಕು. 'ತತ್' ಶಬ್ದ ಬೇಡ. ಎರಡನೇ ವಿಕಲ್ಪರೀತ್ಯಾ 'ತದಭಿಧ್ಯಾನಾತ್ ಸಃ' ಇಷ್ಟೇ ಸಾಕು. ಪಂಚಮೀವಿಭಕ್ತಿಯಿಂದ ಅಭಿಧ್ಯಾನವೇ ಹೇತು ಎಂಬುದು ತಿಳಿಯುತ್ತದೆ. ಪುನಃ 'ತಲ್ಲಿಂಗಾತ್' ಎಂದು ಹೇಳಬೇಕಿಲ್ಲ.)

**प्रकाशः – तुशब्दवैयर्थ्यस्य स्पष्टत्वाच्च ।**

ನಿಮ್ಮ ಪ್ರಕಾರ ಸೂತ್ರದಲ್ಲಿರುವ 'ತು' ಎಂಬ ಶಬ್ದ ವ್ಯರ್ಥವೆಂಬುದು ಸ್ಪಷ್ಟ. ನಮ್ಮ ಪ್ರಕಾರ ಅಭಿಧ್ಯಾನದಲ್ಲಿ ವಿಶೇಷವನ್ನು ಹೇಳುವುದಕ್ಕಾಗಿ ಅದು ಸಾರ್ಥಕ. ನೀವು ಹೀಗೇನೂ ಅರ್ಥ ಹೇಳಿಲ್ಲ.

**प्रकाशः – एवकारेणैव पूर्वपक्षनिरासप्राप्तेरिति ।।**

ಹಾಗಲ್ಲ, ನಮ್ಮ (ರಾಮಾನುಜ) ಪ್ರಕಾರವೂ 'ತು' ಶಬ್ದ ಸಾರ್ಥಕವೇ. ಅದರಿಂದ ಪೂರ್ವಪಕ್ಷನಿರಾಸವನ್ನು ಹೇಳುತ್ತೇವೆ ಎಂದರೆ, ಪೂರ್ವಪಕ್ಷ ನಿರಾಸವು 'ಏವ' ಶಬ್ದದಿಂದಲೇ ತಿಳಿಯುತ್ತದೆ 'ತು' ಶಬ್ದವೇ ವ್ಯರ್ಥವೇ ಆಗಿದೆ.

**प्रकाशः – विशेषस्य द्योतक इति ।। ''तुशब्दश्च विशेषवाची'' इति तत्वप्रदीपोक्तेरिति भावः ।।**

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे तदभिध्यानाधिकरणं सम्पूर्णम् ।।७।।**

'ತು' ಶಬ್ದವು ಸಿದ್ಧಾಂತ ಪ್ರಕಾರ ಸಂಜಿಹೀರ್ಷಾರೂಪ ವಿಶೇಷವನ್ನು ತಿಳಿಸುತ್ತಿದೆ ಎಂದು ಎಲ್ಲಿ ಹೇಳಿದೆ ಎಂದರೆ, ತತ್ವಪ್ರದೀಪದಲ್ಲಿ 'ತು ಶಬ್ದಶ್ಚ ವಿಶೇಷವಾಚೀ' ಎಂಬುದಾಗಿ ಹೇಳಿದ್ದಾರೆ. ಅದನ್ನೇ ಚಂದ್ರಿಕಾದಲ್ಲೂ ಹೇಳಲಾಗಿದೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ತದಭಿಧ್ಯಾನಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

ಪರಿಪೂರ್ಣಚಂದ್ರಿಕಾ

# ವಿಪರ್ಯಯಾಧಿಕರಣ

(೨-೩-೮)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

॥ ಶ್ರೀಗುರುಭ್ಯೋ ನಮಃ ॥

# ವಿಪರ್ಯಯಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् — विपर्ययेण तु क्रमोऽत उपपद्यते च ।।**

ಭಾಲ್ಲವೇಯ ಶ್ರುತಿಯಲ್ಲಿ 'ಕ್ರಮಾತ್ ವಿಲೀಯತೇ' ಎಂಬುದಾಗಿ ಸಂಹಾರಕ್ರಮವು ಹೇಳಲ್ಪಟ್ಟಿದೆ. ಅದು ಸೃಷ್ಟಿಕ್ರಮಕ್ಕೆ ವಿಪರೀತವಾಗಿದೆ. ಭಾಲ್ಲವೇಯಶ್ರುತಿಯಿಂದಲೇ ಇದು ತಿಳಿಯುವುದರಿಂದ ಮೊದಲು ಹುಟ್ಟಿದವರಿಗೆ ಸಾಮರ್ಥ್ಯವು ಹೆಚ್ಚಾಗುವುದರಿಂದ ಅನಂತರ ಹುಟ್ಟಿದವರಿಗಿಂತಲೂ ಅನಂತರವೇ ಅವರಿಗೆ ಲಯವು ಯುಕ್ತವಾಗುತ್ತದೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका —** तु शब्दोऽवधारणे । **अत** इत्यावर्तते । अत उत्पत्तिक्रमात्। **विपर्ययेण** वैपरीत्येन । **क्रमः** लयक्रमः। न तूत्पत्तिक्रमेण । कुतः? **अत एव** व्युत्क्रमादिति श्रुतेरेव । किञ्च **उपपद्यते** युज्यते चायं व्युत्क्रमः । कुतः पूर्वोत्पन्नानां उत्तरोत्पन्नेभ्योऽधिकसमार्थ्येन तेषाम् अधिककालावस्थानस्य युक्तत्वादित्यर्थः ।।१।।

'ತು'ಶಬ್ದವು ಅವಧಾರಣಾರ್ಥದಲ್ಲಿದೆ. 'ಅತಃ' ಎಂಬುದನ್ನು ಆವೃತ್ತಿ ಮಾಡಿಕೊಳ್ಳಬೇಕು. ಅತಃ = ಉತ್ಪತ್ತಿಕ್ರಮಕ್ಕಿಂತಲೂ, ವಿಪರ್ಯಯೇಣ = ವಿಪರೀತವಾಗಿ, ಕ್ರಮಃ = ಲಯಕ್ರಮವು ಇರುತ್ತದೆ. ಏಕೆಂದರೆ ಅತ ಏವ = 'ವ್ಯುತ್ಕ್ರಮಾದಿ ವಿಲಯಶ್ಚೈವ' ಎಂಬ ಶ್ರುತಿಯಿರುವುದರಿಂದ, ಮತ್ತು ಉಪಪದ್ಯತೇ ಚ = ಈ

ವಿಪರೀತಕ್ರಮವು ಯುಕ್ತವಾಗುತ್ತದೆ. ಏಕೆಂದರೆ ಮೊದಲು ಹುಟ್ಟಿದವರು ಅನಂತರ ಹುಟ್ಟಿದವರಿಗಿಂತಲೂ ಅಧಿಕ ಸಾಮರ್ಥ್ಯವನ್ನು ಹೊಂದಿರುವುದರಿಂದ ಅವರಿಗೆ ಹೆಚ್ಚಿನ ಕಾಲದ ಇರುವಿಕೆಯು ಯುಕ್ತವಾಗುತ್ತದೆ.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ವಿಪರ್ಯಯಾಧಿಕರಣವು ಮುಗಿಯಿತು.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – 'अत एव हि परादिदं क्रमादुत्पद्यते क्रमाद् विलीयते नासावुदेति नास्तमेति' इति भाल्लवेयश्रुतौ क्रमाल्लयः प्रतीयते ।**

**'अक्षारात् परमादेव सर्वमुत्पद्यते क्रमात् ।**
**व्युत्क्रमाद् विलयश्चैव तस्मिन्नेव परात्मनि ।।' इति ।**

**चतुर्वेदशिखायां व्युत्क्रमाल्लयः प्रतीयते ।**

ಅನುವಾದ - ಸರ್ವೋತ್ತಮನಾದ ಪರಮಾತ್ಮನ ದೆಸೆಯಿಂದ ಬ್ರಹ್ಮದೇವರಿಂದ ಆರಂಭಿಸಿ ಸಮಸ್ತ ಜಗತ್ತು ಕ್ರಮವಾಗಿ ಹುಟ್ಟುತ್ತದೆ. ಕ್ರಮವಾಗಿ ಲಯವನ್ನು ಹೊಂದುತ್ತದೆ. ಇದಕ್ಕೆ ಕಾರಣನಾದ ಪರಮಾತ್ಮನು ಮಾತ್ರ ಹುಟ್ಟುವುದೂ ಇಲ್ಲ ಲಯವನ್ನು ಹೊಂದುವುದಿಲ್ಲ. ಹೀಗೆ ಭಾಲ್ಲವೇಯ ಶ್ರುತಿಯಲ್ಲಿ ಕ್ರಮವಾಗಿ ಸೃಷ್ಟಿ ಮತ್ತು ಲಯವನ್ನು ಹೇಳಲಾಗಿದೆ.

ಅಕ್ಷರನಾಮಕನಾದ ಪರಮಾತ್ಮನಿಂದಲೇ ಸಮಸ್ತ ಜಗತ್ತು ಹುಟ್ಟುತ್ತದೆ ವ್ಯುತ್ಕ್ರಮದಿಂದ ಪರಮಾತ್ಮನಲ್ಲಿ ಲಯವನ್ನು ಹೊಂದುತ್ತದೆ. ಹೀಗೆ ಚತುರ್ವೇದಶಿಖೆಯಲ್ಲಿ ವ್ಯುತ್ಕ್ರಮದಿಂದ ಲಯವು ತಿಳಿಯುತ್ತದೆ.

ಒಂದು ಶ್ರುತಿಯಲ್ಲಿ ಕ್ರಮವಾಗಿ ಲಯವನ್ನು ಮತ್ತೊಂದು ಶ್ರುತಿಯಲ್ಲಿ ವ್ಯುತ್ಕ್ರಮವಾಗಿ ಲಯವನ್ನು ಹೇಳುತ್ತಿರುವುದರಿಂದ ಪರಸ್ಪರ ವಿರುದ್ಧವಾದ ಶ್ರುತಿಗಳಿಗೆ ಅಪ್ರಾಮಾಣ್ಯವನ್ನು ಹೇಳಬೇಕು. ಇಷ್ಟು ಪೂರ್ವಪಕ್ಷ.

ಪ್ರತಿಪದಾರ್ಥ -- ಅತ ಏವ = ಆದ್ದರಿಂದಲೇ, ಪರಾತ್ = ಶ್ರೇಷ್ಠನಾದ ಪರಮಾತ್ಮನ ದೆಸೆಯಿಂದ, ಇದಂ ಹಿ = ಈ ಜಗತ್ತು, ಕ್ರಮಾತ್ = ಕ್ರಮವಾಗಿ, ಉತ್ಪದ್ಯತೇ = ಹುಟ್ಟುತ್ತದೆ, ಕ್ರಮಾತ್ = ಕ್ರಮವಾಗಿ, ವಿಲೀಯತೇ = ನಾಶ ಹೊಂದುತ್ತದೆ. ಅಸೌ = ಪರಮಾತ್ಮನಾದರೂ ನ ಉದಯತಿ = ಹುಟ್ಟುವುದಿಲ್ಲ. ನ ಏತಿ = ಲಯವನ್ನು ಹೊಂದುವುದಿಲ್ಲ. ಇತಿ = ಹೀಗೆ, ಭಾಲ್ಲವೇಯಶ್ರುತೌ = ಭಾಲ್ಲವೇಯ ಶ್ರುತಿಯಲ್ಲಿ ಹೇಳಿರುವುದರಿಂದ, ಕ್ರಮಾತ್ = ಕ್ರಮವಾಗಿ ಲಯಃ = ಲಯವು, ಪ್ರತೀಯತೇ = ಕೇಳಿಸುತ್ತದೆ. ಆದರೆ ಚತುರ್ವೇದಾಶಿಖಾಯಾಂ = ಚತುರ್ವೇದಶಿಖಾ ಎಂಬ ಗ್ರಂಥದಲ್ಲಿ, ವ್ಯುತ್ಕ್ರಮಾತ್ = ವ್ಯುತ್ಕ್ರಮದಿಂದ, ಲಯಃ = ಲಯವು, ಪ್ರತೀಯತೇ = ತಿಳಿಯುತ್ತದೆ. ಅದು ಹೀಗೆ - ಅಕ್ಷರಾತ್ = ಅಕ್ಷರನಾಮಕನಾದ, ಪರಮಾದೇವ = ಪರಮಾತ್ಮನಿಂದಲೇ, ಸರ್ವಂ

= ಈ ಜಗತ್ತು, ಕ್ರಮಾತ್ = ಕ್ರಮವಾಗಿ, ಉತ್ಪದ್ಯತೇ = ಹುಟ್ಟುತ್ತದೆ, ವ್ಯುತ್ಕ್ರಮಾತ್ = ವ್ಯುತ್ಕ್ರಮದಿಂದ, ತಸ್ಮಿನ್ನೇವ ಪರಾತ್ಮನಿ = ಆ ಪರಮಾತ್ಮನಲ್ಲೇ, ವಿಲಯಶ್ಚೈವ = ನಾಶವನ್ನು ಹೊಂದುತ್ತದೆ, ಇತಿ = ಹೀಗೆ.

**भाष्यम् — अत आह —**

**।। विपर्ययेण तु क्रमोऽत उपपद्यते च ।।१।।**

**क्रमवचनमपि विपरीतक्रमापेक्षया ।**

ಅನುವಾದ - ಮೇಲಿನ ಪೂರ್ವಪಕ್ಷಕ್ಕೆ ಸೂತ್ರಕಾರರು ಉತ್ತರಿಸುತ್ತಿದ್ದಾರೆ. ವ್ಯುತ್ಕ್ರಮದಲ್ಲೇ ಲಯವನ್ನು ಹೇಳಬೇಕು. 'ಕ್ರಮವಾಗಿ ಲಯವನ್ನು ಹೊಂದುತ್ತದೆ' ಎಂಬ ಮಾತಿಗೂ ವಿಪರೀತಕ್ರಮದ ಅಪೇಕ್ಷೆಯಿಂದಲೇ ವ್ಯಾಖ್ಯಾನ ಮಾಡಬೇಕು.

ಪ್ರತಿಪದಾರ್ಥ -- ಮೇಲಿನ ಪೂರ್ವಪಕ್ಷಕ್ಕೆ ಆಹ = ಸೂತ್ರಕಾರರು ಹೇಳುತ್ತಿದ್ದಾರೆ -

ಕ್ರಮವಚನಮಪಿ = ಕ್ರಮದಿಂದ ಲಯವಾಗುತ್ತದೆ ಎಂಬ ಮಾತನ್ನು, ವಿಪರೀತಕ್ರಮಾಪೇಕ್ಷಯಾ = ವಿಪರೀತವಾಗಿ ಲಯ ಹೊಂದುತ್ತದೆಂಬ ದೃಷ್ಟಿಯಿಂದಲೇ ವ್ಯಾಖ್ಯಾನ ಮಾಡಬೇಕು.

**भाष्यम् —**

**'कर्ता प्राणादिकस्यास्य हन्ता भूम्यादिकस्य च ।**
**यः क्रमाद् व्युत्क्रमाच्चैव स हरिःपर उच्यते ।।'**
**इत्यत एव भाल्लवेयश्रुतिवचनात् ।।**

ಅನುವಾದ - ಯಾವಾತನು ಕ್ರಮವಾಗಿ ಬ್ರಹ್ಮಾದಿಯಾದ ಈ ಪ್ರಪಂಚಕ್ಕೆ ಕರ್ತೃವಾಗಿದ್ದಾನೋ ಭೂಮಿಯಿಂದ ಆರಂಭಿಸಿ ಬ್ರಹ್ಮನ ತನಕ ಲಯಕ್ಕೆ ಕಾರಣನಾಗಿದ್ದಾನೋ ಆ ಶ್ರೀಹರಿಯು ಸರ್ವೋತ್ತಮನಾಗಿದ್ದಾನೆ. ಹೀಗೆ ಭಾಲ್ಲವೇಯ ಶ್ರುತಿಯಲ್ಲಿ ಹೇಳಲಾಗಿದೆ.

ಪ್ರತಿಪದಾರ್ಥ -- ಯಃ = ಯಾವಾತನು, ಪ್ರಾಣಾದಿಕಸ್ಯ = ಬ್ರಹ್ಮನಿಂದ ಆರಂಭಿಸಿ, ಈ ಜಗತ್ತಿಗೆ, ಕರ್ತಾ = ಕರ್ತನಾಗಿದ್ದಾನೋ, ಕ್ರಮಾತ್ = ಕ್ರಮವಾಗಿ, ವ್ಯುತ್ಕ್ರಮಾಚ್ಚೈವ = ವ್ಯುತ್ಕ್ರಮದಿಂದ, ಭೂಮ್ಯಾದಿಕಂ = ಭೂಮಿ ಮೊದಲಾದವುಗಳಿಗೆ, ಹಂತಾ = ಸಂಹಾರಕನಾಗಿದ್ದಾನೋ, ಸಃ = ಅಂಥ, ಹರಿಃ = ಶ್ರೀಹರಿಯು, ಪರಃ = ಶ್ರೇಷ್ಠನೆಂದು, ಉಚ್ಯತೇ = ಹೇಳಲಾಗುತ್ತದೆ. ಇತ್ಯತ ಏವ = ಆದ್ದರಿಂದಲೇ, ಭಾಲ್ಲವೇಯ ಶ್ರುತಿವಚನಾತ್ = ಭಾಲ್ಲವೇಯ ಶ್ರುತಿಯ ವಚನವು ಪ್ರಮಾಣವಾಗಿದೆ.

**भाष्यम् —**

**'अनुरूपः क्रमः सृष्टौ प्रतिरूपो लये क्रमः ।**
**इति क्रमेण भगवान् सृष्टिसंहारकृद्धरिः ।।' इति च पाद्मे ।।**

ಅನುವಾದ - ಸೃಷ್ಟಿಯ ಕ್ರಮವು ಉತ್ತಮರಿಂದ ಆರಂಭವಾಗಿ ಅಧಮ ಪದಾರ್ಥದ ತನಕ ನಡೆಯುತ್ತದೆ ಅಧಮ ವಸ್ತುವಿನಿಂದ ಆರಂಭಿಸಿ ಉತ್ತಮವಸ್ತುವಿನ ತನಕ ಕ್ರಮವಾಗಿ ಸಂಹಾರಪ್ರಕ್ರಿಯೆಯು ನಡೆಯುತ್ತದೆ ಹೀಗೆ ಸೃಷ್ಟಿ ಸಂಹಾರಗಳೆರಡನ್ನು ಭಗವಂತನೇ ಮಾಡುತ್ತಾನೆ.

ಪ್ರತಿಪದಾರ್ಥ -- ಸೃಷ್ಟೌ = ಸೃಷ್ಟಿಯಲ್ಲಿ, ಅನುರೂಪಃ = ಅನುರೂಪವಾದ, ಕ್ರಮಃ = ಕ್ರಮವು, ಲಯೇ = ಸಂಹಾರ ಮಾಡುವಾಗ, ಪ್ರತಿರೂಪಃ = ಪ್ರತಿರೂಪವಾದ, ಕ್ರಮಃ = ಕ್ರಮವು, ಇತಿ = ಹೀಗೆ, ಕ್ರಮೇಣ = ಕ್ರಮವಾಗಿ, ಭಗವಾನ್ = ಷಡ್ಗುಣೈಶ್ವರ್ಯಸಂಪನ್ನನಾದ, ಹರಿಃ = ಸಮರ್ಥನಾದ ಶ್ರೀಹರಿಯು, ಸೃಷ್ಟಿಸಂಹಾರಕೃತ್ = ಸೃಷ್ಟಿ ಸಂಹಾರಗಳನ್ನು ಮಾಡುತ್ತಾನೆ. ಇತಿ ಚ = ಹೀಗೆ, ಪಾದ್ಮೇ = ಪದ್ಮಪುರಾಣದಲ್ಲಿ ಹೇಳಿದೆ.

**भाष्यम् — पूर्वेषां पूर्वेषां सामर्थ्याधिक्यादुपपद्यते च ।**

**वामने च —**

**'पूर्वे पूर्वे यतो विष्णोः सन्निधानं क्रमाधिकम् ।**
**सामर्थ्याधिक्यमेतेषां पश्चादेव लयस्तथा ।**
**व्याप्तिश्चाभ्यधिका तेषामत एव न संशयः ।।' इति च ।।१।।**

**।। इति श्रीमदानन्दतीर्थभगवत्पादाचार्यविरचिते**
**ब्रह्मसूत्रभाष्ये विपर्ययाधिकरणम् ।। ८ ।।**

ಅನುವಾದ - ಮೊದಲು ಮೊದಲು ಹುಟ್ಟಿದವರಿಗೆ ಅಧಿಕವಾದ ಸಾಮರ್ಥ್ಯವಿರುತ್ತದೆ. ಆದ್ದರಿಂದ ಅವರು ಮೊದಲು ಲಯವನ್ನು ಹೊಂದುವುದಿಲ್ಲ. ವಾಮನಪುರಾಣವು ಇದನ್ನು ಸ್ಪಷ್ಟಪಡಿಸುತ್ತದೆ -

ಯಾವ ವಿಷ್ಣುವಿನ ದೆಸೆಯಿಂದ ಬ್ರಹ್ಮಾದಿದೇವತೆಗಳಲ್ಲಿ ವಿಷ್ಣುವಿನ ಸನ್ನಿಧಾನವು ತಾರತಮ್ಯ ಕ್ರಮದಲ್ಲಿ ಅಧಿಕವಾಗಿರುತ್ತದೊ, ಆದ್ದರಿಂದಲೇ ಅವರಿಗೆ ಮುಂದೆ ಹುಟ್ಟುವವರಿಗಿಂತ ಹಿಂದಿನವರಲ್ಲಿ ಸಾಮರ್ಥ್ಯವು ಹೆಚ್ಚಾಗಿರುತ್ತದೆ. ವ್ಯಾಪ್ತಿಯೂ ಕೂಡ ಅಧಿಕವಾಗಿರುತ್ತದೆ. ಆದ್ದರಿಂದಲೇ ಅವರು ಕೊನೆಯಲ್ಲೇ ನಾಶವನ್ನು ಹೊಂದುತ್ತಾರೆ.

ಪ್ರತಿಪದಾರ್ಥ -- ಪೂರ್ವೇಷಾಂ ಪೂರ್ವೇಷಾಂ = ಮೊದಲು ಮೊದಲು ಹುಟ್ಟಿದವರಿಗೆ, ಸಾಮರ್ಥ್ಯಾಧಿಕ್ಯಾತ್ = ಬಹಳ ಸಾಮರ್ಥ್ಯವಿರುವುದರಿಂದ, ಉಪಪದ್ಯತೇ = ಕೊನೆಯಲ್ಲಿ ಲಯವಾಗುವುದು ಯುಕ್ತವಾಗುತ್ತದೆ. ವಾಮನೇಚ = ಇದನ್ನು ವಾಮನಪುರಾಣವು ಹೇಳುತ್ತಿದೆ. ಯಥಾ = ಯಾವ ಕಾರಣದಿಂದ, ಪೂರ್ವೇ ಪೂರ್ವೇ = ಮೊದಲು ಹುಟ್ಟಿದರೂ ಅವರಲ್ಲಿ, ವಿಷ್ಣೋಃ = ವಿಷ್ಣುವಿನ, ಸನ್ನಿಧಾನಂ = ಸನ್ನಿಧಾನವು, ಕ್ರಮಾಧಿಕಮ್ = ತಾರತಮ್ಯಕ್ರಮದಲ್ಲಿ ಅಧಿಕವಾಗಿರುತ್ತದೆ. ಏತೇಷಾಂ = ಇವರ, ಸಾಮಾರ್ಥ್ಯಾಧಿಕ್ಯಂ = ಅಧಿಕವಾದ ಸಾಮರ್ಥ್ಯವು ಇರುತ್ತದೆ, ತಥಾ = ಆದ್ದರಿಂದಲೇ, ಪಶ್ಚಾದೇವ = ಕೊನೆಯಲ್ಲೇ, ಲಯಃ = ಲಯವಾಗುತ್ತದೆ. ತೇಷಾಂ = ಅವರಿಗೆ, ವ್ಯಾಪ್ತಿಶ್ಚ = ವ್ಯಾಪ್ತಿಯೂ ಕೂಡ, ಅಭ್ಯಧಿಕಾ = ಅಧಿಕವಾಗಿರುತ್ತದೆ. ಅತ ಏವ = ಆದ್ದರಿಂದಲೇ ಈ ವಿಷಯದಲ್ಲಿ, ನ ಸಂಶಯಃ = ಸಂಶಯ ವಿರುವುದಿಲ್ಲ. ಇತಿ ಚ = ಹೀಗೆ ಪ್ರಮಾಣದ ಆಧಾರವಿದೆ.

ಇಲ್ಲಿಗೆ ವಿಪರ್ಯಯಾಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.
ವಿಪರ್ಯಯಾಧಿಕರಣ (೨-೩-೮)

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**तत्वप्रकाशिका – अत्रेश्वरे वेदसमन्वयसिद्ध्यर्थमधिभूतादिसंहारविषय-श्रुतिविरोधपरिहारादस्ति शास्त्रादिसंङ्गतिः । सर्वं भगवता लीयत इत्युक्तम् । तद्विषय एव श्रुतीनां विरोधे समन्वयानुपपत्तेरवश्यनिरसनीयोऽसौ भवति । प्रकृताधिभूतादीनि विषयः ।**

ಈ ಅಧಿಕರಣದಲ್ಲಿ ಈಶ್ವರನಲ್ಲಿ ವೇದಸಮನ್ವಯವು ಸಿದ್ಧವಾಗುವುದಕ್ಕಾಗಿ ಅಧಿಭೂತ ಮೊದಲಾದವುಗಳ ಸಂಹಾರವಿಷಯಕವಾದ ಶ್ರುತಿವಿರೋಧವನ್ನು ಪರಿಹಾರ ಮಾಡುತ್ತಿದ್ದಾರೆ. ಆದ್ದರಿಂದ ಶಾಸ್ತ್ರ, ಅಧ್ಯಾಯ, ಪಾದ, ಸಂಗತಿಗಳು ಇರುತ್ತವೆ.

ಎಲ್ಲವೂ ಭಗವಂತನಿಂದಲೇ ಲಯವಾಗುತ್ತದೆಂದು ಹಿಂದಿನ ಅಧಿಕರಣದಲ್ಲಿ ಹೇಳಲಾಯಿತು. ಇದೇ ವಿಷಯದಲ್ಲಿ ಶ್ರುತಿಗಳಿಗೆ ಪರಸ್ಪರ ವಿರೋಧವು ಪ್ರಾಪ್ತವಾದರೆ ಸಮನ್ವಯವೇ ಅನುಪಪನ್ನವಾಗುತ್ತದೆ. ಆದ್ದರಿಂದ ಶ್ರುತಿವಿರೋಧವನ್ನು ಅವಶ್ಯವಾಗಿ ನಿರಾಕರಣೆ ಮಾಡಲೇಬೇಕು. ಈ ಅಧಿಕರಣಕ್ಕೆ ಪ್ರಕೃತವಾದ ಅಧಿಭೂತಾದಿಗಳೇ ವಿಷಯವಾಗಿವೆ.

**तत्वप्रकाशिका – किमुत्पत्तिक्रमानुसारेण लीयन्ते व्युत्क्रमेण वेति सन्देहः । किमस्य बीजमिति श्रुतिविगानं दर्शयति – अत एवेति ।। उत्पत्तिक्रमेणैव लीयन्त इति पूर्वः पक्षः ।**

ಹುಟ್ಟುವ ಕ್ರಮದಲ್ಲಿ ಲಯವನ್ನು ಹೊಂದುತ್ತವೋ? ಅಥವಾ ಹುಟ್ಟುವ ಕ್ರಮಕ್ಕಿಂತ ವಿರುದ್ಧ ಕ್ರಮದಲ್ಲಿ ಲಯವನ್ನು ಹೊಂದುತ್ತವೋ? ಎಂಬುದು ಅಧಿಕರಣದ ಸಂದೇಹ. ಶ್ರುತಿಗಳ ಪರಸ್ಪರ ವಿರೋಧವೇ ಸಂದೇಹಬೀಜ. ಇದನ್ನು 'ಅತ ಏವ' ಇತ್ಯಾದಿ ಭಾಷ್ಯದಿಂದ ತೋರಿಸುತ್ತಿದ್ದಾರೆ.

ಉತ್ಪತ್ತಿಕ್ರಮದಿಂದಲೇ ಲಯವನ್ನು ಹೊಂದುತ್ತದೆಂಬುದು ಅಧಿಕರಣದ ಪೂರ್ವಪಕ್ಷ.

ವಿವರಣೆ - ಭಾಲ್ಲವೇಯ ಶ್ರುತಿಯಲ್ಲಿ ಯಾವ ಕ್ರಮದಲ್ಲಿ ಜಗತ್ತಿನ ಉತ್ಪತ್ತಿಯಾಗುತ್ತದೋ ಅದೇ ಕ್ರಮದಲ್ಲೇ ಲಯವಾಗುತ್ತದೆಂದು ಹೇಳಲಾಗಿದೆ. ಚತುರ್ವೇದ ಶಿಖಾದಲ್ಲಿ ಉತ್ಪತ್ತಿಕ್ರಮಕ್ಕೆ ವಿಪರೀತವಾದ ಕ್ರಮದಲ್ಲಿ ಜಗತ್ತು ನಾಶವಾಗುತ್ತದೆಂದು ಹೇಳಲಾಗಿದೆ. ಹೀಗೆ ಶ್ರುತಿಗಳ ಪರಸ್ಪರ ವಿರೋಧವು ಅಧಿಕರಣದ ಪ್ರವೃತ್ತಿಗೆ ಕಾರಣವಾಗಿದೆ.

**तत्वप्रकाशिका – अत एवेति श्रुतेः। न च पक्षान्तरेऽपि श्रुतिरस्तीति वाच्यम् । उत्पत्तिक्रमानुसारेणैव लयाङ्गीकारे लोकानुकूलत्वगुणेन क्रमश्रुतेः प्राबल्यात् ।**

'ಅತ ಏವ' ಇತ್ಯಾದಿ ಭಾಲ್ಲವೇಯಶ್ರುತಿಯು ಉತ್ಪತ್ತಿ ಕ್ರಮದಲ್ಲಿ ಲಯವನ್ನು ಹೇಳುತ್ತಿದೆ. ವಿಪರೀತ ಕ್ರಮದಲ್ಲಿ ನಾಶ ಹೊಂದುತ್ತದೆಂದು ಚತುರ್ವೇದಶಿಖಾ ಹೇಳುತ್ತಿದೆಯೆಂದು ಪ್ರಶ್ನಿಸಬಾರದು. ಉತ್ಪತ್ತಿ ಕ್ರಮಕ್ಕೆ ಅನುಸಾರಿಯಾಗಿಯೇ ಲಯವಾಗುತ್ತದೆಂದು ಅಂಗೀಕಾರ

ಮಾಡಬೇಕು. ಲೋಕಾನುಸಾರಿತ್ವ ಎಂಬ ಗುಣವೂ ಈ ಪಕ್ಷದಲ್ಲಿದೆ. ಆದ್ದರಿಂದ ಕ್ರಮಶ್ರುತಿಯು ಪ್ರಬಲವಾಗುತ್ತದೆ.

ಮೊದಲು ಹುಟ್ಟಿದ ಪಿತಾಮಹನು ಪಿತೃಗಿಂತ ಮೊದಲೇ ಮೃತನಾಗುತ್ತಾನೆ. ಮಗನಿಗಿಂತ ಮೊದಲು ತಂದೆಯು ಮೃತನಾಗುತ್ತಾನೆ. ಹೀಗೆ ಲೋಕದಲ್ಲಿ ಉತ್ಪತ್ತಿ ಕ್ರಮಕ್ಕೆ ಅನುಸಾರಿಯಾಗಿಯೇ ಲಯವಾಗುವುದು ಕಂಡಿದೆ. ಇದೇ ಕ್ರಮವನ್ನು ಜಗತ್ತಿನ ವಿಷಯದಲ್ಲೂ ಕೂಡ ತಿಳಿಯಬೇಕೆಂಬುದು ಪೂರ್ವಪಕ್ಷದ ಅಭಿಪ್ರಾಯ (ಗುರ್ವರ್ಥದೀಪಿಕಾ).

**तत्वप्रकाशिका – न च लोके व्युत्क्रमादपि लयो दृश्यत इति वक्तव्यम्। क्रमस्यैव प्रायिकत्वात् । 'क्रमादुत्पद्यते क्रमाद्विलीयते' 'क्रमेणैवोत्पत्तिर्विलयश्च' 'क्रमेणैवास्योत्पत्तिविलयौ' इत्यादि - बहुश्रुत्यनुसारित्वाच्च।**

ಲೋಕದಲ್ಲಿ ವಿಪರೀತಕ್ರಮದಲ್ಲೂ ಕೂಡ ಲಯವಾಗಿರುವುದು ಕಂಡಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಹೆಚ್ಚಾಗಿ ಕ್ರಮವಾಗಿ ಲಯವಾಗುವುದೇ ಕಂಡಿದೆ. ಈ ಜಗತ್ತು ಭಗವಂತನಿಂದ ಕ್ರಮವಾಗಿಯೇ ಹುಟ್ಟುತ್ತದೆ, ಕ್ರಮವಾಗಿಯೇ ನಾಶವಾಗುತ್ತದೆ. ಇವೇ ಮೊದಲಾದ ಅನೇಕ ಶ್ರುತಿಗಳಿಗೆ ಈ ಪಕ್ಷವು ಅನುಸಾರಿಯಾಗಿದೆ.

ವಿವರಣೆ - ಕೆಲವೊಮ್ಮೆ ತಂದೆಗಿಂತ ಮೊದಲೇ ಮಗನು ಸಾಯುವುದು ಲೋಕದಲ್ಲಿ ಕಂಡಿದೆ. ಆದ್ದರಿಂದ ವ್ಯುತ್ಕ್ರಮದಿಂದಲೂ ಕೂಡ ಲಯವನ್ನು ಹೊಂದಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಹೆಚ್ಚಾಗಿ ಮಗನಿಗಿಂತ ಮೊದಲು ತಂದೆಯು ಸಾಯುತ್ತಾನೆ. ತಂದೆಗಿಂತ ಮೊದಲು ಅಜ್ಜನು ಸಾಯುತ್ತಾನೆ. ಇದೇ ಲೋಕದಲ್ಲಿ ಕಂಡಿರುವ ನಿಯಮ. ಎಲ್ಲಿಯಾದರೂ ಮಗನು ಮೊದಲೇ ಸಾಯುವುದು ಕಂಡಿದ್ದರೆ ಅದು ಕೇವಲ ಔಪಾಧಿಕ ಹೊರತು ಸಹಜವಲ್ಲ. ಆದ್ದರಿಂದ ಕ್ರಮದ ಲಯವೇ ಪ್ರಾಯಕವೆಂದು ಅನುಭವವಿರುವುದರಿಂದ ಜಗತ್ತಿನ ಸೃಷ್ಟಿಯ ವಿಷಯದಲ್ಲೂ ಕೂಡ ಹಾಗೆಯೇ ಹೇಳಬೇಕು. 'ಕ್ರಮಾತ್ ಉತ್ಪದ್ಯತೇ ಕ್ರಮಾದ್ವಿಲೀಯತೇ' ಎಂಬ ಶ್ರುತಿಯು ಹಾಗೂ 'ಕ್ರಮೇಣೈವ ಉತ್ಪತ್ತಿಃ ವಿಲಯಶ್ಚ' ಎಂಬ ಶ್ರುತಿಯು ಹಾಗೂ 'ಕ್ರಮೇಣೈವ ಅಸ್ಯ ಉತ್ಪತ್ತಿವಿಲಯೌ' ಇವೇ ಮೊದಲಾದ ಶ್ರುತಿಗಳು ಕ್ರಮದಲ್ಲಿಯೇ ಉತ್ಪತ್ತಿ ಲಯಗಳನ್ನು ಹೇಳುತ್ತಿವೆ.

**तत्वप्रकाशिका – अतो बलवच्छ्रुतिविरुद्धासौ श्रुतिरप्रमाणमेवेति समन्वयानुपपत्तिरित्येवं प्राप्ते सिद्धान्तयत्सूत्रमवतार्य व्याचष्टे – अत इति ॥**

ಆದ್ದರಿಂದ ಕ್ರಮವಾಗಿ ಲಯವನ್ನು ಹೇಳುವ ಬಲಿಷ್ಠವಾದ ಶ್ರುತಿಗಳಿಂದ ವಿರುದ್ಧವಾಗಿರುವ ಕಾರಣ ವ್ಯುತ್ಕ್ರಮದಲ್ಲಿ ಲಯವನ್ನು ಹೇಳುವ ಚತುರ್ವೇದಶಿಖಾದಲ್ಲಿರುವ ಶ್ರುತಿಯು ಅಪ್ರಮಾಣವೇ ಆಗಿದೆ. ಹೀಗೆ ಶ್ರೀಹರಿಯಲ್ಲಿ ಸಮನ್ವಯವು ಅನುಪಪನ್ನವಾಗುತ್ತದೆ. ಈ ಪೂರ್ವಪಕ್ಷವನ್ನು ಪರಿಹಾರ ಮಾಡುವ ಸಿದ್ಧಾಂತಸ್ಥಾಪಕವಾದ ಸೂತ್ರಕ್ಕೆ ಅವತಾರಿಕೆ ನೀಡಿ 'ಅತಃ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – उत्पत्तिक्रमवैपरीत्येनैव लयः । क्रमवाचिश्रुतेरप्युत्पत्तिक्रमाविपरीतक्रमापेक्षत्वात् । कुतोऽर्थान्तरकल्पनं क्रमश्रुतेः । यस्यामेव श्रुतौ क्रमाल्लयः श्रूयते तस्यामेव व्युत्क्रमाल्लयस्य श्रुतत्वादित्यर्थः ।**

ಯಾವ ಕ್ರಮದಲ್ಲಿ ಉತ್ಪತ್ತಿಯಾಗುತ್ತದೋ ಅದಕ್ಕೆ ವಿಪರೀತವಾಗಿ ಲಯವಾಗುತ್ತದೆ. ಕ್ರಮವಾಗಿ ಲಯವಾಗುತ್ತದೆಂದು ಹೇಳುವ ಶ್ರುತಿಗೂ ಕೂಡ ಉತ್ಪತ್ತಿ ಕ್ರಮಕ್ಕಿಂತ ವಿರುದ್ಧವಾದ ಕ್ರಮದ ಅಪೇಕ್ಷೆಯೇ ಇರುತ್ತದೆ. ಉತ್ಪತ್ತಿ ಕ್ರಮದಲ್ಲಿಯೇ ಸಂಹಾರಕ್ರಮವನ್ನು ಹೇಳುವ ಶ್ರುತಿಗೆ ಏಕೆ ವಿಪರೀತವಾಗಿ ಅರ್ಥವನ್ನು ಕಲ್ಪನೆ ಮಾಡಬೇಕು? ಎಂದರೆ ಯಾವ ಶ್ರುತಿಯಲ್ಲಿ ಕ್ರಮವಾಗಿ ಲಯವು ಶ್ರುತವಾಗಿದೆಯೋ, ಅದೇ ಶ್ರುತಿಯಲ್ಲಿಯೇ ವ್ಯುತ್ಕ್ರಮವಾಗಿ ಲಯವು ಶ್ರುತವಾಗಿದೆ ಎಂಬುದು ಭಾಷ್ಯದ ಅಭಿಪ್ರಾಯ.

ವಿವರಣೆ - ಬ್ರಹ್ಮಾದಿ ಜಗತ್ತನ್ನು ಪರಮಾತ್ಮನು ತಾರತಮ್ಯಕ್ಕೆ ಅನುಗುಣವಾಗಿ ಸೃಷ್ಟಿ ಮಾಡುತ್ತಾನೆ. ಅದೇ ರೀತಿಯಾಗಿ ಸಂಹಾರ ಮಾಡುವಾಗ ವಿಪರೀತ ಕ್ರಮವನ್ನು ಅನುಸರಿಸುತ್ತಾನೆ. ಆದ್ದರಿಂದ ಮೊದಲು ಹುಟ್ಟಿದ ಬ್ರಹ್ಮದೇವರು ಮೊದಲೇ ನಾಶವಾಗುವುದಿಲ್ಲ, ಕೊನೆಯಲ್ಲಿ ನಾಶವಾಗುತ್ತಾರೆ.

**तत्वप्रकाशिका – श्रुतित्वाविशेषाद् व्यक्रमश्रुत्या क्रमश्रुतेः कुतो बाधो विपरीतमेव किं न स्यादित्यत आह – अनुरूप इति ।। अस्ति क्रमव्युत्क्रमयोः क्रमपदप्रवेशो न त व्युत्क्रमपदप्रवशः । अतो निरवकाशया व्युत्क्रमश्रुत्या सावकाशक्रमश्रुतिबाधो युक्त इति भावः ।**

ಎರಡೂ ಶ್ರುತಿಗಳು ಸಮಾನವಾಗಿರುವುದರಿಂದ ವ್ಯುತ್ಕ್ರಮ ಶ್ರುತಿಯಿಂದ ಕ್ರಮ ಶ್ರುತಿಗೆ ಏಕೆ ಬಾಧವನ್ನು ಹೇಳಬೇಕು? ವಿಪರೀತವಾಗಿ ಏಕೆ ಬಾಧವನ್ನು ಹೇಳಬಾರದು? ಎಂಬ ಪ್ರಶ್ನೆಗೆ 'ಅನುರೂಪಃ' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ.

ಕ್ರಮ ಹಾಗೂ ವ್ಯುತ್ಕ್ರಮ ಎರಡೂ ಅರ್ಥಗಳಲ್ಲಿಯೂ ಕ್ರಮ ಎಂಬ ಪದದ ಪ್ರಯೋಗವನ್ನು ಮಾಡುವುದು ಕಂಡಿದೆ. ಆದರೆ ಈ ಎರಡು ಪದಗಳಲ್ಲಿ ವ್ಯುತ್ಕ್ರಮ ಎಂಬ ಪದವನ್ನು ಪ್ರಯೋಗ ಮಾಡಿರುವುದು ಕಂಡಿಲ್ಲ. ಆದ್ದರಿಂದ ವ್ಯುತ್ಕ್ರಮ ಶ್ರುತಿಯು ನಿರವಕಾಶವಾಯಿತು. ಈ ಶ್ರುತಿಯಿಂದ ಸಾವಕಾಶವಾದ ಕ್ರಮ ಶ್ರುತಿಗೆ ಬಾಧವನ್ನು ಹೇಳುವುದೇ ಉಚಿತ ಎಂಬುದು ಸಿದ್ಧಾಂತದ ಅಭಿಪ್ರಾಯ.

ವಿವರಣೆ - ಕ್ರಮವಾಗಿ ಲಯವನ್ನು ಹೇಳುವ ಭಾಲ್ಲವೇಯ ಶ್ರುತಿಯು ವ್ಯುತ್ಕ್ರಮವಾಗಿ ಲಯವನ್ನು ಹೇಳುವ ಚತುರ್ವೇದಶಿಖಾ ಶ್ರುತಿಯಿಂದ ಬಾಧಿತವಾಗುತ್ತದೆಂದು ಸಿದ್ಧಾಂತ ಮಾಡುತ್ತಿದ್ದೀರಿ? ಇದೇ ಏಕೆ ಸರಿ? ಭಾಲ್ಲವೇಯ ಶ್ರುತಿಯಿಂದ ಚತುರ್ವೇದಶಿಖಾ ಶ್ರುತಿಗೇಕೆ ಬಾಧವನ್ನು ಹೇಳಬಾರದು? ಎಂಬುದು ಪೂರ್ವಪಕ್ಷಕಾರರ ಧೋರಣೆ. ನಿರವಕಾಶವಾದುದಕ್ಕೆ ಬಾಧವನ್ನು ಹೇಳಬಾರದೆಂದು ಸಿದ್ಧಾಂತಿಗಳು ಉತ್ತರಿಸಿದ್ದಾರೆ. ವ್ಯುತ್ಕ್ರಮಶ್ರುತಿಯು ಏಕೆ ನಿರವಕಾಶ ಎಂದರೆ ವ್ಯುತ್ಕ್ರಮ ಶಬ್ದವನ್ನು ಕ್ರಮ ಹಾಗೂ ವ್ಯುತ್ಕ್ರಮ ಎಂಬೆರಡರ್ಥದಲ್ಲಿ ಪ್ರಯೋಗಿಸಿರುವುದು ಎಲ್ಲೂ ಕಂಡಿಲ್ಲ.

**तत्वप्रकाशिका – तथा च श्रुत्यन्तरम् । 'द्विविधः क्रम उद्दिष्टो व्युत्क्रमोऽनुक्रमस्तथा । सृष्टावन्यो लये चान्य इति वेदविदो विदुः' इति । एतेन बह्वीनामपि श्रुतीनां विरोधः परिहृतः ।**

ಈ ವಿಷಯದಲ್ಲಿ ಮತ್ತೊಂದು ಶ್ರುತಿ ಹೀಗಿದೆ-

'ದ್ವಿವಿಧಃ ಕ್ರಮ ಉದ್ದಿಷ್ಟೋ ವ್ಯುತ್ಕ್ರಮೋಽನುಕ್ರಮಸ್ತಥಾ ।
ಸೃಷ್ಟಾವನ್ಯೋ ಲಯೇ ಚಾನ್ಯ ಇತಿ ವೇದವಿದೋ ವಿದುಃ ॥'

ಕ್ರಮವು ಎರಡು ವಿಧವಾಗಿದೆ. ೧) ವ್ಯುತ್ಕ್ರಮ, (೨) ಅನುಕ್ರಮ ಎಂದು. ಸೃಷ್ಟಿಯಲ್ಲಿ ಅನುಕ್ರಮವು ಲಯದಲ್ಲಿ ವ್ಯುತ್ಕ್ರಮವು ಇರುತ್ತದೆಂದು ವೇದಜ್ಞರು ಹೇಳುತ್ತಾರೆ ಎಂದು.

ಹೀಗೆ ಹೇಳಿದ್ದರಿಂದ ಅನುಕ್ರಮವಾಗಿ ಲಯವನ್ನು ಹೇಳುವ ಅನೇಕ ಶ್ರುತಿಗಳ ವಿರೋಧವನ್ನು ಪರಿಹರಿಸಿದಂತಾಯಿತು.

ವಿವರಣೆ - ಕ್ರಮವಾಚಿಯಾದ ಶ್ರುತಿಗೆ ಅರ್ಥಾಂತರವನ್ನು ಮಾಡಿ ಸಾವಕಾಶತ್ವವನ್ನು ಹೇಳಲಾಯಿತು. ಇದರಿಂದ ವ್ಯುತ್ಕ್ರಮವಾಗಿ ಲಯವನ್ನು ಹೇಳುವ ಶ್ರುತಿಯೇ ನಿರವಕಾಶವಾಗಿ ಬಲಿಷ್ಠವಾಯಿತು. ಆದ್ದರಿಂದ ಉತ್ಪತ್ತಿಯ ಕ್ರಮದಿಂದಲೇ ಲಯವನ್ನು ಹೇಳುವ ಅನೇಕ ಶ್ರುತಿಗಳಿಗೂ ಕೂಡ ಈಗ ಅವಕಾಶವಿಲ್ಲ. ಏಕೆಂದರೆ ಆ ಶ್ರುತಿಯಲ್ಲಿರುವ ಕ್ರಮ ಎಂಬ ಶಬ್ದಕ್ಕೂ ಕೂಡ ವ್ಯುತ್ಕ್ರಮ ಎಂಬರ್ಥವನ್ನೇ ವಿವಕ್ಷಿಸಬೇಕು. ಆದ್ದರಿಂದ ಸಕಲ ಶ್ರುತಿಗಳೂ ಏಕಾರ್ಥಕವಾದವು.

**तत्वप्रकाशिका – व्युत्क्रमाल्लयाङ्गीकारे लोकविरोधनान्नासौ युक्त इत्यत आह – पूर्वेषामिति ।। लौकिकानां प्रायः सामर्थ्यसाम्यात्क्रमाल्लयेऽपि नासौ भवति । अत्र पूर्वोत्पन्नानां सामर्थ्याधिक्यात् । एवं च लोकविरोधस्यैव गुणत्वादिति भावः।**

ವ್ಯುತ್ಕ್ರಮದಲ್ಲಿ ಲಯವನ್ನು ಅಂಗೀಕಾರ ಮಾಡಿದರೆ ಲೋಕದ ವಿರೋಧವು ಬರುವುದರಿಂದ ಇದು ಹೇಗೆ ಯುಕ್ತವಾಗುತ್ತದೆ? ಎಂಬ ಪ್ರಶ್ನೆಗೆ 'ಪೂರ್ವೇಷಾಂ' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

ಲೋಕದಲ್ಲಿರುವ ಜನರು ಸಾಮಾನ್ಯವಾಗಿ ಒಂದೇ ರೀತಿಯಾದ ಸಾಮರ್ಥ್ಯವನ್ನು ಹೊಂದಿರುತ್ತಾರೆ. ಆದ್ದರಿಂದ ಕ್ರಮವಾಗಿ ಹುಟ್ಟಿ ಅದೇ ಕ್ರಮದಲ್ಲೇ ನಾಶವನ್ನು ಹೊಂದುತ್ತಾರೆ. ಆದರೆ ಇದನ್ನು ಜಗತ್ತಿನ ಸೃಷ್ಟಿಯ ವಿಷಯದಲ್ಲಿ ವಿವಕ್ಷಿಸಲು ಸಾಧ್ಯವಿಲ್ಲ. ಏಕೆಂದರೆ ಮೊದಲು ಹುಟ್ಟಿರುವವರಲ್ಲಿ ಸಾಮರಸ್ಯವು ಅಧಿಕವಾಗಿರುತ್ತದೆ. ಆದ್ದರಿಂದ ಲೋಕಕ್ಕೆ ವಿರುದ್ಧವಾಗಿ ಅರ್ಥವನ್ನು ಕಲ್ಪನೆ ಮಾಡುವುದೇ ಗುಣವಾಗುತ್ತದೆ.

ವಿವರಣೆ - ಲೋಕದಲ್ಲಿ ಹುಟ್ಟುವ ಜನರಲ್ಲಿ ಸಾಮರ್ಥ್ಯವು ಒಂದೇ ಥರ ಇರುವುದರಿಂದ ಇವರು ಯಾವ ಕ್ರಮದಲ್ಲಿ ಹುಟ್ಟುತ್ತಾರೋ ಅದೇ ಕ್ರಮದಲ್ಲೇ ಮೊದಲು ಅಜ್ಜನು, ಅನಂತರ ತಂದೆಯು, ಅನಂತರ ಮಗನು ಮರಣವನ್ನು ಹೊಂದುತ್ತಾರೆ. ಆದರೆ ಈಶ್ವರನಿಂದ ಚತುರ್ಮುಖ, ರುದ್ರ, ಇಂದ್ರ ಇವರು ಜನ್ಮವನ್ನು ಪಡೆದಾಗ ಅದೇ ಕ್ರಮದಲ್ಲೇ ಲಯವನ್ನು ಹೊಂದುವುದಿಲ್ಲ. ಏಕೆಂದರೆ ಇಂದ್ರನಿಗಿಂತ ರುದ್ರನು, ರುದ್ರನಿಗಿಂತ ಚತುರ್ಮುಖ ಅಧಿಕ ಬಲವುಳ್ಳವರಾಗಿದ್ದಾರೆ. ಆದ್ದರಿಂದ ಮೊದಲು ಹುಟ್ಟಿದ ಚತುರ್ಮುಖನು ಕೊನೆಯಲ್ಲಿಯೇ ನಾಶವನ್ನು ಹೊಂದುತ್ತಾನೆ. ಅದಕ್ಕಿಂತ ಮೊದಲು ರುದ್ರನು ನಾಶವನ್ನು ಹೊಂದುತ್ತಾನೆ. ಹೀಗೆ ಲೋಕಕ್ಕಿಂತ ಜಗತ್ತಿನ ಸೃಷ್ಟಿಯು ವಿಲಕ್ಷಣವಾಗಿದೆ ಎಂದು ತಿಳಿಯಬೇಕು.

ವಿಪರ್ಯಯಾಧಿಕರಣ (೨-೩-೮)

ಯಾವ ಕ್ರಮದಲ್ಲಿ ಉತ್ಪತ್ತಿಯಾಗುತ್ತದೋ ಅದಕ್ಕೆ ವಿಪರೀತವಾಗಿ ಲಯವಾಗುತ್ತದೆ. ಕ್ರಮವಾಗಿ ಲಯವಾಗುತ್ತದೆಂದು ಹೇಳುವ ಶ್ರುತಿಗೂ ಕೂಡ ಉತ್ಪತ್ತಿ ಕ್ರಮಕ್ಕಿಂತ ವಿರುದ್ಧವಾದ ಕ್ರಮದ ಅಪೇಕ್ಷೆಯೇ ಇರುತ್ತದೆ. ಉತ್ಪತ್ತಿ ಕ್ರಮದಲ್ಲಿಯೇ ಸಂಹಾರಕ್ರಮವನ್ನು ಹೇಳುವ ಶ್ರುತಿಗೆ ಏಕೆ ವಿಪರೀತವಾಗಿ ಅರ್ಥವನ್ನು ಕಲ್ಪನೆ ಮಾಡಬೇಕು? ಎಂದರೆ ಯಾವ ಶ್ರುತಿಯಲ್ಲಿ ಕ್ರಮವಾಗಿ ಲಯವು ಶ್ರುತವಾಗಿದೆಯೋ, ಅದೇ ಶ್ರುತಿಯಲ್ಲಿಯೇ ವ್ಯುತ್ಕ್ರಮವಾಗಿ ಲಯವು ಶ್ರುತವಾಗಿದೆ ಎಂಬುದು ಭಾಷ್ಯದ ಅಭಿಪ್ರಾಯ.

ವಿವರಣೆ - ಬ್ರಹ್ಮಾದಿ ಜಗತ್ತನ್ನು ಪರಮಾತ್ಮನು ತಾರತಮ್ಯಕ್ಕೆ ಅನುಗುಣವಾಗಿ ಸೃಷ್ಟಿ ಮಾಡುತ್ತಾನೆ. ಅದೇ ರೀತಿಯಾಗಿ ಸಂಹಾರ ಮಾಡುವಾಗ ವಿಪರೀತ ಕ್ರಮವನ್ನು ಅನುಸರಿಸುತ್ತಾನೆ. ಆದ್ದರಿಂದ ಮೊದಲು ಹುಟ್ಟಿದ ಬ್ರಹ್ಮದೇವರು ಮೊದಲೇ ನಾಶವಾಗುವುದಿಲ್ಲ, ಕೊನೆಯಲ್ಲಿ ನಾಶವಾಗುತ್ತಾರೆ.

**ತತ್ವಪ್ರಕಾಶಿಕಾ – श्रुतित्वाविशेषाद् व्यक्रमश्रुत्या क्रमश्रुतेः कुतो बाधो विपरीतमेव किं न स्यादित्यत आह – अनुरूप इति ।। अस्ति क्रमव्युत्क्रमयोः क्रमपदप्रवेशो न त व्युत्क्रमपदप्रवशः । अतो निरवकाशया व्युत्क्रमश्रुत्या सावकाशक्रमश्रुतिबाधो युक्त इति भावः ।**

ಎರಡೂ ಶ್ರುತಿಗಳು ಸಮಾನವಾಗಿರುವುದರಿಂದ ವ್ಯುತ್ಕ್ರಮ ಶ್ರುತಿಯಿಂದ ಕ್ರಮ ಶ್ರುತಿಗೆ ಏಕೆ ಬಾಧವನ್ನು ಹೇಳಬೇಕು? ವಿಪರೀತವಾಗಿ ಏಕೆ ಬಾಧವನ್ನು ಹೇಳಬಾರದು? ಎಂಬ ಪ್ರಶ್ನೆಗೆ 'ಅನುರೂಪಃ' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ.

ಕ್ರಮ ಹಾಗೂ ವ್ಯುತ್ಕ್ರಮ ಎರಡೂ ಅರ್ಥಗಳಲ್ಲಿಯೂ ಕ್ರಮ ಎಂಬ ಪದದ ಪ್ರಯೋಗವನ್ನು ಮಾಡುವುದು ಕಂಡಿದೆ. ಆದರೆ ಈ ಎರಡು ಪದಗಳಲ್ಲಿ ವ್ಯುತ್ಕ್ರಮ ಎಂಬ ಪದವನ್ನು ಪ್ರಯೋಗ ಮಾಡಿರುವುದು ಕಂಡಿಲ್ಲ. ಆದ್ದರಿಂದ ವ್ಯುತ್ಕ್ರಮ ಶ್ರುತಿಯು ನಿರವಕಾಶವಾಯಿತು. ಈ ಶ್ರುತಿಯಿಂದ ಸಾವಕಾಶವಾದ ಕ್ರಮ ಶ್ರುತಿಗೆ ಬಾಧವನ್ನು ಹೇಳುವುದೇ ಉಚಿತ ಎಂಬುದು ಸಿದ್ಧಾಂತದ ಅಭಿಪ್ರಾಯ.

ವಿವರಣೆ - ಕ್ರಮವಾಗಿ ಲಯವನ್ನು ಹೇಳುವ ಭಾಲ್ಲವೇಯ ಶ್ರುತಿಯು ವ್ಯುತ್ಕ್ರಮವಾಗಿ ಲಯವನ್ನು ಹೇಳುವ ಚತುರ್ವೇದಶಿಖಾ ಶ್ರುತಿಯಿಂದ ಬಾಧಿತವಾಗುತ್ತದೆಂದು ಸಿದ್ಧಾಂತ ಮಾಡುತ್ತಿದ್ದೀರಿ? ಇದೇ ಏಕೆ ಸರಿ? ಭಾಲ್ಲವೇಯ ಶ್ರುತಿಯಿಂದ ಚತುರ್ವೇದಶಿಖಾ ಶ್ರುತಿಗೇಕೆ ಬಾಧವನ್ನು ಹೇಳಬಾರದು? ಎಂಬುದು ಪೂರ್ವಪಕ್ಷಕಾರರ ಧೋರಣೆ. ನಿರವಕಾಶವಾದುದಕ್ಕೆ ಬಾಧವನ್ನು ಹೇಳಬಾರದೆಂದು ಸಿದ್ಧಾಂತಿಗಳು ಉತ್ತರಿಸಿದ್ದಾರೆ. ವ್ಯುತ್ಕ್ರಮಶ್ರುತಿಯು ಏಕೆ ನಿರವಕಾಶ ಎಂದರೆ ವ್ಯುತ್ಕ್ರಮ ಶಬ್ದವನ್ನು ಕ್ರಮ ಹಾಗೂ ವ್ಯುತ್ಕ್ರಮ ಎಂಬೆರಡರ್ಥದಲ್ಲಿ ಪ್ರಯೋಗಿಸಿರುವುದು ಎಲ್ಲೂ ಕಂಡಿಲ್ಲ.

**ತತ್ವಪ್ರಕಾಶಿಕಾ – तथा च श्रुत्यन्तरम् । 'द्विविधः क्रम उद्दिष्टो व्युत्क्रमोऽनुक्रमस्तथा । सृष्टावन्यो लये चान्य इति वेदविदो विदुः' इति । एतेन बह्वीनामपि श्रुतीनां विरोधः परिहृतः ।**

ಈ ವಿಷಯದಲ್ಲಿ ಮತ್ತೊಂದು ಶ್ರುತಿ ಹೀಗಿದೆ-

'ದ್ವಿವಿಧಃ ಕ್ರಮ ಉದ್ದಿಷ್ಟೋ ವ್ಯುತ್ಕ್ರಮೋಽನುಕ್ರಮಸ್ತಥಾ ।
ಸೃಷ್ಟಾವನ್ಯೋ ಲಯೇ ಚಾನ್ಯ ಇತಿ ವೇದವಿದೋ ವಿದುಃ ॥'

ಕ್ರಮವು ಎರಡು ವಿಧವಾಗಿದೆ. ೧) ವ್ಯುತ್ಕ್ರಮ, (೨) ಅನುಕ್ರಮ ಎಂದು. ಸೃಷ್ಟಿಯಲ್ಲಿ ಅನುಕ್ರಮವು ಲಯದಲ್ಲಿ ವ್ಯುತ್ಕ್ರಮವು ಇರುತ್ತದೆಂದು ವೇದಜ್ಞರು ಹೇಳುತ್ತಾರೆ ಎಂದು.

ಹೀಗೆ ಹೇಳಿದ್ದರಿಂದ ಅನುಕ್ರಮವಾಗಿ ಲಯವನ್ನು ಹೇಳುವ ಅನೇಕ ಶ್ರುತಿಗಳ ವಿರೋಧವನ್ನು ಪರಿಹರಿಸಿದಂತಾಯಿತು.

ವಿವರಣೆ - ಕ್ರಮವಾಚಿಯಾದ ಶ್ರುತಿಗೆ ಅರ್ಥಾಂತರವನ್ನು ಮಾಡಿ ಸಾವಕಾಶತ್ವವನ್ನು ಹೇಳಲಾಯಿತು. ಇದರಿಂದ ವ್ಯುತ್ಕ್ರಮವಾಗಿ ಲಯವನ್ನು ಹೇಳುವ ಶ್ರುತಿಯೇ ನಿರವಕಾಶವಾಗಿ ಬಲಿಷ್ಠವಾಯಿತು. ಆದ್ದರಿಂದ ಉತ್ಪತ್ತಿಯ ಕ್ರಮದಿಂದಲೇ ಲಯವನ್ನು ಹೇಳುವ ಅನೇಕ ಶ್ರುತಿಗಳಿಗೂ ಕೂಡ ಈಗ ಅವಕಾಶವಿಲ್ಲ. ಏಕೆಂದರೆ ಆ ಶ್ರುತಿಯಲ್ಲಿರುವ ಕ್ರಮ ಎಂಬ ಶಬ್ದಕ್ಕೂ ಕೂಡ ವ್ಯುತ್ಕ್ರಮ ಎಂಬರ್ಥವನ್ನೇ ವಿವಕ್ಷಿಸಬೇಕು. ಆದ್ದರಿಂದ ಸಕಲ ಶ್ರುತಿಗಳೂ ಏಕಾರ್ಥಕವಾದವು.

**तत्वप्रकाशिका – व्युत्क्रमाल्लयाङ्गीकारे लोकविरोधनान्नासौ युक्त इत्यत आह – पूर्वेषामिति ।। लौकिकानां प्रायः सामर्थ्यसाम्यात्क्रमाल्लयेऽपि नासौ भवति । अत्र पूर्वोत्पन्नानां सामर्थ्याधिक्यात् । एवं च लोकविरोधस्यैव गुणत्वादिति भावः।**

ವ್ಯುತ್ಕ್ರಮದಲ್ಲಿ ಲಯವನ್ನು ಅಂಗೀಕಾರ ಮಾಡಿದರೆ ಲೋಕದ ವಿರೋಧವು ಬರುವುದರಿಂದ ಇದು ಹೇಗೆ ಯುಕ್ತವಾಗುತ್ತದೆ? ಎಂಬ ಪ್ರಶ್ನೆಗೆ 'ಪೂರ್ವೇಷಾಂ' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

ಲೋಕದಲ್ಲಿರುವ ಜನರು ಸಾಮಾನ್ಯವಾಗಿ ಒಂದೇ ರೀತಿಯಾದ ಸಾಮರ್ಥ್ಯವನ್ನು ಹೊಂದಿರುತ್ತಾರೆ. ಆದ್ದರಿಂದ ಕ್ರಮವಾಗಿ ಹುಟ್ಟಿ ಅದೇ ಕ್ರಮದಲ್ಲೇ ನಾಶವನ್ನು ಹೊಂದುತ್ತಾರೆ. ಆದರೆ ಇದನ್ನು ಜಗತ್ತಿನ ಸೃಷ್ಟಿಯ ವಿಷಯದಲ್ಲಿ ವಿವಕ್ಷಿಸಲು ಸಾಧ್ಯವಿಲ್ಲ. ಏಕೆಂದರೆ ಮೊದಲು ಹುಟ್ಟಿರುವವರಲ್ಲಿ ಸಾಮರಸ್ಯವು ಅಧಿಕವಾಗಿರುತ್ತದೆ. ಆದ್ದರಿಂದ ಲೋಕಕ್ಕೆ ವಿರುದ್ಧವಾಗಿ ಅರ್ಥವನ್ನು ಕಲ್ಪನೆ ಮಾಡುವುದೇ ಗುಣವಾಗುತ್ತದೆ.

ವಿವರಣೆ - ಲೋಕದಲ್ಲಿ ಹುಟ್ಟುವ ಜನರಲ್ಲಿ ಸಾಮರ್ಥ್ಯವು ಒಂದೇ ಥರ ಇರುವುದರಿಂದ ಇವರು ಯಾವ ಕ್ರಮದಲ್ಲಿ ಹುಟ್ಟುತ್ತಾರೋ ಅದೇ ಕ್ರಮದಲ್ಲೇ ಮೊದಲು ಅಜ್ಜನು, ಅನಂತರ ತಂದೆಯು, ಅನಂತರ ಮಗನು ಮರಣವನ್ನು ಹೊಂದುತ್ತಾರೆ. ಆದರೆ ಈಶ್ವರನಿಂದ ಚತುರ್ಮುಖ, ರುದ್ರ, ಇಂದ್ರ ಇವರು ಜನ್ಮವನ್ನು ಪಡೆದಾಗ ಅದೇ ಕ್ರಮದಲ್ಲೇ ಲಯವನ್ನು ಹೊಂದುವುದಿಲ್ಲ. ಏಕೆಂದರೆ ಇಂದ್ರನಿಗಿಂತ ರುದ್ರನು, ರುದ್ರನಿಗಿಂತ ಚತುರ್ಮುಖ ಅಧಿಕ ಬಲವುಳ್ಳವರಾಗಿದ್ದಾರೆ. ಆದ್ದರಿಂದ ಮೊದಲು ಹುಟ್ಟಿದ ಚತುರ್ಮುಖನು ಕೊನೆಯಲ್ಲಿಯೇ ನಾಶವನ್ನು ಹೊಂದುತ್ತಾನೆ. ಅದಕ್ಕಿಂತ ಮೊದಲು ರುದ್ರನು ನಾಶವನ್ನು ಹೊಂದುತ್ತಾನೆ. ಹೀಗೆ ಲೋಕಕ್ಕಿಂತ ಜಗತ್ತಿನ ಸೃಷ್ಟಿಯು ವಿಲಕ್ಷಣವಾಗಿದೆ ಎಂದು ತಿಳಿಯಬೇಕು.

ವಿಪರ್ಯಯಾಧಿಕರಣ (೨-೩-೮)

**तत्वप्रकाशिका – ननु पूर्वोत्पन्नानां सामर्थ्याधिक्यमेव कुतो येन पश्चाल्लयः स्यादित्यत आह – वामने चेति ।। पूर्वे पूर्वोत्पन्ने ।। प्रथमा वा । सन्निधीयतेऽत्रेति सन्निधानं प्रतिमा । तस्माच्छ्रुत्यविरोधेन व्युत्क्रमाल्लयसिद्धेर्युक्तो हरौ समन्वय इति सिद्धम् ।। १४ ।।**

ಮೊದಲು ಹುಟ್ಟಿದವರಿಗೆ ಸಾಮರ್ಥ್ಯವು ಅಧಿಕವಾಗಿರುತ್ತದೆಂಬುದು ಹೇಗೆ ಸಿದ್ಧವಾಗಿದೆ? ಹಾಗೇ ಸಿದ್ಧವಾಗಿದ್ದಲ್ಲಿ ಲಯವನ್ನು ಕೊನೆಯಲ್ಲಿ ಹೇಳಬಹುದಿತ್ತು ? ಈ ಪ್ರಶ್ನೆಗೆ 'ವಾಮನೇ ಚ' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

'ಪೂರ್ವೇ' ಎಂಬ ಶಬ್ದಕ್ಕೆ ಮೊದಲು ಹುಟ್ಟಿದ ದೇವತೆಗಳಲ್ಲಿ ಎಂದರ್ಥ. ಅಥವಾ ಪ್ರಥಮಾವಿಭಕ್ತಿಯ ಬಹುವಚನವನ್ನಾಗಿಯೂ ತಿಳಿಯಬಹುದು. 'ಸನ್ನಿಧೀಯತೇ ಅತ್ರ' ಎಂಬ ಪದವ್ಯುತ್ಪತ್ತಿಯಿಂದ ಸನ್ನಿಧಾನ ಶಬ್ದಕ್ಕೆ ಪ್ರತಿಮೆ ಎಂಬರ್ಥವೂ ದೊರಕುತ್ತದೆ. ಆದ್ದರಿಂದ ಎರಡು ಶ್ರುತಿಗಳಿಗೆ ವಿರೋಧವಿಲ್ಲದ ಕಾರಣ ವ್ಯುತ್ಕ್ರಮವು ಲಯವು ಸಿದ್ಧವಾಯಿತು. ಶ್ರೀಹರಿಯಲ್ಲಿ ವೇದಸಮನ್ವಯವೂ ನಿರಾತಂಕವಾಯಿತು.

ವಿವರಣೆ - ವಾಮನ ಪುರಾಣದಲ್ಲಿ 'ಪೂರ್ವೇ ಪೂರ್ವೇ ಯತೋ ವಿಷ್ಣೋಃ' ಎಂಬುದಾಗಿ 'ಪೂರ್ವೇ' ಎಂಬ ಪದಪ್ರಯೋಗವನ್ನು ಮಾಡಲಾಗಿದೆ. ಸಪ್ತಮೀ ವಿಭಕ್ತಿಯ ಏಕವಚನಾಂತವಾದ ಈ ಪದಕ್ಕೆ ದೇವತೆಯಲ್ಲಿ ಎಂಬರ್ಥವು ದೊರಕುತ್ತದೆ.

ಅಥವಾ 'ಪೂರ್ವಾಧಿಭ್ಯೋ ನವಭ್ಯೋ ವಾ' ಎಂಬ ಸೂತ್ರದ ಪ್ರಕಾರ ಪೂರ್ವ ಮೊದಲಾದ ಶಬ್ದಗಳಿಗೆ ಸರ್ವನಾಮಸಂಜ್ಞೆಯು ವಿಕಲ್ಪವಾಗಿ ವಿಧಿಸಿದ್ದರಿಂದ ಪೂರ್ವ ಶಬ್ದದ ಸಪ್ತಮೀ ವಿಭಕ್ತಿಯು 'ಪೂರ್ವಸ್ಮಿನ್' ಎಂದಾಗುತ್ತದೆ. ಆಗ ಪೂರ್ವೇ ಎಂಬ ಪ್ರಯೋಗವು ಹೇಗೆ ಯುಕ್ತವಾಗುತ್ತದೆ ? ಎಂಬ ಪ್ರಶ್ನೆಯು ಪ್ರಾಪ್ತವಾದರೆ ಟೀಕೆಯಲ್ಲಿ 'ಪೂರ್ವೇ' 'ಪೂರ್ವೋತ್ಪನ್ನೇ' ಎಂಬರ್ಥವನ್ನು ಬರೆದಿದ್ದಾರೆ. ಅಂದರೆ ಸರ್ವನಾಮಸಂಜ್ಞೆಯಿಲ್ಲದಿದ್ದಾಗ ಪೂರ್ವೇ ಎಂಬುದಕ್ಕೆ ಪೂರ್ವೋತ್ಪನ್ನೇ ಎಂಬರ್ಥವನ್ನು ತಿಳಿಯಬೇಕು ಎಂಬುದು ಟೀಕೆಯ ಅಭಿಪ್ರಾಯ. ಅಥವಾ ಸರ್ವನಾಮಸಂಜ್ಞೆಯನ್ನೇ ವಿವಕ್ಷಿಸಿದರೆ ಪ್ರಥಮಾವಿಭಕ್ತಿಯ ಬಹುವಚನರೂಪವೆಂದೂ ಕೂಡ ತಿಳಿಯಬಹುದು.

ಪೂರ್ವೇ' ಎಂಬುದನ್ನು ಬಹುವಚನಾಂತವಾಗಿ ವಿವಕ್ಷಿಸಿದಾಗ 'ಏತೇಷಾಂ' ಎಂಬ ಬಹುವಚನ ಪ್ರಯೋಗವು ಯುಕ್ತವಾಗುತ್ತದೆ. ಸಪ್ತಮೀ ವಿಭಕ್ತಿಯಾಗಿ ವಿವಕ್ಷಿಸಿದಾಗ ವೀಪ್ಸಾಗ್ರಹಣದಿಂದ ಬಹುವಚನದ ಅರ್ಥವು ಯುಕ್ತವಾಗುತ್ತದೆ.

ಅದೇ ಶ್ಲೋಕದಲ್ಲಿರುವ 'ಸನ್ನಿಧಾನಂ' ಎಂಬ ಪದಕ್ಕೆ 'ಪ್ರತಿಮಾ' ಎಂಬರ್ಥವನ್ನು ವಿವಕ್ಷಿಸಬೇಕು. ಬ್ರಹ್ಮಾದಿ ದೇವತೆಗಳು ವಿಷ್ಣುವಿನ ಸನ್ನಿಧಾನಪಾತ್ರರಾಗುತ್ತಾರೆ ಎಂದರೆ ವಿಷ್ಣುವಿನ ಪ್ರತಿಮೆಯಾಗಿದ್ದಾರೆ ಎಂಬ ಅಭಿಪ್ರಾಯವು ಇದರಿಂದ ತಿಳಿಯುತ್ತದೆ.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ವಿಪರ್ಯಯಾಧಿಕರಣ ಮುಗಿಯಿತು

ವಿಪರ್ಯಯಾಧಿಕರಣ

(೨-೩-೮)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## विपर्ययाधिकरणम्

ಸಂಹಾರಕ್ರಮವು ಸೃಷ್ಟಿಕ್ರಮಕ್ಕೆ ವಿಪರೀತವಾಗಿದೆ

**।। विपर्ययेण तु क्रमोऽत उपपद्यते च ।। सङ्गतिमाह – सर्वं भगवतेति ।। अत्र श्रुतिसमन्वयेनोक्तस्य विष्णोस्स्रष्टृत्वसंहर्तृत्वादेः सिद्धये ''व्युत्क्रमाद्विलयश्च'' इति श्रुतिः किं ''क्रमाद्विलीयत'' इति श्रुत्या लोके प्रायेणोत्पत्तिक्रमेणैव लयदर्शनयुक्तयनुगृहीतया बाधितोत नेति चिन्ता । (क्तं विष्णोःस्रष्टृत्वादिकमयुक्तं न वेति चिन्ता । तदर्थं श्रुतिरप्रमाणमुत नेति । तदर्थं ''व्युत्क्रमाद्विलयश्च'' इति श्रुतिः किं ''क्रमाद्विलीयत'' इति श्रुत्या लोके प्रायेणोत्पत्तिक्रमेणैव लयदर्शनयुक्तयनुगृहीतया बाधितोत नेति ।)**

'ವಿಪರ್ಯಯೇಣ ತು ಕ್ರಮೋಽತ ಉಪಪದ್ಯತೇ ಚ' ಎಂಬ ಸೂತ್ರದಿಂದ ವಿಪರ್ಯಾಧಿಕರಣವು ಪ್ರಾರಂಭವಾಗುತ್ತಿದೆ. ಈ ಅಧಿಕರಣಕ್ಕೆ ಸಂಬಂಧಪಟ್ಟ ಸಂಗತಿಯನ್ನು ಟೀಕೆಯನ್ನು 'ಸರ್ವಂ ಭಗವತ' ಎಂಬ ವಾಕ್ಯದಿಂದ ಹೇಳಿರುತ್ತಾರೆ.

ಅಧಿಕರಣದ ಸಂಶಯ ಪರಂಪರೆ – ಶ್ರುತಿಸಮನ್ವಯದ ಮೂಲಕ ಜಗತ್‌ಸೃಷ್ಟೃತ್ವ ಸಂಹರ್ತೃತ್ವ ಮೊದಲಾದವುಗಳನ್ನು ವಿಷ್ಣುವಿನಲ್ಲಿ ಶ್ರುತಿಸಮನ್ವಯದ ಮೂಲಕ ಸಮರ್ಥಿಸಲಾಯಿತು. ಈ ಪ್ರಮೇಯವು ಸಿದ್ಧವಾಗಬೇಕೆಂದರೆ 'ವ್ಯತ್ಕ್ರಮಾದ್ ವಿಲಯಶ್ಚ' 'ವುತ್ಕ್ರಮದಿಂದ ಲಯವಾಗುತ್ತದೆ' ಎಂಬುದಾಗಿ ಹೇಳುವ ಶ್ರುತಿಯು, 'ಕ್ರಮಾದ್ವಿಲಯತೇ'- 'ಕ್ರಮವಾಗಿ ಲಯವಾಗುತ್ತದೆ' ಎಂಬ ಶ್ರುತಿಯಿಂದ ಬಾಧಿತವಾಗುತ್ತದೆ. ಏಕೆಂದರೆ ಲೋಕದಲ್ಲಿ ಪ್ರಾಯಶಃ ಪದಾರ್ಥಗಳು ಹೇಗೆ ಹುಟ್ಟುತ್ತವೋ, ಅದೇ ಕ್ರಮದಲ್ಲೇ ನಾಶವನ್ನು ಹೊಂದುತ್ತವೆ ಎಂದು ಕಂಡಿದೆ. ಈ ಯುಕ್ತಿಯ

ಬೆಂಬಲವಿರುವುದರಿಂದ 'ಕ್ರಮಾದ್ವಿವೀಯತೇ' ಎಂಬ ಶ್ರುತಿಯೇ ಪ್ರಮಾಣವೆಂದಾಗುತ್ತದೆ. ಇಂತಹ ಶ್ರುತಿಯ ಆಧಾರದಿಂದ ವ್ಯುತ್ಕ್ರಮದಿಂದ ಲಯವಾಗುತ್ತದೆಂದು ಹೇಳಬೇಕೋ? ಅಥವಾ ವ್ಯುತ್ಕ್ರಮದಿಂದ ಲಯವಾಗುತ್ತದೆ ಎಂದು ಹೇಳುವ ಶ್ರುತಿಯು ಬಾಧಿತ- ವಾಗುವುದಿಲ್ಲವಾದ್ದರಿಂದ ಪ್ರಮಾಣವಾಗುತ್ತದೆಂದು ಹೇಳಬೇಕೋ? ಈ ಸಂಶಯವು ಪರಿಹಾರವಾಗಬೇಕು. ಅಥವಾ ಈ ಸಂಶಯವನ್ನು ಮತ್ತೊಂದು ರೀತಿಯಲ್ಲಿ ತಿಳಿಯಬಹುದು?

**तदर्थं क्रमात्'' इति श्रुतौ क्रमशब्दः किमनुक्रमपरः किं वा व्युत्क्रमपर इति । तदर्थं लोके प्रथमोत्पन्नानां प्रथमं नाशे किं प्रथमोत्पत्तिः प्रयोजिका किं वा सामर्थ्यविशेषाभाव इति ।**

ಹಿಂದಿನ ಸಂಶಯದ ಪರಿಹಾರಕ್ಕಾಗಿ 'ಕ್ರಮಾದ್ವಿಲೀಯತೇ' ಎಂಬ ಶ್ರುತಿಯಲ್ಲಿರುವ ಕ್ರಮ ಎಂಬ ಪದಕ್ಕೆ ಅನುಕ್ರಮ ಎಂದರ್ಥ ಮಾಡಬೇಕೋ ಅಥವಾ ವ್ಯುತ್ಕ್ರಮ ಎಂದರ್ಥ ಮಾಡಬೇಕೋ? ಎಂಬ ಸಂಶಯವು ಪರಿಹಾರವಾಗಬೇಕು. ಇದರ ಪರಿಹಾರಕ್ಕಾಗಿ ಲೋಕದಲ್ಲಿ ಮೊದಲು ಹುಟ್ಟಿದ ಪದಾರ್ಥವು ಮೊದಲು ನಾಶವಾಗುತ್ತದೆ. ಎಂಬುದಕ್ಕೆ ಪ್ರಥಮೋತ್ಪತ್ತಿಯನ್ನು ಪ್ರಯೋಜಕವೆಂದು ಪರಿಗಣಿಸಬೇಕೋ ಅಥವಾ ಸಾಮರ್ಥ್ಯವಿಶೇಷವಿಲ್ಲವೆಂಬುದನ್ನು ಪರಿಗಣಿಸಬೇಕೋ? ಎಂಬ ಸಂಶಯವು ಪರಿಹಾರವಾಗಬೇಕು.

೧. ಮೊದಲನೆಯ ಸಂಶಯವನ್ನೇ ಪ್ರಕಾರಾಂತರದಿಂದ ತೋರಿಸುವುದನ್ನು ಮುದ್ರಿಸಲಾಗಿದೆ. ವಿಷ್ಣುವಿಗೆ ಜಗತ್ಸ್ರಷ್ಟೃತ್ವವನ್ನು ಜನ್ಮಾಧಿಕರಣದಲ್ಲಿ ಸಮರ್ಥಿಸಲಾಯಿತು. ಇದು ಅಯುಕ್ತವೋ ಅಥವಾ ಯುಕ್ತವೋ? ಎಂಬುದು ಪ್ರಥಮ ಸಂಶಯ. ಅದಕ್ಕಾಗಿ ಶ್ರುತಿಯು ಅಪ್ರಮಾಣವೋ ಅಥವಾ ಪ್ರಮಾಣವೋ? ಎಂಬುದು ಎರಡನೆಯ ಸಂಶಯ. ಅದಕ್ಕಾಗಿ 'ವ್ಯುತ್ಕ್ರಮಾದ್ ವಿನಿಲಯಶ್ಚ' ಎಂಬ ಶ್ರುತಿಯು ಕ್ರಮಾದ್ವಿಲೀಯತೇ ಎಂಬ ಶ್ರುತಿಯಿಂದ ಬಾಧಿತವಾಗುತ್ತದೆ. ಏಕೆಂದರೆ ಪ್ರಾಯಶಃ ವ್ಯುತ್ಪತ್ತಿ ಕ್ರಮದಿಂದಲೇ ಲಯವಾಗುತ್ತದೆಂಬುದು ಲೋಕದಲ್ಲಿ ಕಂಡಿದೆ. ಈ ಯುಕ್ತಿಯ ಬೆಂಬಲವಿರುವುದರಿಂದ ವ್ಯುತ್ಕ್ರಮಾದ್‌ವಿಲಯಶ್ಚ ಎಂಬ ಶ್ರುತಿಯು ಬಾಧಿತವಾಗುತ್ತದೆಂದು ಹೇಳಬೇಕೋ ಅಥವಾ ಬಾಧಿತ- ವಾಗುವುದಿಲ್ಲವೆಂದು ಹೇಳಬೇಕೋ? ಎಂಬುದು ಮೂರನೆಯ ಸಂಶಯ.

**''लोकानुसारित्वं बहुवाक्यानुरोधश्च'' इति न्यायविवरणोक्तं पूर्वपक्षयुक्तिद्वयं विवृणोति ।। लोकानुकूलत्वगुणेनेत्यादिना ।।**

ನ್ಯಾಯವಿವರಣದಲ್ಲಿ ಲೋಕಾನುಸಾರಿತ್ವ ಹಾಗೂ ಬಹುವಾಕ್ಯಾನುರೋಧ ಎಂಬೆರಡು ಪೂರ್ವಪಕ್ಷಯುಕ್ತಿಗಳನ್ನು ತೋರಿಸಿದ್ದಾರೆ. ಅದನ್ನೇ ಪ್ರಕೃತ ಟೀಕೆಯಲ್ಲಿ ಲೋಕಾನುಕೂಲತ್ವಗುಣೇನ ಎಂಬ ವಾಕ್ಯದಿಂದ ವಿವರಿಸಿರುತ್ತಾರೆ.

ವಿಪರ್ಯಯಾಧಿಕರಣ (೨-೩-೮)

**क्रमव्युत्क्रमयोः क्रमपदप्रवेश इति ।। अनुक्रमव्युत्क्रमयोः क्रमपदवाच्यतया प्रवेश इत्यर्थः । अनेन च ''क्रमवाक्यस्य सावकाशत्वम्'' इति न्यायविवरणोक्ता सिद्धान्तयुक्तिः क्रमपदमक्रमस्य व्यावर्तकम् । नतु व्युत्क्रमस्य ।**

ಕ್ರಮ ಹಾಗೂ ವ್ಯುತ್ಕ್ರಮಗಳಲ್ಲಿ ಕ್ರಮ ಪದವು ಪ್ರವಿಷ್ಟವಾಗಿದೆ ಎಂದು ಟೀಕೆಯಲ್ಲಿ ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ – ಅನುಕ್ರಮವು ಹೇಗೆ ಕ್ರಮಪದದಿಂದ ಪ್ರತಿಪಾದ್ಯವಾಗಿದೆಯೋ ಅದರಂತೆ ವ್ಯುತ್ಕ್ರಮವೂ ಕೂಡ ಕ್ರಮಪದದಿಂದಲೇ ಪ್ರತಿಪಾದ್ಯವಾಗಿದೆ. ಆದ್ದರಿಂದ ಎರಡರಲ್ಲಿಯೂ ಕ್ರಮಪದವು ಪ್ರವೇಶವನ್ನು ಹೊಂದಿದೆ ಎಂದು.

ಹೀಗೆ ಹೇಳಿದ್ದರಿಂದ ಕ್ರಮವಾಕ್ಯಸ್ಯ ಸಾವಕಾಶತ್ವಂ ಎಂಬ ನ್ಯಾಯವಿವರಣವನ್ನು ವ್ಯಾಖ್ಯಾನ ಮಾಡಿದಂತಾಯಿತು. ಕ್ರಮಾದ್ವಿಲೀಯತೇ ಎಂಬ ಶ್ರುತಿಯು ಸಾವಕಾಶವಾಗಿದೆ ಎಂಬುದೇ ಈ ಅಧಿಕರಣ ಸಿದ್ಧಾಂತ ಯುಕ್ತಿ. ಇಲ್ಲಿರುವ ಕ್ರಮಪದವು ಅನುಕ್ರಮಕ್ಕೆ ವ್ಯಾವರ್ತಕ ಹೊರತು ವ್ಯುತ್ಕ್ರಮಕ್ಕೆ ಅಲ್ಲ.

ವಿವರಣೆ – ಯಾವ ಕ್ರಮದಲ್ಲಿ ಉತ್ಪತ್ತಿಯಾಗಿರುತ್ತದೋ ಅದೇ ಕ್ರಮದಲ್ಲಿ ನಾಶವಾಗುತ್ತದೆಂಬುದು ಲೋಕದಲ್ಲಿ ಕಂಡ ನಿಯಮ. ಆದರೆ ದೇವತೆಗಳ ಸೃಷ್ಟಿಯ ವಿಷಯದಲ್ಲಿ ಹೀಗೆ ಹೇಳಲು ಸಾಧ್ಯವಿಲ್ಲ. ಉತ್ತಮ ದೇವತೆಗಳಿಗೆ ವ್ಯಾಪ್ತಿ ಹಾಗೂ ಸಾಮರ್ಥ್ಯಗಳು ಅಧಿಕವಾಗಿರುವುದರಿಂದ ಮೊದಲು ಹುಟ್ಟಿದವರು ಮೊದಲು ಲಯವನ್ನು ಹೊಂದಲಾರರು. ಅನಂತರ ಹುಟ್ಟಿದವರಲ್ಲಿ ಸಾಮರ್ಥ್ಯಾದಿಗಳು ಕಮ್ಮಿಯಿರುವುದರಿಂದ ಮೊದಲು ನಾಶವನ್ನು ಹೊಂದುತ್ತಾರೆ. ಹಾಗಾದರೆ ಕ್ರಮಾದ್ವಿಲೀಯತೇ ಎಂಬ ಶ್ರುತಿಗೆ ಏನು ಅರ್ಥ? ಎಂಬ ಪ್ರಶ್ನೆ ಬರಬಹುದು. ಇಲ್ಲಿರುವ ಕ್ರಮಪದಕ್ಕೆ ವ್ಯುತ್ಕ್ರಮದಿಂದ ವ್ಯಯವಿಲ್ಲ ಎಂಬ ಅಭಿಪ್ರಾಯವಲ್ಲ ಹೊರತು ಅನುಕ್ರಮವಾಗಿ ಲಯವನ್ನು ಹೊಂದಲಾರದು ಎಂದರ್ಥ. ಮೊದಲು ಯಾರು ಬೇಕಾದರೂ ಅವರು ನಾಶವನ್ನು ಹೊಂದುತ್ತಾರೆಂಬುದನ್ನು ಈ ಶ್ರುತಿ ನಿಷೇಧ ಮಾಡುತ್ತಿದೆ. ಹೊರತು ವ್ಯುತ್ಕ್ರಮವಾಗಿ ಲಯವನ್ನು ಹೊಂದುವುದಿಲ್ಲ ಎಂಬುದನ್ನು ನಿಷೇಧ ಮಾಡುತ್ತಿಲ್ಲ. ಆದ್ದರಿಂದ ಯಾವ ಕ್ರಮದಲ್ಲಿ ವ್ಯುತ್ಕ್ರಮದಲ್ಲಿ ದೇವತೆಗಳು ಹೊಂದಿರುತ್ತಾರೋ ಅದಕ್ಕೆ ವ್ಯುತ್ಕ್ರಮದಲ್ಲಿ ಲಯವನ್ನು ಹೊಂದುತ್ತಾರೆಂದು ತಿಳಿಯಬೇಕು.

**आरोहक्रमादवरोहक्रमस्येवानुक्रमवद्व्युत्क्रमस्यापि क्रमत्वादिति विवृतेति द्रष्टव्यम् ।**

ಆರೋಹಕ್ರಮದಂತೆ ಅವರೋಹ ಕ್ರಮದಲ್ಲೂ ಕೂಡ ಕ್ರಮಶಬ್ದ ಪ್ರಯೋಗವು ಲೋಕದಲ್ಲಿ ಇರುವುದು ಕಂಡಿದೆ. ಅದರಂತೆ ಅನುಕ್ರಮವೂ ಹೇಗೆ ಕ್ರಮ ಎಂದು ಕರೆಸಿಕೊಳ್ಳುತ್ತದೋ, ಅದರಂತೆ ವ್ಯುತ್ಕ್ರಮವೂ ಕೂಡ ಕ್ರಮ ಎಂದೇ ಕರೆಸಿಕೊಳ್ಳುತ್ತದೆ. ಹೀಗೆ ನ್ಯಾಯವಿವರಣದಲ್ಲಿ ಹೇಳಲ್ಪಟ್ಟ ಕ್ರಮವಾಕ್ಯಸ್ಯ ಸಾವಕಾಶತ್ವಂ ಎಂಬ ಸಿದ್ಧಾಂತಿಯುಕ್ತಿಯನ್ನು ವಿವರಣೆ ಮಾಡಿದಂತಾಯಿತು ಎಂದು ತಿಳಿಯಬೇಕು.

**सप्तमीपक्ष इव प्रथमापक्षेऽपि सन्निधानशब्दान्वयो नेत्यत आह – सन्निधीयतेऽत्रेति ।।**

ಪೂರ್ವೇ ಎಂಬುದನ್ನು ಸಪ್ತಮೀವಿಭಕ್ತ್ಯಂತವಾಗಿ ಅನ್ವಯವನ್ನು ಮಾಡಿದಾಗ ಸನ್ನಿಧಾನ ಶಬ್ದದ ಜೊತೆ ಸುಗಮವಾಗಿ ಅನ್ವಯವಾಗುತ್ತದೆ. ಆದರೆ ಪೂರ್ವೇ ಎಂಬುದನ್ನು ಪ್ರಥಮಾ ಬಹುವಚನವೆಂದು ವಿವಕ್ಷಿಸಿದಾಗ ಸನ್ನಿಧಾನ ಶಬ್ದವು ಸಮಂಜಸವಾಗಿ ಅನ್ವಯವನ್ನು ಹೊಂದುವುದಿಲ್ಲ? ಈ ಪ್ರಶ್ನೆಗೆ ತತ್ವಪ್ರಕಾಶಿಕಾದಲ್ಲಿ ಸನ್ನಿಧೀಯತೇಽತ್ರ ಇತ್ಯಾದಿಯಾಗಿ ಉತ್ತರವನ್ನು ನೀಡಿದ್ದಾರೆ.

ವಿವರಣೆ – ಸಪ್ತಮೀ ಏಕವಚನದಲ್ಲಿ ಪೂರ್ವಸ್ಮಿನ್ ಎಂದು ರೂಪವಾಗುತ್ತದೆ. ಆದರೆ ಸರ್ವನಾಮ ಸಂಜ್ಞೆ ಇಲ್ಲದಿದ್ದಾಗ ಪೂರ್ವೇ ಎಂಬ ರೂಪವು ಸಾಧವಾಗುತ್ತದೆ. ಇದಕ್ಕೆ 'ಪೂರ್ವೋತ್ಪನ್ನೇ' ಎಂದರ್ಥ. ಮೊದಲು ಹುಟ್ಟಿದವರಲ್ಲಿ ಎಂಬುದು ಇದರ ಅಭಿಪ್ರಾಯವಾಗುತ್ತದೆ. ಪ್ರಥಮಾ ವಿಭಕ್ತಿಯ ಬಹುವಚನವೆಂದೂ ಕೂಡ ತಿಳಿಯಬಹುದು. ಆಗ ಮೊದಲು ಹುಟ್ಟಿದ ತತ್ವಾಭಿಮಾನಿದೇವತೆಗಳು ಕ್ರಮವಾಗಿ ವಿಷ್ಣುವಿನ ಸನ್ನಿಧಾನವನ್ನು ಹೊಂದಿರುತ್ತಾರೆ ಎಂದರ್ಥವು ಲಭಿಸುತ್ತದೆ. 'ಸನ್ನಿಧೀಯತೇ ಇತಿ ಸನ್ನಿಧಾನಂ' ಎಂಬ ಕರಣವ್ಯುತ್ಪತ್ತಿಯನ್ನು ಅಂಗೀಕರಿಸಿದಾಗ ಸನ್ನಿಧಾನಕ್ಕೆ ಆಶಯರಾಗಿದ್ದಾರೆಂಬ ಅರ್ಥವು ತಿಳಿಯುತ್ತದೆ. ಆದ್ದರಿಂದ ಸನ್ನಿಧಾನ ಶಬ್ದದ ಜೊತೆ ಅನ್ವಯವಿಲ್ಲವೆಂದು ತಿಳಿಯಬಾರದು.

**सूत्राक्षरार्थस्तु ।। ''क्रमाद्विलीयत'' इति श्रुत्युक्तः क्रमस्तु अतः प्रकृतात्सृष्टिक्रमात् विपर्ययेण भवति । अत एव ''व्युत्क्रमाद्विलयश्चेति वाक्यशेषादेव उपपद्यते च विपर्ययः पूर्वोत्पन्नानां सामर्थ्याधिक्यादिति ।**

ಸೂತ್ರಾರ್ಥ ಹೀಗಿದೆ - 'ಕ್ರಮಾದ್ವಿಲೀಯತೇ' ಎಂಬ ಶ್ರುತಿಯು ಕ್ರಮವಾಗಿ ಲಯ ಹೊಂದುತ್ತದೆಂದು ಹೇಳುತ್ತಿದೆ. ಈ ಶ್ರುತಿಗೆ ಉತ್ಪತ್ತಿ ಕ್ರಮಕ್ಕಿಂತ ವಿರುದ್ಧವಾದ ಕ್ರಮದಲ್ಲಿ ಲಯವನ್ನು ಹೊಂದುತ್ತದೆಂದೇ ಅರ್ಥವನ್ನು ಹೇಳಬೇಕು. ಏಕೆಂದರೆ 'ವ್ಯುತ್ಕ್ರಮಾದ್ವಿಲಯಶ್ಚ' ಎಂಬ ವಾಕ್ಯಶೇಷದಿಂದ ಮೊದಲಿರುವ ವಾಕ್ಯಕ್ಕೂ ವ್ಯುತ್ಕ್ರಮದಿಂದ ಲಯವೆಂಬ ಅರ್ಥವನ್ನು ಹೇಳಬೇಕು. ಇದು ಉಪಪನ್ನವೂ ಆಗುತ್ತದೆ. ಏಕೆಂದರೆ ಮೊದಲು ಹುಟ್ಟಿದ ದೇವತೆಗಳಲ್ಲಿ ಸಾಮರ್ಥ್ಯಾಧಿಕ್ಯವಿರುತ್ತದೆ.

ವಿವರಣೆ – ಸೂತ್ರದಲ್ಲಿ ಅತಃ ಎಂಬುದನ್ನು ಆವೃತ್ತಿ ಮಾಡಬೇಕು. 'ತು' ಎಂಬ ಪದಕ್ಕೆ ಏವ ಎಂಬ ಅರ್ಥವನ್ನು ಹೇಳಬೇಕು ಆಗ ಸೂತ್ರಕ್ಕೆ ಹೀಗರ್ಥ – ಅತಃ = ಉತ್ಪತ್ತಿ ಕ್ರಮಕ್ಕಿಂತ ವಿಪರ್ಯೇಣ= ವಿಪರೀತವಾಗಿ, ಕ್ರಮಃ ಕ್ರಮವನ್ನು ಹೇಳಬೇಕು. ಹೊರತು ಉತ್ಪತ್ತಿ ಕ್ರಮದಂತೆ ಲಯಕ್ರಮವನ್ನು ಹೇಳಬಾರದು. ಏಕೆಂದರೆ 'ವ್ಯುತ್ಕ್ರಮಾತ್ ವಿಲಯಶ್ಚ' ಎಂಬ ವಾಕ್ಯಶೇಷ ಇರುವುದರಿಂದಲೇ ವಿಪರೀತಕ್ರಮವು ಉಪಪನ್ನವಾಗುತ್ತದೆ. ಏಕೆಂದರೆ ಮೊದಲು ಹುಟ್ಟಿದ ದೇವತೆಗಳು ಅನಂತರ ಹುಟ್ಟಿದ ದೇವತೆಗಳಿಗಿಂತ ಹೆಚ್ಚಿನ ಸಾಮರ್ಥ್ಯವನ್ನು ಹೊಂದಿರುತ್ತಾರೆ.

**अन्ये तु ''यत्प्रयन्तीत्यादिषु लयस्यैव श्रवणात्सृष्टाविव लये क्रमस्याश्रवणात्क्रमापेक्षायां श्रौते लये श्रौतः सजातीयः सृष्टिक्रम एव ग्राह्य इति प्राप्ते लये सृष्टिक्रमग्रहे उपादानलये उपादेयस्थितिः स्यात् । सा चायुक्ता ।**

**तस्माद्विजातीयोऽपि दृष्टः सृष्टिविपरीतक्रम एव ग्राह्यः । दृष्टो हि मृदो जातस्य घटस्य मृदप्यय इति सिद्धान्त'' इत्याहुः ॥**

ಅದ್ವೈತಿಗಳ ಅಧಿಕರಣ ರಚನೆ ಹೀಗಿದೆ. 'ಯತ್ಪ್ರಯಂತೀತ್ಯಾದಿಷು' ಇತ್ಯಾದಿ ಶ್ರುತಿಯಲ್ಲಿ ಲಯವಾಗುತ್ತದೆ ಎಂದಷ್ಟೇ ಹೇಳಲಾಗಿದೆ. ಸೃಷ್ಟಿಯಲ್ಲಿ ಹೇಗೆ ಕ್ರಮವನ್ನು ಹೇಳಲಾಗಿದೆಯೋ ಅದರಂತೆ ಕ್ರಮವಾದ ಲಯ ಶ್ರುತವಾಗಿರುವುದಿಲ್ಲ. ಒಂದುವೇಳೆ ಲಯದಲ್ಲಿಯೂ ಕೂಡ ಕ್ರಮವನ್ನು ಅಪೇಕ್ಷಿಸುವುದಾದರೆ ಶ್ರುತಿ ಸಿದ್ಧವಾದ ಲಯವಿಷಯದಲ್ಲಿ ಶ್ರುತಿಗೆ ಅನುಗುಣವಾಗಿ ಸಜಾತೀಯವಾದ ಸೃಷ್ಟಿಕ್ರಮವನ್ನೇ ಅನುಸರಿಸಬೇಕು. ಯಾವ ಕ್ರಮದಲ್ಲಿ ಸೃಷ್ಟಿಯಾಗಿದೆಯೋ ಅದೇ ಕ್ರಮದಲ್ಲಿಯೇ ಲಯವನ್ನೂ ಕೂಡ ಹೇಳಬೇಕು. ಇಷ್ಟು ಅಧಿಕರಣದ ಪೂರ್ವಪಕ್ಷ.

ಸಿದ್ಧಾಂತ – ಲಯದಲ್ಲಿಯೂ ಕೂಡ ಸೃಷ್ಟಿಕ್ರಮವನ್ನು ಅನುಸರಿಸಿದರೆ ಉಪಾದಾನವು ನಾಶವಾದಾಗ ಉಪಾದೇಯ ಮಾತ್ರ ಇರುವ ಸ್ಥಿತಿ ಬರುತ್ತದೆ. ಆದರೆ ಇದು ಅಯುಕ್ತ. ಹಾಗಾಗಿ ವಿಜಾತೀಯವಾದರೂ ಕೂಡ ಪ್ರತ್ಯಕ್ಷ ಸಿದ್ಧವಾದ ಸೃಷ್ಟಿಕ್ರಮಕ್ಕೆ ವಿಪರೀತವಾಗಿಯೇ ಲಯಕ್ರಮವನ್ನು ಒಪ್ಪಬೇಕು. ಪ್ರತ್ಯಕ್ಷ ಸಿದ್ಧವಾದ ಮಣ್ಣಿನಿಂದ ಹುಟ್ಟಿದ ಘಟವು ಮಣ್ಣಿನಲ್ಲಿ ಲಯ ಹೊಂದುವುದು ಕಂಡಿದೆ. ಹೊರತು ಘಟ ಹಾಗೆಯೇ ಉಳಿದು ಮಣ್ಣು ಮಾತ್ರ ನಾಶವಾಗಿದ್ದು ಕಂಡಿರುವುದಿಲ್ಲ. ಆದ್ದರಿಂದ ವಿಪರೀತ ಕ್ರಮದಲ್ಲಿಯೇ ಲಯವನ್ನು ಒಪ್ಪಬೇಕು.

**तन्न । अस्य विचारस्य श्रुतेः केनचित्सह विरोधानिरासकत्वेनाध्यायासङ्गतेः। मम रीत्या लोकानुसारित्वादियुक्तयनुगृहीतया ''क्रमाद्विलीयत'' इति भाष्योक्तश्रुत्या ''व्युत्क्रमाद्विलयश्च'' इति भाष्योक्तश्रुतेर्विरोधनिरासेन साक्षात्सङ्गतिसम्भवे प्रासङ्गिकत्वायोगाच्च ।**

ಅದ್ವೈತಿಗಳ ಈ ವ್ಯಾಖ್ಯಾನವೂ ತಪ್ಪು. ಈ ಪಾದವು ಶ್ರುತಿವಿರೋಧ ಪರಿಹಾರಕ್ಕಾಗಿಯೇ ಹೊರಟಿದೆ. ಆದರೆ ಅದ್ವೈತಿಗಳು ಯಾವುದೇ ಶ್ರುತಿಯ ವಿರೋಧವನ್ನು ಪರಿಹಾರ ಮಾಡದೇ ಈ ಅಧಿಕರಣದ ಸಿದ್ಧಾಂತವನ್ನು ಮಾಡುತ್ತಿದ್ದಾರೆ. ಹೀಗೆ ಯಾವುದೇ ಶ್ರುತಿಯ ವಿರೋಧವನ್ನು ಪರಿಹಾರ ಮಾಡದ ಕಾರಣ, ಈ ವಿಪರ್ಯಾಧಿಕರಣಕ್ಕೆ ಅಧ್ಯಾಯಸಂಗತಿಯೇ ಕೂಡುವುದಿಲ್ಲ.

ನಮ್ಮ ರೀತಿಯಲ್ಲಿ ಲೋಕಾನುಸಾರಿತ್ವ ಮೊದಲಾದ ಯುಕ್ತಿಯಿಂದ ಉಪೋದ್ಬಲಿತವಾದ 'ಕ್ರಮಾದ್ವಿಲೀಯತೇ' ಎಂಬ ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಯ ಆಧಾರವಿದೆ. ಇದಕ್ಕೆ 'ವ್ಯುತ್ಕ್ರಮಾದ್ವಿಲಯಶ್ಚ' ಭಾಷ್ಯದಲ್ಲಿ ಉದಾಹರಿಸಿದ ಮತ್ತೊಂದು ಶ್ರುತಿಯ ವಿರೋಧವೂ ಕೂಡ ಬರುವುದಿಲ್ಲ. ಆದ್ದರಿಂದ 'ಕ್ರಮಾದ್ವಿಲೀಯತೇ' ಹಾಗೂ 'ವ್ಯುತ್ಕ್ರಮಾದ್ವಿಲಯಶ್ಚ' ಎಂಬೆರಡು ಶ್ರುತಿಗಳ ಪರಸ್ಪರ ವಿರೋಧವನ್ನು ಇಲ್ಲಿ ಪರಿಹಾರ ಮಾಡಿ, ಅಧಿಕರಣಸಂಗತಿಯನ್ನು ಕೂಡಿಸಲು ಬರುವಾಗ ಈ ಅಧಿಕರಣವು ಪ್ರಾಸಂಗಿಕವಾಗಿ ಹೊರಟಿದೆ ಎಂಬುದು ತಪ್ಪಾಗುತ್ತದೆ.

ಪರಿಪೂರ್ಣಚಂದ್ರಿಕಾ

ವಿವರಣೆ - ಕ್ರಮವಾಗಿ ಲಯವನ್ನು ಹೇಳುವ ಶ್ರುತಿಯ ವಿರೋಧವನ್ನು ಅದ್ವೈತಿಗಳು ಪರಿಹಾರ ಮಾಡಿಲ್ಲ. ವ್ಯುತ್ಕ್ರಮವಾಗಿ ಲಯವನ್ನು ಹೇಳುವ ಶ್ರುತಿಯ ವಿರೋಧವನ್ನೂ ಕೂಡ ಪರಿಹಾರ ಮಾಡಿರುವುದಿಲ್ಲ. ಇದನ್ನು ಬಿಟ್ಟು ಶ್ರುತಿಯಲ್ಲಿ ವ್ಯುತ್ಪತ್ತಿಯಂತೆ ಲಯವನ್ನು ಕ್ರಮದಲ್ಲಿ ಹೇಳಿಲ್ಲವಾದ್ದರಿಂದ ಲಯದಲ್ಲಿ ಕ್ರಮವಿಲ್ಲ ಎಂದಷ್ಟೇ ಪೂರ್ವಪಕ್ಷವನ್ನು ಮಾಡಿ, ಅಧಿಕರಣವನ್ನು ಸ್ಥಾಪನೆ ಮಾಡಿದ್ದಾರೆ. ಇದು ಅಸಂಗತವಾಗುತ್ತದೆಂದು ಅಭಿಪ್ರಾಯ. ಏಕೆಂದರೆ ಈ ಅಧ್ಯಾಯದಲ್ಲಿರುವ ಎಲ್ಲಾ ಅಧಿಕರಣಗಳಲ್ಲಿಯೂ ಯಾವುದಾದರೂ ಶ್ರುತಿಯ ವಿರೋಧವನ್ನು ಪರಿಹಾರ ಮಾಡಲೇ ಬೇಕು.

ವಾಸ್ತವಿಕವಾಗಿ ಶ್ರೀಮದಾಚಾರ್ಯರು 'ವ್ಯುತ್ಕ್ರಮಾದ್ವಿಲಯಶ್ಚ' ಎಂಬ ಶ್ರುತಿಯನ್ನು ಆಧಾರವನ್ನಾಗಿ ನೀಡಿದ್ದಾರೆ. ಅದ್ವೈತಿಗಳು ಈ ಶ್ರುತಿಯನ್ನೇ ನೋಡಿರಲಿಕ್ಕಿಲ್ಲ. ಆದ್ದರಿಂದ ಅವರು ಶ್ರುತಿಯನ್ನು ಬಿಟ್ಟು ಪ್ರತ್ಯಕ್ಷದ ಸಹಕಾರದಿಂದ ಸಿದ್ಧಾಂತ ಸ್ಥಾಪನೆ ಮಾಡಿದ್ದಾರೆ.

**''व्युत्क्रमाद्विलयश्च'' इति भाष्योक्तव्युत्क्रमश्रुतौ**

**जगत्प्रतिष्ठा देवर्षे पृथिव्यप्सु प्रलीयते ।**
**ज्योतिष्यापः प्रलीयन्ते ज्योतिर्वायौ प्रलीयते ।।**

**इति त्वदुक्तस्मृत्यनुमित श्रुतौ च लये क्रमस्य श्रुतत्वेन तदश्रवणस्वीकारेण पूर्वोत्तरपक्षायोगाच्च ।**

ಮತ್ತು ಭಾಷ್ಯದಲ್ಲಿ ಶ್ರೀಮದಾಚಾರ್ಯರು 'ವ್ಯುತ್ಕ್ರಮಾದ್ವಿಲಯಶ್ಚ' ಎಂಬ ಶ್ರುತಿಯನ್ನು ಉದಾಹರಿಸಿದ್ದಾರೆ. ಈ ಶ್ರುತಿಯಲ್ಲಿ ಲಯವು ಕ್ರಮವಾಗಿ ಆಗುತ್ತದೆಂದು ಹೇಳಲಾಗಿದೆ. ಅಷ್ಟೇ ಅಲ್ಲದೇ ಅದ್ವೈತಿಗಳು ಸ್ಮೃತಿಯಿಂದ ಶ್ರುತಿಯನ್ನು ಅನುಮಾನ ಮಾಡಬೇಕೆಂದು ಹೇಳುತ್ತಾರೆ. ಆ ಸ್ಮೃತಿ ವಾಕ್ಯ ಹೀಗಿದೆ -

ಜಗತ್‌ಪ್ರತಿಷ್ಠಾ ದೇವರ್ಷೇ ಪೃಥಿವ್ಯಪ್ಸು ಪ್ರಲೀಯತೇ ।
ಜ್ಯೋತಿಷ್ಯಾಪಃ ಪ್ರಲೀಯಂತೇ ಜ್ಯೋತಿರ್ವಾಯೌ ಪ್ರಲೀಯತೇ ॥

ಎಲೈ ನಾರದನೇ ! ಜಗತ್ತಿಗೆ ಆಧಾರವಾದ ಪೃಥಿವಿಯು ನೀರಿನಲ್ಲಿ, ನೀರು ಬೆಂಕಿಯಲ್ಲಿ, ಬೆಂಕಿಯು ವಾಯುವಿನಲ್ಲಿ ಲಯವನ್ನು ಹೊಂದುತ್ತದೆ ಎಂಬುದಾಗಿ ಈ ಸ್ಮೃತಿವಾಕ್ಯ ಹೇಳುತ್ತಿದೆ. ಇದಕ್ಕನುಗುಣವಾಗಿ ಶ್ರುತಿಯನ್ನು ಅನುಮಾನ ಮಾಡಬೇಕು ಎನ್ನುತ್ತಾರೆ. ಇಂಥ ಅದ್ವೈತಿಗಳಿಂದ ಅನುಮಿತವಾದ ಶ್ರುತಿಯಲ್ಲಿಯೂ ಕೂಡ ಲಯದಲ್ಲಿ ಕ್ರಮವಿರುವುದೇ ಕೇಳಿಸುತ್ತಿದೆ. ಆದ್ದರಿಂದ ನಾವು ಉದಾಹರಿಸಿದ ಶ್ರುತಿಯಲ್ಲಿ ಅದ್ವೈತಿಗಳು ಅನುಮಾನ ಮಾಡಿದ ಶ್ರುತಿಯಲ್ಲಿ ಲಯಕ್ರಮವು ಶ್ರುತವಾಗಿರುವಾಗ ಶ್ರುತವೇ ಆಗಿಲ್ಲವೆಂದು ಪೂರ್ವಪಕ್ಷ ಮಾಡಿ, ಅದಕ್ಕೆ ಉತ್ತರವನ್ನು ನೀಡುವುದು ಅಯುಕ್ತವಾಗಿದೆ.

ವಿಪರ್ಯಯಾಧಿಕರಣ (೨-೩-೮)

**ವಿವರಣೆ** - ಈ ಅಧಿಕರಣದಲ್ಲಿ ವ್ಯುತ್ಕ್ರಮದಿಂದಲೇ ಲಯವಾಗುತ್ತದೆಂಬ ಕ್ರಮವನ್ನು ಸಮರ್ಥಿಸುತ್ತಿದ್ದಾರೆ. ಪರಮಾತ್ಮನು ಜಗಜ್ಜನ್ಮಾದಿಕಾರಣನಾಗಿದ್ದಾನೆಂಬ ಎರಡನೆಯ ಸೂತ್ರದಲ್ಲಿ ಹೇಳಿದ ಪ್ರಮೇಯವನ್ನು ನೇರವಾಗಿ ಇಲ್ಲಿ ಆಕ್ಷೇಪ ಮಾಡದಿದ್ದರೂ ಪರಂಪರೆಯಿಂದ ಆಕ್ಷೇಪ ಮಾಡಲಾಗಿದೆ. ವ್ಯುತ್ಕ್ರಮದಿಂದ ಲಯವಾಗುತ್ತದೆಂದು ಹೇಳುವ 'ವ್ಯುತ್ಕ್ರಮಾದ್ವಿಲಯಶ್ಚ' ಎಂಬ ಶ್ರುತಿಯು ಕ್ರಮವಾಗಿ ಲಯವಾಗುವುದಿಲ್ಲ ವ್ಯುತ್ಕ್ರಮದಿಂದ ಲಯವಾಗುತ್ತದೆಂದು ಹೇಳುತ್ತದೆ. ಆದರೆ 'ಕ್ರಮಾದ್ವಿಲೀಯತೇ' ಎಂಬ ಶ್ರುತಿಯು ಕ್ರಮವಾಗಿಯೇ ಲಯವನ್ನು ಹೊಂದುತ್ತಿದೆ ಎಂದು ಹೇಳುತ್ತಿದೆ. ಇದರಿಂದ 'ವ್ಯುತ್ಕ್ರಮಾದ್ವಿಲಯಶ್ಚ' ಎಂಬ ಶ್ರುತಿಗೆ ಬಾಧವನ್ನು ಹೇಳಬೇಕು. ಎರಡು ಶ್ರುತಿಯು ಸಮಾನವಾಗಿರುವಾಗ ಕ್ರಮಾದ್ವಿಲೀಯತೇ ಎಂಬ ಶ್ರುತಿ ಹೇಗೆ ಪ್ರಬಲವಾಗುತ್ತದೆಂದು ಪ್ರಶ್ನೆ ಬರುತ್ತದೆ. ಆದರೆ ಲೋಕದಲ್ಲಿ ಉತ್ಪತ್ತಿ ಕ್ರಮದಲ್ಲೇ ಲಯವಾಗುವುದು ಕಂಡಿದೆ. ಇಂದು ಯಾವ ಘಟ ಹುಟ್ಟುತ್ತದೋ ಅದು ಇನ್ನು ಹತ್ತುವರ್ಷ ಅನಂತರ ಹುಟ್ಟುವ ಘಟಕ್ಕಿಂತ ಮೊದಲೇ ನಾಶವಾಗುವುದು ಲೋಕದಲ್ಲಿ ಕಂಡಿದೆ. ಚೇತನರಲ್ಲೂ ಕೂಡ ಮೊದಲು ಹುಟ್ಟಿದ ತಾತ, ತಂದೆ ಇವರ ಕ್ರಮದಲ್ಲೇ ನಾಶವಾಗುವುದೂ ಕೂಡ ಕಂಡಿದೆ. ಹೀಗೆ ಲೋಕದರ್ಶನವೆಂಬ ಯುಕ್ತಿಯ ಬೆಂಬಲ 'ಕ್ರಮಾದ್ವಿಲೀಯತೇ' ಶ್ರುತಿಗಿರುತ್ತದೆ. ಹಾಗಾಗಿ ದುರ್ಬಲವಾದ 'ವ್ಯುತ್ಕ್ರಮಾದ್ವಿಲಯಶ್ಚ' ಎಂಬ ಶ್ರುತಿಗೆ ಬಾಧವನ್ನು ಹೇಳಬೇಕು. ಆದ್ದರಿಂದ 'ಕ್ರಮಾದ್ವಿಲೀಯತೇ' ಎಂಬ ಶ್ರುತಿಯಲ್ಲಿರುವ ಕ್ರಮ ಶಬ್ದವು ಅನುಕ್ರಮ ಎಂಬ ಅರ್ಥವನ್ನೇ ಹೊಂದಿದೆ ಎಂಬುದು ಈ ಅಧಿಕರಣದ ಮುಖ್ಯ ಪೂರ್ವಪಕ್ಷ. ಲೋಕಾನುಸಾರಿತ್ವ ಬಹುವಾಕ್ಯಾನುರೋಧ ಎಂಬುದೆರಡು ಪೂರ್ವಪಕ್ಷ ಯುಕ್ತಿಗಳು.

'ವ್ಯುತ್ಕ್ರಮಾದ್ವಿಲಯಶ್ಚ' ಎಂಬ ಶ್ರುತಿಗೆ 'ಕ್ರಮಾದ್ವಿಲೀಯತೇ' ಎಂಬ ಶ್ರುತಿಯಿಂದ ಬಾಧ ಬರಲು ಸಾಧ್ಯವಿಲ್ಲ. ಏಕೆಂದರೆ 'ಕ್ರಮಾದ್ವಿಲೀಯತೇ' ಎಂಬ ಶ್ರುತಿಯಲ್ಲಿರುವ ಕ್ರಮ ಶಬ್ದಕ್ಕೂ ಕೂಡ ವ್ಯುತ್ಕ್ರಮ ಎಂದೇ ಅರ್ಥ. ಇದು ಹೇಗೆ ಸಾಧ್ಯ? ಎಂದು ಪ್ರಶ್ನಿಸಬಾರದು. ಪರಮಾತ್ಮನು ಮಾಡುವ ಸೃಷ್ಟಿಯಲ್ಲಿ ಯಾವ ಕ್ರಮದಲ್ಲಿ ಸೃಷ್ಟಿಯ ಕಾರ್ಯ ನಡೆದಿದೆಯೋ ಅದೇ ಕ್ರಮದಲ್ಲಿಯೇ ವಿಪರೀತವಾಗಿ ಸಂಹಾರಕ್ರಿಯೆಯು ನಡೆಯುತ್ತದೆ ಎಂದು ಇದರ ಅರ್ಥ. ಇದಕ್ಕೆ ವಿಪರೀತವಾಗಿ ಮಧ್ಯಮಧ್ಯದಲ್ಲಿ ಹೇಗೆ ಬೇಕಾದರೂ ಹಾಗೆ ನಾಶವನ್ನು ಹೊಂದುತ್ತಾರೆಂಬುದು ಅರ್ಥವಲ್ಲ ಎಂಬುದನ್ನು 'ಕ್ರಮಾದ್ವಿಲೀಯತೇ' ಎಂಬ ಶ್ರುತಿಯು ಸ್ಪಷ್ಟಪಡಿಸುತ್ತಿದೆ. ಆದ್ದರಿಂದ ಅನುಕ್ರಮವು ಹೇಗೆ ಕ್ರಮವೆನಿಸುತ್ತದೆಯೋ ಅದರಂತೆ ವ್ಯುತ್ಕ್ರಮವೂ ಕೂಡ ಕ್ರಮವೆನಿಸುತ್ತದೆ.

ಇದು ಲೋಕನಿಯಮಕ್ಕೆ ವಿರುದ್ಧವಲ್ಲವೇ? ಎಂಬುದು ಮುಂದಿನ ಪ್ರಶ್ನೆ. ದೇವಲೋಕದ ಸೃಷ್ಟಿಯ ವಿಷಯದಲ್ಲಿ ಲೌಕಿಕ ದೃಷ್ಟಾಂತವನ್ನು ನೀಡಬಾರದು. ಏಕೆಂದರೆ ಯಾವ ದೇವತೆಗಳು ಮೊದಲು ಉತ್ಪನ್ನರಾಗಿರುತ್ತಾರೋ ಅವರಲ್ಲಿ ಹರಿಸನ್ನಿಧಾನ ಅಧಿಕವಾಗಿರುತ್ತದೆ. ಅಷ್ಟೇ ಅಲ್ಲದೇ ವ್ಯಾಪ್ತಿ, ಸಾಮರ್ಥ್ಯ ಮೊದಲಾದವು ಕೂಡ ಅಧಿಕವಾಗಿರುತ್ತವೆ. ಅನಂತರ ಹುಟ್ಟಿದ ದೇವತೆಗಳಲ್ಲಿ ಹರಿಸನ್ನಿಧಾನ, ವ್ಯಾಪ್ತಿ, ಸಾಮರ್ಥ್ಯಗಳು ಕಡಿಮೆ ಮಟ್ಟದಲ್ಲಿರುತ್ತವೆ. ಆದ್ದರಿಂದ ಉತ್ತಮ ದೇವತೆಗಳು ಮೊದಲು ಹುಟ್ಟಿದರೂ ಮೊದಲು ನಾಶವಾಗಲಾರರು. ಇದು ಈ ಅಧಿಕರಣದ ಸಿದ್ಧಾಂತ.

**भस्मीभूतपटादेस्तन्तुषु लयादृष्ट्या दृष्टानुसारेण कार्यस्य साक्षात्कारणे लय इति सिद्धान्तोक्त्ययोगाच । तेज आदीनामीक्षितृत्वादिना चेतनत्वात् पित्रादिलयानन्तरमेव च प्रायः पुत्रादिलयदृष्टेर्दर्शनानुसारेण तेजआदीनां लयानन्तरमेवाबादिलयप्राप्तेश्च ।**

ಮತ್ತು ಅದ್ವೈತಿಗಳು ಪ್ರತ್ಯಕ್ಷಕ್ಕೆ ಅನುಸಾರಿಯಾಗಿ ಲಯಕ್ರಮವನ್ನು ಹೇಳಬೇಕೆಂದು ಸಿದ್ಧಾಂತ ಮಾಡಿದ್ದಾರೆ. ಇದೂ ಕೂಡ ತಪ್ಪು. ಏಕೆಂದರೆ ಒಂದೇ ಬಾರಿ ಬಟ್ಟೆ ಬೆಂಕಿಯಲ್ಲಿ ಸುಡುತ್ತದೆ. ಆಗ ತಂತುವಿನಲ್ಲಿ ಬಟ್ಟೆಯು ಲಯ ಹೊಂದಿತು ಎಂದು ಯಾರೂ ಹೇಳುವುದಿಲ್ಲ. ಹೀಗೆ ಪ್ರತ್ಯಕ್ಷಕ್ಕನುಸಾರಿಯಾಗಿ ಕಾರ್ಯವು ಸಾಕ್ಷಾತ್ತಾಗಿ ಕಾರಣದಲ್ಲಿಯೇ ಲಯ ಹೊಂದುತ್ತದೆ ಎಂಬ ಸಿದ್ಧಾಂತವೇ ತಪ್ಪು. ಚೇತನದಲ್ಲೂ ಕೂಡ ಇದೇ ರೀತಿಯಲ್ಲಿ ಕಂಡಿದೆ. ತಂದೆಯು ಮೊದಲು ಹುಟ್ಟಿರುತ್ತಾನೆ. ಮಗನು ಅನಂತರ ಹುಟ್ಟುತ್ತಾನೆ. ಮೊದಲು ಹುಟ್ಟಿದ ತಂದೆಯೇ ಮೊದಲು ನಾಶವನ್ನು ಹೊಂದುತ್ತಾನೆ. ಅನಂತರ ಹುಟ್ಟಿದ ಮಗನು ಅನಂತರವೇ ನಾಶವನ್ನು ಹೊಂದುತ್ತಾನೆ. ಅದರಂತೆ 'ಆಕಾಶಾದ್ವಾಯುಃ ವಾಯೋರಗ್ನಿಃ' ಎಂಬ ಶ್ರುತಿಯಲ್ಲಿ ಆಕಾಶಾದಿಶಬ್ದಗಳಿಂದ ಪ್ರತಿಪಾದ್ಯವಾದದ್ದು ಈಕ್ಷಿತೃತ್ವಹೇತುವಿನಿಂದ ಚೇತನವೆಂದೇ ವಿವಕ್ಷಿಸಬೇಕು. ಅಂತರ್ಯಾಮಿಯಾದ ಆ ಚೇತನರು ಯಾವ ಕ್ರಮದಲ್ಲಿ ಹುಟ್ಟಿದ್ದಾರೋ, ಅದೇ ಕ್ರಮದಲ್ಲಿಯೇ ನಾಶವನ್ನು ಹೊಂದುತ್ತಾರೆಂದು ಅದ್ವೈತಿಗಳು ಹೇಳಬೇಕಾಗುತ್ತದೆ.

ವಿವರಣೆ - 'ವಿಪರ್ಯಯೇಣ ತು ಕ್ರಮೋಽತ ಉಪಪದ್ಯತೇ ಚ' ಎಂಬ ಮೊದಲನೆಯ ಸೂತ್ರದ ವ್ಯಾಖ್ಯಾನವನ್ನು ಖಂಡನೆ ಮಾಡಿ, ಈಗ 'ಉಪಪದ್ಯತೇ' ಎಂಬ ಎರಡನೆಯ ಸೂತ್ರದ ವ್ಯಾಖ್ಯಾನವನ್ನು ಖಂಡನೆ ಮಾಡುತ್ತಿದ್ದಾರೆ. ಈ ಸೂತ್ರಕ್ಕೆ ಅದ್ವೈತಿಗಳು ಕಾರ್ಯವು ಕಾರಣದಲ್ಲೇ ಲಯ ಹೊಂದುವುದು ಲೋಕದಲ್ಲಿ ಕಂಡಿದೆ ಎಂದು ವ್ಯಾಖ್ಯಾನ ಮಾಡಿದ್ದಾರೆ. ಆದರೆ ಇದು ತಪ್ಪು. ಬೆಂಕಿಯಲ್ಲಿ ಬಟ್ಟೆಯನ್ನು ಹಾಕಿದಾಗ ಒಮ್ಮೆಲೆ ಸುಟ್ಟು ಬೂದಿಯಾಗುತ್ತದೆ. ಈಗ ಬಟ್ಟೆಯು ಕಾರಣವಾದ ತಂತುವಿನಲ್ಲಿ ನಾಶವಾಯಿತು ಎಂದು ಯಾರೂ ಹೇಳುವುದಿಲ್ಲ. ಆದ್ದರಿಂದ ಇವರ ಈ ಸೂತ್ರವ್ಯಾಖ್ಯಾನವು ಅಯುಕ್ತ.

'ಆಕಾಶಾದ್ವಾಯುಃ ವಾಯೋರಗ್ನಿಃ' ಇತ್ಯಾದಿ ಶ್ರುತಿಯು ಅಭಿಮಾನಿಯಾದ ದೇವತೆಗಳ ಸೃಷ್ಟಿಯನ್ನು ಹೇಳುತ್ತಿವೆ ಎಂದು ಅದ್ವೈತಿಗಳು ವ್ಯಾಖ್ಯಾನ ಮಾಡುತ್ತಾರೆ. ಆಕಾಶಾಭಿಮಾನಿದೇವತೆಯಿಂದ ವಾಯುವಿನ ಅಭಿಮಾನಿಯಾದ ದೇವತೆಯು ಹುಟ್ಟಿದನು ಇತ್ಯಾದಿಯಾಗಿ. ಲೋಕದಲ್ಲಿ ಯಾವ ಕ್ರಮದಲ್ಲಿ ಚೇತನರು ಉತ್ಪನ್ನರಾಗುತ್ತಾರೋ, ಅದೇ ಕ್ರಮದಲ್ಲಿಯೇ ಲಯವನ್ನು ಹೊಂದುತ್ತಾರೆಂಬುದು. ತಂದೆ ಮಗ ಮೊದಲಾದ ದೃಷ್ಟಾಂತದಲ್ಲಿ ಕಂಡಿದೆ. ಮೊದಲು ಹುಟ್ಟಿದ ತಂದೆ ಮೊದಲೇ ಸಾಯುತ್ತಾನೆ. ಅನಂತರ ಹುಟ್ಟಿದ ಮಗ ಅನಂತರವೇ ಸಾಯುತ್ತಾನೆ. ಅದರಂತೆ ದೇವತೆಗಳೂ ಕೂಡ ಮೊದಲು ಹುಟ್ಟಿದವರು ಮೊದಲೇ ನಾಶವನ್ನು ಹೊಂದಬೇಕು. ಆದ್ದರಿಂದ ಅದ್ವೈತಿಗಳ ಸಿದ್ಧಾಂತವು ಅಯುಕ್ತವಾಯಿತು.

**एतेन ''जगत्प्रतिष्ठेत्यादिस्मृतिर्न्यायमूला न श्रुतिमूला'' इति भामत्युक्तं परास्तम् ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् विपर्ययाधिकरणं सम्पूर्णम् ।।८।।**

ವಿಪರ್ಯಯಾಧಿಕರಣ (೨-೩-೮)

ಹೀಗೆ ಹೇಳಿದ್ದರಿಂದ 'ಜಗತ್ಪ್ರತಿಷ್ಠಾ' ಇತ್ಯಾದಿ ಸ್ಮೃತಿಯು ನ್ಯಾಯಮೂಲಕವಾಗಿದೆ ಹೊರತು, ಶ್ರುತಿಮೂಲಕ ಅಲ್ಲ ಎಂಬ ಭಾಮತಿಯ ಮಾತನ್ನು ನಿರಾಕರಣೆ ಮಾಡಿದಂತಾಯಿತು.

ವಿವರಣೆ - 'ಜಗತ್ಪ್ರತಿಷ್ಠಾ ದೇವರ್ಷೇ' ಎಂಬ ಸ್ಮೃತಿಯು ನ್ಯಾಯಮೂಲಕವಾಗಿದೆ ಎಂದು ಹೇಳಿದಾಗ ಆ ನ್ಯಾಯವನ್ನು ಹೇಳಬೇಕು. 'ಕಾರ್ಯಂ ಕಾರಣೇ ವಿಲಿಯೇತೇ ಕಾರ್ಯತ್ವಾತ್' ಎಂದು ಅಥವಾ 'ತೇಜ-ಆದಿಕಂ ಸ್ವಕಾರಣೇ ಲೀಯತೇ ತತ್ಕಾರ್ಯತ್ವಾತ್' ಎಂದು. ಹೀಗೆ ನ್ಯಾಯಗಳನ್ನು ಹೇಳಿದರೆ ವ್ಯಭಿಚಾರದೋಷವು ಬರುತ್ತದೆ. ಭಸ್ಮೀಭೂತವಾದ ಪಟವು ತಂತುವಿನ ಕಾರ್ಯವಾಗಿದ್ದರೂ ಕೂಡ ತಂತುಲಯದ ಜೊತೆಗೆ ನಾಶವನ್ನು ಹೊಂದುತ್ತಿದೆ. ಚೇತನರ ವಿಷಯದಲ್ಲೂ ಕೂಡ ಪುತ್ರನ ನಾಶಕ್ಕಿಂತ ಮೊದಲೇ ಪಿತೃನಾಶವು ಕಂಡಿದೆ. ಆದ್ದರಿಂದ ಸ್ಮೃತಿಯು ನ್ಯಾಯಮೂಲವಲ್ಲ. ಶ್ರುತಿಮೂಲಕವೆಂದೇ ಹೇಳಬೇಕು. ಆಗ ಆ ಶ್ರುತಿಯನ್ನೇ ಆಧಾರವನ್ನಾಗಿಟ್ಟುಕೊಂಡು ಸಿದ್ಧಾಂತ ಸ್ಥಾಪನೆ ಮಾಡಲು ಬರುತ್ತದೆ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ವಿಪರ್ಯಯಾಧಿಕರಣವು ಸಂಪೂರ್ಣವಾಯಿತು

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**विपर्ययेण तु....** ।। **सङ्गतिमिति** ।। विशेषचिन्तारूपामित्यर्थः । फलोक्तिं विवृण्वन्नेव विषयसंशयटीकां तात्पर्यतो व्यनक्ति ।। **अत्रेति** ।। पूर्वोत्तरपक्षटीकासूचिताश्चिन्ता आह – **व्युत्क्रमादित्यादिना** ।।

'ಸಂಗತಿಂ ಆಹ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ವಿಶೇಷವಿಚಾರರೂಪವಾದ ಅಧಿಕರಣಸಂಗತಿಯನ್ನು ಎಂಬುದು ಇದರ ಅರ್ಥ. ಅಧಿಕರಣದ ಫಲೋಕ್ತಿಯನ್ನು ವಿವರಿಸುವ ಮೂಲಕವೇ ವಿಷಯ ಹಾಗೂ ಸಂಶಯಪ್ರತಿಪಾದಕವಾದ ಟೀಕೆಯ ತಾತ್ಪರ್ಯವನ್ನು 'ಅತ್ರ' ಇತ್ಯಾದಿ ಗ್ರಂಥದಿಂದ ಹೇಳಿದ್ದಾರೆ. ಪೂರ್ವಪಕ್ಷಟೀಕೆ ಹಾಗೂ ಸಿದ್ಧಾಂತಪಕ್ಷಗಳ ಟೀಕೆಯಿಂದ ಸೂಚಿತವಾದ ಸಂಶಯವನ್ನು 'ವ್ಯುತ್ಕ್ರಮಾತ್' ಇತ್ಯಾದಿ ವಾಕ್ಯದಿಂದ ತಿಳಿಸಿದ್ದಾರೆ.

**प्रकाशः – आरोहेति** ।। सोपानारोहवदित्यर्थः । टीकाद्यर्थं सूत्रारूढं कर्तुमाह – **सूत्राक्षरार्थस्त्विति** ।। **अत एवेति** ।। एतेनात इत्यस्यावृत्तिः । तुशब्दस्यावधारणार्थतयाऽत्रान्वयो वा पूर्वस्मादेवकारानुषङ्गो वा सूचितः ।

ಗ್ರಂಥದಲ್ಲಿ 'ಆರೋಹಕ್ರಮವತ್' ಎಂದು ಹೇಳಿದ್ದಾರೆ. ಸೋಪಾನಾರೋಹಣ ಕ್ರಮದಿಂದ ಎಂಬುದು ಇದರ ಅರ್ಥ. ಟೀಕೆಯಲ್ಲಿ ಹೇಳಿದ ಅರ್ಥವನ್ನು ಸೂತ್ರಾರೂಢವನ್ನಾಗಿ ಮಾಡಲು 'ಸೂತ್ರಾಕ್ಷರಾರ್ಥಸ್ತು' ಇತ್ಯಾದಿ ಗ್ರಂಥವು ಹೊರಟಿದೆ. 'ಅತ ಏವ' ಎಂಬಲ್ಲಿ 'ಏತೇನ ಅತ' ಎಂಬುದನ್ನು ಆವೃತ್ತಿ ಮಾಡಿಕೊಳ್ಳಬೇಕು. 'ತು' ಶಬ್ದಕ್ಕೆ ಅವಧಾರಣ ಎಂಬರ್ಥವಿರುವುದರಿಂದ ಇಲ್ಲಿ ಅದನ್ನು ಅನ್ವಯ ಮಾಡಿಕೊಳ್ಳಬೇಕು. ಅಥವಾ ಹಿಂದೆ ಪ್ರಸಕ್ತವಾದ ಏವಕಾರವನ್ನಾದರೂ ಅನುಷಂಗ ಮಾಡಿಕೊಳ್ಳಬೇಕು.

**प्रकाशः – अन्ये त्विति** ।। भामत्युक्तमनुवदति ।। **यत्प्रयन्तीति** ।। सृष्टिक्रम एव न तु लोकदृष्ट्या विपरीतक्रमः । तस्य विजातीयत्वादित्यर्थः । अतस्सृष्टिक्रमाद्विपरीतक्रम एव लयक्रमः । मृदादेर्जातस्य घटादेर्मृदादौ लयदर्शनादुपपद्यते च विपर्ययक्रम इति सूत्रार्थं हृदि कृत्वा सिद्धान्तमन्वाह – **लय इति** ।।

'ಅನ್ಯೇತು' ಎಂದರೆ ಭಾಮತಿಯಲ್ಲಿ ಹೀಗೆ ಹೇಳಲಾಗಿದೆ ಎಂದರ್ಥ. ಅದನ್ನೇ 'ಯತ್ಪ್ರಯಂತಿ' ಇತ್ಯಾದಿ ವಾಕ್ಯದಿಂದ ಉಪಪಾದನೆ ಮಾಡಿದ್ದಾರೆ. ಸೃಷ್ಟಿಯಲ್ಲಿ ಹೇಗೆ ಕ್ರಮವು ವಿವಕ್ಷಿತವೋ, ಹಾಗೆಯೇ ಶ್ರುತಿಯಲ್ಲಿ ಹೇಳಲಾಗಿದೆ. ಹೊರತು ಲೋಕದೃಷ್ಟಿಯಂತೆ ವಿಪರೀತಕ್ರಮದಲ್ಲಿ ಅಲ್ಲ ಎಂದು ತಿಳಿಯಬೇಕು. ಏಕೆಂದರೆ ಅದು ವಿಜಾತೀಯವಾಗಿದೆ. ಏಕೆಂದರೆ ಸೃಷ್ಟಿಕ್ರಮಕ್ಕೆ ವಿಪರೀತವಾದ ಲಯಕ್ರಮವನ್ನು ಇದು ಹೇಳುತ್ತಿದೆ. ಹೀಗೆ ಮೃತ್‌ನಿಂದ ಹುಟ್ಟಿದ ಘಟವು ಮೃತ್‌ನಲ್ಲಿ ಲಯವನ್ನು ಹೊಂದುವುದರಿಂದ ವಿಪರೀತಕ್ರಮದಲ್ಲಿ ಲಯವನ್ನು ಹೊಂದುತ್ತವೆಂದು ನಿರ್ಧಾರವಾಗಿದೆಯೋ, ಹಾಗೆಯೇ ಇಲ್ಲಿಯೂ ಕೂಡ ತಿಳಿಯಬೇಕು ಎಂಬುದಾಗಿ ಸೂತ್ರಾರ್ಥವನ್ನು ಮನಸ್ಸಿನಲ್ಲಿ ಇಟ್ಟುಕೊಂಡು, ಅಧಿಕರಣದ ಸಿದ್ಧಾಂತವನ್ನು 'ಲಯೇ' ಇತ್ಯಾದಿ ವಾಕ್ಯದಿಂದ ಉಪಪಾದನೆ ಮಾಡಿದ್ದಾರೆ.

**प्रकाशः –** दृष्ट इत्युक्तं व्यनक्ति ।। **दृष्टो हीति** ।। मृद इति पञ्चमी ।। **अध्यायासङ्गतेरिति** ।। एतेन यदुक्तं कल्पतरौ ''यद्यप्यत्र श्रुतिविप्रतिषेधो नावध्रियते तथाप्युत्पत्तिक्रमे निरूपिते लयक्रमो बुद्धिस्थो विचार्यत इति प्रासङ्गिक्यौ पादावान्तरसङ्गती'' इति तन्निरस्तम् । अध्यायसङ्गतेरेवाभावे पादादिसङ्गतेरनवसरदुःस्थत्वात् ।

'ದೃಷ್ಟ' ಎಂಬುದಾಗಿ ಹೇಳಿದ್ದನ್ನೇ ವಿವರಣೆ ಮಾಡಲು 'ದೃಷ್ಟೋ ಹಿ' ಇತ್ಯಾದಿ ವಾಕ್ಯವು ಹೊರಟಿದೆ. 'ಮೃದಃ' ಎಂಬುದು ಪಂಚಮ್ಯಂತವಾದ ಶಬ್ದವಾಗಿದೆ. 'ಅಧ್ಯಾಯಾಸಂಗತೇಃ' ಎಂದು ಹೇಳಿದ್ದಾರೆ. ಹೀಗೆ ಹೇಳಿದ್ದರಿಂದ ಕಲ್ಪತರುವಿನಲ್ಲಿ ಹೇಳಿದ ಅಧ್ಯಾಯಸಂಗತಿಯನ್ನು ನಿರಾಕರಣೆ ಮಾಡಿದಂತಾಯಿತು. ಕಲ್ಪತರುವಿನಲ್ಲಿ ಹೀಗೆ ಹೇಳಿದೆ - ವಾಸ್ತವಿಕವಾಗಿ ಇಲ್ಲಿ ಶ್ರುತಿಯ ವಿರೋಧವು ಪ್ರಸಕ್ತವಾಗುವುದಿಲ್ಲ. ಆದರೂ ಕೂಡ ಉತ್ಪತ್ತಿಕ್ರಮವನ್ನು ನಿರೂಪಣೆ ಮಾಡಿದ ಮೇಲೆ ಲಯಕ್ರಮವು ಬುದ್ಧಿಸ್ಥವಾಗುತ್ತದೆ. ಆದ್ದರಿಂದ ಈ

ಅಧಿಕರಣದಲ್ಲಿ ಅದನ್ನು ವಿಚಾರ ಮಾಡುತ್ತಿದ್ದಾರೆ. ಹೀಗೆ ಅವಾಂತರಸಂಗತಿಗಳನ್ನು ಪ್ರಾಸಂಗಿಕವಾಗಿ ಹೇಳಲಾಗಿದೆ ಎಂದು ಕಲ್ಪತರುವಿನಲ್ಲಿ ಇದೆ. ಇದನ್ನು ಈಗ ನಿರಾಕರಣೆ ಮಾಡಿದಂತಾಯಿತು. ಏಕೆಂದರೆ ಅಧ್ಯಾಯಸಂಗತಿಯೇ ಇಲ್ಲದ ಮೇಲೆ, ಪಾದಸಂಗತಿ ಹಾಗೂ ಅಧಿಕರಣಸಂಗತಿಗಳಿಗೆ ಆಸ್ಪದವೇ ಇರುವುದಿಲ್ಲ.

**प्रकाशः –** त्वन्मते देवताधिकरणादेरिव प्रासङ्गिकसङ्गत्या चिन्तोपपद्यत इति चेन्न । सर्वदेवतोपास्यत्वरूपलिङ्गसमन्वयस्यार्थिकतया मन्मतेऽध्यायसङ्गतेः तत्रैवोक्तत्वाच्च । दोषान्तरं चाह **– मम रीत्येति ॥**

ನಿಮ್ಮ ಮತದಲ್ಲಿ ದೇವತಾಧಿಕರಣಕ್ಕೆ ಹೇಗೆ ಪ್ರಾಸಂಗಿಕಸಂಗತಿಯನ್ನು ಹೇಳಲಾಗಿದೆಯೋ, ಅದರಂತೆ ನಾವೂ ಕೂಡ ಈ ಅಧಿಕರಣಕ್ಕೆ ಪ್ರಾಸಂಗಿಕಸಂಗತಿಯನ್ನು ಹೇಳಬಹುದಲ್ಲವೇ? ಈ ಪ್ರಶ್ನೆ ತಪ್ಪು. ಏಕೆಂದರೆ 'ಸರ್ವದೇವತೋಪಾಸ್ಯತ್ವ' ಎಂಬ ಲಿಂಗಸಮನ್ವಯವೂ ಕೂಡ ದೇವತಾಧಿಕರಣದಿಂದ ಸಿದ್ಧವಾಗಿದೆ ಎಂಬುದಾಗಿ ನಾವು ಆರ್ಥಿಕವಾದ ಅರ್ಥವನ್ನು ಹೇಳಿದ್ದೇವೆ. ಆದ್ದರಿಂದ ದೇವತಾಧಿಕರಣಕ್ಕೆ ಅಧ್ಯಾಯದ ಜೊತೆ ಸಂಗತಿ ಇದ್ದೇ ಇದೆ. ನಿಮಗೆ ಹಾಗೇ ಸಂಗತಿಯನ್ನು ಹೇಳಲು ಸಾಧ್ಯವಿಲ್ಲ. ಮತ್ತೊಂದು ದೋಷವನ್ನು 'ಮಮ ರೀತ್ಯಾ'ಎಂಬುದರಿಂದ ತಿಳಿಸಿದ್ದಾರೆ.

**प्रकाशः – भाष्योक्तेति ॥** ननु सा न प्रसिद्धेति चेत्किं तवोत सर्वस्य । नाद्यः। अप्रयोजकत्वात् । नान्त्यः । निर्णयायोगात् । औदुम्बराधिकरणे शाबरभाष्ये ''ऊर्जं पशूनाप्नोत्यूर्जो वरुध्या'' इत्युक्तश्रुतेः ''यथा ह्ययं ज्योतिरात्मा विवस्वान्'' इत्यादिश्रुतेः ''अत एव चोपम'' इत्यत्र परभाष्योक्तायाः तथा श्रीभाष्येऽपि ''ज्योतिश्चरणाभिधानात्'' इत्यत्रोक्तायाः ''इन्द्रश्शचीपतिर्बलेन पीडितो दुश्च्यवनो वृषा समत्सु सा सहिः'' इति श्रुतेश्चाप्रसिद्धत्वाच्च ॥

'ಭಾಷ್ಯೋಕ್ತ' ಇತ್ಯಾದಿಯಾಗಿ ಗ್ರಂಥದಲ್ಲಿ ಹೇಳಿದ್ದಾರೆ. ಇಲ್ಲಿ ಈ ವಿಷಯವನ್ನು ತಿಳಿಯಬೇಕು. ನಾವು ಹೇಳುವುದು ಅಪ್ರಸಿದ್ಧವೆಂದರೆ ಯಾರನ್ನು ಕುರಿತು ಅಪ್ರಸಿದ್ಧ ಎಂಬ ಪ್ರಶ್ನೆಗೆ ಉತ್ತರಿಸಬೇಕು. ನಿನಗೋ? ಅಥವಾ ಎಲ್ಲರಿಗೋ ? ನಿನಗೆ ಅಪ್ರಸಿದ್ಧವಾಗಿದೆ ಎಂಬ ಮಾತ್ರಕ್ಕೆ ಅದು ಅಪ್ರಸಿದ್ಧವೇ ಆಗಿರಬೇಕಾಗಿಲ್ಲ. ಇದು ಅಪ್ರಯೋಜಕವಾಗುತ್ತದೆ. ಪ್ರತಿಯೊಬ್ಬರಿಗೂ ಅಪ್ರಸಿದ್ಧವಾಗಿದೆ ಎಂಬುದನ್ನು ನಿರ್ಣಯಿಸಲು ನಿನ್ನಿಂದ ಸಾಧ್ಯವಿಲ್ಲ. ಔದಂಬರಾಧಿಕರಣದ ಶಾಬರಭಾಷ್ಯದಲ್ಲಿ 'ಊರ್ಜಂ ಪಶೂನಾಪ್ನೋತ್ಯೂರ್ಜೋऽವರುದ್ಧಿ' ಎಂಬ ಶ್ರುತಿಯಿಂದ ಹಾಗೂ 'ಯಥಾ ಹ್ಯಯಂ ಜೋತಿರಾತ್ಮಾ ವಿವಸ್ವಾನ್' ಎಂಬ ಶ್ರುತಿಯಿಂದ 'ಅತ ಏವ ಚೋಪಮ' ಎಂಬ ಸೂತ್ರಕ್ಕೆ ಅದ್ವೈತಿಗಳು ವ್ಯಾಖ್ಯಾನ ಮಾಡಿದ ರೀತಿಯಿಂದ ಮತ್ತು ಶ್ರೀಭಾಷ್ಯದಲ್ಲಿ ಜ್ಯೋತಿಶ್ಚರಣಾಭಿಧಾನಾತ್' ಎಂಬಲ್ಲಿ ಉಲ್ಲೇಖ ಮಾಡಲ್ಪಟ್ಟ 'ಇಂದ್ರಃ ಶಚೀಪತಿರ್ಬಲೇನ ಪೀಡಿತೋ ದುಶ್ಚ್ಯವನೋ ವೃಷಾ ಸಮತ್ಸು ಸಾ ಸಹಿಃ' ಎಂಬ ಶ್ರುತಿಯಿಂದಲೂ ಕೂಡ ಅಪ್ರಸಿದ್ಧವಾಗಿದೆ.

**प्रकाशः – भाष्योक्तेति ।। श्रीमद्भाष्योक्तश्रुतावित्यर्थः ।। त्वदुक्तेति ।। परभाष्योदाहृतेत्यर्थः । एतेन प्रलये क्रमद्वैविध्याश्रवणेन संशयानुपपत्तेरधिकरणारम्भोऽनुपपन्न इति श्रुतप्रकाशोक्तं निरस्तम् । उक्तदिशा श्रुतिविगानसम्भवात् । दृष्टो हीत्यादिना यो दृष्टानुसारिहेतुरुक्तः सोऽप्ययुक्त इत्याह – भस्मीभूतेति ।। तन्तुषु तन्त्वादिषु । गोमयादिजन्यवृश्चिकशरीरादिरादिपदार्थः ।।**

'ಭಾಷ್ಯೋಕ್ತೇ' ಎಂದರೆ 'ಭಾಷ್ಯದಲ್ಲಿ ಉಲ್ಲೇಖಿಸಲ್ಪಟ್ಟ ಶ್ರುತಿಯಲ್ಲಿ' ಎಂದರ್ಥ. 'ತ್ವದುಕ್ತ' ಎಂದರೆ 'ಪರಭಾಷ್ಯದಲ್ಲಿ ಉದಾಹರಿಸಲ್ಪಟ್ಟ' ಎಂದರ್ಥ. ಹೀಗೆ ಹೇಳಿದ್ದರಿಂದ ಪ್ರಳಯಕಾಲದಲ್ಲಿ ಕ್ರಮದ್ವೈವಿಧ್ಯವು ಅಶ್ರುತವಾಗಿದೆ. ಹಾಗಾಗಿ ಸಂಶಯ ಹುಟ್ಟುವುದಿಲ್ಲ. ಹೀಗಿರುವಾಗ ಅಧಿಕರಣಾರಂಭವು ಹೇಗೆ ಉಪಪನ್ನವಾಗುತ್ತದೆ ಎಂಬ ಶ್ರುತಪ್ರಕಾಶದಲ್ಲಿ ಹೇಳಿದ್ದನ್ನು ನಿರಾಕರಣೆ ಮಾಡಿದಂತಾಯಿತು. ಹಿಂದೆ ಹೇಳಿದ ಪ್ರಕಾರ ಶ್ರುತಿಯಲ್ಲಿ ಪ್ರರಸ್ಪರ ವಿರೋಧವಿದೆ. ಅದನ್ನು ಪರಿಹರಿಸಲು ಈ ಅಧಿಕರಣ ಹೊರಡಲೇ ಬೇಕು. 'ದೃಷ್ಟೋ ಹಿ' ಎಂಬುದರಿಂದ ದೃಷ್ಟಾನುಸಾರಿಹೇತುವನ್ನು ಹೇಳಲಾಯಿತೋ, ಅದೂ ಕೂಡ ಅಯುಕ್ತವಾಗಿದೆ ಎಂಬುದನ್ನು ಭಸ್ಮೀಭೂತ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡಿದ್ದಾರೆ. 'ತಂತುಷು' ಎಂದರೆ 'ತಂತು ಮೊದಲಾದವುಗಳಲ್ಲಿ' ಎಂದು ವಿವಕ್ಷಿಸಬೇಕು. ಗೋಮಯಾದಿಗಳಿಂದ ಹುಟ್ಟಿದ ವೃಶ್ಚಿಕಾದಿಶರೀರಗಳನ್ನು ಆದಿಪದದಿಂದ ಇಲ್ಲಿ ವಿವಕ್ಷಿಸಬೇಕು.

**प्रकाशः – एतेनेति ।। दर्शनस्यानियतत्वकथनेनेत्यर्थः । यद्वा चेतनत्वादित्यादिकथनेनेत्यर्थः ।**

ಗ್ರಂಥದಲ್ಲಿರುವ 'ಏತೇನ' ಎಂಬ ಪದಕ್ಕೆ ಪ್ರತ್ಯಕ್ಷವು ಅನಿಯತವಾಗಿದೆ ಎಂದು ಹೇಳಿದ್ದರಿಂದ ಎಂದರ್ಥ. ಅಥವಾ ಚೇತನತ್ವಾತ್ ಎಂದು ಹೇಳಿದ್ದರಿಂದ ಎಂದರ್ಥ.

ವಿವರಣೆ – ವ್ಯುತ್ಕ್ರಮವಾದ ಲಯವಾಗುತ್ತದೆನ್ನಲು ಸ್ಮೃತಿವಾಕ್ಯವನ್ನು ಪೂರ್ವಪಕ್ಷಕಾರನು ಉದಾಹರಿಸಿದ್ದನು. ಆದರೆ ಇದೂ ಕೂಡ ಶ್ರುತಿಮೂಲಕವಾಗಿರುವುದರಿಂದ ಶ್ರುತಿಯನ್ನೇ ಪ್ರಮಾಣವೆಂದು ಹೇಳಿದಂತಾಯಿತಲ್ಲವೇ? ಎಂದು ಗ್ರಂಥಕಾರರು ಇದರ ಮೇಲೆ ಆವರನ್ನು ಆಕ್ಷೇಪಿಸಿದರು. ಆಗ ಭಾಮತಿಕಾರನು ಉತ್ತರಿಸಿದ – ಈ ಸ್ಮೃತಿವಾಕ್ಯವು ಯುಕ್ತಿಮೂಲಕವಾಗಿದೆ. ಆದ್ದರಿಂದ ಶ್ರುತಿಮೂಲಕವಲ್ಲ ಎಂದು. ಇದೂ ಕೂಡ ತಪ್ಪು ಎಂದು 'ಏತೇನ' ಎಂಬ ವಾಕ್ಯದಿಂದ ಖಂಡನೆ ಮಾಡಿದ್ದಾರೆ. ಯಾವುದೇ ಅನುಮಾನವು ಸ್ವತಃ ಪ್ರಮಾಣವಾಗುವುದಿಲ್ಲ. ಶ್ರುತಿಮೂಲಕವಾಗಬೇಕು ಅಥವಾ ಪ್ರತ್ಯಕ್ಷಮೂಲಕವಾಗಬೇಕು. ಆಗ ಮಾತ್ರ ಅನುಮಾನ ಪ್ರಮಾಣವಾಗುತ್ತದೆ. ಪ್ರಕೃತ ಅನುಮಾನವು ಶ್ರುತಿಮೂಲಕವಲ್ಲವೆಂದರೆ ಪ್ರತ್ಯಕ್ಷ ಮೂಲಕವೆಂದು ಹೇಳಬೇಕು. ಆದರೆ ಪ್ರತ್ಯಕ್ಷವು ಅನಿಯತವೆಂದೇ ಕಂಡಿದೆ. ಪಟವು ತಂತುವಿನಲ್ಲಿ ನಾಶವಾಯಿತು, ಘಟವು ಮಣ್ಣಿನಲ್ಲಿ ನಾಶವಾಯಿತು ಎಂಬುದಾಗಿ ಎಲ್ಲಿಯೂ ಕಂಡಿರುವುದಿಲ್ಲ. ಯಾವಾಗ ನೇರವಾಗಿಯೇ ಪಟ ಬೆಂಕಿಯಿಂದ ಸುಟ್ಟದೆಯೋ ಆಗ ತಂತುವಿನಲ್ಲಿ ಪಟವು ಲಯ ಹೊಂದಿತು ಎಂದು ಯಾರೂ ಪ್ರಯೋಗ ಮಾಡುವುದಿಲ್ಲ. ಹೀಗೆ ಅನಿಯತತ್ವವನ್ನು ಹೇಳಿದ್ದರಿಂದ ಯಾವ ಯುಕ್ತಿಯನ್ನು ಪ್ರಮಾಣವನ್ನಾಗಿ ಹೇಳಿದರೋ ಅದು ಅಪ್ರಮಾಣವೆಂದು ಸಿದ್ಧವಾಯಿತು.

ವಿಪರ್ಯಯಾಧಿಕರಣ (೨-೩-೮)

ಅಥವಾ ಪೃಥಿವೀ, ಅಪ್ ಮೊದಲಾದವುಗಳಿಗೆ ತದಭಿಮಾನಿಚೇತನರು ಎಂಬರ್ಥವನ್ನು ವಿವಕ್ಷಿಸಿದರೆ ಆಗ ಸೃಷ್ಟಿ ಕ್ರಮವೇ ಲಯದಲ್ಲಿ ಪ್ರಾಪ್ತವಾಗುತ್ತದೆಯೇ ಹೊರತು ಸೃಷ್ಟಿ ವಿಪರೀತಕ್ರಮವು ಲಯದಲ್ಲಿ ಪ್ರಾಪ್ತವಾಗುವುದಿಲ್ಲ.

**प्रकाशः –** तेन ''न्यायमूल'' इति भामतिगतन्यायशब्दस्योपादानलये कार्यस्थित्ययोगो न्याय इत्यर्थ उक्तः । सोऽपि न्यायो व्यभिचारी । असत्यपि पितरि तदुपादानकस्य पुत्रस्य गोमये लीनेऽपि तदुपादानकस्य वृश्चिकशरीरस्य स्थितिदर्शनादिति सूचितम् ।

ಹೀಗೆ ಹೇಳಿದ್ದರಿಂದ ಭಾಮತಿಯಲ್ಲಿ ಹೇಳಿದ ಮತ್ತೊಂದು ವಿಷಯವನ್ನು ನಿರಾಕರಣೆ ಮಾಡಿದಂತಾಯಿತು. ನ್ಯಾಯಮೂಲಃ ಎಂಬಲ್ಲಿರುವ ನ್ಯಾಯಶಬ್ದಕ್ಕೆ 'ಉಪಾದಾನಲಯೇ ಕಾರ್ಯಸ್ಥಿತ್ಯಯೋಗಃ' ಎಂಬರ್ಥವನ್ನು ವಿವಕ್ಷಿಸಲಾಗಿದೆ. ಉಪಾದಾನವು ಲಯವಾದರೆ ಕಾರ್ಯವು ಇರಲು ಹೇಗೆ ಸಾಧ್ಯ? ಉಪಾದಾನವು ಲಯವಾದ ಮೇಲೆ ಕಾರ್ಯವು ನಾಶವಾಗಲೇಬೇಕು ಎಂಬ ಯಾವ ನ್ಯಾಯವನ್ನು ಹೇಳಲಾಗಿದೆಯೋ ಇದು ವ್ಯಭಿಚರಿತವಾಗಿದೆ. ಪುತ್ರನಿಗೆ ಪಿತೃ ಉಪಾದಾನನಾಗಿದ್ದಾನೆ. ಆದರೆ ಆ ಪುತ್ರನು ತಂದೆ ನಾಶವಾದರೂ ಕೂಡ ಇರುತ್ತಾನೆ. ಗೋಮಯವು ವೃಶ್ಚಿಕಕ್ಕೆ ಉಪಾದಾನವಾಗಿದೆ. ಉಪಾದಾನಕಾರಣವಾದ ಗೋಮಯವು ನಾಶವಾದರೂ ಕೂಡ ತದುಪಾದಾನಕವಾದ ವೃಶ್ಚಿಕದ ಶರೀರವಿರುವುದು ಕಂಡಿದೆ.

**ವಿವರಣೆ –** ತಂದೆಯು ಮಗನಿಗೆ ಉಪಾದಾನನಾಗಿದ್ದಾನೆಂದು ಹೇಳಿರುವುದು ಅಂಗೀಕಾರವಾದ. ನಮ್ಮ ಸಿದ್ಧಾಂತದಲ್ಲಿ ಪ್ರಕೃತ್ಯಧಿಕರಣದಲ್ಲಿ ಹೇಳಿದಂತೆ ಪಿತೃಶರೀರದಲ್ಲಿರುವ ವೀರ್ಯರೂಪವಾದ ಭಾಗವು ಮಾತ್ರ ಪುತ್ರನ ಶರೀರಕ್ಕೆ ಉಪಾದಾನವಾಗಿದೆ ಎಂದು ತಿಳಿಯಬೇಕು. ಉಳಿದ ಪಿತೃಶರೀರವು ಪುತ್ರನಿಗೆ ಅಪಾದಾನವಾಗಿದೆ ಹೊರತು ಉಪಾದಾನವಲ್ಲ. ಅದರಂತೆ ಗೋಮಯದಿಂದ ವೃಶ್ಚಿಕವು ಹುಟ್ಟಿದಾಗ ಯಾವ ಭಾಗದಿಂದ ವೃಶ್ಚಿಕವು ಹುಟ್ಟಿದೆಯೋ ಅದು ಮಾತ್ರ ಉಪಾದಾನವಾಗಿದೆ. ಉಳಿದ ಗೋಮಯಭಾಗವು ಅಪಾದಾನವಾಗಿದೆ ಎಂದು ತಿಳಿಯಬೇಕು. ಆದ್ದರಿಂದ ಇಲ್ಲಿ ಅಂಗೀಕಾರವಾದ ಮಾಡಿ ಹೇಳಿದ್ದಾರೆಂದು ತಿಳಿಯಬೇಕು.

**प्रकाशः –** यस्तु अतः अव्यक्तमहदहंकाराकाशादिक्रमात् । विपर्ययेण यस्सर्वेषां कार्याणां ब्रह्मानन्तर्यरूपः क्रमः ''एतस्माज्जायते प्राण'' इत्यादिषु प्रतीयते । स च क्रमस्तत्तद्रूपाद्ब्रह्मणस्तत्तत्कार्योत्पत्तेरेवोपपद्यते । परंपरया कारणत्वेऽप्यानन्तर्यश्रवण मुपपद्यत इति केषाञ्चित्सूत्रार्थः सोऽप्यपास्तः । अनेकाध्याहारदोषात् ।

ಶ್ರುತಪ್ರಕಾಶದಲ್ಲಿ ಈ ಸೂತ್ರವನ್ನು ಹೀಗೆ ವ್ಯಾಖ್ಯಾನಿಸಲಾಗಿದೆ. ಅತಃ = ಅವ್ಯಕ್ತತತ್ತ್ವ, ಮಹತ್ತತ್ವ, ಅಹಂಕಾರತತ್ವ, ಆಕಾಶತತ್ವ. ಈ ಕ್ರಮದಲ್ಲಿಯೇ ಪರಮಾತ್ಮನಿಂದ ಸೃಷ್ಟಿಯು ನಡೆಯುತ್ತದೆ. ವಿಪರ್ಯೇಣ = ಇದಕ್ಕೆ ವಿಪರೀತವಾಗಿ ಸಕಲ ಕಾರ್ಯಗಳೂ ಬ್ರಹ್ಮನಿಂದಲೇ ನೇರವಾಗಿ ಆಗುತ್ತದೆಂದು 'ಏತಸ್ಮಾತ್ ಜಾಯತೇ ಪ್ರಾಣಃ' ಇವೇ ಮೊದಲಾದ ಶ್ರುತಿಗಳಲ್ಲಿ ಪ್ರತೀತವಾಗುತ್ತಿದೆ. ಉಪಪದ್ಯತೇ = ಈ ಶ್ರುತಿಯಲ್ಲಿ ಪ್ರತೀತವಾದ

ಕ್ರಮವು ತತ್ತದ್ರೂಪನಾದ ಬ್ರಹ್ಮನ ದೆಸೆಯಿಂದ ಆಯಾ ಕಾರ್ಯಗಳು ಉತ್ಪನ್ನವಾಗುತ್ತದಾದ್ದರಿಂದ ಉಪಪನ್ನವಾಗುತ್ತದೆ. ಉಪಪದ್ಯತೇ = ಪರಂಪರಯಾ ಕಾರಣತ್ವವನ್ನು ಹೇಳಿದಾಗಲೂ ಆನಂತರ್ಯವು ಯುಕ್ತವಾಗುತ್ತದೆ. ಹೀಗೆ ಸೂತ್ರಾರ್ಥವನ್ನು ಹೇಳಿದ್ದಾರೆ. ಇದೂ ಕೂಡ ಈಗ ನಿರಸ್ತವಾಯಿತು.

ಅನೇಕ ಪದಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕಾದ ದೋಷ ಇವರಿಗೆ ಬರುತ್ತದೆ.

ವಿವರಣೆ – ಕೆಲವರು ಈ ಸೂತ್ರಕ್ಕೆ ಹೀಗೆ ವ್ಯಾಖ್ಯಾನ ಮಾಡುತ್ತಾರೆ. ಬ್ರಹ್ಮನಿಂದ ಕಾರ್ಯಗಳು ಹುಟ್ಟುವಾಗ ಕ್ರಮವಾಗಿಯೇ ಸೃಷ್ಟಿಯನ್ನು ಹೊಂದುತ್ತವೆ. ಅವ್ಯಕ್ತತತ್ತ್ವ, ಮಹತ್ತತ್ತ್ವ, ಅಹಂಕಾರತತ್ತ್ವ, ಆಕಾಶಾದಿಗಳು ಹೀಗೆ ಶ್ರುತಿಸಿದ್ಧವಾದ ಕ್ರಮದಿಂದಲೇ ಹುಟ್ಟುತ್ತವೆ. ಈ ಪ್ರಸಿದ್ಧವಾದ ಕ್ರಮಕ್ಕೆ ವಿಪರೀತವಾದ ಕ್ರಮವು ಕೆಲವೆಡೆ ಕೇಳಿಬರುತ್ತಿದೆ. ಉದಾ : 'ಏತಸ್ಮಿನ್ ಜಾಯತೇ ಪ್ರಾಣಃ ಮನಃ ಸರ್ವೇಂದ್ರಿಯಾಣಿ ಚ' ಎಂಬುದಾಗಿ ಎಲ್ಲಾ ವಸ್ತುಗಳೂ ಕೂಡ ಪರಮಾತ್ಮನಿಂದ ಒಟ್ಟಿಗೆ ಹುಟ್ಟಿದವು ಎಂದು ಹೇಳುತ್ತಿದೆ. ಆಗ ಕ್ರಮವಾಗಿ ಬ್ರಹ್ಮನಿಂದ ಹುಟ್ಟಿದವು ಎಂದು ಹೇಳುವ ಶ್ರುತಿಗೆ ಇದು ವಿರುದ್ಧವಾಯಿತು. ಇಂತಹ ಶ್ರುತಿಗಳ ವಿರೋಧವು ಈಗ ಬರುವುದಿಲ್ಲವೆಂದು ಈ ಸೂತ್ರದಲ್ಲಿ ಸಮರ್ಥಿಸಲಾಗಿದೆ. ಆಯಾ ರೂಪದಲ್ಲಿರುವ ಬ್ರಹ್ಮನ ದೆಸೆಯಿಂದ ಆಯಾ ಕಾರ್ಯಗಳು ಹುಟ್ಟುತ್ತವೆ ಎಂದು ಹೇಳಬೇಕು. ಆಕಾಶ ಶರೀರಕನಾದ ಬ್ರಹ್ಮನಿಂದ ವಾಯುಶರೀರಕನಾದ ಬ್ರಹ್ಮನು, ವಾಯುಶರೀರಕನಾದ ಬ್ರಹ್ಮನಿಂದ ತೇಜೋಶರೀರಕನಾದ ಬ್ರಹ್ಮನು ಹುಟ್ಟುವನು ಎಂದು ಅರ್ಥವನ್ನು ಹೇಳಬೇಕು. ಒಂದುವೇಳೆ ಯಾವುದಾದರೂ ಶ್ರುತಿಯಲ್ಲಿ ನೇರವಾಗಿ ಪರಮಾತ್ಮನಿಂದ ಪೃಥ್ವಿಯು ಹುಟ್ಟಿತು ಎಂದು ಹೇಳಿದರೆ ಅಲ್ಲೂ ಕೂಡ ತತ್‌ಶರೀರಕನಾದ ಬ್ರಹ್ಮನಿಂದಲೇ ಪೃಥ್ವೀ ಶರೀರಾತ್ಮನಾದ ಬ್ರಹ್ಮನು ಹುಟ್ಟಿದನು ಎಂದು ಅರ್ಥ ಮಾಡಬೇಕು. ಹೀಗೆ ಶ್ರುತಪ್ರಕಾಶದಲ್ಲಿ ಸೂತ್ರಾರ್ಥವನ್ನು ಹೇಳಿದ್ದಾರೆ.

ಶ್ರುತಪ್ರಕಾಶದ ಈ ವ್ಯಾಖ್ಯಾನವು ಅಯುಕ್ತವಾಗಿದೆ. ಏಕೆಂದರೆ ಪ್ರಸಿದ್ಧವಾದ ಕ್ರಮಕ್ಕಿಂತ ವಿಪರೀತವಾದ ಯಾವ ಕ್ರಮವಿದೆಯೋ ಅದು ಶ್ರುತಿಗಳಲ್ಲಿ ಪ್ರತೀತವಾಗುತ್ತಿದೆ ಎಂಬುದಾಗಿ ಸೂತ್ರಾರ್ಥವನ್ನು ಹೇಳಿದಾಗ ಮತ್ತು ತತ್ತದ್ರೂಪಕಾರ್ಯದಿಂದ ತತ್ತದ್ ರೂಪನಾದ ಬ್ರಹ್ಮನು ಹುಟ್ಟುತ್ತಾನೆ. ಆದ್ದರಿಂದ ಉಪಪದ್ಯತೇ ಎಂದು ಹೇಳಿ ಪುನಃ ಪರಂಪರಯಾ ಕಾರಣತ್ವವನ್ನು ಹೇಳಿದಾಗಲೂ ಉಪಪದ್ಯತೇ ಎಂಬುದಾಗಿ ಇಟ್ಟುಕೊಂಡು ಸೂತ್ರಾರ್ಥವನ್ನು ಹೇಳಲಾಗಿದೆ. ಹೀಗೆ ಅನೇಕ ಪದಗಳನ್ನು ಇವರು ಅಧ್ಯಾಹಾರ ಮಾಡಿಕೊಳ್ಳಬೇಕಾಗುತ್ತದಾದ್ದರಿಂದ ಈ ವ್ಯಾಖ್ಯಾನವು ತಪ್ಪು.

**ಪ್ರಕಾಶಃ** – ''स इदं सर्वमसृजत'' इत्यादाविव ''एतस्मात्'' इति श्रुतौ क्रमोत्पत्त्यनुक्तेरेव भावेन विपरीतक्रमोत्पत्त्युक्तेरभावेन सामान्यश्रुतेः क्रमोक्तिपरविशेषश्रुत्यनुरोधेन पाठक्रमेण वा निर्णयस्य सिद्धतया तदर्थं पृथक् सूत्रस्यानारभ्यत्वात्।

'ಸ ಇದಂ ಸರ್ವಮಸೃಜತ' ಎಂಬ ಶ್ರುತಿಯಲ್ಲಿ ಯಾವ ಕ್ರಮದಲ್ಲಿ ಈ ಜಗತ್ತು ಬ್ರಹ್ಮನಿಂದ ಹುಟ್ಟಿತು ಎಂದು ಹೇಳಿಯೇ ಇಲ್ಲ. ಇದನ್ನು 'ಆತ್ಮ ಆಕಾಶಂ ಸಂಭೂತಃ' ಎಂಬ ಶ್ರುತಿಯ ಆಧಾರದಿಂದ ಹೇಗೆ ಅರ್ಥಮಾಡಿಕೊಳ್ಳುತ್ತೇವೋ, ಅದರಂತೆ 'ಏತಸ್ಮಾತ್' ಎಂಬ ಶ್ರುತಿಯೂ ಕೂಡ ಕ್ರಮವಾಗಿ ಉತ್ಪನ್ನವಾದುದನ್ನು ಹೇಳಿಲ್ಲ. ವಿಪರೀತಕ್ರಮವಾಗಿ ಉತ್ಪನ್ನವಾಯಿತೆಂದು ಈ ಶ್ರುತಿಯು ಹೇಳದ ಕಾರಣ ಇದು ಸಾಮಾನ್ಯಶ್ರುತಿಯಾಗಿದೆ. ಆದ್ದರಿಂದ ಕ್ರಮವಾಗಿ ಸೃಷ್ಟಿಯನ್ನು ಹೇಳುವ ವಿಶೇಷಶ್ರುತಿಗೆ ಅನುಗುಣವಾಗಿ

'ಏತಸ್ಮಾತ್' ಎಂಬ ಸಾಮಾನ್ಯಶ್ರುತಿಯನ್ನು ವ್ಯಾಖ್ಯಾನ ಮಾಡಬೇಕು. ಅಥವಾ 'ಏತಸ್ಮಾಜ್ಜಾಯತೇ ಪ್ರಾಣಃ ಮನಃ ಸರ್ವೇಂದ್ರಿಯಾಣಿ ಚ' ಎಂಬ ಶ್ರುತಿಯಲ್ಲಿ ಪ್ರಾಣ, ಮನಸ್ಸು, ಇಂದ್ರಿಯಗಳು ಎಂಬ ಪಾಠಕ್ರಮವನ್ನು ಅನುಸರಿಸಿ ಮೊದಲು ಪ್ರಾಣ ಹುಟ್ಟಿತು, ಆಮೇಲೆ ಮನಸ್ಸು ಹುಟ್ಟಿತು ಎಂಬುದಾಗಿಯೇ ನಿರ್ಣಯವನ್ನು ಮಾಡಬೇಕು. ಹೀಗೆ ಸುಲಭವಾಗಿ ಅರ್ಥವನ್ನು ಹೇಳಲು ಬರುವಾಗ ಪ್ರತ್ಯೇಕವಾಗಿ ಸೂತ್ರವು ಇವರ ಪ್ರಕಾರ ಹೊರಟಿದ್ದೇ ವ್ಯರ್ಥವಾಗುತ್ತದೆ.

**ವಿವರಣೆ** – ಮತ್ತು ಈ ಸೂತ್ರವೇ ವ್ಯರ್ಥ. ಏಕೆಂದರೆ ಉಕ್ತಿಗೂ, ವಿಪರೀತವಾದ ಉಕ್ತಿಗೂ ಪರಸ್ಪರವಿರೋಧವಿರುವುದು ಕಂಡಿದೆ. ಆದರೆ ಒಂದು ಉಕ್ತಿಗೂ ಮತ್ತೊಂದು ಅನುಕ್ತಿಗೂ ವಿರೋಧವನ್ನು ಸರ್ವಥಾ ಹೇಳಬಾರದು. ಉದಾ : 'ಸ ಇದಂ ಸರ್ವಮಸೃಜತ' ಎಂಬುದರಲ್ಲಿ ಪರಮಾತ್ಮನು ಎಲ್ಲವನ್ನೂ ಸೃಷ್ಟಿ ಮಾಡಿದನು ಎಂದು ಹೇಳಲಾಗಿದೆ. ಇದರಲ್ಲಿ ಯಾವ ಕ್ರಮದಲ್ಲಿ ಸೃಷ್ಟಿ ಮಾಡಿದನೆಂಬುದನ್ನು ಹೇಳಿಯೇ ಇಲ್ಲ. ಹೇಳಿಲ್ಲವೆಂದ ಮಾತ್ರಕ್ಕೆ 'ಆತ್ಮನಃ ಆಕಾಶಃ ಸಂಭೂತಃ' ಎಂಬುದರಿಂದ ಈ ವಾಕ್ಯಕ್ಕೆ ವಿರೋಧ ಬಂದಿತು ಎಂದು ಸರ್ವಥಾ ಹೇಳಬಾರದು. ಅದರಂತೆ ಪ್ರಕೃತ, 'ಏತಸ್ಮಾತ್ ಜಾಯತೇ ಪ್ರಾಣಃ' ಎಂಬಲ್ಲಿ ಪರಮಾತ್ಮನಿಂದ ಪ್ರಾಣ ಮೊದಲಾದವುಗಳು ಯಾವ ಕ್ರಮದಲ್ಲಿ ಉತ್ಪನ್ನವಾದವು ಎಂದು ಹೇಳಿರುವುದಿಲ್ಲ. ಹೀಗೆ ಹೇಳದಿದ್ದಾಗ 'ಆತ್ಮನಃ ಆಕಾಶಃ ಸಂಭೂತಃ' ಇತ್ಯಾದಿಯಾಗಿ ಕ್ರಮವಾಗಿ ಉತ್ಪತ್ತಿಯನ್ನು ಹೇಳಿದ ಶ್ರುತಿಗೆ ಅನುಗುಣವಾಗಿಯೇ ಇದಕ್ಕೂ ಕೂಡ ವ್ಯಾಖ್ಯಾನವನ್ನು ಮಾಡಬೇಕಾಗುತ್ತದೆ. ಅಥವಾ ಯಾವ ಪಾಠ ಕ್ರಮದಲ್ಲಿ ಶಬ್ದಗಳನ್ನು ಶ್ರುತಿಯು ಉಲ್ಲೇಖ ಮಾಡಿರುತ್ತದೋ ಅದೇ ಕ್ರಮದಲ್ಲಿಯೇ ಉತ್ಪತ್ತಿಯನ್ನು ಹೊಂದಿತು ಎಂಬುದಾಗಿ ಅರ್ಥವನ್ನು ಮಾಡಲು ಬರುತ್ತದೆ.

**प्रकाशः** – तत्तच्छरीरक ब्रह्मजातत्वोक्त्यर्थमिदमित्यप्ययुक्तम् । अस्य सूत्रेऽप्रतीतेः । पूर्वसूत्रेणैव तदर्थस्य लाभाच्च । अवश्यं निरसनीयस्य लयक्रमश्रुतिविगानस्यास्मद्भाष्योक्तस्य तन्मते निरासाभावप्रसङ्गाच्चेति ॥

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे विपर्ययाधिकरणं सम्पूर्णम् ॥८॥**

ಮತ್ತು ತತ್ತಚ್ಛರೀರಕನಾದ ಬ್ರಹ್ಮನಿಂದ ಕಾರ್ಯಗಳು ಹುಟ್ಟುತ್ತವೆ ಎಂಬ ಪ್ರಮೇಯವನ್ನು ತಿಳಿಸುವುದಕ್ಕಾಗಿ ಈ ಸೂತ್ರವು ಸಾರ್ಥಕ ಎಂಬ ಪ್ರಮೇಯವೂ ಕೂಡ ಈಗ ಅಯುಕ್ತವಾಯಿತು. ಏಕೆಂದರೆ ಈ ಸೂತ್ರದಲ್ಲಿ ಅಂತಹ ಪ್ರಮೇಯವನ್ನು ಹೇಳಿದ್ದು ಕಾಣಿಸುತ್ತಲೇ ಇಲ್ಲ. ಅಷ್ಟೇ ಅಲ್ಲದೇ ಹಿಂದಿನ ಸೂತ್ರದಿಂದಲೇ ಈ ಪ್ರಮೇಯವು ನಿಮ್ಮ ಪ್ರಕಾರ ಸಿದ್ಧವಾಗಿದೆ. ಆದ್ದರಿಂದ ಈ ಸೂತ್ರ ಹೊರಟಿದ್ದು ವ್ಯರ್ಥವೇ ಆಗಿದೆ.

**ಪರಿಪೂರ್ಣಚಂದ್ರಿಕಾ**

ಮತ್ತು ಅವಶ್ಯವಾಗಿ ನಿರಾಕರಣೆ ಮಾಡಲೇಬೇಕಾದ ವಿಚಾರವೆಂದರೆ ಕೆಲವು ಶ್ರುತಿಗಳು ಲಯದಲ್ಲಿ ಕ್ರಮವನ್ನು ಇನ್ನು ಕೆಲವು ವ್ಯುತ್ಕ್ರಮವನ್ನು ಹೇಳುತ್ತವೆ. ಈ ಎರಡು ಶ್ರುತಿಗಳಿಗೆ ಬರುವ ಪರಸ್ಪರ ವಿರೋಧವನ್ನು ನಿರಾಕರಣೆ ಮಾಡಲೇಬೇಕು. ನಿಮ್ಮ ಭಾಷ್ಯಕಾರರು ಈ ವಿಚಾರವನ್ನು ಮಾಡಿಯೇ ಇಲ್ಲ. ಆದ್ದರಿಂದ ಈ ಶ್ರುತಿಗಳ ವಿರೋಧವು ನಿಮ್ಮ ಪ್ರಕಾರ ಹಾಗಿಯೇ ಉಳಿಯಿತು.

ಈ ಸೂತ್ರವು ವ್ಯರ್ಥವಲ್ಲ. ಏಕೆಂದರೆ ಎಲ್ಲಾ ಕಾರ್ಯವೂ ಕೂಡ ತತ್ತಚ್ಛರೀರಕನಾದ ಬ್ರಹ್ಮನಿಂದಲೇ ಹುಟ್ಟುತ್ತವೆ. ಈ ಒಂದು ಅಪೂರ್ವಪ್ರಮೇಯವನ್ನು ತಿಳಿಸುವುದಕ್ಕಾಗಿಯೇ ಈ ಸೂತ್ರ ಹೊರಟಿದೆ. ಇದು ತಪ್ಪು. ಏಕೆಂದರೆ ಸೂತ್ರದಲ್ಲಿ ಅತಃ ಎಂದಷ್ಟೇ ಇದೆಯೇ ಹೊರತು ತತ್ತಚ್ಛರೀರಕನಾದ ಬ್ರಹ್ಮನಿಂದ ಹುಟ್ಟುವುದರಿಂದ ಎಂದು ಸ್ಪಷ್ಟವಾಗಿ ಹೇಳುವ ಶಬ್ದವು ಇರುವುದಿಲ್ಲ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ವಿಪರ್ಯಯಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.




'ವಿಪರ್ಯೇಣ ತು ಕ್ರಮೋತ ಉಪಪದ್ಯತೇ' ಎಂಬ ಸೂತ್ರಕ್ಕೆ ಅದ್ವೈತಿಗಳು ಸೃಷ್ಟಿ ಕ್ರಮಕ್ಕಿಂತ ವಿಪರೀತವಾದ ಲಯಕ್ರಮವನ್ನು ಒಪ್ಪಬೇಕು ಎಂದು ವ್ಯಾಖ್ಯಾನ ಮಾಡುತ್ತಾರೆ. ಆದ್ದರಿಂದ ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿಯಿಂದ, ಅಗ್ನಿಯಿಂದ ನೀರು, ನೀರಿನಿಂದ ಪೃಥ್ವಿ, ಹೀಗೆ ಕ್ರಮವಾಗಿ ಸೃಷ್ಟಿಯಾಗುತ್ತದೆ. ಆದರೆ ಇದಕ್ಕೆ ವಿಪರೀತವಾಗಿ ಪೃಥ್ವಿ ನೀರಿನಲ್ಲಿ, ನೀರು ಅಗ್ನಿಯಲ್ಲಿ, ಅಗ್ನಿಯು ವಾಯುವಿನಲ್ಲಿ, ವಾಯುವು ಆಕಾಶದಲ್ಲಿ ಲಯ ಹೊಂದುತ್ತದೆ.

ಅದ್ವೈತಿಗಳ ಈ ಅಧಿಕರಣ ಶರೀರವು ಅಯುಕ್ತವಾಗಿದೆ. ಏಕೆಂದರೆ ಈ ಅಧ್ಯಾಯದಲ್ಲಿ ಸಂಗತಿಯನ್ನು ಹೊಂದಬೇಕಾದರೆ ಯಾವುದಾದರೂ ವಿರೋಧವನ್ನು ಪರಿಹಾರ ಮಾಡಲೇಬೇಕು. ಇಲ್ಲಿ ಯಾವುದೇ ವಿರೋಧವನ್ನು ಪರಿಹಾರ ಮಾಡದ ಕಾರಣ ಅಧ್ಯಾಯಸಂಗತಿಯೇ ಇಲ್ಲ. ಮತ್ತು ವ್ಯುತ್ಕ್ರಮವಾಗಿ ಲಯ ಹೊಂದುತ್ತದೆ ಎನ್ನಲು ಯಾವುದೇ ಶ್ರುತಿಯನ್ನೂ ಕೂಡ ಅವರು ಆಧಾರವನ್ನಾಗಿ ನೀಡುತ್ತಿಲ್ಲ. ಆದ್ದರಿಂದ ನಾವು ಹೇಳುವಂತೆ 'ವ್ಯುತ್ಕ್ರಮಾದ್ವಿಲಯಶ್ಚ' ಎಂಬ ಶ್ರುತಿಯನ್ನು ಆಧಾರವನ್ನಾಗಿ ನೀಡಿ ಇದಕ್ಕೆ 'ಕ್ರಮಾದ್ವಿಲೀಯತೇ' ಎಂಬ ಯುಕ್ತಿಯ

ಬೆಂಬಲವುಳ್ಳ ಶ್ರುತಿಯ ವಿರೋಧವನ್ನು ಪರಿಹಾರ ಮಾಡಬೇಕು. ಇದರಿಂದ ಶ್ರುತಿದ್ವಯಗಳ ವಿರೋಧವನ್ನು ಪರಿಹಾರ ಮಾಡಿದಂತಾಗುವುದರಿಂದ ಈ ಅಧಿಕರಣವು ಸಂಗತವಾಗುತ್ತದೆ.

ಅದ್ವೈತಿಗಳು 'ಜಗತ್ಪ್ರತಿಷ್ಠಾದೇವರ್ಷೇ' ಎಂಬ ಸ್ಮೃತಿಯನ್ನು ಉಲ್ಲೇಖ ಮಾಡಿ ಇದರ ಆಧಾರದಲ್ಲಿ ಶ್ರುತಿಯನ್ನು ಅನುಮಾನ ಮಾಡುತ್ತೇವೆನ್ನುತ್ತಾರೆ. ಆದರೆ ಸ್ಮೃತಿಯಲ್ಲಾಗಲೀ ಅನುಮಿತವಾದ ಶ್ರುತಿಯಲ್ಲಾಗಲೀ ಲಯದ ಕ್ರಮವು ಸ್ಪಷ್ಟವಾಗಿ ಸ್ಫುಟವಾಗುತ್ತಿರುವುದರಿಂದ ಅದು ಸ್ಫುಟವೇ ಆಗಿಲ್ಲವೆಂದು ಪೂರ್ವಪಕ್ಷ ಮಾಡಿ ಉತ್ತರಿಸುವುದು ತಪ್ಪಾಗುತ್ತದೆ. ಮತ್ತು ಅದ್ವೈತಿಗಳು ಉಪಾದೇಯವು ಉಪಾದಾನದಲ್ಲಿಯೇ ಲಯವಾಗುವುದು ಕಂಡಿದೆ ಎನ್ನುತ್ತಾರೆ. ಆದರೆ ಯಾವ ಬಟ್ಟೆ ಬೆಂಕಿಯಲ್ಲಿ ಸುಡುತ್ತದೋ ಅದು ತಂತುವಿನಲ್ಲಿ ನಾಶವಾಗುತ್ತದೆಂದು ಯಾರೂ ಹೇಳುವುದಿಲ್ಲ. ಆದ್ದರಿಂದ ಈ ವಾದವೂ ಕೂಡ ತಪ್ಪು. ಚೇತನರಲ್ಲೂ ಕೂಡ ತಂದೆಯೇ ಮೊದಲು ಮರಣವನ್ನು ಹೊಂದಿ ಆಮೇಲೆ ಮಗನು ಮರಣವನ್ನು ಹೊಂದುತ್ತಾನೆ. ಆದ್ದರಿಂದ ಮೊದಲು ಹುಟ್ಟಿದ್ದು ಮೊದಲು ನಾಶವಾಗುತ್ತದೆಂದು ಅದ್ವೈತಿಗಳು ಉಪಪಾದನೆ ಮಾಡಲು ಸಾಧ್ಯವಿಲ್ಲ.

ಶ್ರೀಕೃಷ್ಣಾರ್ಪಣಮಸ್ತು.

# ಅಂತರವಿಜ್ಞಾನಾಧಿಕರಣ

(೨-೩-೯)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

॥ ಶ್ರೀಗುರುಭ್ಯೋ ನಮಃ ॥

# ಅಂತರವಿಜ್ಞಾನಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – अन्तरा विज्ञानमनसी क्रमेण तल्लिङ्गादिति चेन्नाविशेषात् ।।**

ವಿಜ್ಞಾನತತ್ತ್ವ ಹಾಗೂ ಮನಸ್ತತ್ತ್ವಗಳೆರಡು ಬಿಟ್ಟು ಉಳಿದ ತತ್ತ್ವಗಳು ಮಾತ್ರ ವ್ಯುತ್ಕ್ರಮದಿಂದ ಲಯವನ್ನು ಹೊಂದುತ್ತವೆ. ಏಕೆಂದರೆ ವಿಜ್ಞಾನತತ್ತ್ವ ಹಾಗೂ ಮನಸ್ತತ್ತ್ವಗಳು ಯಾವ ಕ್ರಮದಲ್ಲಿ ಹುಟ್ಟಿವೆಯೋ, ಅದೇ ಕ್ರಮದಲ್ಲೇ ಲಯವನ್ನು ಹೊಂದುತ್ತವೆಂದು ಶ್ರುತಿಯ ಹೇಳುತ್ತಿದೆ. ಇದು ಯುಕ್ತವಲ್ಲ. ಹಾಗೇ ಉತ್ಪತ್ತಿಕ್ರಮದಲ್ಲೇ ಲಯವನ್ನು ಹೊಂದುತ್ತವೆನ್ನಲು ವಿಶೇಷ ಪ್ರಮಾಣವಿರುವುದಿಲ್ಲ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका – विज्ञानमनसी** विज्ञानतत्त्वमनस्तत्त्वे । **अन्तरा** विना । अन्यत्र **क्रमेण** व्युत्क्रमेण लयः न तयोरपि । कुतः? **तल्लिङ्गात्** 'मनसश्च विज्ञानम्' इत्यत्र विज्ञानात् पूर्वोत्पन्नतया भूतस्यापि मनसः 'यच्छेद् वाङ्मनसी' इति पूर्वमेव लयोक्तिरूपसाधकदर्शनादिति **चेन्न** । कुतः? **अविशेषात्** । विज्ञानमनस्तत्त्वयोर्यथोत्पत्तिलय इत्यत्र विशेषप्रमाणाभावादित्यर्थः ।।१।।

ವಿಜ್ಞಾನಮನಸೀ = ವಿಜ್ಞಾನತತ್ತ್ವ ಹಾಗೂ ಮನಸ್ತತ್ತ್ವ, ಇವೆರಡನ್ನು ಅಂತರಾ = ಹೊರತು ಪಡಿಸಿ, ಉಳಿದ ತತ್ತ್ವಗಳಿಗೆ ಮಾತ್ರ, ಕ್ರಮೇಣ = ವ್ಯುತ್ಕ್ರಮದಿಂದ ಲಯ. ಏಕೆಂದರೆ ತಲ್ಲಿಂಗಾತ್ = 'ಪ್ರಾಣಾನ್ಮನೋ ಮನಸಶ್ಚ

ವಿಜ್ಞಾನಮ್' ಎಂಬ ಶ್ರುತಿಯಲ್ಲಿ ವಿಜ್ಞಾನಕ್ಕಿಂತ ಮೊದಲು ಮನಸ್ಸು ಹುಟ್ಟಿರುತ್ತದೆಂದು ಹೇಳಿದೆ. ಆದರಂತೆ 'ಯಚ್ಛೇದ್ ವಾಙ್ಮನಸೀ ಪ್ರಾಜ್ಞಸ್ತದ್ ಯಚ್ಛೇತ್ ಜ್ಞಾನ ಆತ್ಮನಿ' ಎಂಬಲ್ಲಿ ವಿಜ್ಞಾನಕ್ಕಿಂತ ಮೊದಲೇ ಮನಸ್ತತ್ವಕ್ಕೆ ಲಯವನ್ನು ಹೇಳಲಾಗಿದೆ. ಇತಿ ಚೇನ್ನ = ಇದು ಯುಕ್ತವಲ್ಲ. ಏಕೆಂದರೆ ಅವಿಶೇಷಾತ್ = ವಿಜ್ಞಾನತತ್ವ, ಮನಸ್ತತ್ವಗಳು ಉತ್ಪತ್ತಿಕ್ರಮದಲ್ಲೇ ಲಯವನ್ನು ಹೊಂದುತ್ತವೆನ್ನಲು ವಿಶೇಷ ಪ್ರಮಾಣಗಳು ಯಾವುದೂ ಇಲ್ಲ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् — अन्तरा विज्ञानमनसी क्रमेण तल्लिङ्गादिति चेन्नाविशेषात् ।।१।।**

**'प्राणान्मनो मनसश्च विज्ञानम्' 'यच्छेद्वाङ्मनसी प्राज्ञस्तद् यच्छेज्ज्ञान आत्मनि' (कठ. ३.१३.) इति लिङ्गाद् विज्ञानमनसी अन्तरा विपरीतक्रम इति चेत् । न विशेषप्रमाणाभावात् ।।**

ಅನುವಾದ - ಮುಖ್ಯಪ್ರಾಣನಿಂದ ಮನಸ್ಸು ಹುಟ್ಟಿತು. ಮನಸ್ಸಿನಿಂದ ವಿಜ್ಞಾನತತ್ವ ಹುಟ್ಟಿತು-

ವಾಕ್ ತತ್ವಕ್ಕೆ ಅಭಿಮಾನಿಯಾದ ಉಮೆಯು ಮನಸ್ತತ್ವಾಭಿಮಾನಿಯಾದ ರುದ್ರನ ಅಧೀನಳೆಂದು ತಿಳಿಯಬೇಕು. ಆ ರುದ್ರನನ್ನು ವಿಜ್ಞಾನತತ್ವಕ್ಕೆ ಅಭಿಮಾನಿಯಾದ ಸರಸ್ವತಿಯ ಅಧೀನನೆಂದು ತಿಳಿಯಬೇಕು. ಈ ಲಿಂಗದಿಂದ ವಿಜ್ಞಾನತತ್ವ ಹಾಗೂ ಮನಸ್ತತ್ವಗಳು ಯಾವ ಕ್ರಮದಲ್ಲಿ ಹುಟ್ಟುತ್ತವೋ ಅದೇ ಕ್ರಮದಲ್ಲಿ ಲಯವನ್ನು ಹೊಂದುತ್ತವೆ. ವಿಪರೀತಕ್ರಮದಲ್ಲಿ ಲಯವನ್ನು ಹೊಂದುವುದನ್ನು ಈ ವಿಜ್ಞಾನತತ್ವ ಹಾಗೂ ಮನಸ್ತತ್ವಗಳನ್ನು ಬಿಟ್ಟು ಉಳಿದ ಪದಾರ್ಥಗಳಿಗೆ ಮಾತ್ರ ಹೇಳಬೇಕು. ಇಷ್ಟು ಪೂರ್ವಪಕ್ಷ.

ಪ್ರತಿಪದಾರ್ಥ -- ಪ್ರಾಣಾತ್ = ಮುಖ್ಯಪ್ರಾಣನಿಂದ, ಮನಃ = ಮನಸ್ತತ್ವವು, ಮನಸಶ್ಚ = ಮನಸ್ತತ್ವದಿಂದ, ವಿಜ್ಞಾನಮ್ = ವಿಜ್ಞಾನತತ್ವವು ಹುಟ್ಟಿತು. ಯಚ್ಛೇತ್ ವಾಕ್ = ವಾಕ್ ತತ್ವಕ್ಕೆ ಅಭಿಮಾನಿಯಾದ ಉಮೆಯನ್ನು, ಮನಸೀ = ಮನಸ್ತತ್ವಾಭಿಮಾನಿಯಾದ ರುದ್ರನ ಅಧೀನಳೆಂದು, ಪ್ರಾಜ್ಞಃ = ತಿಳಿಯಬೇಕು. ತತ್ = ಆ ರುದ್ರನನ್ನು, ಯಚ್ಛೇತ್ ಜ್ಞಾನ ಆತ್ಮನಿ = ವಿಜ್ಞಾನ ತತ್ವಕ್ಕೆ ಅಭಿಮಾನಿಯಾದ ಸರಸ್ವತಿಯ ಅಧೀನನೆಂದು ತಿಳಿಯಬೇಕು. ಇತಿ = ಹೀಗೆ, ಲಿಂಗಾತ್ = ಉತ್ಪತ್ತಿಕ್ರಮದಲ್ಲೇ ಲಯಕ್ರಮವೆಂಬ ಲಿಂಗವಿರುವುದರಿಂದ, ವಿಜ್ಞಾನಮನಸೀ = ವಿಜ್ಞಾನತತ್ವ ಹಾಗೂ ಮನಸ್ತತ್ವಗಳನ್ನು, ಅಂತರಾ = ಬಿಟ್ಟು, ವಿಪರೀತಕ್ರಮಃ = ವಿಪರೀತಕ್ರಮವನ್ನು ಹೇಳಬೇಕು. ಇತಿ ಚೇತ್ = ಇಷ್ಟು ಪೂರ್ವಪಕ್ಷ.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**तत्वप्रकाशिका – अत्र ब्रह्मणि श्रुतिसमन्वयसिद्ध्यर्थमधिभूतादिलय-विषयश्रुतिविरोधपरिहारादस्ति शास्त्रादिसङ्गतिः । सकललयकर्ता हरिरित्युक्तम् । लयविषये च श्रुतिविरोधे न समन्वयः सम्भवेदिति निवार्योऽसौ भवति ।**

ಈ ಅಧಿಕರಣದಲ್ಲಿ ಪರಬ್ರಹ್ಮನಲ್ಲೇ ಶ್ರುತಿಸಮನ್ವಯದ ಸಿದ್ಧಿಗೋಸ್ಕರ ಅಧಿಭೂತಾದಿಗಳ ಲಯವಿಷಯಕವಾದ ಶ್ರುತಿವಿರೋಧವನ್ನು ಪರಿಹಾರ ಮಾಡುತ್ತಿರುವುದರಿಂದ ಶಾಸ್ತ್ರ, ಅಧ್ಯಾಯ, ಪಾದ ಸಂಗತಿಗಳು ಇರುತ್ತವೆ.

ಸಕಲ ಸಂಹಾರಕ್ಕೆ ಶ್ರೀಹರಿಯೇ ಕರ್ತೃ ಆಗಿದ್ದಾನೆಂದು ಹೇಳಲಾಯಿತು. ಲಯವಿಷಯದಲ್ಲಿ ಶ್ರುತಿವಿರೋಧವು ಪ್ರಾಪ್ತವಾದಾಗ ಸಮನ್ವಯವು ಕೂಡುವುದಿಲ್ಲ. ಅದಕ್ಕಾಗಿ ಶ್ರುತಿವಿರೋಧವನ್ನು ಇಲ್ಲಿ ಪರಿಹಾರ ಮಾಡಲೇಬೇಕು.

ವಿವರಣೆ - 'ಯತ್‌ಪ್ರಯಂತ್ಯಭಿಸಂವಿಶಂತಿ' ಎಂಬ ಸಂಹಾರವಿಷಯಕವಾದ ಶ್ರುತಿಸಮನ್ವಯವನ್ನು ಈ ಅಧಿಕರಣದಲ್ಲಿ ಮಾಡುತ್ತಿದ್ದಾರೆ. ಭೂತಗಳ ಲಯಕ್ಕೆ ಸಂಬಂಧಿಸಿದ ಶ್ರುತಿಗಳ ವಿರೋಧವನ್ನು ಪರಿಹಾರ ಮಾಡುತ್ತಿರುವುದರಿಂದ ಶಾಸ್ತ್ರ ಸಂಗತಿ, ಅಧ್ಯಾಯಸಂಗತಿ ಹಾಗೂ ಪಾದಸಂಗತಿಗಳು ಇರುತ್ತವೆ.

**तत्वप्रकाशिका – प्रकृताधिभूतादीनि विषयः । किं सर्वाण्युत्पत्तिक्रमवैपरीत्येन लीयन्ते कानिचित्क्रमेणापि वेति संशयः । 'अक्षरात्परमादेव' इति श्रुतेर्वक्ष्यमाणलिङ्गदर्शनस्य च विरोधः सन्देहबीजम् ।**

ಪ್ರಕೃತವಾದ ಅಧಿಭೂತಾದಿಗಳೇ ಅಧಿಕರಣಕ್ಕೆ ವಿಷಯ. ಎಲ್ಲವೂ ಕೂಡ ಉತ್ಪತ್ತಿಕ್ರಮಕ್ಕೆ ವಿರುದ್ಧವಾಗಿ ಲಯವನ್ನು ಹೊಂದುತ್ತವೋ? ಅಥವಾ ಕೆಲವು ಉತ್ಪತ್ತಿ ಕ್ರಮದಲ್ಲಿಯೇ ಲಯವನ್ನು ಹೊಂದುತ್ತವೋ? ಎಂಬುದು ಅಧಿಕರಣದ ಸಂಶಯ. 'ಅಕ್ಷರಾತ್ಪರಮಾದೇವ' 'ಪರಮಾಕ್ಷರನೆನಿಸಿದ ಶ್ರೀಹರಿಯಿಂದಲೇ ಸಮಸ್ತ ಪ್ರಪಂಚವು ಲಯವನ್ನು ಹೊಂದುತ್ತದೆ' ಎಂಬ ಶ್ರುತಿಗೂ ಹಾಗೂ ಲಿಂಗದರ್ಶನಕ್ಕೂ ಇರುವ ಪರಸ್ಪರ ವಿರೋಧವೇ ಸಂದೇಹಬೀಜ.

ವಿವರಣೆ - ಹಿಂದಿನ ಅಧಿಕರಣದಲ್ಲಿ ಉತ್ಪತ್ತಿ ಕ್ರಮದಲ್ಲಿ ಲಯವಾಗುವುದಿಲ್ಲ. ಅದಕ್ಕೆ ವಿರುದ್ಧ ಕ್ರಮದಲ್ಲಿ ಲಯವಾಗುತ್ತದೆಂದು ಸಮರ್ಥಿಸಲಾಯಿತು. ಆದರೆ ಕೆಲವು ಪದಾರ್ಥಗಳು ಉತ್ಪತ್ತಿ ಕ್ರಮದಲ್ಲಿಯೇ ಲಯವನ್ನು ಹೊಂದುತ್ತವೆಂಬುದು ಯುಕ್ತಿಯಿಂದ ತಿಳಿಯುತ್ತಿದೆ. ಆ ಲಿಂಗವು ಹೀಗಿದೆ - ಮನಸ್ಸಿನಿಂದ ವಿಜ್ಞಾನವು ಹುಟ್ಟುತ್ತದೆ. ಇಲ್ಲಿ ಜನ್ಯವಾದ ವಿಜ್ಞಾನದಲ್ಲಿ ಜನಕವಾದ ಮನಸ್ಸು ಲಯಹೊಂದುವುದನ್ನು ಒಪ್ಪಲಾಗಿದೆ. ಜನ್ಯವಾದಕ್ಕೆ ಜನಕದಲ್ಲಿಯೇ ಲಯವಾಗುವುದು ಬೇರೆ ಕಡೆ

ಮಾತ್ರ ಹೊರತು ಇಲ್ಲಿ ಹಾಗೆ ಒಪ್ಪಬೇಕಾಗಿಲ್ಲ. ಉತ್ಪತ್ತಿ ಕ್ರಮಕ್ಕೆ ಅನುಗುಣವಾಗಿ ಲಯವಾಗುತ್ತದೆ ಎಂಬುದಕ್ಕೆ 'ಮನಸಶ್ಚ ವಿಜ್ಞಾನಂ' ಎಂಬ ಶ್ರುತಿಯು ಜ್ಞಾಪಕವಾದ ಲಿಂಗವಾಗಿದೆ.

**तत्वप्रकाशिका – पूर्वपक्षस्य सूत्र एवोक्तत्वात् तत्पठित्वा पूर्वपक्षांशं तावद् व्याचष्टे – अन्तरेति ।। न सर्वेषां व्युत्क्रमेण लयः किं तु केषाञ्चिद् व्युत्क्रमात् ।**

ಪೂರ್ವಪಕ್ಷವನ್ನು ಸೂತ್ರದಲ್ಲಿಯೇ ಹೇಳಿರುವುದರಿಂದ ಪೂರ್ವಪಕ್ಷಭಾಗವನ್ನು ಪಠಿಸಿ ಅಂತರ ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಸಕಲಕ್ಕೂ ವ್ಯುತ್ಕ್ರಮದಿಂದ ಲಯವನ್ನು ಹೇಳಬಾರದು. ಕೆಲವಕ್ಕೆ ಮಾತ್ರ ವ್ಯುತ್ಕ್ರಮದಿಂದ ಲಯವನ್ನು ಹೇಳಬೇಕು.

**तत्वप्रकाशिका – तथा हि । विज्ञानतत्त्वं तावन्मनस्तत्त्वादुत्पन्नं श्रूयते 'मनसश्च विज्ञानम्' इति श्रुतौ तस्य च पश्चादुत्पन्नस्य विज्ञानतत्त्वस्य पश्चादेव लयः पूर्वावस्थितस्य मनस्तत्त्वस्य पूर्वमेव लयः श्रूयते 'यच्छेद्वाङ्मनसी प्राज्ञस्तद्यच्छेज्ज्ञान आत्मनि' इति श्रुतौ । अनेन च लिङ्गदर्शनेन विज्ञानमनसी विनाऽन्येषां व्युत्क्रमाल्लयस्य प्राप्तत्वादुक्तमेव युक्तम् ।**

ಪೂರ್ವಪಕ್ಷ ಹೀಗಿದೆ - ವಿಜ್ಞಾನತತ್ವವು ಮನಸ್ತತ್ವದಿಂದ ಹುಟ್ಟುತ್ತದೆಂಬುದು ಶ್ರುತಿಸಿದ್ಧವಾಗಿದೆ. 'ಮನಸಶ್ಚ ವಿಜ್ಞಾನಂ' ಎಂಬ ಶ್ರುತಿಯಲ್ಲಿ ವಿಜ್ಞಾನವು ಮನಸ್ಸಿನ ಅನಂತರ ಹುಟ್ಟಿದೆ, ಅನಂತರವೇ ಲಯವನ್ನು ಹೊಂದಿದೆ. ಮೊದಲಿರುವ ಮನಸ್ತತ್ವ ಮೊದಲೇಲಯವನ್ನು ಹೊಂದುವುದು 'ಯಚ್ಛೇದ್ವಾಙಮನಸೀ ಪ್ರಾಜ್ಞಸ್ತದ್ಯಚ್ಛೇಜ್ಞಾನೇ ಆತ್ಮನೀ' ಎಂಬ ಶ್ರುತಿಯಿಂದ ಸಿದ್ಧವಾಗಿದೆ. ಈ ಲಿಂಗ ದರ್ಶನದಿಂದ ವಿಜ್ಞಾನ ಮನಸ್ಸುಗಳನ್ನು ಬಿಟ್ಟು ಉಳಿದ ಕಡೆ ಮಾತ್ರ ವ್ಯುತ್ಕ್ರಮದಿಂದ ಲಯವನ್ನು ಹೇಳಬೇಕು. ಆದ್ದರಿಂದ ಹಿಂದೆ ಹೇಳಿದ್ದು ಯುಕ್ತವಾಗಿದೆ.

**तत्वप्रकाशिका – लोकानुकूलं चैतत् । लोकेऽपि केषाञ्चित् क्रमात् केषाञ्चिद् व्युत्क्रमाल्लयदर्शनात्ः । न च सामर्थ्यतारतम्यविरोधः । विज्ञानमनसोः समसामर्थ्यस्यापि सम्भवात् । न चेतरश्रुतिविरोधः । तस्या सयुक्तिकलिङ्गदर्शनविरुद्धाया अप्रामाण्योपपत्तेः । तथा च न श्रुतिसमन्वयो हरौ सिध्यतीति भावः । वाङ्मनसी यच्छेत् वाङ्मनसि लीयत इति स्मरेदित्यर्थः ।**

ಇದರಿಂದ ಲೋಕಾನುಕೂಲ್ಯವನ್ನು ಅನುಸರಿಸಿದಂತಾಗುತ್ತದೆ. ಲೋಕದಲ್ಲೂ ಕೂಡ ಕೆಲವೆಡೆ ಕ್ರಮದಿಂದ ಲಯವಾಗುತ್ತದೆ, ಕೆಲವು ಕಡೆ ವ್ಯುತ್ಕ್ರಮದಿಂದ ಲಯವಾಗುತ್ತದೆ.

ವಿಜ್ಞಾನತತ್ವ ಹಾಗೂ ಮನಸ್ತತ್ವಗಳ ಸಾಮರ್ಥ್ಯದಲ್ಲಿ ತಾರತಮ್ಯದ ವಿರೋಧ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ವಿಜ್ಞಾನತತ್ವ ಹಾಗೂ ಮನಸ್ತತ್ವಗಳೆರಡು ಸಮಾನವಾದ ಸಾಮರ್ಥ್ಯವುಳ್ಳವುಗಳಾಗಿವೆ.

ಬೇರೆ ಶ್ರುತಿಯ ವಿರೋಧಕ್ಕೂ ಅವಕಾಶವಿಲ್ಲ. ಏಕೆಂದರೆ ಆ ಶ್ರುತಿಯು ಸಯುಕ್ತಿಕವಾದ ಲಿಂಗದರ್ಶನಕ್ಕೆ ವಿರುದ್ಧವಾದ್ದರಿಂದ ಅಪ್ರಮಾಣವಾಗುತ್ತದೆ. ಆದ್ದರಿಂದ ಶ್ರುತಿಸಮನ್ವಯವು ಶ್ರೀಹರಿಯಲ್ಲಿ ಸಿದ್ಧವಾಗುವುದಿಲ್ಲ. ವಾಗಭಿಮಾನಿಯಾದ ಉಮೆಯು ಮನೋಭಿಮಾನಿಯಾದ ರುದ್ರನಲ್ಲಿ ಲಯವನ್ನು ಹೊಂದುತ್ತಾಳೆ ಎಂಬುದನ್ನು ಸ್ಮರಿಸಬೇಕು ಎಂದರ್ಥ.

ವಿವರಣೆ - ಲೋಕದಲ್ಲಿ ಕೆಲವು ಜನರು ಯಾವ ಕ್ರಮದಲ್ಲಿ ಹುಟ್ಟಿರುತ್ತಾರೋ ಅದೇ ಕ್ರಮದಲ್ಲಿ ನಾಶವಾಗುತ್ತಾರೆ. ಇನ್ನು ಕೆಲವು ಜನ ಯಾವ ಕ್ರಮದಲ್ಲಿ ಹುಟ್ಟಿರುತ್ತಾರೋ ಅದಕ್ಕೆ ವಿರುದ್ಧವಾಗಿ ನಾಶವನ್ನು ಹೊಂದುತ್ತಾರೆ. ಹೀಗೆ ಲೋಕದಲ್ಲಿ ಕಂಡಿರುವ ನಿಯಮವನ್ನು ಅನುಸರಿಸಿ ಸೃಷ್ಟಿಯ ಕ್ರಮದಲ್ಲೂ ಕೂಡ ಇದೇ ನಿಯಮವನ್ನು ಅನುಸರಿಸುವುದು ಸೂಕ್ತವಾಗಿದೆ.

ಮೊದಲು ಹುಟ್ಟಿರುವ ಮನಸ್ತತ್ವಕ್ಕೆ ಹೆಚ್ಚು ಸಾಮರ್ಥ್ಯವಿದೆ, ಅನಂತರ ಹುಟ್ಟಿದ ವಿಜ್ಞಾನತತ್ವಕ್ಕೆ ಸಾಮರ್ಥ್ಯವು ಅಲ್ಪವಾಗಿದೆ. ಆದ್ದರಿಂದ ಈ ಎರಡು ತತ್ವಗಳಿಗೆ ವ್ಯುತ್ಕ್ರಮವಾಗಿ ಲಯವನ್ನು ಹೇಳುವುದು ಯುಕ್ತವಾಗಿದೆ. ಅನುಕ್ರಮದಲ್ಲಿ ಲಯವನ್ನು ಹೇಳುವುದು ಯುಕ್ತವಲ್ಲ ಎಂದು ಪ್ರಶ್ನಿಸಬಾರದು. ಏಕೆಂದರೆ ಸೃಷ್ಟಿಕಾಲದಲ್ಲಿ ಮನಸ್ತತ್ವವಿದೆ. ಪ್ರಳಯಕಾಲದಲ್ಲಿ ವಿಜ್ಞಾನತತ್ವವಿದೆ. ಆದ್ದರಿಂದ ಎರಡು ತತ್ವಗಳಿಗೆ ಸಮಾನವಾದ ಬಲವಿದೆ ಎಂದೇ ಹೇಳಿದಂತಾಯಿತು. ಮತ್ತು ಸಾಮರ್ಥ್ಯಾಧಿಕ್ಯವನ್ನು ವಾಮನಪುರಾಣದಲ್ಲಿ ಹೇಳಿದ್ದು ವ್ಯುತ್ಕ್ರಮವಾಗಿ ಲಯವನ್ನು ಹೊಂದುವ ತತ್ವಗಳಿಗೆ ಮಾತ್ರ. ಪ್ರಕೃತವಿಷಯಕ್ಕೆ ಅಲ್ಲ ಎಂದು ತಿಳಿಯಬೇಕು.

ಉತ್ಪತ್ತಿ ಕ್ರಮದಲ್ಲಿಯೇ ವಿಜ್ಞಾನತತ್ವ, ಮನಸ್ತತ್ವಗಳಿಗೆ ಲಯವನ್ನು ಹೇಳಿದರೆ 'ಅಕ್ಷರಾತ್ತರಮಾದೇವ' ಎಂಬ ಮತ್ತೊಂದು ಶ್ರುತಿಯ ವಿರೋಧ ಬರುತ್ತದಲ್ಲವೇ? ಏಕೆಂದರೆ ಈ ಶ್ರುತಿಯು ವ್ಯುತ್ಕ್ರಮದಲ್ಲಿ ಲಯವನ್ನು ಹೇಳುತ್ತಿದೆ ಎಂದು ಪ್ರಶ್ನಿಸಬಾರದು. ಏಕೆಂದರೆ ಈ ಶ್ರುತಿಗೆ ಅಪ್ರಾಮಾಣ್ಯವನ್ನು ಹೇಳಬಹುದು. ಏಕೆಂದರೆ ಸಯುಕ್ತಿಕವಾದ ಲಿಂಗದರ್ಶನಕ್ಕೆ ಇದು ವಿರುದ್ಧವಾಗಿದೆ.

**ತत्वप्रकाशिका – सिद्धान्तांशं व्याचष्टे – नेति ।। न विज्ञानमनस्तत्वे विना विपरीतक्रमेणलयः किं तु सर्वेषामपि । विज्ञानमनस्तत्त्वयोर्यथोत्पत्तिलय इति विशेषप्रमाणाभावात् । सर्वेषामपि व्युत्क्रमाल्लयस्य श्रुतत्वाच्चेति भावः ।।**

ಸೂತ್ರದ ಸಿದ್ಧಾಂತಭಾಗವನ್ನು 'ನ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ವಿಜ್ಞಾನತತ್ವ ಹಾಗೂ ಮನಸ್ತತ್ವಗಳನ್ನು ಬಿಟ್ಟು ಉಳಿದ ಕಡೆ ಮಾತ್ರ ವಿಪರೀತ ಕ್ರಮದಲ್ಲಿ ಲಯವಾಗುತ್ತದೆ ಎಂದು ಹೇಳಬಾರದು. ಮತ್ತೇನೆಂದರೆ ಸಕಲ ಪದಾರ್ಥಗಳೂ ಕೂಡ ವಿಪರೀತ ಕ್ರಮದಲ್ಲೇ ಲಯವನ್ನು ಹೊಂದುತ್ತವೆಂದು ಹೇಳಬೇಕು. ಏಕೆಂದರೆ ವಿಜ್ಞಾನತತ್ವ, ಮನಸ್ತತ್ವಗಳು ಉತ್ಪತ್ತಿಗೆ ಅನುಸಾರಿಯಾಗಿ ಲಯವನ್ನು ಹೊಂದುತ್ತವೆ ಎಂಬ ವಿಷಯದಲ್ಲಿ ವಿಶೇಷಪ್ರಮಾಣ ಇರುವುದಿಲ್ಲ. ಮತ್ತು ಸಕಲವೂ ಕೂಡ ವ್ಯುತ್ಕ್ರಮದಲ್ಲಿಯೇ ಲಯವನ್ನು ಹೊಂದುತ್ತವೆನ್ನಲು ವಿಶೇಷವಾದ ಪ್ರಮಾಣವಿದೆ.

ವಿವರಣೆ - ವಿಜ್ಞಾನತತ್ವ, ಮನಸ್ತತ್ವಗಳು ಹೇಗೆ ಉತ್ಪತ್ತಿಯನ್ನು ಹೊಂದಿವೆಯೋ, ಅದೇ ಕ್ರಮದಲ್ಲಿ ಲಯವನ್ನು ಹೊಂದುತ್ತವೆನ್ನಲು ವಿಶೇಷ ಪ್ರಮಾಣವಿಲ್ಲ. ಆದ್ದರಿಂದ ಇಲ್ಲೂ ಕೂಡ ವಿಜ್ಞಾನತತ್ವದಿಂದ ಮನಸ್ತತ್ವ ಹುಟ್ಟಿದರೆ ಮೊದಲು ಮನಸ್ತತ್ವವೇ ಲಯವನ್ನು ಹೊಂದುತ್ತದೆಂದು ಹೇಳಬೇಕು.

## ಬ್ರಹ್ಮಸೂತ್ರ

**ब्रह्मसूत्रम् – चराचरव्यपाश्रयस्तु स्यात् तद्व्यपदेशो भाक्तस्तद्भावभावित्वात्।।**

'ಮನಸಶ್ಚ ವಿಜ್ಞಾನಮ್' ಎಂಬ ಶ್ರುತಿಯಲ್ಲಿ ಮನಸ್ಸು ಹಾಗೂ ವಿಜ್ಞಾನಗಳಿಗೆ ಕಾರ್ಯಕಾರಣಭಾವವನ್ನು ಹೇಳಿರುವುದು ಗೌಣವಾಗಿದೆ. ಏಕೆಂದರೆ ಮನಸ್ಸು ಮತ್ತು ವಿಜ್ಞಾನಶಬ್ದಗಳು ಅಂತಃಕರಣ ಹಾಗೂ ಮನಸ್ತತ್ವವನ್ನು ಅಥವಾ ವೃತ್ತಿಜ್ಞಾನ ಮತ್ತು ವಿಜ್ಞಾನತತ್ವ ಎಂಬರ್ಥವನ್ನು ಹೇಳುತ್ತದೆ. ಆದರೆ ಪ್ರಕೃತ ಮನಃಶಬ್ದಕ್ಕೆ ಮನಸ್ಸೆಂಬ ಇಂದ್ರಿಯವೆಂದು, ವಿಜ್ಞಾನ ಶಬ್ದಕ್ಕೆ ವೃತ್ತಿಜ್ಞಾನ ಎಂಬರ್ಥವನ್ನು ಸ್ವೀಕರಿಸಬೇಕು. ಹಾಗಾಗಿ 'ಮನಸಶ್ಚ ವಿಜ್ಞಾನಮ್' ಎಂಬ ಶ್ರುತಿಗೆ ಮನಸ್ಸಿನಿಂದ ಜ್ಞಾನವು ಹುಟ್ಟುತ್ತದೆಂದರ್ಥ. ಚೇತನಾಚೇತನವಿಷಯಕವಾದ ಪದಾರ್ಥಗಳಲ್ಲಿ ಮನಸ್ಸಿನ ಸಂಪರ್ಕವಾದಾಗ ಜ್ಞಾನವು ಹುಟ್ಟುತ್ತದೆ.

## ಸೂತ್ರದೀಪಿಕಾ

**सूत्रदीपिका – चराचरव्यपाश्रयः** चराचरशब्दितेन्द्रियतद्वृत्तिज्ञानविषय-साधारणः। **तद्व्यपदेशस्तु 'मनसश्च विज्ञानम्'** इति श्रौतव्यवहारस्तु। **भाक्तः** एकदेशः मनोविज्ञानशब्दार्थैकदेशभूतेन्द्रियवृत्तिज्ञानविषयक एव न तत्वविषयकः । कस्मान्निमित्तात् । **तद्भावभावित्वात्** । तस्यावृत्तिः तस्मिन् **चराचरशब्दित**-चेतनाचेतनविषये तद्भावेन मनोभावेन आलोचनेन **भावित्वात्** उत्पद्यमानत्वात्। अतो नोक्तलिङ्गदर्शनं बाधकमित्यर्थः ।।२।।

ಚರಾಚರವ್ಯಪಾಶ್ರಯಃ = ಅಂತಃಕರಣ ಮತ್ತು ಮನಸ್ತತ್ವ ಅಥವಾ ವೃತ್ತಿಜ್ಞಾನ ಮತ್ತು ವಿಜ್ಞಾನತತ್ವ ಇವೆಲ್ಲದರಲ್ಲೂ ಸಾಧಾರಣವಾದ, ತದ್ವ್ಯಪದೇಶಃ = 'ಮನಸಶ್ಚ ವಿಜ್ಞಾನಮ್' ಎಂಬ ಶ್ರೌತವ್ಯವಹಾರವಾದರೂ, ಭಾಕ್ತಃ = ಏಕದೇಶವಾದ ಮನೋರೂಪವಾದ ಇಂದ್ರಿಯಕ್ಕೆ ಮತ್ತು ವಿಜ್ಞಾನಶಬ್ದದಿಂದ ಪ್ರತಿಪಾದ್ಯವಾದ ವೃತ್ತಿಜ್ಞಾನಕ್ಕೆ ಸಂಬಂಧಪಟ್ಟದೆ ಹೊರತು, ತತ್ವಗಳಿಗೆ ಸಂಬಂಧಪಟ್ಟಿಲ್ಲ. ಏಕೆಂದರೆ, ತದ್ಭಾವಭಾವಿತ್ವಾತ್ = ಚರಾಚರ ತತ್ವಗಳ ಕಡೆ ಮನಸ್ಸಿನ ಸಂಪರ್ಕವಾದಾಗ ಜ್ಞಾನವು ಹುಟ್ಟುತ್ತದೆ. ಆದ್ದರಿಂದ ಹಿಂದೆ ಹೇಳಿದ ಲಿಂಗವು ಬಾಧಕವಾಗುವುದಿಲ್ಲ.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ಅಂತರವಿಜ್ಞಾನಾಧಿಕರಣವು ಮುಗಿಯಿತು.

## ಬ್ರಹ್ಮಸೂತ್ರಭಾಷ್ಯ

**भाष्यम् – ।।चराचरव्यपाश्रयस्तु स्यात् तव्यपदेशो भाक्तस्तद्भावभावित्वात्।।२।।**

**'मनसश्च विज्ञानम्' इति व्यपदेशश्चराचरेष्वालोचनाद् विज्ञानं भवतीति भागापेक्षया स्यात्, न विज्ञानतत्त्वापेक्षया ।**

ಅನುವಾದ - ಈ ಪೂರ್ವಪಕ್ಷವು ತಪ್ಪು. ವಿಪರೀತಕ್ರಮದಲ್ಲಿ ಲಯವಿಲ್ಲ ಎಂದು ಹೇಳಲು ಯಾವುದೇ ವಿಶೇಷ ಪ್ರಮಾಣವಿರುವುದಿಲ್ಲ.

'ಮನಸಶ್ಚ ವಿಜ್ಞಾನಮ್' ಎಂಬುದಾಗಿ ಮನಸ್ಸು ಚರಾಚರಾತ್ಮಕವಾದ ಪ್ರಪಂಚವನ್ನು ತಿಳಿಯುತ್ತದೆ ಎಂದು ಹೇಳಿದ್ದರಿಂದ ಜ್ಞಾನವು ಹುಟ್ಟುತ್ತದೆಂದು ತಿಳಿಯುತ್ತಾರೆ ಮನಸ್ತತ್ವದಿಂದ ವಿಜ್ಞಾನತತ್ವವು ಹುಟ್ಟುತ್ತದೆ ಎಂದು ತಿಳಿಯುವುದಿಲ್ಲ. ಮತ್ತು ಪೂರ್ವಪಕ್ಷದಲ್ಲಿ ಉದಾಹರಿಸಿದ ಶ್ರುತಿಯಲ್ಲಿ ಮನಃಶಬ್ದ ಮತ್ತು ವಿಜ್ಞಾನ ಶಬ್ದಗಳು ತಮ್ಮ ಒಂದು ಭಾಗವನ್ನು ಹೇಳುತ್ತವೆ. ಮನಸ್ತತ್ವ ಮತ್ತು ವಿಜ್ಞಾನತತ್ವವನ್ನು ಸಂಪೂರ್ಣವಾಗಿ ಹೇಳುವುದಿಲ್ಲ.

ಪ್ರತಿಪದಾರ್ಥ -- ನ = ಪೂರ್ವಪಕ್ಷವು ತಪ್ಪು, ವಿಶೇಷಪ್ರಮಾಣಾಭಾವಾತ್ = ವಿಜ್ಞಾನತತ್ವ ಮತ್ತು ಮನಸ್ತತ್ವಗಳು ಕ್ರಮವಾಗಿಯೇ ಲಯ ಹೊಂದುತ್ತವೆ ಎನ್ನಲು ಯಾವುದೇ ವಿಶೇಷ ಪ್ರಮಾಣವು ಇರುವುದಿಲ್ಲ.

ಮನಸಶ್ಚ ವಿಜ್ಞಾನಮ್ = ಮನಸ್ಸು ಚರಾಚರಾತ್ಮಕವಾದ ಪ್ರಪಂಚವನ್ನು ತಿಳಿಯಿತು. ಇತಿ = ಹೀಗೆ, ವ್ಯಪದೇಶಃ = ಶ್ರುತಿಯು ಹೇಳುತ್ತಿರುವುದರಿಂದ, ಚರಾಚರೇಷು = ಚರಾಚರ ಪ್ರಪಂಚದ ಬಗ್ಗೆ, ಆಲೋಚನಾತ್ = ಮನಸ್ಸು ಆಲೋಚನೆ ಮಾಡುತ್ತಿರುವುದರಿಂದ, ವಿಜ್ಞಾನಮ್ ಭವತಿ = ವಿಜ್ಞಾನವು ಹುಟ್ಟುತ್ತದೆ. ಇತಿ = ಹೀಗೆ, ಭಾಗಾಪೇಕ್ಷಯಾ = ವಿಜ್ಞಾನ ಹಾಗು ಮನಸ್ತತ್ವಗಳ ಭಾಗದ ವಿವಕ್ಷೆಯಿಂದಷ್ಟೇ, ಸ್ಯಾತ್ = ಪೂರ್ವ ಪಕ್ಷದಲ್ಲಿ ಉದಾಹರಿಸಿದ ಶ್ರುತಿಗೆ ಅರ್ಥವನ್ನು ಹೇಳಬೇಕು. ನವಿಜ್ಞಾನತತ್ವಾಪೇಕ್ಷಯಾ = ವಿಜ್ಞಾನತತ್ವದ ಅಪೇಕ್ಷೆಯಿಂದ ಶ್ರುತಿಗೆ ಅರ್ಥವನ್ನು ಹೇಳಬಾರದು.

**भाष्यम् — स्कान्दे च —**

**'परादव्यक्तमुत्पन्नमव्यक्तात्तु महांस्तथा ।**
**विज्ञानतत्त्वं महतः समुत्पन्नं चतुर्मुखात् ॥**
**विज्ञानतत्त्वात्तु मनो मनस्तत्त्वाच्च खादिकम् ।**
**एवं बाह्या परा सृष्टिरन्तस्तव्द्यत्ययपेक्षया ॥**
**विपरीतक्रमो ज्ञेयो यस्मादन्ते हरेर्दृशिः ॥' इति ॥२॥**

**॥ इति श्रीमदानन्दतीर्थभगवत्पादाचार्यविरचिते**
**ब्रह्मसूत्रभाष्ये अन्तरविज्ञानाधिकरणम् ॥ ९ ॥**

ಅನುವಾದ - ಸ್ಕಾಂದ ಪುರಾಣವು ಹೀಗೆ ಹೇಳುತ್ತಿದೆ - ಪರಮಾತ್ಮನಿಂದ ಅವ್ಯಕ್ತತತ್ವವು ಹುಟ್ಟಿತು. ಅವ್ಯಕ್ತತತ್ವದಿಂದ ಮಹತ್ತತ್ವ, ಮಹತ್ತತ್ವದಿಂದ ವಿಜ್ಞಾನತತ್ವ, ವಿಜ್ಞಾನತತ್ವದಿಂದ ಮನಸ್ತತ್ವ, ಮನಸ್ತತ್ವದಿಂದ ಆಕಾಶಾದಿಗಳು ಹುಟ್ಟಿದವು ಎಂದು. ಇದೇ ರೀತಿಯಾಗಿ ತತ್ವಗಳ ಉತ್ಪತ್ತಿಯು ಬ್ರಹ್ಮಾಂಡದ ಹೊರಗೂ ನಡೆಯುತ್ತದೆ. ಈ ಸೃಷ್ಟಿಯು ತಾರತಮ್ಯಕ್ಕೆ ಜ್ಞಾಪಕವಾಗಿದೆ. ಆದ್ದರಿಂದ

ಇದು ಉತ್ತಮಸೃಷ್ಟಿ ಎಂದು ಕರೆಸಿಕೊಳ್ಳುತ್ತದೆ. ಪ್ರಾಣತತ್ತ್ವದಿಂದ ಮನಸ್ಸು ಮನಸ್ತತ್ತ್ವದಿಂದ ವಿಜ್ಞಾನ, ಈ ಕ್ರಮಸೃಷ್ಟಿಯು ಬ್ರಹ್ಮಾಂಡದ ಒಳಗಿನ ಅಥವಾ ದೇಹದ ಒಳಗಿನ ಸೃಷ್ಟಿಕ್ರಮವಾಗಿದೆ. ಏಕೆಂದರೆ ಕೆಳಗಿನ ದೇವತೆಗಳ ದರ್ಶನವಾದರೆ ಕೊನೆಯಲ್ಲಿ ಭಗವಂತನ ದರ್ಶನವಾಗುತ್ತದೆ.

ಪ್ರತಿಪದಾರ್ಥ -- ಸ್ಕಾಂದೇ ಚ = ಸ್ಕಾಂದಪುರಾಣದಲ್ಲಿ ಹೀಗೆ ಹೇಳಲಾಗಿದೆ -

ಪರಾತ್ = ಪರಮಾತ್ಮನ ದೆಸೆಯಿಂದ, ಅವ್ಯಕ್ತಮ್ = ಲಕ್ಷ್ಮೀದೇವಿಯಿಂದ ಅಭಿಮನ್ಯವಾದ ಅವ್ಯಕ್ತತತ್ತ್ವವು, ಉತ್ಪನ್ನಮ್ = ಹುಟ್ಟಿತು, ಅವ್ಯಕ್ತಾತ್ = ಅವ್ಯಕ್ತದಿಂದ, ಮಹಾನ್ = ಚತುರ್ಮುಖನಿಂದ ಅಭಿಮನ್ಯವಾದ ಮಹತ್ತತ್ತ್ವವು, ತಥಾ = ಹಾಗೆಯೇ, ಮಹತಃ ಚತುರ್ಮುಖಾತ್ = ಮಹತ್ತತ್ತ್ವಕ್ಕೆ ಅಭಿಮಾನಿಯಾದ ಚತುರ್ಮುಖನಿಂದ, ಮಹತತ್ತ್ವಕ್ಕೆ ವಿಜ್ಞಾನತತ್ತ್ವಮ್ = ವಾಣಿಯಿಂದ ಅಭಿಮನ್ಯಮಾನವಾದ ವಿಜ್ಞಾನತತ್ತ್ವವು, ಸಮುತ್ಪನ್ನಮ್ = ಹುಟ್ಟಿತು. ವಿಜ್ಞಾನತತ್ತ್ವಾತ್ = ಆ ವಿಜ್ಞಾನತತ್ತ್ವದಿಂದ, ಮನಃ = ರುದ್ರನಿಂದ ಅಭಿಮನ್ಯಮಾನವಾದ ಮನಸ್ತತ್ತ್ವವು, ಮನಸ್ತತ್ತ್ವಾಚ್ಚ = ಆ ಮನಸ್ತತ್ತ್ವದಿಂದ, ಖಾದಿಕಮ್ = ಇಂದ್ರಿಯ ಆಕಾಶ ಮೊದಲಾದವು ಹುಟ್ಟಿದವು. ಏವಂ = ಹೀಗೆ, ಬಾಹ್ಯಾಃ = ಬ್ರಹ್ಮಾಂಡದಿಂದ ಹೊರಗಿನ, ಸೃಷ್ಟಿಃ = ಸೃಷ್ಟಿಯು, ಪರಾ = ಮುಖ್ಯವಾಗಿದೆ. ಅಂತಃ = ಒಳಗಿನ ಸೃಷ್ಟಿಯು, ತದ್‌ವ್ಯಕ್ತ್ಯಪೇಕ್ಷಯಾ = ತತ್ತ್ವವು ಅಭಿವ್ಯಕ್ತವಾಗುವ ಕ್ರಮದಿಂದ, ವಿಪರೀತಕ್ರಮಃ = ವಿಪರೀತವಾದ ಕ್ರಮವು, ಜ್ಞೇಯಃ = ತಿಳಿಯಬೇಕು. ಯಸ್ಮಾತ್ = ಯಾವ ಕಾರಣದಿಂದ, ಹರೇಃ = ಭಗವಂತನ, ದೃಶಿಃ = ಅಪರೋಕ್ಷಜ್ಞಾನವು, ಅಂತೇ = ಕೊನೆಯಲ್ಲಾಗುತ್ತದೆ.

ಇಲ್ಲಿಗೆ ಅಂತರವಿಜ್ಞಾನಾಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದವು ಮುಗಿಯಿತು.

## ತತ್ತ್ವಪ್ರಕಾಶಿಕಾ

**तत्वप्रकाशिका – अस्त्वेवोक्तं लिङ्गदर्शनं केषाञ्चित्क्रमाल्लयः केषाञ्चिद् व्युत्क्रमाल्लय इत्यत्र । अतः कथं विशेषप्रमाणाभाव इत्याशङ्कां परिहरत्सूत्रमुपन्यस्य व्याचष्टे – चराचरेति ।।**

ಕೆಲವರಿಗೆ ಉತ್ಪತ್ತಿ ಕ್ರಮದಿಂದ ಲಯ, ಕೆಲವರಿಗೆ ಉತ್ಪತ್ತಿ ಕ್ರಮದ ವಿರುದ್ಧವಾಗಿ ಲಯ. ಈ ವಿಷಯದಲ್ಲಿ ವಿಶೇಷ ಪ್ರಮಾಣವು ಇದ್ದೇ ಇರುತ್ತದೆ. ವಿಶೇಷ ಪ್ರಮಾಣ ಇಲ್ಲವೆಂದು ಹಿಂದಿನ ಸೂತ್ರದಲ್ಲಿ ಹೇಗೆ ಹೇಳಿದಿರಿ? ಈ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು 'ಚರಾಚರ' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ಕೊನೆಯಲ್ಲಿ ಹುಟ್ಟಿದ ವಿಜ್ಞಾನತತ್ತ್ವಕ್ಕೆ ಕೊನೆಯಲ್ಲೇ ಲಯವನ್ನು ಶ್ರುತಿಯು ಹೇಳುತ್ತಿದೆ. ಆದ್ದರಿಂದ ವಿಶೇಷ ಪ್ರಮಾಣವಿರುವಾಗ ವಿಶೇಷ ಪ್ರಮಾಣವಿಲ್ಲವೆಂದು ಹೇಳುವುದು ಹೇಗೆ ಸಾಧ್ಯ ? ಈ ಶ್ರುತಿ ಎಂಬ ಲಿಂಗದರ್ಶನವಿದೆ ಎಂಬುದು ಪೂರ್ವಪಕ್ಷಕಾರನ ಅಭಿಪ್ರಾಯ.

**तत्वप्रकाशिका – यद्यपि 'यच्छेद्वाङ्मनसी प्राज्ञः' इति तत्वानां लयक्रमो भवेत्तथापि न तेषां तथोत्पत्तिः । विज्ञानतत्वान्मनस्तत्वस्योत्पन्नत्वात् । न च 'मनसाश्च विज्ञानम्' इति श्रतिविरोधः । मनःशब्दो हि तत्वेऽन्तःकरणे च वर्तते तथा विज्ञानशब्दोऽपि तत्वेऽवबोधे च । अयं च व्यपदेशः साधारणमनोविज्ञानराश्य ोरिन्द्रियावबोधाख्यभागविषय एव न तु मनोविज्ञानतत्वविषयः ।**

ವಾಸ್ತವಿಕವಾಗಿ 'ಯಚ್ಛೇದ್ವಾಙ್ಮನಸೀ ಪ್ರಾಜ್ಞಃ' ಎಂಬ ಶ್ರುತಿಗೆ ಅನುಸಾರಿಯಾಗಿ ತತ್ವಗಳಿಗೆ ಲಯಕ್ರಮವನ್ನು ಹೇಳಲಾಗಿದೆ. ಆದರೂ ಕೂಡ ಅವುಗಳಿಗೆ ಹಾಗೆಯೇ ಉತ್ಪತ್ತಿಯನ್ನು ಹೇಳಲಾಗದು. ವಿಜ್ಞಾನತತ್ವದ ದೆಶೆಯಿಂದ ಮನಸ್ತತ್ವವು ಉತ್ಪನ್ನವಾಗಿದೆ. 'ಮನಸಾಶ್ಚ ವಿಜ್ಞಾನಂ' ಎಂಬ ಶ್ರುತಿಯ ವಿರೋಧಕ್ಕೂ ಅವಕಾಶವಿಲ್ಲ. ಏಕೆಂದರೆ ಮನಸ್‌ಶಬ್ದವು ಮನಸ್ತತ್ವ ಹಾಗೂ ಅಂತಃಕರಣ ಎಂಬೆರಡು ಅರ್ಥದಲ್ಲಿ ಪ್ರಸಿದ್ಧವಾಗಿದೆ. ಅದರಂತೆ ವಿಜ್ಞಾನ ಶಬ್ದವೂ ಕೂಡ ವಿಜ್ಞಾನತತ್ವ ಹಾಗೂ ಅವಬೋಧ ಎಂಬೆರಡು ಅರ್ಥದಲ್ಲಿ ಪ್ರಸಿದ್ಧವಾಗಿದೆ. ಪ್ರಕೃತದಲ್ಲಿ ವ್ಯಪದೇಶವಾದರೂ ಸಾಧಾರಣವಾದ ಇಂದ್ರಿಯ ಹಾಗೂ ಅವಬೋಧ ಎಂಬ ಅಂಶವನ್ನು ವಿವಕ್ಷಿಸಿಯೇ ಹೊರತು ಮನಸ್ತತ್ವ, ವಿಜ್ಞಾನತತ್ವವನ್ನು ವಿಷಯೀಕರಿಸಿ ವ್ಯಪದೇಶ ಮಾಡಿರುವುದಲ್ಲ.

**ವಿವರಣೆ** - 'ಯಚ್ಛೇದ್ವಾಙ್ಮನಸೀ ಪ್ರಾಜ್ಞಃ' ಎಂಬ ಶ್ರುತಿಯಲ್ಲಿ ಮನಸ್ಸಿನಲ್ಲಿ ವಾಕ್‌ತತ್ವವು ಲಯವನ್ನು ಹೊಂದುತ್ತದೆಂದು ಚಿಂತಿಸಬೇಕು. ಹಾಗೂ ಮನಸ್ತತ್ವವು ವಿಜ್ಞಾನತತ್ವದಲ್ಲಿ ಲಯವಾಗುತ್ತದೆ ಎಂದು ಕಾಠಕಶ್ರುತಿ ಹೇಳುತ್ತಿದೆ. ಈ ಶ್ರುತಿಯು ಹೇಳಿದಂತೆ ಯಾವ ಕ್ರಮದಲ್ಲಿ ಲಯವಿದೆಯೋ ಅದೇ ಕ್ರಮದಲ್ಲಿ ಉತ್ಪತ್ತಿಯು ಇರುವುದಿಲ್ಲ. ಏಕೆಂದರೆ ವಿಜ್ಞಾನತತ್ವದಿಂದ ಮನಸ್ತತ್ವವು ಹುಟ್ಟಿದೆ ಎಂದು 'ವಿಜ್ಞಾನತತ್ವಾತ್ತು ಮನಃ' ಎಂಬ ಸ್ಮೃತಿವಾಕ್ಯವು ಹೇಳುತ್ತಿದೆ.

'ಮನಸಶ್ಚ ವಿಜ್ಞಾನಂ' ಎಂಬ ಶ್ರುತಿಯು ಮನಸ್ಸಿನಿಂದ ವಿಜ್ಞಾನತತ್ವವು ಹುಟ್ಟುತ್ತಿದೆ ಎಂದು ಹೇಳುತ್ತಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಇಲ್ಲಿರುವ ಮನಃ ಎಂಬ ಶಬ್ದಕ್ಕೆ ಮನೋರೂಪ ಇಂದ್ರಿಯ ಎಂದರ್ಥ. ಮನಃ ಎಂಬ ಶಬ್ದವು ಮನಸ್ತತ್ವವನ್ನೂ ಹೇಳುತ್ತದೆ, ಮನಸ್ಸೆಂಬ ಇಂದ್ರಿಯವನ್ನೂ ಕೂಡ ಹೇಳುತ್ತದೆ. ಇದರಂತೆ ವಿಜ್ಞಾನ ಶಬ್ದವೂ ಕೂಡ ವಿಜ್ಞಾನತತ್ವವನ್ನು ಹಾಗೂ ಮನೋವೃತ್ತಿರೂಪವಾದ ಜ್ಞಾನವನ್ನು ಹೇಳುತ್ತದೆ. 'ಮನಸಶ್ಚ ವಿಜ್ಞಾನಂ' ಎಂಬಲ್ಲಿರುವ ಮನಃ ಶಬ್ದವು ಹಾಗೂ ವಿಜ್ಞಾನ ಶಬ್ದವು ಮನಸ್ತತ್ವ ಹಾಗೂ ಅಂತಃಕರಣ ಎಂಬರ್ಥವನ್ನು ವಿಜ್ಞಾನ ಶಬ್ದವು ವಿಜ್ಞಾನತತ್ವ ಹಾಗೂ ಜ್ಞಾನ ಎಂಬ ಎರಡು ಅರ್ಥವನ್ನು ಹೇಳುತ್ತಿವೆ. ಇವುಗಳಲ್ಲಿ ಮನಃ ಎಂಬ ಪದದಿಂದ ಇಂದ್ರಿಯವನ್ನು, ವಿಜ್ಞಾನ ಪದದಿಂದ ವೃತ್ತಿರೂಪವಾದ ಜ್ಞಾನವನ್ನು ವಿವಕ್ಷಿಸಬೇಕು. ಆದ್ದರಿಂದ ಮನೋವೃತ್ತಿರೂಪವಾದ ಇಂದ್ರಿಯದಿಂದ ವೃತ್ತಿಜ್ಞಾನವು ಹುಟ್ಟುತ್ತದೆಂದು ಅರ್ಥವನ್ನು ಮಾಡಿದರೆ ಯಾವುದೇ ಅನುಪಪತ್ತಿಗೆ ಅವಕಾಶವಿಲ್ಲ. ಮನಸ್ಸಿನಿಂದ ಆಲೋಚನೆ ಮಾಡಿದಾಗ ವಿಜ್ಞಾನವು ಹುಟ್ಟುತ್ತದೆಂಬುದು ಇದರ ಅಭಿಪ್ರಾಯ. ಈ ಅರ್ಥದಲ್ಲೇ 'ಮನಸಶ್ಚ ವಿಜ್ಞಾನಂ' ಎಂಬುದಾಗಿ ಶ್ರುತಿಯು ಪ್ರಯೋಗಿಸಿದೆ. ಆದ್ದರಿಂದ ಉತ್ಪತ್ತಿ ಕ್ರಮದಲ್ಲೇ ವಿಜ್ಞಾನ ಹಾಗು ಮನಸ್ತತ್ವಗಳು ಲಯವನ್ನು ಹೊಂದುತ್ತದೆಂದು ಅರ್ಥದಲ್ಲಿ ಈ ವಾಕ್ಯವು ವಿಶೇಷ ಪ್ರಮಾಣವಾಗಲು ಸಾಧ್ಯವಿಲ್ಲ.

**ಪರಿಪೂರ್ಣಚಂದ್ರಿಕಾ**

**तत्वप्रकाशिका – न चेन्द्रियादिविषयत्वे काचनापुपपत्तिः । चराचरविषये मनोभावेनालोचने नावबोधस्योत्पद्यमानत्वात् । अतो नेदं लिङ्गदर्शनं विज्ञानमनस्तत्त्वयोः क्रमेण लये विशेषप्रमाणमिति भावः । तत्वविषयमेवेदं वाक्यं किंन स्यादित्यत आह – स्कन्दे चेति ।।**

ಮನಃ ಎಂಬ ಪದವು ಇಂದ್ರಿಯವಿಷಯಕವಾಗಿದೆ. ವಿಜ್ಞಾನ ಎಂಬ ಪದವು ವೃತ್ತಿರೂಪಜ್ಞಾನ ವಿಷಯಕವಾಗಿದೆ ಎಂದು ಹೇಳಿದರೆ ಯಾವುದೇ ಅನುಪಪತ್ತಿಗೆ ಅವಕಾಶವಿಲ್ಲ. ಚರಾಚರವಿಷಯಕವಾದ ಪ್ರಪಂಚದಲ್ಲಿ ಮನೋಭಾವದಿಂದ ಆಲೋಚನೆ ಮಾಡಿದರೆ ವಿಜ್ಞಾನವು ಹುಟ್ಟುತ್ತದೆಂಬುದು ಅನುಭವ ಸಿದ್ಧವಾಗಿದೆ. ಆದ್ದರಿಂದ ಈ ಲಿಂಗದರ್ಶನವು ವಿಜ್ಞಾನತತ್ವ ಹಾಗೂ ಮನಸ್ತತ್ವಗಳು ಕ್ರಮವಾಗಿ ಲಯ ಹೊಂದುತ್ತವೆನ್ನಲು ವಿಶೇಷಪ್ರಮಾಣವಾಗುವುದಿಲ್ಲ.

ಈ ವಾಕ್ಯವು ತತ್ವವಿಷಯಕವೇ ಏಕಾಗಬಾರದು? ಎಂಬ ಪ್ರಶ್ನೆಗೆ 'ಸ್ಕಾಂದೇ ಚ' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

**तत्वप्रकाशिका – बाह्या ब्रह्माण्डात् । अथ कचित्तत्वानामेवायं क्रमः श्रूयते चेत्तत्रापि ब्रह्माण्डन्तराभिव्यक्तौ ज्ञानिनां तत्वापरोक्षे च क्रमोऽसौ ज्ञातव्यः । अधमानां तत्वानां प्रथममभिव्यक्तेरिति भावेन वाक्यशेषमुदाहरति – अन्तरिति।।**

'ಬಾಹ್ಯಃ' ಎಂಬ ಪದಕ್ಕೆ ಬ್ರಹ್ಮಾಂಡದಿಂದ ಹೊರಗೆ ಎಂದರ್ಥ.

ಕೆಲವೆಡೆ ತತ್ವಗಳ ಮಧ್ಯದಲ್ಲಿಯೂ ಕೂಡ ಅನುಕ್ರಮದಲ್ಲಿಯೇ ಲಯವಾಗುತ್ತದೆಂದು ಕೇಳಿಸುತ್ತಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಅಲ್ಲೂ ಕೂಡ ಬ್ರಹ್ಮಾಂಡದ ಒಳಗಿನ ಸೃಷ್ಟಿಯ ಬಗೆಯೇ ಅಭಿಪ್ರಾಯವನ್ನು ಹೊಂದಿರುತ್ತದೆ ಎಂದು ತಿಳಿಯಬೇಕು. ಅಥವಾ ಜ್ಞಾನಿಗಳು ತತ್ವವನ್ನು ಅಪರೋಕ್ಷ ಮಾಡಿಕೊಳ್ಳುವ ಕ್ರಮವನ್ನೂ ಕೂಡ ಹಾಗೆ ಹೇಳಲಾಗಿದೆ ಎಂದು ತಿಳಿಯಬೇಕು.

ಕೆಳಗಿನ ತತ್ವಗಳ ಸಾಕ್ಷಾತ್ಕಾರವನ್ನು ಪಡೆದು ಅನಂತರ ಮೇಲಿನವರ ಸಾಕ್ಷಾತ್ಕಾರವನ್ನು ಜ್ಞಾನಿಗಳು ಹೊಂದುತ್ತಾರೆ. ಈ ಅಭಿಪ್ರಾಯದಿಂದ ಪ್ರಮಾಣವಾಕ್ಯದ ಶೇಷಭಾಗವನ್ನು 'ಅಂತಃ' ಇತ್ಯಾದಿಯಾಗಿ ಉದಾಹರಿಸುತ್ತಿದ್ದಾರೆ.

ವಿವರಣೆ - 'ಮನಸಶ್ಚ ವಿಜ್ಞಾನಂ' ಎಂಬ ವಾಕ್ಯವು ಏಕೆ ತತ್ವಗಳ ಬಗ್ಗೆ ಹೊರಟಿರಬಾರದು? ಎಂದು ಪ್ರಶ್ನಿಸುವಂತಿಲ್ಲ. ಸ್ಕಾಂದಪುರಾಣದಲ್ಲಿ ಸ್ಪಷ್ಟವಾಗಿ ಇದು ಬ್ರಹ್ಮಾಂಡದ ಹೊರಗಿನ ಸೃಷ್ಟಿ ಎಂದು ಹೇಳಲಾಗಿದೆ. ಬ್ರಹ್ಮಾಂಡದ ಒಳಗಿನ ಸೃಷ್ಟಿಯ ಬಗ್ಗೆ ಮಾತ್ರ ವ್ಯುತ್ಕ್ರಮದಲ್ಲಿ ಲಯವೆಂದು ತಿಳಿಯಬೇಕು. ಕೆಲವು ಸ್ಥಳಗಳಲ್ಲಿ ಅನುಕ್ರಮದಲ್ಲಿಯೇ ಲಯವನ್ನು ಹೇಳುವಂತಹ ವಾಕ್ಯಗಳನ್ನು ಕಾಣಬಹುದು. ಆದರೆ ಅದೂ ಕೂಡ ಬ್ರಹ್ಮಾಂಡದ ಹೊರಗಿನ ಸೃಷ್ಟಿಯನ್ನೇ ಹೇಳುತ್ತದೆ ಹೊರತು ಬ್ರಹ್ಮಾಂಡದ ಒಳಗಿನ ಸೃಷ್ಟಿಯನ್ನು ಹೇಳುತ್ತಿಲ್ಲ. 'ಪರಾದವ್ಯಕ್ತಂ' ಎಂಬ ಸ್ಕಾಂದ ಶ್ರುತಿಯು ಅನೇಕ ಶ್ರುತಿಗಳಲ್ಲಿ ಹೇಳಿದಂತೆ ಬ್ರಹ್ಮಾಂಡದ ಹೊರಗೆ ನಡೆದ ಸೃಷ್ಟಿಯನ್ನು ಹೇಳುತ್ತಿದೆ. ಅಥವಾ ಜ್ಞಾನಿಜನರು ತಮ್ಮ

ದೇಹದಲ್ಲಿ ತತ್ವಭಿಮಾನಿದೇವತೆಗಳನ್ನು ಯಾವ ಕ್ರಮದಲ್ಲಿ ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾರೆಂಬುದನ್ನು ಸ್ಪಷ್ಟಪಡಿಸುತ್ತಿದೆ. ಜ್ಞಾನಿಯಾದವರು ಅಧಮ ದೇವತೆಗಳನ್ನು ಮೊದಲು ಸಾಕ್ಷಾತ್ಕಾರ ಮಾಡಿಕೊಂಡು, ಅನಂತರ ಉತ್ತಮ ದೇವತೆಗಳನ್ನು ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾರೆ. ಇದನ್ನು ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ ಎಂದು ತಿಳಿಯಬೇಕು.

**तत्वप्रकाशिका – अन्तर्ब्रह्माण्डस्य देहस्य वा व्यक्तौ विपरीतक्रम इत्यत्र लिङ्गं यस्मादिति । अतः श्रुत्यविरोधेन सर्वेषामपि व्युत्क्रमाल्लयसिद्धेर्युक्तो हरौ श्रुतिसमन्वय इति सिद्धम् ।। १६ ।।**

ಬ್ರಹ್ಮಾಂಡದ ಒಳಗಡೆ ತತ್ವಾಭಿಮಾನಿದೇವತೆಗಳ ದೇಹದ ಉತ್ಪತ್ತಿ ಅಥವಾ ಅಭಿವ್ಯಕ್ತಿಯಲ್ಲಿ ವಿಪರೀತ ಕ್ರಮವು ವಿವಕ್ಷಿತವಾಗಿದೆ ಎಂಬ ವಿಷಯದಲ್ಲಿ ಯಾವ ಲಿಂಗವಿದೆಯೋ ಅದರಿಂದ ಎಂದರ್ಥ.

ಹೀಗೆ ಶ್ರುತಿಗಳ ವಿರೋಧವಿಲ್ಲದ ಕಾರಣ ಎಲ್ಲರಿಗೂ ವ್ಯುತ್ಕ್ರಮದಲ್ಲಿಯೇ ಲಯವಾಗುತ್ತದೆಂಬ ಪ್ರಮೇಯವು ಸಿದ್ಧವಾಯಿತು. ಆದ್ದರಿಂದ ಶ್ರೀಹರಿಯಲ್ಲಿ ಶ್ರುತಿಸಮನ್ವಯವೂ ಕೂಡ ಸಿದ್ಧವಾಯಿತು.

ಭಾಷ್ಯದಲ್ಲಿರುವ 'ಅಂತಃ' ಎಂಬ ಪದಕ್ಕೆ ಬ್ರಹ್ಮಾಂಡದ ಒಳಗಿನ ತತ್ವಾಭಿಮಾನಿದೇವತೆಗಳ ದೇಹದ ಉತ್ಪತ್ತಿ ಎಂದರ್ಥ, ಅಥವಾ ದೇಹದ ಅಭಿವ್ಯಕ್ತಿ. ಇವುಗಳಲ್ಲಿ ವಿಪರೀತ ಕ್ರಮವನ್ನು ವಿವಕ್ಷಿಸಬೇಕು. ಅಥವಾ ಜ್ಞಾನಿಜನರ ಸಾಕ್ಷಾತ್ಕಾರದಲ್ಲಿ ಪೂರ್ವಪಕ್ಷದಲ್ಲಿ ಹೇಳಿದ ವಿಪರೀತ ಕ್ರಮವನ್ನು ಅನುಸರಿಸಬೇಕು. ಈ ವಿಷಯದಲ್ಲಿ 'ಮನಸಶ್ಚ ವಿಜ್ಞಾನಂ' ಎಂಬ ಶ್ರುತಿಯು ಜ್ಞಾಪಕವಾಗುತ್ತದೆ.

ಲಕ್ಷ್ಮೀ, ಚತುರ್ಮುಖ, ಸರಸ್ವತಿ, ರುದ್ರ ಈ ಕ್ರಮದಲ್ಲಿ ಬ್ರಹ್ಮಾಂಡದ ಹೊರಗಿನ ಸೃಷ್ಟಿಯಾಗುತ್ತದೆ. ಇದಕ್ಕೆ ವಿರುದ್ಧವಾಗಿ ಮುಖ್ಯಪ್ರಾಣ, ರುದ್ರ ಇವರ ಸೃಷ್ಟಿಯು ಬ್ರಹ್ಮಾಂಡದ ಒಳಗಡೆ ಆಗುತ್ತದೆ. ಅಥವಾ ಜ್ಞಾನಿಗಳು ತತ್ವಸಾಕ್ಷಾತ್ಕಾರವನ್ನು ಮಾಡಿಕೊಳ್ಳುವಾಗ ಕೆಳಗಿನ ದೇವತೆಯನ್ನು ಸಾಕ್ಷಾತ್ಕಾರ ಮಾಡಿಕೊಂಡು ಅನಂತರ ಉತ್ತಮ ದೇವತೆಗಳನ್ನು ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾರೆ. ಆದ್ದರಿಂದ ತತ್ವಾಭಿಮಾನಿಗಳ ದೇಹೋತ್ಪತ್ತಿಯ ವಿಷಯದಲ್ಲಿ ಅಥವಾ ಸಾಕ್ಷಾತ್ಕಾರದ ವಿಷಯದಲ್ಲಿ 'ಮನಸಶ್ಚ' ಇತ್ಯಾದಿ ಶ್ರುತಿಯು ಹೊರಟಿದೆ ಎಂದು ತಿಳಿಯಬೇಕು.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಅಂತವಿಜ್ಞಾನಾಧಿಕರಣ ಮುಗಿಯಿತು.

ಅಂತರಾವಿಜ್ಞಾನಾಧಿಕರಣ

(೨-೩-೯)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अन्तराविज्ञानाधिकरणम्

### ಮನಸ್ತತ್ವ ವಿಜ್ಞಾನತತ್ವಗಳಿಗೂ ಕೂಡ ಉಳಿದ ವಸ್ತುಗಳಂತೆಯೇ ಲಯಕ್ರಮ

**अन्तरा विज्ञानमनसी क्रमेण तल्लिङ्गादिति चेन्नाविशेषात् ।। पूर्वोक्तस्य व्युत्क्रमेण लय इत्यस्य क्वचिदपवादशङ्कानिरासात्सङ्गतिः ।**

ಹಿಂದಿನ ಅಧಿಕರಣದಲ್ಲಿ ಪರಮಾತ್ಮನಿಂದ ಜಗತ್ತು ಯಾವ ಕ್ರಮದಲ್ಲಿ ಹುಟ್ಟಿತ್ತೋ ಅದಕ್ಕೆ ವಿಪರೀತ ಕ್ರಮದಲ್ಲಿ ಲಯ ಹೊಂದುತ್ತದೆ ಎಂದು ಸಿದ್ಧಾಂತಸ್ಥಾಪನೆ ಮಾಡಲಾಯಿತು. ಈ ಪ್ರಮೇಯಕ್ಕೆ ಕೆಲವು ಅಪವಾದವಿದೆ ಎಂಬ ಆಶಂಕೆಯನ್ನು ನಿರಾಕರಣೆ ಮಾಡುವುದಕ್ಕಾಗಿ 'ಅಂತರಾ ವಿಜ್ಞಾನಮನಸೀ ಕ್ರಮೇಣ ತಲ್ಲಿಂಗಾದಿತಿ ಚೇನ್ನಾವಿಶೇಷಾತ್' ಎಂಬ ಅಂತರಾ ವಿಜ್ಞಾನಾಧಿಕರಣ ಸೂತ್ರವು ಹೊರಟಿದೆ. ಆದ್ದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಸಂಗತಿ ಇರುತ್ತದೆ.

**अत्र किं भाष्योदाहृता सर्वत्रापि व्युत्क्रमेण लयश्रुतिः ''यच्छेद्वाङ्मनसी प्राज्ञस्तद्यच्छेज्ज्ञान आत्मनि'' इति मनोविज्ञानयोः सृष्टिक्रमेण लयप्रतिपादकश्रुत्या विरुद्धा न वेति चिन्ता ।**

ಹಿಂದಿನ ಅಧಿಕರಣದಲ್ಲಿ ಉಲ್ಲೇಖಿಸಲ್ಪಟ್ಟ ವ್ಯುತ್ಕ್ರಮಾದ್ವಿಲಯಶ್ಚ ಎಂಬ ಲಯಶ್ರುತಿಗೆ ಅನುಗುಣವಾಗಿ ಎಲ್ಲಾ ಪದಾರ್ಥಗಳೂ ಕೂಡ ವಿಪರೀತ ಕ್ರಮದಲ್ಲಿಯೇ ಲಯವನ್ನು ಹೊಂದುತ್ತವೆ ಎಂದು ತಿಳಿಯುತ್ತದೆ. ಈ ಲಯಶ್ರುತಿಯು 'ಯಚ್ಛೇದ್ವಾಙ್ಮನಸೀ ಪ್ರಾಜ್ಞಃ ತಚ್ಛೇತ್ ಜ್ಞಾನ ಆತ್ಮನಿ' ಎಂಬುದಾಗಿ ಮನಸ್ಸಿನಿಂದ ವಿಜ್ಞಾನತತ್ವವು ಹುಟ್ಟಿದೆ ಮತ್ತು ಮನೋತತ್ವವೇ ಮೊದಲು ಲಯವನ್ನು ಹೊಂದುತ್ತದೆ ಎಂಬುದಾಗಿ ಸೃಷ್ಟಿಕ್ರಮದಲ್ಲಿಯೇ ಲಯಕ್ರಮವನ್ನು ಪ್ರತಿಪಾದನೆ ಮಾಡುತ್ತಿದೆ. ಈ

ಶ್ರುತಿಯಿಂದ 'ವ್ಯುತ್ಕ್ರಮಾದ್ವಿಲಯಶ್ಚ' ಎಂಬ ಶ್ರುತಿಯು ವಿರುದ್ಧವಾಗುತ್ತದೋ ಇಲ್ಲವೋ? ಎಂಬುದು ಈ ಅಧಿಕರಣದ ಪ್ರಧಾನ ಸಂಶಯ.

**तदर्थं विज्ञानतत्वे लीयमानं मनस्तत्वं किं विज्ञानतत्वस्य कारणमुत नेति । तदर्थं ''मनसश्च विज्ञानम्'' इति सृष्टिश्रुतौ मनोविज्ञानशब्दौ किं मनस्तत्व-विज्ञानतत्त्वपरौ किं वाऽन्तःकरणावबोधपराविति ।**

ಈ ಪ್ರಧಾನ ಸಂಶಯವು ಪರಿಹಾರವಾಗಬೇಕೆಂದರೆ 'ಮನಸಶ್ಚ ವಿಜ್ಞಾನಂ' ಎಂಬ ಸೃಷ್ಟಿ ಶ್ರುತಿಯಲ್ಲಿರುವ ಮನೋವಿಜ್ಞಾನ ಶಬ್ದಗಳು ಮನಸ್ತತ್ತ್ವ ಹಾಗೂ ವಿಜ್ಞಾನತತ್ವವನ್ನು ಪ್ರತಿಪಾದನೆ ಮಾಡುತ್ತವೋ ಅಥವಾ ಮನಸ್ಸು ಎಂಬ ಅಂತಃಕರಣವನ್ನು, ವಿಜ್ಞಾನಶಬ್ದವು ಅವಬೋಧವನ್ನು ಹೇಳುತ್ತದೆಂದು ಒಪ್ಪಬೇಕೋ? ಎಂಬ ಎರಡನೆಯ ಸಂಶಯವು ಪರಿಹಾರವಾಗಬೇಕು.

**तदर्थं तौ शब्दौ किं तत्वयोरेव मुख्यौ किं वान्तःकरणावबोधयोरपीति ।**

ಹಿಂದಿನ ಸಂಶಯದ ಪರಿಹಾರಕ್ಕಾಗಿ ಮನೋಶಬ್ದ ಹಾಗೂ ವಿಜ್ಞಾನಶಬ್ದಗಳು ಮನಸ್ತತ್ವ ಹಾಗೂ ವಿಜ್ಞಾನತತ್ವಗಳಲ್ಲೇ ಮುಖ್ಯಾರ್ಥವನ್ನು ಹೊಂದಿವೆಯೋ ಅಥವಾ ಅಂತಃಕರಣ ಹಾಗೂ ಅವಬೋಧ ಎಂಬರ್ಥದಲ್ಲಿಯೂ ಮುಖ್ಯಾರ್ಥವನ್ನು ಹೊಂದಿವೆಯೋ ಎಂಬುದು ನಿರ್ಣಯವಾಗಬೇಕು.

**''लोकदृष्ट्यनुसारात्'' इतिन्यायविवरणोक्तां पूर्वपक्षयुक्तिं विवृणोति ।। लोकानुकूलं चैतदित्यादिना ।। समसामर्थ्यस्यापि सम्भवादिति ।।**

ಲೋಕದೃಷ್ಟ್ಯನುಸಾರಾತ್' ಲೋಕದೃಷ್ಟಿಗೆ ಅನುಸಾರವಾಗಿ ಇರುವುದರಿಂದ ಎಂಬ ನ್ಯಾಯವಿವರಣದಲ್ಲಿ ಹೇಳಿದ ಪೂರ್ವಪಕ್ಷ ಯುಕ್ತಿಯನ್ನು 'ಲೋಕಾನುಕೂಲಂ ಚೇತ್ತತ್' ಎಂಬುದರಿಂದ ವಿವರಣೆ ಮಾಡುತ್ತಿದ್ದಾರೆ. ಸಮಾನವಾದ ಸಾಮರ್ಥ್ಯವು ಇರುವುದರಿಂದ ಎಂಬುದು ಇದರ ಅಭಿಪ್ರಾಯ. ಸೃಷ್ಟಿಯಲ್ಲಿ ಮನೋತತ್ವವು ಮೊದಲು ಅಸ್ತಿತ್ವವನ್ನು ಹೊಂದಿರುತ್ತದೆ. ಪ್ರಳಯದಲ್ಲಿ ವಿಜ್ಞಾನತತ್ವವು ಇರುವಿಕೆಯನ್ನು ಹೊಂದಿರುತ್ತದೆ. ಆದ್ದರಿಂದ ಎರಡೂ ಕೂಡ ಸಮಾನವಾದ ಸಾಮರ್ಥ್ಯವನ್ನು ಹೊಂದಿದೆ. ಹಾಗಾಗಿ ಲೋಕದಲ್ಲಿ ಹೇಗೆ ಸಮಾನವಾದ ಸಾಮರ್ಥ್ಯವಿರುವವರು ಮೊದಲು ಅಥವಾ ಅನಂತರ ನಾಶವಾಗುವರೋ ವಿಜ್ಞಾನತತ್ವ, ಮನೋತತ್ವಕ್ಕಿಂತ ಅನಂತರ ಹುಟ್ಟಿದರೂ ಕೂಡ ಮನೋತತ್ವಕ್ಕೆ ಸಮಾನವಾದ ಸಾಮರ್ಥ್ಯವನ್ನು ಹೊಂದಿರುವುದರಿಂದ ಅನಂತರವೇ ನಾಶವನ್ನು ಹೊಂದುತ್ತದೆಂದು ಹೇಳಬೇಕು.

**सृष्टौ मनसः पूर्वमवस्थानात्प्रलये विज्ञानस्य पश्चादवस्थानात्समसामर्थ्यं सम्भाव्यत इत्यर्थः ।**

**''भजत्रौ भागसेवयोः'' इति वचनाद्भागार्थस्य भजतेर्भावेक्तप्रत्ययान्ताद्भक्त-शब्दाद्वा क्तिन्प्रत्ययान्ताद्भक्तिशब्दाद्वा ''तस्येदम्'' इति सम्बन्धसामान्ये**

**विहिताण्प्रत्ययान्तस्य भाक्तशब्दस्य भागविषयावाचकत्वं युक्तमित्यभिप्रेत्याह – अयञ्च व्यपदेश इन्द्रियावबोधाख्यभागविषय इति ।।**

ಸೂತ್ರದಲ್ಲಿ ಭಾಕ್ತಃ ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಇದಕ್ಕೆ ಭಾಗವಿಷಯ ಎಂಬರ್ಥವನ್ನು ಟೀಕೆಯಲ್ಲಿ ಹೇಳಿದ್ದಾರೆ. ಭಾಕ್ತ ಎಂಬ ಶಬ್ದದಿಂದ ಈ ಅರ್ಥವು ಹೇಗೆ ದೊರೆಯುತ್ತದೆ? ಎಂದರೆ ಇಲ್ಲಿ ಉತ್ತರಿಸಲಾಗಿದೆ. ಭಜಜೌ ಭಾಗಸೇವಯೋಃ ಎಂಬ ಕವಿಕಲ್ಪದ್ರುಮದಲ್ಲಿ ಹೇಳಿದ ವಚನದಂತೆ ಭಜಧಾತುವು ಭಾಗ ಹಾಗೂ ಸೇವ ಎಂಬೆರಡು ಅರ್ಥಗಳಲ್ಲಿ ಪ್ರಾಪ್ತವಾಗುತ್ತದೆ. ಪ್ರಕೃತ ಭಾಗ ಎಂಬರ್ಥವನ್ನು ವಿವಕ್ಷಿಸಿ ಭಜಧಾತುವಿಗೆ ಭಾವಾರ್ಥದಲ್ಲಿ ಕ್ತಪ್ರತ್ಯಯವನ್ನು ಮಾಡಿದಾಗ ಭಕ್ತ ಎಂಬ ಶಬ್ದವು ನಿಷ್ಪನ್ನವಾಗುತ್ತದೆ. ಅಥವಾ ಭಕ್ತ ಶಬ್ದಕ್ಕೆ ಭಾವಾರ್ಥದಲ್ಲಿ ಕ್ತಿನ್‌ಪ್ರತ್ಯಯವನ್ನು ಮಾಡಿದಾಗ ಭಕ್ತಿ ಎಂಬ ಶಬ್ದವು ನಿಷ್ಪನ್ನವಾಗುತ್ತದೆ. ಭಕ್ತಸ್ಯ ಇದಂ ಎಂಬುದಾಗಿ ಅಥವಾ ಭಕ್ತೇರಿದಂ ಎಂಬುದಾಗಿ ಸಂಬಂಧಸಾಮಾನ್ಯದಲ್ಲಿ ಅಣ್ ಪ್ರತ್ಯಯವನ್ನು ವಿಧಾಯ ಮಾಡಿದಾಗ ಭಾಕ್ತ ಎಂಬ ರೂಪವು ನಿಷ್ಪನ್ನವಾಯಿತು. ಇದಕ್ಕೆ ಭಾಗವಿಷಯ ಎಂಬರ್ಥವನ್ನು ಟೀಕೆಯಲ್ಲಿ ಹೇಳಿದ್ದು ಯುಕ್ತವಾಯಿತು. ಈ ಅಭಿಪ್ರಾಯದಿಂದ 'ಅಯಂ ಚ ವ್ಯಪದೇಶಃ' ಇಂದ್ರಿಯಾವಬೋಧಾಖ್ಯಭಾಗವಿಷಯಃ ಎಂಬ ಟೀಕಾಪಂಕ್ತಿಯು ಹೊರಟಿದೆ.

**ವಿವರಣೆ –** ಸೂತ್ರದಲ್ಲಿರುವ ಭಾಕ್ತ ಎಂಬ ಪದಕ್ಕೆ ಟೀಕೆಯಲ್ಲಿ ಭಾಗವಿಷಯಕ ಎಂದರ್ಥವನ್ನು ಹೇಳಿದ್ದಾರೆ. ಈ ಅರ್ಥವು ಹೇಗೆ ತಿಳಿಯುತ್ತದೆ? ಎಂಬ ಪ್ರಶ್ನೆಗೆ ಇಲ್ಲಿ ಗ್ರಂಥಕಾರರು ಉತ್ತರಿಸುತ್ತಿದ್ದಾರೆ. ಭಜ ಧಾತುವಿಗೆ ಭಾಗ ಹಾಗೂ ಸೇವೆ ಎಂದು ಎರಡು ಅರ್ಥಗಳಿವೆ.

'ಭಜಞೌ ಭಾಗಸೇವಯೋಃ' ಎಂದು ಉದ್ದೇಶಿಸಲು ಕಾರಣವಿದೆ. ಭಜ ಧಾತುವು ಆತ್ಮನೇ ಪದದಲ್ಲೂ ಪ್ರಯೋಗಿಸಲ್ಪಡುತ್ತದೆಂದು ತಿಳಿಸಬೇಕಾಗಿದೆ. ಅದಕ್ಕಾಗಿ ಞಿತ್ ಗ್ರಹಣವನ್ನು ಮಾಡಿದ್ದಾರೆ. ಅಞಿತ್ ಆಗಿದೆ ಎಂಬುದನ್ನು ತಿಳಿಸುವುದಕ್ಕಾಗಿ ಔ ಕಾರವನ್ನು ಗ್ರಹಣ ಮಾಡಿದ್ದಾರೆ. ಹೀಗೆ 'ಭಜಞೌ' ಎಂದು ಪ್ರಯೋಗ ಮಾಡಿದ್ದರಿಂದ ಈ ಧಾತು ಉಭಯಪದಿಯಾಗಿದೆ ಮತ್ತು ಅಞಿತ್ ಆತವಾಗಿದೆ ಎಂದು ತಿಳಿಸಿದಂತಾಯಿತು.

ಪ್ರಕೃತ ಸೂತ್ರದಲ್ಲಿ ಉಲ್ಲೇಖಿಸಲ್ಪಟ್ಟ ಭಾಕ್ತ ಶಬ್ದವು ಭಾಗಾರ್ಥವುಳ್ಳದ್ದಾಗಿದೆ. ಭಜ ಧಾತುವಿನ ಮೇಲೆ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯವನ್ನು ಮಾಡಬೇಕು. ಆಗ ಭಕ್ತ ಎಂಬ ರೂಪವು ಸಿದ್ಧವಾಯಿತು. ಭಕ್ತಸ್ಯ ಇದಂ ಭಾಕ್ತಂ ಎಂದು ಅಥವಾ ಭಕ್ತ್ಯಾಯ ಇದಂ ಭಾಕ್ತಂ ಎಂಬುದಾಗಿ ಸಂಬಂಧ ಸಾಮಾನ್ಯಾರ್ಥದಲ್ಲಿ ಅಣ್ ಪ್ರತ್ಯಯವನ್ನು ಮಾಡಬೇಕು. ಆಗ ಭಾಗವನ್ನೇ ವಿಷಯವನ್ನಾಗಿ ಉಳ್ಳದ್ದು ಎಂಬರ್ಥವು ತಿಳಿಯುತ್ತದೆ. ಮನಸಶ್ಚ ವಿಜ್ಞಾನಂ ಎಂಬ ವ್ಯಪದೇಶವು ಭಾಗವಿಷಯಕವಾಗಿದೆ ಎಂದಂತಾಯಿತು.

**यद्यपि मनश्शब्दस्य मनस्तत्वमन्तःकरणरूपमिन्द्रियं चेत्येको राशिरर्थः । उभयत्रापि प्रयोगात् । एवं विज्ञानशब्दस्यापि विज्ञानतत्वमवबोधश्चेत्येको राशिरर्थः। तथापि ''मनसश्च विज्ञानम्'' इति वाक्यस्थौ मनोविज्ञानशब्दाविन्द्रियावबोध-**

**रूपभागयोरेव वर्तेते । नतु मनस्तत्वविज्ञानतत्वयोरिति ''मनसश्च विज्ञानम्'' इति व्यपदेशो भागविषय इत्यर्थः ।**

ಯಾವುದು ಭಾಗ? ಎಂಬ ಪ್ರಶ್ನೆಗೆ ಹೀಗೆ ಉತ್ತರ – ವಾಸ್ತವಿಕವಾಗಿ ಮನಃ ಶಬ್ದವನ್ನು ಕೇಳಿದಾಗ ಮನಸ್ತತ್ತ್ವ, ಅಂತಃಕರಣವೆಂಬ ಇಂದ್ರಿಯ ಎಂಬ ಅನೇಕ ಪದಾರ್ಥಗಳ ಸಮೂಹವು (ರಾಶಿಯು) ಉಪಸ್ಥಿತವಾಗುತ್ತದೆ. ಏಕೆಂದರೆ ಎರಡೂ ಕಡೆಯೂ ಮನಃ ಶಬ್ದದ ಪ್ರಯೋಗವಿದೆ. ಇದರಂತೆ ವಿಜ್ಞಾನ ಶಬ್ದವನ್ನು ಕೇಳಿದಾಗ ವಿಜ್ಞಾನತತ್ತ್ವ ಹಾಗೂ ಅವಬೋಧ ಎಂಬೆರಡು ಪದಾರ್ಥಗಳ ಸಮುದಾಯವು (ರಾಶಿಯು) ಉಪಸ್ಥಿತವಾಗುತ್ತದೆ. ಹೀಗೆ ಮನಃ ಶಬ್ದ ಹಾಗೂ ವಿಜ್ಞಾನ ಶಬ್ದಗಳಿಂದ ಅನೇಕ ಅರ್ಥಗಳು ಉಪಸ್ಥಿತವಾದರೂ ಕೂಡ 'ಮನಸಶ್ಚ ವಿಜ್ಞಾನಂ' ಎಂಬ ವಾಕ್ಯದಲ್ಲಿರುವ ಮನಃ ಶಬ್ದದಿಂದ ಇಂದ್ರಿಯವನ್ನೇ ವಿವಕ್ಷಿಸಬೇಕು ಹೊರತು ಮನಸ್ತತ್ವವನ್ನು ವಿವಕ್ಷಿಸಬಾರದು. ಅದರಂತೆ ವಿಜ್ಞಾನಶಬ್ದದಿಂದಲೂ ಕೂಡ ಅವಬೋಧ ಎಂಬರ್ಥವನ್ನೇ ಸ್ವೀಕರಿಸಬೇಕು. ವಿಜ್ಞಾನತತ್ವ ಎಂಬರ್ಥವನ್ನು ಸ್ವೀಕರಿಸಬಾರದು. ಹೀಗೆ ಮನಃ ಶಬ್ದ ಹಾಗೂ ವಿಜ್ಞಾನ ಶಬ್ದಗಳು ಒಂದುಭಾಗದಲ್ಲಷ್ಟೇ ವಿವಕ್ಷಿತವಾಗಿವೆ. ಆದ್ದರಿಂದ ಮನಸಶ್ಚವಿಜ್ಞಾನಂ ಎಂಬ ಶ್ರುತಿಯಲ್ಲಿರುವ ವ್ಯಪದೇಶವು ಭಾಗವಿಷಯಕವಾಯಿತು ಎಂಬುದು ಈ ಟೀಕಾಪಂಕ್ತಿಯ ಅರ್ಥ.

**''अन्तस्तद्व्यक्तयपेक्षय'' इत्यादिभाष्यं प्रकृतानुपयोगीत्याशङ्क्य मैवम् । तत्वानां सर्वसृष्टिर्हि ''परादव्यक्तमुत्पन्नम्'' इत्यादिभाष्योदाहृतस्मृत्युक्तक्रमेणैव । क्वचित्तत्वानामेवायं पूर्वपक्ष्यभिप्रेतो विपरीतक्रमः श्रूयते चेत्सा श्रुतिर्ब्रह्माण्डान्तः सृष्ट्यभिप्राया । बहुश्रुतिसङ्ग्रहरूपा स्मृतिस्तु बाह्यसृष्ट्यभिप्राया ।**

ಅಂತಸ್ತದ್ವ್ಯಪೇಕ್ಷಯಾ ಇತ್ಯಾದಿ ಭಾಷ್ಯವು ಪ್ರಕೃತ ಅನುಪಯೋಗಿಯಾಗಿದೆ ಎಂದು ಆಶಂಕಿಸಿ ಉತ್ತರಿಸುತ್ತಿದ್ದಾರೆ. ಶ್ರುತಿಯಲ್ಲಿ ಮನಸ್ಸಿನಿಂದ ವಿಜ್ಞಾನವು ಹುಟ್ಟಿತು ಎಂದು ಹೇಳಿದರೆ ಅಲ್ಲಿ ಇಂದ್ರಿಯವನ್ನೇ ವಿವಕ್ಷಿಸಬೇಕು ತತ್ವವನ್ನು ವಿವಕ್ಷಿಸಬಾರದೆಂದು ಒಂದು ಬಗೆಯಲ್ಲಿ ಉತ್ತರಿಸಿದ್ದಾಯಿತು. ಆದರೆ ಯಾವುದಾದರೂ ಶ್ರುತಿಯಲ್ಲಿ ಮನಸ್ತತ್ವದಿಂದ ವಿಜ್ಞಾನತತ್ವವು ಹುಟ್ಟಿತು ಎಂಬುದಾಗಿಯೇ ಸ್ಪಷ್ಟವಾಗಿ ನಿರ್ದೇಶ ಮಾಡಿದ್ದರೆ ಏನು ಮಾಡಬೇಕು? ಎಂಬ ಪ್ರಶ್ನೆಗೆ ಈಗ ಉತ್ತರಿಸುತ್ತಿದ್ದಾರೆ–

ಬ್ರಹ್ಮಾಂಡದ ಹೊರಗಿನ ಸರ್ವಸೃಷ್ಟಿಯಲ್ಲಿ 'ಪರಾದವ್ಯಕ್ತಂ ಉತ್ಪನ್ನಂ' ಇತ್ಯಾದಿ ಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿ ವಾಕ್ಯದಲ್ಲಿ ಹೇಳಿದಂತೆ ವಿಜ್ಞಾನದಿಂದ ಮನಸ್ತತ್ವವು ಹುಟ್ಟಿತು ಇತ್ಯಾದಿಯಾಗಿಯೇ ಅರ್ಥವನ್ನು ವಿವಕ್ಷಿಸಬೇಕು. ಆದರೆ ಬ್ರಹ್ಮಾಂಡದ ಒಳಗಡೆ ಪುನಃ ಅದೇ ತತ್ವಗಳು ಅಭಿವ್ಯಕ್ತವಾಗುವಾಗ ಕೆಲವೆಡೆ ವ್ಯತ್ಯಾಸವಾಗುವುದೂ ಕೂಡ ಕಂಡಿದೆ. ಕೆಲವೆಡೆ ತತ್ವಗಳು ಪೂರ್ವಪಕ್ಷಿಗೆ ಅಭಿಪ್ರೇತವಾದಂತೆ ವಿಪರೀತ ಕ್ರಮದಲ್ಲಿ ಶ್ರುತವಾದರೆ ಆಗ ಅದನ್ನು ಬ್ರಹ್ಮಾಂಡದ ಒಳಗಿನ ಸೃಷ್ಟಿ ಎಂದೇ ತಿಳಿಯಬೇಕು.

ಅಂತರಾವಿಜ್ಞಾನಾಧಿಕರಣ (೨-೩-೮)

ಅನೇಕ ಶ್ರುತಿಗಳನ್ನು ಸಂಗ್ರಹ ಮಾಡುವ ಸ್ಮೃತಿವಾಕ್ಯವು ಎಲ್ಲಾದರೂ ಕಂಡಿದ್ದರೆ ಅದು ಬಾಹ್ಯಸೃಷ್ಟಿ ವಿಷಯವೆಂದೇ ತಿಳಿಯಬೇಕು.

ವಿವರಣೆ – ಬ್ರಹ್ಮಾಂಡದ ಹೊರಗಿನ ಸೃಷ್ಟಿ ಹಾಗೂ ಪಾದ್ಮಸೃಷ್ಟಿಯಲ್ಲಿ ಮಾತ್ರ ತಾರತಮ್ಯವು ವಿವಕ್ಷಿತವೆಂದು ಶ್ರೀಮದಾಚಾರ್ಯರು ತಿಳಿಸಿರುತ್ತಾರೆ. ಬೇರೆ ವಾರಾಹಸೃಷ್ಟಿ ಮೊದಲಾದವುಗಳಲ್ಲಿರುವ ಸೃಷ್ಟಿ ಕ್ರಮವು ತಾರತಮ್ಯಕ್ಕೆ ಪೂರಕವಾಗಿರುವುದಿಲ್ಲ. ಆದ್ದರಿಂದ ಬ್ರಹ್ಮಾಂಡದ ಒಳಗಿನ ಸೃಷ್ಟಿಯಲ್ಲಿ ವ್ಯತ್ಯಾಸ ಮಾಡಿ ಸೃಷ್ಟಿಯನ್ನು ಹೇಳಿದರೆ ತಪ್ಪಲ್ಲ.

**यद्वा विपरीतक्रमश्रुतिर्ज्ञानिनं प्रति स्वदेहे तत्वाभिमानिदेवानामापरोक्ष्यक्रमाभिप्राया । द्वारपालादिदर्शनानन्तरमन्ते राज्ञ इवाधमदेवतादर्शनानन्तरमन्ते हरेर्दर्शनादिति परिहारद्वयकथनार्थत्वादुत्तरभाष्यस्येत्यभिप्रेत्योत्तरभाष्यं व्याचष्टे ।। क्वचित्तत्वानामेवेत्यादिना ।।**

ಅಥವಾ ವಿಪರೀತಕ್ರಮಶ್ರುತಿಯು ಜ್ಞಾನಿಯು ತನ್ನ ದೇಹದಲ್ಲಿ ತತ್ವಾಭಿಮಾನಿದೇವತೆಗಳನ್ನು ಹೇಗೆ ಅಪರೋಕ್ಷ ಮಾಡಿಕೊಳ್ಳುತ್ತಾನೆ? ಎಂಬ ಕ್ರಮವನ್ನು ಹೇಳಲು ಹೊರಟಿದೆ. ಉದಾ – ದ್ವಾರಪಾಲ ಮೊದಲಾದವರನ್ನು ನೋಡಿ ಕೊನೆಯಲ್ಲಿ ರಾಜನ ದರ್ಶನವಾಗುತ್ತದೆ. ಅದರಂತೆ ಅಧಮದೇವತೆಗಳ ದರ್ಶನದ ಅನಂತರವೇ ಸರ್ವೋತ್ತಮನಾದ ಶ್ರೀಹರಿಯ ದರ್ಶನವು ಯುಕ್ತವಾಗುತ್ತದೆ. ಹೀಗೆ ಎರಡು ಪರಿಹಾರಗಳನ್ನು ಹೇಳುವ ಮುಂದಿನ ಭಾಷ್ಯದ ಅಭಿಪ್ರಾಯವನ್ನು ವಿವಕ್ಷಿಸಿ ಕ್ವಚಿತ್ತತ್ವಾನಾಮೇವ ಇತ್ಯಾದಿ ಟೀಕಾಪಂಕ್ತಿಯಿಂದ ಭಾಷ್ಯವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ – ವಾಸ್ತವಿಕವಾಗಿ ವಿಜ್ಞಾನದಿಂದಲೇ ಮನಸ್ಸು ಹುಟ್ಟುತ್ತದೆ. ಆದರೆ ತದಭಿಮಾನಿದೇವತೆಗಳನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬೇಕಾದರೆ ಅವರನಾದ ಮನೋಭಿಮಾನಿಯಾದ ರುದ್ರನನ್ನು ಮೊದಲು ಸಾಕ್ಷಾತ್ಕಾರ ಮಾಡಿಕೊಂಡು ಅನಂತರ ವಿಜ್ಞಾನಾಭಿಮಾನಿಯಾದ ಉತ್ತಮಳಾದ ಸರಸ್ವತಿಯನ್ನು ಸಾಧಕನು ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾನೆ.

**सूत्राक्षरार्थस्तु ।। तद्व्यपदेशस्तु मनसश्च विज्ञानमिति मनोविज्ञानयोः कार्यकारणव्यपदेशस्तु । भाक्तः स्यात् इन्द्रियावबोधरूपभागविषयः स्यात् । चराचरात्मकसर्वविषयेष्वपि मनोभावरूपेणालोचनेनावबोधस्य भावित्वात् उत्पद्यमानत्वादिति ।**

'ಚರಾಚರವ್ಯಪಾಶ್ರಯಸ್ತು' ಇತ್ಯಾದಿ ಸೂತ್ರದ ಅರ್ಥ ಹೀಗಿದೆ– 'ತದ್ವ್ಯಪದೇಶಸ್ತು ಮನಸಶ್ಚ ವಿಜ್ಞಾನಂ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಮನಸ್ಸು ಹಾಗೂ ವಿಜ್ಞಾನಗಳಿಗೆ ಕಾರ್ಯಕಾರಣಭಾವವಾದರೂ 'ಭಾಕ್ತಃ ಸ್ಯಾತ್' ಇಂದ್ರಿಯ ಮತ್ತು ಜ್ಞಾನವೆಂಬ ಗೌಣಾರ್ಥವುಳ್ಳದ್ದು ಆಗುತ್ತದೆ. ಏಕೆಂದರೆ ಚರಾಚರವ್ಯಪಾಶ್ರಯಃ ಮನಸ್ಸು ಎಂಬ ಶಬ್ದವು ಅಂತಃಕರಣವನ್ನು ವಿಜ್ಞಾನ ಎಂಬ ಪದವು

ಅವಬೋಧ ಎಂಬುದನ್ನು ಏಕೆ ಹೇಳುತ್ತದೆಂದರೆ 'ತದ್ಭಾವಭಾವವಿತ್ವಾತ್'= ಚರಾಚರಾತ್ಮಕವಾದ ಸರ್ವವಿಷಯದಲ್ಲೂ ಕೂಡ' ಮನೋಭಾವ ರೂಪದಿಂದ ಆಲೋಚನೆ ಮಾಡಿದಾಗ ಜ್ಞಾನವು ಹುಟ್ಟುತ್ತದೆ ಎಂದು.

ವಿಜ್ಞಾನತತ್ವ ಹಾಗೂ ಮನಸ್ತತ್ವ ಇವೆರಡನ್ನು ಬಿಟ್ಟು ಉಳಿದೆಲ್ಲ ತತ್ತ್ವಗಳು ವ್ಯತ್ಕ್ರಮದಲ್ಲಿ ಲಯವನ್ನು ಹೊಂದುತ್ತವೆ. ವಿಜ್ಞಾನತತ್ವ ಹಾಗು ಮನಸ್ತತ್ವಗಳಿಗೆ ಮಾತ್ರ ಸೃಷ್ಟಿಕ್ರಮದಲ್ಲಿಯೇ ಲಯವನ್ನು ಹೇಳಬೇಕು. 'ಯಚ್ಛೇದ್ ವಾಙ್ಮನಸೀ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಲಿಂಗದ ಬೆಂಬಲವು ಈ ವಿಷಯದಲ್ಲಿದೆ. ಇಷ್ಟು ಆಕ್ಷೇಪ. ಅವಿಶೇಷಾತ್ ಎಂಬುದರಿಂದ ಇದಕ್ಕೆ ಉತ್ತರಿಸುತ್ತಿದ್ದಾರೆ. ಹಿಂದಿನ ಅಧಿಕರಣದಲ್ಲಿ ಹೇಳಿದಂತೆ ಸಕಲ ತತ್ತ್ವಗಳಿಗೂ ಕೂಡ ವ್ಯತ್ಕ್ರಮದಿಂದಲೇ ಲಯವನ್ನು ಹೇಳಬೇಕು. ವಿಜ್ಞಾನ ಹಾಗೂ ಮನಸ್ಸುಗಳಿಗೆ ಸೃಷ್ಟಿ ಕ್ರಮದಲ್ಲಿಯೇ ಲಯವಾಗುತ್ತದೆನ್ನಲು ಯಾವುದೇ ವಿಶೇಷಪ್ರಮಾಣವು ಇರುವುದಿಲ್ಲ.

'ಯಚ್ಛೇದ್ ವಾಙ್ಮನಸಿ ಕ್ರಮಃ' ಎಂಬ ವಿಶೇಷಪ್ರಮಾಣವನ್ನು ನಾವು ಹೇಳಿದ್ದೇವಲ್ಲವೇ ಎಂದರೆ ವಿಜ್ಞಾನದಲ್ಲಿ ಮನಸ್ಸಿಗೆ ಲಯವಾಗುತ್ತದೆಂಬುದನ್ನು ನಾವು ಒಪ್ಪಿದ್ದೇವೆ. ಆದರೆ ಮನಸ್ಸೇ ವಿಜ್ಞಾನಕ್ಕೆ ಕಾರಣವಾಗಿದೆ ಎಂಬುದನ್ನು ನಾವು ಒಪ್ಪುವುದಿಲ್ಲ. ವಿಜ್ಞಾನತತ್ತ್ವವೇ ಮನಸ್ಸಿಗೆ ಕಾರಣವೆಂದು ಹೇಳುತ್ತೇವೆ.

ಮನಸ್ತತ್ವವೇ ವಿಜ್ಞಾನತತ್ವಕ್ಕೆ ಕಾರಣವೆಂದು 'ಮನಸಶ್ಚ ವಿಜ್ಞಾನಂ' ಎಂಬ ಶ್ರುತಿಯು ಹೇಳುತ್ತಿದೆಯಲ್ಲವೇ? ಎಂದರೆ ಈ ಶ್ರುತಿಯು ಸಾವಕಾಶವಾಗಿದೆ ಎಂಬುದನ್ನು ಪ್ರತಿಪಾದನೆ ಮಾಡುವುದಕ್ಕಾಗಿ 'ಚರಾಚರವ್ಯಪಾಶ್ರಯಸು', ಇತ್ಯಾದಿ ಈ ಸೂತ್ರವು ಕಠಿಣಾರ್ಥವುಳ್ಳದ್ದರಿಂದ ಗ್ರಂಥಕಾರರು 'ಸೂತ್ರಾಕ್ಷರಾಸ್ತು' ಎಂಬುದಾಗಿ ಇದರ ಅರ್ಥವನ್ನು ವಿವರಿಸುತ್ತಿದ್ದಾರೆ.

ಪರಮಾತ್ಮನು ಸೃಷ್ಟಿ ಮಾಡುವಾಗ ಮಹತ್ತತ್ವ, ಅಹಂಕಾರತತ್ವಗಳನ್ನು ಸೃಷ್ಟಿ ಮಾಡುತ್ತಾನೆ. ಈ ಅಹಂಕಾರತತ್ವವು ವೈಕಾರಿಕ, ತೈಜಸ, ತಾಮಸವೆಂದು ಮೂರುವಿಧವಾಗಿದೆ. ಆ ವೈಕಾರಿಕ ಅಹಂಕಾರತತ್ವದಿಂದ ಮನಸ್ಸು ಹುಟ್ಟುತ್ತದೆ. ಮೊದಲು ಪ್ರಕೃತಿಯಲ್ಲಿ ಸೂಕ್ಷ್ಮರೂಪದಲ್ಲಿದ್ದ ಮನಸ್ಸು ಈಗ ಸ್ಥೂಲರೂಪವನ್ನು ತಾಳಿತು ಎಂಬುದು ಇದರ ಅರ್ಥ. ಇದು ಬ್ರಹ್ಮಾಂಡದ ಹೊರಗೆ ಆಗುವ ಸೃಷ್ಟಿ. ಬ್ರಹ್ಮಾಂಡದ ಒಳಗಡೆ ಸಕಲ ಜೀವರಿಗೆ ಸ್ಥೂಲದೇಹವು ಬರುವಾಗ ಅನಾದಿಕಾಲದಿಂದ ಇರುವ ಅಂತಃಕರಣವು ಬ್ರಹ್ಮಾಂಡದ ಹೊರಗಿರುವ ಮನಸ್ತತ್ವದಿಂದ ಉಪಚಯವನ್ನು ಹೊಂದುತ್ತದೆ. ನಮ್ಮ ಜೊತೆಯಲ್ಲೇ ಲಿಂಗದೇಹದಲ್ಲಿ ಅಂತಃಕರಣವು ಅನಾದಿಕಾಲದಿಂದ ಇರುತ್ತದೆ. ಆದರೂ ಮನಸ್ತತ್ವದಿಂದ ಇದಕ್ಕೆ ಉಪಚಯವಾಗುತ್ತದೆ. ಈ ದೃಷ್ಟಿಯಿಂದ ಶ್ರುತಿಯಲ್ಲಿ ಕೆಲವೆಡೆ ಅಂತಃ ಕರಣವನ್ನೇ ಮನಸ್ತತ್ವವೆಂದು ಪ್ರಯೋಗ ಮಾಡಲಾಗುತ್ತದೆ.

## ಅಂತರಾವಿಜ್ಞಾನಾಧಿಕರಣ (೨-೩-೯)

ವಿವರಣೆ - ಏಕಕ್ಷಣಾವಸ್ಥಾಯಿಯಾದ ಘಟಪಟಾದಿಗಳ ಜ್ಞಾನವೇ ಬೇರೆ, ಪ್ರಕೃತ ಶ್ರುತಿಯಲ್ಲಿ ಉಲ್ಲೇಖ ಮಾಡಲ್ಪಟ್ಟ ವಿಜ್ಞಾನತತ್ತ್ವವೇ ಬೇರೆ. ಈ ವಿಜ್ಞಾನತತ್ತ್ವವು ಸರಸ್ವತೀ ದೇವಿಯಿಂದ ಅಭಿಮನ್ಯವಾಗಿದೆ ಮತ್ತು ಮಹತತ್ವದಿಂದ ಹುಟ್ಟುತ್ತದೆ.

**समासान्तर्गतं तद्भावं प्रति विशेषणस्यापि चराचरव्यपाश्रयत्वस्य पृथगुपादानं तु यद्यपि तद्व्यपदेशः मनोविज्ञानशब्दरूपो व्यपदेशः चराचरव्यपाश्रयः टीकोक्तरीत्या राशिद्वयविषयः । तत्वयोरचरत्वात् । इन्द्रियावबोधयोस्तु चञ्चलत्वेन चरत्वात् । तथापीह भागविषयः । इति योजनान्तरप्रदर्शनार्थमिति द्रष्टव्यम् ।**

ಸೂತ್ರದಲ್ಲಿ ತದ್ಭಾವಭಾವೀತ್ವಾತ್ ಎಂಬುದು ಕೊನೆಯಲ್ಲಿದೆ. ಚರಾಚರವ್ಯಪಾಶ್ರಯಃ ಎಂಬುದು ಮೊದಲಿದೆ. ಮಧ್ಯದಲ್ಲಿ ಅನೇಕ ಪದಗಳಿವೆ. ಆದರೂ ಕೂಡ ತದ್ಭಾವಭಾವೀತ್ವಕ್ಕೆ ಚರಾಚರವ್ಯಪಾಶ್ರಯವು ವಿಶೇಷಣವಾಗಿದೆ. ಚರಾಚರವ್ಯಪಾಶ್ರಯವಾದ ತದ್ಭಾವ ಎಂದು ವಿಶೇಷಣವನ್ನು ತಿಳಿಯಬೇಕು. ಘಟಪಟಾದಿ ಜಗದ್ವಿಷಯಕವಾದ ಯಾವ ಆಲೋಚನೆಯು ಇದೆಯೋ ಅದರಿಂದ ಜ್ಞಾನವು ಹುಟ್ಟುತ್ತದೆ ಎಂದೂ ಸೂತ್ರಾರ್ಥವನ್ನು ಹೇಳಿದಂತಾಗುತ್ತದೆ. ತದ್ಭಾವಭಾವೀತ್ವಾತ್ ಎಂಬುದು ಸಮಸ್ತವಾದ ಪದ. ಇದರಲ್ಲಿ ತದ್ಭಾವವೆಂಬುದು ಏಕದೇಶವಾಗಿದೆ. ಸಮಾಸಾಂತರ್ಗತವಾದ ತದ್ಭಾವ ಎಂಬುದಕ್ಕೆ ಚರಾಚರವ್ಯಪಾಶ್ರಯತ್ವವನ್ನು ವಿಶೇಷಣವನ್ನಾಗಿ ಹೇಳಲು ಹೇಗೆ ಸಾಧ್ಯ ?

ಚರಾಚರವ್ಯಪಾಶಯತ್ವವು ತದ್ಭಾವದಲ್ಲಿ ವಿಶೇಷಣವಾದರೂ ಕೂಡ ಪ್ರತ್ಯೇಕವಾಗಿ ಅದು ಭಿನ್ನಪದವೂ ಆಗಿದೆ. 'ಮನಸಶ್ಚ ವಿಜ್ಞಾನಂ' ಎಂಬ ಶ್ರುತಿಯಲ್ಲಿರುವ ಮನಸ್ ಶಬ್ದ ಹಾಗೂ ವಿಜ್ಞಾನ ಶಬ್ದಗಳು ಚರಾಚರವಿಷಯಕವಾಗಿವೆ. ಚಂಚಲವಾದ ಇಂದ್ರಿಯ ಹಾಗೂ ಅವಬೋಧಗಳು ಚರ ಎಂದು ಕರೆಸಿಕೊಳ್ಳುತ್ತವೆ. ಮನಸ್ತತ್ವ ಹಾಗೂ ವಿಜ್ಞಾನತತ್ವಗಳೆರಡು ಅಚರ ಎಂದು ಕರೆಸಿಕೊಳ್ಳುತ್ತವೆ. ಹೀಗೆ ಚರಾಚರವಿಷಯಕವಾದ್ದರಿಂದ ರಾಶಿದ್ವಯ ವಿಷಯಕವಾಗಿವೆ. ಆದರೂ ಕೂಡ ಚಂಚಲವಾದ ಮನಸ್ಸು ಹಾಗೂ ಅವಬೋಧಗಳನ್ನೇ ಇಲ್ಲಿ ವಿವಕ್ಷಿಸಬೇಕು. ಹೀಗೆ ಚರಾಚರವ್ಯಪಾಶ್ರಯವು ಬೇರೆ ಯೋಜನದಲ್ಲಿ ಬೇರೆ ಅರ್ಥವನ್ನೇ ಹೇಳುತ್ತಿರುವುದರಿಂದ ಇದನ್ನು ತದ್ಭಾವ ಎಂಬುದರ ಜೊತೆ ಸೇರಿಸದೇ ಪ್ರತ್ಯೇಕವಾಗಿ ಸೂತ್ರದಲ್ಲಿ ಉಲ್ಲೇಖ ಮಾಡಿದ್ದಾರೆ.

ವಿವರಣೆ – ವಾಸ್ತವಿಕವಾಗಿ ಮನಸ್ಸು ಹಾಗೂ ವಿಜ್ಞಾನ ಶಬ್ದಗಳು ಚಂಚಲವಾದ ಮತ್ತು ಅಚಂಚಲವಾದ ಎಲ್ಲವನ್ನೂ ವಿಷಯೀಕರಿಸುವುದರಿಂದ ರಾಶಿದ್ವಯವಿಷಯಕವಾಗಿವೆ. ಆದರೂ ಕೂಡ ಭಾಕ್ತಃ ಒಂದು ಭಾಗವನ್ನೇ ವಿವಕ್ಷಿಸಬೇಕು. ಏಕೆಂದರೆ 'ಚರಾಚರವ್ಯಪಾಶ್ರಯಸ್ತು ತದ್ಭಾವಭಾವಿತ್ವಾತ್' ಎಂದು ಈಗ ಅನ್ವಯ ಮಾಡಬೇಕು. ಜಗದ್ವಿಷಯಕವಾದ ಮನಸ್ಸಿನಿಂದ ಮಾಡುವ ಆಲೋಚನೆಯಿಂದ ಜ್ಞಾನವು ಹುಟ್ಟುತ್ತದೆ ಮತ್ತು ಅನ್ವಯವ್ಯತಿರೇಕಗಳಿಂದ ಮನಸ್ಸಿಗೂ ಜ್ಞಾನಕ್ಕೂ ಕಾರ್ಯಕಾರಣಭಾವವು ನಿಶ್ಚಯವಾಗಿರುವುದರಿಂದ ಈ ಅರ್ಥವನ್ನೇ ಸ್ವೀಕಾರ ಮಾಡಬೇಕು.

ಪರಿಪೂರ್ಣಚಂದ್ರಿಕಾ

ಸ್ಪಷ್ಟವಾಗಿ ಇಷ್ಟು ತಿಳಿಯಬೇಕು– ಸೃಷ್ಟಿಯ ಪ್ರಾರಂಭದಲ್ಲಿ ವಿಜ್ಞಾನತತ್ತ್ವದಿಂದಲೇ ಮನಸ್ತತ್ವವು ಹುಟ್ಟುತ್ತದೆ. ಲಯವನ್ನು ಹೊಂದುವಾಗಲೂ ಮೊದಲು ಮನಸ್ತತ್ವವು ಲಯವಾಗಿ ಅನಂತರ ವಿಜ್ಞಾನತತ್ವವು ಲಯವಾಗುತ್ತದೆ. ಇದು ಸಿದ್ಧಾಂತ. ಹಾಗಾದರೆ 'ಮನಸಶ್ಚ ವಿಜ್ಞಾನಂ' ಎಂಬ ಶ್ರುತಿಯು ಮನಸ್ಸಿನಿಂದ ವಿಜ್ಞಾನವು ಹುಟ್ಟುತ್ತದೆ ಎಂದು ಹೇಳುತ್ತಿದೆಯಲ್ಲವೇ ಎಂಬ ಪ್ರಶ್ನೆಯು ಬಂದರೆ ಈ ಶ್ರುತಿಯನ್ನು ಸಾವಕಾಶ ಮಾಡುವುದಕ್ಕಾಗಿ ಚರಾಚರವ್ಯಪಾಶ್ರಯತ್ವಂ ಎಂಬ ಸೂತ್ರವು ಹೊರಟಿದೆ. ಇದರ ಅಭಿಪ್ರಾಯವೇನೆಂದರೆ ಮನಸಶ್ಚ ವಿಜ್ಞಾನಂ ಎಂಬ ಶ್ರುತಿಯು ಮನಸ್ತತ್ವದಿಂದ ವಿಜ್ಞಾನತತ್ವ ಹುಟ್ಟುತ್ತಿದೆ ಎಂದು ಹೇಳಲು ಹೊರಟಿಲ್ಲ. ಲೌಕಿಕವಾದ ಆಲೋಚನೆ ಎಂಬ ಜ್ಞಾನದಿಂದ ಅವಬೋಧವೆಂಬ ಜ್ಞಾನವು ಹುಟ್ಟುತ್ತದೆ ಎಂದಷ್ಟೇ ಹೇಳುತ್ತಿದೆ. ಮನಸ್ತತ್ವದಿಂದ ವಿಜ್ಞಾನತತ್ವ ಹುಟ್ಟುತ್ತದೆಂಬುದು ಇದರ ಅರ್ಥವಲ್ಲ. ಹೀಗೆ ಗೌಣಾರ್ಥವನ್ನು ಶ್ರುತಿಗೆ ಮಾಡಿದಾಗ ವಿಜ್ಞಾನತತ್ವದಿಂದ ಮನಸ್ತತ್ವವು ಹುಟ್ಟುತ್ತದೆಂಬ ಶ್ರುತಿಯು ನಿರವಕಾಶವಾಗಿ ಪ್ರಬಲವಾಗುತ್ತದೆ. ಇದು ಎರಡನೆಯ ಸೂತ್ರದ ಅಭಿಪ್ರಾಯ.

**प्रकाशः –**

**अन्तरा विज्ञानमनसी** ।। टीकानुक्तेराह – **पूर्वोक्तस्येति** ।। ''अक्षरात्परमादेवेति श्रुतेर्वक्ष्यमाणलिङ्गदर्शनस्य च विरोध'' इति टीकोक्तश्रुतिः केत्यतस्तद्विवृण्वंष्टीकोक्त-पूर्वोत्तरपक्षसूचितचिन्तापरंपरां वदन् विषयसंशयटीकां तात्पर्यतो व्यनक्ति ।। **अत्र किं भाष्येति** ।।

ಟೀಕೆಯಲ್ಲಿ ಅಧಿಕರಣದ ಸಂಗತಿಯನ್ನು ಹೇಳಿಲ್ಲವಾದ್ದರಿಂದ ಪೂರ್ವೋಕ್ತಸ್ಯ ಎಂಬ ವಾಕ್ಯದಿಂದ ಸಂಗತಿಯನ್ನು ನಿರೂಪಣೆ ಮಾಡುತ್ತಿದ್ದಾರೆ. 'ಅಕ್ಷರಾತ್ಪರಮಾದೇವ ಇತಿ ಶ್ರುತೇಃ ವಕ್ಷ್ಯಮಾಣಲಿಂಗದರ್ಶನಸ್ಯ ಚ ವಿರೋಧಃ' ಅಕ್ಷರಾತ್ಪರಮಾದೇವ ಎಂಬ ಶ್ರುತಿಯನ್ನು ಮುಂದೆ ಹೇಳುವುದರಿಂದ ಲಿಂಗದರ್ಶನಕ್ಕೆ ವಿರೋಧವು ಬರುತ್ತದೆ ಎಂಬ ಟೀಕೆಯಲ್ಲಿ ಉದಾಹರಿಸಿದ ಶ್ರುತಿಯು ಯಾವುದು? ಎಂಬ ಪ್ರಶ್ನೆಗೆ ಅದನ್ನೇ ವಿವರಿಸುತ್ತಾ ಟೀಕೆಯಲ್ಲಿ ಹೇಳಿದ ಪೂರ್ವಪಕ್ಷ ಹಾಗೂ ಸಿದ್ಧಾಂತ ಪಕ್ಷದಿಂದ ಸೂಚಿತವಾದ ಸಂಶಯಪರಂಪರೆಯನ್ನು ಗ್ರಂಥಕಾರರು ತೋರಿಸುತ್ತಿದ್ದಾರೆ. ಮತ್ತು ಅಧಿಕರಣದ ವಿಷಯಸಂಶಯವನ್ನು ಪ್ರತಿಪಾದನೆ ಮಾಡುವ ಟೀಕೆಯನ್ನು ತಾತ್ಪರ್ಯತಃ ವ್ಯಾಖ್ಯಾನ ಮಾಡಿದ್ದಾರೆ. 'ಅತ್ರ ಕಿಂ ಭಾಷ್ಯೇ' ಇತ್ಯಾದಿ ಗ್ರಂಥದಿಂದ.

**प्रकाशः** – पूर्वसूत्रभाष्येत्यर्थः ।। **वाङ्मनसीति** ।। ''वाङ्मनसि लीयत इति स्मरेत्'' इति टीकोक्तार्थः । भाष्यानुक्तेराह – **लोकदृष्टीति** ।। टीकोक्तं सूत्रारूढं करोति ।। **भजन्नाविति** ।।

ಹಿಂದಿನ ಅಧಿಕರಣದ ಸೂತ್ರಭಾಷ್ಯ ಎಂಬರ್ಥವನ್ನು ವಿವಕ್ಷಿಸಬೇಕು. ವಾಙ್ಮನಸಿ ಎಂದರೆ 'ವಾಙ್ಮನಸಿ ಲೀಯತೇ ಇತಿ ಸ್ಮರೇತ್' ಮನಸ್ಸಿನಲ್ಲಿ ವಾಗಿಂದ್ರಿಯವು ಲಯವನ್ನು ಹೊಂದುತ್ತದೆಂದು ಹೇಳಲ್ಪಟ್ಟ ಟೀಕೆಯ

ಅರ್ಥವನ್ನು ವಿವಕ್ಷಿಸಬೇಕು. ಭಾಷ್ಯದಲ್ಲಿ ಹೇಳದ್ದನ್ನು ಲೋಕದೃಷ್ಟಿಯಿಂದ ಸ್ಪಷ್ಟ ಪಡಿಸಿದ್ದಾರೆ. ಟೀಕೆಯಲ್ಲಿ ಹೇಳಿದ್ದನ್ನು ಸೂತ್ರಾರೂಢ ಮಾಡುವುದಕ್ಕಾಗಿ 'ಭಜಞೌ' ಎಂಬ ಗ್ರಂಥವು ಹೊರಟಿದೆ.

**प्रकाशः** – ''स्यात्प्रचीड्ळच सम्पर्के भजञौ भागसेवयोः'' इति कविकल्पद्रुमवचनादित्यर्थः । ञकार उभयपदार्थः । औकारश्चानिडर्थः ।

'ಸ್ಯಾತ್ಪ್ರಚೀಳಚ ಸಂಪರ್ಕೇ ಭಜಞೌ ಭಾಗಸೇವಯೋಃ' ಎಂದು ಕವಿಕಲ್ಪದ್ರುಮದ ವಚನದಲ್ಲಿ ಇದೆ ಎಂದರ್ಥ. ಞಕಾರವನ್ನು ಉಲ್ಲೇಖ ಮಾಡಿದ್ದು ಇದು ಆತ್ಮನೇ ಪದಿಯೂ ಆಗಿದೆ ಎಂಬುದನ್ನು ಸೂಚನೆ ಮಾಡುವುದಕ್ಕಾಗಿ. ಔಕಾರವನ್ನು ಮಾಡಿರುವುದು ಅನಿಟ್ ಆಗಿದೆ ಎಂಬುದನ್ನು ಸೂಚನೆ ಮಾಡುವುದಕ್ಕಾಗಿ.

**प्रकाशः** – ''भागविषय'' इति टीकार्थं व्यनक्ति ।। **यद्यपीति** ।। **सूत्रेति** ।। द्वितीयसूत्रेत्यर्थः । आद्यसूत्रार्थो व्यक्त इति भावः । चराचरतद्भावभावित्वादिति स्यादित्याशङ्क्याह – **समासेति** ।।

ಭಾಗವಿಷಯ ಎಂಬುದನ್ನು ಯದ್ಯಪಿ ಎಂಬುದರಿಂದ ಸ್ಪಷ್ಟಪಡಿಸುತ್ತಿದ್ದಾರೆ. ಸೂತ್ರಾಕ್ಷರವೆಂಬಲ್ಲಿ ಸೂತ್ರಪದಕ್ಕೆ ಎರಡನೆಯ ಸೂತ್ರ ಎಂದರ್ಥ. ಮೊದಲನೇ ಸೂತ್ರದ ಅರ್ಥವು ಸ್ಪಷ್ಟವಾಗಿದೆ ಎಂದು ತಿಳಿಯಬೇಕು. ಚರಾಚರತದ್ಭಾವಭಾವಿತ್ವಾತ್ ಎಂದು ಸೂತ್ರವನ್ನು ಉಲ್ಲೇಖ ಮಾಡಬೇಕಿತ್ತಲ್ಲವೇ? ಎಂಬ ಆಶಂಕೆಯನ್ನು 'ಸಮಾಸ' ಇತ್ಯಾದಿ ವಾಕ್ಯದಿಂದ ಪರಿಹರಿಸಿದ್ದಾರೆ.

## तात्पर्यचन्द्रिका

**अन्ये तु । ''आत्मन आकाश'' इति तैत्तिरीयश्रुतिः ''एतस्माज्जायते प्राणो मनः सर्वेन्द्रियाणि च । खं वायुर्ज्योतिरापः पृथिवी विश्वस्य धारिणि'' इत्याथर्वणश्रुतिविरुद्धा । अत्र ह्यात्मानं भूतानि च अन्तरा तदन्तराले इन्द्रियमनसी आत्मजन्यत्वेनाम्नायेते । तस्मात्तैत्तिरीयोक्तक्रमभङ्ग इति प्राप्ते करणानां ''अन्नमयं हि सोम्य मन'' इत्यादिश्रुत्या भौतिकत्वेन भूतानन्तरमेवोत्पत्तिः । आथर्वणे चाम्नानक्रममात्रम् । अर्थक्रमस्य बलीयस्त्वात् । न तूत्पत्तिक्रमः । तस्माद्भूतोत्पत्तिक्रमभङ्गो नेति सिद्धान्त इत्याहुः ।**

ಅದ್ವೈತಿಗಳ ಅಧಿಕರಣ ರಚನೆ ಹೀಗಿದೆ – 'ಆತ್ಮನಃ ಆಕಾಶಃ ಸಂಭೂತಃ' ಎಂಬ ತೈತ್ತಿರೀಯ ಶ್ರುತಿಯು 'ಆತ್ಮನಿಂದ ಆಕಾಶವು ಹುಟ್ಟಿತು' ಎಂದು ಹೇಳುತ್ತಿದೆ. ಆದರೆ ಆಥರ್ವಣಶ್ರುತಿಯು 'ಏತಸ್ಮಾಜ್ಜಾಯತೇ ಪ್ರಾಣಃ ಮನಃ ಸರ್ವೇಂದ್ರಿಯಾಣಿ ಚ । ಖಂ ವಾಯುರ್ಜ್ಯೋತಿರಾಪಃ ಪೃಥಿವೀ ವಿಶ್ವಸ್ಯ ಧಾರಿಣೀ' ಎಂಬುದಾಗಿ ಭೂತಗಳ ಮಧ್ಯದಲ್ಲಿ ಪ್ರಾಣ, ಮನಸ್ಸು, ಇಂದ್ರಿಯಗಳು ಹುಟ್ಟಿವೆ

ಎಂದು ಹೇಳುತ್ತಿವೆ. ಆದ್ದರಿಂದ ತೈತ್ತಿರೀಯ ಶ್ರುತಿಯು ಆಥರ್ವಣ ಶ್ರುತಿಗೆ ವಿರುದ್ಧವಾಯಿತು. ಸೂತ್ರಾರ್ಥ ಹೀಗಿದೆ – ಆತ್ಮ ಹಾಗೂ ಭೂತ ಇವುಗಳ ಮಧ್ಯದಲ್ಲಿ ಇಂದ್ರಿಯ ಹಾಗೂ ಮನಸ್ಸುಗಳನ್ನು ಆತ್ಮಜನ್ಯತ್ವೇನ ಆಥರ್ವಣಶ್ರುತಿಯು ಹೇಳುತ್ತಿದೆ. ಆದ್ದರಿಂದ ತೈತ್ತಿರೀಯದಲ್ಲಿ ಹೇಳಲ್ಪಟ್ಟ ಆತ್ಮನಿಂದ ನೇರವಾಗಿ ಆಕಾಶ ಹುಟ್ಟಿತು ಎಂಬ ಕ್ರಮವು ಭಂಗವಾಯಿತು. ಇಷ್ಟು ಪೂರ್ವಪಕ್ಷ.

ಎಲ್ಲ ಇಂದ್ರಿಯಗಳು 'ಅನ್ನಮಯಂ ಹಿ ಸೋಮ್ಯಮನಃ' ಎಂಬ ಶ್ರುತಿಯು ಹೇಳುವಂತೆ ಭೌತಿಕವೇ ಆಗಿದೆ. ಆದ್ದರಿಂದ ಭೌತಿಕವಾದ ಇಂದ್ರಿಯಗಳು ಭೂತಪದಾರ್ಥಗಳು ಹುಟ್ಟಿದ ಅನಂತರವೇ ಹುಟ್ಟುತ್ತವೆ. ಹಾಗಾದರೆ ಆಥರ್ವಣದಲ್ಲಿ ಭೂತಪದಾರ್ಥಗಳಿಗಿಂತ ಮೊದಲೇ ಇಂದ್ರಿಯಗಳು ಹುಟ್ಟುತ್ತವೆ ಎಂದು ಹೇಳಿದೆಯಲ್ಲವೇ? ಎಂದರೆ ಅದು ಕೇವಲ ಪಾಠಕ್ರಮಮಾತ್ರ. ಪಾಠಕ್ರಮಕ್ಕಿಂತಲೂ ಅರ್ಥಕ್ರಮವು ಬಲಿಷ್ಠವಾಗಿದೆ. ಆಥರ್ವಣದಲ್ಲಿ ಉತ್ಪತ್ತಿಕ್ರಮವನ್ನು ಹೇಳಲಾಗಿದೆ ಎಂದು ಸರ್ವಥಾ ತಿಳಿಯಬಾರದು. ಹಾಗಾಗಿ ತೈತ್ತಿರೀಯ ಶ್ರುತಿಯು ಹೇಳುವಂತೆ ಆತ್ಮನಿಂದ ಆಕಾಶವು ಹುಟ್ಟಿತು ಎಂಬುದೇ ಸಾಧುವಾದುದು. ಈ ಉತ್ಪತ್ತಿ ಕ್ರಮಕ್ಕೆ ಆಥರ್ವಣಶ್ರುತಿಯ ವಿರೋಧವು ಬರುವುದಿಲ್ಲವಾದ್ದರಿಂದ ಯಾವುದೇ ಭಂಗವಿಲ್ಲ. ಇಷ್ಟು ಅಧಿಕರಣದ ಸಿದ್ಧಾಂತ.

**तत्र । ''मनस्तत्वाच्च खादिकम्'' इति भाष्योक्तस्मृत्या तया आकाशादूर्ध्वं तन्मात्राणि भूतादौ लीयते । भूतादिर्महति लीयते । महानव्यक्ते लीयत इत्यादिलिङ्गैः।**

ಮನಸ್ಸು ಭೌತಿಕವಾದ್ದರಿಂದ ಭೂತಪದಾರ್ಥಗಳ ಅನಂತರವೇ ಹುಟ್ಟುತ್ತದೆಂದು ಹೇಳಿದ ಯುಕ್ತಿಯು ಅಯುಕ್ತವಾಗಿದೆ. ಆತ್ಮನಿಂದ ಇಂದ್ರಿಯಗಳೇ ಮೊದಲು ಹುಟ್ಟುತ್ತವೆ.

೧. ಮನಸ್ಸರ್ವೇಂದ್ರಿಯಾಣಿ ಚ ಎಂಬ ಶ್ರುತಿಯೇ ಈ ವಿಷಯದಲ್ಲಿ ಆಧಾರವಾಗಿದೆ.

೨. 'ಮನಸ್ತತ್ವಾ ಖಾದಿಕಮ್' ಎಂಬ ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಯು ಮನಸ್ತತ್ವದಿಂದಲೇ ಆಕಾಶ ಮೊದಲಾದವುಗಳು ಹುಟ್ಟಿದವು ಎಂದು ಹೇಳುತ್ತಿದೆ.

೩. 'ಆಕಾಶಾದೂರ್ಧ್ವಂ ತನ್ಮಾತ್ರಾಣಿ ಭೂತಾದೌ ಲೀಯತೇ । ಭೂತಾದಿರ್ಮಹತಿ ಲೀಯತೇ । ಮಹಾನವ್ಯಕ್ತೇ ಲೀಯತೇ' ಆಕಾಶದ ಅನಂತರ ತನ್ಮಾತ್ರಗಳು ಭೂತಪದಾರ್ಥಗಳಲ್ಲಿ ಲಯವನ್ನು ಹೊಂದುತ್ತವೆ. ಭೂತಪದಾರ್ಥವು ಮಹತ್ತತ್ವದಲ್ಲಿ ಲಯವನ್ನು ಹೊಂದುತ್ತದೆ. ಮಹತ್ತತ್ವವು ಅವ್ಯಕ್ತತತ್ವದಲ್ಲಿ ಲಯವನ್ನು ಹೊಂದುತ್ತದೆ ಎಂಬ ಶ್ರುತಿಯು ಲಯಕ್ರಮವನ್ನು ಹೇಳುತ್ತಿದೆ. ಯಾವ ಕ್ರಮದಲ್ಲಿ ಲಯವಾಗುತ್ತದೋ ಅದರ ವಿಪರೀತಕ್ರಮದಲ್ಲಿ ಸೃಷ್ಟಿಯಾಗುತ್ತದಾದ್ದರಿಂದ ಈ ಒಂದು ಲಿಂಗದ ಆಧಾರದಿಂದ ಭೂತಪದಾರ್ಥಗಳಿಗಿಂತಲೂ ಮೊದಲು ಇಂದ್ರಿಯಗಳು ಹುಟ್ಟಿವೆ ಎಂದು ತಿಳಿಯುತ್ತದೆ.

## ಅಂತರಾವಿಜ್ಞಾನಾಧಿಕರಣ (೨-೩-೯)

**तथा आथर्वण एव ''खं वायुः'' इत्याद्युत्तरवाक्य इव ''एतस्माज्जायते प्राण'' इत्यादावपि पाठक्रमेण च मन आद्यनन्तरमेवाकाशोत्पत्तेः सिद्धेः ।**

ಮತ್ತು ನೀವೂ ಕೂಡ ಆಥರ್ವಣಶ್ರುತಿಯಲ್ಲಿ 'ಖಂ ವಾಯುಃ' ಎಂಬ ಉತ್ತರವಾಕ್ಯಕ್ಕೆ ವ್ಯಾಖ್ಯಾನ ಮಾಡುವಾಗ ಉತ್ಪತ್ತಿ ಕ್ರಮವನ್ನೇ ವಿವಕ್ಷಿಸುತ್ತೀರಿ. ಪಾಠಕ್ರಮವನ್ನು ವಿವಕ್ಷಿಸುವುದಿಲ್ಲ. ಆದರಂತೆ ಹಿಂದಿನ 'ಏತಸ್ಮಾಜ್ಜಾಯತೇ ಪ್ರಾಣಃ' ಎಂಬ ವಾಕ್ಯದಲ್ಲೂ ಕೂಡ ಪಾಠಕ್ರಮವನ್ನೇ ಅನುಸರಿಸಬೇಕು. ಆದ್ದರಿಂದ ಮನಸ್ಸೇ ಮೊದಲಾದ ಇಂದ್ರಿಯಗಳು ಮೊದಲು ಹುಟ್ಟುತ್ತವೆ ಅನಂತರ ಆಕಾಶಾದಿಗಳು ಉತ್ಪನ್ನವಾಗುತ್ತವೆಂಬುದು ಸಿದ್ಧವಾಗುತ್ತದೆ.

**अन्नमयत्वश्रुतिस्तु ''अन्नमशितं त्रेधा विधीयत'' इति वाक्यशेषात्पार्थिवेनान्नेन मनस उपचयमाह । नतु पृथिवीभूतान्मनस्तत्वोत्पत्तिम् ।**

'ಅನ್ನಮಯಂ ಹಿ ಸೋಮ್ಯಮನಃ' ಎಂಬ ಶ್ರುತಿಯಲ್ಲಿ ಅನ್ನಶಬ್ದಕ್ಕೆ ಪೃಥ್ವೀ ಎಂದರ್ಥ. ಮನಸ್ಸು ಮೊದಲಾದವು ಭೌತಿಕವಾಗಿದೆ ಎಂಬುದು ಇದರ ಅಭಿಪ್ರಾಯ. ಆದ್ದರಿಂದ ಇಂದ್ರಿಯಗಳು ಭೌತಿಕವಾದ್ದರಿಂದ ಭೂತಪದಾರ್ಥಗಳು ಮೊದಲು ಹುಟ್ಟಬೇಕಲ್ಲವೇ?

ಈ ಪ್ರಶ್ನೆಯು ತಪ್ಪು. ಏಕೆಂದರೆ 'ಅನ್ನಮಯಂ ಹಿ ಸೋಮ್ಯ ಮನಃ' ಎಂಬ ಶ್ರುತಿಯಲ್ಲಿರುವ ಅನ್ನಮಯಶಬ್ದಕ್ಕೆ ಪೃಥ್ವೀ ಎಂದು ಅರ್ಥವೇ ಅಲ್ಲ. ಏಕೆಂದರೆ 'ಅನ್ನಮಶಿತಂ ತ್ರೇಧಾ ವಿಧೀಯತೇ' ಎಂಬ ವಾಕ್ಯಶೇಷವಿದೆ. ತಿಂದ ಅನ್ನವು ಮೂರುಭಾಗವನ್ನು ಹೊಂದುತ್ತದೆಂಬುದು ಇದರ ಅರ್ಥ. ಆದ್ದರಿಂದ ಪಾರ್ಥಿವವಾದ ಅನ್ನದಿಂದ ಮನಸ್ಸು ಉಪಚಯವನ್ನು ಹೊಂದುತ್ತದೆ ಎಂದೇ ವ್ಯಾಖ್ಯಾನ ಮಾಡಬೇಕು, ಹೊರತು ಪೃಥ್ವೀ ಎನಿಸಿದ ಭೂತಪದಾರ್ಥದಿಂದ ಮನಸ್ಸು ಹುಟ್ಟಿತು ಎಂಬುದಾಗಿ ಶ್ರುತಿಗೆ ವ್ಯಾಖ್ಯಾನ ಮಾಡಬಾರದು.

**किं चाथर्वण आत्मनो भूतानां चान्तराले प्राणस्यापि श्रुतत्वात्सूत्रे तत्त्यागेन विज्ञानमनसोरेवोपादानं तथा ''विज्ञानतत्त्वं महत'' इत्यादिषु विज्ञानतत्त्वे रूढस्य विज्ञानशब्दस्य ''विज्ञायतेऽनेन'' इति भामत्युक्तमिन्द्रिये यौगिकत्वं तथा यौगिकेन विज्ञानशब्देनैव मनसोऽप्युक्तिसम्भवेन सूत्रे पृथङ्मनःशब्दः ।**

ಮತ್ತೊಂದು ದೋಷ- ಆಥರ್ವಣದಲ್ಲಿ 'ಏತಸ್ಮಾಜ್ಜಾಯತೇ ಪ್ರಾಣಃ ಮನಸ್ಸರ್ವೇಂದ್ರಿಯಾಣಿ ಚ' ಎಂಬುದಾಗಿ ಆತ್ಮನಿಂದ ಪ್ರಾಣ, ಮನಸ್ಸು, ಇಂದ್ರಿಯಗಳು ಹುಟ್ಟಿವೆ ಎಂಬುದಾಗಿ ಆತ್ಮ ಹಾಗೂ ಭೂತಗಳ ನಡುವೆ ಮೂರು ಪದಾರ್ಥಗಳಿಗೆ ಜನ್ಯತ್ವವನ್ನು ಹೇಳಲಾಗಿದೆ. ಆದರೆ ನೀವು ಮನಸ್ಸು ಹಾಗೂ ಇಂದ್ರಿಯಗಳನ್ನು ವಿವಕ್ಷಿಸಿ ಪ್ರಾಣವನ್ನು ಸೂತ್ರದಲ್ಲಿ ವಿವಕ್ಷಿಸಿಯೇ ಇಲ್ಲ. ಮತ್ತು ಸೂತ್ರದಲ್ಲಿ

'ಅಂತರಾ ಇಂದ್ರಿಯಮನಸೀ' ಎಂದು ಹೇಳಬೇಕಿತ್ತು. ಇಂದ್ರಿಯ ಶಬ್ದದ ಬದಲು ವಿಜ್ಞಾನ ಶಬ್ದವನ್ನು ಹಾಕಲಾಗಿದೆ. ಈ ಆಕ್ಷೇಪಕ್ಕೆ ಭಾಮತಿಯಲ್ಲಿ 'ವಿಜ್ಞಾಯತೇ ಅನೇನ' ಎಂಬ ನಿಷ್ಪತ್ತಿಯಿಂದ ಇಂದ್ರಿಯ ಎಂಬರ್ಥವನ್ನೇ ಯೋಗಿಕವಾಗಿ ವಿವಕ್ಷಿಸಲಾಗಿದೆ. ಆದ್ದರಿಂದ ವಿಜ್ಞಾನತತ್ತ್ವಂ ಮಹತಃ ಎಂಬ ಶ್ರುತಿಗೆ ವಿಜ್ಞಾನತತ್ವದಲ್ಲಿ ರೂಢವಾದ ವಿಜ್ಞಾನಶಬ್ದಕ್ಕೆ 'ವಿಜ್ಞಾಯತೇ ಅನೇನ' ಎಂಬ ಭಾಮತಿಯಲ್ಲಿ ಹೇಳಿದಂತೆ ಇಂದ್ರಿಯದಲ್ಲಿ ಯೋಗಿಕಾರ್ಥವನ್ನು ಸ್ವೀಕರಿಸಿದ್ದು ತಪ್ಪು. ಅದರಂತೆ ಯೋಗಿಕವಾದ ವಿಜ್ಞಾನಶಬ್ದದಿಂದಲೇ ಇಂದ್ರಿಯಗಳನ್ನು ವಿವಕ್ಷಿಸುವಂತೆ ಮನಸ್ಸನ್ನೂ ಕೂಡ ವಿವಕ್ಷಿಸಬಹುದು. ಹೀಗಿರುವಾಗ ಮನಸ್ಸನ್ನು ಪ್ರತ್ಯೇಕವಾಗಿ ಸೂತ್ರದಲ್ಲಿ ಗ್ರಹಣ ಮಾಡಿದ್ದು ವ್ಯರ್ಥ.

**तथा मद्रीत्या ''विज्ञानमनसी'' इत्यस्य द्वितीयान्तस्य विज्ञानमनसी अन्तरा विनेत्यनध्याहारेणैवान्वयसम्भवे अन्तरेत्यस्याध्याहृताभ्यामात्मानं भूतानिचेत्याभ्यां द्वितीयान्ताभ्यां विज्ञानमनसी इत्यस्य प्रथमान्तस्याध्याहृतेनाम्नायेते इत्यनेनान्वयः।**

ಮತ್ತೊಂದು ದೋಷ– ನಮ್ಮ ಪ್ರಕಾರ 'ವಿಜ್ಞಾನಮನಸೀ' ಎಂಬುದು ದ್ವಿತೀಯಾಂತ ಪದವಾಗಿದೆ. ಹಾಗಾಗಿ ವಿಜ್ಞಾನ ಹಾಗೂ ಮನಸ್ಸುಗಳ ಹೊರತಾಗಿ ಬೇರೆ ಯಾವುದನ್ನೂ ಕೂಡ ಅಧ್ಯಾಹಾರ ಮಾಡದೆ ಅನ್ವಯವನ್ನು ಹೇಳಲು ಬರುತ್ತದೆ. ಆದರೆ ನೀವು ಅಂತರ ಎಂಬ ಶಬ್ದಕ್ಕೆ ಅಂತರಾಳ ಎಂಬುದಾಗಿ ಮಧ್ಯದಲ್ಲಿ ಎಂಬರ್ಥವನ್ನು ವಿವಕ್ಷಿಸಿದ್ದೀರಿ. ಆಗ 'ಆತ್ಮಾನಂ ಭೂತಾನಿ ಚ' ಎಂಬೆರಡು ದ್ವಿತೀಯಾಂತವಾದ ಪದಗಳನ್ನು ಅಧ್ಯಾಹಾರ ಮಾಡಬೇಕು. ಹಾಗೂ 'ವಿಜ್ಞಾನಮನಸಿ' ಎಂಬುದನ್ನು ಪ್ರಥಮಾಂತ ಮಾಡಬೇಕು. ಆಗ ಪ್ರಥಮಾಂತವಾದ ಈ ಪದದ ಜೊತೆ 'ಆಮ್ನಾಯೇತೇ' ಎಂಬುದನ್ನು ಅಧ್ಯಾಹಾರ ಮಾಡಬೇಕು. ಆದ್ದರಿಂದ ನಿಮ್ಮ ಮತದಲ್ಲಿ 'ಆತ್ಮಾನಂ ಭೂತಾನಿ ಚ ಅಂತರಾಳೇ ವಿಜ್ಞಾನಮನಸೀ ಆಮ್ನಾಯೇತೇ' ಇಷ್ಟು ಪದಗಳನ್ನು ಅಧ್ಯಾಹಾರ ಮಾಡಬೇಕಾಗುತ್ತದೆ. ನಮ್ಮಲ್ಲಿ ಯಾವುದೇ ಒಂದು ಪದದ ಅಧ್ಯಾಹಾರವೂ ಕೂಡ ಇರುವುದಿಲ್ಲ.

**तथा क्रमस्यान्तरालार्थेनान्तराशब्देनैवोक्तया पुनः सूत्रे क्रमशब्दः । तथा क्रमशब्दस्य पूर्वसूत्रप्रकृतलयक्रमपरत्वत्यागेन सृष्टिक्रमपरत्वं तथा अस्याधिकरणस्य सृष्टिक्रमप्रकरणादुत्कर्षः ।**

ಮತ್ತೊಂದು ದೋಷ– ಅಂತರ ಎಂಬ ಶಬ್ದಕ್ಕೆ ಮಧ್ಯ ಎಂಬರ್ಥವನ್ನು ಸ್ವೀಕರಿಸಿದ್ದರಿಂದ ಕ್ರಮ ಎಂಬುದು ಅರ್ಥಾತ್ ಸಿದ್ಧವಾಗುತ್ತದೆ. ಆತ್ಮ ಹಾಗೂ ಭೂತಗಳ ನಡುವೆ ಮನಸ್ಸು ಹಾಗೂ ಇಂದ್ರಿಯಗಳು ಹುಟ್ಟುತ್ತವೆ ಎಂದು ಹೇಳಿದಾಗ ಕ್ರಮವು ಸ್ಪಷ್ಟವಾಗಿ ತಿಳಿಯುತ್ತದೆ. ಪುನಃ ಕ್ರಮಶಬ್ದವನ್ನು ಉಲ್ಲೇಖ ಮಾಡಿದ್ದು ವ್ಯರ್ಥ.

ಅದರಂತೆ ಕ್ರಮಶಬ್ದವು ಹಿಂದಿನ ಸೂತ್ರದಿಂದ ಪ್ರಕೃತವಾದ ಲಯಕ್ರಮವನ್ನೇ ಹೇಳುತ್ತದೆಂದು ನಾವು ಅರ್ಥ ಹೇಳುತ್ತೇವೆ. ಈ ಅರ್ಥವನ್ನು ನೀವು ಪರಿತ್ಯಾಗ ಮಾಡಿ ಸೃಷ್ಟಿಕ್ರಮಪರವೆಂದು ಅರ್ಥೈಸುವುದು ತಪ್ಪು. ಹೀಗೆ ಅರ್ಥ ಮಾಡಿದರೆ ಹಿಂದಿನ ಸೂತ್ರಕ್ಕೆ ವಿರುದ್ಧವಾಗುತ್ತದೆ.

ಅಂತರಾವಿಜ್ಞಾನಾಧಿಕರಣ (೨-೩-೯)

ಮತ್ತು 'ನವಿಯದಶ್ರುತೇಃ' ಇತ್ಯಾದ್ಯಧಿಕರಣಗಳನ್ನು ನಿರೂಪಣೆ ಮಾಡುವಾಗ ಸೃಷ್ಟಿಕ್ರಮಪ್ರಕರಣವು ಪ್ರಸಕ್ತವಾಗಿದೆ. ಈ ಅಧಿಕರಣಗಳ ಸಂದರ್ಭದಲ್ಲಿ ಸೃಷ್ಟಿಕ್ರಮಪ್ರಕರಣವು ಇರುವುದಿಲ್ಲ. ಒಂದುವೇಳೆ ಪ್ರಕೃತ ಅಂತರಾವಿಜ್ಞಾನಾಧಿಕರಣವು ಸೃಷ್ಟಿಕ್ರಮಪ್ರಕರಣವನ್ನೇ ಹೇಳುವುದಾದಲ್ಲಿ 'ನವಿದಶ್ರುತೇ' ಇತ್ಯಾದಿ ಸಂದರ್ಭದಲ್ಲಿ ಈ ಅಧಿಕರಣವನ್ನು ಉಲ್ಲೇಖ ಮಾಡದೇ ಇಲ್ಲಿ ಉಲ್ಲೇಖ ಮಾಡಿರುವುದು ಅಯುಕ್ತವಾಗುತ್ತದೆ.

**तथा सौत्राविशेषशब्दस्य भामत्यां क्लेशेनोक्तक्रमभङ्गपरत्वं च न युक्तम् ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् अन्तराविज्ञानाधिकरणं सम्पूर्णम् ।।९।।**

ಮತ್ತೊಂದು ದೋಷ – ಸೂತ್ರದಲ್ಲಿ ಅವಿಶೇಷಾತ್ ಎಂಬ ಪದವಿದೆ. ಈ ಶಬ್ದದಲ್ಲಿ ಪ್ರತಿಯೋಗಿಯಾದ ವಿಶೇಷ ಶಬ್ದಕ್ಕೆ ಭಾಮತಿಕಾರನು ಅತ್ಯಂತ ಕ್ಲೇಶದಿಂದ ಕ್ರಮಭಂಗ ಎಂಬರ್ಥವನ್ನು ಹೇಳಿರುತ್ತಾನೆ. ಇದೂ ಕೂಡ ಯುಕ್ತವಲ್ಲ.

ವಿವರಣೆ – ಸೂತ್ರದಲ್ಲಿ 'ಅವಿಶೇಷಶಬ್ದಸ್ಯ' ಎಂಬ ಪಾಠವನ್ನು ಗಮನಿಸಿದಾಗ 'ಅವಿಶೇಷಶಬ್ದಕ್ಕೆ ಕ್ರಮಭಂಗಪರತ್ವವನ್ನು ಭಾಮತಿಕಾರನು ಹೇಳಿದ್ದಾನೆಂಬ ಭ್ರಾಂತಿ ಬರುತ್ತದೆ. ಆದರೆ ಭಾಮತಿಕಾರನು ವಿಶೇಷ ಶಬ್ದಕ್ಕೆ ಕ್ರಮಭಂಗಪರತ್ವವನ್ನು ಹೇಳಿದ್ದಾನೆ ಹೊರತು ಅವಿಶೇಷಶಬ್ದಕ್ಕೆ ಹೇಳಿರುವುದಿಲ್ಲ. ಆದ್ದರಿಂದ ಗ್ರಂಥಕಾರರೇಕೆ ಇಲ್ಲಿ ಅವಿಶೇಷಶಬ್ದಸ್ಯ ಎಂಬ ಪದವನ್ನು ಪ್ರಯೋಗಿಸಿದ್ದಾರೆ?

ಈ ಪ್ರಶ್ನೆಗೆ ಎರಡು ರೀತಿಯಲ್ಲಿ ಉತ್ತರವನ್ನು ತಿಳಿಯಬಹುದು–

೧. ಕೆಲವು ಪುಸ್ತಕಗಳಲ್ಲಿ 'ಅವಿಶೇಷಶಬ್ದಸ್ಯ' ಎಂಬ ಪಾಠವೇ ಇರುವುದಿಲ್ಲ. 'ವಿಶೇಷಶಬ್ದಸ್ಯ' ಎಂಬ ಪಾಠವಿದೆ. ಆಗ ಯಾವುದೇ ಕ್ಲೇಶವೇ ಇಲ್ಲ.

೨. ಅವಿಶೇಷಶಬ್ದಸ್ಯ ಎಂಬ ಪಾಠವಿದ್ದಾಗಲೂ ಕೂಡ ಅವಿಶೇಷ ಶಬ್ದದಲ್ಲಿ ಪ್ರತಿಯೋಗಿಯಾದ ವಿಶೇಷ ಶಬ್ದಕ್ಕೆ ಎಂದು ಅರ್ಥೈಸಬೇಕು. ಆಗಲೂ ಕೂಡ ಯಾವುದೇ ದೋಷವಿಲ್ಲ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಅಂತರಾವಿಜ್ಞಾನಾಧಿಕರಣವು ಸಂಪೂರ್ಣವಾಯಿತು

**प्रकाशः –**

**अन्ये त्विति** ।। तन्मते ''अन्तर'' इत्येकं सूत्रमेकमधिकरणम् । चराचरेत्यधिकरणान्तरम् । तत्राद्यार्थं भाष्याद्युक्तमनूद्य निराह – **आत्मन इति** ।। **आम्नानक्रममात्रमिति** ।। न तूत्पत्तिक्रमः विवक्षित इत्यन्वयः । कुत इत्यतो मध्ये हेतुमाह – **अर्थेति** ।। कारणोत्पत्त्यनन्तरमेव कार्योदयादिति भावः । भूतादौ भूतानां कारणेऽहन्तत्व इत्यर्थः ।।

ಅದ್ವೈತಿಗಳು 'ಅಂತರಃ' ಎಂಬುದನ್ನು ಪ್ರತ್ಯೇಕ ಅಧಿಕರಣವೆನ್ನುತ್ತಾರೆ. 'ಚರಾಚರ' ಇತ್ಯಾದಿಯು ಮತ್ತೊಂದು ಅಧಿಕರಣವಾಗಿದೆ ಎನ್ನುತ್ತಾರೆ. ಮೊದಲನೆಯ ಅಧಿಕರಣದ ಅರ್ಥವನ್ನು ಶಂಕರಭಾಷ್ಯಾದಿಗಳಲ್ಲಿ ಹೇಳಿದಂತೆ ಅನುವಾದ ಮಾಡಿ ನಿರಾಕರಣೆ ಮಾಡಲು 'ಆತ್ಮನಃ' ಇತ್ಯಾದಿ ವಾಕ್ಯವು ಹೊರಟಿದೆ. 'ಆಮ್ನಾನ ಕ್ರಮಮಾತ್ರಂ' ಎಂಬಲ್ಲಿ ಉತ್ಪತ್ತಿ ಕ್ರಮವನ್ನು ವಿವಕ್ಷಿಸಿಲ್ಲ. ಕೇವಲ ಪಾಠದ ಕ್ರಮವನ್ನು ವಿವಕ್ಷಿಸಲಾಗಿದೆ ಎಂಬ ಅನ್ವಯವನ್ನು ತಿಳಿಯಬೇಕು. ಏಕೆ? ಎಂಬ ಪ್ರಶ್ನೆಗೆ ಮಧ್ಯದಲ್ಲಿ ಹೇತುವನ್ನು ಅರ್ಥ ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಕಾರಣವೂ ಉತ್ಪತ್ತಿಯಾದ ಮೇಲೆಯೇ ಕಾರ್ಯವು ಉತ್ಪನ್ನವಾಗುವುದರಿಂದ ಎಂಬುದು ಇದರ ಅಭಿಪ್ರಾಯ.

**प्रकाशः – लिङ्गैरिति** ।। मनस्तत्वादाकाशजन्मदर्शनं स्मार्तं लिङ्गम् । अहन्तत्वस्य भूतानां च मध्ये तन्मात्राणां शब्दादीनां लयदर्शनं श्रौतं लिङ्गम् । आदिपदोपात्रमेव लिङ्गान्तरम् । तैरित्यर्थः ।

ಪಂಚಭೂತಗಳಿಗೆ ಕಾರಣವಾದ ಅಹಂಕಾರತತ್ವದಲ್ಲಿ ಲಯವನ್ನು ಹೊಂದುವುದರಿಂದ ಉತ್ಪತ್ತಿಕ್ರಮಕ್ಕೆ ಭಂಗವಿಲ್ಲ ಎಂಬುದು ಅಭಿಪ್ರಾಯ. ಅದ್ವೈತ ಮತವನ್ನು ನಿರಾಕರಣೆ ಮಾಡುವಾಗ ಇತ್ಯಾದಿ 'ಲಿಂಗೈಃ' ಎಂದು ಹೇಳಿದ್ದಾರೆ. ಆ ಲಿಂಗಗಳು ಹೀಗಿವೆ – ಮನಸ್ತತ್ವದಿಂದ ಆಕಾಶವು ಹುಟ್ಟುತ್ತದೆಂದು ಹೇಳಿರುವುದು ಸ್ಮಾರ್ತಲಿಂಗ. ಅಹಂಕಾರತತ್ವ ಹಾಗೂ ಪಂಚಭೂತಗಳ ಮಧ್ಯದಲ್ಲಿ ಪಂಚತನ್ಮಾತ್ರಗಳು ಹಾಗೂ ಶಬ್ದಾದಿಗಳು ಲಯವನ್ನು ಹೊಂದುತ್ತವೆ ಎನ್ನುವುದು ಶ್ರೌತವಾದ ಲಿಂಗ. ಆದಿ ಪದದಿಂದ ಇನ್ನೂ ಅನೇಕ ಲಿಂಗಗಳನ್ನು ವಿವಕ್ಷಿಸಬೇಕು. ಇಂತಹ ಲಿಂಗಗಳಿಗೆ ಅದ್ವೈತ ಮತವು ವಿರುದ್ಧವಾಗುತ್ತದೆ ಎಂದರ್ಥ.

**प्रकाशः** – सूत्राक्षरास्वारस्यं चाह – **किञ्चेति** ।। ''सूत्रे आत्मानं भूतानि चेति योज्यम् । आत्मानं भूतानि चान्तरा । अन्तराले । आत्मनो भूतानां च मध्य इत्यर्थः । विज्ञानमनसी इन्द्रियमनस्तत्वे । आम्नायेते । क्रमेण तयोरपि सृष्टिरङ्गीकार्या । कुतः एतस्माज्जायते प्राणो मनस्सर्वेन्द्रियाणि च । खं वायुरिति तल्लिङ्गात् । अत स्तैत्तिरीयोक्तभूतोत्पत्तिक्रमभङ्ग इति चेन्न ।

ಅದ್ವೈತಿಗಳ ಸೂತ್ರಾಕ್ಷರದಲ್ಲಿರುವ ಅಸ್ವಾರಸ್ಯವನ್ನು ಕೂಡ 'ಕಿಂಚ' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ. ಸೂತ್ರದಲ್ಲಿ 'ಆತ್ಮಾನಂ ಭೂತಾನಿ ಚ' ಎಂಬುದನ್ನು ಯೋಜನ ಮಾಡಿಕೊಳ್ಳಬೇಕು. ಆತ್ಮ ಹಾಗೂ ಭೂತಗಳ ಅಂತರಃ= ಮಧ್ಯದಲ್ಲಿ ವಿಜ್ಞಾನಮನಸೀ= ಇಂದ್ರಿಯ ಹಾಗೂ ಮನಸ್ತತ್ತ್ವಗಳು ಹೇಳಲ್ಪಟ್ಟಿವೆ. ಆದ್ದರಿಂದ ಕ್ರಮವಾಗಿ ಇವುಗಳಿಗೂ ಕೂಡ ಸೃಷ್ಟಿಯನ್ನು ಅಂಗೀಕಾರ ಮಾಡಬೇಕು. ಯಾವ ಕಾರಣದಿಂದ ಅದ್ವೈತಿಗಳು ಆತ್ಮ ಹಾಗೂ ಭೂತಗಳ ಮಧ್ಯದಲ್ಲಿ ಇಂದ್ರಿಗಳನ್ನು ಹಾಗೂ ಮನಸ್ತತ್ತ್ವವನ್ನು ಹೇಳಿದ್ದಾರೋ ಆ ಕಾರಣದಿಂದ ಮಧ್ಯದಲ್ಲಿ ಇಂದ್ರಿಯ ಹಾಗೂ ಮನಸ್ಸುಗಳಿಗೂ ಸೃಷ್ಟಿಯನ್ನು ಹೇಳಬೇಕು. ಪಂಚಭೂತಗಳ ಸೃಷ್ಟಿಯ ಮೊದಲೇ ಇಂದ್ರಿಯಗಳ ಸೃಷ್ಟಿಯು ಆಗುತ್ತದೆ ಎಂದು ಕ್ರಮವನ್ನು ಹೇಳಬೇಕು. ಆದ್ದರಿಂದ ಶ್ರುತಿಕ್ರಮಕ್ಕೆ ಅನುಗುಣವಾಗಿಯೇ ಸೃಷ್ಟಿ ಕ್ರಮವನ್ನು ತಿಳಿಯಬೇಕು. ಆದ್ದರಿಂದ ತೈತ್ತಿರೀಯ ಶ್ರುತಿಯಲ್ಲಿ ಹೇಳಲ್ಪಟ್ಟ ಭೂತೋತ್ಪತ್ತಿಕ್ರಮವು ಭಂಗವಾಯಿತು. ಇಷ್ಟು ಆಕ್ಷೇಪ.

**प्रकाशः – अविशेषात् ।** प्रथमं प्राणादिकं जायते पश्चात्त्वादिकमित्याथर्वणे विशेषाश्रवणात्'' इति भाष्येऽविशेषादित्यस्यार्थ उक्तः । भामत्यां तु ''विशिष्यते भिद्यते भज्यत इति यावदिति विशेषो भङ्गः । अविशेषात् । उत्पत्तिक्रमभङ्गाभावात्'' इत्यर्थ उक्तः । तत्र सर्वत्राप्यस्वारस्यमाह – **आथर्वण इति ।।**

ಸಿದ್ಧಾಂತ – ವಿಪ್ರತಿಪನ್ನವಾದ ಅಥರ್ವಣಶ್ರುತಿಯಲ್ಲಿ ಪ್ರಾಣ, ಮನಸ್ಸು, ಇಂದ್ರಿಯ, ಆಕಾಶ, ವಾಯು ಇವುಗಳು ಉತ್ಪನ್ನವಾಗುತ್ತವೆಂದು ಯಾವ ಪದಾರ್ಥಗಳು ಉತ್ಪನ್ನವಾಗುತ್ತವೋ ಅವುಗಳನ್ನು ಸಂಗ್ರಹಿಸಿದ್ದಾರೆ. ಹೊರತು ಇಂದ್ರಿಯ ಮನಸ್ಸುಗಳು ಹುಟ್ಟಿದ ಅನಂತರದಲ್ಲಿ ಆಕಾಶವು ಹುಟ್ಟುತ್ತದೆ ಎಂದು ವಿಶೇಷವಾಗಿ ಅಥರ್ವಣ ಶ್ರುತಿಯು ಹೇಳುತ್ತಿಲ್ಲ. ಆದ್ದರಿಂದ ಉತ್ಪತ್ತಿ ಕ್ರಮವು ವಿವಕ್ಷಿತವಲ್ಲ ಎಂಬುದಾಗಿ ಭಾಷ್ಯದಲ್ಲಿ ಅವಿಶೇಷಾತ್ ಎಂಬ ಸೂತ್ರದಲ್ಲಿರುವ ಪದಕ್ಕೆ ವ್ಯಾಖ್ಯಾನ ಮಾಡಿದ್ದಾರೆ. ಆದರೆ ಭಾಮತಿಯಲ್ಲಿ ಅವಿಶೇಷಾತ್ ಎಂಬ ಪದಕ್ಕೆ ಮಾತ್ರ ಬೇರೆ ಅರ್ಥವನ್ನು ಹೇಳಲಾಗಿದೆ– 'ವಿಶಿಷ್ಯತೇ ಭಿದ್ಯತೇ ಭಜ್ಯತ ಇತಿ ವಿಶೇಷಃ' ವಿಶಿಷ್ಯತೇ ಎಂದರ್ಥ, 'ಭಿದ್ಯತೇ' ಎಂದರೆ, 'ಭಿದ್ಯತೇ' ಎಂದರೆ 'ಭಜ್ಯತೇ' ಎಂದರ್ಥ. ಆದ್ದರಿಂದ 'ವಿಶಿಷ್ಯತೇ' ಎಂಬ ಪದಕ್ಕೆ ಕ್ರಮಭಂಗ ಎಂದರ್ಥ. ಅವಿಶೇಷ ಪದಕ್ಕೆ ಕ್ರಮಭಂಗವಿಲ್ಲ ಎಂದರ್ಥ. ಆಥರ್ವಣದಲ್ಲಿ ಹೇಳಲ್ಪಟ್ಟ ಉತ್ಪತ್ತಿ ಕ್ರಮಕ್ಕೆ ಯಾವುದೇ ರೀತಿಯ ಭಂಗವಿಲ್ಲ. ಏಕೆಂದರೆ ಆಥರ್ವಣದಲ್ಲಿ ಇಂದ್ರಿಯಗಳ ಅನಂತರವೇ ಆಕಾಶಾದಿಗಳ ಜನ್ಮವಾಗುತ್ತದೆ ಎಂದು ಹೇಳಿರುವುದಿಲ್ಲ. ಈ ಎಲ್ಲಾ ಅರ್ಥಗಳಲ್ಲೂ ಕೂಡ ಅಸ್ವಾರಸ್ಯವನ್ನು ಆಥರ್ವಣ ಎಂಬುದರಿಂದ ಹೇಳುತ್ತಿದ್ದಾರೆ.

**प्रकाशः –** उपादानं न युक्तमित्यन्वयः । विज्ञानशब्देनैव योगेन कथञ्चित्प्रामाण्यस्यापि ग्रहणं भविष्यतीत्यतो योग एवायमयुक्तोऽस्य रूढत्वादित्याह **– तथा विज्ञानतत्वमिति ।।**

ಉಪಾದಾನವು ಯುಕ್ತವಾಗುವುದಿಲ್ಲ ಎಂದು ಇಲ್ಲಿ ಅನ್ವಯವನ್ನು ತಿಳಿಯಬೇಕು. ಅದ್ವೈತಿಗಳಾದ ನೀವು ವಿಜ್ಞಾನ ಶಬ್ದದಿಂದ ಇಂದ್ರಿಯಗಳನ್ನು ವಿವಕ್ಷಿಸಿ ಮನಃ ಪದದಿಂದ ಮನಸ್ಸನ್ನೂ ಕೂಡ ವಿವಕ್ಷಿಸಿದಿರಿ. ಆದರೆ

ಅಲ್ಲೇ ಶ್ರುತವಾದ ಪ್ರಾಣ ಶಬ್ದಾರ್ಥವನ್ನು ವಿವಕ್ಷಿಸಿಯೇ ಇಲ್ಲ. ಈ ಆಕ್ಷೇಪಕ್ಕೆ ವಿಜ್ಞಾನ ಶಬ್ದದಿಂದಲೇ ಪ್ರಾಣವನ್ನೂ ಕೂಡ ಯೋಗಾರ್ಥದಿಂದ ವಿವಕ್ಷಿಸುತ್ತೇವೆ ಎಂದು ಅದ್ವೈತಿಗಳು ಉತ್ತರಿಸಿದರೆ, ಪ್ರಾಣಶಬ್ದಾರ್ಥದಲ್ಲಿ ಯೋಗವೇ ಅಯುಕ್ತವಾಗಿದೆ. ಏಕೆಂದರೆ ಇದು ರೂಢವಾದ ಪದವೆಂದು 'ತಥಾ ವಿಜ್ಞಾನತತ್ವಂ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. ವಿಜ್ಞಾನ ಶಬ್ದದಿಂದ ಯೋಗಾರ್ಥವನ್ನು ಸ್ವೀಕರಿಸಿ ಪ್ರಾಣವನ್ನು ವಿವಕ್ಷಿಸುವುದಾದರೆ ಅದೇ ವಿಜ್ಞಾನ ಶಬ್ದದಿಂದ ಮನಸ್ಸನ್ನೂ ಕೂಡ ಯೋಗದಿಂದ ಸ್ವೀಕರಿಸಲು ಬರುತ್ತದೆ. ಹೀಗಿರುವಾಗ ಪುನಃ ಮನಃಪದವನ್ನು ಶ್ರುತಿಯಲ್ಲಿ ನೀಡಿದ್ದು ವ್ಯರ್ಥವಾಗುತ್ತದೆ.

**ಪ್ರಕಾಶಃ** – तथाशब्दस्समुच्चये । इत्यादिषु भाष्योक्तस्मृत्यादिषु । ''विज्ञायतेऽनेनेति व्युत्पत्त्या विज्ञानशब्देनेन्द्रियाणि बुद्धिं च ब्रूम'' इति भामत्युक्तमित्यर्थः ।। **मनःशब्द इति** ।। युक्त इत्यन्वयः ।। सौत्राविशेषशब्दस्येति।। अविशेषादित्यत्र प्रतियोगिवाचिविशेषशब्दस्येत्यर्थः । सौत्रविशेषेत्येव वा पाठः।।

ತಥಾ ಶಬ್ದವು ಸಮುಚ್ಚಯ ಎಂಬ ಅರ್ಥದಲ್ಲಿದೆ. 'ಇತ್ಯಾದಿಷು' ಎಂದರೆ ಶ್ರೀಮದಾಚಾರ್ಯರು ಭಾಷ್ಯದಲ್ಲಿ ಉಲ್ಲೇಖಿಸಿದ ಮಹದಸ್ಯವಿಜ್ಞಾನಂ ಇವೇ ಮೊದಲಾದ ಶ್ರುತಿ, ಸ್ಮೃತಿ ವಾಕ್ಯಗಳಲ್ಲಿ ಎಂದರ್ಥ. ಇಲ್ಲಿರುವ ವಿಜ್ಞಾನ ಶಬ್ದವು 'ವಿಜ್ಞಾಯತೇ ಅನೇನ' ಎಂಬ ವ್ಯುತ್ಪತ್ತಿಯನ್ನು ಸ್ವೀಕರಿಸಿ ಇಂದ್ರಿಯಗಳನ್ನು ಬುದ್ಧಿಯನ್ನು ವಿವಕ್ಷಿಸಬೇಕೆಂದು ಭಾಮತಿಯಲ್ಲಿ ಹೇಳಲಾಗಿದೆ ಎಂದರ್ಥ. 'ಮನಃಶಬ್ದಃ' ಎಂಬಲ್ಲಿ 'ನ ಯುಕ್ತಃ' ಎಂದು ಅಥವಾ 'ಅಯುಕ್ತಃ' ಎಂದು ಯಥಾಯೋಗ್ಯವಾಗಿ ಅನ್ವಯವನ್ನು ಮಾಡಬೇಕು.

ವಿವರಣೆ – ಗ್ರಂಥದಲ್ಲಿ 'ಶ್ರೌತವಿಶೇಷಶಬ್ದಸ್ಯ' ಎಂಬಲ್ಲಿರುವ ವಿಶೇಷ ಶಬ್ದಕ್ಕೆ ಕ್ರಮಭಂಗ ಎಂದರ್ಥ, ಅವಿಶೇಷ ಶಬ್ದಕ್ಕೆ ಕ್ರಮಭಂಗವಿಲ್ಲವೆಂದರ್ಥವನ್ನು ವಿವಕ್ಷಿಸಿದ್ದಾರೆ. ಹಾಗಾದರೆ ಅವಿಶೇಷ ಶಬ್ದಸ್ಯ 'ಕ್ರಮಭಂಗಾಭಾವಪರತ್ವಂ' ಎಂದು ಹೇಳಬೇಕಿತ್ತು. ಅಥವಾ 'ವಿಶೇಷಶಬ್ದಸ್ಯ ಕ್ರಮಭಂಗಪರತ್ವಂ' ಎಂದು ಹೇಳಬೇಕಿತ್ತು. ಹೀಗೆ ಹೇಳದೇ 'ಶ್ರೌತವಿಶೇಷಶಬ್ದಸ್ಯ ಕ್ರಮಭಂಗತ್ವಂ ನ ಯುಕ್ತಂ' ಎಂದೇಕೆ ಹೇಳಿದರು? ಎಂದರೆ ಎರಡು ಪರಿಹಾರವನ್ನು ಇಲ್ಲಿ ತಿಳಿಯಬೇಕು. ಕೆಲವು ಪಾಠದಲ್ಲಿ ಶ್ರೌತವಿಶೇಷಶಬ್ದಸ್ಯ ಎಂದೇ ಕಾಣಿಸುತ್ತದೆ. ಆಗ ವಿಶೇಷಶಬ್ದಕ್ಕೆ ಕ್ರಮಭಂಗಪರತ್ವವು ಉತ್ತರವಾಗುವುದಿಲ್ಲವೆಂಬುದು ಸಮಂಜಸವಾಗುತ್ತದೆ. ಅವಿಶೇಷಶಬ್ದಸ್ಯ ಎಂದು ಪಾಠವಿರುವುದಾದಲ್ಲಿ ಅವಿಶೇಷಶಬ್ದಾಂತರ್ಗತವಾದ ವಿಶೇಷ ಶಬ್ದಕ್ಕೆ ಎಂದರ್ಥ. ಏಕೆಂದರೆ ಅವಿಶೇಷಾತ್ ಎಂಬುದು ಸಮಸ್ತ ಪದವಾಗಿದೆ. ಇದರಲ್ಲಿ ಏಕದೇಶವಾದ ವಿಶೇಷ ಎಂಬುದಕ್ಕೆ ಕ್ರಮಭಂಗಪರತ್ವವು ಯುಕ್ತವಾಗುವುದಿಲ್ಲ ಎಂದು ತಿಳಿಯಬೇಕು. ಆದ್ದರಿಂದ 'ಅವಿಶೇಷಾತ್' ಎಂಬಲ್ಲಿ ಪ್ರತಿಯೋಗಿವಾಚಿ ವಿಶೇಷ ಶಬ್ದಕ್ಕೆ ಎಂದರ್ಥವನ್ನು ಮಾಡಬೇಕು.

**ಪ್ರಕಾಶಃ** – **क्लेशेनेति** ।। ''विशिष्यते भिद्यते भज्यत इति यावत्'' इति क्लेशेनेत्यर्थः ।।

ಕ್ಲೇಶದಿಂದ ವ್ಯಾಖ್ಯಾನ ಮಾಡುವುದು ತಪ್ಪು ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಏಕೆಂದರೆ ವಿಶೇಷ ಶಬ್ದಕ್ಕೆ ವಿಶಿಷ್ಯತೇ ಭಿದ್ಯತೇ ಭಜ್ಯತೇ ಇತ್ಯಾದಿ ವ್ಯುತ್ಪತ್ತಿಯಿಂದ ಕ್ರಮಭಂಗಪರತ್ವವನ್ನು ವ್ಯಾಖ್ಯಾನ ಮಾಡುವುದು ತಪ್ಪು ಎಂದು ವ್ಯಾಖ್ಯಾನ ಮಾಡುವುದು ಕ್ಲೇಶಕರವಾಗಿದೆ ಆದ್ದರಿಂದ ಎಂದರ್ಥ.

ಅಂತರಾವಿಜ್ಞಾನಾಧಿಕರಣ (೨-೩-೯)

ಅದ್ವೈತಿಗಳ ಸೂತ್ರಾಕ್ಷರದಲ್ಲಿರುವ ಅಸ್ವಾರಸ್ಯವನ್ನು ಕೂಡ 'ಕಿಂಚ' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ. ಸೂತ್ರದಲ್ಲಿ 'ಆತ್ಮಾನಂ ಭೂತಾನಿ ಚ' ಎಂಬುದನ್ನು ಯೋಜನ ಮಾಡಿಕೊಳ್ಳಬೇಕು. ಆತ್ಮ ಹಾಗೂ ಭೂತಗಳ ಅಂತರಃ ಮಧ್ಯದಲ್ಲಿ ವಿಜ್ಞಾನಮನಸೀ ಇಂದ್ರಿಯ ಹಾಗೂ ಮನಸ್ತತ್ತ್ವಗಳು ಹೇಳಲ್ಪಟ್ಟವೆ. ಆದ್ದರಿಂದ ಕ್ರಮವಾಗಿ ಇವುಗಳಿಗೂ ಕೂಡ ಸೃಷ್ಟಿಯನ್ನು ಅಂಗೀಕಾರ ಮಾಡಬೇಕು. ಯಾವ ಕಾರಣದಿಂದ ಅದ್ವೈತಿಗಳು ಆತ್ಮ ಹಾಗೂ ಭೂತಗಳ ಮಧ್ಯದಲ್ಲಿ ಇಂದ್ರಿಗಳನ್ನು ಹಾಗೂ ಮನಸ್ತತ್ತ್ವವನ್ನು ಹೇಳಿದ್ದಾರೋ ಆ ಕಾರಣದಿಂದ ಮಧ್ಯದಲ್ಲಿ ಇಂದ್ರಿಯ ಹಾಗೂ ಮನಸ್ಸುಗಳಿಗೂ ಸೃಷ್ಟಿಯನ್ನು ಹೇಳಬೇಕು. ಪಂಚಭೂತಗಳ ಸೃಷ್ಟಿಯ ಮೊದಲೇ ಇಂದ್ರಿಯಗಳ ಸೃಷ್ಟಿಯು ಆಗುತ್ತದೆ ಎಂದು ಕ್ರಮವನ್ನು ಹೇಳಬೇಕು. ಆದ್ದರಿಂದ ಶ್ರುತಿಕ್ರಮಕ್ಕೆ ಅನುಗುಣವಾಗಿಯೇ ಸೃಷ್ಟಿ ಕ್ರಮವನ್ನು ತಿಳಿಯಬೇಕು. ಆದ್ದರಿಂದ ತೈತ್ತಿರೀಯ ಶ್ರುತಿಯಲ್ಲಿ ಹೇಳಲ್ಪಟ್ಟ ಭೂತೋತ್ಪತ್ತಿಕ್ರಮವು ಭಂಗವಾಯಿತು. ಇಷ್ಟು ಆಕ್ಷೇಪ.

**प्रकाशः – अविशेषात् । प्रथमं प्राणादिकं जायते पश्चात्त्वादिकमित्याथर्वणे विशेषाश्रवणात्'' इति भाष्येऽविशेषादित्यस्यार्थ उक्तः । भामत्यां तु ''विशिष्यते भिद्यते भज्यत इति यावदिति विशेषो भङ्गः । अविशेषात् । उत्पत्तिक्रमभङ्गाभावात्'' इत्यर्थ उक्तः । तत्र सर्वत्राप्यस्वारस्यमाह – आथर्वण इति ।।**

ಸಿದ್ಧಾಂತ – ವಿಪ್ರತಿಪನ್ನವಾದ ಅಥರ್ವಣಶ್ರುತಿಯಲ್ಲಿ ಪ್ರಾಣ, ಮನಸ್ಸು, ಇಂದ್ರಿಯ, ಆಕಾಶ, ವಾಯು ಇವುಗಳು ಉತ್ಪನ್ನವಾಗುತ್ತವೆಂದು ಯಾವ ಪದಾರ್ಥಗಳು ಉತ್ಪನ್ನವಾಗುತ್ತವೋ ಅವುಗಳನ್ನು ಸಂಗ್ರಹಿಸಿದ್ದಾರೆ. ಹೊರತು ಇಂದ್ರಿಯ ಮನಸ್ಸುಗಳು ಹುಟ್ಟಿದ ಅನಂತರದಲ್ಲಿ ಆಕಾಶವು ಹುಟ್ಟುತ್ತದೆ ಎಂದು ವಿಶೇಷವಾಗಿ ಅಥರ್ವಣ ಶ್ರುತಿಯು ಹೇಳುತ್ತಿಲ್ಲ. ಆದ್ದರಿಂದ ಉತ್ಪತ್ತಿ ಕ್ರಮವು ವಿವಕ್ಷಿತವಲ್ಲ ಎಂಬುದಾಗಿ ಭಾಷ್ಯದಲ್ಲಿ ಅವಿಶೇಷಾತ್ ಎಂಬ ಸೂತ್ರದಲ್ಲಿರುವ ಪದಕ್ಕೆ ವ್ಯಾಖ್ಯಾನ ಮಾಡಿದ್ದಾರೆ. ಆದರೆ ಭಾಮತಿಯಲ್ಲಿ ಅವಿಶೇಷಾತ್ ಎಂಬ ಪದಕ್ಕೆ ಮಾತ್ರ ಬೇರೆ ಅರ್ಥವನ್ನು ಹೇಳಲಾಗಿದೆ– 'ವಿಶಿಷ್ಯತೇ ಭಿದ್ಯತೇ ಭಜ್ಯತ ಇತಿ ವಿಶೇಷಃ' ವಿಶಿಷ್ಯತೇ ಎಂದರ್ಥ, 'ಭಿದ್ಯತೇ' ಎಂದರೆ, 'ಭಿದ್ಯತೇ' ಎಂದರೆ 'ಭಜ್ಯತೇ' ಎಂದರ್ಥ. ಆದ್ದರಿಂದ 'ವಿಶಿಷ್ಯತೇ' ಎಂಬ ಪದಕ್ಕೆ ಕ್ರಮಭಂಗ ಎಂದರ್ಥ. ಅವಿಶೇಷ ಪದಕ್ಕೆ ಕ್ರಮಭಂಗವಿಲ್ಲ ಎಂದರ್ಥ. ಅಥರ್ವಣದಲ್ಲಿ ಹೇಳಲ್ಪಟ್ಟ ಉತ್ಪತ್ತಿ ಕ್ರಮಕ್ಕೆ ಯಾವುದೇ ರೀತಿಯ ಭಂಗವಿಲ್ಲ. ಏಕೆಂದರೆ ಅಥರ್ವಣದಲ್ಲಿ ಇಂದ್ರಿಯಗಳ ಅನಂತರವೇ ಆಕಾಶಾದಿಗಳ ಜನ್ಮವಾಗುತ್ತದೆ ಎಂದು ಹೇಳಿರುವುದಿಲ್ಲ. ಈ ಎಲ್ಲಾ ಅರ್ಥಗಳಲ್ಲೂ ಕೂಡ ಅಸ್ವಾರಸ್ಯವನ್ನು ಆಥರ್ವಣ ಎಂಬುದರಿಂದ ಹೇಳುತ್ತಿದ್ದಾರೆ.

**प्रकाशः – उपादानं न युक्तमित्यन्वयः । विज्ञानशब्देनैव योगेन कथञ्चित्प्रामाण्यस्यापि ग्रहणं भविष्यतीत्यतो योग एवायमयुक्तोऽस्य रूढत्वादित्याह – तथा विज्ञानतत्वमिति ।।**

ಉಪಾದಾನವು ಯುಕ್ತವಾಗುವುದಿಲ್ಲ ಎಂದು ಇಲ್ಲಿ ಅನ್ವಯವನ್ನು ತಿಳಿಯಬೇಕು. ಅದ್ವೈತಿಗಳಾದ ನೀವು ವಿಜ್ಞಾನ ಶಬ್ದದಿಂದ ಇಂದ್ರಿಯಗಳನ್ನು ವಿವಕ್ಷಿಸಿ ಮನಃ ಪದದಿಂದ ಮನಸ್ಸನ್ನೂ ಕೂಡ ವಿವಕ್ಷಿಸಿದಿರಿ. ಆದರೆ

ಅಲ್ಲೇ ಶ್ರುತವಾದ ಪ್ರಾಣ ಶಬ್ದಾರ್ಥವನ್ನು ವಿವಕ್ಷಿಸಿಯೇ ಇಲ್ಲ. ಈ ಆಕ್ಷೇಪಕ್ಕೆ ವಿಜ್ಞಾನ ಶಬ್ದದಿಂದಲೇ ಪ್ರಾಣವನ್ನೂ ಕೂಡ ಯೋಗಾರ್ಥದಿಂದ ವಿವಕ್ಷಿಸುತ್ತೇವೆ ಎಂದು ಅದ್ವೈತಿಗಳು ಉತ್ತರಿಸಿದರೆ, ಪ್ರಾಣಶಬ್ದಾರ್ಥದಲ್ಲಿ ಯೋಗವೇ ಅಯುಕ್ತವಾಗಿದೆ. ಏಕೆಂದರೆ ಇದು ರೂಢವಾದ ಪದವೆಂದು 'ತಥಾ ವಿಜ್ಞಾನತತ್ವಂ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. ವಿಜ್ಞಾನ ಶಬ್ದದಿಂದ ಯೋಗಾರ್ಥವನ್ನು ಸ್ವೀಕರಿಸಿ ಪ್ರಾಣವನ್ನು ವಿವಕ್ಷಿಸುವುದಾದರೆ ಅದೇ ವಿಜ್ಞಾನ ಶಬ್ದದಿಂದ ಮನಸ್ಸನ್ನೂ ಕೂಡ ಯೋಗದಿಂದ ಸ್ವೀಕರಿಸಲು ಬರುತ್ತದೆ. ಹೀಗಿರುವಾಗ ಪುನಃ ಮನಃಪದವನ್ನು ಶ್ರುತಿಯಲ್ಲಿ ನೀಡಿದ್ದು ವ್ಯರ್ಥವಾಗುತ್ತದೆ.

**ಪ್ರಕಾಶಃ** – तथाशब्दस्समुच्चये । इत्यादिषु भाष्योक्तस्मृत्यादिषु । ''विज्ञायतेऽनेनेति व्युत्पत्त्या विज्ञानशब्देनेन्द्रियाणि बुद्धिं च ब्रूम'' इति भामत्युक्तमित्यर्थः ।। **मनःशब्द इति** ।। युक्त इत्यन्वयः ।। सौत्राविशेषशब्दस्येति।। अविशेषादित्यत्र प्रतियोगिवाचिविशेषशब्दस्येत्यर्थः । सौत्रविशेषेत्येव वा पाठः।।

ತಥಾ ಶಬ್ದವು ಸಮುಚ್ಚಯ ಎಂಬ ಅರ್ಥದಲ್ಲಿದೆ. 'ಇತ್ಯಾದಿಷು' ಎಂದರೆ ಶ್ರೀಮದಾಚಾರ್ಯರು ಭಾಷ್ಯದಲ್ಲಿ ಉಲ್ಲೇಖಿಸಿದ ಮಹದಸ್ಯವಿಜ್ಞಾನಂ ಇವೇ ಮೊದಲಾದ ಶ್ರುತಿ, ಸ್ಮೃತಿ ವಾಕ್ಯಗಳಲ್ಲಿ ಎಂದರ್ಥ. ಇಲ್ಲಿರುವ ವಿಜ್ಞಾನ ಶಬ್ದವು 'ವಿಜ್ಞಾಯತೇ ಅನೇನ' ಎಂಬ ವ್ಯುತ್ಪತ್ತಿಯನ್ನು ಸ್ವೀಕರಿಸಿ ಇಂದ್ರಿಯಗಳನ್ನು ಬುದ್ಧಿಯನ್ನು ವಿವಕ್ಷಿಸಬೇಕೆಂದು ಭಾಮತಿಯಲ್ಲಿ ಹೇಳಲಾಗಿದೆ ಎಂದರ್ಥ. 'ಮನಃಶಬ್ದಃ' ಎಂಬಲ್ಲಿ 'ನ ಯುಕ್ತಃ' ಎಂದು ಅಥವಾ 'ಅಯುಕ್ತಃ' ಎಂದು ಯಥಾಯೋಗ್ಯವಾಗಿ ಅನ್ವಯವನ್ನು ಮಾಡಬೇಕು.

**ವಿವರಣೆ** – ಗ್ರಂಥದಲ್ಲಿ 'ಶ್ರೌತವಿಶೇಷಶಬ್ದಸ್ಯ' ಎಂಬಲ್ಲಿರುವ ವಿಶೇಷ ಶಬ್ದಕ್ಕೆ ಕ್ರಮಭಂಗ ಎಂದರ್ಥ, ಅವಿಶೇಷ ಶಬ್ದಕ್ಕೆ ಕ್ರಮಭಂಗವಿಲ್ಲವೆಂದರ್ಥವನ್ನು ವಿವಕ್ಷಿಸಿದ್ದಾರೆ. ಹಾಗಾದರೆ ಅವಿಶೇಷ ಶಬ್ದಸ್ಯ 'ಕ್ರಮಭಂಗಾಭಾವಪರತ್ವಂ' ಎಂದು ಹೇಳಬೇಕಿತ್ತು. ಅಥವಾ 'ವಿಶೇಷಶಬ್ದಸ್ಯ ಕ್ರಮಭಂಗಪರತ್ವಂ' ಎಂದು ಹೇಳಬೇಕಿತ್ತು. ಹೀಗೆ ಹೇಳದೇ 'ಶ್ರೌತವಿಶೇಷಶಬ್ದಸ್ಯ ಕ್ರಮಭಂಗತ್ವಂ ನ ಯುಕ್ತಂ' ಎಂದೇಕೆ ಹೇಳಿದರು? ಎಂದರೆ ಎರಡು ಪರಿಹಾರವನ್ನು ಇಲ್ಲಿ ತಿಳಿಯಬೇಕು. ಕೆಲವು ಪಾಠದಲ್ಲಿ ಶ್ರೌತವಿಶೇಷಶಬ್ದಸ್ಯ ಎಂದೇ ಕಾಣಸುತ್ತದೆ. ಆಗ ವಿಶೇಷಶಬ್ದಕ್ಕೆ ಕ್ರಮಭಂಗ ಪರತ್ವವು ಉತ್ತರವಾಗುವುದಿಲ್ಲವೆಂಬುದು ಸಮಂಜಸವಾಗುತ್ತದೆ. ಅವಿಶೇಷಶಬ್ದಸ್ಯ ಎಂದು ಪಾಠವಿರುವುದಾದಲ್ಲಿ ಅವಿಶೇಷಶಬ್ದಾಂತರ್ಗತವಾದ ವಿಶೇಷ ಶಬ್ದಕ್ಕೆ ಎಂದರ್ಥ. ಏಕೆಂದರೆ ಅವಿಶೇಷಾತ್ ಎಂಬುದು ಸಮಸ್ತ ಪದವಾಗಿದೆ. ಇದರಲ್ಲಿ ಏಕದೇಶವಾದ ವಿಶೇಷ ಎಂಬುದಕ್ಕೆ ಕ್ರಮಭಂಗಪರತ್ವವು ಯುಕ್ತವಾಗುವುದಿಲ್ಲ ಎಂದು ತಿಳಿಯಬೇಕು. ಆದ್ದರಿಂದ 'ಅವಿಶೇಷಾತ್' ಎಂಬಲ್ಲಿ ಪ್ರತಿಯೋಗಿವಾಚಿ ವಿಶೇಷ ಶಬ್ದಕ್ಕೆ ಎಂದರ್ಥವನ್ನು ಮಾಡಬೇಕು.

**ಪ್ರಕಾಶಃ** – **क्लेशेनेति** ।। ''विशिष्यते भिद्यते भज्यत इति यावत्'' इति क्लेशेनेत्यर्थः ।।

ಕ್ಲೇಶದಿಂದ ವ್ಯಾಖ್ಯಾನ ಮಾಡುವುದು ತಪ್ಪು ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಏಕೆಂದರೆ ವಿಶೇಷ ಶಬ್ದಕ್ಕೆ ವಿಶಿಷ್ಯತೇ ಭಿದ್ಯತೇ ಭಜ್ಯತೇ ಇತ್ಯಾದಿ ವ್ಯುತ್ಪತ್ತಿಯಿಂದ ಕ್ರಮಭಂಗಪರತ್ವವನ್ನು ವ್ಯಾಖ್ಯಾನ ಮಾಡುವುದು ತಪ್ಪು ಎಂದು ವ್ಯಾಖ್ಯಾನ ಮಾಡುವುದು ಕ್ಲೇಶಕರವಾಗಿದೆ ಆದ್ದರಿಂದ ಎಂದರ್ಥ.

ಅಂತರಾವಿಜ್ಞಾನಾಧಿಕರಣ (೨-೩-೯)

ಸಿದ್ಧಾಂತ ಮಾಡುವಾಗ ತೈತ್ತಿರೀಯದಲ್ಲಿ ಯಾವ ಭೂತೋತ್ಪತ್ತಿ ಕ್ರಮವನ್ನು ಹೇಳಿದ್ದಾರೋ ಆ ಕ್ರಮಕ್ಕೆ ಭಂಗವಿಲ್ಲ ಎಂಬುದಾಗಿ ವ್ಯಾಖ್ಯಾನ ಮಾಡುವುದು ಕೂಡುವುದಿಲ್ಲ ಎಂಬುದು ಕ್ರಮಭಂಗ ಎಂಬುದರ ಅಭಿಪ್ರಾಯ.

**प्रकाशः – क्रमभङ्गेति** ।। भूतोत्पत्तिक्रमभङ्गपरत्वमित्यर्थः । एतेन ''भूतप्राणयोरन्तराले विज्ञानमनसी विज्ञानसाधनत्वेन विज्ञानशब्दितेन्द्रियमनसी अपि क्रमेणोत्पद्येते । कुतः । तल्लिङ्गात् । तैत्तिरीयश्रुतिप्रसिद्धक्रमकसादिभूतैस्सह पाठरूपाल्लिङ्गादिति चेन्न । एतस्माज्जायत इत्यनेन प्राणादिपृथिव्यन्तानां सर्वेषामव्यवधानेन ब्रह्मजत्वप्रतिपादनस्याविशिष्टत्वात् स एव विधेयो न क्रम'' इति केषाञ्चित्सूत्रार्थोऽपि प्रत्युक्तः । अनेकाध्याहारादिदोषात् ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते**
**चन्द्रिकाप्रकाशे अन्तराविज्ञानाधिकरणं सम्पूर्णम् ।।९।।**

ಕೆಲವರು ಅಧಿಕರಣರಚನೆಯನ್ನು ಹೀಗೆ ಮಾಡುತ್ತಾರೆ– ಇವರು ಅದ್ವೈತಿಗಳಂತೆ ಆತ್ಮಾನಂ ಭೂತಾನಿ ಚ ಅಂತರಾಳೇ ಎಂದು ವ್ಯಾಖ್ಯಾನವನ್ನು ಮಾಡಿರುವುದಿಲ್ಲ. ಕಿಂತು 'ಪ್ರಾಣಂ ಭೂತಾನಿ ಚ ಅಂತರಾಳೇ' ಎಂದು ವ್ಯಾಖ್ಯಾನ ಮಾಡುತ್ತಾರೆ. ಪ್ರಾಣನಿಗೂ ಹಾಗೂ ಭೂತಗಳಿಗೂ ಮಧ್ಯದಲ್ಲಿ ಮನಸ್ಸು ಹಾಗೂ ವಿಜ್ಞಾನಗಳನ್ನು ಹೇಳಿದ್ದಾರೆ. ಇವುಗಳು ಕ್ರಮವಾಗಿ ಉತ್ಪನ್ನವಾಗುತ್ತವೆ. ಏಕೆಂದರೆ ಮುಂದೆ ತಲ್ಲಿಂಗಾತ್= ಖಂ ವಾಯುಃ ಜ್ಯೋತಿಃ ಆಪಃ ವಿಶ್ವಸ್ಯ ಧಾರಿಣೀ ಎಂಬುದಾಗಿ ಉತ್ಪತ್ತಿ ಕ್ರಮವು ವಿವಕ್ಷಿತವಾಗಿದೆ. ಆದರಂತೆ ಇಲ್ಲೂ ಕೂಡ ಮೊದಲು ಪ್ರಾಣಗಳಿಗೆ ಉತ್ಪತ್ತಿ, ಅನಂತರ ಇಂದ್ರಿಯ ಹಾಗೂ ಮನಸ್ಸುಗಳಿಗೆ ಉತ್ಪತ್ತಿಯನ್ನೇ ಹೇಳಬೇಕು. ಇಷ್ಟು ಅಧಿಕರಣ ಪೂರ್ವಪಕ್ಷ.

ಈ ಶ್ರುತಿಯು ಬ್ರಹ್ಮನಿಂದ ಎಲ್ಲವೂ ಹುಟ್ಟಿವೆ ಎಂದಷ್ಟೇ ಹೇಳುತ್ತಿದೆ. ಏಕೆಂದರೆ ಬ್ರಹ್ಮನು ಪ್ರತಿಯೊಂದು ಪದಾರ್ಥಗಳಿಗೂ ಅವ್ಯವಧಾನೇನ ಕಾರಣನಾಗಿದ್ದಾನೆ. ಏಕೆಂದರೆ ಪ್ರತಿಯೊಂದು ಪದಾರ್ಥಗಳೂ ಕೂಡ ಬ್ರಹ್ಮನಿಗೆ ಶರೀರವಾದ್ದರಿಂದ ಆಕಾಶಶರೀರಕನಾದ ಬ್ರಹ್ಮನಿಂದ ವಾಯು ಹುಟ್ಟುತ್ತದೆ. ವಾಯುಶರೀರಕನಾದ ಬ್ರಹ್ಮನಿಂದ ತೇಜಸ್ಸು ಹುಟ್ಟುತ್ತದೆ ಎಂಬುದಾಗಿಯೇ ಇವರು ಅಭಿಪ್ರಾಯ ಪಡುತ್ತಾರೆ. ಆದ್ದರಿಂದ ಕ್ರಮವು ವಿವಕ್ಷಿತವಲ್ಲ ಎಂದು ರಾಮಾನುಜರು ಸೂತ್ರಾರ್ಥವನ್ನು ಹೇಳುತ್ತಾರೆ.

ಇದು ತಪ್ಪು. 'ಪ್ರಾಣಂ ಭೂತಾನಿ ಚ ಅಂತರಾಳೇ' ಎಂದು ಇವರು ಹೇಳುವುದರಿಂದ ಪ್ರಾಣಶಬ್ದ, ಭೂತಶಬ್ದ ಎಂಬೆರಡು ಪದಗಳನ್ನು ಅಧ್ಯಾಹಾರ ಮಾಡಬೇಕಾಗುತ್ತದೆ ಮತ್ತು ಆಮ್ನಾಯೇತೇ ಎಂಬ ಪದವನ್ನೂ ಕೂಡ ಅಧ್ಯಾಹಾರ ಮಾಡಬೇಕಾಗುತ್ತದೆ. ಕ್ರಮೇಣ ಉಪಪದ್ಯತೇ ಎಂದು ಹೇಳಿದಾಗ ಕ್ರಮಶಬ್ದವು ವ್ಯರ್ಥವಾಗುತ್ತದೆ. ಯೋಗಿಕವಾದ ವಿಜ್ಞಾನ ಶಬ್ದದಿಂದಲೇ ಮನಸ್ಸನ್ನು ಸ್ವೀಕರಿಸಲು ಬರುವಾಗ

ಪ್ರತ್ಯೇಕವಾಗಿ ಮನಃ ಎಂಬ ಪದವನ್ನು ಸೂತ್ರದಲ್ಲಿ ಹೇಳಿದ್ದು ವ್ಯರ್ಥ. ಸಿದ್ಧಾಂತ ಮಾಡುವಾಗ 'ಅವಿಶೇಷಾತ್' ಎಂಬ ಪದಕ್ಕೆ 'ಅವಿಶಿಷ್ಟತ್ವಾತ್' ಎಂದಷ್ಟೇ ಹೇಳಿದ್ದಾರೆ ಹೊರತು ಸಿದ್ಧಾಂತ.. ವನ್ನೇ ಹೇಳಿರುವುದಿಲ್ಲ. ಸೂತ್ರಕಾರರು ಕ್ರಮವು ವಿವಕ್ಷಿತವಾಗಿಲ್ಲ ಎಂದು ಹೇಳದೇ ಇದ್ದಾಗ ಸ್ವಕಪೋಲಕಲ್ಪಿತವಾಗಿ ಇವರು ಕ್ರಮವು ವಿವಕ್ಷಿತವಲ್ಲ ಎಂದು ಹೇಳುವುದು ತಪ್ಪು. ಹೀಗೆ ಅದ್ವೈತಿಗಳಿಗೆ ಬಂದ ದೋಷಗಳೆಲ್ಲವೂ ರಾಮಾನುಜರಿಗೂ ಬರುತ್ತವೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಅಂತರಾವಿಜ್ಞಾನಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.




ಅದ್ವೈತಿಗಳು 'ಅಂತರಾ ವಿಜ್ಞಾನಮನಸೀ ಕ್ರಮೇಣ ತಲ್ಲಿಂಗಾದಿತಿ ಚೇನ್ನಾವಿಶೇಷಾತ್' ಎಂಬ ಸೂತ್ರಕ್ಕೆ ಹೀಗೆ ವ್ಯಾಖ್ಯಾನ ಮಾಡುತ್ತಾರೆ– ತೈತ್ತಿರೀಯ ಶ್ರುತಿಯು ಆತ್ಮನಿಂದ ಆಕಾಶ ಹುಟ್ಟಿದೆ ಎನ್ನುತ್ತಿದೆ. ಆದರೆ ಆಥರ್ವಣ ಶ್ರುತಿಯು ಆತ್ಮನಿಂದ ಪ್ರಾಣ, ಮನಸ್ಸು, ಇಂದ್ರಿಯಗಳು ಹುಟ್ಟಿ ಅನಂತರ ಆಕಾಶ ಹುಟ್ಟಿತ್ತಿದೆ ಎನ್ನುತ್ತಿದೆ. ಆದ್ದರಿಂದ ತೈತ್ತಿರೀಯ ಶ್ರುತಿ ಹೇಳಿದ್ದು ತಪ್ಪು. ಇಷ್ಟು ಅಧಿಕರಣದ ಪೂರ್ವಪಕ್ಷ.

ಅವಿಶೇಷಾತ್= ಕ್ರಮಭಂಗಪರತ್ವವು ಇರುವುದಿಲ್ಲ. ಎಂದರೆ ಆಥರ್ವಣವು ಉತ್ಪತ್ತಿಕ್ರಮವನ್ನು ಹೇಳಲು ಹೊರಟಿಲ್ಲ. ಆತ್ಮನಿಂದ ಹುಟ್ಟುವ ಪದಾರ್ಥಗಳನ್ನು ಮಾತ್ರ ಹೇಳುತ್ತಿದೆ. ಆದ್ದರಿಂದ ಆಥರ್ವಣಶ್ರುತಿಗೆ ತೈತ್ತಿರೀಯ ಶ್ರುತಿಯ ವಿರೋಧವಿಲ್ಲ. ಆತ್ಮನಿಂದ ಮೊದಲು ಆಕಾಶಾದಿಗಳೇ ಹುಟ್ಟುತ್ತಿದೆ ಹೊರತು ಇಂದ್ರಿಯಾದಿಗಳಲ್ಲ. ಇಷ್ಟು ಸಿದ್ಧಾಂತ.

ಇದು ತಪ್ಪು. ಮನಸ್ತತ್ವಾಚ್ಚ ಖಾದಿಕಂ ಇತ್ಯಾದಿ ಸ್ಮೃತಿಗಳನ್ನು ಗಮನಿಸಿದಾಗ ಆಕಾಶಾದಿಗಳ ಉತ್ಪತ್ತಿಗಿಂತಲೂ ಮೊದಲು ಮನಸ್ತತ್ತ್ವವು ಹುಟ್ಟಿದೆ ಎಂದೇ ತಿಳಿಯುತ್ತದೆ. ಮತ್ತು ಲಯಕ್ರಮದಲ್ಲಿ ಆಕಾಶಾದಿಗಳು ಮೊದಲು ಲಯವನ್ನು ಹೊಂದುತ್ತವೆ. ಇಂದ್ರಿಯಾದಿಗಳು ಅನಂತರ ಲಯವನ್ನು ಹೊಂದುವುದರಿಂದಲೂ ಮೊದಲು ಇಂದ್ರಿಯಾದಿಗಳ ಉತ್ಪತ್ತಿಯನ್ನೇ ಹೇಳಬೇಕು.

ಮತ್ತು ಯಾವ ಆಥರ್ವಣವು ಉತ್ಪತ್ತಿಕ್ರಮವನ್ನು ವಿವಕ್ಷಿಸಿಲ್ಲ ಎನ್ನುವಿರೋ ಅದೇ ಆಥರ್ವಣದಲ್ಲಿ ಖಂ ವಾಯುಃ ಎಂಬ ಉತ್ತರವಾಕ್ಯಕ್ಕೆ ಉತ್ಪತ್ತಿಕ್ರಮವನ್ನೇ ನೀವು ವಿವಕ್ಷಿಸುತ್ತೀರಿ. ಹೀಗಿರುವಾಗ ಅರ್ಧಜರತೀಯ ಮಾಡುವುದು ತಪ್ಪು. ಮತ್ತು ಆಥರ್ವಣ ಶ್ರುತಿಯಲ್ಲಿ ಆತ್ಮನಿಂದ ಪ್ರಾಣ ಹುಟ್ಟಿದ್ದಾನೆ ಎಂದು ಹೇಳಲಾಗಿದೆ. ಆದರೆ

ನೀವು ಆ ಪ್ರಾಣನ ಹೆಸರನ್ನು ಪರಿತ್ಯಾಗ ಮಾಡಿ ವಿಜ್ಞಾನ ಹಾಗೂ ಮನಸ್ಸುಗಳನ್ನು ಮಾತ್ರ ಉಲ್ಲೇಖ ಮಾಡುತ್ತಿದ್ದೀರಿ. ಇದು ತಪ್ಪಲ್ಲವೇ?

ಒಂದುವೇಳೆ ವಿಜ್ಞಾನಶಬ್ದದಿಂದ ವಿಜ್ಞಾನಾತಿ ಅನೇನ ಎಂಬ ವ್ಯುತ್ಪತ್ತಿಯನ್ನು ಸ್ವೀಕರಿಸಿ ಇಂದ್ರಿಯಗಳನ್ನು ವಿವಕ್ಷಿಸುವುದಾದರೆ ಅದೇ ವ್ಯುತ್ಪತ್ತಿಯಿಂದ ಮನಸ್ಸನ್ನೂ ಕೂಡ ವಿವಕ್ಷಿಸಬಹುದು. ಆಗ ಆ ಸೂತ್ರಕಾರರು ಪ್ರತ್ಯೇಕವಾಗಿ ಮನಸ್‌ಶಬ್ದವನ್ನು ಹೇಳಿದ್ದು ತಪ್ಪಾಗುತ್ತದೆ.

ಹಾಗೂ ಅದ್ವೈತ ಸಿದ್ಧಾಂತದಲ್ಲಿ ಆತ್ಮಭೂತಯೋಃ ಎಂಬುದಾಗಿ ಆತ್ಮ ಹಾಗೂ ಭೂತಗಳನ್ನು ಅಧ್ಯಾಹಾರ ಮಾಡಬೇಕು. ಅಷ್ಟೇ ಅಲ್ಲದೇ ಆಮ್ನಾಯೇತೇ ಎಂಬ ಪದವನ್ನೂ ಕೂಡ ಅಧ್ಯಾಹಾರ ಮಾಡಬೇಕು. ನಮ್ಮಲ್ಲಿ ಯಾವುದೇ ಒಂದು ಪದದ ಅಧ್ಯಾಹಾರದ ದೋಷವಿಲ್ಲ.

ಮತ್ತು ಕ್ರಮಶಬ್ದಕ್ಕೆ ಲಯಕ್ರಮ ಪರತ್ವವನ್ನು ಪರಿತ್ಯಾಗ ಮಾಡಿ ಸೃಷ್ಟಿಕ್ರಮಪರತ್ವವನ್ನೂ ಹೇಳುವುದು ತಪ್ಪು ಹಾಗೂ ಇದು ಸೃಷ್ಟಿಕ್ರಮ ಪ್ರಕರಣವೇ ಅಲ್ಲ. ನವಿಯದಶ್ರುತೇಃ ಇತ್ಯಾದಿ ಸೂತ್ರವು ಸೃಷ್ಟಿಕ್ರಮಪ್ರಕರಣವಾಗಿದೆ. ಅಲ್ಲಿ ಹೇಳುವುದು ಬಿಟ್ಟು ಇಲ್ಲಿ ಉತ್ಕರ್ಷ ಮಾಡಿದ್ದು ತಪ್ಪು. ಹಾಗೂ ಸೂತ್ರದಲ್ಲಿರುವ ವಿಶೇಷ ಶಬ್ದಕ್ಕೆ ಕ್ರಮಭಂಗ ಎಂಬರ್ಥವನ್ನು ಮಾಡುವುದು ಕ್ಲಿಷ್ಟಕಲ್ಪನೆಯಾಗಿದೆ.

# ಆತ್ಮಾಧಿಕರಣ
(೨-೩-೧೦)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

॥ ಶ್ರೀಗುರುಭ್ಯೋ ನಮಃ ॥

# ಆತ್ಮಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् — नात्माऽश्रुतेः नित्यत्वाच्च ताभ्यः ॥**

ಪರಮಾತ್ಮನು ದೇಹರೂಪವಾದ ಲಯವನ್ನು ಎಂದೂ ಹೊಂದುವುದಿಲ್ಲ. ಯಾವುದೇ ಶ್ರುತಿಯಲ್ಲಿ ಪರಮಾತ್ಮನ ಲಯವನ್ನು ಹೇಳಿರುವುದಿಲ್ಲ. ಮತ್ತು 'ಸ ನಿತ್ಯೋ ನಿರ್ಗುಣಃ' ಇತ್ಯಾದಿ ಶ್ರುತಿಗಳಿಂದ ಪರಮಾತ್ಮನು ದೇಹತಃ ನಿತ್ಯನೆಂದೇ ತಿಳಿದು ಬರುತ್ತಿದೆ. ಆದ್ದರಿಂದ ಬ್ರಹ್ಮನಿಗೆ ಯಾವುದಾದರು ಶ್ರುತಿಯು ಲಯವನ್ನು ಹೇಳಿದರೆ ಅದಕ್ಕೆ ಆಚ್ಛಾದಿತ ಎಂಬರ್ಥವನ್ನಷ್ಟೇ ಮಾಡಬೇಕು.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका — आत्मा** परमात्मा न विलीयते । **अश्रुतेः** तल्लयस्य काप्यश्रवणात् । किञ्च ताभ्यः 'स नित्यो निर्गुणः' इत्यादिश्रुतिभ्यः **नित्यत्वात्** विष्णोर्नित्यत्वावगमाच्च **न** तस्य नाश इत्यर्थः ।।१।।

ಆತ್ಮಾ = ಪರಮಾತ್ಮನು, ನ = ದೇಹತಃ ಲಯವನ್ನು ಹೊಂದುವುದಿಲ್ಲ. ಅಶ್ರುತೇಃ = ಪರಮಾತ್ಮನಿಗೆ ಲಯವನ್ನು ಹೇಳುವ ಯಾವುದೇ ಶ್ರುತಿಗಳು ಇರುವುದಿಲ್ಲ. ಚ = ಮತ್ತು, ತಾಭ್ಯಃ = 'ಸ ನಿತ್ಯೋ ನಿರ್ಗುಣಃ

ವಿಭುಃ ಪರಃ ಪರಾತ್ಮಾ' 'ನಿತ್ಯೋ ವಿಭುಃ ಕಾರಣೋ ಲೋಕಸಾಕ್ಷೀ ಪರೋ ಗುಣ್ಯೈಃ ಸರ್ವದೃಕ್ ಶಾಶ್ವತಶ್ಚ' ಇತ್ಯಾದಿ ಶ್ರುತಿಗಳಿಂದ, ನಿತ್ಯತ್ವಾತ್ = ಬ್ರಹ್ಮನು ದೇಹತಃ ನಿತ್ಯನಾಗಿದ್ದಾನೆಂದು ತಿಳಿದು ಬರುತ್ತಿದೆ. ಆದ್ದರಿಂದ ಅವನಿಗೆ ನಾಶವನ್ನು ಹೇಳಬಾರದು.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ಆತ್ಮಾಧಿಕರಣವು ಮುಗಿಯಿತು.

## ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – ।। नात्माऽश्रुतेर्नित्यत्वाच्च ताभ्यः ।।१।।**

**'स इदं सर्वं विलाप्यान्तस्तमसि निलीनस्तद्विलाप्य व्युत्तिष्ठते स इदं सर्वं विसृजति विस्थापयति प्रस्थापयत्याच्छादयति प्रकाशयति विमोचयत्येक एव' इति श्रुतेः परमात्माऽपि न लीयते अश्रुतत्वाद् ब्रह्मलयस्य ।**

ಅನುವಾದ - ಬ್ರಹ್ಮನು ಸಮಸ್ತ ಜಗತ್ತನ್ನು ಲಯಗೊಳಿಸಿ ತಾನು ಚಿತ್‌ಪ್ರಕೃತಿಯಲ್ಲಿ ಲೀನವಾಗುತ್ತಾನೆ. ಆ ಚಿತ್‌ಪ್ರಕೃತಿಯನ್ನು ಕೂಡ ಮರೆಮಾಡಿ ಪುನಃ ಪ್ರಾದುರ್ಭಾವ ಹೊಂದುತ್ತಾನೆ. ಆ ಪರಮಾತ್ಮನು ಈ ಎಲ್ಲಾ ಜಗತ್ತನ್ನು ಸೃಷ್ಟಿಮಾಡುತ್ತಾನೆ, ನಾಶ ಮಾಡುತ್ತಾನೆ. ಅನೇಕ ಬಗೆಯಿಂದ ರಕ್ಷಣೆ ಮಾಡುತ್ತಾನೆ. ಪ್ರೇರಣೆ ಮಾಡುತ್ತಾನೆ. ಅಜ್ಞಾನದಿಂದ ಮುಚ್ಚುತ್ತಾನೆ. ಜೀವನಿಗೆ ತನ್ನ ಸ್ವರೂಪವನ್ನು ಪ್ರಕಟಪಡಿಸುತ್ತಾನೆ. ಜೀವನಿಗೆ ಮೋಕ್ಷವನ್ನು ನೀಡುತ್ತಾನೆ. ಇವೆಲ್ಲವನ್ನು ಒಬ್ಬನೇ ಪರಮಾತ್ಮನು ನಿಂತು ನಡೆಸುತ್ತಾನೆ. ಈ ಶ್ರುತಿಯಿಂದ ಪರಮಾತ್ಮನಿಗೂ ಕೂಡ ಲಯವಿದೆ ಎಂದು ತಿಳಿಯುತ್ತದೆ. ಇಷ್ಟು ಪೂರ್ವಪಕ್ಷ.

ಇದು ತಪ್ಪು. ಪರಮಾತ್ಮನಿಗೆ ಲಯವನ್ನು ಹೇಳುವ ಯಾವುದೇ ಶ್ರುತಿಯಿರುವುದಿಲ್ಲ-

ಪ್ರತಿಪದಾರ್ಥ -- ಸಃ = ಪರಮಾತ್ಮನು. ಇದಂ ಸರ್ವಂ = ಈ ಎಲ್ಲಾ ಪ್ರಪಂಚವನ್ನು, ವಿಲಾಪ್ಯ = ನಾಶಮಾಡಿ, ತಮಸಿ = ಚಿತ್‌ಪ್ರಕೃತಿಯಲ್ಲಿ, ನಿಲೀನಃ = ಮರೆಯಾಗುತ್ತಾನೆ. ತದ್ ವಿಲಾಪ್ಯ = ಆ ಚಿತ್‌ಪ್ರಕೃತಿಯನ್ನು ಲಯಮಾಡಿ, ವ್ಯುತ್ತಿಷ್ಠತೇ = ಪ್ರಾದುರ್ಭೂತನಾಗುತ್ತಾನೆ. ಸಃ = ಆ ಪರಮಾತ್ಮನು, ಇದಂ ಸರ್ವಂ = ಈ ಎಲ್ಲಾ ಜಗತ್ತನ್ನು,

ವಿಸೃಜತಿ = ಸೃಷ್ಟಿ ಮಾಡುತ್ತಾನೆ. ವಿಸ್ಥಾಪಯತಿ = ರಕ್ಷಣೆ ಮಾಡುತ್ತಾನೆ. ಪ್ರಸ್ಥಾಪಯತಿ = ಪ್ರೇರಣೆ ಮಾಡುತ್ತಾನೆ. ಆಚ್ಛಾದಯತಿ = ಅಜ್ಞಾನದಿಂದ ಮುಚ್ಚುತ್ತಾನೆ, ಪ್ರಕಾಶಯತಿ = ತನ್ನ ಸ್ವರೂಪವನ್ನು ಪ್ರಕಟಪಡಿಸುತ್ತಾನೆ. ಏಕಏವ = ಅವನೊಬ್ಬನೇ, ವಿಮೋಚಯತಿ = ಮೋಕ್ಷವನ್ನು ನೀಡುತ್ತಾನೆ. ಇತಿ ಶ್ರುತೇಃ = ಹೀಗೆ ಶ್ರುತಿಯಿರುವುದರಿಂದ, ಪರಮಾತ್ಮಾಪಿ = ಪರಮಾತ್ಮನೂ ಕೂಡ, ನ ಲೀಯತೇ = ಲಯ ಹೊಂದುತ್ತಾನೆಂದು ಹೇಳಬಾರದು. ಬ್ರಹ್ಮಲಯಸ್ಯ = ಬ್ರಹ್ಮನು ಲಯ ಹೊಂದುತ್ತಾನೆ ಎಂದು, ಅಶ್ರುತತ್ವಾತ್ = ಯಾವುದೇ ಶ್ರುತಿಯಿರುವುದಿಲ್ಲ.

**भाष्यम् — निलीनशब्देनापिहितत्वमुच्यते । 'तुच्छेनाभ्वपिहितं यदासीत्', (ऋ.१०.१२९.३.) इति श्रुतेः । 'स एतस्मिंस्तमसि निलीनः प्रकृतिं पुरुषं कालं चानुपश्यति नैनं पश्यति कश्चन' इति पैङ्गिश्रुतिः ।**

ಶ್ರುತಿಯಲ್ಲಿರುವ ನಿಲೀನಶಬ್ದಕ್ಕೆ ಲಯ ಹೊಂದುತ್ತಾನೆ ಎಂದರ್ಥವಲ್ಲ. ಇತರರಿಗೆ ಕಾಣಿಸಿಕೊಳ್ಳುವುದಿಲ್ಲ ಎಂದಷ್ಟೇ ಅರ್ಥ.

ಏಕೆಂದರೆ ತನಗಿಂತ ಕೆಳಗಿನ ಪ್ರಕೃತಿಯಲ್ಲಿ ಎಲ್ಲೆಡೆ ಪೂರ್ಣನಾದ ಪರಮಾತ್ಮನು ಆಚ್ಛಾದಿತನಾಗಿದ್ದನು. ಹೀಗೆ ಋಗ್‌ವೇದಶ್ರುತಿಯು ಹೇಳುತ್ತಿದೆ. ಮತ್ತು ಆ ಪರಮಾತ್ಮನು ಮಹಾಲಕ್ಷ್ಮಿರೂಪವಾದ ತಮಸ್ಸಿನಲ್ಲಿ ಅಡಗಿದವನಾಗಿ ಪ್ರಕೃತಿಯನ್ನು, ಜೀವವನ್ನು, ಕಾಲವನ್ನು ನೋಡುತ್ತಾನೆ. ಯಾರೂ ಕೂಡ ಇವನನ್ನು ನೋಡುವುದಿಲ್ಲ. ಎಂದು ಪೈಂಗಿಶ್ರುತಿಯು ಹೇಳುತ್ತಿದೆ.

ಪ್ರತಿಪದಾರ್ಥ -- ನಿಲೀನಶಬ್ದೇನ = ಶ್ರುತಿಯಲ್ಲಿರುವ ನಿಲೀನ ಶಬ್ದಕ್ಕೆ, ಅಹಿತತ್ವಂ = ಯಾರಿಗೂ ಕಾಣಿಸಿಕೊಳ್ಳುವುದಿಲ್ಲ ಎಂಬರ್ಥವು, ಉಚ್ಯತೇ = ಹೇಳಲ್ಪಡುತ್ತದೆ. ತುಚ್ಛೇನ = ತನಗಿಂತ ಕೆಳಗಿನ ಪ್ರಕೃತಿಯಿಂದ, ಆಭು = ಎಲ್ಲೆಡೆಯಿಂದ ಪೂರ್ಣನಾದ ಪರಮಾತ್ಮನು, ಅಪಿಹಿತಮ್ = ಮುಚ್ಚಲ್ಪಟ್ಟವನಾಗಿ, ಯತ್ = ಯಾವ ಬ್ರಹ್ಮನು, ಆಸೀತ್ = ಇದ್ದನು ಇತಿ = ಹೀಗೆ, ಶ್ರುತೇಃ = ಶ್ರುತಿಯು ಇರುತ್ತದೆ. ಸಹ = ಆ ಪರಮಾತ್ಮನು, ಏತಸ್ಮಿನ್ = ಈ ಚಿತ್‌ಪ್ರಕೃತಿ ಎಂಬ ತಮಸ್ಸಿನಲ್ಲಿ, ನಿಲಿನಃ = ಲಯ ಹೊಂದಿದ, ಪ್ರಕೃತಿಂ = ಪ್ರಕೃತಿಯನ್ನು, ಪುರುಷಂ = ಜೀವನನ್ನು, ಕಾಲಂ = ಕಾಲವನ್ನು, ಅನುಪಶ್ಯತಿ = ನೋಡುತ್ತಾನೆ. ಏನಂ = ಈ ಪರಮಾತ್ಮನನ್ನು, ಕಶ್ಚನ = ಯಾರೊಬ್ಬರೂ ಕೂಡ, ನ ಪಶ್ಯತಿ = ನೋಡಲಾರರು. ಇತಿ = ಹೀಗೆ, ಪೈಂಗಿಶ್ರುತಿಃ = ಪೈಂಗಿಶ್ರುತಿಯು ಹೇಳುತ್ತಿದೆ.

**भाष्यम् — 'नित्यो नित्यानां चेतनश्चेतनानाम्' (कठ. ५.१३.)**

**'स नित्यो निर्गुणो विभुः परमः परात्मा' 'नित्यो विभुः कारणो लोकसाक्षी परो गुणैस्सर्वदृक् शाश्वतश्च' इत्यादिश्रुतिभ्यो नित्यत्वाच्च ।।१।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये आत्माधिकरणम् ।।१०।।**

ಅನುವಾದ - ಸ್ವರೂಪತಃ ನಾಶವಿಲ್ಲದ ದೇಹತಃ ನಾಶವಿರುವ ಜೀವರ ಮಧ್ಯದಲ್ಲಿ ಪರಮಾತ್ಮನು ದೇಹತಃ ಹಾಗೂ ಸ್ವರೂಪತಃ ನಾಶವಿಲ್ಲದ ಸ್ವರೂಪದವನಾಗಿದ್ದಾನೆ. ಜ್ಞಾನಿಗಳ ಮಧ್ಯದಲ್ಲಿ ಪರಮ ಜ್ಞಾನಿಯಾಗಿದ್ದಾನೆ. ಹೀಗೆ ಕಾಠಕೋಪನಿಷತ್ತು ಹೇಳುತ್ತಿದೆ.

ಪರಮಾತ್ಮನು ದೇಹತಃ ನಿತ್ಯನಾಗಿದ್ದಾನೆ. ಏಕೆಂದರೆ ಪ್ರಾಕೃತ ಗುಣಗಳಿಂದ ರಹಿತನಾದ್ದರಿಂದ ವ್ಯಾಪ್ತನಾದ್ದರಿಂದ ವಿಲಕ್ಷಣನಾಗಿದ್ದಾನೆ. ಸಮರ್ಥನಾದ ಪರಮಾತ್ಮನು ನಿತ್ಯನೂ, ವ್ಯಾಪ್ತನೂ, ಜಗತ್ಕಾರಣನೂ, ಲೋಕವನ್ನು ನೋಡುವವನೂ, ಸರ್ವೋತ್ಕೃಷ್ಟನು, ಸದ್‌ಗುಣಗಳಿಂದ ತುಂಬಿದವನೂ, ಎಲ್ಲವನ್ನು ನೋಡುವವನೂ, ಶಶ್ವದೇಕಪ್ರಕಾರವುಳ್ಳವನೂ, ಆಗಿರುತ್ತಾನೆ. ಇವೇ ಮೊದಲಾದ ಶ್ರುತಿಗಳಿಂದ ಪರಮಾತ್ಮನಿಗೆ ನಿತ್ಯತ್ವವು ತಿಳಿಯುತ್ತದೆ.

ಪ್ರತಿಪದಾರ್ಥ -- ನಿತ್ಯಾನಾಂ = ಸ್ವರೂಪತಃ ನಾಶವಿಲ್ಲದ ದೇಹತಃ ನಾಶವಿರುವ ಜೀವರ ಮಧ್ಯದಲ್ಲಿ, ನಿತ್ಯಃ = ಪರಮಾತ್ಮನು ಸ್ವರೂಪತಃ ಹಾಗೂ ದೇಹತಃ ನಾಶವಿಲ್ಲದವನು, ಚೇತನಾನಾಂ = ಜ್ಞಾನಿಜನರ ಮಧ್ಯದಲ್ಲಿ, ಚೇತನಃ = ಉತ್ಕೃಷ್ಟಜ್ಞಾನಿಯು.

ಸಃ = ಪರಮಾತ್ಮನು, ನಿತ್ಯಃ = ನಿತ್ಯನೂ, ನಿರ್ಗುಣಃ = ಪ್ರಕೃತಗುಣರಹಿತನೂ, ವಿಭುಃ = ವ್ಯಾಪ್ತನು, ಪರಃ = ಸರ್ವವಿಲಕ್ಷಣನು, ಪರಮಾತ್ಮಾ = ಎಲ್ಲರಿಗಿಂತ ಉತ್ಕೃಷ್ಟನು ಆಗಿದ್ದಾನೆ.

ನಿತ್ಯ = ನಿತ್ಯವಾದ, ವಿಭುಃ = ವ್ಯಾಪ್ತನಾದ, ಕಾರಣಃ = ಜಗತ್ತಿಗೆ ಕಾರಣನಾದ, ಲೋಕಸಾಕ್ಷೀ = ಎಲ್ಲವನ್ನು ನೋಡುವ, ಪರಃ = ವಿಲಕ್ಷಣನಾದ, ಗುಣೈಃ = ಗುಣಗಳಿಂದ, ಪರಃ = ಉತ್ಕೃಷ್ಟನಾದ, ಸರ್ವದೃಕ್ = ಸರ್ವಸಾಕ್ಷಿಯಾದ, ಶಾಶ್ವತಃ = ಶಶ್ವದೇಕಪ್ರಕಾರನಾದವನು ಪರಮಾತ್ಮನು, ಇತ್ಯಾದಿ ಶ್ರುತಿಭ್ಯಃ = ಇವೇ ಮೊದಲಾದ ಶ್ರುತಿಗಳಿಂದ, ನಿತ್ಯತ್ವಾಚ್ಚ = ಪರಮಾತ್ಮನಿಗೆ ನಿತ್ಯತ್ವವು ತಿಳಿಯುತ್ತದೆ.

ಇಲ್ಲಿಗೆ ಆತ್ಮಾಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

ಆತ್ಮಾಧಿಕರಣ (೨-೩-೧೦)

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**तत्वप्रकाशिका – अत्र परमात्मनि श्रुतिसमन्वयसिद्ध्यर्थं तल्लयविषय-श्रुतिविरोधपरिहारादस्ति शास्त्रादिसङ्गतिः । सकलजगज्जन्मादिकर्ता परमात्मेत्युक्तम्। तस्य च लयप्राप्तौ तदनुपपत्तेरसौ निरसनीयः। सर्वोत्पत्तिलयकर्तृत्वेन प्रकृतः परमात्मा विषयः ।**

ಈ ಅಧಿಕರಣದಲ್ಲಿ ಪರಮಾತ್ಮನಲ್ಲಿ ಶ್ರುತಿಸಮನ್ವಯವು ಸಿದ್ಧವಾಗುವುದಕ್ಕಾಗಿ ಅವನಿಗೆ ಲಯವನ್ನು ಹೇಳುವ ಶ್ರುತಿಗಳ ವಿರೋಧವನ್ನು ಪರಿಹಾರ ಮಾಡುತ್ತಿರುವುದರಿಂದ ಶಾಸ್ತ್ರ, ಅಧ್ಯಾಯ, ಪಾದ ಸಂಗತಿಗಳು ಇರುತ್ತವೆ.

ಸಕಲ ಜಗಜ್ಜನ್ಮಾದಿಕಾರಣನಾದವನು ಪರಮಾತ್ಮನೇ ಆಗಿದ್ದಾನೆಂದು ಹೇಳಲಾಯಿತು. ಆದರೆ ಆ ಪರಮಾತ್ಮನೇ ಲಯವನ್ನು ಹೊಂದುವುದಾದರೆ ಈ ಜಗಜ್ಜನ್ಮಾದಿಕರ್ತೃತ್ವವು ಅನುಪಪನ್ನವಾಗುತ್ತದೆ. ಆದ್ದರಿಂದ ಲಯವನ್ನು ನಿರಾಕರಣೆ ಮಾಡಲೇಬೇಕು. ಸಕಲ ಉತ್ಪತ್ತಿ ಹಾಗೂ ಲಯಗಳಿಗೆ ಕರ್ತೃತ್ವೇನ ಪ್ರಕೃತನಾದ ಪರಮಾತ್ಮನೇ ಅಧಿಕರಣದ ವಿಷಯನಾಗಿದ್ದಾನೆ.

ವಿವರಣೆ - ಹಿಂದಿನ ಅಧಿಕರಣದಲ್ಲಿ ಬ್ರಹ್ಮವ್ಯತಿರಿಕ್ತವಾದ ಸಕಲಕ್ಕೂ ಕೂಡ ಲಯವಾಗುತ್ತದೆಂದು ಹೇಳಲಾಯಿತು. ಹಾಗಾದರೆ ಬ್ರಹ್ಮನೂ ಕೂಡ ಚೇತನ ಆಗಿರುವುದರಿಂದ ಅವನಿಗೂ ಲಯವಾಗಲಿ ಎಂಬ ಪೂರ್ವಪಕ್ಷವು ಹುಟ್ಟುತ್ತಿರುವುದರಿಂದ ಹಿಂದಿನ ಅಧಿಕರಣದಿಂದ ಆನಂತರ್ಯಸಂಗತಿಯು ಇರುತ್ತದೆ.

**तत्वप्रकाशिका – लीयते न वेति सन्देहः । 'नित्यो नित्यानाम्' 'अन्तःतमसि निलीनः' इति श्रुतिविरोधः सन्देहबीजम् । तत्र सूत्रमुपन्यस्य पूर्वपक्षं सूचयन् व्याचष्टे – नात्मेति ।। परमात्माऽपि लीयत एव । 'तमसि निलीनः' इति श्रुतेः ।**

ಪರಮಾತ್ಮನಿಗೆ ಲಯವಿದೆಯೋ ಇಲ್ಲವೋ? ಎಂಬುದು ಅಧಿಕರಣದ ಸಂದೇಹ. 'ನಿತ್ಯೋ ನಿತ್ಯಾನಾಮ್' 'ನಿತ್ಯರಿಗೂ ನಿತ್ಯನಾದವನು' ಎಂಬ ಶ್ರುತಿಯು ಪರಮಾತ್ಮನಿಗೆ ನಿತ್ಯತ್ವವನ್ನು ಹೇಳುತ್ತಿದೆ. 'ಅಂತಸ್ತಮಸಿ ನಿಲೀನಃ' 'ಪರಮಾತ್ಮನು ಪ್ರಕೃತಿಯಲ್ಲಿ ಲೀನನಾದನು ಎಂಬ ಶ್ರುತಿಯು ಪರಮಾತ್ಮನಿಗೆ ಲಯವನ್ನು ಹೇಳುತ್ತಿದೆ. ಈ ಎರಡು ವಿರುದ್ಧ ಶ್ರುತಿಗಳೇ ಸಂದೇಹಕ್ಕೆ ಬೀಜ.

ಹೀಗಿರುವಾಗ ಸೂತ್ರವನ್ನು 'ನಾತ್ಮಾ' ಇತ್ಯಾದಿಯಾಗಿ, ಪೂರ್ವಪಕ್ಷವನ್ನು ಸೂಚಿಸುತ್ತಾ ವ್ಯಾಖ್ಯಾನ ಮಾಡುತ್ತಿದ್ದಾರೆ. ಪರಮಾತ್ಮನೂ ಕೂಡ ಲಯವನ್ನು ಹೊಂದಿಯೇ ಹೊಂದುತ್ತಾನೆ. 'ತಮಸಿ ನಿಲೀನಃ' ಎಂಬ ಶ್ರುತಿಯು ಪರಮಾತ್ಮನಿಗೆ ಲಯವನ್ನು ಹೇಳುತ್ತಿದೆ.

**तत्वप्रकाशिका – न चेयं श्रुतिर्नेश्वरविषयेति वाच्यम् । 'स इदं सर्वं विसृजति' इत्यादि तल्लिङ्गात् । नचास्ति श्रुत्यन्तरमपीति वाच्यम् । विष्णुर्लयवांश्चेतनत्वाज्जीववदिति युक्तिसाहित्येन लयश्रुतेः प्राबल्यात् ।**

ಈ ಶ್ರುತಿಯು ಈಶ್ವರನನ್ನು ವಿಷಯೀಕರಿಸುತ್ತಿಲ್ಲ ಎಂದು ಹೇಳಬಾರದು. ಏಕೆಂದರೆ 'ಸ ಇದಂ ಸರ್ವಮಸೃಜತ' 'ಬ್ರಹ್ಮನು ಸಮಸ್ತ ಜಗತ್ತನ್ನು ಸೃಷ್ಟಿ ಮಾಡುತ್ತಾನೆ' ಇವೇ ಮೊದಲಾದ ಸೃಷ್ಟಿಕರ್ತೃತ್ವರೂಪ ಅಸಾಧಾರಣಧರ್ಮ ಇರುವುದರಿಂದ 'ತಮಸಿ ನಿಲೀನಃ' ಎಂಬ ಶ್ರುತಿಯು ಪರಮಾತ್ಮನನ್ನು ಹೇಳುತ್ತಿಲ್ಲ.

ಪರಮಾತ್ಮನಿಗೆ ಲಯವಿಲ್ಲವೆಂಬುದನ್ನು 'ನಿತ್ಯೋ ನಿತ್ಯಾನಾಂ' ಎಂಬ ಮತ್ತೊಂದು ಶ್ರುತಿ ಹೇಳುತ್ತಿದೆಯಲ್ಲವೇ? ಎಂದು ಪ್ರಶ್ನಿಸಬಾರದು. 'ವಿಷ್ಣುಃ ಲಯವಾನ್ ಚೇತನತ್ವಾತ್ ಜೀವವತ್' 'ಜೀವನಂತೆ ವಿಷ್ಣುವೂ ಚೇತನನಾಗಿರುವುದರಿಂದ ಲಯವುಳ್ಳವನಾಗಿದ್ದಾನೆ' ಎಂಬ ಯುಕ್ತಿಯಿಂದ ಉಪೋದ್ಬಲಿತವಾದ 'ತಮಸಿ ನಿಲೀನಃ' ಎಂಬ ಶ್ರುತಿಯೇ ಪ್ರಬಲವಾಗಿದೆ.

**तत्वप्रकाशिका – न च वक्तव्यं स्वातन्त्र्यहेतुना परमात्मनोऽनुपपत्तेरुक्तत्वात् कथं लय इति । स्वतन्त्रस्यापि लीलया विग्रहग्रहणपरित्यागोपपत्तेः । अतः सयुक्तिकश्रुतिविरोधेनान्यश्रुतेरप्रामाण्यान्नोक्तसमन्वयो युक्त इति न वाच्यम् । कस्यामपि श्रुतौ ब्रह्मलयस्याश्रुतत्वादिति भावः । प्रस्थापयति प्रेरयति । आच्छादयन्यज्ञानेन ।**

ಸ್ವಾತಂತ್ರ್ಯಹೇತುವಿನಿಂದ ಪರಮಾತ್ಮನಿಗೆ ಉತ್ಪತ್ತಿಯು ಅನುಪಪನ್ನವಾಗುತ್ತದೆಂದು ಅಸಂಭವಾದಿಕರಣದಲ್ಲಿ ಹೇಳಲಾಗಿದೆ. ಆದ್ದರಿಂದ ಲಯವನ್ನು ಹೇಗೆ ಹೇಳುತ್ತೀರಿ? ಹೀಗೆ ಪ್ರಶ್ನಿಸಬಾರದು. ಸ್ವತಂತ್ರನಾದವನೂ ಕೂಡ ಲೀಲೆಗೋಸ್ಕರ ದೇಹವನ್ನು ಸ್ವೀಕಾರ ಮಾಡುತ್ತಾನೆ ಮತ್ತು ಪರಿತ್ಯಾಗ ಮಾಡುತ್ತಾನೆ. ಹೀಗೆ ಹೇಳುವುದು ಯುಕ್ತವಾಗುತ್ತದೆ.

ಆದ್ದರಿಂದ ಯುಕ್ತಿಬದ್ಧವಾದ ಶ್ರುತಿವಿರೋಧವಿರುವುದರಿಂದ ಬೇರೆ ಶ್ರುತಿಗಳಿಗೆ ಅಪ್ರಾಮಾಣ್ಯವನ್ನು ಹೇಳಬೇಕು. ಆಗ ಶ್ರೀಹರಿಯಲ್ಲಿ ಹೇಳಲ್ಪಟ್ಟ ಸಮನ್ವಯವು ಅಯುಕ್ತವಾಗುತ್ತದೆ.

ಇದು ತಪ್ಪು. ಯಾವ ಶ್ರುತಿಯಲ್ಲೂ ಕೂಡ ಪರಮಾತ್ಮನಿಗೆ ಲಯವನ್ನು ಹೇಳಿರುವುದು ಕೇಳಿಸುತ್ತಿಲ್ಲ. 'ಪ್ರಸ್ಥಾಪಯತಿ' ಎಂಬ ಪದಕ್ಕೆ ಪ್ರೇರಣೆ ಮಾಡುತ್ತಾನೆ ಎಂದರ್ಥ. 'ಆಚ್ಛಾದಯತಿ' ಎಂಬುದಕ್ಕೆ ಅಜ್ಞಾನದಿಂದ ಜೀವನನ್ನು ಮುಚ್ಚುತ್ತಾನೆ ಎಂದರ್ಥ.

**तत्वप्रकाशिका – ननु 'अन्तस्तमसि निलीनः' इति ब्रह्मलयस्य श्रुतत्वात् कथमुच्यतेऽश्रुतत्वमित्यत आह – निलीनेति ।। कुतो निलीनश्रुतिरपि हितत्वपरेत्यत आह – तुच्छ्नेति ।।**

'ಅಂತಸ್ತಮಸಿ ನಿಲೀನಃ' ಎಂಬ ಶ್ರುತಿಯಲ್ಲಿ ಪರಮಾತ್ಮನು ಪ್ರಕೃತಿಯಲ್ಲಿ ಲೀನವಾಗುತ್ತಾನೆಂದು ಹೇಳಲಾಗಿದೆ. ಆದ್ದರಿಂದ ಎಲ್ಲಿಯೂ ಶ್ರುತವಾಗಿಲ್ಲ ಎಂದು ಹೇಗೆ ಹೇಳುತ್ತೀರಿ? ಈ ಪ್ರಶ್ನೆಗೆ 'ನಿಲೀನಃ' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ. 'ನಿಲೀನ' ಶ್ರುತಿಗೆ 'ಆಚ್ಛಾದಿತ' ಎಂಬ ಅರ್ಥವನ್ನು ಏಕೆ ಹೇಳಬೇಕು? ಎಂಬ ಪ್ರಶ್ನೆಗೆ 'ತುಚ್ಛೇನ' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

ವಿವರಣೆ - 'ತಮಸಿ ನಿಲೀನಃ' ಎಂಬುದು ಪೈಂಗಿ ಶ್ರುತಿ. ಇದರಲ್ಲಿರುವ ನಿಲೀನ ಶಬ್ದಕ್ಕೆ ಪ್ರಕೃತಿಯಿಂದ ಮುಚ್ಚಲ್ಪಡುತ್ತಾನೆ ಎಂದರ್ಥ. ಪರಮಾತ್ಮನು ಯಾರಿಂದಲೂ ಕೂಡ ಕಾಣುವುದಿಲ್ಲವಾದ್ದರಿಂದ 'ತಮಸಿ ನಿಲೀನಃ' ಎಂದು ಶ್ರುತಿಯು ಕರೆದಿದೆ. ಹೀಗೆಯೇ ಅರ್ಥವನ್ನು ಹೇಳಬೇಕು. ದೇಹದಿಂದ ಪ್ರಕೃತಿಯಲ್ಲಿ ನಾಶವಾಗುತ್ತಾನೆಂದು ಹೇಳಬಾರದು. ನಿಲೀನ ಶಬ್ದಕ್ಕೆ ಆಚ್ಛಾದಿತ ಎಂಬರ್ಥವನ್ನು ಏಕೆ ಹೇಳಬೇಕು? ಎಂಬ ಆಕ್ಷೇಪಕ್ಕೆ 'ತುಚ್ಛೇನ' ಇತ್ಯಾದಿಯಾಗಿ ಉತ್ತರಿಸಿದ್ದಾರೆ.

**तत्वप्रकाशिका – अस्यां श्रुतौ 'नासदासीत्' इत्यादिना सर्वस्य लयमुक्त्वा तम आसीदिति प्रकृतेरवस्थानमभिधाय ब्रह्मणस्तदपिहितत्वं पुनः प्रादुर्भावश्चोच्यते । अतस्तत्समाख्यानादत्रापि निलीनशब्दोऽपिहितत्वार्थ एवेति भावः । ब्रह्मणो निलीनत्वमपिहितत्वमेवेत्यत्र श्रुतिं चाह – स इति ।।**

ಈ ಶ್ರುತಿಯಲ್ಲಿ 'ನಾಸದಾಸೀತ್' ಇತ್ಯಾದಿಯಾಗಿ ಸಕಲವೂ ಕೂಡ ಪ್ರಕೃತಿಯಲ್ಲಿ ಲಯ ಹೊಂದುತ್ತದೆ ಎಂದು ಹೇಳಿ 'ತಮ ಆಸೀತ್' ಎಂಬುದಾಗಿ ಪ್ರಕೃತಿಗೆ ಅವಸ್ಥಿತಿಯನ್ನು ಹೇಳಿ ಬ್ರಹ್ಮನಿಗೆ ಆ ಪ್ರಕೃತಿಯಿಂದ ಆಚ್ಛಾದನೆಯನ್ನು ಹೇಳಿ ಮುಂದೆ ಅಭಿವ್ಯಕ್ತಿಯನ್ನು ಹೇಳಲಾಗಿದೆ. ಇದರ ಸಮಾಖ್ಯಾದಿಂದ ಪ್ರಕೃತದಲ್ಲೂ ಕೂಡ ನಿಲೀನ ಶಬ್ದಕ್ಕೆ ಮುಚ್ಚಲ್ಪಟ್ಟಿದ್ದಾನೆ ಎಂಬರ್ಥವನ್ನೇ ಹೇಳಬೇಕು. ಬ್ರಹ್ಮನು ನಿಲೀನನಾಗಿದ್ದಾನೆಂದರೆ ಆಚ್ಛಾದಿತನಾಗಿದ್ದಾನೆಂದೇ ಅರ್ಥ. ಈ ವಿಷಯದಲ್ಲಿ 'ಸ ಏತಸ್ಮಿನ್' ಇತ್ಯಾದಿಯಾಗಿ ಶ್ರುತಿಯನ್ನು ಪ್ರಮಾಣವಾಗಿ ನೀಡಿದ್ದಾರೆ.

**तत्वप्रकाशिका – निलीन इत्युक्त्वा पुरुषादीन् स्वयं पश्यति नैनं पश्यति कश्चनेति वचनान्निलीनशब्दोऽपिहितार्थे प्रयुक्त इति ज्ञायत इति भावः । किमर्थमेवं निलीनश्रुतेरर्थान्तरं परिकल्प्यते लय इत्येवार्थः किं न स्यात् । समाख्यादीनां श्रुतेर्दुर्बलत्वात् । न च श्रुत्यन्तरबलात् । तस्याप्रामाण्योपपत्तेरित्यत आह – नित्य इति ॥**

ಪರಮಾತ್ಮನು ನಿಲೀನನಾಗಿದ್ದಾನೆಂದು ಹೇಳಿ ಪುರುಷಾದಿಗಳನ್ನು ಸ್ವತಃ ನೋಡುತ್ತಾನೆ. ಇವನನ್ನು ಯಾರೂ ನೋಡುವುದಿಲ್ಲ ಎಂಬ ವಚನದಿಂದ ನಿಲೀನ ಶಬ್ದವು ಆಚ್ಛಾದಿತನಾಗಿದ್ದಾನೆಂಬ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ ಎಂದು ತಿಳಿಯಬೇಕು.

ಯಾವ ಕಾರಣಕ್ಕೋಸ್ಕರ ನಿಲೀನ ಶ್ರುತಿಗೆ ಹೀಗೆ ಅರ್ಥಾಂತರವನ್ನು ಕಲ್ಪನೆ ಮಾಡಬೇಕು? ಲಯವೆಂಬರ್ಥವನ್ನು ಏಕೆ ವಿವಕ್ಷಿಸಬಾರದು? ಏಕೆಂದರೆ ಶ್ರುತಿಗಿಂತಲೂ ಸಮಾಖ್ಯೆಯು ದುರ್ಬಲವಾಗಿದೆ. ಬೇರೊಂದು ಶ್ರುತಿಯ ಆಧಾರದಿಂದ ಇದಕ್ಕೆ ಅಪ್ರಾಮಾಣ್ಯವನ್ನು ಹೇಳಬಹುದಲ್ಲವೇ? ಎಂಬ ಪ್ರಶ್ನೆಗೆ 'ನಿತ್ಯ' ಇತ್ಯಾದಿ ಭಾಷ್ಯದಿಂದ ಉತ್ತರಿಸಿದ್ದಾರೆ.

**तत्वप्रकाशिका – नित्यत्वश्रुतिविरोधादर्थान्तरमेव युक्तम् । न च तदप्रामाण्यम् । बाहुल्येन प्राबल्यात् । न च सयुक्तिकाया अपि प्राबल्यम् । श्रुतिविरुद्धयुक्तेः स्वयममानत्वादिति भावः । गुणैर्गुणेभ्यः ।**

ಪರಮಾತ್ಮನಿಗೆ ನಿತ್ಯತ್ವವನ್ನು ಪರಿಹಾರ ಮಾಡುವ ಶ್ರುತಿಗಳಿಗೆ ವಿರೋಧವಿರುವುದರಿಂದ ನಿಲೀನ ಶ್ರುತಿಗೆ ಅರ್ಥಾಂತರವನ್ನೇ ಹೇಳಬೇಕು. 'ನಿತ್ಯೋ ನಿತ್ಯಾನಾಂ' ಎಂಬ ಶ್ರುತಿಗೆ ಅಪ್ರಾಮಾಣ್ಯವನ್ನು ಹೇಳಬಾರದು. ಏಕೆಂದರೆ ಅನೇಕ ಶ್ರುತಿಗಳಿರುವುದರಿಂದ ಇದಕ್ಕೆ ಪ್ರಾಬಲ್ಯವಿದೆ. ಯುಕ್ತಿಸಹಿತವಾದ ನಿಲೀನ ಶ್ರುತಿಯೂ ಕೂಡ ಪ್ರಬಲವಲ್ಲವೇ? ಎಂದು ಪ್ರಶ್ನಿಸಬಾರದು. ಶ್ರುತಿವಿರುದ್ಧವಾದ ಯುಕ್ತಿಗಳು ಸ್ವತಃ ಅಪ್ರಮಾಣವಾಗಿವೆ. 'ಗುಣೈಃ' ಎಂಬ ಪದಕ್ಕೆ 'ಗುಣೇಭ್ಯಃ' ಎಂಬರ್ಥವನ್ನು ಮಾಡಬೇಕು.

ವಿವರಣೆ – ಪರಮಾತ್ಮನಿಗೆ ನಿತ್ಯತ್ವವನ್ನು, 'ನಿತ್ಯೋ ನಿತ್ಯಾನಾಂ' ಇತ್ಯಾದಿ ಶ್ರುತಿಗಳು ಸಮರ್ಥನೆ ಮಾಡುತ್ತಿವೆ. ಆದ್ದರಿಂದ ನಿಲೀನ ಶ್ರುತಿಗೆ ಅಗೋಚರನಾಗಿದ್ದಾನೆಂಬ ಅರ್ಥಾಂತರವನ್ನೇ ಮಾಡಬೇಕು. ಇದನ್ನು ಬಿಟ್ಟು 'ನಿತ್ಯೋ ನಿತ್ಯಾನಾಂ' ಶ್ರುತಿಗೆ ಅಪ್ರಾಮಾಣ್ಯವನ್ನು ಹೇಳುವುದು ಯೋಗ್ಯವಾಗುವುದಿಲ್ಲ. ಏಕೆಂದರೆ 'ಸ ನಿತ್ಯೋ ನಿರ್ಗುಣಃ' 'ನಿತ್ಯೋ ವಿಭುಃ' ಇವೇ ಮೊದಲಾದ ಅನೇಕ ಶ್ರುತಿಗಳ ಸಂವಾದವಿರುವುದರಿಂದ 'ನಿತ್ಯೋ ನಿತ್ಯಾನಾಂ' ಎಂಬ ಶ್ರುತಿಯು ಅತ್ಯಂತ ಪ್ರಬಲವಾಗಿದೆ.

ಅತ್ತಾಧಿಕರಣ (೨-೩-೧೦)

'ಪರಮಾತ್ಮಾ ಲೀಯತೇ ಚೇತನತ್ವಾತ್ ಜೀವವತ್' ಎಂಬ ಯುಕ್ತಿಸಹಿತವಾದ್ದರಿಂದ ನಿಲೀನಶ್ರುತಿಯೂ ಕೂಡ ಪ್ರಬಲವಲ್ಲವೇ? ಎಂದು ಪ್ರಶ್ನಿಸುವುದೂ ಕೂಡ ತಪ್ಪು. ಶ್ರುತಿವಿರುದ್ಧವಾದ ಈ ಯುಕ್ತಿಯು ಅಪ್ರಮಾಣವಾಗಿದೆ.

**तत्वप्रकाशिका – न चोदाहृतश्रुतीनां स्वरूपविषयत्वं वाच्यम् । 'नित्यो नित्यानाम्' इति देहनित्यत्वस्या प्युक्तत्वात् । अतः श्रुत्यविरोधेन परमात्मलयस्य निरस्तत्वाद्युक्तस्तस्मिन् श्रुतिसमन्वय इति सिद्धम् ।।**

ನಿತ್ಯತ್ವ ವಿಷಯದಲ್ಲಿ ಉದಾಹರಿಸಲ್ಪಟ್ಟ ಶ್ರುತಿಗಳೆಲ್ಲವೂ ಪರಮಾತ್ಮನ ಸ್ವರೂಪಕ್ಕೆ ಮಾತ್ರ ಅನಿತ್ಯತ್ವವನ್ನು ಹೇಳುತ್ತಿದೆ ಹೊರತು ದೇಹಕ್ಕಲ್ಲ ಎಂದು ಪ್ರಶ್ನಿಸಬಾರದು. 'ನಿತ್ಯೋ ನಿತ್ಯಾನಾಂ' ಎಂಬುದಾಗಿ ದೇಹನಿತ್ಯತ್ವವನ್ನೂ ಕೂಡ ಹೇಳುತ್ತಿದೆ.

ಹೀಗೆ ಶ್ರುತಿಗಳ ವಿರೋಧವಿಲ್ಲದ ಕಾರಣ ಪರಮಾತ್ಮನಿಗೆ ಲಯವಿದೆ ಎಂಬುದನ್ನು ನಿರಾಕರಣೆ ಮಾಡಿದ್ದಾಯಿತು. ಆದ್ದರಿಂದ ಪರಮಾತ್ಮನಲ್ಲಿ ಶ್ರುತಿಸಮನ್ವಯವು ಸಿದ್ಧವಾಯಿತು.

**ವಿವರಣೆ** - 'ನಿತ್ಯೋ ನಿತ್ಯಾನಾಂ' ಎಂಬ ಶ್ರುತಿಯು ಕೇವಲ ಪರಮಾತ್ಮನ ಸ್ವರೂಪಕ್ಕೆ ಮಾತ್ರ ನಿತ್ಯತ್ವವನ್ನು ಹೇಳುವುದಾದರೆ ಜೀವರಿಗೂ ಇದು ಸಮಾನವಾದ್ದರಿಂದ ನಿತ್ಯರಿಗೂ ನಿತ್ಯತ್ವವು ವಿಷ್ಣುವಿನಲ್ಲಿ ಯುಕ್ತವಾಗುವುದಿಲ್ಲ. ನಿತ್ಯತ್ವದಲ್ಲಿ ಆಧಿಕ್ಯವನ್ನು ಕೂಡಿಸಬೇಕೆಂದರೆ ದೇಹತಃ ನಿತ್ಯತ್ವವನ್ನೂ ಕೂಡ ಒಪ್ಪಲೇಬೇಕು.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಆತ್ಮಾಧಿಕರಣ ಮುಗಿಯಿತು

ಆತ್ಮಾಧಿಕರಣ

(೨-೩-೧೦)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## आत्माधिकरणम्

### ಲಯ ಇಲ್ಲದವನು ಎಂದರೆ ವಿಷ್ಣು ಒಬ್ಬನೇ

**नात्मा श्रुतेर्नित्यत्वाच्च ताभ्यः ।। एवं ब्रह्मान्यस्य सर्वस्य व्युत्क्रमेण लये श्रुत्योक्ते तर्हि ब्रह्मणोऽपि तथैव सोऽस्त्विति शङ्कोदयात्सङ्गतिः ।**

ಹಿಂದಿನ ಅಧಿಕರಣದಲ್ಲಿ ಬ್ರಹ್ಮನಿಗಿಂತ ಬೇರೆಯದಾದ ಸಕಲ ಪದಾರ್ಥಗಳಿಗೆ ವ್ಯುತ್ಕ್ರಮದಿಂದ ಲಯವಾಗುತ್ತದೆ ಎಂಬುದಾಗಿ ಶ್ರುತಿಯಿಂದ ಸಮರ್ಥಿಸಿದ್ದಾಯಿತು. ಹಾಗಾದರೆ ಬ್ರಹ್ಮನಿಗೂ ಕೂಡ ಲಯವು ಉಂಟಾಗಲಿ ಎಂಬ ಆಶಂಕೆಯು ಪ್ರಾಪ್ತವಾದರೆ ಅದರ ಪರಿಹಾರಕ್ಕಾಗಿ 'ನಾತ್ಮಾ ಶ್ರುತೇರ್ನಿತ್ಯತ್ವಾಚ್ಚ ತಾಭ್ಯಃ' ಎಂಬ ಸೂತ್ರವು ಹೊರಟಿದೆ. ಆದ್ದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣವು ಸಂಗತವಾಗಿದೆ.

**अत्र पूर्वोक्तं ब्रह्मणस्सर्वस्रष्टृत्वादिकं ब्रह्मणो लयश्रुतिविरुद्धं न वेति चिन्ता । तदर्थं ''स इदं सर्वं विलाप्यान्तस्तमसि निलीन'' इति ब्रह्मणो लयश्रुतिः किं देहनाशरूपविनाशपरा उतापिहितत्वपरेति ।**

ಹಿಂದೆ ಯಾವ ಬ್ರಹ್ಮನಿಗೆ ಸರ್ವಸ್ರಷ್ಟೃತ್ವವನ್ನು ಹೇಳಲಾಯಿತೋ, ಆ ಬ್ರಹ್ಮನಿಗೆ ಈಗ ಲಯಶ್ರುತಿಯ ವಿರೋಧವು ಬರುತ್ತದೋ? ಅಥವಾ ಬರುವುದಿಲ್ಲವೋ? ಎಂಬುದು ಈ ಅಧಿಕರಣದ ಪ್ರಧಾನ ಸಂಶಯ. 'ಸ ಇದಂ ಸರ್ವಂ ವಿಲಾಪ್ಯಾಂತಸ್ತಮಸಿ ನಿಲೀನ' ಈ ಜಗತ್ತೆಲ್ಲವನ್ನೂ ಬ್ರಹ್ಮನು ಲಯಗೊಳಿಸಿ, ಕೊನೆಯಲ್ಲಿ ತಾನೂ ಸಹ ತಮಸ್ಸಿನಲ್ಲಿ ಲಯಹೊಂದುತ್ತಾನೆ ಎಂದು

ಹೇಳುವ ಲಯಶ್ರುತಿಯು ಬ್ರಹ್ಮನ ದೇಹನಾಶರೂಪವಾದ ವಿನಾಶವನ್ನು ಹೇಳುತ್ತಿದೆಯೋ, ಅಥವಾ ಇತರರಿಗೆ ಕಾಣದಂತೆ ತನ್ನನ್ನು ಮುಚ್ಚಿಕೊಳ್ಳುತ್ತಾನೆ ಎಂಬರ್ಥದಲ್ಲಿ ಲಯಶಬ್ದವನ್ನು ಪ್ರಯೋಗಿಸಿದೆಯೋ? ಎಂಬ ಸಂಶಯವವು ಪರಿಹಾರವಾಗಬೇಕು.

**तदर्थं निलीनशब्दस्य विनाशरूपार्थत्यागेनापिहितत्वपरत्वे किं ज्ञापकं नास्त्युतास्तीति ।**

ಹಿಂದಿನ ಸಂಶಯದ ಪರಿಹಾರಕ್ಕಾಗಿ 'ನಿಲೀನ' ಶಬ್ದಕ್ಕೆ ವಿನಾಶ ಎಂಬರ್ಥವನ್ನು ಪರಿತ್ಯಾಗ ಮಾಡಿ, ಇತರರಿಗೆ ಕಾಣದಂತೆ ಮುಚ್ಚಲ್ಪಡುವವನು ಎಂಬರ್ಥವನ್ನು ಸ್ವೀಕರಿಸಲು ಯಾವುದಾದರೂ ಪ್ರಮಾಣ ಇಲ್ಲವೋ? ಅಥವಾ ಇದೆಯೋ? ಎಂಬ ಸಂಶಯವು ಪರಿಹಾರವಾಗಬೇಕು.

**असम्भवस्त्वित्यत्र ब्रह्मणोऽनुत्पत्तिरुक्ता । अत्र त्वविनाश इति भेदः । न्यायविवरणोक्तां लयश्रुत्यनुग्राहिकां पूर्वपक्षयुक्तिमाह – चेतनत्वादिति ।। असम्भवस्त्वित्यधिकरणन्यायेन गतार्थत्वं निरस्यति ।। नच वक्तव्यमिति ।।**

'ಅಸಂಭವಸ್ತು' ಎಂಬ ಅಧಿಕರಣದಲ್ಲಿ ಬ್ರಹ್ಮನಿಗೆ ಉತ್ಪತ್ತಿಯೇ ಇಲ್ಲವೆಂದು ಹೇಳಲಾಗಿದೆ. ಈ ಅಧಿಕರಣದಲ್ಲಿ ನಾಶವಿಲ್ಲವೆಂದು ಹೇಳಲಾಗಿದೆ. ಆದ್ದರಿಂದ ಅಸಂಭವಾಧಿಕರಣದಿಂದ ಈ ಅಧಿಕರಣಕ್ಕೆ ಗತಾರ್ಥತ್ವದೋಷವು ಬರುವುದಿಲ್ಲ.

ನ್ಯಾಯವಿವರಣದಲ್ಲಿ ಲಯಶ್ರುತಿಗೆ ಅನುಗ್ರಾಹಕವಾದ ಪೂರ್ವಪಕ್ಷಯುಕ್ತಿಯನ್ನು ಹೇಳಿದ್ದಾರೆ. ಅದನ್ನೇ ಟೀಕೆಯಲ್ಲಿ 'ಚೇತನತ್ವಾತ್' ಎಂದು ಉಲ್ಲೇಖ ಮಾಡಿದ್ದಾರೆ. ಅಸಂಭವಾಧಿಕರಣದ ನ್ಯಾಯದಿಂದ ಗತಾರ್ಥತ್ವವನ್ನು ಪರಿಹಾರ ಮಾಡಲು 'ನಚ ವಕ್ತವ್ಯಮ್' ಎಂಬ ಟೀಕಾವಾಕ್ಯವು ಹೊರಟಿದೆ.

## ಶ್ರೀರಾಘವೇಂದ್ರತೀರ್ಥವಿರಚಿತ
## ಪ್ರಕಾಶ

**प्रकाशः –**

**नात्माश्रुतेः ।।** **लयश्रुतीति ।।** ''तमसि निलीन'' इति श्रुतीत्यग्रे व्यक्तम् ।। **अपिहितत्वेति ।।** अन्तर्हितत्वेत्यर्थः ।। **ज्ञापकमिति ।।** समाख्यादिरूपमित्यर्थः ।। **इति भेद इति ।।** आर्थिकपौनरुक्तयनिरासेन गतार्थत्वं निरस्यतीत्यग्रे व्यक्तम् ।।

'ಲಯಶ್ರುತಿ' ಎಂದರೆ 'ತಮಸಿ ನಿಲೀನಃ' ಎಂಬುದಾಗಿ ಮುಂದೆ ಉಲ್ಲೇಖ ಮಾಡುವ ಶ್ರುತಿ ಎಂದರ್ಥ. 'ಅಪಿಹಿತತ್ವ' ಎಂದರೆ ಮುಚ್ಚಲ್ಪಡುವವನು ಎಂದರ್ಥ, 'ಜ್ಞಾಪಕಮ್' ಎಂದರೆ ಸಮಾಖ್ಯಾದಿರೂಪವಾದ ಪ್ರಮಾಣ ಎಂದರ್ಥ. 'ಇತಿ ಭೇದ' ಎಂದರೆ ಲೀಲಾವಿಗ್ರಹಧಾರಿಯಾದ್ದರಿಂದ ಕೆಲವೊಮ್ಮೆ ಜನ್ಮಮರಣಗಳನ್ನು ತೋರಿಸುತ್ತಾನೆ ಎಂಬುದಾಗಿ ಆರ್ಥಿಕವಾಗಿ ಪುನರುಕ್ತಿಯನ್ನೂ ಕೂಡ ಮುಂದೆ ಪರಿಹಾರ ಮಾಡುತ್ತಾರೆ.

## तात्पर्यचन्द्रिका

**अन्ये तु चराचरेत्यधिकरणे चैत्रो जात इति व्यपदेशाज्जातकर्मादिविधानाच्च प्रतिशरीरं जीव उत्पद्यत इति प्राप्ते प्रतिशरीरं जीवोत्पत्तौ शास्त्रोक्तस्वर्गादि-फलायोगाज्जन्मव्यपदेशो जायमानस्थावरजङ्गमात्मकशरीरसम्बन्धाद्भाक्तो गौण इति सिद्धान्तः ।**

ಅದ್ವೈತಿಗಳ ಅಧಿಕರಣ ಶರೀರ ಹೀಗಿದೆ - ಅವರು 'ಚರಾಚರವ್ಯಪಾಶ್ರಯಃ' ಎಂಬುದೇ ಬೇರೆ ಅಧಿಕರಣವೆನ್ನುತ್ತಾರೆ. 'ನಾತ್ಮಾಶ್ರುತೇಃ' ಎಂಬುದೇ ಬೇರೆ ಅಧಿಕರಣವೆನ್ನುತ್ತಾರೆ. ಚರಾಚರವ್ಯಪಾಶ್ರಯ ಎಂಬ ಅಧಿಕರಣದ ರಚನೆ ಹೀಗಿದೆ – 'ಚೈತ್ರನು ಹುಟ್ಟಿದನು ಇತ್ಯಾದಿಯಾಗಿ ವ್ಯಪದೇಶವಿರುವುದರಿಂದ ಹಾಗೂ ಶಾಸ್ತ್ರದಲ್ಲಿ ಜಾತಕರ್ಮ, ವೈಶ್ವದೇವ, ಇಷ್ಟಿ ಮೊದಲಾದ ಕರ್ಮಗಳನ್ನು ವಿಧಾನ ಮಾಡಿದ್ದರಿಂದ ಪ್ರತಿಯೊಂದು ಶರೀರಗಳಲ್ಲೂ ಜೀವನು ಹುಟ್ಟುತ್ತಾನೆ'. ಇಷ್ಟು ಪೂರ್ವಪಕ್ಷ.

ಜೀವನಿಗೆ ಉತ್ಪತ್ತಿಯನ್ನು ಒಪ್ಪುವುದಾದರೆ ಶಾಸ್ತ್ರದಲ್ಲಿ ಹೇಳಲ್ಪಟ್ಟ ಸ್ವರ್ಗಾದಿ ಫಲದ ಅನುಭವವೇ ಕೂಡುವುದಿಲ್ಲ. ಏಕೆಂದರೆ ಯಾವ ಜೀವನು ಸಂಸಾರದಲ್ಲಿ ಸಾಧನೆ ಮಾಡಿದ್ದಾನೋ ಅವನು ನಷ್ಟನಾಗಿರುವುದರಿಂದ ಅವನಿಗೆ ಸ್ವರ್ಗದಲ್ಲಿ ಸುಖವೇ ಇಲ್ಲದಂತಾಗುತ್ತದೆ. ಆದ್ದರಿಂದ ಜನ್ಮವ್ಯಪದೇಶವನ್ನು ಶಾಸ್ತ್ರದಲ್ಲಿ ಹೇಳಿದ್ದು, ಸ್ಥಾವರಜಂಗಮಾತ್ಮಕವಾದ ಶರೀರದ ಸಂಬಂಧ ನಿಮಿತ್ತಕವಾಗಿ ಎಂದು ಗೌಣಾರ್ಥವನ್ನು ಮಾಡಬೇಕು. ಜಾತ ಎಂಬ ಶಬ್ದವು ಶರೀರದಲ್ಲಿ ಮುಖ್ಯವಾಗಿದೆ. ಜೀವನಲ್ಲಿ ಗೌಣವಾಗಿದೆ. ಇಷ್ಟು ಸಿದ್ಧಾಂತ.

**नात्मेत्यधिकरणे तु ''सर्व एत आत्मानो व्युच्चरन्ति'' इत्यादिश्रुत्या वियदादिवत्प्रतिसर्गं ब्रह्मणो जीव उत्पद्यत इति प्राप्ते तत्सृष्ट्वा तदेवानुप्राविशत्'' इत्यादिश्रुत्या सृष्टानुप्रविष्टब्रह्मरूपस्य जीवस्य नित्यब्रह्मभेदायोगात्कृतहानादिप्रसङ्गाच्च नोत्पत्तिरिति सिद्धान्त इत्याहुः ।**

'ನಾತ್ಮಾಶ್ರುತೇಃ' ಎಂಬ ಅಧಿಕರಣ ರಚನೆಯು ಹೀಗಿದೆ – 'ಸರ್ವೇ ಏತೇ ಆತ್ಮಾನಃ ವ್ಯುಚ್ಚರಂತಿ' ಎಂಬ ಶ್ರುತಿಯು ಆಕಾಶಾದಿಗಳಂತೆ ಪ್ರತಿಯೊಂದು ಸೃಷ್ಟಿಯ ಪ್ರಾರಂಭದಲ್ಲಿ ಬ್ರಹ್ಮನು ಜೀವನನ್ನು ಸೃಷ್ಟಿ ಮಾಡುತ್ತಾನೆ ಎಂಬುದು ಅಧಿಕರಣ ಪೂರ್ವಪಕ್ಷ.

'ತತ್ಸೃಷ್ಟ್ವಾ ತದೇವಾನುಪ್ರವಿಶಾತ್' ಎಂಬ ಶ್ರುತಿಯ ಆಧಾರದಿಂದ ಸೃಷ್ಟಿಯಲ್ಲಿ ಪ್ರವೇಶವನ್ನು ಹೊಂದಿದ ಬ್ರಹ್ಮನೇ ಜೀವನಾಗಿರುವುದರಿಂದ ನಿತ್ಯಸ್ವರೂಪನಾದ ಬ್ರಹ್ಮನಿಗಿಂತ ಭೇದವು ಜೀವನಿಗೆ ಯುಕ್ತವಾಗುವುದಿಲ್ಲ. ಈ ಕಾರಣದಿಂದ ಮತ್ತು ಕೃತಹಾನಿ, ಅಕೃತ ಅಭ್ಯಾಗಮ ಎಂಬ ದೋಷವು ಬರುವುದರಿಂದಲೂ ಜೀವನಿಗೆ ಉತ್ಪತ್ತಿಯು ಇರುವುದಿಲ್ಲ. ಇಷ್ಟು ಅಧಿಕರಣದ ಸಿದ್ಧಾಂತ.

**तत्र । द्वितीयसिद्धान्तेन दण्डापूपनयहतस्याद्यपूर्वपक्षस्यानुदयात् ।**

ಅದ್ವೈತಿಗಳ ಈ ಎರಡು ಅಧಿಕರಣಗಳ ರಚನೆ ಅಯುಕ್ತವಾಗಿದೆ. ಏಕೆಂದರೆ ಎರಡನೆಯ ಅಧಿಕರಣದ ಸಿದ್ಧಾಂತದಲ್ಲಿ ಜೀವನು ಬ್ರಹ್ಮನಿಂದ ಅಭಿನ್ನನಾಗಿರುವ ಕಾರಣ ಉತ್ಪನ್ನನಾಗಲು ಸಾಧ್ಯವೇ ಇಲ್ಲವೆಂದು ಸಮರ್ಥನೆ ಮಾಡಿದಿರಿ. ಹಾಗಾದರೆ ಇದೇ ಸಿದ್ಧಾಂತ ನ್ಯಾಯವನ್ನು ಆಶ್ರಯಿಸಿ ದಂಡಾಪೂಪ ನ್ಯಾಯದಿಂದಲೇ ಮೊದಲನೆಯ ಅಧಿಕರಣದ ಪೂರ್ವಪಕ್ಷವು ಹುಟ್ಟುವುದೇ ಇಲ್ಲ. ಏಕೆಂದರೆ ಜೀವನು ಬ್ರಹ್ಮನಿಗಿಂತ ಅಭಿನ್ನನಾದ ಮೇಲೆ ಶರೀರ ಹುಟ್ಟಿದಾಗ ತಾನು ಹುಟ್ಟುತ್ತಾನೆ ಎಂಬ ಪೂರ್ವಪಕ್ಷ ಹುಟ್ಟಲು ಹೇಗೆ ಸಾಧ್ಯ ?

**तद्व्यपदेश इति सूत्रस्यस्य ''विज्ञानमनसि'' इति पूर्वसूत्र-प्रकृतविज्ञानमनःक्रमपरामर्शितच्छब्दस्याप्रकृतजीवजन्मविषयत्वायोगाच्च ।**

ಮತ್ತು 'ತದ್ವ್ಯಪದೇಶಃ' ಎಂಬ ಸೂತ್ರದಲ್ಲಿ 'ವಿಜ್ಞಾನಮನಸೀ' ಎಂಬುದಾಗಿ ಹಿಂದಿನ ಸೂತ್ರದಲ್ಲಿ ಪ್ರಕೃತವಾದ ವಿಜ್ಞಾನ ಹಾಗೂ ಮನಸ್ಸುಗಳ ಕ್ರಮವನ್ನೇ ಸುಲಭವಾಗಿ ಪರಾಮರ್ಶೆ ಮಾಡಲು ಬರುವಾಗ ಅಪ್ರಕೃತವಾದ ಜೀವಜನ್ಮವನ್ನು ಹೇಳುತ್ತಿದೆ ಎಂಬುದಾಗಿ ಅರ್ಥೈಸುವುದು ಅಯುಕ್ತವಾಗಿದೆ. ಆದ್ದರಿಂದ 'ತದ್ವ್ಯಪದೇಶಃ = ಜೀವಜನ್ಮವ್ಯಪದೇಶಃ' ಎಂಬ ಅರ್ಥವು ಅಪ್ರಕೃತವಾಗಿದೆ.

**त्वद्रीत्या देहात्मभेदसाधकेन ''एक आत्मनः शरीरे भावात्'' इत्यधिकरणेनाद्यस्य गतार्थत्वाच्च ।**

ಮತ್ತು ನಿಮ್ಮ ಸಿದ್ಧಾಂತದಲ್ಲಿ ಮೂರನೇ ಅಧ್ಯಾಯದ ಮೂರನೇ ಪಾದದಲ್ಲಿ ಬರುವ 'ಏಕ ಆತ್ಮನಃ ಶರೀರೇ ಭಾವಾತ್' ಎಂಬ ಸೂತ್ರವು ದೇಹ ಹಾಗೂ ಆತ್ಮನಿಗೆ ಭೇದಸಾಧಕವಾಗಿದೆ. ಅದರಿಂದಲೇ ಮೊದಲನೇ ಅಧಿಕರಣವು ಗತಾರ್ಥವಾಯಿತು. ಆದ್ದರಿಂದ ಚರಾಚರವ್ಯಪಾಶಯಶ್ತು ಎಂಬ ಸೂತ್ರ ಹೊರಟದ್ದೇ ವ್ಯರ್ಥ.

'ಏಕ ಆತ್ಮನಃ ಶರೀರೇ ಭಾವಾತ್' ಎಂಬ ಸೂತ್ರವು ಅಂಶ ಹಾಗೂ ಅಂಶಿಗಳಿಗೆ ಅಭೇದವನ್ನು ಸಾಧನೆ ಮಾಡಲು ಹೊರಟಿದೆ ಎಂದು ನಾವು ವ್ಯಾಖ್ಯಾನ ಮಾಡುತ್ತೇವೆ. ಆದರೆ ಅದ್ವೈತಿಗಳು ಚಾರ್ವಾಕಮತನಿರಾಸಕ್ಕೋಸ್ಕರ ಈ ಸೂತ್ರ ಹೊರಟಿದೆ ಎಂದು ವ್ಯಾಖ್ಯಾನ ಮಾಡುತ್ತಾರೆ. ಚಾರ್ವಾಕರು ಶರೀರ ಹಾಗೂ ಆತ್ಮನಿಗೆ ಅಭೇದವನ್ನು ಹೇಳಿದಾಗ ಅದ್ವೈತಿಗಳು ಶರೀರವೇ ಬೇರೆ

ಆತ್ಮನೇ ಬೇರೆ ಎಂದು ಸಮರ್ಥಿಸುತ್ತಾರೆ. 'ಚರಾಚರವ್ಯಪಾಶ್ರಯಸ್ತು' ಎಂಬ ಅಧಿಕರಣದ ಸಿದ್ಧಾಂತದಲ್ಲೂ ಕೂಡ ಸ್ಥಾವರಜಂಗಮಾತ್ಮಕವಾದ ಶರೀರ ಮಾತ್ರ ಹುಟ್ಟುತ್ತದೆ. ಆತ್ಮನು ಹುಟ್ಟುವುದಿಲ್ಲ ಎಂದು ಸಿದ್ಧಾಂತ ಮಾಡುವುದರಿಂದ ಶರೀರವೇ ಬೇರೆ ಆತ್ಮನೇ ಬೇರೆ ಎಂದು ಹೇಳಿದಂತಾಯಿತು. ಆದ್ದರಿಂದ ಮೂರನೇ ಅಧ್ಯಾಯದ ಮೂರನೇ ಪಾದದ 'ಏಕ ಆತ್ಮನಃ ಶರೀರೇ ಭಾವಾತ್' ಎಂಬ ಸೂತ್ರದಿಂದ ಈ ಸೂತ್ರವು ಗತಾರ್ಥವಾಯಿತು.

**चैत्रो जात इत्यादेस्त्वन्मते गौरोऽहमित्यादिवदध्यासत्त्वेन सूत्रे गौणत्वोक्तययोगाच्च ।**

ಅದ್ವೈತ ಸಿದ್ಧಾಂತದಲ್ಲಿ ನಿಜವಾಗಿಯೂ ಕೂಡ 'ಚೈತ್ರೋ ಜಾತ' ಎಂಬುದನ್ನು ಅಧ್ಯಾಸವೆಂದೇ ಹೇಳಬೇಕು ಹೊರತು ಗೌಣವೆಂದು ಹೇಳಲು ಸಾಧ್ಯವಿಲ್ಲ. ಉದಾ– ಗೌರೋऽಹಂ ಎಂಬ ವ್ಯವಹಾರವಿದೆ. ಈ ವ್ಯವಹಾರದಲ್ಲಿ ದೇಹತಾದಾತ್ಮ್ಯದ ಅಧ್ಯಾಸವನ್ನು ಅದ್ವೈತಿಗಳು ಒಪ್ಪುವುದರಿಂದ ಶರೀರ ಧರ್ಮವು ಆತ್ಮನಲ್ಲಿ ಅಧ್ಯಸ್ತವಾಗಿದೆ ಎನ್ನುತ್ತಾರೆ. ಅದರಂತೆ ಆತ್ಮನ ಧರ್ಮವೂ ಕೂಡ ಶರೀರದಲ್ಲಿ ಅಧ್ಯಾಸವಾಗಿದೆ ಎಂದು ಹೇಳುತ್ತಾರೆ. ಇದರಂತೆ ಜನನ ಮರಣಗಳೂ ಕೂಡ ಶರೀರದ ಧರ್ಮವಾಗಿವೆ. ಇದು ಆತ್ಮನಲ್ಲಿ ಅಧ್ಯಸ್ತವಾದಾಗ 'ಅಹಂ ಜಾತಃ' ಇತ್ಯಾದಿಯಾಗಿ ಪ್ರತೀತಿಯು ಬರುತ್ತಿದೆ. ಆದ್ದರಿಂದ ಚೈತ್ರಃ ಜಾತಃ ಇತ್ಯಾದಿ ವ್ಯವಹಾರಗಳನ್ನು ಅಧ್ಯಾಸವೆಂದು ಹೇಳಬೇಕು ಹೊರತು ಗೌಣವೆಂದು ಅದ್ವೈತಿಗಳಿಗೆ ಹೇಳಲು ಸಾಧ್ಯವಿಲ್ಲ.

**द्वितीये ''तत्सृष्ट्वा तदेवानुप्राविशत्'' इति श्रुत्या सृष्टानुप्रवेशविशिष्टस्यैव जीवत्वेन तस्य नित्यत्वोक्त्ययोगाच्च ।**

ಎರಡನೆಯ ಅಧಿಕರಣ ರಚನೆಯೂ ಕೂಡ ಅಯುಕ್ತವಾಗಿದೆ. ಅದು ಹೀಗೆ – 'ತತ್ಸೃಷ್ಟ್ವಾ ತದೇವಾನುಪ್ರಾವಿಶತ್' ಎಂಬ ಶ್ರುತಿಯು ಹೇಳುವಂತೆ ಬ್ರಹ್ಮನು ಯಾವ ಪದಾರ್ಥಗಳನ್ನು ಸೃಷ್ಟಿ ಮಾಡುತ್ತಾನೋ ಅದರಲ್ಲೇ ಪ್ರವೇಶವನ್ನು ಹೊಂದುತ್ತಾನೆ. ಅಂತಹ ಪ್ರವೇಶವಿಶಿಷ್ಟನಾದ ಬ್ರಹ್ಮನೇ ಜೀವಭಾವವನ್ನು ತಾಳುತ್ತಾನೆಂದು ನೀವು ಹೇಳುವಿರಿ. ಇಂತಹ ಜೀವನಿಗೆ ನಿತ್ಯತ್ವನ್ನು ಹೇಳುವುದು ಅಯುಕ್ತವಾಗುತ್ತದೆ. ಹಾಗಾಗಿ ನಿತ್ಯನಾದ ಬ್ರಹ್ಮನಿಂದ ಅಭಿನ್ನನಾಗಿರುವ ಕಾರಣ ಜೀವನಿಗೆ ಉತ್ಪತ್ತಿ ಹಾಗೂ ನಾಶಗಳಿಲ್ಲ ಎಂದು ಸಿದ್ಧಾಂತ ಮಾಡಿದ್ದೇ ತಪ್ಪು.

**चिन्मात्रानादित्वं तु ''असम्भवस्तु'' इत्यनेनैव सिद्धम् । सिद्धान्तेऽपि साद्यन्तःकरणावच्छिन्नस्य कर्तुस्सादित्वेन कृतहान्याद्यापातस्यापरिहाराच्च ।**

ಇನ್ನು ಜೀವನಲ್ಲಿರುವ ಚಿನ್ಮಾತ್ರವು ಅನಾದಿಯಾಗಿದೆ ಎಂದು ಉತ್ತರಿಸಬೇಕು. ಈ ವಿಷಯವು 'ಅಸಂಭವಸ್ತು' ಎಂಬ ಅಧಿಕರಣದಿಂದಲೇ ಸಿದ್ಧವಾಗಿರುವಾಗ ಪುನಃ ಈ ಅಧಿಕರಣ ಹೊರಡುವುದು ವ್ಯರ್ಥವಾಗುತ್ತದೆ.

ಸಿದ್ಧಾಂತವೂ ಕೂಡ ತಪ್ಪು. ಒಂದುವೇಳೆ ಜೀವನಿಗೆ ಉತ್ಪತ್ತಿ ಹಾಗೂ ನಾಶಗಳನ್ನು ಒಪ್ಪಿದರೆ ಯಾರು ಜ್ಯೋತಿಷ್ಟೋಮಯಾಗವನ್ನು ಮಾಡಿರುತ್ತಾನೋ ಅವು ನಾಶವಾಗಿರುವುದರಿಂದ 'ಕೃತಹಾನಿ' ದೋಷ, ಪುಣ್ಯ ಮಾಡದ ಮತ್ತೊಬ್ಬ ವ್ಯಕ್ತಿಗೆ ಸ್ವರ್ಗಾದಿಫಲವು ಬರುವುದರಿಂದ 'ಅಕೃತ ಅಭ್ಯಾಗಮ' ಎಂಬ ದೋಷವನ್ನು ಅದ್ವೈತಿಗಳಾದ ನೀವು ಪೂರ್ವಪಕ್ಷಿಗಳನ್ನು ಕುರಿತು ಹೇಳುವಿರಿ. ಆದರೆ ಈ ದೋಷ ನಿಮಗೂ ಕೂಡ ಸಮಾನವಾಗಿದೆ. ನಿಮ್ಮ ಸಿದ್ಧಾಂತದಲ್ಲಿ ಕರ್ತೃತ್ವ, ಭೋಕ್ತೃತ್ವ ಮೊದಲಾದ ಧರ್ಮಗಳು ಕೇವಲ ಚೈತನ್ಯನಿಗೆ ಇರುವುದಿಲ್ಲ. ಅಂತಃಕರಣಾವಚ್ಛಿನ್ನನಾದ ಚೈತನ್ಯನಿಗೆ ಒಪ್ಪಿದ್ದೀರಿ. ಅಂತಹ ಅಂತಃಕರಣಾವಚ್ಛಿನ್ನನಾದ ಅಹಮರ್ಥನು ಸಾದಿಯೇ ಆಗಿರುತ್ತಾನೆ. ಇಂತಹ ಅಹಮರ್ಥನಿಗೆ ಪ್ರತಿಶರೀರದಲ್ಲೂ ಉತ್ಪತ್ತಿ ಇದೆ. ಪ್ರತಿದಿವಸವೂ ಕೂಡ ಉತ್ಪತ್ತಿ ಇದೆ. ಏಕೆಂದರೆ ಸುಷುಪ್ತಿಯಲ್ಲಿ ಅಂತಃಕರಣಾದಿಗಳು ಲಯವನ್ನು ಹೊಂದುವುದರಿಂದ ಅಂತಃಕರಣಾವಚ್ಛಿನ್ನನೂ ಕೂಡ ಲಯವನ್ನು ಹೊಂದುತ್ತಾನೆ. ನಿನ್ನೆಯ ದಿವಸ ಆಚರಿಸಿದ ಯಾವ ಪುಣ್ಯವಿದೆಯೋ ಅದು ನಷ್ಟವಾಯಿತು. ಇವತ್ತು ಇರುವ ಅಹಮರ್ಥನೇ ಬೇರೆಯಾದ್ದರಿಂದ ಅಕೃತ ಅಭ್ಯಾಗಮ ಎಂಬ ದೋಷವು ಪರಿಹರಿಸಿಕೊಳ್ಳಲು ನಿಮ್ಮಿಂದ ಸಾಧ್ಯವಿಲ್ಲ.

**द्युभ्वाद्यधिकरणन्यायेन सौत्रात्मशब्दस्य परमात्मन्येव मुख्यत्वेन द्वितीयस्य भाष्योक्तरीत्याऽवश्यं विचार्य ब्रह्मलयविषयताया एवोचितत्वाच ।**

ಮತ್ತು ಎರಡನೆಯ ಈ ಸೂತ್ರದಲ್ಲಿ ಆತ್ಮ ಎಂಬ ಶಬ್ದ ಇರುವುದರಿಂದ ಇದು ಬ್ರಹ್ಮಲಯವಿಷಯವಾಗಿದೆ ಎಂದೇ ಹೇಳಬೇಕು. ದ್ಯುಭ್ವಾದ್ಯಧಿಕರಣದ ನ್ಯಾಯದಿಂದ ಸೂತ್ರದಲ್ಲಿರುವ ಆತ್ಮಶಬ್ದವು ಪರಮಾತ್ಮನಲ್ಲಿಯೇ ಮುಖ್ಯವಾಗಿ ಬರುತ್ತದೆ, ಜೀವನಲ್ಲಿ ಬರುವುದಿಲ್ಲ. ಆದ್ದರಿಂದ ನಾವು ಮಾಡಿದ ವ್ಯಾಖ್ಯಾನವೇ ಸಮಂಜಸವಾಗಿದೆ.

**न कर्मेत्यत्र संसारानादित्वस्योक्तत्वेन द्वितीयस्य तेन गतार्थत्वाच । एतेन ''नात्म'' इत्यस्य जीवानुत्पत्तिपरतां वदतां केषाञ्चित्पक्षोऽपि निरस्तः ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् आत्माधिकरणं सम्पूर्णम् ।।१०।।**

'ನ ಕರ್ಮ ಅವಿಭಾಗಾತ್' ಎಂಬ ಸೂತ್ರದಲ್ಲಿ ಕರ್ಮಗಳು ಅನಾದಿ ಎಂದು ನಾವು ವ್ಯಾಖ್ಯಾನ ಮಾಡಿದ್ದೇವೆ. ಆದರೆ ಅದ್ವೈತಿಗಳು ಸಂಸಾರವು ಅನಾದಿ ಎಂದು ವ್ಯಾಖ್ಯಾನ ಮಾಡಿದ್ದಾರೆ. ಸಂಸಾರವು ಅನಾದಿ ಎಂದು ನೀವು ಅಲ್ಲಿ ಸಮರ್ಥನೆ ಮಾಡಿದ ಮೇಲೆ ಪ್ರತಿಕಲ್ಪದಲ್ಲಿಯೂ ಜೀವನು ಉತ್ಪತ್ತಿಯನ್ನು ಹೊಂದುತ್ತಾನೆ ಎಂಬ ಪೂರ್ವಪಕ್ಷ ಹುಟ್ಟಲು ಸಾಧ್ಯವೇ ಇಲ್ಲ. ಆದ್ದರಿಂದ 'ನ ಕರ್ಮ ಅವಿಭಾಗಾತ್' ಎಂಬ ಅಧಿಕರಣದಿಂದ ಈ ಅಧಿಕರಣವು ಗತಾರ್ಥವಾಯಿತು.

ಆತ್ಮಾಧಿಕರಣ (೨-೩-೧೦)

ವಿಶಿಷ್ಟಾದ್ವೈತಿಗಳು ಜೀವನಿಗೆ ಉತ್ಪತ್ತಿ ಇಲ್ಲ ಎಂಬುದಾಗಿ 'ನಾತ್ಮಾಶ್ರುತೇಃ' ಎಂಬ ಅಧಿಕರಣವನ್ನು ವ್ಯಾಖ್ಯಾನ ಮಾಡಿದ್ದಾರೆ. ಆದರೆ ಆತ್ಮ ಎಂಬ ಶಬ್ದವು ಬ್ರಹ್ಮನನ್ನೇ ಮುಖ್ಯವಾಗಿ ಹೇಳುತ್ತದೆಂಬುದು ದ್ಯುಭ್ವಾದ್ಯಧಿಕರಣದಿಂದ ಸಿದ್ಧವಾದ್ದರಿಂದ ಇವರ ಪಕ್ಷವೂ ಕೂಡ ಅದ್ವೈತಿಗಳ ನಿರಾಕರಣೆಯಿಂದಲೇ ನಿರಸ್ತವಾಯಿತು.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಆತ್ಮಾಧಿಕರಣವು ಸಂಪೂರ್ಣವಾಯಿತು

**प्रकाशः —**

**अन्ये त्विति ।।** तन्मते ''चराचर'' इत्यस्याधिकरणान्तरत्वात्तस्य च ''नात्म'' इत्यस्य च दूषणोक्तिसौकर्याय युगपदुभयार्थमनुवदति ।। **चरेति ।।**

ಶಂಕರಭಾಷ್ಯದ ಅಧಿಕರಣ ರಚನೆ ಹೀಗಿದೆ- ಅವರು 'ಚರಾಚರವ್ಯಪಾಶ್ರಯಸ್ತು' ಎಂಬ ಸೂತ್ರವನ್ನು ಬೇರೆ ಅಧಿಕರಣವೆನ್ನುತ್ತಾರೆ. 'ನಾತ್ಮಾಶ್ರುತೇಃ' ಎಂಬುದನ್ನೇ ಬೇರೆ ಅಧಿಕರಣವೆನ್ನುತ್ತಾರೆ. ಆದರೆ ಎರಡು ಅಧಿಕರಣಗಳ ಒಂದೇ ವಿಚಾರವಿರುವುದರಿಂದ ದೂಷಣವನ್ನು ಹೇಳಲು ಅನುಕೂಲವಾಗುತ್ತದೆಂಬ ದೃಷ್ಟಿಯಿಂದ ಗ್ರಂಥಕಾರರು ಎರಡನ್ನೂ ಒಟ್ಟಿಗೆ 'ಚರಾಚರ' ಇತ್ಯಾದಿಯಾಗಿ ಅನುವಾದ ಮಾಡುತ್ತಿದ್ದಾರೆ.

**प्रकाशः —** चराचरेत्यारभ्यापादपरिसमाप्ति जीवविचारः । तत्र ''चराचर'' इति, ''नात्म'' इति च द्वयमपि जीवस्योत्पत्तिविनाशनिरासपरम् । चैत्रादिनामधेयं तावज्जीवात्मनो न शरीरस्य । तन्नाम्ने शरीराय श्राद्धादिकरणानुपपत्तेः। तथा च चैत्रो जातो मृत इति व्यपदेशो जीवस्यैव । तथा जातकर्मवैश्वानरेष्ट्यादिकरणमपि जीवजनननिमित्तमेवेति तदन्यथानुपपत्त्या जीव उत्पद्यत इति विज्ञायत इत्यर्थः ।

'ಚರಾಚರವ್ಯಪಾಶ್ರಯಸ್ತು' ಎಂಬ ಸೂತ್ರದಿಂದ ಪ್ರಾರಂಭ ಮಾಡಿ ಈ ಮೂರನೇ ಪಾದವು ಮುಗಿಯುವ ತನಕ ಜೀವವಿಷಯಕವಾದ ವಿಷಯವೇ ಪ್ರಸಕ್ತವಾಗಿದೆ. ಪ್ರಾರಂಭದ ಚರಾಚರ ಎಂಬ ಸೂತ್ರ ಹಾಗೂ ನಾತ್ಮಾಶ್ರುತೇಃ ಎಂಬ ಸೂತ್ರವು ಜೀವನಿಗೆ ಉತ್ಪತ್ತಿ ಹಾಗು ವಿನಾಶಗಳನ್ನು ನಿರಾಕರಣೆ ಮಾಡುವುದಕ್ಕಾಗಿ ಹೊರಟಿವೆ.

ಪೂರ್ವಪಕ್ಷ – ಚೈತ್ರ ಮೈತ್ರ ಮೊದಲಾದ ಹೆಸರು ಜೀವಾತ್ಮನಿಗೆ ಸಂಬಂಧಪಟ್ಟಿವೆಯೇ ಹೊರತು ಶರೀರಕ್ಕೆ ಅಲ್ಲ. ಏಕೆಂದರೆ ಶರೀರವು ಚೈತ್ರ ಇತ್ಯಾದಿಯಾಗಿ ಕರೆಸಿಕೊಳ್ಳುವುದಾದರೆ ಶ್ರಾದ್ಧಾದಿಗಳನ್ನು ಮಾಡುವುದೇ ಅನುಪಪನ್ನವಾಗುತ್ತದೆ. ಏಕೆಂದರೆ ಆಗ ಶರೀರವು ನಾಶವಾಗಿರುತ್ತದೆ. ಆದ್ದರಿಂದ ಚೈತ್ರನು ಹುಟ್ಟಿದನು. ಚೈತ್ರನು ಸತ್ತನು ಇತ್ಯಾದಿ ವ್ಯಪದೇಶವು ಜೀವನಿಗೆ ಸಂಬಂಧಪಟ್ಟಿದೆಯೇ ಹೊರತು ಶರೀರಕ್ಕಲ್ಲ.

ಅದರಂತೆ ಹುಟ್ಟಿದ ಕೂಡಲೇ ಜಾತಕರ್ಮ ಹಾಗೂ ವೈಶ್ವಾನರ ಇಷ್ಟಿ ಮೊದಲಾದ ಕಾರ್ಯಗಳನ್ನು ಮಾಡಬೇಕು. ಇದನ್ನೂ ಕೂಡ ಜೀವಜನನನಿಮಿತ್ತವಾಗಿ ಮಾಡಬೇಕೇ ಹೊರತು ಶರೀರಜನನನಿಮಿತ್ತವಾಗಿ ಅಲ್ಲ. ಹೀಗೆ ಅನ್ಯಕಾನುಪಪತ್ತ್ಯಾ ಜೀವನಿಗೆ ಉತ್ಪತ್ತಿ ಇದೆ ಎಂದು ತಿಳಿಯುತ್ತದೆ.

**ಪ್ರಕಾಶಃ** – तद्व्यपदेशः जीवजननादि-व्यपदेशः । चराचरव्यपाश्रयः जङ्गमस्थावरशरीरविषय एव मुख्यस्सन् जीवे भाक्तः गौणः । देहसंयोगादिनिमित्तकः। कुतः । तद्भावभावित्वात् । देहप्रादुर्भावतिरोभावयोर्भावेन जन्ममरण-व्यपदेशभावादिति सूत्रार्थं हृदि कृत्वा गौणतायां बीजं वदन्नेव सिद्धान्तमनुवदति ।। प्रतिशरीरमिति।।

ಸೂತ್ರಾರ್ಥ ಹಾಗೂ ಸಿದ್ಧಾಂತಗಳು ಹೀಗಿವೆ – ತದ್ವ್ಯಪದೇಶಃ ಜೀವನಲ್ಲಿರುವ ಜನನಾದಿವ್ಯಪದೇಶವು, ಚರಾಚರವ್ಯಪಾಶ್ರಯಃ = ಜಂಗಮಸ್ಥಾವರಾತ್ಮಕವಾದ ಶರೀರವಿಷಯಕವಾಗಿದೆ. ಆದ್ದರಿಂದ ಮುಖ್ಯವೇ ಆಗಿದೆ. ಜೀವನಲ್ಲಿ ಭಾಕ್ತಃ ಸ್ಯಾತ್ = ಗೌಣವಾಗಿದೆ. ಏಕೆಂದರೆ ಜೀವನಲ್ಲಿ ಜನನ ವ್ಯಪದೇಶವು ದೇಹಸಂಯೋಗಾದಿ ನಿಮಿತ್ತಕವಾಗಿದೆ. ಏಕೆಂದರೆ ತದ್ಭಾವಭಾವಿತ್ವಾತ್ = ದೇಹದ ಪ್ರಾದುರ್ಭಾವವೇ ಜನ್ಮ, ದೇಹದ ತಿರೋಭಾವವೇ ಮರಣ ಎಂಬ ವ್ಯಪದೇಶವು ಜಗತ್ತಿನಲ್ಲಿದೆ. ಇಷ್ಟು ಸೂತ್ರಾರ್ಥ. ಶರೀರದಲ್ಲಿ 'ಜಾತಃ' ಇತ್ಯಾದಿ ವ್ಯವಹಾರವು ಮುಖ್ಯವಾಗಿದೆ, ಜೀವನಲ್ಲಿ ಗೌಣವಾಗಿದೆ ಎಂದು ಏಕೆ ಹೇಳಬೇಕು? ಎಂಬ ಪ್ರಶ್ನೆಗೆ ಕಾರಣವನ್ನು ನೀಡುತ್ತಾ ಸಿದ್ಧಾಂತವನ್ನು ಪ್ರತಿಶರೀರಂ ಎಂಬುದಾಗಿ ಅನುವಾದ ಮಾಡುತ್ತಿದ್ದಾರೆ.

**ಪ್ರಕಾಶಃ – वियदादिवदिति ।।** पूर्वत्र हि शरीराश्रयौ जीवस्योत्पत्तिविनाशौ नस्त इत्युक्तम् । वियदादिवत्स्वरूपेणैव सर्गादौ जीव उत्पद्यते । तावतापि कल्पमात्रावस्थायित्वेन स्वर्गादिभोगसम्भवादित्यर्थः । आत्मा जीवो नोत्पद्यते आकाशाद्युत्पत्तिप्रकरणेऽस्योत्पत्तेरश्रवणात् ।

'ವಿಯದಾದಿವತ್' ಎಂಬ ವಾಕ್ಯದ ಅಭಿಪ್ರಾಯ ಹೀಗಿದೆ – ಹಿಂದಿನ ಚರಾಚರವ್ಯಪಾಶ್ರಯಾಧಿ ಕರಣದಲ್ಲಿ ಶರೀರಕ್ಕೆ ಆಶ್ರಯನಾದ ಜೀವನಿಗೆ ಉತ್ಪತ್ತಿ ಹಾಗೂ ವಿನಾಶಗಳು ಇಲ್ಲವೆಂದು ಸಮರ್ಥಿಸಿದ್ದಾಯಿತು. ಅಂದರೆ ಶರೀರವು ಹುಟ್ಟಿದಾಗ ಜೀವನು ಹುಟ್ಟುತ್ತಾನೆ. ಶರೀರವು ನಾಶವಾದಾಗ ಜೀವನು ನಾಶವಾಗುತ್ತಾನೆ ಎಂದು ಹಿಂದಿನ ಅಧಿಕರಣದಲ್ಲಿ ಸಮರ್ಥಿಸಲಾಯಿತು. ಈಗ 'ನಾತ್ಮಾಶ್ರುತೇಃ' ಎಂಬ ಅಧಿಕರಣದಲ್ಲಿ ಸೃಷ್ಟಿಯ ಪ್ರಾರಂಭದಲ್ಲಿ ಆಕಾಶಾದಿಗಳಂತೆ ಜೀವನು ಹುಟ್ಟುತ್ತಾನೆ. ಪ್ರಳಯಕಾಲದಲ್ಲಿ ನಾಶವಾಗುತ್ತಾನೆ ಎಂಬ ಪೂರ್ವಪಕ್ಷವನ್ನು ನಿರಾಕರಣೆ ಮಾಡಲಾಗಿದೆ. ಹೀಗೆ ಹೇಳುವುದರಿಂದ ಒಂದು ಕಲ್ಪದ ತನಕ ಜೀವನು ಸ್ಥಾಯಿಯಾಗಿದ್ದಾನಾದ್ದರಿಂದ ಸ್ವರ್ಗಾದಿಭೋಗಗಳು ಯುಕ್ತವಾಗುತ್ತವೆ. ಇಷ್ಟು 'ನಾತ್ಮಾಶ್ರುತೇಃ' ಎಂಬ ಅಧಿಕರಣದ ಪೂರ್ವಪಕ್ಷ.

ಸಿದ್ಧಾಂತ ಹೀಗಿದೆ – ಆತ್ಮಾ = ಜೀವನು, ನ = ಉತ್ಪನ್ನನಾಗುವುದಿಲ್ಲ, ಅಶ್ರುತೇಃ = ಆಕಾಶಾದಿಗಳಿಗೆ ಉತ್ಪತ್ತಿ ಪ್ರಕರಣದಲ್ಲಿ ಜೀವನಿಗೆ ಉತ್ಪತ್ತಿ ಇದೆ ಎಂದು ಶ್ರುತವಾಗಿಲ್ಲ.

ಆತ್ಮಾಧಿಕರಣ (೨-೩-೧೧)

**प्रकाशः –** ''अविनाशी वा अरेऽयमात्म'' इत्यादिश्रुतिभ्योऽस्य नित्यत्वात्। चशब्दोक्ताजत्वाविकारत्वब्रह्मतादात्म्यादिभ्यश्चेति सूत्रार्थं हृदि कृत्वा भामत्युक्तं सिद्धान्तप्रमेयमन्वाह – **तत्सृष्ट्वेति ।। भेदेति ।।**

ಅಷ್ಟೇ ಅಲ್ಲದೇ, 'ಅವಿನಾಶೀ ವಾ ಅರೇಽಯಾಮಾತ್ಮಾ' ಇತ್ಯಾದಿ ಶ್ರುತಿಗಳಿಂದ ಆತ್ಮನು ನಿತ್ಯನಾಗಿದ್ದಾನೆಂದು ವಿಪರೀತವಾಗಿ ತಿಳಿಯುತ್ತಿದೆ. ಚ ಶಬ್ದದಿಂದ ಸೂತ್ರಕಾರರು ಅಜತ್ವ, ಅವಿಕಾರಿತ್ವ, ಬ್ರಹ್ಮತಾದಾತ್ಮ್ಯ ಮೊದಲಾದ ಧರ್ಮಗಳನ್ನು ತಿಳಿಸಿದ್ದಾರೆ. ಈ ಸೂತ್ರಾರ್ಥಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಭಾಮತಿಯಲ್ಲಿ ಹೇಳಿದ ಸಿದ್ಧಾಂತ ಪ್ರಮೇಯವನ್ನು 'ತತ್ಸೃಷ್ಟ್ವಾ' ಇತ್ಯಾದಿಯಾಗಿ ಅನುವಾದ ಮಾಡುತ್ತಿದ್ದಾರೆ.

**प्रकाशः –** यदि भिद्येरन् जीवास्तदा परं वियदादिवदुत्पद्येरन् । नचैवम् । भेदस्यैवौपाधिकत्वादित्यर्थः ।।

ಭೇದ ಇದೆ ಎಂಬುದರ ಅಭಿಪ್ರಾಯ ಹೀಗಿದೆ– ಒಂದುವೇಳೆ ಜೀವನು ಬ್ರಹ್ಮನಿಗಿಂತ ಭಿನ್ನನಾಗಿದ್ದಲ್ಲಿ ಆಕಾಶಾದಿಗಳಂತೆ ಉತ್ಪನ್ನನಾಗುತ್ತಿದ್ದನು. ಆದರೆ ಭಿನ್ನನಲ್ಲ. ಏಕೆಂದರೆ ಭೇದವು ಔಪಾಧಿಕವಾಗಿ ಮಿಥ್ಯಾಭೂತವಾಗಿದೆ.

**प्रकाशः – दण्डापूपनयेति ।।** कैमुत्यन्यायहतस्येत्यर्थः । नित्यब्रह्मभेदायोगादि त्यादिना यदा स्वरूपोत्पत्तिरेव वार्यते तदा देहोत्पत्त्याश्रयोत्पत्तिशङ्कायाः कावकाश इत्यर्थः । यद्वा सर्गादावुत्पत्त्यभावोक्तौ मध्ये मध्ये जन्माभावः कैमुत्यसिद्ध इत्यर्थः।।

'ದಂಡಾಪೂಪನಯ' ಎಂದರೆ ಕೈಮುತ್ಯನ್ಯಾಯ ಎಂದರ್ಥ. ಎರಡನೇ ಅಧಿಕರಣದ ಸಿದ್ಧಾಂತ ನ್ಯಾಯವನ್ನು ತಿಳಿದಾಗ ಮೊದಲನೇ ಅಧಿಕರಣದ ಪೂರ್ವಪಕ್ಷವು ಹುಟ್ಟುವುದೇ ಇಲ್ಲ. ಅದು ಹೀಗೆ– ಜೀವನು ನಿತ್ಯನಾದ ಬ್ರಹ್ಮನಿಂದ ಅಭಿನ್ನನಾಗಿದ್ದಾನೆ. ಆದ್ದರಿಂದ ಸ್ವರೂಪತಃ ಅವನಿಗೆ ಉತ್ಪತ್ತಿಯೇ ಇಲ್ಲವೆಂದು ಎರಡನೇ ಅಧಿಕರಣದ ಸಿದ್ಧಾಂತವನ್ನು ಮಾಡಲಾಗಿದೆ. ಆಗ ಜೀವನಿಗೆ ದೇಹೋತ್ಪತ್ತಿ ಎಂಬ ಆಶ್ರಯ ನಿಮಿತ್ತವಾಗಿ ಉತ್ಪತ್ತಿ ಆಗುತ್ತದೆ ಎಂಬ ಶಂಕೆಗೆ ಅವಕಾಶ ಹೇಗೆ ತಾನೆ ಸಾಧ್ಯ ? ಹೀಗೆ ಕೈಮುತ್ಯನ್ಯಾಯವನ್ನು ತಿಳಿಯಬೇಕು. ಅಥವಾ ಸೃಷ್ಟಿಯ ಪ್ರಾರಂಭದಲ್ಲಿ ಜೀವನಿಗೆ ಉತ್ಪತ್ತಿಯೇ ಇಲ್ಲವೆಂದು ಹೇಳಿದಾಗ ಮಧ್ಯದಲ್ಲೂ ಕೂಡ ಉತ್ಪನ್ನನಾಗುವುದಿಲ್ಲ ಎಂಬುದು ಕೈಮುತ್ಯನ್ಯಾಯದಿಂದ ಸಿದ್ಧವಾಯಿತು ಎಂದೂ ಕೂಡ ತಿಳಿಯಬಹುದು.

**प्रकाशः – देहात्मेति ।।** देहात्मभेदासिद्धौ देहोत्पत्त्याश्रयो जन्मव्यपदेशो जीवे भाक्त इत्युक्त्यनुपपत्तेः । तद्भेदसिद्धौ च गृहोत्पत्तिविनाशयोर्देवदत्त इव शरीरजन्ममरणयोर्जीवे मुख्यत्वशङ्कानुदयात् ।

ಜೀವನಿಗೂ ದೇಹಕ್ಕೂ ಭೇದವು ಸಿದ್ಧ ಆಗದಿದ್ದರೆ ಆಗ ದೇಹೋತ್ಪತ್ತಿ ಎಂಬ ಆಶ್ರಯ ನಿಮಿತ್ತವಾಗಿ ಜೀವನಿಗೂ ಕೂಡ ಉತ್ಪತ್ತಿಯಾಗುತ್ತದೆ ಎಂಬ ವಚನವು ಗೌಣವಾಗಿದೆ ಎಂಬ ಮಾತೇ ಅನುಪಪನ್ನವಾಗುತ್ತದೆ.

ಒಂದುವೇಳೆ ದೇಹಕ್ಕೂ ಜೀವನಿಗೂ ಭೇದವಿದೆ ಎಂದು ಸಿದ್ಧವಾದರೆ ಆಗ ಗೃಹದ ಉತ್ಪತ್ತಿ ವಿನಾಶಗಳಾದಾಗ ದೇವದತ್ತನು ವಿನಾಶನಾಗುತ್ತಾನೆ ಎಂದು ಹೇಗೆ ಹೇಳುವುದಿಲ್ಲವೋ ಅದರಂತೆ ಶರೀರಕ್ಕೆ ಹುಟ್ಟು ಹಾಗೂ ಸಾವುಗಳು ಉಂಟಾದರೂ ಜೀವನಲ್ಲಿ ಅದು ಮುಖ್ಯವಾಗಿ ಬರುತ್ತದೆ ಎಂಬ ಶಂಕೆಯೇ ಹುಟ್ಟುವುದಿಲ್ಲ.

**ವಿವರಣೆ** – 'ಜೀವೋ ಜಾತಃ' ಎಂಬುದು ಗೌಣವಾಗಿದೆ ಎಂದು ಸಿದ್ಧಾಂತವನ್ನು ಮಾಡಿದ್ದೀರಿ. ಈ ಸಿದ್ಧಾಂತವು ಯಾವಾಗ ಸಿದ್ಧವಾಗುತ್ತದೆ ಎಂದರೆ ದೇಹ ಮತ್ತು ಆತ್ಮ ಎರಡೂ ಕೂಡ ಬೇರೆ ಬೇರೆ ಎಂದು ಸಿದ್ಧವಾದಾಗ ಮಾತ್ರ. ದೇಹವೇ ಆತ್ಮ ಎಂದಾದರೆ ಆಗ ಜೀವೋಜಾತಃ ಎಂಬುದು ದೇಹವಿಷಯಕವೇ ಹೊರತು ಆತ್ಮವಿಷಯಕವಲ್ಲವೆಂದು ಸಿದ್ಧವಾಗುವುದಿಲ್ಲ. ಚಾರ್ವಾಕಮತದಂತೆ ದೇಹವೆ ಆತ್ಮವಾದ್ದರಿಂದ 'ಜೀವೋ ಜಾತಃ' ಎಂಬುದು ದೇಹವಿಷಯಕವಾದಂತೆ ಆತ್ಮವಿಷಯಕವೂ ಕೂಡ ಆಗುತ್ತದೆ. ಜೀವ ಬೇರೆ ದೇಹವೇ ಬೇರೆ ಎಂದು ಸಿದ್ಧವಾದರೆ ದೇಹೋತ್ಪತ್ತಿವಿನಾಶ ಪ್ರಯುಕ್ತವಾಗಿ ಜೀವನಿಗೂ ಉತ್ಪತ್ತಿನಾಶಗಳಿವೆಯೋ ಏನೋ? ಎಂಬ ಶಂಕೆಯೇ ಬರುವುದಿಲ್ಲ. ಉದಾ – ಚೈತ್ರನಿಗೂ ಗೃಹಕ್ಕೂ ಭೇದವಿದೆ ಎಂಬುದು ಸಿದ್ಧವಾಗಿದೆ. ಹೀಗಿರುವಾಗ ಯಾರೋಬ್ಬರಿಗೂ ಮನೆಯು ನಾಶವಾದಾಗ ಚೈತ್ರನೂ ಕೂಡ ನಷ್ಟನಾದನೋ ಏನೋ? ಎಂಬ ಶಂಕೆಯೇ ಬರುವುದಿಲ್ಲ.

**प्रकाशः** – तद्भेदस्य च तृतीये एके लोकायतिकाः आत्मनो असत्त्वं मन्यन्ते। शरीरे सत्येव प्राणचेष्टाद्यात्मधर्माणां भावादिति पूर्वपक्षयित्वा ''व्यतिरेकस्तद्भावभावित्वात्'' इत्यत्र जीवो देहव्यतिरिक्त इत्यादिना त्वया तस्याधिकरणस्य देहात्मभेदसाधकत्वेन व्याख्यानात्तेनैवेह पूर्वपक्षस्य निरासात् ''चराचर'' इति सूत्रं व्यर्थमित्यर्थः ।।

ಮತ್ತು ಅದ್ವೈತಿಗಳ ಪ್ರಕಾರ 'ಏಕಾತ್ಮನಃ ಶರೀರೇಭಾವಾತ್' ಎಂಬ ಅಧಿಕರಣದಿಂದಲೇ ದೇಹಕ್ಕೂ ಜೀವಕ್ಕೂ ಭೇದವಿದೆ ಎಂಬುದು ಸಿದ್ಧವಾಗಿದೆ. ಅದು ಹೀಗೆ– ಏಕೇ= ಚಾರ್ವಾಕರು, ಆತ್ಮನಃ= ಆತ್ಮರುಗಳಿಗೆ ಅಸತ್ತ್ವವನ್ನು ತಿಳಿದಿದ್ದಾರೆ ಏಕೆಂದರೆ, ಶರೀರೇಭಾವಾತ್= ಶರೀರವು ಇದ್ದರೆ ಮಾತ್ರ ಪ್ರಾಣಚೇಷ್ಟ ಮೊದಲಾದ ಆತ್ಮಧರ್ಮಗಳು ಇರಲು ಸಾಧ್ಯ. ಹೀಗೆ ಪೂರ್ವಪಕ್ಷ ಮಾಡಿಕೊಂಡು ಮುಂದಿನ 'ವ್ಯತಿರೇಕಸ್ತದ್ಭಾವಭಾವಿತ್ವಾತ್' ಎಂಬ ಸೂತ್ರದಲ್ಲಿ ಸಿದ್ಧಾಂತವನ್ನು ಮಾಡಿರುತ್ತಾರೆ. ದೇಹಕ್ಕೂ ಆತ್ಮನಿಗೂ ವ್ಯತಿರೇಕ= ಭೇದವೆ ಇದೆ. ಹೀಗೆ ಅದ್ವೈತಿಗಳಾದ ನೀವು ಈ ಅಧಿಕರಣದಲ್ಲಿ ದೇಹ ಮತ್ತು ಆತ್ಮರಿಗೆ ಭೇದವನ್ನು ಸಾಧನೆ ಮಾಡಿದ್ದೀರಿ. ಅದರಿಂದಲೇ ಈ ಅಧಿಕರಣದ ಪೂರ್ವಪಕ್ಷವೂ ಕೂಡ ನಿರಾಸವಾಗುತ್ತದೆ. ಆದ್ದರಿಂದ 'ಚರಾಚರವ್ಯಪಾಶ್ರಯಸ್ತು' ಇತ್ಯಾದಿ ಸೂತ್ರವೇ ಅದ್ವೈತಿಗಳ ಪ್ರಕಾರ ವ್ಯರ್ಥವಾಯಿತು.

**प्रकाशः** – **अध्यासत्वेनेति** ।। अत एव भामत्यां ''एतच्च लौकिक व्यपदेशस्याभ्रान्तिमूलत्वमभ्युपेत्याधिकरणम् । उक्ता त्वध्यासभाष्ये भ्रान्तिमूलकत'' इत्युक्तमिति भावः ।

'ಜೀವೋ ಜಾತಃ' ಎಂಬುದನ್ನು ಅದ್ವೈತಿಗಳು ಅಧ್ಯಾಸವೆಂದೇ ಹೇಳಬೇಕು. ಆದ್ದರಿಂದಲೇ ಭಾಮತಿಯಲ್ಲಿ 'ಏತಚ್ಚ ಲೌಕಿಕ ವ್ಯಪದೇಶಸ್ಯಾಭ್ರಾಂತಿಮೂಲತ್ವಮಭ್ಯುಪೇತ್ಯಾಧಿಕರಣಮ್ ।

ಆತ್ಮಾಧಿಕರಣ (೨-೩-೧೦)

ಉಕ್ತಾತ್ವಧ್ಯಾಸಭಾಷ್ಯೇ ಭ್ರಾಂತಿಮೂಲಕತಾ' ಲೌಕಿಕ ವ್ಯಪದೇಶವು ಭ್ರಾಂತಿಮೂಲಕವಲ್ಲವೆಂದು ಅಂಗೀಕಾರ ಮಾಡಿ ಅಧಿಕರಣವು ಹೊರಟಿದೆ. ಅಧ್ಯಾಸಭಾಷ್ಯದಲ್ಲಿ ಇದೆಲ್ಲವೂ ಭ್ರಾಂತಿ ಮೂಲಕವೆಂದು ಸಮರ್ಥಿಸಲಾಗಿದೆ ಎಂದು ಹೇಳಲಾಗಿದೆ.

**प्रकाशः** – द्वितीये नात्मेत्यत्र । जीवशब्देन किं प्रवेशविशिष्टश्चिन्मात्रं वेति विकल्प्य क्रमेण निराह – **अनुप्रवेशविशिष्टस्येति** ।। सिद्धान्तेऽपि अपरिहाराच्चेत्यन्वयः। उक्तत्वेन त्वयैवेत्यर्थः ।

ದ್ವಿತೀಯೇ ಎಂದರೆ 'ನಾತ್ಮಾಶ್ರುತೇಃ' ಎಂಬ ಅಧಿಕರಣದಲ್ಲಿ ಎಂದರ್ಥ.

ಜೀವಶಬ್ದದಿಂದ ಪ್ರವೇಶವಿಶಿಷ್ಟನಾದವನನ್ನು ವಿವಕ್ಷಿಸುತ್ತೀರೋ ಚಿನ್ಮಾತ್ರನನ್ನು ವಿವಕ್ಷಿಸುತ್ತೀರೋ? ಎಂದು ವಿಕಲ್ಪ ಮಾಡಿ ಕ್ರಮವಾಗಿ ಅನುಪ್ರವೇಶವಿಶಿಷ್ಟಸ್ಯ ಇತ್ಯಾದಿ ವಾಕ್ಯದಿಂದ ಎರಡೂ ಪಕ್ಷಗಳನ್ನು ನಿರಾಕರಣೆ ಮಾಡುತ್ತಿದ್ದಾರೆ. ಸಿದ್ಧಾಂತೇಽಪಿ ಎಂಬುದಕ್ಕೆ 'ಅಪರಿಹಾರಾಚ್ಚ' ಎಂಬಲ್ಲಿ ಅನ್ವಯ. ಉಕ್ತತ್ವೇನ ಎಂಬಲ್ಲಿ ತ್ವಯ್ಯೈವ ಎಂಬುದನ್ನು ವಿವಕ್ಷಿಸಬೇಕು.

**प्रकाशः** – मतान्तरे तु सर्वशब्दानामाकाशादिशरीरकब्रह्मवाचित्वे गगनादौ व्युत्पत्तिसिद्धो व्यपदेशो न स्यादिति शङ्कानिरासार्थं ''चराचर'' इति सूत्रम् ।

ರಾಮಾನುಜರ ಅಧಿಕರಣ ಶರೀರ ಹೀಗಿದೆ– 'ಚರಾಚರವ್ಯಪಾಶ್ರಯಸ್ತು' ಎಂಬ ಸೂತ್ರದ ಪೂರ್ವಪಕ್ಷ ಹೀಗಿದೆ – ಸರ್ವಶಬ್ದಗಳು ಆಕಾಶಾದಿ ಶರೀರಕನಾದ ಬ್ರಹ್ಮವಾಚಕವಾಗಿವೆ ಎಂದು ಈ ಹಿಂದೆ ಸಮರ್ಥಿಸಿದ್ದಾಯಿತು. ಹಾಗಾದರೆ ಆಕಾಶಾದಿ ಶಬ್ದಗಳು ತತ್‌ಶರೀರಕನಾದ ಬ್ರಹ್ಮನನ್ನು ಹೇಳುವುದಾದರೆ ಕೇವಲ ಗಗನಾದಿಗಳಲ್ಲಿ ವ್ಯುತ್ಪತ್ತಿ ಬರುವುದು ತಪ್ಪಾಗುತ್ತದಲ್ಲವೇ? ಈ ಆಶಂಕೆಯನ್ನು ಪರಿಹರಿಸುವುದಕ್ಕಾಗಿ 'ಚರಾಚರವ್ಯಪಾಶ್ರಯಸ್ತು' ಎಂಬ ಸೂತ್ರವು ಹೊರಟಿದೆ.

**प्रकाशः** – चराचरव्यपाश्रयस्तु निखिल जङ्गमस्थावरव्यपाश्रयस्तु । तत्तच्छब्दव्यपदेशो भाक्तः वाच्यैकदेशे भज्यते । कुतः तद्भावभावित्वात् । तस्य सर्वप्रकारिणो ब्रह्मणो भावेन प्रतीति भावेन भावित्वात् । तत्पर्यवसानस्येदानीं तत्प्रतीतेरभावेन तत्र व्युत्पत्त्यभावोपपत्तेरिति वा चराचरव्यपाश्रयस्तद्व्यपदेशः चराचरभाविशब्दो ब्रह्मण्यभाक्तः मुख्य एव । कुतः । तद्भावभावित्वात् तद्भावेन ब्रह्मानुप्रवेशेन भावित्वात् ।

ಚರಾಚರವ್ಯಪಾಶ್ರಯಸ್ತು = ಸಕಲ ಜಂಗಮ ಸ್ಥಾವರ ವಿಷಯಕವಾದ ತದ್ವ್ಯಪದೇಶಃ = ಆಯಾ ಶಬ್ದಗಳಿಂದ ಮಾಡುವ ವ್ಯಪದೇಶವು ಗೌಣವಾಗಿದೆ, ಭಾಕ್ತಃ = ವಾಚ್ಯದ ಏಕದೇಶದಲ್ಲಿ ಭಗ್ನವಾಗಿದೆ. ಏಕೆಂದರೆ ಆಕಾಶಶರೀರಕನಾದ ಬ್ರಹ್ಮನೂ ವಾಚ್ಯನಾಗಿದ್ದಾನೆ. ಆದರಲ್ಲಿ ಏಕದೇಶವಾದ ಆಕಾಶದಲ್ಲಿ ಮಾತ್ರ ಆ ಶಬ್ದದ ವ್ಯವಹಾರವು ಲೋಕರೂಢವಾಗಿದೆ. ಏಕೆಂದರೆ ತದ್ಭಾವಭಾವಿತ್ವಾತ್. ತತ್ = ಎಂದರೆ ಬ್ರಹ್ಮ,

ಎಲ್ಲವನ್ನೂ ಪ್ರಕಾರವಾಗಿ ಉಳ್ಳ ಪ್ರಕಾರಿಯಾದ ಯಾವ ಬ್ರಹ್ಮನಿದ್ದಾನೋ ಅವನ ಪ್ರತೀತಿಯಿಂದ, ಭಾವಿತ್ವಾತ್ = ವ್ಯುತ್ಪತ್ತಿಯು ಉಂಟಾಗುತ್ತಿದೆ. ಬ್ರಹ್ಮನ ಪ್ರತೀತಿ ಬಂದರೆ ತತ್ತಚ್ಛರೀರಕನಾದ ಬ್ರಹ್ಮನಲ್ಲಿ ವ್ಯುತ್ಪತ್ತಿಯು ಉಂಟಾಗುತ್ತದೆ. ಪ್ರಕೃತ ಬ್ರಹ್ಮನ ಪ್ರತೀತಿ ನಮಗೆ ಇಲ್ಲದ ಕಾರಣ ಆ ತರಹದ ವ್ಯುತ್ಪತ್ತಿಯೂ ಕೂಡ ನಮಗೆ ಬರುವುದಿಲ್ಲ. ಏಕೆಂದರೆ ಲೋಕದ ವ್ಯುತ್ಪತ್ತಿ ಕೇವಲ ಜಗದ್ವಿಷಯಕವಾಗಿದೆ.

ಅಥವಾ ಚರಾಚರವಿಷಯಕವಾದ ಯಾವ ಶಬ್ದಗಳಿವೆಯೋ ಅವೆಲ್ಲವೂ ಬ್ರಹ್ಮನಲ್ಲಿ ಮುಖ್ಯವಾಗಿವೆ. ಈ ಪಕ್ಷದಲ್ಲಿ ಅಭಾಕ್ತಃ ಎಂದು ಪದಚ್ಛೇದವನ್ನು ಮಾಡಬೇಕು. ಏಕೆಂದರೆ ತದ್ಭಾವಭಾವಿತ್ವಾತ್= ಬ್ರಹ್ಮನು ಸಕಲ ಪದಾರ್ಥಗಳಲ್ಲಿ ಅನುಪ್ರವೇಶ ಮಾಡಿರುವುದರಿಂದ. ಬ್ರಹ್ಮನು ಜಗತ್ತಿನಲ್ಲಿ ಪ್ರವೇಶ ಮಾಡಿದ ಮೇಲೆಯೇ ಆಯಾ ಶಬ್ದಗಳು ಹುಟ್ಟಿದವು. ಅಲ್ಲಿಯ ತನಕ ಯಾವ ಶಬ್ದಗಳೂ ಇರಲಿಲ್ಲ. ಆದ್ದರಿಂದ ಸಕಲ ಶಬ್ದಗಳು ಬ್ರಹ್ಮನಲ್ಲಿಯೇ ಮುಖ್ಯವಾಗಿವೆ ಎಂಬುದು ಎರಡನೇ ವ್ಯಾಖ್ಯಾನ.

**प्रकाशः** – सर्वशब्दानां ब्रह्मानुप्रवेशानन्तरमेव शब्दानां तत्तद्वाचकत्वादित्यर्थ इति वा व्याख्यातम् । तत्र तद्व्यपदेश इति तच्छब्दस्याप्रकृतशब्दपरत्वायोग इत्युक्तप्रायम् । ब्रह्मणीत्यध्याहारः । भाक्तशब्दस्य प्रसिद्धगौणार्थत्वत्यागः । तद्भावभावित्वादिति हेत्वर्थस्तु प्रथमाध्यायान्ते दूषितः । अभाक्तत्वमित्येतदपि तत्रैव निरस्तमिति तदुपेक्ष्य ''नात्म'' इत्यधिकरणप्रमेयं निराह – एतेनेति ।। न कर्माविभागादिति चेदित्यत्र संसारानादित्वस्य श्रीभाष्यादावुक्तत्वेनास्य गतार्थत्वेनेत्यर्थः ।।

इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते
चन्द्रिकाप्रकाशे आत्माधिकरणं सम्पूर्णम् ।।१०।।

ರಾಮಾನುಜರ ಈ ಅಧಿಕರಣ ರಚನೆ ಹಾಗೂ ಸೂತ್ರಾರ್ಥ ಎರಡೂ ಕೂಡ ಅಯುಕ್ತವಾಗಿದೆ. ಏಕೆಂದರೆ ತದ್ವ್ಯಪದೇಶಃ ಎಂಬುದಕ್ಕೆ ಶಬ್ದಗಳ ವ್ಯವಹಾರ ಎಂದು ಅರ್ಥವನ್ನು ಮಾಡಿದ್ದಾರೆ. ತತ್ ಶಬ್ದವು ಅಪ್ರಕೃತವಾದ ಶಬ್ದವನ್ನು ಪರಾಮರ್ಶ ಮಾಡುತ್ತಿದೆ. ಪ್ರಕೃತವಾದುದನ್ನು ಬಿಟ್ಟು ಅಪ್ರಕೃತವಾದದ್ದನ್ನು ಪರಾಮರ್ಶ ಮಾಡುವುದು ಅಯುಕ್ತವಾಗಿದೆ. ಈ ದೋಷ ಅದ್ವೈತಿಗಳಿಗೆ ಹೇಳಿದ್ದರಿಂದ ಇವರನ್ನೂ ಕೂಡ ಗ್ರಂಥಕಾರರು ನಿರಾಕರಣೆ ಮಾಡಿದಂತಾಯಿತು. ಮತ್ತು 'ಬ್ರಹ್ಮಣಿ' ಎಂಬ ಪದವನ್ನು ಇವರು ಅಧ್ಯಾಹಾರ ಮಾಡುತ್ತಿದ್ದಾರೆ. ಮತ್ತೊಂದು ದೋಷ – ಭಾಕ್ತ ಶಬ್ದಕ್ಕೆ ಗೌಣ ಎಂಬರ್ಥವನ್ನೇ ಲೋಕದಲ್ಲಿ ಎಲ್ಲರೂ ಕೂಡ ಮಾಡುತ್ತಾರೆ. ಆದರೆ ನೀವು 'ಏಕದೇಶೇ ಭಜ್ಯತೇ' ಎಂಬುದಾಗಿ ಅಪ್ರಸಿದ್ಧವಾದ ಅರ್ಥವನ್ನು ಮಾಡಿದ್ದೀರಿ. ಮತ್ತು ತದ್ಭಾವಭಾವಿತ್ವಾತ್ ಎಂಬುದಕ್ಕೆ ನೀವು ಮಾಡಿದ ವ್ಯಾಖ್ಯಾನವನ್ನು ಪ್ರಥಮಾಧ್ಯಾಯದ ಕೊನೆಯಲ್ಲಿಯೇ ನಾವು ನಿರಾಕರಣೆ ಮಾಡಿದ್ದೇವೆ. ಶಬ್ದಗಳು ವಿಶಿಷ್ಟವಾಚಕವಲ್ಲ ಎಂಬ ಪ್ರಮೇಯವನ್ನು ಅಲ್ಲಿ ನಿರಾಕರಣೆ ಮಾಡಿದ್ದೇವೆ. ಎಲ್ಲಾ ಶಬ್ದಗಳು ವಿಶಿಷ್ಟವಾಚಕವಾದ್ದರಿಂದ ವಿಶೇಷಣದಲ್ಲಿ ಅಮುಖ್ಯವಾದರೆ

ವಿಶೇಷ್ಯವಾದ ಬ್ರಹ್ಮನಲ್ಲೂ ಕೂಡ ಅಮುಖ್ಯವಾಗಿಯೇ ಬರುತ್ತದೆ. ಆದ್ದರಿಂದ ಪ್ರಕೃತ ನೀವು ಅಭಾಕ್ತಂ ಎಂದು ಪದಚ್ಛೇದ ಮಾಡಿ ಬ್ರಹ್ಮನಲ್ಲಿ ಶಬ್ದಗಳು ಮುಖ್ಯವಾಗಿವೆ ಎಂದು ವ್ಯಾಖ್ಯಾನ ಮಾಡಿದ್ದೂ ಕೂಡ ಪ್ರಕೃತ್ಯಧಿಕರಣದಲ್ಲಿ ನಾವು ನಿರಾಕರಣೆ ಮಾಡಿದ ನ್ಯಾಯದಿಂದಲೇ ನಿರಸ್ತವಾಯಿತು. ಹೀಗೆ ಉಪೇಕ್ಷಿ 'ನಾತ್ಮಾಶ್ರುತೇಃ' ಎಂಬ ಅಧಿಕರಣದ ಪ್ರಮೇಯವನ್ನು ಮಾತ್ರ ನಿರಾಕರಣೆ ಮಾಡಲು 'ಏತೇನ' ಇತ್ಯಾದಿಯಾಗಿ ಹೇಳಿದ್ದಾರೆ.

'ನ ಕರ್ಮಾವಿಭಾಗಾದಿತಿ ಚೇತ್' ಎಂಬ ಸೂತ್ರದಲ್ಲಿ ಸಂಸಾರಾನಾದಿತ್ವವನ್ನು ಶ್ರೀಭಾಷ್ಯದಲ್ಲಿಯೇ ಸಮರ್ಥಿಸಿದ್ದಾರೆ. ಹೀಗಿರುವಾಗ ಆ ಅಧಿಕರಣದಿಂದಲೇ ಇದು ಗತಾರ್ಥವಾಯಿತಾದ್ದರಿಂದ ಈ ಅಧಿಕರಣವು ವಿಶಿಷ್ಟಾದ್ವೈತಿಗಳಲ್ಲೂ ಕೂಡ ವ್ಯರ್ಥವಾಗುತ್ತದೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಆತ್ಮಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.




'ನಾತ್ಮಾಶ್ರುತೇಃ ನಿತ್ಯತ್ವಾಚ್ಚ ತಾಭ್ಯಃ' ಎಂಬ ಒಂದೇ ಸೂತ್ರವಿರುವ ಈ ಅಧಿಕರಣಕ್ಕೆ ಆತ್ಮಾಧಿಕರಣ ಎನ್ನುತ್ತಾರೆ. ಹಿಂದೆ ಯಾವ ಕ್ರಮದಲ್ಲಿ ಸೃಷ್ಟಿಯು ಆಗುತ್ತದೋ ವ್ಯುತ್ಕ್ರಮದಲ್ಲಿಯೇ ಅವುಗಳು ಲಯವನ್ನು ಹೊಂದುತ್ತವೆ ಎಂದು ಸಿದ್ಧಾಂತವನ್ನು ಮಾಡಲಾಯಿತು. ಹೀಗಿರುವಾಗ ಮನಸಶ್ಚ ವಿಜ್ಞಾನಂ ಎಂಬ ಶ್ರುತಿಯು ಮನಸ್ತತ್ವದಿಂದ ವಿಜ್ಞಾನತತ್ವವು ಹುಟ್ಟುತ್ತದೆ ಎಂದು ಹೇಳಿ ಆ ಮನಸ್ತತ್ವವೇ ಮೊದಲು ಲಯವನ್ನು ಹೊಂದುತ್ತದೆಂಬ ಆಕ್ಷೇಪವು ಪ್ರಾಪ್ತವಾದಾಗ ಅದರ ಪರಿಹಾರಕ್ಕಾಗಿ ಅಂತರಾಧಿಕರಣವು ಹೊರಟಿತು. ಮನಸಶ್ಚ ವಿಜ್ಞಾನಂ ಎಂಬುದು ತತ್ವದ ಸೃಷ್ಟಿಯನ್ನು ಹೇಳಲು ಹೊರಟಿರುವ ವಾಕ್ಯವಲ್ಲವಾದ್ದರಿಂದ ಮನಸ್ತತ್ವ ಹಾಗೂ ವಿಜ್ಞಾನತತ್ವಗಳಲ್ಲಿಯೂ ಕೂಡ ವಿಜ್ಞಾನತತ್ವವೇ ಅನಂತರ ಲಯವಾಗುತ್ತದೆ ಎಂದು ಹೇಳಬೇಕು ಎಂಬುದಾಗಿ ಸಿದ್ಧಾಂತ ಮಾಡಲಾಯಿತು. ಈ ಸಂದರ್ಭದಲ್ಲಿ 'ಸ ಇದಂ ಸರ್ವಂ ವಿಲಾಪ್ಯ ಅಂತಸ್ತಮಸಿ ನಿಲೀನಃ' ಎಂಬ ಶ್ರುತಿಯು ಬ್ರಹ್ಮನಿಗೂ ಕೂಡ ಲಯವನ್ನು ಹೇಳುತ್ತಿದೆ. ಆದ್ದರಿಂದ ಲಯಚಿಂತನೆ ಮಾಡುವ ಈ ಅಧಿಕರಣಗಳ ವಿಚಾರದಲ್ಲಿ ಬ್ರಹ್ಮನಿಗೂ ಕೂಡ ಲಯವನ್ನು ಹೇಳಬೇಕಲ್ಲವೇ ಎಂಬುದು ಅಧಿಕರಣದ ಪೂರ್ವಪಕ್ಷ. ಯಾವ ರೀತಿಯಾಗಿ ಬೇರೆ ವಸ್ತುಗಳಿಗೆ ಲಯವಿದೆಯೋ ಅದರಂತೆ ಬ್ರಹ್ಮನಿಗೂ ಕೂಡ ಲಯವನ್ನು ಹೇಳಬೇಕೆಂದು ಈ ಶ್ರುತಿಯನ್ನು ನೋಡಿದಾಗ ಆಪಾತತಃ ಗೋಚರವಾಗುತ್ತದೆ. ಆದರೆ ನಿಲೀನ ಶಬ್ದಕ್ಕೆ ಇತರರಿಗೆ ಕಾಣದಂತೆ ತನ್ನನ್ನು ಮುಚ್ಚಿಕೊಳ್ಳುತ್ತಾನೆ ಎಂದಷ್ಟೇ ಈ ಶ್ರುತಿಗೆ ಅರ್ಥ. ಆದ್ದರಿಂದ ಉಳಿದ ಪದಾರ್ಥಗಳು ಲಯವನ್ನು ಹೊಂದುವಂತೆ ಬ್ರಹ್ಮ ಲಯವನ್ನು ಹೊಂದಲಾರನು ಎಂಬುದು ಅಧಿಕರಣದ ಸಿದ್ಧಾಂತ.

ಪರಿಪೂರ್ಣಚಂದ್ರಿಕಾ

'ಚರಾಚರವ್ಯಪಾಶ್ರಯಸ್ತು ಸ್ಯಾತ್ ತದ್ವ್ಯಪದೇಶಭಾಕ್ತಃ ತದ್ಭಾವಭಾವಿತ್ವಾತ್' ಎಂಬ ಸೂತ್ರವು ಹಿಂದಿನ ಅಂತರಾಧಿಕರಣದಲ್ಲಿ ಸೇರಿದೆ ಎಂದು ನಾವು ಹೇಳುತ್ತೇವೆ. ಆದರೆ ಅದ್ವೈತಿಗಳು ಇದನ್ನು ಪ್ರತ್ಯೇಕ ಅಧಿಕರಣವೆಂದು ಉಲ್ಲೇಖಿಸಿದ್ದಾರೆ. ಅದರಂತೆ 'ನಾತ್ಮಾಶ್ರುತೇಃ ನಿತ್ಯತ್ವಾಚ್ಚತಾಭ್ಯಃ' ಎಂಬ ಸೂತ್ರವೂ ಕೂಡ ಪ್ರತ್ಯೇಕ ಅಧಿಕರಣವೆಂದು ಹೇಳುತ್ತಾರೆ. ಈ ಚರಾಚರಾಧಿಕರಣದಲ್ಲಿ ಜೀವನಿಗೂ ಕೂಡ ಉತ್ಪತ್ತಿ ಇದೆ ಎಂದು ಪೂರ್ವಪಕ್ಷ ಮಾಡಿ ಅನಾದಿತ್ವವನ್ನು ಸಮರ್ಥಿಸಿದ್ದಾರೆ. ಅದು ಹೀಗೆ– ಚೈತ್ರನು ಹುಟ್ಟಿದನು ಇತ್ಯಾದಿಯಾದ ವ್ಯವಹಾರವೂ ಜಗತ್ತಿನಲ್ಲಿ ಕಂಡಿದೆ. ಆದ್ದರಿಂದ ಶರೀರವು ಹುಟ್ಟಿದಾಗ ಅದೇ ಆಶ್ರಯವಾಗಿ ಉಳ್ಳ ಜೀವನು ಹುಟ್ಟುತ್ತಾನೆ. ಶರೀರ ನಾಶವಾದಾಗ ಜೀವನು ನಾಶವನ್ನು ಹೊಂದುತ್ತಾನೆ ಎಂಬುದು ಪೂರ್ವಪಕ್ಷ. ಪ್ರತೀ ಶರೀರದಲ್ಲೂ ಜೀವನಿಗೆ ಉತ್ಪತ್ತಿಯನ್ನು ಒಪ್ಪುವುದಾದರೆ ಯಾರು ಜ್ಯೋತಿಷ್ಟೋಮಯಾಗವನ್ನು ಮಾಡಿರುತ್ತಾನೋ ಅವನು ನಾಶವಾಗುವುದರಿಂದ ಅವನು ಮಾಡಿದ ಫಲವೇ ಭಂಗವಾಗುತ್ತದೆ. ಆದ್ದರಿಂದ ಕೃತಹಾನ ಎಂಬ ದೋಷ ಬರುತ್ತದೆ. ಯಾಗವನ್ನು ಆಚರಣೆ ಮಾಡದ ವ್ಯಕ್ತಿಗೆ ಸ್ವರ್ಗಾದಿಫಲವು ದೊರೆಯುವುದರಿಂದ ಅಕೃತಾಭ್ಯಾಗಮ ಎಂಬ ದೋಷವು ಬರುತ್ತದೆ. ಆದ್ದರಿಂದ ಶರೀರಕ್ಕೆ ಹುಟ್ಟುಸಾವುಗಳು ಇರುವಂತೆ ಜೀವನಿಗೆ ಹುಟ್ಟುಸಾವುಗಳನ್ನು ಹೇಳಬಾರದು. ಕೇವಲ ಸ್ಥಾವರಜಂಗಮಾತ್ಮಕವಾದ ಶರೀರದ ಸಂಪರ್ಕದಿಂದ 'ಚೈತ್ರೋ ಜಾತಃ' ಇತ್ಯಾದಿ ವ್ಯವಹಾರವಿರುತ್ತದೆ. ಇದು ಗೌಣವೆಂದೇ ತಿಳಿಯಬೇಕು. ಇಷ್ಟು ಅಧಿಕರಣದ ಸಿದ್ಧಾಂತ.

'ನಾತ್ಮಾಶ್ರುತೇಃ' ಎಂಬ ಸೂತ್ರವಿರುವ ಆತ್ಮಾಧಿಕರಣವನ್ನು ಹೀಗೆ ರಚನೆ ಮಾಡಿದ್ದಾರೆ– 'ಆತ್ಮಾನಃ ವ್ಯುಚ್ಚರಂತಿ' ಎಂಬ ಶ್ರುತಿ ಇರುವುದರಿಂದ ಜೀವನು ಆಯಾ ಸೃಷ್ಟಿಯ ಪ್ರಾರಂಭದಲ್ಲಿ ಆಕಾಶಾದಿಗಳಂತೆ ಉತ್ಪನ್ನನಾಗುತ್ತಾನೆ. ಆದ್ದರಿಂದ ಪ್ರತಿ ಶರೀರದಲ್ಲಿಯೂ ಜೀವನಿಗೆ ಉತ್ಪತ್ತಿ ನಾಶಗಳನ್ನು ಹೇಳುವ ಅವಶ್ಯಕತೆ ಇಲ್ಲ ಎಂದು ಅಧಿಕರಣದ ಪೂರ್ವಪಕ್ಷ.

ನಿತ್ಯನಾದ ಬ್ರಹ್ಮನಿಂದ ಅಭೇದವಿರುವ ಕಾರಣ ಜೀವನಿಗೆ ಉತ್ಪತ್ತಿ ಹಾಗೂ ನಾಶವನ್ನು ಸೃಷ್ಟಿಯ ಪ್ರಾರಂಭದಲ್ಲೂ ಕೂಡ ಹೇಳಬಾರದು. ಹಾಗೇನಾದರು ಉತ್ಪತ್ತಿ ನಾಶಗಳನ್ನು ಹೇಳಿದರೆ ಕೃತಹಾನ, ಅಕೃತ ಅಭ್ಯಾಗಮ ಎಂಬ ದೋಷವು ಬರುತ್ತದೆ. ಆದ್ದರಿಂದ ಜೀವನಿಗೆ ಉತ್ಪತ್ತಿ ಇಲ್ಲ ಎಂಬುದು ಸಿದ್ಧಾಂತ.

ಅದ್ವೈತಿಗಳ ಈ ಎರಡು ಅಧಿಕರಣಗಳ ರಚನೆಯೂ ಕೂಡ ಅಯುಕ್ತವಾಗಿದೆ. ಅದು ಹೀಗೆ– ಎರಡನೆಯ ಆತ್ಮಾಧಿಕರಣದಲ್ಲಿ ಜೀವನಿಗೆ ಬ್ರಹ್ಮಾಭೇದವಿರುವುದರಿಂದ ಉತ್ಪತ್ತಿ ನಾಶಗಳಿರಲು ಸಾಧ್ಯವೇ ಇಲ್ಲವೆಂದು ಸಿದ್ಧಾಂತ ಮಾಡಿದ್ದೀರಿ. ಇದೇ ಸಿದ್ಧಾಂತನ್ಯಾಯದಿಂದ ಮೊದಲನೆಯ ಚರಾಚರಾಧಿಕರಣದ ಪೂರ್ವಪಕ್ಷವೇ ಹುಟ್ಟುವುದಿಲ್ಲವೆಂದು ಸಿದ್ಧವಾಗುತ್ತದೆ. ಮತ್ತು ಲಯಕ್ರಮದ ಬಗ್ಗೆ ಹಿಂದೆ ಪ್ರಸಕ್ತವಾದಾಗ ಜೀವನಿಗೆ ಜನ್ಮವಿದೆ ಎಂಬ ವಿಷಯವು ಅಪ್ರಸಕ್ತವಾಗುತ್ತದೆ.

ಮತ್ತು 'ಏಕಾತ್ಮನಃ ಶರೀರೇ ಭಾವಾತ್' ಎಂಬ ಅಧಿಕರಣದಿಂದ ದೇಹ ಹಾಗೂ ಜೀವ ಇಬ್ಬರಿಗೂ ಭೇದವಿದೆ ಎಂದು ಸಿದ್ಧವಾಗಿರುವಾಗ ಮೊದಲನೆಯ ಅಧಿಕರಣವು ಪುನರುಕ್ತವಾಗುತ್ತದೆ. ನಿಮ್ಮ ಸಿದ್ಧಾಂತದಲ್ಲಿ 'ಚೈತ್ರೋ ಜಾತಃ' ಎಂಬುದು ಅಧ್ಯಾಸವಿಷಯಕವಾದ್ದರಿಂದ ಗೌಣಾರ್ಥವನ್ನು ಅದಕ್ಕೆ ಮಾಡಲೇಬಾರದು. ಆದ್ದರಿಂದ ಮೊದಲನೆಯ ಅಧಿಕರಣವು ಅಯುಕ್ತವಾಯಿತು.

ಎರಡನೆಯ ಅಧಿಕರಣವೂ ಕೂಡ ತಪ್ಪು. 'ತತ್‌ಸೃಷ್ಟ್ವಾ ತದೇವಾನುಪ್ರಾವಿಶತ್' ಎಂಬ ಶ್ರುತಿ ಹೇಳುವಂತೆ ಸೃಷ್ಟವಾದ ಪದಾರ್ಥಗಳಲ್ಲಿ ಪ್ರವೇಶವಿಶಿಷ್ಟನಾದ ಬ್ರಹ್ಮನೇ ಜೀವಭಾವವನ್ನು ಹೊಂದುವುದರಿಂದ ಅವನು ನಿತ್ಯನಾಗಿದ್ದಾನೆ ಎಂದು ಹೇಳುವುದೇ ತಪ್ಪು. ಏಕೆಂದರೆ ಪದಾರ್ಥ ಹುಟ್ಟುವ ಮೊದಲು ಚಿನ್ಮಾತ್ರನಿದ್ದನೇ ಹೊರತು

ವಿಶೇಷ್ಯವಾದ ಬ್ರಹ್ಮನಲ್ಲೂ ಕೂಡ ಅಮುಖ್ಯವಾಗಿಯೇ ಬರುತ್ತದೆ. ಆದ್ದರಿಂದ ಪ್ರಕೃತ ನೀವು ಅಭಾಕ್ತಂ ಎಂದು ಪದಚ್ಛೇದ ಮಾಡಿ ಬ್ರಹ್ಮನಲ್ಲಿ ಶಬ್ದಗಳು ಮುಖ್ಯವಾಗಿವೆ ಎಂದು ವ್ಯಾಖ್ಯಾನ ಮಾಡಿದ್ದೂ ಕೂಡ ಪ್ರಕೃತ್ಯಧಿಕರಣದಲ್ಲಿ ನಾವು ನಿರಾಕರಣೆ ಮಾಡಿದ ನ್ಯಾಯದಿಂದಲೇ ನಿರಸ್ತವಾಯಿತು. ಹೀಗೆ ಉಪೇಕ್ಷಿಸಿ 'ನಾತ್ಮಾಶ್ರುತೇಃ' ಎಂಬ ಅಧಿಕರಣದ ಪ್ರಮೇಯವನ್ನು ಮಾತ್ರ ನಿರಾಕರಣೆ ಮಾಡಲು 'ಏತೇನ' ಇತ್ಯಾದಿಯಾಗಿ ಹೇಳಿದ್ದಾರೆ.

'ನ ಕರ್ಮಾವಿಭಾಗಾದಿತಿ ಚೇತ್' ಎಂಬ ಸೂತ್ರದಲ್ಲಿ ಸಂಸಾರಾನಾದಿತ್ವವನ್ನು ಶ್ರೀಭಾಷ್ಯದಲ್ಲಿಯೇ ಸಮರ್ಥಿಸಿದ್ದಾರೆ. ಹೀಗಿರುವಾಗ ಆ ಅಧಿಕರಣದಿಂದಲೇ ಇದು ಗತಾರ್ಥವಾಯಿತಾದ್ದರಿಂದ ಈ ಅಧಿಕರಣವು ವಿಶಿಷ್ಟಾದ್ವೈತಿಗಳಲ್ಲೂ ಕೂಡ ವ್ಯರ್ಥವಾಗುತ್ತದೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಆತ್ಮಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.




'ನಾತ್ಮಾಶ್ರುತೇಃ ನಿತ್ಯತ್ವಾಚ್ಚ ತಾಭ್ಯಃ' ಎಂಬ ಒಂದೇ ಸೂತ್ರವಿರುವ ಈ ಅಧಿಕರಣಕ್ಕೆ ಆತ್ಮಾಧಿಕರಣ ಎನ್ನುತ್ತಾರೆ. ಹಿಂದೆ ಯಾವ ಕ್ರಮದಲ್ಲಿ ಸೃಷ್ಟಿಯು ಆಗುತ್ತದೋ ವ್ಯತ್ಕ್ರಮದಲ್ಲಿಯೇ ಅವುಗಳು ಲಯವನ್ನು ಹೊಂದುತ್ತದೆ ಎಂದು ಸಿದ್ಧಾಂತವನ್ನು ಮಾಡಲಾಯಿತು. ಹೀಗಿರುವಾಗ ಮನಸಶ್ಚ ವಿಜ್ಞಾನಂ ಎಂಬ ಶ್ರುತಿಯು ಮನಸ್ತತ್ವದಿಂದ ವಿಜ್ಞಾನತತ್ವವು ಹುಟ್ಟುತ್ತದೆ ಎಂದು ಹೇಳಿ ಆ ಮನಸ್ತತ್ವವೇ ಮೊದಲು ಲಯವನ್ನು ಹೊಂದುತ್ತದೆಂಬ ಆಕ್ಷೇಪವು ಪ್ರಾಪ್ತವಾದಾಗ ಅದರ ಪರಿಹಾರಕ್ಕಾಗಿ ಅಂತರಾಧಿಕರಣವು ಹೊರಟಿತು. ಮನಸಶ್ಚ ವಿಜ್ಞಾನಂ ಎಂಬುದು ತತ್ವದ ಸೃಷ್ಟಿಯನ್ನು ಹೇಳಲು ಹೊರಟಿರುವ ವಾಕ್ಯವಲ್ಲವಾದ್ದರಿಂದ ಮನಸ್ತತ್ವ ಹಾಗೂ ವಿಜ್ಞಾನತತ್ವಗಳಲ್ಲಿಯೂ ಕೂಡ ವಿಜ್ಞಾನತತ್ವವೇ ಅನಂತರ ಲಯವಾಗುತ್ತದೆ ಎಂದು ಹೇಳಬೇಕು ಎಂಬುದಾಗಿ ಸಿದ್ಧಾಂತ ಮಾಡಲಾಯಿತು. ಈ ಸಂದರ್ಭದಲ್ಲಿ 'ಸ ಇದಂ ಸರ್ವಂ ವಿಲಾಪ್ಯ ಅಂತಸ್ತಮಸಿ ನಿಲೀನಃ' ಎಂಬ ಶ್ರುತಿಯು ಬ್ರಹ್ಮನಿಗೂ ಕೂಡ ಲಯವನ್ನು ಹೇಳುತ್ತಿದೆ. ಆದ್ದರಿಂದ ಲಯಚಿಂತನೆ ಮಾಡುವ ಈ ಅಧಿಕರಣಗಳ ವಿಚಾರದಲ್ಲಿ ಬ್ರಹ್ಮನಿಗೂ ಕೂಡ ಲಯವನ್ನು ಹೇಳಬೇಕಲ್ಲವೇ ಎಂಬುದು ಅಧಿಕರಣದ ಪೂರ್ವಪಕ್ಷ. ಯಾವ ರೀತಿಯಾಗಿ ಬೇರೆ ವಸ್ತುಗಳಿಗೆ ಲಯವಿದೆಯೋ ಅದರಂತೆ ಬ್ರಹ್ಮನಿಗೂ ಕೂಡ ಲಯವನ್ನು ಹೇಳಬೇಕೆಂದು ಈ ಶ್ರುತಿಯನ್ನು ನೋಡಿದಾಗ ಆಪಾತತಃ ಗೋಚರವಾಗುತ್ತದೆ. ಆದರೆ ನಿಲೀನ ಶಬ್ದಕ್ಕೆ ಇತರರಿಗೆ ಕಾಣದಂತೆ ತನ್ನನ್ನು ಮುಚ್ಚಿಕೊಳ್ಳುತ್ತಾನೆ ಎಂದಷ್ಟೇ ಈ ಶ್ರುತಿಗೆ ಅರ್ಥ. ಆದ್ದರಿಂದ ಉಳಿದ ಪದಾರ್ಥಗಳು ಲಯವನ್ನು ಹೊಂದುವಂತೆ ಬ್ರಹ್ಮ ಲಯವನ್ನು ಹೊಂದಲಾರನು ಎಂಬುದು ಅಧಿಕರಣದ ಸಿದ್ಧಾಂತ.

ಪರಿಪೂರ್ಣಚಂದ್ರಿಕಾ

'ಚರಾಚರವ್ಯಪಾಶ್ರಯಸ್ತು ಸ್ಯಾತ್ ತದ್ವ್ಯಪದೇಶಭಾಕ್ತಃ ತದ್ಭಾವಭಾವಿತ್ವಾತ್' ಎಂಬ ಸೂತ್ರವು ಹಿಂದಿನ ಅಂತರಾಧಿಕರಣದಲ್ಲಿ ಸೇರಿದೆ ಎಂದು ನಾವು ಹೇಳುತ್ತೇವೆ. ಆದರೆ ಅದ್ವೈತಿಗಳು ಇದನ್ನು ಪ್ರತ್ಯೇಕ ಅಧಿಕರಣವೆಂದು ಉಲ್ಲೇಖಿಸಿದ್ದಾರೆ. ಅದರಂತೆ 'ನಾತ್ಮಾಶ್ರುತೇಃ ನಿತ್ಯತ್ವಾಚ್ಚತಾಭ್ಯಃ' ಎಂಬ ಸೂತ್ರವೂ ಕೂಡ ಪ್ರತ್ಯೇಕ ಅಧಿಕರಣವೆಂದು ಹೇಳುತ್ತಾರೆ. ಈ ಚರಾಚರಾಧಿಕರಣದಲ್ಲಿ ಜೀವನಿಗೂ ಕೂಡ ಉತ್ಪತ್ತಿ ಇದೆ ಎಂದು ಪೂರ್ವಪಕ್ಷ ಮಾಡಿ ಅನಾದಿತ್ವವನ್ನು ಸಮರ್ಥಿಸಿದ್ದಾರೆ. ಅದು ಹೀಗೆ– ಚೈತ್ರನು ಹುಟ್ಟಿದನು ಇತ್ಯಾದಿಯಾದ ವ್ಯವಹಾರವೂ ಜಗತ್ತಿನಲ್ಲಿ ಕಂಡಿದೆ. ಆದ್ದರಿಂದ ಶರೀರವು ಹುಟ್ಟಿದಾಗ ಅದೇ ಆಶ್ರಯವಾಗಿ ಉಳ್ಳ ಜೀವನು ಹುಟ್ಟುತ್ತಾನೆ. ಶರೀರ ನಾಶವಾದಾಗ ಜೀವನು ನಾಶವನ್ನು ಹೊಂದುತ್ತಾನೆ ಎಂಬುದು ಪೂರ್ವಪಕ್ಷ. ಪ್ರತೀ ಶರೀರದಲ್ಲೂ ಜೀವನಿಗೆ ಉತ್ಪತ್ತಿಯನ್ನು ಒಪ್ಪುವುದಾದರೆ ಯಾರು ಜ್ಯೋತಿಷ್ಟೋಮಯಾಗವನ್ನು ಮಾಡಿರುತ್ತಾನೋ ಅವನು ನಾಶವಾಗುವುದರಿಂದ ಅವನು ಮಾಡಿದ ಫಲವೇ ಭಂಗವಾಗುತ್ತದೆ. ಆದ್ದರಿಂದ ಕೃತಹಾನ ಎಂಬ ದೋಷ ಬರುತ್ತದೆ. ಯಾಗವನ್ನು ಆಚರಣೆ ಮಾಡದ ವ್ಯಕ್ತಿಗೆ ಸ್ವರ್ಗಾದಿಫಲವು ದೊರೆಯುವುದರಿಂದ ಅಕೃತಾಭ್ಯಾಗಮ ಎಂಬ ದೋಷವು ಬರುತ್ತದೆ. ಆದ್ದರಿಂದ ಶರೀರಕ್ಕೆ ಹುಟ್ಟುಸಾವುಗಳು ಇರುವಂತೆ ಜೀವನಿಗೆ ಹುಟ್ಟುಸಾವುಗಳನ್ನು ಹೇಳಬಾರದು. ಕೇವಲ ಸ್ಥಾವರಜಂಗಮಾತ್ಮಕವಾದ ಶರೀರದ ಸಂಪರ್ಕದಿಂದ 'ಚೈತ್ರೋ ಜಾತಃ' ಇತ್ಯಾದಿ ವ್ಯವಹಾರವಿರುತ್ತದೆ. ಇದು ಗೌಣವೆಂದೇ ತಿಳಿಯಬೇಕು. ಇಷ್ಟು ಅಧಿಕರಣದ ಸಿದ್ಧಾಂತ.

'ನಾತ್ಮಾಶ್ರುತೇಃ' ಎಂಬ ಸೂತ್ರವಿರುವ ಆತ್ಮಾಧಿಕರಣವನ್ನು ಹೀಗೆ ರಚನೆ ಮಾಡಿದ್ದಾರೆ– 'ಆತ್ಮಾನಃ ವ್ಯುಚ್ಚರಂತಿ' ಎಂಬ ಶ್ರುತಿ ಇರುವುದರಿಂದ ಜೀವನು ಆಯಾ ಸೃಷ್ಟಿಯ ಪ್ರಾರಂಭದಲ್ಲಿ ಆಕಾಶಾದಿಗಳಂತೆ ಉತ್ಪನ್ನನಾಗುತ್ತಾನೆ. ಆದ್ದರಿಂದ ಪ್ರತಿ ಶರೀರದಲ್ಲಿಯೂ ಜೀವನಿಗೆ ಉತ್ಪತ್ತಿ ನಾಶಗಳನ್ನು ಹೇಳುವ ಅವಶ್ಯಕತೆ ಇಲ್ಲ ಎಂದು ಅಧಿಕರಣದ ಪೂರ್ವಪಕ್ಷ.

ನಿತ್ಯನಾದ ಬ್ರಹ್ಮನಿಂದ ಅಭೇದವಿರುವ ಕಾರಣ ಜೀವನಿಗೆ ಉತ್ಪತ್ತಿ ಹಾಗೂ ನಾಶವನ್ನು ಸೃಷ್ಟಿಯ ಪ್ರಾರಂಭದಲ್ಲೂ ಕೂಡ ಹೇಳಬಾರದು. ಹಾಗೇನಾದರು ಉತ್ಪತ್ತಿ ನಾಶಗಳನ್ನು ಹೇಳಿದರೆ ಕೃತಹಾನ, ಅಕೃತ ಅಭ್ಯಾಗಮ ಎಂಬ ದೋಷವು ಬರುತ್ತದೆ. ಆದ್ದರಿಂದ ಜೀವನಿಗೆ ಉತ್ಪತ್ತಿ ಇಲ್ಲ ಎಂಬುದು ಸಿದ್ಧಾಂತ.

ಅದ್ವೈತಿಗಳ ಈ ಎರಡು ಅಧಿಕರಣಗಳ ರಚನೆಯೂ ಕೂಡ ಅಯುಕ್ತವಾಗಿದೆ. ಅದು ಹೀಗೆ– ಎರಡನೆಯ ಆತ್ಮಾಧಿಕರಣದಲ್ಲಿ ಜೀವನಿಗೆ ಬ್ರಹ್ಮಾಭೇದವಿರುವುದರಿಂದ ಉತ್ಪತ್ತಿ ನಾಶಗಳಿರಲು ಸಾಧ್ಯವೇ ಇಲ್ಲವೆಂದು ಸಿದ್ಧಾಂತ ಮಾಡಿದ್ದೀರಿ. ಇದೇ ಸಿದ್ಧಾಂತನ್ಯಾಯದಿಂದ ಮೊದಲನೆಯ ಚರಾಚರಾಧಿಕರಣದ ಪೂರ್ವಪಕ್ಷವೇ ಹುಟ್ಟುವುದಿಲ್ಲವೆಂದು ಸಿದ್ಧವಾಗುತ್ತದೆ. ಮತ್ತು ಲಯಕ್ರಮದ ಬಗ್ಗೆ ಹಿಂದೆ ಪ್ರಸಕ್ತವಾದಾಗ ಜೀವನಿಗೆ ಜನ್ಮವಿದೆ ಎಂಬ ವಿಷಯವು ಅಪ್ರಸಕ್ತವಾಗುತ್ತದೆ.

ಮತ್ತು 'ಏಕಾತ್ಮನಃ ಶರೀರೇ ಭಾವಾತ್' ಎಂಬ ಅಧಿಕರಣದಿಂದ ದೇಹ ಹಾಗೂ ಜೀವ ಇಬ್ಬರಿಗೂ ಭೇದವಿದೆ ಎಂದು ಸಿದ್ಧವಾಗಿರುವಾಗ ಮೊದಲನೆಯ ಅಧಿಕರಣವು ಪುನರುಕ್ತವಾಗುತ್ತದೆ. ನಿಮ್ಮ ಸಿದ್ಧಾಂತದಲ್ಲಿ 'ಚೈತ್ರೋ ಜಾತಃ' ಎಂಬುದು ಅಧ್ಯಾಸವಿಷಯಕವಾದ್ದರಿಂದ ಗೌಣಾರ್ಥವನ್ನು ಅದಕ್ಕೆ ಮಾಡಲೇಬಾರದು. ಆದ್ದರಿಂದ ಮೊದಲನೆಯ ಅಧಿಕರಣವು ಅಯುಕ್ತವಾಯಿತು.

ಎರಡನೆಯ ಅಧಿಕರಣವೂ ಕೂಡ ತಪ್ಪು. 'ತತ್‌ಸೃಷ್ಟ್ವಾ ತದೇವಾನುಪ್ರಾವಿಶತ್' ಎಂಬ ಶ್ರುತಿ ಹೇಳುವಂತೆ ಸೃಷ್ಟವಾದ ಪದಾರ್ಥಗಳಲ್ಲಿ ಪ್ರವೇಶವಿಶಿಷ್ಟನಾದ ಬ್ರಹ್ಮನೇ ಜೀವಭಾವವನ್ನು ಹೊಂದುವುದರಿಂದ ಅವನು ನಿತ್ಯನಾಗಿದ್ದಾನೆ ಎಂದು ಹೇಳುವುದೇ ತಪ್ಪು. ಏಕೆಂದರೆ ಪದಾರ್ಥ ಹುಟ್ಟುವ ಮೊದಲು ಚಿನ್ಮಾತ್ರನಿದ್ದನೇ ಹೊರತು

ಜೀವನು ಇರಲು ಸಾಧ್ಯವೇ ಇಲ್ಲ. ಜೀವನು ನಿತ್ಯವೆಂದರೆ ಚಿನ್ಮಾತ್ರನು ನಿತ್ಯ ಎಂದಿಷ್ಟೇ ಅರ್ಥವೆಂದು ಗೌಣವಾಗಿ ವ್ಯಾಖ್ಯಾನ ಮಾಡುವುದಾದರೆ ಈ ವಿಷಯವು ಅಸಂಭವಾಧಿಕರಣದಿಂದ ಗತಾರ್ಥವಾಗುತ್ತದೆ. ಮತ್ತು ಎರಡನೆಯ ಅಧಿಕರಣದ ಸಿದ್ಧಾಂತದಲ್ಲಿ ಕೃತಹಾನ, ಅಕೃತ ಅಭ್ಯಾಗಮವನ್ನು ಪರಿಹರಿಸಿಕೊಂಡಿದ್ದೀರಿ. ಆದರೆ ಅಹಮರ್ತನು ಪ್ರತಿನಿತ್ಯವೂ ಹುಟ್ಟುನಾಶಗಳನ್ನು ಹೊಂದುವುದರಿಂದ ಈ ದೋಷವನ್ನು ಪರಿಹರಿಸಿಕೊಳ್ಳಲು ನಿಮ್ಮಿಂದ ಸಾಧ್ಯವೇ ಇಲ್ಲ. ವಿಚಾರ ಮಾಡಿದರೆ ಆತ್ಮಶಬ್ದ ದ್ಯುಭ್ವಾದ್ಯಧಿಕರಣದ ನ್ಯಾಯದಿಂದ ಪರಮಾತ್ಮನಲ್ಲೇ ಇದೆ ಎಂದು ಈಗಾಗಲೇ ಸಿದ್ಧವಾಗಿದೆ. ಹೀಗಿರುವಾಗ ಪುನಃ ಈ ಆತ್ಮಶಬ್ದವನ್ನು ಜೀವಪರವಾಗಿ ವ್ಯಾಖ್ಯಾನ ಮಾಡುವುದು ಅತ್ಯಂತ ಮೂರ್ಖತನ. ವಿಶಿಷ್ಟಾದ್ವೈತಿಗಳೂ ಕೂಡ ಈ ವಿಷಯವನ್ನು ಗಮನಿಸದೆ 'ನಾತ್ಮಾಶ್ರುತೇಃ' ಎಂಬುದನ್ನು ಜೀವಪರವಾಗಿ ಪೂರ್ವಪಕ್ಷ ಮಾಡಿಕೊಂಡಿದ್ದಾರೆ. ಇವರೂ ಕೂಡ ಮೂರ್ಖಕೋಟಿಯಲ್ಲಿಯೇ ಸೇರಿಕೊಳ್ಳುತ್ತಾರೆ.

# ಜ್ಞಾಧಿಕರಣ

(೨-೩-೧೧)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

***

॥ ಶ್ರೀಗುರುಭ್ಯೋ ನಮಃ ॥

# ಜ್ಞಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – ज्ञोऽत एव ॥**

ಜ್ಞಾನರೂಪನಾದ ಜೀವನಾದರೂ ವಿಷ್ಣುವಿನಿಂದ ಉತ್ಪತ್ತಿಯನ್ನು ಪಡೆಯುತ್ತಾನೆ. ಜೀವನಿಗೆ ಇದು ಯುಕ್ತವೇ ಆಗಿದೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** जानातीति ज्ञः जीवोऽपि । अतः विष्णोः उत्पद्यत एव । कुतः? अत एवाविनष्टा एवोत्पद्यन्त इति श्रुतेरेवेत्यर्थः ॥१॥

ಜ್ಞಃ = ಜ್ಞಾನರೂಪನಾದ ಜೀವನೂ ಕೂಡ, ಅತಃ = ವಿಷ್ಣುವಿನ ದೆಸೆಯಿಂದ, ಏವ = ಹುಟ್ಟುತ್ತಾನಷ್ಟೇ. ಏಕೆಂದರೆ, ಅತ ಏವ = ಅವಿನಷ್ಟಾ ಏವೋತ್ಪದ್ಯಂತೇ ಎಂಬ ಶ್ರುತಿಯು ಈ ವಿಷಯದಲ್ಲಿ ಆಧಾರವಾಗಿದೆ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – 'नित्यो नित्यानाम्' (कठ.५.१३.) इति जीवस्यापि नित्यत्वमुक्तम् । 'सर्व एते आत्मानो व्युचरन्ति' इत्युत्पत्तिरुच्यते । अतो विरोध इति ।**

ಅನುವಾದ - 'ನಿತ್ಯೋ ನಿತ್ಯಾನಾಮ್' ಎಂಬ ಶ್ರುತಿಯು ಜೀವನಿಗೂ ಕೂಡ ನಿತ್ಯತ್ವವನ್ನು ಸಾರುತ್ತಿದೆ. ಆದರೆ 'ಸರ್ವ ಏತೇ ಆತ್ಮಾನೋ ವ್ಯುಚ್ಚರಂತಿ' ಎಂಬ ಶ್ರುತಿಯು ಪ್ರತಿಯೊಬ್ಬ ಆತ್ಮನಿಗೂ ಉತ್ಪತ್ತಿಯನ್ನು ಹೇಳುತ್ತಿದೆ. ಆದ್ದರಿಂದ ಎರಡು ಶ್ರುತಿಗಳಿಗೆ ಪರಸ್ಪರ ವಿರೋಧ ಬರುತ್ತದೆ ಎಂದು ಪೂರ್ವಪಕ್ಷ.

ಪ್ರತಿಪದಾರ್ಥ -- ನಿತ್ಯೋ ನಿತ್ಯಾನಾಮ್ = ನಿತ್ಯೋ ನಿತ್ಯಾನಾಮ್ ಎಂಬ ಶ್ರುತಿಯು, ಜೀವಸ್ಯಾಪಿ = ಜೀವನಿಗೂ ಕೂಡ ನಿತ್ಯತ್ವವನ್ನು, ಉಕ್ತಮ್ = ಹೇಳಿದೆ, ಸರ್ವೇ = ಎಲ್ಲಾ, ಏತೇ = ಈ, ಚಿದಾತ್ಮನಃ = ಚೇತನರು, ವ್ಯುಚ್ಚರಂತಿ = ಹುಟ್ಟುತ್ತಾರೆ. ಇತಿ = ಹೀಗೆ, ಉತ್ಪತ್ತಿಃ = ಉತ್ಪತ್ತಿಯು, ಉಚ್ಯತೇ = ಮತ್ತೊಂದು ಕಡೆ ಹೇಳಲಾಗಿದೆ. ಅತಃ = ಆದ್ದರಿಂದ ಈ ಎರಡು ಶ್ರುತಿಗಳಿಗೆ, ವಿರೋಧಃ = ವಿರೋಧವು ಬರುತ್ತದೆ.

**भाष्यम् – अत आह –**

**।। ज्ञोऽत एव ।।१।।**

**जीवोऽप्यत एव परमेश्वरादुत्पद्यते, शब्दादेव । 'ते वा एते चिदात्मनोऽविनष्टाः परं ज्योतिर्निर्विशन्त्यविनष्टा एवोत्पद्यन्ते न विनश्यन्ति कदाचन' इति काषायणश्रुतिः ।।१।।**

ಅನುವಾದ - ಈ ಪೂರ್ವಪಕ್ಷಕ್ಕೆ ಸೂತ್ರಕಾರರು ಉತ್ತರಿಸುತ್ತಿದ್ದಾರೆ. ಜೀವನು ಕೂಡ ಪರಮಾತ್ಮನಿಂದಲೇ ಹುಟ್ಟುತ್ತಾನೆ. ಶ್ರುತಿಪ್ರಮಾಣವಿರುವುದರಿಂದ ಜೀವರೆಲ್ಲರೂ ಚಿದಾತ್ಮನಿಂದ ನಾಶವನ್ನು ಹೊಂದದೆ ಪರಮಜ್ಯೋತಿಸ್ವರೂಪವಾದ ಪರಮಾತ್ಮನಲ್ಲಿ ಪ್ರವೇಶಿಸುತ್ತಾರೆ. ನಾಶವಿಲ್ಲದವರಾಗಿ ಹುಟ್ಟುತ್ತಾರೆ. ಎಂದೂ ನಾಶವನ್ನು ಹೊಂದುವುದಿಲ್ಲ. ಹೀಗೆ ಕಾಷಾಯಣ ಶ್ರುತಿಯು ಹೇಳುತ್ತಿದೆ.

ಪ್ರತಿಪದಾರ್ಥ -- ಅತಃ = ಪೂರ್ವಪಕ್ಷಕ್ಕೆ, ಆಹ = ಸೂತ್ರಕಾರರು ಉತ್ತರಿಸುತ್ತಿದ್ದಾರೆ. ಜೀವೋऽಪಿ = ಜೀವನೂ ಕೂಡ, ಅತಃ ಏವ = ಸೂತ್ರದಲ್ಲಿರುವ ಅತಏವ ಎಂಬ

ಜ್ಞಾಧಿಕರಣ (೨-೩-೧೧)

ಪದದಿಂದಲೇ, ಪರಮೇಶ್ವರಾತ್ ಏವ = ಪರಮಾತ್ಮನಿಂದಲೇ, ಉತ್ಪದ್ಯತೇ = ಹುಟ್ಟುತ್ತಾನೆ, ಶಬ್ದಾದೇವ = ಹೀಗೆ ಶ್ರುತಿಪ್ರಮಾಣವಿರುವುದರಿಂದ, ತೇ = ಪ್ರಸಿದ್ಧರಾದ, ಏತೇ = ಈ ಜೀವರು, ಯತಃ = ಯಾವ ಕಾರಣದಿಂದ, ಚಿದಾತ್ಮನಃ = ಜ್ಞಾನಸ್ವರೂಪರಾಗಿದ್ದಾರೋ, ಆ ಕಾರಣದಿಂದ, ಅವಿನಷ್ಟಾಃ = ಸ್ವರೂಪತಃ ನಾಶವಿಲ್ಲದವರು ಆಗಿದ್ದರೆ. ಜ್ಯೋತಿಃ = ಪ್ರಕಾಶರೂಪನಾದ, ಪರಂಬ್ರಹ್ಮ = ಬ್ರಹ್ಮನನ್ನು, ವಿಶಂತಿ = ಪ್ರಳಯಕಾಲದಲ್ಲಿ ಮತ್ತು ಮೋಕ್ಷದಲ್ಲಿ ಪ್ರವೇಶಿಸುತ್ತಾರೆ. ಅವಿನಷ್ಟಾಃ = ನಾಶವಿಲ್ಲದವರಾದರೂ, ಉತ್ಪದ್ಯಂತೇ = ಹುಟ್ಟುತ್ತಾರೆ. ಕದಾಚನ = ಯಾವಾಗಲೂ, ನ ವಿನಶ್ಯಂತೇ = ಸ್ವರೂಪತಃ ನಾಶವನ್ನು ಹೊಂದುವುದಿಲ್ಲ. ಇತಿ ಚ = ಹೀಗೆ, ಕಾಷಾಯಣಶ್ರುತಿಃ = ಕಾಷಾಯಣಶ್ರುತಿಯು ಹೇಳುತ್ತಿದೆ.

## ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ
# ತತ್ವಪ್ರಕಾಶಿಕಾ

**तत्वप्रकाशिका – एवमधिभूताधिदैवपरमात्मविषयश्रुतिविरोधे निरस्तेऽत्र हरौ श्रुतिसमन्वय सिद्ध्यर्थं जीवजन्मविषयश्रुतिविरोधपरिहारादस्ति शास्त्रादिसङ्गतिः ।**

ಇಲ್ಲಿಯತನಕ ಭೂತಗಳಿಗೆ ಸಂಬಂಧಪಟ್ಟ ಹಾಗೂ ದೇವತೆಗಳಿಗೆ ಸಂಬಂಧಪಟ್ಟ ಪರಮಾತ್ಮ ವಿಷಯಕವಾದ ಶ್ರುತಿವಿರೋಧವನ್ನು ಪರಿಹರಿಸಿದ್ದಾಯಿತು. ಪ್ರಕೃತ ಶ್ರೀಹರಿಯಲ್ಲಿ ಶ್ರುತಿಸಮನ್ವಯವು ಸಿದ್ಧವಾಗುವುದಕ್ಕಾಗಿ ಜೀವನಿಗೆ ಉತ್ಪತ್ತಿಯನ್ನು ಹೇಳುವ ಶ್ರುತಿವಿರೋಧವನ್ನು ಪರಿಹಾರ ಮಾಡುತ್ತಿದ್ದಾರೆ. ಆದ್ದರಿಂದ ಶಾಸ್ತ್ರ-ಅಧ್ಯಾಯ-ಪಾದ ಸಂಗತಿಗಳು ಇರುತ್ತವೆ.

ವಿವರಣೆ - ಆಧಿಭೌತಿಕ ಹಾಗೂ ಆಧಿದೈವಿಕ ಶಬ್ದಗಳಿಗೆ ಸಂಬಂಧಪಟ್ಟ ಶ್ರುತಿವಿರೋಧವನ್ನು ಪರಿಹರಿಸಿದ್ದಾಯಿತು. ಪ್ರಕೃತ ಆಧ್ಯಾತ್ಮಿಕ ಶ್ರುತಿಗಳ ವಿರೋಧವನ್ನು ಪರಿಹರಿಸಲಾಗಿದೆ. ಸೂಚೀಕಟಾಹ ನ್ಯಾಯೇನಅಲ್ಪವಾದಅಧಿಭೂತಹಾಗೂಅಧಿದೈವ-ವಿಷಯಕವಾದಶ್ರುತಿವಿರೋಧವನ್ನುಪರಿಹಾರಮಾಡಿ ಈಗಅಧಿಕವಾಗಿರುವಜೀವವಿಷಯಕಶ್ರುತಿವಿರೋಧವನ್ನುಪರಿಹಾರಮಾಡುತ್ತಿದ್ದಾರೆ.ಆದ್ದರಿಂದಹಿಂದಿನ ಅಧಿಕರಣದಿಂದ ಆನಂತರ್ಯಸಂಗತಿ ಇರುತ್ತದೆ. ಇಲ್ಲಿಂದ ಪ್ರಾರಂಭ ಮಾಡಿ ಪಾದ ಮುಗಿಯುವ ತನಕ ಜೀವವಿಷಯಕ ಶ್ರುತಿವಿರೋಧದ ಪರಿಹಾರವೇ ಇರುತ್ತದೆ.

**तत्वप्रकाशिका – सर्वजगत्कर्ता विष्णुरित्युक्तम् । तत्र जीवस्यानादित्वे तदनुपपन्नमिति तद् दूष्यं भवति । सर्वमध्यपतितो जीवोऽत्र विषयः । किमुत्पद्यते न वेति संशयः ।**

ಸಕಲ ಜಗತ್ತಿಗೆ ಶ್ರೀಹರಿಯೇ ಕಾರಣನಾಗಿದ್ದಾನೆಂದು ಹೇಳಲಾಯಿತು. ಹೀಗಿರುವಾಗ ಜೀವನು ಅನಾದಿಯಾದರೆ ಸರ್ವಜಗತ್ಕರ್ತೃತ್ವವು ವಿಷ್ಣುವಿನಲ್ಲಿ ಯುಕ್ತವಾಗುವುದಿಲ್ಲ. ಆದ್ದರಿಂದ ಜೀವನು ಅನಾದಿಯಾಗಿದ್ದಾನೆಂಬುದನ್ನು ನಿರಾಕರಣೆ ಮಾಡಬೇಕು.

ಸಮಸ್ತ ಜಗತ್ತಿನ ಮಧ್ಯದಲ್ಲಿ ಜೀವನು ಈ ಅಧಿಕರಣಕ್ಕೆ ವಿಷಯನಾಗಿದ್ದಾನೆ. ಇವನಿಗೆ ಉತ್ಪತ್ತಿ ಇದೆಯೋ ಇಲ್ಲವೋ ? ಎಂಬುದು ಅಧಿಕರಣದ ಸಂಶಯ.

**तत्वप्रकाशिका – संशयबीजं श्रुतिविरोधं दर्शयति – नित्य इति ।। नित्यत्वादेवानुत्पत्तिरिति भावः । व्युचरन्ति उत्पद्यन्ते । न जीव उत्पत्तिमानिति पूर्वः पक्षः । अनादित्वादीश्वरवत् । न च साध्याविशिष्टता हेतोः । प्रागभावशून्यताया विवक्षितत्वात् ।**

ಸಂಶಯಕ್ಕೆ ಕಾರಣವಾದ ಶ್ರುತಿವಿರೋಧವನ್ನು 'ನಿತ್ಯಃ' ಇತ್ಯಾದಿ ಭಾಷ್ಯದಿಂದ ತೋರಿಸುತ್ತಿದ್ದಾರೆ. ನಿತ್ಯನಾಗಿರುವುದರಿಂದಲೇ ಜೀವನು ಉತ್ಪತ್ತಿರಹಿತನಾಗಿದ್ದಾನೆಂದು ಅಭಿಪ್ರಾಯ. ವ್ಯುಚ್ಚರಂತಿ ಎಂದರೆ ಹುಟ್ಟುತ್ತಾರೆ ಎಂದರ್ಥ. ಜೀವನಿಗೆ ಉತ್ಪತ್ತಿ ಇಲ್ಲವೆಂಬುದು ಪೂರ್ವಪಕ್ಷ. ಈಶ್ವರನು ಹೇಗೆ ಅನಾದಿಯೋ ಅದರಂತೆ ಜೀವನೂ ಕೂಡ ಅನಾದಿಯಾಗಿದ್ದಾನೆ. ಹೇತುವು ಸಾಧ್ಯಾವಿಶಿಷ್ಟವಾಗುವುದಿಲ್ಲ. ಅನಾದಿತ್ವ ಶಬ್ದಕ್ಕೆ ಪ್ರಾಗಭಾವಶೂನ್ಯತ್ವ ಎಂಬರ್ಥವನ್ನು ವಿವಕ್ಷಿಸುತ್ತೇವೆ.

ವಿವರಣೆ - 'ನಿತ್ಯೋ ನಿತ್ಯಾನಾಂ' ಎಂಬ ಶ್ರುತಿಯು ಜೀವನಿಗೆ ನಿತ್ಯತ್ವವನ್ನು ಹೇಳುತ್ತಿದೆ. 'ಸರ್ವೇ ಏತೇ ಚಿದಾತ್ಮಾನಃ ವ್ಯುಚ್ಚರಂತಿ' ಎಂಬ ಶ್ರುತಿಯು ಜೀವರಿಗೆ ಉತ್ಪತ್ತಿಯನ್ನು ಹೇಳುತ್ತಿದೆ. ಹೀಗೆ ಶ್ರುತಿಗಳಿಗೆ ಪರಸ್ಪರ ವಿರೋಧವು ಬರುತ್ತಿರುವುದರಿಂದ ಸಂದೇಹವು ಪ್ರಾಪ್ತವಾಗುತ್ತದೆ.

'ಜೀವಃ ನ ಉತ್ಪತ್ತಿಮಾನ್ ಅನಾದಿತ್ವಾತ್ ಈಶ್ವರವತ್' ಎಂಬ ಅನುಮಾನದಿಂದ ಜೀವನು ಉತ್ಪತ್ತಿವುಳ್ಳವನಲ್ಲವೆಂದು ಪೂರ್ವಪಕ್ಷಕಾರರು ಸಮರ್ಥಿಸುತ್ತಿದ್ದಾರೆ. ಆದರೆ ಈ ಹೇತುವಿಗೆ ಸಾಧ್ಯಾವೈಶಿಷ್ಟ್ಯ ಎಂಬ ದೋಷವು ಬರುತ್ತದೆ. ಉತ್ಪತ್ತಿಯುಳ್ಳವನಲ್ಲ ಎಂದರೆ ಅನಾದಿಯಾಗಿದ್ದಾನೆ ಎಂದರ್ಥ. ಪುನಃ ಅದನ್ನೇ ಹೇತುವನ್ನಾಗಿ ಮಾಡಿದರೆ ಹೇತು ಹಾಗೂ ಸಾಧ್ಯಗಳು ಒಂದೇ ಆಗುವುದರಿಂದ ಸಾಧ್ಯಾವೈಶಿಷ್ಟ್ಯದೋಷವು ಬರುತ್ತದೆ. ಇದಕ್ಕೆ ಪೂರ್ವಪಕ್ಷಕಾರರು ಉತ್ತರಿಸುತ್ತಾರೆ. ಅನಾದಿತ್ವವನ್ನು ನಾವು ಉತ್ಪತ್ತಿರಾಹಿತ್ಯ ಎಂಬರ್ಥದಲ್ಲಿ ಪ್ರಯೋಗಿಸುವುದಿಲ್ಲ, ಪ್ರಾಗಭಾವಶೂನ್ಯತ್ವ ಎಂಬರ್ಥದಲ್ಲಿ ಪ್ರಯೋಗಿಸುತ್ತೇವೆ. ಆಗ ಹೇತು ಮತ್ತು ಸಾಧ್ಯಗಳು ಬೇರೆಯಾಗುತ್ತವೆ.

**तत्वप्रकाशिका – न च तत्र विवादः । उत्पत्तेरेवाभावावप्रसङ्गात् । कारणशून्यतां वाऽनादित्वं ब्रूमः । न च तत्रापि विवादः । कारणानुपलब्धेरेव । न चाकाशादीनामेवंभूतानामप्युत्पत्तिमत्त्वेन व्यभिचारः असंप्रतिपत्तेः ।**

**श्रुतिश्चास्यानुत्पत्तिं ब्रूते । न च श्रुत्यन्तरविरोधः । अनादित्वश्रुतेर्युक्त्युपेतायाः प्राबल्यात् तद्विरोधेनाप्रामाण्यात् ।**

ಪ್ರಾಗಭಾವಶೂನ್ಯತ್ವವು ಜೀವನಲ್ಲಿದೆ ಎಂಬ ವಿಷಯದಲ್ಲಿ ವಿವಾದ ಮಾಡಬಾರದು. ಹಾಗೇನಾದರೂ ಪ್ರಾಗಭಾವಶೂನ್ಯತ್ವವನ್ನು ಜೀವನಲ್ಲಿ ಒಪ್ಪದಿದ್ದರೆ ಉತ್ಪತ್ತಿ ಎಂಬುದೇ ಇಲ್ಲವೆಂಬ ಪ್ರಸಂಗ ಬರುತ್ತದೆ. ಅಥವಾ ಕಾರಣಶೂನ್ಯತ್ವವನ್ನು ಅನಾದಿತ್ವ ಎನ್ನುತ್ತೇವೆ. ಈ ವಿಷಯದಲ್ಲೂ ವಿವಾದ ಮಾಡಬಾರದು. ಕಾರಣವು ಅನುಪಲಬ್ಧವಾದ್ದರಿಂದಲೇ ಕಾರಣಶೂನ್ಯತ್ವವನ್ನು ಹೇಳಬಹುದು.

ಆಕಾಶಾದಿಗಳಿಗೆ ಇಂತಹ ಕಾರಣಶೂನ್ಯತ್ವವಾದ ಉತ್ಪತ್ತಿಯು ಇರುವುದರಿಂದ ವ್ಯಭಿಚಾರ ಬರುತ್ತದಲ್ಲವೇ? ಎಂದು ಆಕ್ಷೇಪ ಮಾಡಬಾರದು. ಪೂರ್ವಪಕ್ಷಿಗೆ ಪರಾಧೀನವಿಶೇಷಾವಾಪ್ತಿ-ರೂಪವಾದ ಉತ್ಪತ್ತಿಯು ಆಕಾಶದಲ್ಲಿ ಸಂಪ್ರತಿಪನ್ನವಾಗಿಲ್ಲ.

ಶ್ರುತಿಯೂ ಕೂಡ ಜೀವನಿಗೆ ಉತ್ಪತ್ತಿ ಇಲ್ಲವೆಂದೇ ಹೇಳುತ್ತಿದೆ. 'ನಿತ್ಯೋ ನಿತ್ಯಾನಾಂ' ಎಂಬ ಶ್ರುತಿಗೆ 'ಸರ್ವ ಏತೇ' ಎಂಬ ಶ್ರುತ್ಯಂತರದಿಂದ ವಿರೋಧವನ್ನು ಹೇಳಬಾರದು. ಅನಾದಿತ್ವಶ್ರುತಿಯು ಯುಕ್ತಿಸಹಿತವಾದ್ದರಿಂದ ಪ್ರಬಲವಾಗಿದೆ. ಇದರ ವಿರೋಧವಿರುವುದರಿಂದ 'ಸರ್ವ ಏತೇ' ಎಂಬ ಶ್ರುತಿಗೆ ಅಪ್ರಾಮಾಣ್ಯವನ್ನು ಹೇಳಬೇಕು.

ವಿವರಣೆ – ಪಕ್ಷನಾಗಿರುವ ಜೀವನಲ್ಲಿ ಪ್ರಾಗಭಾವಶೂನ್ಯತ್ವ ಎಂಬ ಅನಾದಿತ್ವವನ್ನು ಒಪ್ಪಲೇಬೇಕು. ಒಂದುವೇಳೆ ಒಪ್ಪದಿದ್ದರೆ ಆಗ ಜೀವನಿಗೂ ಕೂಡ ಪ್ರಾಗಭಾವವಿದೆ ಎಂದು ಹೇಳಿದಂತಾಗುತ್ತದೆ. ಜೀವನಿಗೆ ಪ್ರಾಗಭಾವವನ್ನು ಒಪ್ಪಿದರೆ ಪ್ರಳಯಕಾಲದಲ್ಲಿ ಜೀವನು ಮೊದಲು ಇರಲಿಲ್ಲ ಎಂದು ಹೇಳಿದಂತಾಗುತ್ತದೆ. ಯಾವಾಗ ಜೀವನೇ ಇಲ್ಲವೋ ಆಗ ಆಶ್ರಯನಾದ ಜೀವನೇ ಇಲ್ಲದ ಕಾರಣ ಧರ್ಮ, ಅಧರ್ಮ ಮೊದಲಾದ ಅದೃಷ್ಟಗಳೂ ಕೂಡ ಇಲ್ಲದಂತಾಗುತ್ತದೆ. ಘಟಪಟಾದಿ ಯಾವುದೇ ಪದಾರ್ಥಗಳು ಹುಟ್ಟಬೇಕೆಂದರೆ ಜೀವನ ಅದೃಷ್ಟವು ನಿಮಿತ್ತಕಾರಣವಾಗುತ್ತದೆಂದು ಅಂಗೀಕರಿಸಲಾಗಿದೆ. ಈಗ ಜೀವನನ್ನೇ ಒಪ್ಪದ ಕಾರಣ, ಜೀವನೂ ಇಲ್ಲ, ಅವನಲ್ಲಿ ಆಧೇಯವಾದ ಅದೃಷ್ಟಾದಿಗಳೂ ಇಲ್ಲ. ಆದ್ದರಿಂದ ಘಟಪಟಾದಿಕಾರ್ಯಗಳೂ ಕೂಡ ಉತ್ಪತ್ತಿಯಾಗದೇ ಇರುವ ಪ್ರಸಂಗ ಬರುತ್ತದೆ. ಆದ್ದರಿಂದ ಪ್ರಾಗಭಾವಶೂನ್ಯತ್ವರೂಪವಾದ ಅನಾದಿತ್ವವನ್ನು ಜೀವನಲ್ಲಿ ಒಪ್ಪಲೇಬೇಕು.

ಕಾರಣಶೂನ್ಯತ್ವವನ್ನು ಅನಾದಿತ್ವವೆಂದು ಒಪ್ಪಿ ಇದು ಪಕ್ಷೀಭೂತನಾದ ಜೀವನಲ್ಲಿ ಬರುವುದಿಲ್ಲ. ಆದ್ದರಿಂದ ಹೇತ್ವಸಿದ್ಧಿ ಬರುತ್ತದೆಂದು ಹೇಳಬೇಕು. ಆದರೆ ಇದಕ್ಕೂ ಕೂಡ ಈಗ ಅವಕಾಶವಿಲ್ಲ. ಕಾರಣವು ಉಪಲಬ್ಧವಾಗಿಲ್ಲ ಎಂಬ ಕಾರಣದಿಂದಲೇ ಕಾರಣಶೂನ್ಯತ್ವವು ಪಕ್ಷದಲ್ಲಿ ಬರುತ್ತದೆ. ಹೀಗಿರುವಾಗ ಹೇತ್ವಸಿದ್ಧಿಗೆ ಅವಕಾಶವೇ ಇಲ್ಲ.

ಇದರ ಮೇಲೆ ಪೂರ್ವಪಕ್ಷಿಗಳು ಹೀಗೆ ಆಕ್ಷೇಪ ಮಾಡಬಹುದು. ವಿಯದಧಿಕರಣದಲ್ಲಿ ಅವ್ಯಾಕೃತಾಕಾಶವು ನಿತ್ಯವಾಗಿದ್ದರೂ ಕೂಡ ಪರಾಧೀನವಿಶೇಷಾವಾಪ್ತಿರೂಪವಾದ ಉತ್ಪತ್ತಿಯನ್ನು ಅಂಗೀಕರಿಸಲಾಗಿದೆ. ಆದ್ದರಿಂದ ಆಕಾಶದಲ್ಲಿ ಉತ್ಪತ್ತಿಯೇ ಇರುವುದರಿಂದ ಉತ್ಪತ್ತ್ಯಭಾವವೆಂಬ

ಸಾಧ್ಯವಿಲ್ಲ. ಕಾರಣಶೂನ್ಯತ್ವವಾದ ಹೇತುವಿದೆ. ಆದ್ದರಿಂದ ವ್ಯಭಿಚಾರ ಬರುತ್ತದೆ ಎಂದು. ಈ ಆಕ್ಷೇಪವು ತಪ್ಪು. ಪೂರ್ವಪಕ್ಷಿಗಳು ಪರಾಧೀನವಿಶೇಷಾವಾಪ್ತಿರೂಪವಾದ ಉತ್ಪತ್ತಿಯನ್ನು ಒಪ್ಪುವುದೇ ಇಲ್ಲ. ಹೀಗೆ ಸಾಧ್ಯ ಹಾಗೂ ಹೇತು ಎರಡೂ ಇಲ್ಲದ್ದರಿಂದ ವ್ಯಭಿಚಾರಕ್ಕೆ ಅವಕಾಶವಿಲ್ಲ. 'ನಿತ್ಯೋ ನಿತ್ಯಾನಾಂ' ಎಂಬ ಶ್ರುತಿಯು ಜೀವನಿಗೆ ಅನುತ್ಪತ್ತಿಯನ್ನು ಹೇಳುತ್ತಿವೆ. ಇದಕ್ಕೆ 'ಸರ್ವೇ ಏತೇ' ಎಂಬ ಉತ್ಪತ್ತಿಯನ್ನು ಹೇಳುವ ಶ್ರುತಿಯ ವಿರೋಧ ಬರುತ್ತದೆಂದು ಆಕ್ಷೇಪ ಮಾಡಬಾರದು. 'ನಿತ್ಯೋ ನಿತ್ಯಾನಾಂ' ಎಂಬ ಶ್ರುತಿಯು ಯುಕ್ತಿಯಿಂದ ಉಪೋದ್ಬಲಿತವಾಗಿರುವುದರಿಂದ ಪ್ರಬಲವಾಗಿದೆ. ಇದರ ವಿರೋಧವೇ 'ಸರ್ವೇ ಏತೇ' ಎಂಬ ಶ್ರುತಿಗೆ ಬರುವುದರಿಂದ ಅಪ್ರಮಾಣವಾಗುತ್ತದೆ.

**तत्वप्रकाशिका – न च देहादेरुत्पत्तेः प्रत्यक्षसिद्धत्वाद्बाधः । व्यधिकरणत्वात्। अतो न जगत्कारणे ब्रह्मणि श्रुतिसमन्वयसिद्धिरित्येवं प्राप्ते सिद्धान्तयत्सूत्रमवतार्य व्याचष्टे – अत इति ।।**

ದೇಹಾದಿಗಳ ಉತ್ಪತ್ತಿಯು ಪ್ರತ್ಯಕ್ಷಸಿದ್ಧವಾದ್ದರಿಂದ ಶ್ರುತಿಯು ಬಾಧಿತವಾಗುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಇದು ವ್ಯಧಿಕರಣವಾಗಿದೆ. ಆದ್ದರಿಂದ ಜಗತ್ಕಾರಣನಾದ ಬ್ರಹ್ಮನಲ್ಲಿ ಶ್ರುತಿಸಮನ್ವಯವು ಸಿದ್ಧವಾಗುವುದಿಲ್ಲ. ಇಷ್ಟು ಅಧಿಕರಣದ ಪೂರ್ವಪಕ್ಷ.

ಸಿದ್ಧಾಂತ ಸ್ಥಾಪಕವಾದ ಸೂತ್ರಕ್ಕೆ ಅವತಾರಿಕೆ ನೀಡಿ 'ಅತಃ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ಜೀವನು ಯಾವ ದೇಹಾದಿಗಳಿಗೆ ಆಶ್ರಯನಾಗಿದ್ದಾನೋ ಅಂತಹ ದೇಹಾದಿಗಳು ಉತ್ಪನ್ನವಾಗುತ್ತವೆ, ನಾಶವನ್ನು ಹೊಂದುತ್ತವೆ. ಇದು ಪ್ರತ್ಯಕ್ಷಸಿದ್ಧವಾಗಿದೆ. ದೇಹದ ಉತ್ಪತ್ತಿ ಹಾಗೂ ನಾಶಗಳಾದಾಗ ಅದಕ್ಕೆ ಆಶ್ರಯನಾದ ಜೀವನಿಗೂ ಕೂಡ ಉತ್ಪತ್ತಿ ಹಾಗೂ ನಾಶಗಳನ್ನು ಒಪ್ಪಬೇಕು. ಆದ್ದರಿಂದ ನಿತ್ಯತ್ವವನ್ನು ಹೇಳುವ 'ನಿತ್ಯೋ ನಿತ್ಯಾನಾಂ' ಎಂಬ ಶ್ರುತಿಗೆ ಪ್ರತ್ಯಕ್ಷದಿಂದ ಬಾಧದೋಷವು ಬರುತ್ತದೆ. ಹೀಗೆ ಆಕ್ಷೇಪ ಮಾಡಬಾರದು.

ಏಕೆಂದರೆ ಈ ಬಾಹ್ಯವಾದ ದೇಹಗಳಿಗೆ ಆಶ್ರಯವಾದುದು ಜೀವ ಅಲ್ಲವೇ ಅಲ್ಲ. ಅನಾದಿಯಾದ ಬೇರೆ ವಸ್ತುವೇ ಆಶ್ರಯವಾಗಿದೆ. ಆದ್ದರಿಂದ ಪ್ರತ್ಯಕ್ಷವಾದಕ್ಕೆ ಅವಕಾಶವಿಲ್ಲ. ಬಾಹ್ಯದೇಹವು ಜೀವೋಪಾಧಿಕವಲ್ಲ ಎಂದಭಿಪ್ರಾಯ.

ಅಥವಾ ದೇಹೋತ್ಪತ್ತಿಯು ಪ್ರತ್ಯಕ್ಷಸಿದ್ಧವಾಗಿರುವುದರಿಂದ ದೇಹವು ಅನಿತ್ಯವಾಗಿಲ್ಲ, ಜೀವನಿಗೆ ಅನಿತ್ಯತ್ವವನ್ನು ಏಕೆ ಒಪ್ಪಬೇಕು? ಆದ್ದರಿಂದ ದೇಹೋತ್ಪತ್ತಿಯ ಪ್ರತ್ಯಕ್ಷತ್ವದಿಂದ ಜೀವನಿಗೆ ಉತ್ಪತ್ತಿ ಹೇಳುವುದು ವ್ಯಧಿಕರಣವಾಗಿದೆ.

**तत्वप्रकाशिका – जीवोऽप्युत्पद्यत एव । स चेश्वरादेव श्रुतिसिद्धत्वात् । न चानादित्वश्रुत्यादिविरोधः । नित्यत्वाविरोधेनैवोत्पत्तेः श्रुत्युक्तत्वादिति भावः ।।१८।।**

ಜೀವನಿಗೂ ಕೂಡ ಉತ್ಪತ್ತಿ ಇದ್ದೇ ಇದೆ. ಈಶ್ವರನಿಂದಲೇ ಇವನು ಉತ್ಪನ್ನನಾಗುತ್ತಾನೆಂದು ಶ್ರುತಿಯಿಂದ ಸಿದ್ಧವಾಗಿದೆ. 'ನಿತ್ಯೋ ನಿತ್ಯಾನಾಂ' ಎಂಬ ಶ್ರುತಿಯ ವಿರೋಧಕ್ಕೆ ಅವಕಾಶವಿಲ್ಲ. ನಿತ್ಯತ್ವಕ್ಕೆ ವಿರೋಧ ಬಾರದಂತೆ ಶ್ರುತಿಯು ಹೇಳುತ್ತಿದೆ ಎಂಬುದೇ ಶ್ರುತಿಯ ಸಿದ್ಧಾಂತ.

ವಿವರಣೆ - ಕಾಷಾಯಣ ಶ್ರುತಿಯು 'ಅವಿನಷ್ಟಾ ಏವ ಉತ್ಪದ್ಯಂತೇ' ಎಂಬುದಾಗಿ ವಿನಾಶ ಹೊಂದದ ಜೀವರು ಉತ್ಪನ್ನರಾಗುತ್ತಾರೆಂದು ಹೇಳುತ್ತದೆ. ಆದ್ದರಿಂದ ಪ್ರತಿಯೊಬ್ಬ ಜೀವರಿಗೆ ಸ್ವರೂಪತಃ ನಾಶವಿರುವುದಿಲ್ಲ, ದೇಹತಃ ನಾಶವಿರುತ್ತದೆಂದು ತಿಳಿಯಬೇಕು. ದೇಹತಃ ನಾಶವಿರುವುದರಿಂದ ಜೀವರ ಉತ್ಪತ್ತಿಯು ಶ್ರೀಹರಿಯ ಅಧೀನವಾಗಿರುತ್ತದೆ.

## ಬ್ರಹ್ಮಸೂತ್ರ

**सूत्रम् — युक्तेश्च ।।**

ಜೀವನು ನಿತ್ಯನೇ ಆಗಿದ್ದರೂ ಅವನ ಉತ್ಪತ್ತಿಯು ಯುಕ್ತವಾಗುತ್ತದೆ. ಏಕೆಂದರೆ ಪರಮಾತ್ಮನ ಅಧೀನವಾದ ದೇಹರೂಪ ವಿಶೇಷಪ್ರಾಪ್ತಿಯೆಂಬ ಉತ್ಪತ್ತಿಯನ್ನು ಹೊಂದಿರುತ್ತಾನೆ.

## ಸೂತ್ರದೀಪಿಕಾ

**सूत्रदीपिका** — अनादिनित्यस्यापि जीवस्येशाधीनत्वदेहवत्त्वरूपोत्पत्तेः **युक्तत्वाच्च** जीवः उत्पत्तिमानेवेत्यर्थः ।।२।।

ಅನಾದಿನಿತ್ಯನಾದ ಜೀವನಿಗೆ ಈಶಾಧೀನವಾದ ದೇಹವನ್ನು ಹೊಂದುವಿಕೆ ಎಂಬ ಉತ್ಪತ್ತಿಯು, ಯುಕ್ತೇಶ್ಚ = ಯುಕ್ತವಾಗುತ್ತದೆ. ಆದ್ದರಿಂದಲೂ ಜೀವನು ಉತ್ಪತ್ತಿಯುಳ್ಳವನು.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ಜ್ಞಾಧಿಕರಣವು ಮುಗಿಯಿತು.

## ಬ್ರಹ್ಮಸೂತ್ರಭಾಷ್ಯ

**भाष्यम् — ।। युक्तेश्च ।।२।।**

**नित्यस्यापि हि जीवस्योपाध्यपेक्षयोत्पत्तिर्युज्यते ।**

ಅನುವಾದ - ನಿತ್ಯನಾದ ಜೀವನಿಗೆ ದೇಹವೆಂಬ ಉಪಾಧಿಯ ನಿಮಿತ್ತವಾಗಿ ಉತ್ಪತ್ತಿಯನ್ನು ಹೇಳಿದ್ದು ಯುಕ್ತವಾಗುತ್ತದೆ.

ಪರಿಪೂರ್ಣಚಂದ್ರಿಕಾ

ಪ್ರತಿಪದಾರ್ಥ -- ನಿತ್ಯಸ್ಯಾಪಿ = ಸ್ವರೂಪತಃ ನಿತ್ಯನಾಗಿದ್ದರೂ, ಜೀವಸ್ಯ = ಜೀವನಿಗೆ, ಉಪಾಧ್ಯಪೇಕ್ಷಯಾ = ದೇಹವೆಂಬ ಉಪಾಧಿಯ ನಿಮಿತ್ತವಾಗಿ, ಉತ್ಪತ್ತಿಃ = ಹುಟ್ಟುವಿಕೆಯು, ಯುಜ್ಯತೇ = ಯುಕ್ತವಾಗುತ್ತದೆ.

**भाष्यम् –**

**'उत्पद्यन्ते चिदात्मानो नित्याः नित्यात् परात्मनः ।**
**उपाध्यपेक्षया तेषां उत्पत्तिरपि गीयते ।।'**
**इति च व्योमसंहितायाम् ।।२।।**

**।। इति श्रीमदानन्दतीर्थभगवत्पादाचार्यविरचिते**

**ब्रह्मसूत्रभाष्ये ज्ञाधिकरणम् ।। ११ ।।**

ಅನುವಾದ - ನಿತ್ಯಸ್ವರೂಪನಾದ ಪರಮಾತ್ಮನ ದೆಸೆಯಿಂದ ಜೀವರು ನಿತ್ಯರಾಗಿದ್ದರೂ ಹುಟ್ಟುತ್ತಾರೆ, ಉಪಾಧಿಭೂತವಾದ ದೇಹವು ಹುಟ್ಟುವ ಕಾರಣ ಜೀವರು ಹುಟ್ಟುತ್ತಾರೆಂಬ ಪ್ರಸಿದ್ಧಿಯಿದೆ. ಹೀಗೆ ವ್ಯೋಮಸಂಹಿತೆಯು ಹೇಳುತ್ತದೆ.

ಪ್ರತಿಪದಾರ್ಥ -- ಚಿದಾತ್ಮನಃ = ಚಿತ್‌ಸ್ವರೂಪರಾದ ಜೀವರು, ನಿತ್ಯಃ = ನಿತ್ಯರೂಪನಾದ, ಪರಾತ್ಮನಃ = ಪರಮಾತ್ಮನ ದೆಸೆಯಿಂದ, ಉತ್ಪದ್ಯಂತೇ = ಹುಟ್ಟುತ್ತಾರೆ. ಉಪಾಧ್ಯಪೇಕ್ಷಯಾ = ಹುಟ್ಟುವಿಕೆಯ ಪ್ರಯುಕ್ತವಾಗಿ, ತೇಷಾಂ = ಜೀವರಿಗೆ, ಉತ್ಪತ್ತಿರಪಿ = ಉತ್ಪತ್ತಿ ಇರುತ್ತದೆ ಎಂದು, ಗೀಯತೇ = ಕರೆಯಲಾಗುತ್ತದೆ. ಇತಿ ಚ = ಹೀಗೆ, ವ್ಯೋಮಸಂಹಿತಾಯಾಮ್ = ವ್ಯೋಮಸಂಹಿತೆಯಲ್ಲಿ ಹೇಳಿದ್ದಾರೆ.

ಇಲ್ಲಿಗೆ ಜ್ಞಾಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

## ತತ್ವಪ್ರಕಾಶಿಕಾ

**तत्वप्रकाशिका – नन्वनादिनित्यस्य जीवस्योत्पत्तिः श्रुतावपि कथं युज्यते। नित्यत्वमभ्युपेत्योत्पत्तिवचनस्य वन्ध्यात्वमभ्युपगम्य मातृत्ववचनेन साम्यादित्याशङ्कां परिहरत्सूत्रमुपन्यस्य व्याचष्टे – युक्तेश्चेति।।**

ಜೀವನು ಅನಾದಿನಿತ್ಯನಾಗಿದ್ದಾನೆ. ಇವನಿಗೆ ಶ್ರುತಿಯು ಉತ್ಪತ್ತಿಯನ್ನು ಹೇಳುತ್ತಿದೆ ಎಂಬುದಾಗಿ ಹಿಂದಿನ ಸೂತ್ರದಲ್ಲಿ ಸಮರ್ಥಿಸಲಾಯಿತು. ಇದು ವಿರುದ್ಧವಾದ್ದರಿಂದ ಹೇಗೆ ಕೂಡುತ್ತದೆ? ನಿತ್ಯತ್ವವನ್ನೂ ಒಪ್ಪಿ ಉತ್ಪತ್ತಿ ವಚನವನ್ನು ಪ್ರಮಾಣವೆಂದು ಒಪ್ಪುವುದು ವ್ಯಾಹತವಾಗಿದೆ. 'ಒಬ್ಬ ಸ್ತ್ರೀಯನ್ನು ಬಂಜೆ ಎಂದು ಒಪ್ಪಿ, ಅವಳು ತಾಯಿಯಾಗಿದ್ದಾಳೆ' ಎಂಬ ಮಾತಿಗೆ ಇದು ಸಮಾನವಾಗಿದೆಯಲ್ಲವೇ? ಈ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು 'ಯುಕ್ತೇಶ್ಚ' ಎಂದು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – युक्ता चानादेरपि जीवस्योत्पत्तिः तदुपाधेरुत्पत्तेः । न चैवं जीवोत्पत्तिरित्युपचारमात्रं स्यात् । पराधीनविशेषलाभस्योत्पत्तेरत्र विवक्षितत्वादिति भावः । अत्र स्मृतिसम्मतिमाह – उत्पद्यन्त इति ।। अतः श्रुत्यविरोधेन जीवस्य ब्रह्मजातत्वसिद्धेर्युक्तस्तत्र श्रुतिसमन्वय इति सिद्धम् ।।**

ಜೀವನು ಅನಾದಿಯಾಗಿದ್ದರೂ ಕೂಡ ಉಪಾಧಿಯಾದ ಶರೀರಕ್ಕೆ ಉತ್ಪತ್ತಿ ಇರುವುದರಿಂದ ಜೀವನಿಗೆ ಉತ್ಪತ್ತಿ ಇದೆ ಎಂದು ಹೇಳುವುದು ಸಮಂಜಸವೇ ಆಗಿದೆ. ಹಾಗಾದರೆ ಜೀವನಿಗೆ ಉತ್ಪತ್ತಿ ಇದೆ ಎಂಬುದು ಔಪಚಾರಿಕ ಪ್ರಯೋಗ ಎಂದಾಯಿತಲ್ಲವೇ? ಎಂದು ಪ್ರಶ್ನಿಸಬಾರದು. ಪರಾಧೀನವಿಶೇಷಲಾಭವೆಂಬ ಉತ್ಪತ್ತಿಯು ಪ್ರಕೃತ ವಿವಕ್ಷಿತವಾಗಿದೆ. ಈ ವಿಷಯದಲ್ಲಿ ಸ್ಮೃತಿಸಮ್ಮತಿಯನ್ನು 'ಉತ್ಪದ್ಯಂತೇ' ಎಂಬುದಾಗಿ ಹೇಳಿದ್ದಾರೆ.

ಆದ್ದರಿಂದ ಶ್ರುತಿಯ ವಿರೋಧವು ಬರುವುದಿಲ್ಲ. ಜೀವನಿಗೆ ಶ್ರೀಹರಿಯಿಂದ ಉತ್ಪತ್ತಿಯು ಆಗುತ್ತದೆಂಬ ಪ್ರಮೇಯವು ಸಿದ್ಧವಾಯಿತು. ಆದ್ದರಿಂದ ಪರಮಾತ್ಮನಲ್ಲಿ ಶ್ರುತಿಸಮನ್ವಯವೂ ಕೂಡ ನಿರಾತಂಕವಾಯಿತು.

ವಿವರಣೆ - ಜೀವನಿಗೆ ಸ್ವರೂಪತಃ ಉತ್ಪತ್ತಿಯಿಲ್ಲ. ಆದರೆ ದೇಹಲಾಭವೆಂಬ ಪರಾಧೀನಾವಿಶೇಷ ಅವಾಪ್ತಿರೂಪವಾದ ಉತ್ಪತ್ತಿ ಇದೆ. ಇದನ್ನೇ ಮುಖ್ಯವಾದ ಉತ್ಪತ್ತಿ ಎಂದು ವಿವಕ್ಷಿಸಲಾಗಿದೆ. ಹಾಗಾಗಿ ಜೀವೋತ್ಪತ್ತಿಯು ಮುಖ್ಯವೇ ಆಗುತ್ತದೆ ಹೊರತು ಗೌಣವಾಗುವುದಿಲ್ಲ.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಜ್ಞಾಧಿಕರಣ ಮುಗಿಯಿತು

ಜ್ಞಾಧಿಕರಣ

(೨-೩-೧೧)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## ज्ञाधिकरणम्

### ಜೀವನಿಗೆ ಉತ್ಪತ್ತಿಲಯಗಳಿವೆ

**ज्ञोऽत एव ॥ एवं सूचीकटाहन्यायेनाल्पमधिभूतादिविचारं कृत्वेदानीमापादसमाप्ति बहुर्जीवविचारः क्रियत इति सङ्गतिमाह – एवमिति ॥**

ಇಲ್ಲಿಯತನಕ ಅಧಿಭೂತವಿಷಯಕವಾದ ವಿಚಾರವನ್ನು ಮಾಡಿದ್ದಾಯಿತು. ಈಗ ಪಾದಮುಗಿಯುವ ತನಕ ಜೀವ ವಿಚಾರವನ್ನು ಮಾಡಲಾಗಿದೆ. ಅಧಿಭೂತ ವಿಷಯವು ಅಲ್ಪವಾಗಿದೆ ಜೀವವಿಚಾರವು ಬಹುವಾಗಿದೆ. ಸೂಚೀಕಟಾಹ ನ್ಯಾಯವನ್ನು ಅನುಸರಿಸಿ ಅಲ್ಪವಾದುದನ್ನು ಮೊದಲು ನಿರೂಪಣೆ ಮಾಡಿ ವಿಸ್ತೃತವಾದುದನ್ನು ಈಗ ನಿರೂಪಣೆ ಮಾಡಲು ಪ್ರವೃತ್ತರಾಗಿದ್ದಾರೆ. ಈ ಬಗೆಯ ಸಂಗತಿಯನ್ನು ಟೀಕೆಯಲ್ಲಿ 'ಏವಂ' ಇತ್ಯಾದಿ ವಾಕ್ಯದಿಂದ ನಿರೂಪಣೆ ಮಾಡಿದ್ದಾರೆ.

**अत्रोक्तं ब्रह्मणस्सर्वस्रष्टृत्वं जीवानुत्पत्तिश्रुतिविरुद्धं न वेति चिन्ता । तदर्थं ''सर्व एत आत्मानो व्युच्चरन्ति'' इति जीवोत्पत्तिश्रुतिः कारणाभावादियुक्त्यनुगृहीतया जीवनित्यत्वश्रुत्या बाधितोत नेति ।**

ಈ ಅಧಿಕರಣದ ಪ್ರಧಾನ ಸಂಶಯ ಹೀಗಿದೆ – ಬ್ರಹ್ಮನು ಸಕಲ ಪದಾರ್ಥಗಳನ್ನು ಸೃಷ್ಟಿ ಮಾಡುತ್ತಾನೆಂದು ಇಲ್ಲಿಯ ತನಕ ಉಪಪಾದನೆ ಮಾಡಿದ್ದಾಯಿತು. ಆದರೆ ಜೀವನಿಗೆ ಉತ್ಪತ್ತಿಯೇ ಇಲ್ಲವಾದ್ದರಿಂದ ಜೀವನನ್ನು ಸೃಷ್ಟಿ ಮಾಡಲು ಸಾಧ್ಯವಿಲ್ಲ. ಏಕೆಂದರೆ ಶ್ರುತಿಯು ಜೀವನಿಗೆ ಉತ್ಪತ್ತಿ ಇಲ್ಲವೆಂದು ಹೇಳುತ್ತಿದೆ. ಆದ್ದರಿಂದ ಬ್ರಹ್ಮನ ಸರ್ವಸೃಷ್ಟೃತ್ವವು ಜೀವನಿಗೆ ಉತ್ಪತ್ತಿಯಿಲ್ಲವೆಂದು ಹೇಳುವ ಶ್ರುತಿಯಿಂದ ವಿರುದ್ಧವೋ? ಅಲ್ಲವೋ? ಎಂಬುದು ಅಧಿಕರಣದ ಪ್ರಧಾನ ಸಂಶಯ.

ಇದರ ಪರಿಹಾರಕ್ಕಾಗಿ 'ಸರ್ವ ಏತೇ ಆತ್ಮಾನೋ ವ್ಯುಚ್ಚರಂತಿ' ಎಂಬ ಜೀವೋತ್ಪತ್ತಿವಿಷಯಕವಾದ ಶ್ರುತಿಯು ಕಾರಣವೇ ಇಲ್ಲವಾದ್ದರಿಂದ ಜೀವನಿಗೆ ಉತ್ಪತ್ತಿ ಇಲ್ಲ ಎಂದು ಹೇಳುವ ಯುಕ್ತಿಯಿಂದ

ಉಪೋದ್ ಬಲಿತವಾದ ಜೀವನಿತ್ಯತ್ವ ಶ್ರುತಿಯಿಂದ ಬಾಧಿತವಾಗುತ್ತದೋ? ಇಲ್ಲವೋ? ಎಂಬ ಎರಡನೇ ಸಂಶಯವು ಪರಿಹಾರವಾಗಬೇಕು.

**तदर्थमुत्पत्त्यनुत्पत्तिश्रुती किमेकरूपोत्पत्तिविषये किं वोत्पत्तिश्रुतिः पराधीनविशेषावाप्तिपरा, अनुत्पत्तिश्रुति-स्तुस्वरूपोत्पत्तिनिषेधपरेति ।**

ಮೇಲಿನ ಸಂಶಯದ ಪರಿಹಾರಕ್ಕಾಗಿ ಉತ್ಪತ್ತಿ ಶ್ರುತಿ ಹಾಗೂ ಅನುತ್ಪತ್ತಿ ಶ್ರುತಿಗಳೆರಡು ಒಂದೇ ಬಗೆಯ ಉತ್ಪತ್ತಿ ವಿಷಯಕ ಆಗಿವೆಯೋ ಅಥವಾ ಉತ್ಪತ್ತಿ ಶ್ರುತಿಯು ಪರಾಧೀನವಿಶೇಷಾವಾಪ್ತಿಪರವಾಗಿದೆ, ಅನುತ್ಪತ್ತಿ ಶ್ರುತಿಯು ಸ್ವರೂಪೋತ್ಪತ್ತಿನಿಷೇಧಪರವಾಗಿದೆ ಎಂದು ಭಿನ್ನವಿಷಯಕವೆಂದು ಹೇಳಬೇಕೋ? ಎಂಬ ಸಂಶಯವು ಪರಿಹಾರವಾಗಬೇಕು.

**पूर्वपक्षे जन्मादिसूत्राक्षेपाय भाष्योक्तनित्यत्वश्रुतेरनित्यत्वश्रुतितः प्राबल्यार्थं न्यायविवरणोक्तां पूर्वपक्षयुक्तिमाह – अनादित्वादिति ।।**

ಜನ್ಮಾದಿ ಸೂತ್ರದಲ್ಲಿ ಹೇಳಲ್ಪಟ್ಟ ಪ್ರಮೇಯವನ್ನು ಆಕ್ಷೇಪ ಮಾಡುವುದಕ್ಕಾಗಿ ಭಾಷ್ಯದಲ್ಲಿ ಉಲ್ಲೇಖ ಮಾಡಿದ ನಿತ್ಯತ್ವಶ್ರುತಿಗೆ ಅನಿತ್ಯತ್ವ ಶ್ರುತಿಗಿಂತಲೂ ಪ್ರಾಬಲ್ಯವನ್ನು ಸಮರ್ಥನೆ ಮಾಡುವುದಕ್ಕಾಗಿ ನ್ಯಾಯವಿವರಣದಲ್ಲಿ ಹೇಳಲ್ಪಟ್ಟ ಪೂರ್ವಪಕ್ಷ ಯುಕ್ತಿಯನ್ನು ಅನಾದಿತ್ವಾತ್ ಇತ್ಯಾದಿಯಾಗಿ ಹೇಳಿರುತ್ತಾರೆ.

**उत्पत्तेरेवाभावप्रसङ्गादिति ।। श्रौतप्रागभावशून्यत्वं जीवे न चेद्घटादेरप्युत्पत्तिर्न स्यात् । प्रमितत्वाविशेषादित्यर्थः ।**

ಉತ್ಪತ್ತಿಯೇ ಇಲ್ಲದಂತಾಗುವ ಪರಿಸ್ಥಿತಿ ಬರುತ್ತದೆ ಎಂದು ಹೇಳುವ 'ಉತ್ಪತ್ತೇರೇವಾಭಾವಪ್ರಸಂಗಾತ್' ಎಂಬ ಟೀಕಾವಾಕ್ಯಕ್ಕೆ ಎರಡು ಅರ್ಥಗಳು.

೧. ಶ್ರುತಿಸಿದ್ಧವಾದ ಪ್ರಾಗಭಾವ ಶೂನ್ಯತ್ವವು ಜೀವನಲ್ಲಿ ಇಲ್ಲವೆಂದಾದರೆ ಘಟಾದಿಗಳಿಗೂ ಕೂಡ ಉತ್ಪತ್ತಿಯೇ ಇಲ್ಲದಂತಾಗಲಿ. ಏಕೆಂದರೆ ಎರಡರಲ್ಲೂ ಕೂಡ ಪ್ರಮಿತತ್ವವು ಸಮಾನವಾಗಿದೆ.

ವಿವರಣೆ – ಜೀವನಿಗೆ ಪ್ರಾಗಭಾವವಿಲ್ಲವೆಂಬುದು ಶ್ರುತಿಯಿಂದ ಸಿದ್ಧವಾಗಿದೆ. ಆದ್ದರಿಂದಲೇ ಪ್ರಮಿತವಾಗಿದೆ. ಪ್ರಮಿತವಾದ ಪ್ರಾಗಭಾವಶೂನ್ಯತ್ವವು ಜೀವನಲ್ಲಿ ಇಲ್ಲವೆಂದು ಹೇಳುವುದಾದರೆ ಘಟಾದಿಗಳಲ್ಲಿರುವ ಉತ್ಪತ್ತಿಯೂ ಕೂಡ ಪ್ರತ್ಯಕ್ಷ ಸಿದ್ಧವಾದ್ದರಿಂದ ಪ್ರಮಿತವಾಗಿದೆ. ಎರಡರಲ್ಲಿಯೂ ಪ್ರಮಿತತ್ವವು ಸಮಾನವಾದ್ದರಿಂದ ಜೀವನಿಗೆ ಪ್ರಾಗಭಾವಶೂನ್ಯತ್ವವು ಇಲ್ಲವೆಂದರೆ ಘಟಾದಿಗಳಿಗೆ ಉತ್ಪತ್ತಿ ಇಲ್ಲವೆಂದಾಗಲಿ ಎಂಬುದು ಇದರ ಅಭಿಪ್ರಾಯ.

**यद्वा प्रागभावशून्यत्वमनुत्पत्तितोऽन्यन्न चेत्प्रागभाव उत्पत्तितोऽन्यो न स्यात्। तथा च प्रागभावहीनस्यात्मलाभरूपोत्पत्तिरेव न स्यादित्यर्थः ।।**

೨. 'ಜೀವಃ ಉತ್ಪತ್ತಿಮಾನ್ ನ ಭವತಿ ಪ್ರಾಗಭಾವಶೂನ್ಯತ್ವಾತ್' ಎಂಬುದಾಗಿ ಅನುಮಾನ ಮಾಡಿದಾಗ ಸಾಧ್ಯಾವೈಶಿಷ್ಟ್ಯ ದೋಷವು ಬರುತ್ತದೆ. ಪ್ರಾಗಭಾವ ಶೂನ್ಯತ್ವ ಹಾಗೂ ಉತ್ಪತ್ತಿ

ಶೂನ್ಯತ್ವಗಳು ಒಂದೇ ಆಗುತ್ತವೆ. ಇವೆರಡು ಒಂದೇ ಆದರೆ ಪ್ರಾಗಭಾವ ಹಾಗೂ ಉತ್ಪತ್ತಿಗಳೆರಡು ಒಂದೇ ಆಗುತ್ತವೆ. ಘಟವು ಈಗ ಹುಟ್ಟಿತು ಎಂದು ಹೇಳಿದಾಗ ಉತ್ಪತ್ತಿ ಈಗಾಯಿತು. ಘಟಕ್ಕೆ ಇದರ ಮೊದಲು ಉತ್ಪತ್ತಿ ಇಲ್ಲ ಎಂದು ಎಲ್ಲರೂ ತಿಳಿಯುತ್ತಾರೆ. ಈಗ ಉತ್ಪತ್ತಿ ಹಾಗೂ ಪ್ರಾಗಭಾವಗಳೆರಡು ಒಂದೇ ಆದ್ದರಿಂದ ಘಟಕ್ಕೆ ಮೊದಲು ಉತ್ಪತ್ತಿ ಇಲ್ಲವೆಂದಾದರೆ ಘಟಕ್ಕೆ ಮೊದಲು ಪ್ರಾಗಭಾವವು ಕೂಡ ಇಲ್ಲವೆಂದಾಯಿತು. ಪ್ರಾಗಭಾಗ ಇಲ್ಲವೆಂದಮೇಲೆ ಪುನಃ ಉತ್ಪತ್ತಿಯನ್ನು ಹೇಳಲು ಹೇಗೆ ಸಾಧ್ಯ? ಆದ್ದರಿಂದ ಪ್ರಾಗಭಾವವೇ ಇಲ್ಲದ ಘಟಕ್ಕೆ ಆತ್ಮಲಾಭರೂಪವಾದ ಉತ್ಪತ್ತಿಯೇ ಇಲ್ಲದಂತಾಗುವ ಪರಿಸ್ಥಿತಿ ಬರುತ್ತದೆ. ಇದು ಎರಡನೆಯ ಅರ್ಥ.

**एवं भूतानामपीति ।। स्वरूपोत्पत्तिमत्त्वेनाश्रुतानां प्रत्युतानुत्पत्तिमत्त्वेन श्रुतानामपीत्यर्थः ।। असम्प्रतिपत्तेरिति ।। उत्पत्तिमतां भूताकाशादीनां कारणशून्यत्वे कारणशून्यानां चाव्याकृताकाशादीनामुत्पत्तिमत्त्वेऽसम्प्रतिपत्तेरित्यर्थः ।**

'ಏವಂ ಭೂತಾನಾಮಪಿ' ಎಂದರೆ ಆಕಾಶಾದಿಗಳಿಗೆ ಸ್ವರೂಪತಃ ಉತ್ಪತ್ತಿಯಿದೆ ಎಂದು ಎಲ್ಲಿಯೂ ಯಾರೂ ಕೂಡ ಕೇಳಿರುವುದಿಲ್ಲ. ವಿಪರೀತವಾಗಿ ಉತ್ಪತ್ತಿ ಇಲ್ಲವೆಂದೇ ಎಲ್ಲರಿಂದಲೂ ಶ್ರುತವಾಗಿದೆ. ಆದರೂ ಕೂಡ ಉತ್ಪತ್ತಿಯನ್ನು ಹೇಳುವುದಾದರೆ ವ್ಯಭಿಚಾರ ಬರುತ್ತದೆ ಎಂದರ್ಥ. ಅಸಂಪ್ರತಿಪತ್ತೇಃ ಎಂಬ ಟೀಕೆಯ ಮಾತಿಗೆ ಎರಡು ಅರ್ಥ. ಉತ್ಪತ್ತಿ ಉಳ್ಳ ಭೂತಾಕಾಶ ಕಾರಣಶೂನ್ಯ ಎಂಬ ವಿಷಯದಲ್ಲಿ ನಮಗೆ ಸಂಪ್ರತಿಪತ್ತಿ ಇಲ್ಲ ಎಂದರ್ಥ. ಅದಕ್ಕೆ ಕಾರಣ ಇದೆ ಎಂದೇ ಅರ್ಥ. ಯಾವ ಅವ್ಯಾಕೃತಾಕಾಶಾದಿಗಳಿಗೆ ಕಾರಣವಿಲ್ಲವೆಂದು ಸಂಪ್ರತಿಪನ್ನವಾಗಿದೆಯೋ ಅಂತಹ ಪದಾರ್ಥಗಳಿಗೆ ಉತ್ಪತ್ತಿ ಇದೆ ಎಂಬುದು ನಮಗೆ ಸಂಪ್ರತಿಪನ್ನವಾಗಿಲ್ಲ. ಆದ್ದರಿಂದ ಉತ್ಪತ್ತಿ ಇರುವ ಪದಾರ್ಥಗಳಿಗೆ ಕಾರಣ ಇದ್ದೇ ಇರುತ್ತದೆ. ಕಾರಣಶೂನ್ಯವಾದ ಪದಾರ್ಥಗಳಿಗೆ ಉತ್ಪತ್ತಿಯೂ ಕೂಡ ಇರುವುದಿಲ್ಲ ಎಂಬ ವ್ಯಾಪ್ತಿಯು ಇದರಿಂದ ಸಿದ್ಧವಾಯಿತು. ಆದ್ದರಿಂದ ಅಸಂಪ್ರತಿಪತ್ತೇಃ ಎಂಬುದಕ್ಕೆ ಈ ಎರಡು ಅರ್ಥವನ್ನು ತಿಳಿಯಬೇಕು.

**ननु जीवस्य पराधीनविशेषावाप्तिरूपोत्पत्तिर्वियदधिकरणन्यायसिद्धा । स्वरूपेणोत्पत्तिस्तु नेष्टेति व्यर्थमिदमिति चेन्न ।**

ಜೀವನಿಗೆ ಪರಾಧೀನವಿಶೇಷಾವಾಪ್ತಿರೂಪವಾದ ಉತ್ಪತ್ತಿಯು ವಿಯದಧಿಕರಣದ ನ್ಯಾಯದಿಂದ ಸಿದ್ಧವಾಗಿದೆ. ಸ್ವರೂಪತಃ ಉತ್ಪತ್ತಿಯು ಇಷ್ಟವೇ ಅಲ್ಲ. ಆದ್ದರಿಂದ ಈ ಅಧಿಕರಣವು ವ್ಯರ್ಥವಲ್ಲವೇ.

ಹೀಗೆ ಆಕ್ಷೇಪ ಮಾಡಬಾರದು.

**उत्पत्तिश्रुतिः पराधीनविशेषावाप्तिरूपोत्पत्तिपरा चेदनुत्पत्तिश्रुतिरपि ब्रह्मणीव जीववियदादावपि तदभावपरा । अनेकार्थत्वस्यान्याय्यत्वादित्यतीतसर्वाक्षेपेण पूर्वपक्षिते ब्रह्मणि पराधीनविशेषावाप्तिरूपोत्पत्तिश्रुतिर्नास्ति । जीवादौ त्वस्तीति तदविरोधायानेकार्थत्वं न्याय्यमितीह ''युक्तेश्च'' इति सूत्र एवोक्तेः । अत एव ''असम्प्रतिपत्तेः'' इति टीकायां सर्वमाक्षिप्तम् ।**

ಉತ್ಪತ್ತಿ ಶ್ರುತಿಯು ಪರಾಧೀನವಿಶೇಷಾವಾಪ್ತಿರೂಪವಾದ ಉತ್ಪತ್ತಿಪರವಾಗುವುದಾದರೆ ಅನುತ್ಪತ್ತಿಶ್ರುತಿಯೂ ಕೂಡ ಬ್ರಹ್ಮನಂತೆ ಜೀವ, ಆಕಾಶಾದಿಗಳಲ್ಲೂ ಕೂಡ ತದಭಾವಪರವಾಗುತ್ತದೆ. ಬೇರೆ ಬೇರೆ ಅರ್ಥವನ್ನು ಒಂದೊಂದು ಕಡೆ ಹೇಳುವುದು ಅನ್ಯಾಯವಾಗಿದೆ. ಆದ್ದರಿಂದ ಹಿಂದಿನ ಎಲ್ಲಾ ಪ್ರಮೇಯಗಳ ಬಗ್ಗೆಯೂ ಆಕ್ಷೇಪ ಮಾಡಿ ಈ ಅಧಿಕರಣದಲ್ಲಿ ಪೂರ್ವಪಕ್ಷ ಮಾಡಲಾಗಿದೆ. ಈ ಪೂರ್ವಪಕ್ಷಕ್ಕೆ ಬ್ರಹ್ಮನಲ್ಲಿ ಪರಾಧೀನವಿಶೇಷಾವಾಪ್ತಿರೂಪವಾದ ಉತ್ಪತ್ತಿ ಶ್ರುತಿಯೇ ಇರುವುದಿಲ್ಲ. ಜೀವಾದಿಗಳಲ್ಲಿ ಅಂತಹ ಶ್ರುತಿಗಳು ಇರುತ್ತವೆ. ಆದ್ದರಿಂದ ವಿರೋಧವನ್ನು ಪರಿಹಾರ ಮಾಡುವುದಕ್ಕಾಗಿ ಅನೇಕಾರ್ಥತ್ವವು ನ್ಯಾಯಸಮ್ಮತವೆಂದು ಹೇಳಬೇಕು. ಈ ವಿಷಯವು 'ಯುಕ್ತೇಶ್ಚ' ಎಂಬ ಸೂತ್ರದಲ್ಲಿ ಹೇಳಲ್ಪಟ್ಟಿದೆ. ಆದ್ದರಿಂದಲೇ ಟೀಕೆಯಲ್ಲಿ 'ಅಸಂಪ್ರತಿಪತ್ತೇಃ' ಎಂದು ಹಿಂದಿನ ಪ್ರಮೇಯವೆಲ್ಲವನ್ನೂ ಒಟ್ಟಿಗೆ ಆಕ್ಷೇಪ ಮಾಡಿದ್ದಾರೆ.

> ವಿವರಣೆ – 'ನ ಜಾಯತೇ' ಇತ್ಯಾದಿ ಶ್ರುತಿವಾಕ್ಯಗಳು ಪರಮಾತ್ಮನಿಗೆ ಹುಟ್ಟುಸಾವು ಮೊದಲಾದವುಗಳಿಲ್ಲವೆಂದು ಹೇಳುತ್ತಿವೆ. ಪರಮಾತ್ಮನಿಗೆ ಹುಟ್ಟು ಇಲ್ಲ ಎಂದರೆ ಪರಾಧೀನವಿಶೇಷಾವಾಪ್ತಿರೂಪವಾದಉತ್ಪತ್ತಿಯೂಕೂಡಇಲ್ಲವೆಂದೇಅರ್ಥ.ಆದರೆ'ಅನಾದಿರ್ವಾऽಯಮಾಕಾಶಃ' ಇತ್ಯಾದಿ ಶ್ರುತಿಗಳಲ್ಲಿ ಆಕಾಶಾದಿಗಳಿಗೆ ಉತ್ಪತ್ತಿ ಇಲ್ಲ ಎಂದರೆ ಸ್ವರೂಪೋತ್ಪತ್ತಿಯೇ ಇಲ್ಲ ಎಂದು ವ್ಯಾಖ್ಯಾನ ಮಾಡುತ್ತೀರಿ. ಹೀಗೆ ಒಂದೊಂದು ಕಡೆ ಒಂದೊಂದು ಅರ್ಥವನ್ನು ಹೇಳುವುದು ತಪ್ಪಾಗುತ್ತದೆ. ಆದ್ದರಿಂದ ಉತ್ಪತ್ತಿ ಇದೆ ಎಂದು ಹೇಳುವ ಶ್ರುತಿಯಲ್ಲಿ ಹೇಗೆ ಪರಾಧೀನವಿಶೇಷಾವಾಪ್ತಿರೂಪವಾದ ಉತ್ಪತ್ತಿಯನ್ನು ವಿವಕ್ಷಿಸುತ್ತೀರೋ ಅದೇ ರೀತಿಯಾಗಿ ಉತ್ಪತ್ತಿ ಇಲ್ಲ ಎಂದು ಹೇಳುವ ಶ್ರುತಿಗೂ ಕೂಡ ಪರಾಧೀನವಿಶೇಷಾವಾಪ್ತಿರೂಪವಾದ ಉತ್ಪತ್ತಿಯು ಇಲ್ಲವೆಂದೇ ವ್ಯಾಖ್ಯಾನ ಮಾಡಬೇಕು. ಹೀಗೆ ಏಕವಿಷಯಕವಾದರೆ ಶ್ರುತಿವಿರೋಧವು ದೃಢವಾಯಿತು. ಆದ್ದರಿಂದ ಪ್ರಕೃತ ಈ ಅಧಿಕರಣದಲ್ಲಿ ಕೇವಲ ಜೀವ ವಿಷಯಕವಾಗಿ ಮಾತ್ರ ಆಕ್ಷೇಪ ಮಾಡುತ್ತಿಲ್ಲ. ಹಿಂದೆ ಪ್ರಸಕ್ತವಾದ ಪ್ರತಿಯೊಂದರ ಮೇಲೆಯೂ ಆಕ್ಷೇಪವನ್ನು ಮಾಡಲಾಗಿದೆ.

ಈ ಮೇಲಿನ ಪೂರ್ವಪಕ್ಷಕ್ಕೆ ಸಿದ್ಧಾಂತವನ್ನು ಹೀಗೆ ಮಾಡಲಾಗಿದೆ. ನಿಷ್ಕಾರಣವಾಗಿ ಅನೇಕಾರ್ಥಗಳನ್ನು ಮಾಡಬಾರದು. ಆದರೆ ನ್ಯಾಯಸಮ್ಮತವಾದಾಗ ಅನೇಕಾರ್ಥಗಳನ್ನು ಮಾಡಲೇಬೇಕು. ಪ್ರಕೃತದಲ್ಲಿ ಪರಮಾತ್ಮನಿಗೆ ಅನುತ್ಪತ್ತಿ ಇದೆ ಎಂದು ಶ್ರುತಿಯು ಹೇಳಿದರೆ ಪರಾಧೀನವಿಶೇಷಾವಾಪ್ತಿಯು ಇಲ್ಲವೆಂದೇ ಅರ್ಥವನ್ನು ಹೇಳಬೇಕು. ಏಕೆಂದರೆ ಪರಾಧೀನ ವಿಶೇಷಾವಾಪ್ತಿರೂಪವಾದ ಉತ್ಪತ್ತಿಯು ಪರಮಾತ್ಮನಲ್ಲಿ ಇದೆ ಎಂದು ಯಾವುದೇ ಶ್ರುತಿಪ್ರಮಾಣವು ಇರುವುದಿಲ್ಲ. ಆದರೆ ಜೀವಾದಿಗಳಲ್ಲಿ ಪರಾಧೀನವಿಶೇಷಾವಾಪ್ತಿರೂಪವಾದ ಉತ್ಪತ್ತಿಯು ಇದೆ ಎನ್ನಲು ಶ್ರುತಿ ಪ್ರಮಾಣವಿದೆ.

'ಅನೇಕಾರ್ಥತ್ವಸ್ಯ ಅನ್ಯಾಯತ್ವಾತ್' ಎನ್ನುವುದಕ್ಕೆ ಎರಡು ಅರ್ಥ - ೧. ಉತ್ಪತ್ತಿ ಎಂಬ ಶಬ್ದಕ್ಕೆ ಅನೇಕಾರ್ಥವನ್ನು ಮಾಡಬಾರದು. ಒಂದುಕಡೆ ಪರಾಧೀನವಿಶೇಷಾವಾಪ್ತಿ ಎಂದು ವ್ಯಾಖ್ಯಾನ ಮಾಡಿದರೆ, ಇನ್ನೊಂದು ಕಡೆಯಲ್ಲಿಯೂ ಹಾಗೇ ವ್ಯಾಖ್ಯಾನ ಮಾಡಬೇಕು. ಏಕೆಂದರೆ ಅನೇಕಾರ್ಥತ್ವವನ್ನು ಹೇಳುವುದು ಅನ್ಯಾಯವಾಗಿದೆ. ೨. ಎರಡನೆಯ ಅರ್ಥ – ಬ್ರಹ್ಮನಿಗೆ ಪರಾಧೀನವಿಶೇಷಾವಾಪ್ತಿ ಇಲ್ಲವೆಂದು ಹೇಳುವುದು ಜೀವಾದಿಗಳಿಗೆ ಉತ್ಪತ್ತಿಗಳು ಇಲ್ಲವೆಂದು

ಹೇಳುವಾಗ ಅಭೂತ್ವಾಭವನರೂಪವಾದ ಉತ್ಪತ್ತಿ ಇಲ್ಲ ಎಂದು ವ್ಯಾಖ್ಯಾನ ಮಾಡುವುದು ತಪ್ಪು, ಅನೇಕಾರ್ಥತ್ವವನ್ನು ಹೇಳುವುದು ಅನ್ಯಾಯವಾಗಿದೆ ಎಂದು.

**इह जीवमात्र उक्ता देहयोगरूपोत्पत्तिः ''एतेन'' इत्यत्र मुख्यप्राणे विशेषयुक्त्याऽऽक्षिप्य समाहितेति न तेनास्य गतार्थता । जीवार्थं प्रकरणान्तरस्य कृतत्वादुत्पत्तिश्रुत्यविरोधोऽप्ययं लयश्रुत्यविरोधानन्तरमुक्तः ।**

ಈ ಅಧಿಕರಣದಲ್ಲಿ ಸಕಲ ಜೀವರಿಗೆ ದೇಹಯೋಗರೂಪವಾದ ಉತ್ಪತ್ತಿಯನ್ನು ಆಕ್ಷೇಪ ಮಾಡಲಾಗಿದೆ. ಏತೇನ ಮಾತರಿಶ್ವಾ ಎಂಬ ಸೂತ್ರದಲ್ಲಿ ಪ್ರತಿಯೊಬ್ಬರಿಗೂ ದೇಹಯೋಗರೂಪವಾದ ಉತ್ಪತ್ತಿ ಇದೆ. ಆದರೆ ಮುಖ್ಯಪ್ರಾಣದೇವರಿಗೆ ಮಾತ್ರ ಇಂತಹ ಉತ್ಪತ್ತಿಯು ಬೇಡ ಎಂದು ಈ ಅಧಿಕರಣದ ಮೇಲಿನ ವಿಷಯದ ಬಗ್ಗೆ ಅಧಿಕಾಕ್ಷೇಪ ಮಾಡಲಾಗಿದೆ. ಆದ್ದರಿಂದ ಈ ಅಧಿಕರಣವು 'ಏತೇನ ಮಾತರಿಶ್ವಾ' ಎಂಬ ಅಧಿಕರಣದಿಂದ ಗತಾರ್ಥವಲ್ಲ. ಈ ಅಧಿಕರಣದಿಂದ 'ಏತೇನ ಮಾತರಿಶ್ವಾ' ಅಧಿಕರಣವೂ ಕೂಡ ಗತಾರ್ಥವಲ್ಲ.

ಜೀವವಿಷಯಕವಾದ ಉತ್ಪತ್ತಿಶ್ರುತಿ ವಿರೋಧವನ್ನು ಈ ಅಧಿಕರಣದಲ್ಲಿ ಪರಿಹರಿಸುತ್ತಿರುವುದರಿಂದ ಇದನ್ನು ಉತ್ಪತ್ತಿ ವಿಷಯಕವಾದ ಹಿಂದಿನ ಸೂತ್ರಗಳ ನಡುವೆಯೇ ಸೇರಿಸಬೇಕಿತ್ತು. ಅದನ್ನು ಬಿಟ್ಟು ಇಲ್ಲೇಕೆ ಉಲ್ಲೇಖ ಮಾಡುತ್ತಿದ್ದಾರೆ?

ಈ ಅಧಿಕರಣದಿಂದ ಪ್ರಾರಂಭ ಮಾಡಿ ಮುಂದಿನ ಎಲ್ಲಾ ಅಧಿಕರಣಗಳಲ್ಲಿಯೂ ಜೀವನ ಬಗ್ಗೆ ವಿಚಾರವನ್ನು ಮಾಡಲಾಗಿದೆ. ಜೀವನಿಗೆ ಉತ್ಪತ್ತಿ ಇದೆಯೋ ಇಲ್ಲವೋ? ಎಂದು ಮೊದಲು ವಿಚಾರ ಮಾಡಿ ಅನಂತರ ಅಣುವೋ ವ್ಯಾಪ್ತನೋ? ಅಥವಾ ಪರಮಾತ್ಮನ ಅಧೀನವೋ ಅಲ್ಲವೋ? ಇತ್ಯಾದಿ ವಿಚಾರಗಳನ್ನು ಮುಂದೆ ಮಾಡಲಾಗುತ್ತದೆ. ಆದ್ದರಿಂದ ಮುಂದಿನ ಎಲ್ಲಾ ಅಧಿಕರಣವು ಜೀವವಿಷಯಕವಾದ್ದರಿಂದ ಈ ಪ್ರಕರಣದ ಪ್ರಾರಂಭದಲ್ಲಿಯೇ ಇದನ್ನು ಉಲ್ಲೇಖ ಮಾಡಿದ್ದು ಸಂಗತವಾಗಿದೆ. ಆದ್ದರಿಂದ ಲಯಶ್ರುತಿಯ ಅವಿರೋಧದ ಅನಂತರ ಈ ಅಧಿಕರಣ ರಚನೆ ಮಾಡಿದ್ದು ಸಮಂಜಸವಾಗಿದೆ.

**अन्ये तु । आत्मनो ज्ञानमागन्तुकम् । इन्द्रियसम्प्रयोगादिहेत्वन्तरानुविधानात् । घटस्य लौहित्यवदिति प्राप्ते आत्मा ज्ञानरूपः । अत एव अनुत्पत्तेरेव । स्वयं ज्योतिरित्यादिश्रुतेश्च । इन्द्रियसम्प्रयोगादिस्तु विषयविशेषपरिच्छेदार्थ इति सिद्धान्त इत्याहुः ।**

ಅದ್ವೈತಿಗಳ ಅಧಿಕರಣರಚನೆ ಹೀಗಿದೆ – ಆತ್ಮನಿಗೆ ಬರುವ ಜ್ಞಾನವು ಆಗಂತುಕವಾಗಿದೆ. ಅದು ಹೀಗೆ– ಇಂದ್ರಿಯ ಸನ್ನಿಕರ್ಷವಾದರೆ ಜ್ಞಾನವು ಬರುತ್ತದೆ. ಇಂದ್ರಿಯ ಸನ್ನಿಕರ್ಷವು ಬರದೇ ಇದ್ದರೆ ಪ್ರತ್ಯಕ್ಷರೂಪವಾದ ಜ್ಞಾನವು ಹುಟ್ಟುವುದಿಲ್ಲ. ಇದೇ ರೀತಿಯಾಗಿ ಲಿಂಗಾನುಸಂಧಾನವೆಂಬ ಕಾರಣವಿದ್ದರೆ ಮಾತ್ರ ಅನುಮಿತಿ ಹುಟ್ಟುತ್ತದೆ. ಇಲ್ಲದಿದ್ದರೆ ಹುಟ್ಟುವುದಿಲ್ಲ. ಶಬ್ದಶ್ರವಣವಿದ್ದರೆ ಮಾತ್ರ

ಶಾಬ್ದಬೋಧವು ಬರುತ್ತದೆ. ಇಲ್ಲದಿದ್ದರೆ ಬರುವುದಿಲ್ಲ. ಕಾರಣವಿದ್ದರೆ ಮಾತ್ರ ಜ್ಞಾನವು ಹುಟ್ಟುತ್ತದೆ ಇಲ್ಲದಿದ್ದರೆ ಹುಟ್ಟುವುದಿಲ್ಲ. ಹೀಗೆ ಅನ್ವಯವ್ಯತಿರೇಕಗಳಿಂದ ಜೀವನಿಗೆ ಬರುವ ಜ್ಞಾನವು ಆಗಂತುಕ ಎಂದು ಒಪ್ಪಬೇಕು. ಉದಾ- ಘಟದಲ್ಲಿ ಕೆಂಪುಬಣ್ಣವು ಸ್ವಾಭಾವಿಕವಾಗಿ ಇರುವುದಿಲ್ಲ ಆಗುಂತಕವಾಗಷ್ಟೇ ಬರುತ್ತದೆ. ಇಷ್ಟು ಅಧಿಕರಣದ ಪೂರ್ವಪಕ್ಷ.

ಆತ್ಮನು ಜ್ಞಃ = ಜ್ಞಾನರೂಪನಾಗಿದ್ದಾನೆ. ಏಕೆಂದರೆ, ಅತಃ ಏವ = ಜೀವನಿಗೆ ಉತ್ಪತ್ತಿಯೇ ಇಲ್ಲದಿರುವುದರಿಂದ. ಹೀಗೆ ಅದ್ವೈತಿಗಳು ಜ್ಞಃ ಎಂಬ ಪದಕ್ಕೆ ಜ್ಞಾನರೂಪ ಎಂದು ಅರ್ಥವನ್ನು ಮಾಡಿ 'ಅತ ಏವ' ಎಂಬುದಕ್ಕೆ 'ಅನುಪತ್ತೇರೇವ' ಎಂಬುದಾಗಿ ವ್ಯಾಖ್ಯಾನವನ್ನು ಮಾಡುತ್ತಾರೆ. ಅಥವಾ 'ಅತ ಏವ' ಎಂಬುದಕ್ಕೆ 'ಶ್ರುತೇರೇವ' ಎಂಬುದು ಮತ್ತೊಂದು ಅರ್ಥ. ಸ್ವಯಂಜ್ಯೋತಿಃ ಎಂಬ ಶ್ರುತಿಯು ಜೀವನು ಸ್ವಪ್ರಕಾಶರೂಪನೆಂದು ಹೇಳುತ್ತಿದೆ. ಸ್ವರೂಪಭೂತವಾಗಿ ಜೀವನಿಗೆ ಜ್ಞಾನವು ಇರಬೇಕಾದರೆ ಇಂದ್ರಿಯ ಸನ್ನಿಕರ್ಷಾದಿಗಳೆಲ್ಲವೂ ಕೂಡ ವ್ಯರ್ಥವಲ್ಲವೇ? ಎಂದರೆ ಅದೆಲ್ಲವೂ ವಿಷಯವಿಶೇಷ ಪರಿಚ್ಛೇದಕ್ಕೋಸ್ಕರ ಎಂದು ತಿಳಿಯಬೇಕು. ಸ್ವರೂಪಭೂತವಾದ ಜ್ಞಾನಕ್ಕೆ ವಿಷಯವಿಶೇಷ ಪರಿಚ್ಛೇದವಾಗಬೇಕು. ಅಂದರೆ ವಿಷಯವಿಶೇಷಸಂಪರ್ಕಕ್ಕಾಗಿ ಸ್ವರೂಪಭೂತವಾದ ಜ್ಞಾನವು ಇರುತ್ತದೆ. ಇಷ್ಟು ಅಧಿಕರಣದ ಸಿದ್ಧಾಂತ.

**तत्र । युक्त्यविरोधकीर्तनस्य पादासङ्गतेः । सौत्रेण ज्ञातृवाचिना ज्ञशब्देन ज्ञानत्वानुक्तेश्च । अन्तःकरणावच्छिन्नस्य ज्ञातृत्वेऽपि तस्य जन्यत्वेनानुत्पत्ति ज्ञत्वयोरैकाधिकरण्यासिद्धेः । अनुत्पत्तिमात्रेण ज्ञत्वासिद्धेश्च । ज्ञानरूपब्रह्माभेदस्य चाप्रकृतत्वेन सौत्रेणातः शब्देनानुक्तेः ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् ज्ञाधिकरणं सम्पूर्णम् ।।११।।**

ಅದ್ವೈತಿಗಳ ಈ ಅಧಿಕರಣದ ರಚನೆಯು ಅಯುಕ್ತವಾಗಿದೆ. ಶ್ರುತಿವಿರೋಧವನ್ನು ಪರಿಹಾರ ಮಾಡುತ್ತೇವೆ ಎಂದು ಪ್ರತಿಜ್ಞೆ ಮಾಡಿ ಪ್ರಕೃತ ಯುಕ್ತಿವಿರೋಧವನ್ನು ಪರಿಹಾರ ಮಾಡುತ್ತಿರುವುದು ಈ ಪಾದದಲ್ಲಿ ಅಸಂಗತವಾಗುತ್ತದೆ. 'ಜೀವಜ್ಞಾನಂ ಆಗಂತುಕಂ ಇಂದ್ರಿಯಸಂಪ್ರಯೋಗ-ಅನ್ವಯವ್ಯತಿರೇಕಾನುವಿಧಾಯಿತ್ವಾತ್' ಎಂಬ ಯುಕ್ತಿವಿರೋಧವನ್ನು ಆಶಂಕೆ ಮಾಡಿ 'ಜೀವಃ ಜ್ಞಾನರೂಪಃ ಉತ್ಪತ್ತಿರಾಹಿತ್ಯಾತ್' ಎಂಬ ಯುಕ್ತಿಯನ್ನು ಸಮರ್ಥನೆ ಮಾಡಿದ್ದರಿಂದ ಕೇವಲ ಯುಕ್ತಿವಿರೋಧವನ್ನಷ್ಟೇ ಈ ಅಧಿಕರಣದಲ್ಲಿ ನೀವು ಪರಿಹರಿಸಿದಂತಾಯಿತು. ಮತ್ತು ಸೂತ್ರದಲ್ಲಿ ಜ್ಞಃ ಎಂದಷ್ಟೇ ಇದೆ. ಇದಕ್ಕೆ ಜ್ಞಾನರೂಪ ಎಂದರ್ಥವೇ ಅಲ್ಲ. ಇದು ಜ್ಞಾತೃವಾಚಿಯಾಗಿದೆ. ಏಕೆಂದರೆ ಜ್ಞ ಎಂಬ ಧಾತುವಿಗೆ ಕರ್ತರ್ಥದಲ್ಲಿ ಕಪ್ರತ್ಯಯವು ಬಂದಿದೆ. ಆದ್ದರಿಂದ ಜ್ಞಃ ಎಂಬುದಕ್ಕೆ ಜ್ಞಾನಕರ್ತಾ ಎಂದರ್ಥವಾಗುತ್ತದೆ. ಹೊರತು ಜ್ಞಾನರೂಪ ಎಂದರ್ಥವು ದೊರೆಯಲು ಸಾಧ್ಯವೇ ಇಲ್ಲ.

ಮತ್ತು ಸಿದ್ಧಾಂತ ಮಾಡುವಾಗ 'ಜೀವಃ ನ ಆಗಂತುಕಜ್ಞಾನವಾನ್ ಅನುತ್ಪತ್ತೇಃ' ಎಂಬುದಾಗಿ ಅನುಮಾನವನ್ನು ಪ್ರಯೋಗಿಸಿದ್ದೀರಿ. ಈ ಅನುಮಾನದಲ್ಲಿ ಹೇತು ಹಾಗೂ ಸಾಧ್ಯಗಳು ವ್ಯತಿರೇಕವಾಗಿದೆ. ಏಕೆಂದರೆ ಅಂತಃಕರಣಾವಚ್ಛಿನ್ನನಾದ ಆತ್ಮನು ಜ್ಞಾತೃವಾಗಿದ್ದಾನೆ ಇವನು ಜನ್ಯನಾಗಿದ್ದಾನೆ. ಆದ್ದರಿಂದ ಇವನಲ್ಲಿ ಜ್ಞತ್ವವು ಇದೆ. ಶುದ್ಧಚೈತನ್ಯನಲ್ಲಿ ಅನುತ್ಪತ್ತಿಯು ಇದೆ. ಯಾವ ಶುದ್ಧಚೈತನ್ಯನಲ್ಲಿ ಅನುತ್ಪತ್ತಿ ಇದೆಯೋ ಅವನಲ್ಲಿ ಜ್ಞಾತೃತ್ವವು ಕೂಡುವುದಿಲ್ಲ. ಜ್ಞಾತೃತ್ವವಿರುವ ಅಂತಃಕರಣಾವಚ್ಛಿನ್ನನಲ್ಲಿ ಅನುತ್ಪತ್ತಿಯು ಕೂಡುವುದಿಲ್ಲ. ಏಕೆಂದರೆ ಅವನಲ್ಲಿ ಉತ್ಪತ್ತಿಯೇ ಇದೆ. ಹೀಗೆ ವೈಧಿಕರಣ ದೋಷವು ಬರುತ್ತದೆ.

ಜೀವಃ ಜ್ಞಾನರೂಪಃ ಅನುತ್ಪತ್ತೇಃ ಎಂಬ ಅನುಮಾನಕ್ಕೆ ಆಕಾಶದಲ್ಲಿ ವ್ಯಭಿಚಾರ ಬರುತ್ತದೆ. ಏಕೆಂದರೆ ಆಕಾಶದಲ್ಲಿ ಅನುತ್ಪತ್ತಿಯೂ ಇದೆ ಆದರೆ ಜ್ಞಾನರೂಪವು ಇರುವುದಿಲ್ಲ. ಆದ್ದರಿಂದ ಅನುತ್ಪತ್ತಿ ಮಾತ್ರದಿಂದ ಜ್ಞತ್ವವು ಸಿದ್ಧವಾಗುವುದಿಲ್ಲ. 'ಅತ ಏವ' ಎಂಬುದಕ್ಕೆ 'ಅನುತ್ಪತ್ತೇರೇವ' ಎಂಬುದು ಮೊದಲನೇ ಅರ್ಥ. ಜ್ಞಾನರೂಪನಾದ ಬ್ರಹ್ಮನಿಂದ ಅಭಿನ್ನನಾಗಿರುವುದರಿಂದ ಎಂಬುದು ಅವರು ಹೇಳುವ ಎರ್ಡನೆಯ ಅರ್ಥ. ಈ ಎರಡನೇ ಅರ್ಥ ಕೂಡ ತಪ್ಪು. ಈ ಎರಡನೇ ಅರ್ಥವನ್ನು ವಿವಕ್ಷಿಸುವುದು ಬಹಳ ಕಷ್ಟ. ಏಕೆಂದರೆ ಜ್ಞಾನರೂಪನಾದ ಬ್ರಹ್ಮನಿಂದ ಜೀವನು ಅಭಿನ್ನನಾಗಿದ್ದಾನೆ ಎಂಬ ವಿಚಾರವು ಹಿಂದೆ ಪ್ರಸಕ್ತವೇ ಆಗಿಲ್ಲ. ಅದನ್ನು ಅತಃ ಎಂಬ ಶಬ್ದದಿಂದ ಪರಾಮರ್ಶ ಮಾಡುವುದು ಹೇಗೆ ಸಾಧ್ಯ? ಆದ್ದರಿಂದ ಪರರ ಅಧಿಕರಣ ರಚನೆಯು ಅತ್ಯಂತ ಅಯುಕ್ತವಾಗಿದೆ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಜ್ಞಾಧಿಕರಣವು ಸಂಪೂರ್ಣವಾಯಿತು

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**ज्ञोत एव** ।। विषयादिपरटीकां विवृण्वन् पूर्वोत्तरपक्षटीकासूचितां चिन्तापरंपरामाह – **अत्रेति** ।। उक्तं पूर्वोक्तमित्यर्थः ।

ಈ ಅಧಿಕರಣದ ವಿಷಯಸಂಶಯ ಮೊದಲಾದವುಗಳನ್ನು ತೋರಿಸುವ ಟೀಕಾವಾಕ್ಯವನ್ನು ವಿವರಿಸುವವರಾಗಿ ಪೂರ್ವಪಕ್ಷ ಹಾಗೂ ಸಿದ್ಧಾಂತಪಕ್ಷಗಳನ್ನು ಸಮರ್ಥಿಸುವ ಟೀಕಾವಾಕ್ಯಗಳಿಂದ

ಸೂಚಿತವಾದ ಸಂಶಯಪರಂಪರೆಯನ್ನು ಅತ್ರ ಇತ್ಯಾದಿ ಗ್ರಂಥಗಳಿಂದ ಪ್ರತಿಪಾದನೆ ಮಾಡುತ್ತಿದ್ದಾರೆ. ಉಕ್ತಂ ಎಂದರೆ ಹಿಂದೆ ಹೇಳಲ್ಪಟ್ಟಿದೆ ಎಂದರ್ಥ.

**प्रकाशः – अत्र टीकायां सूत्राद्यनुरोधेन जीवस्य धर्मिताप्रदर्शनेऽपि फलस्य पादार्थस्याध्यायार्थस्य च द्योतनाय ''ब्रह्मणस्स्रष्टृत्वम्'' इत्यादिकमुक्तम् । एवं पूर्वत्रोत्तरत्र च ध्येयम् । टीकाक्षरार्थमाह – उत्पत्तेरिति ।।**

ಟೀಕೆಯಲ್ಲಿ 'ಜೀವಃ ಉತ್ಪದ್ಯತೇ ನವಾ' ಎಂಬುದಾಗಿ ಜೀವಧರ್ಮಿಕವಾದ ಸಂಶಯವನ್ನು ತೋರಿಸಲಾಗಿದೆ. ಆದರೆ ಪ್ರಕೃತ ಗ್ರಂಥಕಾರರು 'ಬ್ರಹ್ಮಣಃ ಸರ್ವಸೃಷ್ಟೃತ್ವಮ್ ಶ್ರುತಿವಿರುದ್ಧಾ ನವಾ' ಎಂಬುದಾಗಿ ಸರ್ವಸೃಷ್ಟೃತ್ವ ಧರ್ಮಿಕವಾದ ಸಂಶಯವನ್ನು ತೋರಿಸಿದ್ದಾರೆ. ಇದು ಟೀಕೆಗೆ ವಿರುದ್ಧವಲ್ಲವೇ?

ಜೀವಧರ್ಮಿಕವಾದ ಸಂಶಯವನ್ನು ತೋರಿಸಲು ಸೂತ್ರಾನುಗುಣ್ಯವೆಂಬ ಕಾರಣವಿದೆ. 'ಜ್ಞೋತ ಏವ' ಎಂಬ ಸೂತ್ರದಲ್ಲಿ ಜ್ಞಃ ಎಂದರೆ ಜೀವನು ಉತ್ಪದ್ಯತೇ ಎಂದು ಹೇಳಿದ್ದರಿಂದ ಜೀವಧರ್ಮಿಕವಾದ ಸಂಶಯವನ್ನೇ ಸೂತ್ರದಲ್ಲಿ ಹೇಳಿದಂತಾಯಿತು. ಅದಕ್ಕನುಗುಣವಾಗಿ ಟೀಕೆಯಲ್ಲೂ ಕೂಡ ಜೀವಧರ್ಮಿಕವಾದ ಸಂಶಯವನ್ನೇ ತೋರಿಸಿದ್ದಾರೆ. ಆದರೆ ಪ್ರಕೃತ ಗ್ರಂಥಕಾರರು ಸರ್ವಸೃಷ್ಟೃತ್ವಧರ್ಮಿಕವಾದ ಸಂಶಯವನ್ನು ಏಕೆ ತೋರಿಸಿದ್ದಾರೆಂದರೆ ಜೀವನಿಗೆ ಉತ್ಪತ್ತಿ ಇದೆ ಎಂದಾದಲ್ಲಿ ಬ್ರಹ್ಮನಿಗೆ ಸರ್ವಸ್ರಷ್ಟೃತ್ವವು ಹಾನಿಯಾಯಿತು ಎಂದು ಫಲವನ್ನು ಹೇಳಬೇಕು. ಸಿದ್ಧಾಂತದಲ್ಲಿ ಜೀವನಿಗೆ ಉತ್ಪತ್ತಿ ಇಲ್ಲದ ಕಾರಣ ಪರಮಾತ್ಮನಿಗೆ ಸರ್ವಸ್ರಷ್ಟೃತ್ವವು ಕೂಡುತ್ತದೆ ಎಂಬ ಫಲವನ್ನು ಹೇಳಬೇಕು. ಹೀಗೆ ಫಲವನ್ನು ದ್ಯೋತನೆ ಮಾಡುವುದಕ್ಕಾಗಿ ಗ್ರಂಥಕಾರರು ಹಾಗೆ ಹೇಳಿದ್ದಾರೆ. ಮತ್ತು ಶ್ರುತಿವಿರೋಧವನ್ನು ಪರಿಹಾರ ಮಾಡುತ್ತಿರುವುದರಿಂದ ಪಾದಾರ್ಥವನ್ನು ಹಾಗೂ ಅಧ್ಯಾಯಾರ್ಥವನ್ನೂ ಕೂಡ ತಿಳಿಸಬೇಕಾಗಿದೆ. ಅದಕ್ಕಾಗಿಯೂ ಗ್ರಂಥಕಾರರು ಹೇಳಿದ್ದು ಸಮಂಜಸವಾಗಿದೆ. ಹೀಗೆ ಬೇರೆ ಅಧಿಕರಣಗಳಲ್ಲಿಯೂ ಕೂಡ ಈ ಅನುಸಂಧಾನವನ್ನು ಮಾಡಿಕೊಳ್ಳಬೇಕು. ಟೀಕೆಯ ಅಕ್ಷರಾರ್ಥವನ್ನು 'ಉತ್ಪತ್ತೇಃ' ಎಂಬುದಾಗಿ ಹೇಳುತ್ತಿದ್ದಾರೆ.

**प्रकाशः** – प्रागभावशून्यत्वं जीवे इति पदच्छेदः ।। **प्रागभावहीनस्येति** ।। उत्पत्तेरेव प्रागभावत्वे घटादेरुत्पत्तितः पूर्वं प्रागभावाभावादिति भावः । ''न चाकाशादीनाम्'' इत्यादिटीकातात्पर्यं शङ्कोत्तराभ्यां व्यनक्ति ।। **नन्विति** ।।

ಗ್ರಂಥದಲ್ಲಿ 'ಪ್ರಾಗಭಾವಶೂನ್ಯತ್ವಂ ಜೀವೇನ' ಇತ್ಯಾದಿ ವಾಕ್ಯವಿದೆ. ಇಲ್ಲಿ 'ಜೀವೇ' ಎಂಬ ಪದದ ಅನಂತರ ಇರುವ 'ನ' ಎಂಬುದನ್ನು ಬೇರೆ ಪದವನ್ನಾಗಿ ತಿಳಿಯಬೇಕು. 'ಪ್ರಾಗಭಾವಹೀನಸ್ಯ' ಎಂಬ ಗ್ರಂಥಕ್ಕೆ ಹೀಗೆ ಅರ್ಥ– ಉತ್ಪತ್ತಿಯೂ ಕೂಡ ಪ್ರಾಗಭಾವವಾಗುವುದಾದರೆ ಘಟದ ಉತ್ಪತ್ತಿಗಿಂತ ಮೊದಲು ಪ್ರಾಗಭಾವವು ಕೂಡ ಇಲ್ಲವೆಂದಾಯಿತು ಎಂದಭಿಪ್ರಾಯ. 'ನ ಚಾಕಾಶಾದೀನಾಮ್' ಇತ್ಯಾದಿ ಟೀಕೆಯ ತಾತ್ಪರ್ಯವನ್ನೇ ಆಶಂಕೆ ಹಾಗೂ ಸಮಾಧಾನದಿಂದ ಸ್ಪಷ್ಟಪಡಿಸಲು 'ನನು' ಇತ್ಯಾದಿ ಗ್ರಂಥವು ಹೊರಟಿದೆ. ಎಲ್ಲಾ ಪದಾರ್ಥಗಳಿಗೂ ಉತ್ಪತ್ತಿಯನ್ನು ಹೇಳಿದ ಮೇಲೆ ಅದೇ ನ್ಯಾಯದಿಂದ ಜೀವನಿಗೂ ಕೂಡ ಉತ್ಪತ್ತಿಯು ಸಿದ್ಧವಾಯಿತು. ಪರಾಧೀನವಿಶೇಷಾವಾಪ್ತಿರೂಪವಾದ ಉತ್ಪತ್ತಿಯು ಜೀವನಿಗೆ ಇದೆ ಎಂದು

ಹೇಳಬೇಕು. ಇನ್ನು ಅಭೂತ್ವಾಭವನರೂಪವಾದ ಉತ್ಪತ್ತಿಯನ್ನು ಸಿದ್ಧಾಂತಿಗಳು ಜೀವನಿಗೆ ಹೇಳುವುದೇ ಇಲ್ಲ. ಆದ್ದರಿಂದ ಈ ಅಧಿಕರಣವು ವ್ಯರ್ಥವಾಯಿತಲ್ಲವೇ? ಎಂದು ಆಶಂಕೆ. ಪ್ರತಿಯೊಂದು ಹಿಂದಿನ ಅಧಿಕರಣಗಳಲ್ಲಿ ಹೇಳಿದ ಪ್ರಮೇಯವನ್ನು ಆಕ್ಷೇಪ ಮಾಡಿ ಸಿದ್ಧಾಂತ ಮಾಡುತ್ತಿರುವುದರಿಂದ ಈ ಅಧಿಕರಣಕ್ಕೆ ವೈಯರ್ಥ್ಯ ದೋಷವು ಬರುವುದಿಲ್ಲ ಎಂಬುದು ಸಮಾಧಾನ.

**प्रकाशः** – अनुत्पत्तिश्रुतिः नित्यो नित्यानामित्यादि श्रुतिरपीत्यर्थः । परमते ''अन्तर'' इत्यत्रोक्तोदोषःस्वमते नेत्याह – **जीवार्थमिति** ।।

ಅನುತ್ಪತ್ತಿ ಶ್ರುತಿಯಲ್ಲಿ 'ನಿತ್ಯೋ ನಿತ್ಯಾನಾಂ' ಇತ್ಯಾದಿ ಶ್ರುತಿಯನ್ನೂ ಕೂಡ ವಿವಕ್ಷಿಸಬೇಕು. ಸಕಲ ನಿತ್ಯರಲ್ಲಿಯೂ ಕೂಡ ಪರಮನಿತ್ಯನಾದವನು ಪರಮಾತ್ಮನಾಗಿದ್ದಾನೆ ಎಂದು ಈ ಶ್ರುತಿ ಹೇಳುತ್ತಿರುವುದರಿಂದ ಜೀವರೆಲ್ಲರೂ ಕೂಡ ನಿತ್ಯರಾಗಿದ್ದಾರೆಂದು ಹೇಳಿದಂತಾಯಿತು. 'ಅಂತರಾ ವಿಜ್ಞಾನಮನಸೀಕ್ರಮೇಣ' ಎಂಬ ಸೂತ್ರದಲ್ಲಿ ಲಯವಿಚಾರವನ್ನು ಮಾಡುವ ಸಂದರ್ಭದಲ್ಲಿ ಬೇರೆ ವಿಚಾರವು ಅಪ್ರಸಕ್ತವಾಗುತ್ತದೆ ಎಂಬ ದೋಷವನ್ನು ನಾವು ಹೇಳಿದ್ದೆವು. ಆ ದೋಷವು ನಮಗೆ ಬರುವುದಿಲ್ಲವೆಂಬುದನ್ನು 'ಜೀವಾರ್ಥಂ' ಇತ್ಯಾದಿ ವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ.

**प्रकाशः – अन्ये त्विति** ।। तन्मते ''ज्ञोत एव'' इत्येकं सूत्रमेकमधिकरणम्। वैशेषिकप्रक्रियया जीवस्य जडरूपागन्तुकज्ञानवत्त्वनिरासकम् । युक्तेश्चेति सूत्रं मतद्वयेऽपि नास्त्येव । तत्र व्यावर्त्यशङ्कापूर्वं सूत्रार्थमनूद्य निराह – **आत्मन इति**।।

ಅದ್ವೈತಿಗಳ ಅಧಿಕರಣ ರಚನೆಯನ್ನು 'ಅನ್ಯೇ ತು' ಇತ್ಯಾದಿಯಾಗಿ ಉಲ್ಲೇಖ ಮಾಡುತ್ತಿದ್ದಾರೆ. ಅದ್ವೈತ ಮತದಲ್ಲಿ 'ಜ್ಞೋತ ಏವ' ಎಂಬ ಒಂದು ಸೂತ್ರವೇ ಪ್ರತ್ಯೇಕ ಅಧಿಕರಣವಾಗಿದೆ. ವೈಶೇಷಿಕರ ಪ್ರಕ್ರಿಯೆಯನ್ನು ಅಂಗೀಕರಿಸಿ ಜೀವನು ಜಡರೂಪವಾದ ಆಗಂತುಕಜ್ಞಾನವುಳ್ಳವನು ಎಂಬ ವಿಷಯವನ್ನು ನಿರಾಕರಣೆ ಮಾಡುವುದಕ್ಕಾಗಿ ಈ ಸೂತ್ರವು ಹೊರಟಿದೆ ಎಂದು ಅದ್ವೈತಿಗಳು ಸಮರ್ಥಿಸುತ್ತಾರೆ. 'ಯುಕ್ತೇಶ್ಚ' ಎಂಬ ಸೂತ್ರವು ಎರಡೂ ಮತಗಳಲ್ಲಿ ಇರುವುದೇ ಇಲ್ಲ. ಈ ಸೂತ್ರದಿಂದ ವ್ಯಾವರ್ತ್ಯವಾದ ಆಶಂಕೆಯನ್ನು ಉಲ್ಲೇಖ ಮಾಡುವ ಮೂಲಕ ಸೂತ್ರಾರ್ಥವನ್ನು ಅನುವಾದ ಮಾಡಿ ನಿರಾಕರಣೆ ಮಾಡಲು 'ಆತ್ಮನಃ' ಇತ್ಯಾದಿ ವಾಕ್ಯವು ಹೊರಟಿದೆ.

**प्रकाशः** – परिच्छेदार्थ इति ।। वृत्त्युपजननार्थ इत्यर्थः ।। **युक्त्यविरोधेति** ।। एतच्च यथा श्रुतभाष्यभामत्यभिप्रायेण । कल्पतरौ तु ''आत्मैवास्य ज्योतिरित्यादिश्रुतीनां पश्यंश्चक्षुः शृण्वन् श्रोत्रमित्यादिभिर्जीवस्यागन्तुकज्ञान-वादिनीभिर्विरोधः परिह्रियत'' इत्युक्तेः ।

'ಪರಿಚ್ಛೇದಾರ್ಥಃ' ಎಂಬುದಕ್ಕೆ ವೃತ್ತಿಯ ಹುಟ್ಟುವುದಕ್ಕೋಸ್ಕರ ಎಂದರ್ಥ. ವೃತ್ತಿಯು ಹುಟ್ಟಿದ ಮೇಲೆ ಜ್ಞಾನವು ಸ್ವತಃ ಅಭಿವ್ಯಕ್ತವಾಗುತ್ತದೆ ಎಂಬುದು ಅಭಿಪ್ರಾಯ. ಯುಕ್ತಿವಿರೋಧವನ್ನಷ್ಟೇ ಈ ಅಧಿಕರಣದಲ್ಲಿ

ಪರಿಹರಿಸಿದಂತಾಯಿತು ಎಂಬ ದೋಷವು ಶಾಂಕರಭಾಷ್ಯದ ಪ್ರಕಾರ ಹಾಗೂ ಭಾಮತಿಕಾರನ ಪ್ರಕಾರ ಮಾತ್ರ ಹೇಳಿದ್ದು. ಅವರಿಬ್ಬರಿಗೆ ಮಾತ್ರ ಈ ದೋಷ ಬರುತ್ತದೆ. ಹೊರತು ಕಲ್ಪತರುಕಾರನಿಗೆ ಈ ದೋಷ ಬರುವುದಿಲ್ಲ. 'ಆತ್ಮೈವಾಸ್ಯ ಜ್ಯೋತಿಃ' ಇತ್ಯಾದಿ ಶ್ರುತಿಗಳು 'ಪಶ್ಯಂಶ್ಚಕ್ಷುಃ ಶೃಣ್ವನ್ ಶ್ರೋತ್ರಂ' ಇತ್ಯಾದಿ ಶ್ರುತಿಗಳಿಂದ ವಿರುದ್ಧವಾಗಿದೆ. 'ಪಶ್ಯಂಶ್ಚಕ್ಷುಃ' ಇತ್ಯಾದಿ ಶ್ರುತಿಯು ಜೀವನಿಗೆ ಆಗಂತುಕವಾದ ಜ್ಞಾನವನ್ನು ಹೇಳುತ್ತಿವೆ. ಇದರ ವಿರೋಧವನ್ನು ಪರಿಹಾರ ಮಾಡುವುದಕ್ಕಾಗಿ ಜ್ಞಾಧಿಕರಣವು ಹೊರಟಿದೆ ಎಂದು ಕಲ್ಪತರುವಿನಲ್ಲಿ ಹೇಳಲಾಗಿದೆ. ಆದ್ದರಿಂದ ಕಲ್ಪತರುವಿಗೆ ಈ ದೋಷವು ತಟ್ಟುವುದಿಲ್ಲ. ಅಥವಾ ಕಲ್ಪತರುಕಾರ ಹೇಳಿದ್ದೂ ಕೂಡ ತಪ್ಪು. ಪಶ್ಯಂಚಕ್ಷುಃ ಎಂಬ ಶ್ರುತಿಯು ಆಗಂತುಕಜ್ಞಾನವಾಚಿಯಾಗಿದೆ ಎಂದು ಹೇಳಲು ಹೇಗೆ ಸಾಧ್ಯ ? ಆಗಂತುಕಜ್ಞಾನವೆನ್ನಲು ಯಾವುದೇ ಶಬ್ದಗಳು ಅಲ್ಲಿ ಕಾಣಿಸುತ್ತಿಲ್ಲ.

**प्रकाशः** – यद्वा ''पश्यन्'' इत्यादिश्रुतेरागन्तुकज्ञानवत्त्वाप्रतीतेरिति भावः । तत्पक्षे दोषान्तरमाह – **सौत्रेणेति** ।। ज्ञा अवबोधन इत्यस्मात् ''इगुपधज्ञाप्रीकिरः क'' इति कर्तरि कप्रत्ययान्तत्वेनानुशिष्टत्वात्, ''धीरो मनीषीज्ञः प्राज्ञ'' इत्यमरोक्तेश्चेति भावः ।

ಕಲ್ಪತರು ಪಕ್ಷದಲ್ಲಿ ಮತ್ತೊಂದು ದೋಷವನ್ನು 'ಸೌತ್ರೇಣ' ಎಂಬುದಾಗಿ ಹೇಳುತ್ತಿದ್ದಾರೆ. 'ಜ್ಞ' ಎಂಬ ಪದಕ್ಕೆ ಜ್ಞಾನರೂಪ ಎಂಬರ್ಥವು ಎಲ್ಲಿಯೂ ಇಲ್ಲ. ಜ್ಞಾನಕರ್ತಾ ಎಂಬರ್ಥವೇ ಎಲ್ಲೆಡೆ ಕಂಡಿದೆ. ಜ್ಞ ಅವಬೋಧವೆಂಬ ಧಾತುವಿನ ಮೇಲೆ 'ಇಗುಪಧಜ್ಞಾಪ್ರೀಕಿರಃ ಕ' ಎಂಬ ಸೂತ್ರದಿಂದ ಕರ್ತರ್ಥದಲ್ಲಿ ಕಪ್ರತ್ಯಯವು ಬರುತ್ತದೆ. ಆದ್ದರಿಂದ ಜ್ಞಾನಕರ್ತಾ ಎಂಬರ್ಥವನ್ನೇ ತಿಳಿಯಬೇಕು. ಮತ್ತು ಅಮರಕೋಶದಲ್ಲಿ 'ಧೀರೋ ಮನೀಷೀಜ್ಞಃ ಪ್ರಾಜ್ಞಃ' ಎಂಬುದಾಗಿ ಜ್ಞಾನಕರ್ತಾ ಎಂಬ ಅರ್ಥದಲ್ಲಿರುವ ಸಮಾನಪದಗಳ ಜೊತೆ ಜ್ಞಃ ಎಂಬ ಪದವನ್ನು ಉಲ್ಲೇಖ ಮಾಡಲಾಗಿದೆ.

**प्रकाशः** – ननु परभाष्ये ''अत एव'' इति सौत्रं पदमनूद्य ''यस्मान्नोत्पद्यते परमेव ब्रह्म विकृतमुपाधिसम्पर्काज्जीवभावेनावतिष्ठत'' इत्याद्युक्तमित्यत आह – **ज्ञानरूपेति** ।। मतान्तरं त्वग्रे निरसिष्यते ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे ज्ञाधिकरणं सम्पूर्णम् ।।११।।**

ಶಂಕರಭಾಷ್ಯದಲ್ಲಿ 'ಅತ ಏವ' ಸೂತ್ರದಲ್ಲಿರುವ ಪದವನ್ನು ಅನುವಾದ ಮಾಡಿ 'ಯಸ್ಮಾನ್ನೋತ್ಪದ್ಯತೇ ಪರಮೇವ ಬ್ರಹ್ಮ ವಿಕೃತಂ ಉಪಾಧಿಸಂಪರ್ಕಾಜ್ಜೀವಭಾವೇನಾವತಿಷ್ಠತೇ' ಯಾವ ಕಾರಣದಿಂದ ಪರಬ್ರಹ್ಮನು ಉತ್ಪನ್ನನಾಗುವುದಿಲ್ಲವೋ ಆ ಕಾರಣದಿಂದಲೇ ಆ ಬ್ರಹ್ಮನೇ ಉಪಾಧಿ ಸಂಪರ್ಕದಿಂದ ಜೀವಭಾವವನ್ನು ಹೊಂದಿದ್ದಾನೆ. ಬ್ರಹ್ಮನು ಜ್ಞಾನರೂಪನಾದ ಮೇಲೆ ಜೀವನೂ ಕೂಡ ಜ್ಞಾನರೂಪನೇ ಆಗಬೇಕು ಎಂಬುದಾಗಿ ವ್ಯಾಖ್ಯಾನ ಮಾಡಲಾಗಿದೆ. ಆದ್ದರಿಂದ 'ಅತ ಏವ' ಎಂಬುದಕ್ಕೆ ಬ್ರಹ್ಮನಿಂದ ಅಭೇದವಿರುವುದರಿಂದಲೇ

ಎಂದರ್ಥವನ್ನು ಹೇಳಿದಂತಾಯಿತು. ಈ ಅರ್ಥವನ್ನು ಹೇಳಿದಾಗ ವ್ಯಭಿಚಾರಾದಿದೋಷಗಳಿಗೆ ಅವಕಾಶವಿಲ್ಲವಲ್ಲವೇ? ಎಂಬ ಪ್ರಶ್ನೆಗೆ 'ಜ್ಞಾನರೂಪ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಜ್ಞಾನರೂಪನಾದ ಬ್ರಹ್ಮನು ಅಪ್ರಕೃತನಾದ್ದರಿಂದ ಈ ಅರ್ಥವನ್ನು ಸೂತ್ರಕ್ಕೆ ಹೇಳುವುದು ಬಲು ಕಠಿಣವಾಗಿದೆ ಎಂಬುದಾಗಿ ಗ್ರಂಥದಲ್ಲಿ ಮತ್ತೊಂದು ದೋಷವನ್ನು ಹೇಳಿದ್ದಾರೆ. ವಿಶಿಷ್ಟಾದ್ವೈತಿಗಳ ಮತವನ್ನು ಮುಂದೆ ನಿರಾಕರಣೆ ಮಾಡಲಾಗುತ್ತದೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಜ್ಞಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.




ಇಲ್ಲಿಯ ತನಕ ಅಧಿಭೂತವಿಚಾರ ಮುಗಿಯಿತು. ಈಗ ಇಲ್ಲಿಂದ ಪಾದ ಮುಗಿಯುವ ತನಕ ಜೀವನ ಬಗ್ಗೆ ವಿಚಾರ. ಮೊದಲ ಈ ಅಧಿಕರಣದಲ್ಲಿ ಜೀವನಿಗೆ ಉತ್ಪತ್ತಿ ಹೇಳುವ ಶ್ರುತಿ ವಿರೋಧವನ್ನು ಪರಿಹರಿಸುತ್ತಿದ್ದಾರೆ. ನಿತ್ಯೋನಿತ್ಯಾನಾಂ ಎಂಬ ಶ್ರುತಿಯು ಜೀವನನ್ನು ನಿತ್ಯ ಎನ್ನುತ್ತಿದೆ. ಸರ್ವೇ ಆತ್ಮಾನಃ ವಿಚ್ಚರಂತಿ ಎಂಬ ಶ್ರುತಿಯು ಜೀವನಿಗೆ ಉತ್ಪತ್ತಿಯನ್ನು ಹೇಳುತ್ತಿದೆ. ಹೀಗೆ ಶ್ರುತಿಗಳಲ್ಲಿ ಪರಸ್ಪರ ವಿರೋಧವು ಪ್ರಾಪ್ತವಾದಾಗ ನ್ಯೋತೇವ ಎಂಬ ಸೂತ್ರವು ಹೊರಟಿದೆ. ಈ ನಿತ್ಯೋನಿತ್ಯಾನಾಂ ಎಂಬ ಶ್ರುತಿಯು ಜೀವರಿಗೆ ಉತ್ಪತ್ತಿ ನಾಶವಿಲ್ಲವೆಂದು ಹೇಳುತ್ತಿದೆ. ಆದರೂ ಕೂಡ ದೇಹಪ್ರಯುಕ್ತವಾಗಿ ಉತ್ಪತ್ತಿ ಹಾಗೂ ನಾಶಗಳು ಜೀವನಿಗೆ ಇರುತ್ತದೆ. ಇಂತಹ ಉತ್ಪತ್ತಿ ನಾಶಗಳು ಪರಮಾತ್ಮನಿಗೆ ಇರುವುದಿಲ್ಲ. ಉಪಾದಿಯಾದ ದೇಹನಿಮಿತ್ತಕವಾಗಿ ಜೀವರು ಹುಟ್ಟುತ್ತಾರೆ. ಉಪಾದಿನಿಮಿತ್ತಕವಾದ ದೇಹನಾಶಪ್ರಯುಕ್ತವಾಗಿ ಮರಣವನ್ನು ಹೊಂದುತ್ತಾರೆ. ಆದ್ದರಿಂದ ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲ.

ಅದ್ವೈತಿಗಳು ಶ್ರುತಿವಿರೋಧಕ್ಕಾಗಿ ಎಂದು ಈ ಅಧಿಕರಣವನ್ನು ಹೇಳುವುದೇ ಇಲ್ಲ. ಯುಕ್ತವಿರೋಧ ಪರಿಹಾರಕ್ಕಾಗಿ ಈ ಅಧಿಕರಣ ಹೊರಟಿದೆ ಎನ್ನುತ್ತಾರೆ. ಆದ್ದರಿಂದಲೇ ಈ ಅಧಿಕರಣವು ಈ ಪಾದದಲ್ಲಿ ಅಸಂಗತವಾಗುತ್ತದೆ ಮತ್ತು ಅತ ಏವ ಎಂಬ ಪದಕ್ಕೆ ಬ್ರಹ್ಮಾಭೇದವಿರುವುದರಿಂದ ಎಂದು ವ್ಯಾಖ್ಯಾನ ಮಾಡುತ್ತಾರೆ. ಹಿಂದೆ ಬ್ರಹ್ಮಾಭೇದವು ಪ್ರಸಕ್ತವೇ ಅಲ್ಲದ್ದರಿಂದ ಅದನ್ನು ಪರಾಮರ್ಶಿಸುವುದು ಹೇಗೆ ಸಾಧ್ಯ. ಮತ್ತು ಜ್ಞಃ ಎಂಬ ಪದಕ್ಕೆ ಜ್ಞಾನರೂಪ ಎಂಬರ್ಥವನ್ನು ಮಾಡುತ್ತಾರೆ. ಆದರೆ ಜ್ಞಾನಕರ್ತ ಎಂಬರ್ಥವೇ ಕೋಶಸಿದ್ಧವಾಗಿದೆ. ಜ್ಞಃ ಎಂಬ ಪದಕ್ಕೆ ಜ್ಞಾನರೂಪ ಎಂಬ ಅರ್ಥವನ್ನು ಹೇಳಲು ಯಾವುದೇ ಆಧಾರವಿಲ್ಲ.

# ಉತ್ಕ್ರಾಂತ್ಯಧಿಕರಣ

(೨-೩-೧೨)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

॥ ಶ್ರೀಗುರುಭ್ಯೋ ನಮಃ ॥

# ಉತ್ಕ್ರಾಂತ್ಯಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – उत्क्रान्तिगत्यागतीनाम् ।।**

ಜೀವನು ದೇಹದಿಂದ ಉತ್ಕ್ರಮಣ ಮಾಡುತ್ತಾನೆ. ಪರಲೋಕಕ್ಕೆ ತೆರಳುತ್ತಾನೆ. ಪುನಃ ಇಹಲೋಕಕ್ಕೆ ಆಗಮಿಸುತ್ತಾನೆ. ಇವೇ ಮೊದಲಾದ ಹೇತುಗಳಿಂದ ಜೀವನು ಅಣುಸ್ವರೂಪನೇ ಆಗಿದ್ದಾನೆ ಹೊರತು, ವಿಭುವಲ್ಲ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** – सोऽस्मादित्यादिवाक्योक्तदेहोत्क्रमणं लोकान्तरगमनै- तल्लोकगमनरूपहेतूनां सकाशात् अणुरेव जीवः न विभुरित्यर्थः ।।१।।

ಉತ್ಕ್ರಾಂತಿಗತ್ಯಾಗತೀನಾಮ್ = 'ಸೋಽಸ್ಮಾತ್' ಎಂಬ ವಾಕ್ಯದಲ್ಲಿ ಹೇಳಿದ ದೇಹದಿಂದ ಉತ್ಕ್ರಮಣ ಪರಲೋಕಗಮನ, ಇಹಲೋಕದ ಆಗಮನ ಮೊದಲಾದ ಹೇತುಗಳಿರುವುದರಿಂದ ಜೀವನು ಅಣುವೇ ಆಗಿರುತ್ತಾನೆ ಹೊರತು ವಿಭುವಲ್ಲ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – 'व्याप्ता ह्यात्मानश्चेतना निर्गुणाश्च सर्वात्मानः सर्वरूपा अनन्ताः' इति काषायणश्रुतौ व्याप्तत्वं प्रतीतयते । 'अणुर्ह्येष आत्मा यं वा एते सिनीतः । पुण्यं च पापं च' इति गौपवनश्रुतावणुत्वमित्यतो विरोध इति ।।**

ಅನುವಾದ - ಚೇತನಸ್ವರೂಪರಾದ ಆತ್ಮರು ವ್ಯಾಪ್ತರಾಗಿರುತ್ತಾರೆ. ನಿರ್ಗುಣರು ಸರ್ವಾತ್ಮಕರೂ, ಸಕಲರೂಪವನ್ನು ತಾಳಿದವರೂ, ಅನಂತರೂ ಆಗಿರುತ್ತಾರೆ. ಹೀಗೆ ಕಾಷಾಯಣಶ್ರುತಿಯಲ್ಲಿ ಜೀವನಿಗೆ ವ್ಯಾಪ್ತತ್ವವನ್ನು ಹೇಳಲಾಗಿದೆ. ಆದರೆ ಜೀವಾತ್ಮನು ಅಣುವಾಗಿದ್ದಾನೆ. ಈ ಆತ್ಮನನ್ನು ಬಂಧನಕ್ಕೆ ಯಾವ ಪದಾರ್ಥಗಳು ತಳ್ಳುತ್ತವೋ ಅವೇ ಪುಣ್ಯ ಮತ್ತು ಪಾಪಗಳೆಂದು ಕರೆಸಿಕೊಳ್ಳುತ್ತವೆ. ಹೀಗೆ ಗೌಪವನಶ್ರುತಿಯಲ್ಲಿ ಜೀವಾತ್ಮನಿಗೆ ಅಣುತ್ವವನ್ನು ಹೇಳಲಾಗಿದೆ. ಆದ್ದರಿಂದ ಎರಡು ಶ್ರುತಿಗಳಿಗೂ ವಿರೋಧ ಬರುವುದರಿಂದ ಅಪ್ರಾಮಾಣ್ಯವನ್ನು ಹೇಳಬೇಕು. ಇಷ್ಟು ಪೂರ್ವಪಕ್ಷ.

ಪ್ರತಿಪದಾರ್ಥ -- ಆತ್ಮಾನಃ = ಆತ್ಮರು, ವ್ಯಾಪ್ತಾಃ = ಎಲ್ಲೆಡೆ ಇರುವವರು, ಚೇತನಾಃ = ಜ್ಞಾನಸ್ವರೂಪರು, ನಿರ್ಗುಣಾಃ = ಪ್ರಾಕೃತಗುಣರಹಿತರು, ಸರ್ವಾತ್ಮಾನಃ = ಎಲ್ಲವನ್ನು ತನ್ನ ಅಧೀನದಲ್ಲಿ ಇಟ್ಟುಕೊಳ್ಳುವವರು, ಸರ್ವರೂಪಾಃ = ಅನೇಕರೂಪವನ್ನು ತಾಳುವವರು, ಅನಂತಾಃ = ಕಾಲತಃ ಗುಣತಃ ಪರಿಚ್ಛೇದವಿಲ್ಲದವರು, ಇತಿ = ಹೀಗೆ, ಕಾಷಾಯಣಶ್ರುತೌ = ಕಾಷಾಯಣಶ್ರುತಿಯಲ್ಲಿ, ವ್ಯಾಪ್ತತ್ವಂ = ಎಲ್ಲೆಡೆ ಇರುವಿಕೆ ಹೇಳುವುದು, ಪ್ರತೀಯತೇ = ಕಾಣಸುತ್ತದೆ. ಏಷಃ = ಈ ಜೀವಾತ್ಮನು, ಅಣುಃ = ಅಣುಸ್ವರೂಪನು, ಯಂ ವಾ = ಯಾವ ಜೀವನನ್ನಾದರೂ, ಸಿನೀತಃ = ಬಂಧನದಲ್ಲಿ ಮುಳುಗಿಸುತ್ತವೋ, ಏತೇ = ಇವುಗಳು, ಪುಣ್ಯಂ ಚ ಅಪಾಪಂ ಚ = ಪುಣ್ಯ ಹಾಗೂ ಪಾಪಗಳೆಂದು ಕರೆಸಿಕೊಳ್ಳುತ್ತವೆ, ಇತಿ = ಹೀಗೆ, ಗೌಪವನಶ್ರುತೌ = ಗೌಪವನಶ್ರುತಿಯಲ್ಲಿ, ಅಣುತ್ವಂ = ಅಣುತ್ವವನ್ನು ಹೇಳಲಾಗಿದೆ, ಅತಃ = ಆದ್ದರಿಂದ, ವಿರೋಧಃ = ವಿರೋಧ ಬರುತ್ತದೆ.

**भाष्यम् – अतो ब्रवीति –**

**।। उत्क्रान्तिगत्यागतीनाम् ।।१।।**

**हेतूनां सकाशादणुरेव ।**

ಅನುವಾದ - ಈ ಪೂರ್ವಪಕ್ಷಕ್ಕೆ ಸೂತ್ರಕಾರರು ಸಿದ್ಧಾಂತವನ್ನು ಹೇಳುತ್ತಿದ್ದಾರೆ - ದೇಹೋತ್ಕ್ರಮಣದ ಅನೇಕ ಹೇತುಗಳಿಂದ ಜೀವಾತ್ಮನು ಅಣುವೆಂದೇ ಸಿದ್ಧವಾಗುತ್ತದೆ.

ಪ್ರತಿಪದಾರ್ಥ:- ಅತಃ = ಪೂರ್ವಪಕ್ಷಕ್ಕೆ ಉತ್ತರರೂಪವಾಗಿ, ಬ್ರವೀತಿ = ಹೇಳುತ್ತಿದ್ದಾರೆ. ಹೇತೂನಾಂ ಸಕಾಶಾತ್ = ಅನೇಕ ಹೇತುಗಳಿಂದ, ಅಣುರೇವ = ಜೀವನು ಅಣುವೇ ಆಗುತ್ತಾನೆ.

ಉತ್ಕ್ರಾಂತ್ಯಧಿಕರಣ (೨-೩-೧೨)

**भाष्यम् – 'सोऽस्माच्छरीरादुत्क्रम्यामुं लोकमभिगच्छत्यमुष्मादिमं लोकमागच्छति स गर्भीभवति स प्रसूयते स कर्म कुरुते' इति पौष्यायणश्रुतेः ।।१।।**

ಅನುವಾದ - ಜೀವನು ಈ ಶರೀರದಿಂದ ಹೊರಟು ಸ್ವರ್ಗಾದಿಲೋಕವನ್ನು ಹೊಂದುತ್ತಾನೆ. ಅಲ್ಲಿಂದ ಪುನಃ ಭೂಲೋಕಕ್ಕೆ ಬರುತ್ತಾನೆ. ಗರ್ಭದಲ್ಲಿ ಪ್ರವೇಶ ಮಾಡಿ ಜನ್ಮ ಪಡೆದು ಪುನಃ ಪುಣ್ಯ ಪಾಪಕರ್ಮಗಳನ್ನು ಸಂಪಾದನೆ ಮಾಡುತ್ತಾನೆ. ಹೀಗೆ ಪೌಷ್ಯಾಯಣಶ್ರುತಿಯು ಹೇಳುತ್ತಿದೆ. ಒಂದು ವೇಳೆ ಜೀವನು ವ್ಯಾಪ್ತನಾದರೆ ಇವೆಲ್ಲವೂ ಅಸಂಭಾವಿತವಾಗುತ್ತವೆ.

ಪ್ರತಿಪದಾರ್ಥ -- ಸಃ = ಆ ಜೀವನು, ಅಸ್ಮಾತ್ ಶರೀರಾತ್ = ಈ ದೇಹದಿಂದ, ಉತ್ಕ್ರಮ್ಯ = ಹೊರಟು, ಅಮುಂ ಲೋಕಂ = ಸ್ವರ್ಗಲೋಕವನ್ನು, ಅಭಿಗಚ್ಛತಿ = ಹೊಂದುತ್ತಾನೆ. ಅಮುಷ್ಮಾತ್ = ಸ್ವರ್ಗಲೋಕದಿಂದ, ಇಮಂ ಲೋಕಂ = ಭೂಲೋಕಕ್ಕೆ ಆಗಚ್ಛತಿ ಬರುತ್ತಾನೆ. ಸಃ = ಅಂಥ ಅವನು ಗರ್ಭೀಭವತೀ = ಗರ್ಭಪ್ರವೇಶ ಮಾಡುತ್ತಾನೆ. ಸಃ = ಆ ಜೀವನು, ಪ್ರಸೂಯತೇ = ಜನ್ಮ ತಾಳುತ್ತಾನೆ, ಸಃ = ಅವನು, ಕರ್ಮ = ಪುಣ್ಯಪಾಪಾದಿಗಳನ್ನು ಕುರುತೇ = ಸಂಪಾದನೆ ಮಾಡುತ್ತಾನೆ, ಇತಿ = ಹೀಗೆ, ಪೌಷ್ಯಾಯಣಶ್ರುತೇಃ = ಪೌಷ್ಯಾಯಣಶ್ರುತಿಯು ಹೇಳುತ್ತಿದೆ.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**तत्वप्रकाशिका – अत्र परमेश्वरे श्रुतिसमन्वयसिद्ध्यर्थं जीवपरिमाण-विषय श्रुतिविरोधपरिहारादस्ति शास्त्रादिसङ्गतिः । श्रुतिसमन्वयः । पूर्वं हरावुक्तः । जीवपरिमाणविषये च श्रुतीनां विरोधेनाप्रामाण्ये नासौ युक्तः स्यादिति विरोधो निराकार्य एव ।**

ಈ ಅಧಿಕರಣದಲ್ಲಿ ಪರಮೇಶ್ವರನಲ್ಲಿ ಶ್ರುತಿಸಮನ್ವಯವು ಸಿದ್ಧವಾಗುವುದಕ್ಕಾಗಿ ಜೀವಪರಿಮಾಣವಿಷಯದಲ್ಲಿ ಶ್ರುತಿವಿರೋಧವನ್ನು ಪರಿಹರಿಸಲಾಗಿದೆ. ಆದ್ದರಿಂದ ಶಾಸ್ತ್ರ-ಅಧ್ಯಾಯ-ಪಾದ ಸಂಗತಿಗಳು ಇರುತ್ತವೆ. ಶ್ರುತಿಸಮನ್ವಯವನ್ನು ಹಿಂದೆ ಶ್ರೀಹರಿಯಲ್ಲಿ ಹೇಳಲಾಯಿತು. ಜೀವಪರಿಮಾಣ ವಿಷಯದಲ್ಲಿ ಶ್ರುತಿಗಳಿಗೆ ಪರಸ್ಪರ ವಿರೋಧವಿದೆ. ಆದ್ದರಿಂದ ಶ್ರುತಿಗಳಿಗೆ ಅಪ್ರಾಮಾಣ್ಯವು ಬರುವುದರಿಂದ ಶ್ರುತಿಸಮನ್ವಯವು ಶ್ರೀಹರಿಯಲ್ಲಿ ಸಿದ್ಧವಾಗುವುದಿಲ್ಲ. ಆದ್ದರಿಂದ ಈ ವಿರೋಧವನ್ನು ಪರಿಹಾರ ಮಾಡಲೇಬೇಕು.

ವಿವರಣೆ- ಧರ್ಮಿಯ ವಿಚಾರದ ಅನಂತರ ಧರ್ಮದ ವಿಚಾರವನ್ನು ಮಾಡಬೇಕು. ಹಿಂದಿನ ಅಧಿಕರಣದಲ್ಲಿ ಜೀವನ ಉತ್ಪತ್ತಿಯ ವಿಷಯದಲ್ಲಿ ಶ್ರುತಿವಿರೋಧ ಪರಿಹರಿಸಿದ್ದಾಯಿತು. ಈಗ

ಜೀವನ ಧರ್ಮವಿಶೇಷವಾದ ಪರಿಮಾಣದ ವಿಚಾರವನ್ನು ಮಾಡಲಾಗುತ್ತಿದೆ. ಆದ್ದರಿಂದ ಹಿಂದಿನ ಅಧಿಕರಣದಿಂದ ಆನಂತರ್ಯಸಂಗತಿ ಇರುತ್ತದೆ.

**तत्वप्रकाशिका – प्रकृतो जीव एव विषयः । किं व्याप्तोऽणुर्वेति संशयः । संशयबीजं श्रुतिविगानं दर्शयति – व्याप्ता हीति ।। सर्वात्मानः सर्वस्यादानादिकर्तारः। सर्वरूपाः पूर्णाः । 'यं वा एते' इति वाक्यशेषोद्धारो जीवत्वज्ञापनार्थः । व्याप्तत्वमणुत्वं च प्रतीयते जीवस्येति शेषः ।**

ಪ್ರಕೃತನಾದ ಜೀವನೇ ಅಧಿಕರಣದ ವಿಷಯ. ಇವನು ವ್ಯಾಪ್ತನೋ, ಅಣುವೋ? ಎಂಬುದು ಸಂದೇಹ. ಈ ವಿಷಯದಲ್ಲಿರುವ ಶ್ರುತಿಗಳ ವಿರೋಧವು ಸಂಶಯಬೀಜ. ಇದನ್ನು 'ವ್ಯಾಪ್ತಾ ಹಿ' ಇತ್ಯಾದಿ ಭಾಷ್ಯದಿಂದ ತೋರಿಸುತ್ತಿದ್ದಾರೆ.

'ಸರ್ವಾತ್ಮಾನಃ' ಎಂದರೆ ಎಲ್ಲಕ್ಕೂ ಆದಾನಾದಿಕರ್ತೃ ಆದವರು ಎಂದರ್ಥ. 'ಸರ್ವರೂಪಾಃ' ಎಂದರೆ ಪೂರ್ಣರಾದವರು ಎಂದರ್ಥ. 'ಯಂ ವಾ ಏತೇ' ಎಂಬ ವಾಕ್ಯಶೇಷವನ್ನು ಉದ್ಧಾರ ಮಾಡಿದ್ದು ಜೀವನನ್ನು ತಿಳಿಸುವುದಕ್ಕಾಗಿ. 'ವ್ಯಾಪ್ತತ್ವಂ ಪ್ರತೀಯತೇ' ಎಂದರೆ ವ್ಯಾಪ್ತತ್ವ ಮತ್ತು ಅಣುತ್ವವು ಜೀವನಿಗೆ ಪ್ರತೀತವಾಗುತ್ತದೆ ಎಂಬುದಾಗಿ ಶೇಷಪೂರಣ ಮಾಡಿಕೊಳ್ಳಬೇಕು.

**तत्वप्रकाशिका – जीवो व्याप्त एवेति पूर्वः पक्षः । 'व्याप्ताह्यात्मानः' इति श्रुतेः । न चेयं श्रुतिर्न जीवविषया बहुवचनविरोधात् । न चेश्वररूपबाहुल्यार्था । बाधकं विना श्रुतेर्बाधायोगात् ।**

ಜೀವನು ವ್ಯಾಪ್ತನೇ ಆಗಿದ್ದಾನೆಂಬುದು ಪೂರ್ವಪಕ್ಷ. 'ವ್ಯಾಪ್ತಾಹಿ ಆತ್ಮಾನಃ' 'ಎಲ್ಲ ಜೀವರೂ ವ್ಯಾಪ್ತರೇ ಆಗಿದ್ದಾರೆ' ಎಂಬ ಶ್ರುತಿಯೇ ಇದಕ್ಕೆ ಆಧಾರ. ಈ ಶ್ರುತಿಯು ಜೀವವಿಷಯವಲ್ಲವೆಂದು ಹೇಳಬಾರದು. ಬಹುವಚನದ ವಿರೋಧವು ಬರುತ್ತದೆ. ಈಶ್ವರರು ಬಹುಮಂದಿ ಇದ್ದಾರೆಂದು ಅರ್ಥೈಸಬಾರದು. ಬಾಧಕವಿಲ್ಲದೆ ಶ್ರುತಿಗೆ ಬಾಧ ಹೇಳುವುದು ಯುಕ್ತವಾಗುವುದಿಲ್ಲ. ಅಣುತ್ವ ಶ್ರುತಿಯ ವಿರೋಧಕ್ಕೆ ಅವಕಾಶವಿಲ್ಲ. ವ್ಯಾಪ್ತಶ್ರುತಿಯು ಯುಕ್ತಿಯುಕ್ತವಾದ್ದರಿಂದ ಬಲಿಷ್ಠವಾಗಿದೆ.

ವಿವರಣೆ - 'ವ್ಯಾಪ್ತಾ ಹಿ ಆತ್ಮಾನಃ' ಎಂಬ ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಯಲ್ಲಿರುವ 'ಸರ್ವಾತ್ಮಾನಃ' ಎಂಬ ಪದಕ್ಕೆ 'ಎಲ್ಲವನ್ನೂ ಸ್ವೀಕಾರ ಮಾಡುವವರು' ಎಂದರ್ಥ. ವಾಸ್ತವಿಕವಾಗಿ ಇಷ್ಟೇ ಉದಾಹರಿಸಿದ್ದರೆ ಸಾಕಾಗುತ್ತಿತ್ತು. ಆದರೂ 'ಚೇತನಃ' ಇತ್ಯಾದಿಯಾಗಿ ವಾಕ್ಯಶೇಷವನ್ನು ಏಕೆ ಉಲ್ಲೇಖಿಸಿದ್ದಾರೆಂದರೆ ಸಿದ್ಧಾಂತ ಸಾಧಕವಾದ ಲಿಂಗಗಳಿರುವುದನ್ನು ಸೂಚಿಸುವುದಕ್ಕಾಗಿ. ಇದೇ ರೀತಿಯಾಗಿ 'ಅಣುರ್ಹ್ಯೇಷ ಆತ್ಮಾ' ಎಂದಷ್ಟೇ ಉದಾಹರಿಸಿದ್ದರೆ ಸಾಕಾಗುತ್ತಿತ್ತು. 'ಯಂ ವಾ ಏತೇ' ಇತ್ಯಾದಿಯಾಗಿ ಉದಾಹರಿಸಿದ್ದು ಜೀವತ್ವಜ್ಞಾಪಕವಾದ ಪೂರ್ವಪಕ್ಷಲಿಂಗವನ್ನು ತಿಳಿಸುವುದಕ್ಕಾಗಿ.

'ವ್ಯಾಪ್ತಾ ಹಿ ಆತ್ಮಾನಃ' ಎಂಬ ಶ್ರುತಿಯಲ್ಲಿ ಬಹುವಚನವಿದೆ. ಅನೇಕರಲ್ಲಿ ಮಾತ್ರ ಈ ಬಹುವಚನವು ಯುಕ್ತವಾಗುತ್ತದೆ. ಇದು ಈಶ್ವರ ಪರವಾದರೆ ಅವನು ಒಬ್ಬನೇ ಆಗಿರುವುದರಿಂದ ಈ ಬಹುವಚನವು ಯುಕ್ತವಾಗುವುದಿಲ್ಲ. ಆದ್ದರಿಂದ ಈ ಶ್ರುತಿಯನ್ನು ಜೀವಪರವೆಂದೇ ಹೇಳಬೇಕು.

ಉತ್ಕ್ರಾಂತ್ಯಧಿಕರಣ (೨-೩-೧೨)

**तत्वप्रकाशिका – न चाणुत्वश्रुतिविरोधः । व्याप्तश्रुतेर्युक्तियुक्ताया बलवत्वात् । तथा हि न तावदणुरात्मा । सर्वदेहगतस्पर्शज्ञानात् । रूपादीनां तत्तदिन्द्रियैर्ज्ञानात् । न चेदं ज्ञानमणावात्मनि सम्भवति । न हि कश्चिदप्राप्तकरणेन क्रियां निर्वर्तयति ।**

ಪ್ರಶ್ನೆ - 'ಅಣುರ್ಹ್ಯೇಷ ಆತ್ಮಾ' ಎಂಬ ಅಣುತ್ವಪ್ರತಿಪಾದಕವಾದ ಶ್ರುತಿವಿರೋಧವು ವ್ಯಾಪ್ತತ್ವವನ್ನು ಹೇಳುವ 'ವ್ಯಾಪ್ತಾ ಹಿ ಆತ್ಮಾನಃ' ಎಂಬ ಶ್ರುತಿಗೆ ಬರುತ್ತದೆ. ಆದ್ದರಿಂದ ಅಣುತ್ವ ಶ್ರುತಿಯೇ ಬಾಧಕವಾಗಿದೆಯಲ್ಲವೇ?

ಉತ್ತರ - ಹೀಗೆ ಹೇಳಬಾರದು. ವ್ಯಾಪ್ತತ್ವವನ್ನು ಹೇಳುವ 'ವ್ಯಾಪ್ತಾ ಹಿ ಆತ್ಮಾನಃ' ಎಂಬ ಶ್ರುತಿಯು ಯುಕ್ತಿಯಿಂದ ಕೂಡಿರುವುದರಿಂದ ಅಣುತ್ವ ಶ್ರುತಿಗಿಂತಲೂ ಬಲಿಷ್ಠವಾಗಿದೆ.

ಅದು ಹೀಗೆ - ಜೀವನನ್ನು ಅಣುಸ್ವರೂಪನೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಸಮಸ್ತ ದೇಹದಲ್ಲಿ ಎಲ್ಲಿ ಸ್ಪರ್ಶ ಮಾಡಿದರೂ ಜೀವನಿಗೆ ಅದರ ಜ್ಞಾನವಾಗುತ್ತದೆ. ಮತ್ತು ರೂಪ, ರಸ, ಮೊದಲಾದವುಗಳನ್ನು ಒಂದೇ ಕಾಲದಲ್ಲಿ ಆಯಾ ಇಂದ್ರಿಯಗಳಿಂದ ಜ್ಞಾನ ಬರುವುದು ಕಂಡಿದೆ.

ಪ್ರಶ್ನೆ - ಜೀವನು ಅಣುವಾಗಿದ್ದಾನೆಂದು ವಿವಕ್ಷಿಸಿದಾಗಲು ಇವುಗಳನ್ನು ಕೂಡಿಸಬಹುದಲ್ಲವೇ?

ಉತ್ತರ - ಸಾಧ್ಯವಿಲ್ಲ. ಇಂದ್ರಿಯವಿಲ್ಲದೆ ಜ್ಞಾನರೂಪ ಕ್ರಿಯೆಯನ್ನು ಹುಟ್ಟಿಸಲು ಯಾರಿಗೂ ಸಾಧ್ಯವಿಲ್ಲ.

ವಿವರಣೆ - ವ್ಯಾಪ್ತಿಯನ್ನು ಹೇಳುವ ಶ್ರುತಿಯು ಯುಕ್ತಿಯಿಂದ ಕೂಡಿದೆ. ಅದು ಹೀಗೆ- ಲೋಕದಲ್ಲಿರುವ ಪ್ರತಿಯೊಬ್ಬರಿಗೂ ಸಮಸ್ತ ಶರೀರದಲ್ಲಿರುವ ಯಾವುದೇ ಅಂಗವನ್ನು ಮುಟ್ಟದಾಗಲೂ ಜ್ಞಾನ ಬರುತ್ತದೆ. ಬಿಸಿನೀರಿನಲ್ಲಿ ಮುಳುಗಿದಾಗ ಪ್ರತಿಯೊಂದು ಅಂಗಾಂಗಗಳಿಂದಲೂ ಉಷ್ಣಸ್ಪರ್ಶದ ಅನುಭವ ಬರುತ್ತದೆ. ತಣ್ಣೀರಿನಲ್ಲಿ ಮುಳುಗಿದಾಗ ಶೀತಸ್ಪರ್ಶದ ಅನುಭವ ಬರುವುದು ಸಿದ್ಧವಾಗಿದೆ. ಅದರಂತೆ ಉದ್ದದ ಚಕ್ಕುಲಿಯನ್ನು ತಿನ್ನುವಾಗ ಕಣ್ಣಿನಿಂದ ಚಕ್ಕುಲಿಯನ್ನು ನೋಡುತ್ತಾನೆ, ಕಿವಿಯಿಂದ ತಿನ್ನುವ ಶಬ್ದವನ್ನು ಕೇಳುತ್ತಾನೆ, ನಾಲಗೆಯಿಂದ ರಸಸ್ಪರ್ಶದ ಅನುಭವವಾಗುತ್ತದೆ, ಮೂಗಿನಿಂದ ಅದರ ಗಂಧವೂ ಬರುತ್ತದೆ, ಕೈಯಿಂದ ಮುಟ್ಟಿದ ಸ್ಪರ್ಶದ ಅನುಭವ ಬರುತ್ತದೆ. ಹೀಗೆ ಏಕಕಾಲದಲ್ಲಿಯೇ ಎಲ್ಲಾ ಇಂದ್ರಿಯಗಳಿಂದ ಒಟ್ಟಿಗೆ ಜ್ಞಾನ ಬರುವುದು ಸಿದ್ಧವಾಗಿದೆ. ಜೀವನನ್ನು ಅಣುವೆಂದರೆ ಇವುಗಳನ್ನೆಲ್ಲಾ ಕೂಡಿಸಲು ಸಾಧ್ಯವಿಲ್ಲ.

ಅಣುಸ್ವರೂಪನಾದ ಜೀವನು ದೇಹದಲ್ಲಿ ಎಲ್ಲೋ ಒಂದುಕಡೆ ನೆಲೆಸಿದ ಮಾತ್ರಕ್ಕೆ ಸಮಗ್ರ ದೇಹದಲ್ಲಿ ಸ್ಪರ್ಶಜ್ಞಾನ ಬರಲು ಹೇಗೆ ಸಾಧ್ಯ ? ಯಾವ ದೇಹದ ಭಾಗದಿಂದ ಸ್ಪರ್ಶಜ್ಞಾನ ಬರುತ್ತಿದೆಯೋ ಆ ಭಾಗದಲ್ಲಿ ಜೀವನು ಇಂದ್ರಿಯವನ್ನೇ ಹೊಂದದ ಕಾರಣ ಜ್ಞಾನರೂಪ ಕ್ರಿಯೆ ಹುಟ್ಟಲೂ ಕೂಡ ಸಾಧ್ಯವಾಗುವುದಿಲ್ಲ. ಆದ್ದರಿಂದ ಇಂದ್ರಿಯಗಳಿಂದ ರೂಪಾದಿ ಜ್ಞಾನಗಳು ಹುಟ್ಟಬೇಕೆಂದರೆ ಜೀವನು ಶರೀರದ ಎಲ್ಲಾ ಭಾಗಗಳಲ್ಲಿಯೂ ಯಾವಾಗಲೂ ಇರುತ್ತಾನೆಂದು ಹೇಳಬೇಕು. ಹಾಗಾಗಿ ಜೀವನು ಅಣುಸ್ವರೂಪನಲ್ಲ, ವ್ಯಾಪ್ತನೆಂದೇ ಒಪ್ಪಬೇಕಾಗುತ್ತದೆ (ಭಾವದೀಪ).

ಪರಿಪೂರ್ಣಚಂದ್ರಿಕಾ

**तत्वप्रकाशिका – न चात्मा देहपरिमाणाः । उक्तदोषत्वात् तत्पक्षस्य शरीयपरिमाणत्वे चात्मनः शरीरवत्सांशत्वं स्यात् । मध्यमपरिमाणस्य तन्नियमात्। तेषां चांशानां प्रत्येकं चेतनत्वेन विरुद्धादिक्रियं शरीरमुन्मथ्येताक्रियं वाऽपद्येत । न हि युगपदनेकेषामैकमत्यं सम्भवति ।**

ಪ್ರಶ್ನೆ - ಜೀವನು ದೇಹದಷ್ಟೇ ಪರಿಮಾಣವುಳ್ಳವನೆಂದು ಹೇಳಬಹುದಲ್ಲವೇ?

ಉತ್ತರ - ಈ ಪಕ್ಷಕ್ಕೆ ದೋಷವನ್ನು ಈ ಹಿಂದೆಯೇ ಸಮಯಪಾದದಲ್ಲಿ ಹೇಳಿದ್ದಾಗಿದೆ. ಶರೀರ ಪರಿಮಾಣವನ್ನು ಜೀವನಿಗೆ ಹೇಳಿದರೆ ಶರೀರದಂತೆ ಸಾಂಶನಾಗುತ್ತಾನೆ. ಏಕೆಂದರೆ ಮಧ್ಯಮ ಪರಿಮಾಣವು ಸಾಂಶವಾಗಿರಬೇಕೆಂಬ ನಿಯಮವಿದೆ. ಆ ಅಂಶಗಳು ಪ್ರತ್ಯೇಕವಾಗಿ ಚೇತನವೆಂದು ಹೇಳಿದರೆ ವಿರುದ್ಧ ಕ್ರಿಯೆಯುಳ್ಳ ಶರೀರವು ನಾಶವನ್ನು ಹೊಂದಬೇಕಾಗುತ್ತದೆ. ಅಥವಾ ಕ್ರಿಯಾಶೂನ್ಯವಾಗಬೇಕಾಗುತ್ತದೆ.

ಪ್ರಶ್ನೆ - ಆ ಚೇತನಾಂಶಗಳು ಒಂದೇ ರೀತಿಯಲ್ಲಿ ಪ್ರವೃತ್ತವಾಗುತ್ತವೆಂದು ಹೇಳಬಹುದಲ್ಲವೇ?

ಉತ್ತರ - ಅನೇಕ ಅಂಶಗಳಿಗೆ ಏಕಕಾಲದಲ್ಲಿ ಐಕಮತ್ಯವನ್ನು ಹೇಳಲು ಸಾಧ್ಯವಿಲ್ಲ.

ವಿವರಣೆ- ಜೀವನನ್ನು ದೇಹಪರಿಮಾಣವುಳ್ಳವನೆಂದು ಒಪ್ಪಿದರೆ ಜೈನರಿಗೆ ಹೇಳಿದ ದೋಷವು ಇವರಿಗೂ ಸಮಾನ. ಆನೆಯ ಶರೀರದಲ್ಲಿರುವ ಜೀವನು ಇರುವೆಯ ಶರೀರವನ್ನು ಹೊಂದಿದಾಗ ಶರೀರಕ್ಕಿಂತ ಹೆಚ್ಚಿನ ಪರಿಮಾಣವು ಜೀವನಿಗಿದೆ ಎಂದು ಹೇಳಿದಂತಾಗುತ್ತದೆ. ಅಥವಾ ಇರುವೆಯ ಶರೀರದಲ್ಲಿರುವ ಜೀವನು ಆನೆಯ ಶರೀರವನ್ನು ಹೊಂದಿದಾಗ ಶರೀರದಲ್ಲೆಲ್ಲೆಡೆಯೂ ಜೀವನು ಇರುವುದಿಲ್ಲವೆಂದು ಒಪ್ಪಬೇಕಾಗುತ್ತದೆ. ಇತ್ಯಾದಿ ದೋಷಗಳು ಇವರಿಗೂ ಸಮಾನ.

ಜೀವನು ಶರೀರಪರಿಮಾಣವುಳ್ಳವನೆಂದು ಹೇಳಿದರೆ ಶರೀರಕ್ಕೆ ಹೇಗೆ ಅಂಶಗಳಿವೆಯೋ ಅದರಂತೆ ಜೀವನಿಗೂ ಕೂಡ ಒಪ್ಪಬೇಕಾಗುತ್ತದೆ.ಯಾವುದು ಮಧ್ಯಮ ಪರಿಮಾಣವೋ ಅವೆಲ್ಲವೂ ಸಾಂಶವಾಗಿರುವುದು ಲೋಕದಲ್ಲಿ ಸಿದ್ಧವಾಗಿದೆ. ಹಾಗೇನಾದರೂ ಸಾಂಶತ್ವವನ್ನು ಒಪ್ಪಿದರೆ ಜೀವನಿಗಿರುವ ಅಂಶಗಳು ಚೇತನವೋ, ಅಚೇತನವೋ? ಅಚೇತನವೆಂದರೆ ಚೇತನಾಂಶತ್ವವು ಯುಕ್ತವಾಗದು. ಚೇತನವೆಂದರೆ ಒಂದು ಅಂಶವು ಒಂದು ದಿಕ್ಕಿಗೆ ಹೋಗುತ್ತವೆ, ಇನ್ನೊಂದು ಅಂಶವು ಇನ್ನೊಂದು ದಿಕ್ಕಿಗೆ ಹೋಗುತ್ತವೆ. ಆಗ ವಿರುದ್ಧ ದಿಕ್ಕುಗಳಲ್ಲಿ ಕ್ರಿಯೆಯುಳ್ಳ ಶರೀರವು ನಾಶವೇ ಆಗಬೇಕಾಗುತ್ತದೆ. ಆ ಅಂಶಗಳು ಶರೀರದಲ್ಲಿ ಸುಮ್ಮನೆ ಇರುತ್ತವೇ ಹೊರತು ಇದರಿಂದ ಶರೀರ ನಾಶವನ್ನು ಒಪ್ಪಬೇಕಾಗಿಲ್ಲ ಎಂದು ಹೇಳಬಹುದು. ಆದರೆ ಆಗ ಶರೀರವು ನಿಷ್ಕ್ರಿಯವಾಯಿತು.

**तत्वप्रकाशिका – न च समुदायो नाम कश्चिद्धर्मी भवति । न चांशारब्धोंऽशी स्वीकर्तुं शक्यते। अनित्यत्वप्रसङ्गात् । अतः परिशेषादात्मनो व्याप्तत्वमेव सिध्यति। तथा च प्रयोगः । सर्वमिदं मूर्तमात्मनास्पृष्टं मूर्तत्वाच्छरीरवदिति । सयुक्तिकव्याप्तिश्रुतिविरोधादणुश्रुतेरेवाप्रामाण्यम् । तथा च न प्रगुक्तसमन्वय-सिद्धिरित्येवं प्राप्ते सिद्धान्तयत्सूत्रमवतार्य तच्छेषमेव पूरयति – अत इति ।।**

ಉತ್ಕ್ರಾಂತ್ಯಧಿಕರಣ (೨-೩-೧೨)

ಪ್ರಶ್ನೆ - ಸಮುದಾಯಿಗಳಲ್ಲಿ ವಿರುದ್ಧ ಕ್ರಿಯೆಗಳನ್ನು ಒಪ್ಪುತ್ತೇವೆ. ಸಮುದಾಯನೆನಿಸಿದ ಜೀವನು ಒಬ್ಬನೇ ಆಗಿರುವುದರಿಂದ ವಿರುದ್ಧ ಕ್ರಿಯೆ ಉಂಟಾಗುವುದಿಲ್ಲ.

ಉತ್ತರ - ಇದು ತಪ್ಪು. ಸಮುದಾಯವು ಸಮುದಾಯಿಗಿಂತ ಭಿನ್ನವೇ ಅಲ್ಲ. ಸಮುದಾಯಿಯು ಅನೇಕವಾದರೆ ಸಮುದಾಯನಾದ ಜೀವನೂ ಅನೇಕನಾಗುತ್ತಾನೆ.

ಪ್ರಶ್ನೆ - ಎಲ್ಲಾ ಅಂಶಗಳಿಂದ ಆರಬ್ಧನಾದವನೇ ಅಂಶಿ. ಇವನು ಜೀವ. ಅಂಶಿಯು ಒಬ್ಬನೇ ಆಗಿದ್ದಾನೆ. ಅಂಶಗಳು ಮಾತ್ರ ಅನೇಕ.

ಉತ್ತರ - ಇದು ತಪ್ಪು. ಹಾಗಾದಲ್ಲಿ ಜೀವನು ಅನಿತ್ಯನಾಗುತ್ತಾನೆ.

ಹೀಗೆ ಪರಿಶೇಷಪ್ರಮಾಣದಿಂದ ಆತ್ಮನನ್ನು ವ್ಯಾಪ್ತನೆಂದೇ ಒಪ್ಪಬೇಕು. ಅನುಮಾನ ಪ್ರಯೋಗ ಹೀಗಿದೆ - 'ಇದಂ ಸರ್ವಂ ಮೂರ್ತಂ, ಆತ್ಮನಾ ಸ್ಪಷ್ಟಂ, ಮೂರ್ತತ್ವಾತ್, ಶರೀರವತ್' ಶರೀರವು ಮೂರ್ತವಾಗಿದೆ. ಆತ್ಮನಿಂದ ಸಂಸರ್ಗ ಹೊಂದಿದೆ. ಅದರಂತೆಯೇ ಸಮಸ್ತ ಮೂರ್ತಪದಾರ್ಥವು ಮೂರ್ತವಾಗಿರುವುದರಿಂದ ಆತ್ಮನ ಸಂಸರ್ಗಕ್ಕೆ ಒಳಪಟ್ಟಿದೆ.

ಜೀವನಿಗೆ ವ್ಯಾಪ್ತಿಯನ್ನು ಹೇಳುವ ಶ್ರುತಿಯು ಯುಕ್ತಿಯಿಂದ ಕೂಡಿದೆ. ಅಣುತ್ವಸಾಧಕವಾದ ಶ್ರುತಿಗೆ ಅಪ್ರಾಮಾಣ್ಯವನ್ನೇ ಹೇಳಬೇಕು. ಹಾಗಾಗಿ ಹಿಂದೆ ಹೇಳಿದ ಶ್ರುತಿಸಮನ್ವಯವು ಸಿದ್ಧವಾಗುವುದಿಲ್ಲ. ಇಷ್ಟು ಅಧಿಕರಣದ ಪೂರ್ವಪಕ್ಷ.

ಸಿದ್ಧಾಂತಸ್ಥಾಪಕವಾದ ಸೂತ್ರಕ್ಕೆ ಅವತಾರಿಕೆ ನೀಡಿ ಅದರ ಶೇಷಭಾಗವನ್ನು 'ಅತಃ' ಇತ್ಯಾದಿಯಾಗಿ ಪೂರ್ತಿ ಮಾಡುತ್ತಿದ್ದಾರೆ.

ವಿವರಣೆ - ಅನೇಕ ಅಂಶಗಳಿಂದ ಒಂದು ಅಂಶಿಯು ಆರಬ್ಧವಾಗಿದೆ. ಅಂಶಗಳು ಅನೇಕವಿದ್ದರೂ ಅಂಶಿಯು ಒಂದೇ ಆಗಿರುವುದರಿಂದ ವಿರುದ್ಧ ಕ್ರಿಯೆಯುಳ್ಳ ಶರೀರಕ್ಕೆ ನಾಶ ಹೇಗೆ ಉಂಟಾಗುತ್ತದೆ? ಎಂಬುದು ಪ್ರಶ್ನೆ. ಆದರೆ ನಾಶಸ್ವಭಾವದ ಅಂಶಗಳಿಂದ ಅಂಶಿಯು ತಯಾರಾದಾಗ ಅಂಶಗಳಂತೆ ಅಂಶಿಯೂ ಕೂಡ ಅನಿತ್ಯವೇ ಆಗುತ್ತದೆ. ಹೀಗೆ ಯಾವುದೇ ಕಾರಣದಿಂದಲೂ ಜೀವನನ್ನು ಮಧ್ಯಮ ಪರಿಮಾಣನೆಂದು ಹೇಳಲು ಸಾಧ್ಯವಿಲ್ಲ. ಅಣುಪರಿಣಾಮನೆಂದೂ ಕೂಡ ಹೇಳಲು ಸಾಧ್ಯವಿಲ್ಲ. ಪರಿಶೇಷಾತ್ ವ್ಯಾಪ್ತನಾಗಿದ್ದಾನೆಂದೇ ಹೇಳಬೇಕು.

ಹೇಗೆ ಮೂರ್ತಪದಾರ್ಥವೆನಿಸಿದ ಶರೀರವು ಜೀವನ ಸಂಬಂಧವನ್ನು ಹೊಂದಿದೆಯೋ ಅದರಂತೆ ಜಗತ್ತಿನಲ್ಲಿರುವ ಸಕಲ ಮೂರ್ತಪದಾರ್ಥಗಳು ಜೀವನ ಸಂಬಂಧವನ್ನು ಹೊಂದಿವೆ ಎಂಬುದಾಗಿ ಸರ್ವಮೂರ್ತದ್ರವ್ಯಸಂಯೋಗಿತ್ವರೂಪವಾದ ವ್ಯಾಪ್ತತ್ವವನ್ನು ಜೀವನಲ್ಲಿ ಸಾಧಿಸುತ್ತೇವೆ. ಹೀಗೆ 'ವ್ಯಾಪ್ತಾ ಹಿ ಆತ್ಮಾನಃ' ಎಂಬ ಶ್ರುತಿಯು ಯುಕ್ತಿಬದ್ಧವಾಯಿತು.

**तत्वप्रकाशिका – जीवोऽणुरेव न व्याप्तः । उत्क्रान्तिगत्यागतिमत्वात् पतत्रिशरीरवत् । न हि व्याप्तद्रव्यस्य व्योमादेरुत्क्रान्त्याद्यस्ति । अतो निराकृतमध्यमपरिमाणस्यात्मनो व्याप्त्यनुपपत्तावणुत्वमेव सिध्यतीति भावः । सतीष्वात्मन उत्क्रान्तिगत्यागतिषु भवेद्विभुत्वाभावस्ता एव कुत इत्यत आह – स इति ।।**

परिपूर्णचंद्रिका

ಜೀವನು ಅಣುವೇ ಹೊರತು ವ್ಯಾಪ್ತನಲ್ಲ. ಏಕೆಂದರೆ ಪಕ್ಷಿಯ ಶರೀರದಂತೆ ಶರೀರದಿಂದ ಗಮನ ಹಾಗೂ ಆಗಮನಗಳು ಇವನಿಗೆ ಇರುತ್ತವೆ. ವ್ಯಾಪ್ತವಾದ ಆಕಾಶಾದಿಗಳಿಗೆ ಗಮನಾಗಮನವನ್ನು ಹೇಳಲು ಸಾಧ್ಯವಿಲ್ಲವಷ್ಟೆ?

ಆದ್ದರಿಂದ ಮಧ್ಯಮಪರಿಮಾಣವು ಜೀವನಿಗಿಲ್ಲವೆಂದು ಈಗಾಗಲೇ ನಿರಾಕರಣೆ ಮಾಡಿದ್ದಾಗಿದೆ. ಇವನಿಗೆ ವ್ಯಾಪ್ತತ್ವವೂ ಕೂಡ ಕೂಡುವುದಿಲ್ಲವೆಂದು ಹೇಳಿದಾಗ ಪರಿಶೇಷಾತ್ ಅಣುತ್ವವೇ ಸಿದ್ಧವಾಗುತ್ತದೆಂಬುದು ಸಿದ್ಧಾಂತದ ಅಭಿಪ್ರಾಯ.

ಜೀವನಲ್ಲಿ ಗಮನ, ಆಗಮನ ಮೊದಲಾದವುಗಳು ಇದ್ದರಷ್ಟೆ ವ್ಯಾಪ್ತತ್ವವನ್ನು ಹೇಳಲು ಸಾಧ್ಯವಿಲ್ಲವೆಂದು ಸಿದ್ಧಾಂತಿಗಳು ಹೇಳಬಹುದು. ಆದರೆ ಈ ಗಮನಾಗಮನಗಳು ಜೀವನಲ್ಲಿವೆ ಎಂಬುದು ಹೇಗೆ ಸಿದ್ಧವಾಗಿದೆ? ಎಂಬ ಪ್ರಶ್ನೆಗೆ 'ಸೋಽಸ್ಮಾತ್' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

ವಿವರಣೆ - ಜೀವಃ, ಅಣುರೇವ, ಉತ್ಕ್ರಾಂತಿಗತ್ಯಾಗತಿಮತ್ವಾತ್, ಪತತ್ರಿಶರೀರವತ್. ಪಕ್ಷಿಯ ಶರೀರವು ಗಮನಾಗಮನವುಳ್ಳದ್ದಾಗಿದೆ, ಅಣುವಾಗಿದೆ. ಅದರಂತೆ ಜೀವನು ಗಮನಾಗಮನವುಳ್ಳವನಾದ್ದರಿಂದ ಅಣುವೇ ಆಗಬೇಕು. ಹಕ್ಕಿಯ ಶರೀರದಲ್ಲಿ ಉತ್ಕ್ರಾಂತಿಗತ್ಯಾಗತಿಮತ್ವ ಎಂಬ ಹೇತುವಿದೆ. ಆದರೆ ಅಣುತ್ವವೇ ಇಲ್ಲದ ಕಾರಣ ಸಾಧ್ಯವೈಕಲ್ಯ ಬರುತ್ತದಲ್ಲವೇ? ಎಂಬ ಆಕ್ಷೇಪವು ಬಂದರೆ 'ನ ವ್ಯಾಪ್ತಃ' ಎಂಬುದಾಗಿ ಹೇಳಿರುತ್ತಾರೆ. ಪಕ್ಷಿಯ ಶರೀರದಲ್ಲಿ ವ್ಯಾಪ್ತತ್ವವು ಇಲ್ಲ ಎಂದು ತಿಳಿಯಬೇಕು. ಆದ್ದರಿಂದ ವ್ಯಾಪ್ತತ್ವಾಭಾವವನ್ನು ಸಾಧ್ಯವನ್ನಾಗಿ ವಿವಕ್ಷಿಸಿದಾಗ ಸಾಧ್ಯವೈಕಲ್ಯಕ್ಕೆ ಅವಕಾಶವಿಲ್ಲ.

'ಉತ್ಕ್ರಾಂತಿಗತ್ಯಾಗತಿಮತ್ವ' ಎಂಬ ಹೇತುವಿರಲಿ ಆದರೂ ವ್ಯಾಪ್ತತ್ವವೇ ಇರಲಿ ಎಂಬ ಅಪ್ರಯೋಜಕಾಶಂಕೆಯನ್ನು ಮಾಡಿದರೆ 'ಯದಿ ವ್ಯಾಪ್ತತ್ವಂ ಸ್ಯಾತ್ ತರ್ಹಿ ಉತ್ಕ್ರಾಂತಿಗತ್ಯಾಗತಿಮತ್ವಮಪಿ ನ ಸ್ಯಾತ್' ಎಂಬ ಅನುಕೂಲತರ್ಕ ಇರುವುದರಿಂದ ಅಪ್ರಯೋಜಕಾಶಂಕೆಗೆ ಅವಕಾಶವಿಲ್ಲ.

ಈಗಾಗಲೇ ಸಮಯಪಾದದಲ್ಲಿ ಜೀವನಿಗೆ ಮಧ್ಯಮಪರಿಮಾಣವನ್ನು ನಿರಾಕರಿಸಿದ್ದಾಗಿದೆ. ಪ್ರಕೃತ ಈ ಅಧಿಕರಣದಲ್ಲಿರುವ 'ಉತ್ಕ್ರಾಂತಿಗತ್ಯಾಗತೀನಾಮ್' ಎಂಬ ಸೂತ್ರದಲ್ಲಿ ವಿಭುಪರಿಮಾಣವನ್ನು ನಿರಾಕರಣೆ ಮಾಡಿದಾಗ ಪರಿಶೇಷಾತ್ ಅಣುಪರಿಮಾಣವುಳ್ಳವನೆಂದೇ ಸಿದ್ಧವಾಗುತ್ತದೆ.

## ಬ್ರಹ್ಮಸೂತ್ರ

**ಸೂತ್ರम् – स्वात्मना चोत्तरयोः ॥**

ಜೀವನಿಗೆ ದೇಹದಿಂದ ಉತ್ಕ್ರಮಣ, ಪರಲೋಕಗಮನ ಇವೆಲ್ಲವೂ ಈಶ್ವರನ ಪ್ರೇರಣೆಯಿಂದಷ್ಟೇ ಆಗುತ್ತದೆ. ಹೊರತು, ಸ್ವಾಭಾವಿಕವಾಗಿ ಅಲ್ಲ. ಏಕೆಂದರೆ 'ಸ ಏತೇನೈವ ಸ್ವಾತ್ಮನಾ' 'ಏಷ ಹ್ಯೇನಂ ಜೀವಮ್' ಎಂಬೆರಡು ವಾಕ್ಯಗಳು ಹಾಗೆಯೇ ಹೇಳುತ್ತಿವೆ.

ಉತ್ಕ್ರಾಂತ್ಯಧಿಕರಣ (೨-೩-೧೨)

## ಸೂತ್ರದೀಪಿಕಾ

**सूत्रदीपिका** – च शब्द एवार्थः । जीवः **स्वात्मना** स्वतन्त्रपरमात्मनैव तत्प्रेरणयैवोत्क्रान्त्यादिमान् न स्वतः । कुतः? **उत्तरयोः** सकाशात् 'स एतेनैव स्वात्मना', 'एष ह्येनं जीवम्' इति उत्तरवाक्यबलादित्यर्थः ।।२।।

ಚ ಶಬ್ದವು ಅವಧಾರಣಾರ್ಥದಲ್ಲಿದೆ. ಜೀವನು ಸ್ವಾತ್ಮನಾ = ಸ್ವತಂತ್ರನಾದ ಪರಮಾತ್ಮನಿಂದಲೇ ಅವನ ಪ್ರೇರಣೆಯಿಂದ ಪರಲೋಕಗಮನ ಮೊದಲಾದವುಗಳನ್ನು ಹೊಂದುತ್ತಾನೆ. ಹೊರತು ಸ್ವಾಭಾವಿಕವಾಗಿ ಅಲ್ಲ. ಏಕೆಂದರೆ ಉತ್ತರಯೋಃ = 'ಸ ಏತೇನೈವ ಸ್ವಾತ್ಮನಾ' 'ಏಷ ಹ್ಯೇನಂ ಜೀವಮ್' ಎಂಬೆರಡು ವಾಕ್ಯಗಳ ಬಲದಿಂದ ಈ ವಿಷಯವು ನಿರ್ಧಾರವಾಗುತ್ತಿದೆ.

## ಬ್ರಹ್ಮಸೂತ್ರಭಾಷ್ಯ

**भाष्यम् – तत्र स्वातन्त्र्यप्रतीतेः,**

**'एकः प्रसूयते जन्तुरेक एव प्रमीयते ।**
**एकोऽनुभुङ्क्ते सुकृतमेक एव च दुष्कृतम् ।।'**
**इत्यादेश्च स्वयमेवेति ।**

ಅನುವಾದ - ''ಜೀವಾತ್ಮನ ಕ್ರಿಯೆಗಳು ಸ್ವತಂತ್ರವಾಗಿವೆ'' ಎಂಬ ಪ್ರತೀತಿ ಬರುತ್ತಿದೆ ಏಕೆಂದರೆ ಜೀವನು ಸ್ವತಂತ್ರನಾಗಿ ಹುಟ್ಟುತ್ತಾನೆ. ಸ್ವತಂತ್ರನಾಗಿ ಸಾಯುತ್ತಾನೆ. ಸ್ವತಂತ್ರನಾಗಿಯೇ ಒಳ್ಳೆಯ ಕೆಲಸದ ಫಲವನ್ನು ಕೆಟ್ಟ ಕೆಲಸದ ಫಲವನ್ನು ಅನುಭವಿಸುತ್ತಾನೆ ಹೀಗೆ ಶ್ರುತಿಯು ಜೀವನಲ್ಲಿ ಸ್ವಾತಂತ್ರ್ಯವನ್ನು ಹೇಳುತ್ತಿದೆ.

ಪ್ರತಿಪದಾರ್ಥ -- ತತ್ರ = ಆ ಜೀವನಲ್ಲಿ, ಸ್ವಾತಂತ್ರ್ಯಪ್ರತೀತೇಃ = ಸ್ವಾತಂತ್ರ್ಯವು ಪ್ರತೀತವಾಗುತ್ತಿದೆ. ಜಂತುಃ = ಜೀವನು, ಏಕಃ = ಸ್ವತಂತ್ರನಾಗಿ ಹುಟ್ಟುತ್ತಾನೆ. ಏಕಃ ಏವ = ಸ್ವತಂತ್ರನಾಗಿಯೇ, ಪ್ರಮೀಯತೇ = ಸಾಯುತ್ತಾನೆ. ಏಕಃ = ಸ್ವತಂತ್ರನಾಗಿ, ಸುಕೃತಮ್ = ಪುಣ್ಯವನ್ನು, ಏಕ ಏವ = ಸ್ವತಂತ್ರನಾಗಿಯೇ, ದುಷ್ಕೃತಮ್ = ಪಾಪವನ್ನು, ಅನುಭುಂಕ್ತೇ = ಅನುಭವಿಸುತ್ತಾನೆ. ಇತ್ಯಾದೇಶ್ಚ = ಇವೇ ಮೊದಲಾದ ಆಧಾರಗಳಿಂದ, ಸ್ವಯಮೇವೇತಿ = ಸ್ವತಂತ್ರನಾಗಿದ್ದಾನೆಂದು ತಿಳಿಯುತ್ತದೆ.

**भाष्यम् – अतो वक्ति –**

**।। स्वात्मना चोत्तरयोः ।।२।।**

**'स एतेनैव स्वात्मना परेणेमं गर्भमनुप्रविशति परेण जायते परेण कर्म कुरुते परेण नीयते परेणोन्नीयते तं वा एतमभिवदन्ति स्वात्मा' इति, 'एष ह्यानन्दमादत्ते एष ह्येनं जीवमभिजीवयत्येष उद्गमयत्येष गमयत्येष आगमयति' इत्युत्तरयोर्वाक्ययोः परमात्मनैवोत्क्रान्त्यादयः ।।२।।**

ಅನುವಾದ - ಹೀಗೆ ಪೂರ್ವಪಕ್ಷವು ಪ್ರಾಪ್ತವಾದರೆ ಸೂತ್ರಕಾರರು ಉತ್ತರಿಸುತ್ತಿದ್ದಾರೆ -

ಜೀವಾತ್ಮನು ತನ್ನಲ್ಲಿ ಅಂತರ್ಯಾಮಿಯಾದ ಪರಮಾತ್ಮನಿಂದಲೇ ಗರ್ಭಪ್ರವೇಶ ಮಾಡುತ್ತಾನೆ. ಅವನಿಂದಲೇ ಹುಟ್ಟುತ್ತಾನೆ. ಕಾರ್ಯವನ್ನು ನಿರ್ವಹಿಸುತ್ತಾನೆ. ಲೋಕಾಂತರಗಳಿಗೆ ಹೋಗುತ್ತಾನೆ. ಮೋಕ್ಷವನ್ನು ಕೂಡ ಪಡೆಯುತ್ತಾನೆ. ಅಂಥ ಪರಮಾತ್ಮನನ್ನು ಜ್ಞಾನಿಗಳು ಸ್ವತಂತ್ರನೆಂದು ಕರೆಯುತ್ತಾರೆ.

ಪರಮಾತ್ಮನು ಜೀವರ ಸುಕೃತದ ಫಲವನ್ನು ಸ್ವೀಕರಿಸುತ್ತಾನೆ. ಜೀವನವನ್ನು ನೀಡಿ ರಕ್ಷಿಸುತ್ತಾನೆ. ದೇಹ ಬಿಟ್ಟು ಮೇಲಕ್ಕೆ ಹೋಗುವಂತೆ ಮಾಡುತ್ತಾನೆ. ಪುನಃ ದೇಹಕ್ಕೆ ಪ್ರವೇಶ ಮಾಡುವಂತೆ ಮಾಡುತ್ತಾನೆ. ಪ್ರತಿಯೊಂದು ಕಾರ್ಯಗಳೂ ಕೂಡ ಜೀವನಿಗೆ ಪರಮಾತ್ಮನಿಂದಲೇ ನಡೆಯುತ್ತವೆ. ಆದ್ದರಿಂದ ಜೀವನು ಪರಮಾತ್ಮನ ಅಧೀನನಾಗಿದ್ದಾನೆಂದು ತಿಳಿಯಬೇಕು.

ಪ್ರತಿಪದಾರ್ಥ -- ಸಃ = ಆ ಜೀವನು, ಏತೇನ = ತನ್ನಲ್ಲಿರುವ, ಸ್ವಾತ್ಮನಾ = ಸ್ವರೂಪಭೂತವಾದ ಆನಂದವನ್ನು ಸ್ವೀಕರಿಸುತ್ತಾನೆ ಎಂಬ ವಿಷಯದಲ್ಲಿ ಸ್ವಾತ್ಮಶಬ್ದವಾಚ್ಯನಾದ. ಪರೇಣ = ಒಳಗಿರುವ ಸ್ವತಂತ್ರವಾದ ಪರಮಾತ್ಮನಿಂದಲೇ, ಇಮಂ ಗರ್ಭಂ = ಈ ಗರ್ಭವನ್ನು, ಅನುಪ್ರವಿಶತಿ = ಪ್ರವೇಶಿಸುತ್ತಾನೆ. ಪರೇಣೈವ = ಆ ಪರಮಾತ್ಮನಿಂದಲೇ, ಜಾಯತೇ = ಹುಟ್ಟುತ್ತಾನೆ. ಪರೇಣ = ಪರಮಾತ್ಮನಿಂದ, ಕರ್ಮ = ಪುಣ್ಯಪಾಪ ಕೆಲಸಗಳನ್ನು, ಕುರುತೇ = ಮಾಡುತ್ತಾನೆ. ಪರೇಣ = ಪರಮಾತ್ಮನಿಂದ, ನೀಯತೇ = ಮೇಲೆ ಒಯ್ಯಲ್ಪಡುತ್ತಾನೆ. ಪರೇಣ = ಪರಮಾತ್ಮನಿಂದ, ಉನ್ನೀಯತೇ = ಲೋಕಾಂತರಗಳಿಗೆ ಒಯ್ಯಲ್ಪಡುತ್ತಾನೆ. ತಂ ವಾ ಏತಮ್ = ಆ ಪರಮಾತ್ಮನನ್ನು, ಸ್ವಾತ್ಮಾ ಇತಿ = ಸ್ವಾತ್ಮಾ ಎಂದು, ಅಭಿವದಂತಿ = ಜ್ಞಾನಿಜನರು ತಿಳಿಯುತ್ತಾರೆ ಇತಿ = ಹೀಗೆ ಶ್ರುತಿಯೇ ಹೇಳುತ್ತಿದೆ.

ಏಷ ಹಿ = ಈ ಪರಮಾತ್ಮನು, ಆನಂದಂ = ಜೀವನು ಮಾಡಿದ ಪುಣ್ಯಕರ್ಮದ ಫಲವನ್ನು, ಆದತ್ತೇ = ಸ್ವೀಕರಿಸುತ್ತಾನೆ, ಏಷ ಹಿ = ಈ ಪರಮಾತ್ಮನೇ, ಏನಂ ಜೀವಂ = ಈ ಜೀವನನ್ನು, ಅಭಿಜೀವಯತಿ = ಜೀವನ ನಡೆಸುವಂತೆ ಮಾಡುತ್ತಾನೆ. ಏಷಃ = ಈ ಪರಮಾತ್ಮನು, ಉದ್ಗಮಯತಿ = ದೇಹದಿಂದ ಮೇಲಕ್ಕೆ ಕರೆದುಕೊಂಡು ಹೋಗುತ್ತಾನೆ. ಆಗಮಯತಿ = ಪುನಃ ದೇಹಕ್ಕೆ ಪ್ರವೇಶಿಸುವಂತೆ ಮಾಡುತ್ತಾನೆ. ಇತಿ = ಹೀಗೆ, ಉತ್ತರಯೋಃ ವಾಕ್ಯಯೋಃ = ಹೀಗೆ ಪೌಷ್ಯಾಯಣಶ್ರುತಿಯ ಮುಂದಿನ ಎರಡು ವಾಕ್ಯಗಳನ್ನು ಗಮನಿಸಿದಾಗ, ಪರಮಾತ್ಮನಾ ಏವ = ಪರಮಾತ್ಮನಿಂದಲೇ, ಉತ್ಕ್ರಾಂತ್ಯಾದಯಃ = ಜೀವನ ಉತ್ಕ್ರಾಂತಿ ಮೊದಲಾದ ಕ್ರಿಯೆಗಳು ನಡೆಯುತ್ತವೆ ಎಂಬುದು ಸ್ಪಷ್ಟವಾಗುತ್ತದೆ. ಆದ್ದರಿಂದ ಜೀವಾತ್ಮನು ಅಸ್ವತಂತ್ರನು.

## ತತ್ವಪ್ರಕಾಶಿಕಾ

**तत्वप्रकाशिका – एवमुत्क्रान्त्यादिहेतुभ्यो जीवस्याणुत्वे (स्याव्याप्तत्वे) सिद्धे किञ्चित्प्रसङ्गाचिन्त्ये । किमिदमुत्क्रान्त्यादिकमात्मनः परमेश्वरेण स्वयमेव वेति । किं तावत्प्राप्तमिति तत्राह – तत्रेति ॥**

ಉತ್ಕ್ರಾಂತ್ಯಧಿಕರಣ (೨-೩-೧೨)

ಈ ರೀತಿಯಾಗಿ ಉತ್ಕ್ರಾಂತಿ ಮೊದಲಾದ ಹೇತುಗಳಿಂದ ಜೀವನು ಅಣುವಾಗಿದ್ದಾನೆಂದು ಸಿದ್ಧವಾಯಿತು. ಪ್ರಕೃತ ಪ್ರಾಸಂಗಿಕವಾಗಿ ಮುಂದೆ ಹೇಳುವುದನ್ನು ಚಿಂತನೆ ಮಾಡುತ್ತಿದ್ದಾರೆ. ಈ ಉತ್ಕ್ರಾಂತ್ಯಾದಿಗಳು ಪರಮಾತ್ಮನಿಂದ ಜೀವನಿಗಾಗುತ್ತವೋ ಅಥವಾ ತನ್ನಿಂದಲೇ ಆಗುತ್ತವೋ? ಈ ಎರಡು ಪಕ್ಷಗಳಲ್ಲಿ ಪೂರ್ವಪಕ್ಷಿಗೆ ಸಮ್ಮತವಾದದ್ದನ್ನು 'ತತ್ರ' ಇತ್ಯಾದಿ ಭಾಷ್ಯದಿಂದ ಹೇಳುತ್ತಿದ್ದಾರೆ.

ವಿವರಣೆ - 'ಉತ್ಕ್ರಾಂತಿಗತ್ಯಾಗತಿಮತ್ತ್ವ' ಎಂಬ ಲಿಂಗದಿಂದ ಜೀವನಿಗೆ ಅಣುಪರಿಮಾಣವನ್ನು ಹಿಂದಿನ ಸೂತ್ರದಲ್ಲಿ ಸಮರ್ಥಿಸಿದ್ದಾಯಿತು. ಈ ಸೂತ್ರದಲ್ಲಿ ಪ್ರಾಸಂಗಿಕವಾಗಿ ಈ ಉತ್ಕ್ರಾಂತಿಗತ್ಯಾಗತಿಮತ್ತ್ವವು ಪರಮಾತ್ಮನಿಂದಲೇ ಆಗುತ್ತದೆಂದು ಸಮರ್ಥಿಸುತ್ತಿದ್ದಾರೆ. ಜೀವನಲ್ಲಿರುವ ಗಮನ ಹಾಗೂ ಆಗಮನ ಕ್ರಿಯೆಗಳು ಪರಮಾತ್ಮನ ಅಧೀನವಾದ್ದರಿಂದ ಅಸ್ವತಂತ್ರವಾಗಿವೆ.

**तत्वप्रकाशिका – उदाहृतश्रुतौ जीवस्योत्क्रान्त्यादौ स्वातन्त्र्यप्रतीतेः स्वयमेव तस्योत्क्रान्त्यादि नेश्वरेणेत्यर्थः । अत्र जीवस्योत्क्रान्त्याद्येव श्रूयते न त्वन्याधीनताया विधिर्निषेधो वाऽस्त्यतो नानेन दृढनिर्णय इत्यत आह – एक इति ।।**

ಭಾಷ್ಯದಲ್ಲಿ ಉದಾಹರಿಸಿದ 'ಸೋಽಸ್ಮಾತ್ ಶರೀರಾತ್' ಎಂಬ ಶ್ರುತಿಯಲ್ಲಿ ಜೀವನಲ್ಲಿರುವ ಉತ್ಕ್ರಾಂತ್ಯಾದಿಗಳಿಗೆ ಸ್ವಾತಂತ್ರ್ಯವು ಪ್ರತೀತವಾಗುತ್ತದೆ. ಆದ್ದರಿಂದ ಸ್ವತಃ ತಾನೇ ಉತ್ಕ್ರಾಂತ್ಯಾದಿಗಳನ್ನು ಮಾಡುತ್ತಾನೆ. ಇದಕ್ಕೆ ಈಶ್ವರನ ಅಪೇಕ್ಷೆಯು ಇಲ್ಲವೆಂಬುದು ಪೂರ್ವಪಕ್ಷದ ಅಭಿಪ್ರಾಯ.

ಈ ಶ್ರುತಿಯಲ್ಲಿ ಜೀವನಿಗೆ ಉತ್ಕ್ರಾಂತ್ಯಾದಿಗಳೇ ಶ್ರುತವಾಗುತ್ತಿವೆ. ಮತ್ತೊಂದರ ಅಧೀನವೆಂದು ತಿಳಿಯುತ್ತಿಲ್ಲ. ಹಾಗಾಗಿ ಇನ್ನೊಬ್ಬರ ಅಧೀನವಲ್ಲವೆಂದು ವಿಧಿಯನ್ನಾಗಲಿ, ನಿಷೇಧವನ್ನಾಗಲಿ ಈ ಶ್ರುತಿವಾಕ್ಯವು ಮಾಡುತ್ತಿಲ್ಲ. ಆದ್ದರಿಂದ ಇದರಿಂದ ಯಾವುದೇ ದೃಢನಿರ್ಣಯವು ಸಾಧ್ಯವಿಲ್ಲ ಎಂಬುದನ್ನು 'ಏಕಃ' ಇತ್ಯಾದಿಯಾಗಿ ಪರಿಹರಿಸುತ್ತಿದ್ದಾರೆ.

ವಿವರಣೆ - 'ತತ್ರ ಸ್ವಾತಂತ್ರ್ಯ ಪ್ರತೀತೇಃ' ಎಂಬ ಭಾಷ್ಯದಲ್ಲಿರುವ 'ತತ್ರ' ಎಂಬ ಪದಕ್ಕೆ ಎರಡರ್ಥ. (1) ಹಿಂದಿನ ಸೂತ್ರದಲ್ಲಿರುವ ಉದಾಹರಿಸಲ್ಪಟ್ಟ 'ಸೋಽಸ್ಮಾತ್' ಎಂಬ ಶ್ರುತಿಯಲ್ಲಿ (2) ಜೀವನಿಗೆ ಉತ್ಕ್ರಾಂತ್ಯಾದಿಗಳಿವೆ ಎಂಬ ವಿಷಯದಲ್ಲಿ. 'ಸೋಽಸ್ಮಾತ್' ಎಂಬ ಪೌಷ್ಯಾಯಣ ಶ್ರುತಿಯಲ್ಲಿ ಜೀವನಿಗೆ ಗಮನಾಗಮನಗಳ ವಿಷಯದಲ್ಲಿ ಸ್ವಾತಂತ್ರ್ಯವಿದೆ ಎಂದು ಕಾಣಿಸುತ್ತಿದೆ. ಆದ್ದರಿಂದ ಪರಮಾತ್ಮನಿಂದ ಈ ಗಮನಾಗಮನಗಳು ಆಗುತ್ತವೆಂದು ಒಪ್ಪಬೇಕಾಗಿಲ್ಲ ಎಂಬುದು ಪೂರ್ವಪಕ್ಷ. ಏಕೆಂದರೆ ಈ ಶ್ರುತಿಯಲ್ಲಿ ಜೀವನಿಗೆ ಉತ್ಕ್ರಮಣಾದಿಗಳಷ್ಟೇ ಕೇಳಿಸುತ್ತಿವೆ. ಅದು ಇನ್ನೊಬ್ಬರ ಅಧೀನವೆಂದಾಗಲೀ, ಅಧೀನವಲ್ಲವೆಂದಾಗಲೀ ಹೇಳಿರುವುದಿಲ್ಲ. ಆದ್ದರಿಂದ ಈ ಶ್ರುತಿಯಿಂದ ದೃಢವಾಗಿ ಯಾವುದನ್ನೂ ಕೂಡ ನಿರ್ಣಯ ಮಾಡಲಾಗದು. ಅದಕ್ಕಾಗಿ ಭಾಷ್ಯದಲ್ಲಿ 'ಏಕಃ ಪ್ರಸೂಯತೇ' ಎಂಬ ಮತ್ತೊಂದು ಶ್ರುತಿಯನ್ನು ಉದಾಹರಿಸಿದ್ದಾರೆ. ಜೀವನು ಸ್ವತಂತ್ರವಾಗಿಯೇ ಹುಟ್ಟುತ್ತಾನೆ ಮತ್ತು ನಾಶ ಹೊಂದುತ್ತಾನೆ ಎಂಬುದಾಗಿ ಈ ಶ್ರುತಿವಾಕ್ಯವು ಹೇಳುತ್ತಿದೆ. ಆದ್ದರಿಂದ ಪರಮಾತ್ಮನಿಂದ ಗಮನಾಗಮನಗಳಾಗುತ್ತವೆಂದು ಒಪ್ಪಬೇಕಾಗಿಲ್ಲ ಎಂಬುದು ಪೂರ್ವಪಕ್ಷ.

ಪರಿಪೂರ್ಣಚಂದ್ರಿಕಾ

**तत्वप्रकाशिका – स्मृत्यनुसारेण श्रुतेरपि पराधीनत्वनिषेधोऽर्थ इति भावः । एवं प्राप्ते परिहाराय सूत्रमवतार्य व्याचष्टे – अत इति ।।**

'ಏಕಃ ಪ್ರಸೂಯತೇ' ಎಂಬ ಶ್ರುತಿಗೆ ಅನುಸಾರಿಯಾಗಿ 'ಸೋऽಸ್ಮಾತ್' ಎಂಬ ಶ್ರುತಿಗೂ ಕೂಡ ಪರಮಾತ್ಮನ ಆಧೀನ್ಯದ ನಿಷೇಧ ಎಂಬ ಅರ್ಥವನ್ನು ಹೇಳಬೇಕು.

ಈ ಪೂರ್ವಪಕ್ಷಕ್ಕೆ ಪರಿಹಾರಕವಾಗಿ ಸೂತ್ರಕ್ಕೆ ಅವತಾರಿಕೆ ನೀಡಿ 'ಅತಃ' ಎಂದು ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – नैतच्छ्रुतिगतसाधारण्योक्त्या जीवस्य स्वयमेवोत्क्रान्त्यादीति मन्तव्यं किं तु परमात्मनैव । उत्तरवाक्यद्वये तथोक्तत्वात् । तदनुसारेण साधारणपूर्ववाक्यस्यापि तदर्थत्वोपपत्तेरिति भावः।**

'ಸೋऽಸ್ಮಾತ್' ಎಂಬ ಶ್ರುತಿಯಲ್ಲಿರುವ ಸಾಧಾರಣ ಮಾತಿನಿಂದ ಜೀವನು ಸ್ವತಃ ಉತ್ಕ್ರಾಂತಿಯುಳ್ಳವನೆಂದು ತಿಳಿಯಬಾರದು. ಪರಮಾತ್ಮನಿಂದಲೇ ಉತ್ಕ್ರಾಂತ್ಯಾದಿಗಳಾಗುತ್ತವೆಂದು ತಿಳಿಯಬೇಕು. ಏಕೆಂದರೆ ಮುಂದಿನ ಎರಡು ವಾಕ್ಯಗಳಲ್ಲಿ ಹಾಗೆಯೇ ಹೇಳಲಾಗಿದೆ. ಅದಕ್ಕನುಸಾರಿಯಾಗಿ ಸಾಧಾರಣವಚನಕ್ಕೂ ಕೂಡ ಅಸಾಧಾರಣ ಅರ್ಥವನ್ನು ಹೇಳಬೇಕೆಂಬುದು ಸಿದ್ಧಾಂತದ ಅಭಿಪ್ರಾಯ.

ವಿವರಣೆ - 'ಸೋऽಸ್ಮಾತ್' ಎಂಬ ವಾಕ್ಯದ ಮುಂದೆ 'ಏತೇನ್ವೈವ ಆತ್ಮನಃ' ಎಂಬ ವಾಕ್ಯವು ಹಾಗೂ 'ಏಷ ಹಿ ಆನಂದಮ್' ಎಂಬ ವಾಕ್ಯವು ಇರುತ್ತದೆ. ಮುಂದಿನ ಈ ಎರಡು ವಾಕ್ಯಗಳಲ್ಲಿ ಪರಮಾತ್ಮನಿಂದಲೇ ಗಮನಾಗಮನಗಳು ಉಂಟಾಗುತ್ತವೆಂದು ಅತ್ಯಂತ ನಿಖರವಾಗಿ ಹೇಳಲಾಗಿದೆ. ಅದಕ್ಕನುಗುಣವಾಗಿ ಸ್ವಾತಂತ್ರ್ಯ ಅಸ್ವಾತಂತ್ರ್ಯದ ವಿಷಯದಲ್ಲಿ ಮೌನವಹಿಸಿದ 'ಸೋऽಸ್ಮಾತ್' ಎಂಬ ಹಿಂದಿನ ವಾಕ್ಯಕ್ಕೂ ಪರಮಾತ್ಮನ ಅಧೀನವಾಗಿಯೇ ಗಮನಾಗಮನವನ್ನು ಮಾಡುತ್ತಾನೆಂದು ಅರ್ಥೈಸಬೇಕು.

**तत्वप्रकाशिका – स्मृतिस्तु प्रसवादिदुःखानुभवविषयेति हृदयम् । उन्नीयते मोक्षाय । एष ह्येवेति द्वितीयवाक्यं पूर्ववाक्यस्थस्वात्मशब्दं व्याख्याति ।।**

'ಏಕಃ ಪ್ರಸೂಯತೇ' ಎಂಬ ಶ್ರುತಿಯು ಪ್ರಸವ ಮೊದಲಾದ ದುಃಖಗಳನ್ನು ಜೀವನೊಬ್ಬನೇ ಅನುಭವಿಸುತ್ತಾನೆ ಎಂಬ ವಿಷಯದಲ್ಲಿದೆ ಎಂದು ತಿಳಿಯಬೇಕು. 'ಉನ್ನೀಯತೇ' ಎಂದರೆ ಮೋಕ್ಷಕ್ಕೆ ಕೊಂಡೊಯ್ಯುತ್ತಾನೆ ಎಂದರ್ಥ. 'ಏಷ ಹ್ಯೇವ' ಎಂಬ ವಾಕ್ಯದಲ್ಲಿರುವ ಎರಡನೇ ವಾಕ್ಯವು ಅಥವಾ 'ಸ ಏತೇನ್ವೈವ' ಎಂಬ ಹಿಂದಿನ ವಾಕ್ಯದಲ್ಲಿರುವ 'ಸ್ವಾತ್ಮನಾ' ಎಂಬ ಶಬ್ದವನ್ನು ವ್ಯಾಖ್ಯಾನ ಮಾಡುತ್ತಿದೆ.

ವಿವರಣೆ - 'ಸ ಏತೇನ್ವೈವ ಸ್ವಾತ್ಮನಾ' ಎಂಬಲ್ಲಿರುವ 'ಸ್ವಾತ್ಮನಾ' ಎಂಬ ಶಬ್ದಕ್ಕೆ 'ಆದತ್ತೇ ಇತಿ ಸ್ವಾತ್ಮಾ' ಎಂಬ ನಿಷ್ಪತ್ತಿಯಿಂದ ಆನಂದವನ್ನು ನಿರಂತರ ಸ್ವೀಕಾರ ಮಾಡುತ್ತಾನಾದ್ದರಿಂದ ಪರಮಾತ್ಮನು ಸ್ವಾತ್ಮಾ ಎನಿಸುತ್ತಾನೆಂದು ವಿವರಿಸುತ್ತಿದೆ.

ಉತ್ಕ್ರಾಂತ್ಯಧಿಕರಣ (೨-೩-೧೨)

## ಬ್ರಹ್ಮಸೂತ್ರ

**सूत्रम् – नाणुरतच्छ्रुतेरिति चेन्नेतराधिकारात् ।।**

'ವ್ಯಾಪ್ತಾ ಹ್ಯಾತ್ಮಾನಃ' ಎಂಬ ಶ್ರುತಿಯು ಜೀವರೂ ಕೂಡ ವ್ಯಾಪ್ತರಾಗಿದ್ದಾರೆಂದು ಹೇಳುತ್ತಿರುವುದರಿಂದ ಜೀವರು ಅಣುವಲ್ಲ ಎಂದು ಆಕ್ಷೇಪ ಮಾಡಬಾರದು. ಏಕೆಂದರೆ ಪರಮಾತ್ಮನ ಪ್ರಕರಣದಲ್ಲಿ ಈ ಶ್ರುತಿ ಪ್ರಸಕ್ತವಾಗಿರುವುದರಿಂದ ಜೀವರು ವ್ಯಾಪ್ತರಾಗಿದ್ದಾರೆನ್ನಲು ಆಧಾರವಾಗುವುದಿಲ್ಲ.

## ಸೂತ್ರದೀಪಿಕಾ

**सूत्रदीपिका** – ननु न जीवोऽणुः । कुतः **अतच्छ्रुतेः** 'व्याप्ता ह्यात्मानः' इत्यणुत्व-विरुद्धव्याप्तत्वश्रुतेः श्रवणादिति चेन्न । कुतः ? **इतराधिकारात्** परमात्मप्रकाणात् । तथा च व्याप्तत्वश्रुतेः परमात्मविषयत्वात् नाणुत्वबाधकत्वमित्यर्थः ।।३।।

ನ = ಜೀವನು ಅಣುಸ್ವರೂಪನಲ್ಲ. ಏಕೆಂದರೆ ಅತಃ ಶ್ರುತೇಃ = 'ವ್ಯಾಪ್ತಾ ಹ್ಯಾತ್ಮಾನಃ' ಎಂಬ ಶ್ರುತಿಯು ಅಣುತ್ವಕ್ಕೆ ವಿರುದ್ಧವಾದ ವ್ಯಾಪ್ತತ್ವವನ್ನು ಹೇಳುತ್ತಿದೆ. ಇತಿ ಚೇನ್ನ = ಹೀಗೆ ಆಕ್ಷೇಪ ಮಾಡಬಾರದು. ಏಕೆಂದರೆ ಇತರಾಧಿಕಾರಾತ್ = ಆ ಶ್ರುತಿಯು ಪರಮಾತ್ಮನ ಪ್ರಕರಣದಲ್ಲಿರುವುದರಿಂದ ವ್ಯಾಪ್ತತ್ವಶ್ರುತಿಯು ಪರಮಾತ್ಮನನ್ನೇ ಹೇಳುತ್ತಿದೆ, ಜೀವನಿಗೆ ವ್ಯಾಪ್ತತ್ವವನ್ನು ಹೇಳುತ್ತಿಲ್ಲ. ಆದ್ದರಿಂದ ಜೀವನಲ್ಲಿರುವ ಅಣುತ್ವಕ್ಕೆ ಇದು ಬಾಧಕವಲ್ಲ.

## ಬ್ರಹ್ಮಸೂತ್ರಭಾಷ್ಯ

**भाष्यम् – ।। नाणुरतच्छ्रुतेरिति चेन्नेतराधिकारात् ।।३।।**

**'व्याप्ता ह्यात्मानश्चेतना निर्गुणाश्च' इति व्याप्तिश्रुतेर्नाणुर्जीव इति चेत् –**

ಅನುವಾದ - ಪ್ರತಿಯೊಬ್ಬ ಜೀವರು ಚೇತನಸ್ವರೂಪರೂ, ಪ್ರಾಕೃತಾದಿಗುಣರಹಿತರೂ, ವ್ಯಾಪ್ತರೂ ಆಗಿರುತ್ತಾರೆ. ಹೀಗೆ 'ವ್ಯಾಪ್ತಾ ಹಿ' ಎಂಬ ಶ್ರುತಿಯು ಪ್ರತಿಪಾದನೆ ಮಾಡುತ್ತದೆ. ಜೀವನು ಎಲ್ಲೆಡೆ ವ್ಯಾಪ್ತನಾದ್ದರಿಂದ ಅಣುವಾಗಲು ಸಾಧ್ಯವಿಲ್ಲ. ಇಷ್ಟು ಪೂರ್ವಪಕ್ಷ.

ಪ್ರತಿಪದಾರ್ಥ -- ಚೇತನಾಃ = ಚೇತನರಾದ, ನಿರ್ಗುಣಾಃ = ಪ್ರಾಕೃತಾದಿ ಗುಣರಹಿತರಾದ ಆತ್ಮಾನಃ = ಜೀವರು, ವ್ಯಾಪ್ತಾ ಹಿ = ವ್ಯಾಪ್ತರಾಗಿದ್ದಾರಷ್ಟೇ, ಇತಿ = ಹೀಗೆ, ವ್ಯಾಪ್ತಿಶ್ರುತೇಃ = ಜೀವನು ಎಲ್ಲೆಡೆ ವ್ಯಾಪ್ತನಾಗಿದ್ದಾನೆಂದು ಶ್ರುತಿಯಿರುವುದರಿಂದ, ಜೀವಃ = ಜೀವನು, ನ ಅಣುಃ = ಅಣುಪರಿಮಾಣದವನಲ್ಲ. ಇತಿ ಚೇತ್ = ಇಷ್ಟು ಪೂರ್ವಪಕ್ಷ.

**भाष्यम् – न, स आत्मेदं सृजति स द्विधेदं बिभर्ति अन्तर्बहिश्च । स बहुधेदमनु-प्रविश्याऽत्मनोऽभिनयति । स आत्मा स आत्मानः स ईशः स विष्णुः स परः परोवरीयान्' इति परमात्माधिकारत्वात् ।**

ಅನುವಾದ - ಈ ಪೂರ್ವಪಕ್ಷವು ತಪ್ಪು. ಏಕೆಂದರೆ 'ವ್ಯಾಪ್ತಾಹಿ' ಎಂಬ ಶ್ರುತಿಯು ಪರಮಾತ್ಮನನ್ನು ಪ್ರತಿಪಾದನೆ ಮಾಡುವ ಪ್ರಕರಣದಲ್ಲಿದೆ -

ಪ್ರಪಂಚವನ್ನು ಪರಮಾತ್ಮನೇ ಸೃಷ್ಟಿ ಮಾಡುತ್ತಾನೆ. ಜಗತ್ತಿನ ಒಳಗೂ ಹೊರಗೂ ವ್ಯಾಪ್ತನಾಗಿದ್ದು ಇದನ್ನು ಧಾರಣೆ ಮಾಡಿದ್ದಾನೆ. ಅನೇಕ ರೂಪಗಳನ್ನು ತಾಳಿ ಪ್ರಪಂಚದ ಒಳಗೆ ಪ್ರವೇಶ ಮಾಡಿ ತನಗೆ ಅಭಿಮುಖವಾಗುವಂತೆ ಜಗತ್ತನ್ನು ಮಾಡಿದ್ದಾನೆ. ಮತ್ತು ತನ್ನ ಇಚ್ಛೆಯಂತೆ ಪ್ರೇರಣೆ ಮಾಡುತ್ತಾನೆ. ಆದ್ದರಿಂದಲೇ ಅವನು 'ಆತ್ಮಾ' ಎಂಬ ಏಕವಚನಶಬ್ದದಿಂದ 'ಆತ್ಮಾನಃ' ಎಂಬ ಬಹುವಚನಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ. ಅವನೇ ಸರ್ವಸ್ವಾಮಿ, ಅವನೇ ಮಹಾವಿಷ್ಣು, ಅವನೇ ಉತ್ತಮೋತ್ತಮ. ಹೀಗೆ ಪರಮಾತ್ಮನನ್ನು ಪ್ರತಿಪಾದನೆ ಮಾಡುವ ಕಾಷಾಯಣಶ್ರುತಿಯ ಪ್ರಕರಣದಲ್ಲಿ 'ವ್ಯಾಪ್ತಾ ಹಿ' ಎಂಬ ಶ್ರುತಿಯು ಪ್ರಸಕ್ತವಾಗಿದೆ.

ಪ್ರತಿಪದಾರ್ಥ -- ನ = ಪೂರ್ವಪಕ್ಷವು ತಪ್ಪು. ಸಃ ಆತ್ಮಾ = ಆ ಪರಮಾತ್ಮನೇ ಈ ಜಗತ್ತನ್ನು , ಸೃಜತಿ = ಸೃಷ್ಟಿ ಮಾಡುತ್ತಾನೆ. ಸಃ = ಆ ಪರಮಾತ್ಮನು, ಇದಂ = ಈ ಜಗತ್ತನ್ನು, ಅಂತರ್ಬಹಿಶ್ಚ = ಒಳಗೂ ಹೊರಗೂ, ದ್ವಿಧಾ = ಎರಡು ರೂಪಗಳಿಂದ, ಬಿಭರ್ತಿ = ಧಾರಣೆ ಮಾಡಿದ್ದಾನೆ. ಸಃ = ಆ ಪರಮಾತ್ಮನು, ಬಹುಧಾ = ಅನೇಕ ರೂಪಗಳಿಂದ, ಇದಂ = ಈ ಜಗತ್ತನ್ನು, ಅನುಪ್ರವಿಶ್ಯ = ಪ್ರವೇಶ ಮಾಡಿ, ಆತ್ಮನಃ = ತನಗೆ, ಅಭಿನಯತಿ = ಅಭಿಮುಖವಾಗಿ ಜಗತ್ತನ್ನು ಇಟ್ಟುಕೊಂಡಿದ್ದಾನೆ. ಸಃ = ಆ ಪರಮಾತ್ಮನು, ಆತ್ಮಾ = ಆತ್ಮಾ ಎಂಬ ಏಕವಚನ ಶಬ್ದದಿಂದ, ಸಃ = ಆ ಪರಮಾತ್ಮನು, ಆತ್ಮಾನಃ = 'ಆತ್ಮಾನಃ' ಎಂಬ ಬಹುವಚನಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ. ಸಃ = ಅವನು, ಈಶಃ = ಸ್ವಾಮಿಯು, ಸಃ = ಅವನು, ವಿಷ್ಣುಃ = ಮಹಾವಿಷ್ಣುವು, ಸಃ = ಅವನು, ಪರಃ = ಉತ್ತಮನು, ಪರೋವರೀಯಾನ್ = ಸರ್ವೋತ್ತಮನು, ಇತಿ = ಹೀಗೆ, ಪರಮಾತ್ಮಾಧಿಕಾರತ್ವಾತ್ = ಪರಮಾತ್ಮನನ್ನು ಪ್ರತಿಪಾದನೆ ಮಾಡುವ, 'ವ್ಯಾಪ್ತಾಃ ಹಿ' ಎಂಬ ಶ್ರುತಿಯು ಪ್ರಸಕ್ತವಾಗಿದೆ.

**भाष्यम् –**

**'एकशब्दैर्द्विशब्दैश्च बहुशब्दैश्च केशवः ।**
**एक एवोच्यते वेदैस्तावता नास्य भिन्नता ।।' इति च भविष्यत्पुराणे ।।**
**'तदयं प्राणोऽधितिष्ठति । तदुक्तमृषिणा – आ तेन यातम्'**
**(ऐ.आ. २.३.८.) इत्यादि च ।।३।।**

ಅನುವಾದ - ಭಗವಂತನು ಒಬ್ಬನೇ ಆಗಿದ್ದರೂ ಏಕವಚನ ದ್ವಿವಚನ ಹಾಗೂ ಬಹುವಚನ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆ. ಈ ಕಾರಣದಿಂದ ಅವನಲ್ಲಿ ಅನೇಕತ್ವವನ್ನು ತಿಳಿಯಬಾರದು ಹೀಗೆ ಭವಿಷ್ಯತ್‌ಪುರಾಣವು ಹೇಳಿದೆ.

ಐತರೇಯಶ್ರುತಿಯಲ್ಲಿ ದೇಹವೆಂಬ ರಥದಲ್ಲಿ ಭಗವಂತನು ನೆಲೆಸಿದ್ದಾನೆ. ಹೀಗೆ ಹೇಳಿ ಮುಂದೆ 'ಆ ತೇನ ಯಾತಮ್' ಎಂಬ ಮಂತ್ರದಿಂದ ದ್ವಿವಚನದಿಂದ ಪರಮಾತ್ಮನನ್ನು ಪ್ರಶಂಸೆ ಮಾಡಲಾಗಿದೆ.

ಪ್ರತಿಪದಾರ್ಥ -- ಏಕಶಬ್ದೈಃ = ಏಕವಚನಾಂತ ಶಬ್ದಗಳಿಂದ, ದ್ವಿಶಬ್ದೈಃ = ದ್ವಿವಚನ ಶಬ್ದಗಳಿಂದ, ಚ = ಮತ್ತು, ಬಹುಶಬ್ದೈಶ್ಚ = ಬಹುವಚನಾಂತ ಶಬ್ದಗಳಿಂದ, ಏಕಃ ಏವ = ಒಬ್ಬನೇ ಆದ, ಕೇಶವಃ = ಕೇಶವನು, ಉಚ್ಯತೇ = ಪ್ರತಿಪಾದ್ಯನಾಗಿದ್ದಾನೆ. ತಾವತ್ = ಅಷ್ಟರಿಂದಲೇ, ಅಸ್ಯ = ಪರಮಾತ್ಮನಿಗೆ, ವೇದೈಃ = ವೇದದಿಂದ, ಭಿನ್ನಾತಾ = ಭೇದವು, ನ = ಬರುವುದಿಲ್ಲ. ಇತಿ = ಹೀಗೆ, ಭವಿಷ್ಯತ್‌ಪುರಾಣೇ = ಭವಿಷ್ಯತ್ ಪುರಾಣದಲ್ಲಿ ಹೇಳಲಾಗಿದೆ.

ತದಯಂ = ಆ ಪರಮಾತ್ಮನನ್ನು, ಪ್ರಾಣಃ = ಪ್ರಾಣನು, ಅಧಿತಿಷ್ಠತಿ = ಆಶ್ರಯಿಸಿದ್ದಾನೆ. ತದುಕ್ತಮೃಷಿಣಾ = ಅದನ್ನೇ ಋಷಿಗಳು ಹೀಗೆ ಹೇಳಿದ್ದಾರೆ - ಆ ತೇನ ಯಾತಮ್ ಇತ್ಯಾದಿ ಚ = ಆ ತೇನ ಯಾತಮ್ ಇತ್ಯಾದಿ ಮಂತ್ರದಿಂದ ಪ್ರಶಂಸೆ ಮಾಡಲಾಗಿದೆ.

**तत्वप्रकाशिका – उक्तमाक्षिप्य समादधत्सूत्रमुपन्यस्याऽऽक्षेपांशं तावद् व्याचष्टे – नेति ।। न जीवोऽणुः 'व्याप्ता ह्यात्मानः' इत्यनणुत्वाभिधायकश्रुतेः । उत्क्रान्त्यादिकं तु मनोगतमात्मन्युपचर्यत इति भावः ।**

ಹಿಂದಿನ ಸೂತ್ರದಲ್ಲಿ ಹೇಳಿದ್ದನ್ನು ಆಕ್ಷೇಪ ಮಾಡಿ ಸಮಾಧಾನ ನೀಡುವ ಸೂತ್ರವನ್ನು ಪಠಿಸಿ ಆಕ್ಷೇಪ ಭಾಗವನ್ನು 'ನ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಜೀವನು ಅಣುವಲ್ಲ. 'ವ್ಯಾಪ್ತಾ ಹಿ ಆತ್ಮಾನಃ' ಎಂಬ ಶ್ರುತಿಯು ಅಣುವಲ್ಲವೆಂದು ಹೇಳುತ್ತಿದೆ. ಅಣುತ್ವಸಾಧಕವಾದ ಉತ್ಕ್ರಾಂತಿ ಮೊದಲಾದವುಗಳು ಮನೋಗತವಾದ ಧರ್ಮವಾಗಿವೆ. ಇದನ್ನು ಕೇವಲ ಆತ್ಮನಲ್ಲಿ ಔಪಚಾರಿಕವಾಗಿ ಶ್ರುತಿಯು ಪ್ರಯೋಗಿಸಿದೆ. ಇಷ್ಟು ಅಭಿಪ್ರಾಯ.

ವಿವರಣೆ - ಮನಸ್ಸಿನಲ್ಲಿ ಗಮನಾಗಮನಗಳಿರುವುದು ಅನುಭವಸಿದ್ಧವಾಗಿದೆ. ದೇಹೋತ್ಕ್ರಮಣ ಸಂದರ್ಭದಲ್ಲಿಯೂ ಕೂಡ ಮನಸ್ಸಿನ ಗಮನ ಮತ್ತು ಆಗಮನಗಳನ್ನೇ ವಿವಕ್ಷಿಸಿ ಶ್ರುತಿಯು ಆತ್ಮನಲ್ಲಿ ಗಮನಾಗಮನಗಳಿವೆ ಎಂದು ಔಪಚಾರಿಕವಾಗಿ ಪ್ರಯೋಗ ಮಾಡಿದೆ.

**तत्वप्रकाशिका – परिहारांशं व्याचष्टे – नेति ।। नैतच्छ्रुतिबलेनात्मनो व्याप्तत्वं वक्तव्यम् । अस्याः श्रुतेः परमात्मविषयत्वात् । 'स आत्मेदं सृजति' इत्यत्र परमात्मनः पठितत्वेनास्यास्तत्प्रकरणत्वात् ।**

ಸೂತ್ರದಲ್ಲಿರುವ ಪರಿಹಾರಭಾಗವನ್ನು 'ನ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

'ವ್ಯಾಪ್ತಾ ಹಿ ಆತ್ಮಾನಃ' ಎಂಬ ಶ್ರುತಿಯ ಆಧಾರದಿಂದ ಆತ್ಮನನ್ನು ವ್ಯಾಪ್ತನೆಂದು ಹೇಳಬಾರದು. ಏಕೆಂದರೆ ಈ ಶ್ರುತಿಯು ಪರಮಾತ್ಮ ವಿಷಯಕವಾಗಿದೆ. 'ಸ ಆತ್ಮಾ ಇದಂ ಸೃಜತಿ' ಎಂಬಲ್ಲಿ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆ. ಈ ಶ್ರುತಿಯೂ ಕೂಡ ಅದೇ ಪ್ರಕರಣದಲ್ಲಿರುವುದರಿಂದ ಇದೂ ಕೂಡ ಪರಮಾತ್ಮಪರವೇ ಆಗಿದೆ.

**तत्वप्रकाशिका – एतद्वाक्यस्य विष्णुपरत्वे बहुवचनविरोध इति चेन्न । परमात्मन्येव आत्मान इति बहुवचनश्रवणादिति भावः । अत एवैतच्छ्रुतेर-बाधकत्वेनोत्क्रान्त्यादीनामौपचारिकत्वकल्पनं परास्तम् ।**

ಪ್ರಶ್ನೆ - 'ವ್ಯಾಪ್ತಾ ಹಿ ಆತ್ಮಾನಃ' ಎಂಬ ಶ್ರುತಿವಾಕ್ಯವು ವಿಷ್ಣುಪರವಾದರೆ ಬಹುವಚನವಿರೋಧ ಬರುತ್ತದಲ್ಲವೇ?

ಉತ್ತರ - ಇದು ತಪ್ಪು. ಪರಮಾತ್ಮನಲ್ಲಿಯೇ 'ಆತ್ಮಾನಃ' ಎಂಬ ಬಹುವಚನ ಪ್ರಯೋಗ ಮಾಡುವುದು ಕಂಡಿದೆ. ಈ ಶ್ರುತಿಯು ಬಾಧಕ ಆಗದೇ ಇರುವುದರಿಂದ ಉತ್ಕ್ರಾಂತ್ಯಾದಿಗಳನ್ನು ಔಪಚಾರಿಕವೆಂದು ಕಲ್ಪನೆ ಮಾಡಿದ್ದು ನಿರಾಕೃತವಾಯಿತು.

ವಿವರಣೆ - 'ಸ ಆತ್ಮಾ ಇದಂ ಸೃಜತಿ' ಎಂಬ ಶ್ರುತಿಯಲ್ಲಿ ಪರಮಾತ್ಮನು ಪಠಿತವಾಗಿರುವುದರಿಂದ ಇದು ಪರಮಾತ್ಮಪರವಾಗಿದೆ ಎಂದು ಹೇಳಿದರೆ 'ಆತ್ಮನಃ' ಎಂಬ ಬಹುವಚನವಿರೋಧ ಬರುತ್ತದಲ್ಲವೇ? ಎಂಬುದು ಪ್ರಶ್ನೆ. ಆದರೆ ಪರಮಾತ್ಮನು ಒಬ್ಬನೇ ಆಗಿದ್ದರೂ ಕೂಡ ಬಹುವಚನವು ಆವನಲ್ಲಿ ವಿರುದ್ಧವಾಗುವುದಿಲ್ಲ. ಆವನಲ್ಲಿ ಅನೇಕ ರೂಪವಿರುವುದರಿಂದ ಇದನ್ನು ಕೂಡಿಸಬಹುದು. ಒಂದುವೇಳೆ ಬಹುತ್ವವು ಬಾಧಕವಾಗಿದ್ದರೆ ಉತ್ಕ್ರಾಂತ್ಯಾದಿಗಳಿಗೆ ಜೀವನಲ್ಲಿ ಗೌಣಾರ್ಥವನ್ನು ಕಲ್ಪನೆ ಮಾಡಬಹುದಿತ್ತು. ಆದೂ ಕೂಡ ಈಗ ಪರಿಹಾರವಾಯಿತು.

**तत्वप्रकाशिका – ईश्वरस्य बहुवचनवाच्यत्वे भेदः स्यादित्यत आह – एकेति ।। एकस्मिन्ननेकवचनप्रयोगं सम्प्रतिपन्नस्थले दर्शयति – तदिति ।। अत्र परमात्मन एकस्यैव शरीराधिष्ठातृत्वमुक्त्वा तत्र द्विवचनयुक्तमान्त्रौ प्रमाणयति । श्रुतिरतो निरन्तरेऽपि हरौ बहुरूपत्वापेक्षया बहुवचनं युक्तमिति भावः ।**

ಈಶ್ವರನು ಬಹುವಚನ ಶಬ್ದದಿಂದ ವಾಚ್ಯನಾದರೆ ಒಬ್ಬನಲ್ಲಿಯೇ ಭೇದ ಬರಬೇಕಾಗುತ್ತದಲ್ಲವೇ? ಎಂಬ ಆಶಂಕೆಯನ್ನು 'ಏಕಃ' ಇತ್ಯಾದಿಯಾಗಿ ಪರಿಹಾರ ಮಾಡುತ್ತಿದ್ದಾರೆ. ಒಬ್ಬನಲ್ಲಿಯೇ ಬಹುವಚನ ಪ್ರಯೋಗವನ್ನು ಸಂಪ್ರತಿಪನ್ನಸ್ಥಳದಲ್ಲಿ 'ತತ್' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ.

ಪರಮಾತ್ಮನೊಬ್ಬನೇ ಶರೀರದಲ್ಲಿ ನೆಲೆಸಿದ್ದಾನೆ ಎಂಬುದಾಗಿ ಹೇಳಿ ಈ ವಿಷಯದಲ್ಲಿ ದ್ವಿವಚನದಿಂದ ಕೂಡಿರುವ ಎರಡು ಮಂತ್ರಗಳನ್ನು ಶ್ರುತಿಯು ಪ್ರಮಾಣವನ್ನಾಗಿ ನೀಡುತ್ತಿದೆ. ಆದ್ದರಿಂದ ಭೇದ ಇಲ್ಲದಿದ್ದರೂ ಕೂಡ ಶ್ರೀಹರಿಯಲ್ಲಿ ಬಹುರೂಪತ್ವದ ಅಪೇಕ್ಷೆಯಿಂದ ಬಹುವಚನವು ಯುಕ್ತವಾಗುತ್ತದೆಂಬುದು ಸಿದ್ಧಾಂತದ ಅಭಿಪ್ರಾಯ.

**तत्वप्रकाशिका – हे अश्विनावाशुगती मनसो जवीयसा पटुना तेन शरीराख्येन रथेनायातं शरीरे सन्निहितौ भवतम् । यं रथं युवयोरर्थमेव देवाः कृतवन्तः । यत्सम्बन्धाच्च जीवस्य भगवत्प्रसदेन विद्योत्पन्नं तत्त्वज्ञानं जीवन्मुक्त्यवस्थे च साध्ये भवत इति प्रथममन्त्रार्थः । निमिषश्चित्**

**चक्षुर्निमेषणादपि वां युवयोः सकाशात् यद् 'अवनं' तदस्मदन्तिके भवत्विति द्वितीयार्थः ।।**

ಅಶ್ವ ಶಬ್ದವಾಚ್ಯವಾದ ಎರಡು ವಿಷ್ಣುರೂಪಗಳೇ ವೇಗವಾದ ಮನಸ್ಸಿಗಿಂತಲೂ ವೇಗವನ್ನು ಹೊಂದಿ ಪಟುವಾಗಿರುವ ಶರೀರವೆಂಬ ರಥದಿಂದ ಬನ್ನಿರಿ. ನಮ್ಮ ಶರೀರದಲ್ಲಿ ಸನ್ನಿಹಿತರಾಗಿರಿ. ಯಾವ ರಥವನ್ನು ದೇವತೆಗಳು ನಿಮಗೋಸ್ಕರವೇ ರಚನೆ ಮಾಡಿರುವರೋ, ಯಾವ ಶರೀರದ ಸಂಬಂಧದಿಂದ ಜೀವನಿಗೆ ತತ್ವಜ್ಞಾನ ಹಾಗೂ ಜೀವನ್ಮುಕ್ತಿ ಅವಸ್ಥೆಗಳು ದೊರಕುತ್ತವೋ ಅದು ನಿಮ್ಮ ಎರಡು ರೂಪಗಳಿಂದ ಎಂಬುದು ಮೊದಲನೇ ಮಂತ್ರದ ಅರ್ಥ.

ನಿಮಿಷಶ್ಚಿತ್ = ಕಣ್ಣು ಮಿಟಿಕಿಸುವ ಸಮಯಕ್ಕಿಂತಲೂ ಹೆಚ್ಚಿನ ವೇಗವುಳ್ಳವರು ತಾವು. ಆದ್ದರಿಂದ ನನ್ನ ರಕ್ಷಣೆಗಾಗಿ ತಾವು ಆಗಮಿಸಿರಿ ಎಂಬುದು ಎರಡನೇ ಮಂತ್ರದ ಅರ್ಥ.

ವಿವರಣೆ- ಋಗ್ವೇದದ ಹತ್ತನೆಯ ಮಂಡಲದಲ್ಲಿ ಈ ಶ್ರುತಿಯು ಪ್ರಸಕ್ತವಾಗಿದೆ-

ಆ ತೇನ ಯಾತಂ ಮನಸೋ ಜವೀಯಸಾ ರಥಂ ಯಂ ವಾಂ ಋಭವಶ್ಚಕ್ರುರಶ್ವಿನಾ ।
ಯಸ್ಯ ಯೋಗೇ ದುಹಿತಾ ಜಾಯತೇ ದಿವಾ ಉಭೇ ಅಹನೀ ಸುದಿನೇ ವಿವಸ್ವತಃ ॥

ಈ ಮಂತ್ರದ ಅರ್ಥ ಹೀಗಿದೆ - ಹೇ ಅಶ್ವಿನೌ = ಅತ್ಯಂತ ವೇಗವಾದ ಗಮನವುಳ್ಳದ್ದರಿಂದ ಅಶ್ವಿನೀ ಶಬ್ದವಾಚ್ಯವಾದ ಎರಡು ಭಗವಂತನ ರೂಪಗಳೇ! ಅಥವಾ ಕುದುರೆಯ ಮುಖವನ್ನು ಹೊತ್ತು ಭಗವಂತನ ಎರಡು ಹಯಗ್ರೀವ ರೂಪಗಳೇ! ಮನಸೋಜವೀಯಸಾ = ಮನಸ್ಸಿನ ವೇಗಕ್ಕಿಂತಲೂ ಹೆಚ್ಚಾದ ವೇಗವುಳ್ಳ, ತೇನ = ಶರೀರವೆಂಬ ರಥದಿಂದ, ಆಯಾತಂ = ಆಗಮಿಸಿರಿ, ಶರೀರದಲ್ಲಿ ಸನ್ನಿಹಿತರಾಗಿರಿ. ಯಂ ರಥಂ = ಯಾವ ರಥವನ್ನು, ಋಭವಃ = ದೇವತೆಗಳು, ಚಕ್ರುಃ = ರಚನೆ ಮಾಡಿರುವರೋ, ಯಸ್ಯ ಯೋಗೇ = ಯಾವುದರ ಸಂಬಂಧದಿಂದ, ವಿವಸ್ವತಃ = ವಿವಸ್ವತ್ ಶಬ್ದದಿಂದ ಪ್ರತಿಪಾದ್ಯನಾದ ವಿಷ್ಣುವಿನಿಂದ, ದಿವಃ = ಲಕ್ಷ್ಮಿಯಿಂದ ಅಭಿಮನ್ಯವಾದ ವಿದ್ಯೆಯಿಂದ, ದುಹಿತಾ = ಜನಿಸಿರುವ ಸರಸ್ವತೀದೇವಿಯಿಂದ ಅಭಿಮನ್ಯಮಾನವಾದ ತತ್ವಜ್ಞಾನವು ಉಂಟಾಗುತ್ತದೋ, ಉಭೇ ಅಹನೀ = ಜೀವನ್ಮುಕ್ತಾವಸ್ಥೆ ಹಾಗೂ ಮುಕ್ತಾವಸ್ಥೆ ಎಂಬ ಎರಡು ಅವಸ್ಥೆಗಳು, ಸುದಿನೇ ಸಾಧ್ಯೇ ಭವತಃ = ಒಳ್ಳೆಯ ಸಮಯದಲ್ಲಿ ಹುಟ್ಟುತ್ತವೆ. ಇಷ್ಟು ಮೊದಲನೆಯ ಮಂತ್ರವೆನಿಸಿದ 'ಆತೇನ' ಎಂಬ ಮಂತ್ರದ ಅರ್ಥ.

'ನಿಮಿಷಶ್ಚಜವೀಯಸಾ ರಥೇನಾಯಾತಮಶ್ವಿನಾ ಅಂತಿಷದ್ ಭೂತು ವಾಮವಃ'

ಹೇ ಅಶ್ವಿನೌ = ಎಲೈ ಅಶ್ವಿನಿ ಎನಿಸಿದ ಎರಡು ವಿಷ್ಣುರೂಪಗಳೇ, ನಿಮಿಷಶ್ಚಿತ್= ಕಣ್ಣಿನ ರೆಪ್ಪೆ ಮಿಟಕಿಸುವುದಕ್ಕಿಂತ, ಜವೀಯಸಾ = ಅತ್ಯಂತವಾದ ವೇಗವುಳ್ಳ, ರಥೇನ = ದೇಹವೆಂಬ ರಥದಿಂದ, ಆಯಾತಂ = ಆಗಮಿಸಿರಿ, ವಾಂ = ತಮ್ಮಿಂದ, ಅವಃ = ಯಾವ ರಕ್ಷಣೆಯಾಗುತ್ತದೋ, ಅಂತಿಷತ್ = ನಮ್ಮನ್ನು ಕಾಪಾಡುವಂತದ್ದು, ಭೂತು = ಆಗಲಿ. ಇದು ಎರಡನೇ ಮಂತ್ರದ ಅರ್ಥ.

## ಬ್ರಹ್ಮಸೂತ್ರ

**सूत्रम् – स्वशब्दोन्मानाभ्याञ्च ।।**

ಆತ್ಮ ಶಬ್ದ ಹಾಗೂ ಅಪರಿಮಿತತ್ವವೆಂಬ ಲಿಂಗ. ಇವೆರಡನ್ನು 'ವ್ಯಾಪ್ತಾ ಹ್ಯಾತ್ಮಾನಃ' ಎಂಬ ಶ್ರುತಿ ಹೇಳುತ್ತಿರುವುದರಿಂದ ಪರಮಾತ್ಮನೇ ಆ ಶ್ರುತಿಪ್ರತಿಪಾದ್ಯನಾಗುತ್ತಾನೆ. ಜೀವನಲ್ಲ.

## ಸೂತ್ರದೀಪಿಕಾ

**सूत्रदीपिका** – चः समुच्चये । न केवलं प्रकरणबलाद् व्याप्तत्वश्रुतिर्विष्णुपरा। किन्तर्हि 'एषोऽह्यात्माऽध्युद्गतो मानशक्तेः' इति वाक्यस्थस्वशब्दगृहीत-ब्रह्मवाचकात्मशब्दादुन्मानशब्दितापरिमितत्वलिङ्गाच्च व्याप्तत्वश्रुतिर्विष्णुपरैव न जीवपरेत्यर्थः ।।४।।

'ಚ' ಶಬ್ದವು ಸಮುಚ್ಚಯಾರ್ಥದಲ್ಲಿ ಇರುತ್ತದೆ. ಸ್ವಶಬ್ದೋನ್ಮಾನಾಭ್ಯಾಂ = ಕೇವಲ ಪ್ರಕರಣಬಲದಿಂದಷ್ಟೇ ವ್ಯಾಪ್ತತ್ವಶ್ರುತಿಯು ವಿಷ್ಣುಪರವಲ್ಲ. 'ಏಷೋಽಹ್ಯಾತ್ಮಾಽಧ್ಯುದ್ಗತೋ ಮಾನಶಕ್ತೇಃ' ಎಂಬ ವಾಕ್ಯದಲ್ಲಿರುವ ಸ್ವಶಬ್ದದಿಂದ ಪ್ರತಿಪಾದ್ಯನಾದ ಬ್ರಹ್ಮನೇ ಆತ್ಮಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ. 'ಉನ್ಮಾನ' ಎಂದರೆ ಅಪರಿಮಿತತ್ವ ಎಂದರ್ಥ. ಆತ್ಮಾ ಎಂಬ ಶಬ್ದ ಹಾಗೂ ಅಪರಿಮಿತತ್ವ ಎಂಬೆರಡು ಲಿಂಗಗಳಿಂದ ವ್ಯಾಪ್ತತ್ವಶ್ರುತಿಯು ವಿಷ್ಣುಪರವೇ ಆಗುತ್ತದೆ. ಜೀವಪರವಾಗುವುದಿಲ್ಲ.

## ಬ್ರಹ್ಮಸೂತ್ರಭಾಷ್ಯ

**भाष्यम् – ।। स्वशब्दोन्मानाभ्यां च ।।४।।**

**'एषो ह्यात्माऽध्युद्गतो मानशक्तेस्तथाऽप्यसौ प्रमितिं याति वेदैः ।**
**पूर्णोऽचिन्त्यः सर्ववेदैकयोनिः सर्वाधीशः सर्ववित् सर्वकर्ता ।।'**
**इति वाक्यशेषे आत्मशब्दोन्मानाभ्यां च ।**

ಅನುವಾದ - 'ವ್ಯಾಪ್ತಾ ಹ್ಯಾತ್ಮಾನಃ ಅನುಮಾನಃ' ಎಂಬ ಶ್ರುತಿಯು ಪರಮಾತ್ಮಪರವಾಗಿದೆ. ಏಕೆಂದರೆ ಅದೇ ಪ್ರಕರಣದಲ್ಲಿರುವ ಶ್ರುತಿಯು ಪರಮಾತ್ಮನಲ್ಲಿ ಮಾತ್ರ ಯುಕ್ತವಾಗುವ ಆತ್ಮಶಬ್ದ ಹಾಗೂ ಅಪರಮಿತತ್ವ ಎಂಬ ಧರ್ಮವನ್ನು ಹೇಳುತ್ತಿದೆ -

ಪರಿಮಿತಶಕ್ತಿಯನ್ನು ಮೀರಿದವನಾಗಿದ್ದಾನೆ. ಹಾಗಿದ್ದರೂ ಈ ಪರಮಾತ್ಮನು ವೇದಗಳ ಯಥಾರ್ಥಜ್ಞಾನಕ್ಕೆ ವಿಷಯನಾಗಿದ್ದಾನೆ. ಅಚಿಂತ್ಯನೂ ಸಕಲವೇದಗಳಿಂದ ಮುಖ್ಯಪ್ರತಿಪಾದ್ಯನೂ, ಸಕಲಕ್ಕೆ ಒಡೆಯನೂ, ಎಲ್ಲವನ್ನು ತಿಳಿದವನೂ, ಸಕಲಕ್ಕೆ ಕಾರಣನೂ ಆಗಿದ್ದಾನೆ. ಹೀಗೆ ವಾಕ್ಯಶೇಷದಲ್ಲಿ ಆತ್ಮ ಶಬ್ದ ಹಾಗೂ ಪರಿಮಾಣಾತೀತತ್ವ ಎಂಬ ಧರ್ಮಗಳು ಶ್ರುತವಾದ್ದರಿಂದ ಪರಮಾತ್ಮನಲ್ಲೇ ವ್ಯಾಪ್ತತ್ವವನ್ನು ತಿಳಿಯಬೇಕು.

ಉತ್ಕ್ರಾಂತ್ಯಧಿಕರಣ (೨-೩-೧೨)

ಪ್ರತಿಪದಾರ್ಥ -- ಏಷೋ ಹಿ = ಈ ಪರಮಾತ್ಮನೇ, ಆತ್ಮಾ = ಆತ್ಮಶಬ್ದದಿಂದ ಪ್ರತಿಪಾದ್ಯನು, ಮಾನಶಕ್ತೇಃ = ಚೇತನರಲ್ಲಿರುವ ಪರಿಮಿತಶಕ್ತಿಗಿಂತ, ಅಧ್ಯುದ್ಗತಃ = ಎಲ್ಲವನ್ನು ದಾಟದವನು, ತಥಾಪಿ = ಹಾಗಿದ್ದರೂ, ಅಸೌ = ಈ ಪರಮಾತ್ಮನು, ವೇದ್ಯೈಃ = ವೇದಗಳಿಂದ, ಪ್ರಮಿತಿಂ ಯಾತಿ = ಯಥಾರ್ಥಜ್ಞಾನಕ್ಕೆ ವಿಷಯನಾಗುತ್ತಾನೆ.

ಪೂರ್ಣಃ = ಪರಿಪೂರ್ಣನಾಗಿದ್ದಾನೆ. ಅಚಿಂತ್ಯಃ = ಅವೇದ್ಯನಾಗಿದ್ದಾನೆ. ಸರ್ವ ವೇದೈಕಯೋನಿಃ = ಸಕಲವೇದಗಳಿಂದ ಮುಖ್ಯವಾಗಿ ಪ್ರತಿಪಾದ್ಯನು, ಸರ್ವಾಧೀಶಃ = ಸಕಲಕ್ಕೂ ಒಡೆಯನಾಗಿದ್ದಾನೆ, ಸರ್ವವಿತ್ = ಸರ್ವಜ್ಞನೂ ಆಗಿದ್ದಾನೆ, ಸರ್ವಕರ್ತಾ = ಎಲ್ಲವನ್ನು ಸೃಷ್ಟಿಮಾಡುವವನೂ ಆಗಿದ್ದಾನೆ, ಇತಿ = ಹೀಗೆ, ವಾಕ್ಯಶೇಷೇ = ವಾಕ್ಯಶೇಷದಲ್ಲಿ, ಆತ್ಮಶಬ್ದೋನ್ಮಾನಾಭ್ಯಾಂ ಚ = ಆತ್ಮಶಬ್ದ ಹಾಗೂ ಉನ್ಮಾನತ್ವಲಿಂಗಗಳಿಂದಲೂ ವ್ಯಾಪ್ತಿಶ್ರುತಿಯು ಪರಮಾತ್ಮವಿಷಯಕವೆಂದು ಸಿದ್ಧವಾಗುತ್ತದೆ. ಪರಿಮಾಣಾತೀತತ್ವ = ಪರಿಮಾಣಾತೀತತ್ವ ಎಂಬ ಧರ್ಮಗಳು ಶ್ರುತವಾಗಿವೆ.

भाष्यम् –

'आत्माऽमेयः परं ब्रह्म परानन्दादिकाभिधाः ।
वदन्ति विष्णुमेवैकं नान्यत्राऽसां गतिः क्वचित् ।।'
इति च कौर्मे ।।४।।

ಆತ್ಮಾ, ಅಮೇಯ, ಪರಂಬ್ರಹ್ಮ, ಪರಾನಂದ ಇವೇ ಮೊದಲಾದ ಶಬ್ದಗಳಿಂದ ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಾರೆ. ವಿಷ್ಣುವನ್ನು ಬಿಟ್ಟು ಬೇರೆ ಎಲ್ಲಿಯೂ ಕೂಡ ಈ ಶಬ್ದಗಳಿಗೆ ಮುಖ್ಯವೃತ್ತಿ ಇರುವುದಿಲ್ಲ. ಹೀಗೆ ಕೂರ್ಮಪುರಾಣವು ಹೇಳುತ್ತಿದೆ.

ಪ್ರತಿಪದಾರ್ಥ -- ಆತ್ಮಾ = ಆತ್ಮನು, ಅಮೇಯಃ = ಅಪ್ರಮೇಯನು, ಪರಂಬ್ರಹ್ಮ = ಪರಬ್ರಹ್ಮನು, ಪರಾನಂದಾದಿಕಾಭಿಧಾಃ = ಪರಾನಂದ ಇವೇ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾದ, ವಿಷ್ಣುಮೇವೈಕಂ = ಒಬ್ಬನೇ ವಿಷ್ಣುವನ್ನು, ವದಂತಿ = ಕರೆಯುತ್ತಾರೆ. ಆಸಾಂ = ಈ ಶಬ್ದಗಳಿಗೆ, ಅನ್ಯತ್ರ = ಜೀವಾದಿಗಳಲ್ಲಿ, ಕ್ವಚಿದಪಿ = ಎಲ್ಲಿಯೂ ಕೂಡ ಗತಿಃ = ಮುಖ್ಯಪ್ರತಿಪಾದ್ಯತ್ವವು, ನಾಸ್ತಿ = ಇರುವುದಿಲ್ಲ. ಇತಿ ಚ = ಹೀಗೂ ಕೂಡ, ಕೌರ್ಮೇ = ಕೂರ್ಮಪುರಾಣದಲ್ಲಿ ಹೇಳಲಾಗಿದೆ.

ತತ್ವಪ್ರಕಾಶಿಕಾ

तत्वप्रकाशिका – यदुक्तं व्याप्तिश्रुतिरीश्वरविषया तत्प्रकरणादिति न तद्युक्तम् । प्रकरणमात्रेण दुर्बलेन बहुवचनश्रुतेर्बाधायोगादित्याशङ्कां परिहरत्सूत्रमुपन्यस्य व्याचष्टे – स्वशब्देति ।।

ಹಿಂದಿನ ಸೂತ್ರದಲ್ಲಿ 'ವ್ಯಾಪ್ತಾ ಹಿ ಆತ್ಮಾನಃ' ಎಂಬ ಶ್ರುತಿಯು ಈಶ್ವರ ಪ್ರಕರಣದಲ್ಲಿರುವುದರಿಂದ ಈಶ್ವರನನ್ನೇ ಪ್ರತಿಪಾದನೆ ಮಾಡುತ್ತದೆಂದು ಹೇಳಲಾಯಿತು. ಇದು ಸರಿಯಲ್ಲ. ದುರ್ಬಲವಾದ ಕೇವಲ ಪ್ರಕರಣದಿಂದ ಬಹುವಚನ ಶ್ರುತಿಗೆ ಬಾಧವನ್ನು ಹೇಳುವುದು ಅಯುಕ್ತವಾಗುತ್ತದೆ. ಈ ಆಶಂಕೆಯನ್ನು ಪರಿಹಾರ ಮಾಡುವ ಶ್ರುತಿಯನ್ನು 'ಸ್ವಶಬ್ದ' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಪ್ರಕರಣವಷ್ಟೇ ಅಲ್ಲ. ಶ್ರುತಿಗಳು ಹಾಗೂ ಲಿಂಗಗಳೂ ಸಹ ಆಧಾರವಾಗಿವೆ :-

**तत्वप्रकाशिका – न केवलं प्रकरणबलेनैतच्छ्रुतेरीश्वरपरत्वमुच्यते किं तर्हि वाक्यशेषे श्रुतात्मश्रुतेरपरिमितत्वलिङ्गाच्चेति भावः ।**

ಕೇವಲ ಪ್ರಕರಣದ ಬಲದಿಂದ 'ವ್ಯಾಪ್ತಾ ಹಿ ಆತ್ಮಾನಃ' ಎಂಬ ಶ್ರುತಿಗೆ ಈಶ್ವರಪರತ್ವವನ್ನು ಹೇಳುತ್ತಿಲ್ಲ. ಮತ್ತೇನೆಂದರೆ 'ಏಷೋ ಹಿ ಆತ್ಮಾ' ಎಂಬ ವಾಕ್ಯಶೇಷದಲ್ಲಿ ಆತ್ಮಶ್ರುತಿಯು ಮತ್ತು ಅಪರಿಮಿತತ್ವಲಿಂಗ ಇವುಗಳ ಆಧಾರದಿಂದಲೂ ಕೂಡ ಶ್ರುತಿಗೆ ಈಶ್ವರಪರತ್ವವನ್ನು ಸಮರ್ಥಿಸುತ್ತಿದ್ದೇವೆ ಎಂಬುದು ಸೂತ್ರದ ಅಭಿಪ್ರಾಯ.

ವಿವರಣೆ - 'ಏಷೋ ಹಿ ಆತ್ಮಾ ಅಧ್ಯುದ್ಗತೋ ಮಾನಶಬ್ದೇಃ' ಎಂಬ ಕಾಷಾಯಣ ಶ್ರುತಿವಾಕ್ಯದಲ್ಲಿರುವ ಆತ್ಮ ಶಬ್ದದಿಂದ ಹಾಗೂ ಉನ್ಮಾನ ಎಂಬ ಶಬ್ದದಿಂದ ತಿಳಿಯಲ್ಪಡುವ ಅಪರಿಮಿತ ಲಿಂಗದಿಂದಲೂ 'ಏಷೋ ಹಿ ಆತ್ಮಾ' ಎಂಬ ಶ್ರುತಿಯು ವಿಷ್ಣುಪರವೇ ಆಗಿದೆಯೇ ಹೊರತು ಜೀವಪರವಾಗಿಲ್ಲವೆಂದು ತಿಳಿಯುತ್ತದೆ.

**तत्वप्रकाशिका – मानशक्तेरध्युद्गतः परिमाणातीतः । प्रमितिं याति ज्ञानविषयो भवति । कुत एतच्छ्रुतिलिङ्गयोर्वैष्णवत्वमित्यत आह – आत्मेति ।।**

ಕಾಷಾಯಣಶ್ರುತಿಯಲ್ಲಿರುವ 'ಮಾನಶಕ್ತೇಃ' ಎಂಬ ಪದಕ್ಕೆ ಅಪರಿಮಿತನಾದವನು ಎಂದರ್ಥ. 'ಪ್ರಮಿತಿಂ ಯಾತಿ' ಎಂಬುದಕ್ಕೆ ಜ್ಞಾನವಿಷಯನಾಗುತ್ತಾನೆ ಎಂದರ್ಥ. ಆತ್ಮಶ್ರುತಿ ಹಾಗೂ ಅಪರಿಮಿತತ್ವ ಲಿಂಗಗಳೆರಡು ವಿಷ್ಣುವಿಗೆ ಸಂಬಂಧಪಟ್ಟವು ಎಂದು ಹೇಗೆ ತಿಳಿಯುತ್ತದೆ? ಎಂಬ ಪ್ರಶ್ನೆಗೆ 'ಆತ್ಮಾ' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ.

ವಿವರಣೆ - 'ಆತ್ಮಾ' ಮೊದಲಾದ ಶಬ್ದಗಳು ವಿಷ್ಣುವಿನದ್ದೇ ಆಗಿವೆ. ಜೀವಾದಿಗಳಲ್ಲಿ ಇವು ಸರ್ವಥಾ ಕೂಡುವುದಿಲ್ಲ. ಹೀಗೆ ಕೂರ್ಮಪುರಾಣವು ಹೇಳುತ್ತಿರುವುದರಿಂದ ಆತ್ಮಶ್ರುತಿಯು ವಿಷ್ಣುಪರವೆಂದು ನಿರ್ಣಯವಾಗುತ್ತದೆ. ಅದೇ ರೀತಿಯಾಗಿ 'ಉನ್ಮಾನ' ಶಬ್ದದಿಂದ ತಿಳಿಯುವ ಅಪರಿಮಿತತ್ವಲಿಂಗವೂ ಕೂಡ ವಿಷ್ಣುವಿನ ಅಸಾಧಾರಣಲಿಂಗವಾಗಿದೆ ಎಂದು ಅದೇ ಕೂರ್ಮವಚನವು ಹೇಳುತ್ತಿದೆ.

**तत्वप्रकाशिका – न च मन्तव्यं 'व्याप्ता ह्यात्मानः' इत्यत्रैवात्मशब्दानन्त्ययोः श्रवणात्किं वाक्यशेषग्रहणेनेति । तत्र बहुवचनसमभिव्याहारवाशादन्यार्थताया एव झटिति प्रतिभासात् । वाक्यशेषस्य तु निश्चिततत्वादिति ।।**

ಉತ್ಕ್ರಾಂತ್ಯಧಿಕರಣ (೨-೩-೧೨)

'ವ್ಯಾಪ್ತಾ ಹಿ ಆತ್ಮಾನಃ' ಎಂಬ ಶ್ರುತಿಯಲ್ಲಿ ಆತ್ಮಶಬ್ದ ಹಾಗೂ ಆನಂತ್ಯಗಳು ಕೇಳಿಸುತ್ತಿವೆ. ಆದ್ದರಿಂದ ಇದನ್ನೇ ಆಧಾರವನ್ನಾಗಿ ಹೇಳಬಹುದಿತ್ತು. ಪುನಃ ವಾಕ್ಯಶೇಷವನ್ನೇಕೆ ಗ್ರಹಣ ಮಾಡಿರುವರು? ಎಂದರೆ 'ವ್ಯಾಪ್ತಾ ಹಿ' ಎಂಬ ಶ್ರುತಿಯಲ್ಲಿರುವ ಬಹುವಚನದ ಸಮಭಿವ್ಯಾಹಾರದಿಂದ ಈ ಶ್ರುತಿಯು ಜೀವಪರವೆಂದೇ ಪ್ರತಿಭಾಸವಾಗುತ್ತದೆ. ಆದರೆ ವಾಕ್ಯಶೇಷವನ್ನು ನೋಡಿದಾಗ ಈ ವಾಕ್ಯವು ವಿಷ್ಣುಪರವೆಂದು ನಿಶ್ಚಯವಾಗುತ್ತದೆ.

ವಿವರಣೆ - 'ವ್ಯಾಪ್ತಾ ಹಿ ಆತ್ಮಾನಃ' ಎಂಬ ಶ್ರುತಿಯಲ್ಲಿ ನೇರವಾಗಿಯೇ ವ್ಯಾಪ್ತ ಶಬ್ದ ಹಾಗೂ ಆನಂತ್ಯವು ಕೇಳಿಸುತ್ತಿರುವಾಗ ಪುನಃ 'ಏಷೋ ಹಿ ಆತ್ಮಾ' ಇತ್ಯಾದಿಯಾದ ವಾಕ್ಯಶೇಷವನ್ನೇಕೆ ಉದಾಹರಣೆ ಮಾಡಬೇಕು? ಅಂತಹ ವಾಕ್ಯವನ್ನು ಉಲ್ಲೇಖ ಮಾಡುವ ಈ ಸೂತ್ರವಾದರೂ ಕೂಡ ಏಕೆ ಹೊರಡಬೇಕು? ಎಂಬ ಪ್ರಶ್ನೆಗೆ ಇಲ್ಲಿ ಉತ್ತರಿಸುತ್ತಿದ್ದಾರೆ. 'ವ್ಯಾಪ್ತಾ ಹಿ ಆತ್ಮಾನಃ' ಎಂಬ ಶ್ರುತಿಯನ್ನು ನೋಡಿದಾಗ ಬಹುವಚನವನ್ನು ಕಂಡು ಇದು ಜೀವಪರವಾಗಿರಬಹುದೆಂದು ಆಪಾತತಃ ತೋರುತ್ತದೆ. ಆದರೆ 'ಏಷೋ ಹಿ ಆತ್ಮಾ' ಎಂಬ ವಾಕ್ಯಶೇಷದಲ್ಲಿ ಅಂಥ ಭ್ರಾಮಕವಾದ ಯಾವುದೇ ಪದವಿರುವುದಿಲ್ಲ. ಪೂರ್ಣತ್ವ, ಅಚಿಂತ್ಯತ್ವ, ಸರ್ವವೇದೈಕವೇದ್ಯತ್ವ, ಸರ್ವಾಧೀಶತ್ವ, ಸರ್ವಜ್ಞತ್ವ, ಸರ್ವಕರ್ತೃತ್ವ ಮೊದಲಾದ ಬ್ರಹ್ಮನ ಅಸಾಧಾರಣಧರ್ಮವಿರುವುದರಿಂದ ಈ ಶ್ರುತಿಯು ಬ್ರಹ್ಮಪರವೇ ಆಗಿದೆ ಎಂದು ನಿಶ್ಚಯವಾಗಿದೆ (ಗುರ್ವರ್ಥದೀಪಿಕಾ)

## ಬ್ರಹ್ಮಸೂತ್ರ

**सूत्रम् – अविरोधश्चन्दनवत् ।।**

ಜೀವನು ಅಣುಸ್ವರೂಪನೇ ಆಗಿದ್ದರೂ ಗಂಧದ ಬಿಂದುವಿನಂತೆ ತನ್ನ ಅಂಶಗಳಿಂದ ಶರೀರದಲ್ಲೆಲ್ಲಡೆ ವ್ಯಾಪ್ತನಾಗಿದ್ದಾನೆ.

## ಸೂತ್ರದೀಪಿಕಾ

**सूत्रदीपिका – चन्दनवत्** चन्दनरस इव । यथा चन्दनबिन्दोरेकदेशपतितत्वेऽपि स्वांशैः शरीरव्याप्तिः । तथाऽविरोधः जीवस्याणुत्वेऽपि स्वांशैर्देहव्याप्तौ न विरोध इत्यर्थः ।।५।।

ಚಂದನವತ್ = ಜೀವನು ಅಣುವೇ ಆಗಿದ್ದಾನೆ. ಯಾವ ರೀತಿಯಾಗಿ ಚಂದನದ ಬಿಂದುವು ಒಂದೇ ದೇಹದಲ್ಲಿದ್ದರೂ ತನ್ನ ಅಂಶಗಳಿಂದ ಸುತ್ತಲೂ ವ್ಯಾಪ್ತವಾಗುತ್ತದೋ, ಆದರಂತೆ ಜೀವನು ಶರೀರದಲ್ಲೆಲ್ಲಡೆ ವ್ಯಾಪ್ತನಾಗಿದ್ದಾನೆ. ಆದ್ದರಿಂದ ಅವಿರೋಧಃ = ಜೀವರು ಅಣುವೇ ಆಗಿದ್ದರೂ ತನ್ನ ಅಂಶಗಳಿಂದ ದೇಹದಲ್ಲೆಲ್ಲಡೆ ವ್ಯಾಪಿಸಿದ್ದಾನೆ. ಆದ್ದರಿಂದ ದೇಹವ್ಯಾಪ್ತಿಗೆ ವಿರೋಧವಿರುವುದಿಲ್ಲ.

ಪರಿಪೂರ್ಣಚಂದ್ರಿಕಾ

ಬ್ರಹ್ಮಸೂತ್ರಭಾಷ್ಯ

भाष्यम् – ।। अविरोधश्चन्दनवत् ।।९।।

अणोरपि जीवस्य सर्वशरीरव्याप्तिर्युज्यते । यथा हरिचन्दनविप्रुष एकदेशपतितायाः सर्वशरीरव्याप्तिः ।

'अणुमात्रोऽप्ययं जीवः स्वदेहं व्याप्य तिष्ठति ।
यथा व्याप्य शरीराणि हरिचन्दनविप्रुषः ।।'
इति च ब्रह्माण्डपुराणे ।।९।।

ಅನುವಾದ - ಜೀವನು ಅಣುಸ್ವರೂಪನಾಗಿದ್ದರೂ ಶರೀರದಲ್ಲಿ ಎಲ್ಲೆಡೆಯೂ ವ್ಯಾಪ್ತನಾಗಿರುತ್ತಾನೆ. ಶ್ರೀಗಂಧದ ಒಂದು ಬಿಂದು ದೇಹದ ಒಂದು ಭಾಗದಲ್ಲಿ ಬಿದ್ದರೂ ಸಮಸ್ತ ದೇಹವನ್ನೇ ಸುಗಂಧಮಯವನ್ನಾಗಿ ಮಾಡುತ್ತದೆ.

ಅಣುಸ್ವರೂಪನಾಗಿದ್ದರೂ ಜೀವನು ತನ್ನ ದೇಹದಲ್ಲಿ ವ್ಯಾಪ್ತನಾಗಿ ನಿಂತಿದ್ದಾನೆ. ಹರಿಚಂದನದ ಬಿಂದು ಸಕಲ ಶರೀರವನ್ನು ವ್ಯಾಪಿಸುವಂತೆ. ಹೀಗೆ ಬ್ರಹ್ಮಾಂಡಪುರಾಣವು ಹೇಳಿದೆ.

ಪ್ರತಿಪದಾರ್ಥ -- ಜೀವಸ್ಯ = ಜೀವನಿಗೆ, ಅಣುರಪಿ = ಅಣುತ್ವವಿದ್ದರೂ, ಸರ್ವಶರೀರವ್ಯಾಪ್ತಿಃ = ದೇಹದಲ್ಲಿ ಎಲ್ಲೆಡೆ ಇರುವಿಕೆಯು, ಯುಜ್ಯತೇ = ಯುಕ್ತವಾಗುತ್ತದೆ, ಯಥಾ = ಯಾವ ರೀತಿಯಾಗಿ, ಹರಿಚಂದನವಿಪ್ರುಷಃ = ಶ್ರೀಗಂಧದ ಬಿಂದುವು, ಏಕದೇಶ ಪತಿತಾಯಾಃ = ಶರೀರದ ಒಂದು ಭಾಗದಲ್ಲಿ ಬಿದ್ದರೂ ಕೂಡ, ಸರ್ವಶರೀರವ್ಯಾಪ್ತಿಃ = ಶರೀರದಲ್ಲಿ ಎಲ್ಲೆಡೆಯೂ ವ್ಯಾಪ್ತವಾಗುತ್ತದೆ.

ಅಯಂ = ಈ, ಜೀವಃ = ಜೀವನು, ಅಣುಮಾತ್ರೋಽಪಿ = ಅಣುಸ್ವರೂಪನಾಗಿದ್ದರೂ, ಸ್ವದೇಹಮ್ = ತನ್ನ ದೇಹವನ್ನು, ವ್ಯಾಪ್ಯ = ವ್ಯಾಪಿಸಿ, ತಿಷ್ಠತಿ = ನಿಲ್ಲುತ್ತಾನೆ. ಯಥಾ = ಯಾವ ರೀತಿಯಾಗಿ, ಹರಿಚಂದನವಿಪ್ರುಷಃ = ಶ್ರೀಗಂಧದ ಬಿಂದುವು, ಶರೀರಾಣಿ = ಸಮಸ್ತ ಶರೀರವನ್ನು, ವ್ಯಾಪ್ಯ = ವ್ಯಾಪಿಸಿ, ತಿಷ್ಠತಿ = ಇರುತ್ತದೋ ಹಾಗೆ, ಇತಿ ಚ = ಹೀಗೆ ಬ್ರಹ್ಮಾಂಡಪುರಾಣೇ = ಬ್ರಹ್ಮಾಂಡಪುರಾಣದಲ್ಲಿ ಹೇಳಿದೆ.

तत्वप्रकाशिका – स्यादेतत् । अथापि न जीवस्याणुत्वं युक्तम् । तत्र तत्र परिज्ञानायोगादित्याशङ्कां परिहरत्सूत्रं पठित्वा व्याचष्टे – अविरोध इति।।

ಆಕ್ಷೇಪ - ಹಿಂದೆ ಹೇಳಿದ ಯುಕ್ತಿಯ ಆಧಾರದಿಂದ ಜೀವನಿಗೆ ಅಣುತ್ವವು ಯುಕ್ತವೇ ಆಗುವುದಿಲ್ಲ. ದೇಹದ ಬೇರೆ ಬೇರೆ ಭಾಗದಲ್ಲಿ ಜ್ಞಾನ ಬರುವುದಾದರೂ ಕೂಡ ಜೀವನಿಗೆ ಹೇಗೆ ಸಾಧ್ಯ ? ಈ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು 'ಅವಿರೋಧಃ' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ಹಿಂದೆ ಹೇಳಿದ ಯುಕ್ತಿಯನ್ನು ನಿರಾಸ ಮಾಡುವ ಸೂತ್ರಕ್ಕೆ 'ಸ್ಯಾದೇತತ್' ಎಂಬುದರಿಂದ ಅವತಾರಿಕೆ ನೀಡುತ್ತಿದ್ದಾರೆ.

ಜೀವನು ಅಣುವಾದ್ದರಿಂದ ಶರೀರದ ಒಂದು ಭಾಗದಲ್ಲಿ ಇದ್ದಾನೆ ಸಮಗ್ರ ಶರೀರದಲ್ಲಿ ಇರಲು ಸಾಧ್ಯವಿಲ್ಲ. ಆದ್ದರಿಂದ ಶರೀರದ ಬೇರೆ ಬೇರೆ ಭಾಗದಿಂದ ಜ್ಞಾನವು ಜೀವನಿಗೆ ಹೇಗೆ ಬರಲು ಸಾಧ್ಯ ? ಎಂಬ ಆಶಂಕೆಯು ಪ್ರಾಪ್ತವಾಗುತ್ತದೆ. ಇದರ ಪರಿಹಾರಕ್ಕಾಗಿ ಈ ಸೂತ್ರವು ಹೊರಟಿದೆ.

**तत्वप्रकाशिका – नाणुत्वेऽपि जीवस्य तत्र तत्र परिज्ञानायोगः । अंशैः शरीरे व्याप्तत्वात् एकदेशपतितचन्दनबिन्दोरंशैः शरीरव्याप्तिवदेवेति भावः । प्रतिदृष्टान्तस्यापि सम्भवान्न नियामकं विना दृष्टान्तमात्रेणार्थसिद्धिरित्यत आह – अणुमात्रोऽपीति ।।**

ಜೀವನು ಅಣುವೇ ಆಗಿದ್ದಾನೆ. ಆದರೂ ಕೂಡ ದೇಹದ ಬೇರೆ ಬೇರೆ ಭಾಗಗಳಿಂದ ಜ್ಞಾನ ಬರಲು ಯಾವುದೇ ಆತಂಕವಿಲ್ಲ. ಜೀವನು ತನ್ನ ಅಂಶಗಳಿಂದ ಶರೀರದಲ್ಲಿ ವ್ಯಾಪ್ತನಾಗಿದ್ದಾನೆ. ದೇಹದ ಒಂದು ಏಕದೇಶದಲ್ಲಿ ಬಿದ್ದ ಚಂದನಬಿಂದು ಅಂಶಗಳಿಂದ ಸಂಪೂರ್ಣ ಶರೀರವನ್ನು ವ್ಯಾಪಿಸುವಂತೆ ಜೀವನೂ ಕೂಡ ಸಮಸ್ತ ಶರೀರವನ್ನು ವ್ಯಾಪಿಸಿದ್ದಾನೆ ಎಂದಭಿಪ್ರಾಯ.

ಪ್ರತಿಕೂಲವಾದ ದೃಷ್ಟಾಂತವನ್ನೂ ಕೂಡ ಹೇಳಬಹುದಾದ್ದರಿಂದ ನಿಯಾಮಕವಿಲ್ಲದೇ ಕೇವಲ ದೃಷ್ಟಾಂತದಿಂದ ಅರ್ಥಸಿದ್ಧಿಯಾಗುವುದಿಲ್ಲವಲ್ಲವೇ? ಈ ಪ್ರಶ್ನೆಗೆ 'ಅಣುಮಾತ್ರೋऽಪಿ' ಎಂಬ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

ವಿವರಣೆ - ಜೀವನು ಅಣುರೂಪಿಯೇ ಆಗಿದ್ದಾನೆ. ಆದರೂ ತನ್ನ ಅಂಶಗಳಿಂದ ಶರೀರದಲ್ಲೆಲ್ಲಡೆ ವ್ಯಾಪಿಸಿರುತ್ತಾನೆಂದು ತಿಳಿಯಬೇಕು. ದೇಹದ ಒಂದು ಭಾಗದಲ್ಲಿ ಸುಗಂಧ ದ್ರವ್ಯವನ್ನು ಹಾಕಿಕೊಂಡಾಗ ಸಮಸ್ತ ಶರೀರವೇ ಪರಿಮಳ ಯುಕ್ತವಾಗುವುದು ಅನುಭವಸಿದ್ಧವಾಗಿದೆ. ಆದರಂತೆ ಜೀವನು ದೇಹದ ಒಂದು ಸಣ್ಣ ಭಾಗದಲ್ಲಿ ನೆಲೆಸಿದ್ದರೂ ಕೂಡ ತನ್ನ ಅಂಶಗಳಿಂದ ದೇಹದ ಎಲ್ಲಾ ಭಾಗಗಳಲ್ಲಿಯೂ ವ್ಯಾಪಿಸಿದ್ದಾನೆ. ಆದ್ದರಿಂದ ಯಾವುದೇ ಒಂದು ಅಂಗಗಳಿಂದಲೂ ಕೂಡ ಜೀವನಿಗೆ ಪರಿಜ್ಞಾನ ಉಂಟಾಗಬಹುದು.

ದೇಹದ ಒಂದು ಭಾಗದಲ್ಲಿ ತೈಲವು ಬೀಳುತ್ತದೆ. ಅದು ಸಮಸ್ತ ದೇಹದಲ್ಲಿ ವ್ಯಾಪಿಸುವುದಿಲ್ಲ. ಈ ಪ್ರತಿಕೂಲ ದೃಷ್ಟಾಂತವು ಇರುವುದರಿಂದ ಚಂದನ ಬಿಂದುವಿನ ದೃಷ್ಟಾಂತದಿಂದ ಅಂಶತಃ ವ್ಯಾಪ್ತಿಯನ್ನು ಹೇಗೆ ಹೇಳಲು ಸಾಧ್ಯ ? ಹಾಗೇನಾದರೂ ಹೇಳಬೇಕೆಂದರೆ ನಿಯಾಮಕ ಪ್ರಮಾಣವಿರಬೇಕಲ್ಲವೇ? ಈ ಆಕ್ಷೇಪಕ್ಕೆ ಭಾಷ್ಯದಲ್ಲಿ 'ಅಣುಮಾತ್ರೋऽಪಿ' ಇತ್ಯಾದಿ ವಾಕ್ಯವು ಹೊರಟಿದೆ. ಬ್ರಹ್ಮಾಂಡಪುರಾಣದಲ್ಲಿ ಹರಿಚಂದನದ ದೃಷ್ಟಾಂತದಿಂದಲೇ ಜೀವನಿಗೆ ಅಂಶತಃ ವ್ಯಾಪ್ತಿಯನ್ನು ಹೇಳಲಾಗಿದೆ. ಇದೇ ನಿಯಾಮಕ ಪ್ರಮಾಣವಾಗಿರುವುದರಿಂದ ಚಂದನಬಿಂದುವಿನ ದೃಷ್ಟಾಂತದಿಂದ ಜೀವನಿಗೆ ದೇಹದಲ್ಲಿ ವ್ಯಾಪ್ತಿಯನ್ನು ಹೇಳಬಹುದು.

## ಬ್ರಹ್ಮಸೂತ್ರ

## सूत्रम् – अवस्थितिवैशेष्यादिति चेन्नाभ्युपगमाद्धृदि हि ।।

ಚಂದನದ ಬಿಂದುವು ಶರೀರದಲ್ಲಿ ವ್ಯಾಪ್ತವಾಗಬಹುದು. ಏಕೆಂದರೆ ಒಂದು ಪ್ರದೇಶದಲ್ಲಿ ಸಾಂದ್ರವಾಗಿದ್ದು ಉಳಿದೆಡೆ ವಿರಳವಾಗಿ ಹರಡಬಹುದು. ಆದರೆ ಜೀವನಿಗೆ ಹೀಗೆ ಹೇಳಲು ಸಾಧ್ಯವಿಲ್ಲ. ಈ ಆಕ್ಷೇಪವು ತಪ್ಪು. ಏಕೆಂದರೆ 'ಹೃದಿ ಹ್ಯೇಷಃ ಆತ್ಮಾ' ಎಂಬ ಶ್ರುತಿಯಲ್ಲಿ ಜೀವನೂ ಸಹ ದೇಹದಲ್ಲಿರುವ ಹೃದಯಸ್ಥಾನದಲ್ಲಿ ಸಮ್ಯಗವಸ್ಥಿತನಾಗಿರುತ್ತಾನೆ. ಉಳಿದ ದೇಹದ ಭಾಗಗಳಲ್ಲಿ ಅಸಮೀಚೀನನಾಗಿ ಅವಸ್ಥಿತನಾಗಿರುತ್ತಾನೆಂದು ಅಂಗೀಕರಿಸಲಾಗಿದೆ.

## ಸೂತ್ರದೀಪಿಕಾ

**सूत्रदीपिका** – ननु युक्तं चन्दनबिन्दोः शरीरे व्याप्तत्वम् । कुतः ? **अवस्थितिवैशेष्यात्** देहे कचित्प्रदेशे सम्यगवस्थानसत्त्वात् न तथा जीवस्य तदभावादिति चेन्न । कुतः ? यतः हृदि हि 'हृदि ह्येषः' इति श्रुतिः जीवस्यापि हृदि सम्यगवस्थानमवयवान्तरे त्वसम्यगवस्थानाङ्गीकारादित्यर्थः ।।६।।

ಚಂದನದ ಬಿಂದುವಿಗೆ ಶರೀರದಲ್ಲಿ ವ್ಯಾಪ್ತಿಯನ್ನು ಹೇಳಬಹುದು. ಏಕೆಂದರೆ ಅವಸ್ಥಿತಿವೈಶೇಷ್ಯಾತ್ = ದೇಹದ ಒಂದು ಪ್ರದೇಶದಲ್ಲಿ ಸಾಂದ್ರವಾಗಿ ಇದ್ದು, ಉಳಿದೆಡೆ ವಿರಳವಾಗಿ ಹೊರಡುತ್ತದೆಂದು ಹೇಳಲು ಬರುತ್ತದೆ. ಆದರೆ ಜೀವನಿಗೆ ಹಾಗೇ ಹೇಳಲಾಗದು. ಇತಿಚೇನ್ನ = ಈ ಆಕ್ಷೇಪವು ತಪ್ಪು. ಹಿ = ಏಕೆಂದರೆ, ಹೃದಿ = 'ಹೃದಿ ಹ್ಯೇಷಃ' ಎಂಬ ಶ್ರುತಿಯು ಜೀವನಿಗೆ ಹೃದಯದಲ್ಲಿ ಮಾತ್ರ ಸಮ್ಯಗವಸ್ಥಾನವನ್ನು ಉಳಿದೆಡೆ ಅಸಮ್ಯಗವಸ್ಥಾನವನ್ನು ಹೇಳುತ್ತಿದೆ. ಅಭ್ಯುಪಗಮಾತ್ = ಹೀಗೆ ಅಂಗೀಕರಿಸಿದ್ದರಿಂದ ವಿರೋಧವಿಲ್ಲ.

## भाष्यम् – ।। अवस्थितिवैशेष्यादिति चेन्नाभ्युपगमाद्धृदि हि ।।६।।

**सम्यगसम्यगवस्थानविशेषाद् युज्यते चन्दनस्येति चेत् – न, 'हृदि ह्येष आत्मा' (प्र.३.६.) इति जीवस्यापि तथाऽभ्युपगमात् ।।६।।**

ಅನುವಾದ - ಗಂಧದಲ್ಲಿ ಅನೇಕ ಸೂಕ್ಷ್ಮಕಣಗಳಿವೆ. ಆದ್ದರಿಂದ ಒಂದು ಭಾಗದಲ್ಲಿ ಬಿದ್ದರೂ ಎಲ್ಲೆಡೆಯೂ ಆ ಸೂಕ್ಷ್ಮಕಣಗಳು ವ್ಯಾಪಿಸುತ್ತವೆ. ಆದರೆ ನಿರಂಶನಾದ ಜೀವನಿಗೆ ಇಂಥ ವ್ಯಾಪ್ತಿಯು ಹೇಗೆ ಯುಕ್ತವಾಗುತ್ತದೆ ?

ಈ ಆಕ್ಷೇಪ ತಪ್ಪು. ಏಕೆಂದರೆ 'ಹೃದಿ ಹ್ಯೇಷ ಆತ್ಮಾ' 'ಆತ್ಮನು ಹೃದಯದಲ್ಲಿ ಇದ್ದಾನೆ' ಎಂದು ಒಪ್ಪಿರುವುದರಿಂದ ಜೀವನಿಗೂ ಕೂಡ ದೇಹವ್ಯಾಪ್ತಿಯು ಬರಬಹುದು.

ಪ್ರತಿಪದಾರ್ಥ -- ಸಮ್ಯಗಸಮ್ಯಗವಸ್ಥಾನವಿಶೇಷಾತ್ = ಗಂಧದ ಬಿಂದುವು ಸಾಂಶವಾದ್ದರಿಂದ ಶರೀರದ ಏಕದೇಶದಲ್ಲಿ ಸಮ್ಯಕ್ ಅವಸ್ಥಾನವಿದ್ದರೂ ಬೇರೆಡೆ ಸಮ್ಯಕ್ ಅವಸ್ಥಾನವು ಇರುವುದಿಲ್ಲ. ಆದ್ದರಿಂದ ಚಂದನಸ್ಯ = ಚಂದನಕ್ಕೆ, ಯುಜ್ಯತೇ =

ಸರ್ವಶರೀರವ್ಯಾಪ್ತಿಯು ಯುಕ್ತವಾಗುತ್ತದೆ. ಇತಿ ಚೇತ್ = ಇಷ್ಟು ಆಕ್ಷೇಪ. ಈ ಆಕ್ಷೇಪವು ತಪ್ಪು. ಏಷಃ = ಈ ಆತ್ಮನು, ಹೃದಿ ಹ್ಯೇಷಃ = ಹೃದಯದಲ್ಲೇ ಇದ್ದಾನೆ. ಇತಿ = ಹೀಗೆ ಜೀವಸ್ಯಾಪಿ = ಜೀವನಿಗೂ, ತಥಾ = ಹಾಗೇ ದೇಹವ್ಯಾಪ್ತಿಯನ್ನು, ಅಭ್ಯುಪಗಮಾತ್ = ಅಂಗೀಕರಿಸಲಾಗಿದೆ.

**ತತ್ವಪ್ರಕಾಶಿಕಾ – उक्तमाक्षिप्य समादधत्सूत्रमुपन्यस्यरऽऽक्षेपांशं तावद्याचष्टे – अवस्थितीति ।।**

ಹಿಂದೆ ಹೇಳಿದ್ದನ್ನು ಆಕ್ಷೇಪ ಮಾಡಿ ಸಮಾಧಾನ ನೀಡುವ ಸೂತ್ರವನ್ನು ಪಠಿಸಿ ಆಕ್ಷೇಪ-ಭಾಗವನ್ನು 'ಅವಸ್ಥಿತೀತಿ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಹಿಂದಿನ ಸೂತ್ರದಲ್ಲಿ ಹರಿಚಂದನ ದೃಷ್ಟಾಂತದಿಂದ ಅಣುರೂಪಿಯಾದ ಜೀವನಿಗೆ ದೇಹತಃ ವ್ಯಾಪ್ತಿಯನ್ನು ಹೇಳಲಾಯಿತು. ಆದರೆ ಈ ದೃಷ್ಟಾಂತವೇ ವಿಷಮವಾಗಿದೆ ಎಂದು ಇಲ್ಲಿ ಅಧಿಕಾಕ್ಷೇಪ ಮಾಡಿ ಉತ್ತರಿಸುತ್ತಿದ್ದಾರೆ.

**ತತ್ವಪ್ರಕಾಶಿಕಾ – न चन्दनबिन्दोरिव स्वरूपतदशाभ्यां शरीरव्याप्तिरात्मनः चन्दबिन्दोः शरीरैकदेशे सम्यगवस्थानस्यान्तत्रासम्यगवस्थानस्य चानुभवसिद्धत्वेन तथात्वस्य सम्भवात् । न ह्यात्मनः क्वचिच्छरीरदेशेसम्यगवस्थानं क्वचिदसम्यगवस्थानमस्ति येन तस्य स्वरूपांशाभ्यां शरीरव्याप्तिं प्रतीम इति भावः।**

ಚಂದನ ಬಿಂದುವಿನಂತೆ ಜೀವನಿಗೆ ಸ್ವರೂಪ ಹಾಗೂ ಅಂಶಗಳಿಂದ ಶರೀರದಲ್ಲಿ ವ್ಯಾಪ್ತಿಯನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ ಚಂದನಬಿಂದುವು ಶರೀರದ ಏಕದೇಶದಲ್ಲಿ ಸ್ಪಷ್ಟವಾಗಿ ಇರುತ್ತದೆ. ಉಳಿದ ಭಾಗದಲ್ಲಿ ಸ್ಪಷ್ಟವಾಗಿ ಇರುವುದಿಲ್ಲ. ಇದು ಅನುಭವಸಿದ್ಧವಾಗಿದೆ. ಆದ್ದರಿಂದ ಇದು ಸ್ವರೂಪತಃ ಒಂದುಕಡೆ ಇದ್ದರೂ ಅಂಶಗಳಿಂದ ವ್ಯಾಪ್ತವಾಗಿದೆ. ಆದರೆ ಆತ್ಮನಿಗೆ ಶರೀರದ ಒಂದು ಪ್ರದೇಶದಲ್ಲಿ ಸ್ಪಷ್ಟವಾದ ಸ್ಥಿತಿಯನ್ನು, ಉಳಿದ ಪ್ರದೇಶದಲ್ಲಿ ಅಸ್ಪಷ್ಟವಾದ ಸ್ಥಿತಿಯನ್ನು ಹೇಳಲು ಸಾಧ್ಯವಿಲ್ಲ. ಹಾಗೇನಾದರೂ ಒಂದುಕಡೆ ಸಮ್ಯಗವಸ್ಥಾನವನ್ನು ಹೇಳಿದ್ದಲ್ಲಿ ಸ್ವರೂಪ ಹಾಗೂ ಅಂಶಗಳಿಂದ ಶರೀರವ್ಯಾಪ್ತಿಯನ್ನು ತಿಳಿಯಬಹುದಿತ್ತು. ಇಷ್ಟು ಸೂತ್ರದಲ್ಲಿರುವ ಆಕ್ಷೇಪ ಭಾಗದ ಅಭಿಪ್ರಾಯ.

ವಿವರಣೆ- ಚಂದನಬಿಂದು ಸಾಂಶವಾಗಿದೆ. ಜೀವನು ನಿರಂಶನಾಗಿದ್ದಾನೆ. ಆದ್ದರಿಂದ ಚಂದನಬಿಂದು ಶರೀರದ ಏಕದೇಶದಲ್ಲಿ ಸಮ್ಯಗವಸ್ಥಿತಿಯನ್ನು ಹೊಂದಿದ್ದಾನೆ. ಮತ್ತೊಂದು ದೇಶದಲ್ಲಿ ಸಮ್ಯಗವಸ್ಥಾನವನ್ನು ಹೊಂದಿರುವುದಿಲ್ಲ.

**ತತ್ವಪ್ರಕಾಶಿಕಾ – परिहारांशं व्याचष्टे – नेति ।। न शरीरे सम्यगसम्यगवस्थानाभाव आत्मनो येन दृष्टान्ते वैषम्यं 'हृति ह्येष आत्मा' इति श्रुतेरात्मनोऽपि चन्दनबिन्दुवत्सम्यगवस्थानाभ्युपगमादिति भावः ।।**

ಸೂತ್ರದಲ್ಲಿರುವ ಸಿದ್ಧಾಂತಭಾಗವನ್ನು 'ನ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಶರೀರದಲ್ಲಿ ಒಂದುಕಡೆ ಸಮ್ಯಗವಸ್ಥಾನ ಮತ್ತೊಂದು ಕಡೆ ಸಮ್ಯಗವಸ್ಥಾನದ ಇಲ್ಲದಿರುವಿಕೆ ಎಂದು ಜೀವನಿಗೆ ಹೇಳಲು ಸಾಧ್ಯವಿಲ್ಲ. ಹಾಗೇನಾದರೂ ಒಪ್ಪಿದ್ದರೆ ದೃಷ್ಟಾಂತವು ವಿಷಮವಾಗುತ್ತಿತ್ತು. ಆದರೆ 'ಹೃದಿ ಹ್ಯೇಷ ಆತ್ಮಾ' ಎಂಬ ಶ್ರುತಿಯು ಚಂದನಬಿಂದುವಿನಂತೆ ಆತ್ಮನಿಗೂ ಕೂಡ ಸಮ್ಯಗವಸ್ಥಾನವನ್ನು ಅಂಗೀಕರಿಸಿದೆ ಎಂಬುದು ಸಿದ್ಧಾಂತ ಭಾಗದ ಅಭಿಪ್ರಾಯ.

ವಿವರಣೆ - 'ಹೃದಿ ಹ್ಯೇಷ ಆತ್ಮಾ' ಎಂಬ ಶ್ರುತಿಯ ಆಧಾರದಿಂದ ಚಂದನಬಿಂದುವಿನಂತೆ ಜೀವನೂ ಕೂಡ ಒಂದು ಕಡೆ ಸಮ್ಯಗವಸ್ಥಿತನಾಗಿದ್ದಾನೆ ಮತ್ತೊಂದು ಕಡೆ ಸಮ್ಯಗವಸ್ಥಾನವನ್ನು ಹೊಂದಿರುವುದಿಲ್ಲ ಎಂದು ಹೇಳಬಹುದು. ಆದ್ದರಿಂದ ದೃಷ್ಟಾಂತವು ವಿಷಮವಾಗುವುದಿಲ್ಲ. ಹಾಗಾದರೆ ಯಾವುದು ಅನಿತ್ಯವೋ ಅದು ಅನಿತ್ಯವಾಗಿರುವುದು ಲೋಕದಲ್ಲಿ ಕಂಡಿದೆ. ಆದ್ದರಿಂದ ಜೀವನು ಅನಿತ್ಯನಾಗಬೇಕಲ್ಲವೇ? ಎಂದು ಪ್ರಶ್ನಿಸಬಾರದು. ಅನಿತ್ಯತ್ವಕ್ಕೆ ಸಾಂಶತ್ವವು ಪ್ರಯೋಜಕತ್ವವಲ್ಲ, ಆರಂಭಕವು ಪ್ರಯೋಜಕವಾಗಿದೆ. ಜೀವನಲ್ಲಿ ಆರಂಭಕತ್ವ ಇರುವುದಿಲ್ಲವಾದ್ದರಿಂದ ಅನಿತ್ಯತ್ವವು ಬರುವುದಿಲ್ಲ.

ಎಲ್ಲಾ ಜೀವರೂ ಸಾಂಶರೆಂದು ಹೇಳುವುದು ಈ ಸೂತ್ರಗಳ ಉದ್ದೇಶವಲ್ಲ. ಯಾವ ಜೀವರು ಸಾಂಶರಾಗಿದ್ದಾರೋ ಅವರಿಗೆ ಚಂದನದ ದೃಷ್ಟಾಂತದಂತೆ ದೇಹದಲ್ಲಿ ವ್ಯಾಪ್ತಿಯನ್ನು ಹೇಳಬಹುದೆಂಬ ಪ್ರಮೇಯವನ್ನು ತಿಳಿಯಬೇಕು. ಆದ್ದರಿಂದ ಸಾಂಶರಾದ ದೇವತೆಗಳ ವಿಷಯದಲ್ಲಿ ಮಾತ್ರ ಈ ವಿಷಯಗಳನ್ನು ಅನ್ವಯ ಮಾಡಿಕೊಳ್ಳಬೇಕು. ನಿರಂಶರಾದ ಜೀವರ ವಿಷಯದಲ್ಲಿ ಇದನ್ನು ವಿವಕ್ಷಿಸಬಾರದು.

## ಬ್ರಹ್ಮಸೂತ್ರ

**ಸೂತ್ರಮ್ – गुणाद्वाऽऽलोकवत् ॥**

ಜೀವನು ಅಣುಸ್ವರೂಪನೇ ಆಗಿದ್ದರೂ ದೀಪಪ್ರಕಾಶದಂತೆ ದೇಹದಲ್ಲೆಲ್ಲೆಡೆ ವ್ಯಾಪಿಸಿರುತ್ತಾನೆ. (ದೇವತೆಗಳಿಗೆ ಚಂದನದ ದೃಷ್ಟಾಂತದಿಂದ ಅಂಶತಃ ವ್ಯಾಪ್ತಿಯನ್ನು ಹೇಳಬೇಕು. ನಿರಂಶರಾದ ಜೀವರಿಗೆ ಆಲೋಕದ ದೃಷ್ಟಾಂತದಿಂದ ದೇಹದಲ್ಲಿ ವ್ಯಾಪ್ತಿಯನ್ನು ಹೇಳಬೇಕು).

## ಸೂತ್ರದೀಪಿಕಾ

**सूत्रदीपिका —** वाशब्दः प्रकारान्तरे । आलोकवत् प्रदीपस्येव । यथा दीपस्य प्रभया व्याप्तिः । तद्वदणोरपि जीवस्य । गुणात् प्रकाशगुणात् व्याप्तिर्युज्यत इत्यर्थः । अविरोध इति सूत्रोक्तांशतो व्याप्तिः देवानां, गुणाद्वेति सूत्रोक्तप्रकाशतो व्याप्तिस्तु मनुष्याणामिति विवेको द्रष्टव्यः ।।७।।

ವಾ = ಶಬ್ದವು ಪ್ರಕಾರಂತರದಲ್ಲಿ ಪ್ರಯುಕ್ತವಾಗಿದೆ. ಆಲೋಕವತ್ = ದೀಪಪ್ರಕಾಶದಂತೆ, ಯಾವ ರೀತಿಯಾಗಿ ದೀಪವು ತನ್ನ ಪ್ರಭೆಯಿಂದ ಎಲ್ಲೆಡೆ ವ್ಯಾಪ್ತವಾಗುತ್ತದೋ, ಅದರಂತೆ ಅಣುವಾದ ಜೀವನೂ ಕೂಡ, ಗುಣಾತ್ = ಪ್ರಕಾಶ ಎಂಬ ಗುಣವನ್ನು ಹೊಂದಿರುವ ಕಾರಣ ವ್ಯಾಪ್ತನಾಗಿದ್ದಾನೆ. 'ಅವಿರೋಧಶ್ಚಂದನವತ್'

ಸರ್ವಶರೀರವ್ಯಾಪ್ತಿಯು ಯುಕ್ತವಾಗುತ್ತದೆ. ಇತಿ ಚೇತ್ = ಇಷ್ಟು ಆಕ್ಷೇಪ. ಈ ಆಕ್ಷೇಪವು ತಪ್ಪು. ಏಷಃ = ಈ ಆತ್ಮನು, ಹೃದಿ ಹ್ಯೇಷಃ = ಹೃದಯದಲ್ಲೇ ಇದ್ದಾನೆ. ಇತಿ = ಹೀಗೆ ಜೀವಸ್ಯಾಪಿ = ಜೀವನಿಗೂ, ತಥಾ = ಹಾಗೇ ದೇಹವ್ಯಾಪ್ತಿಯನ್ನು, ಅಭ್ಯುಪಗಮಾತ್ = ಅಂಗೀಕರಿಸಲಾಗಿದೆ.

**ತತ್ವಪ್ರಕಾಶಿಕಾ – उक्तमाक्षिप्य समादधत्सूत्रमुपन्यस्यरऽऽक्षेपांशं तावद्व्याचष्टे – अवस्थितीति ।।**

ಹಿಂದೆ ಹೇಳಿದ್ದನ್ನು ಆಕ್ಷೇಪ ಮಾಡಿ ಸಮಾಧಾನ ನೀಡುವ ಸೂತ್ರವನ್ನು ಪಠಿಸಿ ಆಕ್ಷೇಪ-ಭಾಗವನ್ನು 'ಅವಸ್ಥಿತೀತಿ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಹಿಂದಿನ ಸೂತ್ರದಲ್ಲಿ ಹರಿಚಂದನ ದೃಷ್ಟಾಂತದಿಂದ ಅಣುರೂಪಿಯಾದ ಜೀವನಿಗೆ ದೇಹತಃ ವ್ಯಾಪ್ತಿಯನ್ನು ಹೇಳಲಾಯಿತು. ಆದರೆ ಈ ದೃಷ್ಟಾಂತವೇ ವಿಷಮವಾಗಿದೆ ಎಂದು ಇಲ್ಲಿ ಅಧಿಕಾಕ್ಷೇಪ ಮಾಡಿ ಉತ್ತರಿಸುತ್ತಿದ್ದಾರೆ.

**ತತ್ವಪ್ರಕಾಶಿಕಾ – न चन्दनबिन्दोरिव स्वरूपतदशाभ्यां शरीरव्याप्तिरात्मनः चन्दबिन्दोः शरीरैकदेशे सम्यगवस्थानस्यान्तत्रासम्यगवस्थानस्य चानुभवसिद्धत्वेन तथात्वस्य सम्भवात् । न त्वात्मनः क्वचिच्छरीरदेशेसम्यगवस्थानं क्वचिदसम्यगवस्थानमस्ति येन तस्य स्वरूपांशाभ्यां शरीरव्याप्तिं प्रतीम इति भावः।**

ಚಂದನ ಬಿಂದುವಿನಂತೆ ಜೀವನಿಗೆ ಸ್ವರೂಪ ಹಾಗೂ ಅಂಶಗಳಿಂದ ಶರೀರದಲ್ಲಿ ವ್ಯಾಪ್ತಿಯನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ ಚಂದನಬಿಂದುವು ಶರೀರದ ಏಕದೇಶದಲ್ಲಿ ಸ್ಪಷ್ಟವಾಗಿ ಇರುತ್ತದೆ. ಉಳಿದ ಭಾಗದಲ್ಲಿ ಸ್ಪಷ್ಟವಾಗಿ ಇರುವುದಿಲ್ಲ. ಇದು ಅನುಭವಸಿದ್ಧವಾಗಿದೆ. ಆದ್ದರಿಂದ ಇದು ಸ್ವರೂಪತಃ ಒಂದುಕಡೆ ಇದ್ದರೂ ಅಂಶಗಳಿಂದ ವ್ಯಾಪ್ತವಾಗಿದೆ. ಆದರೆ ಆತ್ಮನಿಗೆ ಶರೀರದ ಒಂದು ಪ್ರದೇಶದಲ್ಲಿ ಸ್ಪಷ್ಟವಾದ ಸ್ಥಿತಿಯನ್ನು, ಉಳಿದ ಪ್ರದೇಶದಲ್ಲಿ ಅಸ್ಪಷ್ಟವಾದ ಸ್ಥಿತಿಯನ್ನು ಹೇಳಲು ಸಾಧ್ಯವಿಲ್ಲ. ಹಾಗೇನಾದರೂ ಒಂದುಕಡೆ ಸಮ್ಯಗವಸ್ಥಾನವನ್ನು ಹೇಳಿದ್ದಲ್ಲಿ ಸ್ವರೂಪ ಹಾಗೂ ಅಂಶಗಳಿಂದ ಶರೀರವ್ಯಾಪ್ತಿಯನ್ನು ತಿಳಿಯಬಹುದಿತ್ತು. ಇಷ್ಟು ಸೂತ್ರದಲ್ಲಿರುವ ಆಕ್ಷೇಪ ಭಾಗದ ಅಭಿಪ್ರಾಯ.

ವಿವರಣೆ- ಚಂದನಬಿಂದು ಸಾಂಶವಾಗಿದೆ. ಜೀವನು ನಿರಂಶನಾಗಿದ್ದಾನೆ. ಆದ್ದರಿಂದ ಚಂದನಬಿಂದು ಶರೀರದ ಏಕದೇಶದಲ್ಲಿ ಸಮ್ಯಗವಸ್ಥಿತಿಯನ್ನು ಹೊಂದಿದ್ದಾನೆ. ಮತ್ತೊಂದು ದೇಶದಲ್ಲಿ ಸಮ್ಯಗವಸ್ಥಾನವನ್ನು ಹೊಂದಿರುವುದಿಲ್ಲ.

**ತತ್ವಪ್ರಕಾಶಿಕಾ – परिहारांशं व्याचष्टे – नेति ।। न शरीरे सम्यगसम्यगवस्थानाभाव आत्मनो येन दृष्टान्ते वैषम्यं 'हृति ह्येष आत्मा' इति श्रुतेरात्मनोऽपि चन्दनबिन्दुवत्सम्यगवस्थानाभ्युपगमादिति भावः ।।**

ಪರಿಪೂರ್ಣಚಂದ್ರಿಕಾ

ಸೂತ್ರದಲ್ಲಿರುವ ಸಿದ್ಧಾಂತಭಾಗವನ್ನು 'ನ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಶರೀರದಲ್ಲಿ ಒಂದುಕಡೆ ಸಮ್ಯಗವಸ್ಥಾನ ಮತ್ತೊಂದು ಕಡೆ ಸಮ್ಯಗವಸ್ಥಾನದ ಇಲ್ಲದಿರುವಿಕೆ ಎಂದು ಜೀವನಿಗೆ ಹೇಳಲು ಸಾಧ್ಯವಿಲ್ಲ. ಹಾಗೇನಾದರೂ ಒಪ್ಪಿದ್ದರೆ ದೃಷ್ಟಾಂತವು ವಿಷಮವಾಗುತ್ತಿತ್ತು. ಆದರೆ 'ಹೃದಿ ಹ್ಯೇಷ ಆತ್ಮಾ' ಎಂಬ ಶ್ರುತಿಯು ಚಂದನಬಿಂದುವಿನಂತೆ ಆತ್ಮನಿಗೂ ಕೂಡ ಸಮ್ಯಗವಸ್ಥಾನವನ್ನು ಅಂಗೀಕರಿಸಿದೆ ಎಂಬುದು ಸಿದ್ಧಾಂತ ಭಾಗದ ಅಭಿಪ್ರಾಯ.

ವಿವರಣೆ - 'ಹೃದಿ ಹ್ಯೇಷ ಆತ್ಮಾ' ಎಂಬ ಶ್ರುತಿಯ ಆಧಾರದಿಂದ ಚಂದನಬಿಂದುವಿನಂತೆ ಜೀವನೂ ಕೂಡ ಒಂದು ಕಡೆ ಸಮ್ಯಗವಸ್ಥಿತನಾಗಿದ್ದಾನೆ ಮತ್ತೊಂದು ಕಡೆ ಸಮ್ಯಗವಸ್ಥಾನವನ್ನು ಹೊಂದಿರುವುದಿಲ್ಲ ಎಂದು ಹೇಳಬಹುದು. ಆದ್ದರಿಂದ ದೃಷ್ಟಾಂತವು ವಿಷಮವಾಗುವುದಿಲ್ಲ. ಹಾಗಾದರೆ ಯಾವುದು ಅನಿತ್ಯವೋ ಅದು ಅನಿತ್ಯವಾಗಿರುವುದು ಲೋಕದಲ್ಲಿ ಕಂಡಿದೆ. ಆದ್ದರಿಂದ ಜೀವನು ಅನಿತ್ಯನಾಗಬೇಕಲ್ಲವೇ? ಎಂದು ಪ್ರಶ್ನಿಸಬಾರದು. ಅನಿತ್ಯತ್ವಕ್ಕೆ ಸಾಂಶತ್ವವು ಪ್ರಯೋಜಕತ್ವವಲ್ಲ. ಆರಂಭಕವು ಪ್ರಯೋಜಕವಾಗಿದೆ. ಜೀವನಲ್ಲಿ ಆರಂಭಕತ್ವ ಇರುವುದಿಲ್ಲವಾದ್ದರಿಂದ ಅನಿತ್ಯತ್ವವು ಬರುವುದಿಲ್ಲ.

ಎಲ್ಲಾ ಜೀವರೂ ಸಾಂಶರೆಂದು ಹೇಳುವುದು ಈ ಸೂತ್ರಗಳ ಉದ್ದೇಶವಲ್ಲ. ಯಾವ ಜೀವರು ಸಾಂಶರಾಗಿದ್ದಾರೋ ಅವರಿಗೆ ಚಂದನದ ದೃಷ್ಟಾಂತದಂತೆ ದೇಹದಲ್ಲಿ ವ್ಯಾಪ್ತಿಯನ್ನು ಹೇಳಬಹುದೆಂಬ ಪ್ರಮೇಯವನ್ನು ತಿಳಿಯಬೇಕು. ಆದ್ದರಿಂದ ಸಾಂಶರಾದ ದೇವತೆಗಳ ವಿಷಯದಲ್ಲಿ ಮಾತ್ರ ಈ ವಿಷಯಗಳನ್ನು ಅನ್ವಯ ಮಾಡಿಕೊಳ್ಳಬೇಕು. ನಿರಂಶರಾದ ಜೀವರ ವಿಷಯದಲ್ಲಿ ಇದನ್ನು ವಿವಕ್ಷಿಸಬಾರದು.

## ಬ್ರಹ್ಮಸೂತ್ರ

**सूत्रम् – गुणाद्वाऽऽलोकवत् ।।**

ಜೀವನು ಅಣುಸ್ವರೂಪನೇ ಆಗಿದ್ದರೂ ದೀಪಪ್ರಕಾಶದಂತೆ ದೇಹದಲ್ಲೆಲ್ಲೆಡೆ ವ್ಯಾಪಿಸಿರುತ್ತಾನೆ. (ದೇವತೆಗಳಿಗೆ ಚಂದನದ ದೃಷ್ಟಾಂತದಿಂದ ಅಂಶತಃ ವ್ಯಾಪ್ತಿಯನ್ನು ಹೇಳಬೇಕು. ನಿರಂಶರಾದ ಜೀವರಿಗೆ ಆಲೋಕದ ದೃಷ್ಟಾಂತದಿಂದ ದೇಹದಲ್ಲಿ ವ್ಯಾಪ್ತಿಯನ್ನು ಹೇಳಬೇಕು).

## ಸೂತ್ರದೀಪಿಕಾ

**सूत्रदीपिका — वाशब्दः** प्रकारान्तरे । **आलोकवत्** प्रदीपस्येव । यथा दीपस्य प्रभया व्याप्तिः । तद्वदणोरपि जीवस्य । **गुणात्** प्रकाशगुणात् व्याप्तिर्युज्यत इत्यर्थः । अविरोध इति सूत्रोक्तांशतो व्याप्तिः देवानां, गुणाद्वेति सूत्रोक्तप्रकाशतो व्याप्तिस्तु मनुष्याणामिति विवेको द्रष्टव्यः ।।७।।

ವಾ = ಶಬ್ದವು ಪ್ರಕಾರಂತರದಲ್ಲಿ ಪ್ರಯುಕ್ತವಾಗಿದೆ. ಆಲೋಕವತ್ = ದೀಪಪ್ರಕಾಶದಂತೆ, ಯಾವ ರೀತಿಯಾಗಿ ದೀಪವು ತನ್ನ ಪ್ರಭೆಯಿಂದ ಎಲ್ಲೆಡೆ ವ್ಯಾಪ್ತವಾಗುತ್ತದೋ, ಅದರಂತೆ ಅಣುವಾದ ಜೀವನೂ ಕೂಡ, ಗುಣಾತ್ = ಪ್ರಕಾಶ ಎಂಬ ಗುಣವನ್ನು ಹೊಂದಿರುವ ಕಾರಣ ವ್ಯಾಪ್ತನಾಗಿದ್ದಾನೆ. 'ಅವಿರೋಧಶ್ಚಂದನವತ್'

ಉತ್ಕ್ರಾಂತ್ಯಧಿಕರಣ (೨-೩-೧೨)

ಎಂಬ ಸೂತ್ರದಲ್ಲಿ ಅವಿರೋಧ ಎಂಬ ಪದವನ್ನು ಪ್ರಯೋಗ ಮಾಡಿದ್ದರಿಂದ ಅಂಶತಃ ವ್ಯಾಪ್ತಿಯನ್ನು ದೇವತೆಗಳ ವಿಷಯದಲ್ಲಿ ಆಲೋಕದಂತೆ ಪ್ರಕಾಶತಃ ವ್ಯಾಪ್ತಿಯನ್ನು ನಿರಂಶರಾದ ಮನುಷ್ಯರ ವಿಷಯದಲ್ಲಿ ತಿಳಿದುಕೊಳ್ಳಬೇಕು.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ಉತ್ಕ್ರಾಂತ್ಯಧಿಕರಣವು ಮುಗಿಯಿತು.

## ಬ್ರಹ್ಮಸೂತ್ರಭಾಷ್ಯ

**भाष्यम् – ।। गुणाद् वाऽऽलोकवत् ।।७।।**

**यथाऽऽलोकस्य प्रकाशगुणेन व्याप्तिर्ज्योतीरूपेणाव्याप्तिः एवं चिद्गुणेन व्याप्तिर्जीवरूपेणाव्याप्तिरिति वा ।**

ಅನುವಾದ - ದೀಪದಲ್ಲಿ ಪ್ರಕಾಶ ಎಂಬ ಗುಣ ತುಂಬಿದೆ. ದೀಪವು ಸ್ವರೂಪತಃ ಒಂದೇ ಕಡೆ ಇದ್ದರೂ ಪ್ರಕಾಶತಃ ಸುತ್ತಮುತ್ತಲು ಪ್ರವೇಶಿಸಿದೆ. ಅದರಂತೆ ಜೀವನು ಚೈತನ್ಯವೆಂಬ ಗುಣದಿಂದ ದೇಹದಲ್ಲೆಲ್ಲೆಡೆ ವ್ಯಾಪ್ತನಾಗಿದ್ದಾನೆ. ಜೀವರೂಪದಿಂದ ಹೃದಯದಲ್ಲಷ್ಟೇ ಇರುತ್ತಾನೆ. ಹೀಗೆ ಜೀವನಿಗೆ ವ್ಯಾಪ್ತಿ ಹಾಗೂ ವ್ಯಾಪ್ತಿಯಿಲ್ಲದಿರುವಿಕೆಯು ಯುಕ್ತವಾಗುತ್ತದೆ.

ಪ್ರತಿಪದಾರ್ಥ -- ಆಲೋಕವು ಪ್ರಕಾಶ ಎಂಬ ಗುಣದಿಂದ ಎಲ್ಲೆಡೆ ಹರಡಿರುತ್ತದೆ. ಅದರ ಸ್ವರೂಪ ಮಾತ್ರ ಒಂದೇ ಕಡೆ ಇರುತ್ತದೆ. ಅದರಂತೆ ಜೀವನೂ ಕೂಡ ಸ್ವರೂಪತಃ ಹೃದಯದಲ್ಲಿ ಮಾತ್ರವಿದ್ದರೂ ಅವನ ಪ್ರಕಾಶವು ದೇಹದಲ್ಲಿ ಎಲ್ಲೆಡೆ ವ್ಯಾಪ್ತವಾಗಿದೆ. ಆದ್ದರಿಂದ ನಿರಂಶನಾದರೂ ದೇಹದಲ್ಲಿ ಚಿದ್‌ರೂಪದಿಂದ ವ್ಯಾಪ್ತಿಯನ್ನು ಜೀವರೂಪದಿಂದ ಅವ್ಯಾಪ್ತಿಯನ್ನು ಉಪಪಾದನೆ ಮಾಡಬಹುದು - ಯಥಾ = ಯಾವ ರೀತಿಯಾಗಿ, ಆಲೋಕಸ್ಯ = ದೀಪಕ್ಕೆ, ಪ್ರಕಾಶಗುಣೇನ = ಪ್ರಕಾಶ ಎಂಬ ಗುಣದಿಂದ, ವ್ಯಾಪ್ತಿಃ = ವ್ಯಾಪ್ತಿಯು, ಜ್ಯೋತಿರೂಪೇಣ = ಜ್ಯೋತಿ ಎಂಬ ರೂಪದಿಂದ, ಅವ್ಯಾಪ್ತಿಃ = ಅವ್ಯಾಪ್ತಿಯು ಇರುತ್ತದೋ, ಏವಂ = ಹಾಗೆಯೇ, ಚಿದ್ಗುಣೇನ = ಚಿತ್‌ಸ್ವರೂಪದಿಂದ, ವ್ಯಾಪ್ತಿಃ = ವ್ಯಾಪ್ತಿ ಇರುತ್ತದೆ. ಜೀವರೂಪೇಣ = ಸ್ವರೂಪಾಂಶದಿಂದ, ಅವ್ಯಾಪ್ತಿಃ = ವ್ಯಾಪ್ತಿಯು ಇರುವುದಿಲ್ಲ. ಇತಿವಾ = ಹೀಗೆಯೂ ಸಮಾಧಾನ ತಿಳಿಯಬಹುದು.

**भाष्यम् – स्कान्दे च –**

**'असम्यक् सम्यगिति च ह्यवस्थाभेदतस्सुराः ।**
**व्याप्त्यव्याप्तियुतास्त्वन्ये चिद्गुणेनैव नान्यथा ।**
**चिद्गुणस्य स्वरूपत्वात् तद्व्याप्तिश्चेति युज्यते ।**
**श्क्तियोगात् सुराणां तु विविधा च व्यवस्थितिः ।।' इति ।।७।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये उत्क्रान्त्यधिकरणम् ।। १२ ।।**

ಸ್ಕಾಂದ ಪುರಾಣವು ಜೀವನ ಬಗ್ಗೆ ವ್ಯಾಪ್ತಿ ಹಾಗೂ ವ್ಯಾಪ್ತಿಯ ಇಲ್ಲದಿರುವಿಕೆಯನ್ನು ಹೀಗೆ ವ್ಯವಸ್ಥೆ ಮಾಡಿದೆ -

ದೇವತೆಗಳು ಸಮ್ಯಕ್‌ರೂಪದಿಂದ ಇದ್ದರೂ ಅಸಮ್ಯಕ್‌ರೂಪದಿಂದ ಎಲ್ಲೆಡೆ ಇರುತ್ತಾರೆ. (ಅಂಶಿರೂಪದಿಂದ ಒಂದೇ ಕಡೆ ಇದ್ದರು ಅಂಶರೂಪದಿಂದ ಎಲ್ಲೆಡೆ ಇರುತ್ತಾರೆ.) ಹೀಗೆ ಎರಡು ಬಗೆಯ ವ್ಯವಸ್ಥೆಯಿದೆ. ಅದೇ ರೀತಿಯಲ್ಲಿ ಬೇರೆ ಜೀವರು ಚಿತ್ ಸ್ವರೂಪದಿಂದ ಎಲ್ಲೆಡೆ ವ್ಯಾಪ್ತರಾಗಿರುತ್ತಾರೆ. ಅಂಶದಿಂದ ವ್ಯಾಪ್ತಿಯು ಅವರಿಗೆ ಇರುವುದಿಲ್ಲ. ಚಿತ್ ಸ್ವರೂಪವು ಜೀವರ ಸ್ವರೂಪವೇ ಆಗಿರುವುದರಿಂದ ಜೀವನ ಪ್ರಕಾಶ ಮಾತ್ರ ದೇಹದ ಎಲ್ಲೆಡೆ ವ್ಯಾಪ್ತವಾಗಿರುವುದರಿಂದ ಜೀವನು ವ್ಯಾಪ್ತನಾಗಿದ್ದಾನೆಂಬುದು ಉಪಪನ್ನವಾಗುತ್ತದೆ. ದೇವತೆಗಳಿಗೆ ಯೋಗ್ಯತಾನುಸಾರವಾಗಿ ಅಂಶರೂಪದಲ್ಲೂ ಮೂಲರೂಪದ ಹೆಚ್ಚು ಹೆಚ್ಚು ಸಾಮರ್ಥ್ಯಗಳು ಪ್ರಕಟವಾಗುತ್ತವೆ.

ಪ್ರತಿಪದಾರ್ಥ -- ಸ್ಕಾಂದೇಚ = ಸ್ಕಂದಪುರಾಣದಲ್ಲಿ ಹೀಗೆ ಹೇಳಿದೆ - ಸುರಾಃ = ದೇವತೆಗಳು, ವ್ಯವಸ್ಥಾಭೇದಾತಃ = ಎರಡು ಬಗೆಯ ವ್ಯವಸ್ಥೆಯಿಂದ, ಅಸಮ್ಯಕ್ = ಅಂಶರೂಪದಿಂದ ಎಲ್ಲಡೆ ವ್ಯಾಪ್ತರಾಗಿ, ಸಮ್ಯಕ್ = ಸ್ವರೂಪಾಂಶದಿಂದ ಒಂದು ಕಡೆ ಮಾತ್ರ ಇರುವವರಾಗಿ, ವ್ಯಾಪ್ತ್ಯವ್ಯಾಪ್ತಿಯುತಾಃ = ವ್ಯಾಪ್ತರೆಂದು ಅವ್ಯಾಪ್ತರೆಂದು ಕರೆಸಿಕೊಳ್ಳುತ್ತಾರೆ. ಅನ್ಯೇತು = ಬೇರೆ ಜೀವರಾದರು, ಚಿದ್‌ಗುಣೇನೈವ = ಚಿತ್ ಪ್ರಕಾಶದಿಂದಲೇ ವ್ಯಾಪ್ತರು, ನಾನ್ಯಥಾ = ಅಂಶತಃ ವ್ಯಾಪ್ತಿ ಇಲ್ಲದವರು ಆಗಿರುತ್ತಾರೆ. ಚಿದ್ಗುಣಸ್ಯ = ಚಿತ್‌ಪ್ರಕಾಶವು, ಸ್ವರೂಪತ್ವಾತ್ = ಜೀವನ ಸ್ವರೂಪವಾದ್ದರಿಂದ, ತದ್ವ್ಯಾಪ್ತಿಶ್ಚ = ಜೀವನು ವ್ಯಾಪ್ತನಾಗಿದ್ದಾನೆಂಬುದು, ಯುಜ್ಯತೇ = ಯುಕ್ತವಾಗುತ್ತದೆ. ಸುರಾಣಾಂ ತು = ದೇವತೆಗಳಲ್ಲಾದರೂ, ಶಕ್ತಿಯೋಗಾತ್ = ಶಕ್ತಿಯಿರುವುದರಿಂದ ಯೋಗ್ಯತಾನುಸಾರವಾಗಿ, ವಿವಿಧಾ = ಅನೇಕ ಪ್ರಕಾರದಲ್ಲಿ, ವ್ಯವಸ್ಥಿತಿಃ = ಶಕ್ತ್ಯಭಿವ್ಯಕ್ತಿಯ ವ್ಯವಸ್ಥೆಯು ಇರುತ್ತದೆ.

ಇಲ್ಲಿಗೆ ಉತ್ಕ್ರಾಂತ್ಯಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

## ತತ್ವಪ್ರಕಾಶಿಕಾ

**तत्वप्रकाशिका – एवं स्वरूपतदंशाभ्यामात्मनः शरीरव्याप्त्यव्याप्ती सदृष्टान्तमुक्त्वा प्रकारान्तरेणापि तदुपपादकं सूत्रं पठित्वा व्याचष्टे – गुणाद्वेति ।।**

ಹಿಂದಿನ ಸೂತ್ರದಲ್ಲಿ ಸ್ವರೂಪ ಹಾಗೂ ಅಂಶಗಳಿಂದ ಜೀವನಿಗೆ ಶರೀರದಲ್ಲಿ ವ್ಯಾಪ್ತಿ ಮತ್ತು ಅವ್ಯಾಪ್ತಿಗಳನ್ನು ದೃಷ್ಟಾಂತದ ಮೂಲಕವಾಗಿ ಸಮರ್ಥಿಸಿದ್ದಾಯಿತು. ಪ್ರಕೃತ ಮತ್ತೊಂದು ಪ್ರಕಾರದಿಂದಲೂ ವ್ಯಾಪ್ತಿ ಮತ್ತು ಅವ್ಯಾಪ್ತಿಯನ್ನು ಉಪಪಾದನೆ ಮಾಡಲು 'ಗುಣಾದ್ವಾ' ಇತ್ಯಾದಿಯಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ಹಿಂದಿನ ಸೂತ್ರದಲ್ಲಿ ಚಂದನ ಬಿಂದುವಿನ ದೃಷ್ಟಾಂತದಿಂದ ಜೀವನಿಗೆ ಅಂಶದಿಂದ ವ್ಯಾಪ್ತಿಯನ್ನು ಸಮರ್ಥಿಸಲಾಯಿತು. ಈ ಸೂತ್ರದಲ್ಲಿ ದೀಪದ ದೃಷ್ಟಾಂತದಿಂದ ಸಮಸ್ತಶರೀರದಲ್ಲಿ ವ್ಯಾಪ್ತಿಯನ್ನು ಸಮರ್ಥಿಸುತ್ತಿದ್ದಾರೆ.

**तत्वप्रकाशिका – अणोरपि जीवस्य शरीरव्याप्तिश्चिद्गुणस्य व्याप्तत्वेनोपपद्यते। नच गुणिनोऽणुत्वेन गुणस्य व्याप्तिरयुक्ता । आलोकवदुपपत्तेरिति भावः ।**

ಜೀವನು ಅಣುವೇ ಆಗಿದ್ದಾನೆ. ಆದರೂ ಕೂಡ ಶರೀರದಲ್ಲಿ ಇವನ ಚಿದ್ಗುಣವು ವ್ಯಾಪ್ತವಾಗಿರುವುದರಿಂದ ಹೇಳಬಹುದು. ಗುಣಿಯಾದ ಜೀವನು ಅಣುವಾಗಿರುವುದರಿಂದ ಚಿದ್ಗುಣವೂ ಕೂಡ ಅಣುವೇ ಆಗಬೇಕು. ವ್ಯಾಪ್ತವಾಗಲು ಸಾಧ್ಯವಿಲ್ಲ ಎನ್ನುವುದು ಅಯುಕ್ತ. ದೀಪದ ದೃಷ್ಟಾಂತದಂತೆ ಇದು ಉಪಪನ್ನವಾಗುತ್ತದೆ.

ವಿವರಣೆ - ಚಿದ್ಗುಣ ಎಂಬ ಪದಕ್ಕೆ ಜ್ಞಾನಾಪರಪರ್ಯಾಯ ಪ್ರಕಾಶರೂಪಗುಣ ಎಂದರ್ಥ. ಜ್ಞಾನವೆನಿಸಿದ ಪ್ರಕಾಶವೆಂಬ ಗುಣವೂ ವ್ಯಾಪ್ತವಾಗಿದೆ ಎಂಬುದು ಇದರ ಅಭಿಪ್ರಾಯ. ಗುಣಿಯಾದ ದೀಪವು ವ್ಯಾಪ್ತವಾಗದಿದ್ದರೂ ಅದರ ಗುಣವೆನಿಸಿದ ಆಲೋಕವು ಮನೆಯಲ್ಲಿ ಎಲ್ಲೆಡೆಯೂ ವ್ಯಾಪ್ತವಾಗಿರುತ್ತದೆ. ಅದರಂತೆ ಗುಣಿಯಾದ ಜೀವನು ದೇಹದ ಹೃದಯಸ್ಥಾನದಲ್ಲಷ್ಟೇ ಇರುತ್ತಾನೆ. ಇವನ ಪ್ರಕಾಶವು ದೇಹದ ಪ್ರತಿಯೊಂದು ಅಂಗಾಂಗಗಳಲ್ಲಿಯೂ ವ್ಯಾಪ್ತವಾಗಿದೆ ಎಂದು ತಿಳಿಯಬೇಕು.

ಗುಣ ಹಾಗೂ ಗುಣಿಗಳಿಗೆ ಅಭೇದವೇ ಇರುತ್ತದೆ. ಆದ್ದರಿಂದ ಗುಣಿಯು ಅಣುವಾದರೆ ಗುಣವೂ ಕೂಡ ಅಣುವೇ ಆಗಬೇಕಲ್ಲವೇ? ಎಂಬುದು ಆಕ್ಷೇಪದ ಅಭಿಪ್ರಾಯ. ಆದರೆ ದೀಪ ಹಾಗೂ ದೀಪದ ಬೆಳಕು ಇವೆರಡಕ್ಕೆ ಸವಿಶೇಷಾಭೇದವನ್ನು ಒಪ್ಪಿರುವುದರಿಂದ ಈ ವಿರೋಧವನ್ನು ನಾವು ಪರಿಹಾರ ಮಾಡುತ್ತೇವೆ. ಅದರಂತೆ ಜೀವ ಹಾಗೂ ಜೀವನ ಪ್ರಕಾಶಕ್ಕೆ ಸವಿಶೇಷಾಭೇದವನ್ನು ಒಪ್ಪಿದಾಗ ಗುಣಿಯಾದ ಜೀವನು ಅಣುವಾಗಿದ್ದರೂ ಗುಣಭೂತವಾದ ಅವನ ಪ್ರಕಾಶವು ವ್ಯಾಪ್ತವಾಗಬಹುದು.

**तत्वप्रकाशिका – नन्वालोकस्य द्रव्यत्वात्कथं गुणत्वमुच्यत इति । मैवम् । तद्द्रव्यत्वे मानाभावात् । रूपित्वं मानमिति चेन्न । तेन घटादिरूपस्यैव प्रतीयमानत्वात् । न हि व्योम्नि वर्तमानस्य प्रकाशस्य रूपं गृह्यते ।**

ಪ್ರಶ್ನೆ - ಆಲೋಕವು ದ್ರವ್ಯವಾದ್ದರಿಂದ ಗುಣವೆಂದು ಹೇಗೆ ಹೇಳುತ್ತೀರಿ?

ಉತ್ತರ - ಆಲೋಕವು ದ್ರವ್ಯವೆನ್ನಲು ಪ್ರಮಾಣವಿಲ್ಲ.

ಪ್ರಶ್ನೆ - 'ಆಲೋಕಃ ದ್ರವ್ಯಂ ರೂಪಿತ್ವಾತ್' ಎಂಬ ಅನುಮಾನವು ಪ್ರಮಾಣವಾಗಿದೆಯಲ್ಲವೇ?

ಉತ್ತರ - ಇದು ತಪ್ಪು. ಆಲೋಕದಿಂದ ಘಟಾದಿರೂಪಗಳು ತೋರುತ್ತವೆ, ಆಲೋಕದ ರೂಪವು ತೋರುವುದಿಲ್ಲ. ಆದ್ದರಿಂದ ರೂಪಿತ್ವಹೇತುವಿಗೆ ಅಸಿದ್ಧಿದೋಷವು ಬರುತ್ತದೆ. ಮತ್ತು ಆಲೋಕದಲ್ಲಿ ರೂಪವಿದ್ದರೆ ಆಕಾಶದಲ್ಲಿರುವ ಪ್ರಕಾಶದ ರೂಪವೂ ಕೂಡ ಕಾಣಬೇಕಿತ್ತು. ಆದರೆ ಕಾಣಿಸುತ್ತಿಲ್ಲವಾದ್ದರಿಂದ ಆಲೋಕಕ್ಕೆ ರೂಪವಿಲ್ಲ.

ವಿವರಣೆ - ಯಾವುದು ದ್ರವ್ಯವೋ ಅದು ರೂಪವುಳ್ಳದ್ದಾಗಿರುತ್ತದೆ. ಆಲೋಕವು ರೂಪವುಳ್ಳದ್ದರಿಂದ ದ್ರವ್ಯವಾಗಬೇಕೆಂಬುದು ಪ್ರಶ್ನೆಯ ಅಭಿಪ್ರಾಯ. ಆದರೆ ಆಲೋಕವು ರೂಪವುಳ್ಳದ್ದೇ

ಅಲ್ಲವೆಂದು ಉತ್ತರಿಸುತ್ತಿದ್ದಾರೆ. ಒಂದುವೇಳೆ ಆಲೋಕಕ್ಕೆ ರೂಪವಿದ್ದರೆ ಘಟದ ರೂಪವು ಹೇಗೆ ಕಾಣಿಸುತ್ತದೋ ಅದರಂತೆ ಆಲೋಕದ ರೂಪವೂ ಕೂಡ ಪ್ರತ್ಯೇಕವಾಗಿ ಕಾಣಿಸಬೇಕಿತ್ತು. ಆದರೆ ಆಕಾಶದಲ್ಲಿರುವ ಪ್ರಕಾಶದ ರೂಪವು ಯಾರಿಗೂ ಕಾಣಿಸುತ್ತಿಲ್ಲ.

ಸೂರ್ಯನ ಬೆಳಕಿನಲ್ಲಿ ಕೆಂಪುಬಣ್ಣವು ಕಾಣಿಸುತ್ತಿದೆಯಲ್ಲವೇ? ಎಂದು ಪ್ರಶ್ನೆ ಬರುತ್ತದೆ. ಆದರೆ ತಾರ್ಕಿಕರ ಸಿದ್ಧಾಂತದಲ್ಲಿ ಸೂರ್ಯನ ಪ್ರಭೆಯು ಭಾಸ್ವರ- ಶುಕ್ಲರೂಪವುಳ್ಳದ್ದೇ ಹೊರತು ರಕ್ತರೂಪವುಳ್ಳದ್ದಲ್ಲ. ಆದ್ದರಿಂದ ಘಟದ ಮೇಲೆ ಸೂರ್ಯನ ಪ್ರಭೆಯು ಬಿದ್ದರೆ ಘಟದಲ್ಲಿರುವ ರೂಪವು ಕಾಣಿಸುತ್ತಿದೆಯೇ ಹೊರತು ಪ್ರಭೆಯಲ್ಲಿರುವ ರೂಪವು ಕಾಣಿಸುವುದಿಲ್ಲ.

**तत्वप्रकाशिका – दीपं विहाय वृत्तिः प्रमाणमिति चेन्न । तस्य द्रव्यत्वसाधकताविवादात् । तर्हि कुतस्तद्गुणत्वमिति चेन्न । तदनुविधानादिनैवेति ब्रूमः ।**

ಪ್ರಶ್ನೆ - ಆಲೋಕವು ದೀಪವನ್ನು ಬಿಟ್ಟು ಇರುವುದೇ ದ್ರವ್ಯವೆನ್ನಲು ಪ್ರಮಾಣವಾಗಿದೆ.

ಉತ್ತರ - ಇದು ತಪ್ಪು. ದೀಪವನ್ನು ಬಿಟ್ಟಿರುವಿಕೆಯು ದ್ರವ್ಯತ್ವ ಸಾಧಕವೆನ್ನಲು ವಿವಾದವಿದೆ.

ಪ್ರಶ್ನೆ - ಹಾಗಾದರೆ ಆಲೋಕವು ದೀಪದ ಗುಣವೆನ್ನಲು ಏನು ಸಾಧಕ?

ಉತ್ತರ - ದೀಪಾನ್ವಯವ್ಯತಿರೇಕನುವಿಧಾನವೇ ದೀಪದ ಗುಣವೆನ್ನಲು ಸಾಧಕಪ್ರಮಾಣ.

ವಿವರಣೆ - ರೂಪವು ಘಟವನ್ನು ಬಿಟ್ಟು ಇರುವುದಿಲ್ಲ. ಆದ್ದರಿಂದ ರೂಪವನ್ನು ಗುಣವೆಂದು ತಿಳಿಯುತ್ತೇವೆ. ಆದರೆ ಪ್ರಕಾಶವು ದೀಪವನ್ನು ಬಿಟ್ಟು ಇರುವುದು ಕಂಡಿದೆ. ಏಕೆಂದರೆ ದೀಪವು ಒಂದು ಸ್ಥಳದಲ್ಲಿ ಮಾತ್ರವಿದ್ದರೂ ಇಡೀ ಮನೆಯಲ್ಲಿ ಅದರ ಪ್ರಕಾಶವು ವ್ಯಾಪಿಸಿರುತ್ತದೆ. ಹಾಗಾಗಿ 'ಆಲೋಕಃ, ದ್ರವ್ಯಂ, ದೀಪಂ ವಿಹಾಯ ವೃತ್ತಿತ್ವಾತ್' ಎಂಬ ಅನುಮಾನದಿಂದ ಇದನ್ನು ದ್ರವ್ಯವೆಂದು ಸಾಧಿಸುತ್ತೇವೆ.

ಹೀಗೆ ಪ್ರಶ್ನಿಸಬಾರದು. ಈ ಅನುಮಾನದಲ್ಲಿರುವ ಹೇತುವೇ ಸಂದಿಗ್ಧವಾಗಿದೆ. 'ದೀಪಂ ವಿಹಾಯ ವೃತ್ತಿತ್ವ' ಎಂಬ ಹೇತುವು ದ್ರವ್ಯತ್ವಸಾಧಕವಾಗಿದೆ ಎಂಬುದನ್ನೇ ನಾವು ಒಪ್ಪುವುದಿಲ್ಲ. ಏಕೆಂದರೆ ಗಂಧವೆಂಬ ಗುಣವು ಪುಷ್ಪವನ್ನು ಬಿಟ್ಟು ದೂರದಲ್ಲಿರುತ್ತದೆ. ಆದರೆ ಗಂಧವನ್ನು ದ್ರವ್ಯವೆಂದು ನೀವೇ ಒಪ್ಪುವುದಿಲ್ಲ. ಅದರಂತೆ ಆಲೋಕವೂ ಕೂಡ ದೀಪವನ್ನು ಬಿಟ್ಟು ಇದ್ದರೂ ಕೂಡ ಅದು ದ್ರವ್ಯವಾಗಬೇಕಾಗಿಲ್ಲ.

ಆಲೋಕವು ದೀಪದ ಗುಣವೆಂದೇ ಏಕೆ ಹೇಳಬೇಕೆಂದರೆ, ಎಲ್ಲಿ ಆಲೋಕವಿರುತ್ತದೋ ಅಲ್ಲಿ ದೀಪವಿರುತ್ತದೆ. ಎಲ್ಲಿ ದೀಪವಿರುವುದಿಲ್ಲವೋ ಅಲ್ಲಿ ಆಲೋಕವಿರುವುದಿಲ್ಲ ಎಂಬುದಾಗಿ ಅನ್ವಯವ್ಯತಿರೇಕವ್ಯಾಪ್ತಿಯಿಂದ ಎರಡೂ ಕೂಡ ಒಟ್ಟಿಗೆ ಇರುವುದು ಕಂಡಿದೆ. ಆದ್ದರಿಂದ ಆಲೋಕವು ದೀಪದ ಗುಣವೆಂದೇ ಹೇಳಬೇಕು.

**तत्वप्रकाशिका – द्रव्यत्वे चालोकः कार्यमकार्यं वा । आद्येऽपि किं दीपकार्यमन्यस्य वा ? नाद्यः । कारणं विहाय कार्यवृत्तेरनभ्युपेतत्वात् । न द्वितीयः। दीपप्रकाश इति प्रयोगाऽनुपपत्तिप्रसङ्गात् । कारणान्तरादर्शनाच्च । नान्त्यः। अप्रतीतिप्रसङ्गात्।**

ಆಲೋಕವನ್ನು ದ್ರವ್ಯವೆಂದು ಹೇಳಿದರೆ ಇದು ಕಾರ್ಯವೋ, ಕಾರ್ಯವಲ್ಲವೋ? ಎಂಬ ಪ್ರಶ್ನೆಗೆ ಉತ್ತರಿಸಬೇಕು. ಕಾರ್ಯವೆಂದು ಹೇಳಿದರೆ ದೀಪದ ಕಾರ್ಯವೋ, ಬೇರೆ ಪದಾರ್ಥದ ಕಾರ್ಯವೋ? ಮೊದಲನೇ ಪಕ್ಷ ತಪ್ಪು. ಕಾರಣವನ್ನು ಬಿಟ್ಟು ಕಾರ್ಯವು ಇರಲು ಸಾಧ್ಯವಿಲ್ಲ. ಎರಡನೇ ಪಕ್ಷವೂ ಕೂಡ ತಪ್ಪು. ಬೇರೆ ಪದಾರ್ಥದ ಕಾರ್ಯವೆಂದು ಹೇಳಿದರೆ ದೀಪದ ಪ್ರಕಾಶ ಎಂಬ ಪ್ರಯೋಗವೇ ಅನುಪಪನ್ನವಾಗುತ್ತದೆ. ಮತ್ತು ಅಂತಹ ಬೇರೆ ಕಾರಣವು ಕೂಡ ಕಾಣಿಸುತ್ತಿಲ್ಲ. ಕಾರ್ಯವಲ್ಲವೆಂಬ ಎರಡನೇ ಪಕ್ಷವು ಸರಿಯಲ್ಲ. ಹಾಗಾದಲ್ಲಿ ಆಲೋಕದ ಪ್ರತೀತಿಯೇ ಬಾರದಿರಬೇಕಾದೀತು.

ವಿವರಣೆ - ದೀಪದ ಜ್ವಾಲೆಯಿಂದ ಎಲ್ಲೆಡೆಯೂ ಪ್ರಕಾಶವು ಪಸರಿಸುತ್ತದೆ. ಈ ಪ್ರಕಾಶವು ಜನ್ಯವೆಂದೇ ಹೇಳಬೇಕು. ದೀಪದಿಂದ ಜನ್ಯವೆಂದು ಹೇಳಿದರೆ ದೀಪವು ಉಪಾದಾನ ಕಾರಣವಾಯಿತು. ಪ್ರಕಾಶವು ಉಪಾದೇಯವಾಯಿತು. ಆಗ ದೀಪದಿಂದ ಹುಟ್ಟಿರುವ ಈ ಪ್ರಕಾಶವು ದೀಪವನ್ನು ಬಿಟ್ಟಿರಲು ಹೇಗೆ ಸಾಧ್ಯ ? ದೀಪವು ಒಂದು ಸ್ಥಳದಲ್ಲಷ್ಟೇ ಇರುತ್ತದೆ, ಆದರ ಪ್ರಕಾಶವು ಎಲ್ಲೆಡೆಯು ವ್ಯಾಪಿಸಿರುತ್ತದೆ ಎಂಬ ವಿಚಾರವೇ ತಪ್ಪಾಗುತ್ತದೆ. ಇನ್ನು ದೀಪದಿಂದ ಜನ್ಯವಾದದಲ್ಲ, ಬೇರೆ ಪದಾರ್ಥದಿಂದ ಜನ್ಯವಾಗಿದೆ ಎಂಬ ಎರಡನೇ ಪಕ್ಷವನ್ನು ಅಂಗೀಕರಿಸಬೇಕು. ಆಗ ಇದು ದೀಪದ ಬೆಳಕು ಎಂಬ ಪ್ರಯೋಗವೇ ಅನುಪಪನ್ನವಾಗುತ್ತದೆ. ಹಾಗಾಗಿ ದೀಪದಿಂದ ಜನ್ಯವಾಗಿದೆ ಎಂದಾಗಲೀ ಬೇರೆ ಪದಾರ್ಥದಿಂದ ಜನ್ಯವಾಗಿದೆ ಎಂದಾಗಲೀ ಆಲೋಕಕ್ಕೆ ಹೇಳಲು ಸಾಧ್ಯವಿಲ್ಲ. ಆದ್ದರಿಂದ ಈ ಆಲೋಕವು ಜನ್ಯವೇ ಅಲ್ಲದ ಮಿಥ್ಯವಾದ ಪದಾರ್ಥವೆಂದು ಹೇಳಬೇಕು. ಆಗ ಯಾವುದು ಮಿಥ್ಯವೋ ಅದು ಕಣ್ಣಿಗೆ ಕಾಣಿಸುವುದಿಲ್ಲವೆಂಬುದು ಸರ್ವಸಮ್ಮತವಾಗಿದೆ. ಪರಮಾಣುವು ನಿತ್ಯವಾಗಿದೆ, ಕಣ್ಣಿಗೆ ಕಾಣಿಸುತ್ತಿಲ್ಲ. ಅದರಂತೆ ಈ ಆಲೋಕವೂ ಕೂಡ ನಿತ್ಯವಾದ್ದರಿಂದ ಕಣ್ಣಿಗೆ ಕಾಣಿಸದೇ ಇರಬೇಕಾದೀತು.

**तत्वप्रकाशिका – प्रदीपावयवा एवालोक इति चेन्न । तथा सति प्रदीपानुविधानानुपपत्तेः । न हि जीर्णकन्थातन्तवः कतिचन विकीर्णाः कन्थया सहैव गच्छन्ति । अवस्थिता एवावयवा दीपापगमे तमसो न दृश्यन्त इति न युक्तम् । विरोधात् । क्रमेण चैवं सति प्रकाशबाहुल्यं स्यात् ।**

ಪ್ರಶ್ನೆ - ಆಲೋಕವು ದೀಪದ ಅವಯವಗಳೇ ಹೊರತು ಬೇರೇನೂ ಅಲ್ಲ.

ಉತ್ತರ - ಇದು ತಪ್ಪು. ಹಾಗಾದರೆ ಪ್ರದೀಪದ ಅನುವಿಧಾನವೇ ಅನುಪಪನ್ನವಾಗುತ್ತದೆ. ಜೀರ್ಣವಾದ ಬಟ್ಟೆಯಿಂದ ಬಿದ್ದಿರುವ ಕೆಲವು ದಾರಗಳು ಜೀರ್ಣವಾದ ಬಟ್ಟೆಯ ಜೊತೆ ಹೋಗುವುದಿಲ್ಲವಷ್ಟೆ. ಅದರಂತೆ ದೀಪದ ಅವಯವಗಳೂ ಕೂಡ ದೀಪವು ಹೋದಾಗ ಅಲ್ಲಿಯೇ ಇರುತ್ತವೆ. ಅದರ ಜೊತೆ ಮುಂದೆ ಹೋಗುವುದಿಲ್ಲ. ಆ ಅವಯವಗಳಾದರೂ ಕತ್ತಲೆಯಿಂದ ಆವರಿಸಲ್ಪಟ್ಟಿರುವುದರಿಂದ ನಮಗೆ ಕಾಣಿಸುತ್ತಿಲ್ಲ. ಹೀಗೆ ಹೇಳಬಾರದು. ಆಲೋಕ ಮತ್ತು ತಮಸ್ಸುಗಳಿಗೆ ಪರಸ್ಪರ ವಿರೋಧವಿರುವುದರಿಂದ ಒಂದೇ ಕಡೆ ಅವರೆಡರ ಇರುವಿಕೆಯು ವಿರುದ್ಧವಾಗುತ್ತದೆ.

ಅನೇಕ ಬಾರಿ ಆಲೋಕವನ್ನು ಒಂದೇ ಸ್ಥಳದಲ್ಲಿ ತಂದಾಗ ಮೊದಲಿರುವ ಪ್ರಕಾಶಕ್ಕಿಂತ ಹೆಚ್ಚಿನ ಪ್ರಕಾಶವು ಬರಬೇಕಾಗುತ್ತದೆ. ಏಕೆಂದರೆ ದೀಪದ ಅವಯವಗಳು ಮೊದಲಿನಿಗಿಂತ ಅನಂತರ ಹೆಚ್ಚು ಇರುತ್ತವೆ.

ವಿವರಣೆ - ಆಲೋಕವು ಜನ್ಯವಾದುದೆಂದು ಹೇಳುವುದಿಲ್ಲ. ದೀಪದ ಅವಯವವೆಂದು ಹೇಳುತ್ತೇವೆ. 'ಇದು ಆಲೋಕ' ಎಂಬ ಪ್ರತೀತಿಗೆ ವಿಷಯವಾದುದು ಈ ಆಲೋಕದ ಅವಯವವೇ ಆಗಿದೆ. ಅವಯವವುಳ್ಳದ್ದರಿಂದ ಇದು ದ್ರವ್ಯವೇ ಹೊರತು ಗುಣವಲ್ಲ ಎಂದು ಪೂರ್ವಪಕ್ಷಕಾರರು ಹೇಳುತ್ತಾರೆ. ಇದೂ ಕೂಡ ತಪ್ಪು. ಅವಯವವೆಂದು ಹೇಳಿದರೆ ದೀಪ ಇದ್ದರೆ ಅವಯವವಿರುತ್ತದೆ, ದೀಪವಿಲ್ಲದಿದ್ದರೆ ಅವಯವವಿರುವುದಿಲ್ಲ ಎಂದು ಹೇಳಬೇಕು. ಹೀಗೆ ಹೇಳುವುದು ತಪ್ಪಾಗುತ್ತದೆ.

ದೀಪದ ಜೊತೆ ಅನ್ವಯವ್ಯತಿರೇಕವು ಆಲೋಕಕ್ಕೆ ಕೂಡುತ್ತದೆ. ಹೇಗೆಂದರೆ ದೀಪದ ಜೊತೆ ಅದರ ಅವಯವವೂ ಕೂಡ ಒಟ್ಟಿಗೆ ಹೋಗುತ್ತವೆ. ಆದ್ದರಿಂದ 'ದೀಪಸತ್ತ್ವೇ ಆಲೋಕಸತ್ತ್ವಂ ಆಲೋಕಾಭಾವೇ ದೀಪಾಭಾವಃ' ಎಂಬುದಾಗಿ ಹೇಳಬಹುದಲ್ಲವೇ? ಈ ಶಂಕೆಯು ತಪ್ಪು. ಜೀರ್ಣವಾದ ಬಟ್ಟೆಯಿಂದ ಯಾವ ತಂತುಗಳು ಉದುರಿರುತ್ತವೋ ಅವುಗಳು ಬಟ್ಟೆಯು ಹೋದಲ್ಲೆಲ್ಲಾ ಹೋಗುವುದಿಲ್ಲವಷ್ಟೆ. ಬಟ್ಟೆ ಹೋದರೂ ಕೂಡ ಅವು ಇರುವ ಸ್ಥಳದಲ್ಲೇ ಇರುತ್ತವೆ. ಅದರಂತೆ ಆಲೋಕವು ದೀಪದ ಅವಯವಗಳೆಂದು ಹೇಳಿದರೆ ದೀಪವು ಹೋದಾಗ ಆಲೋಕಗಳೂ ಕೂಡ ಹೋಗಬಾರದು.

ಹಳೆಯ ಬಟ್ಟೆಯಿಂದ ಯಾವ ತಂತುಗಳು ಬಿದ್ದಿರುತ್ತವೋ ಅವು ಬಟ್ಟೆಯ ಜೊತೆ ಹೋಗದೆ ಅಲ್ಲಿಯೇ ಇರುತ್ತವೆ. ಇನ್ನು ಕೆಲವು ಅವಯವಗಳೆನಿಸಿದ ತಂತುಗಳು ಹಳೆಯ ಬಟ್ಟೆಯ ಜೊತೆ ಹೋಗುತ್ತವೆ. ಅದರಂತೆ ದೀಪದ ಅವಯವಗಳೆನಿಸಿದ ಆಲೋಕಗಳು ಅನೇಕ ಇವೆ. ಕೆಲವು ಆಲೋಕಗಳು ದೀಪದ ಜೊತೆ ಹೋಗುತ್ತವೆ, ಬಿದ್ದಿರುವ ಕೆಲವು ಆಲೋಕದ ಅವಯವಗಳು ಅಲ್ಲಿಯೇ ಇರುತ್ತವೆ. ಹೀಗೆ ಹೇಳಿದರೆ ಏನು ಸಮಸ್ಯೆ ?

ಇದೂ ಕೂಡ ತಪ್ಪು. ದೀಪವನ್ನು ಬೇರೆಡೆ ಒಯ್ದಾಗ ಆ ಬಿದ್ದಿರುವ ಕೆಲವು ಆಲೋಕದ ಅವಯವಗಳು ಕಾಣಸಬೇಕಲ್ಲವೇ? ಆದರೆ ಕಾಣಸುತ್ತಿಲ್ಲ. ಕತ್ತಲೆಯು ಆಲೋಕದ ಅವಯವಗಳನ್ನು ಆವರಿಸಿದೆ ಎಂದು ಹೇಳಬೇಕು. ಆದರೆ ಆಲೋಕ ಮತ್ತು ಕತ್ತಲೆಗಳಿಗೆ ಪರಸ್ಪರ ವಿರೋಧವಿದೆ. ಆಲೋಕವಿದ್ದರೆ ಕತ್ತಲಿರಲು ಸಾಧ್ಯವಿಲ್ಲ. ಕತ್ತಲಿದ್ದರೆ ಆಲೋಕವಿರಲು ಸಾಧ್ಯವಿಲ್ಲ. ಆದರೆ ನೀವು ಪ್ರಕೃತ ಎರಡಕ್ಕೂ ಸಹಾವಸ್ಥೆಯನ್ನು ಹೇಳುತ್ತಿದ್ದೀರಿ. ಇದು ಸರ್ವಥಾ ಕೂಡುವುದಿಲ್ಲ.

**ತत्वप्रकाशिका – तदैवोत्पन्नप्रदीपावयवाः सर्वतो विकीर्णा भवन्तीत्यनुभवविरुद्धमिति युक्तमुक्तमालोको गुण इति । अप्राधान्यसाम्येन वा गुणत्वोक्तिरिति। अंशैर्गुणेन च व्याप्तिरित्येकत्र विरुद्धमित्यत आह – स्कान्दे चेति ।। व्याप्तिसाधकानुमानं तु घटादेरपि व्याप्तिसाधकाभाससमानयोगक्षेमम् । अतः श्रुत्यविरोधेन जीवस्याणुत्वसिद्धेर्युक्तो हरौ श्रुतिसमन्वय इति सिद्धम् ।।**

ಆಗಲೇ ಹುಟ್ಟಿದ ಪ್ರದೀಪದ ಅವಯವಗಳು ಎಲ್ಲೆಡೆ ಬೀಳುತ್ತವೆ ಎಂದು ಹೇಳುವುದು ಅನುಭವವಿರುದ್ಧವಾಗಿದೆ. ಆದ್ದರಿಂದ ಆಲೋಕವನ್ನು ಹಿಂದೆ ಹೇಳಿದಂತೆ ಗುಣವೆಂದು

ಹೇಳುವುದೇ ಉಚಿತ. ಅಥವಾ ಅಪ್ರಧಾನವೆಂಬ ಅರ್ಥದಲ್ಲಿ ಗುಣಶಬ್ದದಿಂದ ಆಲೋಕವು ವಾಚ್ಯವಾಗಿದೆ ಎಂದು ಹೇಳಬೇಕು.

ಅಂಶಗಳಿಂದ ಮತ್ತು ಗುಣದಿಂದ ವ್ಯಾಪ್ತಿ ಎಂಬುದು ಒಂದೇ ಕಡೆ ವಿರುದ್ಧವಾಗಿದೆಯಲ್ಲವೇ? ಈ ಪ್ರಶ್ನೆಗೆ 'ಸ್ಮಾಂದೇ ಚ' ಎಂಬುದರಿಂದ ಉತ್ತರಿಸುತ್ತಿದ್ದಾರೆ.

ವ್ಯಾಪ್ತಿಸಾಧಕವಾದ ಅನುಮಾನವಾದರೂ ಘಟಾದಿಗಳಿಗೂ ವ್ಯಾಪ್ತಿಸಾಧಕವಾದ ಅನುಮಾನದಿಂದ ಆಭಾಸಮಾನಯೋಗಕ್ಷೇಮವನ್ನು ಹೊಂದಿದೆ. ಆದ್ದರಿಂದ ಶ್ರುತಿಯ ವಿರೋಧ ಇಲ್ಲದ ಕಾರಣ ಜೀವನಿಗೆ ಅಣುತ್ವವೇ ಸಿದ್ಧವಾಗುತ್ತದೆ. ಹಾಗಾಗಿ ಶ್ರೀಹರಿಯಲ್ಲಿ ಮಾಡಲ್ಪಟ್ಟ ಶ್ರುತಿಸಮನ್ವಯವು ಯುಕ್ತವೆಂದು ಸಿದ್ಧವಾಯಿತು.

ವಿವರಣೆ - ದೀಪವನ್ನು ತಂದಾಗ ಎಲ್ಲೆಡೆ ಆಲೋಕದ ಅವಯವಗಳು ಹುಟ್ಟಿಕೊಳ್ಳುತ್ತವೆ. ದೀಪವನ್ನು ತೆಗೆದುಕೊಂಡು ಹೋದಾಗ ಆ ಅವಯವಗಳೆಲ್ಲವೂ ನಾಶವಾಗುತ್ತವೆ. ಹೀಗೆ ಹೇಳಬಹುದಲ್ಲವೇ? ಎಂಬುದು ಪೂರ್ವಪಕ್ಷಕಾರನ ಆಕ್ಷೇಪ.

ಇದು ತಪ್ಪು. ಪ್ರದೀಪದ ಅವಯವಗಳು ಆಗಲೇ ಹುಟ್ಟುತ್ತವೆ, ಆಗಲೇ ನಾಶವಾಗುತ್ತವೆ ಎಂದು ಹೇಳುವುದು ಅನುಭವವಿರುದ್ಧವಾಗಿದೆ. ಏಕೆಂದರೆ ಹಳೇ ಬಟ್ಟೆಯ ಅವಯವಗಳು ಉದುರುವುದು ಅನುಭವಸಿದ್ಧವಾಗಿದೆ. ಆದೇ ಹೊಸ ಬಟ್ಟೆಯ ಅವಯವಗಳು ಉದುರುವುದು ಎಲ್ಲಿಯೂ ಕೂಡ ಕಂಡಿಲ್ಲ. ಈ ಎಲ್ಲಾ ಸಮಸ್ಯೆಗಳಿರುವುದರಿಂದ ಆಲೋಕವನ್ನು ದ್ರವ್ಯವೆಂದು ಹೇಳಲೇಬಾರದು. ಹಿಂದೆ ಹೇಳಿದಂತೆ ಗುಣವೆಂಬ ಪಕ್ಷವನ್ನೇ ಆಶ್ರಯಿಸಬೇಕು. ಅಥವಾ ಗುಣವು ಹೇಗೆ ದ್ರವ್ಯಪರತಂತ್ರವೋ ಹಾಗೆಯೇ ಆಲೋಕವೂ ಕೂಡ ತೇಜಃಪರತಂತ್ರವಾಗಿದೆ ಎಂಬುದಾಗಿ ಗುಣತ್ವವನ್ನು ಹೇಳಬೇಕು. ಈ ಪಕ್ಷದಲ್ಲಿ ಅಪ್ರಧಾನ ಎಂಬರ್ಥದಲ್ಲಿ ಗುಣಶಬ್ದವನ್ನು ವಿವಕ್ಷಿಸಿ ಇಂತಹ ಅಪ್ರಧಾನವೆನಿಸಿದ ಗುಣಶಬ್ದದಿಂದ ಆಲೋಕವು ವಾಚ್ಯವಾಗಿದೆ ಎಂದು ತಿಳಿಯಬೇಕು.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಉತ್ಕ್ರಾಂತ್ಯಧಿಕರಣ ಮುಗಿಯಿತು

ಉತ್ಕ್ರಾಂತ್ಯಧಿಕರಣ
(೨-೩-೧೨)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## उत्क्रान्त्यधिकरणम्

### ಜೀವಾತ್ಮನು ಅಣುರೂಪನಾಗಿದ್ದಾನೆ

**उत्क्रान्तिगत्यागतीनां ।। जीवे धर्मिण्युत्पत्त्यनुत्पत्ती चिन्तिते । अथ तद्धर्मे परिमाणेऽणुत्वमहत्त्वे चिन्त्येते इति सङ्गतिः ।**

ಹಿಂದಿನ ಅಧಿಕರಣದಲ್ಲಿ ಜೀವನೆಂಬ ಧರ್ಮಿಯಲ್ಲಿ ಉತ್ಪತ್ತಿ ಇದೆ ಎಂದು ಪೂರ್ವಪಕ್ಷ ಮಾಡಿ ಉತ್ಪತ್ತಿ ಇಲ್ಲವೆಂದು ಸಿದ್ಧಾಂತ ಮಾಡಲಾಯಿತು. ಈ ಅಧಿಕರಣದಲ್ಲಿ ಜೀವನ ಧರ್ಮವೆನಿಸಿದ ಪರಿಮಾಣವು ಅಣುವೋ ಮಹತ್ತೋ ? ಎಂದು ವಿಚಾರವನ್ನು ಮಾಡುತ್ತಿದ್ದಾರೆ. ಆದ್ದರಿಂದ ಧರ್ಮಿ ವಿಚಾರದ ಅನಂತರ ಧರ್ಮದ ವಿಚಾರವು ಸಂಗತವಾಗಿದೆ. ಮತ್ತು ಸಾಮಾನ್ಯವಿಚಾರವನ್ನು ಹಿಂದಿನ ಅಧಿಕರಣದಲ್ಲಿ ಮಾಡಿದ ಮೇಲೆ ವಿಶೇಷವಿಚಾರವು ಇಲ್ಲಿ ಪ್ರಸಕ್ತವಾಗಿದೆ.

**अत्र ब्रह्मणि श्रुतिसमन्वयसिद्ध्यर्थं जीवस्याणुत्वोत्क्रमणादिश्रुतिः किं सर्वदेहसम्बद्धस्पर्शादिज्ञानरूपयुक्त्यनुगृहीतया ''व्याप्ता ह्यात्मान'' इति व्याप्तिश्रुत्या बाधितोत नेति चिन्ता ।**

ಈ ಅಧಿಕರಣದ ಸಂಶಯಪರಂಪರೆ ಹೀಗಿದೆ– ಬ್ರಹ್ಮನಲ್ಲಿ 'ತತ್ತುಸಮನ್ವಯಾತ್' ಎಂಬ ಅಧಿಕರಣವು ಸಕಲ ಶ್ರುತಿಗಳ ಸಮನ್ವಯವನ್ನು ಸಾಧನೆ ಮಾಡಿತು. ಈ ಪ್ರಮೇಯವು ಸಿದ್ಧವಾಗಬೇಕೆಂದರೆ ಶ್ರುತಿಗಳಲ್ಲಿ ಪರಸ್ಪರ ವಿರೋಧವು ಇರಬಾರದು. ಆದರೆ ಪ್ರಕೃತ 'ಅಣುರ್ಹ್ಯೇಶ ಆತ್ಮಾ' ಎಂಬ ಶ್ರುತಿಗೆ 'ವ್ಯಾಪ್ತಾ ಹ್ಯಾತ್ಮಾನಃ' ಎಂಬ ಶ್ರುತಿಯ ವಿರೋಧವು ಬರುತ್ತಿದೆ. ಆದ್ದರಿಂದ ಶ್ರುತಿವಿರೋಧವಿರುವಾಗ ಸಮನ್ವಯವು ಸಾಧ್ಯವಾಗುವುದಿಲ್ಲ. ಆದ್ದರಿಂದ ಸಮನ್ವಯಾಧಿಕರಣದಿಂದ ಈ ಅಧಿಕರಣವು ಸಂಗತವಾಗಿದೆ. ಜೀವನನ್ನು ಅಣುವೆಂದು ಹೇಳಿದರೆ ಸಕಲ ದೇಹದಲ್ಲಿ ಉಂಟಾಗುವ ಸ್ಪರ್ಶಾದಿ ಜ್ಞಾನವೇ ಬರದೇ ಇರಬೇಕಾಗುತ್ತದೆ. ಈ ಯುಕ್ತಿಯ ಉಪೋದ್ಬಲವು 'ವ್ಯಾಪ್ತಾಹಿ ಆತ್ಮಾನಃ' ಎಂಬ ಶ್ರುತಿಗೆ ಇದೆ. ಹೀಗೆ ಯುಕ್ತಿಯ ಉಪೋದ್ಬಲವಿರುವ 'ವ್ಯಾಪ್ತಾಹಿ ಆತ್ಮಾನಃ' ಎಂಬ ವ್ಯಾಪ್ತಿಶ್ರುತಿಯಿಂದ

ಅಣುತ್ವ ಪ್ರತಿಪಾದಕವಾದ ಶ್ರುತಿಯು ಬಾಧಿತವಾಗುತ್ತದೆ. ಮತ್ತು ಜೀವನಿಗೆ ಉತ್ಕ್ರಮಣವನ್ನು ಹೇಳುವ ಶ್ರುತಿಯೂ ಕೂಡ ಬಾಧಿತವಾಗುತ್ತದೆ. ಏಕೆಂದರೆ 'ವ್ಯಾಪ್ತಾಹಿ ಆತ್ಮಾನಃ' ಎಂಬ ಶ್ರುತಿಯಿಂದ ಜೀವನು ಅಣುವಲ್ಲವೆಂದು ಸಿದ್ಧವಾಗುತ್ತದೆ. ಇನ್ನು ಮಧ್ಯಮ ಪರಿಮಾಣನೆಂದು ಹೇಳಿದರೆ ಅನಿತ್ಯತ್ವ ಪ್ರಸಂಗವು ಬರುತ್ತದೆ. ಅರ್ಥಾತ್ ಮಹತ್‌ಪರಿಮಾಣವನ್ನೇ ಹೇಳಬೇಕು. ಆದ್ದರಿಂದ ಅಣುತ್ವ ಶ್ರುತಿ ಹಾಗೂ ಉತ್ಕ್ರಮಣಶ್ರುತಿಯು ವ್ಯಾಪ್ತಶ್ರುತಿಯಿಂದ ಬಾಧಿತವಾಗುತ್ತದೋ ಇಲ್ಲವೋ? ಎಂಬುದು ಪ್ರಧಾನ ಸಂಶಯ.

**तदर्थं व्याप्तिश्रुतिः किं जीवविषया सर्वदेहसम्बद्धस्पर्शादिज्ञानं चाणुत्वे नोपपद्यते उत व्याप्तिश्रुतिरीश्वरविषया सर्वदेहसम्बद्धस्पर्शादिज्ञानं च जीवस्याणुत्वेऽप्यंशव्याप्त्यादिनोपपद्यत इति ।**

ಮೊದಲನೆಯ ಸಂಶಯವು ಪರಿಹಾರವಾಗಬೇಕೆಂದರೆ ಎರಡನೆಯ ಸಂಶಯವು ಪರಿಹಾರವಾಗಬೇಕು – ವ್ಯಾಪ್ತಿ ಶ್ರುತಿಯು ಜೀವವಿಷಯಕವಾಗಿದೆ. ಆ ಜೀವನು ಸಕಲ ದೇಹದಲ್ಲಿ ಸಂಬದ್ಧವಾದ ಸ್ಪರ್ಶಾದಿ ಜ್ಞಾನವನ್ನು ಹೊಂದುತ್ತಿದ್ದಾನೆ. ಅಣುವಾದರೆ ಈ ಸರ್ವದೇಹಗತವಾದ ಸುಖಾದಿ ಜ್ಞಾನವು ಬರದೇ ಇರಬೇಕಾಗುತ್ತದೆ. ಆದ್ದರಿಂದ ವ್ಯಾಪ್ತಿಶ್ರುತಿಯು ಜೀವವಿಷಯಕವೆಂದು ಹೇಳಬೇಕೋ? ಅಥವಾ ವ್ಯಾಪ್ತಿಶ್ರುತಿಯು ಜೀವವಿಷಯಕವೇ ಅಲ್ಲ ಈಶ್ವರ ವಿಷಯಕವಾಗಿದೆ. ಸರ್ವದೇಹಸಂಬದ್ಧವಾದ ಸ್ಪರ್ಶಾದಿ ಜ್ಞಾನವು ಜೀವನು ಅಣುವಾದರೂ ಕೂಡ ಯುಕ್ತವಾಗುತ್ತದೆ. ಏಕೆಂದರೆ ಅವನ ಅಂಶವು ದೇಹದಲ್ಲಿ ಎಲ್ಲೆಡೆಯೂ ವ್ಯಾಪ್ತವಾಗಿದೆ. ಆದ್ದರಿಂದ ಸ್ಪರ್ಶಾದಿ ಜ್ಞಾನವು ಉಪಪನ್ನವಾಗಬೇಕೆಂದು ಹೇಳಬೇಕೋ?

**तदर्थं व्याप्तिश्रुतौ श्रुतं बहुत्वं भिन्नाश्रितमित्युत्सर्गन्यायस्यापवादकं नास्त्यंशव्याप्त्यादिकं च न युक्तमुत सामान्यन्यायस्यापवादकमस्त्यंशव्याप्त्यादिकं चन्दनवद्युक्तमिति ।**

ಆತ್ಮಾನಃ ಎಂಬ ವ್ಯಾಪ್ತಿ ಶ್ರುತಿಯು ಬಹುವಚನವುಳ್ಳದ್ದಾಗಿದೆ. ಎಲ್ಲಿ ಬಹುತ್ವವಿರುತ್ತದೋ ಅಲ್ಲಿ ಭಿನ್ನಾಶ್ರಿತತ್ವ ಇರುತ್ತದೆ. ಅಂದರೆ ಬೇರೆಬೇರೆ ಆಶ್ರಯವನ್ನು ಹೊಂದಿರುತ್ತದೆ ಎಂದರ್ಥ. ಈ ಬಹುತ್ವಂ ಭಿನ್ನಾಶ್ರಿತಂ ಎಂಬ ಉತ್ಸರ್ಗನ್ಯಾಯಕ್ಕೆ ಅಪವಾದಕವು ಇರುವುದಿಲ್ಲ. ಮತ್ತು ಜೀವನಿಗೆ ಅಂಶತಃ ವ್ಯಾಪ್ತಿಯೂ ಕೂಡ ಯುಕ್ತವಾಗುವುದಿಲ್ಲ ಎಂದು ಹೇಳಬೇಕೋ? ಅಥವಾ 'ಬಹುತ್ವಂ ಭಿನ್ನಾಶ್ರಿತಂ' ಎಂಬ ನ್ಯಾಯಕ್ಕೆ ಅಪವಾದಕವೂ ಇದೆ. ಆದ್ದರಿಂದ ಜೀವನಿಗೆ ಅಂಶತಃ ವ್ಯಾಪ್ತಿಯು ಚಂದನಾದಿಗಳಂತೆ ಯುಕ್ತವಾಗುತ್ತದೆಂದು ಹೇಳಬೇಕೋ? ಎಂಬುದು ಕೊನೆಯ ಸಂಶಯ.

**पूर्वपक्ष्यभिमतव्याप्तिश्रुतेः प्राबल्याय ''सर्वदेहस्पर्शज्ञानात्'' इति न्यायविवरणोक्तां पूर्वपक्षयुक्तिमाह – सर्वदेहेति ।।**

ಪೂರ್ವಪಕ್ಷಿಗೆ ಅಭಿಮತವಾದ ಶ್ರುತಿ ಎಂದರೆ 'ವ್ಯಾಪ್ತಾಹಿ ಆತ್ಮಾನಃ' ಎಂಬುದು. ಇದಕ್ಕೆ ಪ್ರಾಬಲ್ಯವನ್ನು ತಂದುಕೊಡುವುದಕ್ಕಾಗಿ 'ಸರ್ವದೇಹಸ್ಪರ್ಶಜ್ಞಾನಾತ್' ಎಂಬ ಯುಕ್ತಿಯನ್ನು

ಹೇಳಿದ್ದಾರೆ. ಇದು ನ್ಯಾಯವಿವರಣದಲ್ಲಿ ಯುಕ್ತವಾಗಿದೆ. ಅದನ್ನೇ ಪ್ರಕೃತ ಟೀಕೆಯಲ್ಲಿ ಸರ್ವದೇಹ ಇತ್ಯಾದಿಯಾಗಿ ಹೇಳುತ್ತಿದ್ದಾರೆ.

**सिद्धान्तमाह – सिद्धान्तयदिति ।। एतेन चैत्रभोगार्थस्याङ्कुरादेश्चैत्रादृष्टजन्यत्वादात्मसमवेतस्य चादृष्टस्य साक्षादङ्कुराद्यसम्बन्धादात्मनोऽङ्कुरसम्बन्धावश्यंभावाद्विभुत्वमिति तार्किकोक्तं निरस्तम् ।**

ಸಿದ್ಧಾಂತವನ್ನು 'ಸಿದ್ಧಾಂತಯತ್' ಇತ್ಯಾದಿ ಟೀಕೆಯಿಂದ ನಿರೂಪಣೆ ಮಾಡಿದ್ದಾರೆ. ತಾರ್ಕಿಕರ ಪರಿಕಲ್ಪನೆ ಹೀಗಿದೆ – ಆತ್ಮನನ್ನು ವ್ಯಾಪ್ತನೆಂದು ಹೇಳಲೇಬೇಕು. ಏಕೆಂದರೆ ಚೈತ್ರನು ಎಲ್ಲೋ ಇರುತ್ತಾನೆ ಅವನ ಉಪಭೋಗಕ್ಕೆ ಸಾಧನವಾದ ಅಂಕುರವು ಇನ್ನೆಲ್ಲೋ ಇರುತ್ತದೆ. ಆ ಅಂಕುರದಿಂದ ಯಾವ ಧಾನ್ಯವು ಹುಟ್ಟುತ್ತದೋ ಅದು ಚೈತ್ರನ ಅದೃಷ್ಟದಿಂದ ಚೈತ್ರನ ಉಪಭೋಗಕ್ಕಾಗಿ ಉತ್ಪನ್ನವಾಗುತ್ತದೆ. ಒಂದುವೇಳೆ ಆತ್ಮನನ್ನು ಅಣು ಎಂದು ಹೇಳಿದರೆ ಈ ಅಂಕುರಕ್ಕೂ ಚೈತ್ರನಿಗೂ ಸಂಬಂಧವೇ ಇಲ್ಲದ ಕಾರಣ ಚೈತ್ರನ ಉಪಭೋಗಕ್ಕೆ ಸಾಧನವೆಂದು ಹೇಳಲಾಗದು. ಆದ್ದರಿಂದ ಆತ್ಮನನ್ನು ವ್ಯಾಪ್ತನೆಂದು ಹೇಳಬೇಕು. ಆಗ ಇವನ ದೇಹ ಎಲ್ಲಿದ್ದರೂ ಕೂಡ ಇವನ ಆತ್ಮ ಎಲ್ಲೆಡೆಯು ಇರುವುದರಿಂದ ಅಂಕುರ ಬೆಳೆಯುವ ಸ್ಥಳದಲ್ಲೂ ಕೂಡ ಚೈತ್ರನ ಆತ್ಮನು ಇದೆ. ಆಗ ತತ್ಸಯುಕ್ತವಾದವನು ಆತ್ಮ, ಅಲ್ಲಿ ಸಮವೇತವಾದದು ಅದೃಷ್ಟವಾದ್ದರಿಂದ ಸಂಯುಕ್ತಸಮವಾಯುಸನ್ನಿಕರ್ಷದ ಪ್ರಯುಕ್ತವಾಗಿ ಅಂಕುರಕ್ಕೂ ಚೈತನಿಗೂ ಕಾರ್ಯಕಾರಣಭಾವವು ಯುಕ್ತವಾಗುತ್ತದೆ. ಆದ್ದರಿಂದ ಅವಶ್ಯವಾಗಿ ಆತ್ಮನನ್ನು ವಿಭು ಎಂದು ಹೇಳಲೇಬೇಕು.

ತಾರ್ಕಿಕರ ಈ ಪರಿಕಲ್ಪನೆಯು ಈಗ ನಿರಸ್ತವಾಯಿತು.

**चैत्रभोगाहेतोरप्यंकुरादेरात्मद्वारा तददृष्टसम्बन्धेऽपि तदजन्यत्वेनात्मद्वारकसम्बन्धस्यातन्त्रतया प्रतियोग्यभाववाच्यवाचकज्ञानज्ञेयादाविवादृष्टकार्ययोरपि सम्बन्धान्तरस्यैव वक्तव्यत्वात् ।**

ಒಂದುವೇಳೆ ಆತ್ಮನನ್ನು ವ್ಯಾಪ್ತನೆಂದು ಹೇಳಿ ಅಂಕುರಕ್ಕೂ ಆತ್ಮನಿಗೂ ಸಂಬಂಧವನ್ನು ಪರಿಕಲ್ಪನೆ ಮಾಡುವುದಾದರೆ ಯಾವ ಅಂಕುರವು ಚೈತ್ರನ ಭೋಗಕ್ಕೆ ಕಾರಣವಲ್ಲವೋ ಅದರ ಜೊತೆಗೂ ಕೂಡ ಚೈತ್ರನಿಗೆ ಸಂಬಂಧವಿದೆ ಎಂದಾಯಿತು. ಆ ಅಂಕುರದಿಂದಲೂ ಕೂಡ ಆತ್ಮನಲ್ಲಿರುವ ಅದೃಷ್ಟಕ್ಕೆ 'ಸಂಯುಕ್ತಸಮವಾಯ' ಎಂಬ ಸನ್ನಿಕರ್ಷವಿದೆ ಎಂದಂತಾಯಿತು. ಆದ್ದರಿಂದ ಯಾವ ಅಂಕುರದಿಂದ ಹುಟ್ಟುವ ಧಾನ್ಯವನ್ನು ಚೈತ್ರನು ಭೋಗಿಸುವುದಿಲ್ಲವೋ ಅದು ಕೂಡ ಚೈತ್ರಭೋಗಕ್ಕೆ ಕಾರಣವಾಗಲಿ ಎಂಬ ಅತಿಪ್ರಸಂಗ ಬರುತ್ತದೆ.

ಚೈತ್ರನಿಗೂ ಅಂಕುರಕ್ಕೂ ಆತ್ಮದ್ವಾರಾ ಸಂಬಂಧವನ್ನು ಹೇಳಿದ್ದೀರಿ. ಇದು ಅಪ್ರಯೋಜಕವಾಗಿದೆ. ಏಕೆಂದರೆ ಚೈತ್ರನ ಭೋಗಕ್ಕೆ ಕಾರಣವಾಗದ್ದು ಆತ್ಮದ್ವಾರ ಅದೃಷ್ಟದ ಸಂಬಂಧವನ್ನು ಹೊಂದಿದೆ. ಆದರೆ ಜನ್ಯವಾಗಿರುವುದಿಲ್ಲ ಆದ್ದರಿಂದ ಅಪ್ರಯೋಜಕವಾಯಿತು. ಹಾಗಾದರೆ ಆತ್ಮನಿಗೂ ಅಂಕುರಕ್ಕೂ ಸ್ವರೂಪವೇ ಸಂಬಂಧ ಎಂದು ಹೇಳಬೇಕು. ಪ್ರತಿಯೋಗಿ ಅಭಾವ, ವಾಚ್ಯ ವಾಚಕ, ಜ್ಞಾನ ಜ್ಞೇಯ, ಇವುಗಳಲ್ಲಿ ಹೇಗೆ ಅತಿರಿಕ್ತವಾದ ಸಂಬಂಧವಿಲ್ಲವೋ ಅದರಂತೆ ಅಂಕುರಕ್ಕೂ ಚೈತ್ರನಿಗೂ ಕೂಡ ಅತಿರಿಕ್ತ ಸಂಬಂಧವನ್ನು ಒಪ್ಪುವ ಅವಶ್ಯಕತೆ ಇಲ್ಲ.

**अस्ति हि कारीर्यदृष्टस्य वृष्ट्या सह तदुद्देशेन विहितक्रियाजन्यत्वरूपः सम्बन्धः।।**

ಕಾರೀರ್ಯಾಗದಿಂದ ಉತ್ಪನ್ನವಾದ ಅದೃಷ್ಟಕ್ಕೂ ವೃಷ್ಟಿಗೂ ಏನು ಸಂಬಂಧ ಎಂದರೆ ತದುದ್ದೇಶೇನ ವಿಹಿತಕ್ರಿಯಾ ಜನ್ಯತ್ವವೇ ಸಂಬಂಧ. ಯಾವ ಉದ್ದೇಶದಿಂದ ಕಾರೀರ್ಯಾಗವೆಂಬ ಕ್ರಿಯೆಯನ್ನು ಶ್ರುತಿಯು ವಿಧಾನ ಮಾಡಿದೆಯೋ ತಜ್ಜನ್ಯವಾದುದು ಅದೃಷ್ಟ. ಆದ್ದರಿಂದ ಈ ಅದೃಷ್ಟವು ವೃಷ್ಟಿಯನ್ನು ಉಂಟುಮಾಡುತ್ತದೆ. ಆದ್ದರಿಂದ ಹೀಗೆ ಹೇಳಬೇಕು – 'ಯತ್ ಅದೃಷ್ಟಂ ಯತ್ಫಲೋದ್ದೇಶೇನ ಶ್ರುತಿವಿಹಿತಕ್ರಿಯಾಜನ್ಯಂ ತತ್ ಅದೃಷ್ಟಂ ತತ್ಫಲಸ್ಯ ಜನಕಂ' ಎಂಬ ವ್ಯಾಪ್ತಿಯನ್ನು ಇಲ್ಲಿ ಹೇಳಿದಂತಾಗುತ್ತದೆ. ಹೀಗೆ ಸುಲಭವಾಗಿ ಹೇಳಲು ಬರುತ್ತಿರುವಾಗ ಆತ್ಮನನ್ನು ವ್ಯಾಪ್ತನೆಂದು ಹೇಳುವ ಅವಶ್ಯಕತೆ ಇಲ್ಲ.

**प्रसङ्गाच्चिन्त्यत इति ।। प्रस्तुतस्याणुत्वस्योत्क्रान्तिमात्रेण सिद्धेरणुत्वसाधकाधिकरणमध्ये स्वातन्त्र्यपारतन्त्र्यादिचिन्ता प्रासङ्गिकीत्यर्थः ।**

ಈ ಅಧಿಕರಣದಲ್ಲಿ ಪ್ರಸಕ್ತವಾದುದು ಅಣುತ್ವ ಮಾತ್ರ. ಇದು ಉತ್ಕ್ರಾಂತಿಯಿಂದಲೇ ಸಿದ್ಧವಾಗುತ್ತದೆ. ಆದ್ದರಿಂದ ಅಣುತ್ವಸಾಧಕವಾದ ಈ ಅಧಿಕರಣದ ಮಧ್ಯದಲ್ಲಿ ಸ್ವಾತಂತ್ರ್ಯಪಾರತಂತ್ರ್ಯಾದಿಗಳ ವಿಚಾರವು ಕೇವಲ ಪ್ರಾಸಂಗಿಕವೆಂದು ತಿಳಿಯಬೇಕು.

**''यस्य योगे दुहिता जायते दिव उभे अहनी सुदिने विवस्वतः'' । इत्युत्तरार्धे ऐतरेयभाष्योक्तरीत्या ''यस्य योग'' इत्यनेन शरीराख्यरथस्य भगवदर्पणरूपः सम्बन्धः, ''विवस्वत'' इत्यनेन भगवान्, ''दिवो दुहित'' इत्यनेनापरोक्षज्ञानं, ''सुदिने अहनी'' इत्यनेन जीवन्मुक्तिमुक्ती विवक्षिते इत्यभिप्रेत्य व्याचष्टे ।। यत्सम्बन्धादिति ।। घटादिरूपस्यैव तत्र प्रतीयमानत्वादिति ।। नीलघटादिसम्बद्धबालार्कप्रभादौ प्रतीयमानमारुण्यादिकं तु न्यायमतेऽपि न प्रभानिष्ठमिति भावः ।**

'ಯಸ್ಯ ಯೋಗೇ ದುಹಿತಾ ಜಾಯತೇ ದಿವ ಉಭೇ ಅಹನೀ ಸುದಿನೇ ವಿವಸ್ವತಃ' ಎಂಬ ಉತ್ತರಾರ್ಧದಲ್ಲಿ ಐತರೇಯ ಭಾಷ್ಯದಲ್ಲಿ ಹೇಳಿದಂತೆ 'ಯಸ್ಯ ಯೋಗೇ' ಎಂಬುದರಿಂದ ಶರೀರವೆಂಬ ಭಗವಂತನಿಗೆ ಅರ್ಪಣೆ ಮಾಡಿದ ರಥವನ್ನು ವಿವಕ್ಷಿಸಬೇಕು. ವಿವಸ್ವತ ಎಂಬುದರಿಂದ ಭಗವಂತನನ್ನು 'ದಿವಃ ದುಹಿತಾ' ಎಂಬುದರಿಂದ ಪರೋಕ್ಷ ಜ್ಞಾನವನ್ನು 'ಸುದಿನೇ ಅಹನಿ' ಎಂಬುದರಿಂದ ಜೀವನ್ಮುಕ್ತಿ ಹಾಗೂ ಮುಕ್ತಿಗಳನ್ನು ವಿವಕ್ಷಿಸಬೇಕು. ಈ ಅಭಿಪ್ರಾಯದಿಂದ ಯತ್ಸಂಬಂಧಾತ್ ಇತ್ಯಾದಿಯಾಗಿ ಟೀಕೆಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ.

ಟೀಕೆಯಲ್ಲಿ ಯತ್ಸಂಬಂಧಾಚ್ಚ ಜೀವಸ್ಯ ಎಂಬುದಾಗಿ ಹೇಳಿದ್ದಾರೆ. ಈ ವಾಕ್ಯದಿಂದ ಋಗ್ವೇದದ ಮಂತ್ರವನ್ನು ವ್ಯಾಖ್ಯಾನ ಮಾಡಿದ್ದಾರೆ. ಆ ಋಗ್ವೇದ ಮಂತ್ರ ಹೀಗಿದೆ. 'ಯಸ್ಯ ಯೋಗೇ ದುಹಿತಾ ಜಾಯತೇ ದಿವಃ ಉಭೇ ಅಹನಿ ಸುದಿನೇ ವಿವಸ್ವತಃ ।।' ಇದು ಆತೇನಯಾತಂ ಎಂಬ ಮಂತ್ರದ ಉತ್ತರಾರ್ಧವಾಗಿದೆ. ಐತರೇಯ ಭಾಷ್ಯದಲ್ಲಿ ಇದನ್ನು ವ್ಯಾಖ್ಯಾನ ಮಾಡಿದ್ದಾರೆ. ಅದು ಹೀಗಿದೆ.

ಯಸ್ಯ ಯೋಗೇ = ಯಾವ ಶರೀರವೆಂಬ ರಥವು ಭಗವದರ್ಪಣ ಬುದ್ಧಿಯಿಂದ ಸಂಬಂಧವನ್ನು ಹೊಂದಿದೆಯೋ, ವಿವಸ್ವತಃ = ವಿವಿಧವಾದ ವಾಸವುಳ್ಳ ವಿಷ್ಣುವಿನಿಂದ, ದಿವಃ ದುಹಿತಃ = ರಮೆಯಿಂದ ಅಭಿಮನ್ಯಮಾನವಾದ ವಿದ್ಯೆಯಿಂದ ಜನಿಸಿದ ಮಗಳಾದ ಸರಸ್ವತಿಯಿಂದ ಅಭಿಮನ್ಯಮಾನವಾದ ಅಪರೋಕ್ಷವು ಜೀವನಿಗೆ ಹುಟ್ಟುತ್ತದೆ, ಸುದಿನೇ ಅಹನಿ = ಒಳ್ಳೆಯ ಜೀವನ್ಮುಕ್ತಿ ಅವಸ್ಥೆ ಹಾಗು ಮುಖ್ಯಾವಸ್ಥೆಗಳು, ಸಾಧ್ಯೇ ಭವತಃ = ಉಂಟಾಗುತ್ತವೆ. ಇಷ್ಟು ಮಂತ್ರದ ಅಭಿಪ್ರಾಯ. ಇದನ್ನು ಯತ್ಸಂಬಂಧಾತ್ ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡಿದ್ದಾರೆ.

ಗುಣಾದ್ವಾಽಲೋಕವತ್ ಎಂಬ ಸೂತ್ರದ ಟೀಕೆಯಲ್ಲಿ ಘಟಾದಿರೂಪಸ್ಯೈವ ತತ್ರ ಪ್ರತೀಯಮಾನತ್ವಾತ್ ಎಂಬುದಾಗಿ ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ – ನೀಲಘಟದ ಮೇಲೆ ಬಾಲಸೂರ್ಯನ ಪ್ರಭೆಯು ಬಿದ್ದಿರುತ್ತದೆ. ಆಗ ನೀಲಘಟವು ಕೆಂಪಾಗಿ ಕಾಣಿಸುತ್ತದೆ. ಆದರೆ ಈ ಕೆಂಪುಬಣ್ಣವು ನ್ಯಾಯಮತದ ಪ್ರಕಾರವೂ ಕೂಡ ಬಾಲಸೂರ್ಯನಲ್ಲಿರುವ ಪ್ರಭೆಯ ಕೆಂಪುಬಣ್ಣವಲ್ಲ. ಏಕೆಂದರೆ ಅವರು ಬಾಲಸೂರ್ಯಪ್ರಭೆಯಲ್ಲಿ ಭಾಸ್ವರಶುಕ್ಲರೂಪವಿದೆ ಎಂದು ಹೇಳುತ್ತಾರೆ.

**किञ्च ''गुणादिपञ्चकस्य निर्गुणत्वनिष्क्रियत्वादिपरिभाषा नादरणीय'' इति टीकाकारैरन्यत्रोक्तत्वाद्गुणेषु चतुर्विंशतिसंख्यावत् समवायादावेकत्वसंख्यावत् रूपे स्पर्शात्पृथक्त्ववत् जातेः सर्वगतत्वेन महत्त्ववच्च प्रभाया गुणत्वेऽपि तत्र रूपचलनादिकमप्यस्तु । अत एव दीपे गच्छति प्रभाया अपि गतिदर्शनात्क्रियावत्त्वेनालोकस्य द्रव्यत्वमिति निरस्तम् । घटे गच्छति तद्रूपस्यापि गतेः । अन्यथा श्येने चलत्यचलतः स्थाणोरिव रूपस्य तत्रैवावस्थितिः स्यादित्यपि द्रष्टव्यम् ।।**

ಮತ್ತು ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ ಈ ಐದು ಪದಾರ್ಥಗಳು ನಿರ್ಗುಣವಾಗಿಯೂ ಮತ್ತು ನಿಷ್ಕ್ರಿಯವಾಗಿವೆ ಎಂದು ತಾರ್ಕಿಕರು ಹೇಳುತ್ತಾರೆ. ಇವರ ಈ ವಾದವು ಅನಾದರಣೀಯವಾಗಿದೆ. ಇದನ್ನು ಟೀಕಾಕಾರರು ಮಿಥ್ಯಾತ್ವಾನುಮಾನ ಖಂಡನ ಟೀಕೆಯಲ್ಲಿ ನಿರೂಪಣೆ ಮಾಡಿದ್ದಾರೆ. ಗುಣಗಳಲ್ಲಿ ಚತುರ್ವಿಂಶತಿ ಸಂಖ್ಯಾ ಎಂಬ ಗುಣವನ್ನು ತಾರ್ಕಿಕರು ಒಪ್ಪುತ್ತಾರೆ. ಸಮವಾಯಾದಿಗಳಲ್ಲೂ ಕೂಡ ಏಕತ್ವ ಎಂಬ ಸಂಖ್ಯೆಯನ್ನು ಒಪ್ಪುತ್ತಾರೆ. ರೂಪವೆಂಬ ಗುಣದಲ್ಲಿ ಸ್ಪರ್ಶಾತ್‌ಪೃಥಕ್ತ್ವವನ್ನು ಒಪ್ಪುತ್ತಾರೆ. ಜಾತಿಯಲ್ಲಿ ಸರ್ವಗತತ್ವವನ್ನೂ ಹಾಗೂ ಮಹತ್ವವನ್ನು ಒಪ್ಪುತ್ತಾರೆ. ಆದ್ದರಿಂದ ಗುಣಾದಿ ಪಂಚಕಗಳು ನಿರ್ಗುಣತ್ವ, ನಿಷ್ಕ್ರಿಯತ್ವವುಳ್ಳವುಗಳೆಂದು ಹೇಳಿದ್ದು ವ್ಯಾಹತವಾಗಿದೆ. ಇದರಂತೆ ಪ್ರಭೆಯೂ ಕೂಡ ಗುಣವಾಗಿದ್ದರೂ ರೂಪಚಲನಾದಿ ಕ್ರಿಯೆಗಳು ಬರಬಹುದು. ಆದ್ದರಿಂದಲೇ ದೀಪದಲ್ಲಿ ಚಲನೆ ಉಂಟಾದಾಗ ಪ್ರಭೆಯಲ್ಲಿಯೂ ಕೂಡ ಗಮನವು ಕಾಣಿಸುತ್ತದೆ. ಹೀಗೆ ರೂಪ ಮತ್ತು ಕ್ರಿಯ ಉಳ್ಳದ್ದರಿಂದ ಆಲೋಕವನ್ನು ದ್ರವ್ಯವೆಂದು ಹೇಳಬೇಕು ಎಂಬ ಅವರ ವಾದವನ್ನು ನಿರಾಕರಣೆ ಮಾಡಿದಂತಾಯಿತು. ಏಕೆಂದರೆ ಘಟದಲ್ಲಿ ಚಲನೆ ಉಂಟಾದಾಗ ಅದರ ರೂಪದಲ್ಲೂ ಕೂಡ ಚಲನೆಯು ಕಾಣಿಸುತ್ತದೆ. ಹೀಗೊಪ್ಪದಿದ್ದರೆ ಹದ್ದು ಹಾರಿದರೂ ಸ್ಥಾಣು ಇದ್ದಲ್ಲೇ ಇರುವಂತೆ ಘಟವು ಮುಂದೆ ಹೋದರೂ ರೂಪವು ಇದ್ದಲ್ಲೇ ಇರಬೇಕಾಗುತ್ತದೆ.

**द्रव्यत्वसाधकताविवादादिति ।। उत्तराधिकरणे गुणस्यापि गन्धस्य द्रव्यं विहायापि वृत्तेर्वक्ष्यमाणत्वादिति भावः ।।**

ಪರಿಪೂರ್ಣಚಂದ್ರಿಕಾ

ದ್ರವ್ಯತ್ವಸಾಧಕತಾವಿವಾದಾತ್ ಎಂಬುದಾಗಿ ಟೀಕೆಯಲ್ಲಿ ಗುಣಾದ್ವಾಲೋಕವತ್ ಎಂಬ ಸೂಕ್ತಕ್ಕೆ ವ್ಯಾಖ್ಯಾನ ಮಾಡುವಾಗ ಹೇಳಿದ್ದಾರೆ. ಏಕೆಂದರೆ ಉತ್ತರಾಧಿಕರಣದಲ್ಲಿ ಗುಣವೆನಿಸಿದ ಗಂಧವು ದ್ರವ್ಯವನ್ನು ಬಿಟ್ಟೂ ಕೂಡ ಇರುತ್ತದೆ ಎಂಬುದನ್ನು 'ವ್ಯತಿರೇಕೋ ಗಂಧವತ್' ಎಂಬ ಸೂತ್ರದಲ್ಲಿ ಮುಂದೆ ಸಮರ್ಥಿಸುವವರಿದ್ದಾರೆ.

**तदनुविधानादिनेति ।। नच छायायां व्यभिचारः । भित्यादावचलेऽपि छायायाः सूर्यप्रातिलोम्येन चलनात् । लोके माणिक्यप्रभादौ तद्गुणत्वव्यवहारः, ''तेजोबलैश्वर्यमहावबोध सद्वीर्यशक्तयादिगुणैकराशिः'' इति स्मार्तस्तेजसि गुणत्वव्यवहारश्च गुणत्वे प्रमाणमिति दर्शयितुमादिशब्दः । अत एव टीकाकारैः ''शुद्धानंदोरुसंविद्द्युति'' इति द्युतेर्गुणत्वमुक्तम् ।।**

ಆಲೋಕವು ಪ್ರದೀಪದ ಗುಣವೆಂದು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಗೆ ತದನುವಿಧಾನಾದಿನಾ ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. ಆಲೋಕವು ದೀಪ ಹೋದರೆ ಹೋಗುತ್ತದೆ. ದೀಪ ಹೋಗದಿದ್ದರೆ ಹೋಗುವುದಿಲ್ಲ ಎಂಬ ಅನುವಿಧಾನವಿರುವುದರಿಂದ ಆಲೋಕವು ಪ್ರದೀಪದ ಗುಣವೆಂದು ಸಾಧನೆ ಮಾಡುತ್ತೇವೆ. ಹಾಗಾದರೆ ಛಾಯೆಯಲ್ಲಿ ಇದಕ್ಕೆ ವ್ಯಭಿಚಾರ ಬರುತ್ತದೆ. ನಾವು ನಿಂತರೆ ಛಾಯೆ ನಿಲ್ಲುತ್ತದೆ, ನಾವು ಹೋದರೆ ಛಾಯೆಯು ಹೋಗುತ್ತದೆ. ಹಾಗಾದರೆ ಆ ಛಾಯೆಯೂ ಕೂಡ ನಮ್ಮ ಗುಣವೆಂದು ಆಗಬೇಕಾದೀತು. ಆದರೆ ತಮಸ್ಸು ಹೇಗೆ ದ್ರವ್ಯವೋ ಅದರಂತೆ ಛಾಯೆಯೂ ಕೂಡ ದ್ರವ್ಯವೆಂದು ಎಲ್ಲರೂ ಕೂಡ ಒಪ್ಪಿದ್ದಾರೆ. ಸೂರ್ಯನು ಪೂರ್ವದಲ್ಲಿ ಉದಯನಾದಾಗ ಗೋಡೆಯ ನೆರಳು ಪಶ್ಚಿಮದಲ್ಲಿರುತ್ತದೆ. ಸೂರ್ಯನ ಚಲನೆಯಾದಂತೆ ಈ ದ್ವಿತೀಯ ಛಾಯೆಯಲ್ಲೂ ಕೂಡ ಚಲನೆಯು ಕಾಣಿಸುತ್ತದೆ. ಹೀಗೆ ಛಾಯೆಯಲ್ಲಿ ಅನುವಿಧಾನವು ಕಾಣಿಸುತ್ತಿಲ್ಲ. ಆದರೆ ಆಲೋಕದಲ್ಲಿ ಅನುವಿಧಾನವು ಕಾಣಿಸುತ್ತಿದೆ. ಆದ್ದರಿಂದ ಛಾಯೆಯಲ್ಲಿ ವ್ಯಭಿಚಾರವು ಬರುವುದಿಲ್ಲ.

ಟೀಕೆಯಲ್ಲಿ ತದನುವಿಧಾನಾದಿನಾ ಎಂಬುದಾಗಿ ಆದಿಪದವನ್ನು ಪ್ರಯೋಗ ಮಾಡಿದ್ದಾರೆ. ಈ ಆದಿಪದದಿಂದ ತದ್ಗುಣತ್ವ ವ್ಯವಹಾರವನ್ನು ವಿವಕ್ಷಿಸಬೇಕು. ಲೋಕದಲ್ಲಿ ಮಾಣಿಕ್ಯದ ಪ್ರಭೆಯು ಮಾಣಿಕ್ಯದ ಗುಣವೆಂಬ ವ್ಯವಹಾರವಿದೆ. ಶ್ರುತಿಯಲ್ಲಿ 'ಬಲೈಶ್ವರ್ಯ ಮಹಾವಬೋಧಸದ್ ವೀರ್ಯಶಕ್ತ್ಯಾದಿ- ಗುಣೈಕರಾಶಿಃ' ಎಂಬುದಾಗಿ ತೇಜಸ್ಸು ಗುಣವೆಂದು ಸ್ಮೃತಿಯಲ್ಲಿ ಹೇಳಲಾಗಿದೆ. ಹೀಗೆ ಲೌಕಿಕ ವ್ಯವಹಾರ ಹಾಗೂ ಸ್ಮಾರ್ತ ವ್ಯವಹಾರವು ತೇಜಸ್ಸು ಗುಣವೆನ್ನಲು ಪ್ರಮಾಣವಾಗಿದೆ ಎಂಬುದನ್ನು ತೋರಿಸಲು ಆದಿ ಶಬ್ದವನ್ನು ಪ್ರಯೋಗಿಸಿದ್ದಾರೆ. ಆದ್ದರಿಂದಲೇ ಟೀಕಾಕಾರರು 'ಶುದ್ಧಾನಂದೋರುಸಂವಿದ್ಯುತಿ' ಎಂಬಲ್ಲಿ ದ್ಯುತಿ ಎಂಬುದನ್ನೂ ಕೂಡ ಗುಣವೆಂದೇ ಕರೆದಿದ್ದಾರೆ.

**कारणान्तरादर्शनादिति ।। तदैव तत्रत्यतैजसपरमाणव एव द्व्यणुकादि - प्रक्रमेणालोक मण्डलमारभन्त इत्यत्र मानाभावादिति भावः ।। अप्रतीतिप्रसङ्गादिति।। अकार्यद्रव्यत्वे परमाणुत्वापातेनाप्रत्यक्षत्वप्रसङ्गादित्यर्थः ।।**

ಉತ್ಪಾಂತ್ಯಧಿಕರಣ (೨-೩-೧೨)

'ಕಾರಣಾಂತರ ಅದರ್ಶನಾತ್' ಎಂಬ ಟೀಕಾವಾಕ್ಯಕ್ಕೆ ಹೀಗೆ ಅರ್ಥ – ದೀಪ ಇದ್ದರೂ ಕೂಡ ಆಲೋಕಕ್ಕೆ ಕಾರಣವಾಗುವುದಿಲ್ಲ. ಅಲ್ಲೇ ಇರುವ ತೈಜಸ ಪರಮಾಣುಗಳು ದ್ವ್ಯಣುಕಾದಿ ಕ್ರಮದಿಂದ ಆಲೋಕವನ್ನು ಸೃಷ್ಟಿ ಮಾಡುತ್ತವೆ ಎಂದು ತಾರ್ಕಿಕರು ಹೇಳುತ್ತಾರೆ. ಈ ವಿಷಯದಲ್ಲಿ ಯಾವುದೇ ಪ್ರಮಾಣವೇ ಇರುವುದಿಲ್ಲ.

'ಅಪ್ರತೀತಿ ಪ್ರಸಂಗಾತ್' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಒಂದುವೇಳೆ ಆಲೋಕವು ಅಕಾರ್ಯ ಎಂದು ಹೇಳಿದರೆ ಆಗ ದ್ರವ್ಯವೇ ಆಗದೇ ಇರಬೇಕಾಗುತ್ತದೆ. ಯಾವುದು ಅಕಾರ್ಯ ದ್ರವ್ಯವೋ ಅದು ವಿಭುವಾಗಿರುತ್ತದೆ, ಇಲ್ಲ ಪರಮಾಣುವಾಗಿರುತ್ತದೆ. ಆಲೋಕವನ್ನು ವಿಭು ಎಂದು ಯಾರೂ ಹೇಳುವುದಿಲ್ಲ. ಅನಿವಾರ್ಯವಾಗಿ ಪರಮಾಣುವೆಂದೇ ಹೇಳಬೇಕು. ಆಗ ಆಲೋಕವು ದ್ರವ್ಯವಾಗಿದೆ, ಪರಮಾಣುವಾಗಿದೆ ಎಂದು ಹೇಳಿದಂತಾಯಿತು. ಪರಮಾಣುವಾದರೆ ಅದರ ಪ್ರತ್ಯಕ್ಷವೇ ಬರದೇ ಇರಬೇಕಾಗುತ್ತದೆ ಎಂದರ್ಥ.

**तथा सति प्रदीपानुविधानानुपपत्तेरिति ।। उपलक्षणं चैतत् । निबिडावयवेन्द्र नीलादाववयवविकिरणस्यासम्भावितत्वात्तत्र प्रभा न स्यादित्यपि द्रष्टव्यम् ।। बाहुल्यं स्यादिति ।। आद्यक्षण इव द्वितीयादिक्षणेष्वप्यवयवानां विकिरणस्य न्याय्यत्वादिति भावः ।**

ಟೀಕೆಯಲ್ಲಿ 'ತಥಾಸತಿ ಪ್ರದೀಪಾನುವಿಧಾನಾನುಪಪತ್ತೇರಿತಿ' ಎಂದು ಹೇಳಿದ್ದಾರೆ. ಇಲ್ಲಿ ಉಪಲಕ್ಷಣಯಾ ಇದನ್ನು ವಿವಕ್ಷಿಸಬೇಕು. ದೀಪವು ಶಿಥಿಲಾವಯವಾಗಿರುವುದರಿಂದ ಅದರ ಅವಯವವು ವಿಕರಣವಾಗಿದೆ ಎಂದು ಹೇಳಬಹುದು. ಆದರೆ ನಿಬಿಡಾವಯವ ಉಳ್ಳ ಇಂದ್ರನೀಲಮಣಿಗೆ ಅವಯವವಿಕರಣವನ್ನು ಹೇಳಲು ಹೇಗೆ ಸಾಧ್ಯ? ಆದ್ದರಿಂದ ಅಲ್ಲಿ ಪ್ರಭೆ ಇಲ್ಲದಿರಬೇಕಾಗುತ್ತದೆ ಎಂಬುದನ್ನೂ ಕೂಡ ವಿವಕ್ಷಿಸಬೇಕು.

'ಬಾಹುಲ್ಯಂ ಸ್ಯಾತ್' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ – ಆದ್ಯಕ್ಷಣದಲ್ಲಿ ಹೇಗೆ ಅವಯವಗಳಲ್ಲಿ ವಿಕರಣವು ಇರುತ್ತದೋ ಅದರಂತೆ ದ್ವಿತೀಯಾದಿ ಕ್ಷಣದಲ್ಲೂ ಕೂಡ ಅವಯವಗಳಿಗೆ ವಿಕರಣವನ್ನು ಒಪ್ಪುವುದು ನ್ಯಾಯಸಮ್ಮತವಾಗಿದೆ ಎಂಬುದು ಇದರ ಅಭಿಪ್ರಾಯ. ಹೀಗೆ ಅವಯವಗಳ ವಿಕರಣವು ಹೆಚ್ಚುಹೆಚ್ಚು ಆಗುತ್ತಿರಲು ಪ್ರಕಾಶವೂ ಕೂಡ ಹೆಚ್ಚು ಹೆಚ್ಚು ಆಗಬೇಕಾದೀತು ಎಂಬುದು ಇದರ ಅಭಿಪ್ರಾಯ.

**पक्षान्तरमाह – अप्रधानसाम्येन वेति ।। शुभमादत्त इत्यर्थकेन श्रुतिसूत्रस्थेन स्वात्मशब्देनेश्वरस्योत्क्रान्त्यादिना जीववन्न दुःखमिति दर्शितम् ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् उत्क्रान्त्यधिकरणं सम्पूर्णम् ।।१२।।**

ಮತ್ತೊಂದು ಪಕ್ಷವನ್ನು 'ಅಪ್ರಧಾನಸಾಮ್ಯೇನ ವಾ' ಎಂಬುದರಿಂದ ಹೇಳುತ್ತಿದ್ದಾರೆ.

ಪರಮಾತ್ಮನು ಶುಭವನ್ನಷ್ಟೇ ಸ್ವೀಕರಿಸುತ್ತಾನೆ, ಅಶುಭವನ್ನು ಸ್ವೀಕರಿಸುವುದಿಲ್ಲ. ಈ ಅರ್ಥವನ್ನು

ವಿವಕ್ಷಿಸಿ ಶ್ರುತಿ ಹಾಗೂ ಸೂತ್ರಗಳಲ್ಲಿ ಸ್ವಾತ್ಮ ಶಬ್ದವನ್ನು ಪ್ರಯೋಗಿಸಿದ್ದಾರೆ. ಆದ್ದರಿಂದ ಈಶ್ವರನು ಜೀವನ ಜೊತೆ ಉತ್ಕ್ರಾಂತ್ಯಾದಿಗಳನ್ನು ಮಾಡಿದರೂ ಕೂಡ ಜೀವನು ದುಃಖವನ್ನು ಅನುಭವಿಸುವಂತೆ ಈಶ್ವರನು ದುಃಖವನ್ನು ಅನುಭವಿಸುವುದಿಲ್ಲ ಎಂಬುದನ್ನು ತೋರಿಸಿದಂತಾಯಿತು.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಉತ್ಕ್ರಾಂತ್ಯಧಿಕರಣವು ಸಂಪೂರ್ಣವಾಯಿತು

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**उत्क्रान्तिगत्यागतीनां** ।। अत्र जन्मादिसूत्राक्षेपायोगादाह – **श्रुतिसमन्वयसिद्ध्यर्थमिति ।। अणुत्वेति ।।** ''अणुर्ह्येष आत्म'' इत्यणुत्वश्रुतिः । ''सोऽस्माच्छरीरादुत्क्रम्यामुं लोकमभिगच्छति'' इत्याद्युत्क्रमणगत्यादिश्रुतिः ।।

ಜನ್ಮಾದ್ಯಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಕೀ ಸಂಗತಿಯನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಸಮನ್ವಯಾಧಿಕರಣದಿಂದ ಸಂಗತಿಯನ್ನು 'ಶ್ರುತಿಸಮನ್ವಯಸಿದ್ಧ್ಯರ್ಥಂ' ಎಂಬುದರಿಂದ ತೋರಿಸಿದ್ದಾರೆ. ಅಣುತ್ವ ಎಂದರೆ 'ಅಣುರ್ಹ್ಯೇಷ ಆತ್ಮಾ' ಎಂಬ ಅಣುತ್ವ ಶ್ರುತಿ ಎಂದರ್ಥ. 'ಸೋಽಸ್ಮಾಚ್ಛರೀರಾದುತ್ಕ್ರಮ್ಯಾಮುಂ ಲೋಕಂ ಅಭಿಗಚ್ಛತಿ' ಎಂಬುದು ಉತ್ಕ್ರಮಗತ್ಯಾದಿ ಶ್ರುತಿ' ಎಂದು ತಿಳಿಯಬೇಕು.

**प्रकाशः – सर्वदेहसम्बद्धेति ।।** कमनीयतनयाद्यालिङ्गनादिना जातसर्वाङ्गीण-स्पर्शादिज्ञानेत्यर्थः । युक्तेरपि निरवकाशत्वसावकाशत्वचिन्तामाह – **नोपपद्यत उपपद्यत इति ।।** युक्तेरप्युपपादकाभावभावचिन्तामाह – **न युक्तं युक्तमिति ।।** अत्राद्या ''नाणुतरच्छतेः'' इति सूत्रांशसूचिता ।

'ಸರ್ವದೇಹಸಂಬಂಧ' ಎಂಬುದರ ಅಭಿಪ್ರಾಯ ಹೀಗೆ ತಿಳಿಯಬೇಕು. ಸುಂದರಿ ಸ್ತ್ರೀಯ ಆಲಿಂಗನ ಮಾಡಿದಾಗ, ಅಥವಾ ಮಗನ ಆಲಿಂಗನ ಮಾಡಿದಾಗ ಸರ್ವಾಂಗದಲ್ಲೂ ಕೂಡ ಸುಖಸ್ಪರ್ಶದ ಅನುಭವವಾಗುವುದು ಕಂಡಿದೆ ಎಂದರ್ಥ.

ಯುಕ್ತಿಯಲ್ಲೂ ಕೂಡ ನಿರವಕಾಶತ್ವ ಹಾಗೂ ಸಾವಕಾಶತ್ವ ಚಿಂತೆಯನ್ನು ತೋರಿಸಲು 'ನೋಪಪದ್ಯತೇ ಉಪಪದ್ಯತೇ' ಎಂಬುದಾಗಿ ಹೇಳಿದ್ದಾರೆ. ಯುಕ್ತಿಗೂ ಕೂಡ ಉಪಪಾದಕವಾದದ್ದು ಇಲ್ಲವೋ ಅಥವಾ ಇದೆಯೋ? ಎಂಬ ಚಿಂತೆಯನ್ನು 'ನ ಯುಕ್ತಂ ಉತ ಯುಕ್ತಂ' ಎಂಬುದರಿಂದ ತೋರಿಸಿದ್ದಾರೆ. ಇದರಲ್ಲಿ ಮೊದಲನೇ ವಿಕಲ್ಪವು 'ನಾಣುರತಚ್ಛ್ರುತೇಃ' ಎಂಬ ಸೂತ್ರಾಂಶದಿಂದ ಸೂಚಿತವಾಗಿದೆ.

**प्रकाशः** – अन्ये तु ''अविरोधश्चन्दनवत्'' इत्यादिसूत्रसूचिते । अंशव्याप्त्यादीत्यादिपदेन चिद्गुणव्याप्तेर्ग्राह्यत्वादपवादकमधिकारस्वशब्दोन्मानत्वरूपम्। व्यक्तोऽत्र फलपलिभावः ।

ಬೇರೆಯವರು 'ಅವಿರೋಧಶ್ಚಂದನವತ್' ಇತ್ಯಾದಿ ಸೂತ್ರದಿಂದ ಈ ಸಂಶಯವು ಸೂಚಿತವಾಗಿದೆ ಎಂದು ಹೇಳುತ್ತಾರೆ. ಅಂಶವ್ಯಾಪ್ತಾದಿ ಎಂಬಲ್ಲಿರುವ ಆದಿಪದದಿಂದ ಚಿದ್ಗುಣದ ವ್ಯಾಪ್ತಿಯು ಗ್ರಾಹ್ಯವಾಗಿರುವುದರಿಂದ ಅಪವಾದಕವಾಗಿದೆ. ಈ ಅಧಿಕರಣದ ಫಲಪಲಿಭಾವವು ಸ್ಪಷ್ಟವಾಗಿರುವುದರಿಂದ ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

**प्रकाशः** – प्रतियोग्यभावादाविव **क्लृप्तस्वरूपसम्बन्धो** नास्तीत्यत आह – **अस्ति हीति ।। न प्रभानिष्ठमिति ।।** पार्थिवत्रसरेण्वादिनिष्ठम् । प्रभायाःशुक्लभास्वररूपत्वादिति भावः ।

ಪ್ರತಿಯೋಗ ಅಭಾವಗಳಲ್ಲಿ ಹೇಗೆ ಸ್ವರೂಪಸಂಬಂಧವಿದೆಯೋ ಅದರಂತೆ ಇಲ್ಲಿ ಕ್ಲೃಪ್ತವಾದ ಸ್ವರೂಪಸಂಬಂಧವು ಇಲ್ಲವೆಂದು ಆಕ್ಷೇಪ ಮಾಡಿದರೆ 'ಅಸ್ತಿ ಹಿ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. 'ನ ಪ್ರಭಾನಿಷ್ಠಂ' ಎಂದರೆ ಪಾರ್ಥಿವ ಪ್ರಸರೇಣ್ವಾದಿಗಳಲ್ಲಿ ಇರುತ್ತದೆ. ಏಕೆಂದರೆ ಪ್ರಭೆಯು ಭಾಸ್ವರಶುಕ್ಲವುಳ್ಳದ್ದಾಗಿದೆ ಎಂಬುದಾಗಿ ತಿಳಿಯಬೇಕು.

**प्रकाशः** – अन्यत्र मिथ्यात्वानुमानखण्डनटीकायाम् । विवृतमेतत्तत्रैव भावप्रकाशिकायाम्।। **नच छायायामिति ।।** तस्यास्तमोविशेषत्वात्तमसोद्रव्यत्वस्य तर्कताण्डवे साधनादिति भावः । स्वात्मना चोत्तरयोरित्यत्र स्वात्मपदकृत्यमाह – **शुभमादत्त इति ।।**

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते**
**चन्द्रिकाप्रकाशे उत्क्रान्त्यधिकरणं सम्पूर्णम् ।।१२।।**

'ಅನ್ಯತ್ರ' ಎಂದರೆ ಮಿಥ್ಯಾತ್ವಾನುಮಾನಖಂಡನಟೀಕೆಯಲ್ಲಿ ಹೇಳಿದ್ದಾರೆ ಎಂದರ್ಥ. ಇದನ್ನು ಗ್ರಂಥಕಾರರು ಅಲ್ಲಿಯೇ ಭಾವಪ್ರಕಾಶಿಕೆ ಎನಿಸಿದ ಮಂದಾರಮಂಜರಿಯಲ್ಲಿ ಮತ್ತಷ್ಟು ವಿವರಿಸಿದ್ದಾರೆ.

'ನಚ ಛಾಯಾಯಾಂ' ಎಂಬುದರ ಅಭಿಪ್ರಾಯ ಹೀಗಿದೆ – ಛಾಯೆಯೂ ಕೂಡ ತಮೋವಿಶೇಷವಾದ್ದರಿಂದ ತಮಸ್ಸು ದ್ರವ್ಯವೆಂಬ ವಿಚಾರವನ್ನು ತರ್ಕತಾಂಡವದಲ್ಲಿ ಸಾಧನೆ ಮಾಡಿದ್ದರಿಂದ ಛಾಯೆಯೂ ಕೂಡ ದ್ರವ್ಯವೆಂದು ತಿಳಿಯುತ್ತದೆ. 'ಸ್ವಾತ್ಮನಾ ಚೋತ್ತರಯೋಃ' ಎಂಬಲ್ಲಿ ಸ್ವಾತ್ಮಪದದ ಕೃತ್ಯವನ್ನು 'ಶುಭಮಾದತ್ತೇ' ಎಂಬುದರಿಂದ ವ್ಯಾಖ್ಯಾನ ಮಾಡಿದ್ದಾರೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಉತ್ಕ್ರಾಂತ್ಯಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

ಪರಿಪೂರ್ಣಚಂದ್ರಿಕಾ

# ವ್ಯತಿರೇಕಾಧಿಕರಣ

(೨-೩-೧೩)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

॥ ಶ್ರೀಗುರುಭ್ಯೋ ನಮಃ ॥

# ವ್ಯತಿರೇಕಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – व्यतिरेको गन्धवत्तथा च दर्शयति ।।**

ಜೀವನು ಅಣುವಾಗಿದ್ದರೂ ಸಹ ಅಂಶಗಳಿಂದ ಭಿನ್ನನಾಗಿರುತ್ತಾನೆ. ಅಂದರೆ ಅಂಶಗಳಿಂದ ಅನೇಕ ರೂಪವನ್ನು ತಾಳುತ್ತಾನೆ. ಹೇಗೆ ಪುಷ್ಪದ ಗಂಧಕ್ಕೆ ಅಂಶಗಳಿಂದ ವಿಭಾಗವಿದೆಯೋ, ಆದರಂತೆ ಜೀವನೂ ಕೂಡ ಬಹುರೂಪವನ್ನು ತಾಳುತ್ತಾನೆ. ಈ ವಿಷಯದಲ್ಲಿ 'ಸ ಪಂಚಧಾ ಸ ಸಪ್ತಧಾ' ಇತ್ಯಾದಿ ಶ್ರುತಿ ಆಧಾರವಾಗಿದೆ. 'ಅಥ ಏಕ ಏವಸನ್' ಎಂಬ ಶ್ರುತಿಯು ಇದನ್ನೇ ಹೇಳುತ್ತದೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** चशब्दो 'अचिन्त्ये' इति स्मृतिसमुच्चायकः । **गन्धवत्** गन्धस्येव। यथा पुष्पगन्धस्य स्वांशैः **व्यतिरेको** विभागस्तथा अणोरपि जीवस्य स्वांशैः ईशशक्त्या व्यतिरेको युज्यते । कुत एतत् प्रतिपादयति यतो 'अथ' इति श्रुतिः **तथा दर्शयति** अत एवेत्यर्थः ।।१।।

'ಚ' ಶಬ್ದವು 'ಅಚಿಂತ್ಯೇಶಶಕ್ತ್ಯೈವ ಹ್ಯೇಕೋಽವಯವವರ್ಜಿತಃ । ಆತ್ಮಾನಂ ಬಹುಧಾ ಕೃತ್ವಾ ಕ್ರೀಡತೇ ಯೋಗಸಂಪದಾ ॥' ಎಂಬ ಸ್ಮೃತಿಯನ್ನು ಸಮುಚ್ಚಯ ಮಾಡುತ್ತಿದೆ. ಗಂಧವತ್ = ಪುಷ್ಪದ ಸ್ವಾಂಶಗಳಿಂದ ವಿಭಾಗವಿರುವಂತೆ, ವ್ಯತಿರೇಕಃ = ಜೀವನಿಗೂ ಸ್ವಾಂಶಗಳಿಂದ ಭೇದವು ಯುಕ್ತವಾಗುತ್ತದೆ. ಪರಮಾತ್ಮನ

ಅಚಿಂತ್ಯಾತ್ಮಶಕ್ತಿಯಿಂದ ಒಬ್ಬನೇ ಜೀವನಿಗೆ ಹೀಗೆ ಅನೇಕ ರೂಪಗಳನ್ನು ಹೇಳುವುದು ತಪ್ಪಲ್ಲ. ತಥಾ ದರ್ಶಯತಿ = 'ಅಥೈಕ ಏವ ಸನ್ ಗಂಧವದ್ ವ್ಯತಿರಿಚ್ಯತೇ। ಅಥೈಕೀಭವತಿ। ಅಥ ಬಹ್ವೀ ಭವತಿ। ತಂ ಯಥಾ ಯಥೇಶ್ವರಃ ಪ್ರಕುರುತೇ ತಥಾ ತಥಾ ಭವತಿ ಸೋಽಚಿಂತ್ಯಃ ಪರಮೋ ಗರೀಯಾನ್' ಎಂಬ ಶ್ರುತಿಯು ಹೀಗೆ ಪ್ರತಿಪಾದನೆ ಮಾಡುತ್ತಿದೆ.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ವ್ಯತಿರೇಕಾಧಿಕರಣವು ಮುಗಿಯಿತು.

## ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – 'स नित्यो निरवयवः पुण्ययुक् पापयुक् च स इमं लोकममुं चाऽवर्तते स विमुच्यते स एकधा न सप्तधा न दशधा न शतधा' इति गौपवनश्रुतावेकस्याबहुत्वं प्रतीयते । 'स पञ्चधा स सप्तधा स दशधा भवति स शतधा च सहस्रधा स गच्छति स मुच्यते' इति पाराशर्यायणश्रुतौ बहुरूपत्वं प्रतीयते ।**

ಅನುವಾದ - ಜೀವನು ನಿತ್ಯನು ಅವಯವ ಇಲ್ಲದವನು ಪುಣ್ಯಪಾಪ ಎಲ್ಲವನ್ನು ಹೊಂದಿದವನು ಭೂಲೋಕ ಹಾಗೂ ಪರಮಲೋಕಗಳಲ್ಲಿ ಸಂಚಾರ ಮಾಡುವವನೂ ಆಗಿದ್ದಾನೆ. ಇವನು ಮುಕ್ತನಾಗುತ್ತಾನೆ. ಅವನಿಗೆ ಒಂದು ರೂಪವಿರುತ್ತದೆ ಏಳುರೂಪಗಳಿರುವುದಿಲ್ಲ. ಹತ್ತು ನೂರು ಸಾವಿರ ರೂಪಗಳು ಇರುವುದಿಲ್ಲ. ಹೀಗೆ ಗೌಪವನಶ್ರುತಿಯಲ್ಲಿ ಒಬ್ಬನೇ ಜೀವನಿಗೆ ಅನೇಕ ರೂಪಗಳು ಇರುವುದಿಲ್ಲವೆಂದು ಹೇಳಲಾಗಿದೆ.

ಆದರೆ ಜೀವರು ಐದು ರೂಪಗಳನ್ನು, ಏಳು ರೂಪಗಳನ್ನು ಹತ್ತು ರೂಪಗಳನ್ನು ನೂರು ಸಾವಿರ ರೂಪಗಳನ್ನು ಕೂಡ ಪಡೆಯುತ್ತಾನೆ. ಪರಲೋಕಕ್ಕೆ ಹೋಗಿ ಮೋಕ್ಷವನ್ನು ಹೊಂದುತ್ತಾನೆ. ಹೀಗೆ ಪಾರಾಶರ್ಯಾಯಣ ಶ್ರುತಿಯಲ್ಲಿ ಜೀವನಿಗೆ ಅನೇಕ ರೂಪಗಳಿರುವುದು ಕೇಳಿಬರುತ್ತಿದೆ.

ಪ್ರತಿಪದಾರ್ಥ -- ಸಃ = ಜೀವನು, ನಿತ್ಯಃ = ನಿತ್ಯನು, ನಿರವಯವಃ = ಅವಯವಗಳಿಲ್ಲದವನು. ಪುಣ್ಯಯುಕ್ = ಪುಣ್ಯವನ್ನು ಹೊಂದುವವನು, ಚ = ಮತ್ತು, ಪಾಪಯುಕ್ = ಪಾಪವನ್ನು ಹೊಂದುವವನು, ಸಃ = ಅಂಥ ಜೀವನು, ಇಮಂ ಲೋಕಮ್ = ಈ ಲೋಕವನ್ನು, ಅಮುಂಚ = ಮೇಲಿನ ಲೋಕವನ್ನು, ಆವರ್ತತೇ = ಹೊಂದುತ್ತಾನೆ. ಸಃ = ಆ ಜೀವನು, ವಿಮುಚ್ಯತೇ = ಮುಕ್ತನಾಗುತ್ತಾನೆ. ಸಃ = ಅವನು, ಏಕಧಾ = ಒಂದೇ ರೂಪವನ್ನು ತಾಳುತ್ತಾನೆ, ಸಪ್ತಧಾ = ಏಳುರೂಪವನ್ನು, ನ = ಹೊಂದುವುದಿಲ್ಲ. ದಶಧಾ = ಹತ್ತುರೂಪಗಳನ್ನು, ನ = ಹೊಂದುವುದಿಲ್ಲ. ಶತಧಾ = ನೂರುರೂಪಗಳನ್ನು, ನ = ಹೊಂದುವುದಿಲ್ಲ. ಇತಿ = ಹೀಗೆ, ಗೌಪವನಶ್ರುತೌ = ಗೌಪವನಶ್ರುತಿಯಲ್ಲಿ, ಏಕಸ್ಯ

= ಒಬ್ಬನೇ ಜೀವನಿಗೆ, ಅಬಹುತ್ವಂ = ಅನೇಕ ರೂಪಗಳು ಇಲ್ಲವೆಂದು, ಪ್ರತೀಯತೇ = ಹೇಳಲಾಗಿದೆ.

ಆದರೆ ಸಃ = ಆ ಜೀವನು, ಪಂಚಧಾ = ಐದುರೂಪಗಳನ್ನು, ಸಪ್ತಧಾ = ಏಳು ರೂಪಗಳನ್ನು, ಸಃ = ಅವನು, ದಶಧಾ = ಹತ್ತುರೂಪಗಳನ್ನು, ಭವತಿ = ಹೊಂದುತ್ತಾನೆ. ಸಃ = ಅವನು, ಶತಧಾ = ನೂರುರೂಪಗಳನ್ನು, ಸಹಸ್ರಧಾ = ಸಾವಿರರೂಪಗಳನ್ನು ಪಡೆದು, ಗಚ್ಛತಿ = ಮೇಲಿನ ಲೋಕಕ್ಕೆ ಹೋಗುತ್ತಾನೆ. ಸಃ = ಅವನು, ಮುಚ್ಯತೇ = ಮೋಕ್ಷವನ್ನು ಹೊಂದುತ್ತಾನೆ, ಇತಿ = ಹೀಗೆ, ಪಾರಾಶರ್ಯಾಯಣಶ್ರುತೌ = ಪಾರಾಶರ್ಯಾಯಣ ಎಂಬ ಶ್ರುತಿಯಲ್ಲಿ, ಬಹುರೂಪತ್ವಂ = ಅನೇಕ ರೂಪಗಳಿರುವುದು, ಪ್ರತೀಯತೇ = ತಿಳಿಯುತ್ತದೆ.

**भाष्यम् — अतो विरोधं परिहरति —**

**।। व्यतिरेको गन्धवत् तथा च दर्शयति ।।१।।**

**यथा पुष्पाद् गन्धः पृथग् गच्छति एवमंशिनो जीवादंशाः पृथग् गच्छन्ति।**

ಅನುವಾದ - ಮೇಲೆ ಉಲ್ಲೇಖಿಸಿದ ಎರಡು ಶ್ರುತಿಗಳ ವಿರೋಧವನ್ನು ಪರಿಹರಿಸಲು ಮುಂದಿನ ಸೂತ್ರ ಹೊರಟಿದೆ. ಹೂವಿನಲ್ಲಿರುವ ಪರಿಮಳವು ಹೇಗೆ ಎಲ್ಲೆಡೆ ಹರಡುತ್ತದೋ, ಅದರಂತೆ ಅಂಶಿಯಾದ ಜೀವನಿಂದ ಅಂಶಗಳು ಪ್ರತ್ಯೇಕವಾಗಿ ಎಲ್ಲೆಡೆ ಹೋಗುತ್ತವೆ.

ಪ್ರತಿಪದಾರ್ಥ -- ಅತಃ = ಸಂಶಯದ ಪರಿಹಾರಕ್ಕಾಗಿ, ವಿರೋಧಮ್ = ಶ್ರುತಿಗಳ ವಿರೋಧವನ್ನು, ಪರಿಹರತಿ = ಪರಿಹರಿಸುತ್ತಿದ್ದಾರೆ. ಯಥಾ = ಯಾವ ರೀತಿಯಾಗಿ, ಪುಷ್ಪಾತ್ = ಹೂವಿನಿಂದ, ಗಂಧಃ = ಗಂಧವು, ಪೃಥಕ್ = ದೂರಪ್ರದೇಶದಲ್ಲಿ, ಗಚ್ಛತಿ = ಹರಡುತ್ತದೊ, ಏವಂ = ಅದೇ ರೀತಿಯಾಗಿ, ಅಂಶಿನಃ = ಅಂಶಿಯಾದ, ಜೀವಾದ್ = ಜೀವನಿಂದ, ಅಂಶಃ = ಅಂಶಗಳು, ಪೃಥಗ್ = ಪ್ರತ್ಯೇಕವಾಗಿ, ಗಚ್ಛಂತಿ = ಹೋಗುತ್ತವೆ.

**भाष्यम् — 'अथैक एव सन् गन्धवद् व्यतिरिच्यते । अथैकीभवति अथ बही भवति । तं यथा यथेश्वरः प्रकुरुते तथा भवति सोऽचिन्त्यः परमो गरीयान्' इति शाण्डिल्यश्रुतिः ।**

ಅನುವಾದ - ಜೀವನು ಅದ್ವಿತೀಯನಾಗಿದ್ದರೂ ಪರಿಮಳದಂತೆ ಅಂಶಿಯನ್ನು ಬಿಟ್ಟು ಅಂಶರೂಪವನ್ನು ತಾಳುತ್ತಾನೆ. ಪುನಃ ಅಂಶಿಯೊಂದಿಗೆ ಐಕ್ಯವನ್ನು ಹೊಂದುತ್ತಾನೆ. ಯೋಗಸಾಮರ್ಥ್ಯದಿಂದ ಅನೇಕ ರೂಪಗಳನ್ನು ತಾಳುತ್ತಾನೆ. ಹೇಗೆ ಹೇಗೆ ಪರಮಾತ್ಮನು ಆ ಜೀವನನ್ನು ಮಾಡುತ್ತಾನೋ ಜೀವನು ಅಂಥ ರೂಪಗಳನ್ನೇ ತಾಳುತ್ತಾನೆ - ಆ ಪರಮಾತ್ಮನಾದರೂ ಅಚಿಂತ್ಯನೂ, ಶ್ರೇಷ್ಠನೂ, ಸರ್ವೋತ್ತಮನೂ ಆಗಿರುತ್ತಾನೆ.

ಪರಿಪೂರ್ಣಚಂದ್ರಿಕಾ

ಪ್ರತಿಪದಾರ್ಥ -- ಏಕಃ ಏವ ಸನ್ = ಜೀವನು ಒಬ್ಬನೇ ಆಗಿದ್ದರೂ, ಗಂಧವತ್ = ಪರಿಮಳದಂತೆ, ವ್ಯತಿರಿಚ್ಯತೇ = ಅಂಶಿಯಿಂದ ಅನೇಕ ಅಂಶಗಳನ್ನು ತಾಳುತ್ತಾನೆ. ಅಥ = ಅನಂತರ, ಏಕೀಭವತಿ = ಅಂಶಿಯ ಜೊತೆ ಐಕ್ಯವನ್ನು ಪಡೆಯುತ್ತಾನೆ. ಅಥ = ಅನಂತರ, ಬಹ್ವೀಭವತಿ = ಯೋಗಸಾಮರ್ಥ್ಯದಿಂದ ಅನೇಕರೂಪಗಳನ್ನು ತಾಳುತ್ತಾನೆ. ಈಶ್ವರಃ = ಈಶ್ವರನು, ತಂ = ಆ ಜೀವನನ್ನು, ಯಥಾ ಯಥಾ = ಹೇಗೆ ಹೇಗೆ, ಪ್ರಕುರುತೇ = ಮಾಡುತ್ತಾನೋ, ತಥಾ ತಥಾ = ಹಾಗೆ ಹಾಗೆ, ಸಃ = ಆ ಜೀವನು, ಭವತಿ = ಆಗುತ್ತಾನೆ. ಸಃ = ಆ ಭಗವಂತನು, ಅಚಿಂತ್ಯಃ = ಅಚಿಂತ್ಯನು, ಪರಮಃ = ಶ್ರೇಷ್ಠನು, ಗರೀಯಾನ್ = ಸರ್ವೋತ್ತಮನು, ಇತಿ = ಹೀಗೆ, ಶಾಂಡಿಲ್ಯಶ್ರುತಿಃ = ಶಾಂಡಿಲ್ಯಶ್ರುತಿಯು ಹೇಳುತ್ತಿದೆ.

**भाष्यम् –**

**'अचिन्त्येशशक्त्यैव ह्येकोऽवयववर्जितः ।**
**आत्मानं बहुधा कृत्वा क्रीडते योगसम्पदा ।।' इति च पाद्मे ।।१।।**

**।। इति श्रीमदानन्दतीर्थभगवत्पादाचार्यविरचिते**
**ब्रह्मसूत्रभाष्ये व्यतिरेकाधिकरणम् ।। १३ ।।**

ಅನುವಾದ - ಪರಮಾತ್ಮನ ಅಚಿಂತ್ಯಶಕ್ತಿಯಿಂದಲೇ ಅವಯವಗಳಿಲ್ಲದ ಜೀವನು ತನ್ನ ಯೋಗಸಾಮರ್ಥ್ಯದಿಂದ ತಪಸ್ಸನ್ನು ಮಾಡಿ ಅನೇಕರೂಪಗಳನ್ನು ಸ್ವೀಕರಿಸಿ ವಿಹರಿಸುತ್ತಾನೆ.

ಪ್ರತಿಪದಾರ್ಥ -- ಅಚಿಂತ್ಯ = ಅಚಿಂತ್ಯವಾದ, ಈಶಶಕ್ತ್ಯೈವ = ಈಶ್ವರಶಕ್ತಿಯಿಂದಲೇ, ಅವಯವ ವರ್ಜಿತಃ = ಅವಯವಗಳಿಲ್ಲದ, ಏಕಃ = ಜೀವನು, ಯೋಗಸಂಪದಾ = ತನ್ನ ಯೋಗಸಾಮರ್ಥ್ಯದಿಂದ ತನ್ನನ್ನು, ಬಹುಧಾ = ಅನೇಕ ರೂಪಗಳನ್ನಾಗಿ, ಕೃತ್ವಾ = ಮಾಡಿ, ಕ್ರೀಡತೇ = ವಿಹರಿಸುತ್ತಾನೆ. ಇತಿ ಚ ಪಾದ್ಮೇ = ಹೀಗೆ ಪದ್ಮಪುರಾಣದಲ್ಲಿ ಹೇಳಿದೆ.

ಇಲ್ಲಿಗೆ ವ್ಯತಿರೇಕಾಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**तत्वप्रकाशिका – अत्रेश्वरे श्रुतिसमन्वयसिध्यर्थं जीवविषयश्रुतिविरोधपरिहारादस्ति शास्त्रादिसङ्गतिः । जगत्कारणे हरौ श्रुतीनां समन्वयः प्रगुक्तः । स च श्रुतीनां विरोधेनाप्रामाण्ये न युक्तः स्यादिति सर्वथा निराकार्यः । प्रकृतो जीव एव विषयः । किमेकरूपः किं वाऽनेकरूप इति सन्देहः । सन्देहबीजं श्रुतिविगानं दर्शयति – स इति ।।**

ಈ ಅಧಿಕರಣದಲ್ಲಿ ಶ್ರುತಿಸಮನ್ವಯದ ಸಿದ್ಧಿಗೋಸ್ಕರ ಜೀವವಿಷಯಕವಾದ ಶ್ರುತಿವಿರೋಧವನ್ನು ಪರಿಹಾರ ಮಾಡಲಾಗಿದೆ. ಆದ್ದರಿಂದ ಶಾಸ್ತ್ರ-ಅಧ್ಯಾಯ-ಪಾದ ಸಂಗತಿಗಳು ಇರುತ್ತವೆ.

ಜಗತ್ಕಾರಣನಾದ ಶ್ರೀಹರಿಯಲ್ಲಿ ಶ್ರುತಿಗಳು ಸಮನ್ವಯವಾಗುತ್ತವೆಂದು ಈ ಹಿಂದೆ ಸಮರ್ಥಿಸಲಾಯಿತು. ಹೀಗೆ ಶ್ರುತಿಗಳಿಗೆ ಪರಸ್ಪರ ವಿರೋಧವು ಬರುವ ಮೂಲಕ ಅಪ್ರಾಮಾಣ್ಯವು ಪ್ರಾಪ್ತವಾದರೆ ಯುಕ್ತವಾಗುವುದಿಲ್ಲ. ಆದ್ದರಿಂದ ಶ್ರುತಿಗಳ ವಿರೋಧವನ್ನು ನಿರಾಕರಣೆ ಮಾಡಲೇಬೇಕು.

ಪ್ರಕೃತನಾದ ಜೀವನೇ ಅಧಿಕರಣಕ್ಕೆ ವಿಷಯನಾಗಿದ್ದಾನೆ. ಇವನು ಏಕರೂಪವುಳ್ಳವನೋ, ಅನೇಕ ರೂಪವುಳ್ಳವನೋ? ಎಂಬುದೇ ಅಧಿಕರಣದ ಸಂದೇಹ. ಸಂದೇಹಕ್ಕೆ ಕಾರಣ ಶ್ರುತಿಗಳ ವಿರೋಧವೇ ಆಗಿದೆ. ಇದನ್ನು ಭಾಷ್ಯದಲ್ಲಿ 'ಸ ನಿತ್ಯಃ' ಇತ್ಯಾದಿಯಾಗಿ ಉಲ್ಲೇಖ ಮಾಡುತ್ತಿದ್ದಾರೆ.

ವಿವರಣೆ- ಹಿಂದಿನ ಅಧಿಕರಣಗಳಲ್ಲಿ ಜೀವನಿಗೆ ಅಣುತ್ವವನ್ನು, ಸಾಂಶತ್ವವನ್ನು ಸಮರ್ಥಿಸಲಾಗಿದೆ. ಒಂದುವೇಳೆ ಜೀವನು ಅಣುವಾದರೆ ಆಗ ಯೋಗಿಗಳಿಗೆ ಅನೇಕ ರೂಪ ತಾಳುವಿಕೆಯು ಅಯುಕ್ತವಾಗುತ್ತದೆ ಎಂಬುದಾಗಿ ಹಿಂದಿನ ಅಧಿಕರಣದ ಪ್ರಧಾನ ಸೂತ್ರದಿಂದ ಅಥವಾ ಸಾಂಶನೆಂದು ಒಪ್ಪಿದರೂ ಕೂಡ ನಿರವಯತ್ವಶ್ರುತಿವಿರೋಧವು ಬರುತ್ತದೆಂದು 'ಅವಿರೋಧಶ್ಚಂದನವತ್' ಎಂಬ ಗುಣಸೂತ್ರದಿಂದ ಆನಂತರ್ಯಸಂಗತಿಯು ಇರುತ್ತದೆ.

**तत्वप्रकाशिका – जीवत्वज्ञापनायाऽदिवाक्योद्धारः । एकरूप एवेति पूर्वः पक्षः । 'स एकधा' इति श्रुतेः । न चान्यत्राप्यस्ति श्रुतिरिति वाच्यम् । ऐकरूप्यश्रुतेः सयुक्तिकत्वात् ।**

ಜೀವನನ್ನು ಕುರಿತು ಶ್ರುತಿಯು ಹೊರಟಿದೆ ಎಂಬುದನ್ನು ತೋರಿಸುವುದಕ್ಕಾಗಿ ಶ್ರುತಿಯ ಆರಂಭ ಭಾಗವನ್ನು ಭಾಷ್ಯದಲ್ಲಿ ಉದಾಹರಿಸಿದ್ದಾರೆ.

ಜೀವನಿಗೆ ಒಂದೇ ರೂಪವೆಂಬುದು ಪೂರ್ವಪಕ್ಷ. 'ಸ ಏಕಧಾ' ಎಂಬ ಗೌಪವನಶ್ರುತಿಯು ಹಾಗೆಯೇ ಹೇಳುತ್ತಿದೆ. ಜೀವನಿಗೆ ಅನೇಕ ರೂಪಗಳಿವೆ ಎಂಬ ವಿಷಯದಲ್ಲೂ ಶ್ರುತಿ ಪ್ರಮಾಣವಾಗಿದೆಯಲ್ಲವೇ? ಎನ್ನಬಾರದು. ಒಂದೇ ರೂಪವಿದೆ ಎಂದು ಹೇಳುವ ಶ್ರುತಿಯು ಯುಕ್ತಿಬದ್ಧವಾಗಿದೆ.

'ಸ ಪಂಚಧಾ' 'ಸ ಸಪ್ತಧಾ' ಎಂಬ ಶ್ರುತಿಯು ಜೀವನಿಗೆ ಐದು ರೂಪಗಳಿವೆ, ಏಳು ರೂಪಗಳಿವೆ, ಹತ್ತು ರೂಪಗಳಿವೆ, ನೂರಾರು ರೂಪಗಳಿವೆ ಎಂದೆಲ್ಲಾ ಪ್ರತಿಪಾದನೆ ಮಾಡುತ್ತಿದೆ. ಆದರೆ ಗೌಪವನ ಶ್ರುತಿಯು ಜೀವನಿಗೆ ಒಂದೇ ರೂಪವಿದೆ. ಅನೇಕ ರೂಪಗಳಿಲ್ಲ ಎಂದು ಸ್ಪಷ್ಟವಾಗಿ ಹೇಳುತ್ತಿದೆ. 'ಸ ಏಕಧಾ' ಎಂಬುದಾಗಿ ಒಂದೇ ರೂಪವನ್ನು ಹೇಳುವ ಈ ಶ್ರುತಿಯು 'ನ ಸಪ್ತಧಾ' 'ನ ದಶಧಾ' ಎಂಬುದಾಗಿ ಅನೇಕ ರೂಪಗಳಿಲ್ಲ ಎಂಬುದರ ನಿಷೇಧವನ್ನೂ ಕೂಡ ಮಾಡುತ್ತಿದೆ. ಈ ಶ್ರುತಿಯು ಜೀವನನ್ನೇ ಹೇಳುತ್ತಿದೆ ಎಂದು ಹೇಗೆ ನಿರ್ಣಯಿಸುವುದು ? ಎಂಬ ಪ್ರಶ್ನೆ ಸಹಜ. ಅದಕ್ಕಾಗಿ ಭಾಷ್ಯಕಾರರು 'ಸ ಏಕಧಾ' ಎಂಬ ಶ್ರುತಿಯ ಪ್ರಾರಂಭದ ಭಾಗವನ್ನೂ ಕೂಡ ನಿರ್ಣಯಿಸಿದ್ದಾರೆ 'ಸ ನಿತ್ಯದಾ ನಿರವಯವಃ' ಇತ್ಯಾದಿಯಾಗಿ. ಜೀವನಿಗೆ ಒಂದೇ ರೂಪ ಹೇಳುವುದೇ ಯುಕ್ತವಾಗುತ್ತದೆಂಬುದನ್ನು ಈ ಮುಂದೆ ಸಮರ್ಥಿಸುತ್ತಾರೆ.

**तत्वप्रकाशिका – युज्यते खलु विभावात्मनि योगप्रभावेन शरीरबहुतया बाहुरूप्यम् । तच्च निषिद्धम् । नच वक्तव्यमणोरप्यात्मनोऽशंबाहुल्यात् बहुरूपत्वमिति । निरवयवत्वात् । 'स नित्यो निरवयवः' इति श्रुतेः । नच मन्तव्यं योगिनोऽघटितघटकसामर्थ्यवत्त्वेनोपपन्नं बहुरूपत्वम् । दृश्यते हि समाधिसामर्थ्यादेव तेषां समुद्रपानादीति । तथा सति जीवस्येश्वरेणगुणसाम्यापातात्।**

ವಿಭುವಾದ ಜೀವಾತ್ಮನಿಗೆ ಯೋಗಪ್ರಭಾವದಿಂದ ಅನೇಕ ಶರೀರವನ್ನು ಧರಿಸುವ ಮೂಲಕ ಅನೇಕ ರೂಪಗಳನ್ನು ಹೇಳುವುದು ಯುಕ್ತವಾಗುತ್ತದೆ. ಆದರೆ ಜೀವಾತ್ಮನು ವಿಭು ಆಗಿರುವುದಿಲ್ಲ ಎಂದು ಈ ಹಿಂದಿನ ಅಧಿಕರಣದಲ್ಲಿ ಸಮರ್ಥಿಸಲಾಗಿದೆ. ಇನ್ನು ಅಣುವಾದ ಜೀವಾತ್ಮನಿಗೂ ಕೂಡ ಅಂಶಬಾಹುಲ್ಯವಿರುವುದರಿಂದ ಅನೇಕ ರೂಪಗಳಿವೆ ಎಂದು ಹೇಳಬೇಕು. ಇದು ತಪ್ಪು. ಜೀವಾತ್ಮನು ನಿರವಯವನಾಗಿದ್ದಾನೆ. 'ಸ ನಿತ್ಯಃ ನಿರವಯವಃ' ಎಂಬ ಶ್ರುತಿಯು ಇದನ್ನು ಪ್ರತಿಪಾದನೆ ಮಾಡುತ್ತಿದೆ.

ಯೋಗಿಗಳಿಗೆ ಅಘಟಿತಘಟನಾಸಾಮರ್ಥ್ಯವಿರುವುದರಿಂದ ಅಣುರೂಪರಾಗಿದ್ದರೂ ಅನೇಕ ರೂಪಗಳನ್ನು ಧರಿಸುವ ಸಾಮರ್ಥ್ಯವಿರುತ್ತದೆ. ತಮ್ಮಲ್ಲಿರುವ ಯೋಗಸಾಮರ್ಥ್ಯದಿಂದ ಅಗಸ್ತ್ಯರು ಸಮುದ್ರವನ್ನೇ ಪಾನ ಮಾಡಿರುವುದು ಕಂಡಿದೆ. ಹೀಗೆ ಪ್ರಶ್ನಿಸಬಾರದು. ಹಾಗೊಂದು ವೇಳೆ ಜೀವಾತ್ಮನಿಗೆ ಅಘಟಿತಘಟನಾಸಾಮರ್ಥ್ಯವನ್ನು ಒಪ್ಪಿದರೆ ಈಶ್ವರನ ಗುಣ ಜೀವನಲ್ಲೂ ಕೂಡ ಸಮಾನವೆಂದು ಒಪ್ಪಿದಂತಾಗುತ್ತದೆ.

**तत्वप्रकाशिका – एतदेवैश्वर्यं यत्कर्तुमकर्तुमन्यथाकर्तुं सामर्थ्यम् । अतः सयुक्तिकैतच्छ्रुतिविरोधेन बहुरूपश्रुतिरप्रमाणमेव । न च श्रुतेरीश्वर विषयता । विमुच्यत इति जीवलिङ्गात् । ततश्च न हरौ श्रुतिसमन्वयो युक्त इति प्राप्ते सिद्धान्तयत्सूत्रमवतारयति – अत इति ।।**

ಅಘಟಿತಘಟನಾಸಾಮರ್ಥ್ಯವನ್ನೇ ಐಶ್ವರ್ಯ ಎಂದು ಕರೆಯಲಾಗುತ್ತದೆ. ಮಾಡಲು, ಮಾಡದೇ ಇರಲು, ಅನ್ಯಥಾ ಮಾಡಲು ಇರುವ ಸಾಮರ್ಥ್ಯವೇ ಐಶ್ವರ್ಯ ಎಂದು ಕರೆಸಿಕೊಳ್ಳುತ್ತದೆ. ಇಂತಹ ಐಶ್ವರ್ಯವಿರುವುದು ಈಶ್ವರನಲ್ಲಿ ಮಾತ್ರ.

ಹೀಗೆ ಯುಕ್ತಿಬದ್ಧವಾದ 'ಸ ಏಕಧಾ' ಎಂಬ ಶ್ರುತಿಯ ವಿರೋಧವಿರುವುದರಿಂದ 'ಸ ಪಂಚಧಾ' ಎಂಬ ಬಹುರೂಪವನ್ನು ಹೇಳುವ ಶ್ರುತಿಗೆ ಅಪ್ರಾಮಾಣ್ಯವನ್ನೇ ಹೇಳಬೇಕು.

'ಸ ಏಕಧಾ' ಎಂಬ ಶ್ರುತಿಯು ಈಶ್ವರಪರವೆಂದು ಹೇಳಬಾರದು. 'ಸ ವಿಮುಚ್ಯತೇ' ಎಂಬುದಾಗಿ ಸಂಸಾರ ಬಂಧನದಿಂದ ಮುಕ್ತನಾಗುವಿಕೆ ಎಂಬ ಜೀವನ ಲಿಂಗವೇ ಇಲ್ಲಿ ಶ್ರುತವಾಗಿದೆ.

ಹಾಗಾಗಿ ಶ್ರೀಹರಿಯಲ್ಲಿ ಶ್ರುತಿಸಮನ್ವಯವು ಸಿದ್ಧವಾಗುವುದಿಲ್ಲವೆಂದು ಅಧಿಕರಣದ ಪೂರ್ವಪಕ್ಷ.

ಸಿದ್ಧಾಂತ ಸ್ಥಾಪಕವಾದ ಸೂತ್ರಕ್ಕೆ 'ಅತಃ' ಇತ್ಯಾದಿಯಾಗಿ ಅವತಾರಿಕೆ ನೀಡುತ್ತಿದ್ದಾರೆ.

**तत्वप्रकाशिका – अतो विरोधः सन्देहबीजमस्ति तं परिहरतीत्यर्थः । सूत्रं व्याचष्टे – यथेति ।।**

ಹೀಗೆ ಶ್ರುತಿಗಳಲ್ಲಿ ವಿರೋಧವಿದೆ. ಆದ್ದರಿಂದ ಸಂದೇಹಬೀಜವಿದೆ. ಈ ವಿರೋಧವನ್ನು ಪರಿಹಾರ ಮಾಡುತ್ತಿದ್ದಾರೆಂಬುದು 'ಅತಃ' ಎಂಬುದರ ಅರ್ಥ. ಸೂತ್ರಕ್ಕೆ 'ಯಥಾ' ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ಜೀವನು ಅಣುವಾದ್ದರಿಂದ ಅವಯವರಹಿತನಾಗಿದ್ದಾನೆ. ಆದ್ದರಿಂದ ಯೋಗಸಾಮರ್ಥ್ಯದಿಂದ ಅನೇಕ ರೂಪಗಳನ್ನು ಇವನು ತಾಳುವುದಾದರೆ ಈಶ್ವರನ ಗುಣಗಳಿಗೆ ಸಾಮ್ಯ ಉಂಟಾಗುತ್ತದೆ. ಹಾಗಾಗಿ ವಿರೋಧವಿದೆ ಎಂಬುದಕ್ಕೆ ಸಂದೇಹಕಾರಣವಿದೆ ಎಂದರ್ಥ. ಇದನ್ನು ಪರಿಹರಿಸಿ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. 'ಯಥಾ ಪುಷ್ಪಾತ್ ಗಂಧಃ' ಎಂಬ ಭಾಷ್ಯದಿಂದ.

**तत्वप्रकाशिका – अस्त्येव जीवस्य बहुरूपत्वम् । अणुत्वेऽप्यंशव्यतिरेकेण-बहुत्वोपपत्तेः । न चांशिनं विहायान्यत्रांशस्य गमनमनुपपन्नम् । गन्धादौ दृष्टत्वात्।**

ಜೀವನಿಗೆ ಅನೇಕ ರೂಪಗಳು ಇದ್ದೇ ಇರುತ್ತವೆ. ಅವನು ಅಣುವಾಗಿದ್ದರೂ ಕೂಡ ಅವನಲ್ಲಿರುವ ಅಂಶಗಳು ಅವನಿಂದ ಬೇರೆಯಾಗಿ ಬಹುತ್ವವನ್ನು ಹೊಂದುತ್ತವೆ. ಅಂಶಿಯನ್ನು ಬಿಟ್ಟು ಬೇರೆಡೆ ಅಂಶದ ಗಮನವು ಹೇಗೆ ಯುಕ್ತವಾಗುತ್ತದೆ? ಎಂದು ಪ್ರಶ್ನಿಸಬಾರದು. ಪುಷ್ಪಗಂಧದಲ್ಲಿ ಹಾಗೆ ಬೇರ್ಪಡೆಯಾಗುವುದು ಕಂಡಿದೆ.

ವಿವರಣೆ - 'ನ ದೃಷ್ಟಾಂತೇ ಸರ್ವಸಾಮ್ಯಂ' ಎಂಬ ನಿಯಮದಂತೆ ದೃಷ್ಟಾಂತದಿಂದ ಸರ್ವಸಾಮ್ಯವನ್ನು ಇಲ್ಲಿ ತಿಳಿಯಬಾರದು. ಏಕೇದರೆ ಗಂಧಕ್ಕೂ, ಗಂಧವುಳ್ಳ ಪುಷ್ಪಕ್ಕೂ ಭೇದವೇ ಇರುತ್ತದೆ. ಗಂಧವು ಪುಷ್ಪದ ಅಂಶದಲ್ಲಿರುತ್ತದೆ. ಈ ಪುಷ್ಪಕ್ಕೆ ಭಿನ್ನವಾದ ಅಂಶವಿದೆ ಎಂಬುದು ಸಿದ್ಧವಾಗಿದೆ. ಅದರಂತೆ ಜೀವಾತ್ಮನಿಗೆ ಭಿನ್ನವಾದ ಅಂಶವಿದೆ ಎಂಬ ಭ್ರಾಂತಿ ಬರುತ್ತದೆ. ಆದರೆ ಹಾಗಿಲ್ಲ. ಜೀವನು ತನ್ನ ಯೋಗದ ಶಕ್ತಿಯಿಂದ ಅಭಿನ್ನಾಂಶದಿಂದ ಬಹುರೂಪಗಳನ್ನು ಪಡೆಯುತ್ತಾನೆಂದು ತಿಳಿಯಬೇಕು.

**तत्वप्रकाशिका – न च श्रुतिविरोधः । तस्याः स्वरूपैक्यविषयत्वात् । न च भिन्नंशशून्यत्वादनुपपत्तिः । योगसम्पदा तदुपपत्तेः । न चेश्चरेणसाम्यापातः । योगिनामपि बहुरूपत्वशक्तेर्योगाराधितेश्वरप्रसादायत्तत्वात्।**

'ಸ ಏಕಧಾ' ಎಂಬ ಶ್ರುತಿಯು ಅನೇಕ ರೂಪಗಳನ್ನು ಹೇಳುವ ವಿಷಯವನ್ನು ವಿರೋಧಿ ಸುತ್ತಿದೆಯಲ್ಲವೇ? ಎಂದು ಪ್ರಶ್ನಿಸಬಾರದು. 'ಸ ಏಕಧಾ' ಎಂಬ ಶ್ರುತಿಯು ಜೀವಸ್ವರೂಪಕ್ಕೆ ಐಕ್ಯವನ್ನು ಹೇಳಲು ಮಾತ್ರ ಹೊರಟಿರುತ್ತದೆ.

ಜೀವಾತ್ಮನಿಗೆ ಭಿನ್ನವಾದ ಅಂಶವು ಇಲ್ಲದಕಾರಣ ಅಂಶಗಳಿಂದ ಅನೇಕ ರೂಪಗಳನ್ನು ತಾಳುತ್ತಾನೆಂಬುದು ಅನುಪಪನ್ನವಾಗುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಯೋಗಶಕ್ತಿಯಿಂದ ಅಭಿನ್ನಾಂಶವನ್ನು ಅನೇಕ ರೂಪಗಳಿಂದ ತಾಳುವಿಕೆಯು ಉಪಪನ್ನವಾಗುತ್ತದೆ.

ಹಾಗಾದರೆ ಈಶ್ವರನಿಂದ ಸಾಮ್ಯವು ಬರಬೇಕಾಗುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಯೋಗಿಗಳಿಗೂ ಕೂಡ ಅನೇಕ ರೂಪಗಳನ್ನು ತಾಳುವ ಶಕ್ತಿಯು ಇರುತ್ತದೆ. ತಮ್ಮ ಯೋಗದಿಂದ ಆರಾಧಿಸಲ್ಪಟ್ಟ ಈಶ್ವರನ ಪ್ರಸಾದದಿಂದ ಇಂತಹ ಶಕ್ತಿಯನ್ನು ಅವರು ಪಡೆದುಕೊಂಡಿರುತ್ತಾರೆ.

**तत्वप्रकाशिका – न चेश्वरस्याप्येतदशक्यम् । तस्याचिन्त्यशक्तित्वात् । कुत एत्सर्वमिति चेदयेतिश्रुतेरेवेति भावः । अत्र चशब्दसूचितां स्मृतिं च दर्शयति – अचिन्त्ययेति ।। तदेवं श्रुत्यविरोधेन जीवस्य बहुरूपत्वोपपत्तेर्युक्तो हरौ श्रुतिसमन्वय इति सिद्धम् ।।**

ಒಬ್ಬನೇ ಜೀವನನ್ನು ಅನೇಕ ರೂಪಗಳುಳ್ಳವನನ್ನಾಗಿ ಮಾಡಲು ಈಶ್ವರನಿಗೂ ಕೂಡ ಸಾಧ್ಯವಿಲ್ಲ ಎಂದು ಹೇಳಬಾರದು. ಈಶ್ವರನು ಅಚಿಂತ್ಯವಾದ ಶಕ್ತಿಯುಳ್ಳವನಾದ್ದರಿಂದ ಹಾಗೆ ಮಾಡಲು ಸಮರ್ಥನಾಗಿದ್ದಾನೆ.

ವ್ಯತಿರೇಕಾಧಿಕರಣ (೨-೩-೧೩)

ಈ ವಿಷಯಗಳಿಗೆ ಏನು ಪ್ರಮಾಣ ? ಎಂಬ ಪ್ರಶ್ನೆಗೆ ಶ್ರುತಿಯೇ ಪ್ರಮಾಣ ಎಂದು ತಿಳಿಯಬೇಕು. ಸೂತ್ರದಲ್ಲಿರುವ ಚ ಶಬ್ದದಿಂದ ಸೂಚಿತವಾದ ಸ್ಮೃತಿಯನ್ನು ಭಾಷ್ಯಕಾರರು 'ಅಚಿಂತ್ಯಯಾ' ಇತ್ಯಾದಿಯಾಗಿ ಉಲ್ಲೇಖ ಮಾಡುತ್ತಿದ್ದಾರೆ. ಹೀಗೆ ಶ್ರುತಿಯ ವಿರೋಧವಿಲ್ಲದ್ದರಿಂದ ಜೀವನಿಗೆ ಬಹುರೂಪತ್ವವು ಉಪಪನ್ನವಾಗುತ್ತದೆ. ಹಾಗಾಗಿ ಶ್ರೀಹರಿಯಲ್ಲಿ ಶ್ರುತಿಸಮನ್ವಯವು ಸಿದ್ಧವಾಯಿತು.

**ವಿವರಣೆ** - ಶ್ರುತಿಯಲ್ಲಿ ಕೆಲವೆಡೆ ಜೀವನು ಒಬ್ಬನೇ ಆಗಿದ್ದಾನೆ, ಅವನಿಗೆ ಅನೇಕ ರೂಪಗಳಿಲ್ಲವೆಂದು ಹೇಳಲಾಗಿದೆ. ಇನ್ನು ಕೆಲವೆಡೆ ಅನೇಕ ರೂಪಗಳಿವೆ ಎಂದು ಹೇಳಲಾಗಿದೆ. ಈ ವಿರೋಧವನ್ನು ಅನೇಕ ರೀತಿಯಲ್ಲಿ ಪರಿಹರಿಸಬಹುದು. ಜೀವನಿಗೆ ಭಿನ್ನವಾದ ಅಂಶಗಳಿಲ್ಲ ಎಂಬ ದೃಷ್ಟಿಯಿಂದ ಅನೇಕ ರೂಪಗಳಿಲ್ಲವೆಂದು ಶ್ರುತಿ ಹೇಳಿದೆ. ಆದರೆ ಅಭಿನ್ನವಾದ ಅಂಶಗಳನ್ನು ಹೇಳಲು ಆತಂಕವಿಲ್ಲ ಮತ್ತು ಯೋಗಸಾಮರ್ಥ್ಯವನ್ನು ಹೊಂದಿರುವವರಿಗೆ ಮಾತ್ರ ಅನೇಕ ಅಂಶಗಳನ್ನು ಹೊಂದಲು ಸಾಮರ್ಥ್ಯವಿರುತ್ತದೆ. ಯೋಗಸಾಮರ್ಥ್ಯ ಇಲ್ಲದ ಜೀವರಿಗೆ ಅನೇಕಾಂಶಗಳನ್ನು ಹೊಂದಲು ಸಾಧ್ಯವಿಲ್ಲ.

ಜೀವರು ಸಾಂಶರು, ನಿರಂಶರು ಎಂಬುದಾಗಿ ಎರಡುವಿಧ. ಸಾಂಶರ ವಿಷಯದಲ್ಲಿ ಮಾತ್ರ ಈ ಅಧಿಕರಣದಲ್ಲಿ ಅಂಶಗಳನ್ನು ಹೇಳಲಾಗಿದೆ. ನಿರಂಶರಾದ ಜೀವರ ವಿಷಯದಲ್ಲಿ ಈ ಅಧಿಕರಣದ ಸಿದ್ಧಾಂತವನ್ನು ವಿವಕ್ಷಿಸಬಾರದು.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ವ್ಯತಿರೇಕಾಧಿಕರಣ ಮುಗಿಯಿತು

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## व्यतिरेकाधिकरणम्

### ಗಂಧನಂತೆ ಜೀವನಿಗೂ ಕೂಡ ಅನೇಕ ಅಂಶಗಳಿವೆ

**व्यतिरेको गन्धवत्तथा च दर्शयति ।। यदि जीवोऽणुस्तर्हि योगिनो बहुरूपत्वायोग इति पूर्वाक्षेपेण पूर्वपक्षोत्थानात्सङ्गतिः ।।**

ಹಿಂದಿನ ಅಧಿಕರಣದಲ್ಲಿ ಜೀವನನ್ನು ಅಣುವೆಂದು ಸಾಧನೆ ಮಾಡಲಾಗಿದೆ. ಹಾಗಾದರೆ ಯೋಗಿಗೆ ಭಿನ್ನವಾದ ಅಂಶಗಳು ಸರ್ವಥಾ ಇರುವುದಿಲ್ಲ. ಆದರೂ ಕೂಡ ಅನೇಕ ರೂಪಗಳನ್ನು ಹೊಂದುತ್ತಾನೆ. ಯಾವ ಕಾರಣದಿಂದ ಅನೇಕ ರೂಪಗಳನ್ನು ಯೋಗಿ ಹೊಂದಿದ್ದಾನೋ ಆ ಕಾರಣದಿಂದ ಜೀವನನ್ನು ಅಣುವೆಂದು ಹೇಳಲು ಸಾಧ್ಯವಿಲ್ಲ. ಹೀಗೆ ಹಿಂದಿನ ಅಧಿಕರಣದ ಸಿದ್ಧಾಂತವನ್ನು ಆಕ್ಷೇಪ ಮಾಡಿ ಪೂರ್ವಪಕ್ಷವು ಹುಟ್ಟುತ್ತಿರುವುದರಿಂದ ಈ ಅಧಿಕರಣವು ಸಂಗತವಾಗುತ್ತದೆ.

**अत्र जीवस्य बहुरूपत्वश्रुतिः किं निरवयवत्वयुक्त्यनुगृहीतयैकरूपत्वश्रुत्या बाधितोत नेति चिन्ता । (अत्र श्रुतिसमन्वयेनोक्तं विष्णोः सर्वस्रष्टृत्वादिकमयुक्तं न वेति चिन्ता । तदर्थं श्रुतिरप्रमाणं न वेति । तदर्थं जीवबहुरूपत्वश्रुतिः किं निरवयवत्वयुक्त्यनुगृहीतयैकरूपत्वश्रुत्या बाधितोत नेति)**

ಜೀವನು ಅನೇಕ ರೂಪಗಳನ್ನು ಹೊಂದಿದ್ದಾನೆ ಎಂದು ಹೇಳುವ ಬಹುರೂಪತ್ವಶ್ರುತಿಯು ನಿರವಯವತ್ವ ಯುಕ್ತಿಯಿಂದ ಅನುಗೃಹೀತವಾದ ಏಕರೂಪತ್ವವನ್ನು ಹೇಳುವ ಶ್ರುತಿಯಿಂದ ಬಾಧಿತವಾಗುತ್ತದೋ ಇಲ್ಲವೋ? ಎಂಬುದು ಪ್ರಧಾನ ಸಂಶಯ.

ಈ ಸಂಶಯದ ವಿವರಣೆ ಹೀಗಿದೆ – ಶ್ರುತಿಸಮನ್ವಯದ ಮೂಲಕ ವಿಷ್ಣುವಿನಲ್ಲಿ ಜಗತ್ ಸ್ರಷ್ಟೃತ್ವವನ್ನು ಸಮರ್ಥನೆ ಮಾಡಲಾಯಿತು. ಇದು ಅಯುಕ್ತವೋ ಅಲ್ಲವೋ ಎಂಬುದು ಮುಖ್ಯ ಸಂಶಯ. ಶ್ರುತಿಯು ಅಪ್ರಮಾಣವೋ ಅಲ್ಲವೋ? ಎಂಬುದು ಅನಂತರದ ಸಂಶಯ. ಇದರ ಪರಿಹಾರಕ್ಕಾಗಿ ಜೀವನಿಗೆ ಬಹುರೂಪತ್ವವನ್ನು ಹೇಳುವ ಶ್ರುತಿಯು ನಿರವಯವತ್ವ ಯುಕ್ತಿಯಿಂದ ಅನುಗೃಹೀತವಾದ ಏಕರೂಪತ್ವವಾದ ಶ್ರುತಿಯಿಂದ ಬಾಧಿತವಾಗುತ್ತದೋ ಇಲ್ಲವೋ? ಎಂಬ ಸಂಶಯ ಪರಿಹಾರವಾಗಬೇಕು.

**तदर्थं भिन्नांशरहितस्य बहुरूपत्वं न घटत उत योगसामर्थ्याद्घटत इति । तदर्थं योगिनोऽघटितघटनाशक्तिमत्त्वे किमीश्वरत्वमापद्यत उत नेति । न्यायविवरणोक्तां पूर्वपक्षयुक्तिमाह – तथा सतीति ।।**

ಇದರ ಪರಿಹಾರಕ್ಕಾಗಿ ಭಿನ್ನಾಂಶರಹಿತನಾದವನಿಗೆ ಬಹುರೂಪತ್ವವು ಕೂಡುವುದಿಲ್ಲವೋ ಅಥವಾ ಯೋಗಸಾಮರ್ಥ್ಯದಿಂದ ಕೂಡುತ್ತದೋ? ಎಂಬ ಸಂಶಯವು ಪರಿಹಾರವಾಗಬೇಕು. ಇದರ ಪರಿಹಾರಕ್ಕಾಗಿ ಯೋಗಿಗೆ ಅಘಟಿತಘಟನಾಶಕ್ತಿ ಇರುವುದಾದರೆ ಸರ್ವೇಶ್ವರತ್ವವು ಬರುತ್ತದೋ ಇಲ್ಲವೋ? ಎಂಬ ಸಂಶಯ ಪರಿಹಾರವಾಗಬೇಕು.

ನ್ಯಾಯವಿವರಣದಲ್ಲಿ ಹೇಳಲ್ಪಟ್ಟ ಪೂರ್ವಪಕ್ಷ ಯುಕ್ತಿಯನ್ನು 'ತಥಾ ಸತಿ' ಎಂಬುದರಿಂದ ವಿವರಿಸುತ್ತಿದ್ದಾರೆ.

**अत्र सूत्रे गन्धवच्छब्देनात्यन्तभेदहीनस्यापि व्यतिरेकसम्भावको दृष्टान्त उक्तः। दर्शयतिचशब्दाभ्यां त्वत्यन्ताभिन्नस्यापि विभागरूपे व्यतिरेके श्रुतिस्मृती प्रमाणीकृते । तत्सम्भावकं योगसामर्थ्यं योगिनस्तादृशसामर्थ्यदातृत्वरूपमीश्वरसामर्थ्यं च श्रुतिस्मृतिभ्यामेवोक्ते इति न सूत्रे पृथगुक्ते । प्रमितेऽनन्यगतिके चाविरोध ईश्वरशक्त्येति नातिप्रसङ्गः ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् व्यतिरेकाधिकरणं सम्पूर्णम् ।।१३।।**

ಈ ಸೂತ್ರದಲ್ಲಿ 'ಗಂಧವತ್' ಶಬ್ದದಿಂದ ಅತ್ಯಂತ ಭೇದವಿಲ್ಲದಿದ್ದರೂ ವಿಭಾಗಕ್ಕೆ ಸಂಭಾವಕವಾದ ದೃಷ್ಟಾಂತವನ್ನು ಹೇಳಲಾಗಿದೆ. 'ದರ್ಶಯತಿ' ಹಾಗೂ ಚ ಶಬ್ದಗಳಿಂದ ಅತ್ಯಂತಭೇದವಿದ್ದರೂ ವಿಭಾಗರೂಪವಾದ ವ್ಯತಿರೇಕದಲ್ಲಿ ಶ್ರುತಿಸ್ಮೃತಿಗಳನ್ನು ಪ್ರಮಾಣವಾಗಿ ಹೇಳಲಾಗಿದೆ. ತತ್ಸಂಭಾವಕವಾದ

ಯೋಗಸಾಮರ್ಥ್ಯವು ಯೋಗಿಗಳಿಗೆ ಹಾಗೂ ತತ್‌ಸಾಮರ್ಥ್ಯದಾತೃತ್ವ ಎಂಬ ಈಶ್ವರಸಾಮರ್ಥ್ಯವನ್ನು ಶ್ರುತಿಸ್ಮೃತಿಗಳಲ್ಲೇ ಹೇಳಿರುವುದರಿಂದ ಪ್ರತ್ಯೇಕವಾಗಿ ಸೂತ್ರದಲ್ಲಿ ಹೇಳಿರುವುದಿಲ್ಲ. ಯಾವುದು ಪ್ರಮಿತವಾಗಿದ್ದು ಅನನ್ಯಗತಿಕವಾಗಿದೆಯೋ ಅಲ್ಲಿ ಮಾತ್ರ ಈ ಶ್ವರಶಕ್ತಿಯಿಂದ ನಾವು ವಿರೋಧವನ್ನು ಪರಿಹಾರ ಮಾಡುತ್ತೇವೆ. ಆದ್ದರಿಂದ ಅತಿಪ್ರಸಂಗಕ್ಕೆ ಅವಕಾಶವಿಲ್ಲ.

ವಿವರಣೆ – ಅಣುವಾದ ಜೀವನಿಗೆ ಅನೇಕರೂಪಗಳು ಉಪಪನ್ನವಾಗುತ್ತವೆ. ಇದು ಹೇಗೆ? ಎಂದರೆ ಅಂಶಿಯನ್ನು ಬಿಟ್ಟು ಅಂಶಗಳಿಗೆ ವಿಭಾಗಗಳನ್ನು ನಾವು ಅಂಗೀಕಾರ ಮಾಡುತ್ತೇವೆ. ಇದಕ್ಕೆ ಏನು ಸಂಭಾವಕ? ಎಂದರೆ ಗಂಧವನ್ನು ದೃಷ್ಟಾಂತವನ್ನಾಗಿ ಹೇಳುತ್ತಿದ್ದಾರೆ. ಗಂಧವುಳ್ಳ ಪುಷ್ಪಾವಯವಗಳಿಗೂ ಪುಷ್ಪಕ್ಕೂ ಅತ್ಯಂತಾಭೇದವು ಇರುವುದಿಲ್ಲ, ಭೇದಾಭೇದವೇ ಇರುತ್ತದೆ. ಪ್ರಕೃತ ಜೀವನಿಗೂ ಜೀವನ ಅಂಶಕ್ಕೂ ಅತ್ಯಂತಾಭೇದವಿರುತ್ತದಾದ್ದರಿಂದ ದೃಷ್ಟಾಂತವು ಹೇಗೆ ಕೂಡುತ್ತದೆ ಎಂದರೆ ಎರಡೂ ಕಡೆ ಅತ್ಯಂತಭೇದವು ಇರುವುದಿಲ್ಲ ಎಂಬುದು ಸಮಾನವಾಗಿದೆ. ಆದ್ದರಿಂದ ದೃಷ್ಟಾಂತ ನೀಡಿದ್ದು ಸಮಂಜಸವಾಗಿದೆ.

ಅತ್ಯಂತಾಭಿನ್ನವಾದುದಕ್ಕೂ ಭೇದವನ್ನು ಹೇಳಿದರೆ ವ್ಯಾಹತವಾಗುತ್ತದಲ್ಲವೇ? ಎಂದರೆ ವ್ಯತಿರೇಕ ಶಬ್ದಕ್ಕೆ ವಿಭಾಗ ಎಂದರ್ಥವಲ್ಲ. ಅಂಶವು ಅಂಶಿಯಿಂದ ವಿಶ್ಲೇಷವನ್ನು ಹೊಂದುತ್ತದೆ ಎಂದರ್ಥ. ಈ ವಿಷಯದಲ್ಲಿ ಶ್ರುತಿ ಸ್ಮೃತಿಗಳು ಪ್ರಮಾಣವಾಗಿವೆ. ಅಂಶಕ್ಕೂ ಅಂಶಿಗೂ ಅತ್ಯಂತಾಭೇದವಿದ್ದಾಗ ಅವುಗಳಿಗೆ ವಿಶ್ಲೇಷವಿರುವುದು ಇದು ಅತ್ಯಂತ ಅಸಂಭಾವಿತವಾಗಿದೆಯಲ್ಲವೇ? ಎಂಬ ಪ್ರಶ್ನೆಗೆ ಇದಕ್ಕೆ ಸಂಭಾವಕವಾಗಿ ಯೋಗಸಾಮರ್ಥ್ಯವನ್ನು ಯೋಗಿಗಳಿಗೆ ತತ್ಸಾಮರ್ಥ್ಯದಾತೃತ್ವವನ್ನು ಈಶ್ವರನಿಗೆ ಶ್ರುತಿಸ್ಮೃತಿಗಳಲ್ಲಿ ಹೇಳಲಾಗಿದೆ.

ಯಾವುದನ್ನು ವಿವಕ್ಷಿಸಿ ಅಘಟಿತವಾದುದನ್ನು ಘಟನೆ ಮಾಡಲು ಸಾಧ್ಯವೋ ಅಲ್ಲಿ ಮಾತ್ರ ವಿರೋಧ ಪರಿಹಾರವನ್ನು ಮಾಡಬೇಕು. ಇಲ್ಲದಿದ್ದರೆ ಮಾಡಬಾರದು. ಉದಾ – ಜೀವಭೇದ ಹಾಗೂ ಜೀವಾಭೇದಗಳಿಗೆ ವಿರೋಧವಿದೆ. ಎಲ್ಲಾ ವಿರೋಧಗಳನ್ನು ಈಶ್ವರನ ಶಕ್ತಿಯಿಂದ ಪರಿಹಾರ ಮಾಡಬಹುದೆಂಬ ದೃಷ್ಟಿಯಿಂದ ಜೀವಭೇದ ಹಾಗೂ ಜೀವಾಭೇದಗಳೆರಡನ್ನೂ ಈಶ್ವರನಲ್ಲಿ ಒಪ್ಪಲು ಸಾಧ್ಯವಿಲ್ಲ. ಏಕೆಂದರೆ ಜೀವಾಭೇದವನ್ನು ಒಪ್ಪಿದಾಗ ಈಶ್ವರನ ಶಕ್ತಿಯೇ ನಷ್ಟವಾಗುವ ಪ್ರಸಂಗ ಬರುತ್ತದೆ. ಆದ್ದರಿಂದ ಯಾವುದು ಪ್ರಮಿತವೋ ಅನನ್ಯಗತಿಕವೋ ಅದನ್ನು ಮಾತ್ರ ವಿರೋಧ ಮಾಡಬೇಕು. ಜೀವಾಭೇದವು ಪ್ರಮಿತವೂ ಅಲ್ಲ ಅನನ್ಯಗತಿಕವೂ ಅಲ್ಲವಾದ್ದರಿಂದ ಇದನ್ನು ಈಶ್ವರನಲ್ಲಿ ಒಪ್ಪಬಾರದು.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ವ್ಯತಿರೇಕಾಧಿಕರಣವು ಸಂಪೂರ್ಣವಾಯಿತು

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**व्यतिरेको गन्धवत् ।।** ''युज्यते खलु विभावात्मन'' इत्यादिटीकासूचितामाह **– यदीति ।।** योगिनः निरवयवजीवस्येति शेषः । सुधायां तु ''अविरोधश्चन्दनवतथ'' इत्युक्तार्थोपपादकत्वेन सङ्गतिरुक्ता । पूर्वोत्तरपक्षटीकासूचिताश्चिन्ता आह **– अत्रेति ।।**

ಒಂದುವೇಳೆ ತಾರ್ಕಿಕರು ಹೇಳುವಂತೆ ಈಶ್ವರನು ವಿಭುವಾಗಿದ್ದಲ್ಲಿ ಆಗ ಬಹುರೂಪತ್ವವು ಯುಕ್ತವಾಗುತ್ತಿತ್ತು. ಇತ್ಯಾದಿ ಟೀಕೆಯಿಂದ ಸೂಚಿತವಾದುದನ್ನು 'ಯದಿ' ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡಿದ್ದಾರೆ.

'ಯೋಗಿನಃ' ಎಂಬಲ್ಲಿ 'ನಿರವಯವ ಜೀವಸ್ಯ' ಎಂಬುದನ್ನು ಶೇಷಪೂರಣಮಾಡಿಕೊಳ್ಳಬೇಕು. ಯೋಗಿಯು ಭಿನ್ನವಾದ ಅವಯವಗಳುಳ್ಳವನಲ್ಲ. ಭಿನ್ನಾವಯವ ಇಲ್ಲದವನಲ್ಲಿಯೂ ಅಘಟಿತಘಟನಾ ಶಕ್ತಿಯನ್ನು ಹೇಳಿದರೆ ಈಶ್ವರಸಾಮ್ಯವು ಬರಬೇಕಾಗುತ್ತದೆ ಎಂದಭಿಪ್ರಾಯ. ನ್ಯಾಯಸುಧೆಯಲ್ಲಿ 'ಅವಿರೋಧಶ್ಚಂದನವತ್' ಎಂಬ ಸೂತ್ರದ ವಿವರಣೆಗಾಗಿ ಈ ಅಧಿಕರಣವು ಹೊರಟಿದೆ ಎಂದು ಮತ್ತೊಂದು ಬಗೆಯಲ್ಲಿ ಸಂಗತಿಯನ್ನು ಹೇಳಿದ್ದಾರೆ. ಅದನ್ನೂ ಕೂಡ ಇಲ್ಲಿ ವಿವಕ್ಷಿಸಬೇಕು.

ಪೂರ್ವಪಕ್ಷ ಹಾಗೂ ಸಿದ್ಧಾಂತ ಪಕ್ಷಗಳ ಟೀಕೆಯಿಂದ ಸೂಚಿತವಾದ ಸಂಶಯಗಳನ್ನು 'ಅತ್ರ' ಇತ್ಯಾದಿ ಗ್ರಂಥದಿಂದ ನಿರೂಪಣೆ ಮಾಡಿದ್ದಾರೆ.

**प्रकाशः –** ''स पञ्चधा सप्तधा दशधा भवति'' इति बहुरूपत्वश्रुतिः । ''स एकधा न सप्तध'' इत्यैकरूप्यश्रुतिः । टीकोक्तं सूत्रारूढं दर्शयितुं सूत्रार्थं निष्कृष्याह **– अत्र सूत्र इति ।।**

'ಸ ಪಂಚಧಾ ಸಪ್ತಧಾ ದಶಧಾ ಭವತಿ' ಎಂಬುದು ಜೀವನಿಗೆ ಬಹುರೂಪಗಳಿವೆ ಎಂದು ಸಮರ್ಥನೆ ಮಾಡುತ್ತಿದೆ. 'ಸ ಏಕಧಾ ನ ಸಪ್ತಧಾ' ಎಂಬ ಶ್ರುತಿಯು ಏಕರೂಪತೆಯನ್ನು ಸಮರ್ಥನೆ ಮಾಡುತ್ತಿದೆ. ಟೀಕೆಯಲ್ಲಿ ಹೇಳಿದ ವಿಷಯವನ್ನು ಸೂತ್ರಾರೂಢ ಮಾಡುವುದಕ್ಕಾಗಿ ಸೂತ್ರಾರ್ಥವನ್ನು ನಿಷ್ಕರ್ಷೆ ಮಾಡುತ್ತಿದ್ದಾರೆ 'ಅತ್ರ ಸೂತ್ರೇ' ಎಂಬ ವಾಕ್ಯದಿಂದ.

**प्रकाशः –** नन्वेवं जीवजडेश्वराणामभेदमुपेत्य तन्निबन्धन सर्वानुपपत्तिरपीशा-चिन्त्यशक्त्यैव समाधीयतामित्यत आह **– प्रमित इति ।।** गुणक्रियादीनां धर्मिणा

तादात्म्यमुपेत्य भेदनिबन्धनकार्याणामपीश्वराचिन्त्यशक्त्यैव निर्वाहः क्रियतां किं विशेषादिनेत्यत आह – **अनन्यगतिकेति** ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे व्यतिरेकाधिकरणं सम्पूर्णम् ।।१३।।**

ಅಘಟಿತಘಟನಾಶಕ್ತಿಯಿಂದ ಎಲ್ಲವನ್ನೂ ಕೂಡಿಸುವುದಾದರೆ ಜೀವ, ಜಡ, ಈಶ್ವರಗಳಿಗೆ ಅಭೇದವನ್ನು ಒಪ್ಪಿ ವಿರೋಧಪರಿಹಾರವನ್ನು ಅಚಿಂತನೆಶಕ್ತಿಯಿಂದ ಪರಿಹರಿಸಬಹುದಲ್ಲವೇ? ಎಂಬ ಪ್ರಶ್ನೆಗೆ 'ಪ್ರಮಿತೇ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಗುಣಕ್ರಿಯಾದಿಗಳಿಗೆ ಧರ್ಮಿಯಿಂದ ತಾದಾತ್ಮ್ಯವನ್ನು ಒಪ್ಪಿ ಭೇದನಿಬಂಧನಕಾರ್ಯಗಳಿಗೆ ಈಶ್ವರನ ಅಚಿಂತ್ಯಶಕ್ತಿಯಿಂದಲೇ ನಿರ್ವಾಹವನ್ನು ಮಾಡಬಹುದು. ವಿಶೇಷಾದಿಗಳನ್ನು ಏಕೆ ಒಪ್ಪಬೇಕು? ಎಂಬ ಪ್ರಶ್ನೆಗೆ 'ಅನನ್ಯಗತಿಕಾ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ವ್ಯತಿರೇಕಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

# ಪೃಥಗುಪದೇಶಾಧಿಕರಣ

(೨-೩-೧೪)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

***

॥ ಶ್ರೀಗುರುಭ್ಯೋ ನಮಃ ॥

# ಪೃಥಗುಪದೇಶಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – पृथगुपदेशात् ।।**

ಜೀವನು ಪರಮಾತ್ಮನಿಗಿಂತ ಭಿನ್ನನಾಗಿದ್ದಾನೆ. ಏಕೆಂದರೆ 'ಭಿನ್ನೋಽಚಿಂತ್ಯಃ' ಇತ್ಯಾದಿ ಶ್ರುತಿಗಳು ಹಾಗೇ ಹೇಳುತ್ತಿವೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** जीवः परमात्मना पृथक् भिन्नः । कुतः ? उपदेशात् 'भिन्नोऽचिन्त्यः' इति श्रुतेरित्यर्थः ।।१।।

ಜೀವನು ಪರಮಾತ್ಮನಿಗಿಂತ ಪೃಥಕ್ = ಭಿನ್ನನಾಗಿದ್ದಾನೆ. ಏಕೆಂದರೆ ಉಪದೇಶಾತ್ = 'ಭಿನ್ನೋಽಚಿಂತ್ಯಃ' ಎಂಬ ಶ್ರುತಿಯು ಆಧಾರವಾಗಿರುವುದರಿಂದ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – 'तत्त्वमसि' (छा.६.८.७) 'अहं ब्रह्मास्मि' (बृ.३.४.१०) इत्यादिषु जीवस्य परेणाभेदः प्रतीयते । 'नित्यो नित्यानां चेतनश्चेतनानां' (श्वे. ६.१३) 'द्वा सुपर्णा' (श्वे. ४.६.) इत्यादिषु भेदः ।**

ಅನುವಾದ - 'ತತ್ತ್ವಮಸಿ' 'ಅಹಂಬ್ರಹ್ಮಾಸ್ಮಿ' ಇವೇ ಮೊದಲಾದ ಶ್ರುತಿಗಳಲ್ಲಿ ಜೀವನಿಗೆ ಪರಮಾತ್ಮನ ಜೊತೆ ಅಭೇದವು ಪ್ರತೀತವಾಗುತ್ತದೆ. 'ನಿತ್ಯೋ ನಿತ್ಯನಾಂ ಚೇತನಶ್ಚೇತನಾನಾಂ' 'ದ್ವಾ ಸುಪರ್ಣಾ' ಇವೇ ಮೊದಲಾದ ಶ್ರುತಿಗಳಲ್ಲಿ ಜೀವನಿಗೆ ಪರಮಾತ್ಮನಿಂದ ಭೇದವು ತಿಳಿಯುತ್ತಿದೆ.

ಪ್ರತಿಪದಾರ್ಥ -- ತತ್ತ್ವಮಸಿ = ಪರಮಾತ್ಮನು ನೀನಾಗಿರುವಿ, ಅಹಂಬ್ರಹ್ಮಾಸ್ಮಿ = ನಾನು ಬ್ರಹ್ಮನಾಗಿರುವೆ. ಇತ್ಯಾದಿಷು = ಇವೇ ಮೊದಲಾದ ಶ್ರುತಿಗಳಲ್ಲಿ, ಜೀವಸ್ಯ = ಜೀವನಿಗೆ, ಪರೇಣ = ಪರಮಾತ್ಮನ ಜೊತೆ, ಅಭೇದಃ = ಅಭೇದವು, ಪ್ರತೀಯತೇ = ಪ್ರತೀತವಾಗುತ್ತದೆ. ನಿತ್ಯೋ ನಿತ್ಯಾನಾಂ = ದೇಹತಃ ಸ್ವರೂಪತಃ ನಿತ್ಯರಾದ ಜೀವರ ನಡುವೆ ಸ್ವರೂಪದಿಂದ ಮತ್ತು ದೇಹದಿಂದ ನಿತ್ಯನಾದವನು ಪರಮಾತ್ಮನೇ ಆಗಿದ್ದಾನೆ. ಚೇತನರಿಗೂ ಚೈತನ್ಯವನ್ನು ನೀಡಿದವನು ಪರಮಾತ್ಮನೇ ಆಗಿದ್ದಾನೆ. ದ್ವಾ ಸುಪರ್ಣಾ = ಜೀವ ಹಾಗೂ ಪರಮಾತ್ಮರೆಂಬ ಎರಡು ಹಕ್ಕಿಗಳು, ಇತ್ಯಾದಿಷು = ಇವೇ ಮೊದಲಾದ ಶ್ರುತಿಗಳಲ್ಲಿ, ಭೇದಃ = ಜೀವ ಹಾಗೂ ಪರಮಾತ್ಮನಿಗೆ ಭೇದವು ಪ್ರತೀತವಾಗುತ್ತಿದೆ.

**भाष्यम् – अत उच्यते –**

**।। पृथगुपदेशात् ।।१।।**

**'भिन्नोऽचिन्त्यः परमो जीवसङ्घात् पूर्णः परो जीवसङ्घो ह्यपूर्णः ।**
**यतस्त्वसौ नित्यमुक्तो ह्ययं च बन्धान्मोक्षं तत एवाभिवाञ्छेत् ।।'**
**इति सोपपत्तिककौशिकश्रुतेर्भिन्न एव जीवः ।।१।।**

ಅನುವಾದ - ಈ ಎರಡು ಶ್ರುತಿಗಳ ವಿರೋಧವನ್ನು ಸೂತ್ರಕಾರರು ಪರಿಹರಿಸುತ್ತಿದ್ದಾರೆ. ಪರಮಾತ್ಮನು ಜೀವರ ಸಮೂಹದಿಂದ ಭಿನ್ನನು ಪರಿಪೂರ್ಣನೂ ಆಗಿದ್ದಾನೆ. ಆದರೆ ಜೀವಸಮೂಹವು ಅಪರಿಪೂರ್ಣವಾಗಿದೆ. ಪರಮಾತ್ಮನು ನಿತ್ಯಮುಕ್ತನಾಗಿದ್ದಾನೆ. ಜೀವನಾದರು ಸಂಸಾರಬಂಧನದಿಂದ ಬಂಧಿತನಾಗಿದ್ದಾನೆ. ಇವನ ಬಂಧನವನ್ನು ಪರಮಾತ್ಮನೇ ಬಿಡುಗಡೆ ಮಾಡಬೇಕು. ಹೀಗೆ ಈ ಶ್ರುತಿಯಲ್ಲಿ ಭೇದವನ್ನು ಉಪಪತ್ತಿಸಹಿತವಾಗಿ ಹೇಳಿರುವುದರಿಂದ ಬ್ರಹ್ಮನಿಗಿಂತ ಜೀವನು ಭಿನ್ನನಾಗಲೇ ಬೇಕು.

ಪೃಥಗುಪದೇಶಾಧಿಕರಣ (೨-೩-೧೪)

ಪ್ರತಿಪದಾರ್ಥ -- ಪರಮಃ = ಪರಮಾತ್ಮನು, ಜೀವಸಂಘಾತ್ = ಜೀವರ ಸಮೂಹದಿಂದ, ಭಿನ್ನಃ = ಭಿನ್ನನು, ಅಚಿಂತ್ಯಃ = ಅಚಿಂತ್ಯನು, ಪೂರ್ಣಃ = ಪೂರ್ಣನು, ಜೀವಸಂಘೋ = ಜೀವರ ಸಮೂಹವು, ಅಪೂರ್ಣಃ = ಅಪೂರ್ಣವು, ಯತಃ = ಯಾವ ಕಾರಣದಿಂದ, ಅಸೌ = ಈ ಪರಮಾತ್ಮನು, ನಿತ್ಯಮುಕ್ತಃ = ಸದಾಮುಕ್ತನು, ಅಯಂ ಚ = ಈ ಜೀವನಾದರು, ಬಂಧಾತ್ = ಸಂಸಾರಬಂಧನದಿಂದ, ಮೋಕ್ಷಂ = ಬಿಡುಗಡೆಯನ್ನು, ತತ ಏವ = ಪರಮಾತ್ಮನಿಂದಲೇ, ಅಭಿವಾಂಚ್ಛೇತ್ = ಇಚ್ಛಿಸಬೇಕು. ಇತಿ = ಹೀಗೆ, ಸೋಪಪತ್ತಿಕಕೌಶಿಕಶ್ರುತೇಃ = ಉಪಪತ್ತಿಸಹಿತವಾದ ಕೌಶಿಕಶ್ರುತಿಯಿಂದ, ಜೀವಃ = ಜೀವನು, ಭಿನ್ನಃ ಏವ = ಭಿನ್ನನೇ ಆಗಿರುತ್ತಾನೆ.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

## ತತ್ವಪ್ರಕಾಶಿಕಾ

**तत्वप्रकाशिका – अत्र ब्रह्मणि श्रुतिसमन्वयसिद्ध्यर्थं जीवस्य परमात्माभिन्नत्वादिविषयश्रुति- विरोधपरिहारादस्ति शास्त्रादिसङ्गतिः । जगत्कारणे ब्रह्मणि श्रुतीनां समन्वयो निरूपितः । स चाद्वैतश्रुत्या भेदश्रुतेर्विरोधेऽनुपपन्नः स्यादित्यवश्यमसौ निरसनीयः ।**

ಈ ಅಧಿಕರಣದಲ್ಲಿ ಬ್ರಹ್ಮನಲ್ಲಿ ಶ್ರುತಿಸಮನ್ವಯವು ಸಿದ್ಧವಾಗುವುದಕ್ಕಾಗಿ ಜೀವನು ಪರಮಾತ್ಮನಿಗಿಂತ ಅಭಿನ್ನನಾಗಿದ್ದಾನೆ ಇತ್ಯಾದಿ ವಿಷಯಕವಾದ ಶ್ರುತಿವಿರೋಧವನ್ನು ಪರಿಹಾರ ಮಾಡಲಾಗಿದೆ. ಆದ್ದರಿಂದ ಶಾಸ್ತ್ರ-ಅಧ್ಯಾಯ-ಪಾದ ಸಂಗತಿಗಳು ಇರುತ್ತವೆ.

ಜಗತ್ಕಾರಣನಾದ ಬ್ರಹ್ಮನಲ್ಲಿ ಶ್ರುತಿಗಳು ಸಮನ್ವಯವಾಗುತ್ತವೆಂದು ಹೇಳಿದ್ದಾಯಿತು. ಇದು ಅದ್ವೈತ ಶ್ರುತಿಯಿಂದ ಭೇದಶ್ರುತಿಗೆ ವಿರೋಧವು ಪ್ರಾಪ್ತವಾದರೆ ಅನುಪಪನ್ನವಾಗುತ್ತವೆ. ಆದ್ದರಿಂದ ಈ ಶ್ರುತಿವಿರೋಧವನ್ನು ಅವಶ್ಯವಾಗಿ ನಿರಾಕರಣೆ ಮಾಡಲೇಬೇಕು.

**तत्वप्रकाशिका – प्रकृतजीव एवात्र विषयः । किं परब्रह्मणा भिन्न उताभिन्नः इति संशयः । संशयबीजं श्रुतिविवादं दर्शयति – तत्त्वमसीति ।।**

ಹಿಂದಿನ ಅಧಿಕರಣದಲ್ಲಿ ಪ್ರಕೃತನಾದ ಜೀವನೇ ಈ ಅಧಿಕರಣಕ್ಕೂ ವಿಷಯನಾಗಿದ್ದಾನೆ. ಇವನು ಪರಬ್ರಹ್ಮನಿಂದ ಭಿನ್ನನಾಗಿದ್ದಾನೋ, ಅಭಿನ್ನನಾಗಿದ್ದಾನೋ? ಎಂಬುದು ಅಧಿಕರಣದ ಸಂಶಯ. ಶ್ರುತಿವಿವಾದವೇ ಸಂಶಯಕ್ಕೆ ಕಾರಣವಾಗಿದೆ. ಇದನ್ನು ಭಾಷ್ಯದಲ್ಲಿ 'ತತ್ವಮಸಿ' ಇತ್ಯಾದಿಯಾಗಿ ಉಲ್ಲೇಖ ಮಾಡುತ್ತಿದ್ದಾರೆ.

ವಿವರಣೆ - ಅನಂತರ ಸಂಗತಿಯನ್ನು ಸೂಚನೆ ಮಾಡುವ ಮೂಲಕ ವಿಷಯವನ್ನು 'ಪ್ರಕೃತ' ಇತ್ಯಾದಿ ಟೀಕೆಯಿಂದ ಹೇಳುತ್ತಿದ್ದಾರೆ. ಯಾವ ಜೀವನು ತನ್ನ ಯೋಗಶಕ್ತಿಯಿಂದ ಪರಮಾತ್ಮನನ್ನು ಆರಾಧನೆ ಮಾಡಿ ಪ್ರಸನ್ನೀಕರಿಸಿಕೊಳ್ಳುತ್ತಾನೋ, ಅವನಿಗೆ ಈಶ್ವರನ ಅಚಿಂತ್ಯಶಕ್ತಿಯಿಂದ ಅನೇಕ ರೂಪಗಳನ್ನು ಹೊಂದುವ ಶಕ್ತಿಯು ಬರುತ್ತದೆ ಎಂಬುದಾಗಿ ಹಿಂದಿನ ಅಧಿಕರಣದಲ್ಲಿ ಹೇಳಿದ್ದಾಯಿತು. ಹೀಗೆ ಜೀವನು

ಪ್ರಕೃತನಾಗಿದ್ದಾನೆಂದು ತಿಳಿಯಬೇಕು. ಒಂದುವೇಳೆ ಜೀವನು ಈಶ್ವರನಿಂದ ಅಭಿನ್ನನಾದರೆ ಆಗ ಹಿಂದಿನ ಅಧಿಕರಣದಲ್ಲಿ ಜೀವಶಕ್ತಿಯು ಭಗವದಧೀನವೆಂದು ಸಮರ್ಥಿಸಿದ್ದು ಅಯುಕ್ತವಾಗುತ್ತದೆ. ಹೀಗೆ ಹಿಂದಿನ ಅಧಿಕರಣದ ಪೂರ್ವಪಕ್ಷವನ್ನು ಆಕ್ಷೇಪ ಮಾಡಿ ಸಿದ್ಧಾಂತ ಮಾಡುತ್ತಿರುವುದರಿಂದ ಈ ಅಧಿಕರಣಕ್ಕೆ ಆನಂತರ್ಯ ಸಂಗತಿಯು ಇರುತ್ತದೆ.

**तत्वप्रकाशिका – परमात्माभिन्न एव जीव इति पूर्वः पक्षः । 'तत्त्वमसि' इत्यादिश्रुतेः । न च विपर्ययेऽप्यस्ति श्रुतिरिति वाच्यम् । अद्वैतश्रुतेः षड्विधतात्पर्यलिङ्गयुक्ताया बलवत्त्वात् ।**

ಜೀವನು ಪರಮಾತ್ಮನಿಗಿಂತ ಅಭಿನ್ನನೇ ಆಗಿದ್ದಾನೆ ಎಂಬುದು ಅಧಿಕರಣದ ಪೂರ್ವಪಕ್ಷ. ಈ ವಿಷಯದಲ್ಲಿ 'ತತ್ವಮಸಿ' ಮೊದಲಾದ ಶ್ರುತಿಗಳು ಆಧಾರವಾಗಿವೆ. ಅಭೇದಕ್ಕೆ ವಿರುದ್ಧವಾಗಿ ಭೇದವನ್ನು ಪ್ರತಿಪಾದನೆ ಮಾಡುವ ಶ್ರುತಿಗಳೂ ಕೂಡ ಇವೆಯಲ್ಲವೇ? ಎಂದು ಪ್ರಶ್ನಿಸಬಾರದು. ಅದ್ವೈತಶ್ರುತಿಗೆ ಷಡ್ವಿಧತಾತ್ಪರ್ಯಲಿಂಗಗಳೆಂಬ ಯುಕ್ತಿಯ ಪ್ರಾಬಲ್ಯವಿದೆ. ಆದ್ದರಿಂದ ಭೇದಶ್ರುತಿಗಿಂತ 'ತತ್ತ್ವಮಸಿ' ಎಂಬ ಶ್ರುತಿಯೇ ಬಲಿಷ್ಠವಾಗುತ್ತದೆ.

**तत्वप्रकाशिका – 'एकमेवाद्वितीयम्' इत्युपक्रमात् । तत्त्वमसि' इत्युपसंहारात् ।**

'ಏಕಮೇವಾದ್ವಿತೀಯಮ್' ಎಂಬುದಾಗಿ ಅಭೇದವೇ ಉಪಕ್ರಮದಲ್ಲಿದೆ. 'ತತ್ವಮಸಿ' ಎಂಬುದಾಗಿ ಉಪಸಂಹಾರದಲ್ಲಿಯೂ ಅಭೇದವೇ ಶ್ರುತವಾಗಿದೆ.

ವಿವರಣೆ - ಛಾಂದೋಗ್ಯ ಉಪನಿಷತ್ತಿನ ಆರನೆಯ ಅಧ್ಯಾಯವು 'ಸದೇವಸೌಮ್ಯೇದಮಗ್ರೇ ಆಸೀತ್' ಎಂಬುದಾಗಿ ಪ್ರಾರಂಭವಾಗುತ್ತದೆ. ಇಲ್ಲಿ ಉಲ್ಲೇಖಿಸಲ್ಪಟ್ಟ 'ಸತ್' ಎಂಬುದನ್ನು 'ಏಕಮೇವಾದ್ವಿತೀಯಂ' ಎಂಬುದಾಗಿ ಅದೇ ಮಂತ್ರವು ಪ್ರತಿಪಾದನೆ ಮಾಡುತ್ತಿದೆ. ಹೀಗೆ ಸಮಗ್ರ ಈ ಪ್ರಕರಣದಲ್ಲಿ ಅಭೇದವೇ ಪ್ರಾರಂಭದಲ್ಲಿದೆ. ಮತ್ತು 'ತತ್ತ್ವಮಸಿ' ಎಂಬುದಾಗಿ ಆ ಪ್ರಕರಣವು ಮುಕ್ತಾಯವಾಗುತ್ತದೆ. 'ಐತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ' ಎಂಬುದು ಆ ಪ್ರಕರಣದ ಉಪಸಂಹಾರ ವಾಕ್ಯ.

ಹೀಗೆ ಷಡ್ವಿಧತಾತ್ಪರ್ಯಲಿಂಗಗಳಲ್ಲಿ ಉಪಕ್ರಮ ಹಾಗೂ ಉಪಸಂಹಾರಗಳೆರಡು ಅಭೇದವಿಷಯದಲ್ಲಿಯೇ ಇರುತ್ತವೆ.

**तत्वप्रकाशिका – 'तत्त्वमसि' 'तत्त्वमसि' इति नवकृत्वोऽभ्यासात् । अद्वैतस्य प्रमाणान्तराप्राप्तत्वेनापूर्वत्वात् । 'तस्य तावदेव चिरम्' इति फलश्रवणात्।**

'ತತ್ತ್ವಮಸಿ' 'ತತ್ತ್ವಮಸಿ' ಎಂಬುದಾಗಿ ಒಂಬತ್ತು ಬಾರಿ ಹೇಳಿದ್ದರಿಂದ ಅಭ್ಯಾಸವೂ ಇದೆ. ಅದ್ವೈತವು ಬೇರೆ ಪ್ರಮಾಣದಿಂದ ತಿಳಿಯದ ಕಾರಣ ಅಪೂರ್ವತೆಯೂ ಇದೆ. 'ತಸ್ಯ ತಾವದೇವ ಚಿರಮ್' ಎಂಬುದಾಗಿ ಫಲವೂ ಕೂಡ ಶ್ರುತವಾಗಿದೆ.

**ವಿವರಣೆ** - ಛಾಂದೋಗ್ಯ ಉಪನಿಷತ್ತಿನ ಆರನೇ ಅಧ್ಯಾಯದ ಈ ಪ್ರಕರಣದಲ್ಲಿ 'ತತ್ತ್ವಮಸಿ' ಎಂಬ ವಾಕ್ಯವು ಒಂಬತ್ತು ಬಾರಿ ಕೇಳಿಸುತ್ತಿದೆ. ಒಂದೇ ವಿಷಯವನ್ನು ಪುನಃ ಪುನಃ ಹೇಳುವುದರಿಂದ ಅದ್ವೈತದಲ್ಲಿಯೇ ಶ್ರುತಿಗೆ ತಾತ್ಪರ್ಯವೆಂಬುದು ಸ್ಪಷ್ಟವಾಗುತ್ತದೆ. ಆದ್ದರಿಂದ ಅದ್ವೈತ ವಿಷಯದಲ್ಲಿ ಉಪಕ್ರಮ ಹಾಗೂ ಉಪಸಂಹಾರಗಳ ಜೊತೆ ಅಭ್ಯಾಸವೂ ಕೂಡ ಇರುತ್ತದೆ.

ಪ್ರತ್ಯಕ್ಷ ಹಾಗೂ ಅನುಮಾನಗಳಿಂದ ಭೇದವೇ ತಿಳಿಯುತ್ತದೆ ಹೊರತು ಅಭೇದವು ತಿಳಿಯುವುದಿಲ್ಲ. ತಿಳಿಯದ ಈ ಅಭೇದವನ್ನು ಶ್ರುತಿಯು ಪ್ರತಿಪಾದನೆ ಮಾಡಿದಾಗ ಇದಕ್ಕೆ ಅಪೂರ್ವತ್ವವು ಬರುತ್ತದೆ. ತಿಳಿದ ಭೇದವನ್ನೇ ಪ್ರತಿಪಾದನೆ ಮಾಡಿದರೆ ಅಪೂರ್ವತ್ವವು ಬರುವುದಿಲ್ಲ. ಹೀಗೆ ಅದ್ವೈತಕ್ಕೆ ಅಪೂರ್ವತೆಯೂ ಕೂಡ ಇರುತ್ತದೆ.

ಫಲವೂ ಕೂಡ ಅದ್ವೈತ ವಿಷಯದಲ್ಲೇ ಇದೆ. ಇದೇ ಪ್ರಕರಣದಲ್ಲಿ 'ತಸ್ಯ ತಾವದೇವ ಚಿರಮ್' ಎಂಬುದಾಗಿ ಪ್ರಾರಬ್ಧಕರ್ಮವು ಮುಗಿದ ಕೂಡಲೇ ಮುಕ್ತನಾಗುತ್ತಾನೆಂದು ಶ್ರುತಿಯು ಹೇಳುತ್ತಿದೆ.

**तत्वप्रकाशिका – 'येनाऽश्रुतं श्रुतं भवति' इत्याद्यर्थवादात् । मृत्पिण्डादिदृष्टान्तेनोपपादनात् ।**

'ಯೇನಾಽಶ್ರುತಂ ಶ್ರುತಂ ಭವತಿ' ಎಂಬುದಾಗಿ ಅರ್ಥವಾದವೂ ಕೂಡ ಅದ್ವೈತ-ವಿಷಯದಲ್ಲಿದೆ. ಮೃತ್ಪಿಂಡಾದಿ ದೃಷ್ಟಾಂತಗಳಿಂದ ಅದ್ವೈತವನ್ನೇ ಉಪಪಾದನೆ ಮಾಡಲಾಗಿದೆ.

**ವಿವರಣೆ** - 'ಯೇನಾಽಶ್ರುತಂ ಶ್ರುತಂ ಭವತಿ ಅಮತಂ ಮತಂ ಭವತಿ' ಎಂಬುದಾಗಿ ಇದೇ ಪ್ರಕರಣದಲ್ಲಿ ಬ್ರಹ್ಮನನ್ನು ಶ್ರವಣ ಮಾಡುವುದರಿಂದ ಹಾಗೂ ಮನನ ಮಾಡುವುದರಿಂದ ಶ್ರುತವಾಗದ, ಮನನವಾಗದ, ವಿಜ್ಞಾತವಾಗದ ಸಮಸ್ತ ಜಗತ್ತು ಶ್ರುತವಾಗುತ್ತದೆ, ಮತವಾಗುತ್ತದೆ, ವಿಜ್ಞಾತವಾಗುತ್ತದೆ ಎಂದು ಬ್ರಹ್ಮಜ್ಞಾನವನ್ನು ಪ್ರಶಂಸೆ ಮಾಡಲಾಗಿದೆ. ಇದು ಯುಕ್ತವಾಗಬೇಕಾದರೆ ಬ್ರಹ್ಮನೊಬ್ಬನೇ ಸತ್ಯನೆಂದು ಅಂಗೀಕರಿಸಬೇಕು. ಆದ್ದರಿಂದ ಜೀವಬ್ರಹ್ಮರಿಗೆ ಅಭೇದವೆ ಇರಬೇಕು. ಬ್ರಹ್ಮನಿಗಿಂತ ಜೀವನು ಪ್ರತ್ಯೇಕವಾಗಿರಲು ಸಾಧ್ಯವಿಲ್ಲ.

'ಯಥಾ ಸೌಮ್ಯೈಕೇನ ಮೃತ್ಪಿಂಡೇನ ಸರ್ವಂ ಮೃಣ್ಮಯಂ ವಿಜ್ಞಾತಂ ಸ್ಯಾತ್' ಎಂಬ ವಾಕ್ಯವು ಮೃತ್ ಹಾಗೂ ಮೃಣ್ಮಯಗಳಿಗೆ ಅಭೇದವಿರುವುದರಿಂದ ಮೃತ್ತಿನ ಜ್ಞಾನವಿದ್ದರೆ ಎಲ್ಲಾ ಮೃಣ್ಮಯಗಳನ್ನು ತಿಳಿದಂತಾಗುತ್ತದೆ. ಇದರಂತೆ ಬ್ರಹ್ಮ ಮತ್ತು ಜಗತ್ತುಗಳಿಗೆ ಅಭೇದವಿರುವುದರಿಂದ ಬ್ರಹ್ಮಜ್ಞಾನದಿಂದ ಜಗತ್ತನ್ನೂ ಕೂಡ ತಿಳಿದಂತಾಗುತ್ತದೆ ಎಂಬುದಾಗಿ ಐಕ್ಯವನ್ನೇ ದೃಷ್ಟಾಂತ ಮೂಲಕವಾಗಿ ಸಮರ್ಥಿಸುತ್ತಿದೆ.

**तत्वप्रकाशिका – एवं श्रुतेरद्वैत एव तात्पर्यावगमात् । तद्विरुद्धभेदश्रुतेरतत्त्वावेदकत्वमेवेति न परमात्मनि परमार्थतः श्रुतिसमन्वयो युक्त इति प्राप्ते सिद्धान्तयत्सूत्रमवतार्य व्याचष्टे – अत इति ।।**

ಹೀಗೆ ಶ್ರುತಿಗಳಿಗೆ ಅದ್ವೈತದಲ್ಲಿಯೇ ತಾತ್ಪರ್ಯವಿದೆ ಎಂದು ತಿಳಿಯುತ್ತದೆ. ಈ ಶ್ರುತಿಗೆ ವಿರುದ್ಧವಾದ ಭೇದವನ್ನು ಪ್ರತಿಪಾದನೆ ಮಾಡುವ ಶ್ರುತಿಗಳಿಗೆ ಅತತ್ತ್ವಾವೇದಕತ್ವವನ್ನೇ ಹೇಳಬೇಕು. ಆದ್ದರಿಂದ ಪರಮಾತ್ಮನಲ್ಲಿ ಪಾರಮಾರ್ಥಿಕವಾಗಿ ಶ್ರುತಿಸಮನ್ವಯವನ್ನು ಮಾಡುವುದು ಯುಕ್ತವಾಗುವುದಿಲ್ಲ. ಇಷ್ಟು ಅಧಿಕರಣದ ಪೂರ್ವಪಕ್ಷ.

ಸಿದ್ಧಾಂತ ಸ್ಥಾಪಕವಾದ ಸೂತ್ರಕ್ಕೆ 'ಅತಃ' ಇತ್ಯಾದಿಯಾಗಿ ಅವತಾರಿಕೆ ನೀಡಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – पृथगेव जीवः परमात्मनः 'भिन्नोऽचिन्त्यः' इति श्रुतेः । न चास्ति विपर्ययेऽपि श्रुतिरिति वाच्यम् । विरुद्धधर्माधिकरणत्वयुक्तियुक्तत्वेन भेदश्रुतेः प्राबल्यादिति भावः ।।**

ಜೀವನು ಪರಮಾತ್ಮನಿಗಿಂತ ಭಿನ್ನನೇ ಆಗಿದ್ದಾನೆ. 'ಭಿನ್ನೋಽಚಿಂತ್ಯಃ' ಇತ್ಯಾದಿ ಶ್ರುತಿಯು ಭೇದವನ್ನೇ ಸಮರ್ಥನೆ ಮಾಡುತ್ತಿದೆ. ಇದಕ್ಕೆ ವಿರುದ್ಧವಾಗಿ ಅಭೇದವಿಷಯದಲ್ಲೂ ಕೂಡ ಶ್ರುತಿಯು ಪ್ರಮಾಣವಾಗಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ವಿರುದ್ಧಧರ್ಮಾಧಿಕರಣತ್ವ ಎಂಬ ಯುಕ್ತಿಯುಕ್ತವಾದ್ದರಿಂದ ಭೇದಶ್ರುತಿಯೇ ಪ್ರಬಲವಾಗುತ್ತದೆ.

ವಿವರಣೆ - ಅಭೇದವಿಷಯದಲ್ಲಿ ಉಪಕ್ರಮಾದಿಷಡ್ವಿಧತಾತ್ಪರ್ಯಲಿಂಗಗಳು ಇರುವುದರಿಂದ 'ತತ್ತ್ವಮಸಿ' ಎಂಬ ಅಭೇದಶ್ರುತಿಯೇ ಪ್ರಬಲವೆಂದು ಪೂರ್ವಪಕ್ಷದಲ್ಲಿ ಹೇಳಲಾಗಿತು. ಆದರೆ ಸಿದ್ಧಾಂತದಲ್ಲಿ ವಿರುದ್ಧಧರ್ಮಾಧಿಕರಣತ್ವ ಎಂಬ ಒಂದೇ ಯುಕ್ತಿಯಿಂದ ಭೇದಶ್ರುತಿಗೆ ಪ್ರಾಬಲ್ಯವನ್ನು ಹೇಳಲಾಗಿದೆ. ಇದು ಹೇಗೆ ಸರಿ? ಉಪಕ್ರಮಾದಿಗಳ ಸಹಕಾರವಿರುವುದರಿಂದ ಅಭೇದ ಶ್ರುತಿಯನ್ನೇ ಪ್ರಬಲವೆನ್ನಬೇಕಲ್ಲವೇ?

ಹಾಗೇನಿಲ್ಲ. ಪ್ರಾಬಲ್ಯ ಹಾಗೂ ದೌರ್ಬಲ್ಯಗಳನ್ನು ನಿರ್ಣಯ ಮಾಡಬೇಕೆಂದರೆ ಸಾವಕಾಶತ್ವ, ನಿರವಕಾಶತ್ವಗಳನ್ನೇ ಆಶ್ರಯಿಸಬೇಕು. ಭೇದಶ್ರುತಿಗೆ ಸಹಕಾರಿಯಾದ ವಿರುದ್ಧಧರ್ಮಾಧಿಕರಣತ್ವ ಎಂಬ ಯುಕ್ತಿಯು ನಿರವಕಾಶವಾಗಿದೆ. ಅಭೇದಶ್ರುತಿಗೆ ಸಹಕಾರಿಯಾದ ಉಪಕ್ರಮಾದಿತಾತ್ಪರ್ಯಲಿಂಗಗಳು ಸಾವಕಾಶವಾಗಿವೆ. ಏಕೆಂದರೆ ಇದೇ ಉಪಕ್ರಮಾದಿತಾತ್ಪರ್ಯಲಿಂಗಗಳನ್ನು ಭೇದವಿಷಯದಲ್ಲೂ ಕೂಡ ತೋರಿಸಲು ಬರುತ್ತದೆ. ಆದರೆ ವಿರುದ್ಧಧರ್ಮಾಧಿಕರಣತ್ವ ಎಂಬ ಯುಕ್ತಿಯನ್ನು ಅಭೇದವಿಷಯದಲ್ಲಿ ತೋರಿಸಲು ಸರ್ವಥಾ ಸಾಧ್ಯವಿಲ್ಲ. ಹೀಗೆ ನಿರವಕಾಶವಾದ ವಿರುದ್ಧಧರ್ಮಾಧಿಕರಣತ್ವ ಎಂಬ ಯುಕ್ತಿಯಿಂದ ಭೇದಪ್ರತಿಪಾದಕವಾದ ಶ್ರುತಿಯೇ ಬಲಿಷ್ಠವಾಗುತ್ತದೆ.

ಜೀವನು ಅಲ್ಪಜ್ಞನಾಗಿದ್ದಾನೆ, ಭಗವಂತನು ಸರ್ವಜ್ಞನಾಗಿದ್ದಾನೆ. ಅದರಂತೆ ಜೀವನು ದುಃಖಿಯಾಗಿದ್ದಾನೆ, ಪರಮಾತ್ಮನು ಸುಖಿಯಾಗಿದ್ದಾನೆ. ಐಕ್ಯ ಹೇಳಿದರೆ ಅಲ್ಪಜ್ಞತ್ವ-ಸರ್ವಜ್ಞತ್ವ; ದುಃಖಿತ್ವ-ಸುಖಿತ್ವ ಮೊದಲಾದ ವಿರುದ್ಧ ಧರ್ಮಗಳನ್ನು ಒಂದೇ ವಸ್ತುವಿನಲ್ಲಿ ಒಪ್ಪುವ ಪರಿಸ್ಥಿತಿ ಬರುತ್ತದೆ. ಈ ಯುಕ್ತಿಯ ವಿರೋಧ ಬರುವುದರಿಂದ ಜೀವಬ್ರಹ್ಮರಿಗೆ ಭೇದವನ್ನೇ ಹೇಳಬೇಕೆಂಬುದು ಸೂತ್ರದ ಅಭಿಪ್ರಾಯ.

## ಬ್ರಹ್ಮಸೂತ್ರ

**सूत्रम् – तद्गुणसारत्वात्तु तद्व्यपदेशः प्राज्ञवत् ।।**

ಜೀವನು ಬ್ರಹ್ಮನ ಗುಣಸಾದೃಶ್ಯವನ್ನು ಪಡೆದಿರುತ್ತಾನೆ. ಅಂದರೆ ಆನಂದ, ಜ್ಞಾನ, ಇವುಗಳು ಪರಮಾತ್ಮನ ಶರೀರವಾಗಿರುವಂತೆ ಜೀವನ ಶರೀರವೂ ಆಗಿದೆ. ಈ ದೃಷ್ಟಿಯಿಂದ ಶ್ರುತಿಯಲ್ಲಿ ಕೆಲವೆಡೆ ಅಭೇದವ್ಯಪದೇಶವಿರುತ್ತದೆ. ಹೇಗೆ ಬ್ರಹ್ಮನಿಗೆ 'ಸರ್ವಂ ಖಲ್ವಿದಂ ಬ್ರಹ್ಮ' ಎಂಬುದಾಗಿ ಅಭೇದವ್ಯಪದೇಶವಿದೆಯೋ, ಅದರಂತೆ.

ಪೃಥಗುಪದೇಶಾಧಿಕರಣ (೨-೩-೧೮)

## ಸೂತ್ರದೀಪಿಕಾ

**सूत्रदीपिका — तद्गुणसारत्वात्तु तद्व्यपदेशः प्राज्ञवत् ।। प्राज्ञवत्** ब्रह्मण इव । यथा प्राज्ञे ब्रह्मणि 'सर्वं खल्विदं ब्रह्म' इति जगदभेदोक्तिः । तथा जीवे **तद्व्यपदेशः** तत्त्वमसीति ब्रह्मैक्योक्तिर्युज्यते । कुतः? **तद्गुणसारत्वात्** जीवस्य ब्रह्मगुणसदृशज्ञानानन्दादिगुणस्वरूपत्वान्निमित्तादित्यर्थः ।।२।।

ಪ್ರಾಜ್ಞವತ್ = ಬ್ರಹ್ಮನಂತೆ, ಯಾವರೀತಿಯಾಗಿ ಪ್ರಾಜ್ಞನಾದ ಬ್ರಹ್ಮನಲ್ಲಿ 'ಸರ್ವಂ ಖಲ್ವಿದಂ ಬ್ರಹ್ಮ' ಎಂಬುದಾಗಿ ಜಗತ್ತಿನಿಂದ ಅಭೇದದ ವಚನವು ಇರುತ್ತದೋ, ಅದರಂತೆ ಜೀವನಲ್ಲಿಯೂ, ತದ್ವ್ಯಪದೇಶಃ = 'ತತ್ತ್ವಮಸಿ' ಎಂಬ ಬ್ರಹ್ಮನಿಂದ ಐಕ್ಯವ್ಯವಹಾರದ ವಚನವು ಯುಕ್ತವಾಗುತ್ತದೆ. ಏಕೆಂದರೆ ತದ್ಗುಣಸಾರತ್ವಾತ್ = ಜೀವನು ಬ್ರಹ್ಮನ ಗುಣಸದೃಶವಾದ ಜ್ಞಾನಾನಂದಾದಿಗುಣಸ್ವರೂಪವನ್ನು ಹೊಂದಿರುವುದರಿಂದ.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ಪೃಥಗುಪದೇಶಾಧಿಕರಣವು ಮುಗಿಯಿತು.

## ಬ್ರಹ್ಮಸೂತ್ರಭಾಷ್ಯ

**भाष्यम् — ।। तद्गुणसारात्वात्तु तद्व्यपदेशः प्राज्ञवत् ।।२।।**

**ज्ञानानन्दादिब्रह्मगुणा एवास्य यतः सारः स्वरूपमतोऽभेदव्यपदेशः । यथा सर्वगुणात्मकत्वात् सर्वात्मत्वं ब्रह्मण उच्यते 'सर्वं खल्विदं ब्रह्म' (छां. ३.१४.१.) इति ।**

**भविष्यत् पर्वणि च —**

**'भिन्ना जीवाः परो भिन्नस्तथाऽपि ज्ञानरूपतः ।**
**प्रोच्यन्ते ब्रह्मरूपेण वेदवादेषु सर्वशः ।।' इति ।।२।।**

**।। इति श्रीमदानन्दतीर्थभगवत्पादाचार्यविरचिते**
**ब्रह्मसूत्रभाष्ये पृथगुपदेशाधिकरणम् ।। १४ ।।**

ಅನುವಾದ - ಬ್ರಹ್ಮನ ಯಾವ ಜ್ಞಾನಾನಂದಾದಿ ಗುಣಗಳಿವೆಯೋ ಅವುಗಳೇ ಜೀವಸ್ವರೂಪವಾಗಿವೆ. ಆದ್ದರಿಂದಲೇ ಸ್ವರೂಪತಃ ಬ್ರಹ್ಮ ಹಾಗೂ ಜೀವರಿಗೆ ಅಭೇದವನ್ನು ಶ್ರುತಿಯು ಹೇಳುತ್ತಿದೆ. ಸಕಲಗುಣಗಳು ಬ್ರಹ್ಮನಲ್ಲಿ ಇರುವುದರಿಂದ ಬ್ರಹ್ಮನಿಗೆ ಸರ್ವಾತ್ಮಕತ್ವವನ್ನು 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ಶ್ರುತಿಯು ಹೇಳುತ್ತಿದೆ. ಅದರಂತೆ ಭವಿಷ್ಯತ್‌ಪರ್ವದಲ್ಲಿ ಹೀಗೆ ಹೇಳಲಾಗಿದೆ -

ಜೀವರು ಪರಮಾತ್ಮನಿಗಿಂತ ಭಿನ್ನರು ಪರಮಾತ್ಮನು ಜೀವನಿಗಿಂತ ಭಿನ್ನನು ಆದರೂ ಇಬ್ಬರೂ ಜ್ಞಾನಸ್ವರೂಪರಾಗಿರುವ ಕಾರಣ ವೇದಗಳಲ್ಲಿ ಜೀವರನ್ನು ಕೂಡ ಬ್ರಹ್ಮರೂಪದಿಂದ ಅಲ್ಲಲ್ಲಿ ಕರೆಯಲಾಗಿದೆ.

ಪ್ರತಿಪದಾರ್ಥ -- ಅಸ್ಯ = ಜೀವನಿಗೆ, ಜ್ಞಾನಾನಂದಾದಿಬ್ರಹ್ಮಗುಣಾ ಏವ = ಜ್ಞಾನ ಆನಂದ ಮೊದಲಾದ ಬ್ರಹ್ಮನ ಗುಣಗಳೇ, ಸಾರಃ = ಸ್ವರೂಪವಾಗಿವೆ. ಆದ್ದರಿಂದ, ಸ್ವರೂಪಮತಃ = ಜ್ಞಾನಾನಂದಾದಿಸ್ವರೂಪದ ಅಂಶದಿಂದ, ಅಭೇದವ್ಯಪದೇಶಃ = ಶ್ರುತಿಯಲ್ಲಿ ಅಭೇದದ ವಾಡಿಕೆ ಇದೆ. ಯಥಾ = ಯಾವ ರೀತಿಯಾಗಿ, ಸರ್ವಗುಣಾತ್ಮಕತ್ವಾತ್ = ಸಕಲಗುಣಸ್ವರೂಪನಾದ್ದರಿಂದ, ಬ್ರಹ್ಮಣಃ = ಬ್ರಹ್ಮನಿಗೆ, ಸರ್ವಾತ್ಮಕತ್ವಂ = ಸಕಲಪದಾರ್ಥಗಳ ಸ್ವರೂಪವನ್ನು, ಉಚ್ಯತೇ = ಹೇಳಲಾಗುತ್ತದೋ, ಸರ್ವಂ ಖಲ್ವಿದಂ ಬ್ರಹ್ಮ = ಎಲ್ಲವೂ ಬ್ರಹ್ಮನೇ ಆಗಿದ್ದಾನೆ. ಇತಿ = ಎಂಬುದಾಗಿ.

ಭವಿಷ್ಯತ್ ಪರ್ವಣಿ ಚ = ಭವಿಷ್ಯತ್‌ಪರ್ವದಲ್ಲಿಯೂ ಹೀಗೆ ಹೇಳಲಾಗಿದೆ -

ಜೀವಾಃ = ಜೀವರು, ಭಿನ್ನಾಃ = ಭಿನ್ನರು, ಪರಃ = ಪರಮಾತ್ಮನು, ಭಿನ್ನಃ = ಭಿನ್ನನು, ತಥಾಪಿ = ಆದರೂ, ಜ್ಞಾನರೂಪತಃ = ಜ್ಞಾನಸ್ವರೂಪರಾದ ಕಾರಣ, ವೇದವಾದೇಷು = ವೇದಗಳಲ್ಲಿ, ಸರ್ವಶಃ = ಅನೇಕ ಬಾರಿ, ಬ್ರಹ್ಮರೂಪೇಣ = ಬ್ರಹ್ಮಸ್ವರೂಪರೆಂದು, ಪ್ರೋಚ್ಯಂತೇ = ಕರೆಸಿಕೊಳ್ಳುತ್ತಾರೆ.

ಇಲ್ಲಿಗೆ ಪೃಥಗುಪದೇಶಾಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

## ತತ್ವಪ್ರಕಾಶಿಕಾ

**तत्वप्रकाशिका – नन्वेवं सत्यद्वैतश्रुतेर्निर्विषयतयाऽप्रामाण्यं प्राप्तमित्याशङ्कां परिहरत्सूत्रमुपन्यस्य व्याचष्टे – तदिति ।।**

ಹಾಗಾದರೆ ಅದ್ವೈತ ಶ್ರುತಿಯು ನಿರ್ವಿಷಯವಾದ್ದರಿಂದ ಅಪ್ರಮಾಣವಾಗಬೇಕಾಗುತ್ತದಲ್ಲವೇ? ಈ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು 'ತದ್ಗುಣಸಾರತ್ವಾತ್' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ಸಾದೃಶ್ಯವನ್ನು ವಿವಕ್ಷಿಸಿ ಹೀಗೆ ಅಭೇದವನ್ನು ಶ್ರುತಿಯು ಅಲ್ಲಲ್ಲಿ ಹೇಳುತ್ತದೆ. 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ಶ್ರುತಿಯು ಬ್ರಹ್ಮನಿಗೆ ಜಗತ್ತಿನಿಂದ ಅಭೇದವನ್ನು ಹೇಳುತ್ತದೆ. ಏಕೆಂದರೆ ಬ್ರಹ್ಮನಲ್ಲಿರುವ ಸದೃಶವಾದ ಗುಣಗಳು ಜಗತ್ತಿನಲ್ಲಿವೆ. ಅದರಂತೆ ಜೀವಾತ್ಮನಲ್ಲೂ ಕೂಡ ಬ್ರಹ್ಮನಲ್ಲಿರುವ ಜ್ಞಾನ ಮೊದಲಾದ ಗುಣಗಳ ಸಾದೃಶ್ಯವಿರುವುದರಿಂದ ಹಾಗೇ ಅಭೇದವಿರುವ ಶ್ರುತಿಯನ್ನು ಹೇಳುತ್ತದೆ ಹೊರತು ಸ್ವರೂಪದಲ್ಲಿ ಅಭೇದವಿರುವುದರಿಂದ ಐಕ್ಯವನ್ನು ಹೇಳಿರುವುದಲ್ಲ.

**तत्वप्रकाशिका – तच्छब्देन स्वात्मनेति प्रकृतस्य परामर्शः । नाभेदश्रुतेरप्रामाण्यप्राप्तिः । परमात्मगुणसदृशानन्दादिगुणस्वरूपत्वेन जीवस्य गौणवृत्त्याऽभेदव्यपदेशोपपत्तेः । यथा खलु सकलजगद्गुणसदृशगुणस्वरूपत्वेन परमात्मा जगदिति व्यपदेशः । 'सर्वं खल्विदं ब्रह्म' इत्यादौ तथैवेति भावः । अत्रैव स्मृतिसम्मतिमाह – भविष्यदिति ।।**

ಸೂತ್ರದಲ್ಲಿರುವ 'ತತ್' ಶಬ್ದದಿಂದ ಸ್ವಾತ್ಮನಾ ಎಂಬ ಪದದಿಂದ ಪ್ರಕೃತನಾದ ಬ್ರಹ್ಮನನ್ನು ಪರಾಮರ್ಶ ಮಾಡಬೇಕು. ಅಭೇದ ಶ್ರುತಿಗೆ ಅಪ್ರಾಮಾಣ್ಯವು ಬರುವುದಿಲ್ಲ. ಏಕೆಂದರೆ ಪರಮಾತ್ಮನಲ್ಲಿರುವ ಗುಣಗಳಿಗೆ ಸದೃಶವಾದ ಆನಂದ ಮೊದಲಾದ ಗುಣಗಳ ಸ್ವರೂಪವೇ ಜೀವನಾಗಿರುವುದರಿಂದ ಗೌಣವೃತ್ತಿಯಿಂದ ಶ್ರುತಿಯು ಅಭೇದವನ್ನು ಹೇಳುತ್ತಿದೆ. ಉದಾ - ಸಕಲ ಜಗತ್ತಿನ ಗುಣಗಳಿಗೆ ಸದೃಶವಾದ ಗುಣವು ಪರಮಾತ್ಮನಲ್ಲಿರುವುದರಿಂದ ಅವನನ್ನು ಜಗತ್ತು ಎಂದು ಶ್ರುತಿಯು ಹೇಳುತ್ತದೆ. 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ಶ್ರುತಿಯು ಹಾಗೆ ಹೇಳಿದೆ ಎಂದಭಿಪ್ರಾಯ. ಈ ವಿಷಯದಲ್ಲಿಯೇ ಸ್ಮೃತಿಸಮ್ಮತಿಯನ್ನು 'ಭವಿಷ್ಯತ್' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

**तत्वप्रकाशिका – गौणी वृत्तिरमुख्येति चेत् सत्यम् । मुख्यार्थासम्भवादाश्रीयते। न हि सार्वज्ञादिगुणवता ब्रह्मणाऽल्पज्ञानादिमतो जीवस्याभेदो युक्तः ।**

ಗೌಣೀವೃತ್ತಿಯು ಅಮುಖ್ಯವೃತ್ತಿಯಲ್ಲವೇ? ಎಂದರೆ ಹೌದು. ಮುಖ್ಯಾರ್ಥವು ಕೂಡದಿದ್ದಾಗ ಗೌಣೀವೃತ್ತಿಯನ್ನು ಆಶ್ರಯಿಸಬೇಕು. ಸರ್ವಜ್ಞತ್ವ ಮೊದಲಾದ ಗುಣಗಳುಳ್ಳ ಬ್ರಹ್ಮನಿಂದ ಅಲ್ಪಜ್ಞಾನ ಮೊದಲಾದ ಗುಣಗಳುಳ್ಳ ಜೀವನಿಗೆ ಅಭೇದವು ಯುಕ್ತವಾಗುವುದಿಲ್ಲವಷ್ಟೆ.

ವಿವರಣೆ - 'ತತ್ತ್ವಮಸಿ' ಇತ್ಯಾದಿ ಐಕ್ಯಪ್ರತಿಪಾದಕಶ್ರುತಿಗಳಿಗೆ ಗೌಣೀವೃತ್ತಿಯನ್ನು ಆಶ್ರಯಿಸಿದರೆ ವೇದಕ್ಕೆ ಅಮುಖ್ಯಾರ್ಥವನ್ನು ಹೇಳಿದಂತಾಗುತ್ತದಲ್ಲವೇ? ಎಂಬುದು ಆಕ್ಷೇಪ. ಮುಖ್ಯಾರ್ಥವು ಅನುಪಪನ್ನವಾದಾಗ ಅಮುಖ್ಯಾರ್ಥವನ್ನು ಆಶ್ರಯಿಸಲೇಬೇಕು ಎಂಬುದಾಗಿ ಭಾಷ್ಯಕಾರರು ಇದಕ್ಕೆ ಸಮಾಧಾನವನ್ನು ಹೇಳುತ್ತಿದ್ದಾರೆ. ಸರ್ವಜ್ಞತ್ವಾದಿ ಗುಣಗಳುಳ್ಳ ಬ್ರಹ್ಮನಿಂದ ಅಲ್ಪಜ್ಞತ್ವಾದಿ ಗುಣಗಳುಳ್ಳ ಜೀವನಿಗೆ ಐಕ್ಯ ಹೇಳಲು ಸಾಧ್ಯವೇ ಇಲ್ಲ. ಹೀಗೆ ಮುಖ್ಯಾರ್ಥವನ್ನು ಸ್ವೀಕರಿಸಲು ಅನುಪಪತ್ತಿಯು ಇರುತ್ತದೆ.

**तत्वप्रकाशिका – न सार्वज्ञादि पारमार्थिकमिति चेन्न । 'यः सर्वज्ञः' इत्यादिश्रुतिसिद्धत्वात् । श्रुतिसिद्धसार्वज्ञादेरपि मिथ्यात्वे बौद्धराद्धान्तापत्तिः । कश्चैवं वादिनोऽद्वैतश्रुतिसिद्धार्थे विश्वासहेतुरन्यत्राभिनिवेशात् ।**

ಬ್ರಹ್ಮನಲ್ಲಿರುವ ಸರ್ವಜ್ಞತ್ವ ಮೊದಲಾವುಗಳು ಪಾರಮಾರ್ಥಿಕವೇ ಅಲ್ಲ ಎಂಬ ಆಕ್ಷೇಪವು ತಪ್ಪು. 'ಯಃ ಸರ್ವಜ್ಞಃ' ಇತ್ಯಾದಿ ಶ್ರುತಿಗಳು ಬ್ರಹ್ಮನಲ್ಲಿರುವ ಸರ್ವಜ್ಞತ್ವಾದಿಗಳು ಪಾರಮಾರ್ಥಿಕವೆಂದು ಹೇಳುತ್ತಿವೆ. ಶ್ರುತಿಸಿದ್ಧವಾದ ಸರ್ವಜ್ಞತ್ವಾದಿಗಳೂ ಕೂಡ ಮಿಥ್ಯಾಭೂತವಾದರೆ ಬೌದ್ಧಸಿದ್ಧಾಂತವನ್ನು ಪ್ರವೇಶಿಸಿದಂತಾಗುತ್ತದೆ. ಮತ್ತು ಯಾವ ವಾದಿಯು ಹೀಗೆ ಹೇಳುತ್ತಾನೋ ಅವನಿಗೆ ಅದ್ವೈತ ಶ್ರುತಿಸಿದ್ಧವಾದ ಅರ್ಥದಲ್ಲಿ ದುರಾಗ್ರಹವೇ ಹೊರತು ಮತ್ತೇನೂ ಅಲ್ಲ.

ವಿವರಣೆ - ಬ್ರಹ್ಮನಲ್ಲಿರುವ ಸರ್ವಜ್ಞತ್ವ, ಜೀವನಲ್ಲಿರುವ ಅಲ್ಪಜ್ಞತ್ವ ಈ ಗುಣಗಳೆಲ್ಲವು ಪಾರಮಾರ್ಥಿಕವೇ ಅಲ್ಲ, ಮಿಥ್ಯಾಭೂತವೇ ಆಗಿವೆ ಎಂದು ಅದ್ವೈತಿಗಳು ಹೇಳುತ್ತಾರೆ. 'ಯಃ ಸರ್ವಜ್ಞಃ' ಮೊದಲಾದ ಶ್ರುತಿಗಳಿಂದ ಸಿದ್ಧವಾದ ಸರ್ವಜ್ಞತ್ವ ಮೊದಲಾದವುಗಳು ಮಿಥ್ಯಾಭೂತವೆಂದು ಹೇಳಿದರೆ ವೇದಕ್ಕೆ ಅಪ್ರಾಮಾಣ್ಯವನ್ನು ಹೇಳುವ ಬೌದ್ಧಮತವನ್ನು ಅದ್ವೈತಿಗಳು ಒಪ್ಪಿದಂತಾಗುತ್ತದೆ.

ಮತ್ತು ತಮ್ಮ ಕಪೋಲಕಲ್ಪಿತವಾದ ಅರ್ಥದಲ್ಲಿ ಕೇವಲ ಅವರಿಗೆ ದುರಾಗ್ರಹವೇ ಹೊರತು ಮತ್ತೇನೂ ಅಲ್ಲ ಎಂಬುದು ಇದರಿಂದ ನಿರ್ಣಯವಾಗುತ್ತದೆ.

**ತತ್ವಪ್ರಕಾಶಿಕಾ – उपजीव्यप्रमाणविरुद्धं चाद्वैतबोधनम् । जीवपरमात्मविषयप्रमाणैर्भेदस्यैव ग्रहणात् । परेणापि हि प्रमाणविरोधभीरुणा लाक्षणिकोऽर्थोऽङ्गीकृतोऽद्वैतश्रुतेः । तथा च सुतरां युक्तं गौणार्थग्रहणम् ।**

ಅದ್ವೈತದ ಬೋಧನವು ಉಪಜೀವ್ಯಪ್ರಮಾಣಕ್ಕೆ ವಿರುದ್ಧವೇ ಆಗಿದೆ. ಜೀವ ಪರಮಾತ್ಮವಿಷಯಕವಾದ ಪ್ರಮಾಣಗಳಿಂದ ಭೇದವೇ ತಿಳಿಯುತ್ತಿದೆ. ಅದ್ವೈತಿಗಳೂ ಕೂಡ ಪ್ರಮಾಣವಿರೋಧಕ್ಕೆ ಹೆದರಿ ಅದ್ವೈತ ಶ್ರುತಿಗಳಿಗೆ ಲಕ್ಷಣಾವೃತ್ತಿಯಿಂದ ತಿಳಿಯುವ ಅರ್ಥವನ್ನೇ ಸ್ವೀಕರಿಸುತ್ತಾರೆ. ಆದ್ದರಿಂದ ಅದ್ವೈತ ಶ್ರುತಿಗಳಿಗೆ ಗೌಣಾರ್ಥವನ್ನು ಹೇಳುವುದು ಸುತರಾಂ ಯುಕ್ತವಾಗುತ್ತದೆ.

ವಿವರಣೆ - ಜೀವಬ್ರಹ್ಮರಿಗೆ ಐಕ್ಯವನ್ನು ಹೇಳಬೇಕಾದರೆ ಜೀವ ಹಾಗೂ ಬ್ರಹ್ಮರೆಂಬ ಎರಡು ಪದಾರ್ಥಗಳು ಮೊದಲು ಸಿದ್ಧವಾಗಬೇಕು. ಈ ಎರಡು ಪದಾರ್ಥಗಳು ಸಿದ್ಧವಾಗುವುದೇ ಶ್ರುತಿಯಿಂದ. ಯಾವ ಶ್ರುತಿಯಿಂದ ಜೀವ ಹಾಗೂ ಬ್ರಹ್ಮರ ಸ್ವರೂಪವು ಸಿದ್ಧವಾಗುತ್ತಿದೆಯೋ ಅದೇ ಶ್ರುತಿಪ್ರಮಾಣದಿಂದ ಭೇದವೂ ಕೂಡ ತಿಳಿಯುತ್ತಿದೆ. ಹೀಗೆ ಮೊದಲೇ ಶ್ರುತಿಯಿಂದ ಸಿದ್ಧವಾದ ಜೀವಬ್ರಹ್ಮರ ಭೇದವಿಷಯದಲ್ಲಿ ಪುನಃ ಅದ್ವೈತ ಶ್ರುತಿ ಮಾಡುವುದಾದರೂ ಏನು? ಒಂದುವೇಳೆ ಹಾಗೇನಾದರೂ ಭೇದವನ್ನು ವಿರೋಧಿಸಿ ಅದ್ವೈತ ಶ್ರುತಿಯು ಐಕ್ಯವನ್ನು ಪ್ರತಿಪಾದನೆ ಮಾಡುವುದಾದರೆ ಉಪಜೀವ್ಯಪ್ರಮಾಣದಿಂದ ಇದಕ್ಕೆ ವಿರೋಧ ತಪ್ಪಿದ್ದಲ್ಲ.

ಮತ್ತು ಶ್ರುತಿಗಳಿಗೆ ಮುಖ್ಯಾರ್ಥವನ್ನು ಸ್ವೀಕರಿಸಬೇಕೆಂದರೆ ಪ್ರಮಾಣವಿರೋಧವು ಇರಬಾರದೆಂಬುದು ಅದ್ವೈತಿಗಳಿಗೂ ಕೂಡ ಸಮ್ಮತವೇ ಆಗಿದೆ. ಆದ್ದರಿಂದಲೇ ಅವರು ಅದ್ವೈತ ಶ್ರುತಿಗಳಿಗೆ ಲಕ್ಷಣಾವೃತ್ತಿಯನ್ನು ಅಂಗೀಕರಿಸುತ್ತಾರೆ. ಆದ್ದರಿಂದ ಅದ್ವೈತ ಶ್ರುತಿಗಳಿಗೆ ಗೌಣಾರ್ಥವನ್ನು ಮಾಡುವುದು ಯಾವುದೇ ರೀತಿಯಲ್ಲಿ ಅಯುಕ್ತವಾಗುವುದಿಲ್ಲ.

**ತತ್ವಪ್ರಕಾಶಿಕಾ – लक्षणावृत्तौ हि तत्त्वं पदवाच्यार्थपरित्यागेनासिपदमात्रे सामानाधिकरण्यरूपमुख्यार्थताऽशेषप्रमाणविरुद्धाऽङ्गीकर्तव्या । वरं हि ततस्तत्त्वंपदमुख्यार्थमङ्गीकृत्यासिपदमात्रस्य गौणार्थवर्णनम् ।**

ಲಕ್ಷಣಾವೃತ್ತಿಯನ್ನು ಅಂಗೀಕರಿಸಿ 'ತತ್' ಮತ್ತು 'ತ್ವಂ' ಪದಗಳಿಂದ ತಿಳಿಯುವ ಮುಖ್ಯಾರ್ಥವನ್ನು ಪರಿತ್ಯಾಗ ಮಾಡಿ, ಕೇವಲ 'ಅಸಿ' ಪದಕ್ಕೆ ಸಾಮಾನಾಧಿಕರಣ್ಯ ಎಂಬ ಸಾಮಾನ್ಯ ಅರ್ಥವನ್ನು ಅಂಗೀಕಾರ ಮಾಡಬೇಕಾಗುತ್ತದೆ. ಆಗ ಸಕಲ ಪ್ರಮಾಣಗಳ ವಿರೋಧ ಬರುತ್ತದೆಂದು ಅಂಗೀಕರಿಸಿದಂತಾಗುತ್ತದೆ. ಇದಕ್ಕಿಂತಲೂ 'ತತ್' ಮತ್ತು 'ತ್ವಂ' ಪದಗಳ ಮುಖ್ಯಾರ್ಥವನ್ನು ಸ್ವೀಕರಿಸಿ ಕೇವಲ 'ಅಸಿ' ಎಂಬ ಪದಕ್ಕೆ ಗೌಣಾರ್ಥವನ್ನು ಸ್ವೀಕರಿಸುವುದೇ ಯುಕ್ತವಾಗಿದೆ.

ವಿವರಣೆ - 'ತತ್ತ್ವಮಸಿ' ಎಂಬ ಶ್ರುತಿಯಲ್ಲಿರುವ 'ತತ್' ಎಂಬ ಪದಕ್ಕೆ ಸರ್ವಜ್ಞತ್ವ ಗುಣಗಳಿಂದ ವಿಶಿಷ್ಟನಾದ ಬ್ರಹ್ಮ ಎಂದರ್ಥ. 'ತ್ವಂ' ಎಂಬ ಪದಕ್ಕೆ ಅಲ್ಪಜ್ಞತ್ವಾದಿ ಗುಣಗಳಿಂದ ವಿಶಿಷ್ಟನಾದ ಜೀವ

ಎಂದರ್ಥ. ಈ ಎರಡು ಪದಗಳಿಂದ ತಿಳಿಯಲ್ಪಡುವ ವಿಶಿಷ್ಟ ಚೇತನ ಎಂಬರ್ಥವನ್ನು ಬಿಟ್ಟು ಕೇವಲ 'ಅಸಿ' ಎಂಬ ಪದಕ್ಕೆ ಅಭೇದವೆಂಬ ಮುಖ್ಯಾರ್ಥವನ್ನು ಅದ್ವೈತಿಗಳು ಸ್ವೀಕರಿಸುತ್ತಿದ್ದಾರೆ. ಈ ಅಭೇದ ಎಂಬ ಅರ್ಥವು ಸಕಲ ಪ್ರಮಾಣಗಳಿಗೆ ವಿರುದ್ಧವಾಗಿವೆ. ಆದ್ದರಿಂದ 'ಅಸಿ' ಎಂಬ ಪದಕ್ಕೆ ಅಭೇದ ಎಂಬ ಅರ್ಥವನ್ನು ಬಿಟ್ಟು 'ತತ್' ಮತ್ತು 'ತ್ವಂ' ಪದಗಳಿಂದ ತಿಳಿಯಲ್ಪಡುವ ವಿಶಿಷ್ಟಾರ್ಥವನ್ನು ಸ್ವೀಕರಿಸುವುದೇ ಹೆಚ್ಚು ಸೂಕ್ತವಾಗುತ್ತದೆ.

**तत्वप्रकाशिका – नात्र प्रमाणविरोधेन श्रुतेरमुख्यार्थताऽभ्युपगम्यते येन गौणार्थोङ्गीकार्यः । स्यात् । किं तु श्रुतेरेव तथाभिप्रेतत्वादिति कश्चित् । स प्रष्टव्यः। कथमयं श्रुतेरभिप्रायो लोकोत्तरप्रज्ञेन विज्ञात इति । तात्पर्यलिङ्गैरिति वदन् देवानांप्रियोऽसावुपेक्षितव्यः । न हि लिङ्गानि तात्पर्यावबोधकानि लाक्षणिकार्थग्रहणे कारणानीति युक्तम् ।**

ಪ್ರಮಾಣವಿರೋಧವಿದೆ ಎಂಬ ಕಾರಣದಿಂದ 'ತತ್ತ್ವಮಸಿ' ಎಂಬ ಶ್ರುತಿಗೆ ನಾವು ಲಾಕ್ಷಣಿಕಾರ್ಥವನ್ನು ಅಂಗೀಕಾರ ಮಾಡುತ್ತಿಲ್ಲ. ಹಾಗೇನಾದರೂ ಮಾಡಿದ್ದಲ್ಲಿ ಗೌಣಾರ್ಥವನ್ನೇ ಸ್ವೀಕರಿಸುವುದು ಯುಕ್ತವಾಗುತ್ತಿತ್ತು. ಆದರೆ ಶ್ರುತಿಗೆ ಲಕ್ಷಣಾವೃತ್ತಿಯಿಂದ ಅಮುಖ್ಯಾರ್ಥವನ್ನು ತಿಳಿಸುವುದೇ ಅಭಿಪ್ರಾಯವಿರುತ್ತದೆ. ಹೀಗೆ ಅದ್ವೈತಿಗಳಲ್ಲಿ ಒಬ್ಬನು ಅಭಿಪ್ರಾಯ ಪಡುತ್ತಾನೆ.

ಇವನನ್ನು ಕುರಿತು ಪ್ರಶ್ನಿಸಬೇಕು. ಶ್ರುತಿಗೆ ಈ ಅಭಿಪ್ರಾಯವಿದೆ ಎಂಬುದಾಗಿ ಲೋಕೋತ್ತರ ಪ್ರಜ್ಞನಾದ ನಿನಗೆ ಹೇಗೆ ತಿಳಿಯಿತು. ತಾತ್ಪರ್ಯಲಿಂಗಗಳಿಂದ ಎಂದು ಹೇಳಿದರೆ ನೀನೊಬ್ಬ ಮೂರ್ಖ ಎಂದು ನಿನ್ನನ್ನು ಉಪೇಕ್ಷೆ ಮಾಡಬೇಕು. ಲಿಂಗಗಳು ತಾತ್ಪರ್ಯವನ್ನಷ್ಟೆ ತಿಳಿಸುತ್ತವೆ ಹೊರತು ಲಾಕ್ಷಣಿಕಾರ್ಥವನ್ನೇ ತಿಳಿಸುತ್ತವೆನ್ನಲು ಯಾವುದೇ ಕಾರಣವಿರುವುದಿಲ್ಲ.

ವಿವರಣೆ – 'ನೇಹ ನಾನಾ' ಎಂಬ ಶ್ರುತಿಯು ಎಲ್ಲವನ್ನೂ ಕೂಡ ಮಿಥ್ಯಾಭೂತವೆಂದು ಹೇಳುತ್ತಿದೆ. ಒಂದುವೇಳೆ ಬ್ರಹ್ಮಾತಿರಿಕ್ತವಾದ ಜೀವನನ್ನು ಸತ್ಯಭೂತನೆಂದು ಹೇಳಿದರೆ ಈ ಶ್ರುತಿಯ ವಿರೋಧವು ತಪ್ಪಿದ್ದಲ್ಲ. ಹಾಗಾಗಿ 'ತತ್ತ್ವಮಸಿ' ಎಂಬ ಶ್ರುತಿಗೆ 'ನೇಹ ನಾನಾ' ಎಂಬ ಶ್ರುತಿಗೆ ಅನುಸಾರಿಯಾಗಿ ಲಾಕ್ಷಣಿಕಾರ್ಥವನ್ನು ಸ್ವೀಕರಿಸಿ ಅಭೇದವನ್ನು ಹೇಳಬೇಕು ಎಂಬುದಾಗಿ ನಾವು ಕಲ್ಪನೆ ಮಾಡುತ್ತಿಲ್ಲ. ಶ್ರುತಿಯೇ ಸ್ವತಃ ಇದನ್ನು ಹೇಳುತ್ತಿದೆ. ನಾವೇನಾದರೂ ಸ್ವಕಪೋಲದಿಂದ ಲಾಕ್ಷಣಿಕಾರ್ಥವನ್ನು ಅಂಗೀಕಾರ ಮಾಡಿದ್ದರೆ ಎರಡು ಪದಗಳಿಗೆ ಲಕ್ಷಣಾವೃತ್ತಿಯನ್ನು ಆಶ್ರಯಿಸುವುದಕ್ಕಿಂತ 'ಅಸಿ' ಎಂಬ ಒಂದು ಪದಕ್ಕೆ ಗೌಣಾರ್ಥವನ್ನು ಸ್ವೀಕರಿಸುವುದು ಪ್ರಶಸ್ತವೆಂದು ಒಪ್ಪಬಹುದಿತ್ತು. ಆದರೆ ಸ್ವತಃ ಶ್ರುತಿಗೆ ಈ ಅಭಿಪ್ರಾಯವಿರುವಾಗ ಅದನ್ನು ವಿರೋಧ ಮಾಡಲು ನಮ್ಮಿಂದ ಸಾಧ್ಯವಿಲ್ಲ ಎಂದು ಅದ್ವೈತಿಗಳಲ್ಲಿ ಕೆಲವು ಹೇಳುತ್ತಾರೆ.

ಇದು ತಪ್ಪು. ಶ್ರುತಿಗೇ ಈ ಅಭಿಪ್ರಾಯವಿದೆ ಎಂದು ಸಾಮಾನ್ಯಜ್ಞಾನವುಳ್ಳ ಅದ್ವೈತಿಗಳಿಗೆ ತೀರ್ಮಾನಿಸಲು ಹೇಗೆ ಸಾಧ್ಯ ? ಆದ್ದರಿಂದ ಟೀಕೆಯಲ್ಲಿ ಅದ್ವೈತಿಗೆ 'ಲೋಕೋತ್ತರಪ್ರಜ್ಞ' ಎಂಬುದಾಗಿ ಹಾಸ್ಯ ಮಾಡಿದ್ದಾರೆ. ಹಾಗೂ 'ದೇವಾನಾಂಪ್ರಿಯಃ' ಎಂಬುದಾಗಿಯೂ ಹೇಳಿದ್ದಾರೆ. 'ಹೆಚ್ಚಿನ ಪಾಂಡಿತ್ಯವಿಲ್ಲದವನು' ಹಾಗೂ 'ಮೂರ್ಖನಾದವನು' ಎಂಬುದು ಈ ಪದಗಳ ಅಭಿಪ್ರಾಯ. ಶ್ರುತಿಗೆ ಇಂತಹ ಅಭಿಪ್ರಾಯವಿದೆ ಎಂದು ತೀರ್ಮಾನಿಸಲು ಮೂರ್ಖನಾದ ಅದ್ವೈತಿಗೆ ಸಾಧ್ಯವಿಲ್ಲ ಎಂದಭಿಪ್ರಾಯ.

**तत्वप्रकाशिका – लिङ्गबलादद्वैत एव तात्पर्ये सिद्धे प्रमाणविरोधाद् गौणार्थमनङ्गीकृत्य लक्षणाऽश्रीयत इति चेन्न । उपक्रमादीनामन्यार्थत्वात् । यथा चैतत्तथोक्तमन्यत्रेति।**

ಉಪಕ್ರಮ ಮೊದಲಾದ ತಾತ್ಪರ್ಯಲಿಂಗಗಳ ಆಧಾರದಿಂದ ಶ್ರುತಿಗೆ ಅದ್ವೈತದಲ್ಲೇ ತಾತ್ಪರ್ಯವೆಂದು ಸಿದ್ಧವಾದರೆ ಪ್ರಮಾಣವಿರೋಧವು ಇರುವುದರಿಂದ ಗೌಣಾರ್ಥವನ್ನು ಸ್ವೀಕರಿಸದೇ ಲಕ್ಷಣಾವೃತ್ತಿಯನ್ನು ಆಶ್ರಯಿಸುತ್ತೇವೆ.

ಹೀಗೆ ಹೇಳುವುದು ತಪ್ಪು. ಉಪಕ್ರಮಾದಿಗಳಿಗೆ ಅದ್ವೈತದಲ್ಲಿ ತಾತ್ಪರ್ಯವೇ ಇರುವುದಿಲ್ಲ. ಬೇರೆ ಅರ್ಥದಲ್ಲೇ ತಾತ್ಪರ್ಯವಿರುತ್ತದೆ. ಈ ವಿಷಯವನ್ನು ಬೇರೆ ಗ್ರಂಥಗಳಲ್ಲಿ ಪ್ರತಿಪಾದನೆ ಮಾಡಲಾಗಿದೆ.

ವಿವರಣೆ - 'ನೇಹ ನಾನಾಸ್ತಿ ಕಿಂಚನ' 'ನಿರ್ಗುಣೋ ನಿರಂಜನಃ' ಇವೇ ಮೊದಲಾದ ಪ್ರಮಾಣವಿರೋಧ ಇರುವುದರಿಂದ ಗೌಣಾರ್ಥವನ್ನು ಸ್ವೀಕರಿಸಲು ಸಾಧ್ಯವಿಲ್ಲ. ಲಕ್ಷಣಾವೃತ್ತಿಯಿಂದ ಅಭೇದವನ್ನೇ ಒಪ್ಪಬೇಕೆಂದು ಅದ್ವೈತಿಗಳು ಹೇಳುತ್ತಾರೆ. ಆದರೆ ಉಪಕ್ರಮಾದಿ ಷಡ್ವಿಧ ತಾತ್ಪರ್ಯಲಿಂಗಗಳು ಅದ್ವೈತ ಪರವಾಗಿ ಇರುವುದೇ ಇಲ್ಲ ಎಂಬ ವಿಷಯವನ್ನು ವಿಷ್ಣುತತ್ವನಿರ್ಣಯ ಗ್ರಂಥದಲ್ಲಿ ಚೆನ್ನಾಗಿ ಸಮರ್ಥಿಸಲಾಗಿದೆ.

**तत्वप्रकाशिका – अथापीदं स्यात् । 'रूढियोगौ विना कश्चिन्नैवार्थो वेदगो भवेत्' इति वदन् भाष्यकारः कथमेवं श्रुतिं व्याख्याति । न च परमात्मसमन्वयविषयकं तद्वाक्यम् । अर्थान्तरप्रस्ताव एवोदाहृतत्वात् । कश्चिदिति विशेषणाच्चेति ।**

ಪ್ರಶ್ನೆ - ಆದರೂ ಮುಂದೆ ಹೇಳುವ ದೋಷವಿದೆ - 'ರೂಢಿಯೋಗೌ ವಿನಾ ಕಶ್ಚಿನ್ನೈವಾರ್ಥೋ ವೇದಗೋ ಭವೇತ್' 'ರೂಢಿ ಹಾಗೂ ಯೋಗಗಳಿಲ್ಲದೇ ವೇದಕ್ಕೆ ಯಾವುದೇ ಅರ್ಥವು ಇರುವುದಿಲ್ಲ' ಎಂಬುದಾಗಿ ಹೇಳುವ ಭಾಷ್ಯಕಾರರು ಪ್ರಕೃತ ಗೌಣೀವೃತ್ತಿಯಿಂದ ಶ್ರುತಿಯನ್ನು ಹೇಗೆ ತಾನೆ ವ್ಯಾಖ್ಯಾನ ಮಾಡುತ್ತಾರೆ? ಭಾಷ್ಯಕಾರರ ಈ ಮಾತು ಪರಮಾತ್ಮನಲ್ಲಿ ಸಮನ್ವಯ ಮಾಡಲು ಅನುಸರಿಸಬೇಕಾದ ಕ್ರಮವನ್ನು ಹೇಳುತ್ತದೆ. ಪರಮಾತ್ಮನಲ್ಲಿ ಸಮನ್ವಯಕ್ಕೆ ಸಂಬಂಧಪಡದೇ ಬೇರೆ ವಿಷಯದ ಸಂದರ್ಭದಲ್ಲಿಯೇ ಇದನ್ನು ಉದಾಹರಿಸಿದ್ದಾರೆ. ಮತ್ತು ಉದಾಹರಿಸಲ್ಪಟ್ಟ ವಾಕ್ಯದಲ್ಲಿ 'ಅರ್ಥ' ಎಂಬ ಪದಕ್ಕೆ 'ಕಶ್ಚಿತ್' ಎಂಬುದಾಗಿ ವಿಶೇಷಣವಿದೆ. ಆದ್ದರಿಂದ ಗೌಣೀವೃತ್ತಿಯಿಂದ 'ತತ್ತ್ವಮಸಿ' ಎಂದು ವ್ಯಾಖ್ಯಾನ ಮಾಡಲಾಗದು.

ವಿವರಣೆ - 'ತತ್ತ್ವಮಸಿ' ಎಂಬಲ್ಲಿರುವ 'ಅಸಿ' ಎಂಬ ಪದಕ್ಕೆ ಗೌಣಾರ್ಥವನ್ನು ಆಶ್ರಯಿಸಬೇಕೆಂದು ಭಾಷ್ಯಕಾರರು ಹೇಳುತ್ತಿದ್ದಾರೆ. ಆದರೆ ಇದೇ ಭಾಷ್ಯಕಾರರು ಕರ್ಮನಿರ್ಣಯದಲ್ಲಿ ರೂಢ್ಯರ್ಥ ಹಾಗೂ ಯೋಗಾರ್ಥಗಳನ್ನೇ ವೇದಕ್ಕೆ ಹೇಳಬೇಕು, ಗೌಣಾರ್ಥವನ್ನು ಅಥವಾ ಲಾಕ್ಷಣಿಕಾರ್ಥವನ್ನು

ಪೃಥಗುಪದೇಶಾಧಿಕರಣ (೨-೩-೧೪)

ಹೇಳಬಾರದೆಂದು ಸ್ಪಷ್ಟವಾಗಿ ಹೇಳಿದ್ದಾರೆ. ಹೀಗೆ ಭಾಷ್ಯಕಾರರ ಎರಡು ಮಾತುಗಳಿಗೆ ಪರಸ್ಪರ ವಿರೋಧ ಬರುತ್ತಿದೆ.

'ರೂಢಿಯೋಗೌ ವಿನಾ' ಎಂಬ ವಾಕ್ಯವನ್ನು ಕರ್ಮನಿರ್ಣಯದಲ್ಲಿ ಪರಮಾತ್ಮನಿಗೆ 'ತತ್ತ್ವಮಸಿ' ಎಂಬ ವಾಕ್ಯವನ್ನು ಸಮನ್ವಯ ಮಾಡುವ ಸಂದರ್ಭದಲ್ಲಿ ಹೇಳಿದ್ದಲ್ಲ. ಹಾಗೇನಾದರೂ ಸಮನ್ವಯ ಮಾಡುವ ಸಂದರ್ಭದಲ್ಲಿ ಹೇಳಿದ್ದರೆ ಗೌಣೀವೃತ್ತಿಯನ್ನು ಒಪ್ಪಬಹುದಿತ್ತು. ಆದರೆ ಪರಮಾತ್ಮನಲ್ಲಿ ಸಮನ್ವಯ ಮಾಡದ ಬೇರೆ ಇನ್ನೊಂದು ವಿಷಯದ ಚರ್ಚೆಯ ಸಂದರ್ಭದಲ್ಲಿ ಕರ್ಮನಿರ್ಣಯದಲ್ಲಿ ಭಾಷ್ಯಕಾರರು ಆ ಮಾತನ್ನು ಉದಾಹರಿಸಿದ್ದಾರೆ.

ಅಷ್ಟೇ ಅಲ್ಲದೇ, ಕರ್ಮನಿರ್ಣಯದಲ್ಲಿ ಉದಾಹರಿಸಲಟ್ಟ ವಾಕ್ಯದಲ್ಲಿ 'ಅರ್ಥ' ಪದಕ್ಕೆ 'ಕಶ್ಚಿತ್' ಎಂಬ ವಿಶೇಷಣವನ್ನು ಹೇಳಿರುವುದರಿಂದ 'ರೂಢಿ' ಹಾಗೂ 'ಯೋಗ' ಎಂಬೆರಡು ವೃತ್ತಿಗಳನ್ನು ಬಿಟ್ಟು ಬೇರೆ ಯಾವುದೇ ವೃತ್ತಿಗಳನ್ನು ಸರ್ವಥಾ ಆಶ್ರಯಿಸಬಾರದೆಂದು ಸ್ಪಷ್ಟವಾಗುತ್ತದೆ. ಹೀಗಿರುವಾಗ ಪ್ರಕೃತ ಗೌಣೀವೃತ್ತಿಯನ್ನು ಹೇಗೆ ಆಶ್ರಯಿಸಿದರು.

**तत्वप्रकाशिका – मैवम् । तत्र रूढियोगौ विहाय केवलवृत्त्यन्तरस्य निषिद्धत्वात् । रूढियोगपूर्वकगौण्यादिवृत्तेरनिवारणात् । सा च परकीयन्यायेनैव । अस्ति हि 'तत्त्वमसि' इत्यादिश्रुतीनाम् 'अतत्त्वमसि' इत्यादिरूपो रूढार्थः । अतः श्रुत्यविरोधेन जीवस्य परमात्मभेदसिद्धेर्युक्तस्तत्र वेदसमन्वय इति सिद्धम् ।।**

ಈ ಪ್ರಶ್ನೆಯು ತಪ್ಪು. ರೂಢಿ ಹಾಗೂ ಯೋಗಗಳನ್ನು ಬಿಟ್ಟು ಬೇರೆ ಸ್ವತಂತ್ರವೃತ್ತಿಯನ್ನು ಕರ್ಮನಿರ್ಣಯದ ಆ ವಾಕ್ಯದಲ್ಲಿ ನಿಷೇಧ ಮಾಡಿದ್ದಾರೆ. ರೂಢಿ ಹಾಗೂ ಯೋಗಗಳಿಂದ ಸಹಿತವಾದ ಗೌಣೀವೃತ್ತಿಯನ್ನು ಅಲ್ಲಿ ನಿರಾಕರಣೆ ಮಾಡಿಯೇ ಇಲ್ಲ. ಆ ಗೌಣೀವೃತ್ತಿಯೂ ಕೂಡ ಅದ್ವೈತ ಮತದ ನ್ಯಾಯದಿಂದಷ್ಟೇ ಹೇಳಿದ್ದಾರೆ. 'ತತ್ತ್ವಮಸಿ' ಮೊದಲಾದ ಶ್ರುತಿಗಳಿಗೆ 'ಅತತ್ತ್ವಮಸಿ' ಇತ್ಯಾದಿಯಾದ ರೂಢ್ಯರ್ಥವನ್ನೇ ನಾವು ಒಪ್ಪಿದ್ದೇವೆ.

ಆದ್ದರಿಂದ ಶ್ರುತಿಯ ವಿರೋಧವಿಲ್ಲದ ಕಾರಣ ಜೀವನಿಗೆ ಪರಮಾತ್ಮನಿಗಿಂತ ಭೇದವೇ ಸಿದ್ಧವಾಗುತ್ತದೆ. ಪರಮಾತ್ಮನಲ್ಲಿ ಮಾಡಲ್ಪಟ್ಟ ವೇದಸಮನ್ವಯವು ಯುಕ್ತವಾಯಿತು.

ವಿವರಣೆ - ಸಮಾಧಾನ : ಕರ್ಮನಿರ್ಣಯದ ಅಭಿಪ್ರಾಯವೇನೆಂದರೆ ಕೇವಲ ಲಕ್ಷಣಾವೃತ್ತಿ, ಕೇವಲ ಗೌಣೀವೃತ್ತಿಯನ್ನು ಆಶ್ರಯಿಸಬಾರದು ಎಂದೇ ಹೊರತು ರೂಢಿ ಮತ್ತು ಯೋಗಾರ್ಥದಿಂದ ಸಹಿತವಾದ ಗೌಣೀವೃತ್ತಿಯನ್ನು ಆಶ್ರಯಿಸಬಾರದು ಎಂದಭಿಪ್ರಾಯವಲ್ಲ. ಪ್ರಕೃತದಲ್ಲಿ ರೂಢಿ ಹಾಗೂ ಯೋಗಾರ್ಥಗಳಿಂದ ಸಹಿತವಾದ ಗೌಣೀವೃತ್ತಿಯನ್ನೇ ನಾವು 'ತತ್ತ್ವಮಸಿ' 'ಅಹಂ ಬ್ರಹ್ಮಾಸ್ಮಿ' ಇತ್ಯಾದಿ ಸಂದರ್ಭದಲ್ಲಿ ಹೇಳುತ್ತಿದ್ದೇವೆ. ಹಾಗಾಗಿ ಭಾಷ್ಯಕಾರರ ಎರಡು ಮಾತುಗಳಿಗೆ ಪರಸ್ಪರ ವಿರೋಧವು ಬರಲು ಸಾಧ್ಯವೇ ಇಲ್ಲ. ಆ ಗೌಣೀವೃತ್ತಿಯನ್ನೂ ಕೂಡ ಅದ್ವೈತ ಮತದ ನ್ಯಾಯವನ್ನು ಅನುಸರಿಸಿ ಹೇಳಿದ್ದೇ ಹೊರತು ನಮ್ಮ ಸಿದ್ಧಾಂತದ ಪ್ರಕಾರವಲ್ಲ. ಏಕೆಂದರೆ ಅದ್ವೈತಿಗಳು 'ತತ್' 'ತ್ವಂ' 'ಅಸಿ' ಎಂಬುದಾಗಿ ಪದವಿಭಾಗವನ್ನು ಮಾಡುತ್ತಾರೆ. ಆ ಪದವಿಭಾಗವನ್ನು ಅನುಸರಿಸಿದರೆ 'ಅಸಿ' ಪದಕ್ಕೆ ಗೌಣಾರ್ಥವನ್ನು ಒಪ್ಪಬೇಕಾಗುತ್ತದೆ. ನಮ್ಮ ಸಿದ್ಧಾಂತದಲ್ಲಿ 'ಅತತ್' 'ತ್ವಂ' 'ಅಸಿ' ಎಂಬುದಾಗಿ ಪದವಿಭಾಗ ಮಾಡುತ್ತೇವೆ. ಈ ಪಕ್ಷದಲ್ಲಿ ಗೌಣೀವೃತ್ತಿಯನ್ನು ಆಶ್ರಯಿಸಲೇಬೇಕಾಗಿಲ್ಲ. ರೂಢ್ಯರ್ಥದಿಂದಲೇ ಎಲ್ಲವೂ ಯುಕ್ತವಾಗುತ್ತದೆ.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಪೃಥಗುಪದೇಶಾಧಿಕರಣ ಮುಗಿಯಿತು.

ಪರಿಪೂರ್ಣಚಂದ್ರಿಕಾ

# ಪೃಥಗುಪದೇಶಾಧಿಕರಣ

(೨-೩-೧೪)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## पृथगुपदेशाधिकरणम्

### ಜೀವನು ಪರಮಾತ್ಮನಿಗಿಂತ ಅತ್ಯಂತ ಭಿನ್ನನಾಗಿದ್ದಾನೆ

**पृथगुपदेशात् ।। न जीवशक्तेरीशायत्तत्वम् । तयोरभेदादिति पूर्वाक्षेपेण पूर्वपक्षोत्थानात्सङ्गतिः । अत्रोक्तं जीवान्यस्य ब्रह्मणो जगत्स्रष्टृत्वादिकं किं जीवब्रह्माभेदश्रुतिविरुद्धं न वेति चिन्ता ।**

ಹಿಂದಿನ ಅಧಿಕರಣದಲ್ಲಿ ಜೀವನಲ್ಲಿರುವ ಶಕ್ತಿಯು ಈಶ್ವರನ ಅಧೀನವೆಂದು ಹೇಳಲಾಯಿತು. ಆದರೆ ಇದು ಯುಕ್ತವಲ್ಲ. ಏಕೆಂದರೆ ಜೀವನು ಈಶ್ವರನಿಂದ ಭಿನ್ನನಾಗಿದ್ದಾನೆ. ಹೀಗೆ ಪೂರ್ವಾಧಿಕರಣದ ಸಿದ್ಧಾಂತದ ಮೇಲೆ ಆಕ್ಷೇಪ ಮಾಡುತ್ತಿರುವುದರಿಂದ ಪೂರ್ವಪಕ್ಷವು ಹುಟ್ಟುತ್ತಿದೆ. ಆದ್ದರಿಂದ ಆನಂತರ್ಯ ಸಂಗತಿಯು ಇದೆ ಎಂದು ತಿಳಿಯಬೇಕು.

ಒಂದುವೇಳೆ ಬ್ರಹ್ಮನು ಅಲ್ಪಜ್ಞತ್ವಾದಿವಿಶಿಷ್ಟವಾದ ಜೀವನಿಂದ ಅಭಿನ್ನನಾದಲ್ಲಿ ಜಗತ್ ಸ್ರಷ್ಟೃತ್ವಾದಿಗಳೇ ನಾಶವಾಗಿಬಿಡುತ್ತವೆ. ಆದಕ್ಕಾಗಿ ಬ್ರಹ್ಮನು ಜೀವನಿಗಿಂತ ಭಿನ್ನನಾಗಿದ್ದಾನೆ ಎಂದೇ ಹೇಳಬೇಕು. ಆದ್ದರಿಂದ ಜೀವಾನ್ಯನಾದ ಬ್ರಹ್ಮನಿಗೆ ಯಾವ ಜಗತ್ಸ್ರಷ್ಟೃತ್ವಾದಿಗಳು ಉಕ್ತವಾಗಿದೆಯೋ ಅವುಗಳು ಜೀವಬ್ರಹ್ಮ ಅಭೇದಶ್ರುತಿಗಳಿಂದ ವಿರುದ್ಧವಾಗಿವೆಯೋ ಇಲ್ಲವೋ? ಎಂಬುದು ಈ ಅಧಿಕರಣದ ಪ್ರಧಾನ ಸಂಶಯ.

**तदर्थं षड्विधतात्पर्यलिङ्गोपेतयाऽभेदश्रुत्या बाधितत्वाद्भेदश्रुतिरप्रमाणमुतोपजीव्यसयुक्तिकभेदश्रुतिबाधितत्वादद्वैतश्रुतिर्गौणीति ।**

ಈ ಹಿಂದಿನ ಸಂಶಯವು ಪರಿಹಾರವಾಗಬೇಕೆಂದರೆ ಷಡ್ವಿಧತಾತ್ಪರ್ಯಲಿಂಗದಿಂದ ಕೂಡಿರುವ ಅಭೇದಶ್ರುತಿಯಿಂದ ಬಾಧಿತವಾಗಿದೆ. ಆದ್ದರಿಂದ ಅದು ಅಪ್ರಮಾಣವೆಂದು ಹೇಳಬೇಕೋ ಅಥವಾ

ಉಪಜೀವ್ಯವಾದ ಯುಕ್ತಿಬದ್ಧವಾದ ಭೇದಶ್ರುತಿಯಿಂದ ಬಾಧಿತವಾದ ಅದ್ವೈತಶ್ರುತಿಯನ್ನು ಗೌಣವೆಂದು ಹೇಳಬೇಕೋ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थमभेदश्रुतिः किमुपजीव्याविरोधाय पदद्वयलक्षणयैक्यपरोत तदविरोधाय तत्पदमात्रस्य गौणार्थत्वेन(गौणा)भेदपरेति ।।**

ಹಿಂದಿನ ಸಂಶಯವು ಪರಿಹಾರವಾಗಬೇಕೆಂದರೆ ಅಭೇದಶ್ರುತಿಯು ಉಪಜೀವ್ಯದ ವಿರೋಧವನ್ನು ಹೊಂದಬಾರದೆಂದರೆ ಪದದ್ವಯಗಳಿಗೂ ಕೂಡ ಲಕ್ಷಣಾವನ್ನು ಮಾಡಿ ಐಕ್ಯಪರತ್ವವನ್ನು ಹೇಳಬೇಕು. ತತ್ತ್ವಮಸಿ ಎಂಬ ಶ್ರುತಿಯಲ್ಲಿ ತತ್ ಹಾಗೂ ತ್ವಂ ಎಂಬ ಪದಕ್ಕೆ ಸರ್ವಜ್ಞತ್ವ ವಿಶಿಷ್ಟನಾದ ಬ್ರಹ್ಮನಿಗೂ ಅಲ್ಪಜ್ಞತ್ವವಿಶಿಷ್ಟನಾದ ಜೀವನಿಗೂ ಐಕ್ಯವನ್ನು ಹೇಳಿದರೆ ಪ್ರತ್ಯಕ್ಷಾದಿವಿರೋಧವು ಬರುತ್ತದೆ. ಅದಕ್ಕಾಗಿ ತತ್ ಮತ್ತು ತ್ವಂ ಎರಡೂ ಪದಗಳಿಗೆ ಲಕ್ಷಣಾಪರತ್ವವನ್ನು ಅಂಗೀಕರಿಸಿ ಚಿನ್ಮಾತ್ರಪರತ್ವವನ್ನು ಹೇಳಬೇಕು. ಆಗ ಚಿನ್ಮಾತ್ರಗಳಿಗೆ ಐಕ್ಯವನ್ನು ಹೇಳಿದಾಗ ಉಪಜೀವ್ಯ ವಿರೋಧವು ಬರುವುದಿಲ್ಲ ಎಂದು ಅದ್ವೈತಿಗಳು ಹೇಳುತ್ತಾರೆ. ಹೀಗೆ ಅದ್ವೈತಿಗಳು ಹೇಳುವುದು ಸರಿಯೋ ಅಥವಾ ತತ್ತ್ವಮಸಿ ಎಂಬ ಪದಕ್ಕೆ ಮಾತ್ರ ತತ್‌ಸಾದೃಶ್ಯ ಎಂಬುದಾಗಿ ಗೌಣಾರ್ಥವನ್ನು ಒಪ್ಪಿ ಉಪಜೀವ್ಯವಿರೋಧವನ್ನು ಪರಿಹರಿಸುವ ಮೂಲಕ 'ತತ್‌ಸದೃಶತ್ತ್ವಮಸಿ' ಎಂದು ವ್ಯಾಖ್ಯಾನವನ್ನು ಸಿದ್ಧಾಂತಿಗಳು ಮಾಡುತ್ತಾರೆ. ಹೀಗೆ ಸಿದ್ಧಾಂತಿಗಳು ಮಾಡುವುದು ಸರಿಯೋ? ಎಂಬ ಸಂಶಯವು ಪರಿಹಾರವಾಗಬೇಕು. ಸಿದ್ಧಾಂತದಲ್ಲಿ ಲಕ್ಷಣಾವೃತ್ತಿಯನ್ನು ಆಶ್ರಯಿಸುವುದಕ್ಕಿಂತ ಶ್ರೇಷ್ಠವಾದ ಗೌಣೀವೃತ್ತಿಯನ್ನು ಆಶ್ರಯಿಸಲಾಗಿದೆ. ಮತ್ತು ಪದದ್ವಯಗಳಿಗೆ ಲಕ್ಷಣಾವನ್ನು ಒಪ್ಪದೇ ಒಂದು ಪದಕ್ಕೆ ಮಾತ್ರ ಗೌಣಾರ್ಥವನ್ನು ಒಪ್ಪಲಾಗಿದೆ.

**सकलजगद्गुणसदृशगुणात्मकत्वेनेति ।। ''सर्वभूतगुणैर्युक्तं देवं त्वं ज्ञातुमर्हसि'' इति भारते ''गामाविश्य च भूतानि धारयाम्यहमोजसा'' इत्यादि गीतासु च पृथिव्यादीनां ये धारकत्वादयो गुणास्तत्सदृशगुणात्मकत्वस्य ब्रह्मण्युक्तेरिति भावः।।**

'ತತ್ಗುಣಸಾರತ್ವಾತ್ತು' ಎಂಬ ಸೂತ್ರಭಾಷ್ಯದ ಟೀಕೆಯಲ್ಲಿ 'ಸಕಲಜಗದ್ಗುಣಸದೃಶಗುಣಾತ್ಮಕತ್ವೇನ' ಎಂದು ಹೇಳಿರುತ್ತಾರೆ. ಬ್ರಹ್ಮನು ಸಕಲ ಜಗತ್ತಿನ ಗುಣಸದೃಶ ಗುಣಗಳುಳ್ಳವನಾಗಿದ್ದಾನೆ. ಆದ್ದರಿಂದ ಪರಮಾತ್ಮನೇ ಜಗತ್ತು ಎಂದು 'ಸರ್ವಂ ಖಲ್ವಿದಂ ಬ್ರಹ್ಮ' ಎಂದು ಹೇಳುತ್ತಿದೆ ಎಂಬುದು ಇದರ ಅರ್ಥ. ಈ ಟೀಕೆಯ ಅರ್ಥವು ಅತ್ಯಂತ ಸಾಧುವಾಗಿದೆ. ಏಕೆಂದರೆ 'ಸರ್ವಭೂತಗುಣೈರ್ಯುಕ್ತಂ ದೇವಂ ತ್ವಂ ಜ್ಞಾತುಮರ್ಹಸಿ' ಸಕಲ ಭೂತಗಳ ಗುಣಗಳಿಂದ ನೀನು ಯುಕ್ತನಾಗಿರುವಿ ಎಂದು ಮಹಾಭಾರತದಲ್ಲಿ ಹೇಳಲಾಗಿದೆ. ಹಾಗೂ ಭಗವದ್ಗೀತೆಯಲ್ಲಿ 'ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ' ಇತ್ಯಾದಿ ಮಾತುಗಳಿಂದ ಪೃಥಿವ್ಯಾದಿಗಳಲ್ಲಿ ಯಾವ ಧಾರಕತ್ವಾದಿ ಗುಣಗಳಿವೆಯೋ ತತ್ಸದೃಶಗುಣಾತ್ಮಕತ್ವವನ್ನು ಬ್ರಹ್ಮನಲ್ಲಿ ಹೇಳಲಾಗಿದೆ. ಆದ್ದರಿಂದ ಟೀಕೆಯ ಮಾತು ಪ್ರಮಾಣಪ್ರಮಿತವಾಯಿತು.

ಪೃಥಗುಪದೇಶಾಧಿಕರಣ (೨-೩-೧೪)

**लक्षणावृत्तौ हीत्यादि ।। परमते पदद्वये लक्षणा । मम मते तु तत्पदमात्रे गौणी । न चाल्पबाधेनैवोपपत्तौ बहुबाधोऽन्याय्य इति भावः ।**

'ಲಕ್ಷಣಾವೃತ್ತೌ ಹಿ' ಇತ್ಯಾದಿಯಾಗಿ ಟೀಕೆಯಲ್ಲಿ ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ – ತತ್ತ್ವಮಸಿ ಎಂಬಲ್ಲಿ ಅದ್ವೈತಿಗಳು ತತ್ ಮತ್ತು ತ್ವಂ ಎಂಬ ಎರಡೂ ಪದಗಳಿಗೂ ಲಕ್ಷಣಾವೃತ್ತಿಯನ್ನು ಅಂಗೀಕರಿಸುತ್ತಾರೆ. ನಮ್ಮ ಮತದಲ್ಲಿ ತತ್ ಪದಕ್ಕೆ ಮಾತ್ರ ಗೌಣೀವೃತ್ತಿಯನ್ನು ಆಶ್ರಯಿಸಲಾಗಿದೆ. ಅಲ್ಪಭಾಗದಿಂದಲೇ ಕೂಡಿಸಲು ಬರುವಾಗ ಬಹುಭಾಗವು ಅನ್ಯಾಯವಾದ್ದರಿಂದ ಅನೇಕ ಪದಗಳಿಗೆ ಲಕ್ಷಣಾ ಮಾಡುವುದು ತಪ್ಪು ಎಂಬುದು ಇದರ ಅಭಿಪ್ರಾಯ.

**टीकायां सामानाधिकरण्यस्य गौणत्वोक्तेस्तु तत्पदं सर्वकर्तृत्वादिविशिष्ट-ब्रह्मपरमेव । तत्त्वंपदयोः सामानाधिकरण्यं तु नाभेदपरम् । किन्तु सादृश्यपरमिति नाभिप्रायः । सिंहस्याध्ययनमित्यादौ सामानाधिकरण्याभावेऽपि सिंहप्रातिपदिकस्यैव सदृशे गौणत्वात् ।**

ತತ್ತ್ವಮಸಿ ಎಂಬಲ್ಲಿ ಯಾವುದಕ್ಕೆ ಗೌಣಾರ್ಥವನ್ನು ಮಾಡಬೇಕು ಎಂಬುದರ ಬಗ್ಗೆ ವಿಚಾರ ಹೀಗಿದೆ. ತತ್ ಪದವು ಸರ್ವಜ್ಞತ್ವಾದಿವಿಶಿಷ್ಟನಾದ ಬ್ರಹ್ಮನನ್ನು ಹೇಳುತ್ತದೆ. ತ್ವಂ ಪದವು ಅಲ್ಪಕರ್ತೃತ್ವವಿಶಿಷ್ಟನಾದ ಜೀವನನ್ನು ಹೇಳುತ್ತದೆ. ವಿಶೇಷ್ಯವಿಭಕ್ತಿಗೆ ಸಮಭಿವ್ಯಾಹೃತಯಾದ ವಿಶೇಷಣವಿಭಕ್ತಿಯು ಅಭೇದ ಪರವಲ್ಲ. ಕೇವಲ ಗೌಣಾರ್ಥವುಳ್ಳದ್ದಾಗಿದೆ. ಹೀಗೆ ಟೀಕೆಗೆ ಅರ್ಥವನ್ನು ಹೇಳಬಾರದು. ಏಕೆಂದರೆ ಎಲ್ಲೆಡೆಯೂ ಗೌಣೀವೃತ್ತಿ ಎಂದು ಹೇಳಿದ ಮಾತ್ರಕ್ಕೆ ಸಾಮಾನಾಧಿಕರಣಕ್ಕೆ ಮಾತ್ರ ಗೌಣೀವೃತ್ತಿ ಎಂದು ಹೇಳಬೇಕಾಗುತ್ತದೆ. ಆದರೆ 'ಸಿಂಹಶ್ಚೈತ್ರಃ' ಎಂಬಲ್ಲಿ ಪ್ರತ್ಯಯಕ್ಕೆ ಮಾತ್ರ ಗೌಣೀವೃತ್ತಿಯನ್ನು ಹೇಳಿದರೆ ಸಾಕಾಗುತ್ತದೆ. 'ಸಿಂಹಸ್ಯಾಧ್ಯಯನಂ' ಎಂಬಲ್ಲಿ ಸಾಮಾನಾಧಿಕರಣ್ಯವೇ ಇಲ್ಲ. ಇಲ್ಲಿ ಪ್ರತ್ಯಯಕ್ಕೆ ಗೌಣೀವೃತ್ತಿಯನ್ನು ಮಾಡಲು ಸಾಧ್ಯವೂ ಇಲ್ಲ. ಸಿಂಹ ಎಂಬ ಪ್ರಾತಿಪದಿಕಕ್ಕೆ ಮಾತ್ರ ಬೇರೆ ಗತಿಯಿಲ್ಲದೇ ಗೌಣೀವೃತ್ತಿಯನ್ನು ಆಶ್ರಯಿಸಬೇಕು. ಹೀಗೆ ಒಂದೊಂದು ಕಡೆ ಒಂದೊಂದು ರೀತಿಯಾಗಿ ಗೌಣೀವೃತ್ತಿಯನ್ನು ಆಶ್ರಯಿಸುವುದಕ್ಕಿಂತ ಎಲ್ಲೆಡೆಯೂ ಪ್ರಾತಿಪದಿಕಕ್ಕೆ ಗೌಣೀವೃತ್ತಿಯನ್ನು ಆಶ್ರಯಿಸುವುದೇ ಲಘುವಾಗಿದೆ. ಆದ್ದರಿಂದ 'ಸಿಂಹಸ್ಯಾಧ್ಯಯನಂ' ಎಂಬಲ್ಲಿ ಪ್ರಾತಿಪದಿಕಕ್ಕೆ ಗೌಣೀವೃತ್ತಿಯನ್ನು ಆಶ್ರಯಿಸಬೇಕಾದ್ದರಿಂದ 'ಸಿಂಹಃ ಚೈತ್ರಃ' ಎಂಬಲ್ಲೂ ಕೂಡ ಪ್ರಾತಿಪದಿಕಕ್ಕೆ ಗೌಣೀವೃತ್ತಿಯನ್ನು ಆಶ್ರಯಿಸುವುದು ಸೂಕ್ತವಾಗಿದೆ.

**सन्न्यायरत्नावल्यां ''तत्त्वमसि'' इत्यत्र जगत्स्रष्टृपरामर्शिनस्तच्छब्दस्यैव त्वंशब्दवाच्ये जीवे गौणवृत्त्याश्रयणेन ''तत्त्वंपदयोरुभयोरपि लक्षणाश्रयणस्य पराहतात्वत्'' इत्युक्तत्वाच ।**

ಪರಿಪೂರ್ಣಚಂದ್ರಿಕಾ

ಸನ್ನ್ಯಾಯರತ್ನಾವಳಿಯಲ್ಲಿ 'ತತ್ತ್ವಮಸಿ' ಎಂಬ ಶ್ರುತಿಗೆ ವ್ಯಾಖ್ಯಾನ ಮಾಡುವಾಗ ಜಗತ್ ಸ್ರಷ್ಟೃವನ್ನು ಪರಾಮರ್ಶೆ ಮಾಡುವ ತತ್ ಶಬ್ದಕ್ಕೆ ತ್ವಂಶಬ್ದವಾಚ್ಯನಾದ ಜೀವನಲ್ಲಿ ಗೌಣವೃತ್ತಿಯನ್ನು ಆಶ್ರಯಿಸಲಾಗಿದೆ. ಮತ್ತು 'ತತ್ತ್ವಂಪದಯೋರುಭಯೋರಪಿ ಲಕ್ಷಣಾಶ್ರಯಣಸ್ಯ ಪರಾಹತತ್ವಾತ್' ಎಂದು ಹೇಳಿದ್ದರಿಂದ ತತ್ ಪದ ಮತ್ತು ತ್ವಂ ಪದ ಎರಡಕ್ಕೂ ಕೂಡ ಲಕ್ಷಣಾವನ್ನು ಪ್ರತಿಪಾದನೆ ಮಾಡುವ ಅದ್ವೈತ ಸಿದ್ಧಾಂತವು ನಿರಾಕೃತವಾಯಿತು ಎಂದು ಹೇಳಿದ್ದಾರೆ.

**अपि तु तत्पदेनैव गौण्या वृत्त्या सादृश्ये लब्धे परस्परान्वितानेकप्रकृतिनिष्ठैक-विभक्तिरूपसामानाधिकरण्यार्थस्यमुख्यस्य तत्पदशक्यतावच्छेदकेन ब्रह्मत्वेन रूपेण ब्रह्माभेदस्य जीवेऽसत्त्वेऽप्य मुख्यस्य चेतनत्वादिरूपेणाभेदस्य सत्त्वात्सामानाधि-करण्येनामुख्याभेदलाभ इत्यभिप्रायः ।**

ಮತ್ತು ತತ್‌ಪದದಿಂದಲೇ ಗೌಣೀವೃತ್ತಿಯಿಂದ ಸಾದೃಶ್ಯ ಎಂಬ ಅರ್ಥವನ್ನು ಸ್ವೀಕರಿಸಲು ಬರುತ್ತದೆ. ಪರಸ್ಪರ ಅನ್ವಿತವಾದ ಅನೇಕ ಪ್ರಕೃತಿಯಲ್ಲಿ ನಿಷ್ಠವಾದ ಏಕವಿಭಕ್ತಿ ಎಂಬ ಸಾಮಾನಾಧಿ-ಕರಣ್ಯವು ಮುಖ್ಯಾರ್ಥ ಎಂದು ಕರೆಸಿಕೊಳ್ಳುತ್ತದೆ. ಇದು ತತ್ಪದಶಕ್ಯತಾವಚ್ಛೇದಕವಾದ ಬ್ರಹ್ಮತ್ವರೂಪವಾಗಿದೆ. ಈ ರೂಪದಿಂದ ಬ್ರಹ್ಮಾಭೇದವು ಜೀವನಲ್ಲಿ ಸರ್ವಥಾ ಇರುವುದಿಲ್ಲ. ಆದರೂ ಕೂಡ ಅಮುಖ್ಯವಾದ ಚೇತನತ್ವಾದಿರೂಪದಿಂದ ಅಭೇದವು ಇರುತ್ತದೆ. ಆದ್ದರಿಂದ ಸಾಮಾನಾಧಿ-ಕರಣ್ಯವನ್ನು ಒಪ್ಪಿ ಅಮುಖ್ಯವಾದ ಅಭೇದವನ್ನು ಉಪಪಾದನೆ ಮಾಡಬಹುದು ಎಂಬುದು ಒಟ್ಟು ಅಭಿಪ್ರಾಯ.

ವಿವರಣೆ – ಕೆಲವೆಡೆ ಪ್ರಾತಿಪದಿಕಕ್ಕೆ ಗೌಣೀವೃತ್ತಿಯನ್ನು ಹೇಳುವುದು ಕೆಲವೆಡೆ ಪ್ರತ್ಯಯಕ್ಕೆ ಗೌಣೀವೃತ್ತಿಯನ್ನು ಹೇಳುವುದು ಹೀಗೆ ದ್ವೈವಿಧ್ಯವನ್ನು ಆಶ್ರಯಿಸುವುದಕ್ಕಿಂತ ಎಲ್ಲೆಡೆಯಲ್ಲಿಯೂ ಪ್ರಾತಿಪದಿಕಕ್ಕೆ ಗೌಣೀವೃತ್ತಿಯನ್ನು ಆಶ್ರಯಿಸುವುದು ಸೂಕ್ತವಾಗಿದೆ. ಇದಕ್ಕೆ ಸನ್ನ್ಯಾಯರತ್ನಾವಳಿಯ ಸಹಮತವೂ ಕೂಡ ಇದೆ. ಹಾಗಾದರೆ 'ಸಾಮಾನಾಧಿಕರಣ್ಯಂ ಗೌಣಂ' ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಕ್ಕೆ ಏನು ಅರ್ಥ ಎಂಬುದನ್ನು 'ಅಪಿ ತು' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡುತ್ತಿದ್ದಾರೆ. ಸಾಮಾನಾಧಿಕರಣ್ಯದಲ್ಲಿಯೂ ಮುಖ್ಯ ಹಾಗೂ ಅಮುಖ್ಯವೆಂಬ ಪ್ರಭೇದವಿದೆ. ಸಾಮಾನಾಧಿಕರಣ್ಯ ಎಂದರೆ ಪರಸ್ಪರಾನ್ವಿತ ಅನೇಕಪ್ರಕೃತಿನಿಷ್ಠ ಏಕವಿಭಕ್ತಿ ಎಂದರ್ಥ. ಪ್ರಕೃತಿ ಪದಕ್ಕೆ ಪ್ರಾತಿಪದಿಕ ಎಂದರ್ಥ. ಈ ಪ್ರಾತಿಪದಿಕಗಳು ಪರಸ್ಪರ ಸಮಭಿವ್ಯಾಹೃತವಾಗಿ ಅನ್ವಿತವಾಗಿರಬೇಕು. ಈ ಪ್ರಾತಿಪದಿಕಗಳಲ್ಲಿ ಬೇರೆಬೇರೆ ವಿಭಕ್ತಿಗಳು ಇರಬಾರದು. ಉದಾ- ದೇವದತ್ತಸ್ಯ ಘಟಃ ಎಂದು ಹೇಳಿದಾಗ ದೇವದತ್ತ ಎಂಬ ಪ್ರಾತಿಪದಿಕ ಹಾಗೂ ಘಟ ಎಂಬ ಪ್ರಾತಿಪದಿಕಗಳು ಪರಸ್ಪರವಾಗಿ ಅನ್ವಿತವಾಗಿವೆ. ಆದರೆ ಇವುಗಳಲ್ಲಿ ಏಕವಿಭಕ್ತಿ ಎಂಬುದು ಇರುವುದಿಲ್ಲ. ಆದ್ದರಿಂದ ಅನೇಕಪ್ರಕೃತಿನಿಷ್ಠ ಏಕವಿಭಕ್ತಿಯು ಇಲ್ಲಿ ಇರುವುದಿಲ್ಲ.

ಈ ಅನೇಕ ಪ್ರಕೃತಿಗಳಲ್ಲೂ ಕೂಡ ವಿಶೇಷಣ ಪ್ರಕೃತಿಯು ಬಹಳ ಮುಖ್ಯವಾಗಿದೆ. ವಿಶೇಷಣ ವಿಭಕ್ತಿಗೆ ಎಲ್ಲೆಡೆಯೂ ಅಭೇದವೇ ಅರ್ಥವಿರುತ್ತದೆ. 'ನೀಲಂ ಘಟಂ ಆನಯ' ಎಂಬಲ್ಲಿ 'ಘಟಂ' ಎಂಬಲ್ಲಿರುವ

ವಿಶೇಷ್ಯವಾಚಕವಿಭಕ್ತಿಯಲ್ಲಿ ಇರುವ 'ಅಮ್' ಪದಕ್ಕೆ ಕರ್ಮತ್ವ ಎಂದರ್ಥ. ಆದರೆ ನೀಲಂ ಎಂಬಲ್ಲಿರುವ 'ಅಮ್' ಎಂಬ ಪ್ರತ್ಯಯಕ್ಕೆ ಕೇವಲ ಅಭೇದ ಎಂದಷ್ಟೇ ಅರ್ಥ.

ಪ್ರಕೃತ ಪರಸ್ಪರಾನ್ವಿತಅನೇಕಪ್ರಕೃತಿನಿಷ್ಠಏಕವಿಭಕ್ತಿರೂಪವಾದ ಸಾಮಾನಾಧಿಕರಣ್ಯಕ್ಕೆ ತತ್ ಪದಶಕ್ಯತಾವಚ್ಛೇದಕೇನ ರೂಪೇಣ ಅಭೇದವು ಮುಖ್ಯಾರ್ಥವಾಗಿದೆ. ಅಶಕ್ಯವಾದ ರೂಪದಿಂದ ಅರ್ಥವನ್ನು ಹೇಳಿದರೆ ಅದು ಅಮುಖ್ಯಾರ್ಥವಾಗುತ್ತದೆ. ಉದಾ - 'ಸಿಂಹಃ ಮೃಗಃ' ಎಂಬಲ್ಲಿ ಸಿಂಹ ಪದಕ್ಕೆ ಶಕ್ಯತಾವಚ್ಛೇದಕ ಎಂದರೆ ಸಿಂಹತ್ವ ಆಗಿದೆ. ಸಿಂಹತ್ವೇನ ರೂಪೇಣ ಅಭೇದವೇ ಸಾಮಾನಾಧಿಕರಣ್ಯದ ಮುಖ್ಯಾರ್ಥವಾಗುತ್ತದೆ. ಸಾಮಾನ್ಯವಾಗಿ ಸಾಮಾನಾಧಿಕರಣ್ಯವು ಅಭೇದವನ್ನೇ ಹೇಳುತ್ತದೆ. ಆದರೆ 'ಸಿಂಹಃ ದೇವದತ್ತಃ' ಎಂದು ಹೇಳಿದಾಗ ಸಿಂಹದಲ್ಲಿ ಚೈತ್ರಾಭೇದವು ಇರುವುದಿಲ್ಲ. ಸಿಂಹತ್ವಕ್ಕಿಂತಲೂ ಬೇರೆಯಾದ ಶೂರತ್ವ ಮೊದಲಾದವುಗಳು ಶಕ್ಯತಾವಚ್ಛೇದಕವಾಗಿವೆ. ದೇವದತ್ತ ಸಿಂಹನೇ ಆಗಿದ್ದಾನೆ ಎಂದರ್ಥವಲ್ಲ. ಸಿಂಹದಲ್ಲಿರುವ ಶೂರತ್ವಾದಿ ಗುಣಗಳುಳ್ಳವನಾಗಿದ್ದಾನೆ ಎಂದರ್ಥ.

ಹೀಗೆ ಸಾಮಾನಾಧಿಕರಣ್ಯವು ಎಲ್ಲೆಡೆಯೂ ಅಭೇದವನ್ನೇ ಹೇಳುವುದಾದರೂ ಕೂಡ ಈ ಅಭೇದವು ಮುಖ್ಯ ಮತ್ತು ಅಮುಖ್ಯವೆಂದು ಎರಡು ರೂಪದಲ್ಲಿರುತ್ತದೆ. ಶಕ್ಯತಾವಚ್ಛೇದಕೇನ ರೂಪೇಣ ಅಭೇದವು ಮುಖ್ಯಾಭೇದವಾಗುತ್ತದೆ. ತದನ್ಯೇನರೂಪೇಣ ಅಭೇದವು ಸಾದೃಶ್ಯದಲ್ಲಿ ಅಂತಿಮವಾಗಿ ಪರ್ಯವಸಾನವಾಗುವುದರಿಂದ ಅಮುಖ್ಯಾಭೇದ ಎಂದು ಕರೆಸಿಕೊಳ್ಳುತ್ತದೆ.

ಪ್ರಕೃತ ತತ್ತ್ವಮಸಿ ಎಂಬಲ್ಲಿ ತತ್‌ಪದಕ್ಕೆ ನಾವು ಗೌಣೀವೃತ್ತಿಯನ್ನು ಆಶ್ರಯಿಸಿರುವುದರಿಂದ ತತ್‌ಪದವೇ ತತ್‌ಸಾದೃಶ್ಯ ಎಂಬರ್ಥವನ್ನು ಹೇಳುತ್ತದೆ. ಅಲ್ಲಿರುವ ಪ್ರತ್ಯಯವು ಮುಖ್ಯಾಭೇದವನ್ನು ಹೇಳುವುದೇ ಇಲ್ಲ. ಅಮುಖ್ಯವಾದ ಅಭೇದವನ್ನೇ ಹೇಳುತ್ತದೆ. ಆದ್ದರಿಂದ ಟೀಕೆಯಲ್ಲಿ ಸಾಮಾನಾಧಿಕರಣ್ಯವನ್ನು ಗೌಣವೆಂದು ಏಕೆ ಹೇಳಿದರು ಎಂದರೆ ತತ್‌ಪದವನ್ನು ಮುಖ್ಯವೃತ್ತಿಯನ್ನಾಗಿ ಇಟ್ಟುಕೊಂಡು ಸಾಮಾನಾಧಿಕರಣ್ಯವನ್ನು ಮಾತ್ರ ಗೌಣವನ್ನಾಗಿ ಮಾಡಬೇಕೆಂದು ನಿಯಮವಿಲ್ಲ. ತತ್ ಪದವನ್ನುಗೌಣವನ್ನಾಗಿಮಾಡಿದರೆಸ್ವತಃತಾನೇಗೌಣಾಭೇದದಲ್ಲಿಯೇಅರ್ಥಾತ್ ಪರ್ಯವಸಾನವಾಗುತ್ತದೆ ಎಂಬ ಅಭಿಪ್ರಾಯದಿಂದ ಹಾಗೆ ಹೇಳಿದ್ದಾರೆ.

**अस्ति हि सिंहश्चैत्र इत्यत्रापि चैत्रे सिंहत्वेन रूपेण सिंहाभेदाभावेऽपि शूरत्वेन तदभेदः ।**

ಸಿಂಹಶ್ಚೈತ್ರಃ ಎಂಬಲ್ಲೂ ಕೂಡ ಚೈತ್ರನಲ್ಲಿ ಸಿಂಹತ್ವೇನ ರೂಪೇಣ ಸಿಂಹಾಭೇದವು ಇಲ್ಲದಿದ್ದರೂ ಕೂಡ ಶೂರತ್ವೇನರೂಪೇಣ ಅಭೇದವು ಇರುತ್ತದೆ. ಆದ್ದರಿಂದ ಸಾಮಾನಾಧಿಕರಣ್ಯವು ಅಮುಖ್ಯಾಭೇದಾಭಿಪ್ರಾಯದಲ್ಲಿಯೇ ವಿವಕ್ಷಿತವಾಗಿದೆ ಎಂದು ತಿಳಿಯಬೇಕು.

**एतदेवाभिप्रेत्यानुव्याख्याने**
**अतोऽभेदवदेवैताः श्रुतयः प्रवदन्ति हि ।**
**पौराणानि च वाक्यानि सादृश्याभेदसंश्रयात् ।। इति ।**

**चेतनत्वादिसादृश्यं यद्यभेद इतीष्यते ।**
**अङ्गीकृतं तदस्माभिर्न स्वरूपैकता क्वचित् ।। इति चोक्तम् ।**

**यद्यपि तच्छब्दस्य तत्सदृशोऽर्थे सति तस्य गौणार्थतावच्छेदकेन सादृश्येनैव रूपेण त्वंपदार्थजीवाभेदो मुख्य एव । तथापि शक्यतावच्छेदकेन ब्रह्मत्वेन रूपेण मुख्यः अभेदो न मुख्य इति द्रष्टव्यम् ।।**

ಈ ಅಭಿಪ್ರಾಯದಿಂದಲೇ ಅನುವ್ಯಾಖ್ಯಾನದಲ್ಲಿ ಹೀಗೆ ಹೇಳಿದ್ದಾರೆ – 'ಅತೋಽಭೇದವದೇವೈತಾಃ ಶ್ರುತಯ ಪ್ರವದಂತಿ ಹಿ ಪೌರಾಣಾನಿ ಚ ವಾಕ್ಯಾನಿ ಸಾದೃಶ್ಯಾಭೇದಸಂಶ್ರಯಾತ್' ಆದ್ದರಿಂದ ತತ್ತ್ವಮಸಿ ಮೊದಲಾದ ಶ್ರುತಿಗಳು ಹಾಗೂ ಅಭೇದವನ್ನು ಹೇಳುವ ಅನೇಕ ಪುರಾಣವಾಕ್ಯಗಳು ಸಾದೃಶ್ಯಾಭೇದದ ಅಭಿಪ್ರಾಯವುಳ್ಳವುಗಳಾಗಿವೆ.

'ಚೇತನತ್ವಾದಿಸಾದೃಶ್ಯಂ ಯದ್ಯಭೇದ ಇತೀಷ್ಯತೇ । ಅಂಗೀಕೃತಂ ತದಸ್ಮಾಭಿರ್ನಸ್ವರೂಪೈಕತಾ ಕ್ವಚಿತ್' ಒಂದು ವೇಳೆ ಸಾದೃಶ್ಯಾಭೇದವನ್ನು ವಿವಕ್ಷಿಸಿದರೆ ಅದು ನಮಗೆ ಇಷ್ಟವೇ ಆಗಿದೆ. ಆದರೆ ಸ್ವರೂಪೈಕ್ಯವು ಮಾತ್ರ ಎಲ್ಲಿಯೂ ಸರ್ವಥಾ ಇರುವುದಿಲ್ಲ ಎಂದೂ ಕೂಡ ಹೇಳಿದ್ದಾರೆ.

ವಾಸ್ತವಿಕವಾಗಿ ತತ್ ಎಂಬ ಪದಕ್ಕೆ ಸಾದೃಶ್ಯ ಎಂಬ ಅರ್ಥವನ್ನು ವಿವಕ್ಷಿಸಿದಾಗ ಶಕ್ಯಾರ್ಥವನ್ನು ಬಿಟ್ಟು ಗೌಣಾರ್ಥವನ್ನು ಸ್ವೀಕರಿಸಿದಂತಾಯಿತು. ಆಗ ಗೌಣಾರ್ಥತಾವಚ್ಛೇದಕವಾದುದು ಸಾದೃಶ್ಯವಾಗುತ್ತದೆ. ಈ ಸಾದೃಶ್ಯವು ಜೀವನಲ್ಲಿರುವುದರಿಂದ ಸಾಮಾನಾಧಿಕರಣ್ಯವು ಮುಖ್ಯವನ್ನೇ ಹೇಳಿದಂತಾಯಿತು. ಏಕೆಂದರೆ ಸಮಭಿವ್ಯಾಹೃತವಾದ ಪದಾಂತರಕ್ಕೆ ಅಭೇದವೆಂದರ್ಥ. ಸಮಭಿವ್ಯಾಹೃತಪದಾರ್ಥವು ಪ್ರಕೃತದಲ್ಲಿ ಸಾದೃಶ್ಯ ಎಂಬುದೇ ಆಗಿರುವುದರಿಂದ ತತ್ಸದೃಶನಿಗೂ ಜೀವನಿಗೂ ಅಭೇದವು ಮುಖ್ಯಾರ್ಥವೇ ಆಗುತ್ತದೆ. ಆದ್ದರಿಂದ ಸಾಮಾನಾಧಿಕರಣ್ಯವು ಅಮುಖ್ಯವಾಗಲಿಲ್ಲ ಅಲ್ಲವೇ? ಎಂಬ ಪ್ರಶ್ನೆಗೆ ಹೀಗೆ ಉತ್ತರಿಸಬೇಕು. ಗೌಣಾರ್ಥರೂಪದಿಂದ ಮುಖ್ಯಾರ್ಥವು ಬಂದರೂ ಕೂಡ ಶಕ್ಯತಾವಚ್ಛೇದಕವೆನಿಸಿದ ಬ್ರಹ್ಮತ್ವರೂಪದಿಂದ ಅಭೇದವು ಬರುವುದಿಲ್ಲ. ಆದ್ದರಿಂದ ಮುಖ್ಯಾರ್ಥವನ್ನು ಸ್ವೀಕರಿಸಿದಂತಾಗಲಿಲ್ಲ ಎಂದು.

**नहि लिङ्गानीति ।। यद्यपि लिङ्गानि मानान्तराविरोधे मुख्यार्थे तात्पर्यबोधकान्येव । तथापि प्रकृते मानान्तरविरोधात् मुख्यार्थे तात्पर्यं परेणैव त्यक्तम् । अमुख्यार्थमध्ये गौणे न तात्पर्यम् । किन्तु लाक्षणिक एवेत्यत्र तु लिङ्गानि न शक्तानीति भावः ।**

ನಹಿ ಲಿಂಗಾನಿ ಇತ್ಯಾದಿ ಟೀಕಾವಾಕ್ಯಕ್ಕೆ ಹೀಗೆ ಅಭಿಪ್ರಾಯ - ವಾಸ್ತವಿಕವಾಗಿ ಲಿಂಗಗಳು ಯಾವುದೇ ಪ್ರಮಾಣದ ವಿರೋಧವು ಇರಬಾರದು. ಆಗ ಮಾತ್ರ ಮುಖ್ಯಾರ್ಥದಲ್ಲಿಯೇ ತಾತ್ಪರ್ಯವನ್ನು ತಿಳಿಸುತ್ತವೆ. ಉದಾ – ತತ್ತ್ವಮಸಿ ಎಂಬಲ್ಲಿ ಸರ್ವಜ್ಞತ್ವವಿಶಿಷ್ಟನಿಗೂ ಅಲ್ಪಜ್ಞತ್ವವಿಶಿಷ್ಟನಿಗೂ ಐಕ್ಯವನ್ನು ಹೇಳಿದರೆ ಮಾನಾಂತರ ವಿರೋಧವು ಬರುತ್ತದೆ. ಆದ್ದರಿಂದ

ಮುಖ್ಯಾರ್ಥದಲ್ಲಿ ತಾತ್ಪರ್ಯವಿಲ್ಲವೆಂದು ನಾವಷ್ಟೇ ಹೇಳುತ್ತಿರುವುದಿಲ್ಲ. ಅದ್ವೈತಿಯೂ ಕೂಡ ಹೇಳಿರುತ್ತಾನೆ. ಈ ಅಮುಖ್ಯಾರ್ಥಮಧ್ಯದಲ್ಲಿ ಗೌಣಾರ್ಥದಲ್ಲಿ ತಾತ್ಪರ್ಯವಿಲ್ಲ ಹೊರತಾಗಿ ಲಾಕ್ಷಣಿಕಾರ್ಥದಲ್ಲಿಯೇ ತಾತ್ಪರ್ಯವುಳ್ಳದ್ದಾಗಿದೆ ಎಂಬ ವಿಷಯದಲ್ಲಿ ಈ ಉಪಕ್ರಮಾದಿಗಳು ಸಮರ್ಥವಾಗುವುದಿಲ್ಲ ಎಂದು.

**अत्राभेदश्रुतेरर्थान्तराणि उपजीव्यप्रमाणविरोधः परकीयार्थे तात्पर्यलिङ्गविघटनं स्वमते तत्समर्थनं भेदे बहुप्रमाणानि च भाष्यकारादिभिरन्यत्रोक्तानि । तत्सङ्ग्रहश्च न्यायामृते जीवेश्वरभेदप्रकरणेऽस्माभिः कृतो द्रष्टव्यः ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् पृथगुपदेशाधिकरणं सम्पूर्णम् ।।१४।।**

ಈ ಸಂದರ್ಭದಲ್ಲಿ ಅಭೇದಶ್ರುತಿಗೆ ಬೇರೆಬೇರೆ ಅರ್ಥವನ್ನೂ,ಉಪಜೀವ್ಯಪ್ರಮಾಣ-ವಿರೋಧವನ್ನೂ, ಅದ್ವೈತಿಗಳು ಹೇಳುವ ಅರ್ಥದಲ್ಲಿ ತಾತ್ಪರ್ಯಲಿಂಗಗಳ ವಿರೋಧವನ್ನೂ, ಸ್ವಮತದಲ್ಲಿ ತಾತ್ಪರ್ಯಲಿಂಗಗಳ ಸಮರ್ಥನೆಯನ್ನೂ ಜೀವಬ್ರಹ್ಮಭೇದವಿಷಯದಲ್ಲಿ ಬಹುಪ್ರಮಾಣವನ್ನೂ ಭಾಷ್ಯಕಾರರು ಟೀಕಾರಾಯರೆಲ್ಲರೂ ಬೇರೆ ಕಡೆ ಹೇಳಿದ್ದಾರೆ. ಅದರ ಸಂಗ್ರಹವನ್ನೇ ನಾವು ನ್ಯಾಯಾಮೃತದಲ್ಲಿ ಜೀವೇಶ್ವರ ಭೇದ ಪ್ರಕರಣದಲ್ಲಿ ಮಾಡಿರುತ್ತೇವೆ.

(ಗ್ರಂಥಕಾರರು ಎಲ್ಲವನ್ನೂ ತಾವೇ ವ್ಯಾಖ್ಯಾನ ಮಾಡಿದ್ದೇವೆಂದು ಹೇಳಿಕೊಳ್ಳದೇ ಭಾಷ್ಯಕಾರರು ಮಾಡಿದ ಸಂಗ್ರಹವನ್ನಷ್ಟೇ ನಾನು ಮಾಡಿದ್ದೇನೆ ಎಂದು ಹೇಳಿದ್ದಾರೆ. ಇವರ ಈ ವಿನಯಗುಣವನ್ನು ಗಮನಿಸಬೇಕು).

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಪೃಥಗುಪದೇಶಾಧಿಕರಣವು ಸಂಪೂರ್ಣವಾಯಿತು

## ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः —**

**पृथगुपदेशात् ।। अभेदादिति ।।** मिथ्याभेदेन तदायत्तत्वं तु न युक्तम् । सर्वज्ञस्येश्वरस्य भेदभ्रान्तेरयोगेन नियमनायोगादिति भावः । विरोधस्फोरणाय जीवान्यस्येत्युक्तम् । पूर्वोक्तं जगत्स्रष्टृत्वादिकमित्यर्थः ।

ಗ್ರಂಥದಲ್ಲಿ ಅಭೇದಾತ್ ಎಂದು ಹೇಳಿದ್ದಾರೆ. ಜೀವಬ್ರಹ್ಮನಿಗೆ ಅಭೇದವನ್ನು ಒಪ್ಪಿದರೆ ಜೀವಶಕ್ತಿಯು ಈಶ್ವರಾಧೀನವೇ ಆಗುವುದಿಲ್ಲ ಎಂದು ಆಕ್ಷೇಪ ಮಾಡಲಾಗದು. ಏಕೆಂದರೆ ಮಿಥ್ಯಾಭೇದವನ್ನು ಒಪ್ಪಿರುವುದರಿಂದ ಜೀವಶಕ್ತಿಯು ಈಶ್ವರನ ಅಧೀನವಾಗಬಹುದಲ್ಲವೇ?

ಇದು ಅಯುಕ್ತ. ಏಕೆಂದರೆ ಮಿಥ್ಯಾಭೇದವನ್ನು ಒಪ್ಪಿದರೆ ಇರುವ ಭೇದವು ಭ್ರಾಂತಿ ಎಂದು ಹೇಳಿದಂತಾಗುತ್ತದೆ. ಭ್ರಾಂತಿ ಯಾರಿಗೆ? ಜೀವನಿಗೋ ಈಶನಿಗೋ? ಜೀವನಿಗೆ ಎಂದರೆ ಅನ್ಯೋನ್ಯಾಶ್ರಯ. ಈಶ್ವರನಿಗೆ ಭೇದಭ್ರಾಂತಿಯೇ ಕೂಡುವುದಿಲ್ಲ ಆದ್ದರಿಂದ ಮಿಥ್ಯಾಭೇದದಿಂದ ತದಾಯತ್ತತ್ವವನ್ನು ಸಮರ್ಥಿಸಲು ಸಾಧ್ಯವಿಲ್ಲ.

ಗ್ರಂಥದಲ್ಲಿ ಜೀವಾನ್ಯಸ್ಯ ಎಂದು ಹೇಳಿದ್ದು ವಿರೋಧದ ಸ್ಫುರಣೆಗಾಗಿ ತಿಳಿಯಬೇಕು. ಪೂರ್ವೋಕ್ತಂ ಎಂದರೆ ಜಗತ್‌ಸ್ರಷ್ಟೃತ್ವಾದಿಗಳು ಎಂದರ್ಥ.

**प्रकाशः – ब्रह्मशब्देन निर्दिष्टजीवान्यस्यैव जन्मादिसूत्रे स्रष्टृत्वाद्युक्तेरिति भावः। ''षड्विधतात्पर्य'' इत्यादि टीकासूचितामाह – षड्विधेति ।।**

ಬ್ರಹ್ಮಶಬ್ದದಿಂದ ನಿರ್ದಿಷ್ಟವಾದ ಜೀವಾನ್ಯನೇ ಜನ್ಮಾದಿ ಸೂತ್ರ ಪ್ರತಿಪಾದ್ಯನಾಗಿದ್ದಾನೆ. ಅವನಲ್ಲಿಯೇ ಸ್ರಷ್ಟೃತ್ವಾದಿಗಳನ್ನು ಹೇಳಲಾಗಿದೆ ಎಂದಭಿಪ್ರಾಯ. 'ಷಡ್ವಿಧತಾತ್ಪರ್ಯ' ಇತ್ಯಾದಿ ಟೀಕಾಸೂಚಕವಾದ ಅಭಿಪ್ರಾಯವನ್ನು ಷಡ್ವಿಧ ಇತ್ಯಾದಿ ಗ್ರಂಥದಿಂದ ಹೇಳಿದ್ದಾರೆ.

**प्रकाशः – ''विरुद्धधर्माधिकरणत्वयुक्तियुक्तत्वेन'' इति ''उपजीव्यप्रमाणविरुद्धं च'' इति च टीकासूचितां कोटिमाह – उपजीव्येति ।। ''तत्त्वंपदवाच्यार्थ-परित्यागेन'' इत्यादि टीकासूचितामाह – पदद्वयेति ।।**

'ವಿರುದ್ಧಧರ್ಮಾಧಿಕರಣತ್ವಯುಕ್ತಿಯುಕ್ತತ್ವೇನ' ಎಂಬ ಹಾಗೂ 'ಉಪಜೀವ್ಯಪ್ರಮಾಣವಿರುದ್ಧಂ ಚ' ಎಂಬ ಟೀಕಾವಾಕ್ಯದಿಂದ ಸೂಚಿತವಾದ ಸಂಶಯಕೋಟಿಯನ್ನು ಉಪಜೀವ್ಯ ಇತ್ಯಾದಿಯಾಗಿ ಸಮರ್ಥನೆ ಮಾಡಿದ್ದಾರೆ.

'ತತ್ತ್ವಂಪದವಾಚ್ಯಾರ್ಥಪರಿತ್ಯಾಗೇನ' ಇತ್ಯಾದಿ ಟೀಕೆಯಿಂದ ಸೂಚಿತವಾದ ಸಂಶಯವನ್ನು ಪದದ್ವಯ ಇತ್ಯಾದಿಯಾಗಿ ಹೇಳಿದ್ದಾರೆ.

**प्रकाशः – तत्पदमात्रस्येति** ।। ''असिपदमात्रस्य गौणार्थत्ववर्णनम्'' इति टीका तु व्याकरिष्यत इति न तद्विरोध इति भावः । टीकाक्षरार्थमाह – **सकलेति** ।। सन्न्यायरत्नावल्यामिति ।। ''तथापि तु चिदानन्दपूर्वास्तत्सदृशा गुणा'' इत्यनुव्याख्यानव्याख्यावसर इत्यर्थः ।

ತತ್ಪದಮಾತ್ರಸ್ಯ ಎಂದರೆ ಹೀಗರ್ಥ – 'ಅಸಿಪದಮಾತ್ರಸ್ಯ ಗೌಣಾರ್ಥತ್ವವರ್ಣನಮ್' ಎಂಬ ಟೀಕಾವಾಕ್ಯವನ್ನು ಮುಂದೆ ವ್ಯಾಖ್ಯಾನ ಮಾಡುತ್ತೇವೆ. ಆದ್ದರಿಂದ ಇಲ್ಲಿ ಪ್ರತ್ಯಯಾರ್ಥಕ್ಕೆ ಗೌಣಾರ್ಥವನ್ನು ಹೇಳುವ ವಿರೋಧವು ಬರುವುದಿಲ್ಲ ಎಂದು ತಿಳಿಯಬೇಕು.

ಪೃಥಗುಪದೇಶಾಧಿಕರಣ (೨-೩-೧೪)

ಟೀಕೆಯ ಅಕ್ಷರಾರ್ಥವನ್ನು ಸಕಲ ಇತ್ಯಾದಿಯಾಗಿ ಹೇಳಿದ್ದಾರೆ. 'ಸನ್ನ್ಯಾಯರತ್ನಾವಲ್ಯಾಂ' ಎಂದರೆ 'ತಥಾಪಿ ತು ಚಿದಾನಂದಪೂರ್ವಾಸ್ತತ್ಸದೃಶಾ ಗುಣಾಃ' ಎಂಬ ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನ ಮಾಡುವ ಸನ್ನ್ಯಾಯರತ್ನಾವಲಿಯಲ್ಲಿ ಎಂದರ್ಥ.

**प्रकाशः – तर्हि को भावष्टीकाया इत्यत आह – अपि त्विति ।। एवमाशयेन टीकोक्तौ बीजमाह – एतदेवेति ।। श्रुतयः अहं ब्रह्मास्मीत्यादयः । ''अहं हरिस्सर्वमिदं जनार्दन'' इत्यादिपौराणवाक्यानीत्यर्थः । ''सामानाधिकरण्यममुख्यम्'' इत्येतदाक्षिप्य घटयति ।। यद्यपीति ।।**

ಹಾಗಾದರೆ ಟೀಕೆಯ ಅಭಿಪ್ರಾಯವೇನು? ಎಂಬ ಪ್ರಶ್ನೆಗೆ 'ಅಪಿ ತು' ಎಂಬುದಾಗಿ ಉತ್ತರಿಸಿದ್ದಾರೆ. ಈ ಅಭಿಪ್ರಾಯದಿಂದ ಟೀಕೆಯಲ್ಲಿ ಹೇಳಿದ್ದಕ್ಕೆ ಕಾರಣವನ್ನು 'ಏತದೇವ' ಎಂಬುದರಿಂದ ಸ್ಪಷ್ಟಪಡಿಸಿದ್ದಾರೆ.

'ಶ್ರುತಯಃ' ಎಂದರೆ 'ಅಹಂ ಬ್ರಹ್ಮಾಸ್ಮಿ' ಇತ್ಯಾದಿ ಶ್ರುತಿಗಳು. ಪುರಾಣವಾಕ್ಯಗಳು ಎಂದರ್ಥ. 'ಅಹಂ ಹರಿಸ್ಸರ್ವಮಿದಂ ಜನಾರ್ದನ' ಇತ್ಯಾದಿ ವಾಕ್ಯಗಳು ಎಂದರ್ಥ. 'ಸಾಮಾನಾಧಿಕರಣ್ಯಂ ಅಮುಖ್ಯಂ' ಎಂಬ ಟೀಕೆಯನ್ನು ಆಕ್ಷೇಪ ಮಾಡಿ ಸಮಾಧಾನವನ್ನು ಹೇಳಲು 'ಯದ್ಯಪಿ' ಇತ್ಯಾದಿ ವಾಕ್ಯಗಳು ಹೊರಟಿದೆ.

**प्रकाशः – तत्सदृशे तत्सदृश इत्यर्थे सतीत्यर्थः । तस्य तत्सदृशरूपार्थस्येत्यर्थः।। अन्यत्रोक्तानीति ।। अनुव्याख्यानतत्वनिर्णयबृहदारण्यकभाष्यादावित्यर्थः ।। न्यायामृत इति ।। द्वितीयपरिच्छेदे ।।**

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते**

**चन्द्रिकाप्रकाशे पृथगुपदेशाधिकरणं सम्पूर्णम् ।।१४।।**

'ತತ್ಸದೃಶೇ' ಎಂದರೆ ಸಾದೃಶ್ಯವು ಇರುವಾಗ ಎಂದರ್ಥ. 'ತಸ್ಯ' ಎಂದರೆ ತತ್ಸದೃಶರೂಪವಾದ ಎಂದರ್ಥ. 'ಅನ್ಯತ್ರ ಉಕ್ತಾನಿ' ಎಂದರೆ ಅನುವ್ಯಾಖ್ಯಾನ, ತತ್ತ್ವನಿರ್ಣಯ, ಬೃಹದಾರಣ್ಯಕದಲ್ಲಿ ಹೇಳಿದ್ದು ಎಂದರ್ಥ. 'ನ್ಯಾಯಾಮೃತ' ಎಂದರೆ ನ್ಯಾಯಾಮೃತದ ದ್ವಿತೀಯಪರಿಚ್ಛೇದದಲ್ಲಿ ಎಂದರ್ಥ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಪೃಥಗುಪದೇಶಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

ಪರಿಪೂರ್ಣಚಂದ್ರಿಕಾ

# ಯಾವದಧಿಕರಣ

(೨-೩-೧೫)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

***

॥ ಶ್ರೀಗುರುಭ್ಯೋ ನಮಃ ॥

# ಯಾವದಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – यावदात्मभावित्वाच्च न दोषस्तद्दर्शनात् ॥**

ಪರಮಾತ್ಮನು ಎಲ್ಲಿಯ ತನಕ ಇರುತ್ತಾನೋ, ಅಲ್ಲಿಯ ತನಕ ಜೀವನ ಸ್ವರೂಪಭೂತವಾದ ಉಪಾಧಿಯು ಇರುತ್ತದೆ. ಆದ್ದರಿಂದ 'ಸೋऽನಾದಿನಾ' ಎಂಬ ಅನಾದಿಯಾದ ಪುಣ್ಯಪಾಪ ಸಂಬಂಧವನ್ನು ಹೇಳುವ ಶ್ರುತಿಗೆ ಅಪ್ರಾಮಾಣ್ಯವು ಬರುವುದಿಲ್ಲ. ಏಕೆಂದರೆ ಜೀವನು ಪರಮಾತ್ಮನಂತೆ ನಿತ್ಯನಾದ್ದಾನೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका – यावदात्मभावित्वाच्च** जीवस्य यावत्परमात्मसत्त्वात् । नित्यत्वादिति यावत् । **न दोषः** 'सोऽनादिना' इति पुण्यपापसम्बन्धबोधक-श्रुत्यप्रामाण्यदोषो नास्ति । कुत एतत् ? **तद्दर्शनात्** तस्य नित्यत्वस्य 'नित्यो जीवः' इति श्रुतावुक्तत्वाच्च 'आत्मा नित्यः जीव' इति स्मृतिद्वयाच्चेत्यर्थः ॥१॥

ಯಾವದಾತ್ಮಭಾವಿತ್ವಾಚ್ಚ = ಎಲ್ಲಿಯ ತನಕ ಪರಮಾತ್ಮನು ಇರುತ್ತಾನೋ, ಅಲ್ಲಿಯ ತನಕ ಜೀವನು ಇರುತ್ತಾನೆಂದು ಹೇಳಿದ್ದರಿಂದ. ನ ದೋಷಃ = 'ಸೋऽನಾದಿನಾ ಪುಣ್ಯೇನ ಪಾಪೇನ ಚಾನುಬದ್ಧಃ । ಪರೇಣ ನಿರ್ಮುಕ್ತ ಅನಂತ್ಯಾಯ ಕಲ್ಪ್ಯತೇ' ಎಂಬ ಶ್ರುತಿಯು ಹೇಳುವ ಪುಣ್ಯ-ಪಾಪ ಸಂಬಂಧಬೋಧಕವಾದ ಶ್ರುತಿಗೆ ಅಪ್ರಾಮಾಣ್ಯದೋಷ ಬರುವುದಿಲ್ಲ. ಏಕೆಂದರೆ ತದ್ದರ್ಶನಾತ್ = 'ನಿತ್ಯೋ ಜೀವೋऽನಿತ್ಯಾಸ್ತಸ್ಯ ಧಾತವಃ । ಅತ ಉತ್ಪದ್ಯತೇ ಚ ಮ್ರಿಯತೇ ಚ ವಿಮುಚ್ಯತೇ ಚ' ಎಂಬ ಶ್ರುತಿಯು 'ಆತ್ಮಾ ನಿತ್ಯಃ ಸುಖದುಃಖೇ ತ್ವನಿತ್ಯೇ, ಜೀವೋ ನಿತ್ಯೋ ಧಾತುರಸ್ಯ ತ್ವನಿತ್ಯಃ' ಎಂಬ ಸ್ಮೃತಿಯು ಜೀವನಿಗೆ ನಿತ್ಯತ್ವವನ್ನು ಹೇಳುತ್ತಿದೆ.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ಯಾವದಧಿಕರಣವು ಮುಗಿಯಿತು.
ಪರಿಪೂರ್ಣಚಂದ್ರಿಕಾ

. ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् — जीवस्याप्युत्पत्तिरुक्ता । अतस्तस्य 'सोऽनादिना पुण्येन पापेन चानुबद्धः । परेण निर्मुक्त आनन्त्याय कल्पते' इत्यनादिकर्मसम्बन्ध आनन्त्यावाप्तिश्च न युज्यत इति ।**

ಅನುವಾದ - ಜೀವನಿಗೂ ಕೂಡ ಉತ್ಪತ್ತಿಯು ಇರುತ್ತದೆ. ಆದ್ದರಿಂದ ಅವನಿಗೆ ಅನಾದಿಕರ್ಮಸಂಬಂಧ ಹಾಗೂ ಅವಿನಾಶತ್ವ ಎರಡೂ ಕೂಡುವುದಿಲ್ಲ. ಆ ಜೀವಿಯು ಅನಾದಿಯಾದ ಪುಣ್ಯದಿಂದ ಪಾಪದಿಂದಲೂ ಬಂಧಿತನಾಗಿ ಪರಮಾತ್ಮನಿಂದ ಬಿಡುಗಡೆಯನ್ನು ಹೊಂದಿ ನಾಶವಿಲ್ಲದ ಮೋಕ್ಷಕ್ಕೆ ಹೋಗಲು ಅರ್ಹನಾಗುತ್ತಾನೆಂದು ಶ್ರುತಿಯು ಕರ್ಮಸಂಬಂಧವನ್ನು ಮೋಕ್ಷವನ್ನೂ ಕೂಡ ಹೇಳುತ್ತಿದೆ. ಇದು ಕೂಡುವುದಿಲ್ಲವೆಂದು ಪೂರ್ವಪಕ್ಷ.

ಪ್ರತಿಪದಾರ್ಥ -- ಜೀವಸ್ಯಾಪಿ = ಜೀವನಿಗೂ, ಉತ್ಪತ್ತಿಃ = ಉತ್ಪತ್ತಿಯು, ಉಕ್ತಃ = ಶ್ರುತಿಯಲ್ಲಿ ಹೇಳಿದೆ. ಅತಃ = ಆದ್ದರಿಂದ, ತಸ್ಯ = ಅವನಿಗೆ, ಸಃ = ಜೀವನು, ಅನಾದಿನಾ = ಅನಾದಿಯಾದ, ಪುಣ್ಯೇನ ಪಾಪೇನ = ಪುಣ್ಯ ಹಾಗೂ ಪಾಪಗಳ ಸಂಬಂಧದಿಂದ, ಅನುಬದ್ಧಃ = ಬಂಧಿತನಾಗಿದ್ದಾನೆ. ಪರೇಣ = ಪರಮಾತ್ಮನಿಂದ, ನಿರ್ಮುಕ್ತಃ = ಬಿಡುಗಡೆಯನ್ನು ಹೊಂದಿದವನಾಗಿ, ಆನಂತ್ಯಾಯ = ಮೋಕ್ಷಕ್ಕೆ, ಕಲ್ಪ್ಯತೇ = ಅರ್ಹನಾಗುತ್ತಾನೆ. ಇತಿ = ಹೀಗೆ, ಅನಾದಿಕರ್ಮಸಂಬಂಧಃ = ಅನಾದಿಯಾದ ಕರ್ಮಸಂಬಂಧವು, ಆನಂತ್ಯಾವಾಪ್ತಿಶ್ಚ = ಮೋಕ್ಷವನ್ನು ಹೊಂದುವುದು ಕೂಡ, ನ ಯುಜ್ಯತೇ = ಯುಕ್ತವಾಗುವುದಿಲ್ಲ. ಇತಿ = ಇದು ಪೂರ್ವಪಕ್ಷ.

**भाष्यम् — अत आह —**

**।। यावदात्मभावित्वाच्च न दोषस्तद्दर्शनात् ।।१।।**

**यावत् परमात्मा तिष्ठत्यनाद्यनन्तत्वेनैवं जीवोऽपि ।**

ಅನುವಾದ - ಮೇಲಿನ ಪೂರ್ವಪಕ್ಷಕ್ಕೆ ಸೂತ್ರಕಾರರು ಉತ್ತರಿಸುತ್ತಿದ್ದಾರೆ -

ಪರಮಾತ್ಮನು ಎಷ್ಟು ಕಾಲದ ತನಕ ಇರುತ್ತಾನೋ ಅಷ್ಟುಕಾಲದ ತನಕ ಜೀವನೂ ಕೂಡ ಇರುತ್ತಾನೆ.

ಪ್ರತಿಪದಾರ್ಥ -- ಅತಃ = ಮೇಲಿನ ವಿರೋಧಪರಿಹಾರಕ್ಕೆ, ಆಹ = ಸೂತ್ರಕಾರರು ಹೇಳುತ್ತಿದ್ದಾರೆ. ಪರಮಾತ್ಮಾ = ಪರಮಾತ್ಮನು, ಯಾವತ್ = ಅಷ್ಟುಕಾಲದ ತನಕ, ತಿಷ್ಠತಿ = ಇರುತ್ತಾನೋ, ಏವಂ = ಹಾಗೆ, ಜೀವೋಽಪಿ = ಜೀವನು, ಅನಾದ್ಯನಂತತ್ವೇನ = ಅನಾದಿ ಅನಂತಕಾಲದ ತನಕ, ತಿಷ್ಠತಿ = ಇರುತ್ತಾನೆ.

**भाष्यम् — 'नित्यः परो नित्यो जीवोऽनित्यास्तस्य धातवः । अत उत्पद्यते च म्रियते च विमुच्यते च' इति चाऽग्निवेश्यश्रुतिः । 'आत्मा**

**नित्यस्सुखदुःखे त्वनित्ये, जीवो नित्यो धातुरस्य त्वनित्यः ।' इति च भारते ।।१।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये यावदधिकरणम् ।। १९ ।।**

ಅನುವಾದ - ಪರಮಾತ್ಮನು ನಾಶರಹಿತನು ಜೀವನು ನಾಶವಿಲ್ಲದವನು. ಆ ಜೀವನ ದೇಹಗಳು ಅನಿತ್ಯವಾಗಿವೆ. ಆದ್ದರಿಂದ ಹುಟ್ಟುತ್ತಾನೆ. ದೇಹನಾಶವಾದಾಗ ನಾಶವಾಗುತ್ತಾನೆ. ಮುಕ್ತನೂ ಆಗುತ್ತಾನೆ. ಹೀಗೆ ಅಗ್ನಿವೇಶ್ಯಶ್ರುತಿಯು ಹೇಳುತ್ತಿದೆ.

ಜೀವನು ನಿತ್ಯನು. ಜೀವನಿಗೆ ಬರುವ ಸುಖದುಃಖಗಳು ಅನಿತ್ಯವಾಗಿದೆ. ಜೀವನು ನಿತ್ಯನು. ಇವನ ದೇಹವು ಅನಿತ್ಯವಾಗಿದೆ. ಹೀಗೆ ಮಹಾಭಾರತವೂ ಕೂಡ ಹೇಳುತ್ತಿದೆ.

ಪ್ರತಿಪದಾರ್ಥ -- ಪರಃ = ಪರಮಾತ್ಮನು, ನಿತ್ಯಃ = ನಿತ್ಯನು, ಜೀವಃ = ಜೀವನು, ನಿತ್ಯಃ = ನಿತ್ಯನು. ತಸ್ಯ = ಜೀವನ, ಧಾತವಃ = ದೇಹಗಳು, ಅನಿತ್ಯಃ = ಅನಿತ್ಯಗಳು, ಅತಃ = ಆದ್ದರಿಂದ, ಉತ್ಪದ್ಯತೇ = ದೇಹ ಹುಟ್ಟಿದಾಗ ಹುಟ್ಟುತ್ತಾನೆ, ಮ್ರಿಯತೇ ಚ = ದೇಹ ಸತ್ತಾಗ ಸಾಯುತ್ತಾನೆ. ವಿಮುಚ್ಯತೇ ಚ = ಮುಕ್ತನೂ ಕೂಡ ಆಗುತ್ತಾನೆ. ಇತಿ ಚ = ಹೀಗೆ ಅಗ್ನಿವೇಶ್ಯಶ್ರುತಿಃ = ಅಗ್ನಿವೇಶ್ಯಶ್ರುತಿಯು ಹೇಳಿದೆ.

ಆತ್ಮಾ = ಆತ್ಮನು, ನಿತ್ಯಃ = ನಿತ್ಯನು, ಸುಖದುಃಖೇ = ಸುಖ ಹಾಗೂ ದುಃಖಗಳಾದರೂ, ಅನಿತ್ಯೇ = ಅನಿತ್ಯಗಳು, ಜೀವಃ = ಜೀವನು, ನಿತ್ಯಃ = ನಿತ್ಯನು. ಅಸ್ಯ = ಜೀವನ, ಧಾತುಸ್ತು = ಶರೀರವಾದರೂ, ಅನಿತ್ಯಃ = ಅನಿತ್ಯವಾಗಿದೆ. ಇತಿ ಚ = ಹೀಗೆ, ಭಾರತೇ = ಮಹಾಭಾರತವು ಹೇಳುತ್ತಿದೆ.

ಇಲ್ಲಿಗೆ ಯಾವದಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

## ತತ್ವಪ್ರಕಾಶಿಕಾ

**तत्वप्रकाशिका – अत्रेश्वरे श्रुतिसमन्वयसिध्यर्थं जीवनित्यत्वविषय-श्रुतिविरोधपरिहारादस्ति शास्त्रादिसङ्गतिः । श्रुतिसमन्वयो हरावुक्तः । श्रुतेर्जीव-नित्यत्वविषयायाः श्रुत्यन्तरविरोधेनाप्रामाण्ये तदनुपपत्तिप्रसङ्गात् परिहर्तव्यमेतत् । प्रकृतो जीव एवात्र विषयः नित्योऽनित्यो वेति सन्देहः । 'ब्रह्मलयमभ्युपैति' 'आनन्त्याय कल्पते' इति श्रतिविरोधः सन्देहबीजम् ।**

ಈ ಅಧಿಕರಣದಲ್ಲಿ ಈಶ್ವರನಲ್ಲಿ ಶ್ರುತಿಸಮನ್ವಯವು ಸಿದ್ಧವಾಗುವುದಕ್ಕಾಗಿ ಜೀವನಿತ್ಯತ್ವ-ವಿಷಯಕವಾದ ಶ್ರುತಿವಿರೋಧವನ್ನು ಪರಿಹಾರ ಮಾಡಲಾಗಿದೆ. ಆದ್ದರಿಂದ ಶಾಸ್ತ್ರ-ಅಧ್ಯಾಯ-ಪಾದ ಸಂಗತಿಗಳು ಇರುತ್ತವೆ. ಶ್ರೀಹರಿಯಲ್ಲಿ ಶ್ರುತಿಸಮನ್ವಯ್ಯು ಹೇಳಲ್ಪಟ್ಟಿತು. ಜೀವನಿತ್ಯತ್ವ ವಿಷಯಕವಾದ ಶ್ರುತಿಗಳಿಗೆ ಮತ್ತೊಂದು ಶ್ರುತಿಯಿಂದ ವಿರೋಧವು ಪ್ರಾಪ್ತವಾದರೆ ಅಪ್ರಾಮಾಣ್ಯವು ಬರುತ್ತದೆ. ಆಗ ಪರಮಾತ್ಮನಲ್ಲಿ ಮಾಡಲ್ಪಟ್ಟ ಸಮನ್ವಯವೇ ಅನುಪಪನ್ನ-ವಾಗುತ್ತದೆ. ಆದ್ದರಿಂದ ಅಪ್ರಾಮಾಣ್ಯವನ್ನು ಪರಿಹಾರ ಮಾಡಬೇಕು.

ಹಿಂದೆ ಪ್ರಕೃತನಾದ ಜೀವನೇ ಈ ಅಧಿಕರಣಕ್ಕೆ ವಿಷಯನಾಗಿದ್ದಾನೆ. ಇವನು ನಿತ್ಯನೋ, ಅನಿತ್ಯನೋ ಎಂಬುದು ಅಧಿಕರಣದ ಸಂದೇಹ. 'ಬ್ರಹ್ಮಲಯಮಭ್ಯುಪೈತಿ' ಎಂಬ ಶ್ರುತಿಯಿಂದ ಜೀವನಿಗೆ ಲಯವು 'ಆನಂತ್ಯಾಯ ಕಲ್ಪತೇ' ಎಂಬ ಶ್ರುತಿಯಿಂದ ಜೀವನಿಗೆ ನಿತ್ಯತ್ವವು ಕೇಳಿಸುತ್ತಿರುವುದರಿಂದ ಪರಸ್ಪರ ಶ್ರುತಿಯ ವಿರೋಧವೇ ಸಂದೇಹಕ್ಕೆ ಕಾರಣ.

ವಿವರಣೆ - ಹಿಂದಿನ ಪೃಥಗುಪದೇಶಾಧಿಕರಣದಲ್ಲಿ 'ಉಪದೇಶಾತ್' ಎಂಬುದಾಗಿ ಸೂತ್ರದ ಭಾಗದಿಂದ ಜೀವನು ಪರಮಾತ್ಮನಿಗಿಂತ ಭಿನ್ನನಾಗಿದ್ದಾನೆಂಬ ಉಪದೇಶವಿದೆ ಎಂದು ಹೇಳಲಾಗಿದೆ. ಏಕೆಂದರೆ ಪರಮಾತ್ಮನು ನಿತ್ಯಮುಕ್ತನಾಗಿದ್ದಾನೆ. ಜೀವನು ಬದ್ಧನಾಗಿದ್ದಾನೆ. ಸಂಸಾರಬಂಧನದಿಂದ ಬಿಡುಗಡೆಯನ್ನುಪಡೆಯಬೇಕೆಂದರೆಪರಮಾತ್ಮನನ್ನೇಆಶ್ರಯಿಸಬೇಕೆಂದುಆಸೂತ್ರದಲ್ಲಿಹೇಳಲಾಯಿತು. ಇಂತಹ ಜೀವ ಅನಿತ್ಯನಾಗಿರುವುದರಿಂದ ಇವನಿಗೆ ಮೋಕ್ಷವು ಉಪಪನ್ನವಾಗುವುದಿಲ್ಲವೆಂದು ಈ ಅಧಿಕರಣದಲ್ಲಿ ಆಕ್ಷೇಪ ಮಾಡಲಾಗಿದೆ. ಆದ್ದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಆನಂತರ್ಯಸಂಗತಿ ಇರುತ್ತದೆಂದು ತಿಳಿಯಬೇಕು.

**तत्वप्रकाशिका – तत्र सफलं पूर्वपक्षयति – जीवस्यापीति । अनित्य एव जीवः । अनित्यत्वश्रुतेः । न च वक्तव्यं 'सोऽनादिना' इति श्रुतिर्जीवनित्यत्वेऽप्यस्ति। अत्र जीवस्यानादिकर्मसम्बन्धानन्त्या- प्राप्त्योरुक्तत्वादिति ।। अनित्यत्वश्रुतेः सयुक्तिकत्वेन प्राबल्यात् । उक्ता खलु जीवस्योत्पत्तिः 'ज्ञोऽत एव' इति । उत्पत्तिमतश्चानित्यत्वं नियतमेव । घटादौ दृष्टत्वात् ।**

ಫಲಸಹಿತವಾದ ಪೂರ್ವಪಕ್ಷವನ್ನು 'ಜೀವಸ್ಯಾಪಿ' ಇತ್ಯಾದಿ ಭಾಷ್ಯದಿಂದ ಹೇಳುತ್ತಿದ್ದಾರೆ.

ಜೀವನು ಅನಿತ್ಯನೇ ಆಗಿದ್ದಾನೆ. ಏಕೆಂದರೆ 'ಬ್ರಹ್ಮಲಯಮಭ್ಯುಪೈತಿ' ಎಂಬ ಶ್ರುತಿಯು ಅವನಿಗೆ ಅನಿತ್ಯತ್ವವನ್ನು ಹೇಳುತ್ತಿದೆ.

'ಸೋಽನಾದಿನಾ' ಎಂಬ ಶ್ರುತಿಯು ಜೀವನಿತ್ಯತ್ವವಿಷಯದಲ್ಲಿಯೂ ಪ್ರಮಾಣವಾಗಿದೆ. ಏಕೆಂದರೆ ಈ ಶ್ರುತಿಯಲ್ಲಿ ಜೀವನಿಗೆ ಅನಾದಿಕರ್ಮಸಂಬಂಧ ಹಾಗೂ ಆನಂತ್ಯದ ಪ್ರಾಪ್ತಿಯನ್ನು ಹೇಳಲಾಗಿದೆ. ಹೀಗೆ ಆಶಂಕೆಯನ್ನು ಮಾಡಬಾರದು.

ಏಕೆಂದರೆ ಅನಿತ್ಯತ್ವವನ್ನು ಹೇಳುವ ಶ್ರುತಿಯು ಯುಕ್ತಿಯಿಂದ ಬಲಿಷ್ಠವಾಗಿದೆ. ಮತ್ತು 'ಜ್ಞೋಽತ ಏವ' ಎಂಬ ಸೂತ್ರದಲ್ಲಿ ಜೀವನಿಗೂ ಕೂಡ ಉತ್ಪತ್ತಿಯನ್ನು ಹೇಳಲಾಗಿದೆ.

ಯಾವುದಕ್ಕೆ ಉತ್ಪತ್ತಿ ಇರುತ್ತದೋ, ಅದಕ್ಕೆ ಅನಿತ್ಯತ್ವವು ನಿಯಮೇನ ಇದ್ದೇ ಇರುತ್ತದೆ. ಘಟಾದಿಗಳಲ್ಲಿ ಇದು ಕಂಡಿದೆ.

ವಿವರಣೆ -'ಜ್ಞೋಽತ ಏವ' ಎಂಬ ಸೂತ್ರದಲ್ಲಿ ಹಾಗೂ 'ಯುಕ್ತೇಶ್ಚ' ಎಂಬ ಸೂತ್ರದಲ್ಲಿ ಜೀವಾತ್ಮನಿಗೆ ಉತ್ಪತ್ತಿ ಇದೆ ಎಂದು ಹೇಳಲಾಯಿತು. ಉತ್ಪನ್ನನಾಗುವ ಈ ಜೀವನಿಗೆ ಪರಮಾತ್ಮನ ಅನುಗ್ರಹದಿಂದ ಮೋಕ್ಷವು ದೊರೆಯಲು ಹೇಗೆ ಸಾಧ್ಯ ? ಮತ್ತು ಅನಾದಿಕರ್ಮಸಂಬಂಧ ಆಗಲು ಹೇಗೆ ಸಾಧ್ಯ ? ಎಂಬುದಾಗಿ ಪೂರ್ವಪಕ್ಷಿಗಳು ಇಲ್ಲಿ ಆಕ್ಷೇಪ ಮಾಡುತ್ತಿದ್ದಾರೆ.

ಯಾವುದಕ್ಕೆ ಉತ್ಪತ್ತಿ ಇದೆಯೋ ಅದಕ್ಕೆ ಅನಿತ್ಯತ್ವವಿದೆ ಎಂಬ ವ್ಯಾಪ್ತಿಯು ಘಟಾದಿಗಳಲ್ಲಿ ಕಂಡಿದೆ. ಜೀವಾತ್ಮನಿಗೆ ಉತ್ಪತ್ತಿ ಇದೆ ಎಂದು ಸೂತ್ರಕಾರರೇ ಸಮರ್ಥನೆ ಮಾಡಿದ್ದರಿಂದ ಅನಿತ್ಯತ್ವವನ್ನೂ ಕೂಡ ಒಪ್ಪಲೇಬೇಕು. ಹೀಗೆ ಯುಕ್ತಿಯುಕ್ತವಾದ್ದರಿಂದ ಅನಿತ್ಯತ್ವ ಶ್ರುತಿಯು ನಿತ್ಯತ್ವ ಶ್ರುತಿಗಿಂತ ಪ್ರಬಲವಾಗಿದೆ.

**तत्वप्रकाशिका – न च वक्तव्यं तत्रोत्पत्तिरुपाधेरेवोक्ता न तु जीवस्यातः कथं तस्यानित्यत्वमपीति । उपाधेरूत्पत्तिमत्त्वे प्रतिबिम्बस्योत्पत्तिनियमात् । न हि दृष्टमुपाधेरुत्पत्तिमत्त्वेऽपि प्रतिबिम्बस्यानादित्वम् । अतोऽस्त्येव जीवस्योत्पत्तिर्विनाशश्च ।**

ಶರೀರಕ್ಕೆ ಮಾತ್ರ ಉತ್ಪತ್ತಿಯನ್ನು ಅನಿತ್ಯತ್ವ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ ಹೊರತು ಜೀವಾತ್ಮನಿಗೆ ಉತ್ಪತ್ತಿಯನ್ನು ಹೇಳುತ್ತಿಲ್ಲ. ಹೀಗಿರುವಾಗ ಜೀವಾತ್ಮನಿಗೆ ಅನಿತ್ಯತ್ವವನ್ನು ಹೇಗೆ ಹೇಳುವಿರಿ?

ಹೀಗೆ ಪ್ರಶ್ನಿಸಬಾರದು. ಉಪಾಧಿಗೆ ಉತ್ಪತ್ತಿ ಇರುವುದಾದರೆ ಪ್ರತಿಬಿಂಬಕ್ಕೂ ಕೂಡ ಉತ್ಪತ್ತಿಯು ಇರಲೇಬೇಕೆಂಬುದು ನಿಯಮಸಿದ್ಧವಾಗಿದೆ. ಉಪಾಧಿ ಮಾತ್ರ ಉತ್ಪನ್ನವಾಗಿದ್ದು, ಪ್ರತಿಬಿಂಬವು ಅನಾದಿಯಾಗಿರುವುದು ಲೋಕದಲ್ಲಿ ಎಲ್ಲಿಯೂ ಕೂಡ ಕಂಡಿಲ್ಲ.

ಆದ್ದರಿಂದ ಜೀವನಿಗೆ ಉತ್ಪತ್ತಿ ಮತ್ತು ವಿನಾಶಗಳನ್ನು ಹೇಳಲೇಬೇಕು.

ವಿವರಣೆ - 'ಉಪಾಧೇಃ ಉತ್ಪತ್ತಿಮತ್ತ್ವೇ ಪ್ರತಿಬಿಂಬಸ್ಯ ಉತ್ಪತ್ತಿನಿಯಮಾತ್' ಎಂಬುದೇ ಇಲ್ಲಿ ಹೇಳುತ್ತಿರುವ ಯುಕ್ತಿ. ಈ ಯುಕ್ತಿಯಿಂದ 'ಬ್ರಹ್ಮಲಯಮಭ್ಯುಪೈತಿ' ಎಂಬ ಉತ್ಪತ್ತಿ ಹೇಳುವ ಶ್ರುತಿಯು ಬಲಿಷ್ಠವಾಗಿದೆ ಎಂದು ತಿಳಿಯಬೇಕು.

**तत्वप्रकाशिका – अतः सयुक्तिकश्रुतिविरोधात्तस्यानादिकर्मसम्बन्धाद्युक्तेस्तदभिधायकश्रुतेरप्रमाणत्वादयुक्तो ब्रह्मणि श्रुतिसमन्वय इति भावः । सिद्धान्तयत्सूत्रमवतार्य व्याचष्टे – अत इति ।।**

ಹೀಗೆ ಯುಕ್ತಿಬದ್ಧವಾದ ಶ್ರುತಿವಿರೋಧವಿರುವುದರಿಂದ ಅನಾದಿಕರ್ಮ ಸಂಬಂಧದಿಂದ ಜೀವಾತ್ಮನಿಗೆ ಅನಾದಿಕರ್ಮಸಂಬಂಧವನ್ನು ಹೇಳುವುದು ಯುಕ್ತವಾಗುವುದಿಲ್ಲ. ಆದ್ದರಿಂದ ಇವುಗಳನ್ನು ಪ್ರತಿಪಾದನೆ ಮಾಡುವ ಶ್ರುತಿಗಳಿಗೆ ಅಪ್ರಾಮಾಣ್ಯವನ್ನೇ ಹೇಳಬೇಕು. ಹಾಗಾಗಿ ಬ್ರಹ್ಮನಲ್ಲಿ ಮಾಡಲ್ಪಟ್ಟ ಶ್ರುತಿಸಮನ್ವಯವು ಅಯುಕ್ತವಾಯಿತು. ಇಷ್ಟು ಅಧಿಕರಣದ ಪೂರ್ವಪಕ್ಷ.

ಸಿದ್ಧಾಂತ ಸ್ಥಾಪಕವಾದ ಸೂತ್ರಕ್ಕೆ 'ಅತಃ' ಎಂಬುದಾಗಿ ಅವತಾರಿಕೆಯನ್ನು ನೀಡಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – नित्यएव जीवः । प्रतिबिम्बस्य बिम्बोपाधितत्सन्निधिनाशं विना नाशानुपपत्तेः । बिम्बस्य परामात्मनोऽनाद्यनन्तत्वात् । उपाधेश्च यावत्परमात्मभावित्वात् । सर्वगतबिम्बस्योपाधिसन्निधेश्च नित्यत्वात् । अतो जीवस्यानाद्यनन्तत्वान्नानादिकर्मसम्भम्बन्धाद्यनुपपत्त्याऽप्रमाणता च श्रुतेर्भवति।**

ಜೀವಾತ್ಮನು ನಿತ್ಯನೇ ಆಗಿದ್ದಾನೆಂಬುದು ಸಿದ್ಧಾಂತ. ಪ್ರತಿಬಿಂಬವು ನಾಶವಾಗಬೇಕೆಂದರೆ ಬಿಂಬ, ಉಪಾಧಿ, ಇವೆರಡರ ಸನ್ನಿಧಾನ ಈ ಮೂರು ನಾಶವಾಗಲೇಬೇಕು. ಇಲ್ಲದಿದ್ದರೆ ಪ್ರತಿಬಿಂಬಕ್ಕೆ ನಾಶವಾಗುವುದಿಲ್ಲ. ಪ್ರಕೃತ ಬಿಂಬನಾದ ಪರಮಾತ್ಮನು ಅನಾದಿ ಅನಂತನಾಗಿದ್ದಾನೆ. ಉಪಾಧಿಯು ಪರಮಾತ್ಮನ ಜೊತೆ ಇದ್ದೇ ಇರುತ್ತದೆ. ಸರ್ವಗತನಾದ ಬಿಂಬನಾದ ಪರಮಾತ್ಮನಿಗೆ ಉಪಾಧಿಯ ಸನ್ನಿಧಾನವು ನಿತ್ಯವೇ ಆಗಿರುತ್ತದೆ. ಆದ್ದರಿಂದ ಜೀವನು ಅನಾದಿ, ಅನಂತನಾಗಿರುವುದರಿಂದ ಅವನಿಗೆ ಅನಾದಿಕರ್ಮಸಂಬಂಧವು ಯುಕ್ತವಾಗುತದೆ ಮತ್ತು ನಾಶರಾಹಿತ್ಯವೆಂಬ ಮೋಕ್ಷಸ್ಥಿತಿಯೂ ಕೂಡ ಯುಕ್ತವಾಗುತ್ತದೆ. ಈ ವಿಷಯದಲ್ಲಿ ಇವೆರಡರ ಅನುಪಪತ್ತಿಯ ಮೂಲಕವಾಗಿ ಶ್ರುತಿಗೆ ಅಪ್ರಾಮಾಣ್ಯವನ್ನು ಹೇಳಲು ಸಾಧ್ಯವಿಲ್ಲ.

ವಿವರಣೆ – ದೇಹವನ್ನೇ ಉಪಾಧಿ ಎಂದು ಪೂರ್ವಪಕ್ಷಕಾರನು ತಿಳಿದು ಉಪಾಧಿಯಾದ ದೇಹವು ನಾಶವಾದರೆ ಜೀವನೂ ಕೂಡ ನಾಶವಾಗಬೇಕು. ಉಪಾಧಿಯು ನಾಶವಾಗಿ ಪ್ರತಿಬಿಂಬವಿರುವುದು ಕಂಡಿಲ್ಲವೆಂದು ಆಕ್ಷೇಪ ಮಾಡಿದ್ದನು. ಇದಕ್ಕೆ ಇಲ್ಲಿ ಉತ್ತರವನ್ನು ನೀಡುತ್ತಿದ್ದಾರೆ.

ಜೀವಾತ್ಮನಿಗೆ ಬಿಂಬನಾದವನು ಪರಮಾತ್ಮನೇ ಆಗಿದ್ದಾನೆ. ಬಿಂಬನಾದ ಪರಮಾತ್ಮನಿಗೆ ಎಂದೂ ನಾಶ ಇರುವುದಿಲ್ಲ. ಬಿಂಬ ಹಾಗೂ ಉಪಾಧಿಯ ಸನ್ನಿಧಾನವು ನಿತ್ಯವಾಗಿರುವುದರಿಂದ ಪ್ರತಿಬಿಂಬನಾದ ಜೀವನೂ ಕೂಡ ನಿತ್ಯನೇ ಆಗುತ್ತಾನೆ.

ಕನ್ನಡಿಯಲ್ಲಿ ಮುಖವನ್ನು ಕಂಡಾಗ ಕನ್ನಡಿ ಎಂಬ ಉಪಾಧಿಗಿಂತ ಬಿಂಬವು ಹೊರಗೇ ಇರುತ್ತದೆ. ಆದರೆ ಜೀವ ಹಾಗೂ ಪರಮಾತ್ಮರಲ್ಲಿ ಈ ತರಹ ಬಿಂಬ ಹಾಗೂ ಪ್ರತಿಬಿಂಬಭಾವವನ್ನು ತಿಳಿಯಬಾರದು. ಜೀವಾತ್ಮನ ಅಂತರ್ಯಾಮಿಯಾಗಿ ಪರಮಾತ್ಮನು ನೆಲೆಸಿದ್ದಾನೆ. ಜೀವಾತ್ಮನು ಪರಮಾತ್ಮನ ಪ್ರತಿಬಿಂಬನೆಂದರೆ ಅವನಿಗೆ ಸದೃಶನಾಗಿದ್ದಾನೆ ಹಾಗೂ ಅಧೀನನಾಗಿದ್ದಾನೆ ಎಂದರ್ಥ.

**तत्वप्रकाशिका – न चानित्यत्वश्रुतिविरोघः । तस्या उपाधिविषयत्वात्। न चोपाधेरनित्यत्वे पुनर्जीवस्यानित्यत्वापत्तिरिति वाच्यम् । न हि येनोपाधिना जीवः प्रतिबिम्बस्तस्यैवोत्पत्तिविनाशौ ब्रूमोऽपि तु घात्वादिपदोदित बाह्योपाधेरेव।**

ಅನಿತ್ಯತ್ವವನ್ನು ಹೇಳುವ ಶ್ರುತಿಯಿಂದ ಜೀವನಿತ್ಯತ್ವವನ್ನು ಹೇಳುವ ಶ್ರುತಿಗೆ ವಿರೋಧ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಅನಿತ್ಯತ್ವವನ್ನು ಹೇಳುವ ಶ್ರುತಿಯು ಉಪಾಧಿ ವಿಷಯಕವಾಗಿದೆ.

ಉಪಾಧಿಯು ಅನಿತ್ಯವಾದರೆ ಪ್ರತಿಬಿಂಬನಾದ ಜೀವನೂ ಕೂಡ ಅನಿತ್ಯವಾಗಬೇಕಾದೀತು ಎಂಬ ಅತಿಪ್ರಸಂಗವು ಪುನಃ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು.

ಯಾವ ಉಪಾಧಿಯಿಂದ ಜೀವನು ಪರಮಾತ್ಮನ ಪ್ರತಿಬಿಂಬನಾಗಿದ್ದಾನೋ ಆ ಉಪಾಧಿಗೆ ಉತ್ಪತ್ತಿ ನಾಶಗಳನ್ನು ನಾವು ಹೇಳುವುದಿಲ್ಲ. ಧಾತು ಮೊದಲಾದ ಪದಗಳಿಂದ ಕರೆಯಲ್ಪಡುವ ಬಾಹ್ಯಶರೀರವನ್ನೇ ಉಪಾಧಿ ಎಂದು ಕರೆಯುತ್ತೇವೆ.

**तत्वप्रकाशिका – कुत एतदखिलमिति चेत् 'नित्यः परः' इति श्रुतेः स्मृतिवचनद्वयाच्चेति भावः । उक्तं चैतदन्यत्र । 'जीवोपाधिर्द्विधा प्रोक्तः स्वरूपं बाह्य एव च । बाह्योपाधिर्लयं याति मुक्तावन्यस्य तु स्थितिः । सर्वोपाधिविनाशे तु प्रतिबिम्बः कथं भवेत् । कथं चात्मविनाशाय प्रयत्नः सेत्स्यति कचित्' । इति।**

ಯಾವ ಪ್ರಮಾಣಗಳಿಂದ ಹೀಗೆ ಹೇಳುತ್ತೀರಿ? ಎಂದು ಪ್ರಶ್ನಿಸಿದರೆ 'ನಿತ್ಯಃ ಪರಃ' ಎಂಬ ಶ್ರುತಿಯಿಂದ ಹಾಗೂ ಎರಡು ಸ್ಮೃತಿವಚನಗಳಿಂದ ಇದು ಸಿದ್ಧವಾಗುತ್ತದೆಂದು ಭಾಷ್ಯದಿಂದ ತಿಳಿಯಬೇಕು.

ಇದೇ ವಿಷಯವು ಬೇರೆ ಕಡೆಯೂ ಹೇಳಲ್ಪಟ್ಟಿದೆ. ಜೀವೋಪಾಧಿಯು ಎರಡು ರೀತಿಯಲ್ಲಿ ಉಕ್ತವಾಗಿದೆ. (೧) ಸ್ವರೂಪೋಪಾಧಿ, (೨) ಬಾಹ್ಯೋಪಾಧಿ ಎಂದು. ಮೋಕ್ಷವಾಗುವಾಗ ಬಾಹ್ಯೋಪಾಧಿಯು ನಾಶವಾಗುತದೆ. ಸ್ವರೂಪೋಪಾಧಿಯು ಮೋಕ್ಷಾವಸ್ಥೆಯಲ್ಲಿಯೂ ಇರುತ್ತದೆ.

ಎಲ್ಲಾ ಉಪಾಧಿಗಳು ನಾಶವಾದರೆ ಪ್ರತಿಬಿಂಬವು ಹೇಗೆ ಉಳಿಯುತ್ತದೆ? ಮತ್ತು ಆತ್ಮವಿನಾಶಕ್ಕೋಸ್ಕರ ಜೀವಾತ್ಮನು ಪ್ರಯತ್ನ ಮಾಡುವುದು ಹೇಗೆ ಯುಕ್ತವಾಗುತ್ತದೆ? ಎಂದು.

**तत्वप्रकाशिका – तथा 'उपाधेश्चैव नित्यत्वान्नैव जीवो निनश्यति । स्वरूपत्वादुपाधेश्च न भिन्नोपाधिकल्पनम्' इति । अतः श्रुत्यविरोधेन जीवस्य नित्यत्वासिद्धेर्युक्तो हरौ वेदानां समन्वय इति सिद्धम् ।।**

ಹಾಗೆಯೇ ಉಪಾಧಿಯು ನಿತ್ಯವಾದ್ದರಿಂದ ಜೀವನಿಗೆ ನಾಶವೂ ಕೂಡ ಆಗುವುದಿಲ್ಲ. ಜೀವಸ್ವರೂಪವೇ ಉಪಾಧಿಯಾಗಿರುವುದರಿಂದ ಉಪಾಧಿಯು ಜೀವಭಿನ್ನವಾಗಿದೆ ಎಂಬ ಕಲ್ಪನೆಯೂ ಸಹ ಅಯುಕ್ತವಾಗುತ್ತದೆ.

ಹೀಗೆ ಶ್ರುತಿವಿರೋಧವಿಲ್ಲದ್ದರಿಂದ ಜೀವನಿಗೆ ನಿತ್ಯತ್ವವು ಸಿದ್ಧವಾಗುತ್ತದೆ. ಆದ್ದರಿಂದ ಶ್ರೀಹರಿಯಲ್ಲಿ ಮಾಡಲ್ಪಟ್ಟ ವೇದಸಮನ್ವಯವು ಯುಕ್ತವಾಯಿತು.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಯಾವದಧಿಕರಣ ಮುಗಿಯಿತು

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## यावदधिकरणम्

ಜೀವನು ಸ್ವರೂಪತಃ ಉತ್ಪತ್ತಿ-ನಾಶವಿಲ್ಲದವನು

**यावदात्मभावित्वाच्च न दोषस्तद्दर्शनात् ।। ''बन्धान्मोक्षं तत एवाभिवांछेत्'' इति पूर्वोक्तानादिबन्धानन्तमोक्षाक्षेपेण पूर्वपक्षोदयात्सङ्गतिः । अत्र जीवस्य नित्यत्वश्रुतिरुत्पत्तिमत्त्वयुक्तयनुगृहीतया जीवानित्यत्वश्रुत्या बाधितोत नेति चिन्ता ।**

'ಬಂಧಾನ್ಮೋಕ್ಷಂ ತತ ಏವ ಅಭಿವಾಂಛೇತ್' ಎಂಬುದು ಪೃಥಗುಪದೇಶಾತ್ ಎಂಬ ಸೂತ್ರದ ವಿಷಯವಾಕ್ಯವಾಗಿದೆ. ಈ ಶ್ರುತಿಯಲ್ಲಿ ಭಗವಂತನಿಂದಲೇ ಸಂಸಾರಬಂಧನದಿಂದ ಮೋಕ್ಷವನ್ನು ಹೊಂದಲು ಇಚ್ಛಿಸಬೇಕು ಎಂದು ಹೇಳಲಾಗಿದೆ. ಅರ್ಥಾತ್ ಬಂಧವು ಅನಾದಿಯಾಗಿದೆ ಮೋಕ್ಷವು ಅನಂತವಾಗಿದೆ ಎಂಬುದು ಈ ಶ್ರುತಿಯ ಅಭಿಪ್ರಾಯ. ಈ ಪ್ರಮೇಯವನ್ನು ಆಕ್ಷೇಪ ಮಾಡಿ ಉತ್ತರವನ್ನು ನೀಡುತ್ತಿರುವುದರಿಂದ ಈ ಅಧಿಕರಣಕ್ಕೆ ಹಿಂದಿನ ಅಧಿಕರಣದಿಂದ ಆಕ್ಷೇಪಿಕೀ ಸಂಗತಿಯು ಇರುತ್ತದೆ.

ಈ ಅಧಿಕರಣದಲ್ಲಿ ಜೀವನಿಗೆ ನಿತ್ಯತ್ವಶ್ರುತಿಯು ಉತ್ಪತ್ತಿಯುಳ್ಳ ಯುಕ್ತ್ಯನುಗೃಹೀತವಾದ ಜೀವ ಅನಿತ್ಯತ್ವ ಶ್ರುತಿಯಿಂದ ಬಾಧಿತವಾಗುತ್ತದೋ ಇಲ್ಲವೋ? ಎಂಬುದು ಪ್ರಧಾನ ಸಂಶಯ.

**(अत्र श्रुतिसमन्वयेनोक्तं ब्रह्मणः सर्वस्रष्टृत्वादिकमयुक्तमुत नेति चिन्ता । तदर्थं किं श्रुतिरप्रमाणमुत नेति । तदर्थं जीवस्य नित्यत्वश्रुतिरुत्पत्ति-मत्त्वयुक्त्यनुगृहीतया अनित्यत्वश्रुत्या बाधितोत नेति) तदर्थं किमुपाधिनाशे प्रतिबिम्बभूतो जीवो नश्यत्युत नेति । तदर्थं जीवप्रतिबिम्बनोपाधिः किं विनाशी बाह्योपाधिरेवोताविनाशी स्वरूपोपाधिरेवेति ।**

ಅಥವಾ ಸಂಶಯಕೋಟಿಗಳನ್ನು ಹೀಗೆ ತಿಳಿಯಬೇಕು – ಶ್ರುತಿಸಮನ್ವಯದ ಮೂಲಕವಾಗಿ ಬ್ರಹ್ಮನಿಗೆ ಜಗತ್ಸ್ರಷ್ಟೃತ್ವವನ್ನು ಸಮರ್ಥಿಸಲಾಯಿತು. ಇದು ಅಯುಕ್ತವೋ ಅಥವಾ ಯುಕ್ತವೋ? ಎಂಬುದು ಪ್ರಧಾನ ಚಿಂತೆ. ಅದಕ್ಕಾಗಿ ಶ್ರುತಿಯು ಅಪ್ರಮಾಣವೋ ಅಥವಾ ಅಪ್ರಮಾಣವಲ್ಲವೋ? ಎಂಬುದು ಸಂಶಯ. ಅದಕ್ಕಾಗಿ ಜೀವನಿಗೆ ನಿತ್ಯತ್ವಶ್ರುತಿಯು ಉತ್ಪತ್ತಿಮತ್ವವುಳ್ಳ ಯುಕ್ತಿಯಿಂದ ಅನುಗೃಹೀತವಾದ

ಅನಿತ್ಯತ್ವಶ್ರುತಿಯಿಂದ ಬಾಧಿತವಾಗುತ್ತದೋ ಇಲ್ಲವೋ? ಎಂಬ ಸಂಶಯವು ಪರಿಹಾರವಾಗಬೇಕು. ಅದಕ್ಕಾಗಿ ಉಪಾಧಿಯು ನಾಶವಾದರೆ ಪ್ರತಿಬಿಂಬಭೂತನಾದ ನಾಶವಾಗುತ್ತಾನೋ ಇಲ್ಲವೋ? ಎಂಬ ಸಂಶಯವು ಪರಿಹಾರವಾಗಬೇಕು. ಜೀವನು ಪ್ರತಿಬಿಂಬನಾಗಲು ಜೀವನು ಬಾಹ್ಯೋಪಾಧಿಯೋ ಅಥವಾ ವಿನಾಶಿಯಾದ ಸ್ವರೂಪ ಎಂಬ ಉಪಾಧಿಯೋ ? ಎಂಬ ಸಂಶಯವು ಪರಿಹಾರವಾಗಬೇಕು.

**ज्ञोत इत्यत्र जीवोत्पत्त्यनुत्पत्तिश्रुत्योर्विरोधे शङ्किते उत्पत्तिश्रुतिरुपाधिविषया। अनुत्पत्तिश्रुतिः स्वरूपविषयेत्युक्तम् । इह तूपाध्युत्पत्तिस्वरूपानुत्पत्तिश्रुत्योरपि विरोधः । उपाध्युत्पत्तौ प्रतिबिम्बभूतजीवानुत्पत्त्ययोगादिति शङ्किते येन स्वरूपोपाधिना जीवः प्रतिबिम्बो न तस्योत्पत्तिः । यावदात्मभावित्वात् । यस्य तु बाह्योपाधेरुत्पत्तिर्न तेन जीवः प्रतिबिम्ब इत्युच्यत इत्यपुनरुक्तिः ।**

'ಜ್ಞೋತ ಏವ' ಎಂಬ ಸೂತ್ರದಿಂದ ಈ ಅಧಿಕರಣಕ್ಕೆ ಪುನರುಕ್ತಿ ದೋಷವು ಬರುವುದಿಲ್ಲ. ಏಕೆಂದರೆ 'ಜ್ಞೋತ ಏವ' ಎಂಬ ಸೂತ್ರದಲ್ಲಿ ಜೀವನಿಗೆ ಉತ್ಪತ್ತಿಯನ್ನು ಹೇಳುವ ಹಾಗೂ ಉತ್ಪತ್ತಿ ಇಲ್ಲವೆಂದು ಹೇಳುವ ಶ್ರುತಿಗಳಿಗೆ ವಿರೋಧವನ್ನು ಆಶಂಕೆ ಮಾಡಿ ಉತ್ಪತ್ತಿ ಶ್ರುತಿಯು ಉಪಾಧಿವಿಷಯಕವಾಗಿದೆ ಅನುತ್ಪತ್ತಿಶ್ರುತಿಯು ಸ್ವರೂಪವಿಷಯಕವಾಗಿದೆ. ಆದ್ದರಿಂದ ವಿರೋಧಕ್ಕೆ ಅವಕಾಶವಿಲ್ಲವೆಂದು ಸಿದ್ಧಾಂತ ಮಾಡಲಾಗಿದೆ.

ಆದರೆ ಈ ಅಧಿಕರಣದಲ್ಲಿ ಉಪಾಧಿಯ ಉತ್ಪತ್ತಿಯನ್ನು ಹೇಳುವ ಸ್ವರೂಪಕ್ಕೆ ಅನುತ್ಪತ್ತಿಯನ್ನು ಹೇಳುವ ಶ್ರುತಿಗಳ ವಿರೋಧವನ್ನೂ ಕೂಡ ಪರಿಹಾರ ಮಾಡಲಾಗಿದೆ. ಉಪಾಧಿಗೆ ಉತ್ಪತ್ತಿಯನ್ನು ಹೇಳಿದರೆ ಪ್ರತಿಬಿಂಬನಾದ ಜೀವನಿಗೆ ಅನುತ್ಪತ್ತಿಯು ಕೂಡುವುದಿಲ್ಲ ಎಂಬುದು ಆಶಂಕೆ. ಯಾವ ಸ್ವರೂಪೋಪಾಧಿಯಿಂದ ಜೀವನು ಪ್ರತಿಬಿಂಬನಾಗಿದ್ದಾನೋ ಅವನಿಗೆ ಉತ್ಪತ್ತಿಯಿಲ್ಲ. ಏಕೆಂದರೆ ಯಾವದಾತ್ಮಭಾವಿಯಾಗಿದ್ದಾನೆ. ಯಾವ ಬಾಹ್ಯೋಪಾಧಿಗೆ ಉತ್ಪತ್ತಿ ಇದೆಯೋ ಅಂತಹ ಉತ್ಪತ್ತಿನಿಮಿತ್ತಕವಾಗಿ ಜೀವನು ಪ್ರತಿಬಿಂಬನಾಗಿಲ್ಲ ಎಂಬುದಾಗಿ ಈ ಅಧಿಕರಣದಲ್ಲಿ ಸಿದ್ಧಾಂತ ಮಾಡಲಾಗಿದೆ. ಆದ್ದರಿಂದ 'ಜ್ಞೋತ ಏವ' ಎಂಬ ಸೂತ್ರದ ಪ್ರಮೇಯದಿಂದ ಇದಕ್ಕೆ ಪುನರುಕ್ತಿ ದೋಷವು ಬರುವುದಿಲ್ಲ.

**''आत्मा नित्यः जीवो नित्यः'' इति पादद्वयं भारते भिन्नस्थलस्थं वाक्यद्वयम्। ततो न भारते पुनरुक्तिरित्याह – वचनद्वयाच्चेति ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् यावदधिकरणं सम्पूर्णम् ।।१५।।**

ಟೀಕೆಯಲ್ಲಿ ವಚನದ್ವಯಾಚ್ಚ ಎಂದು ಹೇಳಿದ್ದಾರೆ. ಏಕೆಂದರೆ 'ಆತ್ಮಾ ನಿತ್ಯಃ' ಎಂಬುದು ಆತ್ಮನಿಗೆ ನಿತ್ಯತ್ವವನ್ನು ಹೇಳಿದೆ. 'ಜೀವೋ ನಿತ್ಯಃ' ಎಂಬುದೂ ಅದನ್ನೇ ಹೇಳಿದೆ. ಆದ್ದರಿಂದ ಪುನರುಕ್ತಿಗೆ ಅವಕಾಶವಿದೆ. ಇವೆರಡೂ ಬೇರೆ ಬೇರೆ ಸ್ಥಳದಲ್ಲಿರುವ ವಾಕ್ಯಗಳೆಂದು ವಿವಕ್ಷಿಸಿದಾಗ ಪುನರುಕ್ತಿಗೆ ಅವಕಾಶವಿಲ್ಲ. ಆದಕ್ಕಾಗಿ ಟೀಕೆಯಲ್ಲಿ ವಚನದ್ವಯಾಚ್ಚ ಎಂಬುದಾಗಿ ಇವೆರಡು ಬೇರೆ ವಚನಗಳೆಂದು ಹೇಳಿರುತ್ತಾರೆ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ ಯಾವದಧಿಕರಣವು ಸಂಪೂರ್ಣವಾಯಿತು
ಯಾವದಧಿಕರಣ (೨-೩-೧೫)

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**यावदात्मभावित्वात्** ।। ''तस्यानादिकर्मसम्बन्धाद्ययुक्तेः'' इत्यादिपूर्वपक्षोपसंहार-टीकासूचितामाह – **बन्धादिति** ।। **पूर्वोक्तेति** ।। पूर्वभाष्योक्तश्रुत्युक्तेत्यर्थः । पूर्वोत्तरपक्षटीकासूचिताश्चिन्ता आह – **अत्र जीवस्येति** ।।

'ತಸ್ಯಾನಾದಿಕರ್ಮಸಂಬಂಧಾದ್ಯಯುಕ್ತೇಃ' ಇತ್ಯಾದಿಯಾಗಿ ಪೂರ್ವಪಕ್ಷದ ಉಪಸಂಹಾರಟೀಕೆಯಲ್ಲಿ ಸೂಚಿತವಾದುದನ್ನು 'ಬಂಧಾತ್' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಪೂರ್ವೋಕ್ತ' ಎಂದರೆ ಹಿಂದಿನ ಅಧಿಕರಣ ಭಾಷ್ಯದಲ್ಲಿ ಉಲ್ಲೇಖ ಮಾಡಲ್ಪಟ್ಟ ಶ್ರುತಿಯಲ್ಲಿ ಎಂದರ್ಥ. ಪೂರ್ವಪಕ್ಷ ಹಾಗೂ ಸಿದ್ಧಾಂತಪಕ್ಷ ಸ್ಥಾಪಕವಾದ ಟೀಕೆಯಿಂದ ಸೂಚಿತವಾದ ಸಂಶಯಕೋಟಿಗಳನ್ನು 'ಅತ್ರ ಜೀವಸ್ಯ' ಇತ್ಯಾದಿ ಗ್ರಂಥದಿಂದ ಉಪಪಾದನೆ ಮಾಡುತ್ತಿದ್ದಾರೆ.

**प्रकाशः –** नित्यत्वश्रुतिः ''सोऽनादिना पुण्येन पापेन चानुबद्धः परेण निर्मुक्त आनन्त्याय कल्पत'' इति नित्यत्वश्रुतिः ।। **अनित्यत्वेति** ।। ''अन्यत्राभावाच्च'' इत्यत्र भाष्योक्त्या ''ब्रह्मँल्लयमभ्युपैतीति श्रुत्येत्यर्थः।।

ನಿತ್ಯತ್ವಶ್ರುತಿ ಎಂದರೆ 'ಸೋಽನಾದಿನಾ ಪುಣ್ಯೇನ ಪಾಪೇನ ಚಾನುಬದ್ಧಃ ಪರೇಣ ನಿರ್ಮುಕ್ತ ಆನಂತ್ಯಾಯ ಕಲ್ಪತೇ' ಎಂಬ ಶ್ರುತಿ ಎಂದರ್ಥ. ಅನಿತ್ಯತ್ವಶ್ರುತಿ ಎಂದರೆ 'ಅನ್ಯತ್ರಾಭಾವಾಚ್ಚ' ಸೂತ್ರದ ಭಾಷ್ಯದಲ್ಲಿ ಉಲ್ಲೇಖ ಮಾಡಿದ 'ಬ್ರಹ್ಮನ್‌ಲ್ಲಯಮಭ್ಯುಪೈತಿ' ಶ್ರುತಿ ಎಂದರ್ಥ.

**प्रकाशः – पूर्वाधिकरणोक्तेति** ।। ''अविनष्टा एवोत्पद्यन्त'' इति ''ज्ञोत एव'' इत्यत्रोक्तेत्यर्थः । नित्यत्वादीत्यादिपदेनानादिपुण्यपापसम्बन्धश्रुत्येत्यर्थः । भाष्यटीकाद्युक्तमधिकरणार्थं निष्कृष्य वदन् पूर्वेणापौनरुक्त्यमाह ।। **ज्ञोत इत्यत्रेति**।। टीकाक्षरार्थमाह ।। **आत्मा नित्य इति** ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे यावदधिकरणं सम्पूर्णम् ।।१९।।**

'ಜ್ಞೋತ ಏವ' ಎಂಬ ಶ್ರುತಿಯಲ್ಲಿ 'ಅವಿನಷ್ಟಾ ಏವೋತ್ಪದ್ಯಂತೇ' ಎಂಬುದಾಗಿ ಹೇಳಲಾಗಿದೆ ಎಂದರ್ಥ. ನಿತ್ಯತ್ವಾದಿ ಎಂಬಲ್ಲಿರುವ ಆದಿ ಪದದಿಂದ ಅನಾದಿಯಾದ ಪುಣ್ಯಪಾಪಸಂಬಂಧಪ್ರತಿಪಾದಕವಾದ ಶ್ರುತಿಯಿಂದ ಎಂಬುದನ್ನು ವಿವಕ್ಷಿಸಬೇಕು. ಭಾಷ್ಯ ಹಾಗೂ ಟೀಕಾದಿಗಳಲ್ಲಿ ಹೇಳಲ್ಪಟ್ಟ ಅಧಿಕರಣದ ಪ್ರಮೇಯವನ್ನು ಸಂಗ್ರಹ ಮಾಡಿ ಹಿಂದಿನ 'ಜ್ಞೋತ ಏವ' ಎಂಬುದರಿಂದ ಪುನರುಕ್ತಿಯ ಪರಿಹಾರವನ್ನು 'ಜ್ಞೋತಃ' ಇತ್ಯಾದಿ ವಾಕ್ಯದಿಂದ ಮಾಡುತ್ತಿದ್ದಾರೆ. ಟೀಕೆಯ ಅಕ್ಷರಾರ್ಥವನ್ನು 'ಆತ್ಮಾ ನಿತ್ಯಃ' ಎಂಬುದಾಗಿ ನಿರೂಪಣೆ ಮಾಡಿದ್ದಾರೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಯಾವದಧಿಕರಣವು ಮುಕ್ತಾಯವಾಯಿತು.

ಪರಿಪೂರ್ಣಚಂದ್ರಿಕಾ

# ಪುಂಸ್ತ್ವಾಧಿಕರಣ
(೨-೩-೧೬)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

॥ ಶ್ರೀಗುರುಭ್ಯೋ ನಮಃ ॥

# ಪುಂಸ್ತ್ವಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – पुंस्त्वादिवत्त्वस्य सतोऽभिव्यक्तियोगात् ।।**

ಪುರುಷ ಹಾಗೂ ಸ್ತ್ರೀಯರಿಗೆ ಮಕ್ಕಳನ್ನು ಹುಟ್ಟಿಸುವ ಶಕ್ತಿ ಮೊದಲಿನಿಂದಲೂ ಇರುತ್ತದೆ. ಆದರೆ ಕಾಲವಿಶೇಷದಲ್ಲಿ ಅಭಿವ್ಯಕ್ತವಾಗುತ್ತದೆ. ಅದರಂತೆ ಜೀವನು ಜ್ಞಾನಾನಂದಾದಿ ಗುಣಸ್ವರೂಪನಾಗಿದ್ದಾನೆ. ಇವುಗಳೇ ಮೋಕ್ಷಾವಸ್ಥೆಯಲ್ಲಿ ಅಭಿವ್ಯಕ್ತವಾಗುತ್ತವೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** तुशब्द एवार्थे **पुंस्त्वादिवत्** पुंस्त्वादेरिव पुरुषयोषिदादीनामपत्योत्पत्तिशक्तिस्वरूपत्वेऽपि कालविशेषे तदभिव्यक्तिः । तथा **सतः** जीवस्वरूपत्वेन मुक्तेः पूर्वमपि विद्यमानस्यैवा**स्य** ज्ञानानन्दादे**रभिव्यक्तियोगात्** मुक्तावभिवक्त्या निमित्तभूतया योगात् 'आनन्दीभवति' इति श्रुत्युपपत्तेः न जीवस्याऽनन्दादिरूपत्वे तच्छ्रुतिविरोध इति जीव आनन्दादिरूप एवेत्यर्थः ।।१।।

'ತು' ಶಬ್ದವು 'ಏವ' ಎಂಬರ್ಥದಲ್ಲಿದೆ. ಪುಂಸ್ತ್ವಾದಿವತ್ = ಪುರುಷ ಹಾಗೂ ಸ್ತ್ರೀಯರಿಗೆ ಮಕ್ಕಳನ್ನು ಹುಟ್ಟಿಸುವ ಶಕ್ತಿ ಬಾಲ್ಯಾವಸ್ಥೆಯಿಂದ ಇದ್ದರೂ ತಾರುಣ್ಯಾವಸ್ಥೆಯಲ್ಲಿ ಮಾತ್ರ ಅಭಿವ್ಯಕ್ತವಾಗುತ್ತದೆ. ಅದರಂತೆ ಸತಃ = ಮೋಕ್ಷಕ್ಕಿಂತ ಮೊದಲಿನ ಅವಸ್ಥೆಯಲ್ಲಿ ಜೀವಸ್ವರೂಪವಾಗಿರುತ್ತದೆ. ಅಸ್ಯ = ಜ್ಞಾನಾನಂದಾದಿ ಗುಣಗಳಿಗೆ,

ಅಭಿವ್ಯಕ್ತಿಯೋಗಾತ್ = ಮೋಕ್ಷದಲ್ಲಿ ಅಭಿವ್ಯಕ್ತಿಯಾಗುವ ಕಾರಣದಿಂದ 'ಆನಂದೀಭವತಿ' ಎಂಬ ಶ್ರುತಿಯು ಯುಕ್ತವಾಗುತ್ತದೆ. ಜೀವನು ಆನಂದಸ್ವರೂಪನಾಗಿದ್ದಾನೆನ್ನಲು ಶ್ರುತಿವಿರೋಧವು ಬರುವುದಿಲ್ಲ. ಆದ್ದರಿಂದ ಜೀವನು ಆನಂದರೂಪನೇ ಆಗಿದ್ದಾನೆಂಬುದು ಸ್ಪಷ್ಟವಾಯಿತು.

## ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् — 'विज्ञानात्मा सह देवैश्च सर्वैः' (प्र.४.११.) 'स आनन्दः स बलः स ओजः स परेणामुं लोकं नीयते स विमुच्यते' इति जीवस्य ज्ञानानन्दादिरूपत्वमुच्यते । 'स दुःखाद् विमुक्त आनन्दी भवति । सोऽज्ञानाद् विमुक्तो ज्ञानी भवति । सोऽबलाद् विमुक्तो बली भवति । स नित्यो निरातङ्कोऽवतिष्ठते' इति पैङ्गिश्रुतावनानन्दादिरूपत्वं प्रतीयते ।**

ಅನುವಾದ - 'ವಿಜ್ಞಾನಸ್ವರೂಪನಾದ ಜೀವನು ಎಲ್ಲ ದೇವತೆಗಳಿಂದ ಕೂಡಿಕೊಂಡು' ಎಂಬ ಶ್ರುತಿಯಲ್ಲಿ ಮತ್ತು ಜೀವನು ಆನಂದನು ಬಲರೂಪವುಳ್ಳವನು ಅಂತರಂಗಶಕ್ತಿಯುಳ್ಳವನು ಆಗಿರುತ್ತಾನೆ. ಇವನು ಪರಮಾತ್ಮನಿಂದ ಪರಲೋಕಕ್ಕೆ ಕೊಂಡೊಯ್ಯಲ್ಪಡುತ್ತಾನೆ. ಅನಂತರ ಮೋಕ್ಷಕ್ಕೆ ತೆರಳುತ್ತಾನೆ. ಹೀಗೆ ಶ್ರುತಿಯು ಜೀವನಿಗೆ ಜ್ಞಾನಾನಂದಾದಿರೂಪವನ್ನು ಹೇಳುತ್ತಿದೆ.

ಆದರೆ ದುಃಖದಿಂದ ವಿಮುಕ್ತನಾಗಿ ಆನಂದವನ್ನು ಪಡೆಯುತ್ತಾನೆ. ಅಜ್ಞಾನದಿಂದ ಮುಕ್ತನಾಗಿ ಜ್ಞಾನವನ್ನು ಪಡೆಯುತ್ತಾನೆ. ಅಸಾಮರ್ಥ್ಯದಿಂದ ಮುಕ್ತನಾಗಿ ಸಾಮರ್ಥ್ಯವನ್ನು ಪಡೆಯುತ್ತಾನೆ. ಅಂಥ ಜೀವನು ನಿತ್ಯನು ನಿರಾತಂಕನೂ ಆಗಿ ನಿಲ್ಲುತ್ತಾನೆ. ಹೀಗೆ ಪೈಂಗಿಶ್ರುತಿಯಲ್ಲಿ ಸಂಸಾರಾವಸ್ಥೆಯಲ್ಲಿ ಅನಾನಂದರೂಪತ್ವವನ್ನು ಹೇಳಲಾಗಿದೆ.

ಪ್ರತಿಪದಾರ್ಥ -- ವಿಜ್ಞಾನಾತ್ಮಾ = ವಿಜ್ಞಾನಸ್ವರೂಪನಾದ, ಸರ್ವೈಃ ದೇವೈಃ ಸಹ = ಎಲ್ಲಾ ದೇವತೆಗಳಿಂದ ಕೂಡಿಕೊಂಡು ಎಂಬ ಶ್ರುತಿಯಲ್ಲಿ ಮತ್ತು ಸಃ = ಜೀವನು, ಆನಂದಃ = ಆನಂದಸ್ವರೂಪನು, ಸಃ = ಜೀವನು, ಬಲಃ = ಬಲಸ್ವರೂಪನು, ಸಃ = ಆ ಜೀವನು, ಓಜಃ = ಅಂತರಂಗಶಕ್ತಿಯುಳ್ಳವನು, ಪರೇಣ = ಪರಮಾತ್ಮನಿಂದ, ಅಮುಂ ಲೋಕಂ = ಪರಲೋಕಕ್ಕೆ, ನಿಯತೇ = ಕೊಂಡೊಯ್ಯಲ್ಪಡುತ್ತಾನೆ. ಸಃ = ಜೀವನು, ವಿಮುಚ್ಯತೇ = ಮುಕ್ತನಾಗುತ್ತಾನೆ. ಇತಿ = ಹೀಗೆ, ಜೀವಸ್ಯ = ಜೀವನಿಗೆ, ಜ್ಞಾನಾನಂದಾದಿರೂಪತ್ವಮ್ = ಜ್ಞಾನ ಆನಂದ ಮೊದಲಾದ ರೂಪಗಳನ್ನು, ಉಚ್ಯತೇ = ಹೇಳಲಾಗಿದೆ.

ಆದರೆ ಸಃ = ಜೀವನು, ದುಃಖಾತ್ = ದುಃಖದಿಂದ, ವಿಮುಕ್ತಃ = ಮುಕ್ತನಾಗಿ, ಆನಂದೀ = ಆನಂದವನ್ನು, ಭವತಿ = ಆಗುತ್ತಾನೆ. ಸಃ = ಜೀವನು, ಅಜ್ಞಾನಾತ್ = ಅಜ್ಞಾನದಿಂದ, ವಿಮುಕ್ತಃ = ಮುಕ್ತನಾಗಿ, ಜ್ಞಾನೀಭವತಿ = ಜ್ಞಾನವನ್ನು ಪಡೆಯುತ್ತಾನೆ. ಸಃ = ಆ ಜೀವನು, ಅಬಲಾತ್ = ಅಸಾಮರ್ಥ್ಯದಿಂದ, ವಿಮುಕ್ತಃ = ವಿಮುಕ್ತನಾಗಿ, ಬಲೀಭವತಿ = ಸಾಮರ್ಥ್ಯವನ್ನು ಪಡೆಯುತ್ತಾನೆ. ಸಃ = ಜೀವನು, ನಿತ್ಯಃ = ನಿತ್ಯನು, ನಿರಾತಂಕಃ

= ಭಯವಿಲ್ಲದವನಾಗಿ, ಅವತಿಷ್ಠತೇ = ಇರುತ್ತಾನೆ. ಇತಿ = ಹೀಗೆ, ಪೈಂಗಿಶ್ರುತಿಃ = ಪೈಂಗಿಶ್ರುತಿಯು, ಅನಾನಂದಾದಿರೂಪತ್ವಮ್ = ಸಂಸಾರಾವಸ್ಥೆಯಲ್ಲಿ ಆನಂದಸ್ವರೂಪ ಇಲ್ಲದಿರುವಿಕೆಯನ್ನು ಹೇಳುವುದು, ಪ್ರತೀಯತೇ = ತಿಳಿಯುತ್ತಿದೆ.

**भाष्यम् — अत आह —**

**।। पुंस्त्वादिवत्त्वस्य सतोऽभिव्यक्तियोगात् ।।१।।**

**यथा बालस्य सदेव पुंस्त्वं यौवनेऽभिव्यज्यते, एवं सतामेवाऽनन्दादीनां व्यक्त्यपेक्षया तदुक्तिः ।**

ಅನುವಾದ - ಮೇಲಿನ ಶ್ರುತಿವಿರೋಧವನ್ನು ಸೂತ್ರಕಾರರು ಪರಿಹರಿಸುತ್ತಿದ್ದಾರೆ. ಯಾವ ರೀತಿಯಾಗಿ ಬಾಲಕನಿಗೆ ಮೊದಲೇ ಇದ್ದ ಪುಂಸ್ತ್ವಶಕ್ತಿಯು ಯೌವನದಲ್ಲಿ ಅಭಿವ್ಯಕ್ತವಾಗುತ್ತದೋ ಅದೇ ರೀತಿಯಾಗಿ ಮೊದಲೇ ಆನಂದಾದಿಗಳು ಇದ್ದರೂ ಮೋಕ್ಷದಲ್ಲಿ ಅಭಿವ್ಯಕ್ತವಾಗುತ್ತದೆ. ಈ ದೃಷ್ಟಿಯಿಂದ ಶ್ರುತಿಗಳ ವಿರೋಧವನ್ನು ಪರಿಹರಿಸಬೇಕು.

ಪ್ರತಿಪದಾರ್ಥ -- ಅತಃ = ಮೇಲಿನ ಶ್ರುತಿವಿರೋಧ ಪರಿಹಾರಕ್ಕಾಗಿ, ಆಹ = ಸೂತ್ರಕಾರರು ಹೇಳುತ್ತಿದ್ದಾರೆ -

ಯಥಾ = ಯಾವ ರೀತಿಯಾಗಿ, ಬಾಲಸ್ಯ = ಬಾಲಕನಿಗೆ, ಪುಂಸ್ತ್ವಂ = ಪುಂಸ್ತ್ವವು, ಸದೇವ = ಇದ್ದರೂ, ಯೌವನೇ = ಯೌವನಾವಸ್ಥೆಯಲ್ಲಿ, ಅಭಿವ್ಯಜ್ಯತೇ = ಅಭಿವ್ಯಕ್ತವಾಗುತ್ತದೋ. ಏವಂ = ಅದೇ ರೀತಿಯಾಗಿ, ಸತಾಂ ಏವ = ಮೊದಲೇ ಇರುವಂಥ, ಆನಂದಾದೀನಾಂ = ಆನಂದ ಮೊದಲಾದವುಗಳು, ವ್ಯಕ್ತ್ಯಪೇಕ್ಷಯಾ = ಮೋಕ್ಷದಲ್ಲಿ ಅಭಿವ್ಯಕ್ತಿಯ ದೃಷ್ಟಿಯಿಂದ, ತದುಕ್ತಿಃ = ಶ್ರುತಿಯಲ್ಲಿ ಮೊದಲು ಆನಂದಾದಿರೂಪವನ್ನು ಹೇಳಲಾಗಿದೆ.

**भाष्यम् —**

**'बलमानन्द ओजश्च सहो ज्ञानमनाकुलम् ।**
**स्वरूपाण्येव जीवस्य व्यज्यन्ते परमाद् विभोः ।।'**

**इति गौपवनश्रुतिः ।।१।।**

ಅನುವಾದ - ಬಲ, ಆನಂದ, ಪರಾಕ್ರಮಶಕ್ತಿ, ಸಹನೆ, ಸಂಶಯಜ್ಞಾನದ ಇಲ್ಲದಿರುವಿಕೆ, ಜ್ಞಾನ ಇವುಗಳೆಲ್ಲವೂ ಜೀವನ ಸ್ವರೂಪವೇ ಆಗಿವೆ. ಪರಮಾತ್ಮನಿಂದ ಇವೆಲ್ಲವೂ ಅಭಿವ್ಯಕ್ತವಾಗುತ್ತವೆ. ಹೀಗೆ ಗೌಪವನಶ್ರುತಿಯು ಹೇಳುತ್ತಿದೆ.

ಪ್ರತಿಪದಾರ್ಥ - ಬಲಮ್ = ಬಲವು, ಆನಂದ = ಆನಂದವು, ಚ = ಮತ್ತು, ಓಜಃ = ಪರಾಕ್ರಮ ಶಕ್ತಿಯು, ಸಹೋ = ಸಹನೆಯು, ಜ್ಞಾನಮ್ = ಜ್ಞಾನವು, ಅನಾಕುಲಂ = ಸಂಶಯವಿಲ್ಲದ, ಜ್ಞಾನಂ = ಜ್ಞಾನವು ಇವೆಲ್ಲವೂ, ಜೀವಸ್ಯ = ಜೀವನ, ಸ್ವರೂಪಾಣ್ಯೇವ = ಸ್ವರೂಪವೇ ಆಗಿವೆ. ವಿಭೋಃ = ಸ್ವಾಮಿಯಾದ, ಪರಮಾತ್ = ಪರಮಾತ್ಮನಿಂದ, ವ್ಯಜ್ಯಂತೇ = ಅಭಿವ್ಯಕ್ತವಾಗುತ್ತವೆ. ಇತಿ = ಹೀಗೆ, ಗೌಪನಶ್ರುತಿಃ = ಗೌಪವನಶ್ರುತಿಯಲ್ಲಿ ಹೇಳಿದೆ.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**तत्वप्रकाशिका – अत्रेश्वरे श्रुतिसमन्वयसिद्ध्यर्थं जीवस्वरूपविषयश्रुतिविरोधपरिहारादस्ति शास्त्रादिसङ्गतिः । परमेश्वरे श्रुतिसमन्वय उक्तः । जीवस्य ज्ञानाद्यात्मकत्वाभिधायकश्रुतेः श्रुत्यन्तरविरोधेनाप्रामाण्ये तदनुपपत्तेरवश्यं निरसनीय एव । प्रकृतो जीव एव विषयः । ज्ञानदिरूपो न वेति सन्देहः ।**

ಈ ಅಧಿಕರಣದಲ್ಲಿ ಈಶ್ವರನಲ್ಲಿ ಶ್ರುತಿಸಮನ್ವಯವು ಸಿದ್ಧವಾಗುವುದಕ್ಕಾಗಿ ಜೀವಸ್ವರೂಪವಿಷಯಕವಾದ ಶ್ರುತಿವಿರೋಧವನ್ನು ಪರಿಹಾರ ಮಾಡಲಾಗಿದೆ. ಆದ್ದರಿಂದ ಶಾಸ್ತ್ರ-ಅಧ್ಯಾಯ-ಪಾದ ಸಂಗತಿಗಳು ಇರುತ್ತವೆ.

ಈಶ್ವರನಲ್ಲಿ ಶ್ರುತಿಸಮನ್ವಯವನ್ನು ಹಿಂದೆ ಹೇಳಲಾಯಿತು. ಜೀವನು ಜ್ಞಾನ, ಆನಂದ ಮೊದಲಾದ ಸ್ವರೂಪವುಳ್ಳವನಾಗಿದ್ದಾನೆ ಎಂಬುದಾಗಿ ಹೇಳುವ ಶ್ರುತಿಗೆ ಬೇರೊಂದು ಶ್ರುತಿಯಿಂದ ವಿರೋಧವು ಪ್ರಾಪ್ತವಾದಾಗ ಅಪ್ರಾಮಾಣ್ಯವು ಬರುತ್ತದೆ. ಆದ್ದರಿಂದ ಈ ಅನುಪಪತ್ತಿಯನ್ನು ಅವಶ್ಯವಾಗಿ ಪರಿಹಾರ ಮಾಡಲೇಬೇಕು.

ಪ್ರಕೃತನಾದ ಜೀವನೇ ಅಧಿಕರಣದ ವಿಷಯ. ಜ್ಞಾನಾದಿರೂಪನೋ, ಅಲ್ಲವೋ? ಎಂಬುದು ಅಧಿಕರಣದ ಸಂದೇಹ.

ವಿವರಣೆ - 'ತದ್ಗುಣಸಾರತ್ವಾತ್' (2-3-29) ಎಂಬ ಸೂತ್ರದಲ್ಲಿ ಜೀವನು ಜ್ಞಾನಾನಂದಾತ್ಮಕನಾಗಿದ್ದಾನೆಂದು ಹೇಳಲಾಯಿತು. ಜೀವನು ಜ್ಞಾನಾನಂದಾತ್ಮಕನಾಗಿರುವುದರಿಂದಲೇ ಸಂಸಾರ-ಬಂಧನದಿಂದ ಬಿಡುಗಡೆಯನ್ನು ಅಪೇಕ್ಷಿಸಬೇಕೆಂಬ ಉಪದೇಶದ ಬಗ್ಗೆ ಹಿಂದಿನ ಪೃಥಗುಪದೇಶಾಧಿಕರಣದಲ್ಲಿ ಸಮರ್ಥಿಸಲಾಯಿತು. ಇಂತಹ ಜೀವ ಜ್ಞಾನಾನಂದಾತ್ಮಕನಾಗಿದ್ದಾನೆಂಬ ವಿಷಯದಲ್ಲಿ ವಿರೋಧವಿರುವ ಶ್ರುತಿಗಳನ್ನು ಇಲ್ಲಿ ಉಲ್ಲೇಖ ಮಾಡಿ ವಿರೋಧ ಪರಿಹಾರ ಮಾಡುತ್ತಿದ್ದಾರೆ. ಹೀಗೆ ಈ ಅಧಿಕರಣಕ್ಕೆ ಆನಂತರ್ಯ ಸಂಗತಿಯು ಇರುತ್ತದೆ.

**तत्वप्रकाशिका – सन्देहबीजं श्रुतिविगानं दर्शयति – विज्ञानात्मेति ।। अनानन्दादिरूपत्वं आनन्दादिरूपत्वाभावः । न जीवो ज्ञानादिरूप इति पूर्वः पक्षः। तथा श्रुतेः । न च युक्तमस्ति विपरीताऽपि श्रुतिः । न चासावीश्वरविषया 'प्राणा भूतानि सम्प्रतिष्ठन्ति यत्र स परेणामुं लोकम्' इति श्रुतिविरोधादिति ।**

= ಭಯವಿಲ್ಲದವನಾಗಿ, ಅವತಿಷ್ಠತೇ = ಇರುತ್ತಾನೆ. ಇತಿ = ಹೀಗೆ, ಪೈಂಗಿಶ್ರುತಿಃ = ಪೈಂಗಿಶ್ರುತಿಯು, ಅನಾನಂದಾದಿರೂಪತ್ವಮ್ = ಸಂಸಾರಾವಸ್ಥೆಯಲ್ಲಿ ಆನಂದಸ್ವರೂಪ ಇಲ್ಲದಿರುವಿಕೆಯನ್ನು ಹೇಳುವುದು, ಪ್ರತೀಯತೇ = ತಿಳಿಯುತ್ತಿದೆ.

भाष्यम् — अत आह —

**।। पुंस्त्वादिवत्त्वस्य सतोऽभिव्यक्तियोगात् ।।१।।**

**यथा बालस्य सदेव पुंस्त्वं यौवनेऽभिव्यज्यते, एवं सतामेवाऽनन्दादीनां व्यक्त्यपेक्षया तदुक्तिः ।**

ಅನುವಾದ - ಮೇಲಿನ ಶ್ರುತಿವಿರೋಧವನ್ನು ಸೂತ್ರಕಾರರು ಪರಿಹರಿಸುತ್ತಿದ್ದಾರೆ. ಯಾವ ರೀತಿಯಾಗಿ ಬಾಲಕನಿಗೆ ಮೊದಲೇ ಇದ್ದ ಪುಂಸ್ತ್ವಶಕ್ತಿಯು ಯೌವನದಲ್ಲಿ ಅಭಿವ್ಯಕ್ತವಾಗುತ್ತದೋ ಅದೇ ರೀತಿಯಾಗಿ ಮೊದಲೇ ಆನಂದಾದಿಗಳು ಇದ್ದರೂ ಮೋಕ್ಷದಲ್ಲಿ ಅಭಿವ್ಯಕ್ತವಾಗುತ್ತದೆ. ಈ ದೃಷ್ಟಿಯಿಂದ ಶ್ರುತಿಗಳ ವಿರೋಧವನ್ನು ಪರಿಹರಿಸಬೇಕು.

ಪ್ರತಿಪದಾರ್ಥ -- ಅತಃ = ಮೇಲಿನ ಶ್ರುತಿವಿರೋಧ ಪರಿಹಾರಕ್ಕಾಗಿ, ಆಹ = ಸೂತ್ರಕಾರರು ಹೇಳುತ್ತಿದ್ದಾರೆ -

ಯಥಾ = ಯಾವ ರೀತಿಯಾಗಿ, ಬಾಲಸ್ಯ = ಬಾಲಕನಿಗೆ, ಪುಂಸ್ತ್ವಂ = ಪುಂಸ್ತ್ವವು, ಸದೇವ = ಇದ್ದರೂ, ಯೌವನೇ = ಯೌವನಾವಸ್ಥೆಯಲ್ಲಿ, ಅಭಿವ್ಯಜ್ಯತೇ = ಅಭಿವ್ಯಕ್ತವಾಗುತ್ತದೋ. ಏವಂ = ಅದೇ ರೀತಿಯಾಗಿ, ಸತಾಂ ಏವ = ಮೊದಲೇ ಇರುವಂಥ, ಆನಂದಾದೀನಾಂ = ಆನಂದ ಮೊದಲಾದವುಗಳು, ವ್ಯಕ್ತ್ಯಪೇಕ್ಷಯಾ = ಮೋಕ್ಷದಲ್ಲಿ ಅಭಿವ್ಯಕ್ತಿಯ ದೃಷ್ಟಿಯಿಂದ, ತದುಕ್ತಿಃ = ಶ್ರುತಿಯಲ್ಲಿ ಮೊದಲು ಆನಂದಾದಿರೂಪವನ್ನು ಹೇಳಲಾಗಿದೆ.

भाष्यम् —

**'बलमानन्द ओजश्च सहो ज्ञानमनाकुलम् ।**
**स्वरूपाण्येव जीवस्य व्यज्यन्ते परमाद् विभोः ।।'**

**इति गौपवनश्रुतिः ।।१।।**

ಅನುವಾದ - ಬಲ, ಆನಂದ, ಪರಾಕ್ರಮಶಕ್ತಿ, ಸಹನೆ, ಸಂಶಯಜ್ಞಾನದ ಇಲ್ಲದಿರುವಿಕೆ, ಜ್ಞಾನ ಇವುಗಳೆಲ್ಲವೂ ಜೀವನ ಸ್ವರೂಪವೇ ಆಗಿವೆ. ಪರಮಾತ್ಮನಿಂದ ಇವೆಲ್ಲವೂ ಅಭಿವ್ಯಕ್ತವಾಗುತ್ತವೆ. ಹೀಗೆ ಗೌಪವನಶ್ರುತಿಯು ಹೇಳುತ್ತಿದೆ.

ಪ್ರತಿಪದಾರ್ಥ - ಬಲಮ್ = ಬಲವು, ಆನಂದ = ಆನಂದವು, ಚ = ಮತ್ತು, ಓಜಃ = ಪರಾಕ್ರಮ ಶಕ್ತಿಯು, ಸಹೋ = ಸಹನೆಯು, ಜ್ಞಾನಮ್ = ಜ್ಞಾನವು, ಅನಾಕುಲಂ = ಸಂಶಯವಿಲ್ಲದ, ಜ್ಞಾನಂ = ಜ್ಞಾನವು ಇವೆಲ್ಲವೂ, ಜೀವಸ್ಯ = ಜೀವನ, ಸ್ವರೂಪಾಣ್ಯೇವ = ಸ್ವರೂಪವೇ ಆಗಿವೆ. ವಿಭೋಃ = ಸ್ವಾಮಿಯಾದ, ಪರಮಾತ್ = ಪರಮಾತ್ಮನಿಂದ, ವ್ಯಜ್ಯಂತೇ = ಅಭಿವ್ಯಕ್ತವಾಗುತ್ತವೆ. ಇತಿ = ಹೀಗೆ, ಗೌಪನಶ್ರುತಿಃ = ಗೌಪವನಶ್ರುತಿಯಲ್ಲಿ ಹೇಳಿದೆ.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**तत्वप्रकाशिका – अत्रेश्वरे श्रुतिसमन्वयसिद्ध्यर्थं जीवस्वरूपविषय-श्रुतिविरोधपरिहारादस्ति शास्त्रादिसङ्गतिः । परमेश्वरे श्रुतिसमन्वय उक्तः । जीवस्य ज्ञानाद्यात्मकत्वाभिधायकश्रुतेः श्रुत्यन्तरविरोधेनाप्रामाण्ये तदनुपपत्तेरवश्यं निरसनीय एव । प्रकृतो जीव एव विषयः । ज्ञानदिरूपो न वेति सन्देहः ।**

ಈ ಅಧಿಕರಣದಲ್ಲಿ ಈಶ್ವರನಲ್ಲಿ ಶ್ರುತಿಸಮನ್ವಯವು ಸಿದ್ಧವಾಗುವುದಕ್ಕಾಗಿ ಜೀವಸ್ವರೂಪ-ವಿಷಯಕವಾದ ಶ್ರುತಿವಿರೋಧವನ್ನು ಪರಿಹಾರ ಮಾಡಲಾಗಿದೆ. ಆದ್ದರಿಂದ ಶಾಸ್ತ್ರ-ಅಧ್ಯಾಯ-ಪಾದ ಸಂಗತಿಗಳು ಇರುತ್ತವೆ.

ಈಶ್ವರನಲ್ಲಿ ಶ್ರುತಿಸಮನ್ವಯವನ್ನು ಹಿಂದೆ ಹೇಳಲಾಯಿತು. ಜೀವನು ಜ್ಞಾನ, ಆನಂದ ಮೊದಲಾದ ಸ್ವರೂಪವುಳ್ಳವನಾಗಿದ್ದಾನೆ ಎಂಬುದಾಗಿ ಹೇಳುವ ಶ್ರುತಿಗೆ ಬೇರೊಂದು ಶ್ರುತಿಯಿಂದ ವಿರೋಧವು ಪ್ರಾಪ್ತವಾದಾಗ ಅಪ್ರಾಮಾಣ್ಯವು ಬರುತ್ತದೆ. ಆದ್ದರಿಂದ ಈ ಅನುಪಪತ್ತಿಯನ್ನು ಅವಶ್ಯವಾಗಿ ಪರಿಹಾರ ಮಾಡಲೇಬೇಕು.

ಪ್ರಕೃತನಾದ ಜೀವನೇ ಅಧಿಕರಣದ ವಿಷಯ. ಜ್ಞಾನಾದಿರೂಪನೋ, ಅಲ್ಲವೋ? ಎಂಬುದು ಅಧಿಕರಣದ ಸಂದೇಹ.

ವಿವರಣೆ - 'ತದ್ಗುಣಸಾರತ್ವಾತ್' (2-3-29) ಎಂಬ ಸೂತ್ರದಲ್ಲಿ ಜೀವನು ಜ್ಞಾನಾನಂದಾತ್ಮಕ-ನಾಗಿದ್ದಾನೆಂದು ಹೇಳಲಾಯಿತು. ಜೀವನು ಜ್ಞಾನಾನಂದಾತ್ಮಕನಾಗಿರುವುದರಿಂದಲೇ ಸಂಸಾರ-ಬಂಧನದಿಂದ ಬಿಡುಗಡೆಯನ್ನು ಅಪೇಕ್ಷಿಸಬೇಕೆಂಬ ಉಪದೇಶದ ಬಗ್ಗೆ ಹಿಂದಿನ ಪೃಥಗುಪದೇಶಾಧಿ-ಕರಣದಲ್ಲಿ ಸಮರ್ಥಿಸಲಾಯಿತು. ಇಂತಹ ಜೀವ ಜ್ಞಾನಾನಂದಾತ್ಮಕನಾಗಿದ್ದಾನೆಂಬ ವಿಷಯದಲ್ಲಿ ವಿರೋಧವಿರುವ ಶ್ರುತಿಗಳನ್ನು ಇಲ್ಲಿ ಉಲ್ಲೇಖ ಮಾಡಿ ವಿರೋಧ ಪರಿಹಾರ ಮಾಡುತ್ತಿದ್ದಾರೆ. ಹೀಗೆ ಈ ಅಧಿಕರಣಕ್ಕೆ ಆನಂತರ್ಯ ಸಂಗತಿಯು ಇರುತ್ತದೆ.

**तत्वप्रकाशिका – सन्देहबीजं श्रुतिविगानं दर्शयति – विज्ञानात्मेति ।। अनानन्दादिरूपत्वं आनन्दादिरूपत्वाभावः । न जीवो ज्ञानादिरूप इति पूर्वः पक्षः। तथा श्रुतेः । न च युक्तमस्ति विपरीताऽपि श्रुतिः । न चासावीश्वरविषया 'प्राणा भूतानि सम्प्रतिष्ठन्ति यत्र स परेणामुं लोकम्' इति श्रुतिविरोधादिति ।**

ಸಂದೇಹಕ್ಕೆ ಕಾರಣವಾದ ಶ್ರುತಿಗಳ ಪರಸ್ಪರ ವಿರೋಧವನ್ನು ಭಾಷ್ಯದಲ್ಲಿ 'ವಿಜ್ಞಾನಾತ್ಮಾ' ಇತ್ಯಾದಿಯಾಗಿ ಉಲ್ಲೇಖ ಮಾಡುತ್ತಿದ್ದಾರೆ.

ಭಾಷ್ಯದಲ್ಲಿರುವ 'ಅನಾನಂದಾದಿರೂಪತ್ವಂ' ಎಂಬುದಕ್ಕೆ 'ಆನಂದಾದಿರೂಪತ್ವಾಭಾವ' ಎಂದರ್ಥ. ಜೀವನು ಜ್ಞಾನಾನಂದಾದಿರೂಪನು ಅಲ್ಲವೆಂದು ಪೂರ್ವಪಕ್ಷ. ಈ ವಿಷಯದಲ್ಲಿ ಶ್ರುತಿಗಳು ಪ್ರಮಾಣವಾಗಿವೆ. ಇದಕ್ಕೆ ವಿಪರೀತವಾಗಿ ಹೇಳುವ ಶ್ರುತಿಯು ಇದೆ.

ಈ ಶ್ರುತಿಯು ಈಶ್ವರ ವಿಷಯಕವಾಗಿದೆ ಎಂದು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಹಾಗೆ ಹೇಳಿದರೆ ಇದೇ ಶ್ರುತಿಯಲ್ಲಿ 'ಪ್ರಾಣಾ ಭೂತಾನಿ ಸಂಪ್ರತಿಷ್ಠಂತಿ ಯತ್ರ ಸ ಪರೇಣಾಮುಂ ಲೋಕಮ್' ಎಂಬ ಶ್ರುತಿಯ ವಿರೋಧವು ಬರುತ್ತದೆ.

ವಿವರಣೆ - ಷಟ್ಪ್ರಶ್ನೋಪನಿಷತ್ತಿನಲ್ಲಿ ಜೀವನನ್ನು ವಿಜ್ಞಾನಸ್ವರೂಪನೆಂದು ಹೇಳಲಾಗಿದೆ. ಆದರೆ 'ಸ ದುಃಖಾತ್' ಇತ್ಯಾದಿ ಶ್ರುತಿಯು ಅವನು ಜ್ಞಾನಾನಂದಾತ್ಮಕನಲ್ಲ ಮೋಕ್ಷದಲ್ಲಿ ಅವನು ಆನಂದವನ್ನು ಪಡೆಯುತ್ತಾನೆಂಬುದಾಗಿ ಹೇಳುತ್ತಿದೆ. ಹೀಗೆ ಪರಸ್ಪರ ವಿರುದ್ಧವಾದ ಶ್ರುತಿಗಳೇ ಸಂದೇಹಕ್ಕೆ ಕಾರಣವಾಗಿವೆ.

ಜೀವನು ಜ್ಞಾನಾನಂದಾದಿರೂಪನಲ್ಲ ಎಂಬ ಪೂರ್ವಪಕ್ಷವನ್ನು ಇಲ್ಲಿ ತಿಳಿಯಬೇಕು. ಪೂರ್ವಪಕ್ಷಕ್ಕೆ ವಿರುದ್ಧವಾಗಿ ಜ್ಞಾನಾನಂದಾದಿರೂಪತ್ವವನ್ನು ಹೇಳುವ ಷಟ್ಪ್ರಶ್ನೋಪನಿಷತ್ತು ಈಶ್ವರವಿಷಯಕವಾಗಲು ಸಾಧ್ಯವಿಲ್ಲ. ಏಕೆಂದರೆ 'ಪ್ರಾಣಾ ಭೂತಾನಿ ಸಂಪ್ರತಿಷ್ಠಂತಿ' ಎಂಬುದಾಗಿ ವಿಜ್ಞಾನಾತ್ಮನು ಅಕ್ಷರನನ್ನು ಆಶ್ರಯಿಸುತ್ತಾನೆ ಮತ್ತು ಆ ಜೀವಾತ್ಮನು ಪರಮಾತ್ಮನಿಂದ ಪರಲೋಕಕ್ಕೆ ಕರೆದೊಯ್ಯಲ್ಪಡುತ್ತಾನೆ ಎಂದು ಹೇಳಲಾಗಿದೆ. ಆದ್ದರಿಂದ ಪರಸ್ಪರ ವಿರೋಧವು ಬರುತ್ತದೆ.

**तत्वप्रकाशिका – अनानन्ददिरूपत्वश्रुतेः सयुक्तिकत्वात् । न ज्ञानन्दादिरूपत्वमात्मनोऽनुभूयते । न च प्रतिबन्धकाद्विद्यमानाप्यानन्दादिरूपता नानुभूयत इति वाच्यम् । जीवस्याहमिति नित्याभिव्यक्तत्वेन तत्स्वरूपभूतानां व्यवधानस्यैवानुपपत्तेः ।**

ಜೀವನು ಆನಂದರೂಪನಲ್ಲ ಎಂದು ಹೇಳುವ ಶ್ರುತಿಯು ಯುಕ್ತಿಯುಕ್ತವಾದ್ದರಿಂದ ಆನಂದರೂಪನೆಂದು ಹೇಳುವ ಶ್ರುತಿಗೆ ಅಪ್ರಾಮಾಣ್ಯವನ್ನು ಹೇಳಬೇಕು. ಮತ್ತು ಜೀವನಿಗೆ ತಾನು ಆನಂದರೂಪ, ಜ್ಞಾನರೂಪ ಎಂಬ ಅನುಭವವೂ ಕೂಡ ಬರುತ್ತಿಲ್ಲ.

ಪ್ರತಿಬಂಧಕವಿರುವುದರಿಂದ ತಾನು ಆನಂದರೂಪನೆಂಬ ಅನುಭವವು ಬರುತ್ತಿಲ್ಲ. ಹೀಗೆ ಹೇಳಬಹುದಲ್ಲವೇ?

ಇದು ತಪ್ಪು. ಜೀವನಿಗೆ 'ಅಹಂ' ಎಂಬುದಾಗಿ ನಿರಂತರ ಜ್ಞಾನವು ಇದ್ದೇ ಇರುತ್ತದೆ. ಹೀಗೆ ನಿತ್ಯ ಅಭಿವ್ಯಕ್ತನಾದ ಜೀವನಿಗೆ ಅವನ ಸ್ವರೂಪವೇ ಆದ ಜ್ಞಾನ, ಆನಂದಗಳು ಅನುಭವಕ್ಕೆ ಬರಲು ಯಾವುದೇ ವ್ಯವಧಾನವು ಕೂಡುವುದೇ ಇಲ್ಲ.

**तत्वप्रकाशिका – आनन्दादिरूपत्वे च जीवस्य न केनचिन्मोक्षाय प्रयतितव्यम् । अत्रावरणादननुभवो मोक्षे त्वभिव्यक्तेरनुभव इति वदन् प्रष्टव्यः । किमावरणमानन्दादीनामज्ञानं शरीरादि वा । नाद्यः । तस्यैवानुपपत्तेरुक्तत्वात् । न द्वितीयः । वैपरीत्यात् । अत एव मोक्षेऽभिव्यक्तिरित्ययुक्तम् ।**

ಮತ್ತು ಜೀವನು ಆನಂದಾದಿಸ್ವರೂಪದವನಾದರೆ ಮೋಕ್ಷಕ್ಕಾಗಿ ಯಾವೊಬ್ಬ ಜೀವನೂ ಕೂಡ ಪ್ರಯತ್ನವನ್ನೇ ಮಾಡದಿರಬೇಕಾಗುತ್ತದೆ.

ಆನಂದಾದಿಗಳ ಅನುಭವವು ಬಾರದಂತೆ ಆವರಣವಿರುತ್ತದೆ. ಮೋಕ್ಷದಲ್ಲಿ ಈ ಆವರಣವು ನಾಶವಾದ್ದರಿಂದ ಇರುವ ಆನಂದವೇ ಅಭಿವ್ಯಕ್ತವಾಗುತ್ತದೆಂದು ಹೇಳುವವನನ್ನು ಕುರಿತು ಪ್ರಶ್ನಿಸುತ್ತೇವೆ? ಆನಂದಾದಿಗಳಿಗೆ ಅಜ್ಞಾನವು ಆವರಣವೋ? ಶರೀರಾದಿಗಳು ಆವರಣವೋ? ಎಂದು. ಮೊದಲನೇ ಪಕ್ಷ ತಪ್ಪು. ಅಜ್ಞಾನವು ಆವರಣವಾಗುತ್ತದೆಂಬ ಪಕ್ಷದಲ್ಲಿರುವ ಅನುಪಪತ್ತಿಯನ್ನು ಈ ಹಿಂದೆಯೇ ಹೇಳಿದ್ದಾಗಿದೆ. ಎರಡನೇ ಪಕ್ಷವೂ ಕೂಡ ತಪ್ಪು. ಆನಂದಾದಿಗಳ ಅನುಭವಕ್ಕೆ ಶರೀರವೇ ಕಾರಣವಾಗಿದೆ. ಅಂತಹ ಶರೀರವನ್ನೇ ಪ್ರತಿಬಂಧವೆಂದು ಹೇಳುವುದು ವಿಪರೀತವಾಗುತ್ತದೆ. ಆದ್ದರಿಂದ ಮೋಕ್ಷದಲ್ಲಿ ಆನಂದವೂ ಕೂಡ ಅಭಿವ್ಯಕ್ತವಾಗುತ್ತದೆಂಬುದೂ ಕೂಡ ಅಯುಕ್ತವಾಯಿತು.

ವಿವರಣೆ - ಸಂಸಾರಾವಸ್ಥೆಯಲ್ಲಿ ಇರುವ ಆನಂದವು ಅನುಭವಕ್ಕೆ ಬರುವುದಿಲ್ಲ. ಮೋಕ್ಷಾವಸ್ಥೆಯಲ್ಲಿ ಇರುವ ಆನಂದವೇ ಅನುಭವಕ್ಕೆ ಬರುತ್ತದೆಂದು ಹೇಳಬೇಕು. ಇದಕ್ಕೆ ಕಾರಣವೇನು? ಎಂದು ಪ್ರಶ್ನಿಸಿದಾಗ ಸಂಸಾರಾವಸ್ಥೆಯಲ್ಲಿ ಇರುವ ಆನಂದದ ಅಭಿವ್ಯಕ್ತಿಗೆ ಅಜ್ಞಾನವು ಆವರಣವಾಗಿದೆ ಎಂದು ಹೇಳಬೇಕು. ಜ್ಞಾನಸ್ವರೂಪನಾದ ಜೀವನಿಗೆ ಅಜ್ಞಾನವು ಆವರಣವಾಗಲು ಹೇಗೆ ಸಾಧ್ಯ ? ಇನ್ನು ಶರೀರಾದಿಗಳನ್ನು ಕೂಡ ಆವರಣವೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಶರೀರಾದಿಗಳು ಆನಂದದ ಅನುಭವಕ್ಕೆ ಅನುಕೂಲವೇ ಹೊರತು ಪ್ರತಿಕೂಲವಲ್ಲ.

**तत्वप्रकाशिका – तदेवं सयुक्तिकश्रुतिविरोधादप्रमाणमेवान्या श्रुतिरतो नेश्वरे श्रुतिसमन्वयो युक्त इति प्राप्ते सिद्धान्तयत्सूत्रमवतार्य व्याचष्टे – अत इति।। अस्येति तद्गुणसारत्वं प्रकृतं परामृश्यते ।**

ಹೀಗೆ ಯುಕ್ತಿಬದ್ಧವಾದ ಶ್ರುತಿವಿರೋಧವಿರುವ ಕಾರಣ ಆನಂದರೂಪತ್ವವನ್ನು ಹೇಳುವ ಶ್ರುತಿಗೆ ಅಪ್ರಾಮಾಣ್ಯವನ್ನೇ ಹೇಳಬೇಕು. ಈಶ್ವರನಲ್ಲಿ ಶ್ರುತಿಸಮನ್ವಯ ಮಾಡಿದ್ದು ಯುಕ್ತವಲ್ಲ. ಇಷ್ಟು ಪೂರ್ವಪಕ್ಷ.

ಸಿದ್ಧಾಂತಸ್ಥಾಪಕವಾದ ಸೂತ್ರಕ್ಕೆ 'ಅತಃ' ಇತ್ಯಾದಿಯಾಗಿ ಅವತಾರಿಕೆ ನೀಡಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಪುಂಸ್ತ್ವಾಧಿಕರಣ (೨-೩-೧೬)

**तत्वप्रकाशिका – भवत्येवाऽनन्दादिरूपो जीवः । न चोक्तश्रुतियुक्तविरोधः । यथा पुरुषयोषिदादीनामपत्योत्पत्तिशक्तिस्वरूपत्वेऽपि कालतस्तदभिव्यक्तेर्नायं पूर्वं पुमानिदानीं तु पुमानित्यादि युज्यते । एवं जीवस्वरूपत्वेन मुक्तेः पूर्वमपि सतो ज्ञानानन्दादेरीश्वरप्रसादेनाभिव्यक्तिनिमित्तेनाऽनन्दीभवतीत्यादिव्यपदेशोपपत्तेः ।**

ಜೀವನು ಆನಂದಾದಿಸ್ವರೂಪನೇ ಆಗಿದ್ದಾನೆ. ಹೀಗೆ ಹೇಳಿದಾಗ ಪೂರ್ವಪಕ್ಷಕಾಲದಲ್ಲಿ ಹೇಳಲ್ಪಟ್ಟ ಶ್ರುತಿ ಯುಕ್ತಿಗಳ ವಿರೋಧಕ್ಕೆ ಅವಕಾಶವಿಲ್ಲ. ಯಾವ ರೀತಿಯಾಗಿ ಪುರುಷ ಮತ್ತು ಸ್ತ್ರೀಯರಲ್ಲಿ ಅಪತ್ಯೋತ್ಪತ್ತಿ ಶಕ್ತಿಯು ಸ್ವರೂಪತಃ ಇದ್ದೇ ಇರುತ್ತದೆ. ಆದರೂ ತಾರುಣ್ಯಾವಸ್ಥೆಯಲ್ಲಿ ಅದು ಅಭಿವ್ಯಕ್ತವಾಗುತ್ತದೆ. ಇಲ್ಲಿಯ ತನಕ ಇವನು ಪುರುಷನಾಗಿರಲಿಲ್ಲ. ಈಗ ಪುರುಷನಾಗಿದ್ದಾನೆ ಎಂದು ಹೇಳುವುದಿಲ್ಲ.

ಇದೇ ರೀತಿಯಾಗಿ ಆನಂದ, ಜ್ಞಾನ ಇವುಗಳು ಜೀವಸ್ವರೂಪವೇ ಆಗಿವೆ. ಮೋಕ್ಷಾವಸ್ಥೆಯ ಪೂರ್ವದಲ್ಲೂ ಕೂಡ ಇವುಗಳು ಜೀವಸ್ವರೂಪವೇ ಆಗಿರುತ್ತವೆ. ಈಶ್ವರನ ಪ್ರಸಾದದಿಂದ ಇರುವ ಈ ಜ್ಞಾನ, ಆನಂದಾದಿಗಳು ಅಭಿವ್ಯಕ್ತವಾಗುತ್ತವೆ. ಈಶ್ವರನ ಪ್ರಸಾದವನ್ನು ನಿಮಿತ್ತ ಮಾಡಿಕೊಂಡು 'ಆನಂದವುಳ್ಳವನಾದನು' ಇತ್ಯಾದಿ ವ್ಯಪದೇಶವು ಉಪಪನ್ನವಾಗುತ್ತದೆ.

**तत्वप्रकाशिका – प्रागनभिव्यक्तत्वेनानुभवाभावसम्भवात् । तदभिव्यक्त्यर्थं च मुमुक्षूणां प्रयत्नोपपत्तेरिति भावः । न चावरणानुपपत्तिः । ज्ञानाभावातिरिक्त-तन्निमित्ताविद्याभ्युपगमात् । ननु प्रागसतामुत्पत्तिवादिनी श्रुतिः किं न स्यात् किमभिव्यक्तिकल्पनयेत्यत आह – बलमिति ।। एतच्च सज्जीवविषयम् । केषाञ्चिद् दुःखादिरूपत्वं मिश्रत्वं च ज्ञातव्यम् ।।**

ಮೋಕ್ಷಕ್ಕಿಂತ ಮೊದಲು ಇರುವ ಜ್ಞಾನ, ಆನಂದಗಳು ಅಭಿವ್ಯಕ್ತವಾಗಿರುವುದಿಲ್ಲ. ಆದ್ದರಿಂದ ಅವುಗಳ ಅನುಭವವೂ ಕೂಡ ಇರುವುದಿಲ್ಲ. ಇವುಗಳ ಅಭಿವ್ಯಕ್ತಿಗೋಸ್ಕರ ಮುಮುಕ್ಷುಗಳು ಮೋಕ್ಷಕ್ಕೋಸ್ಕರ ಪ್ರಯತ್ನ ಪಡುವುದೂ ಕೂಡ ಉಪಪನ್ನವಾಗುತ್ತದೆ ಎಂಬುದು ಸೂತ್ರದ ಅಭಿಪ್ರಾಯ.

ಆವರಣ ಅನುಪಪನ್ನವಾಗುತ್ತದಲ್ಲವೇ? ಎಂಬುದಾಗಿ ಪೂರ್ವಪಕ್ಷದಲ್ಲಿ ಕೇಳಿದ್ದೂ ಕೂಡ ಅಯುಕ್ತವಾಗಿದೆ. ಏಕೆಂದರೆ ಜ್ಞಾನಾಭಾವಕ್ಕಿಂತ ಅತಿರಿಕ್ತವಾದ ಅನಭಿವ್ಯಕ್ತಿಗೆ ಕಾರಣವಾದ ಅವಿದ್ಯೆಯನ್ನು ಆವರಣವೆಂದು ಅಂಗೀಕರಿಸಿದ್ದೇವೆ.

ಮೊದಲಿಲ್ಲದ ಆನಂದಾದಿಗಳ ಉತ್ಪತ್ತಿಯನ್ನು ಶ್ರುತಿಯು ಹೇಳುತ್ತದೆಂದು ಏಕೆ ಹೇಳಬಾರದು? ಅಭಿವ್ಯಕ್ತಿಯನ್ನೇ ಹೇಳುತ್ತದೆಂದು ಏಕೆ ಕಲ್ಪನೆ ಮಾಡಬೇಕು? ಈ ಪ್ರಶ್ನೆಗೆ

'ಬಲಂ' ಇತ್ಯಾದಿಯಾಗಿ ಉತ್ತರವನ್ನು ನೀಡುತ್ತಿದ್ದಾರೆ.

ಈ ಶ್ರುತಿವಚನವು ಸಜ್ಜೀವಾತ್ಮವಿಷಯಕವಾಗಿದೆ. ಕೆಲವರು ದುಃಖಸ್ವರೂಪವೇ ಉಳ್ಳವರಾಗಿದ್ದಾರೆ, ಕೆಲವರು ಸುಖದುಃಖಗಳ ಮಿಶ್ರಣಸ್ವರೂಪವನ್ನುಳ್ಳವರಾಗಿದ್ದಾರೆಂಬುದನ್ನೂ ಕೂಡ ಇಲ್ಲಿ ಗಮನಿಸಬೇಕು.

ವಿವರಣೆ - ಜೀವಾತ್ಮನು ಜ್ಞಾನ ಹಾಗೂ ಆನಂದಗಳ ಸ್ವರೂಪನಾಗಿದ್ದರೆ ಸಂಸಾರಾವಸ್ಥೆಯಲ್ಲಿ ಏಕೆ ಅದರ ಅನುಭವವು ಬರುತ್ತಿಲ್ಲ? ಎಂಬುದಾಗಿ ಪೂರ್ವಪಕ್ಷಕಾರರೇ ಪ್ರಶ್ನಿಸಿಕೊಂಡು ಅಜ್ಞಾನವನ್ನು ಆವರಣವೆಂದು ಉತ್ತರಿಸಿದ್ದರು. ಅದನ್ನು ಪ್ರಕೃತ ನಿರಾಕರಣೆ ನೀಡಿದ್ದಾರೆ. ಜ್ಞಾನವಿದ್ದಲ್ಲಿ ಜ್ಞಾನಾಭಾವವು ಇರುವುದಿಲ್ಲವೆಂಬುದು ನಿಜ. ಆದರೆ ಜ್ಞಾನಾಭಾವರೂಪವಾದ ಅಜ್ಞಾನವನ್ನು ಆವರಣವೆಂದು ಅಂಗೀಕಾರ ಮಾಡುವುದಿಲ್ಲ. ಭಾವರೂಪವಾದ ಅಜ್ಞಾನವನ್ನು ಆವರಣವೆಂದು ಅಂಗೀಕಾರ ಮಾಡುತ್ತೇವೆ. ಆದ್ದರಿಂದ ನೀವು ಆಕ್ಷೇಪ ಮಾಡಿಕೊಂಡ ಅಜ್ಞಾನವೇ ಬೇರೆ, ನಮಗೆ ಅಭಿಪ್ರೇತವಾದ ಅಜ್ಞಾನವೇ ಬೇರೆ.

ಆದ್ದರಿಂದ ಬಲ, ಆನಂದ, ಪರಾಕ್ರಮ, ಸಹನೆ, ವಿನಯ ಇವುಗಳೆಲ್ಲವೂ ಜೀವನ ಸ್ವರೂಪವೇ ಆಗಿದೆ. ಪರಮಾತ್ಮನಿಂದ ಇವುಗಳು ಅಭಿವ್ಯಕ್ತವಾಗುತ್ತದೆಂದು ಗೌಪವನಶ್ರುತಿ ಹೇಳಿದ್ದು ನಿರ್ದುಷ್ಟವಾಗಿದೆ ಎಂದು ಸಿದ್ಧವಾಯಿತು.

## ಬ್ರಹ್ಮಸೂತ್ರ

## सूत्रम् — नित्योपलब्ध्यनुपलब्धिप्रसङ्गोऽन्यतरनियमो वाऽन्यथा।।

ಜೀವನು ಜ್ಞಾನಾನಂದಸ್ವರೂಪನಾಗಿದ್ದರೂ ಅಜ್ಞಾನವೆಂಬ ಆವರಣವಿರುವುದರಿಂದ ಸಂಸಾರಾವಸ್ಥೆಯಲ್ಲಿ ಅಭಿವ್ಯಕ್ತವಾಗುವುದಿಲ್ಲ. ಆವರಣವನ್ನು ಒಪ್ಪದಿದ್ದರೆ ಸಂಸಾರಾವಸ್ಥೆಯಲ್ಲಿಯೂ ನಿರಂತರ ಆನಂದದ ಉಪಲಬ್ಧಿಯಾಗಬೇಕಾದೀತು. ಅಷ್ಟೇ ಅಲ್ಲದೇ ತಮೋಯೋಗ್ಯರಾದ ಜೀವರಿಗೆ ನಿತ್ಯವಾಗಿ ದುಃಖದ ಅನುಭವವೇ ಬರಬೇಕಾದೀತು. ರಾಜಸರಿಗೆ ಸುಖ-ದುಃಖಗಳು ನಿಯತವಾಗಿ ಬರಬೇಕಾದೀತು.

**सूत्रदीपिका — वाशब्दो** व्यवस्थितविकल्पार्थः । **उपलब्धिरनुभवः । अन्यथा** जीवस्याऽनन्दादिरूपत्वमङ्गीकृत्याऽवरणानङ्गीकारे **नित्योपलब्ध्यनुपलब्धि-प्रसङ्गः**।यथायोग्यमन्वयः।मुक्तियोग्यानां नित्यमानन्दानुभवःस्यात्।तमोयोग्यानां न कदाऽप्यानन्दानुभवः स्यात् । किन्तु स्वरूपदुःखानुभव एव स्यात् । एवं मध्यममनुष्याणा**मन्यतरनियमः** अन्यतरयोः सुखदुःखानुभवयोः नियमः साम्यमेव स्यात् । प्रतिबन्धकीभूतावरणगतादित्यर्थः । तस्माज्जीवस्याऽवरणमङ्गीकार्य-मिति भावः ।।२।।

'ವಾ' ಶಬ್ದವು ವ್ಯವಸ್ಥಿತವಿಕಲ್ಪಾರ್ಥದಲ್ಲಿ ಇರುತ್ತದೆ. 'ಉಪಲಬ್ಧಿ' ಶಬ್ದಕ್ಕೆ ಅನುಭವ ಎಂದರ್ಥ. ಅನ್ಯಥಾ = ಜೀವನು ಆನಂದ ಸ್ವರೂಪನೆಂದು ಒಪ್ಪಿ, ಆವರಣವನ್ನು ಒಪ್ಪದಿದ್ದರೆ, ನಿತ್ಯೋಪಲಬ್ಧ್ಯನುಪಲಬ್ಧಿ-

ಪ್ರಸಂಗಃ = ನಿರಂತರವಾಗಿ ಆನಂದದ ಉಪಲಬ್ಧವು ಆಗಬೇಕಾದೀತು. ಅಂದರೆ ಮುಕ್ತಿಯೋಗ್ಯರಿಗೆ ನಿತ್ಯವಾಗಿ ಆನಂದದ ಅನುಭವವು ಬರಬೇಕಾದೀತು. ತಮೋಯೋಗ್ಯರಿಗೆ ಯಾವಾಗಲೂ ಆನಂದದ ಅನುಭವವೇ ಇಲ್ಲವಾಗಬೇಕಾದೀತು. ಹೊರತಾಗಿ ಸ್ವರೂಪಭೂತವಾದ ದುಃಖವೇ ನಿರಂತರ ಅನುಭವಿಸಬೇಕಾದೀತು. ಇದರಂತೆ ನಿತ್ಯಸಂಸಾರಿಗಳಿಗೂ ಮಿಶ್ರವಾಗಿ ಸುಖ-ದುಃಖಗಳು ಬರಬೇಕಾದೀತು. ಅನ್ಯತರನಿಯಮಃ = ಸುಖ-ದುಃಖಗಳೇ ನಿಯತವಾಗಿ ಉಪಲಬ್ಧವಾಗಬೇಕಾದೀತು. ಏಕೆಂದರೆ ಪ್ರತಿಬಂಧಕವಾದ ಆವರಣವು ನಾಶವಾಗಿರುತ್ತದೆ. ಆದಕಾರಣ ಜೀವನಿಗೆ ಆವರಣವನ್ನು ಅಂಗೀಕರಿಸಬೇಕು.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ಪುಂಸ್ತ್ವಾಧಿಕರಣವು ಮುಗಿಯಿತು.

## ಬ್ರಹ್ಮಸೂತ್ರಭಾಷ್ಯ

**ಭಾಷ್ಯಮ್ – ।। नित्योपलब्ध्यनुपलब्धिप्रसङ्गोऽन्तरनियमो वाऽन्यथा ।।२।।**

**व्यक्त्यनङ्गीकारे देवानां नित्योपलब्धिरानन्दादीनाम्, असुराणां नित्यानुपलब्धिर्मनुष्याणां च नित्योपलब्ध्यनुपलब्धी प्रसज्यन्ते ।।**

ಅನುವಾದ - ಜ್ಞಾನಾನಂದಾದಿಗುಣಗಳ ಅಭಿವ್ಯಕ್ತಿಯನ್ನು ಒಪ್ಪದಿದ್ದರೆ ದೇವತೆಗಳಿಗೆ ನಿತ್ಯವಾಗಿಯೂ ಆನಂದದ ಅನುಭವವೂ ಅಸುರರಿಗೆ ನಿತ್ಯವಾಗಿಯೂ ಆನಂದಾನುಭವದ ಇಲ್ಲದಿರುವಿಕೆಯು ಮನುಷ್ಯರಿಗೆ ಎರಡರ ಅನುಭವವು ಬರಬೇಕಾದೀತು.

ಪ್ರತಿಪದಾರ್ಥ -- ವ್ಯಕ್ತ್ಯನಂಗೀಕಾರೇ = ಆನಂದದ ಅಭಿವ್ಯಕ್ತಿಯನ್ನು ಒಪ್ಪದಿದ್ದರೆ, ದೇವಾನಾಂ = ದೇವತೆಗಳಿಗೆ, ಆನಂದಾದೀನಾಮ್ = ಆನಂದಾದಿಗಳ, ನಿತ್ಯೋಪಲಬ್ಧಿಃ = ನಿರಂತರ ಇರುವಿಕೆಯು, ಅಸುರಾಣಾಂ = ಅಸುರರಿಗೆ, ನಿತ್ಯಾನುಪಲಬ್ಧಿಃ = ನಿರಂತರವಾಗಿ ಆನಂದದ ಉಪಲಬ್ಧಿ ಆಗದಿರುವಿಕೆಯು, ಚ = ಮತ್ತು, ಮನುಷ್ಯಾಣಾಮ್ = ಮನುಷ್ಯರಿಗೆ, ನಿತ್ಯೋಪಲಬ್ಧಿ ಅನುಪಲಬ್ಧಿಃ = ನಿತ್ಯವಾಗಿಯೂ ಉಪಲಬ್ಧಿ ಆಗುವಿಕೆ ಹಾಗೂ ಆಗದಿರುವಿಕೆ ಎಂಬ ಸುಖದುಃಖ ಮಿಶ್ರಣವು, ಪ್ರಸಜ್ಯೇತೇ = ಉಂಟಾಗಬೇಕಾದೀತು.

**ಭಾಷ್ಯಮ್ – 'नित्यानन्दो नित्यज्ञानो नित्यबलः परमात्मा नैवमसुरा एवमनेवं च मनुष्याः' इति ह्याग्निवेश्यश्रुतिः ।**

ಅನುವಾದ - ಪರಮಾತ್ಮನು ನಿತ್ಯವಾದ ಆನಂದಸ್ವರೂಪನು ನಿತ್ಯವಾದ ಜ್ಞಾನಸ್ವರೂಪನು ನಿತ್ಯವಾದ ಬಲಸ್ವರೂಪನೂ ಆಗಿರುತ್ತಾನೆ. ಅಸುರರು ಇದಕ್ಕೆ ವಿರುದ್ಧವಾಗಿರುತ್ತಾರೆ. ಮನುಷ್ಯರು ಆನಂದರೂಪರು ದುಃಖರೂಪರೂ ಆಗಿರುತ್ತಾರೆ. ಹೀಗೆ ಅಗ್ನಿವೇಶ್ಯಶ್ರುತಿಯು ಹೇಳುತ್ತಿದೆ.

ಪ್ರತಿಪದಾರ್ಥ -- ಪರಮಾತ್ಮಾ = ಪರಮಾತ್ಮನು, ನಿತ್ಯಾನಂದಃ = ನಿತ್ಯವಾದ ಆನಂದವುಳ್ಳವನು, ನಿತ್ಯಜ್ಞಾನಃ = ನಿತ್ಯವಾದ ಜ್ಞಾನವುಳ್ಳವನು, ನಿತ್ಯಬಲಃ = ನಿತ್ಯವಾದ ಸಾಮರ್ಥ್ಯವುಳ್ಳವನು, ಏವಂ = ಹೀಗೆ, ಅಸುರಾಃ = ಅಸುರರು, ನ = ಇರುವುದಿಲ್ಲ. ಮನುಷ್ಯಾಃ = ಮನುಷ್ಯರು, ಏವಂ = ಹೀಗೆ, ಅನೇವಂ = ಇದಕ್ಕೆ ವಿರುದ್ಧವಾಗಿಯು ಇರುತ್ತಾರೆ. ಇತಿ ಹಿ = ಹೀಗೆ, ಅಗ್ನಿವೇಶ್ಯ ಶ್ರುತಿಃ = ಅಗ್ನಿವೇಶ್ಯಶ್ರುತಿಯು ಹೇಳುತ್ತದೆ.

**भाष्यम् — भविष्यत्पर्वणि च —**

**'नित्यानन्दज्ञानबला देवा नैवं तु दानवाः ।**
**दुःखोपलब्धिमात्रास्ते मानुषास्तूभयात्मकाः ।।**
**तेषां यदन्यथा दृश्यं तदुपाधिकृतं मतम् ।**
**विज्ञानेनाऽत्मयोग्येन निजरूपे व्यवस्थितिः ।।**
**सम्यक् ज्ञानं तु देवानां मनुष्याणां विमिश्रितम् ।**
**विपरीतं तु दैत्यानां ज्ञानस्यैवं व्यवस्थितिः ।। इति ।।२।।**

**।। इति श्रीमदानन्दतीर्थभगवत्पादाचार्यविरचिते**
**ब्रह्मसूत्रभाष्ये पुंस्त्वाधिकरणम् ।। १६ ।।**

ಅನುವಾದ - ಭವಿಷ್ಯತ್ ಪುರಾಣದಲ್ಲಿ ಹೀಗೆ ಹೇಳಲಾಗಿದೆ -

ದೇವತೆಗಳು ನಿರಂತರವಾಗಿ ಆನಂದ, ಜ್ಞಾನ, ಬಲಸ್ವರೂಪರು ಆಗಿರುತ್ತಾರೆ. ದಾನವರು ಇದಕ್ಕೆ ವಿರುದ್ಧವಾಗಿರುತ್ತಾರೆ. ನಿರಂತರವಾಗಿ ದುಃಖವನ್ನೇ ಅನುಭವಿಸುತ್ತಾರೆ. ಮನುಷ್ಯರು ಉಭಯಸ್ವರೂಪರಾಗಿರುತ್ತಾರೆ. ಒಂದು ವೇಳೆ ಇದಕ್ಕೆ ವಿರುದ್ಧವಾಗಿ ಸುಖ ಅಥವಾ ದುಃಖಗಳ ಅನುಭವ ಕಂಡರೆ ಅದು ಕೇವಲ ಉಪಾಧಿಯಾದ ದೇಹಕ್ಕೆ ಸಂಬಂಧಪಟ್ಟದ್ದು. ಸ್ವಾಭಾವಿಕವಲ್ಲ. ಆತ್ಮಸ್ವರೂಪಭೂತವಾದ ವಿಜ್ಞಾನದಿಂದ ಅವರೆಲ್ಲರೂ ನಿಜಸ್ವರೂಪದಲ್ಲಿ ಅಭಿವ್ಯಕ್ತವಾಗುತ್ತಾರೆ. ದೇವತೆಗಳಿಗೆ ಯಥಾರ್ಥಜ್ಞಾನವೇ ಬರುತ್ತದೆ. ಮನುಷ್ಯರಿಗೆ ಮಿಶ್ರಜ್ಞಾನ ದೈತ್ಯರಿಗೆ ವಿಪರೀತ ಜ್ಞಾನವೇ ಬರುತ್ತದೆ. ಇದು ಲೋಕದ ವ್ಯವಸ್ಥೆ.

ಪ್ರತಿಪದಾರ್ಥ -- ಭವಿಷ್ಯತ್‌ಪರ್ವಣಿ = ಭವಿಷ್ಯತ್‌ಪರ್ವದಲ್ಲಿ ಹೀಗೆ ಹೇಳಲಾಗಿದೆ -

ನಿತ್ಯಾನಂದಜ್ಞಾನಬಲಾಃ = ನಿತ್ಯವಾದ ಆನಂದ, ಜ್ಞಾನ, ಬಲ ಇವುಗಳು, ದೇವಾಃ = ದೇವತೆಗಳ ಸ್ವಭಾವವು, ದಾನವಾಃ = ದಾನವರ ಸ್ವಭಾವವು, ಏವಂ = ಹೀಗೆ, ನತು = ಇರುವುದಿಲ್ಲವಷ್ಟೇ, ತೇ = ಆ ದಾನವರು, ದುಃಖೋಪಲಬ್ಧಿಮಾತ್ರಾಃ = ದುಃಖವನ್ನೇ ಅನುಭವಿಸುವವರು, ಮಾನುಷಾಸ್ತು = ಮನುಷ್ಯರಾದರು, ಉಭಯಾತ್ಮಕಾಃ = ಸುಖ-ದುಃಖಉಭಯಮಿಶ್ರಣರು.

ತೇಷಾಂ = ದೇವತೆಗಳಿಗೆ ದಾನವರಿಗೆ ಮತ್ತು ಮನುಷ್ಯರಿಗೆ, ಯದನ್ಯಥಾ = ಮೇಲೆ ಹೇಳಿದ್ದಕ್ಕೆ ವಿರುದ್ಧವಾಗಿ, ದೃಶ್ಯಂ = ಸುಖದುಃಖಾದಿಗಳು ಕಂಡರೆ, ತತ್ = ಅವನನ್ನು, ಉಪಾಕೃತಂ = ಔಪಾಧಿಕವಾದ ದೇಹಕ್ಕೆ ಸಂಬಂಧಪಟ್ಟದ್ದು ಎಂದು, ಮತಮ್ = ತಿಳಿಯಬೇಕು. ಆತ್ಮಯೋಗ್ಯೇನ = ತಮ್ಮ ಯೋಗ್ಯತೆಯ, ವಿಜ್ಞಾನೇನ = ವಿಶೇಷಜ್ಞಾನದಿಂದ, ನಿಜರೂಪೇ = ಮೋಕ್ಷದಲ್ಲಿ, ವ್ಯವಸ್ಥಿತಿಃ = ಜೀವಸ್ವರೂಪದಲ್ಲೇ ಇರುವಿಕೆಯು ಯುಕ್ತವಾಗುತ್ತದೆ.

ದೇವಾನಾಂ ತು = ದೇವತೆಗಳಿಗಾದರೂ, ಸಮ್ಯಗ್ ಜ್ಞಾನಂ = ಯಥಾರ್ಥಜ್ಞಾನವೇ ಬರುತ್ತದೆ. ಮನುಷ್ಯಾಣಾಂ = ಮನುಷ್ಯರಿಗೆ, ವಿಮಿಶ್ರಿತಮ್ = ಮಿಶ್ರಜ್ಞಾನವು ಬರುತ್ತದೆ. ದೈತ್ಯಾನಾಂ = ದೈತ್ಯರಿಗೆ, ತು = ಆದರೂ, ವಿಪರೀತಂ = ವಿಪರೀತ ಜ್ಞಾನವು ಬರುತ್ತದೆ, ಏವಂ = ಹೀಗೆ, ಜ್ಞಾನಸ್ಯ = ಜ್ಞಾನದ, ವ್ಯವಸ್ಥಿತಿಃ = ವ್ಯವಸ್ಥೆ ಇರುತ್ತದೆ.

ಇಲ್ಲಿಗೆ ಪುಂಸ್ತ್ವಾಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

## ತತ್ವಪ್ರಕಾಶಿಕಾ

**तत्वप्रकाशिका – यदुक्तं जीवस्वरूपभूतानामानन्दादीनां प्रागनभिव्यक्तानां मोक्षेऽभिव्यक्तिरिति तदयुक्तम् । जीवस्वरूपस्य नित्याभिव्यक्तत्वेन तत्स्वरूपभूतानामीश्वरप्रसादेनाभिव्यक्त्ययोगादिति चेत्तत्र प्रष्टव्यम् ।**

ಜೀವಾತ್ಮರ ಸ್ವರೂಪಭೂತವಾದ ಆನಂದಾದಿಗಳು ಮೋಕ್ಷಕ್ಕಿಂತ ಮೊದಲು ಅಭಿವ್ಯಕ್ತವಾಗಿರುವುದಿಲ್ಲ. ಮೋಕ್ಷವಾದಮೇಲೆ ಅಭಿವ್ಯಕ್ತವಾಗುತ್ತದೆಂದು ಹಿಂದಿನ ಸೂತ್ರದಲ್ಲಿ ಹೇಳಲಾಯಿತು. ಇದು ಅಯುಕ್ತವಾಗಿದೆ. ಏಕೆಂದರೆ ಜೀವರ ಸ್ವರೂಪವು ನಿತ್ಯಾಭಿವ್ಯಕ್ತವಾದ್ದರಿಂದ ಸ್ವರೂಪಭೂತವಾದ ಆನಂದಾದಿಗಳು ಈಶ್ವರನ ಪ್ರಸಾದದಿಂದ ಅಭಿವ್ಯಕ್ತವಾಗುತ್ತದೆಂಬುದು ಅಯುಕ್ತವಾಗಿದೆ.

ಹೀಗೆ ಆಕ್ಷೇಪ ಮಾಡಿದರೆ ಇವರನ್ನು ಕುರಿತು ಪ್ರಶ್ನಿಸುತ್ತೇವೆ.

**तत्वप्रकाशिका – किं जीवस्यानन्दादिरूपत्वमङ्गीकृत्य तदवरणाभावात्तन्निवृत्तिर्नाभ्युपगम्यते किं वाऽनन्दादिरूपत्वमेवानङ्गीकृत्येदमुच्यते । प्रथमपक्षदूषणाय सूत्रमुपन्यस्य व्याचष्टे – नित्येति।।**

ಜೀವನು ಆನಂದಾದಿರೂಪವುಳ್ಳವನಾಗಿದ್ದಾನೆಂದು ಅಂಗೀಕಾರ ಮಾಡಿ ಅವನಿಗೆ ಆವರಣವೇ ಇಲ್ಲದ್ದರಿಂದ ಅದರ ನಿವೃತ್ತಿಯನ್ನು ಅಂಗೀಕಾರ ಮಾಡುವುದಿಲ್ಲವೆಂದು ಹೇಳುವಿರೋ ಅಥವಾ ಆನಂದ ಮೊದಲಾದವುಗಳು ಜೀವಸ್ವರೂಪವೆಂಬುದನ್ನೇ ಅಂಗೀಕಾರ ಮಾಡದೆ ಹೀಗೆ ಹೇಳುತ್ತಿರುವಿರೋ?

ಮೊದಲನೇ ಪಕ್ಷವನ್ನು ದೂಷಣೆ ಮಾಡುವುದಕ್ಕಾಗಿ ಸೂತ್ರವನ್ನೇ ಪಠಿಸಿ 'ನಿತ್ಯ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**ತತ್ವಪ್ರಕಾಶಿಕಾ – यदि जीवस्वरूपस्यानन्दादिरूपत्वमङ्गीकृत्यावरणाभावाद् व्यक्तिरावरणनिवृत्तिर्मोक्षे नाङ्गीक्रियते तर्हि देवादीनां मोक्षयोग्यानां नित्यमानन्दाद्यनुभवः स्यात् । असुरादीनां न कदाप्यानन्दाद्यनुभवः स्यात् दुःखाद्यनुभव एव भवेत् । मध्यममानुषाणां न नित्यमानन्दादीनामुपलब्धिः । केवलं तदुपलब्ध्यभावो दुःखाद्युपलब्धिश्च समैव स्यात् । आवरणाभावेऽनुभवाभावा योगात् इति ।**

ಒಂದುವೇಳೆ ಜೀವಸ್ವರೂಪಕ್ಕೆ ಆನಂದಾದಿರೂಪತ್ವವನ್ನು ಅಂಗೀಕಾರ ಮಾಡಿ ಆವರಣವು ಇಲ್ಲದ್ದರಿಂದ ಅಭಿವ್ಯಕ್ತವಾಗುತ್ತದೆ. ಆವರಣ ನಿವೃತ್ತಿಯನ್ನು ಮೋಕ್ಷದಲ್ಲಿ ಅಂಗೀಕಾರ ಮಾಡುವುದಿಲ್ಲ ಎಂದು ಹೇಳುವುದಾದರೆ ದೇವತೆಗಳೇ ಮೊದಲಾದ ಮೋಕ್ಷಯೋಗ್ಯ ಜೀವರಿಗೆ ನಿತ್ಯವಾಗಿಯೂ ಆನಂದಾದ್ಯನುಭವವು ಆಗಬೇಕಾದೀತು. ಅಸುರಾದಿಗಳಿಗೆ ಯಾವಾಗಲೂ ಕೂಡ ಆನಂದ್ಯಾದನುಭವವು ಆಗದೇ ಇರಬೇಕಾದೀತು. ದುಃಖಾದ್ಯನುಭವವೇ ನಿರಂತರ ಆಗಬೇಕಾದೀತು. ಮಧ್ಯಮ ಮನುಷ್ಯರಿಗೆ ನಿತ್ಯವಾಗಿಯೂ ಆನಂದಾದಿಗಳು ಉಪಲಬ್ಧವಾಗಬೇಕಾದೀತು. ಮತ್ತು ಕೇವಲ ಆನಂದಾದಿಗಳ ಉಪಲಬ್ಧ್ಯಭಾವವು ಮತ್ತು ದುಃಖಾದಿಗಳ ಉಪಲಬ್ಧಿಯು ಸಮಾನವಾಗಿಯೇ ಮನುಷ್ಯರಿಗೆ ಆಗಬೇಕಾದೀತು. ಏಕೆಂದರೆ ಆವರಣವೇ ಇಲ್ಲದ್ದರಿಂದ ಯಾರಿಗೂ ಕೂಡ ಅವರ ಸ್ವರೂಪಭೂತವಾದ್ದರ ಅನುಭವವು ಆಗುವುದಿಲ್ಲವೆಂಬ ಸಂದರ್ಭವೇ ಇರುವುದಿಲ್ಲ.

**ತತ್ವಪ್ರಕಾಶಿಕಾ – अतः अस्त्येवाविद्यावरणं भगवत्प्रसादेन तन्निवृत्तिश्चेति भावः । द्वितीयं प्रमाणविरोधेन पराचष्टे – नित्येति ।।**

ಆದ್ದರಿಂದ ಅವಿದ್ಯೆ ಎಂಬ ಆವರಣವು ಇದ್ದೇ ಇರುತ್ತದೆಂದು ಒಪ್ಪಬೇಕು. ಭಗವಂತನ ಪ್ರಸಾದದಿಂದ ಈ ಅವಿದ್ಯೆಯೆಂಬ ಆವರಣವು ನಿವೃತ್ತಿಯಾಗುತ್ತದೆಂದು ಹೇಳಿದ್ದೂ ಕೂಡ ಯುಕ್ತವಾಗುತ್ತದೆ.

ಆನಂದ ಮೊದಲಾದವುಗಳು ಜೀವಾತ್ಮರ ಸ್ವರೂಪವೆಂದು ಅಂಗೀಕಾರ ಮಾಡದೇ ಆಕ್ಷೇಪ ಮಾಡಲಾಗಿದೆ ಎಂಬ ಎರಡನೇ ಪಕ್ಷವನ್ನು ಪ್ರಮಾಣವಿರೋಧದಿಂದ ನಿರಾಕರಣೆ ಮಾಡುತ್ತಿದ್ದಾರೆ.

**ತತ್ವಪ್ರಕಾಶಿಕಾ – एवं सुरा इति हृदयम् । यद्यप्यत्र प्रागुक्तश्रुतिरतिदेष्टुं युक्ता तथापि तत्राशेषार्थानुक्तेः श्रुत्यन्तरोदाहरणम् । अधिकरणार्थे स्मृतिं चाह – भविष्यदिति ।। दुःखोपलब्धिमात्रास्तद्योग्याः । उपाधिर्बाह्यः । तदेवं श्रुत्यविरोधेन जीवस्याऽनन्दादिरूपत्वसिद्धेर्युक्तो हरौ श्रुतिसमन्वय इति सिद्धम् ।। ३२ ।।**

ಪುಂಸ್ತ್ವಾಧಿಕರಣ (೨-೩-೧೬)

ಪರಮಾತ್ಮನಂತೆ ಸುರರೂ ಕೂಡ ಜ್ಞಾನಾನಂದಸ್ವರೂಪರೆಂಬುದು ಭಾಷ್ಯಕಾರರ ಹೃದಯ.

ವಾಸ್ತವಿಕವಾಗಿ ಇಲ್ಲಿ 'ಬಲಮಾನಂದ ಓಜಶ್ಚ' ಎಂಬ ಹಿಂದಿನ ಶ್ರುತಿಯನ್ನೇ ಅತಿದೇಶ ಮಾಡಲು ಸಾಧ್ಯವಾಗುತ್ತಿತ್ತು. ಆದರೂ ಕೂಡ ಆ ಶ್ರುತಿಯಲ್ಲಿ ಎಲ್ಲಾ ವಿಷಯಗಳನ್ನು ಹೇಳದ ಕಾರಣ ಮತ್ತೊಂದು ಶ್ರುತಿಯನ್ನು ಉದಾಹರಿಸಿದ್ದಾರೆ. ಇದೇ ಅಧಿಕರಣದ ಅರ್ಥದಲ್ಲಿ ಶ್ರುತಿಪ್ರಮಾಣವನ್ನು 'ಭವಿಷ್ಯತ್' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

'ದುಃಖೋಪಲಬ್ಧಿಮಾತ್ರಾಃ' ಎಂಬುದಕ್ಕೆ ದುಃಖಾನುಭವಕ್ಕೆ ಯೋಗ್ಯರಾದವರು ಎಂದರ್ಥ. ಉಪಾಧಿ ಶಬ್ದದಿಂದ ಬಾಹ್ಯೋಪಾಧಿಯನ್ನೇ ವಿವಕ್ಷಿಸಬೇಕು.

ಹೀಗೆ ಶ್ರುತಿಯ ವಿರೋಧವಿಲ್ಲದ್ದರಿಂದ ಜೀವನಿಗೆ ಆನಂದಾದಿರೂಪತ್ವವು ಸಿದ್ಧವಾಗುತ್ತದೆ. ಆದ್ದರಿಂದ ಶ್ರೀಹರಿಯಲ್ಲಿ ಮಾಡಲ್ಪಟ್ಟ ಶ್ರುತಿಸಮನ್ವಯವು ಯುಕ್ತವೆಂದು ಸಿದ್ಧವಾಯಿತು.

'ನಿತ್ಯಾನಂದೋ ನಿತ್ಯಜ್ಞಾನಃ' ಎಂಬ ಶ್ರುತಿಯಲ್ಲಿ ಪರಮಾತ್ಮನು ನಿತ್ಯಾನಂದನಾಗಿದ್ದಾನೆ, ನಿತ್ಯಜ್ಞಾನವುಳ್ಳವನಾಗಿದ್ದಾನೆಂದು ಹೇಳಲಾಗಿದೆ. ದೇವತೆಗಳ ಬಗ್ಗೆ ಈ ಶ್ರುತಿಯು ಏನನ್ನೂ ಹೇಳುತ್ತಿಲ್ಲ. ಆದ್ದರಿಂದ ಈ ಅಧಿಕರಣಕ್ಕೆ ಈ ಶ್ರುತಿಯು ಅಸಂಗತವಲ್ಲವೇ? ಎಂಬ ಪ್ರಶ್ನೆಗೆ ಟೀಕೆಯಲ್ಲಿ 'ಏವಂ ಸುರಾಃ ಇತಿ ಹೃದಯಂ' ಎಂದು ಉತ್ತರಿಸಿದ್ದಾರೆ. ಪರಮಾತ್ಮನು ಹೇಗೆ ನಿತ್ಯಾನಂದಾದಿಗುಣಗಳುಳ್ಳವನೋ, ಅದರಂತೆ ದೇವತೆಗಳೂ ಕೂಡ ಆ ಗುಣಗಳಿಂದ ಕೂಡಿದ್ದಾರೆ ಎಂಬುದು ಅಗ್ನಿವೇಶ್ಯಶ್ರುತಿಯ ಅಭಿಪ್ರಾಯವಾಗಿದೆ. ಈ ಪ್ರಶ್ನೆಗೆ ಹಿಂದೆ ಹೇಳಲ್ಪಟ್ಟ ಗೌಪವನಶ್ರುತಿಯೇ ಆಧಾರವಾಗುತ್ತಿತ್ತು. ಆದರೆ ತಮೋಯೋಗ್ಯನಿತ್ಯಸಂಸಾರಿಗಳ ಬಗ್ಗೆ ಅಲ್ಲಿ ಉಲ್ಲೇಖವಿರುವುದಿಲ್ಲ. ಅಗ್ನಿವೇಶ್ಯಶ್ರುತಿಯಲ್ಲಿ ಉಲ್ಲೇಖವಿದೆ. ಆದ್ದರಿಂದ ಅಗ್ನಿವೇಶ್ಯಶ್ರುತಿಯನ್ನು ಉದಾಹರಿಸಿದ್ದು ಸಾರ್ಥಕವಾಗಿದೆ.

ಸ್ಮೃತಿವಾಕ್ಯದಲ್ಲಿರುವ 'ತದುಪಾಧಿಕೃತಂ' ಎಂಬಲ್ಲಿ 'ಉಪಾಧಿ' ಶಬ್ದದಿಂದ ಪ್ರಾಕೃತವಾದ ಶರೀರ, ಇಂದ್ರಿಯ, ಮನಸ್ಸು ಇವುಗಳನ್ನೇ ವಿವಕ್ಷಿಸಬೇಕು. ಮೂರುವಿಧ ಚೇತನರಲ್ಲಿ ಪ್ರಾಕೃತ ಶರೀರ ಮೊದಲಾದ ಉಪಾಧಿ ಇರುವುದರಿಂದ ಸಂಸಾರಾವಸ್ಥೆಯಲ್ಲಿ ಸ್ವರೂಪದ ಅನುಭವವು ಆಗುವುದಿಲ್ಲವೆಂಬುದು ಇದರ ಅಭಿಪ್ರಾಯ.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಪುಂಸ್ತ್ವಾಧಿಕರಣ ಮುಗಿಯಿತು

ಪುಂಸ್ತ್ವಾಧಿಕರಣ

(೨-೩-೧೬)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## पुंस्त्वाधिकरणम्

ಜೀವಾತ್ಮನು ಜ್ಞಾನಾನಂದಾತ್ಮಕ

**पुंस्त्वादिवत्त्वस्य सतोऽभिव्यक्तियोगात् ।। पूर्वत्र पृथगधिकरणीयाद्य सूत्रोक्तो ''बन्धान्मोक्षं तत एवाभिवांछेत्'' इत्युपदेश उपपादितः । इह तु तदीयसूत्रोक्तं तद्गुणसारत्वमुपपाद्यत इति सङ्गतिः ।**

ಹಿಂದೆ 'ಪೃಥಗುಪದೇಶಾತ್' ಎಂಬ ಪೃಥಗಧಿಕರಣದ ಪ್ರಾರಂಭದ ಸೂತ್ರದಲ್ಲಿ 'ಉಪದೇಶಾತ್' ಎಂಬುದರಿಂದ 'ಬಂಧಾನ್ಮೋಕ್ಷಂ ತತ ಏವಾಭಿವಾಂಛೇತ್' ಎಂಬ ವಿಷಯವಾಕ್ಯವನ್ನು ವಿವಕ್ಷಿಸಲಾಯಿತು. ಮೋಕ್ಷವನ್ನು ಅಪೇಕ್ಷಿಸುವ ಜೀವನಿಗೆ ಬಂಧ ಹಾಗೂ ಮೋಕ್ಷಗಳ ಉಪಪಾದನೆಗಾಗಿ ಯಾವದಾತ್ಮಾಧಿ- ಕರಣವು ಹೊರಟಿತು. ಪ್ರಕೃತ ಪೃಥಗುಪದೇಶಾಧಿಕರಣದ ಮೂರನೆಯ 'ತತ್ಗುಣಸಾರತ್ವಾತ್' ಇತ್ಯಾದಿ ಸೂತ್ರದಲ್ಲಿರುವ ತತ್ಗುಣಸಾರತ್ವವನ್ನು ಉಪದೇಶ ಮಾಡುವುದಕ್ಕಾಗಿ ಈ ಪುಂಸ್ತ್ವಾಧಿಕರಣವು ಹೊರಟಿದೆ. ಪರಮಾತ್ಮನು ಜ್ಞಾನಾನಂದಸ್ವರೂಪನಾಗಿದ್ದಾನೆ. ತತ್ಸಾದೃಶ್ಯವು ಜೀವನಲ್ಲಿದೆ ಎಂಬ ಸಮರ್ಥನೆಯೇ ತದ್ಗುಣಸಾರತ್ವದ ಸಮರ್ಥನೆ.

**अत्र जीवस्यानन्दादिरूपत्वश्रुतिः किमनुपलब्धियुक्त्यनुगृहीतयाऽनानन्दादिरूप त्वश्रुत्या बाधितोत नेति चिन्ता । (अत्र श्रुतिसमन्वयेनोक्तं ब्रह्मणः सर्वस्रष्टृत्वादिकं किमयुक्तं न वेति चिन्ता । तदर्थं श्रुतिरप्रमाणं नवेति । तदर्थं जीवस्यानन्दादिरूपत्वश्रुतिः किमनुपलब्धियुक्त्यनुगृहीतयाऽनानन्दादि रूपत्वश्रुत्या बाधिता उतनेति ।) तदर्थं सतोऽप्यानन्दादेरज्ञानावरणादनुपलब्धिरयुक्तोत युक्तेति। तदर्थमावरणमज्ञानं किं ज्ञानाभाव एव किं वा ज्ञानाभावादिनिमित्तं भावान्तरमिति।**

ಈ ಅಧಿಕರಣದ ಸಂಶಯ ಪರಂಪರೆ ಹೀಗಿದೆ. ಜೀವನಿಗೆ ಆನಂದಾದಿರೂಪತ್ವವನ್ನು ಹೇಳುವ ಶ್ರುತಿಯು ಅನುಪಲಬ್ಧಿ ಯುಕ್ತಿಯಿಂದ ಅನುಗೃಹೀತವಾದ ಅನಾನಂದತ್ವವನ್ನು ಹೇಳುವ ಶ್ರುತಿಯಿಂದ ಬಾಧಿತವಾಗಿದೆಯೋ ಅಥವಾ ಇಲ್ಲವೋ? ಎಂಬುದು ಅಧಿಕರಣದ ಪ್ರಧಾನ ಸಂಶಯ.

ಅಥವಾ ವಿವರವಾದ ಸಂಶಯಪರಂಪರೆ ಹೀಗಿದೆ – ಶ್ರುತಿಸಮನ್ವಯದಿಂದ ಬ್ರಹ್ಮನಲ್ಲಿ ಸರ್ವಸ್ರಷ್ಟೃತ್ವಾದಿಗಳು ಹೇಳಲ್ಪಟ್ಟಿತು. ಇದು ಅಯುಕ್ತವೋ, ಅಯುಕ್ತವಲ್ಲವೋ? ಎಂಬುದು ಸಂಶಯ. ಇದರ ಪರಿಹಾರಕ್ಕಾಗಿ ಶ್ರುತಿಯು ಅಪ್ರಮಾಣವೋ ಅಲ್ಲವೋ ಎಂಬ ಸಂಶಯವನ್ನು ಪರಿಹರಿಸಬೇಕು. ಇದರ ಪರಿಹಾರಕ್ಕಾಗಿ ಜೀವನು ಆನಂದಾದಿ ರೂಪನಾಗಿದ್ದಾನೆಂದು ಹೇಳುವ ಶ್ರುತಿಯು ಅನುಪಲಬ್ಧಿ ಎಂಬ ಯುಕ್ತಿಯ ಸಹಕಾರವುಳ್ಳ ಅನಾನಂದತ್ವವನ್ನು ಪ್ರತಿಪಾದನೆ ಮಾಡುವ ಶ್ರುತಿಯಿಂದ ಬಾಧಿತವಾಗುತ್ತದೋ ಅಥವಾ ಇಲ್ಲವೋ? ಎಂಬ ಸಂಶಯವು ಪರಿಹಾರವಾಗಬೇಕು. ಇದರ ಪರಿಹಾರಕ್ಕಾಗಿ ಆನಂದಾದಿಗಳು ಜೀವನ ಸ್ವರೂಪವಾಗಿದ್ದರೂ ಕೂಡ ಅಜ್ಞಾನವೆಂಬ ಆವರಣವಿರುವುದರಿಂದ ಅನುಪಲಬ್ಧವಾಗಿದೆ ಎಂಬುದು ಅಯುಕ್ತವೋ ಅಥವಾ ಯುಕ್ತವೋ? ಎಂಬ ಸಂಶಯವು ಪರಿಹಾರವಾಗಬೇಕು. ಇದರ ಪರಿಹಾರಕ್ಕಾಗಿ ಆವರಣಭೂತವಾದ ಅಜ್ಞಾನವು, ಜ್ಞಾನಾಭಾವರೂಪವೋ ಅಥವಾ ಜ್ಞಾನಾಭಾವಕ್ಕೆ ನಿಮಿತ್ತವಾದ ಮತ್ತೊಂದು ಭಾವಪದಾರ್ಥವೋ? ಎಂಬ ಸಂಶಯವು ಪರಿಹಾರವಾಗಬೇಕು.

**भाष्योदाहृतायां ''विज्ञानात्मा'' इति षट्प्रश्नोपनिषदि ''स आनन्द'' इति श्रुत्यन्तरे च जीवलिङ्गाभावात्पूर्वपक्षानुदय इति न शङ्क्यम् । आद्यश्रुतौ ''प्राणा भूतानि सम्प्रतिष्ठन्ति यत्र'' इति वाक्यशेषे द्वितीयश्रुतौ च ''स परेणामुं लोकं नीयते स विमुच्यत'' इति वाक्यशेषे जीवलिङ्ग-श्रवणादित्याह – प्राणा भूतानीत्यादिना ।।**

ಭಾಷ್ಯದಲ್ಲಿ ವಿಜ್ಞಾನಾತ್ಮಾ ಎಂಬ ವಾಕ್ಯವನ್ನು ಉದಾಹರಿಸಿದ್ದಾರೆ. ಮತ್ತು ಷಟ್‌ಪ್ರಶ್ನೋಪನಿಷತ್ತಿನ 'ಸ ಆನಂದಃ' ಎಂಬ ವಾಕ್ಯವನ್ನೂ ಕೂಡ ಉದಾಹರಿಸಿದ್ದಾರೆ. ಈ ಎರಡು ವಾಕ್ಯಗಳು ಜೀವನನ್ನು ಜ್ಞಾನಸ್ವರೂಪವೆಂದು ಹೇಳುತ್ತಿವೆ ಎಂದು ನೀವು ಹೇಳಬೇಕು. ಆದರೆ ಇಲ್ಲಿ ಜೀವಲಿಂಗವೇ ಕೇಳಿಸುತ್ತಿಲ್ಲವಾದ್ದರಿಂದ ಪೂರ್ವಪಕ್ಷವೇ ಹುಟ್ಟಲು ಸಾಧ್ಯವಿಲ್ಲ ಅಲ್ಲವೇ?

ಈ ಆಶಂಕೆಯು ತಪ್ಪು. ಏಕೆಂದರೆ ಮೊದಲನೆಯ ಶ್ರುತಿಯಲ್ಲಿ 'ಪ್ರಾಣಾ ಭೂತಾನಿ ಸಂಪ್ರತಿಷ್ಠಂತಿ ಯತ್ರ' ಎಂಬ ವಾಕ್ಯಶೇಷವಿದೆ. ಎರಡನೇ ಶ್ರುತಿಯಲ್ಲಿ 'ಸ ಪರೇಣಾಮುಂ ಲೋಕಂ ನೀಯತೇ ಸ ವಿಮುಚ್ಯತೇ' ಎಂಬ ವಾಕ್ಯಶೇಷವಿದೆ. ಈ ಎರಡು ವಾಕ್ಯಶೇಷಗಳು ಜೀವಲಿಂಗವೇ ಆಗಿವೆ ಹೊರತು ಪರಮಾತ್ಮನ ಲಿಂಗಗಳಾಗಿಲ್ಲ. ಈ ಅಭಿಪ್ರಾಯದಿಂದ 'ಪ್ರಾಣಾಭೂತಾನಿ' ಇತ್ಯಾದಿ ಟೀಕೆಯು ಹೊರಟಿದೆ.

**तस्यैवानुपपत्तेरिति ।। ज्ञानाभाव एवाज्ञानमिति मते ।। वैपरीत्यादिति । शरीरस्यानन्दाद्यनुभवरूपभोगायतनत्वेन भोगप्रतिबन्धकत्वायोगादित्यर्थः ।**

ಟೀಕೆಯಲ್ಲಿ 'ತಸ್ಯೈವ ಅನುಪಪತ್ತೇಃ' ಎಂಬುದರ ಅಭಿಪ್ರಾಯ ಹೀಗಿದೆ – ಜ್ಞಾನಾಭಾವವೇ ಅಜ್ಞಾನವೆಂಬ ಮತದಲ್ಲಿ ಈ ಮಾತನ್ನು ಹೇಳಿದ್ದಾರೆ. ವೈಪರೀತ್ಯಾತ್ ಎಂದರೆ ಶರೀರವು

ಆನಂದಾದ್ಯನುಭವರೂಪಭೋಗಕ್ಕೆ ಆಶ್ರಯವಾಗಿರುವುದರಿಂದ ಭೋಗಕ್ಕೆ ಪ್ರತಿರೂಪವಲ್ಲ ಆದ್ದರಿಂದ ಎಂದರ್ಥ.

**भाष्ये असुराणामावरणाभावेनानन्दाद्यनुपलब्ध्यापादनमयुक्तम् । स्वरूपानन्दादेरभावादेवानुपलब्ध्युपपत्तेः । अनावरणस्यानुपलब्धिं प्रत्यप्रयोजकत्वाच्चेत्याशङ्क्य आनन्दाद्यनुपलब्धिर्नापाद्यते । किन्तु तत्प्रयोजिका सुखाद्युपलब्धिविरुद्धा स्वरूपदुःखाद्युपलब्धिरापाद्यत इत्याह – दुःखाद्यनुभव एव भवेदिति ।।**

'ಯದಿ ಆವರಣಂ ಸ್ಯಾತ್ ತರ್ಹಿ ಸ್ವರೂಪಾನಂದಾವಿರ್ಭಾವಃ ನ ಸ್ಯಾತ್' ಎಂದು ಹೇಳಿದ್ದು ದೇವತೆಗಳ ವಿಷಯದಲ್ಲಿ ಸಮಂಜಸವಾಗುತ್ತದೆ. ಆದರೆ ಅಸುರರಿಗೆ ಆನಂದವೇ ಇಲ್ಲದ ಕಾರಣ ಅನುಪಲಬ್ಧವಾಗುತ್ತದೆಂದು ಹೇಳಬಹುದು. ಮತ್ತು 'ಯದಿ ಆವರಣಂ ನ ಸ್ಯಾತ್ ತರ್ಹಿ ಉಪಲಬ್ಧಿಃ ಸ್ಯಾತ್' ಎಂದು ತರ್ಕವನ್ನು ಹೇಳಬೇಕು. ಆದರೆ ಭಾಷ್ಯದಲ್ಲಿ 'ಉಪಲಬ್ಧಿಃ ನ ಸ್ಯಾತ್' ಎಂದು ಹೇಳಲಾಗಿದೆ. ಈ ಆವರಣಾಭಾವವು ಉಪಲಬ್ಧಿಗೆ ಪ್ರಯೋಜಕವಾಗಬಹುದು. ಅನುಪಲಬ್ಧಿಗೆ ಪ್ರಯೋಜಕವಾಗುವುದಿಲ್ಲ. ಹೀಗೆ ಆಶಂಕಿಸಲಾಗಿದೆ. ಒಂದುವೇಳೆ ಅಸುರರಿಗೆ ಆವರಣವು ಇಲ್ಲದೇ ಇದ್ದಲ್ಲಿ ಆನಂದವು ಉಪಲಬ್ಧ ಆಗದೇ ಇರಬೇಕಾದೀತು ಎಂದು ನಾವು ಆಪಾದನೆ ಮಾಡುವುದೇ ಇಲ್ಲ. ಆನಂದಾದ್ಯುಪಲಬ್ಧಿಗೆ ವಿರೋಧಿಯಾದ ಸ್ವರೂಪದುಃಖೋಪಲಬ್ಧಿಯು ಉಪಲಬ್ಧ ಆಗದೇ ಇರಬೇಕಾದೀತು. ವೈಷೈಶಿಕ ಸುಖದ ಅನುಭವವೇ ಇರಬೇಕಾಗಿದ್ದೀತು ಎಂಬುದು ಆಪಾದನೆಯ ಅಭಿಪ್ರಾಯ. ಈ ವಿವಕ್ಷೆಯಿಂದ 'ದುಃಖಾದ್ಯನುಭವಃ ನ ಭವೇತ್' ಇತ್ಯಾದಿ ಟೀಕಾವಾಕ್ಯವು ಹೊರಟಿದೆ.

**भाष्ये मध्यममनुष्याणामानन्दोपलब्धितदभावावापादितौ । तत्रोपलब्ध्यभावापादनमयुक्तम् । आवरणाभावस्यानुपलब्धिं प्रत्यप्रयोजकत्वादित्याशङ्क्य सुखोपलब्धेरेवाभावो नापाद्यते । किन्तु केवलायाः दुःखाद्यनुपलब्धिविशिष्टायाः सुखोपलब्धेरभावः । ततश्च सुखाद्यनुपलब्ध्यापादनेन दुःखाद्युपलब्धिरेवापादिता भवति । अतो न दोष इत्याह – केवलतदुपलब्ध्याभाव इत्यादिना ।।**

ಭಾಷ್ಯದಲ್ಲಿ ಮಧ್ಯಮಮನುಷ್ಯರಿಗೆ ಸುಖದುಃಖಗಳೆರಡು ನಿತ್ಯದಲ್ಲಿಯೂ ಉಪಲಬ್ಧ ಆಗಬೇಕಾದೀತು ಎಂದು ಆಪಾದನೆ ಮಾಡಲಾಗಿದೆ. ಆದರೆ ಆವರಣಾಭಾವವು ಉಪಲಬ್ಧ್ಯಭಾವಕ್ಕೆ ಉಪಯೋಗವಾಗಿದೆ. ಆದರೆ ಅನುಪಲಬ್ಧಿಗ್ಗೆ ಪ್ರಯೋಜಕವಾಗಿಲ್ಲ. ಇದಕ್ಕೆ ಟೀಕೆಯಲ್ಲಿ ಉತ್ತರಿಸಿದ್ದಾರೆ. ಸ್ವರೂಪದ ಸುಖ-ದುಃಖಗಳೆರಡು ಉಪಲಬ್ಧವಾಗಬೇಕಾದೀತು ಎಂಬುದು ಒಂದು ಆಪತ್ತಿ. ಅಥವಾ ಅನುಪಲಬ್ಧಿ ಎಂದರೆ ಸುಖದುಃಖಾದಿಗಳ ಉಪಲಬ್ಧ್ಯಭಾವ ಎಂದಷ್ಟೇ ಅರ್ಥವಲ್ಲ. ದುಃಖಾನುಪಲಬ್ಧಿವಿಶಿಷ್ಟವಾದ ಸುಖೋಪಲಬ್ಧಿಯ ಅಭಾವದ ಆಪಾದನೆ ಎಂದರ್ಥ. ಅಭಿಪ್ರಾಯ ಹೀಗಿದೆ - ನಿತ್ಯಸಂಸಾರಿಗಳು ಸುಷುಪ್ತಿಯಲ್ಲಿ ಇದ್ದಾಗ ದುಃಖದ ಉಪಲಬ್ಧಿಯೇ ಇರುವುದಿಲ್ಲ. ಅದೂ ಕೂಡ ಇಲ್ಲದೇ ಇರಬೇಕಾದೀತು ಎಂದು. ಆದ್ದರಿಂದ ದುಃಖಾದ್ಯುಪಲಬ್ಧಿ ವಿಶಿಷ್ಟವಾದ ಸುಖೋಪಲಬ್ಧಿಯು

ಇಲ್ಲದೇ ಇರಬೇಕಾದೀತು ಎಂದು ಆಪಾದನೆ ಮಾಡಿದರೆ ಯಾವುದೇ ದೋಷಕ್ಕೆ ಅವಕಾಶವಿಲ್ಲ. ಆದ್ದರಿಂದ ಸುಖಾದ್ಯನುಪಲಬ್ಧಿಯನ್ನು ಆಪಾದನೆ ಮಾಡಿದ್ದರಿಂದ ದುಃಖಾನುಪಲಬ್ಧಿವಿಶಿಷ್ಟವಾದ ಸುಖೋಪಲಬ್ಧಿಯು ಇಲ್ಲದೇ ಇರಬೇಕಾದುದನ್ನು ಉಪಪಾದನೆ ಮಾಡಿದಂತಾಯಿತು. ಅಂದರೆ ಸ್ವರೂಪಭೂತವಾದ ದುಃಖದ ಅನುಭವವು ನಿರಂತರ ಆಗಬೇಕಾದೀತು ಎಂಬುದು ಅಭಿಪ್ರಾಯ. ಆದ್ದರಿಂದ ಯಾವುದೇ ದೋಷಕ್ಕೆ ಅವಕಾಶವಿಲ್ಲ ಎಂಬುದನ್ನು ಕೇವಲ ತದುಪಲಬ್ಧ್ಯಭಾವಃ ಇತ್ಯಾದಿಯಾಗಿ ಹೇಳಿದ್ದಾರೆ.

**समैवेति ।। मध्यममनुष्याणां मिश्रत्वात्सुखस्य दुःखस्य चोपलब्धिः समैव स्यादित्यर्थः ।**

ಮಧ್ಯಮ ಮನುಷ್ಯರಿಗೆ ಸುಖದುಃಖಗಳು ಸಮಾನವಾಗಿ ಅನುಭವಕ್ಕೆ ಬರಬೇಕಾದೀತು ಎಂದು ಟೀಕೆಯಲ್ಲಿ ಹೇಳಿದ್ದಾರೆ. ಏಕೆಂದರೆ ಮಧ್ಯಮಮನುಷ್ಯರು ಮಿಶ್ರಸ್ವರೂಪರಾದ್ದರಿಂದ ಸುಃಖ ಹಾಗೂ ದುಃಖಗಳು ನಿರಂತರವಾಗಿ ಸಮಾನವಾಗಿ ಬರಬೇಕಾದೀತು ಎಂಬುದು ಇದರ ಅಭಿಪ್ರಾಯ.

**एवञ्च सूत्रे सुराणां नित्यं सुखस्यैव असुराणां नित्यं दुःखस्यैव मनुष्याणां तद्वयोरुपलब्धिरापाद्यते । सूत्रेऽनुपलब्धिशब्देन ''असुरा'' इत्यादाविव प्रकृतसुखोपलब्धिविरुद्धदुःखोपलब्धेरेव विवक्षितत्वात् । अन्यतरशब्देन द्वयोरपि विवक्षितत्वादिति द्रष्टव्यम् ।।**

ಆದ್ದರಿಂದ 'ಅನುಪಲಬ್ಧೇಃ' ಎಂಬ ಸೂತ್ರಕ್ಕೆ ಹೀಗರ್ಥ – ದೇವತೆಗಳಿಗೆ ನಿತ್ಯವಾಗಿ ಸುಖದ ಅನುಭವವೇ ಆಗಬೇಕಾದೀತು. ಅಸುರರಿಗೆ ನಿತ್ಯವಾಗಿ ದುಃಖದ ಅನುಭವವೇ ಆಗಬೇಕಾದೀತು. ನಿತ್ಯಸಂಸಾರಿಗಳಾದ ಮನುಷ್ಯರಿಗೆ ಸುಖದುಃಖಗಳ ಅನುಭವವು ನಿತ್ಯವು ಒಟ್ಟಿಗೆ ಆಗಬೇಕಾದೀತು.

ಸೂತ್ರದಲ್ಲಿರುವ ಅನುಪಲಬ್ಧಿ ಶಬ್ದಕ್ಕೆ 'ಅಸುರಾಃ' ಎಂಬಲ್ಲಿ ಹೇಗೆ ದೇವತೆಗಳಿಗೆ ವಿರುದ್ಧರಾದವರು ಎಂಬುವುದಾಗಿ 'ನಞ್' ಸಮಾಸ ಮಾಡುತ್ತೇವೋ ಅದರಂತೆ ಪ್ರಕೃತವಾದ ಸುಖೋಪಲಬ್ಧಿಗೆ ವಿರುದ್ಧವಾದ ದುಃಖೋಪಲಬ್ಧಿ ಎಂಬ ಅರ್ಥವನ್ನೇ ವಿವಕ್ಷಿಸಬೇಕು. ಅನ್ಯತರ ಶಬ್ದದಿಂದ ಸುಖದುಃ ಖಗಳೆರಡನ್ನೂ ವಿವಕ್ಷಿಸಬೇಕು.

**एवं सुरा इति हृदयमिति ।। श्रुतौ परमात्मशब्देनोत्तमजीवराशिर्वा ''परमात्मा'' इत्यस्यानन्तरं ''एवं सुरा'' इत्यध्याहारो वा विवक्षणीयः । नैवमसुरा इत्युत्तरवाक्येऽसुरजीवानां प्रतियोगित्वेनोक्तेः । भाष्योक्तस्मृतिसमाख्यानाचेति भावः ।**

'ನಿತ್ಯಾನಂದಾಃ' ಇತ್ಯಾದಿ ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಯಲ್ಲಿ ಪ್ರಕೃತ ಪರಮಾತ್ಮನು ಪ್ರಸಕ್ತನೇ ಅಲ್ಲ. ಮತ್ತು ಮುಕ್ತಿಯೋಗ್ಯರಾದ ದೇವತೆಗಳ ಬಗ್ಗೆ ಪ್ರಸಕ್ತಿಯೇ ಬಂದಿರುವುದಿಲ್ಲ. ಅದಕ್ಕಾಗಿ ಟೀಕೆಯಲ್ಲಿ 'ಏವಂ ಸುರಾಃ ಇತಿ ಹೃದಯಂ' ಎಂದು ಹೇಳಿದ್ದಾರೆ. ಪರಮಾತ್ಮನ ಪ್ರತಿಬಿಂಬರಾದ ದೇವತೆಗಳೂ ಕೂಡ ಜ್ಞಾನಾನಂದಾತ್ಮಕರಾಗಿದ್ದಾರೆ ಎಂಬುದು ಶ್ರುತಿಯ ಅಭಿಪ್ರಾಯ. ಟೀಕೆಯ ಈ

ವಾಕ್ಯದ ಅಭಿಪ್ರಾಯ ಹೀಗಿದೆ – ಶ್ರುತಿಯಲ್ಲಿ ಪರಮಾತ್ಮ ಶಬ್ದದಿಂದ ಉತ್ತಮ ಜೀವರಾಶಿಗಳನ್ನು ವಿವಕ್ಷಿಸಬೇಕು. ಅಥವಾ ಪರಮಾತ್ಮ ಎಂಬುದರ ಅನಂತರ 'ಏವಂ ಸುರಾ' ಎಂಬುದನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಪರಮಾತ್ಮ ಶಬ್ದವು ಏಕವಚನ ಆಗಿದ್ದರೂ ಉತ್ತಮಜೀವರಾಶಿ ಎಂಬ ಅರ್ಥವನ್ನು ವಿವಕ್ಷಿಸಿದಾಗ ಸಮುದಾಯಾರ್ಥದಲ್ಲಿ ಏಕವಚನವು ಯುಕ್ತವಾಗುತ್ತದೆ. ದೇವತೆಗಳನ್ನು ಏಕೆ ವಿವಕ್ಷಿಸಬೇಕು ಎಂದರೆ ಮುಂದೆ 'ನೈವಂ ಅಸುರಾಃ' ಎಂಬ ವಾಕ್ಯದಲ್ಲಿ ಅಸುರಜೀವರನ್ನು ಪ್ರತಿಯೋಗಿಯಾಗಿ ಮಾಡಿದ್ದಾರೆ. ಇದರಿಂದ ದೇವತೆಗಳನ್ನು ವಿವಕ್ಷಿಸಲೇಬೇಕು. ಮತ್ತು ಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿಸಮಾಖ್ಯಾದಿಂದಲೂ ದೇವತೆಗಳನ್ನು ಪರಮಾತ್ಮ ಶಬ್ದದಿಂದ ವಿವಕ್ಷಿಸಬೇಕೆಂದು ತಿಳಿಯುತ್ತದೆ.

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**पुंस्त्वादिवत्त्वस्य** ।। ''अस्येति तद्गुणसारत्वं प्रकृतं परामृश्यत'' इति टीकोक्तिसूचितामाह – **पूर्वत्रेति** ।। ''पृथगुपदेशात्'' इत्यधिकरणीयेत्यर्थः ।

पूर्वपक्षादिटीकासूचितचिन्ता आह – **अत्र जीवस्येति** ।। दुर्गमानि टीकावाक्यानि व्यनक्ति ।। **भाष्येति** ।। टीकोक्तार्थस्य भाष्यानुगुण्यं प्रदर्श्य सूत्राक्षरानुगुण्यं च प्रदर्शयति ।। **एवञ्च सूत्र इति** ।।

'ಅಸ್ಯೇತಿ ತದ್ಗುಣಸಾರತ್ವಂ ಪ್ರಕೃತಂ ಪರಾಮೃಶ್ಯತೇ' ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. ಆ ಟೀಕೆಯಲ್ಲಿ ಸೂಚಿತವಾದ ವಿಷಯವನ್ನೇ ಗ್ರಂಥಕಾರರು 'ಪೂರ್ವತ್ರ' ಎಂಬುದಾಗಿ ವ್ಯಾಖ್ಯಾನ ಮಾಡಿದ್ದಾರೆ. ಪೃಥಗುಪದೇಶಾಧಿಕರಣದಲ್ಲಿ ಎಂಬುದು ಇದರ ಅರ್ಥ. ಪೂರ್ವಾಪಕ್ಷಾದಿ ಟೀಕೆಯಲ್ಲಿ ಸೂಚಿತವಾದ ಸಂಶಯಕೋಟಿಯನ್ನು 'ಅತ್ರ ಜೀವಸ್ಯ' ಎಂಬುದಾಗಿ ಹೇಳಿದ್ದಾರೆ. ಕಠಿಣವಾದ ಟೀಕಾವಾಕ್ಯಗಳ ವ್ಯಾಖ್ಯಾನವನ್ನು 'ಭಾಷ್ಯೇ' ಇತ್ಯಾದಿಯಾಗಿ ಮಾಡಿದ್ದಾರೆ. ಟೀಕೆಯಲ್ಲಿ ಹೇಳಿದ ಅರ್ಥವು ಭಾಷ್ಯಕ್ಕೆ ಅನುಗುಣವಾಗಿದೆ ಎಂದು ತೋರಿಸಿ ಸೂತ್ರಾಕ್ಷರಕ್ಕೂ ಕೂಡ ಅನುಗುಣವಾಗಿದೆ ಎಂಬುದನ್ನು 'ಏವಂ ಚ ಸೂತ್ರೇ' ಎಂಬುದರಿಂದ ತೋರಿಸಿದ್ದಾರೆ.

## तात्पर्यचन्द्रिका

**अन्ये तु उत्क्रान्तीत्यादिसूत्रनवकेन जीवस्याणुत्वे पूर्वपक्षिते ''तद्गुण'' इत्यादिसूत्रचतुष्टयेन महत्त्वं सिद्धान्त्यत इत्याहुः ।**

ಅದ್ವೈತಿಗಳು ಉತ್ಕ್ರಾಂತಿಗತ್ಯಾಗತೀನಾಂ ಎಂಬ ಸೂತ್ರದಿಂದ ಪ್ರಾರಂಭ ಮಾಡಿ ಒಂಭತ್ತು ಸೂತ್ರಗಳು ಜೀವನ ಅಣುತ್ವವನ್ನು ಪೂರ್ವಪಕ್ಷ ಮಾಡುತ್ತವೆಂದು ಹೇಳುತ್ತಾರೆ. ತದ್ಗುಣಸಾರತ್ವಾತ್

ಎಂಬ ಸೂತ್ರದಿಂದ ಪ್ರಾರಂಭ ಮಾಡಿ ನಾಲ್ಕು ಸೂತ್ರಗಳು ಜೀವನಿಗೆ ಮಹತ್ವವನ್ನು ಸಿದ್ಧಾಂತ ಮಾಡುತ್ತವೆ ಎಂದು ಹೇಳುತ್ತಾರೆ.

**तन्न । सूत्रकृता वैराग्यपादे ''तदन्तरप्रतिपत्तौ'' इत्यादिसूत्रैर्जीवे तत्तत्कर्मफलानुभवाय देहान्तरगतेः, ''यथेतमनेवं च'' इत्यादिसूत्रैः सुकृतफलभोगाय धूमादिमार्गेण गतेः, ''संयमने त्वनुभूय'' इत्यादिसूत्रैर्दुष्कृतफलभोगाय संयमनी-मार्गेण गतेः अर्चिरादिपादे मोक्षायार्चिरादिमार्गेण गतेश्च तत्तदधिकरणोदाहृतानेक-श्रुतिस्मृतितात्पर्यनिर्णायकन्यायैः सिद्धान्तितत्वेनोत्क्रान्त्यादिसूत्राणां पूर्वपक्षत्वोक्तेरति-साहसत्वात् ।**

ಅದ್ವೈತಿಗಳ ಈ ವಾದ ತಪ್ಪು. ಸ್ವತಃ ಸೂತ್ರಕಾರರೇ ವೈರಾಗ್ಯ ಪಾದದಲ್ಲಿ 'ತದಂತರಪ್ರತಿಪತ್ತೌ' ಇತ್ಯಾದಿ ಸೂತ್ರದಲ್ಲಿ ಜೀವನು ತಾನು ಮಾಡಿದ ಕರ್ಮಫಲದ ಅನುಭವಕ್ಕೋಸ್ಕರ ದೇಹಾಂತರಗಮನವನ್ನು ಮಾಡುತ್ತಾನೆ ಎಂದು ಸಿದ್ಧಾಂತ ಮಾಡಿದ್ದಾರೆ. 'ಯಥೇತಮನೇವಂ ಚ' ಇತ್ಯಾದಿ ಸೂತ್ರಗಳಲ್ಲಿ ಸುಕೃತಫಲಭೋಗಕ್ಕೋಸ್ಕರ ಧೂಮಾದಿಮಾರ್ಗದಿಂದ ಗಮನವನ್ನು ಹೊಂದುತ್ತಾನೆ ಎಂದಿದ್ದಾರೆ. 'ಸಂಯಮನೇತು' ಇತ್ಯಾದಿ ಸೂತ್ರಗಳಲ್ಲಿ ದುಷ್ಕೃತಫಲಭೋಗಕ್ಕೋಸ್ಕರ ನರಕ ಮಾರ್ಗದಲ್ಲಿ ತೆರಳುತ್ತಾನೆ ಎಂದಿದ್ದಾರೆ. ಅರ್ಚಿರಾದಿಪಾದದಲ್ಲಿ ಮೋಕ್ಷವನ್ನು ಹೊಂದುವುದಕ್ಕಾಗಿ ಅರ್ಚಿರಾದಿ ಮಾರ್ಗಗಳಲ್ಲಿ ತೆರಳುತ್ತಾನೆ ಎಂದಿದ್ದಾರೆ. ಈ ಎಲ್ಲಾ ಅಧಿಕರಣಗಳಲ್ಲಿ ಉದಾಹರಿಸಿದ ಅನೇಕ ಶ್ರುತಿ ಸ್ಮೃತಿಗಳಿಂದ ಹಾಗೂ ತಾತ್ಪರ್ಯನಿರ್ಣಾಯಕ ನ್ಯಾಯಗಳಿಂದ ಸೂತ್ರಕಾರರು ಜೀವನಿಗೆ ಅಣುತ್ವವನ್ನು ಸಿದ್ಧಾಂತ ಮಾಡಿರುವುದರಿಂದ ಉತ್ಕ್ರಾಂತ್ಯಾದಿ ಸೂತ್ರಗಳು ಪೂರ್ವಪಕ್ಷಪ್ರಾಪಕವಾಗಿವೆ ಎಂಬ ಅದ್ವೈತಿಗಳ ವಾದ ಅತಿಸಾಹಸವಾಗಿದೆ.

**नहि बुद्धिः कर्मफलभोगेन संसरति न वा मुच्यते । किं चोत्क्रान्त्यादिसूत्राणां ''अणुर्ह्येष आत्मा'' ''सोऽस्माच्छरीरादुत्क्रम्य यथा व्याप्य शरीराणि हरिचन्दनविप्रुषः'' । इत्यादिभाष्योदाहृतश्रुतिस्मृत्यनुगुणानां वक्ष्यमाणन्यायोप-बृंहितानां शङ्कालिङ्गरहितानामुत्तरसूत्रेष्वनुक्तपरिहाराणां च कथं शङ्कासूत्रत्वम् ।**

ಅದ್ವೈತಿಗಳು ಬುದ್ಧಿಯ ಕರ್ಮಫಲಕ್ಕೋಸ್ಕರ ಗಮನಾಗಮನವನ್ನು ಹೊಂದಿದೆ. ಆದ್ದರಿಂದ ಸಂಸಾರ ಮೋಕ್ಷಗಳೆರಡು ಬುದ್ಧಿಗೆ ಹೊರತು ಜೀವನಿಗಲ್ಲ ಎಂದು ಹೇಳುತ್ತಾರೆ. ಇದು ತಪ್ಪು.

ಮತ್ತು ಉತ್ಕ್ರಾಂತ್ಯಾದಿ ಒಂಬತ್ತು ಸೂತ್ರಗಳು ಪೂರ್ವಪಕ್ಷಸ್ಥಾಪಕವಾಗಲು ಸಾಧ್ಯವೇ ಇಲ್ಲ. ಅದು ಹೀಗೆ – 'ಅಣುರ್ಹ್ಯೇಷ ಆತ್ಮಾ' ಎಂಬ ಶ್ರುತಿಯು ಸ್ಪಷ್ಟವಾಗಿ ಜೀವನು ಅಣುಸ್ವರೂಪನಾಗಿದ್ದಾನೆ ಎನ್ನುತ್ತಿದೆ. 'ಸೋಽಸ್ಮಾಚ್ಛರೀರದುತ್ಕ್ರಮ್ಯ' ಎಂಬ ಶ್ರುತಿಯು ಶರೀರದಿಂದ ಉತ್ಕ್ರಮಣ ಮಾಡುತ್ತಾನೆ. ಆದ್ದರಿಂದ ಅಣ ಎಂದು ಹೇಳುತ್ತಿದೆ. 'ಯಥಾ ವ್ಯಾಪ್ಯ ಶರೀರಾಣಿ ಹರಿಚಂದನವಿಪ್ರುಷಃ' ಎಂಬ ವಾಕ್ಯವೂ ಕೂಡ ಅಣುಸ್ವರೂಪನಾಗಿದ್ದರೂ ಪ್ರಕಾಶದಿಂದ ವ್ಯಾಪ್ತನಾಗಿದ್ದಾನೆ ಎನ್ನುತ್ತಿದೆ. ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಸ್ಮೃತಿಗಳಿಗೆ ಅನುಗುಣವಾಗಿ ಮತ್ತು ಮುಂದೆ ಹೇಳುವ ನ್ಯಾಯಗಳಿಂದ ಜೀವನು

ಅಣುವೆಂದೇ ನಿರ್ಣಯವಾಗುತ್ತದೆ. ಮತ್ತು ಈ ಒಂಭತ್ತು ಸೂತ್ರಗಳು ಪೂರ್ವಪಕ್ಷ ಸ್ಥಾಪಕವಾಗಿವೆ ಎಂಬುದಕ್ಕೆ ಯಾವುದೇ ಲಿಂಗವೇ ಇಲ್ಲ. ಮತ್ತು ಈ ಒಂಭತ್ತು ಸೂತ್ರಗಳು ಪೂರ್ವಪಕ್ಷ ಸ್ಥಾಪಕವಾಗಿದ್ದರೆ ಮುಂದಿನ ನಾಲ್ಕುಸೂತ್ರಗಳಲ್ಲಿ ಉತ್ತರವನ್ನು ಹೇಳಬೇಕಿತ್ತು. ಅದೂ ಕೂಡ ಕಾಣಿಸುತ್ತಿಲ್ಲ. ಆದ್ದರಿಂದ ಇವುಗಳನ್ನು ಪೂರ್ವಪಕ್ಷ ಸೂತ್ರವೆಂದು ಹೇಗೆ ಹೇಳುವಿರಿ?

**कथञ्च ''नाणुरतच्छ्रुतेरिति चेत्'' इति शङ्कालिङ्गसहितसूत्रोक्तस्योक्तश्रुत्यादिविरुद्धस्य च महत्त्वस्य सिद्धान्तत्वम् । न ह्यत्रोत्तरसूत्रेषु परिहार उक्तः । किन्तु त्वयैव सूत्रव्याख्याव्याजेन सूत्राणि दूषितानि ।**

ಮತ್ತು 'ನಾಣುರತಚ್ಛ್ರುತೇರಿತಿ ಚೇತ್' ಎಂಬುದು ಸಿದ್ಧಾಂತಸ್ಥಾಪಕವಾದ ನಾಲ್ಕುಸೂತ್ರಗಳ ಮಧ್ಯದಲ್ಲಿ ಇದೆ. ಇದು ಶಂಕಾಲಿಂಗಸಹಿತವಾದ ಸೂತ್ರವಾಗಿದೆ. ಇದರಲ್ಲಿ ಸ್ಪಷ್ಟವಾಗಿ ಜೀವನ ಮಹತ್ವವನ್ನು ಇಲ್ಲಿ ಆಕ್ಷೇಪಣೆ ಮಾಡಿಕೊಂಡಿರುವಾಗ ಶ್ರುತ್ಯಾದಿವಿರುದ್ಧವಾದ ಮಹತ್ವವನ್ನು ನೀವು ಹೇಗೆ ಸಿದ್ಧಾಂತ ಮಾಡುತ್ತೀರಿ. ಮತ್ತು ಈ 'ನಾಣುರತಚ್ಛ್ರುತೇಃ' ಎಂಬ ಸೂತ್ರದಲ್ಲಿ ಯಾವ ಮಹತ್ವವನ್ನು ಆಕ್ಷೇಪ ಮಾಡಿಕೊಂಡು ಅಣುತ್ವವನ್ನು ಸಿದ್ಧಾಂತ ಮಾಡಿದ್ದಿರೋ ಇದಕ್ಕೆ ಮುಂದಿನ ಸೂತ್ರದಲ್ಲಿ ಪರಿಹಾರವು ಕೂಡ ಕಾಣಿಸುತ್ತಿಲ್ಲ. ಸೂತ್ರವನ್ನು ವ್ಯಾಖ್ಯಾನ ಮಾಡುವ ನೆಪದಿಂದ ನಿನ್ನ ಕಪೋಲಕಲ್ಪಿತವಾದ ಅರ್ಥಗಳನ್ನು ಹೇಳಿ ಸೂತ್ರಗಳನ್ನು ದೂಷಣೆ ಮಾಡಿರುವಿ.

**प्रकाशः —**

अन्ये त्विति ।। सूत्रनवकेनेति पाठस्साधुः । सूत्राष्टकेनेति क्वाचित्कः पाठो लेखकदोषमूलः । तथा हि ''एषोऽणुरात्मा चेतसा वेदितव्यः । स यदाऽस्माच्छरीरादुत्क्रामति'' इत्यादावुत्क्रान्तिगत्यागतीनां श्रवणाज्जीवोऽणुः । स्वात्मना सम्बद्धयोर्मरणादुत्तरयोर्गमनागमनयोः ''चन्द्रमसमेव ते सर्वे गच्छन्ति'' इत्यादिवाक्योक्त्योर्व्याप्ते जीवेऽनुपपत्तेर्मध्यमपरिमाणत्वेऽनित्यत्वप्रसङ्गादणुर्जीवः ।

'ಸೂತ್ರನವಕೇನ' ಎಂಬ ಪಾಠವೇ ಸಾಧುವಾಗಿದೆ. ಕೆಲವು ಪುಸ್ತಕದಲ್ಲಿ ಸೂತ್ರಾಷ್ಟಕೇನ ಎಂದಿದೆ. ಇದು ಲೇಖಕ ದೋಷ ಮೂಲಕವಾದ್ದರಿಂದ ಅಗ್ರಾಹ್ಯವಾಗಿದೆ.

ಅದ್ವೈತಿಗಳು ಒಂಭತ್ತು ಸೂತ್ರಗಳನ್ನು ಪೂರ್ವಪಕ್ಷಪ್ರಾಪಕವೆನ್ನುತ್ತಾರೆ. ಅದು ಹೀಗೆ–

ಉತ್ಕ್ರಾಂತಿಗತ್ಯಾಗತೀನಾಂ - 'ಏಷೋಽಣುರಾತ್ಮಾ ಚೇತಸಾ ವೇದಿತವ್ಯಃ । ಸ ಯದಾಽಸ್ಮಾತ್ ಶರೀರಾದುತ್ಕ್ರಾಮತಿ' ಎಂಬ ಕೌಶೀತಕೀ ಉಪನಿಷತ್ತಿನಲ್ಲಿ ಜೀವನು ಶರೀರದಿಂದ ತೆರಳುತ್ತಾನೆ ಮತ್ತು ಆಗಮಿಸುತ್ತಾನೆ ಎಂದು ಹೇಳಲಾಗಿದೆ. ಆದ್ದರಿಂದ ಜೀವನನ್ನು ಅಣುವೆಂದೇ ಹೇಳಬೇಕು. ವ್ಯಾಪ್ತನಾದರೆ ಈ ಗಮನಾಗಮನಗಳು ಯುಕ್ತವಾಗುವುದಿಲ್ಲ. (ಶ್ರವಣಾತ್ ಎಂಬುದನ್ನು ಅಧ್ಯಾಹಾರ ಮಾಡಬೇಕು).

ಸ್ವಾತ್ಮನಾ ಚೋತ್ತರಯೋಃ - ಸ್ವಾತ್ಮನಾ = ಜೀವಾತ್ಮನಿಗೆ ಸಂಬಂಧಪಟ್ಟ, ಉತ್ತರಯೋಃ= ಮರಣದ ಅನಂತರ ಇರುವ ಗಮನಾಗಮನಗಳು 'ಚಂದ್ರಮಸೇವ ತೇ ಸರ್ವೇ ಗಚ್ಛಂತಿ' ಇತ್ಯಾದಿ ವಾಕ್ಯದಲ್ಲಿ ಹೇಳಲ್ಪಟ್ಟ ಗಮನ ಮತ್ತು ಆಗಮನಗಳು ವ್ಯಾಪ್ತನಾದ ಜೀವನಲ್ಲಿ ಅನುಪಪನ್ನವಾಗುತ್ತವೆ. ಜೀವನನ್ನು

ಮಧ್ಯಮಪರಿಮಾಣನೆಂದು ಹೇಳಿದರೆ ಅನಿತ್ಯತ್ವ ಪ್ರಸಂಗ ಬರುತ್ತದೆ. ಆದ್ದರಿಂದ ಅಣುವೆಂದೇ ಹೇಳಬೇಕು. (ಈ ಸೂತ್ರದಲ್ಲಿ 'ಮರಣದುತ್ತರಯೋಃ, ಅನುಪಪತ್ತೇಃ ಮಧ್ಯಮ ಪರಿಮಾಣತ್ವೇ ಅತಿ ಪ್ರಸಂಗಾತ್ ಅಣುರ್ಜೀವಃ' ಇಷ್ಟನ್ನು ಅಧ್ಯಾಹಾರ ಮಾಡಿಕೊಳ್ಳಬೇಕು.)

**प्रकाशः** –''नाणुरतच्छतेरिति चेन्नेतराधिकारात्'' । ''स वा एष महानज आत्म'' इत्यनणुत्वश्रुतेर्जीवोऽणुर्नेति चेन्न । इतरस्य ब्रह्मणो वेदान्तेषु प्राधान्येनाऽधिक्रियमाणत्वान्महत्त्वश्रुतेस्तद्विषयत्वोपपत्तेः ।

'ನಾಣುರತಚ್ಛ್ರುತೇರಿತಿ ಚೇತ್ ನೇತರಾಧಿಕಾರಾತ್' ಜೀವನು ಮಹತ್ಪರಿಮಾಣವುಳ್ಳವನಾಗಿದ್ದಾನೆ ಹೊರತು ಅಣುವಲ್ಲ. 'ಸ ವಾ ಏಷ ಮಹಾನಜ ಆತ್ಮಾ' ಎಂಬ ಶ್ರುತಿಯು ಇವನನ್ನು ಅಣುವಲ್ಲವೆಂದು ಹೇಳುತ್ತಿದೆ. ಹೀಗೆ ಆಕ್ಷೇಪ ಮಾಡಬಾರದು. ಏಕೆಂದರೆ ಈ ಶ್ರುತಿಯು ಪರಮಾತ್ಮನ ಪ್ರಕರಣದಲ್ಲಿದೆ. ಆದ್ದರಿಂದ ಪರಮಾತ್ಮನಿಗೆ ಮಹತ್ವವನ್ನು ಹೇಳಲು ಹೊರಟದೆ ಹೊರತು ಜೀವನಿಗಲ್ಲ. ಆದ್ದರಿಂದ ಜೀವನು ಅಣುವೇ ಆಗಿದ್ದಾನೆ.

**प्रकाशः** – ''स्वशब्दोन्मानाभ्यां च'' । ''एषोऽणुरात्मा चेतसा वेदितव्य'' इति साक्षादणुत्ववाचिशब्दात्,

वालाग्रशतभागस्य शतधा कल्पितस्य च ।
भागो जीवस्स विज्ञेयस्स चानन्त्याय कल्पते ।

आराग्रमात्रो ह्यपरोऽपि दृष्ट'' इत्युन्मानत्वाच्च जीवोऽणुः । नन्वणुत्वे कथं सर्वाङ्गीणतापोपलब्धिरित्यत उत्तरं ''अविरोधश्चन्दनवत्'' । एकदेशस्य चन्दनस्य सर्वाङ्गीणाह्लादजनकत्ववदणोरपि सर्वाङ्गीणकार्यकरत्वोपपत्तेः ।

'ಸ್ವಶಬ್ದೋನ್ಮಾನಾಭ್ಯಾಂ ಚ' - 'ಏಷೋಽಣುರಾತ್ಮಾ ಚೇತಸಾ ವೇದಿತವ್ಯಃ' ಎಂಬುದಾಗಿ ಮಂಡೂಕೋಪನಿಷತ್ತಿನಲ್ಲಿ ಜೀವನನ್ನು ಅಣುವೆಂದು ಹೇಳಲಾಗಿದೆ. 'ಬಾಲಾಗ್ರಶತಭಾಗಸ್ಯ ಶತಧಾ ಕಲ್ಪಿತಸ್ಯ ಚ । ಭಾಗೋ ಜೀವಸ್ಸ ವಿಜ್ಞೇಯಸ್ಸ ಚಾನಂತ್ಯಾಯ ಕಲ್ಪತೇ ॥' ಕುದುರೆ ಬಾಲದ ತುದಿಯನ್ನು ನೂರುಭಾಗ ಮಾಡಿ ಅದನ್ನು ಪುನಃ ನೂರು ಭಾಗ ಮಾಡಿದಾಗ ಇರುವ ಪರಿಮಾಣವೇ ಜೀವನ ಪರಿಮಾಣ ಎಂಬುದಾಗಿ ಈ ಶ್ರುತಿ ಹೇಳುತ್ತಿದೆ. ಇದರಿಂದ ಜೀವನ ಪರಿಮಾಣವು ಬುದ್ಧಿಗೆ ನಿಲುಕಲು ಸಾಧ್ಯವಿಲ್ಲವೆಂದು ತಿಳಿಯುತ್ತದೆ.

ಅವಿರೋಧಶ್ಚಂದನವತ್ - ಜೀವನು ಅಣುವಾದರೆ ಸಂಪೂರ್ಣದೇಹದಿಂದ ಸುಖಾನುಭವ ಆಗಲು ಹೇಗೆ ಸಾಧ್ಯ? ಎಂಬ ಪ್ರಶ್ನೆಗೆ ಈ ಸೂತ್ರವು ಉತ್ತರಿಸುತ್ತಿದೆ. ಚಂದನದ ಬಿಂದು ಒಂದೇ ಕಡೆ ಇದ್ದರೂ ಎಲ್ಲೆಡೆಯೂ ವ್ಯಾಪಿಸುವಂತೆ ಜೀವನು ಒಂದೇ ಕಡೆ ಇದ್ದರೂ ಸಂಪೂರ್ಣ ದೇಹದಲ್ಲಿ ವ್ಯಾಪಿಸಿದ್ದಾನೆ. ಆದ್ದರಿಂದ ಅಣುವೆನ್ನಲು ಬಾಧಕವಿಲ್ಲ.

## ಪುಂಸ್ತ್ವಾಧಿಕರಣ (೨-೩-೧೬)

**तात्पर्यचन्द्रिका**

**दृश्यते हि जैमिनिसूत्रेषु ''शास्त्रदृष्टविरोधाच्च । अन्यानर्थक्यात्'' इत्यादि-सूत्रैरर्थवादाप्रामाण्ये पूर्वपक्षिते ''दूरभूयस्त्वात् । आकालिकेप्सा । सर्वत्वमाधिकारिकम्'' इत्यादिसूत्रैर्दृष्टविरोधशास्त्रविरोधान्यानर्थक्यादीनां क्रमेण परिहारः । तथा ''तदर्थशास्त्रात् । अर्थविप्रतिषेधात्'' इत्यादिसूत्रैर्मन्त्राप्रामाण्ये पूर्वपक्षिते ''गुणार्थेन पुनः श्रुतिः । परिसंख्या । अर्थवादो व'' इति त्रिभिस्सूत्रैस्त दर्थशास्त्रवैयर्थ्यस्य त्रेधा परिहारः । ''गुणादविप्रतिषेध'' इत्यादिना अर्थविप्रतिषेधस्य च परिहारः ।**

ಜೈಮಿನಿ ಸೂತ್ರಗಳಲ್ಲಿ ಸೂತ್ರದಲ್ಲೇ ಪೂರ್ವಪಕ್ಷ ಮಾಡಿದರೆ ಸೂತ್ರದಲ್ಲೇ ಸಿದ್ಧಾಂತ ಮಾಡುವುದು ಕಂಡಿದೆ. ಉದಾ– 'ಶಾಸ್ತ್ರದೃಷ್ಟವಿರೋಧಾಚ್ಚ ಅನ್ಯಾನರ್ಥಕ್ಯಾತ್' ಇವೇ ಮೊದಲಾದ ಸೂತ್ರಗಳಿಂದ ಅರ್ಥವಾದಕ್ಕೆ ಅಪ್ರಾಮಾಣ್ಯವನ್ನು ಪೂರ್ವಪಕ್ಷ ಮಾಡಲಾಗಿದೆ. 'ದೂರಭೂಯಸ್ತ್ವಾತ್', 'ಆಕಾಲಿಕೇಪ್ಸಾ', 'ಸರ್ವತ್ವಮಾಧಿಕಾರಿಕಮ್' ಇವೇ ಮೊದಲಾದ ಸೂತ್ರಗಳಿಂದ ದೃಷ್ಟವಿರೋಧ, ಶಾಸ್ತ್ರವಿರೋಧ ಹಾಗೂ ಅನ್ಯ ಆನರ್ಥಕ್ಯಾದಿ ದೋಷಗಳನ್ನು ಹೇಳುವ ಮೂಲಕ ಪೂರ್ವಪಕ್ಷದ ಖಂಡನೆಯ ಮೂಲಕ ಸಿದ್ಧಾಂತವನ್ನು ಮಾಡಲಾಗಿದೆ. ಇದರಂತೆ 'ತದರ್ಥಶಾಸ್ತ್ರಾತ್' 'ಅರ್ಥವಿಪ್ರತಿಷೇಧಾತ್' ಇತ್ಯಾದಿ ಸೂತ್ರಗಳಿಂದ ಮಂತ್ರಕ್ಕೆ ಅಪ್ರಾಮಾಣ್ಯವನ್ನು ಪೂರ್ವಪಕ್ಷ ಮಾಡಿ ಗುಣಾರ್ಥ್ಯೆನ 'ಪೂರ್ಣ ಶ್ರುತಿಃ' 'ಪರಿಸಂಖ್ಯಾ' 'ಅರ್ಥವಾದೋ ವಾ' ಎಂಬ ಮೂರು ಸೂತ್ರಗಳಿಂದ ತದರ್ಥಶಾಸ್ತ್ರದ ವೈಯ್ಯರ್ಥ್ಯವನ್ನು ಮೂರು ಬಗೆಯಲ್ಲಿ ಪರಿಹರಿಸಲಾಗಿದೆ. 'ಗುಣಾದವಿಪ್ರತಿಷೇಧಃ' ಎಂಬುದರಿಂದ ಅರ್ಥವಿಪ್ರತಿಷೇಧದ ಪರಿಹಾರವನ್ನು ಕೂಡ ಮಾಡಲಾಗಿದೆ.

**तथा व्याकरणेऽपि ''लुपि युक्तवद्व्यक्तिवचने'' इत्यादिना मतान्तरमुक्त्वा ''तदशिष्यं संज्ञाप्रमाणत्वात्'' इत्यादिना परिहारः ।**

ವ್ಯಾಕರಣದಲ್ಲೂ ಕೂಡ ಸೂತ್ರದಲ್ಲೇ ಪೂರ್ವಪಕ್ಷ ಮಾಡಿ ಸೂತ್ರದಲ್ಲೇ ಸಿದ್ಧಾಂತ ಮಾಡಿದ್ದು ಕಂಡಿದೆ. 'ಲುಪಿ ಯುಕ್ತವದ್ ವ್ಯಕ್ತಿವಚನೇ' ಎಂಬ ಸೂತ್ರದಿಂದ ಬೇರೆ ಮತದವರ ಅನುವಾದ ಮಾಡಿ 'ತದಶಿಷ್ಯಂ ಸಂಜ್ಞಾಪ್ರಮಾಣತ್ವಾತ್' ಎಂಬುದರಿಂದ ಪಾಣಿನಿಯು ಸಿದ್ಧಾಂತವನ್ನು ಸ್ಥಾಪನೆ ಮಾಡಿರುತ್ತಾನೆ.

**तथा गौतमसूत्रेषु ''तदप्रामाण्यमनृतव्याघातपुनरुक्तिदोषेभ्य'' इत्यादिसूत्रैर्वेदाप्रामाण्ये पूर्वपक्षिते ''न कर्मकर्तृसाधनवैगुण्यात् । अभ्युपेतकालभेदे दोषवचनात् । अनुवादोपपत्तेश्चे''त्यादिसिद्धान्तसूत्रैः क्रमेण दोषत्रयपरिहारः ।**

ಗೌತಮಸೂತ್ರದಲ್ಲೂ ಕೂಡ ಇದೇ ದೃಷ್ಟಾಂತವು ಕಂಡಿದೆ. 'ತದಪ್ರಾಮಾಣ್ಯಂ ಅನೃತವ್ಯಾಘಾತ-ಪುನರುಕ್ತಿದೋಷೇಭ್ಯಃ' ಇತ್ಯಾದಿ ಸೂತ್ರಗಳಿಂದ ವೇದಕ್ಕೆ ಅಪ್ರಾಮಾಣ್ಯವನ್ನು ಪೂರ್ವಪಕ್ಷ ಮಾಡಿ 'ನ

ಕರ್ಮಕರ್ತೃಸಾಧನವೈಗುಣ್ಯಾತ್ ಅಭ್ಯುಪೇತಕಾಲಭೇದೇ ದೋಷವಚನಾತ್' 'ಅನುವಾದೋಪಪತ್ತೇಶ್ಚ' ಇತ್ಯಾದಿ ಸೂತ್ರಗಳಿಂದ ದೋಷತ್ರಯವನ್ನು ಪರಿಹರಿಸುವ ಮೂಲಕ ಸಿದ್ಧಾಂತವನ್ನು ಸ್ಥಾಪನೆ ಮಾಡಲಾಗಿದೆ. ಹೀಗೆ ಎಲ್ಲೆಡೆಯೂ ಸೂತ್ರದಲ್ಲಿ ಪೂರ್ವಪಕ್ಷ ಮಾಡಿದರೆ ಸೂತ್ರದಲ್ಲೇ ನಿರಾಕರಣೆ ಮಾಡುವುದು ಕಂಡಿದೆ. ಆದರೆ ಅದ್ವೈತಿಗಳಾದ ನೀವು ಒಂಭತ್ತು ಸೂತ್ರಗಳಿಂದ ಪೂರ್ವಪಕ್ಷವನ್ನು ಸ್ಥಾಪನೆ ಮಾಡಿ ಶಂಕರಭಾಷ್ಯದಲ್ಲಿ ಸಿದ್ಧಾಂತವನ್ನು ಮಾಡಲಾಗಿದೆ ಎಂದು ಉತ್ತರವನ್ನು ನೀಡುತ್ತಿದ್ದೀರಿ. ಇದು ಸೂತ್ರಕ್ಕೆ ವಿರುದ್ಧವಾದ ವ್ಯಾಖ್ಯಾನವಾಗುತ್ತದೆ ಎಂಬುದು ಸ್ಪಷ್ಟವಾಯಿತು.

**प्रकाशः –**

**''अवस्थितिवैशेष्यादिति चेन्नाभ्युपगमाद्धृदि हि''। दृष्टान्तदार्ष्टान्तिकयोरेकदेशाव-स्थानस्य प्रत्यक्षत्वाप्रत्यक्षत्वाभ्यामवस्थितेर्वैशेष्याद्वैषम्यान्न दृष्टान्तबलेनाणोर्जीवस्य व्यापिकार्यकरत्वनिर्णयश्शक्य इति चेन्न । ''हृदि ह्येष आत्म'' इति श्रुतेः । तथात्वस्य जीवेऽप्युपगमात् ।**

'ಅವಸ್ಥಿತಿವೈಶೇಷ್ಯಾದಿತಿ ಚೇನ್ನಾಭ್ಯುಪಗಮಾದ್ಧೃದಿ ಹಿ'- ಚಂದನಬಿಂದುವು ಒಂದೆಡೆ ಇದ್ದರೂ ಸುತ್ತಲು ಸುವಾಸನೆಯನ್ನು ಬೀರುತ್ತದೆ. ಚಂದನಬಿಂದುವಿನ ಏಕದೇಶಾವಸ್ಥಾನವು ಪ್ರತ್ಯಕ್ಷ ಸಿದ್ಧವಾಗಿದೆ. ಈ ಚಂದನ ಬಿಂದುವಿನ ದೃಷ್ಟಾಂತವನ್ನು ಆತ್ಮನ ವಿಷಯದಲ್ಲಿ ಹೇಳಲು ಸಾಧ್ಯವಿಲ್ಲ. ಏಕೆಂದರೆ ಆತ್ಮನ ಏಕಾದೇಶಾವಸ್ಥಾನವು ಪ್ರತ್ಯಕ್ಷ ಸಿದ್ಧವಾಗಿಲ್ಲ. ಆದ್ದರಿಂದ ಒಂದೇ ಸ್ಥಳದಲ್ಲಿ ಆತ್ಮನು ಇದ್ದುಕೊಂಡು ದೇಹದಲ್ಲೆಡೆ ಪ್ರಕಾಶದಿಂದ ವ್ಯಾಪಿಸಿರುತ್ತಾನೆ ಎಂಬುವುದು ಸರಿಯಲ್ಲ. ಸೂತ್ರದಲ್ಲಿರುವ ವೈಶೇಷ್ಯಾತ್ ಎಂಬ ಪದಕ್ಕೆ ವೈಲಕ್ಷಣ್ಯ-ವಿರುವುದರಿಂದ ಎಂದರ್ಥ.

ಈ ಆಕ್ಷೇಪವು ತಪ್ಪು. ಚಂದನಬಿಂದುವಿನ ಏಕದೇಶಾವಸ್ಥಾನಕ್ಕೆ ಹೇಗೆ ಪ್ರತ್ಯಕ್ಷಪ್ರಮಾಣವಿದೆಯೋ ಅದರಂತೆ ಆತ್ಮನ ಏಕದೇಶಾವಸ್ಥಾನಕ್ಕೆ 'ಹೃದಿಹ್ಯೇಷ ಆತ್ಮಾ' ಎಂಬ ಶ್ರುತಿಯು ಪ್ರಮಾಣವಾಗಿದೆ. ಆದ್ದರಿಂದ ಆತ್ಮನು ಏಕದೇಶದಲ್ಲೇ ಇದ್ದುಕೊಂಡು ದೇಹದಲ್ಲೆಲ್ಲೆಡೆ ವ್ಯಾಪಿಸಿದ್ದಾನೆಂದು ನಿರ್ಣಯ ಮಾಡುತ್ತೇವೆ.

**प्रकाशः – ''गुणाद्वा आलोकवत्'' । प्रदीपालोकवदणोरपि जीवस्य चिद्गुणेन देहव्याप्तिर्युक्ता ।**

ಗುಣಾದ್ವಾ ಆಲೋಕವತ್ - ಪ್ರದೀಪದ ಬೆಳಕು ಪ್ರಕಾಶದಿಂದ ಎಲ್ಲೆಡೆ ವ್ಯಾಪಿಸುತ್ತದೆ. ಅದರಂತೆ ಆತ್ಮನೂ ತನ್ನ ಚಿದ್ಗುಣವೆಂಬ ಪ್ರಭೆಯಿಂದ ದೇಹದಲ್ಲೆಲ್ಲೆಡೆ ವ್ಯಾಪಿಸುತ್ತಾನೆ.

**प्रकाशः – ''व्यतिरेको गन्धवत्'' ।। द्रव्यगुणस्य गन्धस्येव चिद्गुणस्यापि द्रव्यव्यतिरेकेण वृत्तिर्युक्ता । ''तथा च दर्शयति'' इत्यंशस्तु नास्त्येव ।**

ವ್ಯತಿರೇಕೋ ಗಂಧವತ್-ದ್ರವ್ಯದ ಗುಣವಾದ ಗಂಧವು ದ್ರವ್ಯವನ್ನು ಬಿಟ್ಟು ದೂರದ ತನಕ ವ್ಯಾಪಿಸುತ್ತದೆ. ಅದರಂತೆ ಜೀವನ ಚಿದ್ಗುಣವು ದೇಹದಲ್ಲೆಲ್ಲೆಡೆ ವ್ಯಾಪಿಸಿರುತ್ತದೆ.

ಅದ್ವೈತಿಗಳು 'ತಥಾ ಚ ದರ್ಶಯತಿ' ಎಂಬ ಅಂಶವನ್ನೇ ಇಲ್ಲವೆನ್ನುತ್ತಾರೆ. ಆದ್ದರಿಂದ ಇವರ ಪ್ರಕಾರ 'ವ್ಯತಿರೇಕೋ ಗಂಧವತ್' ಎಂಬುದಷ್ಟೇ ಸೂತ್ರ.

ಪುಂಸ್ತ್ವಾದ್ಯಧಿಕರಣ (೨-೩-೧೬)

**प्रकाशः –** ''पृथगुपदेशात्'' । ''प्रज्ञया शरीरं समारुह्य'' इति चात्मप्रज्ञयोः कर्तृकरणभावेन पृथगुपदेशात् । तस्मादणुरात्मेति पूर्वपक्षित इत्यर्थः ।।

ಪ್ರಥಗುಪದೇಶಾತ್- ಪ್ರಜ್ಞಯಾ ಶರೀರಂ ಸಮಾರುಹ್ಯ ಎಂಬುದಾಗಿ ಶ್ರುತಿಯು ಆತ್ಮನನ್ನು ಕರ್ತೃವೆಂದು ಅವನ ಜ್ಞಾನವನ್ನು ಕರಣವೆಂದು ಪ್ರತ್ಯೇಕವಾಗಿ ಉಲ್ಲೇಖ ಮಾಡುತ್ತಿದೆ. ಹೀಗೆ ಆತ್ಮ ಮತ್ತು ಅವನ ಗುಣವೆನಿಸಿದ ಪ್ರಜ್ಞೆಗಳಿಗೆ ಭೇದವನ್ನು ಹೇಳಿ ಆ ಜ್ಞಾನದ ಮೂಲಕವಾಗಿ ಆತ್ಮನು ವ್ಯಾಪಿಸಿದ್ದಾನೆಂದು ಹೇಳಿದರೆ ಅರ್ಥಾತ್ ಆತ್ಮನು ಅಣುವಾಗಿದ್ದಾನೆಂದು ಸಿದ್ಧವಾಗುತ್ತದೆ. ಹೀಗೆ ಒಂಭತ್ತು ಸೂತ್ರಗಳು ಪೂರ್ವಪಕ್ಷವನ್ನು ಪ್ರತಿಪಾದನೆ ಮಾಡುತ್ತಿವೆ.

**प्रकाशः – तद्गुणेत्यादीति ।।** तस्याबुद्धेर्ये गुणा इच्छादयस्तत्सारत्वात्तत्प्रधानकत्वादात्मनस्तद्व्यपदेशस्तद्गुणाणुत्वव्यपदेशः । यथा प्राज्ञस्य परमात्मन उपाधिगुणप्रधानत्वादणीयस्त्वादिव्यपदेशस्तद्वत् ।

'ತದ್ಗುಣಸಾರತ್ವಾತ್ ತದ್ವ್ಯಪದೇಶಃ ಪ್ರಾಜ್ಞವತ್' ಸೂತ್ರದಲ್ಲಿರುವ ತತ್ ಪದದಿಂದ ಅಪ್ರಕೃತವಾದ ಬುದ್ಧಿಯನ್ನು ವಿವಕ್ಷಿಸಬೇಕು. ತದ್ಗುಣ ಎಂದರೆ ಬುದ್ಧಿಯ ಗುಣವೆನಿಸಿದ ಇಚ್ಛಾದಿಗಳು. ಈ ಇಚ್ಛಾದಿಗಳೇ ಸಾರವಾಗಿ ಉಳ್ಳವನು ಆತ್ಮ. ಆದ್ದರಿಂದ ತದ್ವ್ಯಪದೇಶಃ = ಬುದ್ಧಿಯ ಗುಣವೆನಿಸಿದ ಅಣುತ್ವವನ್ನು ಜೀವನಲ್ಲಿ ಶ್ರುತಿಯು ವ್ಯಪದೇಶ ಮಾಡುತ್ತಿದೆ. ಹೀಗೇಕೆ ಅರ್ಥೈಸಬೇಕು? ಎಂಬ ಪ್ರಶ್ನೆಗೆ 'ತದ್ಗುಣಸಾರತ್ವಾತ್' ಎಂಬುದು ಉತ್ತರವನ್ನು ನೀಡುತ್ತಿದೆ. ಈ ವಿಷಯದಲ್ಲಿ ಪ್ರಾಜ್ಞವತ್ ಎಂಬುದು ಉದಾಹರಣೆಯನ್ನು ಹೇಳುತ್ತಿದೆ. ಪರಮಾತ್ಮನನ್ನು ಶ್ರುತಿಯು ಅಣಿಯಾನ್ ಎಂದು ಹೇಳುತ್ತಿದೆ. ವ್ಯಾಪ್ತನಾದ ಬ್ರಹ್ಮನಿಗೆ ಅಣಿಯಸ್ತ್ವವು ಹೇಗೆ ಉಪಪನ್ನವಾಗುತ್ತದೆ? ಎಂಬ ಪ್ರಶ್ನೆಯು ಬಂದರೆ ಉಪಾಧಿಗುಣಪ್ರಧಾನಗುಣನಾದ್ದರಿಂದ ಯುಕ್ತವಾಗುತ್ತದೆಂದು ಉತ್ತರಿಸಬೇಕು. ಪರಮಾತ್ಮನು ವ್ಯಾಪ್ತನಾಗಿದ್ದರೂ ಕೂಡ ಹೃದಯವೆಂಬ ಉಪಾಧಿಯಿಂದ ಅವಚ್ಛಿನ್ನನಾದ ಬ್ರಹ್ಮನು ಹೃದಯಪರಿಮಾಣವುಳ್ಳವನೇ ಆಗುತ್ತಾನೆ. ಉಪಾಧಿಗುಣಗಳೇ ಬ್ರಹ್ಮನಲ್ಲಿ ಪ್ರಧಾನವಾಗಿ ಬರುವುದರಿಂದ ಅಣಿಯಾಸ್ತ್ವಾದಿಗಳೂ ಕೂಡ ಬ್ರಹ್ಮನಲ್ಲೇ ಬರುತ್ತವೆ. ಇದರಂತೆ ಬುದ್ಧಿಯ ಗುಣವೆನಿಸಿದ ಅಣುತ್ವಾದಿಗಳನ್ನು ಆತ್ಮನಲ್ಲಿ ಹೇಳಲಾಗಿದೆ.

**प्रकाशः –** एवं तर्हि बुद्धिसंयोगनाशे संसारित्वं च न स्यादित्यत उत्तरं ''यावदात्मभावित्वाच्च न दोषस्तद्दर्शनात्'' बुद्धेर्यावदात्मभावित्वान्नोक्तदोषः । ''स समानस्सन्नुभौ लोकावनुसञ्चरति'' इति नित्यसम्बन्धदर्शनात् ।

'ಯಾವದಾತ್ಮಭಾವಿತ್ವಾಚ್ಚ ನ ದೋಷಸ್ತದ್ದರ್ಶನಾತ್'- ಬುದ್ಧಿಸಂಯೋಗವು ಆತ್ಮನ ಜೊತೆ ನಾಶವಾಗುವುದಾದರೆ ಆತ್ಮನಿಗೆ ಸಂಸಾರಿತ್ವವೇ ನಾಶವಾಗಬೇಕಾದೀತು? ಎಂಬ ಪ್ರಶ್ನೆಗೆ ಉತ್ತರವನ್ನು ನೀಡಲು ಯಾವದಾತ್ಮಭಾವಿತ್ವಾಚ್ಚ ಇತ್ಯಾದಿ ಸೂತ್ರವು ಪ್ರವೃತ್ತವಾಗಿದೆ. ಬುದ್ಧಿಸಂಯೋಗವು ನಾಶವಾದಲ್ಲಿ ಸಂಸಾರಿತ್ವವು ನಾಶವಾಗುವ ಪ್ರಸಂಗ ಬರುತ್ತದೆ. ಆದರೆ ಆತ್ಮನಿಗೆ ಬುದ್ಧಿಸಂಯೋಗವು ಆತ್ಮ ಇರುವಷ್ಟು ಕಾಲವು ಇದ್ದೇ ಇರುತ್ತದೆ. ಆದ್ದರಿಂದ ಎಂದೂ ಬುದ್ಧಿಸಂಯೋಗ ನಾಶವಾಗದ ಕಾರಣ ಹಿಂದಿನ ದೋಷಕ್ಕೆ ಅವಕಾಶವಿಲ್ಲ. 'ಸ ಸಮಾನಃ ಸನ್ ಉಭೌ ಲೋಕಾವನುಸಂಚರತಿ' ಎಂಬ ಶ್ರುತಿಯು ಆತ್ಮನಿಗೂ ಬುದ್ಧಿಗೂ ನಿತ್ಯಸಂಬಂಧವನ್ನು ಹೇಳುತ್ತಿದೆ.

**प्रकाशः** – सुप्त्यादौ बुद्धिलयोपगमात्कथं नित्यसम्बन्ध इत्यत उत्तरं ''पुंस्त्वादिवत्'' इति । बाल्ये सतः पुंस्त्वादेर्यौवनेऽभिव्यक्तिरिव सुप्त्यादौ शक्तिरूपेण विद्यमानाया बुद्धेः प्रबोधादाविवाभिव्यक्तियोगात् ।

'ಪುಂಸ್ತ್ವಾದಿವತ್ ಸತೋ ಅಭಿವ್ಯಕ್ತಿಯೋಗಾತ್' - ಸುಷುಪ್ತಿಕಾಲದಲ್ಲಿ ಬುದ್ಧಿಯು ಲಯವಾಗುತ್ತದೆ. ಆದ್ದರಿಂದ ಆತ್ಮನ ಜೊತೆ ಹೇಗೆ ನಿತ್ಯಸಂಬಂಧವನ್ನು ಹೇಳಲು ಸಾಧ್ಯ? ಈ ಪ್ರಶ್ನೆಗೆ ಉತ್ತರವನ್ನು ನೀಡುವುದಕ್ಕಾಗಿ 'ಪುಂಸ್ತ್ವಾದಿವತ್' ಇತ್ಯಾದಿ ಸೂತ್ರವು ಪ್ರವೃತ್ತವಾಗಿದೆ. ಹೇಗೆ ಬಾಲ್ಯದಲ್ಲಿ ಪುಂಸ್ತ್ವವು ಇದ್ದರೂ ಶಕ್ತಿರೂಪದಿಂದಷ್ಟೇ ಇದ್ದು ಯೌವನದಲ್ಲಿ ಅಭಿವ್ಯಕ್ತವಾಗುತ್ತದೋ ಅದರಂತೆ ಬುದ್ಧಿಸಂಯೋಗವು ಸುಷುಪ್ತ್ಯವಸ್ಥೆಯಲ್ಲಿ ಶಕ್ತಿರೂಪದಿಂದ ಮಾತ್ರ ಇರುತ್ತದೆ. ಜಾಗ್ರದವಸ್ಥೆಯಲ್ಲಿ ವ್ಯಕ್ತಿರೂಪದಿಂದ ಇರುತ್ತದೆ. ಆದ್ದರಿಂದ ಬುದ್ಧಿಯು ಆತ್ಮನ ಜೊತೆ ನಿತ್ಯಸಂಬಂಧವನ್ನೇ ಹೊಂದಿದೆ.

**प्रकाशः** – अन्यथैवं भूतबुद्धिलक्षणान्तःकरणानभ्युपगमे नित्यं विषयाणामुपलब्धिरनुपलब्धिर्वा स्यात् । विषयेन्द्रियात्मनां नित्यं समवधानात् । अन्यस्यापेक्षणीयस्याभावात् । अन्यतरस्यात्मन इन्द्रियस्य वा नियमश्शक्तिप्रतिबन्धो वा वक्तव्यस्स्यादिति सिद्धान्त इत्याहुरित्यर्थः ॥

'ನಿತ್ಯೋಪಲಬ್ಧ್ಯನುಪಲಬ್ಧಿಪ್ರಸಂಗೋ ಅನ್ಯತರನಿಯಮೋ ವಾಽನ್ಯಥಾ' - ಬುದ್ಧಿಯೆಂಬ ಅಂತಃಕರಣವನ್ನು ಒಪ್ಪದಿದ್ದರೆ ಜ್ಞಾನಸಾಧನಗಳು ಸದಾ ಇರುವುದರಿಂದ ಯಾವಾಗಲೂ ಆತ್ಮನಿಗೆ ಜ್ಞಾನವು ಬರುತ್ತಲೇ ಇರಬೇಕಾದೀತು. ಈ ಅಂತಃಕರಣಾದಿಗಳು ಇದ್ದರೂ ಕೂಡ ಜ್ಞಾನವು ಬರುವುದಿಲ್ಲವೆಂದು ಹೇಳಿದರೆ ಯಾವಾಗಲೂ ಜ್ಞಾನವೇ ಬಾರದೇ ಇರಬೇಕಾದೀತು. ಏಕೆಂದರೆ ಜ್ಞಾನಕ್ಕೆ ಈ ಅಂತಃಕರಣವನ್ನು ಬಿಟ್ಟು ಬೇರೆ ಕಾರಣವು ಅಪೇಕ್ಷಿತವಲ್ಲ. ಇನ್ನು ಅಂತಃಕರಣಾದಿಗಳು ಇದ್ದರೂ ಕೂಡ ಆತ್ಮನ ಶಕ್ತಿಯು ಪ್ರತಿಬದ್ಧವಾದಾಗ ಜ್ಞಾನವು ಹುಟ್ಟುವುದಿಲ್ಲವೆಂದು ಹೇಳಬೇಕು. ಇದೂ ಕೂಡ ಸರಿಯಲ್ಲ. ಏಕೆಂದರೆ ಆತ್ಮನು ನಿರ್ವಿಕಾರನಾಗಿದ್ದಾನೆ. ಅವನಲ್ಲಿ ಯಾವುದೇ ವ್ಯತ್ಯಾಸವು ಉಂಟಾಗುವುದಿಲ್ಲ. ಇಂದ್ರಿಯಗಳ ಶಕ್ತಿಗೆ ಪ್ರತಿಬಂಧಕವು ಬಂದಾಗ ಜ್ಞಾನವು ಬರುವುದಿಲ್ಲವೆಂದು ಹೇಳುವುದು ಸರಿಯಲ್ಲ. ಏಕೆಂದರೆ ಹಿಂದಿನ ಮುಂದಿನ ಕ್ಷಣಗಳಲ್ಲಿ ಜ್ಞಾನವು ಬಂದು ಮಧ್ಯದಲ್ಲಿ ಜ್ಞಾನವಿಲ್ಲದ ಕ್ಷಣವುಂಟಾಗುತ್ತದೆ. ಇಂದ್ರಿಯ ಶಕ್ತಿಗೆ ಪ್ರತಿಬಂಧಕವು ಬಂದಿದ್ದಲ್ಲಿ ಮೊದಲು ಮತ್ತು ಆಮೇಲೆ ಜ್ಞಾನವು ಬರಬಾರದು. ಆದ್ದರಿಂದ ಅಂತಃಕರಣವನ್ನು ಅಂಗೀಕಾರ ಮಾಡಲೇಬೇಕು. ಅದೂ ಆತ್ಮನ ಜೊತೆ ಸಂಪರ್ಕವನ್ನು ಹೊಂದಿದರೆ ಜ್ಞಾನವನ್ನು ಪಡೆಯುತ್ತದೆ, ಇಲ್ಲದಿದ್ದರೆ ಇಲ್ಲ. ಇಷ್ಟು ಸಿದ್ಧಾಂತ.

ವಿವರಣೆ – 'ಉತ್ಕ್ರಾಂತಿಗತ್ಯಾಗತೀನಾಂ' ಎಂಬ ಸೂತ್ರದಿಂದ ಪ್ರಾರಂಭ ಮಾಡಿ 'ಪೃಥಗುಪದೇಶಾತ್' ಎಂಬ ಸೂತ್ರದ ತನಕ ಒಂಭತ್ತು ಸೂತ್ರಗಳು ಪೂರ್ವಪಕ್ಷವನ್ನು ಸ್ಥಾಪನೆ ಮಾಡುತ್ತವೆ ಎಂದು ಹೇಳಿ, 'ತದ್ಗುಣಸಾರತ್ವಾತ್' ಅಲ್ಲಿಂದ 'ನಿತ್ಯೋಪಲಬ್ಧಿ' ಎಂಬ ಸೂತ್ರದತನಕ ಸಿದ್ಧಾಂತವನ್ನು ಸ್ಥಾಪನೆ ಮಾಡಲಾಗಿದೆ ಎಂಬುದಾಗಿ ಅದ್ವೈತಿಗಳು ವ್ಯಾಖ್ಯಾನ ಮಾಡಿದ್ದಾರೆ.

ಪುಂಸ್ತ್ವಾಧಿಕರಣ (೨-೩-೧೬)

**प्रकाशः – अर्चिरादिपाद इति ।।** चतुर्थस्य तृतीयपादे । सूत्राणामप्यर्थस्तन्मतेऽप्यविशिष्ट इति भावः । तत्र सर्वत्रापि गत्यादेर्बुद्धिविषयत्वमाशङ्क्य निराह – **न हीति ।।**

ಅರ್ಚಿರಾದಿಪಾದದಲ್ಲಿ ಎಂದರೆ ನಾಲ್ಕನೇ ಅಧ್ಯಾಯದ ಮೂರನೇ ಪಾದದಲ್ಲಿ ಎಂದರ್ಥ. ಈ ಎಲ್ಲಾ ಸೂತ್ರಗಳಿಗೆ ಅದ್ವೈತಿಗಳೂ ಕೂಡ ಅರ್ಚಿರಾದಿ ಮಾರ್ಗದಲ್ಲಿ ಜೀವನಿಗೆ ಗತಿಯನ್ನು ಅಂಗೀಕರಿಸಿದ್ದಾರೆ. ಆದ್ದರಿಂದ ನಮ್ಮ ಮತದಂತೆ ಅವರೂ ಕೂಡ ಈ ಸೂತ್ರಗಳಿಗೆ ವ್ಯಾಖ್ಯಾನ ಮಾಡಿದ್ದರಿಂದ ಜೀವನನ್ನು ಅಣುವೆಂದು ಒಪ್ಪಲೇಬೇಕು. ಅರ್ಚಿರಾದಿ ಮಾರ್ಗದಲ್ಲಿ ಜೀವನಿಗೆ ಗತಿಯನ್ನು ಹೇಳಿರುವುದು ಬುದ್ಧಿಗೆ ಹೊರತು ಜೀವನಿಗಲ್ಲ ಎಂಬ ಆಶಂಕೆಯನ್ನು ನಹಿ ಇತ್ಯಾದಿ ವಾಕ್ಯದಿಂದ ಪರಿಹಾರ ಮಾಡುತ್ತಿದ್ದಾರೆ.

**प्रकाशः – वक्ष्यमाणेति ।।** परोक्तदूषणोद्धारप्रस्तावे वक्ष्यमाणेत्यर्थः ।। **शङ्कालिङ्गेति ।।** चेदित्यादि लिङ्गेत्यर्थः । अनुक्तपरिहाराणामिति बहुव्रीहिः ।। **कथञ्चेति ।।** पूर्वपक्षिणैव श्रुत्यादिविरोधोक्त्या खण्डितत्वादिति भावः ।

ಜೀವನು ಅಣುವೆಂದು ಹೇಳಿದಾಗ ಅನೇಕ ದೋಷಗಳನ್ನು ಅವನು ಮುಂದೆ ಆಕ್ಷೇಪ ಮಾಡುತ್ತಾನೆ. ಅದನ್ನು ಪರಿಹಾರ ಮಾಡುವ ಸಂದರ್ಭದಲ್ಲಿ ಜೀವನನ್ನು ಅಣುವೆನ್ನಲು ಅನೇಕ ನ್ಯಾಯಗಳನ್ನು ಹೇಳಲಾಗಿದೆ ಎಂದರ್ಥ. ಶಂಕಾಲಿಂಗ ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಸೂತ್ರದಲ್ಲಿ 'ಚೇತ್' ಇತ್ಯಾದಿಯಾಗಿ ಆಶಂಕೆಗೆ ಗಮಕವಾದ ಯಾವುದೇ ಲಿಂಗಗಳು ಇಲ್ಲ ಎಂಬುದು ಇದರ ಅಭಿಪ್ರಾಯ. 'ಅನುಕ್ತಪರಿಹಾರಾಣಾಮ್' ಎಂಬುದು ಬಹುವ್ರೀಹಿ ಸಮಾಸವಾಗಿದೆ.

ಪೂರ್ವಪಕ್ಷಿಯೇ ಜೀವನನ್ನು ಅಣುವೆಂದು ಹೇಳಿ ಮಹತ್ವವನ್ನು ನಿರಾಕರಣೆ ಮಾಡಿದ್ದಾನೆ. ಬಾಲಾಗ್ರಶತಭಾಗಸ್ಯ ಎಂಬ ಶ್ರುತಿಯನ್ನು ಈ ವಿಷಯದಲ್ಲಿ ಆಧಾರವನ್ನಾಗಿ ಹೇಳಿದ್ದಾನೆ. ಈಗ ಅವನ ಮತಕ್ಕೆ ವಿರುದ್ಧವಾಗಿ ಸಿದ್ಧಾಂತವನ್ನು ಸ್ಥಾಪನೆ ಮಾಡುತ್ತಿದ್ದಾನೆಂಬುದು ಕಥಂ ಚ ಇತ್ಯಾದಿ ವಾಕ್ಯದ ಅಭಿಪ್ರಾಯವಾಗಿದೆ.

**प्रकाशः –** अनुक्तपरिहाराणामित्येतदसिद्धम् । सिद्धान्तसूत्रभाष्ये सर्वस्यापि पूर्ववाद्युक्तस्य परिहारोक्तेरित्यत आह – **न ह्यत्रेति ।।**

ಸೂತ್ರದಲ್ಲಿ ಪೂರ್ವಪಕ್ಷವನ್ನು ಮಾಡಿದ ವಿಷಯಕ್ಕೆ ಸಿದ್ಧಾಂತವನ್ನು ಹೇಳಿಯೇ ಇಲ್ಲವೆಂಬ ಶಂಕೆಗೆ ಅವಕಾಶವಿಲ್ಲ. ಸೂತ್ರದಲ್ಲಿ ಹೇಳಿದರೂ ಕೂಡ ಶಾಂಕರಭಾಷ್ಯದಲ್ಲಿ ಅದಕ್ಕೆ ಪರಿಹಾರವನ್ನು ಹೇಳಲಾಗಿದೆ. ಆದ್ದರಿಂದ ಪರಿಹಾರ ಹೇಳಿಲ್ಲವೆಂಬ ಆಕ್ಷೇಪವು ಹೇಗೆ ಯುಕ್ತವಾಗುತ್ತದೆ? ಎಂಬ ಪ್ರಶ್ನೆಗೆ 'ನ ಹ್ಯತ್ರ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಸೂತ್ರಕಾರರು ಉತ್ತರವನ್ನು ಹೇಳಿಲ್ಲ ಸ್ವತಃ ನೀನೇ ಸೂತ್ರಕ್ಕೆ ವಿರುದ್ಧವಾಗಿ ಉತ್ತರವನ್ನು ನೀಡುತ್ತಿರುವಿ. ಆದ್ದರಿಂದ ಇದು ಸೂತ್ರವ್ಯಾಖ್ಯಾನವಾಗುವುದಿಲ್ಲ. ಮತ್ತೇನೆಂದರೆ ಸೂತ್ರದ ನಿರಾಕರಣೆಯೇ ಆಗುತ್ತದೆ.

**प्रकाशः –** पूर्वपक्षसूत्रेषूक्तस्य सिद्धान्तसूत्रेषु परिहारेण भाव्यमिति कुत इत्यत आह – **दृश्यते हीति ।।** आद्यस्य द्वितीयपादेऽर्थवादाधिकरणे षड्भिस्सूत्रैः पूर्वपक्षो

द्वादशभिः सिद्धान्तः । तत्र सिद्धान्तपरिहारसूत्रक्रमानुरोधेन शास्त्रविरोधात्। दृष्टविरोधात् । शास्त्रदृष्टविरोधादिति विभागावृत्तिभ्यां शाबरभाष्ये ''शास्त्रदृष्टविरोधाच्च'' इति सूत्रं व्याख्यातम् ।

ಪೂರ್ವಪಕ್ಷಸ್ಥಾಪಕವಾದ ಸೂತ್ರದಲ್ಲಿ ಮಾಡಿದ ಆಕ್ಷೇಪವನ್ನು ಸಿದ್ಧಾಂತಸ್ಥಾಪಕವಾದ ಸೂತ್ರದಲ್ಲಿ ಪರಿಹಾರ ಮಾಡಲೇಬೇಕು. ಈ ವಿಷಯಕ್ಕೆ ಏನು ಆಧಾರ? ಎಂಬ ಪ್ರಶ್ನೆಗೆ 'ದೃಶ್ಯತೇ ಹಿ' ಇತ್ಯಾದಿ ವಾಕ್ಯದಿಂದ ಅನೇಕ ದೃಷ್ಟಾಂತವನ್ನು ಗ್ರಂಥಕಾರರು ನೀಡುತ್ತಿದ್ದಾರೆ.

ಪೂರ್ವಮೀಮಾಂಸೆಯ ಪ್ರಥಮಾಧ್ಯಾಯದ ದ್ವಿತೀಯಪಾದದಲ್ಲಿ ಬರುವ ಅರ್ಥವಾದಾಧಿಕರಣದಲ್ಲಿ ಒಟ್ಟು ಆರು ಸೂತ್ರಗಳಲ್ಲಿ ಪೂರ್ವಪಕ್ಷ ಮಾಡಲಾಗಿದೆ. ಹನ್ನೆರಡು ಸೂತ್ರಗಳಿಂದ ಸಿದ್ಧಾಂತವನ್ನು ಮಾಡಲಾಗಿದೆ. ಆ ಸಂದರ್ಭದಲ್ಲಿ ಸಿದ್ಧಾಂತದಲ್ಲಿ ಪರಿಹಾರ ಮಾಡುವ ಸೂತ್ರಕ್ರಮಕ್ಕೆ ಅನುಸಾರವಾಗಿ 'ಶಾಸ್ತ್ರದೃಷ್ಟವಿರೋಧಾತ್' ಎಂಬ ಸೂತ್ರವನ್ನು 'ಶಾಸ್ತ್ರವಿರೋಧಾತ್' 'ದೃಷ್ಟವಿರೋಧಾತ್' 'ಶಾಸ್ತ್ರದೃಷ್ಟವಿರೋಧಾತ್' ಎಂಬುದಾಗಿ ಬುದ್ಧಿಯಿಂದ ವಿಭಾಗ ಮಾಡಿಕೊಂಡು ಎರಡು ಅರ್ಥವನ್ನು, ಆವೃತ್ತಿಯಿಂದ ಮೂರನೇ ಅರ್ಥವನ್ನು ಶಾಬರಭಾಷ್ಯದಲ್ಲಿ ಹೇಳಲಾಗಿದೆ.

**प्रकाशः** – अत्र ''स्तेनं मनोऽनृतवादिनी वाक्'' इत्यस्य चौर्यादिविधौ तात्पर्ये ''न चौर्यं कुर्यात्'' इति शास्त्रविरोधादप्रामाण्यमिति शङ्कायां ''रूपात्प्रायात्'' इत्यनेन स्तेनवद्रूपं मनस इति प्रायेणानृतवादित्वं वागिन्द्रियस्यास्तीति गौणार्थत्वमेव तद्वाक्यस्य । नतु विधौ तात्पर्यमिति परिहारः।

'ಸ್ತೇನಂ ಮನೋಽನೃತವಾದಿನೀ ವಾಕ್' ಈ ವಾಕ್ಯವು ಮನಸ್ಸು ಕಳ್ಳನಂತೆ ಇದೆ, ವಾಗಿಂದ್ರಿಯವು ಸುಳ್ಳು ಹೇಳುವುದರಲ್ಲಿ ಆಸಕ್ತವಾಗಿದೆ ಎಂಬುದು ಈ ವಾಕ್ಯದ ಅರ್ಥ. ಆದರೆ ಈ ವಾಕ್ಯವನ್ನು ನೋಡಿದಾಗ ಆಪಾತತಃ ಮನಸ್ಸು ಕಳ್ಳನಂತೆ ಇರಬೇಕು, ವಾಗಿಂದ್ರಿಯವು ಸುಳ್ಳನ್ನು ಹೇಳಬೇಕು ಎಂಬುದಾಗಿ ವಿಭಾಗವನ್ನು ಮಾಡಿದಂತೆ ಕಾಣಿಸುತ್ತದೆ. ಹೀಗೆ ಚೌರ್ಯಾದಿ ವಿಧಿಯಲ್ಲಿ ತಾತ್ಪರ್ಯವನ್ನು ಹೊಂದಿದರೆ 'ನ ಚೌರ್ಯಂ ಕುರ್ಯಾತ್' ಎಂಬ ಶ್ರುತಿಯು ಕಳ್ಳತನ ಮಾಡಬಾರದು ಎಂದು ವಿರೋಧ ಮಾಡುತ್ತಿದೆ. ಅದರಂತೆ ಸುಳ್ಳನ್ನು ಹೇಳಬಾರದು ಎಂದು ಶಾಸ್ತ್ರವು ನಿಷೇಧ ಮಾಡುತ್ತಿದೆ. ಹೀಗೆ ಶಾಸ್ತ್ರವಿರೋಧ ಬರುವುದರಿಂದ 'ಸ್ತೇನಂ ಮನಃ' ಇತ್ಯಾದಿ ಶ್ರುತಿಗೆ ಅಪ್ರಾಮಾಣ್ಯವು ಪ್ರಾಪ್ತವಾಗುತ್ತದೆ. ಹೀಗೆ ಆಶಂಕೆಯು ಪ್ರಾಪ್ತವಾದರೆ 'ರೂಪಾತ್‌ಪ್ರಾಯಾತ್' ಇತ್ಯಾದಿಯಾಗಿ ಸಿದ್ಧಾಂತದಲ್ಲಿ ಪರಿಹಾರವನ್ನು ಹೇಳಲಾಗಿದೆ. ಕಳ್ಳತನ ಮಾಡಬೇಕು. ಸುಳ್ಳು ಹೇಳಬೇಕು ಎಂಬ ವಿಧಿಯಲ್ಲಿ ಶ್ರುತಿಗೆ ತಾತ್ಪರ್ಯವಲ್ಲ. ಮನಸ್ಸು ಕಳ್ಳನಂತೆ ಇರುತ್ತದೆ, ವಾಗಿಂದ್ರಿಯವು ಸಾಮಾನ್ಯತಃ ಸುಳ್ಳು ಹೇಳುವುದರಲ್ಲೇ ಆಸಕ್ತವಾಗಿರುತ್ತದೆ ಎಂಬುದಾಗಿ ಲೋಕದಲ್ಲಿ ಕಂಡದ್ದನ್ನು ಶ್ರುತಿಯು ಹೇಳುತ್ತಿದೆಯೇ ಹೊರತು ವಿಧಾನವನ್ನು ಮಾಡಲು ಹೊರಟಿಲ್ಲ ಎಂಬುದಾಗಿ ಪರಿಹಾರವನ್ನು ನೀಡಲಾಗಿದೆ.

**प्रकाशः** – ''धूम एवाग्नेर्दिवा ददृशे नार्चिः'' इत्यादि वाक्यस्य प्रत्यक्षविरोधाद प्रामाण्यमिति शङ्कायाः ''दूरभूयस्त्वात्'' इति सूत्रेण दूर एव दिवा धूमो भूयान् दृश्यते नार्चिरिति गौणार्थत्वेन परिहारः ।

ಪುಂಸ್ತ್ವಾಧಿಕರಣ (೨-೩-೧೬)

ದೃಷ್ಟವಿರೋಧಕ್ಕೆ ಉದಾ – 'ಧೂಮ ಏವಾಗ್ನೇರ್ದಿವಾ ದದೃಶೇ ನಾರ್ಚಿಃ' ಇತ್ಯಾದಿ ವಾಕ್ಯವು ಧೂಮವೇ ಕಾಣಿಸುತ್ತದೆ ಹಗಲಿನ ಹೊತ್ತು ಅಗ್ನಿಯು ಕಾಣಿಸುತ್ತಿಲ್ಲವೆಂದು ಹೇಳುತ್ತಿದೆ. ಆದರೆ ಅಗ್ನಿಯೂ ಕೂಡ ಕಾಣಿಸುತ್ತಿರುವುದರಿಂದ ಪ್ರತ್ಯಕ್ಷವಿರೋಧವು ಬರುತ್ತದೆ. ಹೀಗೆ 'ಧೂಮ ಏವಾಗ್ನೇಃ' ಎಂಬ ಶ್ರುತಿಗೆ ಪ್ರತ್ಯಕ್ಷವಿರೋಧವು ಬರುವುದರಿಂದ ಅಪ್ರಾಮಾಣ್ಯವು ಪ್ರಾಪ್ತವಾಗುತ್ತದೆಂದು ಆಕ್ಷೇಪ. ಈ ಆಕ್ಷೇಪಕ್ಕೆ 'ದೂರಭೂಯಸ್ತ್ವಾತ್' ಎಂಬ ಸೂತ್ರವು ಉತ್ತರಿಸುತ್ತಿದೆ. ದೂರದಲ್ಲಿದ್ದಾಗ ಹಗಲು ಹೊಗೆ ಹೆಚ್ಚಾಗಿ ಕಾಣಿಸುತ್ತದೆ, ಬೆಂಕಿ ಕಾಣಿಸುವುದಿಲ್ಲ ಎಂಬುದಾಗಿ ಗೌಣಾರ್ಥವನ್ನು ಮಾಡಲಾಗಿದೆ. ಆದ್ದರಿಂದ ಈ ಸೂತ್ರವು ದೃಷ್ಟವಿರೋಧ ಪರಿಹಾರಕವಾಗಿದೆ.

**ಪ್ರಕಾಶಃ** – ''को हि तद्वेद यद्यमुष्मिँल्लोकेऽस्ति वा न व'' इत्यस्य पारत्रिकफलाज्ञानादिप्रतिपादकस्य ''ज्योतिष्टोमेन स्वर्गकामो यजेत'' इत्यादिशास्त्रदृष्ट-विरोधाच्छास्त्रोपदेशविरोधादप्रामाण्यमित्यस्य ''आकालिकेप्स'' इति सूत्रेण - धूमाकुललोचनानामृत्विगादीनां तात्कालिकफलप्राप्तीच्छयेदं वचनं धूमनिर्गतिमार्गकरणार्थं गौणार्थमिति परिहार उक्तः । अत्र दृष्टविरोधशास्त्रविरोधयोरेव परिहारसूत्रे उक्ते । आदिपदेन ''रूपात्प्रायात्'' इत्याद्यपि ग्राह्यम् ।

ಶಾಸ್ತ್ರದೃಷ್ಟವಿರೋಧಕ್ಕೆ ಉದಾ – 'ಕೋ ಹಿ ತದ್ವೇದ ಯದ್ಯಮುಷ್ಮಿಂಲ್ಲೋಕೇऽಸ್ತಿ ವಾ ನ ವಾ' ಪಾರತ್ರಿಕಲೋಕವು ಇದೆಯೋ ಇಲ್ಲವೋ? ಎಂಬುದು ನಮಗೇನು ಗೊತ್ತು ಎಂಬುದು ಈ ವಾಕ್ಯದ ಅಭಿಪ್ರಾಯ. ಪಾರತ್ರಿಕಫಲವು ತಿಳಿದಿಲ್ಲವೆಂದು ಪ್ರತಿಪಾದನೆ ಮಾಡುವ ಈ ವಾಕ್ಯಕ್ಕೆ 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಸ್ವರ್ಗವನ್ನು ಬಯಸುವವನು ಜ್ಯೋತಿಷ್ಟೋಮಯಾಗವನ್ನು ಆಚರಿಸಬೇಕು ಎಂಬ ಶಾಸ್ತ್ರವಾಕ್ಯದಿಂದ ವಿರೋಧ ಬರುತ್ತದೆ. ಮತ್ತು ದೃಷ್ಟವಿರೋಧವೂ ಕೂಡ ಬರುತ್ತದೆ. ಆದ್ದರಿಂದ 'ಕೋ ಹಿ ತದ್ವೇದ' ಎಂಬ ವಾಕ್ಯಕ್ಕೆ ಅಪ್ರಾಮಾಣ್ಯವು ಪ್ರಾಪ್ತವಾದಾಗ 'ಆಕಾಲಿಕೇಪ್ಸಾ' ಎಂಬ ಸೂತ್ರವು ಇದಕ್ಕೆ ಉತ್ತರವನ್ನು ನೀಡಲು ಹೊರಟದೆ. ಯಜ್ಞಮಂಟಪದಲ್ಲಿ ಹೊಗೆ ತುಂಬಿದ ಋತ್ವಿಜರಿಗೆ ತಾತ್ಕಾಲಿಕವಾದ ಫಲದ ಪ್ರಾಪ್ತಿಗಾಗಿ ಮಾತ್ರ ಈ ವಾಕ್ಯವು ಹಾಗೆ ಹೇಳುತ್ತಿದೆ. ಯಜ್ಞಮಂಟಪದಲ್ಲಿ ತುಂಬಿದ ಧೂಮವು ಹೊರಗಡೆ ಹೋಗಲು ಈ ವಾಕ್ಯವು ಮಾರ್ಗದರ್ಶನ ಮಾಡುತ್ತಿದೆ. ಆದ್ದರಿಂದ ಗೌಣಾರ್ಥ ಮಾಡಬೇಕೆಂಬ ಪರಿಹಾರವನ್ನು ಜೈಮಿನೀ ಸೂತ್ರದಲ್ಲಿ ಹೇಳಲಾಗಿದೆ. ಹೀಗೆ ಗ್ರಂಥಕಾರರು ದೃಷ್ಟವಿರೋಧ ಹಾಗೂ ಶಾಸ್ತ್ರವಿರೋಧವನ್ನು ಹೇಳುವ ಎರಡು ಸೂತ್ರಗಳನ್ನಷ್ಟೇ ಉಲ್ಲೇಖ ಮಾಡಿದ್ದಾರೆ. ಶಾಸ್ತ್ರವಿರೋಧ ಪರಿಹಾರಕವಾದ ರೂಪಾತ್ ಪ್ರಾಯಾತ್ ಎಂಬ ಸೂತ್ರವನ್ನು ಗ್ರಂಥಕಾರರು ಹೇಳಿಲ್ಲ. ಇದನ್ನು ಆದಿಪದದಿಂದ ವಿವಕ್ಷಿಸಬೇಕು.

**ಪ್ರಕಾಶಃ** – तथा ''अन्यानर्थक्यात्'' इति सूत्रेण ''पूर्णाहुत्या सर्वान् कामानाप्नोति'' इत्यादौ पूर्णाहुतिनामककर्मणैव सर्वकामावाप्तावन्यकर्मानर्थक्यमिति शङ्कायाः ''सर्वत्वमाधिकारिकम्'' इत्यनेनाधिकृतसर्वापेक्षं तद्वचनम् । न त्वसङ्कुचितसर्वमिति परिहार उक्तः ।

'ಅನ್ಯಾನರ್ಥಕ್ಯಾತ್' ಎಂಬ ಸೂತ್ರದಲ್ಲಿ 'ಪೂರ್ಣಾಹುತ್ಯಾ ಸರ್ವಾನ್ ಕಾಮಾನಾಪ್ನೋತಿ' 'ಪೂರ್ಣಾಹುತಿ ಮಾಡುವುದರಿಂದ ಎಲ್ಲ ಕಾಮನೆಗಳನ್ನು ಹೊಂದುತ್ತಾನೆ' ಎಂಬುದಾಗಿ ಪೂರ್ಣಾಹುತಿ ಎಂಬ ಕರ್ಮದಿಂದ ಸರ್ವಕಾಮನೆಗಳ ಅವಾಪ್ತಿಯನ್ನು ಸಮರ್ಥಿಸಲಾಗಿದೆ. ಇದರಿಂದ ಬೇರೆ ಕರ್ಮಗಳೆಲ್ಲವೂ ವ್ಯರ್ಥವಾಗುತ್ತವೆ ಎಂಬ ಆಶಂಕೆಯು ಪ್ರಾಪ್ತವಾದರೆ 'ಸರ್ವತ್ವಂ ಆಧಿಕಾರಿಕಂ' ಎಂಬ ಸೂತ್ರದಿಂದ ಉತ್ತರಿಸಿದ್ದಾರೆ. ಪೂರ್ಣಾಹುತಿಯಿಂದ ಹೊಂದಲು ಯೋಗ್ಯವಾದ ಸಕಲ ಕಾಮನೆಗಳನ್ನಷ್ಟೇ ಹೊಂದುತ್ತಾನೆ ಎಂಬುದು ಇದರ ಅಭಿಪ್ರಾಯ. ಇತರ ಕಾಮನೆಗಳನ್ನು ಹೊಂದುತ್ತಾನೆಂಬುದು ಇದರ ಅಭಿಪ್ರಾಯವಲ್ಲ.

**ಪ್ರಕಾಶಃ** – तथा तत्रैव मन्त्राधिकरणे ''तदर्थशास्त्रात् । वाक्यनियमात् । बुद्धशास्त्रात् । अचेतनेऽर्थबन्धनात् । अर्थप्रतिषेधात्'' इत्यादिभिरष्टभिः सूत्रैः पूर्वपक्षे ''अविशिष्टस्तु वाक्यार्थः । गुणार्थे न पुनःश्रुतिः । परिसंख्या । अर्थवादो वा'' इत्यादिभिरनेकैः सूत्रैः सिद्धान्तः कृतः ।

ಇದರಂತೆ ಪೂರ್ವಮೀಮಾಂಸೆಯ ಇದೇ ಪ್ರಕರಣದ ಸಂದರ್ಭದ ಮಂತ್ರಾಧಿಕರಣದಲ್ಲಿ ಹೀಗಿದೆ- 'ತದರ್ಥಶಾಸ್ತ್ರಾತ್' 'ವಾಕ್ಯನಿಯಮಾತ್' 'ಬುದ್ಧಶಾಸ್ತ್ರಾತ್' 'ಅಚೇತನೇ ಅರ್ಥಸಂಬಂಧನಾತ್' 'ಅರ್ಥಪ್ರಾಪ್ತಿಷೇಧಾತ್' ಎಂಬ ಎಂಟು ಸೂತ್ರಗಳಿಂದ ಪೂರ್ವಪಕ್ಷವನ್ನು ಮಾಡಿ 'ಅವಿಶಿಷ್ಟಸ್ತು ವಾಕ್ಯಾರ್ಥಃ' 'ಗುಣಾರ್ಥೇ ನ ಪುನಃಶ್ರುತಿಃ' 'ಪರಿಸಂಖ್ಯಾ' 'ಅರ್ಥವಾದೋ ವಾ' ಇತ್ಯಾದಿ ಅನೇಕ ಸೂತ್ರಗಳಿಂದ ಸಿದ್ಧಾಂತವನ್ನು ಮಾಡಲಾಗಿದೆ.

**ಪ್ರಕಾಶಃ** – तत्र ''इमामगृभ्णन्रशनामृतस्येत्यश्वाभिधानीमादत्त'' इति मन्त्रार्थप्रतिपादकशास्त्रात् मन्त्रानर्थक्यशङ्कायाः ''परिसंख्य'' इत्यनेन परिहारः ।

ಈ ಸಂದರ್ಭದಲ್ಲಿ 'ಇಮಾಮಗೃಭ್ಣನ್ ರಶನಾಮೃತಸ್ಯೇತ್ಯೇಶ್ವಾಭಿಧಾನೀಮಾದತ್ತ' ಎಂಬ ಮಂತ್ರಾರ್ಥ ಪ್ರತಿಪಾದಕವಾದ ಶಾಸ್ತ್ರದಿಂದ ಮಂತ್ರಕ್ಕೆ ಆನರ್ಥಕ್ಯಶಂಕೆಯನ್ನು 'ಪರಿಸಂಖ್ಯಾ' ಎಂಬುದರಿಂದ ಪರಿಹರಿಸಲಾಗಿದೆ.

ವಿವರಣೆ – 'ಇಮಾಮಗೃಭ್ಣನ್' ಎಂಬ ಮಂತ್ರವನ್ನು ಕೇಳಿದಾಗಲೇ ಕುದುರೆಯ ಲಗಾಮನ್ನು ಹಿಡಿಯಬೇಕು ಎಂದು ತಿಳಿಯುತ್ತದೆ. ಹಾಗಾಗಿ ಅದನ್ನೇ ವಿಧಾನ ಮಾಡುವ 'ಇಮಾಮಗೃಭ್ಣನ್ರಶನಾಮೃತಸ್ಯೇತ್ಯೇಶ್ವಾಭಿಧಾನೀಮಾದತ್ತ' ಎಂಬ ಮಂತ್ರದಿಂದ ಕುದುರೆಯ ಲಗಾಮನ್ನು ಹಿಡಿಯಬೇಕು ಎಂಬ ಬ್ರಾಹ್ಮಣ ವಾಕ್ಯವು ವ್ಯರ್ಥವಾಗುತ್ತದೆ.

ವಿಧಿಗಳು ಒಟ್ಟು ಮೂರು ವಿಧ. ೧. ಅಪೂರ್ವವಿಧಿ, ೨. ನಿಯಮವಿಧಿ, ೩. ಪರಿಸಂಖ್ಯಾವಿಧಿ. ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಎಂಬುದು ಅಪೂರ್ವವಿಧಿಗೆ ಉದಾಹರಣೆ. ಏಕೆಂದರೆ ಜ್ಯೋತಿಷ್ಟೋಮಕ್ಕೂ ಸ್ವರ್ಗಕ್ಕೂ ಕಾರ್ಯಕಾರಣಭಾವವು ಬೇರೆ ಯಾವ ಪ್ರಮಾಣದಿಂದಲೂ ಪ್ರಾಪ್ತವಾಗಿಲ್ಲ. ಹೀಗೆ ಅಪೂರ್ವವಾದದ್ದನ್ನು ವಿಧಾನ ಮಾಡುತ್ತಿರುವುದರಿಂದ ಇದು ಅಪೂರ್ವವಿಧಿ ಎನಿಸುತ್ತದೆ. ವ್ರೀಹೀನವಹಂತಿ ಎಂಬುದು ನಿಯಮವಿಧಿಗೆ ಉದಾಹರಣೆ. ಏಕೆಂದರೆ ಅವಘಾತಕ್ಕೂ ವ್ರೀಹಿಗೂ ಕಾರ್ಯಕಾರಣಭಾವವು ಪ್ರತ್ಯಕ್ಷದಿಂದಲೇ ಸಿದ್ಧವಾಗುತ್ತದೆ. ಅದನ್ನು ನಿಯಮ ಮಾಡುವುದಕ್ಕಾಗಿ ಶ್ರುತಿಯು ಹೊರಟಿದೆ. ಅವಹನನ ಮಾಡುವ ಮೂಲಕವೇ ತುಷವಿಮೋಕವನ್ನು

ಮಾಡಬೇಕು ಎಂಬುದು ಇದರ ಅಭಿಪ್ರಾಯ. ಬೇರೆಯದನ್ನು ನಿವೃತ್ತಿ ಮಾಡುವ ಪ್ರಯೋಜನವುಳ್ಳದ್ದು ಪರಿಸಂಖ್ಯಾವಿಧಿ ಎನಿಸುತ್ತದೆ. ಒಂದೇ ಕರ್ಮವೇ ಎರಡಕ್ಕೆ ಶೇಷವಾಗಿ ಪ್ರಾಪ್ತವಾದಾಗ ಅಥವಾ ಎರಡು ಶೇಷಿಗೆ ಒಂದು ಶೇಷವು ಪ್ರಾಪ್ತವಾದಾಗ ಒಂದನ್ನು ನಿವರ್ತನೆ ಮಾಡುವುದಕ್ಕಾಗಿ ಪರಿಸಂಖ್ಯಾವಿಧಿಯು ಹೊರಡುತ್ತದೆ. ಪ್ರಕೃತ 'ಇಮಾಮಗೃಭ್ಣನ್' ಎಂಬ ಮಂತ್ರವನ್ನು ನೋಡಿದಾಗ ಅಶ್ವಸ್ಯ ಎಂಬುದಾಗಿ ಹೇಳಿಲ್ಲ. ಋತಸ್ಯ ಎಂದು ಹೇಳಲಾಗಿದೆ. ಇದನ್ನು ನೋಡಿದಾಗ ಯಾವ ಪಶುವಿನ ಹಗ್ಗವನ್ನು ಗ್ರಹಣ ಮಾಡಬೇಕು ಎಂದು ಸ್ಪಷ್ಟವಾಗಿ ತಿಳಿಯುವುದಿಲ್ಲ. ಗರ್ದಭರಶನವನ್ನೂ ಕೂಡ ಗ್ರಹಣ ಮಾಡಬಹುದೋ ಏನೋ ಎಂಬುದಾಗಿ ಸಂಶಯ ಬರುತ್ತದೆ. ಆದ್ದರಿಂದ ಅಶ್ವರಶನಗ್ರಹಣಕ್ಕೆ ಈ ಮಂತ್ರವು ಶೇಷವೋ ಅಥವಾ ಗರ್ದಭರಶನಗ್ರಹಣಕ್ಕೆ ಈ ಮಂತ್ರವು ಶೇಷವೋ? ಎಂಬ ಸಂಶಯವು ಬಂದು ಎರಡೂ ಕೂಡ ಪ್ರಾಪ್ತವಾಗುತ್ತವೆ. ಹೀಗಿರುವಾಗ ಗರ್ದಭರಶನಗ್ರಹಣವನ್ನು ನಿರಾಕರಣೆ ಮಾಡಿ ಅಶ್ವರಶನದ ವಿಧಾನಕ್ಕೋಸ್ಕರ ಈ ಮಂತ್ರವು ಸಾರ್ಥಕವಾಗಿದೆ.

**प्रकाशः** – अश्वरशनादानवचनं गर्दभरशनापरिवर्जनरूपा परिसंख्येति मन्त्रार्थवशादेव मन्त्राणामभ्यादानशेषत्वे प्राप्तेऽपि,

ಅಶ್ವರಶನವನ್ನು ಹಿಡಿದುಕೊಳ್ಳಬೇಕು ಎಂಬ ಮಾತು ಕತ್ತೆಯ ಹಗ್ಗವನ್ನು ಹಿಡಿಯಬಾರದೆನ್ನಲು ಪರಿಸಂಖ್ಯಾವಿಧಿ ರೂಪವಾಗಿದೆ. ಆದ್ದರಿಂದ ಯಾವುದೇ ದೋಷವಿಲ್ಲ. ಬ್ರಾಹ್ಮಣವಾಕ್ಯವೂ ಕೂಡ ವ್ಯರ್ಥವಾಗುವುದಿಲ್ಲ.

**प्रकाशः** – ''चतुर्भिरभ्रिमादत्त'' इति मन्त्रार्थप्रतिपादकशास्त्रात् मन्त्रानर्थक्यशङ्कायां ''गुणार्थेन पुनःश्रुतिः'' इत्यनेन मन्त्राणां चतुष्ट्वसंख्यारूप-गुणविध्यर्थं पुनःश्रवणमिति परिहार उक्तः ।

'ಇಮಾಮಗೃಭ್ಣನ್' ಇತ್ಯಾದಿ ಮಂತ್ರದಂತೆ ಪೂರ್ವಮೀಮಾಂಸೆಯಲ್ಲಿ 'ಚತುರ್ಭಿರಭ್ರಿಮಾದತ್ತೇ' ಎಂಬ ಮತ್ತೊಂದು ವಾಕ್ಯವು ಶ್ರುತವಾಗಿದೆ. ಅಭ್ರಿ ಎಂದರೆ ಗುದ್ದಲಿ ಎಂದರ್ಥ. 'ಅಭ್ರೀಮ್ ವ್ರ್ಯಣವೀಕುದ್ದಾಲಸದೃಶೀಂ' ಎಂದು ಹೇಳುವಂತೆ ಆ ಅಭ್ರಿಯು ಕುದ್ದಾಲವೆಂಬ ಮಣ್ಣು ತೆಗೆಯುವ ಸಾಧನಕ್ಕೆ ಸದೃಶವಾಗಿರಬೇಕು, ಬಿದಿರಿನಿಂದ ರಚನೆಯಾಗಿರಬೇಕು. ಇಂತಹ ಗುದ್ದಲಿಯನ್ನು ತೆಗೆದುಕೊಳ್ಳುವಾಗ ನಾಲ್ಕುಮಂತ್ರಗಳನ್ನು ಪಠಿಸಬೇಕು ಎನ್ನುತ್ತಿದೆ ಈ ವಾಕ್ಯ. ಈ ಬ್ರಾಹ್ಮಣವಾಕ್ಯಕ್ಕೆ ಸಾರ್ಥಕ್ಯವನ್ನು ಹೇಳಬೇಕೆಂದರೆ ಮಂತ್ರವು ಅರ್ಥಪ್ರತಿಪಾದಕವಲ್ಲವೆಂದು ಹೇಳಬೇಕು. ಹೀಗೆ ಆಶಂಕೆಯು ಪ್ರಾಪ್ತವಾದರೆ 'ಗುಣಾರ್ಥೇ ನ ಪುನಃಶ್ರುತಿಃ' ಎಂಬುದರಿಂದ ಮಂತ್ರವು ಅರ್ಥಪ್ರತಿಪಾದಕವಾದ್ದರಿಂದ ಅದರ ಬಲದಿಂದಲೇ ಯಾವ ಮಂತ್ರವನ್ನು ಹೇಳಬೇಕೆಂದು ಸ್ಪಷ್ಟವಾಗಿ ತಿಳಿಯುತ್ತದೆ. ಆದರೂ ಕೂಡ 'ಚತುರ್ಭಿರಭ್ರಿಮಾದತ್ತೇ' ಎಂಬ ಬ್ರಾಹ್ಮಣವಾಕ್ಯವು ವ್ಯರ್ಥವಲ್ಲ. ಈ ವಾಕ್ಯವು ಸಿದ್ಧವಾದ ಮಂತ್ರದಲ್ಲಿ ಗುಣವಿಧಾನಕ್ಕೋಸ್ಕರ ಸಾರ್ಥಕವಾಗಿದೆ. ಚತುಷ್ಟಸಂಖ್ಯಾ ಎಂಬ ಗುಣವನ್ನು ವಿಧಾನ ಮಾಡುವ ಮೂಲಕ ನಾಲ್ಕು ಮಂತ್ರಗಳನ್ನು ಪಠಿಸಬೇಕು, ಹೆಚ್ಚು ಅಥವಾ ಕಮ್ಮಿ ಮಂತ್ರಗಳನ್ನು ಪಠಿಸಬಾರದೆಂದು ಕೇಳಲು ಬ್ರಾಹ್ಮಣವಾಕ್ಯವು ಹೊರಟಿದೆ. ಹೀಗೆ ಪೂರ್ವಮೀಮಾಂಸೆಯಲ್ಲಿ ಪರಿಹಾರವನ್ನು ಹೇಳಿದ್ದಾರೆ.

**प्रकाशः** – तथा ''उरुप्रथस्वोरुते यज्ञपतिः प्रथताम्'' इति मन्त्रलिङ्गादेव मन्त्रस्य पुरोडाशप्रथनशेषत्वावगतिसम्भवे ''उरुप्रथस्वेति पुरोडाशं प्रथयति'' इति

मन्त्रार्थप्रत्यायकशास्त्रं व्यर्थमापद्यत इति मन्त्रार्थबोधकशास्त्रसद्भावात् मन्त्रानर्थक्यमिति ''तदर्थशास्त्रात्'' इति सूत्रेण शङ्कायां ''अर्थवादो वा'' इति सूत्रेण परिहार उच्यते । प्रथयतीति प्रथनमेव विधीयते । तत्र रूपादेव प्राप्तो मन्त्र उरुप्रथस्वेत्यनूद्यते । स चानुवादोऽर्थवादः प्रशंसा । ईदृशं प्रथनं प्रशस्तम् । यदेवं रूपेण मन्त्रेण क्रियमाणं यजमानस्य प्रजापशुविस्तृप्तिं विधत्त इति ।

ಅದೇ ರೀತಿಯಾಗಿ ಪೂರ್ವಮೀಮಾಂಸೆಯಲ್ಲಿ ಮತ್ತೊಂದು ವಾಕ್ಯವಿದೆ. 'ಉರುಪ್ರಥಸ್ವೋರತೇ ಯಜ್ಞಪತಿಃ ಪ್ರಥತಾಮ್' ಇದು ಬಿಸಿಯಾದ ಅನ್ನ ಆರಬೇಕೆಂದು ವಿವಕ್ಷೆಯಿದ್ದಾಗ ಹರಡಲು ಹೇಳಬೇಕಾದ ಮಂತ್ರ. ಈ ಮಂತ್ರವನ್ನು ಕೇಳಿದಾಗಲೇ ಅನ್ನವು ವಿರಳವಾಗಲು ಹೇಳಬೇಕೆಂದು ಸ್ಪಷ್ಟವಾಗಿ ತಿಳಿಯುತ್ತದೆ. ಆದರೂ 'ಉರುಪ್ರಥಸ್ವೇತಿ ಪುರೋಡಾಶಂ ಪ್ರಥಯತಿ' ಎಂಬ ಬ್ರಾಹ್ಮಣ ವಾಕ್ಯ ಹೊರಟದೆ. ಇದರ ಬಲದಿಂದ ಮಂತ್ರವು ಅರ್ಥಪ್ರತ್ಯಾಯಕವಲ್ಲವಾದ್ದರಿಂದ ವ್ಯರ್ಥವೆಂದು ತಿಳಿಯುತ್ತದೆ. ಏಕೆಂದರೆ ಮಂತ್ರಾರ್ಥಬೋಧಕವಾದ ಶಾಸ್ತ್ರವಿರೋಧವಿರುವುದರಿಂದ ಮಂತ್ರಕ್ಕೆ ಆನರ್ಥಕ್ಯವನ್ನು ಹೇಳಬೇಕೆಂದು 'ತದರ್ಥಶಾಸ್ತ್ರಾತ್' ಸೂತ್ರದಲ್ಲಿ ಸ್ಪಷ್ಟಪಡಿಸಲಾಗಿದೆ. ಇಷ್ಟು ಆಕ್ಷೇಪ. ಇದರ ಪರಿಹಾರಕ್ಕಾಗಿ 'ಅರ್ಥವಾದೋ ವಾ' ಎಂಬ ಸೂತ್ರದಿಂದ ಪರಿಹಾರವನ್ನು ಹೇಳಿದ್ದಾರೆ. 'ಪುರೋಡಾಶಂ ಪ್ರಥಯತೇ' ಎಂಬ ವಾಕ್ಯವನ್ನು ಕೇಳಿದಾಗ ಪುರೋಡಾಶವನ್ನು ಪ್ರಥನ ಮಾಡಬೇಕೆಂದು ತಿಳಿಯುತ್ತದೆ. ಮಂತ್ರದಲ್ಲಿರುವ ಲಿಂಗದಿಂದ ಪ್ರಥನಕ್ಕೆ ಮಂತ್ರವು ಶೇಷವೆಂದು ತಿಳಿಯುತ್ತದೇ ಹೊರತು ಪ್ರಥನದ ವಿಧಿಯು ಬ್ರಾಹ್ಮಣದ ವಾಕ್ಯದಿಂದಲೇ ತಿಳಿಯುತ್ತದೆ. ಈ ಬ್ರಾಹ್ಮಣವಾಕ್ಯವು ಪ್ರಥನಕ್ಕೆ ಮಂತ್ರವು ಶೇಷವೆಂದು ತಿಳಿಸುತ್ತಿಲ್ಲ. ಆದ್ದರಿಂದ 'ಉರುಪ್ರಥಸ್ವೇತಿ ಪುರೋಡಾಶಂ ಪ್ರಥಯತಿ' ಎಂಬ ಬ್ರಾಹ್ಮಣವಾಕ್ಯವು ಪ್ರಥಯತಿ ಎಂಬಂಶದಲ್ಲಿ ಮಾತ್ರ ವಿಧಿಯಾಗಿದೆ. 'ಉರುಪ್ರಥಸ್ವ ಇತಿ ಮಂತ್ರೇಣ' ಎಂಬುದರಿಂದ ಅನುವಾದರೂಪವಾಗಿದೆ. ಈ ಅನುವಾದವೂ ಕೂಡ ವ್ಯರ್ಥವಲ್ಲ. ಅರ್ಥವಾದ ರೂಪವಾಗಿ ಪ್ರಶಂಸಾಪರವಾಗಿದೆ. ಆ ಪ್ರಶಂಸೆ ಏನೆಂದರೆ ಹೀಗೆ ಮಂತ್ರವನ್ನು ಹೇಳುವ ಮೂಲಕ ಅನ್ನವನ್ನು ವಿರಳ ಮಾಡಬೇಕೆಂದರೆ ಇದು ಎಷ್ಟು ಶ್ರೇಷ್ಠವಾಗಿರಬೇಕು. ಈ ಮಂತ್ರದಲ್ಲಿರುವ ಅರ್ಥಪ್ರಕಾಶನ ಸಾಮರ್ಥ್ಯವೆಂಬ ಸ್ವರೂಪದಿಂದ ಮಂತ್ರದಿಂದ ಯಾವ ಯಜಮಾನನು ಹೀಗೆ ಅನುಷ್ಠಾನ ಮಾಡುತ್ತಾನೋ ಅವನಿಗೆ ಪ್ರಜಾಪಶುವಿನ ಸಂತತಿ ವಿಸ್ತಾರವಾಗುತ್ತದೆ.

**प्रकाशः** – तथा ''अदितिर्द्यौरदितिरन्तरिक्षम्'' इत्यादावदितिदेवतायाद्यन्तरिक्षाद्यात्मकत्वरूपार्थस्य विप्रतिषेधात् मन्त्राप्रामाण्यशङ्कायां ''अर्थविप्रतिषेधात्'' इत्यनेन कृतायां ''गुणादविप्रतिषेधस्स्यात्'' इत्यनेन सूत्रेण गुणवादेन स्तुत्यर्थेनाविप्रतिषेधोऽविरोधस्स्यादिति परिहार उक्तः ।।

ಇದರಂತೆ ಪೂರ್ವಮೀಮಾಂಸೆಯಲ್ಲಿ ಮತ್ತೊಂದು ಉದಾಹರಣೆ ಇದೆ. 'ಅದಿತಿರ್ದ್ಯೌರದಿತಿರಂತರಿಕ್ಷಮ್' ಎಂಬಲ್ಲಿ ಅದಿತಿದೇವತೆಯನ್ನು ಅಂತರಿಕ್ಷಾತ್ಮಕಳೆಂದು ಹೇಳಲಾಗಿದೆ. ಚೇತನಳಾದ ಅದಿತಿದೇವತೆಯು ಆಕಾಶ ಮೊದಲಾದವುಗಳಾಗಲು ಹೇಗೆ ಸಾಧ್ಯ? ಇದು ವಿಪ್ರತಿಷಿದ್ಧವಾದ್ದರಿಂದ 'ಅದಿತಿರ್ದ್ಯೌ' ಎಂಬ ಮಂತ್ರಕ್ಕೆ ಅಪ್ರಾಮಾಣ್ಯಾದಿಶಂಕೆಯು ಪ್ರಾಪ್ತವಾಗುತ್ತದೆ. ಈ ಪೂರ್ವಪಕ್ಷವನ್ನು 'ಅರ್ಥವಿಪ್ರತಿಷೇಕಾತ್'ಎಂಬ ಸೂತ್ರವು ಮಾಡಿದೆ. ಆಗ 'ಗುಣಾದವಿಪ್ರತಿಷೇಧಃ ಸ್ಯಾತ್' ಎಂಬ ಸೂತ್ರವು

ಸ್ಥಾಪನೆ ಮಾಡುತ್ತಿದೆ. ಅದಿತಿಯನ್ನು ಸ್ತುತಿ ಮಾಡುವುದಕ್ಕಾಗಿ ದ್ಯೂ ಅಂತರಿಕ್ಷಳೆಂದು ಶ್ರುತಿ ಹೇಳುತ್ತಿರುವುದರಿಂದ ವಿಪ್ರತಿಷೇಧಕ್ಕೆ ಅವಕಾಶವಿಲ್ಲ. ಆದ್ದರಿಂದ ಪ್ರತ್ಯಕ್ಷವಿರೋಧವು ಬರುವುದಿಲ್ಲವೆಂದು ಉತ್ತರವನ್ನು ನೀಡಲಾಗಿದೆ.

**ಪ್ರಕಾಶಃ** – तथा व्याकरणेऽपीति ।। आद्यस्य द्वितीये पादे ''लुपि युक्तवद्व्यक्तिवचने'' ''विशेषणानां चाजातेः'' इति सूत्रद्वयेन मतान्तरमुक्तवेत्यर्थः।

ಸೂತ್ರದಲ್ಲಿ ಹೇಳಿದ ಪೂರ್ವಪಕ್ಷಕ್ಕೆ ಸೂತ್ರದಲ್ಲೇ ಉತ್ತರ ಹೇಳಬೇಕೆಂಬ ಪೂರ್ವಮೀಮಾಂಸೆಯ ಅನೇಕ ದೃಷ್ಟಾಂತಗಳನ್ನು ನೀಡಿದ್ದಾಯಿತು. ಇದೇ ವಿಷಯದಲ್ಲಿ ವ್ಯಾಕರಣದ ದೃಷ್ಟಾಂತವು ಕೂಡ ಇರುತ್ತದೆ. ಪ್ರಥಮಾಧ್ಯಾಯದ ದ್ವಿತೀಯ ಪಾದದಲ್ಲಿ 'ಲುಪಿ ಯುಕ್ತಿವದ್ವ್ಯಕ್ತಿವಚನೇ ವಿಶೇಷಣಾನಾಂ ಚಾಜಾತೇಃ' ಎಂಬೆರಡು ಸೂತ್ರಗಳಿಂದ ಬೇರೆ ಮತದ ಅಭಿಪ್ರಾಯವನ್ನು ಅನುವಾದ ಮಾಡಲಾಗಿದೆ.

**ಪ್ರಕಾಶಃ** – तत्राद्यस्यायमर्थः । ''जनपदे लुप्'' इत्यादिना लुप्संज्ञया लुप्तस्यार्थो लुप्शब्देनोच्यते । तस्मिँल्लुपि लुप्संज्ञया लुप्तस्यार्थे युक्तवत् प्रकृतिवत्। प्रत्ययार्थ-युक्तत्वात्प्रकृतेः प्रकृताविव व्यक्तिवचने लिङ्गसंख्ये भवत इति । यथा पञ्चालानां क्षत्रियाणां निवासो जनपदः पञ्चाला इति । नतु पञ्चालो जनपद इत्येकवचनम् । द्वितीयस्य तु लुबर्थविशेषणानामपि प्रकृतिवदेव लिङ्गसंख्ये भवतः। जातौ तु नेति। यथा पञ्चालानां निवासो रमणीयो जनपदः पञ्चाला रमणीया इति । जातौ तु पञ्चाला जनपद इत्येवेति ।।

ಈ ಎರಡು ಸೂತ್ರಗಳಲ್ಲಿ ಮೊದಲನೇ ಸೂತ್ರದ ಅರ್ಥ ಹೀಗಿದೆ – 'ಜನಪದೇ ಲುಪ್' ಎಂಬ ಸೂತ್ರದಲ್ಲಿ ಜನಪದ ಎಂಬ ಅರ್ಥದಲ್ಲಿ ಯಾವ ಅಣ್ ಮೊದಲಾದ ಪ್ರತ್ಯಯಗಳು ಪ್ರಾಪ್ತವಾಗುತ್ತವೋ ಅವುಗಳಿಗೆ ಲುಪ್ ಎಂಬ ಸಂಜ್ಞೆಯು ಬರುತ್ತದೆ ಎಂದು ಈ ಸೂತ್ರವು ಹೇಳುತ್ತಿದೆ. ಹೀಗೆ 'ಜನಪದೇ ಲುಪ್' ಎಂಬ ಸೂತ್ರವು ಹೇಳಿದ ಮೇಲೆ 'ಲುಪಿ ಯುಕ್ತಿವದ್ವ್ಯಕ್ತಿವಚನೇ' ಎಂಬ ಸೂತ್ರವು ಏನು ಹೇಳುತ್ತದೆ ಎಂದರೆ ಪ್ರತ್ಯಯವು ಬಂದು ಲೋಪವಾದ ಮೇಲೆ ಯಾವ ಕಾರ್ಯವು ಆಗುತ್ತದೋ ಆ ಕಾರ್ಯವಾದ ಶಬ್ದಕ್ಕೆ ಈ ಪ್ರಕೃತಿಯಲ್ಲಿ ಯಾವ ಲಿಂಗಸಂಖ್ಯೆಯು ಮೊದಲು ಇತ್ತೋ ಅದೇ ಲಿಂಗ ಮತ್ತು ಸಂಖ್ಯೆಯನ್ನು ಈ ಶಬ್ದಕ್ಕೂ ಕೂಡ ವಿವಕ್ಷಿಸಬೇಕು. ಬೇರೆ ಲಿಂಗ ಬೇರೆ ಸಂಖ್ಯೆಯನ್ನು ವಿವಕ್ಷಿಸಬಾರದು. ಉದಾ – 'ಪಂಚಾಲಾನಾಂ ನಿವಾಸಃ ಜನಪದಃ ಪಂಚಾಲಾಃ' ಎಂಬ ಪ್ರಯೋಗವಿದೆ. ಯಾವ ದೇಶದಲ್ಲಿ ಜನರು ಇದ್ದರೋ ಅವರೆಲ್ಲರಿಗೂ ಪಂಚಾಲ ಎಂದೇ ಹೆಸರು. ಹೀಗೆ ಜನಪದ ಎಂಬರ್ಥದಲ್ಲಿ 'ಅಣ್' ಪ್ರತ್ಯಯವನ್ನು ಇಲ್ಲಿ ವಿವಕ್ಷಿಸಲಾಗುತ್ತದೆ. 'ಅಣ್' ಪ್ರತ್ಯಯವು ಬಂದ ಮೇಲೆ 'ಜನಪದೇ ಲುಪೋ' ಎಂಬ ಸೂತ್ರದಿಂದ ಅದು ಲುಪ್ ಸಂಜ್ಞೆಯನ್ನು ಹೊಂದುತ್ತದೆ. ಅದು ಲೋಪವಾದ ಮೇಲೆ ಯಾವ ಪಂಚಾಲ ಎಂಬ ಶಬ್ದವಿದೆಯೋ ಅದು ಮೊದಲಿದ್ದ ಪಂಚಾಲ ಎಂಬ ಶಬ್ದಕ್ಕಿಂತ ಭಿನ್ನವಾಗಿದೆ. ಈ ಎರಡನೆಯ ಪಂಚಾಲ ಶಬ್ದವನ್ನು ಲುಪ್ ಎಂದು ಕರೆಯುತ್ತಾರೆ. ಲುಪ್ ಸಂಜ್ಞೆಯಿಂದ ಲುಪ್ತವಾದ ಶಬ್ದವನ್ನು ಲುಪ್ ಎಂದೇ ಗುರುತಿಸುವುದು ವೈಯ್ಯಾಕರಣರ ಕ್ರಮ. ಮೊದಲಿರುವ ಪಂಚಾಲ ಎಂಬ ಶಬ್ದವು ಇದಕ್ಕೆ ಪ್ರಕೃತಿ ಎನಿಸುತ್ತದೆ. ಪ್ರಕೃತಿಯಲ್ಲಿ

ಯಾವ ಲಿಂಗ ಯಾವ ಸಂಖ್ಯೆಯು ವಿವಕ್ಷಿತವಾಗಿದೆಯೋ ಅದೇ ಲಿಂಗ, ಅದೇ ಸಂಖ್ಯೆಯು ಈ ವಿಕೃತಿ ಪಂಚಾಲ ಶಬ್ದದಲ್ಲೂ ಕೂಡ ವಿವಕ್ಷಿತವಾಗುತ್ತದೆ. ಎರಡನೆಯ ಪಂಚಾಲ ಎಂಬ ಶಬ್ದವನ್ನು ಏಕವಚನಾಂತವಾಗಿ ವಿವಕ್ಷಿಸಲು ಸಾಧ್ಯವಿಲ್ಲ. ಅಥವಾ ನಪುಂಸಕಲಿಂಗವನ್ನೂ ಕೂಡ ವಿವಕ್ಷಿಸುತ್ತೇವೆ ಎಂದು ಹೇಳಲು ಸಾಧ್ಯವಿಲ್ಲ. ಪ್ರಕೃತಿಯು ಪುಲ್ಲಿಂಗವಾದ್ದರಿಂದ ಮತ್ತು ಬಹುವಚನಾಂತವಾದ್ದರಿಂದ ಇಲ್ಲಿಯೂ ಕೂಡ ಪುಲ್ಲಿಂಗ ಬಹುವಚನಾಂತವಾಗಿಯೇ ವಿವಕ್ಷಿಸಬೇಕು. ಇದನ್ನೇ 'ಲುಪಿ ಯುಕ್ತವತ್ ವ್ಯಕ್ತಿವತ್' ಎಂಬ ಸೂತ್ರವು ಹೇಳುತ್ತಿದೆ. ಸೂತ್ರದಲ್ಲಿರುವ ಯುಕ್ತವತ್ ಎಂಬ ಪದಕ್ಕೆ ಪ್ರಕೃತಿಯಂತೆ ಎಂದರ್ಥ. ವ್ಯಕ್ತಿ ಎಂಬ ಶಬ್ದಕ್ಕೆ ಲಿಂಗ ಎಂದರ್ಥ. ವಚನ ಎಂಬ ಪದಕ್ಕ ಸಂಖ್ಯಾ ಎಂದರ್ಥ. ಪ್ರಕೃತಿಯಲ್ಲಿ ಯಾವ ಲಿಂಗ ವಚನಗಳಿವೆಯೋ ಅದೇ ವಿಕೃತಿಯಲ್ಲೂ ಕೂಡ ಬರಬೇಕು ಎಂಬುದು ಒಟ್ಟು ಅಭಿಪ್ರಾಯ.

ಜನಪದವಾಚಕವಾದ ಪಂಚಾಲಶಬ್ದವು ಪ್ರಕೃತಿಯಂತೆ ರೂಪವನ್ನು ಹೊಂದುತ್ತದೆ. ಇದಕ್ಕೆ ವಿಶೇಷಣವಾದುದು ಹೇಗಿರಬೇಕು? ಎಂಬ ಪ್ರಶ್ನೆಗೆ 'ವಿಶೇಷಣಾನಾಂಚ ಅಜಾತೇಃ' ಎಂಬ ಮುಂದಿನ ಸೂತ್ರವು ಉತ್ತರವನ್ನು ನೀಡುತ್ತಿದೆ. ಜನಪದವಾಚಕವಾದ ಪದಕ್ಕೆ ಯಾವುದನ್ನಾದರೂ ವಿಶೇಷಣವನ್ನಾಗಿ ನೀಡಿದರೆ ಅದೂ ಕೂಡ ಪ್ರಕೃತಿಯಂತೆ ಲಿಂಗ ಹಾಗೂ ವಚನಗಳನ್ನು ಹೊಂದುತ್ತದೆ. ಆದರೆ ಆ ವಿಶೇಷಣವಾಚಕಪದವು ಜಾತಿವಾಚಕಪದವಾಗಿರಬಾರದು. ಒಂದುವೇಳೆ ಜಾತಿವಾಚಕವಾದರೆ ಮಾತ್ರ ಏಕವಚನವಾಗಬಹುದು. ಉದಾ – 'ಪಂಚಾಲಾಃ ರಮಣೀಯಾಃ' ಪಂಚಾಲದೇಶದಲ್ಲಿ ವಾಸಿಸುವ ಕ್ಷತ್ರಿಯರೆಲ್ಲರೂ ರಮಣೀಯರಾಗಿದ್ದಾರೆ ಎಂದು ಹೇಳಿದಾಗ ಪಂಚಾಲ ಶಬ್ದದಂತೆ ರಮಣೀಯವೂ ಕೂಡ ಬಹುವಚನಾಂತವಾಗಿ ಪ್ರಯುಕ್ತವಾಗಿದೆ. ಒಂದುವೇಳೆ ಜಾತಿವಾಚಕವಾದ ಜನಪದವೇ ಇದ್ದಲ್ಲಿ ಆಗ ಏಕವಚನವು ಬರುತ್ತದೆ. 'ಪಂಚಾಲಾಃ ಜನಪದಃ' ಎಂದೇ ಹೇಳಬೇಕು.

**प्रकाशः – तदशिष्यमिति** ।। तत् प्रकृतिवल्लिङ्गसंख्याविधानम् । अशिष्यं न कार्यम् । कुतः । संज्ञाप्रमाणत्वात् संज्ञारूपशब्दानां स्वार्थप्रत्यायकत्वादित्यर्थः । ये संज्ञाशब्दास्ते स्वाभिधेयगतलिङ्गसंख्यापेक्षया भिन्नलिङ्गसंख्या अपि स्वार्थस्य प्रतिपादका भवन्तीत्यर्थः । तथा च पञ्चालाः कुरव इत्यादिशब्दा अपि जनपदस्य संज्ञाशब्दा एवेति ''आपो दारा'' इत्यादिवच्छब्दस्वाभाव्यादेव स्वार्थं प्रतिपादयिष्यन्तीति तदर्थं न यतितव्यमिति भावः ।

ಹೀಗೆ ಕೆಲವರ ಅಭಿಪ್ರಾಯವನ್ನು ಸೂತ್ರದಲ್ಲಿ ಪೂರ್ವಪಕ್ಷ ಮಾಡಿ ಪಾಣಿನಿಯು 'ತದಶಿಷ್ಯಂ ಸಂಜ್ಞಾಪ್ರಮಾಣತ್ವಾತ್' ಎಂಬ ಸೂತ್ರದಿಂದ ನಿರಾಕರಣೆ ಮಾಡಿದ್ದಾನೆ. ಪ್ರಕೃತಿಯಲ್ಲಿ ಯಾವ ಲಿಂಗ ಹಾಗೂ ಸಂಖ್ಯೆಗಳಿದೆಯೋ ಅದೇ ವಿಕೃತಿಯಲ್ಲೂ ಕೂಡ ಮಾಡಬೇಕು ಎಂಬ ನಿಯಮವೇ ತಪ್ಪು. ಏಕೆಂದರೆ ಸಂಜ್ಞಾಪ್ರಮಾಣತ್ವಾತ್ = ಸಂಜ್ಞಾರೂಪವಾದ ಶಬ್ದಗಳು ಸ್ವಾರ್ಥಪ್ರತ್ಯಾಯಕಗಳಾಗುತ್ತವೆ. ಸಂಜ್ಞಾರೂಪವಾದ ಯಾವ ಶಬ್ದಗಳಿವೆಯೋ ಅವುಗಳು ತಮ್ಮ ಸಾಮರ್ಥ್ಯದಿಂದಲೇ ಅರ್ಥಪ್ರತ್ಯಾಯಕಗಳಾಗಿವೆ. ಹೀಗಿರುವಾಗ ಪ್ರಕೃತಿಯಲ್ಲಿರುವ ಲಿಂಗವಚನಗಳೇ ಇಲ್ಲೂ ಕೂಡ ಬರಬೇಕು ಎಂದು ಹೇಳುವುದು ಅಸಾಧುವಾಗಿದೆ. ಯಾವ ಸಂಜ್ಞಾವಾಚಕ ಶಬ್ದಗಳಿವೆಯೋ ಅವುಗಳು ತಮ್ಮ ಅಭೇದದಲ್ಲಿರುವ ಲಿಂಗ ಹಾಗೂ ಸಂಖ್ಯೆಗಳನ್ನು ಅಪೇಕ್ಷಿಸಿ ಭಿನ್ನವಾದ ಲಿಂಗ ಹಾಗೂ ಸಂಖ್ಯೆಗಳನ್ನು ಹೊಂದಿದ್ದರೂ ಕೂಡ ಸ್ವಾರ್ಥಪ್ರತಿಪಾದಕಗಳು.

ಪುಂಸ್ವಾದ್ಯಧಿಕರಣ (೨-೩-೧೬)

ಉದಾ – ಪಂಚಾಲಶಬ್ದದಿಂದ ಅಭಿಕೇಯವಾದುದು ಜನಪದ. ಅದರಲ್ಲಿ ಬಹುತ್ವವು ಇರುವುದಿಲ್ಲ. ಆದರೆ 'ಪಂಚಾಲಾಃ ಕುರವಃ' ಎಂಬುದಾಗಿ ಶಬ್ದದಲ್ಲಿ ಬಹುವಚನ ಪ್ರಯೋಗವಿದೆ. ನೀವು ಹೇಳುವಂತೆ ಪ್ರಕೃತಿಯಲ್ಲಿರುವ ಬಹುವಚನವು ಇಲ್ಲಿಯೂ ಕೂಡ ಅಪೇಕ್ಷಿತವೆಂದು ಹೇಳುವುದು ಸರಿಯಲ್ಲ. ಇದರಂತೆ 'ಆಪೋ ಧಾರಾಃ' ಎಂಬಲ್ಲೂ ಕೂಡ ಧಾರಾಃ ಎಂಬ ಪದದಲ್ಲಿ ಬಹುವಚನವಿದೆ. ಆದರೆ ಪ್ರತಿಪಾದ್ಯಳಾದ ಹೆಂಡತಿಯು ಒಬ್ಬಳೇ ಆಗಿದ್ದಾಳೆ. ಆದ್ದರಿಂದ ತಮ್ಮ ಸ್ವಭಾವಕ್ಕೆ ಅನುಗುಣವಾಗಿಯೇ ಸ್ವಾರ್ಥವನ್ನು ಆ ಶಬ್ದಗಳು ಪ್ರತಿಪಾದನೆ ಮಾಡುತ್ತವೆ. ಹೀಗೆ ಪಾಣಿನಿಯೂ ಕೂಡ ಪೂರ್ವಪಕ್ಷವನ್ನು ಸೂತ್ರದಲ್ಲಿ ಹೇಳಿದರೆ ಸಿದ್ಧಾಂತವನ್ನು ಸೂತ್ರದಲ್ಲೇ ಹೇಳಿದ್ದಾರೆ.

**प्रकाशः** – गौतमसूत्रेषु न्यायसूत्रेषु । तदप्रामाण्यं वेदाप्रामाण्यम् । कुतः । अनृतादिदोषेभ्यः । ''पुत्रकामः पुत्रेष्ट्या यजेत'' इति वाक्योक्तफलस्य पुत्रेष्टौ कृतायामपि पुत्रजन्मनोऽनुपलम्भात् । ''उदिते होतव्यमनुदिते होतव्यम्'' इत्यादौ व्याघातः । ''कुवित्सोमस्यापाम्'' इत्यादौ पुनरुक्तिः । ''शृण्वेव'' इत्यादौ निरर्थकत्वम् । ''अग्निर्हिमस्य भेषजम्'' इत्यादौ ज्ञातज्ञापकत्वमित्येवंरूपदोषेभ्य इत्यर्थः ।

ಗೌತಮಸೂತ್ರಗಳಲ್ಲೂ ಕೂಡ ಪೂರ್ವಪಕ್ಷವನ್ನು ಸೂತ್ರದಲ್ಲಿ ಹೇಳಿದರೆ ಸಿದ್ಧಾಂತವನ್ನು ಸೂತ್ರದಲ್ಲೇ ಹೇಳಿದ್ದಾರೆ ಎನ್ನುವುದಕ್ಕೆ ದೃಷ್ಟಾಂತ ಕಂಡಿದೆ. ಗೌತಮಸೂತ್ರಗಳು ಎಂದರೆ ನ್ಯಾಯಸೂತ್ರಗಳು ಎಂದರ್ಥ. ತದಪ್ರಾಮಾಣ್ಯಮ್ ಎಂದರೆ ವೇದ ಅಪ್ರಾಮಾಣ್ಯ ಎಂದರ್ಥ. ಏಕೆ ವೇದ ಅಪ್ರಾಮಾಣ್ಯವನ್ನು ಹೇಳಬೇಕು ಎಂದರೆ ಅನೃತಾದಿ ದೋಷಗಳಿರುವುದರಿಂದ ಎಂದರ್ಥ. ಆ ದೋಷಗಳು ಹೀಗಿವೆ. 'ಪುತ್ರಕಾಮಃ ಪುತ್ರೇಷ್ಟ್ಯಾ ಯಜೇತ' ಎಂಬಲ್ಲಿ ಪುತ್ರಕಾಮೇಷ್ಟಿಯಾಗವನ್ನು ಮಾಡಿದರೆ ಪುತ್ರಜನನವಾಗುತ್ತದೆಂದು ವಿಧಿಸಲಾಗಿದೆ. ಆದರೆ ಯಾಗವನ್ನು ಆಚರಣೆ ಮಾಡಿದರೂ ಕೂಡ ಪುತ್ರಜನನವಾಗುವುದು ಕಾಣಿಸುತ್ತಿಲ್ಲ. 'ಉದಿತೇ ಹೋತವ್ಯಂ ಅನುದಿತೇ ಹೋತವ್ಯಂ' ಎಂಬಲ್ಲಿ ವ್ಯಾಘಾತವಾದ ವಚನವಿದೆ. 'ಕುವಿತ್ಸೋಮಸ್ಯಾಪಾಮ್' ಎಂಬಲ್ಲಿ ಪುನರುಕ್ತಿ ದೋಷವಿದೆ. 'ಶೃಣ್ವೇವ' ಎಂಬ ಮಂತ್ರದಲ್ಲಿ ನಿರರ್ಥಕತ್ವವಿದೆ. 'ಅಗ್ನಿರ್ಹಿಮಸ್ಯ ಭೇಷಜಮ್' ಎಂಬಲ್ಲಿ ಜ್ಞಾತಜ್ಞಾಪಕತ್ವದೋಷವಿದೆ. ಈ ಎಲ್ಲ ದೋಷಗಳಿರುವುದರಿಂದ ವೇದಕ್ಕೆ ಅಪ್ರಾಮಾಣ್ಯವನ್ನು ಹೇಳಬೇಕು.

**प्रकाशः** – आद्यस्य परिहारः कर्मेति ।। कर्मवैगुण्यात्कर्तृवैगुण्यात्साधन-वैगुण्यादित्यर्थः । व्याघातस्य परिहारोऽभ्युपेतेति ।। तत्तदधिकार्यभ्युपेतकालभेदे कालव्यत्यासे । ''प्रातः प्रातरनृतं ते वदन्ति पुरोदयाच्च जुह्वति येऽग्निहोत्रम्'' इति दोषवचनात्तत्तदधिकार्यादिभेदेन अव्याघातादित्यर्थः । पुनरुक्तेः परिहारोऽनुवादोपपत्तेश्चेति ।। गुणादिविधानाच्च वैयर्थ्यमिति भावः ।।

ಇದರಲ್ಲಿ ಮೊದಲನೆಯ ದೋಷಕ್ಕೆ ಪರಿಹಾರವನ್ನು 'ನ ಕರ್ಮಕರ್ತೃಸಾಧನವೈಗುಣ್ಯಾತ್' ಎಂಬುದರಿಂದ ಹೇಳಿದ್ದಾರೆ. ಕರ್ಮದಲ್ಲಿ, ಕರ್ತೃವಿನಲ್ಲಿ ಹಾಗೂ ಸಾಧನದಲ್ಲಿ ವೈಗುಣ್ಯದೋಷವು

ಇರುವುದರಿಂದ ಫಲವು ದೊರೆಯುತ್ತಿಲ್ಲ ಎಂದು ಹೇಳಬೇಕು. ವೇದವು ಅಪ್ರಮಾಣವಾದ್ದರಿಂದ ಫಲವು ದೊರೆಯುತ್ತಿಲ್ಲವೆಂದು ಹೇಳಬಾರದು ಎಂಬುದು ಈ ಸೂತ್ರದ ಅಭಿಪ್ರಾಯ.

ವ್ಯಾಘಾತ ದೋಷದ ಪರಿಹಾರವನ್ನು 'ಅಭ್ಯುಪೇತಕಾಲಭೇದದೋಷವಚನಾತ್' ಎಂಬ ಸೂತ್ರದಿಂದ ಹೇಳಿದ್ದಾರೆ. ಆಯಾ ಅಧಿಕಾರಿಗಳು ಹಾಗೂ ವಿಧಿಸಲ್ಪಟ್ಟ ಕಾಲವು ಭಿನ್ನವಾದ್ದರಿಂದ ದೋಷವು ಪರಿಹಾರವಾಗುತ್ತದೆ. ಯಜುರ್ವೇದಿಗಳಿಗೆ ಯಾವ ಕಾಲದಲ್ಲಿ ವಿಧಾನವನ್ನು ಮಾಡುತ್ತಿದೆಯೋ ತದ್ಭಿನ್ನವಾದ ಕಾಲದಲ್ಲಿ ಋಗ್ವೇದಿಗಳಿಗೆ ಹೋಮವಿಧಾನವನ್ನು ಮಾಡುತ್ತದೆ. ಹೀಗೆ ಅಧಿಕಾರಿಭೇದದಿಂದ 'ಉದಿತೇ ಹೋತವ್ಯಂ ಅನುದಿತೇ ಹೋತವ್ಯಂ' ಎಂಬುದನ್ನು ಕೂಡಿಸಬೇಕು. 'ಪ್ರಾತಃ ಪ್ರಾತರನೃತಂ ತೇ ವದಂತಿ ಪುರೋದಯಾಚ್ಚ ಜುಹ್ವತಿ ಯೇಽಗ್ನಿಹೋತ್ರಮ್' ಎಂಬುದಾಗಿ ಶ್ರುತಿಯು ಅಧಿಕಾರಿಭೇದದಿಂದ ದೋಷವನ್ನು ಹೇಳುತ್ತಿದೆ. ಆದ್ದರಿಂದ ವ್ಯಾಘಾತ ದೋಷಕ್ಕೆ ಅವಕಾಶವಿಲ್ಲ. ಪುನರುಕ್ತಿ ದೋಷದ ಪರಿಹಾರವನ್ನು 'ಅನುವಾದಶ್ಚೋಪಪತ್ತೇಃ' ಎಂಬ ಸೂತ್ರದಿಂದ ಮಾಡಲಾಗಿದೆ. ಗುಣಾದಿ ವಿಧಾನಕ್ಕೋಸ್ಕರ ಹೇಳಿದ್ದನ್ನೇ ಪುನಃ ಹೇಳುವುದು ಕಾಣಸುತ್ತದೆ. ಆದ್ದರಿಂದ ವೈಯರ್ಥ್ಯದೋಷವಿಲ್ಲ ಎಂಬುದು ಈ ಸೂತ್ರದ ಅಭಿಪ್ರಾಯ.

## तात्पर्यचन्द्रिका

**किं चेह किं जीवशब्देनानवच्छिन्नं शुद्धं ब्रह्म लक्ष्यते किं वान्तः करणेनाविद्यया वाऽवच्छिन्नस्तत्प्रतिबिम्बितो वा विशिष्टो जीव उच्यते ।**

ಮತ್ತು ಪ್ರಕೃತ ಪ್ರಸಕ್ತವಾದ ಜೀವಶಬ್ದದಿಂದ ಯಾವುದೇ ಧರ್ಮದಿಂದಲೂ ವಿಶಿಷ್ಟನಾಗದ ಶುದ್ಧಬ್ರಹ್ಮನು ಲಕ್ಷ್ಯನಾಗುತ್ತಾನೆಂದು ಹೇಳುತ್ತೀರೋ ಅಥವಾ ವಿಶಿಷ್ಟನಾದ ಜೀವನು ವಾಚ್ಯನಾಗುತ್ತಾನೆಂದು ಹೇಳುತ್ತೀರೋ? ಆ ವಿಶಿಷ್ಟನಾದ ಜೀವನನ್ನು ಬಹುಬಗೆಯಲ್ಲಿ ನೀವು ವಿವಕ್ಷಿಸಬಹುದು. ಅಂತಃಕರಣದಿಂದ ವಿಶಿಷ್ಟನಾಗಿದ್ದಾನೆಂದು ಅಥವಾ ಅವಿದ್ಯೆಯಿಂದ ವಿಶಿಷ್ಟನಾಗಿದ್ದಾನೆಂದು ಅಥವಾ ಅಂತಃಕರಣ ಅವಿದ್ಯೆಗಳಿಂದ ಪ್ರತಿಬಂಧಿತನಾಗಿದ್ದಾನೆಂದು ಹೇಳಬಹುದು.

**नाद्यः । त्वया ''चराचरेति सूत्रात्प्राग्ब्रह्मविचारः । तदारभ्यापादसमाप्ति जीवविचार'' इत्युक्तत्वेनेह ब्रह्मविचारस्यासङ्गतेः ।**

ಶುದ್ಧಬ್ರಹ್ಮನು ಜೀವ ಎಂಬ ಶಬ್ದದಿಂದ ಲಕ್ಷ್ಯನಾಗಿದ್ದಾನೆಂಬ ಪ್ರಥಮ ಪಕ್ಷವು ಅಯುಕ್ತ. ಏಕೆಂದರೆ ಸ್ವತಃ ನೀನೇ 'ಚರಾಚರ ವ್ಯಪಾಶ್ರಯಸ್ತು' ಎಂಬ ಸೂತ್ರಕ್ಕಿಂತ ಮೊದಲು ಮಾತ್ರ ಬ್ರಹ್ಮವಿಚಾರವು ಪ್ರಸಕ್ತವಾಗಿದೆ. ಆ ಸೂತ್ರದಿಂದ ಆರಂಭ ಮಾಡಿ ಪಾದ ಮುಗಿಯುವ ತನಕ ಜೀವವಿಚಾರವೇ ಪ್ರಸಕ್ತವಾಗಿದೆ ಎಂದು ಹೇಳಿರುವಿ. ಆದ್ದರಿಂದ ಜೀವವಿಚಾರ ಪ್ರಸಕ್ತಿ ಇರುವ ಈ ಅಧಿಕರಣದಲ್ಲಿ ಬ್ರಹ್ಮವಿಚಾರವು ಅಸಂಗತವಾಗುತ್ತದೆ.

**शुद्ध उत्क्रान्त्यादिश्रुतेरभावेनाणुत्वश्रुतेश्च ''व्योमवत्'' इत्यादौ गतेरुक्तत्वेन पूर्वपक्षस्यानुदयाच्च ।**

ಮತ್ತು ಶುದ್ಧಬ್ರಹ್ಮನಲ್ಲಿ ಉತ್ಕ್ರಾಂತಿಯೇ ಕೂಡುವುದಿಲ್ಲ. ಮತ್ತು ಹಾಗೆ ಉತ್ಕ್ರಾಂತಿ ಇದೆ ಎನ್ನಲು ಯಾವುದೇ ಶ್ರುತಿಯೂ ಕೂಡ ಆಧಾರವಾಗಿರುವುದಿಲ್ಲ. ಇನ್ನು 'ಅಣುರ್ಹ್ಯೇಷ ಆತ್ಮಾ' ಎಂಬ ಅಣುತ್ವಶ್ರುತಿಗೆ ಹೇಗೆ ವ್ಯಾಖ್ಯಾನ ಮಾಡಬೇಕು ಎಂಬುದನ್ನು 'ವ್ಯೋಮವತ್' ಇತ್ಯಾದಿ ಸೂತ್ರದಲ್ಲಿ ಸ್ವತಃ ನೀನೇ ಉಪಪಾದನೆ ಮಾಡಿರುವಿ. ಆದ್ದರಿಂದ ಜೀವನು ಅಣುವಾಗಿದ್ದಾನೆಂಬ ಪೂರ್ವಪಕ್ಷವೇ ಹೊರಡಲು ಸಾಧ್ಯವಿಲ್ಲ. ಏಕೆಂದರೆ ಆ ಶ್ರುತಿಯ ಅರ್ಥವನ್ನು ಈಗಾಗಲೇ ನಿರ್ಧಾರ ಮಾಡಿದ್ದಾಗಿದೆ.

**पूर्वपक्षे ''जीवे महत्त्वश्रुतिर्ब्रह्माभेदाभिप्राय'' इति भाषणस्य, सिद्धान्ते ''सौत्रमुत्क्रान्त्यादिकं बुद्ध्युपाधिकम्'' इति भाषणस्य, सिद्धान्तसूत्रे ''प्राज्ञवत्'' इति ब्रह्मणो दृष्टान्तीकरणस्य चायोगाच्च ।**

ಮತ್ತು ಪೂರ್ವಪಕ್ಷ ಮಾಡುವಾಗ 'ಜೀವೇ ಮಹತ್ವಶ್ರುತಿಃ ಬ್ರಹ್ಮಾಭೇದಾಭಿಪ್ರಾಯಾ' ಜೀವನಲ್ಲಿ ಮಹತ್ವಪ್ರತಿಪಾದಕವಾದ ಶ್ರುತಿಯು ಕೇವಲ ಬ್ರಹ್ಮಾಭೇದಾಭಿಪ್ರಾಯದಿಂದಷ್ಟೇ ಇರುತ್ತದೆ ಎಂದು ನೀವೇ ಭಾಷ್ಯದಲ್ಲಿ ಹೇಳಿರುತ್ತೀರಿ. ಈಗ ಜೀವಶಬ್ದದಿಂದ ಶುದ್ಧಬ್ರಹ್ಮನನ್ನು ವಿವಕ್ಷಿಸಿದರೆ ಆಗ ಜೀವನಲ್ಲಿ ಮಹತ್ವ ಹೇಗೆ? ಎಂಬ ಆಕ್ಷೇಪವನ್ನೇ ಮಾಡಲು ಬರುವುದಿಲ್ಲ. ಮತ್ತು ಅದು ಬ್ರಹ್ಮನ ಐಕ್ಯಾಭಿಪ್ರಾಯದಿಂದ ಹೇಳಲ್ಪಟ್ಟಿದೆ ಎಂಬ ಉತ್ತರವೂ ಕೂಡ ಯುಕ್ತವಾಗುವುದಿಲ್ಲ. ಮತ್ತೊಂದು ದೋಷ - ಸಿದ್ಧಾಂತವನ್ನು ಸ್ಥಾಪನೆ ಮಾಡುವಾಗ 'ಸೌತ್ರಮುತ್ಕ್ರಾಂತ್ಯಾದಿಕಂ ಬುದ್ಧ್ಯುಪಾಧಿಕಮ್' ಸೂತ್ರದಲ್ಲಿ ಹೇಳಿದ ಉತ್ಕ್ರಾಂತ್ಯಾದಿಗಳು ಬುದ್ಧಿ ಎಂಬ ಉಪಾಧಿನಿಮಿತ್ತಕವಾಗಿದೆ ಎಂದು ಭಾಷ್ಯದಲ್ಲಿ ಹೇಳಲಾಗಿದೆ. ಜೀವನಲ್ಲಿ ಉತ್ಕ್ರಾಂತ್ಯಾದಿಗಳು ಇರಲು ಸಾಧ್ಯವಿಲ್ಲ. ಬುದ್ಧಿಯಲ್ಲಿರುವ ಉತ್ಕ್ರಾಂತ್ಯಾದಿಗಳ ವಿವಕ್ಷೆಯಿಂದ ಹಾಗೆ ಜೀವನಲ್ಲಿ ಪ್ರಯೋಗಿಸಲಾಗಿದೆ ಎಂಬ ಮಾತೂ ಕೂಡ ಈಗ ಅಯುಕ್ತವಾಗುತ್ತದೆ. ಏಕೆಂದರೆ ಪ್ರಕೃತ ಜೀವ ಎಂದರೆ ಶುದ್ಧಬ್ರಹ್ಮ ಎಂಬರ್ಥವನ್ನು ನೀವು ಸ್ವೀಕರಿಸಿದ್ದೀರಿ. ಮತ್ತೊಂದು ದೋಷ – ಸಿದ್ಧಾಂತ ಸೂತ್ರದಲ್ಲಿ ರಾಜ್ಞವತ್ ಎಂಬುದಾಗಿ ಬ್ರಹ್ಮನನ್ನು ದೃಷ್ಟಾಂತವನ್ನಾಗಿ ನೀಡಿದ್ದೀರಿ. ಪ್ರಕೃತ ಶುದ್ಧಬ್ರಹ್ಮನೇ ದಾರ್ಷ್ಟಾಂತಿಕನಾದರೆ ಅವನೇ ಪುನಃ ದೃಷ್ಟಾಂತನಾಗಲು ಹೇಗೆ ಸಾಧ್ಯ? ಆದ್ದರಿಂದ ಈ ದೃಷ್ಟಾಂತೀಕರಣವು ಕೂಡ ಅಯುಕ್ತವಾಗುತ್ತದೆ.

**नान्त्यः । विशिष्टे परिच्छिन्नाविद्यादिनावच्छिन्ने महत्त्वायोगात् । मध्यमपरिमाणत्वे चानित्यत्वापातात् ।**

ಜೀವಶಬ್ದದಿಂದ ಶುದ್ಧಬ್ರಹ್ಮನನ್ನೂ ವಿವಕ್ಷಿಸುವುದಿಲ್ಲ, ಅಂತಃಕರಣವಿಶಿಷ್ಟನಾದ ಅಥವಾ ಅವಿದ್ಯಾವಿಶಿಷ್ಟನಾದ ಅಂತಃಕರಣಪ್ರತಿಬಿಂಬಿತನಾದ ಅವಿದ್ಯಾಪ್ರತಿಬಿಂಬಿತನಾದ ವಿಶಿಷ್ಟನಾದ ಜೀವನನ್ನು ವಿವಕ್ಷಿಸುತ್ತೇವೆ ಎಂಬ ಎರಡನೇ ಪಕ್ಷವೂ ಕೂಡ ಅಯುಕ್ತವಾಗಿದೆ. ಏಕೆಂದರೆ ಅಣು ಎಂದು ಪೂರ್ವಪಕ್ಷ ಮಾಡಿ ಮಹತ್ಪರಿಣಾಮವುಳ್ಳವನಾಗಿದ್ದಾನೆ ಎಂಬ ಸಿದ್ಧಾಂತವನ್ನು ಸ್ಥಾಪನೆ ಮಾಡಲು ಸಾಧ್ಯವೇ ಆಗುವುದಿಲ್ಲ. ಏಕೆಂದರೆ ಪರಿಚ್ಛಿನ್ನವಾದ ಅವಿದ್ಯೆಯಿಂದ ಅವನು ಅವಚ್ಛಿನ್ನನಾದಾಗ ಅವನೂ ಕೂಡ ಪರಿಚ್ಛಿನ್ನನೇ ಆಗುತ್ತಾನೆ. ಜೀವನು ವ್ಯಾಪ್ತನಲ್ಲ ಮಧ್ಯಮ ಪರಿಮಾಣವುಳ್ಳವನಾಗಿದ್ದಾನೆಂದು ಹೇಳಿದರೆ ಮಧ್ಯಮ ಪರಿಮಾಣವಿದ್ದರೆ ಅನಿತ್ಯನಾಗುತ್ತಾನೆಂದು ನೀವೇ ಹೇಳಿರುತ್ತೀರಿ. ಆದ್ದರಿಂದ ವಿಶಿಷ್ಟನಾದ ಜೀವನನ್ನು ಜೀವಶಬ್ದದಿಂದ ವಿವಕ್ಷಿಸುವುದಾದರೆ ಅಣುವೆಂದೇ ಸಿದ್ಧಾಂತವನ್ನು

ಮಾಡಬೇಕೇ ಹೊರತು ವ್ಯಾಪ್ತ ಎಂಬುದಾಗಿ ಸಿದ್ಧಾಂತ ಮಾಡುವುದು ತಪ್ಪಾಗುತ್ತದೆ.

**[1](यच्चोक्तं उत्क्रान्तिर्यद्यप्यचलतोऽपि देहस्वाम्यनिवृत्त्या युक्ता । उत्तरे गत्यागती तु स्वात्मनैव । न ह्यचलतो गत्यादीति स्वात्मनेति सूत्रार्थ इति ।**

ಜೀವನು ವ್ಯಾಪ್ತನಲ್ಲ ಎನ್ನಲು ಮೂರು ಹೇತುಗಳನ್ನು ಅದ್ವೈತಿಗಳು ಹೇಳುತ್ತಾರೆ – ೧. ಉತ್ಕ್ರಮಣ, ೨. ಗಮನ, ೩. ಆಗಮನ ಎಂದು. ಈ ಮೂರು ಹೇತುಗಳಲ್ಲಿ ಉತ್ಕ್ರಾಂತಿಮತ್ವ ಎಂಬ ಹೇತುವು ಅನ್ಯಥಾಸಿದ್ಧವಾಗಿದೆ. ಜೀವನಲ್ಲಿ ವ್ಯಾಪ್ತತ್ವವಿದ್ದರೂ ಉತ್ಕ್ರಾಂತಿಯು ಯುಕ್ತವಾಗುತ್ತದೆ. ಏಕೆಂದರೆ ದೇಹದಲ್ಲಿ ಸ್ವಾಮ್ಯವು ಹೋದರೆ ಉತ್ಕ್ರಾಂತನಾದ ಎಂದು ಹೇಳಬಹುದು. ಆದರೆ ಗಮನ ಮತ್ತು ಆಗಮನಗಳೆಂಬ ಹೇತುಗಳನ್ನು ಬೇರೆ ಯಾವುದೇ ರೀತಿಯಿಂದಲೂ ಕೂಡ ಕೂಡಿಸಲು ಸಾಧ್ಯವೇ ಇಲ್ಲ. ಏಕೆಂದರೆ ಅಚಲವಾದ ಪದಾರ್ಥಕ್ಕೆ ಗಮನವನ್ನಾಗಲೀ, ಆಗಮನವನ್ನಾಗಲೀ ಕೂಡಿಸಲಾಗದು. ಉತ್ತರಯೋಃ ಎಂದರೆ ಗತಿ ಮತ್ತು ಆಗತಿಗಳು ಅನ್ಯಥಾ ಉಪಪನ್ನ ಆಗುವುದಿಲ್ಲ. ಜೀವನಿಂದಲೇ ಕೂಡಿಸಬೇಕು. ಅಂದರೆ ಜೀವಾತ್ಮನ ಚಲನೆಗಳಿಂದಲೇ ಗತಿ ಮತ್ತು ಆಗತಿಗಳನ್ನು ಕೂಡಿಸಬೇಕು. ಜೀವಾತ್ಮನಲ್ಲಿ ಚಲನವಿಲ್ಲದೇ ಇವೆರಡನ್ನು ಕೂಡಿಸಲು ಸಾಧ್ಯವಿಲ್ಲ.

**तन्न । उत्क्रान्तेरपि गत्यादिवत्क्रियात्वेनाऽविशेषात् । नहि देहानभिमानी सुप्तोऽसम्प्रज्ञातसमाधिस्थो वोत्क्रान्त इत्युच्यते । सूत्रे आत्मना चोत्तरे इति निर्देशापत्तेश्च । मम तु षष्ठी उत्क्रान्तिसूत्रेऽवश्यं विवक्षणीयस्य सकाशादित्यस्येहानुषक्तस्यान्वयाय । ब्रह्मणि स्वात्मशब्दोऽपि विषयवाक्यानुकरणाय ।**

ಇದು ತಪ್ಪು. ಉತ್ಕ್ರಾಂತಿಯನ್ನು ಸ್ವಾಮಿನಿಮಿತ್ತಕವಾಗಿ ಕೂಡಿಸಬಹುದು. ಆದರೆ ಗಮನಾಗಮನಗಳನ್ನು ಕಥಂಚಿದಪಿ ಕೂಡಿಸಲು ಸಾಧ್ಯವಿಲ್ಲ ಎಂಬುದಾಗಿ ಯಾವ ವೈಲಕ್ಷಣ್ಯವನ್ನು ಹೇಳಿದರೋ ಇದೇ ಅಯುಕ್ತವಾಗಿದೆ. ಏಕೆಂದರೆ ವ್ಯಾಪ್ತವಾದ ಪದಾರ್ಥಕ್ಕೆ ಗಮನ, ಆಗಮನ, ಉತ್ಕ್ರಾಂತಿ ಯಾವುದೂ ಸಹ ಕೂಡಲು ಸಾಧ್ಯವೇ ಇಲ್ಲ. ಗಮನ ಮತ್ತು ಆಗಮನಗಳು ಹೇಗೆ ಒಂದು ಕ್ರಿಯೆಯಾಗಿದೆಯೋ ಅದರಂತೆ ಉತ್ಕ್ರಾಂತಿಯು ಕೂಡ ಒಂದು ಕ್ರಿಯೆಯೇ ಆಗಿದೆ. ಸ್ವಾಮಿತ್ವನಿಮಿತ್ತಕವಾಗಿ ಉತ್ಕ್ರಾಂತಿಯನ್ನು ಕೂಡಿಸಲು ಸಾಧ್ಯವಿಲ್ಲ. ಏಕೆಂದರೆ ಸುಷುಪ್ತಿಯ ಅವಸ್ಥೆಯಲ್ಲಿ ದೇಹದ ಮೇಲೆ ಅಭಿಮಾನವೇ ಇರುವುದಿಲ್ಲ. ಆಗ ಜೀವನು ದೇಹದಿಂದ ಉತ್ಕ್ರಮಣನಾದ ಎಂಬುದಾಗಿ ಯಾರೂ ಸಹ ವ್ಯವಹಾರ ಮಾಡುವುದಿಲ್ಲ. ಅದರಂತೆ ಅಸಂಪ್ರಜ್ಞಾತ ಸಮಾಧಿಯಲ್ಲಿರುವ ಯೋಗಿಗಳಿಗೂ ಕೂಡ ದೇಹದ ಮೇಲೆ ಅಭಿಮಾನವು ಇರುವುದಿಲ್ಲ. ಆಗಲೂ

(೧) ಯಚ್ಚೋಕ್ತಂ ಉತ್ಕ್ರಾಂತಿಃ ಎಂಬಲ್ಲಿಂದ ಪ್ರಾರಂಭ ಮಾಡಿ ಶಬ್ದಾರ್ಥತ್ವಾಯೋಗಾಚ್ಚ ಎಂಬಲ್ಲಿಯ ತನಕ ಕಂಸದಲ್ಲಿರುವ ವಿಷಯವನ್ನು ರಾಯರು ವ್ಯಾಖ್ಯಾನ ಮಾಡಿಲ್ಲ. ಆದ್ದರಿಂದ ಇದು ಪ್ರಕ್ಷಿಪ್ತವಿರಬಹುದು. ಆದರೂ ವಿಷಯದಲ್ಲಿ ಸ್ವಾರಸ್ಯವಿರುವುದರಿಂದ ಅನುವಾದ ಮಾಡಲಾಗಿದೆ.

ಕೂಡ ಜೀವನು ಉತ್ಕ್ರಮಣನಾದ ಎಂದು ಯಾರೂ ಹೇಳುವುದಿಲ್ಲ. ಆದ್ದರಿಂದ ಅಭಿಮಾನದ ಉತ್ಪತ್ತಿಯ ಅಭಿಪ್ರಾಯದಿಂದ ಆಗಮನವನ್ನಾಗಲೀ, ಅಭಿಮಾನನಿವೃತ್ತಿಯಿಂದ ಉತ್ಕ್ರಮಣವನ್ನು ಕೂಡಿಸಲು ಸಾಧ್ಯವಿಲ್ಲ.

ಮತ್ತು ಸೂತ್ರದಲ್ಲಿ ಆತ್ಮನಃ ಎಂದಷ್ಟೇ ನಿರ್ದೇಶನ ಮಾಡಿದರೆ ಸಾಕು ಸ್ವಾತ್ಮನಾ ಎಂಬ ನಿರ್ದೇಶವು ಅಯುಕ್ತವಾಗಿದೆ. ಮತ್ತು ಉತ್ತರಯೋಃ ಎಂಬ ಷಷ್ಠೀ ವಿಭಕ್ತಿಯೂ ಕೂಡ ಅಯುಕ್ತವಾಗಿದೆ. ಉತ್ತರೇ ಎಂಬುದಾಗಿ ನಿರ್ದೇಶ ಮಾಡಬೇಕಿತ್ತು. ನಮ್ಮ ಮತದಲ್ಲಿ ಈ ಯಾವ ದೋಷಗಳೂ ಇಲ್ಲ. ಏಕೆಂದರೆ ನಾವು ಬ್ರಹ್ಮನನ್ನೇ ವಿವಕ್ಷಿಸಿದ್ದೇವೆ. ವಿಷಯವಾಕ್ಯದಲ್ಲಿ ಸ್ವಾತ್ಮ ಶಬ್ದವಿರುವುದರಿಂದ ಸೂತ್ರದಲ್ಲೂ ಕೂಡ ವಿಷಯವಾಕ್ಯದ ಅನುಸರಣೆಗಾಗಿ ಸ್ವಾತ್ಮ ಶಬ್ದವನ್ನು ಪ್ರಯೋಗಿಸಿದ್ದೇವೆ. ಸಕಾಶಾತ್ ಎಂಬುದನ್ನು ಅನ್ವಯ ಮಾಡಿರುವುದರಿಂದ ಷಷ್ಠೀ ವಿಭಕ್ತಿಯೂ ಕೂಡ ಸಾಧುವಾಗುತ್ತದೆ. ಸಕಾಶಾತ್ ಎಂಬುದನ್ನು ಏಕೆ ಅನ್ವಯ ಮಾಡಬೇಕು ಎಂದರೆ ಪೂರ್ವಸೂತ್ರದಲ್ಲಿ ಪ್ರಸಕ್ತವಾದ ಸಕಾಶಾತ್ ಎಂಬುದನ್ನು ಇಲ್ಲಿ ಅವಶ್ಯವಾಗಿ ವಿವಕ್ಷಣೆ ಮಾಡಲೇಬೇಕಾದ್ದರಿಂದ ಷಷ್ಠೀ ವಿಭಕ್ತಿಯನ್ನು ವಿವಕ್ಷಿಸುವುದು ಅನಿವಾರ್ಯವಾಗುತ್ತದೆ. ಆದ್ದರಿಂದ ನಮ್ಮ ಮತದಲ್ಲಿ ಸೂತ್ರಾರ್ಥವು ಅತ್ಯಂತ ಸಾಧುವಾಗುತ್ತದೆ.

**यच्चोक्तं ''सत्यं ज्ञानमनन्तं ब्रह्म । स वा एष महानज आत्म'' इति महत्त्वश्रुतेर्नाणुर्जीव इति चेन्न । तत्र ब्रह्मण एवाधिकारादिति ''नाणुः'' इति सूत्रार्थ इति ।**

'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ ಸ ವಾ ಏಷ ಮಹಾನಜ ಆತ್ಮಾ' ಎಂಬುದನ್ನು ವಿಷಯವಾಕ್ಯವನ್ನಾಗಿ ಅದ್ವೈತಿಗಳು ಪರಿಗಣಿಸಿದ್ದಾರೆ. ಈ ವಾಕ್ಯಗಳಲ್ಲಿ ಮಹತ್ವವೇ ಶ್ರುತವಾಗಿರುವುದರಿಂದ ಜೀವನು ಅಣುವಾಗಲು ಸಾಧ್ಯವಿಲ್ಲ ಎಂಬುದು ಪೂರ್ವಪಕ್ಷ. ಸತ್ಯಂ ಜ್ಞಾನಂ ಇತ್ಯಾದಿ ಶ್ರುತಿಯಲ್ಲಿ ಪ್ರತಿಪಾದ್ಯನಾದವನು ಬ್ರಹ್ಮನೇ ಆಗಿದ್ದಾನೆ ಹೊರತು ಜೀವನಲ್ಲ ಎಂಬುದಾಗಿ 'ನಾಣುಃ' ಎಂಬ ಸೂತ್ರವು ಹೇಳುತ್ತಿದೆ. ಹೀಗೆ ಅದ್ವೈತಿಗಳು ವ್ಯಾಖ್ಯಾನ ಮಾಡಿದ್ದಾರೆ.

**तन्न । सत्यादिवाक्ये जीवविषयत्वशङ्काबीजाभावात् । स वा इत्यत्र तु त्वन्मते जीवस्यैवाधिकृतत्वात् । अत एव त्वया ''स वेति श्रुतिर्जीव ब्रह्माभेदाभिप्राय'' इति भाषितम् ।**

ಇದೂ ಕೂಡ ತಪ್ಪು. ಸತ್ಯಂ ಜ್ಞಾನಂ ಅನಂತಂ ಬ್ರಹ್ಮ ಎಂಬ ವಾಕ್ಯವು ಜೀವವಿಷಯಕವಾಗಿದೆ ಎಂಬ ಆಶಂಕೆ ಮಾಡಲು ಕರಣವೇ ಕಾಣಿಸುತ್ತಿಲ್ಲ. ಏಕೆಂದರೆ ಯಾವುದೇ ಜೀವಲಿಂಗಗಳು ಇಲ್ಲಿ ಇರುವುದಿಲ್ಲ. ಮತ್ತು 'ಸ ವಾ ಏಷ ಮಹಾನಜಃ ಆತ್ಮಾ' ಎಂಬ ಶ್ರುತಿಯು ಜೀವನನ್ನೇ ಪ್ರತಿಪಾದನೆ ಮಾಡುತ್ತಿದೆ ಎಂದು ನೀವು ಒಪ್ಪಿರುತ್ತೀರಿ. ಹೀಗಿರುವಾಗ ಹ್ಯಧಿಕಾರಾತ್ ಎಂಬುದಕ್ಕೆ ಬ್ರಹ್ಮನೇ 'ಸ ವಾ ಏಷ' ಎಂಬಲ್ಲಿ ಪ್ರತಿಪಾದ್ಯನಾಗುತ್ತಾನೆ ಎಂಬುದನ್ನು ಕೇಳಲು ನಿಮ್ಮಿಂದ ಆಗುವುದಿಲ್ಲ. ಆದ್ದರಿಂದಲೇ ನಿಮ್ಮ ವಾಕ್ಯ ಹೀಗಿದೆ – 'ಸ ವೇತಿ ಶ್ರುತಿಃ ಜೀವಬ್ರಹ್ಮಭೇದಭಿಪ್ರಾಯಃ' 'ಸ ವಾ' ಎಂಬ ಶ್ರುತಿಯು ಜೀವಬ್ರಹ್ಮರ ಅಭೇದ ಅಭಿಪ್ರಾಯವುಳ್ಳದ್ದು ಎಂದು.

**यच्चोक्तं ''एषोऽणुरात्मा चेतसा वेदितव्य'' इति साक्षादेवाणुत्ववाचिशब्दात् ''बालाग्रशतभागस्य शतधा कल्पितस्य च । भागो जीव'' इत्युन्मानाच्चाणुर्जीव इति ''स्वशब्द'' इति सूत्रार्थ इति तन्न । अणुत्वसाधकत्वेऽस्योत्क्रान्ति-सूत्रानन्तर्यापातात् । युभ्वादिसूत्र इवात्रापि स्वशब्दपदेनात्मशब्दस्यैव ग्राह्यत्वाच्च। बालाग्रशतभागशतभागत्वस्योन्मानशब्दार्थत्वायोगाच्च) ।**

'ಸ್ವಶಬ್ದೋನ್ಮಾನಾಭ್ಯಾಮ್' ಎಂಬ ಸೂತ್ರಕ್ಕೆ ಅದ್ವೈತಿಗಳು ಹೀಗೆ ವ್ಯಾಖ್ಯಾನ ಮಾಡುತ್ತಾರೆ. ಜೀವನನ್ನು ಅಣುವೆಂದು ಸ್ಪಷ್ಟವಾಗಿ ಹೇಳುವ ಶಬ್ದವೇ ಸ್ವಶಬ್ದ ಎನಿಸುತ್ತದೆ. 'ಏಷೋಣುರಾತ್ಮಾ ಚೇತಸಾ ವೇದಿತವ್ಯಃ' ಎಂಬುದಾಗಿ ಶ್ರುತಿಯು ಸ್ಪಷ್ಟವಾಗಿ ಜೀವನನ್ನು ಅಣುವೆನ್ನುತ್ತಿದೆ. 'ಉನ್ಮಾನಾತ್' ಎಂದರೆ 'ಬಾಲಗ್ರಶತಭಾಗಸ್ಯ ಶತಧಾ ಕಲ್ಪಿತಸ್ಯ ಚ । ಭಾಗೋ ಜೀವಃ' ಎಂಬ ಸ್ಮೃತಿವಾಕ್ಯವು ಮಿತಿಯನ್ನು ಮೀರಿ= ಪ್ರಮಾಣವನ್ನು ಮೀರಿ ಪರಿಮಾಣವುಳ್ಳವನು ಆಗಿದ್ದಾನೆ. ಮಿತಿಯನ್ನು ಮೀರಿ ಅಣುತ್ವವನ್ನು ಜೀವನಿಗೆ ಸ್ಮೃತಿಯಲ್ಲಿ ಹೇಳಿರುವುದರಿಂದ ಜೀವನು ಅಣುವೆಂದೇ ಹೇಳಬೇಕು. ಹೀಗೆ ಸಶಬ್ದ ಇತ್ಯಾದಿ ಸೂತ್ರದ ಅರ್ಥವನ್ನು ಅದ್ವೈತಿಗಳು ಹೇಳುತ್ತಾರೆ.

ಇದು ತಪ್ಪು. ಸಶಬ್ದೋನ್ಮಾನಾಭ್ಯಾಮ್ ಎಂಬ ಸೂತ್ರಕ್ಕೆ ಹೀಗೆ ವ್ಯಾಖ್ಯಾನ ಮಾಡುವುದಾದರೆ ಉತ್ಕ್ರಾಂತಿ ಸೂತ್ರದ ಅನಂತರವೇ ಇದು ಪ್ರಸಕ್ತವಾಗಬೇಕು. ಏಕೆಂದರೆ ಉತ್ಕ್ರಾಂತಿ ಸೂತ್ರವು ಜೀವನಿಗೆ ಅಣುತ್ವವನ್ನು ಸಾಧಿಸುವುದರಿಂದ ಈ ಸೂತ್ರದಲ್ಲೂ ಅದೇ ವಿಷಯವು ಇರುತ್ತದೆ. ಮತ್ತೊಂದು ದೋಷ. ಸ್ವಶಬ್ದಾತ್ ಎಂಬುದಕ್ಕೆ ಆತ್ಮಶಬ್ದಾತ್ ಎಂಬರ್ಥವನ್ನು ಹೇಳಬೇಕು. ಏಕೆಂದರೆ ಸ್ವಶಬ್ದ ಎಂಬುದಕ್ಕೆ ಆತ್ಮಶಬ್ದ ಎಂದೇ ಅರ್ಥವನ್ನು ಅಂಗೀಕರಿಸಲಾಗಿದೆ. ಮತ್ತು ಉನ್ಮಾನ ಶಬ್ದಕ್ಕೆ ಬಾಲಾಗ್ರಶತಭಾಗದ ಶತಭಾಗ ಎಂದು ಅರ್ಥವನ್ನು ಮಾಡಿದ್ದು ತಪ್ಪು. ಏಕೆಂದರೆ ಜೀವನು ಈ ಸ್ಮೃತಿಯಲ್ಲಿ ಬಾಲಾಗ್ರಶತಭಾಗದ ಶತಭಾಗವುಳ್ಳವನ್ನು ಎಂಬ ಪರಿಮಾಣಕ್ಕೆ ವಿಷಯನಾಗಿದ್ದಾನೆ. ಆದರೆ ಉನ್ಮಾನ ಎಂಬ ಶಬ್ದವು ಪರಿಮಾಣವನ್ನು ಮೀರಿದವನು ಎಂದು ಹೇಳುತ್ತಿದೆ. ಆದ್ದರಿಂದ ನಾವು ಹೇಳುವಂತೆ ಪರಮಾತ್ಮನಲ್ಲಿ ಮಾತ್ರ ಇದು ಯುಕ್ತವಾಗುತ್ತದೆ ಹೊರತು ಜೀವನಲ್ಲಿ ಯುಕ್ತವಾಗುವುದಿಲ್ಲ.

**यच्च ''चन्दनवत्'' इत्यस्य दूषणमुक्तं युक्ता चन्दनबिन्दोस्सांशत्वादंशैर्देहव्याप्तिः। जीवस्तु निरंश इति । तन्न । जीवस्सांश इति ''व्यतिरेक'' इति सूत्र एवोक्तत्वात्।**

'ಅವಿರೋಧಶ್ಚಂದನವತ್' ಎಂಬ ಸೂತ್ರಕ್ಕೆ ಅದ್ವೈತಿಗಳು ಚಂದನದ ಬಿಂದು ಒಂದೇ ಕಡೆ ಇದ್ದರೂ ಎಲ್ಲೆಡೆಯೂ ಪಸರಿಸುವಂತೆ ಜೀವನು ದೇಹದಲ್ಲಿ ಒಂದೇ ಕಡೆ ಇದ್ದರೂ ಎಲ್ಲೆಡೆಯೂ ವ್ಯಾಪ್ತನಾಗಿರುತ್ತಾನೆ. ಆದ್ದರಿಂದ ದೇಹದಲ್ಲಿ ಆಮೂಲಾಗ್ರವಾಗಿ ಸುಖದುಃಖದ ಅನುಭವವು ಉಂಟಾಗುತ್ತದೆಂದು ವ್ಯಾಖ್ಯಾನ ಮಾಡಿ ಸ್ವತಃ ಅವರೇ ಹೀಗೆ ನಿರಾಕರಣೆ ಮಾಡಿದ್ದಾರೆ. ಚಂದನ ಬಿಂದುವು ಸಾಂಶವಾಗಿರುವುದರಿಂದ ಅಂಶತಃ ವ್ಯಾಪ್ತಿಯು ಅದಕ್ಕೆ ಯುಕ್ತವಾಗುತ್ತದೆ. ಆದರೆ ಜೀವನು ನಿರಂಶನಾಗಿರುವುದರಿಂದ ದೇಹದಲ್ಲಿ ಅವನ ವ್ಯಾಪ್ತಿಯು ಯುಕ್ತವಾಗುವುದಿಲ್ಲ ಎಂದು.

ಪುಂಸ್ತ್ವಾಧಿಕರಣ (೨-೩-೧೬)

ಇದು ತಪ್ಪು. ಏಕೆಂದರೆ ಜೀವನೂ ಕೂಡ ಚಂದನದಂತೆ ಸಾಂಶನಾಗಿರುತ್ತಾನೆ ಎಂಬ ವಿಚಾರವನ್ನು 'ವ್ಯತಿರೇಕೋ ಗಂಧವತ್' ಎಂಬ ಸೂತ್ರದಲ್ಲಿ ನಾವು ಸಮರ್ಥನೆ ಮಾಡಿರುತ್ತೇವೆ.

**यच्च ''आलोकवत्'' इत्यस्य दूषणमुक्तं आलोको न गुणः । निबिडावयवं हि तेजोद्रव्यं प्रदीपः । विरलावयवं तु प्रभेति । तन्न । टीकायामेव प्रभाया द्वेधा गुणत्वनिर्वाहात् । रत्नप्रभादावुक्तप्रकारायोगाच्च ।**

'ಗುಣಾದ್ವಾಽಲೋಕವತ್' ಎಂಬ ಸೂತ್ರಕ್ಕೆ ಅದ್ವೈತಿಗಳು ದೀಪದಲ್ಲಿರುವ ಪ್ರಭೆಯು ವ್ಯಾಪಿಸಿರುವಂತೆ ಆತ್ಮನೂ ಕೂಡ ತನ್ನ ಪ್ರಭೆಯಿಂದ ವ್ಯಾಪಿಸಿದ್ದಾನೆ ಎಂದು ಪೂರ್ವಪಕ್ಷದಲ್ಲಿ ಹೇಳಿ ಆಲೋಕವು ಗುಣವೇ ಅಲ್ಲ ದ್ರವ್ಯವಾಗಿದೆ ಎಂದು ಸಿದ್ಧಾಂತವನ್ನು ಮಾಡಿರುತ್ತಾರೆ. ನಿಬಿಡಾವಯವಾದ ತೇಜೋದ್ರವ್ಯವೇ ಪ್ರದೀಪ ಎನಿಸುತ್ತದೆ. ವಿರಲಾವಯವ ರೂಪವಾದ ತೇಜೋದ್ರವ್ಯವೇ ಪ್ರಭಾ ಎಂದು ಕರೆಸಿಕೊಳ್ಳುತ್ತದೆ. ಆದ್ದರಿಂದ ಆಲೋಕ ಹಾಗೂ ಪ್ರಭೆಯು ದ್ರವ್ಯವೇ ಆಗಿದೆ ಹೊರತು ಗುಣವೇ ಅಲ್ಲ. ಆದ್ದರಿಂದ ಆಲೋಕದೃಷ್ಟಾಂತವು ಅಸಾಧುವಾಗಿದೆ ಎಂದು ಪೂರ್ವಪಕ್ಷಕ್ಕೆ ಉತ್ತರವನ್ನು ನೀಡಿರುತ್ತಾನೆ.

ಇದು ತಪ್ಪು. ಪ್ರಭೆ ಎಂಬುದು ಹೇಗೆ ಗುಣವಾಗಿದೆ ಎಂಬುದನ್ನು ಟೀಕೆಯಲ್ಲಿ ಎರಡು ಕ್ರಮದಲ್ಲಿ ನಿರೂಪಣೆ ಮಾಡಿದ್ದಾರೆ. ಮತ್ತು ನಿಬಿಡಾವಯವ ರೂಪವಾದ ತೇಜೋದ್ರವ್ಯವೇ ಪ್ರಭೆಯಾಗಿದೆ. ವಿರಳಾವಯರೂಪವಾದ ತೇಜೋದ್ರವ್ಯವೇ ಪ್ರಭೆಯಾಗಿದೆ ಎಂಬ ಅವರ ವಿಚಾರವೂ ಕೂಡ ಅಯುಕ್ತವಾಗಿದೆ. ಏಕೆಂದರೆ ರತ್ನಪ್ರಭೆಯಲ್ಲಿ ಇದನ್ನು ಕೂಡಿಸಲು ಬರುವುದಿಲ್ಲ. ರತ್ನದಲ್ಲಿ ಅವಯವಗಳ ಅಪಗಮವೇ ಇರಲು ಸಾಧ್ಯವಿಲ್ಲ. ಆದ್ದರಿಂದ ವಿರಳಾವಯವಾದ ಪ್ರಭೆ ಎಂಬುದನ್ನು ಕೂಡಿಸಲು ಬರುವುದಿಲ್ಲ.

**अन्यत्रादृष्टत्वेऽपि शब्दादेर्गुणस्याश्रयाग्रहणेऽपि ग्रहणवत्, संयोगादेरव्याप्य-वर्तनवत्, जातिसमवायादेर्धर्मितोऽन्यत्र वर्तनवत्, वह्न्यौष्ण्यस्य तत्समीपे वर्तनवच्च प्रभाया गुणत्वेऽप्यन्यत्र वर्तनस्योपपत्तेश्च ।**

ಮುಖ್ಯವಾದ ಆಶ್ರಯವನ್ನು ಬಿಟ್ಟು ಗುಣವು ಬೇರೆ ಕಡೆ ಇರಲು ಸಾಧ್ಯವಿಲ್ಲ. ಆಶ್ರಯವನ್ನು ಬಿಟ್ಟು ಅನ್ಯತ್ರ ಗುಣದ ಇರುವಿಕೆಯು ಎಲ್ಲಿಯೂ ಕೂಡ ಕಂಡಿಲ್ಲ. ಹೀಗೆ ಹೇಳಬಾರದು. ಏಕೆಂದರೆ ಬೇರೆ ಕಡೆ ಕಾಣದಿದ್ದರೂ ಕೂಡ ಗುಣವು ಅನ್ಯತ್ರ ವಿದ್ಯಮಾನ ಆಗಬಹುದು. ಉದಾ – ಶಬ್ದಕ್ಕೆ ಆಕಾಶವು ಆಶ್ರಯವಾಗಿದೆ. ಶಬ್ದವು ಶ್ರೋತ್ರೇಂದ್ರಿಯದಿಂದ ಗ್ರಾಹ್ಯವಾಗಿದೆ. ಆದರೆ ಅದಕ್ಕೆ ಆಶ್ರಯವಾದ ಆಕಾಶವು ಶ್ರೋತ್ರೇಂದ್ರಿಯದಿಂದ ಗ್ರಾಹ್ಯವಾಗಿರುವುದಿಲ್ಲ. ಆದ್ದರಿಂದ ಆಶ್ರಯ ಅಗ್ರಹಣೇಪಿ ಗ್ರಹಣ ಎಂಬ ಗುಣವು ಬೇರೆ ಯಾವ ಗುಣದಲ್ಲೂ ಇಲ್ಲದ್ದು ಶಬ್ದದಲ್ಲಿ ಕಂಡಿದೆ.

ಮತ್ತೊಂದು ಉದಾಹರಣೆ – ರೂಪ, ರಸ ಈ ಎಲ್ಲಾ ಗುಣಗಳು ವ್ಯಾಪ್ಯವೃತ್ತಿಯಾಗಿವೆ. ಆದರೆ ಸಂಯೋಗ ಮತ್ತು ವಿಭಾಗ ಎಂಬ ಗುಣಗಳು ಮಾತ್ರ ಅವ್ಯಾಪ್ಯವೃತ್ತಿಯಾಗಿವೆ. ೩. ಗೋತ್ವ ಎಂಬ ಜಾತಿ ಧರ್ಮಿಯನ್ನು ಬಿಟ್ಟು ಬೇರೆ ಕಡೆಯೂ ಕೂಡ ವಿದ್ಯಮಾನವಾಗಿದೆ. ಸಮವಾಯುವೂ ಕೂಡ

ಒಂದೇ ಆಗಿರುವುದರಿಂದ ಧರ್ಮಿಯನ್ನು ಬಿಟ್ಟು ಬೇರೆ ಕಡೆಯೂ ಕೂಡ ಇರುತ್ತದೆ. ೪. ಅಗ್ನಿಯಲ್ಲಿರುವ ಔಷ್ಣ್ಯ ಎಂಬುದು ಅಗ್ನಿ ಎಂಬ ಧರ್ಮಿಯಲ್ಲಷ್ಟೇ ಅಲ್ಲದೇ ಅದರ ಹತ್ತಿರದಲ್ಲಿಯೂ ಕೂಡ ಇರುವುದು ಅನುಭವ ಸಿದ್ಧವಾಗಿದೆ. ಈ ಎಲ್ಲ ದೃಷ್ಟಾಂತಗಳಿಂದ ಪ್ರಭೆಯು ಗುಣವಾಗಿದ್ದರೂ ಧರ್ಮಿ ಎನಿಸಿದ ಪ್ರದೀಪಾದಿಗಳನ್ನು ಬಿಟ್ಟು ಬೇರೆ ಕಡೆ ವಿದ್ಯಮಾನ ಆಗಬಹುದು. ಆದ್ದರಿಂದ ಅದ್ವೈತಿಗಳು ಆತ್ಮನ ಗುಣವೆನಿಸಿದ ಚಿದ್ಗುಣದ ದೃಷ್ಟಾಂತವನ್ನು ಹೇಳಲು ಸಾಧ್ಯವಿಲ್ಲವೆಂದಿದ್ದು ತಪ್ಪು. ಚಿದ್ಗುಣಗಳು ಹೇಗೆ ಆತ್ಮನ ಗುಣವೋ ಅದರಂತೆ ಆಲೋಕವೂ ಕೂಡ ಪ್ರದೀಪದ ಗುಣವೇ ಆಗಿದೆಯೇ ಹೊರತು ದ್ರವ್ಯವಲ್ಲ.

**(यच्चोक्तं ''व्यतिरेक'' इति सूत्रं पूर्वाधिकरणशेषत्वेन दृष्टान्तान्तरमात्रपरमिति। तन्न । तथात्वे हि ''गुणाद्वा'' इतिवदत्रापि वाशब्दः स्यात् ।**

'ವ್ಯತಿರೇಕೋ ಗಂಧವತ್' ಎಂಬ ಸೂತ್ರಕ್ಕೆ ಅದ್ವೈತಿಗಳು ಹೂವಿನ ಗುಣವೆನಿಸಿದ ಪರಿಮಳವು ದೂರದ ತನಕ ವ್ಯಾಪಿಸುತ್ತದೆ. ಅದರಂತೆ ಜೀವನ ಗುಣವೆನಿಸಿದ ಚಿದ್ಗುಣಗಳು ದೇಹದಲ್ಲೆಡೆಯೂ ವ್ಯಾಪಿಸುತ್ತವೆಯೆಂದು ವ್ಯಾಖ್ಯಾನ ಮಾಡಿದ್ದಾರೆ. ಇದನ್ನು ಪೂರ್ವಪಕ್ಷ ಸೂತ್ರವನ್ನಾಗಿ, ಹಿಂದಿನ ಅಧಿಕರಣದ ಅಂಗವನ್ನಾಗಿ ಉಲ್ಲೇಖ ಮಾಡುವಾಗ ಕೇವಲ ಮತ್ತೊಂದು ದೃಷ್ಟಾಂತವೆನ್ನಲು ಈ ಸೂತ್ರವೆಂದು ಹೇಳುತ್ತಾರೆ. ಇದು ತಪ್ಪು. ಹಾಗಾದಲ್ಲಿ 'ಗುಣಾದ್ವಾ ಆಲೋಕವತ್' ಎಂಬ ಸೂತ್ರದಲ್ಲಿ ಹೇಗೆ ವಾ ಶಬ್ದವನ್ನು ಪ್ರಯೋಗಿಸಲಾಗಿದೆಯೋ ಅದರಂತೆ ಈ ಸೂತ್ರದಲ್ಲೂ ಕೂಡ ಮತ್ತೊಂದು ದೃಷ್ಟಾಂತವೆನ್ನಲು ಸೂಚಕವಾದ ವಾ ಶಬ್ದವನ್ನು ಪ್ರಯೋಗಿಸಬೇಕಿತ್ತು.

**यच्च ''गन्धवत्'' इत्यस्य दूषणमुक्तं सहैवाश्रयद्रव्यावयवैर्गन्धो व्यतिरिच्यत इति । तन्न । युगपत्सर्वतो योजनादिव्यापिगन्धोपलम्भायानेकस्थूलावयवापसरणे सद्यो गुरुत्वादिह्रासस्या (स्य, द्रव्यक्षयस्य चा)पातात् ।**

'ವ್ಯತಿರೇಕೋ ಗಂಧವತ್' ಎಂಬ ಪೂರ್ವಪಕ್ಷಸೂತ್ರಕ್ಕೆ ಸಿದ್ಧಾಂತವನ್ನು ಸ್ಥಾಪನೆ ಮಾಡುವಾಗ ಶಂಕರಭಾಷ್ಯದಲ್ಲಿ ಯಾವ ನಿರಾಕರಣೆಯನ್ನು ಮಾಡಲಾಗಿದೆಯೋ ಅದೂ ಕೂಡ ತಪ್ಪು. ಗಂಧವು ತನಗೆ ಆಶ್ರಯವಾದ ದ್ರವ್ಯಗಳಿಗಿಂತ ವ್ಯತಿರಿಕ್ತವಾಗಿರುವುದಿಲ್ಲ. ಆದ್ದರಿಂದ ಹೂವಿನ ಪರಿಮಳವು ಎಲ್ಲೆಡೆಯೂ ಪಸರಿಸುತ್ತದೆ ಎಂದರೆ ಹೂವಿನ ಅವಯವಗಳು ಗಂಧದ ಜೊತೆ ಎಲ್ಲೆಡೆಯೂ ಹೋಗುತ್ತದೆ ಎಂದೇ ಅರ್ಥ. ಆದರೆ ಆತ್ಮನಿಗೆ ಇಂತಹ ಅವಯವಗಳು ಇಲ್ಲದ ಕಾರಣ ಗಂಧದೃಷ್ಟಾಂತವು ಯುಕ್ತವಾಗುವುದಿಲ್ಲ ಎಂಬ ನಿರಾಕರಣೆಯನ್ನು ಶಂಕರಭಾಷ್ಯದಲ್ಲಿ ಮಾಡಲಾಗಿದೆ ಇದು ತಪ್ಪು. ಒಂದುವೇಳೆ ಗಂಧವು ಆಶ್ರಯದ್ರವ್ಯಗಳ ಜೊತೆ ಹೋಗುವುದಾದರೆ ಆಗ ಒಟ್ಟಿಗೆ ಎಲ್ಲೆಡೆಯೂ ಯೋಜನದ ತನಕ ಗಂಧವು ವ್ಯಾಪಿಸುವ ಸಂದರ್ಭದಲ್ಲಿ ಅನೇಕ ಸ್ಥೂಲ ಅವಯವಗಳ ಅಪಸರಣವಾಗುತ್ತದೆಂದು ಹೇಳಬೇಕು. ಆಗ ಆ ಹೂವಿನಲ್ಲಿರುವಂತಿರುವಂತಹ ಗುರುತ್ವವು ಕ್ರಮೇಣ ಕಮ್ಮಿಯಾಗುತ್ತ ಬರಬೇಕಾದೀತು. ಮತ್ತು ಕ್ರಮವಾಗಿ ಆ ದ್ರವ್ಯವೇ ಕ್ಷಯವಾಗುವ ಪ್ರಸಂಗ ಬರುತ್ತದೆ. ಆದ್ದರಿಂದ ಗಂಧವು ತದಾಶ್ರಯವಾದ ಅವಯವಗಳ ಜೊತೆ ಎಲ್ಲೆಡೆಯೂ ಪಸರಿಸುತ್ತದೆಂಬ ಸಿದ್ಧಾಂತವೇ ಅಯುಕ್ತ.

ಪುಂಸ್ತ್ವಾಧಿಕರಣ (೨-೩-೧೬)

**स्फटिककरण्डान्तःस्थकस्तूर्यादाववयवापसरणेऽवयवान्तरानुप्रवेशकल्पने च मानाभावात् । प्रत्यभिज्ञाविरोधाच्च।**

ಮತ್ತು ಸ್ಫಟಿಕದ ಪೆಟ್ಟಿಗೆಯಲ್ಲಿ ಕಸ್ತೂರಿ ಇರುತ್ತದೆ. ಯಾವಾಗ ಸ್ಫಟಿಕದ ಪೆಟ್ಟಿಗೆಯನ್ನು ತೆರೆಯುತ್ತೇವೋ ಆಗ ಅದರ ಪರಿಮಳ ಎಲ್ಲೆಡೆಯೂ ಪಸರಿಸುತ್ತದೆ. ನಿಮ್ಮ ಪ್ರಕಾರ ಇಲ್ಲಿ ಇರುವ ಅವಯವಗಳು ಹೊರಹೊರಟವು. ಇಲ್ಲದ ಅವಯವಗಳು ಬಂದು ಸೇರಿದವು ಎಂದು ಹೇಳಬೇಕು. ಆದರೆ ಈ ವಿಷಯದಲ್ಲಿ ಯಾವುದೇ ಪ್ರಮಾಣ ಇರುವುದಿಲ್ಲ.

ಮತ್ತು ಪರಿಮಳವುಳ್ಳ ದ್ರವ್ಯದಲ್ಲಿ ಅವಯವಗಳು ಬರುತ್ತವೆ ಹೋಗುತ್ತವೆ ಎಂದು ಹೇಳುವುದಾದರೆ ಮೊದಲಿರುವ ಅವಯವಗಳು ನಾಶವಾಗಿ ಇಲ್ಲದ ಅವಯವಗಳು ಸೇರಿದ್ದರಿಂದ ದ್ರವ್ಯವೇ ಭಿನ್ನಭಿನ್ನವೆಂದು ಹೇಳಿದಂತಾಗುತ್ತದೆ. ಆಗ ತದೇವೇದಂ ಎಂಬ ಪ್ರತ್ಯಭಿಜ್ಞೆಗೆ ವಿರೋಧವು ಪ್ರಾಪ್ತವಾಗುತ್ತದೆ.

**उपलभ्याप्सु गन्धं च केचिद्ब्रूयुरनैपुणाः ।**
**पृथिव्यामेव तं विद्यादपो वायुं च संश्रितम् ।।**

**इति स्मृतिरपि पृथिवी गन्धस्य वाय्वादिनिष्ठत्वं निषेधति । न त्वाश्रयाद्व्यतिरेकम् ।**

'ಉಪಲಭ್ಯಾಪ್ಸು ಗಂಧಂ ಚ ಕೇಚಿದ್ಬ್ರೂಯುರನೈಪುಣಾಃ । ಪೃಥಿವ್ಯಾಮೇವ ತಂ ವಿದ್ಯಾಪದೋ ವಾಯುಂ ಚ ಸಂಶ್ರಿತಮ್' ನೈಪುಣ್ಯವಿಲ್ಲದ ಕೆಲವರು ನೀರಿನಲ್ಲಿ ಗಂಧವನ್ನು ಕಂಡು ನೀರಿನಲ್ಲೇ ಈ ಪರಿಮಳವಿದೆ ಎಂದು ತಿಳಿಯುತ್ತಾರೆ ಅಥವಾ ಗಾಳಿಯಲ್ಲೇ ಈ ಪರಿಮಳವಿದೆ ಎಂದು ತಿಳಿಯುತ್ತಾರೆ. ಇದು ತಪ್ಪು. ನಿಜವಾಗಿಯೂ ಕೂಡ ಪೃಥಿವಿಯಲ್ಲಿಯೇ ಈ ಗಂಧಗುಣವಿದೆ.

ಹೀಗೆ ಸ್ಮೃತಿವಾಕ್ಯವಿದೆ. ಆದ್ದರಿಂದ ಪೃಥಿವಿಯಲ್ಲಿರುವ ಗಂಧವು ವಾಯು ಮೊದಲಾದವುಗಳಲ್ಲಿದೆ ಎಂಬುದನ್ನು ನಿಷೇಧ ಮಾಡುತ್ತಿದೆ. ಆದ್ದರಿಂದ ಗಂಧವು ಆಶ್ರಯವಾದ ಪದಾರ್ಥಕ್ಕಿಂತ ಭಿನ್ನವಾಗುವುದಿಲ್ಲ.

ವಿವರಣೆ – ಪುಷ್ಪದಲ್ಲಿರುವ ಗಂಧವು ಪುಷ್ಪದ ಅವಯವಗಳನ್ನು ಬಿಟ್ಟು ತೆರಳುವುದಿಲ್ಲ ಎಂಬುದನ್ನು ಇಲ್ಲಿ ನಿರಾಕರಣೆ ಮಾಡಿದ್ದಾರೆ. ಆದರೆ ಇದನ್ನು ಪ್ರೌಢಿವಾದ ಎಂದು ತಿಳಿಯಬೇಕು. ನಮ್ಮ ಸಿದ್ಧಾಂತದಲ್ಲೂ ಕೂಡ ಪುಷ್ಪದ ಅವಯವದ ಜೊತೆಯೇ ಗಂಧವು ಹೋಗುತ್ತದೆಂದು ಒಪ್ಪಲಾಗಿದೆ. ವಾಯುರ್ಗಂಧಾನಿವಾಶ್ರಯಾತ್ ಎಂಬ ಗೀತಾವಾಕ್ಯಕ್ಕೆ ವ್ಯಾಖ್ಯಾನ ಮಾಡುವ ಸಂದರ್ಭದಲ್ಲಿ ಸ್ವತಃ ಶ್ರೀಮದಾಚಾರ್ಯರು ಅವಯವಗಳ ಜೊತೆಯೇ ಗಂಧವು ಹೋಗುತ್ತದೆಂಬ ಪ್ರಮೇಯವನ್ನು ತಿಳಿಸಿರುತ್ತಾರೆ. ಹಾಗೂ ಸತ್ಯಧರ್ಮತೀರ್ಥರು ಭಾಗವತ ವ್ಯಾಖ್ಯಾನದಲ್ಲಿ ಇದರ ಬಗ್ಗೆ ಬಹಳಷ್ಟು ವಿಮರ್ಶೆಯನ್ನು ಮಾಡಿದ್ದಾರೆ. ಆದ್ದರಿಂದ ಇಲ್ಲಿ ಗ್ರಂಥಕಾರರು ಗಂಧಮಾತ್ರ ತೆರಳುತ್ತದೆಂಬ ವಾದವನ್ನು ಮಂಡಿಸಿದ್ದು ಸೂಕ್ಷ್ಮವಾದ ಅವಯವಗಳಿಗೆ ಅನುಸ್ರವಣವನ್ನು ಒಪ್ಪಿ ಸ್ಥೂಲವಾದ ಅವಯವಗಳ ಅನುಸ್ರವಣವನ್ನು ಮಾತ್ರ ನಿರಾಕರಣೆ ಮಾಡಿದ್ದಾರೆಂದು ತಿಳಿಯಬೇಕು.

**यच्चोक्तं ज्ञानादात्माऽन्य इति ''पृथक्'' इति सूत्रार्थः । बुद्धिगुणप्रधानत्वात्संसार्यात्मनो बुद्धिगुणेनाणुत्वोत्क्रान्त्यादिनाऽणुत्वादिव्यपदेश इति ''तद्गुणेति सूत्रार्थ'' इति ।**

ಪೃಥಗುಪದೇಶಾತ್ ಎಂಬ ಸೂತ್ರಕ್ಕೆ ಅದ್ವೈತಿಗಳು 'ಪ್ರಜ್ಞಯಾ ಶರೀರಂ ಸಮಾರುಹ್ಯ' ಎಂಬ ಕೌಶೀತಕೀ ಉಪನಿಷತ್ತಿನಲ್ಲಿ ಪ್ರಸಕ್ತವಾದ ಆತ್ಮ ಮತ್ತು ಜ್ಞಾನಗಳಿಗೆ ಭೇದವನ್ನು ಒಪ್ಪಿದ್ದಾರೆ. ಆತ್ಮನಿಗೆ ಜ್ಞಾನದ ಮೂಲಕವಾಗಿ ಶರೀರದಲ್ಲಿ ವ್ಯಾಪ್ತಿಯನ್ನು ಹೇಳಿರುವುದರಿಂದ ಆತ್ಮನು ಅಣುವಾಗುತ್ತಾನೆಂಬುದು ಅವರ ವ್ಯಾಖ್ಯಾನ.

'ತದ್ಗುಣಸಾರತ್ವಾತ್ ತದ್ವ್ಯಪದೇಶಃ ಪ್ರಾಜ್ಞವತ್' - ಆತ್ಮನು ಬುದ್ಧಿಗುಣಪ್ರಧಾನಕನಾಗಿರುವುದರಿಂದ ಬುದ್ಧಿಯಲ್ಲಿರುವ ಅಣುತ್ವ, ಉತ್ಕ್ರಾಂತಿ ಮೊದಲಾದ ಗುಣಗಳನ್ನು ವಿವಕ್ಷಿಸಿ ಆತ್ಮನಲ್ಲಿ ಅಣುತ್ವಾದಿ ವ್ಯಪದೇಶವನ್ನು ಮಾಡಲಾಗಿದೆ. ಸಂಸಾರಿಯಾದ ಆತ್ಮನಿಗೆ ಬುದ್ಧಿಯಲ್ಲಿರುವ ಅಣುತ್ವ, ಉತ್ಕ್ರಾಂತಿ ಮೊದಲಾದ ಗುಣಗಳು ಬರುವುದರಿಂದ ಅಣುತ್ವಾದಿ ವ್ಯಪದೇಶವನ್ನು ಶಾಸ್ತ್ರದಲ್ಲಿ ಮಾಡಲಾಗಿದೆ. ಹೀಗೆ ತದ್ಗುಣಸಾರತ್ವಾತ್ ಎಂಬ ಸೂತ್ರಕ್ಕೆ ಅದ್ವೈತಿಗಳು ವ್ಯಾಖ್ಯಾನ ಮಾಡುತ್ತಾರೆ.

**तन्न । आनन्दादितोऽन्यत्वमशङ्कित्वा ज्ञानादेवान्यत्वशङ्काबीजाभावात् ।**

ಈ ವ್ಯಾಖ್ಯಾನವು ತಪ್ಪು. ಪೃಥಗುಪದೇಶಾತ್ ಎಂಬ ಸೂತ್ರದಲ್ಲಿ ಆತ್ಮನನ್ನು ಜ್ಞಾನಕ್ಕಿಂತ ಭಿನ್ನನಾಗಿದ್ದಾನೆ ಎಂಬ ಆಶಂಕೆ ಮಾಡಲು ಕಾರಣವೇ ಇಲ್ಲ. ಏಕೆಂದರೆ ಜ್ಞಾನದಿಂದಷ್ಟೇ ಅಲ್ಲದೇ ಆನಂದ, ಇಚ್ಛಾ ಮೊದಲಾದ ಗುಣಗಳಿಂದಲೂ ಕೂಡ ಆತ್ಮನು ನಿಮ್ಮ ಪ್ರಕಾರ ಭಿನ್ನನಾಗಿದ್ದಾನೆ. ಹೀಗಿರುವಾಗ ಅವುಗಳನ್ನೆಲ್ಲಾ ಬಿಟ್ಟು ಕೇವಲ ಜ್ಞಾನವೆಂಬ ಗುಣದಿಂದ ಭಿನ್ನನಾಗಿದ್ದಾನೆ ಎಂದಷ್ಟೇ ಹೇಳುವುದರಲ್ಲಿ ಕಾರಣವಿಲ್ಲ.

**ವಿವರಣೆ** – ಹಿಂದಿನ ಸೂತ್ರದಲ್ಲಿ ಜ್ಞಾನವೇ ಪ್ರಸಕ್ತವಾದ್ದರಿಂದ ತದ್ಭೇದವನ್ನು ಆತ್ಮನಲ್ಲಿ ಹೇಳಿದರೆ ಏನು ತಪ್ಪು ಎಂದು ಅದ್ವೈತಿಗಳು ಪ್ರತಿಯಾಗಿ ಆಕ್ಷೇಪ ಮಾಡಬಹುದು. ಆದರೆ ಹಿಂದಿನ 'ಗುಣಾದ್ವಾಽಲೋಕವತ್' ಇತ್ಯಾದಿ ಸೂತ್ರದಲ್ಲೂ ಕೂಡ ಜ್ಞಾನವನ್ನಷ್ಟೇ ಏಕೆ ವಿವಕ್ಷಿಸುತ್ತೀರಿ ಎಂಬುದೇ ನಮ್ಮ ಅಭಿಪ್ರಾಯ. ಆನಂದ, ಇಚ್ಛಾ ಇವುಗಳನ್ನೂ ಕೂಡ ವಿವಕ್ಷಿಸಿ ತದ್ಗತಭೇದವನ್ನೂ ಕೂಡ ಆತ್ಮನಲ್ಲಿ ಸಮರ್ಥಿಸಬೇಕು.

**मम रीत्या ''पृथक्'' इत्यत्र ''ज्ञोत'' इत्यादौ प्रकृतस्य जीवस्य ''स्वात्मना'' इति प्रकृतात्सजातीयादीश्वराद्भेदमुक्त्वा तद्गुणेत्यत्र श्रुत्यनुसारिसूत्राक्षरानुसारेण तत्त्वमसीति व्यपदेशस्य गतिकथनेनाविरोधाध्यायेऽवश्यवक्तव्यभेदाभेदश्रुत्यविरोधपरत्वसम्भवे ''पृथक्'' इत्यस्य पूर्वपक्षत्वकल्पनायाश्चायोगाच्च ।**

ನಮ್ಮ ಸಿದ್ಧಾಂತದಲ್ಲಿ 'ಪೃಥಗುಪದೇಶಾತ್' ಎಂಬ ಸೂತ್ರದ ಅರ್ಥವು ಅತ್ಯಂತ ಸ್ವರಸವಾಗಿದೆ. ಇಲ್ಲಿ ಪೃಥಕ್ ಎಂಬುದು ಸಾಧ್ಯ, ಉಪದೇಶಾತ್ ಎಂಬುದು ಹೇತುತ್ವ. ಪರಮಾತ್ಮನು ಯಾರಿಂದ ಪೃಥಕ್ ಆಗಿದ್ದಾನೆ ಎಂದರೆ 'ಜ್ಞೋಽತ ಏವ' ಎಂಬ ಸೂತ್ರದಲ್ಲಿ ಜೀವನು 'ಜ್ಞಃ' ಎಂಬ ಪದದಿಂದ ಪ್ರಕೃತನಾಗಿದ್ದಾನೆ. 'ಸ್ವಾತ್ಮನಾ ಚೋತ್ತರಯೋಃ' ಎಂಬ ಸೂತ್ರದಲ್ಲಿ ಸ್ವ ಶಬ್ದದಿಂದ ಪರಮಾತ್ಮನು

ಪ್ರಕೃತನಾಗಿದ್ದಾನೆ. ಇಂತಹ ಜೀವನು ಪರಮಾತ್ಮನಿಗಿಂತ ಭಿನ್ನನಾಗಿದ್ದಾನೆ. ಇವರಿಬ್ಬರೂ ಕೂಡ ಚೇತನತ್ವಧರ್ಮದಿಂದ ಸಜಾತೀಯರಾಗಿದ್ದಾರೆ. ಯಾರು ಸಜಾತೀಯರೋ ಅವರಲ್ಲಿ ಐಕ್ಯವಿರಬಹುದಲ್ಲವೇ? ಎಂಬ ಶಂಕೆಯು ಪ್ರಾಪ್ತವಾಗುತ್ತದೆ. ಇದರ ಪರಿಹಾರಕ್ಕಾಗಿ 'ಪೃಥಗುಪದೇಶಾತ್' ಎಂಬ ಸೂತ್ರವು ಸಜಾತೀಯರಾಗಿದ್ದರೂ ಕೂಡ ಭಿನ್ನರೇ ಆಗಿದ್ದಾರೆ ಎಂದು ಸಮರ್ಥನೆ ಮಾಡಲು ಹೊರಟಿದೆ. ಹೀಗೆ ಪೃಥಕ್' ಎಂದರೆ ಧರ್ಮಿಯಾದ ಜೀವನು ಪ್ರತಿಯೋಗಿಯಾದ ಈಶ್ವರನಿಗಿಂತ ಭಿನ್ನನಾಗಿದ್ದಾನೆ ಎಂದರ್ಥ. ಉಪದೇಶಾತ್ ಎಂದರೆ 'ಭಿನ್ನೋಽಚಿಂತ್ಯಃ' ಇತ್ಯಾದಿ ಶ್ರುತಿಗಳಲ್ಲಿ ಭೇದವನ್ನು ಹೇಳಿರುವುದರಿಂದ ಎಂಬುದು ನಮ್ಮ ಸಿದ್ಧಾಂತದ ಸೂತ್ರಾರ್ಥ.

ಹಾಗಾದರೆ 'ತತ್ತ್ವಮಸಿ ಇತ್ಯಾದಿ ಶ್ರುತಿಗಳಲ್ಲಿ ಅಭೇದವನ್ನು ಹೇಳಿರುವುದರಿಂದ ಭೇದವನ್ನು ಹೇಗೆ ಹೇಳುತ್ತೀರಿ? ಎಂಬ ಆಶಂಕೆಯು ಪ್ರಾಪ್ತವಾದರೆ 'ತದ್ಗುಣಸಾರತ್ವಾತ್' ಇತ್ಯಾದಿ ಮುಂದಿನ ಸೂತ್ರವು ಪ್ರವೃತ್ತವಾಯಿತು. ಇಲ್ಲೂ ಕೂಡ 'ತತ್' ಎಂಬ ಪದದಿಂದ ಬ್ರಹ್ಮನನ್ನೇ ವಿವಕ್ಷಿಸಬೇಕು. ಏಕೆಂದರೆ ಸೂತ್ರವು ಶ್ರುತ್ಯನುಸಾರಿಯಾಗಿರಬೇಕು. 'ತತ್ತ್ವಮಸಿ' ಎಂಬ ಶ್ರುತಿಯಲ್ಲಿ ತತ್ ಎಂಬ ಪದದಿಂದ ಬ್ರಹ್ಮನೇ ಪ್ರಸಕ್ತನಾಗಿದ್ದಾನೆ. 'ತದ್ಗುಣಸಾರತ್ವಾತ್ ತು' ಎಂಬ ಸೂತ್ರದಲ್ಲಿ ಬ್ರಹ್ಮನ ಜ್ಞಾನಾನಂದಾದಿಗುಣಗಳಿಗೆ ಸದೃಶವಾದ ಗುಣಗಳುಳ್ಳವನು ಜೀವನಾಗಿದ್ದಾನೆ. ಆದ್ದರಿಂದ ತದ್ವ್ಯಪದೇಶಃ ಬ್ರಹ್ಮನೇ ಜೀವನಾಗಿದ್ದಾನೆಂಬ ವ್ಯಪದೇಶವು ಶ್ರುತಿಯಲ್ಲಿರುತ್ತದೆ. ಹೀಗೆ ಸಾದೃಶ್ಯದಿಂದ ಅಭೇದ ವ್ಯಪದೇಶವು ಗೌಣ ಎಂಬುದಾಗಿ ವ್ಯಾಖ್ಯಾನ ಮಾಡಿದ್ದೇವೆ. ಇದು ಅವಿರೋಧಾಧ್ಯಾಯವಾಗಿದೆ ಮತ್ತು ಶ್ರುತಿಗಳ ವಿರೋಧವನ್ನು ಪರಿಹರಿಸುವ ಪಾದವಾಗಿದೆ. ಆದ್ದರಿಂದ 'ತತ್ತ್ವಮಸಿ' ಎಂಬ ಶ್ರುತಿಯ ವಿರೋಧವನ್ನು ಪರಿಹರಿಸುವ ಮೂಲಕ ಅವಿರೋಧಾಧ್ಯಾಯದಲ್ಲಿ ಅವಶ್ಯ ಹೇಳಲೇಬೇಕಾದ ಭೇದಾಭೇದಶ್ರುತ್ಯವಿರೋಧ ಪರಿಹಾರರೂಪವಾಗಿದ್ದರಿಂದ ಪೃಥಗುಪದೇಶಾತ್ ಎಂಬ ಸೂತ್ರವನ್ನು ಪೂರ್ವಪಕ್ಷ ಸೂತ್ರವೆಂದು ಕಲ್ಪನೆ ಮಾಡುವುದು ಅಯುಕ್ತವಾಗಿದೆ.

**''तमुत्क्रामन्तं प्राणोऽनुत्क्रामति'' इति श्रुतौ त्वद्रीत्या प्राणाख्यबुद्धिगतितः प्रागेव जीवगत्युक्त्या तस्या बुद्ध्युपाधिकत्वायोगाच्च ।**

ಅದ್ವೈತಿಗಳ ಸಿದ್ಧಾಂತ ಪ್ರಮೇಯವೂ ಕೂಡ ಅಯುಕ್ತವಾಗಿದೆ. ಜೀವನಿಗೆ ಉತ್ಕ್ರಾಂತಿ, ಗಮನ, ಆಗಮನ ಯಾವುದೂ ಕೂಡ ಇರುವುದಿಲ್ಲ. ಏಕೆಂದರೆ ಅವನು ವ್ಯಾಪ್ತನಾಗಿದ್ದಾನೆ. ಬುದ್ಧಿಯಲ್ಲಿರುವ ಉತ್ಕ್ರಾಂತಿ, ಗಮನ, ಆಗಮನಗಳ ವಿವಕ್ಷೆಯಿಂದ ಜೀವನಲ್ಲಿ ಶ್ರುತಿಯು ಉತ್ಕ್ರಾಂತ್ಯಾದಿಗಳನ್ನು ಹೇಳುತ್ತಿದೆ ಎಂದು ವ್ಯಾಖ್ಯಾನ ಮಾಡುತ್ತಿರುವಿ. ಆದರೆ ಈ ನಿನ್ನ ಪ್ರಮೇಯವು ಶ್ರುತಿವಿರುದ್ಧವಾಗಿದೆ. 'ತಮುತ್ಕ್ರಾಮಂತಂ ಪ್ರಾಣೋ ಅನುತ್ಕ್ರಾಮತಿ' ಎಂಬ ಶ್ರುತಿಯು ನೀವು ಜೀವನ ಉತ್ಕ್ರಮಣವನ್ನು ಅಪೇಕ್ಷಿಸಿ ಬುದ್ಧಿಯು ಉತ್ಕ್ರಮಣವನ್ನು ಹೊಂದುತ್ತದೆಂದು ವ್ಯಾಖ್ಯಾನ ಮಾಡುವಿರಿ. ಆದರೆ ಪ್ರಕೃತ ಜೀವನಿಗೆ ಪ್ರತ್ಯೇಕವಾಗಿ ಉತ್ಕ್ರಾಂತಿಯೇ ಇರುವುದಿಲ್ಲ ಎಂದು ವ್ಯಾಖ್ಯಾನ ಮಾಡುತ್ತಿರುವಿರಿ. ಆದ್ದರಿಂದ ನಿಮ್ಮ ಸೂತ್ರದ ಪ್ರಮೇಯವು ತಮುತ್ಕ್ರಾಮಂತಂ ಎಂಬ ಶ್ರುತಿಗೆ ವಿರುದ್ಧವಾಗಿದೆ.

**किञ्च किं बुद्धिगतेन गत्यादिना तदवच्छिन्नात्मनि गत्यादि जायते किं वा बुद्धिगतमेवारोप्यते उपचर्यते वा ।**

ಬುದ್ಧಿಯಲ್ಲಿರುವ ಗುಣಗಳು ಆತ್ಮನಲ್ಲಿ ತೋರುತ್ತವೆ ಎಂಬ ಮಾತಿಗೆ ಏನರ್ಥ? ಬುದ್ಧಿಯು ಉಪಾಧಿಯಾಗಿದೆ, ಆತ್ಮನು ತದವಚ್ಛಿನ್ನನಾಗಿದ್ದಾನೆ. ಗಮನ, ಆಗಮನ ಎಲ್ಲವೂ ಕೂಡ ಉಪಾಧಿಭೂತವಾದ ಬುದ್ಧಿಯಲ್ಲಿದೆ. ಉಪಾಧಿಪ್ರಯುಕ್ತವಾಗಿ ಆತ್ಮನಲ್ಲೂ ಕೂಡ ಗಮನಾಗಮನಗಳು ಹುಟ್ಟುತ್ತವೆ ಎಂದರ್ಥವೋ ಅಥವಾ ಗಮನಾಗಮನಾದಿಗಳು ಆತ್ಮನಲ್ಲಿ ಇರುವುದೇ ಇಲ್ಲ, ಬುದ್ಧಿಯಲ್ಲೇ ಇರುತ್ತವೆ ಅದನ್ನು ಆತ್ಮನಲ್ಲಿ ಆರೋಪ ಮಾಡಲಾಗಿದೆ ಎಂದು ಹೇಳುವಿರೋ? ಅಥವಾ ಬುದ್ಧಿಯಲ್ಲಿರುವ ಗಮನಾಗಮನಾದಿಗಳನ್ನು ಆತ್ಮನಲ್ಲಿ ಔಪಚಾರಿಕವಾಗಿ ಹೇಳುತ್ತೀರೋ?

**नाद्यः । घटगत्या तदवच्छिन्ननभसि गत्यन्तरादृष्टेः । अन्यथा यतो घटस्य बुद्धेर्वा गतिस्तत्राकाशस्यात्मनो वा सच्छिद्रत्वं यत्र गतिस्तत्र द्विगुणीकृत्य वृत्तिश्च स्यात् ।**

ಮೊದಲನೆಯ ಪಕ್ಷವು ಅಯುಕ್ತವಾಗಿದೆ. ಏಕೆಂದರೆ ವ್ಯಾಪ್ತವಾದ ಆಕಾಶವು ಘಟ, ಮಠ ಮೊದಲಾದ ಉಪಾಧಿಗಳಿಂದ ಅವಚ್ಛಿನ್ನವಾಗುತ್ತದೆ. ಘಟಾವಚ್ಛಿನ್ನವಾದ ಆಕಾಶಕ್ಕೆ ಗತಿಯನ್ನು ಹೇಳಿದಾಗ ಘಟದ ಗತಿಪ್ರಯುಕ್ತವಾಗಿ ತದವಚ್ಛಿನ್ನವಾದ ಆಕಾಶದಲ್ಲೂ ಕೂಡ ಮತ್ತೊಂದು ಗತಿಯನ್ನು ಒಪ್ಪಬೇಕಾದೀತು. ಹೀಗೆ ಗತ್ಯಂತರದ ಹುಟ್ಟುವಿಕೆಯನ್ನು ಒಪ್ಪಬೇಕಾಗುತ್ತದೆ. ಇದು ತಪ್ಪು. ಏಕೆಂದರೆ ಉಪಾಧಿಯ ಗತಿಯೇ ಘಟಾವಚ್ಛಿನ್ನ ಆಕಾಶದ ಗತಿ ಎಂದು ಹೇಳುತ್ತಾರೆ ಹೊರತು ಉಪಾಧಿಗತಿಗಿಂತ ಅತಿರಿಕ್ತವಾದ ಪ್ರತ್ಯೇಕವಾದ ಗತಿಯನ್ನು ಆಕಾಶದಲ್ಲಿ ಒಪ್ಪಬಾರದು. ಪ್ರಕೃತ ಬುದ್ಧಿಯಲ್ಲಿ ಉತ್ಕ್ರಾಂತ್ಯಾದಿಗಳು ಉಂಟಾದಾಗ ಅದಕ್ಕಿಂತ ಅತಿರಿಕ್ತವಾಗಿ ಆತ್ಮನಲ್ಲೂ ಕೂಡ ಮತ್ತೊಂದು ಉತ್ಕ್ರಾಂತ್ಯಾದಿಗಳನ್ನು ಒಪ್ಪಬೇಕಾಗುತ್ತದೆ. ಎಲ್ಲಿಂದ ಘಟಾವಚ್ಛಿನ್ನ ಆಕಾಶವು ಹೋಗಿದೆಯೋ ಅಲ್ಲಿ ಸಚ್ಛಿದ್ರತ್ವವು ಬರಬೇಕಾಗುತ್ತದೆ. ಯಾವ ಸ್ಥಳಕ್ಕೆ ಘಟಾವಚ್ಛಿನ್ನ ಆಕಾಶವು ಹೋಗಿದೆಯೋ ಅಲ್ಲಿ ದ್ವಿಗುಣೀಕೃತ್ಯ ವೃತ್ತಿಯು ಇರಬೇಕಾಗುತ್ತದೆ. ಪ್ರಕೃತದಲ್ಲೂ ಕೂಡ ಬುದ್ಧಿಯಲ್ಲಿ ಗಮನವು ಎಲ್ಲಿಂದ ಉಂಟಾಗಿದೆಯೋ ಅಲ್ಲಿ ಸಚ್ಛಿದ್ರತ್ವವು, ಎಲ್ಲಿ ಹೋಗಿದೆಯೋ ಆ ಸ್ಥಳದಲ್ಲಿ ದ್ವಿಗುಣೀಕೃತ್ಯ ವೃತ್ತಿಯು ಇರಬೇಕಾಗುತ್ತದೆ. ಆದ್ದರಿಂದ ಮೊದಲನೇ ಪಕ್ಷವು ಅಯುಕ್ತವಾಗಿದೆ.

**प्रकाशः –**

**त्वयेति** ।। ''चराचरे''ति सूत्रकल्पतरौ तथोक्तेरिति भावः । श्रुतिविगानं च नेत्याह – **शुद्ध इति** ।। ''एषोऽणुरात्मा चेतसा वेदितव्य'' इत्याद्यणुत्वश्रुतेश्चेत्यर्थः।

ಗ್ರಂಥದಲ್ಲಿ 'ತ್ವಯಾಚರಾಚರ ಇತಿ ಸೂತ್ರಾತ್ ಪ್ರಾಗ್‌ಬ್ರಹ್ಮವಿಚಾರಃ' ಎಂದು ಹೇಳಿದ್ದಾರೆ. ತ್ವಯಾ ಎಂದರೆ ನಿಮ್ಮಿಂದ ಕಲ್ಪತರುವಿನಲ್ಲಿ ಹಾಗೇ ಹೇಳಲಾಗಿದೆ ಎಂದು ತಿಳಿಯಬೇಕು. ಶ್ರುತಿಯ ವಿರೋಧವಿಲ್ಲವೆಂಬುದನ್ನು 'ಶುದ್ಧ' ಇತ್ಯಾದಿ ವಾಕ್ಯದಿಂದ ತಿಳಿಸುತ್ತಿದ್ದಾರೆ. 'ಏಷೋಣುರಾತ್ಮಾ ಚೇತಸಾ ವೇದಿತವ್ಯಃ' ಇತ್ಯಾದಿ ಅಣುತ್ವಶ್ರುತಿಯೂ ಕೂಡ ಇರುವುದರಿಂದ ಎಂಬುದು ಇದರ ಅರ್ಥ.

ಪುಂಸ್ತ್ವಾಧಿಕರಣ (೨-೩-೧೬)

**प्रकाशः –** ''सर्वत्र प्रसिद्धोपदेशात्'' इत्यधिकरणगुणसूत्रे ''निचाय्यत्वादेवं व्योमवच्च'' इत्यत्र ''यथा व्योम सर्वगतमपि सूचीपाशाद्यपेक्षयार्भकौकोऽणीयो व्यपदिश्यते तद्वत्सर्वगतस्यापि ब्रह्मणो हृदयपुण्डरीके निचाय्यत्वाद्द्रष्टव्यत्वादेवं व्यपदेशोऽणीयस्त्वादिव्यपदेश'' इति त्वया व्याख्यानादिति भावः ।।

'ಸರ್ವತ್ರ ಪ್ರಸಿದ್ಧೋಪದೇಶಾತ್' ಎಂಬ ಸೂತ್ರದಿಂದ ಪ್ರಾರಂಭವಾಗುವ ಅಧಿಕರಣದ ಗುಣಸೂತ್ರವೆನಿಸಿದ 'ನಿಚಾಯ್ಯತ್ವಾದೇವಂ ವ್ಯೋಮವಚ್ಚ' ಎಂಬ ಸೂತ್ರದಲ್ಲಿ ಹೀಗೆ ನಿಮ್ಮಿಂದ ವ್ಯಾಖ್ಯಾನ ಮಾಡಲಾಗಿದೆ. ಯಾವ ರೀತಿಯಾಗಿ ಆಕಾಶವು ಸರ್ವಗತವಾಗಿದ್ದರೂ ಸೂಜಿಯ ಮೊನೆಯ ಅಪೇಕ್ಷೆಯಿಂದ ಅತ್ಯಣುವೆಂದು ವ್ಯಪದೇಶಕ್ಕೆ ಅರ್ಹವಾಗುತ್ತದೋ ಅದರಂತೆ ಬ್ರಹ್ಮನೂ ಸರ್ವಗತನಾಗಿದ್ದರೂ ಕೂಡ ಹೃದಯಪುಂಡರೀಕದಲ್ಲಿ ಅಣುರೂಪದಿಂದ ನೆಲೆಸಿದ್ದಾನೆ. ಹೀಗೆ ಅಣೆಯಸ್ತ್ವಾದಿ ವ್ಯಪದೇಶವನ್ನು ತಿಳಿಯಬೇಕು ಎಂದು.

**प्रकाशः – विरलावयवं त्विति** ।। तथा चालोकस्य प्रदीपव्यतिरेकेण वृत्तावपि न चिद्गुणस्येति भावः ।। **द्वेधेति** ।। अद्रव्यत्वेन वाऽप्रधानत्वेन वेत्यर्थः ।। **रत्नेति** ।। तत्रावयवापगमाभावादिति भावः ।।

'ವಿರಳಾವಯವಂ ತು' ಎಂದರೆ ಆಲೋಕವು ದೀಪವನ್ನು ಬಿಟ್ಟು ಇರಬಹುದು. ಆದರೆ ಚಿದ್ಗುಣವು ಜೀವನನ್ನು ಬಿಟ್ಟು ಇರಲು ಸಾಧ್ಯವಿಲ್ಲ ಎಂದು ಇದರ ಅಭಿಪ್ರಾಯ. 'ದ್ವೇಧಾ' ಎಂದರೆ ದ್ರವ್ಯವಲ್ಲವೆಂದು ಅಥವಾ ಅಪ್ರಧಾನವಲ್ಲವೆಂದು ಎಂದು ಎರಡು ಬಗೆಯ ಅರ್ಥ. ರತ್ನದಲ್ಲಿ ಅವಯವದ ಅಪಗಮವು ಕೂಡದ ಕಾರಣ ರತ್ನದ ದೃಷ್ಟಾಂತವನ್ನು ಗ್ರಂಥದಲ್ಲಿ ತಿಳಿಸಿದ್ದಾರೆ.

**प्रकाशः – धर्मितोऽन्यत्रेति** ।। घटत्वादेरखण्डस्य सर्वघटादिनिष्ठस्यान्तरालि कपटादिवृत्तित्वस्यावर्जनीयत्वादिति भावः ।। **गुरुत्वादिह्रासस्येति** ।। ननूक्तमत्र भामत्यां ''द्रव्यान्तरावयवपूरणात्'' इति । तत्राह – **स्फटिकेति** ।। स्वाश्रयातिरेकेणान्यस्य गन्धस्यावर्तने परभाष्योदाहृतस्मृतेरर्थान्तरमाह – **उपलभ्येति**।। अपो वायुं च संश्रितमिति केचिद्ब्रूयुः । तेऽनैपुणाः । कथं तर्हि पृथिव्यामेव तं विद्यादिति ।। **न त्विति** ।। अन्यथा ''अथैक एव सन् गन्धवद्व्यतिरिच्यत'' इति श्रुत्यादिविरोधादिति भावः ।।

ಘಟತ್ವ ಎಂಬ ಜಾತಿಯು ಅಖಂಡವಾಗಿದೆ. ಅನೇಕ ಘಟಗಳ ನಡುವೆ ಒಂದು ಬಟ್ಟೆಯು ಇದ್ದರೆ ಅದರಲ್ಲೂ ಕೂಡ ಘಟತ್ವಜಾತಿಯನ್ನು ಒಪ್ಪಲೇಬೇಕು. ಇಲ್ಲದಿದ್ದರೆ ಎಲ್ಲಾ ಘಟಗಳಲ್ಲೂ ಕೂಡ ಅಖಂಡವಾದ ಘಟತ್ವವಿದೆ ಎಂದು ಹೇಳಲು ಸಾಧ್ಯವಿಲ್ಲ ಎಂಬುದು 'ಧರ್ಮಿತೋऽನ್ಯತ್ರ' ಎಂಬುದರ ಅಭಿಪ್ರಾಯವಾಗಿದೆ. ಗುರುತ್ವಾದಿಹ್ರಾಸಸ್ಯ ಎಂಬ ವಾಕ್ಯದಲ್ಲಿ ಭಾಮತಿಯಲ್ಲಿ ಹೇಳಲ್ಪಟ್ಟ

'ದ್ರವ್ಯಾಂತರಾವಯವಪೂರ್ಣಾತ್' ಎಂಬುದನ್ನು ಅನುಸಂಧಾನ ಮಾಡಿಕೊಳ್ಳಬೇಕು. ಗಂಧವು ದ್ರವ್ಯವನ್ನು ಬಿಟ್ಟು ಇರುವುದಿಲ್ಲ ಎಂದು ಹೇಳಿದರೆ ದೋಷವನ್ನು 'ಸ್ಫಟಿಕ' ಇತ್ಯಾದಿ ವಾಕ್ಯದಿಂದ ತಿಳಿಸುತ್ತಿದ್ದಾರೆ. ಗಂಧವು ಸ್ವಾಶ್ರಯದ್ರವ್ಯಕ್ಕಿಂತ ಅತಿರಿಕ್ತವಾಗಿ ಇರುತ್ತದೆ. ಈ ವಿಷಯದಲ್ಲಿ ಪರಭಾಷ್ಯದಲ್ಲಿ ಉದಾಹರಿಸಲ್ಪಟ್ಟ ಸ್ಮೃತಿವಾಕ್ಯಕ್ಕೆ ಅರ್ಥಾಂತರವನ್ನು 'ಉಪಲಬ್ಧ್ವಾ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಗಂಧವು ನೀರು ಅಥವಾ ವಾಯುವಿನಲ್ಲಿ ಆಶ್ರಯವನ್ನು ಹೊಂದಿ ಇರುತ್ತದೆಂದು ಕೆಲವರು ಹೇಳುತ್ತಾರೆ. ಅಂತಹವರು ಅನೈಪುಣರು. ಗಂಧವು ಪೃಥಿವಿಯಲ್ಲೇ ಇರುತ್ತದೆಂದು ತಿಳಿಯಬೇಕು ಎಂಬುದನ್ನು 'ನ ತು' ಎಂಬ ವಾಕ್ಯದಿಂದ ಗ್ರಂಥದಲ್ಲಿ ತಿಳಿಸಿದ್ದಾರೆ. ಹೀಗೊಪ್ಪದಿದ್ದರೆ 'ಅಥ ಏಕ ಏವ ಸನ್ ಗಂಧವದ್ ವ್ಯತಿರಿಚ್ಯತೇ' ಇತ್ಯಾದಿ ಶ್ರುತಿಯ ವಿರೋಧವು ಬರುತ್ತದೆಂದು ತಿಳಿಯಬೇಕು.

**प्रकाशः – यच्चोक्तमिति** ।। विवृतोऽयं सूत्रार्थः प्रागस्माभिः । प्रमेयास्वारस्यं चाह – **तमुत्क्रामन्तमिति** ।। **व्याप्तिश्रुतिस्त्विति** ।। ''अज आत्मा महान् ध्रुव'' इत्यादिश्रुतिस्त्वित्यर्थः । येन तद्विरोधादप्रामाण्योपचरितार्थत्वयोर्युक्तता स्यादिति भावः ।। **अमूर्त इति** ।। गगनादावित्यर्थः ।। **अपरमार्थत्वादिति** ।। तथा च समसत्त्वमेवेति भावः ।। **साक्षाज्जीवगतत्वोक्तेश्चेति** ।। गतेरित्यनुकर्षः ।

'ಯಚ್ಚೋಕ್ತಂ' ಎಂದರೆ ಹಿಂದೆಯೇ ಈ ಸೂತ್ರಾರ್ಥವನ್ನು ನಾವು ವಿವರಣೆ ಮಾಡಿದ್ದೇವೆ. ಪ್ರಮೇಯದಲ್ಲಿರುವ ಅಸ್ವಾರಸ್ಯವನ್ನು ತಮುಕ್ರಾಂಮತಂ ಎಂಬುದರಿಂದ ತೋರಿಸಿದ್ದಾರೆ. 'ವ್ಯಾಪ್ತಿಶ್ರುತಿಸ್ತು' ಎಂದರೆ 'ಅಜಃ ಆತ್ಮಾ ಮಹಾನ್ ಧ್ರುವಃ' ಇತ್ಯಾದಿ ಶ್ರುತಿಗಳು ಎಂದರ್ಥ. ಯಾವ ಕಾರಣದಿಂದ ಶ್ರುತಿವಿರೋಧವು ಬರುವ ಮೂಲಕ ಅಪ್ರಾಮಾಣ್ಯವನ್ನು ಅಥವಾ ಗೌಣಾರ್ಥತ್ವವನ್ನು ಒಪ್ಪುವ ಸಂದರ್ಭವು ಬರುತ್ತಿತ್ತು ಎಂಬುದು ಅಭಿಪ್ರಾಯ. 'ಅಮೂರ್ತೇ' ಎಂದರೆ ಗಗನಾದಿಗಳಲ್ಲಿ ಎಂದರ್ಥ. 'ಅಪರಮಾರ್ಥತ್ವಾತ್' ಎಂದರೆ ಸಮಾನಸತ್ತಾವತ್ವವು ಇರುವುದರಿಂದಲೇ ಎಂದರ್ಥ. ಸಾಕ್ಷಾಜ್ಜೀವ-ಗತತ್ವೋಕ್ತೇಶ್ಚ ಎಂಬಲ್ಲಿ 'ಗತೇಃ' ಎಂಬುದನ್ನು ಅನುಕರ್ಷಣ ಮಾಡಿಕೊಳ್ಳಬೇಕು

## तात्पर्यचन्द्रिका

**न द्वितीयतृतीयौ । (वैराग्यपादे ''यथेतमनेवं च'' इत्यादिसूत्रैस्त्वद्रीत्यापि कर्मफलभोगाय धूमादिमार्गेण गत्यादिप्रतिपादकत्वेनार्चिरादिपादे च ''अर्चिरादिना तत्प्रथितेः'' इत्यादिसूत्रैर्ज्ञानफलभोगायार्चिरादिमार्गेण गत्यादिप्रतिपादकत्वेन च निर्णीतानां) धूमादभ्रमभ्रादाकाशमाकाशाचन्द्रलोकं अर्चिषोऽहरह्न आपूर्यमाणपक्षम्'' इत्यादिश्रुतीनां,**

**धूमो रात्रिस्तथा कृष्णः षण्मासा दक्षिणायनम् ।**
**तत्र चान्द्रमसं ज्योतिर्योगी प्राप्य निवर्तते ।**
ಪುಂಸ್ತ್ವಾಧಿಕರಣ (೨-೩-೧೬)

**अग्निर्ज्योतिरहः शुक्लः षण्मासा उत्तरायणम् ।**

**तत्र प्रयाता नायान्ति ब्रह्म ब्रह्मविदो जनाः ।**

**इत्यादिस्मृतीनां चाबाधेऽप्यत्यन्ताप्रामाण्योपचारितार्थत्वयोरयोगात् ।**

ಬುದ್ಧಿಯಲ್ಲಿರುವ ಗಮನಾಗಮನಗಳನ್ನೇ ಆತ್ಮನಲ್ಲಿ ಆರೋಪ ಮಾಡಲಾಗುತ್ತದೆ ಎಂಬ ಎರಡನೆಯ ಪಕ್ಷವು ಹಾಗೂ ಔಪಚಾರಿಕವಾಗಿ ಹೇಳಲಾಗುತ್ತಿದೆ ಎಂಬ ಮೂರನೆಯ ಪಕ್ಷವು ಅಯುಕ್ತವಾಗಿದೆ. ಅದು ಹೀಗೆ - ಸ್ವತಃ ನೀವೇ ವೈರಾಗ್ಯಪಾದದಲ್ಲಿ 'ಯಥೇಮನೇವಂ ಚ' ಇತ್ಯಾದಿ ಸೂತ್ರಗಳಿಗೆ ವ್ಯಾಖ್ಯಾನ ಮಾಡುವಾಗ ಕರ್ಮಫಲಭೋಗಕ್ಕೋಸ್ಕರ ಧೂಮಾದಿ ಮಾರ್ಗದ ಮೂಲಕ ಜೀವನಿಗೆ ಗಮನಾಗಮನವನ್ನು ಪ್ರತಿಪಾದನೆ ಮಾಡಿರುವಿರಿ. ಅಷ್ಟೇ ಅಲ್ಲದೇ ಅರ್ಚಿರಾದಿ ಪಾದದಲ್ಲೂ ಕೂಡ ಅರ್ಚಿರಾದಿನಾತತ್ಪ್ರಥಿತೇಃ' ಇತ್ಯಾದಿ ಸೂತ್ರಗಳಿಗೆ ವ್ಯಾಖ್ಯಾನ ಮಾಡುವಾಗ ಜ್ಞಾನಫಲಭೋಗಕ್ಕೋಸ್ಕರ ಅರ್ಚಿರಾದಿಮಾರ್ಗದಿಂದ ಗಮನಾಗಮನವನ್ನು ಪ್ರತಿಪಾದನೆ ಮಾಡಿರುವಿರಿ. ಮತ್ತು ಧೂಮದಭ್ರಮ ಭ್ರಾದಾಕಾಶಮಾಕಾಶಾಚ್ಚಂದ್ರಲೋಕಂ ಅರ್ಚಿಷೋऽಹರಹ್ನ ಆಪೂರ್ಯಮಾಣಪಕ್ಷಮ್' ಇತ್ಯಾದಿ ಶ್ರುತಿಗಳು ಧೂಮಾದಿ ಮಾರ್ಗದಲ್ಲಿ ಜೀವನಿಗೆ ಗಮನಾಗಮನವನ್ನು ಪ್ರತಿಪಾದನೆ ಮಾಡುತ್ತಿವೆ.

ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಮ್ ।
ತತ್ರ ಚಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ ।
ಅಗ್ನಿರ್ಜ್ಯೋತಿಹರಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್ ।
ತತ್ರ ಪ್ರಯಾತಾ ನಾಯಾಂತಿ ಬ್ರಹ್ಮ ಬ್ರಹ್ಮವಿದೋ ಜನಾಃ ।

ಧೂಮದ ದೇವತೆ, ರಾತ್ರಿಯ ದೇವತೆ, ಕೃಷ್ಣಪಕ್ಷದ ದೇವತೆ, ದಕ್ಷಿಣಾಯನ ದೇವತೆ, ಆರುತಿಂಗಳುಗಳ ದೇವತೆಗಳು ಈ ದಾರಿಯಲ್ಲಿ ತೆರಳುವ ಸಾಧಕನು ಚಂದ್ರನ ಲೋಕದ ಮೂಲಕ ಸೇರಿ, ಪುನಃ ಸಂಸಾರಕ್ಕೆ ಆಗಮಿಸುತ್ತಾನೆ.

ಅಗ್ನಿ ಮತ್ತು ಜ್ಯೋತಿಯೆಂಬ ಹಗಲಿನ ದೇವತೆ, ಹುಣ್ಣಿಮೆಯ ದೇವತೆ, ಶುಕ್ಲಪಕ್ಷದ ದೇವತೆ, ಉತ್ತರಾಯಣದ ಆರು ತಿಂಗಳುಗಳ ದೇವತೆಗಳು, ಉತ್ತರಾಯಣದ ದೇವತೆ ಈ ದಾರಿಯಲ್ಲಿ ತೆರಳಿದ ಬ್ರಹ್ಮಜ್ಞಾನಿಗಳು ಮರಳಿ ಬರುವುದಿಲ್ಲ ಎಂದು ಭಗವದ್ಗೀತಾ ಸ್ಮೃತಿಯಲ್ಲಿ ಹೇಳಿದಂತೆ ಜೀವನಿಗೆ ಗಮನಾಗಮನಗಳು ಇವೆ ಎಂದು ನಿರ್ಣಯವಾಗುತ್ತದೆ. ಈ ಶ್ರುತಿಸ್ಮೃತಿಗಳಿಗೆ ಯಾವುದೇ ಬಾಧದೋಷಗಳು ಇಲ್ಲದಿದ್ದಾಗ ಅಪ್ರಾಮಾಣ್ಯವನ್ನಾಗಲೀ, ಔಪಚಾರಿಕವಾದ ಅರ್ಥವನ್ನು ಕಲ್ಪನೆ ಮಾಡುವುದಾಗಲೀ ಅಸಾಧುವಾಗುತ್ತದೆ.

**व्याप्तिश्रुतिस्तु ब्रह्मविषयत्वादबाधिकेति ''नेतराधिकारात्'' इति सूत्र एवोक्तम् । नच व्यावहारिकस्य गत्यादेस्सत्त्वान्नात्यन्ताप्रामाण्यम् । अमूर्ते मूर्तावच्छिन्नेऽपि व्यावहारिकगत्यदृष्टेः । बुद्धिगतव्यावहारिकगत्युपाधिकस्यात्म-गतगत्यादेर्व्यावहारिकत्वायोगाच्च । नहि घटोपाधिकं नभसः परिच्छिन्नत्वं महत्त्वमिव व्यावहारिकम् ।**

ಜೀವಾತ್ಮನು ವ್ಯಾಪ್ತನಾಗಿದ್ದಾನೆಂಬ ಶ್ರುತಿವಿರೋಧವು ಸಿದ್ಧಾಂತಿಗಳಾದ ನಿಮಗೆ ಬರುತ್ತದಲ್ಲವೇ? ಎಂದು ಆಕ್ಷೇಪ ಮಾಡಬಾರದು. ಏಕೆಂದರೆ ಅವುಗಳು ಬ್ರಹ್ಮವಿಷಯಕವಾಗಿವೆ ಎಂದು 'ನೇತರಾಧಿಕಾರಾತ್' ಎಂಬ ಸೂತ್ರದಲ್ಲಿ ನಾವು ವ್ಯಾಖ್ಯಾನ ಮಾಡಿದ್ದೇವೆ.

ಆತ್ಮದಲ್ಲಿರುವ ಗಮನಾಗಮನಗಳು ವ್ಯವಹಾರಿಕವಾಗಿವೆ. ಆದ್ದರಿಂದ ಶ್ರುತಿ-ಸ್ಮೃತಿಗಳಿಗೆ ಅತ್ಯಂತ ಅಪ್ರಾಮಾಣ್ಯವನ್ನು ಒಪ್ಪಬೇಕಾಗಿಲ್ಲ ಎಂಬ ಆಕ್ಷೇಪವೂ ಕೂಡ ತಪ್ಪು. ಅಮೂರ್ತವಾದ ಪದಾರ್ಥವು ಮತ್ತೊಂದು ಮೂರ್ತಪದಾರ್ಥದಿಂದ ಅವಚ್ಛಿನ್ನವಾದರೂ ಕೂಡ ಮೂರ್ತದಲ್ಲಿರುವ ಗತ್ಯಾಗತ್ಯಾದಿಗಳನ್ನು ಅಮೂರ್ತದಲ್ಲಿ ಆರೋಪ ಮಾಡಿದರೂ ಕೂಡ ಅಮೂರ್ತಪದಾರ್ಥದಲ್ಲಿ ಆಗಮನಾಗಮನಗಳು ವ್ಯಾವಹಾರಿಕವಾಗುವುದಿಲ್ಲ. ಪ್ರಾತಿಭಾಸಿಕವೆಂದೇ ಹೇಳಬೇಕು. ಉದಾಹರಣೆ - ಆಕಾಶವು ಅಮೂರ್ತವಾಗಿದೆ. ಘಟವು ಮೂರ್ತಪದಾರ್ಥವಾಗಿದೆ. ಮೂರ್ತಪದಾರ್ಥವೆನಿಸಿದ ಘಟದಲ್ಲಿರುವ ಗಮನಾಗಮನಗಳು ಘಟಾವಚ್ಛಿನ್ನ ಆಕಾಶದಲ್ಲಿ ಆರೋಪಿತವಾಗಿದೆ. ಈ ಆರೋಪಿತವಾದದ್ದನ್ನು ಪ್ರಾತಿಭಾಸಿಕವೆಂದೇ ಹೇಳಬೇಕು. ಅದರಂತೆ ಪ್ರಕೃತ ಆತ್ಮನಲ್ಲಿ ಆರೋಪಿತವಾದ ಗಮನಾಗಮನಗಳನ್ನೂ ಕೂಡ ಪ್ರಾತಿಭಾಸಿಕವೆಂದೇ ಹೇಳಬೇಕು. ಆಕಾಶವು ಸ್ವತಃ ವ್ಯಾವಹಾರಿಕವಾಗಿದೆ. ಅದರಲ್ಲಿರುವ ಮಹತ್ವವೂ ಕೂಡ ವ್ಯಾವಹಾರಿಕವಾಗಿದೆ. ಇಂಥ ಆಕಾಶದಲ್ಲಿ ಘಟೋಪಾಧಿಕವಾಗಿ ಯಾವ ಪರಿಚ್ಛಿನ್ನತ್ವ ಬರುತ್ತದೋ, ಅದನ್ನೂ ಕೂಡ ವ್ಯಾವಹಾರಿಕವೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಒಂದು ಪದಾರ್ಥದಲ್ಲಿ ಸಮಸತ್ತಾಕವಾದ ವಿರುದ್ಧಧರ್ಮದ್ವಯಗಳನ್ನು ಒಪ್ಪಲು ಸಾಧ್ಯವಿಲ್ಲ. ಆದ್ದರಿಂದ ಮಹತ್ವವನ್ನು ವ್ಯಾವಹಾರಿಕವೆಂದು, ಪರಿಚ್ಛಿನ್ನತ್ವವನ್ನು ಪ್ರಾತಿಭಾಸಿಕವೆಂದು ಹೇಳಬೇಕು. ಅದರಂತೆ ಪ್ರಕೃತದಲ್ಲಿ ಗಮನಾಗಮನಶೂನ್ಯತ್ವವು ವ್ಯಾವಹಾರಿಕವಾಗಿದೆ ಗಮನಾಗಮನಾದಿಮತ್ವವು ಪ್ರಾತಿಭಾಸಿಕವೆಂದು ಹೇಳಬೇಕು. ಎರಡನ್ನೂ ಕೂಡ ವ್ಯಾವಹಾರಿಕವೆಂದು ಹೇಳಬಾರದು.

**नच व्यावहारिकत्वेऽपि धर्मिणा परमार्थसदात्मना समसत्ताभाव-मात्रेणौपाधिकत्वम् । धर्मिणोऽवच्छिन्नात्मनोऽप्यपरमार्थत्वात् ।**

ಆಕಾಶದಲ್ಲಿ ಮಹತ್ವವನ್ನು ವ್ಯಾವಹಾರಿಕವೆಂದು ಪರಿಚ್ಛಿನ್ನತ್ವವನ್ನು ಪ್ರಾತಿಭಾಸಿಕವೆಂದು ಹೇಳುವುದು ಅನಿವಾರ್ಯ. ಏಕೆಂದರೆ ಆಕಾಶವೇ ಅಲ್ಲಿ ವ್ಯಾವಹಾರಿಕವಾಗಿದೆ. ಆದರೆ ಪ್ರಕೃತ ಧರ್ಮಿಯಾದ ಆತ್ಮನು ಪಾರಮಾರ್ಥಿಕವಾಗಿ ಸತ್ಯನಾಗಿದ್ದಾನೆ. ಇವನಲ್ಲಿ ಬುದ್ಧಿಪಾದಿಕವಾಗಿ ಪ್ರಾಪ್ತವಾದ ಗಮನಾಗಮನಗಳು ವ್ಯಾವಹಾರಿಕವೇ ಆಗಬೇಕು. ಪ್ರಾತಿಭಾಸಿಕವಾಗುವುದಿಲ್ಲ. ಬುದ್ಧಿಯಲ್ಲಿರುವ ಗಮನಾಗಮನಗಳು ವ್ಯಾವಹಾರಿಕವಾಗಿದೆ. ಆತ್ಮನಲ್ಲಿರುವ ಗಮನಾಗಮನಗಳೂ ಕೂಡ ವ್ಯಾವಹಾರಿಕವಾಗಿವೆ ಎಂದು ಹೇಳುವುದಾದರೆ, ಎರಡೂ ಕೂಡ ಸಮಸತ್ತಾಕವಾದವು. ಹೀಗಿರುವಾಗ ಬುದ್ಧಿಯಲ್ಲಿ ಗಮನಾಗಮನವು ಸ್ವಾಭಾವಿಕವಾಗಿದೆ. ಆತ್ಮನಲ್ಲಿ ಔಪಾಧಿಕವಾಗಿದೆ ಎಂದು ಹೇಳಲು ಹೇಗೆ ಸಾಧ್ಯ ? ಈ ಪ್ರಶ್ನೆಗೆ ಅದ್ವೈತಿಗಳು ಉತ್ತರಿಸುತ್ತಾರೆ - ಬ್ರಹ್ಮನು ಪಾರಮಾರ್ಥಿಕವಾಗಿ ಸತ್ಯನಾಗಿದ್ದಾನೆ. ಗಮನಾಗಮನಗಳು ವ್ಯಾವಹಾರಿಕವಾಗಿವೆ. ಧರ್ಮಿಸತ್ತಾಸಮಾನಸತ್ತಾಕತ್ವವು ಇವುಗಳಲ್ಲಿ ಬರಲಿಲ್ಲ. ಆದ್ದರಿಂದ ಗಮನಾಗಮನಗಳನ್ನು ಔಪಾಧಿಕವೆಂದು ಹೇಳುತ್ತೇನೆ ಎಂದು.

ಪುಂಸ್ತ್ವಾಧಿಕರಣ (೨-೩-೧೬)

ಇದು ತಪ್ಪು. ಶುದ್ಧನಾದ ಆತ್ಮನಲ್ಲಿ ಗಮನಾಗಮನಗಳು ಆರೋಪಿತವಾಗಿಲ್ಲ. ಅವಚ್ಛಿನ್ನವಾದ ಆತ್ಮನಲ್ಲೇ ಗಮನಾಗಮನಗಳು ಆರೋಪಿತವಾಗಿವೆ. ಅವಚ್ಛಿನ್ನವಾದ ಆತ್ಮನು ಪಾರಮಾರ್ಥಿಕನಲ್ಲ. ವ್ಯಾವಹಾರಿಕನೇ ಆಗಿದ್ದಾನೆ. ಅವನಲ್ಲಿ ಆರೋಪಿತವಾದ ಗಮನಾಗಮನಗಳೂ ಕೂಡ ವ್ಯಾವಹಾರಿಕ-ವಾದ್ದರಿಂದ ಸಮಸತ್ತಾಕತ್ವವು ಬರುತ್ತದೆ. ನ್ಯೂನಸತ್ತಾಕತ್ವವು ಬರುವುದಿಲ್ಲ. ಆದ್ದರಿಂದ ಧರ್ಮಿಯಾದ ಆತ್ಮನು ವ್ಯಾವಹಾರಿಕನಾದ್ದರಿಂದ ಅವನಲ್ಲಿ ಆರೋಪಿತವಾದ ಗಮನಾಗಮನಗಳೂ ಕೂಡ ವ್ಯಾವಹಾರಿಕವೇ ಆಗುತ್ತವೆ. ಹೀಗಿರುವಾಗ ನೀನು ಔಪಾಧಿಕವೆಂದು ಹೇಳಿದ್ದು ತಪ್ಪು ಎಂಬ ಬಾಧಕವನ್ನು ಅದ್ವೈತಿಗಳಿಂದ ಪರಿಹರಿಸಿಕೊಳ್ಳಲು ಸಾಧ್ಯವೇ ಇಲ್ಲ.

**नच गत्यादिश्रुतिर्बुद्धिमात्रविषयत्वान्नोपचरितार्थेति युक्तम् । ''नाकस्य पृष्ठे सुकृते तेऽनुभूत्वेमं लोकं हीनतरं वा विशन्ति । ते शुभमनुभूयावर्तन्ते पुनः कर्म कुर्वन्ति पुनर्गच्छन्ति'' इत्यादिश्रुतौ, ''गच्छन्ति पापिनः सर्वे नरकं नात्र संशयः । तत्र भुक्त्वा पतन्त्येव'' इत्यादिस्मृतौ ''संयमने त्वनुभूयेतरेषामारोहावरोहौ तद्गतिदर्शनात्'' इति सूत्रे च गतेः सुखदुःखानुभवरूपसंसारसामानाधिकरण्योक्तेः ।**

ಹಿಂದೆ ವಿಕಲ್ಪಿಸಿದ ಮೂರು ಪಕ್ಷಗಳಲ್ಲಿ ಯಾವುದನ್ನೂ ಕೂಡ ಒಪ್ಪುವುದಿಲ್ಲ. ಗತ್ಯಾದಿ-ಶ್ರುತಿಗಳೆಲ್ಲವೂ ಬುದ್ಧಿಮಾತ್ರವಿಷಯಕವಾಗಿವೆ. ಆತ್ಮವಿಷಯಕ ಆಗಿರುವುದಿಲ್ಲ. ಆದ್ದರಿಂದ ಯಾವುದೇ ದೋಷವಿಲ್ಲವೆಂದು ಮತ್ತೊಂದು ಸಮಾಧಾನವನ್ನು ಹೇಳಲು ಪ್ರಯತ್ನಿಸುತ್ತಾರೆ. ಆದರೆ ಇದೂ ಕೂಡ ತಪ್ಪು. ಏಕೆಂದರೆ ಗಮನಾಗಮನಗಳೆಲ್ಲವನ್ನೂ ಬುದ್ಧಿಗೆ ನೀವು ಹೇಳುವುದಾದರೆ ಗಮನಾಗಮನಾದಿಗಳಿಗೆ ಸಂಸಾರಸಾಮಾನಾಧಿಕರಣ್ಯವನ್ನು ಶ್ರುತಿಸ್ಮೃತಿಗಳಲ್ಲಿ ಹೇಳಲಾಗಿದೆ. ತದ್ವಿರೋಧವು ನಿಮಗೆ ಪ್ರಾಪ್ತವಾಗುತ್ತದೆ. ಒಂದುವೇಳೆ ಗತ್ಯಾಗತ್ಯಾದಿಗಳೆಲ್ಲವನ್ನೂ ಬುದ್ಧಿಗೆ ನೀವು ಹೇಳುವುದಾದರೆ ಸುಖ-ದುಃಖವೆಂಬ ಸಂಸಾರವೂ ಕೂಡ ಬುದ್ಧಿಗೆ ಹೇಳಬೇಕಾಗುತ್ತದೆ. ಸಂಸಾರವನ್ನು ಬುದ್ಧಿಗೆ ಹೇಳಿದರೆ ಮೋಕ್ಷವನ್ನೂ ಕೂಡ ಬುದ್ಧಿಗೇ ಹೇಳಬೇಕಾಗುತ್ತದೆ. ಆಗ ಜೀವನಿಗೆ ಸಂಸಾರ, ಜೀವನಿಗೆ ಮೋಕ್ಷವೆಂಬ ಪ್ರಮೇಯವೇ ತಪ್ಪಾಗುತ್ತದೆ. ಪುಣ್ಯಾತ್ಮರು ಸ್ವರ್ಗದಲ್ಲಿ ಸುಖವನ್ನು ಅನುಭವಿಸಿ ಭೂಲೋಕಕ್ಕೆ ಬರುತ್ತಾರೆ. ಪಾಪಿಷ್ಠರು ಸ್ವರ್ಗದಲ್ಲಿ ಸುಖವನ್ನು ಅನುಭವಿಸಿ ನರಕಕ್ಕೆ ತೆರಳುತ್ತಾರೆ ಎಂಬುದಾಗಿ ಈ ಶ್ರುತಿಯು ಹೇಳುತ್ತಿದೆ. ಈ ವಾಕ್ಯವನ್ನು ನೋಡಿದಾಗ ಸುಖದುಃಖರೂಪವಾದ ಸಂಸಾರಕ್ಕೂ ಗತಿಗೂ ಸಾಮಾನಾಧಿಕರಣ್ಯವು ತಿಳಿಯುತ್ತಿದೆ. ಇದರಂತೆ 'ತೇ ಶುಭಮನುಭೂಯ ಆವರ್ತಂತೇ ಪುನಃ ಕರ್ಮ ಕುರ್ವಂತಿ ಪುನರ್ಗಚ್ಛಂತಿ' ಎಂಬಲ್ಲಿ ಸುಖಾನುಭವಕ್ಕೂ ಕರ್ಮಕರಣಕ್ಕೂ ಸಾಮಾನಾಧಿಕರಣ್ಯವು ಕಾಣಿಸುತ್ತಿದೆ. ಇದರಂತೆ 'ಗಚ್ಛಂತಿ ಪಾಪಿನಃ ಸರ್ವೇ ನರಕಂ ನಾತ್ರ ಸಂಶಯಃ ತತ್ರಭುಂಕ್ತ್ವಾ ಪತಂತ್ಯೇವ' ಎಂಬ ಸ್ಮೃತಿವಾಕ್ಯದಲ್ಲಿ ಗಚ್ಛಂತಿ ಎಂಬಲ್ಲಿ ಗಮನಕ್ಕೂ ಭುಂಕ್ತ್ವಾ ಎಂಬಲ್ಲಿ ಭೋಗಕ್ಕೂ ಸಾಮಾನಾಧಿಕರಣ್ಯವನ್ನು ಹೇಳಲಾಗಿದೆ. ಇದರಂತೆ 'ಸಂಯಮನೇ ತ್ವನುಭೂಯೇತರೇಷಾಮಾರೋಹಾವರೋಹೌ ತದ್ಗತಿದರ್ಶನಾತ್' ಎಂಬ ಸೂತ್ರದಲ್ಲೂ ಕೂಡ ಸಂಸಾರಸಾಮಾನಾಧಿ ಕರಣ್ಯವೇ ಶ್ರುತವಾಗಿದೆ. ಸಂಯಮನ ಎಂದರೆ ನರಕ ಎಂದರ್ಥ. ಆ ನರಕದಲ್ಲಿ ಪಾಪದ ಫಲವಾದ

ದುಃಖವನ್ನು ಅನುಭವಿಸಿ ಸ್ವರ್ಗಕ್ಕೆ ತೆರಳುತ್ತಾರೆ. ಇನ್ನು ಕೆಲವರು ತಮಸ್ಸಿಗೆ ತೆರಳುತ್ತಾರೆ ಎಂಬುದಾಗಿ ಸುಖದುಃಖ ಅನುಭವರೂಪವಾದ ಸಂಸಾರದ ಸಾಮಾನಾಧಿಕರಣ್ಯವನ್ನು ಹೇಳಲಾಗಿದೆ. ಹೀಗೆ ಶ್ರುತಿ, ಸ್ಮೃತಿ, ಸೂತ್ರಗಳಲ್ಲಿ ಗತಿಗೆ ಸಾಮಾನಾಧಿಕರಣ್ಯವನ್ನು ಹೇಳಲ್ಪಟ್ಟಿದೆ.

**''योनिमन्ये प्रपद्यन्ते शरीरत्वाय देहिनः । स्थाणुमन्येऽनुसंयन्ति । एष ह्येनं जीव(मभिजीव)यत्येष उद्गमयति'' इत्यादिश्रुतौ साक्षाज्जीवगतत्वोक्तेश्च ।**

'ಯೋನಿಮನ್ಯೇ ಪ್ರಪದ್ಯಂತೇ' ಎಂಬ ವಾಕ್ಯದಲ್ಲಿ ದೇಹಿನಃ ಎಂದರೆ ಜೀವರು ಎಂದರ್ಥ. ನೇರವಾಗಿ ಜೀವರಿಗೆ ಗಮನವನ್ನು ಈ ವಾಕ್ಯವು ಹೇಳುತ್ತಿದೆ. 'ಸ್ಥಾಣುಮನ್ಯೇ ಅನುಸಂಯಂತಿ' ಎಂಬಲ್ಲೂ ಕೂಡ ಹಾಗೆಯೇ ಹೇಳಲಾಗಿದೆ. 'ಏಷ ಹ್ಯೇನಂ ಜೀವಯತಿ ಏಷ ಉದ್ಗಮಯತಿ' ಎಂಬಲ್ಲಿ ಜೀವಶಬ್ದವನ್ನೇ ಪ್ರಯೋಗ ಮಾಡಿ ಗಮನಾಗಮನವನ್ನು ಸ್ಪಷ್ಟವಾಗಿ ಹೇಳಲಾಗಿದೆ. ಹೀಗೆ ಜೀವವಿಷಯಕವಾದ ಗಮನಾಗಮನವನ್ನು ಬುದ್ಧಿವಿಷಯಕವೆಂದು ಹೇಳುವುದು ಅತ್ಯಂತ ಅಸಾಧುವಾಗುತ್ತದೆ.

**किञ्च गत्यादिशुद्धात्मनिष्ठमेव । ''तेन प्रद्योतेनैष आत्मा निष्क्रामति'' इति श्रुतौ शुद्धात्मवाचकात्मशब्दात् ''स एनान् ब्रह्म गमयति । ब्रह्मविदाप्नोति परम्'' इत्यादिश्रुतिषु, ''तत्र प्रयाता गच्छन्ति ब्रह्म ब्रह्मविदो जनाः । प्रविशन्ति परं पदम्'' इत्यादिस्मृतिषु, ''मुक्तोपसृप्यव्यपदेशात् । परं जैमिनिर्मुख्यत्वात्'' इत्यादिसूत्रेषु च गन्तव्यस्य परब्रह्मतोक्तेः ।**

ಮತ್ತು ಗಮನಾಗಮನಗಳು ಶುದ್ಧಾತ್ಮನಲ್ಲಿಯೇ ಶ್ರುತಿಗಳಿಂದ ಸಿದ್ಧವಾಗಿವೆ. 'ತೇನ ಪ್ರದ್ಯೋತೇನೈಷ ಆತ್ಮಾ ನಿಷ್ಕ್ರಾಮತಿ' ಇತ್ಯಾದಿ ಶ್ರುತಿಯಲ್ಲಿ ಶುದ್ಧಾತ್ಮನನ್ನೇ ಪ್ರತಿಪಾದನೆ ಮಾಡುವ ಆತ್ಮಶಬ್ದವನ್ನು ಪ್ರಯೋಗ ಮಾಡಲಾಗಿದೆ. ಇವನಿಗೆ ನಿಷ್ಕ್ರಮಣವನ್ನು ಈ ಶ್ರುತಿಯು ಹೇಳುತ್ತಿದೆ. 'ಸ ಏನಾನ್ ಬ್ರಹ್ಮ ಗಮಯತಿ ಬ್ರಹ್ಮಾವಿದಾಪ್ನೋತಿ ಪರಮ್' ಇತ್ಯಾದಿ ಶ್ರುತಿವಾಕ್ಯಗಳಲ್ಲಿ ಆತ್ಮನು ಬ್ರಹ್ಮನನ್ನು ಹೊಂದುತ್ತಾನೆ ಎಂದು ಬ್ರಹ್ಮನನ್ನು ತಿಳಿದವನು ಬ್ರಹ್ಮನನ್ನೇ ಹೊಂದುತ್ತಾನೆಂದು ಹೇಳಲಾಗಿದೆ. 'ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ' ಬ್ರಹ್ಮನನ್ನು ತಿಳಿದವರು ಬ್ರಹ್ಮನನ್ನೇ ಪಡೆಯುತ್ತಾರೆ. 'ಪ್ರವಿಶಂತಿ ಪರಂ ಪದಮ್' ಪರಬ್ರಹ್ಮನನ್ನೇ ಹೊಂದುತ್ತಾರೆ. ಇತ್ಯಾದಿ ಶ್ರುತಿವಾಕ್ಯಗಳು ಹೊಂದಲು ಯೋಗ್ಯನಾದವನು ಪರಂಬ್ರಹ್ಮನೇ ಆಗಿದ್ದಾನೆಂದು ಹೇಳುತ್ತಿದೆ. ಮತ್ತು 'ಮುಕ್ತೋಪಸೃಪ್ಯವ್ಯಪದೇಶಾತ್' 'ಪರಂ ಜೈಮಿನಿರ್ಮುಖ್ಯತ್ವಾತ್' ಇತ್ಯಾದಿ ಸೂತ್ರಗಳಲ್ಲೂ ಕೂಡ ಸಾಧಕರು ಪರಂಬ್ರಹ್ಮನನ್ನೇ ಹೊಂದುತ್ತಾರೆಂದು ಹೇಳಲಾಗಿದೆ.

ವಿವರಣೆ – ಪರಬ್ರಹ್ಮನನ್ನು ಹೊಂದಲು ಬುದ್ಧಿಗೆ ಸಾಧ್ಯವಿಲ್ಲ. ಅಥವಾ ಬುದ್ಧ್ಯವಚ್ಛಿನ್ನನಾದ ಆತ್ಮನೂ ಕೂಡ ಪರಬ್ರಹ್ಮನನ್ನು ಹೊಂದಲಾರ. ಒಂದುವೇಳೆ ಸ್ವರ್ಗವನ್ನು ಅಥವಾ ಬೇರೆ ಯಾವ ಲೋಕವನ್ನಾದರೂ ಪಡೆಯುತ್ತಾನೆಂದು ಹೇಳಿದ್ದಲ್ಲಿ ವಿಶಿಷ್ಟನಾದ ಆತ್ಮನು ತೆರಳುತ್ತಾನೆಂದು ಹೇಳಬಹುದಿತ್ತು. ಆದರೆ ಇಲ್ಲಿ ಮುಕ್ತಿಯನ್ನೇ ಕುರಿತು ಆತ್ಮನು ಹೋಗುತ್ತಾನೆಂದು ಹೇಳಿದ್ದರಿಂದ ಬುದ್ಧ್ಯವಚ್ಛಿನ್ನನಾದ

ಆತ್ಮನನ್ನು ವಿವಕ್ಷಿಸಬಾರದು, ಶುದ್ಧನಾದ ಆತ್ಮನನ್ನೇ ವಿವಕ್ಷಿಸಬೇಕು. ಆದ್ದರಿಂದ ಆತ್ಮನಿಗೆ ಗಮನಾಗಮನಗಳು ಶ್ರುತಿಸ್ಮೃತಿಗಳಿಂದ ಸಿದ್ಧವಾಗುತ್ತವೆ.

**''तयोर्ध्वमायन्नमृतत्वमेति'' इति श्रुतौ च गन्तुर्मुक्त्युक्तेः । ''मन उदक्रामन्मीलित इवाश्नत्पिबन्नास्तैव'' इत्यादिश्रुतौ च मनस उत्क्रमणेऽप्यात्मनस्तद-भावश्रवणात् ।**

'ತಯೋರ್ಧ್ವಮಾಯನ್ನಮೃತತ್ವಮೇತಿ' ಎಂಬ ಶ್ರುತಿಯು ಊರ್ಧ್ವನಾಡಿಯು ತೆರಳುವ ಆತ್ಮನಿಗೆ ಮುಕ್ತಿಯನ್ನು ಹೇಳಲಾಗಿದೆ.

'ಮನ ಉದಕ್ರಾಮನ್ಮೀಲಿತ ಇವಾಶ್ನಾತ್ಪಿಬನ್ನಾಸ್ತೈವ' ಇತ್ಯಾದಿ ಶ್ರುತಿಯಲ್ಲಿ ಮನಸ್ಸು ತೆರಳಿದರೂ ಕೂಡ ಕುಡಿಯುತ್ತಾ ತಿನ್ನುತ್ತಾ ಆತ್ಮನು ಅಲ್ಲಿಯೇ ನೆಲೆಸಿದ್ದಾನೆ ಎಂಬ ಶ್ರುತಿಯಲ್ಲಿ ಮನಸ್ಸಿಗೆ ಉತ್ಕ್ರಮಣವನ್ನು ಹೇಳಿದರೂ ಆತ್ಮನಿಗೆ ಹೇಳಿರುವುದಿಲ್ಲ.

ವಿವರಣೆ – 'ತಯೋರ್ಧ್ವಮಾಯನ್ನಮೃತತ್ವಮೇತಿ' ಎಂಬ ಶ್ರುತಿಯು ಊರ್ಧ್ವನಾಡಿ ಎನಿಸಿದ ಬ್ರಹ್ಮನಾಡಿಯ ಮೂಲಕ ಆತ್ಮನು ಗಮನವನ್ನು ಮಾಡಿದರೆ ಮೋಕ್ಷವನ್ನು ಹೊಂದುತ್ತಾನೆ ಎಂದು ಹೇಳುತ್ತಿದೆ. ಬುದ್ಧಿಗೆ ಮೋಕ್ಷವು ಇಲ್ಲವಾದ್ದರಿಂದ ಬುದ್ಧ್ಯವಚ್ಛಿನ್ನನಾದ ಆತ್ಮನಿಗೂ ಮೋಕ್ಷವು ಸಾಧ್ಯವಿಲ್ಲ. ಆದ್ದರಿಂದ ಶುದ್ಧಾತ್ಮನೇ ಬ್ರಹ್ಮನಾಡಿಯ ಮೂಲಕ ತೆರಳುತ್ತಾನೆಂದು ಹೇಳಬೇಕು.

ಐತರೇಯ ಉಪನಿಷತ್ತಿನಲ್ಲಿ 'ಮನ ಉದಕ್ರಾಮತ್ ಮಿಲೀತ ಇವ ಅಶ್ನನ್ ಪಿಬನ್ನಾಸ್ತೈವ' ಎಂಬುದಾಗಿ ಇಂದ್ರಿಯಾಭಿಮಾನಿದೇವತೆಗಳು ಪರಸ್ಪರ ಯುದ್ಧಮಾಡುವ ಪ್ರಸಂಗದಲ್ಲಿ ಈ ವಾಕ್ಯವು ಪ್ರಾಪ್ತವಾಗುತ್ತದೆ. ಮನಸ್ಸಿಗೆ ಉತ್ಕ್ರಮಣವು ಆದರೂ ಕೂಡ ಆತ್ಮನು ತಿನ್ನುತ್ತಾ, ಕುಡಿಯುತ್ತಾ ಅಲ್ಲೇ ನೆಲೆಸಿದ್ದಾನೆಂದು ಈ ವಾಕ್ಯ ಹೇಳುತ್ತಿದೆ. ನೀವು ಬುದ್ಧಿಯ ಜೊತೆ ಆತ್ಮನು ತೆರಳುತ್ತಾನೆಂದು ಹೇಳುವುದಾದರೆ ಈ ವಾಕ್ಯವೇ ಅಸಾಧುವಾಗಬೇಕಾಗುತ್ತದೆ. ಏಕೆಂದರೆ ಮನಸ್ಸೆಂದರೆ ಬುದ್ಧಿ ಎಂದೇ ವಿವಕ್ಷಿಸಬೇಕು. ಆತ್ಮನನ್ನು ಬಿಟ್ಟು ಬುದ್ಧಿಯು ತೆರಳುತ್ತದೆಂದು ಇಲ್ಲಿ ಸ್ಪಷ್ಟವಾಗಿ ಹೇಳಿರುವುದರಿಂದ ಈ ಶ್ರುತಿವಿರೋಧವೂ ಕೂಡ ನಿಮಗೆ ಬರುತ್ತದೆ.

**''एतं प्राणमयमात्मानमुपसंक्रम्य । एतं मनोमयमात्मानमुपसंक्रम्य । इमाँल्लोकान् कामान्नीकामरूप्यनुसंचरन् । एतत्सामगायन्नास्ते'' इत्यादिश्रुतौ च त्वद्रीत्या प्राणमयादित्यागानन्तरमपि संचरणश्रवणाच्च ।**

'ಏತಂ ಪ್ರಾಣಮಯಮಾತ್ಮಾನಮುಪಸಂಕ್ರಮ್ಯ' 'ಏತಂ ಮನೋಮಯಮಾತ್ಮಾನಮುಪಸಂಕ್ರಮ್ಯ' 'ಇಮಾಂಲ್ಲೋಕಾನ್ ಕಾಮಾನ್ನೀಕಾಮರೂಪ್ಯನುಸಂಚರನ್' 'ಏತತ್ಸಾಮಗಾಯನ್ನಾಸ್ತೇ' ಈ ಜೀವಾತ್ಮನು ಪ್ರಾಣಮಯಕೋಶವನ್ನು ದಾಟಿ, ಮನೋಮಯ ಕೋಶವನ್ನು ಪರಿತ್ಯಾಗ ಮಾಡಿ ಮೋಕ್ಷವನ್ನು ಹೊಂದಿ ಅಲ್ಲಿ ಸಾಮಗಾನವನ್ನು ಹಾಡುತ್ತಾ ಸುಖವಾಗಿ ವಿಹರಿಸಿದನು ಇತ್ಯಾದಿಯಾಗಿ ಶ್ರುತಿಯು ಹೇಳುತ್ತಿದೆ. ಇಲ್ಲಿ ನೀವು ಪ್ರಾಣಮಯ ಶಬ್ದಕ್ಕೆ ಬುದ್ಧಿ ಕೋಶ ಎಂದೇ ವ್ಯಾಖ್ಯಾನ ಮಾಡುತ್ತೀರಿ. ಬುದ್ಧಿಕೋಶವನ್ನು ಬಿಟ್ಟ ಅನಂತರವೂ ಕೂಡ ಜೀವನಿಗೆ ಸಂಚಾರವನ್ನು ಈ ಶ್ರುತಿಯು ಹೇಳುತ್ತಿದೆ ಎಂದು ನೀವೇ ವ್ಯಾಖ್ಯಾನ ಮಾಡುತ್ತೀರಿ. ಈಗ ಬುದ್ಧಿವಿಶಿಷ್ಟನಾದ ಆತ್ಮನೇ ಉತ್ಕ್ರಮಣವನ್ನು

ಮಾಡುತ್ತಾನೆಂದು ಹೇಳಿದರೆ ಈ ಶ್ರುತಿಯ ವಿರೋಧ ಬರುತ್ತದೆ.

**''तदा विद्वान्नामरूपाद्विमुक्तः परात्परं पुरुषमुपैति दिव्यम्'' इति श्रुतौ च नामरूपविमोक्षानन्तरं गत्युक्तेः ।**

ಮೇಲೆ ಉದಾಹರಿಸಿದ ಶ್ರುತಿಗಳಲ್ಲಿ ಸ್ವರ್ಗಾದಿ ಲೋಕವಾದ ಗಮನವನ್ನೇ ಹೇಳಲಾಗಿದೆ ಹೊರತು ಮೋಕ್ಷವನ್ನಲ್ಲ ಎಂದು ಆಕ್ಷೇಪ ಮಾಡಬಾರದು. ಏಕೆಂದರೆ 'ತದಾ ವಿದ್ವಾನ್ನಾಮರೂಪಾದ್ ವಿಮುಕ್ತಃ ಪರಾತ್ ಪರಂ ಪುರುಷಮುಪೈತಿ ದಿವ್ಯಮ್' ಎಂಬ ಶ್ರುತಿಯಲ್ಲಿ ನಾಮಾತ್ಮಕವಾದ ಹಾಗೂ ರೂಪಾತ್ಮಕವಾದ ಪ್ರಪಂಚವನ್ನು ತ್ಯಾಗ ಮಾಡಿದ ಮೇಲೆ ಪರತತ್ವವನ್ನು ಹೊಂದುತ್ತಾನೆ ಎಂದು ಶ್ರುತಿಯು ಸ್ಪಷ್ಟವಾಗಿ ಹೇಳುತ್ತಿದೆ. ಸ್ವರ್ಗಾದಿರೂಪಗಳಲ್ಲಿ ನಾಮರೂಪ ತ್ಯಾಗಗಳು ಇಲ್ಲದ ಕಾರಣ ಆ ಲೋಕಗಳನ್ನು ಇಲ್ಲಿ ವಿವಕ್ಷಿಸಬಾರದು. ಮೋಕ್ಷವನ್ನೇ ವಿವಕ್ಷಿಸಬೇಕು. ಅಂತಹ ಲೋಕಕ್ಕೆ ತೆರಳುವವನು ಶುದ್ಧಾತ್ಮನೇ ಹೊರತು ಅವಚ್ಛಿನ್ನನಾದ ಆತ್ಮನಲ್ಲ.

**''परं ज्योतिरुपसम्पद्य स्वेन रूपेणाभिनिष्पद्यते । स तत्र पर्येति'' इत्यादिश्रुतौ च स्वरूपाभिव्यक्त्यनन्तरं गत्युक्तेः । ''अणुर्ह्येष आत्मा । यं वा एते सिनीतः पुण्यं च पापं च'' इत्यादिश्रुतौ चाणुत्वस्य शुद्धगतमुक्तिसमानाधिकरणबन्धसामानाधिकरण्योक्तेः ।**

'ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ' 'ಸ ತತ್ರ ಪರ್ಯೇತಿ' ಸ್ವರೂಪದ ಅಭಿವ್ಯಕ್ತಿಯ ಅನಂತರವೂ ಕೂಡ ಆತ್ಮನಿಗೆ ಮೋಕ್ಷದಲ್ಲಿ ಗಮನವನ್ನು ಹೇಳಲಾಗಿದೆ. ಮೋಕ್ಷದಲ್ಲಿ ಕ್ರೀಡೆಗೋಸ್ಕರ ಗಮನ ಮಾಡುವವನು ಶುದ್ಧಾತ್ಮನೇ ಆಗುತ್ತಾನೆ ಹೊರತು ಬುದ್ಧ್ಯವಚ್ಛಿನ್ನನಾದ ಆತ್ಮನಾಗಲು ಸಾಧ್ಯವೇ ಇಲ್ಲ.

ಮತ್ತು 'ಅಣುರ್ಹ್ಯೇಷ ಆತ್ಮಾ । ಯಂ ವಾ ಏತೇ ಸಿನೀತಃ ಪುಣ್ಯಂ ಚ ಪಾಪಂ ಚ' ಎಂಬ ಶ್ರುತಿಯಲ್ಲಿ ಯಾವ ಅಣುವಾದ ಆತ್ಮನಿದ್ದಾನೋ ಅಂತಹ ಆತ್ಮನನ್ನು ಪುಣ್ಯ ಹಾಗೂ ಪಾಪವು ಕಟ್ಟಹಾಕುತ್ತದೇ ಎಂಬುದಾಗಿ ಈ ಶ್ರುತಿ ಹೇಳುತ್ತಿದೆ. ಆದ್ದರಿಂದ ಬಂಧವಿರುವವನಿಗೆ ಅಣುತ್ವವು ಸಿದ್ಧವಾಗುತದೆ. ಬುದ್ಧಿಗೆ ಅಥವಾ ಬುದ್ಧ್ಯವಚ್ಛಿನ್ನನಾದ ಆತ್ಮನಿಗೆ ಬಂಧವನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ ಮುಕ್ತಿಯು ಶುದ್ಧಾತ್ಮನಿಗೆ ಹೇಳಬೇಕೆಂದು ಇದುವರೆಗೂ ಪ್ರಮಾಣದಿಂದ ಸಾಧಿಸಿದ್ದಾಗಿದೆ. ಆ ಮುಕ್ತಿಗೆ ಸಮಾನಾಧಿಕರಣವಾದ ಬಂಧವನ್ನೂ ಕೂಡ ಶುದ್ಧಾತ್ಮನಿಗೆ ಹೇಳಬೇಕು. ಆ ಬಂಧದ ಸಾಮಾನಾಧಿಕರಣ್ಯವು ಅಣುತ್ವಕ್ಕೆ ಈ ಶ್ರುತಿಯು ಹೇಳುತ್ತಿದೆ. ಆದ್ದರಿಂದ ಶುದ್ಧಾತ್ಮನಿಗೆ ಮಾತ್ರ ಅಣುತ್ವವನ್ನು ಹೇಳಬೇಕೇ ಹೊರತು ವಿಶಿಷ್ಟನಾದ ಆತ್ಮನಿಗೆ ಹೇಳಬಾರದು.

**''एषोऽणुरात्मा चेतसा वेदितव्यः'' इति श्रुतौ चाणुत्वस्य वेदितव्यत्वोक्तेः । ''तद्यथाऽनस्सुसमाहितमुत्सर्जद्यायादेवमेवायं शारीर आत्मा प्राज्ञेनात्मनाऽन्वारूढ उत्सर्जद्याति'' इत्यादिश्रुतौ च स्वाभाविकगत्याश्रयशकटादिदृष्टान्तस्यैवोक्तेः । ''तद्यथा तृणजलूका तृणस्यान्तं गत्वाऽन्यमाक्रममाक्रम्यात्मानमुपसंहरत्येवमेवाय-**

**मात्मेदं शरीरं निहत्याविद्यां गमयित्वान्यमाक्रममाक्रम्यात्मानमुपसंहरति'' इति श्रुतौ चाविद्यानिवृत्त्यनन्तरं गत्युक्तेः ।**

'ಏಷೋಽಣುರಾತ್ಮಾ ಚೇತಸಾ ವೇದಿತವ್ಯಃ' ಎಂಬ ಶ್ರುತಿಯಲ್ಲಿ ಅಣುವಾದ ಆತ್ಮನು ತಿಳಿಯಲು ಯೋಗ್ಯನಾಗಿದ್ದಾನೆ ಎಂದು ಆತ್ಮನಲ್ಲಿ ಅಣುತ್ವವನ್ನು ಅವಶ್ಯವಾಗಿ ತಿಳಿಯಬೇಕೆಂದು ಹೇಳಲಾಗಿದೆ. ಅವಶ್ಯವಾಗಿ ವೇದಿತವ್ಯವಾದ ಅಣುತ್ವವನ್ನು ಔಪಚಾರಿಕವಾಗಿ ಅಥವಾ ಆರೋಪಿತವಾಗಿ ಸರ್ವಥಾ ವ್ಯಾಖ್ಯಾನ ಮಾಡಬಾರದು ಮತ್ತು ಬೃಹದಾರಣ್ಯವಾಕ್ಯವೂ ಕೂಡ ಇದಕ್ಕೆ ಸಂವಾದಿಯಾಗಿದೆ. ಅನಃ = ಬಂಡಿಯು, ಹಿಂದಿನ ಪ್ರದೇಶವನ್ನು ದಾಟಿ ಮುಂದಿನ ಪ್ರದೇಶವನ್ನು ಹೇಗೆ ಹೊಂದುತ್ತದೋ ಅದರಂತೆ ಶಾರೀರನಾದ ಆತ್ಮನು ಪರಮಾತ್ಮನಿಂದ ಹತ್ತಲ್ಪಟ್ಟವನಾಗಿ ಹಿಂದಿನ ಶರೀರಾದಿಗಳನ್ನು ಪರಿತ್ಯಾಗಮಾಡಿ ಮುಂದಿನ ಮಾರ್ಗದಲ್ಲಿ ತೆರಳುತ್ತಾನೆ ಎಂದು ಈ ಶ್ರುತಿಯು ಹೇಳುತ್ತಿದೆ. ಈ ಶ್ರುತಿಯಲ್ಲಿ ಶಕಟದ ದೃಷ್ಟಾಂತವನ್ನು ನೀಡಲಾಗಿದೆ. ಶಕಟಕ್ಕೆ ಔಪಾಧಿಕಗಮನವನ್ನಂತು ಹೇಳಲು ಸಾಧ್ಯವೇ ಇಲ್ಲ. ಸ್ವಾಭಾವಿಕವಾದ ಗಮನಕ್ಕೆ ಆಶ್ರಯವಾದ ಶಕಟದ ದೃಷ್ಟಾಂತದ ಬಲದಿಂದಲೇ ಜೀವದ ಗಮನವೂ ಕೂಡ ಸ್ವಾಭಾವಿಕವೆಂದೇ ಸ್ಪಷ್ಟವಾಗುತ್ತದೆ.

ಮತ್ತು ತೃಣಜಲೂಕ ಎಂಬ ಕ್ರಿಮಿಯು ಹುಲ್ಲಿನ ಮೇಲಿನ ಭಾಗಕ್ಕೆ ಬಂದು ಇನ್ನೊಂದು ತೃಣವನ್ನು ಹಿಡಿದುಕೊಂಡು ಮೊದಲಿದ್ದ ತೃಣವನ್ನು ಪರಿತ್ಯಾಗ ಮಾಡುತ್ತದೆ. ಅದರಂತೆ ಈ ಆತ್ಮವೂ ಕೂಡ ಹಳೆಯ ಶರೀರವನ್ನು ಪರಿತ್ಯಾಗ ಮಾಡಿ ಮತ್ತೊಂದು ದೇಹವನ್ನು ಪಡೆಯುತ್ತದೆ. ಇರುವೆಯು ಹೇಗೆ ಮತ್ತೊಂದು ಹುಲ್ಲನ್ನು ಹಿಡಿದು, ಮೊದಲು ಹಿಡಿದ ಹುಲ್ಲನ್ನು ಬಿಡುತ್ತದೋ ಅದರಂತೆ ಜೀವನೂ ಕೂಡ ಮುಂದೆ ಬರುವ ದೇಹದ ಅಭಿಮಾನವನ್ನು ಮೊದಲು ಹೊಂದಿ ಅನಂತರವೇ ಈ ಶರೀರವನ್ನು ಬಿಡುತ್ತಾನೆ. ಅಥವಾ ಲಿಂಗ ಶರೀರವನ್ನು ಪರಿತ್ಯಾಗ ಮಾಡುವಾಗ ಸ್ವರೂಪ ಶರೀರದಲ್ಲಿ ಅಭಿಮಾನವುಳ್ಳವನಾಗುತ್ತಾನೆ ಎಂಬುದಾಗಿ 'ತದ್ಯಥಾ ತೃಣಜಲೂಕಾಃ' ಇತ್ಯಾದಿ ಶ್ರುತಿಯು ಹೇಳುತ್ತಿದೆ. ಈ ಶ್ರುತಿಯ ಬಲದಿಂದ ಅವಿದ್ಯಾ ನಿವೃತ್ತಿಯ ಅನಂತರವೂ ಕೂಡ ಗಮನವು ಇದೆ ಎಂದು ತಿಳಿಯುತ್ತದೆ. ಆದ್ದರಿಂದ ಶುದ್ಧಾತ್ಮನಿಗೆ ಗಮನವನ್ನು ಹೇಳಬೇಕು.

**यच्चोक्तं ''बुद्धेर्गुणेनात्मगुणेन चैव ह्याराग्रमात्रो ह्यपरोऽपि दृष्ट'' इति श्रुतौ बुद्धिगुणेनाराग्रमात्रत्वमात्मगुणेन तु विभुत्वमुक्तमिति**

ಅದ್ವೈತಿಗಳ ಆಕ್ಷೇಪ – 'ಬುದ್ಧೇರ್ಗುಣೇನಾತ್ಮಗುಣೇನ ಚೈವ ಹ್ಯಾರಾಗ್ರಮಾತ್ರೋ ಹ್ಯಪರೋಽಪಿ ದೃಷ್ಟಃ' ಎಂಬ ಶ್ರುತಿಯಲ್ಲಿ ಆತ್ಮನು ಬುದ್ಧಿಯ ಗುಣದಿಂದ ಅಣುರೂಪನಾಗಿದ್ದಾನೆ. ತನ್ನ ಗುಣದಿಂದ ವ್ಯಾಪ್ತನಾಗಿದ್ದಾನೆಂದು ತಿಳಿಯುತ್ತದೆ. ಆದ್ದರಿಂದ ಆತ್ಮನನ್ನು ವಿಭುವೆಂದು ಹೇಳಬೇಕಲ್ಲವೇ?

**तन्न । ''यद्यथाऽणुनश्चक्षसः प्रकाशो व्याततं एवमेवास्य पुरुषस्य प्रकाशो व्याततोऽणुर्ह्येवैष पुरुषो भवति'' इति श्रुतिं ''चिद्गुणेनैव नान्यथ'' इति स्मृतिं चानुसृत्य बुद्धेर्ज्ञानस्य गुणेन व्याप्तः अपरः आत्मगुणेन चाराग्रमात्र इत्यन्वयात् । पाठक्रमादर्थक्रमस्य बलीयस्त्वात् । त्वन्मत आत्मनो निर्गुणत्वाच्च ।**

ಅದ್ವೈತಿಗಳ ಈ ಆಕ್ಷೇಪವು ತಪ್ಪು. ಪಾಠಕ್ರಮಕ್ಕಿಂತಲೂ ಅರ್ಥಕ್ರಮವು ಶ್ರೇಷ್ಠವಾಗಿದೆ. ಪಾಠಕ್ರಮವನ್ನು ನೋಡಿದಾಗ ಬುದ್ಧಿಗುಣದಿಂದ ಅಣುರೂಪನಾಗಿದ್ದಾನೆ. ಸ್ವಾಭಾವಿಕಗುಣದಿಂದ ವಿಭುವಾಗಿದ್ದಾನೆ ಎಂಬರ್ಥವು ತಿಳಿಯುತ್ತದೆ. ಆದರೆ ಈ ಅರ್ಥವನ್ನು ಇಲ್ಲಿ ವಿವಕ್ಷಿಸಬಾರದು. ಪಾಠಕ್ರಮದಿಂದ ತಿಳಿಯುವ ಅರ್ಥವು ಪ್ರಮಾಣವಿರುದ್ಧವಾದರೆ ಪ್ರಮಾಣ ಅವಿರುದ್ಧವಾದ ಅರ್ಥಕ್ರಮವೇ ಸ್ವೀಕಾರಾರ್ಹವಾಗುತ್ತದೆ. ಆದ್ದರಿಂದ ಬುದ್ಧಿಗುಣದಿಂದ ವ್ಯಾಪ್ತನಾಗಿದ್ದಾನೆ, ಸ್ವಾಭಾವಿಕ ಗುಣದಿಂದ ಅಣುವಾಗಿದ್ದಾನೆ ಎಂಬ ಅರ್ಥಕ್ರಮದಿಂದ ತಿಳಿಯುವ ಅರ್ಥವನ್ನೇ ಸ್ವೀಕರಿಸಬೇಕು. ಬುದ್ಧಿಯಿಂದ ಆತ್ಮನು ವ್ಯಾಪ್ತನಾಗಿದ್ದಾನೆ ಎಂದು ಹೇಳಿದಾಗ ಬುದ್ಧಿಶಬ್ದಕ್ಕೆ ಇಂದ್ರಿಯ ಎಂದರ್ಥವಲ್ಲ, ಜ್ಞಾನ ಎಂಬರ್ಥವನ್ನು ವಿವಕ್ಷಿಸಬೇಕು. 'ಗುಣಾದ್ವಾ ಆಲೋಕವತ್' ಎಂಬ ಸೂತ್ರದಲ್ಲಿ ಹೇಳಿದಂತೆ ದೀಪವು ಒಂದೇ ಕಡೆ ಇದ್ದರೂ ಅದರ ಪ್ರಕಾಶವು ಎಲ್ಲೆಡೆ ಹೇಗೆ ವ್ಯಾಪ್ತವಾಗಿರುತ್ತದೋ ಅದರಂತೆ ಆತ್ಮನು ಅಣುವಾಗಿದ್ದರೂ ಕೂಡ ಅವನ ಜ್ಞಾನ ಎಂಬ ಗುಣವು ಸುತ್ತಲೂ ವ್ಯಾಪ್ತವಾಗುತ್ತದೆ. ಈ ವಿಷಯವನ್ನು 'ತದ್ಯಥಾऽಣುನಶ್ಚಕ್ಷುಸಃ ಪ್ರಕಾಶೋ ವ್ಯಾತತ ಏವಮೇವಾಸ್ಯ ಪುರುಷಸ್ಯ ಪ್ರಕಾಶೋ ವ್ಯಾತತೋऽಣುರ್ಹ್ಯೇವೈಷ ಪುರುಷೋ ಭವತಿ' ಎಂಬ ಶ್ರುತಿಯು ಹೇಳುತ್ತಿದೆ. ಯಾವ ರೀತಿಯಾಗಿ ಚಕ್ಷುಸ್ ಎಂಬ ಇಂದ್ರಿಯವು ಅಣುವಾಗಿದ್ದರೂ ಕೂಡ ಅದರ ಪ್ರಕಾಶವು ಹೇಗೆ ವ್ಯಾಪ್ತವಾಗಿದೆಯೋ ಅದರಂತೆ ಜೀವನೂ ಅಣುವಾಗಿದ್ದರೂ ಕೂಡ ಪ್ರಕಾಶತಃ ವ್ಯಾಪ್ತನಾಗಿದ್ದಾನೆ ಎಂದು ಇದರ ಅರ್ಥ. ಅದರಂತೆ 'ಚಿದ್ಗುಣೇನೈವ ನಾನ್ಯತಃ' ಎಂಬ ಶ್ರುತಿಯೂ ಕೂಡ ಚಿದ್ಗುಣ ಎಂಬ ಗುಣದಿಂದ ವ್ಯಾಪ್ತನಾಗಿದ್ದಾನೆ ಎಂದು ಹೇಳುತ್ತಿದೆ. ಈ ಶ್ರುತಿಸ್ಮೃತಿಗಳಿಗೆ ಅನುಗುಣವಾಗಿ ಜ್ಞಾನ ಎಂದು ಕರೆಸಿಕೊಳ್ಳುವ ಬುದ್ಧಿಯು ಗುಣತಃ ವ್ಯಾಪ್ತವಾಗಿದೆ. ಮತ್ತೊಂದು ಸ್ವಾಭಾವಿಕವಾದ ಗುಣದಿಂದ ಅನುರೂಪನಾಗಿದ್ದಾನೆ ಎಂಬುದಾಗಿ 'ಬುದ್ಧಿರ್ಗುಣೇನ' ಇತ್ಯಾದಿ ಶ್ರುತಿಗೆ ವ್ಯಾಖ್ಯಾನವನ್ನು ಮಾಡಬೇಕು.

ಮತ್ತು ನಿಮ್ಮ ಸಿದ್ಧಾಂತದಲ್ಲಿ ಆತ್ಮನು ತನ್ನ ಗುಣದಿಂದ ವ್ಯಾಪ್ತನಾಗಿದ್ದಾನೆ ಎಂದು ಹೇಳಲು ಬರುವುದೂ ಇಲ್ಲ. ಏಕೆಂದರೆ ನಿರ್ಧರ್ಮಕನಾದ ಆತ್ಮನಿಗೆ ಗುಣವೇ ಇಲ್ಲವಾದ್ದರಿಂದ ವ್ಯಾಪ್ತತ್ವವೆಂಬ ಗುಣವೂ ಕೂಡ ನಿಮಗೆ ಹೇಳಲು ಬರುವುದಿಲ್ಲ.

**यच्चोक्तं "स चानन्त्याय कल्पत" इत्युत्तरवाक्ये स्वाभाविकानन्त्योक्तेः पूर्वोक्तं बालाग्रशतभागत्वमौपाधिकमिति**

ಅದ್ವೈತಿಗಳ ಆಕ್ಷೇಪ – 'ಸ ಚಾನಂತ್ಯಾಯ ಕಲ್ಪತೇ' ಎಂಬುದಾಗಿ ಮುಂದಿನ ವಾಕ್ಯದಲ್ಲಿ ಆತ್ಮನಿಗೆ ಆನಂತ್ಯವೆಂಬ ಗುಣವು ಸ್ವಾಭಾವಿಕವೆಂದು ಹೇಳಲಾಗಿದೆ. ಆದ್ದರಿಂದ ಹಿಂದೆ ಹೇಳಲ್ಪಟ್ಟ ಬಾಲಾಗ್ರಶತಭಾಗತ್ವವನ್ನು ಔಪಾಧಿಕವೆಂದು ವಿವಕ್ಷಿಸುತ್ತೇವೆ. ಆದ್ದರಿಂದ ಆತ್ಮನು ವಿಭುವೇ ಆಗಿದ್ದಾನಲ್ಲವೇ?

**तन्न । (आनन्त्यशब्दस्य मरणादिरूपनाशाभावात्मकमोक्षपरत्वात् ।**

ಅದ್ವೈತಿಗಳ ಈ ಆಕ್ಷೇಪವು ತಪ್ಪು. ಏಕೆಂದರೆ ಆನಂತ್ಯಶಬ್ದಕ್ಕೆ ವ್ಯಾಪ್ತನಾಗಿದ್ದಾನೆ ಎಂದರ್ಥವಲ್ಲ. ಮರಣವೆಂಬ ನಾಶವು ಇಲ್ಲ ಎಂದರ್ಥ. ಆದ್ದರಿಂದ ಬಾಲಾಗ್ರಶತಭಾಗ ಪರಿಮಾಣದಲ್ಲಿರುವ ಜೀವನು

ಮೋಕ್ಷವನ್ನು ಹೊಂದುತ್ತಾನೆ ಎಂದಷ್ಟೇ 'ಸ ಚಾನಂತ್ಯಾಯ ಕಲ್ಪತೇ' ಎಂಬ ಶ್ರುತಿಯು ಹೇಳುತ್ತಿದೆ ಹೊರತು ವ್ಯಾಪ್ತನಾಗಿದ್ದಾನೆಂದು ಹೇಳುತ್ತಲೇ ಇಲ್ಲ.

**यच्चोक्तं "कस्मिन्वहमुत्क्रान्त उत्क्रान्तो भविष्यामि कस्मिन् वा व प्रतिष्ठिते प्रतिष्ठास्यामीति । स प्राणमसृजत" इति श्रुतेर्जीवस्योत्क्रान्त्यादि-प्राणोत्क्रान्त्याद्युपाधिकमिति**

ಅದ್ವೈತಿಗಳ ಆಕ್ಷೇಪ – 'ಕಸ್ಮಿನ್ ಅಹಮುತ್‌ಕ್ರಾಂತಃ ಉತ್ಕ್ರಾಂತೋ ಭವಿಷ್ಯಾಮಿ ಕಸ್ಮಿನ್ ವಾ ವ ಪ್ರತಿಷ್ಠಿತೇ ಪ್ರತಿಷ್ಠಾಸ್ಯಾಮಿ' ಇತ್ಯಾದಿ ಶ್ರುತಿಯು ಯಾರು ಉತ್ಕ್ರಮಣವನ್ನು ಹೊಂದಿದರೆ ನಾನು ಉತ್ಕ್ರಮಣವನ್ನು ಹೊಂದುತ್ತೇನೋ, ಯಾರು ಪ್ರತಿಷ್ಠಿತನಾದರೆ ನಾನು ಪ್ರತಿಷ್ಠಿತನಾಗುತ್ತೇನೋ ಅಂತಹ ಬುದ್ಧಿಯನ್ನು ಸೃಷ್ಟಿ ಮಾಡಿದನು ಎಂಬುದಾಗಿ ಶ್ರುತಿಯು ಜೀವನ ಪ್ರಾಣೋತ್ಕ್ರಮಣವು ಬುದ್ಧ್ಯುಪಾಧಿಕವೆಂದು ಹೇಳಲಾಗಿದೆ. ಆದ್ದರಿಂದ ಆತ್ಮನಿಗೆ ಹೇಳಲ್ಪಟ್ಟ ಉತ್ಕ್ರಮಣವು ಔಪಾಧಿಕವೆಂದು ಸಿದ್ಧವಾಯಿತಲ್ಲವೇ.

**तन्न । अस्य सृष्टिवाक्यस्य ब्रह्मविषयत्वात् । वत्से धावति गौर्धावति इत्यादाविवात्रापि ब्रह्मणि प्राणोत्क्रमणादन्यस्यैवोत्क्रमणस्य श्रुतेश्च । परमात्मनोऽपि रूपविशेषेणोत्क्रमणस्य "प्राज्ञेनात्मना" इत्यादिश्रुतिसिद्धत्वाच्च । विस्तरस्तु न्यायामृते जीवाणुत्ववादे द्रष्टव्यः ।**

ಇದು ತಪ್ಪು. ಈ ವಾಕ್ಯವು ಜೀವವಿಷಯಕವೇ ಅಲ್ಲ. ಜೀವನು ಸೃಷ್ಟಿ ಮಾಡಿದ ಎಂದು ಹೇಳುವುದೇ ತಪ್ಪು. ಸೃಷ್ಟಿ ಮಾಡುವ ಮೊದಲು ಅವನಿಗೆ ಕರ್ತೃತ್ವವೇ ಬರಲು ಸಾಧ್ಯವಿಲ್ಲ. ಆದ್ದರಿಂದ ಇದು ಜೀವಪರವಲ್ಲ. ಇದು ಬ್ರಹ್ಮಪರವೆಂದೇ ಹೇಳಬೇಕು. 'ಕಸ್ಮಿನ್ ಅಹಂ' ಇತ್ಯಾದಿ ವಾಕ್ಯಗಳನ್ನು ಪ್ರಯೋಗ ಮಾಡುತ್ತಿರುವುದು ಪರಮಾತ್ಮನೇ ಆಗಿದ್ದಾನೆ. ಪ್ರಾಣನ ಉತ್ಕ್ರಮಣದಿಂದ ಇವನ ಉತ್ಕ್ರಮಣ, ಪ್ರಾಣನ ಸ್ಥಿತಿಯಿಂದ ಇವನ ಸ್ಥಿತಿ ಎಂಬುದು ಪರಮಾತ್ಮನಿಗೆ ಬರುತ್ತದೇ ಹೊರತು ಜೀವಾತ್ಮನಿಗೆ ಬರಲು ಸಾಧ್ಯವಿಲ್ಲ. ಮತ್ತು 'ಉತ್ಕ್ರಾಂತೋ ಭವಿಷ್ಯಾಮಿ' ಎಂಬುದರಿಂದ ಎರಡು ಕ್ರಿಯೆಗಳು ಪ್ರತೀತವಾಗುತ್ತವೆ. ಮೊದಲನೆಯ ಉತ್ಕ್ರಮಣವೇ ಎರಡನೆಯದರಲ್ಲಿ ಆರೋಪಿತವಾಗುತ್ತದೆ ಎಂಬರ್ಥವು ಸರ್ವಥಾ ತಿಳಿಯುವುದಿಲ್ಲ. ಉದಾ – 'ವತ್ಸೇ ಧಾವತಿ ಸತೀ ಗೌರ್ಧಾವತಿ' ಕರು ಓಡಿದಾಗ ಹಸುವೂ ಕೂಡ ಓಡುತ್ತದೆ ಎಂದು ಪ್ರಯೋಗಿಸುತ್ತಾರೆ. ಇಲ್ಲಿ ವತ್ಸಧಾವನವು ಗೋವಿನ ಧಾವನಕ್ಕೆ ನಿಮಿತ್ತವಾಗಿರಬಹುದು ಆದರೆ ವತ್ಸದ ಧಾವನವೇ ಬೇರೆ ಗೋವಿನಲ್ಲಿರುವ ಧಾವನವೇ ಬೇರೆ. ಎರಡೂ ಕೂಡ ಒಂದೇ ಆಗಲು ಸಾಧ್ಯವಿಲ್ಲ. ಅಥವಾ ತದುಪಾಧಿಕವೆಂದೂ ಕೂಡ ಯಾರೂ ಹೇಳುವುದಿಲ್ಲ. ಆದರಂತೆ ಪ್ರಾಣೋತ್ಕ್ರಮಣಕ್ಕಿಂತ ಅನ್ಯವಾದ ಉತ್ಕ್ರಮಣವೇ ಶ್ರುತಿಸಿದ್ಧವಾಗಿದೆ. ಪರಮಾತ್ಮನಿಗೆ ಉತ್ಕ್ರಮಣವನ್ನು ಸಿದ್ಧಾಂತಿಗಳಾದ ನೀವು ಹೇಗೆ ಹೇಳುತ್ತೀರಿ ಎಂದರೆ ರೂಪವಿಶೇಷದಿಂದ ಅದನ್ನು ಕೂಡಿಸುತ್ತೇವೆ. 'ಪ್ರಾಜ್ಞೇನಾತ್ಮನಾ' ಇತ್ಯಾದಿ ಶ್ರುತಿಯಿಂದಲೂ ಕೂಡ ಪರಮಾತ್ಮನಿಗೆ ರೂಪವಿಶೇಷದಿಂದ ಉತ್ಕ್ರಮಣವು ಸಿದ್ಧವಾಗಿದೆ. ಇನ್ನೂ

ಹೆಚ್ಚಿನ ವಿಚಾರವನ್ನು ನ್ಯಾಯಾಮೃತದಲ್ಲಿ ಜೀವಾಣುತ್ವವಾದವನ್ನು ಓದಿ ತಿಳಿದುಕೊಳ್ಳಬೇಕು.

**यच्चोक्तं बुद्धेर्यावत्संसार्यात्मभावित्वात्सुषुप्तौ विद्यमानाया एव पुंस्त्वादिवदभिव्यक्तत्वाच्च तस्या उत्क्रान्त्यादावुपाधित्वं युक्तमिति ''यावत्'' इति ''पुंस्त्व'' इति च सूत्रयोरर्थ इति**

ಅದ್ವೈತಿಗಳು 'ಯಾವದಾತ್ಮಭಾವಿತ್ವಾಚ್ಚ ನ ದೋಷಸ್ತದ್ದರ್ಶನಾತ್' ಎಂಬ ಸೂತ್ರಕ್ಕೆ ಹೀಗೆ ವ್ಯಾಖ್ಯಾನ ಮಾಡುತ್ತಾರೆ. ಬುದ್ಧಿಸಂಯೋಗವು ಆತ್ಮನಿಗೆ ಸಂಸಾರವಿರುವ ತನಕ ಇರುತ್ತದೆ. ಬುದ್ಧಿಸಂಯೋಗದಿಂದಲೇ ಆತ್ಮನಿಗೆ ಜ್ಞಾನ ಮೊದಲಾದವುಗಳು ಬರುತ್ತವೆ ಎಂಬುದಾಗಿ ಉಪನಿಷತ್ತು ಹೇಳುತ್ತಿದೆ. ಆದ್ದರಿಂದ ದೋಷವಿಲ್ಲ ಎಂದು.

'ಪುಂಸ್ತ್ವಾದಿವತ್ತ್ವಸ್ಯ ಸತೋಽಭಿವ್ಯಕ್ತಿಯೋಗಾತ್' ಎಂಬ ಸೂತ್ರಕ್ಕೆ ಹೀಗೆ ವ್ಯಾಖ್ಯಾನ ಮಾಡುತ್ತಾರೆ. ಸ್ತ್ರೀತ್ವ ಹಾಗೂ ಪುಂಸ್ತ್ವಗಳು ಯೌವನಾವಸ್ಥೆಯಲ್ಲಿಯೇ ಅಭಿವ್ಯಕ್ತವಾಗುತ್ತದೆ, ಬಾಲ್ಯಾವಸ್ಥೆಯಲ್ಲಿ ಅಭಿವ್ಯಕ್ತವಾಗುವುದಿಲ್ಲ. ಅದರಂತೆ ಬುದ್ಧಿಸಂಬಂಧವೂ ಕೂಡ ಸುಷುಪ್ತಿಯ ಅವಸ್ಥೆಯಲ್ಲಿ ಉಂಟಾಗುವುದಿಲ್ಲ. ಜಾಗ್ರದವಸ್ಥೆಯಲ್ಲಿ ಮಾತ್ರ ಉಂಟಾಗುತ್ತದೆ ಎಂದು ವ್ಯಾಖ್ಯಾನ ಮಾಡುತ್ತಾರೆ.

**तन्न । त्वयैवाविद्याया एव जीवोपाधित्वार्थं सुषुप्तावहमर्थाभावार्थं च तदा बुद्ध्यभावस्य साधितत्वात् ।**

ಈ ಎರಡೂ ಸೂತ್ರಗಳ ವ್ಯಾಖ್ಯಾನವು ಅಯುಕ್ತವಾಗಿದೆ. ಏಕೆಂದರೆ ಅದ್ವೈತಿಗಳಾದ ನೀವೇ ಅವಿದ್ಯೆಗೆ ಜೀವೋಪಾಧಿತ್ವವನ್ನು ಸಮರ್ಥನೆ ಮಾಡುವುದಕ್ಕಾಗಿ ಸುಷುಪ್ತಿಯಲ್ಲಿ ಅಹಮರ್ಥವೇ ಇರುವುದಿಲ್ಲ ಎಂದು ಸಮರ್ಥನೆ ಮಾಡುವುದಕ್ಕಾಗಿ ಸುಷುಪ್ತಿಯಲ್ಲಿ ಬುದ್ಧಿಯೇ ಇರುವುದಿಲ್ಲವೆಂದು ಸಾಧಿಸಿದ್ದೀರಿ.

ವಿವರಣೆ – ಕೆಲವು ಅದ್ವೈತಿಗಳು ಅಂತಃಕರಣವನ್ನೇ ಉಪಾಧಿ ಎನ್ನುತ್ತಾರೆ. ಇನ್ನು ಕೆಲವರು ಅವಿದ್ಯೆಯನ್ನೇ ಉಪಾಧಿ ಎಂದು ಕರೆಯುತ್ತಾರೆ. ಆದರೆ ಅವಿದ್ಯೆಯೇ ಮುಖ್ಯವಾದ ಉಪಾಧಿ ಎಂಬುದು ಅದ್ವೈತಿಗಳ ಮುಖ್ಯ ಸಿದ್ಧಾಂತ. ಈ ವಿಷಯವನ್ನು ಸಮರ್ಥನೆ ಮಾಡುವಾಗ ಅದ್ವೈತಿಗಳು ಅಂತಃಕರಣಕ್ಕೆ ಉಪಾಧಿತ್ವವನ್ನು ನಿರಾಕರಣೆ ಮಾಡಿ ಅವಿದ್ಯೆಗೆ ಮಾತ್ರ ಉಪಾಧಿತ್ವವನ್ನು ಸಮರ್ಥನೆ ಮಾಡುವುದಕ್ಕಾಗಿ ಸುಷುಪ್ತಿಯ ಅವಸ್ಥೆಯಲ್ಲಿ ಅಂತಃಕರಣವನ್ನೇ ಇಲ್ಲವೆಂದು ಸಮರ್ಥನೆ ಮಾಡುತ್ತಾರೆ. ಪ್ರಕೃತ ಸುಷುಪ್ತಿಯಲ್ಲಿಯೂ ಅಂತಃಕರಣವಿರುತ್ತದೆಂದು ಹೇಳಿದರೆ ಅಂತಃಕರಣವು ಉಪಾಧಿಯಲ್ಲವೆಂದು ನಿರಾಕರಣೆ ಮಾಡಲು ಸಾಧ್ಯವೇ ಆಗುವುದಿಲ್ಲ. ಮತ್ತು ಸುಷುಪ್ತಿಯ ಅವಸ್ಥೆಯಲ್ಲಿ ಅಹಮರ್ಥವೂ ಕೂಡ ಇರುವುದಿಲ್ಲವೆಂದು ಅದ್ವೈತಿಗಳು ಹೇಳುತ್ತಾರೆ. ಇದಕ್ಕಾಗಿಯೂ ಕೂಡ ಬುದ್ಧಿಯನ್ನು ಇಲ್ಲವೆಂದು ಅವರು ಸಮರ್ಥಿಸಬೇಕು. ಆದ್ದರಿಂದ ಸುಷುಪ್ತಿಯ ಅವಸ್ಥೆಯಲ್ಲಿ ಬುದ್ಧಿಯೇ ಇಲ್ಲದ ಕಾರಣ ಸಂಸಾರವಿರುವ ತನಕ ಬುದ್ಧಿಯ ಸಂಯೋಗವು ಇದ್ದೇ ಇರುತ್ತದೆಂಬ 'ಯಾವದಾತ್ಮಭಾವಿತ್ವಾತ್' ಎಂಬ ವ್ಯಾಖ್ಯಾನವು ಹಾಗೂ 'ಪುಂಸ್ತ್ವಾದಿವತ್' ಎಂಬ ಸೂತ್ರದ ವ್ಯಾಖ್ಯಾನವು ಅಯುಕ್ತವಾಯಿತು.

**यच्चोक्तं नच मन एव नास्तीति शङ्क्यम् । तथात्वे बाह्येन्द्रियसम्प्रयोगादि-सामग्रीदशायां मनोवधानानवधानाभ्यामुपलब्ध्यनुपलब्धी इति व्यवस्थित्यसम्भवेन**

**तद्दशायां नित्यमुपलब्धिरनुपलब्धिर्वा स्यादित्यतिप्रसङ्गनिरासाय मनसोऽङ्गीकार्यत्वादिति ''नित्योपलब्ध्यनुपलब्धि'' इत्यादिसूत्रार्थ इति**

ಅದ್ವೈತಿಗಳು 'ನಿತ್ಯೋಪಲಬ್ಧಿ' ಇತ್ಯಾದಿ ಸೂತ್ರಕ್ಕೆ ಹೀಗೆ ವ್ಯಾಖ್ಯಾನ ಮಾಡುತ್ತಾರೆ. ಮನಸ್ಸೇ ಇಲ್ಲವೆಂದು ಆಕ್ಷೇಪ ಮಾಡಬಾರದು. ಹಾಗಾದಲ್ಲಿ ಬಾಹ್ಯವಾದ ಚಕ್ಷುರಾದಿ ಇಂದ್ರಿಯಗಳ ಸನ್ನಿಕರ್ಷವು ಆತ್ಮನಿಗೆ ಸದಾ ಇರುತ್ತದೆ. ಏಕೆಂದರೆ ಆತ್ಮನು ವಿಭುವಾಗಿದ್ದಾನೆ. ಆದ್ದರಿಂದ ಜ್ಞಾನವೂ ಕೂಡ ನಿರಂತರ ಬರಬೇಕಾದೀತು. ಇವುಗಳಿದ್ದರೂ ಕೂಡ ಜ್ಞಾನ ಬರುವುದಿಲ್ಲವೆಂದು ಹೇಳಿದರೆ ಎಂದೂ ಕೂಡ ಜ್ಞಾನವೇ ಬಾರದಿರಬೇಕಾದೀತು ಎಂದು. ಈ ಆಕ್ಷೇಪದ ಪರಿಹಾರಕ್ಕಾಗಿ ಮನಸ್ಸಿನ ಅವಧಾನವಿದ್ದಾಗ ಮಾತ್ರ ಬಾಹ್ಯಜ್ಞಾನವೂ ಬರುತ್ತದೆ, ಮನಸ್ಸು ನಿಷ್ಕ್ರಿಯವಾದಾಗ ಬಾಹ್ಯ ಜ್ಞಾನ ಬರುವುದಿಲ್ಲ ಎಂಬ ಸಮಾಧಾನವನ್ನು ಹೇಳಿ ನಿತ್ಯವಾಗಿಯೂ ಉಪಲಬ್ಧವಾಗಲಿ, ಅಥವಾ ಅನುಪಲಬ್ಧವಾಗಲಿ ಎಂಬ ಅತಿಪ್ರಸಂಗವನ್ನು ಪರಿಹರಿಸಬೇಕು. ಹೀಗೆ ಮನಸ್ಸನ್ನು ಅಂಗೀಕರಿಸುವುದು ಅತ್ಯಂತ ಅನಿವಾರ್ಯವೆಂದು 'ನಿತ್ಯೋಪಲಬ್ಧ್ಯನುಪಲಬ್ಧಿಃ' ಎಂಬ ಸೂತ್ರಾರ್ಥವೆಂದು ಅದ್ವೈತಿಗಳು ವ್ಯಾಖ್ಯಾನ ಮಾಡಿದ್ದಾರೆ.

**तन्न । अतीन्द्रियचक्षुरादेरसत्त्वमशङ्कित्वा साक्षिसिद्धमनस एवासत्त्व-शङ्काबीजाभावात् । सौत्रनित्यशब्दास्वारस्यात् ।**

ಅದ್ವೈತಿಗಳ ಈ ವ್ಯಾಖ್ಯಾನವು ಅಯುಕ್ತವಾಗಿದೆ. ಚಕ್ಷುರಾದಿ ಇಂದ್ರಿಯಗಳಿಗೆ ಅಸತ್ವವನ್ನು ಆಶಂಕೆ ಮಾಡದೇ ಸಾಕ್ಷಿಸಿದ್ಧವಾದ ಮನಸ್ಸಿಗೆ ಮಾತ್ರ ಅಸತ್ವವನ್ನು ಆಶಂಕೆ ಮಾಡಲು ಕಾರಣವಿಲ್ಲ. ಮತ್ತು ಸೂತ್ರದಲ್ಲಿರುವ ನಿತ್ಯ ಶಬ್ದವು ಅಸ್ವರಸವಾಗುತ್ತದೆ.

ವಿವರಣೆ – ಮನಸ್ಸು ಹೇಗೆ ಅತೀಂದ್ರಿಯವೋ ಅದರಂತೆ ಚಕ್ಷುರಾದಿ ಇಂದ್ರಿಯಗಳೂ ಕೂಡ ಅತೀಂದ್ರಿಯವಾಗಿವೆ. ಹೀಗೆ ಎಲ್ಲಾ ಇಂದ್ರಿಯಗಳೂ ಕೂಡ ಅತೀಂದ್ರಿಯವೇ ಆಗಿರಬೇಕಾದರೆ ಚಕ್ಷುರಾದಿ ಇಂದ್ರಿಯಗಳಲ್ಲಿ ಅಸತ್ವವನ್ನು ಆಶಂಕೆ ಮಾಡಿಕೊಳ್ಳದೇ ಮನಸ್ಸಿಗೆ ಮಾತ್ರ ಅಸತ್ವವನ್ನು ಆಶಂಕೆ ಮಾಡಿಕೊಂಡಿರುವುದು ಅಯುಕ್ತವಾಗಿದೆ. ಮತ್ತು ಮನಸ್ಸು ಸಾಕ್ಷಿಸಿದ್ಧವಾಗಿದೆ. ಸಾಕ್ಷಿಸಿದ್ಧವಾದ ಮನಸ್ಸಿನ ಬಗ್ಗೆ ಅಸತ್ವವನ್ನು ಆಶಂಕೆ ಮಾಡಿಕೊಳ್ಳಲು ಯಾವುದೇ ಕಾರಣವೇ ಇಲ್ಲ.

ಮತ್ತು ಸೂತ್ರದಲ್ಲಿರುವ ನಿತ್ಯಶಬ್ದಾರ್ಥಕ್ಕೆ ನಿಮ್ಮ ಸಿದ್ಧಾಂತದಲ್ಲಿ ಸ್ವಾರಸ್ಯವೇ ಇಲ್ಲ. ಏಕೆಂದರೆ ನಿತ್ಯ ಎಂದರೆ 'ಉತ್ತರಾವಧಿಶೂನ್ಯತ್ವ' ಅಥವಾ 'ಧ್ವಂಸ ಅಪ್ರತಿಯೋಗಿ' ಎಂದರ್ಥ. ಈ ಅರ್ಥದಲ್ಲಿಯೇ ನಿತ್ಯಶಬ್ದವು ಪ್ರಸಿದ್ಧವಾಗಿದೆ. ಆದರೆ ನೀವು ಈ ಅರ್ಥದಲ್ಲಿ ನಿತ್ಯಶಬ್ದವನ್ನು ಪ್ರಯೋಗ ಮಾಡಿಯೇ ಇಲ್ಲ. ನಿಯಮ ಎಂಬರ್ಥವನ್ನು ಮಾಡಿರುವಿರಿ. ಈ ಅರ್ಥವು ಪ್ರಕೃತ ಅಸ್ವರಸವಾಗಿದೆ.

**सौत्रान्यथाशब्दस्य ''पुंस्त्वादिवत्'' इति पूर्वसूत्रोक्तावरणविरहवाचिताया एवोचितत्वाच्च । उक्तरीत्या मनःसिद्धावपि त्वन्मते तार्किकमत इवाणुत्वाभावेन युगपदनेकेन्द्रियसम्बन्धसम्भवेन तद्दशायां नित्योपलब्धिप्रसङ्गाच्च ।**

ಸೂತ್ರದಲ್ಲಿರುವ ಅನ್ಯಥಾ ಶಬ್ದಕ್ಕೆ 'ಪುಂಸ್ತ್ವಾದಿವತ್' ಎಂಬ ಪೂರ್ವಸೂತ್ರದಲ್ಲಿ ಪ್ರಸಕ್ತವಾದ ಆವರಣವಿರಹ ಎಂಬರ್ಥವನ್ನೇ ಸ್ವೀಕರಿಸುವುದು ಸಂಗತವಾಗುತ್ತದೆ. 'ಮನಸ್ಸನ್ನು ಒಪ್ಪದಿದ್ದರೆ'

ಎಂಬರ್ಥವನ್ನು ಒಪ್ಪಿದರೆ ಅಸಂಗತವಾಗುತ್ತದೆ.

ಮತ್ತು ಹಿಂದೆ ಹೇಳಿದಂತೆ ನಿಮ್ಮ ಪ್ರಕಾರ ಮನಸ್ಸು ಸಿದ್ಧವಾದರೂ ಕೂಡ ನಿತ್ಯೋಪಲಬ್ಧಿ ಪ್ರಸಂಗ ದೋಷವು ನಿಮಗೆ ತಪ್ಪಿದ್ದಲ್ಲ. ಏಕೆಂದರೆ ತಾರ್ಕಿಕರಂತೆ ನೀವೂ ಮನಸ್ಸನ್ನು ಅಣುವೆಂದು ಒಪ್ಪಿರುವುದಿಲ್ಲ. ಆದ್ದರಿಂದ ಆ ಮನಸ್ಸಿಗೆ ಒಂದೇ ಕಾಲದಲ್ಲಿ ಅನೇಕ ಇಂದ್ರಿಯಗಳ ಸಂಪರ್ಕವು ಆಗಬಹುದು. ಆ ಸಂದರ್ಭದಲ್ಲಿ ನಿತ್ಯೋಪಲಬ್ಧಿ ಪ್ರಸಂಗವನ್ನು ಪರಿಹರಿಸಿಕೊಳ್ಳಲು ನಿಮ್ಮಿಂದ ಸಾಧ್ಯವಾಗುವುದಿಲ್ಲ.

**ವಿವರಣೆ** – ನಮ್ಮ ಸಿದ್ಧಾಂತದಲ್ಲಿ 'ಪುಂಸ್ತ್ವಾದಿವತ್ವಸ್ಯ ಸತೋಽಭಿವ್ಯಕ್ತಿಯೋಗಾತ್' ಎಂಬ ಸೂತ್ರಕ್ಕೆ ಜ್ಞಾನಾನಂದಾದಿಗುಣಗಳು ಸಂಸಾರದಲ್ಲಿ ಏಕೆ ಅಭಿವ್ಯಕ್ತವಾಗುವುದಿಲ್ಲ ಎಂದರೆ ಅನುಭವಕ್ಕೆ ಅಡ್ಡಿಯಾದ ಆವರಣವು ಇರುತ್ತದೆ. ಮೊದಲೇ ಇರುವ ಪುಂಸ್ತ್ವವು ಯೌವನದಲ್ಲಿ ಹೇಗೆ ಅಭಿವ್ಯಕ್ತವಾಗುತ್ತದೋ ಅದರಂತೆ ಮೊದಲೇ ಇರುವ ಜ್ಞಾನಾನಂದಾದಿಗಳು ಮೋಕ್ಷದಲ್ಲಿ ಅಭಿವ್ಯಕ್ತವಾಗುತ್ತದೆ ಎಂಬರ್ಥವನ್ನು ಹೇಳಿ ಈ ಸೂತ್ರದಲ್ಲಿರುವ 'ಅನ್ಯಥಾ' ಎಂಬ ಪದಕ್ಕೆ ಒಂದುವೇಳೆ ಆವರಣವನ್ನು ಒಪ್ಪದಿದ್ದರೆ ಎಂಬರ್ಥವನ್ನು ಹೇಳಿ ವ್ಯಾಖ್ಯಾನ ಮಾಡಿದ್ದೇವೆ. ಒಂದುವೇಳೆ ಜೀವಾದಿಗಳು ಜ್ಞಾನಾನಂದಸ್ವರೂಪರೆಂದು ಒಪ್ಪಿ ಆವರಣವನ್ನು ಒಪ್ಪದಿದ್ದರೆ ಆಗ ಸ್ವರೂಪಭೂತವಾದ ಸುಖಾದಿಗಳು ಯಾವಾಗಲೂ ಉಪಲಬ್ಧವಾಗಬೇಕಾದೀತು. ಅಯೋಗ್ಯರಿಗೆ ಸ್ವರೂಪಭೂತವಾದ ದುಃಖಗಳು ಯಾವಾಗಲೂ ಬರಬೇಕಾದೀತು. ನಿತ್ಯಸಂಸಾರಿಗಳಿಗೆ ಸುಖ-ದುಃಖಗಳ ಅನುಭವ ಏಕಕಾಲದಲ್ಲಿ ಬರುತ್ತಲೇ ಇರಬೇಕಾದೀತು. ಹೀಗೆ ಅನ್ಯಥಾ ಎಂಬ ಶಬ್ದಕ್ಕೆ ಪೂರ್ವಸೂತ್ರದಲ್ಲಿ ಯಾವ ಆವರಣವನ್ನು ಹೇಳಿದ್ದೇವೋ ತದ್ವಿರಹವನ್ನೇ ವಿವಕ್ಷಿಸಬೇಕು. ಈ ಅರ್ಥವು ಅತ್ಯಂತ ಸ್ವರಸವಾಗುತ್ತವೆ. ಆದರೆ ನೀವು 'ಮನಸ್ಸೆಂಬ ಇಂದ್ರಿಯವನ್ನೇ ಅಂಗೀಕಾರ ಮಾಡದಿದ್ದರೆ' ಎಂಬರ್ಥವನ್ನು ಹೇಳುತ್ತಿರುವಿರಿ. ಪೂರ್ವಸೂತ್ರದಲ್ಲಿ ಪ್ರಕೃತವಾದುದನ್ನು ವಿವಕ್ಷಿಸಿ 'ಅನ್ಯಥಾ' ಎಂಬುದನ್ನು ವ್ಯಾಖ್ಯಾನ ಮಾಡಲು ಬರುತ್ತಿರುವಾಗ ಅಪ್ರಕೃತವಾದುದನ್ನು 'ಅನ್ಯಥಾ' ಎಂಬ ಶಬ್ದಕ್ಕೆ ಅರ್ಥವನ್ನು ಹೇಳುವುದು ಅತ್ಯಂತ ಅಸಂಗತವಾಗುತ್ತದೆ.

ಮನಸ್ಸು ಒಪ್ಪದಿದ್ದರೆ ಯಾವಾಗಲೂ ವಿಷಯೋಪಲಬ್ಧಿಯು ಆಗಬೇಕಾದೀತು. ಅದಕ್ಕೋಸ್ಕರ ಮನಸ್ಸನ್ನು ಒಪ್ಪಬೇಕು ಎಂದು ಅದ್ವೈತಿಗಳು ವ್ಯಾಖ್ಯಾನ ಮಾಡಿದ್ದೂ ಕೂಡ ಅಯುಕ್ತವಾಗಿದೆ. ಏಕೆಂದರೆ ನೀವು ಮನಸ್ಸನ್ನು ಒಪ್ಪಿದರೂ ಕೂಡ ನಿತ್ಯೋಪಲಬ್ಧಿ ಹಾಗೂ ಅನುಪಲಬ್ಧಿ ದೋಷಗಳು ಬಂದೇ ಬರುತ್ತವೆ. ತಾರ್ಕಿಕರಂತೆ ನೀವು ಮನಸ್ಸನ್ನು ಅಣುವೆಂದು ಒಪ್ಪಿರುವುದಿಲ್ಲ. ವ್ಯಾಪ್ತನಾಗಿದ್ದಾನೆಂದು ಅಂಗೀಕಾರ ಮಾಡುತ್ತಿರುವಿರಿ. ವ್ಯಾಪ್ತನಾಗಿದ್ದರಿಂದ ಒಂದೆ ಕಾಲದಲ್ಲಿ ಅನೇಕ ಇಂದ್ರಿಯಗಳ ಸಂಬಂಧವು ಆತ್ಮನಿಗೆ ಆಗುತ್ತದೆ. ಈ ಸಂದರ್ಭದಲ್ಲಿ ನಿತ್ಯೋಪಲಬ್ಧಿ ದೋಷವು ಬರಲಿ ಎಂಬುದು ಆಕ್ಷೇಪ.

**यदि चानेकेन्द्रियसम्बन्धे सत्यपि मनस्येवावधानाख्यः कश्चिद्विशेषः कल्प्यते तर्हि क्लृप्त आत्मनि बाह्येन्द्रिये वा स कल्प्यताम् ।**

ಒಂದುವೇಳೆ ಮನಸ್ಸಿಗೆ ಅನೇಕ ಇಂದ್ರಿಯಗಳ ಜೊತೆ ಸಂಬಂಧವು ಆದಾಗ ಅವಧಾನ ಎಂಬ ವಿಶೇಷವನ್ನು ಕಲ್ಪನೆ ಮಾಡುವುದಾದರೆ ಮೊದಲೇ ಸಿದ್ಧವಾದ ಆತ್ಮನಲ್ಲಿ ಅಥವಾ ಬಾಹ್ಯೇಂದ್ರಿಯದಲ್ಲೇ ಅಂತಹ ಅವಧಾನ ಎಂಬ ವಿಶೇಷವನ್ನು ಕಲ್ಪನೆ ಮಾಡಿದರೆ ಸಾಕು. ಏಕೆಂದರೆ ಹೊಸದಾದ ಒಂದು ಧರ್ಮಿಯನ್ನು ಕಲ್ಪನೆ ಮಾಡುವುದಕ್ಕಿಂತ ಸಿದ್ಧವಾದ ವಸ್ತುವಿನಲ್ಲಿ ಧರ್ಮ ಮಾತ್ರವನ್ನು ಕಲ್ಪನೆ ಮಾಡುವುದು ಲಘುಭೂತವಾಗಿದೆ.

ಪುಂಸ್ತ್ವಾಧಿಕರಣ (೨-೩-೧೬)

**प्रकाशः –**

गत्यादिकं बुद्ध्यसंवलितचेतननिष्ठमेवेति साधयति ।। **किञ्चेत्यादिना** ।। अविद्यानिवृत्त्यनन्तरं गत्युक्तेरित्यन्तेन ।। **परब्रह्मतेति** ।। तथाचतद्गन्तुःशुद्धत्वमेवेति भावः ।

ಗಮನಾಗಮನಾದಿಗಳು ಬುದ್ಧಿಸಂವಲಿತವಾದ ಚೇತನನಲ್ಲಿಯೇ ಇರುತ್ತವೆ ಎಂಬುದನ್ನು 'ಕಿಂಚ' ಇತ್ಯಾದಿ ವಾಕ್ಯದಿಂದ ಪೂರ್ವಪಕ್ಷಿಗಳು ಸಮರ್ಥನೆ ಮಾಡುತ್ತಿದ್ದಾರೆ. 'ಅವಿದ್ಯಾನಿವೃತ್ತ್ಯನಂತರಂ ಗತ್ಯುಕ್ತೇಃ' ಎಂಬಲ್ಲಿಯ ತನಕ ಈ ವಿಷಯವೇ ಪ್ರಸಕ್ತವಾಗಿವೆ.

ಪರಬ್ರಹ್ಮನನ್ನು ಹೊಂದುವವನು ಶುದ್ಧಾತ್ಮನೇ ಆಗಬೇಕು ಎಂಬ ಅಭಿಪ್ರಾಯವನ್ನು 'ಪರಬ್ರಹ್ಮತಾ' ಎಂಬುದರಿಂದ ತಿಳಿಸಿದ್ದಾರೆ.

**प्रकाशः** – विरुद्धांश मनूद्यनिराह – **यच्चोक्तमिति** ।। तद्गुणसूत्रभाष्य इत्यर्थः।। **स्वाभाविकेति** ।। आनन्त्याय अनन्तःकल्पत इत्यर्थः ।

ವಿರುದ್ಧವಾದ ಅಂಶವನ್ನು ಮಾತ್ರ ಅನುವಾದ ಮಾಡಿ ನಿರಾಕರಣೆ ಮಾಡಲು 'ಯಚ್ಚೋಕ್ತಂ' ಇತ್ಯಾದಿಯಾಗಿ ಹೇಳಿರುತ್ತಾರೆ. ತದ್ಗುಣಸೂತ್ರಭಾಷ್ಯದಲ್ಲಿ ಎಂದರ್ಥ. ಸ್ವಾಭಾವಿಕ ಎಂದರೆ 'ಆನಂತ್ಯಾಯ ಅನಂತಃ ಕಲ್ಪತೇ' ಎಂದರ್ಥ.

**प्रकाशः** – ननु ब्रह्मणस्सर्वगतस्य कथमुत्क्रमणमित्यत आह – **परमात्मनोपीति**।। विवृतमेतद्भूमनये । न्यायामृतेद्वितीयपरिच्छेद इत्यर्थः । तद्दशायां सामग्रीदशायामित्यर्थः ।। **नित्यशब्देति** ।। तस्योत्तरावधिशून्यवाचित्वादितिभावः।।

ಸರ್ವಗತನಾದ ಬ್ರಹ್ಮನಿಗೆ ಉತ್ಕ್ರಮಣವು ಹೇಗೆ ಯುಕ್ತವಾಗುತ್ತದೆ? ಎಂಬ ಪ್ರಶ್ನೆಗೆ 'ಪರಮಾತ್ಮನೋಽಪಿ' ಇತ್ಯಾದಿ ವಾಕ್ಯವು ಹೊರಟಿದೆ. ಇದನ್ನು ಭೂಮಾಧಿಕರಣದಲ್ಲಿ ವಿವರಿಸಿದ್ದೇವೆ. ನ್ಯಾಯಾಮೃತದಲ್ಲಿರುವ ದ್ವಿತೀಯಪರಿಚ್ಛೇದದಲ್ಲಿ ಜೀವಾಣುತ್ವವಾದದ ವಿಸ್ತಾರವಿದೆ ಎಂದು ತಿಳಿಯಬೇಕು. 'ತದ್ದಶಾಯಾಂ' ಎಂಬ ಪದಕ್ಕೆ ಸಾಮಗ್ರಿ ಇರುವ ಸಂದರ್ಭದಲ್ಲಿ ಎಂದರ್ಥ. ನಿತ್ಯಶಬ್ದವು 'ಉತ್ತರಾವಧಿಶೂನ್ಯ' ಎಂಬರ್ಥಕ್ಕೆ ವಾಚಕವಾಗಿದೆ.

**तात्पर्यचन्द्रिका**

**केचित्तु ''ज्ञोतः'' इत्यादि ''नित्योपलब्धिः'' इत्यन्तानि चतुर्दशसूत्राण्येकमधिकरणम् । तत्र जीवस्य ज्ञातृत्वं स्वाभाविकम् । नतु तार्किकमत इवागन्तुकम् । नापि सौगतमत इव ज्ञानस्वभावत्वमिति ''ज्ञोत'' इति सूत्रार्थः ।**

ರಾಮಾನುಜರ ಪ್ರಕಾರ ಅಧಿಕರಣ ಶರೀರ ಹೀಗಿದೆ – 'ಜ್ಞೋಽತ ಏವ' ಎಂಬ ಸೂತ್ರದಿಂದ ಪ್ರಾರಂಭ ಮಾಡಿ 'ನಿತ್ಯೋಪಲಬ್ಧಿ' ಎಂಬ ಸೂತ್ರದ ತನಕ ಒಟ್ಟು ಹದಿನಾಲ್ಕು ಸೂತ್ರಗಳು ಸೇರಿ ಒಂದೇ ಅಧಿಕರಣವೆಂದು ಇವರು ಪರಿಗಣಿಸಿದ್ದಾರೆ.

'ಜ್ಞೋಽತ ಏವ' - ಜೀವನ ಜ್ಞಾತೃತ್ವವು ಸ್ವಾಭಾವಿಕವೇ ಆಗಿದೆ. ತಾರ್ಕಿಕ ಮತದಂತೆ ಆಗಂತುಕವಲ್ಲ. ಸೌಗತ ಮತದಂತೆ ಜ್ಞಾನಸ್ವಭಾವತ್ವರೂಪವೂ ಅಲ್ಲ. ಇಷ್ಟು ಈ ಸೂತ್ರದ ಅರ್ಥ.

**''उत्क्रान्ति'' इत्यादीनि तु तदुपयोगित्वेनाणुत्वं जीवस्य प्रतिपादयन्ति सिद्धान्तसूत्राण्येव । ज्ञातृस्वभावस्य जीवस्य सर्वगतत्वे हि सर्वं तत्सम्बन्धात्सदा ज्ञायेत ।**

'ಉತ್ಕ್ರಾಂತಿಗತ್ಯಾಗತೀನಾಂ' ಇತ್ಯಾದಿ ಸೂತ್ರಗಳು ಜೀವನಲ್ಲಿರುವ ಜ್ಞಾತೃತ್ವಕ್ಕೆ ಉಪಯೋಗಿಯಾಗಿ ಅಣುತ್ವವನ್ನು ಜೀವನಲ್ಲಿ ಪ್ರತಿಪಾದನೆ ಮಾಡುತ್ತಿವೆ. ಆದ್ದರಿಂದಲೇ ಎಲ್ಲವೂ ಸಿದ್ಧಾಂತ ಸೂತ್ರಗಳೇ ಆಗಿವೆ. ಜ್ಞಾನಸ್ವಭಾವನಾದ ಜೀವನು ಸರ್ವಗತನಾದಲ್ಲಿ ಅವನ ಸಂಬಂಧ ಸಕಲ ಪದಾರ್ಥಗಳಿಗಿವೆ ಎಂದು ಹೇಳಿದಂತಾಯಿತು. ಆಗ ಸಕಲ ಪದಾರ್ಥಗಳು ನಿರಂತರವಾಗಿ ಜೀವನಿಗೆ ತಿಳಿಯುತ್ತಲೇ ಇರಬೇಕಾದ ಪ್ರಸಂಗ ಬರುತ್ತದೆ. ಆದ್ದರಿಂದ ಜೀವನನ್ನು ಅಣುವೆಂದು ಒಪ್ಪಬೇಕು.

**''स्वात्मना'' इति सूत्रस्य तु उत्क्रान्तिर्यद्यप्यचलतोऽपि देहस्वाम्यनिवृत्त्या युक्ता । उत्तरे गत्यागती तु स्वात्मनैव । न ह्यचलतो गत्यागती इत्यर्थः ।**

'ಸ್ವಾತ್ಮನಾ ಚೋತ್ತರಯೋಃ' ಎಂಬ ಸೂತ್ರಕ್ಕೆ ಹೀಗೆ ವ್ಯಾಖ್ಯಾನ ಮಾಡಿದ್ದಾರೆ. ಉತ್ಕ್ರಾಂತಿ, ಗತಿ, ಆಗತಿ ಈ ಮೂರರಲ್ಲಿ ಉತ್ಕ್ರಾಂತಿಯನ್ನು ಆತ್ಮನು ವಿಭುವಾದರೂ ಕೂಡ ಕೂಡಿಸಲು ಬರುತ್ತದೆ. ಏಕೆಂದರೆ ಆತ್ಮನು ಸರ್ವತ್ರ ವ್ಯಾಪ್ತನಾಗಿದ್ದರೂ ಕೂಡ ದೇಹಸ್ವಾಮ್ಯವು ನಿವೃತ್ತಿಯಾಗುವುದರಿಂದ ಉತ್ಕ್ರಾಂತಿಯು ಆಗುತ್ತದೆಂದು ವ್ಯಾಖ್ಯಾನ ಮಾಡಬಹುದು. ಆದರೆ ಗತಿ ಮತ್ತು ಆಗತಿಗಳನ್ನು ವಿಭುವೆಂದು ಒಪ್ಪಿದಾಗ ಹೇಳಲು ಸಾಧ್ಯವೇ ಇಲ್ಲ. ಅಚಲವಾದ ವ್ಯಕ್ತಿಯಲ್ಲಿ ಗತಿ ಮತ್ತು ಆಗತಿಗಳು ಸರ್ವಥಾ ಯುಕ್ತವಾಗುವುದಿಲ್ಲ.

**''स्वशब्द'' इति सूत्रस्य तु ''एषोऽणुरात्मा'' इति साक्षादेवाणुत्ववाचिशब्दात् ''बालाग्रशतभागस्येत्युन्मानाच्चाणुर्जीव इत्यर्थः ।**

'ಸ್ವಶಬ್ದೋನ್ಮಾನಾಭ್ಯಾಂ ಚ' ಈ ಸೂತ್ರಕ್ಕೆ ಹೀಗೆ ವ್ಯಾಖ್ಯಾನ ಮಾಡಿದ್ದಾರೆ – ಸ್ವಶಬ್ದ ಎಂದರೆ ಅಣುತ್ವವಾಚಕ ಶಬ್ದವು 'ಏಷೋಽಣುರಾತ್ಮಾ' ಎಂಬ ಶ್ರುತಿಯಲ್ಲಿರುವುದರಿಂದ ಎಂದರ್ಥ. 'ಬಾಲಾಗ್ರಶತಭಾಗಸ್ಯ' ಎಂಬ ಶ್ರುತಿವಾಕ್ಯದಿಂದ ಇವನ ಪರಿಮಾಣವು ಪ್ರಮಾಣದಿಂದ ತಿಳಿಯಲಾಗದು ಎಂದು ಹೇಳಿರುವುದರಿಂದ ಜೀವನು ಅಣುರೂಪನಾಗಿದ್ದಾನೆ.

ವಿವರಣೆ – ವಿಶಿಷ್ಟಾದ್ವೈತಿಗಳು ಈ ಅಧಿಕರಣ ಸೂತ್ರದಲ್ಲಿ ಒಟ್ಟು ಹದಿನಾಲ್ಕು ಸೂತ್ರಗಳಿವೆ ಎಂದು ಹೇಳಿದ್ದಾರೆ. ಗ್ರಂಥಕಾರರು ಎಲ್ಲಾ ಸೂತ್ರಗಳ ವ್ಯಾಖ್ಯಾನವನ್ನು ಅನುವಾದ ಮಾಡಿಲ್ಲ. ಯಾವುದು ತಮಗೆ ಸಮ್ಮತವಲ್ಲವೋ ಮತ್ತು ಯಾವುದು ನಿರಾಕರಣೆಗೆ ಅರ್ಹವೋ ಆ ಸೂತ್ರಗಳ ಅರ್ಥವನ್ನಷ್ಟೇ ಅನುವಾದ

ಪುಂಸ್ತ್ವಾಧಿಕರಣ (೨-೩-೧೬)

ಮಾಡಿದ್ದಾರೆ.

**''व्यतिरेक'' इति सूत्रस्य तु पृथ्वी गन्धवतीतिवत् ''जानात्येवायं पुरुष'' इति श्रुतौ ज्ञानात्मनोरेकस्मिन् पदे प्रकृतिप्रत्ययाभ्यां विशेषणविशेष्यत्वनिर्देशाद्भेद इत्यर्थः ।**

'ವ್ಯತಿರೇಕೋ ಗಂಧವತ್ ತಥಾಚ ದರ್ಶಯತಿ'– 'ಪೃಥಿವೀ ಗಂಧವತೀ' ಎಂದು ಹೇಳಿದಾಗ ಪೃಥಿವಿಯೇ ಬೇರೆ ಅದರಲ್ಲಿರುವ ಗುಣವೇ ಬೇರೆ. ಅದರಂತೆ 'ಅಯಂ ಪುರುಷಃ ಜಾನಾತಿ' ಎಂದು ಹೇಳಿದಾಗ ಜ್ಞಾನವೇ ಬೇರೆ ಆತ್ಮನೇ ಬೇರೆ. ಆತ್ಮನಿಗಿಂತ ಜ್ಞಾನವು ಅತಿರಿಕ್ತವಾಗಿದೆ ಎಂಬುದು ಪ್ರಕೃತಿಪ್ರತ್ಯಯಗಳಿಂದಲೂ ಕೂಡ ತಿಳಿಯುತ್ತದೆ. ಜಾನಾತಿ ಎಂಬಲ್ಲಿ ತಿಙ್ ಪ್ರತ್ಯಯದಿಂದ ಕರ್ತೃತ್ವವು ಜ್ಞ ಎಂಬ ಪ್ರಕೃತಿಯಿಂದ ಜ್ಞಾನವು ತಿಳಿಯುತ್ತದೆ. ಇವು ವಿಶೇಷಣವಿಶೇಷ್ಯಭಾವಸಂಬಂಧವನ್ನು ಹೊಂದಿರುವುದರಿಂದ ಜ್ಞಾನ ಮತ್ತು ಜ್ಞಾತೃಗಳಿಗೆ ಭೇದವನ್ನು ಹೇಳಲೇಬೇಕು ಎಂಬುದು ಈ ಸೂತ್ರದ ಅರ್ಥ.

**''पृथक्'' इति सूत्रस्य तु ''नहि विज्ञातुर्विज्ञातेर्विपरिलोपो विद्यत'' इति श्रुतौ पदद्वयेन विशेषणविशेष्यत्वेन निर्देशाद्भेद इत्यर्थः ।**

'ಪೃಥಗುಪದೇಶಾತ್' - ಈ ಸೂತ್ರದಲ್ಲಿ ಜ್ಞಾನವು ಆತ್ಮನಿಗಿಂತ ಭಿನ್ನವಾಗಿದೆ ಎನ್ನಲು ಉಪನಿಷತ್ತಿನ ಆಧಾರದಿಂದ ಸಮರ್ಥನೆ ಮಾಡಲಾಗಿದೆ. 'ನಹಿ ವಿಜ್ಞಾತುಃ ವಿಜ್ಞಾತೇಃ ವಿಪರಿಲೋಪೋ ವಿದ್ಯತೇ' ಎಂಬ ಬೃಹದಾರಣ್ಯೋಪನಿಷತ್ತಿನಲ್ಲಿ ವಿಜ್ಞಾತೃವಾದ ಜೀವನಿಗೂ ವಿಜ್ಞಾನಕ್ಕೂ ವಿಶೇಷಣವಿಶೇಷ್ಯ ಭಾವವನ್ನು ಹೇಳಿ ನಿರ್ದೇಶ ಮಾಡಲಾಗಿದೆ. ಆದ್ದರಿಂದ ಜ್ಞಾತೃ ಹಾಗೂ ಜ್ಞಾನಗಳಿಗೆ ಭೇದವನ್ನು ಒಪ್ಪಬೇಕು.

**''तद्गुण'' इत्यादिसूत्रयोस्तु आत्मनो ज्ञानगुणसारत्वाज्ज्ञानस्य यावदात्मभावित्वाच्च ज्ञातर्या-त्मनि श्रुतिषु ज्ञानत्वव्यपदेश इत्यर्थः ।**

'ತದ್ಗುಣಸಾರತ್ವಾತ್ ತು ತದ್ವ್ಯಪದೇಶಃ ಪ್ರಾಜ್ಞವತ್' - ಇತ್ಯಾದಿ ಸೂತ್ರಗಳ ವ್ಯಾಖ್ಯಾನವನ್ನು ಹೀಗೆ ಮಾಡಿದ್ದಾರೆ. ಆತ್ಮನು ಜ್ಞಾನಸ್ವರೂಪನಲ್ಲದಿದ್ದರೂ ಕೆಲವು ಶ್ರುತಿಗಳಲ್ಲಿ ಅವನನ್ನು ಜ್ಞಾನಸಾರನೆಂದು ಉಲ್ಲೇಖಿಸಲಾಗಿದೆ. ಇದು ಹೇಗೆ? ಎಂಬ ಪ್ರಶ್ನೆಗೆ ಈ ಸೂತ್ರವು ಉತ್ತರಿಸುತ್ತಿದೆ. ಆತ್ಮನಲ್ಲಿ ಅನೇಕ ಗುಣಗಳಿವೆ. ಆದರೆ ಆ ಎಲ್ಲ ಗುಣಗಳಲ್ಲಿ ಜ್ಞಾನವು ಅತ್ಯಂತ ಶ್ರೇಷ್ಠವಾಗಿದೆ. ಇಂತಹ ಶ್ರೇಷ್ಠವಾದ ಜ್ಞಾನವೆಂಬ ಗುಣವುಳ್ಳವನು ಆತ್ಮನಾಗಿದ್ದಾನೆಂಬ ಅಭಿಪ್ರಾಯದಲ್ಲಿ ಹಾಗೆ ಶ್ರುತಿಗಳಲ್ಲಿ ಜ್ಞಾನಸ್ವರೂಪವೆಂಬ ವ್ಯವಹಾರವಿದೆ. ಮತ್ತು ಇರುವಂತಹ ಆ ಜ್ಞಾನವೂ ಕೂಡ ಆತ್ಮ ಇರುವ ತನಕ ಇರುವುದರಿಂದ ಆತ್ಮನನ್ನು ಜ್ಞಾನರೂಪನೆಂದು ಶ್ರುತಿಗಳು ಹೇಳುತ್ತಿವೆ.

**''पुंस्त्व'' इति सूत्रस्य तु सुप्त्यादौ सतोऽप्यनभिव्यक्तस्य ज्ञानस्य जागरणादावभिव्यक्तेर्यावदात्मभावित्वसिद्धिरित्यर्थ इत्याहुः ।**

'ಪುಂಸ್ತ್ವಾದಿವತ್ತ್ವಸ್ಯ ಸತೋ ಅಭಿವ್ಯಕ್ತಿಯೋಗಾತ್'– ಈ ಸೂತ್ರದ ವ್ಯಾಖ್ಯಾನ ಹೀಗಿದೆ. ಸುಷುಪ್ತಿಯಲ್ಲಿ ಜ್ಞಾನವು ಇಲ್ಲದಕಾರಣ ಯಾವದಾತ್ಮಭಾವಿಯಾಗಿದೆ ಎಂದು ಹೇಗೆ ಹೇಳುವಿರಿ? ಎಂಬ ಪ್ರಶ್ನೆಗೆ ಈ ಸೂತ್ರವು ಉತ್ತರಿಸುತ್ತಿದೆ. ಜ್ಞಾನವು ಅನಭಿವ್ಯಕ್ತ ಸ್ವರೂಪದಿಂದ ಸುಷುಪ್ತಿಕಾಲದಲ್ಲೂ ಕೂಡ ಇದ್ದೇ ಇರುತ್ತದೆ. ಜಾಗರಾವಸ್ಥೆಯಲ್ಲಿ ಅದು ಅಭಿವ್ಯಕ್ತವಾಗುತ್ತದೆ. ಆದ್ದರಿಂದ ಆತ್ಮವಿರುವ ತನಕ ಜ್ಞಾನವು ಇದ್ದೇ ಇರುತ್ತದೆಂಬ ಪ್ರಮೇಯವು ಸಿದ್ಧವಾಗುತ್ತದೆ. ಹೀಗೆ ರಾಮಾನುಜರು ಸೂತ್ರಗಳ ವ್ಯಾಖ್ಯಾನವನ್ನು ಮಾಡಿದ್ದಾರೆ.

**तन्न । ''स्वरूपाण्येव जीवस्य विज्ञानघन एव'' इत्यादिश्रुत्या ''ज्ञानस्वरूपमत्यन्तनिर्मलं परमार्थत'' इत्यादि स्मृत्या च विरुद्धत्वेन ज्ञानस्वभावत्वनिरासायोगात् ।**

ರಾಮಾನುಜರ ಈ ಅಧಿಕರಣಶರೀರ ಹಾಗೂ ಸೂತ್ರಾರ್ಥಗಳು ಅಯುಕ್ತವಾಗಿವೆ. ಅದು ಹೀಗೆ – ಜೀವಾತ್ಮನು ಜ್ಞಾನಸ್ವರೂಪನಾಗಿಲ್ಲ ಎಂಬ ಅವರ ಸಮರ್ಥನೆಯೇ ಅಯುಕ್ತವಾಗಿದೆ. ಏಕೆಂದರೆ 'ಸ್ವರೂಪಾಣ್ಯೇವ ಜೀವಸ್ಯ ವಿಜ್ಞಾನ ಘನ ಏವ' ಇತ್ಯಾದಿ ಸೂತ್ರಗಳು ಜೀವಾತ್ಮನನ್ನು ವಿಜ್ಞಾನಘನ ಎಂದು ಕರೆಯುತ್ತಿವೆ. 'ಜ್ಞಾನಸ್ವರೂಪಮತ್ಯಂತನಿರ್ಮಲಂ ಪರಮಾರ್ಥತಃ' ಪಾರಮಾರ್ಥಿಕವಾಗಿ ಅತ್ಯಂತ ನಿರ್ಮಲವಾದ ಜ್ಞಾನಸ್ವರೂಪವುಳ್ಳವನಾಗಿದ್ದಾನೆ ಎಂಬುದಾಗಿ ಸ್ಮೃತಿವಾಕ್ಯವೂ ಕೂಡ ಹೇಳುತ್ತಿದೆ. ಈಗ ಜ್ಞಾನಸ್ವರೂಪನಲ್ಲವೆಂದು ಹೇಳಿದರೆ ಶ್ರುತಿಸ್ಮೃತಿಗಳ ವಿರೋಧವು ಪ್ರಾಪ್ತವಾಗುತ್ತದೆ. ಆದ್ದರಿಂದ ಜ್ಞಾನಸ್ವಭಾವತ್ವವನ್ನು ನಿರಾಸ ಮಾಡಿದ್ದು ತಪ್ಪು.

**ज्ञातृस्वभावस्यात्मनोऽणुत्वपक्षे तत्सम्बद्धस्य विभोराकाशेश्वरादेर्नित्यमप्रकाशवद्विभुत्वपक्षेऽपि तत्सम्बद्धस्याप्रकाशोपपत्त्याऽणुत्वस्य ज्ञातृस्वभावत्वेऽनुपयोगाच्च । आनन्दादेः स्वाभाविकत्वमनुक्त्वा ज्ञानस्यैव तदुक्तौ विशेषहेत्वभावाच्च ।**

ಜ್ಞಾತೃಸ್ವಭಾವನಾದ ಜೀವಾತ್ಮನು ವಿಭುವಾದಲ್ಲಿ ಸಕಲ ಪದಾರ್ಥಗಳ ಜ್ಞಾನ ನಿರಂತರ ಬರುತ್ತಲೇ ಇರಬೇಕಾದೀತು ಎಂದು ಆಕ್ಷೇಪ ಮಾಡಿಕೊಂಡು ಅಣುತ್ವವನ್ನು ಸಮರ್ಥನೆ ಮಾಡಿದ್ದು ಕೂಡ ತಪ್ಪು. ಏಕೆಂದರೆ ಜೀವನನ್ನು ಅಣು ಎಂದು ಒಪ್ಪಿದರೂ ಕೂಡ ಈ ದೋಷವನ್ನು ಪರಿಹರಿಸಿಕೊಳ್ಳಲು ಸಾಧ್ಯವಿಲ್ಲ. ಜೀವನು ಅಣುವಾದರೂ ಕೂಡ ವಿಭುವಾದ ಆಕಾಶ, ಕಾಲ, ಈಶ್ವರ ಇವುಗಳ ಸಂಬಂಧವು ಜೀವಾತ್ಮನಿಗೆ ಇದ್ದೇ ಇರುತ್ತವೆ. ಯಾವಾಗಲೂ ಸಂಬಂಧವಿದ್ದರೂ ಕೂಡ ಈಶ್ವರಾದಿಗಳ ಪ್ರಕಾಶವು ಜೀವನಿಗೆ ಉಂಟಾಗುತ್ತಿಲ್ಲ. ಈ ಸಮಸ್ಯೆಯನ್ನು ಪರಿಹರಿಸಿಕೊಳ್ಳಲು ನೀವು ಸಂಬಂಧವಾದರೂ ಕೂಡ ಜ್ಞಾನವು ಬಾರದಿರಲು ಬೇರೆ ಯಾವುದಾದರೂ ನಿಮಿತ್ತವನ್ನು ಹುಡುಕಲೇಬೇಕು. ಹಾಗಾದರೆ ಜೀವಾತ್ಮನು ವಿಭುವಾಗಿದ್ದಾನೆ ಎಂಬ ಪಕ್ಷದಲ್ಲೂ ಕೂಡ ಹೀಗೆ ಉತ್ತರವನ್ನು ನೀಡಬಹುದು. ಜ್ಞಾತೃಸ್ವಭಾವನಾದ ಜೀವಾತ್ಮನು ವಿಭುವಾಗಿದ್ದಾನೆ. ಅವನಿಗೆ ಸಕಲ ಪದಾರ್ಥಗಳ ಸಂಬಂಧವಿದೆ. ಆದರೂ ಕೂಡ ಜ್ಞಾನ ಬರುವುದಿಲ್ಲ. ಏಕೆಂದರೆ ಮನಸ್ಸಿನ ಅನವಧಾನ

ಮೊದಲಾದ ಕಾರಣಗಳಿಂದ ಎಂದು ಉತ್ತರಿಸಲು ಬರುತ್ತದೆ. ಆದ್ದರಿಂದ ಜೀವಾತ್ಮನು ಅಣುವೆಂದು ಒಪ್ಪುವುದು ಜ್ಞಾತೃಸ್ವಭಾವತ್ವಕ್ಕೆ ಅನುಪಯುಕ್ತವಾಗಿದೆ.

ಮತ್ತು ಜೀವನಲ್ಲಿರುವ ಜ್ಞಾನವೆಂಬ ಗುಣವು ಸ್ವಾಭಾವಿಕವಾಗಿವೆ. ಆದ್ದರಿಂದ ಜ್ಞಾನ ಸ್ವಭಾವನೆಂದು ಶ್ರುತಿಸ್ಮೃತಿಗಳು ಹೇಳುತ್ತಿವೆ ಎಂದು ವಿಶಿಷ್ಟಾದ್ವೈತಿಗಳು ವ್ಯಾಖ್ಯಾನ ಮಾಡಿದ್ದಾರೆ. ಇದೂ ಕೂಡ ತಪ್ಪು. ಜ್ಞಾನವು ಹೇಗೆ ಸ್ವಾಭಾವಿಕವೋ ಅದರಂತೆ ಆನಂದಾದಿಗಳೂ ಕೂಡ ಸ್ವಾಭಾವಿಕವಾಗಿವೆ. ಇದನ್ನು ಬಿಟ್ಟು ಜ್ಞಾನಕ್ಕೆ ಮಾತ್ರ ಸ್ವಾಭಾವಿಕತ್ವವನ್ನು ಸಮರ್ಥನೆ ಮಾಡಲು ಯಾವುದೇ ವಿಶೇಷ ಕಾರಣವಿರುವುದಿಲ್ಲ.

**''स्वात्मना'' इति सूत्र उत्तरे इति प्रथमानिर्देशापत्तेश्च । मम तु षष्ठी उत्क्रान्तिसूत्रेऽवश्यविवक्षणीयस्य सकाशादित्यस्येहानुषक्तस्यान्वयाय ।**

'ಸ್ವಾತ್ಮನಾ ಚೋತ್ತರಯೋಃ' ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ ಉತ್ಕ್ರಾಂತಿಯು ದೇಹಸ್ವಾಮ್ಯನಿವೃತ್ತಿಯಿಂದ ಯುಕ್ತವಾಗುತ್ತದೆ. ಆದರೆ ಮುಂದಿನ ಗತಿ ಆಗತಿಗಳು ಯುಕ್ತವಾಗುವುದಿಲ್ಲ ಎಂದು ವ್ಯಾಖ್ಯಾನ ಮಾಡಿದ್ದೀರಿ. ಹೀಗೆ ವ್ಯಾಖ್ಯಾನ ಮಾಡುವುದಾದರೆ 'ಉತ್ತರಯೋಃ' ಎಂಬ ಷಷ್ಠೀವಿಭಕ್ತಿಯು ತಪ್ಪಾಗುತ್ತದೆ. 'ಉತ್ತರೇ' ಎಂಬುದಾಗಿ ಪ್ರಥಮಾದ್ವಿವಚನವನ್ನೇ ನಿವೇಶ ಮಾಡಬೇಕಾಗುತ್ತದೆ. ನಮ್ಮ ಮತದಲ್ಲಿ ಉತ್ಕ್ರಾಂತಿಸೂತ್ರದಲ್ಲಿ ಅವಶ್ಯವಾಗಿ ವಿವಕ್ಷಿಸಬೇಕಾದ ಸಕಾಶಾತ್ ಎಂಬುದನ್ನು ಇಲ್ಲೂ ಕೂಡ ಅನುಷಂಗ ಮಾಡಿಕೊಳ್ಳುವುದರಿಂದ ಷಷ್ಠೀವಿಭಕ್ತಿಯು ಸಾರ್ಥಕವಾಗುತ್ತದೆ.

**''स्व-शब्द'' इति सूत्रस्य त्वणुत्वसाधकत्व उत्क्रान्तिसूत्रानन्तर्यापाताच्च । उन्मानशब्दस्य बालाग्रशतभागशतभागत्वे योगरूढ्योरभावाच्च ।**

'ಸ್ವಶಬ್ದೋನ್ಮಾನಾಭ್ಯಾಮ್' ಎಂಬ ಸೂತ್ರವು ಸಾಕ್ಷಾತ್ತಾಗಿ ಅಣುತ್ವವನ್ನು ಹೇಳುವ 'ಏಷೋಣುರಾತ್ಮಾ' ಎಂಬ ಶ್ರುತಿಯ ಆಧಾರದಿಂದ ಅಣುತ್ವವನ್ನು ಸಾಧನೆ ಮಾಡುತ್ತಿದೆ. ಹೀಗೆ ವ್ಯಾಖ್ಯಾನ ಮಾಡುವುದಾದರೆ ಉತ್ಕ್ರಾಂತಿಸೂತ್ರವೂ ಕೂಡ ಅಣುತ್ವವನ್ನು ಸಾಧನೆ ಮಾಡುತ್ತಿದೆ. ಆದ್ದರಿಂದ ಈ ಸೂತ್ರವನ್ನು ಉತ್ಕ್ರಾಂತಿಸೂತ್ರದ ಅನಂತರವೇ ಹೇಳಬೇಕಾಗಿತ್ತು. ಮತ್ತು ಉನ್ಮಾನ ಎಂಬ ಶಬ್ದಕ್ಕೆ ನಾವು ಹೇಳುವಂತೆ ದೇವರ ವಿಷಯದಲ್ಲಿ ಅಪರಿಮಿತ ಸಾಮರ್ಥ್ಯವೆಂಬ ಅರ್ಥವನ್ನು ಹೇಳಿದ್ದೇವೆ. ಆದರೆ ನೀವು ಬಾಲಾಗ್ರಶತಭಾಗದ ಶತಭಾಗ ಎಂಬ ಅರ್ಥವನ್ನು ಮಾಡಿದ್ದೀರಿ. ಈ ಅರ್ಥದಲ್ಲಿ ಯೋಗವೂ ಇಲ್ಲ, ರೂಢಿಯೂ ಇರುವುದಿಲ್ಲ. ಆದ್ದರಿಂದ ಈ ವ್ಯಾಖ್ಯಾನವು ತಪ್ಪು.

**''व्यतिरेक'' इति सूत्रस्य जीवाणुत्वे योगिनोऽनेकशरीरस्थित्ययोग इति दृढतरबाधकपरिहारार्थताया एवौचित्येन भेददृष्टान्तान्तरपरत्वायोगाच्च ।**

'ವ್ಯತಿರೇಕೋ ಗಂಧವತ್' ಎಂಬ ಸೂತ್ರಕ್ಕೆ ನಾವು ಮಾಡುವ ವ್ಯಾಖ್ಯಾನವೇ ಸಮಂಜಸವಾಗಿದೆ. ಜೀವನು ಅಣುವಾದಲ್ಲಿ ಯೋಗಿಗಳು ಅನೇಕ ಶರೀರಗಳಲ್ಲಿ ಇರಲು ಹೇಗೆ ಸಾಧ್ಯವಿಲ್ಲವೆಂಬ

ದೃಢತರವಾದ ಬಾಧ ಬರುತ್ತದೆ. ಇದನ್ನು ಪರಿಹಾರ ಮಾಡುವುದಕ್ಕಾಗಿ ಈಶ್ವರನ ಅಚಿಂತ್ಯಶಕ್ತಿಯಿಂದ ಹೇಗೆ ಗಂಧವು ಅಂಶತಃ ವ್ಯಾಪ್ತವಾಗಿದೆಯೋ ಅದರಂತೆ ಯೋಗಿಗಳೂ ಕೂಡ ಅಂಶತಃ ವ್ಯಾಪ್ತರಾಗಿದ್ದಾರೆ ಎಂಬುದಾಗಿ ಈ ಸೂತ್ರವು ಸಮರ್ಥನೆ ಮಾಡಲು ಹೊರಟಿದೆ. ಆದ್ದರಿಂದ ಈ ಅರ್ಥವು ಅತ್ಯಂತ ಸ್ವರಸವಾಗಿದೆ. ಆದರೆ ವಿಶಿಷ್ಟಾದ್ವೈತಿಗಳಾದ ನೀವು ಹೀಗೆ ವ್ಯಾಖ್ಯಾನ ಮಾಡುತ್ತಿಲ್ಲ. 'ಪೃಥಿವೀ ಗಂಧವತ್' ಎಂದು ಹೇಳಿದಾಗ ವಿಶೇಷಣವಿಶೇಷ್ಯಗಳಿಗೆ ಹೇಗೆ ಭೇದವು ತಿಳಿಯುತ್ತದೋ, ಅದರಂತೆ ಇಲ್ಲೂ ಕೂಡ ಜೀವ ಮತ್ತು ಜ್ಞಾನಗಳಿಗೆ ಭೇದವನ್ನೇ ಹೇಳಬೇಕು. ಜಾನಾತಿ ಎಂಬಲ್ಲಿರುವ ಪ್ರಕೃತಿ ಪ್ರತ್ಯಯದಿಂದ ಜೀವ ಮತ್ತು ಜ್ಞಾನಗಳಿಗೆ ಭೇದವು ಸ್ಪಷ್ಟವಾಗಿ ತಿಳಿಯುತ್ತದೆ ಎನ್ನಲು ಮತ್ತೊಂದು ದೃಷ್ಟಾಂತವನ್ನು ನೀಡುವುದಕ್ಕಾಗಿ ಈ ಸೂತ್ರವು ಹೊರಟಿದೆ ಎಂದು ವ್ಯಾಖ್ಯಾನ ಮಾಡುವಿರಿ. ಕೇವಲ ದೃಷ್ಟಾಂತಾಂತರಕ್ಕೋಸ್ಕರ ಈ ಸೂತ್ರ ಹೊರಟಿದೆ ಎನ್ನುವುದು ಅಸ್ವರಸವಾಗಿದೆ.

**रूपादेरपि दृष्टान्तत्वसम्भवेन विशिष्य गन्धग्रहणायोगाच्च । भेदमात्रपरत्वे ''व्यतिरेक'' इति सूत्रेणैव वा ''पृथक्'' इति सूत्रेणैव वा ''विज्ञानं त्वेव विजिज्ञासितव्यम् । अथाऽत आत्मादेश'' इति वाक्यद्वयरूपस्यैवैकपदरूपस्य पदद्वयरूपस्य च भेदोपदेशस्य ग्रहणसम्भवेन सूत्रद्वयवैयर्थ्याच्च ।**

ಮತ್ತು ಜ್ಞಾನಕ್ಕೂ ಜೀವನಿಗೂ ಭೇದವಿದೆ ಎನ್ನಲು ಗಂಧದ ದೃಷ್ಟಾಂತವನ್ನೇ ಏಕೆ ನೀಡಬೇಕು? ರೂಪರಸಾದಿಗಳ ದೃಷ್ಟಾಂತವನ್ನೂ ಕೂಡ ನೀಡಬಹುದು. 'ರೂಪೀ ಘಟಃ' ಎಂದು ಹೇಳಿದಾಗ ಅಲ್ಲಿ ವಿಶೇಷಣವಿಶೇಷ್ಯಗಳಿಗೆ ಹೇಗೆ ಭೇದವಿದೆಯೋ ಅದರಂತೆ 'ಜ್ಞಾನೀ ಜೀವಃ' ಎಂಬಲ್ಲೂ ಕೂಡ ಭೇದವನ್ನು ಒಪ್ಪಲೇಬೇಕು ಎನ್ನಲು ಸಾಧ್ಯವಿದೆ. ಆದ್ದರಿಂದ ಸೂತ್ರಕಾರರು 'ಗಂಧವತ್' ಎಂಬುದಾಗಿ ಗಂಧದ ದೃಷ್ಟಾಂತವನ್ನೇ ಉಲ್ಲೇಖ ಮಾಡಲು ಕಾರಣವಿಲ್ಲ.

ಮತ್ತು 'ವ್ಯತಿರೇಕೋ ಗಂಧವತ್' ಎಂಬ ಸೂತ್ರವು ಭೇದ ಮಾತ್ರ ಸಮರ್ಥನೆಗಾಗಿ ಹೊರಟಿದೆ ಎನ್ನುವುದಾದರೆ 'ಪೃಥಗುಪದೇಶಾತ್' ಎಂಬ ಸೂತ್ರದಿಂದಲೇ ಇದು ಗತಾರ್ಥವಾಗುತ್ತದೆ. ನೀವು 'ವ್ಯತಿರೇಕೋ ಗಂಧವತ್' ಎಂಬ ಸೂತ್ರ ಹಾಗೂ 'ಪೃಥಗುಪದೇಶಾತ್' ಎಂಬ ಎರಡೂ ಸೂತ್ರಗಳು ಭೇದಸಮರ್ಥನೆಗಾಗಿ ಹೊರಟಿವೆ ಎಂದು ಹೇಳುತ್ತೀರಿ. ಒಂದು ಸೂತ್ರದಿಂದಲೇ ಉದ್ದೇಶ ಸಿದ್ಧಿಯಾಗುವಾಗ ಎರಡು ಸೂತ್ರವು ಅನಾವಶ್ಯಕ. ಪ್ರಕೃತಿ ಪ್ರತ್ಯಯಗಳಿಂದ ವಿಶೇಷಣವಿಶೇಷ್ಯತ್ವದ ವ್ಯಪದೇಶವನ್ನು 'ವ್ಯತಿರೇಕೋ' ಇತ್ಯಾದಿ ಸೂತ್ರದಲ್ಲಿ ಮಾಡಿರುವಿರಿ. 'ಪೃಥಗುಪದೇಶಾತ್' ಎಂಬ ಸೂತ್ರದಲ್ಲಿ 'ಪದದ್ವಯೇನ ವಿಶೇಷಣವಿಶೇಷ್ಯತ್ವವ್ಯಪದೇಶ'ವನ್ನು ಮಾಡಿರುವಿರಿ. ಹೀಗೆ ಭೇದಮಾತ್ರ ಸಮರ್ಥನೆಗಾಗಿ ಎರಡೂ ಸೂತ್ರಗಳು ಏಕೆ ಹೊರಡಬೇಕು. ಒಂದೇ ಸೂತ್ರವು ಉದ್ದೇಶವನ್ನು ಸಿದ್ಧಿ ಮಾಡುತ್ತದೆ. 'ತಥಾಚ ದರ್ಶಯತಿ' ಎಂಬ ಸೂತ್ರದ ಭಾಗದಿಂದಲೇ 'ಪೃಥಗುಪದೇಶಾತ್' ಎಂಬ ಸೂತ್ರದಲ್ಲಿ ಹೇಳಿದ ಪ್ರಮೇಯವನ್ನು ಸಂಗ್ರಹ ಮಾಡಬಹುದು. ಅಥವಾ 'ಪೃಥಗುಪದೇಶಾತ್' ಎಂಬ ಸೂತ್ರದಿಂದಲೇ 'ಪ್ರಕೃತಿ ಪ್ರತ್ಯಯಯಾಭ್ಯಾಂ ವಿಶೇಷಣವಿಶೇಷ್ಯವ್ಯಪದೇಶಾತ್' ಎಂಬುದನ್ನೂ ಕೂಡ ಸಂಗ್ರಹ ಮಾಡಬಹುದು. ಪ್ರಕೃತಿ ಪ್ರತ್ಯಯಗಳ ವಿಶೇಷಣವಿಶೇಷ್ಯವ್ಯಪದೇಶದಿಂದ ಭೇದವನ್ನು ಸಮರ್ಥನೆ ಮಾಡಿ ಪುನಃ ಪದದ್ವಯ ವ್ಯಪದೇಶಗಳಿಂದ ಭೇದವನ್ನು ಪ್ರತ್ಯೇಕವಾಗಿ ಸಾಧನೆ

ಮಾಡುವುದಾದರೆ ವಾಕ್ಯದ್ವಯಗಳಿಂದ ಭೇದಜ್ಞಾಪಕವ್ಯಪದೇಶ ಎಂಬ ಮತ್ತೊಂದು ಪಕ್ಷವನ್ನೂ ಕೂಡ ನೀವು ಒಪ್ಪಬೇಕಾಗುತ್ತದೆ. ಏಕೆಂದರೆ ಮೊದಲು ಪ್ರಕೃತಿ ಪ್ರತ್ಯಯ ಅನಂತರ ಎರಡು ಪದಗಳು, ಅನಂತರ ಎರಡು ವಾಕ್ಯಗಳು ಹೀಗೆ ಮೂರು ಹಂತದಲ್ಲಿ ಭೇದವು ತಿಳಿಯುತ್ತದೆ. 'ವಿಜ್ಞಾನಂ ತ್ವೇವ ವಿಜಿಜ್ಞಾಸಿತವ್ಯಮ್' ಎಂಬುದಾಗಿ ಮೊದಲು ವಿಜ್ಞಾನವನ್ನು ತಿಳಿಯಬೇಕು ಎಂದು ನಾರದರು ಹೇಳಿದ್ದಾರೆ. ಅನಂತರ 'ಅಥಾಽತಃ ಆತ್ಮಾದೇಶಃ' ಎಂಬುದಾಗಿ ಪ್ರತ್ಯೇಕವಾಗಿ ಆತ್ಮನನ್ನು ತಿಳಿಯಬೇಕು ಎಂದು ಹೇಳಿದ್ದಾರೆ. ಇಲ್ಲಿ 'ವಿಜ್ಞಾನಂ ತ್ವೇವ ವಿಜಿಜ್ಞಾಸಿತವ್ಯಮ್' ಎಂಬುದು ಬೇರೆ ವಾಕ್ಯ, 'ಅಥಾಽತಃ ಆತ್ಮಾದೇಶಃ' ಎಂಬುದು ಬೇರೆ ವಾಕ್ಯ. ಆತ್ಮ ಹಾಗೂ ವಿಜ್ಞಾನಗಳನ್ನು ಬೇರೆ ಬೇರೆ ವಾಕ್ಯಗಳಿಂದ ನಿರ್ದೇಶ ಮಾಡಿದ್ದರಿಂದ ಆತ್ಮ ಹಾಗೂ ಜ್ಞಾನ ಒಂದೇ ಅಲ್ಲ ಎಂಬುದಾಗಿ ಸಮರ್ಥನೆ ಮಾಡಲು ನೀವು ಇನ್ನೊಂದು ಸೂತ್ರವನ್ನು ಬರೆಯಬೇಕಾಗುತ್ತದೆ.

**अघटं भूतलमित्यादौ विशेषणविशेष्यभावेऽपि त्वत्पक्षे भेदाभावाच्च । गन्धादेः कस्तूर्यादिसारत्वेऽपि यावद्द्रव्यभावित्वेऽपि तत्र गन्धादिशब्दस्य मुख्यत्वाभावाच्च ।**

ಎಲ್ಲಿ ವಿಶೇಷಣವಿಶೇಷ್ಯಭಾವವಿರುತ್ತದೋ ಅಲ್ಲಿ ಭೇದನಿರ್ದೇಶವಿರುತ್ತದೆ ಎಂಬ ವ್ಯಾಪ್ತಿಗೆ ಅಘಟಂ ಭೂತಲಮ್' ಎಂಬಲ್ಲಿ ವ್ಯಭಿಚಾರ ಬರುತ್ತದೆ. ಅಘಟಂ ಎಂಬುದು ವಿಶೇಷಣವಾಗಿದೆ, ಭೂತಲಂ ಎಂಬುದು ವಿಶೇಷ್ಯವಾಗಿದೆ. ಇವೆರಡಕ್ಕೆ ವಿಶೇಷಣವಿಶೇಷ್ಯಭಾವವಿದ್ದರೂ ಕೂಡ ನೀವು ಘಟಾಭಾವಕ್ಕೂ ಭೂತಲಕ್ಕೂ ಅಭೇದವನ್ನು ಅಂಗೀಕಾರ ಮಾಡಿಲ್ಲ.

ಕಸ್ತೂರಿಕಾದಲ್ಲಿ ಅನೇಕ ಗುಣಗಳಿವೆ. ಅದರಲ್ಲಿ ಸಾರಭೂತವಾದ ಗುಣವೆಂದರೆ ಗಂಧವೇ ಆಗಿದೆ ಮತ್ತು ಆ ಗಂಧವು ಯಾವದ್ ದ್ರವ್ಯಭಾವಿಯಾಗಿದೆ. ನಿಮ್ಮ ಪ್ರಕಾರ ಗಂಧ ಶಬ್ದವನ್ನು ಕಸ್ತೂರಿಕಾದಲ್ಲಿ ಮುಖ್ಯವಾಗಿ ಪ್ರಯೋಗ ಮಾಡಬೇಕಾಗುತ್ತದೆ. ಆದರೆ 'ಕಸ್ತೂರಿಕಾ ಏವ ಗಂಧಃ' ಎಂಬ ವ್ಯವಹಾರವು ಔಪಚಾರಿಕವೇ ಹೊರತು ಮುಖ್ಯಪ್ರಯೋಗವೆಂದು ಲೋಕದಲ್ಲಿ ಯಾರೂ ಹೇಳುವುದಿಲ್ಲ. ನಾವು ವಿಶೇಷ ಬಲದಿಂದ ಗಂಧವಾಚಕವಾದ ಶಬ್ದವು ಕಸ್ತೂರಿಕಾದಲ್ಲಿ ಮುಖ್ಯವಲ್ಲ ಎಂದು ಕೂಡಿಸುತ್ತೇವೆ. ಆದರೆ ಜೀವನಲ್ಲಿ ಜ್ಞಾನಶಬ್ದವನ್ನು ಹೇಳುವ ನೀವು ಇದನ್ನು ಲಾಕ್ಷಣಿಕವೆಂದೇ ಹೇಳಬೇಕಾಗುತ್ತದೆ.

**एतावन्तं कालं सुखमहमस्वाप्समिति परामर्शदर्शनेन सुप्त्यादौ जागरण इवात्मादिज्ञानस्याभिव्यक्तत्वेनेन्द्रियाणां घटादिविषयसम्बन्धस्य च तदा स्वरूपेणैवाभावेनानभिव्यक्तयुक्त्ययोगाच्च ॥**

**॥ इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् पुंस्त्वाधिकरणं सम्पूर्णम् ॥१६॥**

'ಪುಂಸ್ತ್ವಾದಿವತ್ತ್ವಸ್ಯ' ಎಂಬ ಸೂತ್ರಕ್ಕೆ ರಾಮಾನುಜರು ಮಾಡಿದ ವ್ಯಾಖ್ಯಾನವು ಅಯುಕ್ತವಾಗಿದೆ. ಏಕೆಂದರೆ ಸುಷುಪ್ತಿಯ ಅವಸ್ಥೆಯಲ್ಲಿ ಜ್ಞಾನವು ಅನಭಿವ್ಯಕ್ತವಾಗಿರುತ್ತದೆಂದು ಅವರು ಆಕ್ಷೇಪ ಮಾಡಿಕೊಂಡಿದ್ದಾರೆ. ಇದು ತಪ್ಪು ಸುಷುಪ್ತಿಯ ಅವಸ್ಥೆಯಲ್ಲೂ ಕೂಡ ಜ್ಞಾನವು ಅಭಿವ್ಯಕ್ತವೇ

ಆಗಿರುತ್ತದೆ. ಏಕೆಂದರೆ 'ಏತಾವಂತಂ ಕಾಲಂ ಸುಖಮಹಂ ಅಸ್ವಾಪ್ಸಮ್' ಎಂಬ ಪರಾಮರ್ಶದಿಂದ ಸುಷುಪ್ತಿಯ ಅವಸ್ಥೆಯಲ್ಲಿ ಜಾಗ್ರತ್ಕಾಲದಲ್ಲಿ ಹೇಗೆ ಜ್ಞಾನವು ಅಭಿವ್ಯಕ್ತವಾಗಿರುತ್ತದೋ ಅದರಂತೆ ಸುಷುಪ್ತಿಯ ಕಾಲದಲ್ಲೂ ಕೂಡ ಜ್ಞಾನವು ಅಭಿವ್ಯಕ್ತವೇ ಆಗಿರುತ್ತದೆ. ಕಾಲ, ಸುಖ, ಕರ್ತೃತ್ವ ಇವುಗಳ ಜ್ಞಾನ ಸುಷುಪ್ತಿಯ ಅವಸ್ಥೆಯಲ್ಲಿ ನಿರಂತರವಾಗಿ ಇದ್ದೇ ಇರುತ್ತದೆ ಎಂದಭಿಪ್ರಾಯ.

ಇಂದ್ರಿಯಗಳಿಗೆ ಘಟಾದಿವಿಷಯಗಳ ಸಂಬಂಧವು ಸುಷುಪ್ತಿಯ ಅವಸ್ಥೆಯಲ್ಲಿ ಇರುವುದಿಲ್ಲ. ಆದ್ದರಿಂದ ಜ್ಞಾನವೂ ಆಗ ಅನಭಿವ್ಯಕ್ತವಾಗಿರುತ್ತದೆಂದು ಹೇಳಬೇಕಲ್ಲವೇ? ಎಂದು ಪ್ರಶ್ನಿಸಬಾರದು. ಅನಭಿವ್ಯಕ್ತಿಯನ್ನು ಯಾವಾಗ ಹೇಳಬೇಕು ಎಂದು ಹೇಳಿದರೆ ಎಲ್ಲಾ ಸಾಮಗ್ರಿಗಳಿದ್ದು ಅದು ಇಲ್ಲವೆಂದು ಹೇಳಿದಾಗ ಮಾತ್ರ. ಆದರೆ ಸುಷುಪ್ತಿಯ ಅವಸ್ಥೆಯಲ್ಲಿ ಸಾಮಗ್ರಿಗಳೇ ಇರುವುದಿಲ್ಲ. ಸನ್ನಿಕರ್ಷ ಮೊದಲಾದ ಸಾಮಗ್ರಿಗಳೇ ಇಲ್ಲದ ಕಾರಣ ಜ್ಞಾನವು ಅನಭಿವ್ಯಕ್ತವಾಗಿದೆ ಎಂದು ಹೇಳುವ ಅವಶ್ಯಕತೆ ಇಲ್ಲ, ಜ್ಞಾನವು ಸುಷುಪ್ತಿಯಲ್ಲಿ ಇರುವುದಿಲ್ಲವೆಂದೇ ಹೇಳಬಹುದು.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಪುಂಸ್ತ್ವಾಧಿಕರಣವು ಸಂಪೂರ್ಣವಾಯಿತು

**प्रकाशः –**

**केचित्त्विति** ।। अत्रापि चतुर्दशसूत्राणीत्येव पाठस्साधुर्न तु त्रयोदशेति । तन्मते युक्तेश्चेत्यस्याभावेऽप्यवशिष्टानां भावात् ।

ರಾಮಾನುಜರ ಅಧಿಕರಣಶರೀರವನ್ನು 'ಕೇಚಿತ್ತು' ಇತ್ಯಾದಿಯಾಗಿ ನಿರೂಪಣೆ ಮಾಡುತ್ತಿದ್ದಾರೆ. ಕೆಲವು ಪುಸ್ತಕಗಳಲ್ಲಿ 'ತ್ರಯೋದಶಸೂತ್ರಾಣಿ ಏಕಮಧಿಕರಣಂ' ಎಂದಿದೆ. ಇದು ತಪ್ಪು. 'ಚತುರ್ದಶಸೂತ್ರಾಣಿ ಏಕಂ ಅಧಿಕರಣಂ' ಎಂಬುದೇ ಸಾಧುವಾಗಿದೆ. ಏಕೆಂದರೆ ರಾಮಾನುಜರ ಮತದಲ್ಲಿ 'ಯುಕ್ತೇಶ್ಚ' ಎಂಬ ಸೂತ್ರವನ್ನು ಒಪ್ಪದಿದ್ದರೂ ಕೂಡ ಉಳಿದೆಲ್ಲಾ ಸೂತ್ರಗಳನ್ನು ಒಪ್ಪಿರುವುದರಿಂದ ಒಟ್ಟು ಹದಿನಾಕು ಸೂತ್ರಗಳಾಗುತ್ತದೆ.

**प्रकाशः –** ''नात्माश्रुतेः'' इति पूर्वनये जीवस्यवियदादि वदुत्पत्तिर्नेत्युक्तम्। इह तु जीवस्वरूपं निरूप्यते । आत्मा सुगतकपिलाभिमतचिन्मात्रमुत कणादाभिमत-पाषाणकल्पोऽचित्स्वभाव एवागन्तुकचैतन्यगुण इति संशये

'ನಾತ್ಮಾಶ್ರುತೇಃ' ಎಂಬ ಪೂರ್ವಾಧಿಕರಣದಲ್ಲಿ ಜೀವನು ಆಕಾಶಾದಿಗಳಂತೆ ಉತ್ಪತ್ತಿಯುಳ್ಳವನಲ್ಲ ಎಂದು ಸಮರ್ಥನೆ ಮಾಡಲಾಯಿತು. ಈ ಅಧಿಕರಣದಲ್ಲಿ ಜೀವಸ್ವರೂಪದ ಬಗ್ಗೆ ನಿರೂಪಣೆ ಮಾಡಲಾಗಿದೆ. ಈ ಜೀವಾತ್ಮನು ಬೌದ್ಧರು, ಸಾಂಖ್ಯರು ಮೊದಲಾದವರು ಹೇಳುವಂತೆ ಚಿನ್ಮಾತ್ರರೂಪನೋ ಅಥವಾ ತಾರ್ಕಿಕರು ಹೇಳುವಂತೆ ಪಾಷಾಣದಂತಿರುವ ಅಚಿತ್‌ಸ್ವಭಾವವುಳ್ಳ ಆಗಂತುಕವಾದ ಚೈತನ್ಯಗುಣವುಳ್ಳವನೋ? ಎಂಬುದು ಅಧಿಕರಣದ ಸಂಶಯ.

ಪುಂಸ್ತ್ವಾಧಿಕರಣ (೨-೩-೧೬)

**प्रकाशः** – ''यो विज्ञाने तिष्ठन्'' इत्यादिश्रुतेर्ज्ञानस्वभाव एवेति वा विभोरात्मनो ज्ञानरूपत्वे सर्वदा सर्वोपलम्भप्रसङ्गादिना कणादाभिमतरूप एव वेति प्राप्ते ज्ञः सर्वदा ज्ञातृस्वभाव एवात्मा । न ज्ञानमात्रम् । नापि जडस्वभावः । कुतः । ''जानात्येवायं पुरुषः'' इत्यादिश्रुतेरेवेति सूत्रार्थ इत्यर्थः ।।

'ಯೋ ವಿಜ್ಞಾನೇ ತಿಷ್ಠನ್' ಇತ್ಯಾದಿ ಶ್ರುತಿಯು ಆತ್ಮನನ್ನು ಜ್ಞಾನಸ್ವರೂಪನೆಂದು ಹೇಳುತ್ತಿದೆ. ವಿಭುವಾದ ಆತ್ಮನು ಜ್ಞಾನಸ್ವರೂಪನಾದರೆ ಯಾವಾಗಲೂ ಉಪಲಂಭವಾಗುವ ಪ್ರಸಂಗ ಬರುತ್ತದೆ. ಆದ್ದರಿಂದ ತಾರ್ಕಿಕರು ಹೇಳುವಂತೆ ಆಗಂತುಕಚೈತನ್ಯಗುಣವುಳ್ಳವನೆಂದು ಹೇಳಬೇಕು. ಇದು ಅಧಿಕರಣದ ಪೂರ್ವಪಕ್ಷ.

ಆತ್ಮನು ನಿರಂತರವಾಗಿ ಜ್ಞಾತೃಸ್ವಭಾವವುಳ್ಳವನೇ ಆಗಿದ್ದಾನೆ. ಜ್ಞಾನಮಾತ್ರವು ಇವನ ಸ್ವರೂಪವಲ್ಲ. ಜಡಸ್ವಭಾವವನೂ ಅಲ್ಲ. 'ಜಾನಾತ್ಯೇವಾಯಂ ಪುರುಷಃ' ಇತ್ಯಾದಿ ಶ್ರುತಿಯ ಆಧಾರದಿಂದ ಭಿನ್ನವಾದ ಜ್ಞಾನವು ನಿರಂತರವಾಗಿ ಇವನಲ್ಲಿದೆ ಎಂದೇ ಸೂತ್ರಕ್ಕೆ ಅರ್ಥವನ್ನು ಹೇಳಬೇಕು. ಇದು ಸಿದ್ಧಾಂತ.

**प्रकाशः – तदुपयोगित्वेनेति** ।। आत्मनो ज्ञातृत्वे स्वाभाविके सति तस्य सर्वगतस्य सर्वदा सर्वत्रोपलब्धिप्रसङ्गादित्याशङ्कानिरासाय स्वाभाविकज्ञातृत्वोपयोगितयेत्यर्थः। प्रतिपादयन्तीति शत्रन्तम् । तदुपयोगित्वेनेत्येतद्व्चनक्ति ।। **ज्ञातृस्वभावस्येति** ।।

'ತದುಪಯೋಗಿತ್ವೇನ' ಇತ್ಯಾದಿ ಗ್ರಂಥದ ಅಭಿಪ್ರಾಯ ಹೀಗಿದೆ – ಆತ್ಮನಲ್ಲಿರುವ ಜ್ಞಾತೃತ್ವವು ಸ್ವಾಭಾವಿಕವಾದರೆ ಸರ್ವಗತನಾದವನಿಗೆ ಎಲ್ಲೆಡೆಯೂ ಎಲ್ಲಾ ಪದಾರ್ಥಗಳು ಉಪಲಬ್ಧವಾಗುವ ಪ್ರಸಂಗ ಬರುತ್ತದೆ. ಈ ಆಶಂಕೆಯನ್ನು ಪರಿಹಾರ ಮಾಡುವುದಕ್ಕಾಗಿ ಸ್ವಾಭಾವಿಕಜ್ಞಾತೃತ್ವಕ್ಕೆ ಉಪಯೋಗಿಯಾಗಿ ಅಣುತ್ವವನ್ನು ಸಮರ್ಥನೆ ಮಾಡಲಾಗಿದೆ ಎಂಬುದಾಗಿ ಗ್ರಂಥದಲ್ಲಿ ಹೇಳಿದ್ದಾರೆ. ಇಷ್ಟು 'ತದುಪಯೋಗಿತ್ವೇನ' ಎಂಬ ಗ್ರಂಥದ ಅರ್ಥ. ಈ ವಾಕ್ಯದಲ್ಲಿ 'ಪ್ರತಿಪಾದಯಂತಿ' ಎಂಬ ಪದವು ಶತೃಂತ ಪದವಾಗಿದೆಯೇ ಹೊರತು ಧಾತುವಲ್ಲ. 'ತದುಪಯೋಗಿತ್ವೇನ' ಎಂಬುದನ್ನೇ 'ಜ್ಞಾತೃಸ್ವಭಾವಸ್ಯ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡಿದ್ದಾರೆ.

**प्रकाशः** – अचलतः क्रियारहितस्य ।। **स्वात्मनैवेति** ।। चोऽवधारण इति भावः । अयमर्थः परमतेऽप्यविशिष्टः । ''नाणुः'' त्तति सूत्रव्याख्यानं मतद्वयेऽपि सिद्धान्त्यर्थाविरोधीति त्यक्त्वा ''स्वशब्दोन्मानाभ्यां च'' इति सूत्रार्थमन्वाह – **स्वशब्देतीति** ।।

'ಅಚಲತಃ' ಎಂಬ ಪದಕ್ಕೆ ಕ್ರಿಯೆಯಿಲ್ಲದವನು ಎಂದರ್ಥ. 'ಸ್ವಾತ್ಮನೈವ' ಎಂಬಲ್ಲಿರುವ 'ಚ' ಶಬ್ದವು ಅವಧಾರಣಾರ್ಥದಲ್ಲಿದೆ. ಆದ್ದರಿಂದ ಅವನಲ್ಲಿರುವ ಜ್ಞಾನವು ಅವಿಭಾಜ್ಯವಾಗಿ ನಿರಂತರವಾಗಿ ಇದೆ ಎಂಬರ್ಥವು ದೊರೆಯುತ್ತದೆ. 'ಸ್ವಾತ್ಮನಾ ಚೋತ್ತರಯೋಃ' ಎಂಬ ಸೂತ್ರಕ್ಕೆ ರಾಮಾನುಜರು ಮಾಡಿದ ವ್ಯಾಖ್ಯಾನವು ಅದ್ವೈತಿ ಹೇಳುವ ಅರ್ಥದಂತೆಯೇ ಇದೆ.

'ನಾಣುರತಚ್ಛ್ರುತೇಃ' ಎಂಬ ಸೂತ್ರದ ವ್ಯಾಖ್ಯಾನವು ಇಬ್ಬರ ಮತದಲ್ಲೂ ಸಮಾನವಾದ್ದರಿಂದ ನಮ್ಮ ಮತಕ್ಕೆ ವಿರುದ್ಧವಾಗಿಲ್ಲ. ಆದ್ದರಿಂದ ಅದನ್ನು ಬಿಟ್ಟಿದ್ದಾರೆ. ಪ್ರಕೃತ ಅದರ ಮುಂದಿರುವ 'ಸ್ವಶಬ್ದೋನ್ಮಾನಾಭ್ಯಾಂ ಚ' ಎಂಬ ಸೂತ್ರದ ವ್ಯಾಖ್ಯಾನವನ್ನು 'ಸ್ವಶಬ್ದ' ಇತ್ಯಾದಿ ಗ್ರಂಥದಿಂದ ಮಾಡಿದ್ದಾರೆ.

**प्रकाशः – इत्यर्थ इति** ।। अयमपि परमतेऽविशिष्टः । ''अविरोधश्चन्दनवत्'' इत्यादिसूत्रत्रयव्याख्या न विरुद्धेति त्यक्त्वा ''व्यतिरेको गन्धवत्'' इत्यस्यार्थमनुवदति।। **व्यतिरेक इतीति** ।।

'ಸ್ವಶಬ್ದೋನ್ಮಾನಾಭ್ಯಾಂ' ಎಂಬ ಸೂತ್ರಕ್ಕೆ ವಿಶಿಷ್ಟಾದ್ವೈತಿಯು ಮಾಡಿದ ವ್ಯಾಖ್ಯಾನವು ಅದ್ವೈತಿಗಳು ಹೇಳುವಂತೆ ಇದೆ. 'ಅವಿರೋಧಶ್ಚಂದನವತ್' ಎಂಬ ಸೂತ್ರದಿಂದ ಪ್ರಾರಂಭ ಮಾಡಿ ಮೂರು ಸೂತ್ರವನ್ನು ಪುನಃ ಗ್ರಂಥಕಾರರು ವ್ಯಾಖ್ಯಾನ ಮಾಡಿಲ್ಲ. ಏಕೆಂದರೆ ನಮ್ಮ ಸಿದ್ಧಾಂತಕ್ಕೆ ಅದು ಅವಿರುದ್ಧವೇ ಆಗಿದೆ. ಆದ್ದರಿಂದ 'ವ್ಯತಿರೇಕೋ ಗಂಧವತ್' ಎಂಬ ಸೂತ್ರದ ವ್ಯಾಖ್ಯಾನವನ್ನು 'ವ್ಯತಿರೇಕ' ಇತ್ಯಾದಿಯಾಗಿ ಅನುವಾದ ಮಾಡುತ್ತಿದ್ದಾರೆ.

**प्रकाशः – भेद इति** ।। ननु ज्ञानस्वरूपमात्मेत्यर्थः ।। **विशेषणविशेष्यत्वेनेति** ।। ज्ञानात्मनोरित्यनुकर्षः । ज्ञानगुणसारत्वात् ज्ञानाख्यगुणप्रधानत्वात् । ज्ञानत्वव्यपदेशः विज्ञानं यज्ञं तनुत इत्यादावित्यर्थः । प्राज्ञवत् यथाऽऽनन्दगुण-प्रधानत्वादानन्दो ब्रह्मेत्युच्यते प्राज्ञस्तद्वदिति ।

ಆತ್ಮನಿಗೂ ಜ್ಞಾನಕ್ಕೂ ಭೇದವೇ ಇದೆ ಎಂಬುದಾಗಿ ಗ್ರಂಥದಲ್ಲಿ ಹೇಳಿದ್ದಾರೆ. ಆದ್ದರಿಂದ ಆತ್ಮನನ್ನು ಜ್ಞಾನಸ್ವರೂಪನೆಂದು ಹೇಳಬಾರದು. ವಿಶೇಷಣವಿಶೇಷ್ಯತ್ವೇನ ಎಂಬುದಾಗಿ ಗ್ರಂಥದಲ್ಲಿ ಹೇಳಿದ್ದಾರೆ. ಜ್ಞಾನ ಮತ್ತು ಆತ್ಮರಿಗೆ ವಿಶೇಷಣವಿಶೇಷ್ಯಭಾವವಿದೆ ಎಂಬುದಾಗಿ ಅನುಕರ್ಷ ಮಾಡಿಕೊಳ್ಳಬೇಕು. ಜ್ಞಾನಗುಣಸಾರತ್ವಾತ್ ಎಂದರೆ ಜ್ಞಾನವೆಂಬ ಗುಣವೇ ಪ್ರಧಾನವಾಗಿರುವುದರಿಂದ ಎಂದರ್ಥ. ಆತ್ಮನನ್ನು ಜ್ಞಾನ ಎಂದೇ 'ವಿಜ್ಞಾನಂ ಯಜ್ಞಂ ತನುತೇ' ಇತ್ಯಾದಿ ವಾಕ್ಯಗಳಲ್ಲಿ ಕರೆಯಲಾಗಿದೆ. ಇದನ್ನು 'ಪ್ರಾಜ್ಞವತ್' ಎಂಬ ದೃಷ್ಟಾಂತದಿಂದ ಸಮರ್ಥನೆ ಮಾಡುತ್ತಿದ್ದಾರೆ. ಯಾವ ರೀತಿಯಾಗಿ ಆನಂದಗುಣವೇ ಪ್ರಧಾನವಾದ್ದರಿಂದ ಬ್ರಹ್ಮನನ್ನು ಆನಂದ ಎಂದು ಕರೆಯುತ್ತಾರೋ ಅದರಂತೆ ಇಲ್ಲಿಯೂ ಕೂಡ ತಿಳಿಯಬೇಕು.

**प्रकाशः** – ज्ञानस्य यावदात्मभावित्वात् ज्ञानात्मत्वव्यपदेशदोषो नास्ति । चकारात्स्वप्रकाशत्वादिव्यपदेशदोषो नेत्यर्थः । तद्दर्शनात् यावद्द्रव्यभाविगोत्वादिना गवादिशब्दव्यपदेशदर्शनादित्यर्थः ।।

ಜ್ಞಾನವು ಯಾವದಾತ್ಮಭಾವಿಯಾಗಿರುವುದರಿಂದ ಆತ್ಮನನ್ನು ಜ್ಞಾನ ಎಂದು ಕರೆಯುವುದು ತಪ್ಪಲ್ಲ. ಚಕಾರದಿಂದ ಆತ್ಮನನ್ನು ಸ್ವಪ್ರಕಾಶ ಎಂದು ಹೇಳಿದರ ವಿರೋಧವು ಬರುವುದಿಲ್ಲ ಎಂಬುದನ್ನು ವಿವಕ್ಷಿಸಬೇಕು.

ಪುಂಸ್ತ್ವಾಧಿಕರಣ (೨-೩-೧೬)

'ತದ್ದರ್ಶನಾತ್' ಎಂಬುದರ ಅಭಿಪ್ರಾಯ ಹೀಗಿದೆ – ಗೋತ್ವವು ಗೋವಿನಲ್ಲಿ ಯಾವದ್ ದ್ರವ್ಯಭಾವಿಧರ್ಮವಾಗಿದೆ. ಅಂತಹ ಗೋತ್ವವಾಚಕವಾದ ಗೋ ಶಬ್ದವನ್ನು ಗೋ ಎಂಬ ವ್ಯಕ್ತಿಯಲ್ಲಿ ಹೇಗೆ ಲೋಕದಲ್ಲಿ ಪ್ರಯೋಗಿಸುತ್ತಾರೋ ಅದರಂತೆ ಜ್ಞಾನವಾಚಕವಾದ ಶಬ್ದವನ್ನು ಜ್ಞಾನವುಳ್ಳ ಆತ್ಮನಲ್ಲಿಯೂ ಕೂಡ ಪ್ರಯೋಗಿಸುವುದು ತಪ್ಪಾಗುವುದಿಲ್ಲ ಎಂದಭಿಪ್ರಾಯ.

**प्रकाशः – स्वरूपाण्येवेति ।।** ''बलमानन्द ओजश्च सहो ज्ञानमनाकुलम् । स्वरूपाण्येव'' इति भाष्योक्तश्रुतिः । तदुपयोगित्वेनेत्युक्तं निराह – **ज्ञात्रिति ।।**

'ಸ್ವರೂಪಾಣ್ಯೇವಾಸ್ಯ ವಿಜ್ಞಾನ ಘನ ಏವ' ಎಂದು ಚಂದ್ರಿಕೆಯಲ್ಲಿ ಹೇಳಿದ್ದಾರೆ. ಅದರ ಹಿಂದಿನ ವಾಕ್ಯಭಾಗ ಹೀಗಿದೆ – 'ಬಲಮಾನಂದ ಓಜಶ್ಚ ಸಹೋ ಜ್ಞಾನಮನಾಕುಲಮ್' ಎಂಬುದು ಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿವಾಕ್ಯವಾಗಿದೆ. ಜೀವನು ಜ್ಞಾನ ಮಾತ್ರ ಸ್ವರೂಪನಲ್ಲ. ಬಲ, ಆನಂದ, ಓಜಸ್ಸು ಇವುಗಳೂ ಕೂಡ ಸ್ವರೂಪಭೂತವೇ ಆಗಿವೆ ಎಂದು ಇದರ ಅಭಿಪ್ರಾಯ. ಜೀವನು ಜ್ಞಾತೃಸ್ವರೂಪನಾಗಿದ್ದಾನೆ ಎಂಬುದನ್ನು ಸಮರ್ಥನೆ ಮಾಡುವುದಕ್ಕಾಗಿಯೇ ಅಣುತ್ವವನ್ನು ಸಮರ್ಥನೆ ಮಾಡಲಾಗಿದೆ ಎಂದು ವಿಶಿಷ್ಟಾದ್ವೈತಿಯು ಆಕ್ಷೇಪಣೆ ಮಾಡಿದ್ದನು. ಅದನ್ನು 'ಜ್ಞಾತೃ' ಇತ್ಯಾದಿ ಗ್ರಂಥದಿಂದ ನಿರಾಕರಣೆ ಮಾಡುತ್ತಿದ್ದಾರೆ.

**प्रकाशः – प्रथमेति ।।** अयं दोषः परमतेऽपि समः । उत्क्रान्तिसूत्रानन्तर्येत्यादि-दोषोऽपि समः ।। **शतभागशतभागत्व इति ।।** ''वालाग्रशतभागस्य शतधा कल्पितस्य च'' इत्युक्तेः शतभागस्य शतभागत्व इत्यर्थः ।। **भेदेति ।।** ज्ञानात्मनोर्भेदमात्रपरत्व इत्यर्थः ।।

ಉತ್ತರೇ ಎಂಬುದಾಗಿ ಪ್ರಥಮಾ ವಿಭಕ್ತಿಯಲ್ಲಿ ನಿರ್ದೇಶ ಮಾಡಬೇಕಿತ್ತೆಂಬ ಈ ದೋಷ ಅದ್ವೈತಿಗಳಿಗೂ ಕೂಡ ಸಮಾನವಾಗಿದೆ. ಉತ್ಕ್ರಾಂತಿಸೂತ್ರದ ಅನಂತರ ಈ ಸೂತ್ರವನ್ನು ನಿರ್ದೇಶ ಮಾಡಬೇಕಿತ್ತು ಎಂಬ ದೋಷವೂ ಅದ್ವೈತಿಗಳಿಗೂ ಸಮಾನವಾಗಿದೆ. 'ಶತಭಾಗಶತಭಾಗತ್ವೇ' ಎಂಬುದರ ಅಭಿಪ್ರಾಯ ಹೀಗಿದೆ – 'ಬಾಲಾಗ್ರಶತಭಾಗಸ್ಯ ಶತಧಾ ಕಲ್ಪಿತಸ್ಯ ಚ' ಎಂಬುದಾಗಿ ಸ್ಮೃತಿವಾಕ್ಯವಿರುವುದರಿಂದ ಶತಭಾಗದ ಶತಭಾಗ ಎಂದರ್ಥವನ್ನು ತಿಳಿಯಬೇಕು. ಭೇದ ಎಂದರೆ ಜ್ಞಾನ ಹಾಗೂ ಆತ್ಮ ಇವುಗಳಿಗೆ ಭೇದವನ್ನಷ್ಟೇ ಹೇಳಲು ಹೊರಡುವುದಾದರೆ 'ಪೃಥಗುಪದೇಶಾತ್' ಎಂಬ ಸೂತ್ರ ಒಂದೇ ಸಾಕು, ಈ ಸೂತ್ರವು ಅನಾವಶ್ಯಕ ಎಂದಭಿಪ್ರಾಯ.

ವಿಶೇಷವಿಚಾರ – ತಾತ್ಪರ್ಯಚಂದ್ರಿಕೆಯಲ್ಲಿ 'ಸ್ವಾತ್ಮನಾ ಇತಿ ಸೂತ್ರೇ' ಇತ್ಯಾದಿ ವಾಕ್ಯಗಳು ಅದ್ವೈತಿಗಳ ನಿರಾಕರಣೆಯ ಸಂದರ್ಭದಲ್ಲೂ ಕೂಡ ಪ್ರಸಕ್ತವಾಗಿದ್ದವು. ಆದರೆ ಅಲ್ಲಿರುವ ವಾಕ್ಯಗಳು ಪ್ರಕ್ಷಿಪ್ತವೆಂದು ತಿಳಿಯುತ್ತದೆ. ಏಕೆಂದರೆ ರಾಯರು ವ್ಯಾಖ್ಯಾನ ಮಾಡುವಾಗ 'ಅಯಂ ದೋಷಃ ಪರಮತೇಽಪಿ ಸಮಃ' ಎಂಬುದಾಗಿ ಹೇಳಿದ್ದಾರೆ. ವಿಶಿಷ್ಟಾದ್ವೈತ ಮತವನ್ನು ನಿರಾಕರಣೆ ಮಾಡುವ ಸಂದರ್ಭದಲ್ಲಿ ಈ ವಾಕ್ಯಗಳಿವೆ.

ಪರಿಪೂರ್ಣಚಂದ್ರಿಕಾ

ಈ ದೋಷ ಅದ್ವೈತಿಗಳಿಗೂ ಕೂಡ ಸಮಾನವೆಂದು ಈ ಸಂದರ್ಭದಲ್ಲಿ ತಿಳಿಯಬೇಕು. ಆದ್ದರಿಂದ ಹಿಂದಿನ ಮೂಲದಲ್ಲಿ ಪ್ರಸಕ್ತವಾದ ಆ ವಾಕ್ಯಗಳು ಕಂಸದಲ್ಲಿದೆ. ಅದು ರಾಯರಿಗೆ ಸಮ್ಮತವಾದುದಲ್ಲ ಎಂದು ಸ್ಪಷ್ಟವಾಗುತ್ತದೆ. ಜಿಜ್ಞಾಸುಗಳ ಅವಗಾಹನೆಗೋಸ್ಕರ ಮಾತ್ರ ಕನ್ನಡ ಭಾಷೆಯಲ್ಲಿ ಅನುವಾದ ಮಾಡಲಾಗಿದೆ.

**प्रकाशः – इति वाक्यद्वयरूपस्येवेति** ।। ज्ञानात्मनोर्भेद उक्तवाक्यद्वयरूपस्य भेदोपदेशस्य प्रमाणत्वेऽपि तस्योपसङ्ग्रहायैकपदरूपपदद्वयरूपयोर्भेदोपदेशयोरुपसङ्ग्रहाय सूत्रद्वयमिव तृतीयमपि सूत्रं कर्तव्यम् । यद्येतयोरेव सूत्रयोरन्यतरेणैव सूत्रेण वाक्यद्वयरूपभेदोपदेशस्यापि सम्भवान्न पृथक् सूत्रान्तरमपेक्षितं तर्ह्येतयोरन्यतरेणैव सूत्रेणैकपदरूपपदद्वयरूपयोरपि भेदोपदेशयोरुपसङ्ग्रहसम्भवेनान्यतरसूत्रानर्थक्यमित्यर्थः ।।

'ಇತಿ ವಾಕ್ಯದ್ವಯರೂಪಸ್ಯೇವ' ಎಂಬುದರ ಅಭಿಪ್ರಾಯ ಹೀಗಿದೆ. 'ವಿಜ್ಞಾನಂತ್ವೇವ ವಿಜಿಜ್ಞಾಸಿತವ್ಯಂ' ಎಂಬುದು ಒಂದುವಾಕ್ಯ. 'ಅಥಾತಃ ಆತ್ಮಾದೇಶಃ' ಎಂಬುದು ಮತ್ತೊಂದು ವಾಕ್ಯ. ಈ ಎರಡು ವಾಕ್ಯಗಳಿಂದ ಜೀವನಿಗೂ, ಜ್ಞಾನಕ್ಕೂ ಭೇದವ್ಯಪದೇಶವನ್ನು ಮಾಡಲಾಗಿದೆ. ಇದು ಪ್ರಮಾಣವಾಗಿರುವುದರಿಂದ ಇದನ್ನು ಸಂಗ್ರಹ ಮಾಡುವುದಕ್ಕಾಗಿ ಮತ್ತೊಂದು ಸೂತ್ರವನ್ನು ಬರೆಯಬೇಕಾಗಿತ್ತು. ಒಂದುವೇಳೆ 'ಪೃಥಗುಪದೇಶಾತ್' ಮತ್ತು 'ವ್ಯತಿರೇಕೋ ಗಂಧವತ್' ಎಂಬೆರಡು ಸೂತ್ರಗಳಿಂದಲೇ ವಾಕ್ಯದ್ವಯವೆಂಬ ಭೇದವ್ಯಪದೇಶವೂ ಕೂಡ ಸಂಗ್ರಹವಾಗುತ್ತದೆ. ಆದ್ದರಿಂದ ಮೂರನೇ ಸೂತ್ರ ಬರೆಯುವ ಅವಶ್ಯಕತೆ ಇಲ್ಲ ಎಂದು ಉತ್ತರಿಸಿದರೆ, ಹಾಗಾದರೆ ಈ ಎರಡು ಸೂತ್ರಗಳ ನಡುವೆ ಒಂದೇ ಸೂತ್ರ ಸಾಕು. ಪುನಃ 'ವ್ಯತಿರೇಕೋ ಗಂಧವತ್' ಎಂಬ ಸೂತ್ರವಾಗಲೀ ಅಥವಾ 'ಪೃಥಗುಪದೇಶಾತ್' ಎಂಬ ಸೂತ್ರವಾಗಲಿ ಪ್ರತ್ಯೇಕವಾಗಿ ಉಲ್ಲೇಖ ಮಾಡಿದ್ದು ತಪ್ಪಾಗುತ್ತದೆ.

**प्रकाशः – त्वत्पक्ष इति** ।। अधिकरणव्यतिरेकेणाभावानभ्युपगमादिति भावः । ''तद्गुणसारत्वात्, यावदात्मभावित्वाच्च'' इति सूत्रद्वयार्थं प्रागुक्तं प्रत्याह – **गन्धादेरिति** ।। एवमेव श्रुतिष्वात्मनो ज्ञानत्वव्यपदेशोऽमुख्यस्स्यादिति भावः ।

ಅಧಿಕರಣಕ್ಕಿಂತ ಅತಿರಿಕ್ತವಾದ ಅಭಾವವನ್ನು ನೀವು ಅಂಗೀಕಾರ ಮಾಡಿಲ್ಲ. ಆದ್ದರಿಂದ 'ಅಘಟಂ ಭೂತಲಂ' ಎಂಬಲ್ಲಿ ಘಟಾಭಾವಕ್ಕೂ ಭೂತಲಕ್ಕೂ ಐಕ್ಯವನ್ನೇ ನೀವು ಹೇಳಿದ್ದೀರಿ ಎಂದಭಿಪ್ರಾಯ. 'ತದ್ಗುಣಸಾರತ್ವಾತ್, ಯಾವದಾತ್ಮಭಾವಿತ್ವಾಚ್ಚ' ಎಂಬೆರಡು ಸೂತ್ರಗಳ ಅರ್ಥವನ್ನು ಹಿಂದೆ ವಿಶಿಷ್ಟಾದ್ವೈತಿಗಳು ಹೇಳಿದ್ದರು ಅದನ್ನು 'ಗಂಧಾದೇಃ' ಇತ್ಯಾದಿ ವಾಕ್ಯದಿಂದ ನಿರಾಕರಣೆ ಮಾಡುತ್ತಿದ್ದಾರೆ. ಯಾವ ರೀತಿಯಾಗಿ ಕಸ್ತೂರಿಕಾದಲ್ಲಿ ಗಂಧಶಬ್ದವು ಅಮುಖ್ಯವಾಗಿದೆಯೋ ಅದರಂತೆ ಶ್ರುತಿಗಳಲ್ಲಿ ಆತ್ಮನನ್ನು ಜ್ಞಾನಸ್ವರೂಪನೆಂದು ಹೇಳಿದ್ದರೂ ಕೂಡ, ಆತ್ಮನಲ್ಲಿ ಪ್ರಯೋಗ ಮಾಡಲ್ಪಟ್ಟ ಜ್ಞಾನಶಬ್ದದ ವ್ಯಪದೇಶವು ಅಮುಖ್ಯವೇ ಆಗುತ್ತದೆ ಎಂಬುದು ಇದರ ಅಭಿಪ್ರಾಯ.

ಪುಂಸ್ತ್ವಾಧಿಕರಣ (೨-೩-೧೬)

**प्रकाशः** – ''पुंस्त्वादिवत्'' इति सूत्रार्थं प्रत्याह – **एतावन्तमिति** ।। आत्मादिज्ञानस्य आत्मकालसुखादिज्ञानस्येत्यर्थः ।। **अभावेनेति** ।। विषयेन्द्रियसम्बन्धाभावादनभिव्यक्तिरिति योक्तिस्तस्या अयोगाच्चेत्यर्थः ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे पुंस्त्वाधिकरणं सम्पूर्णम् ।।१६।।**

'ಪುಂಸ್ತ್ವಾದಿವತ್' ಎಂಬ ಸೂತ್ರದ ಅರ್ಥವನ್ನು 'ಏತಾವಂತಂ' ಇತ್ಯಾದಿ ಗ್ರಂಥದಿಂದ ನಿರಾಕರಣೆ ಮಾಡುತ್ತಿದ್ದಾರೆ. ಆತ್ಮಾದಿಜ್ಞಾನವು ಸುಷುಪ್ತಿಯ ಕಾಲದಲ್ಲಿ ಆತ್ಮ, ಕಾಲ, ಸುಖ ಇವುಗಳ ಜ್ಞಾನವು ಅಭಿವ್ಯಕ್ತವಾಗಿರುತ್ತದೆಂದು 'ಏತಾವಂತಂ' ಎಂಬ ಪರಾಮರ್ಶದಿಂದ ತಿಳಿಯುತ್ತದೆ. ಗ್ರಂಥದಲ್ಲಿ 'ಸ್ವರೂಪೇಣೈವ ಅಭಾವೇನ' ಎಂದು ಹೇಳಿದ್ದಾರೆ. ವಿಷಯ, ಇಂದ್ರಿಯಗಳ ಸಂಬಂಧವು ಇರುವುದಿಲ್ಲ. ಆದ್ದರಿಂದ ಅನಭಿವ್ಯಕ್ತವಾಗಿರುತ್ತದೆ ಎಂಬುದಾಗಿ ನೀವು ಏನು ಹೇಳಿರುವಿರೋ ಅದು ಅಯುಕ್ತ-ವಾಗಿರುವುದರಿಂದ ಎಂಬುದು ಇದರ ಅರ್ಥ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಪುಂಸ್ತ್ವಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

ಪರಿಪೂರ್ಣಚಂದ್ರಿಕಾ

# ಕರ್ತೃತ್ವಾಧಿಕರಣ

(೨-೩-೧೭)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

***

॥ ಶ್ರೀಗುರುಭ್ಯೋ ನಮಃ ॥

# ಕರ್ತೃತ್ವಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**ब्रह्मसूत्रम् – कर्ता शास्त्रार्थवत्त्वात् ॥**

ವಿಧಿನಿಷೇಧರೂಪವಾದ ಶಾಸ್ತ್ರವು ಪ್ರಯೋಜನವುಳ್ಳದ್ದಾಗಬೇಕೆಂದರೆ ಜೀವನು ಕರ್ತೃವಾಗಿರಲೇಬೇಕು.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** – जीवोऽपि **कर्ता** । कुतः? तथा सत्येव **शास्त्रार्थवत्त्वात्** विधिनिषेधरूपशास्त्रस्य प्रयोजनवत्त्वात् अन्यथा वैयर्थ्यप्रसङ्गादित्यर्थः ॥१॥

ಕರ್ತಾ = ಜೀವನು ಕರ್ತೃವಾಗಿರಲೇಬೇಕು. ಏಕೆಂದರೆ ಶಾಸ್ತ್ರಾರ್ಥವತ್ತ್ವಾತ್ = ವಿಧಿನಿಷೇಧರೂಪವಾದ ಶಾಸ್ತ್ರವು ಪ್ರಯೋಜನವುಳ್ಳದ್ದರಿಂದ. ಒಂದು ವೇಳೆ ಜೀವನು ಕರ್ತೃವಾಗದಿದ್ದರೆ ವಿಧಿನಿಷೇಧರೂಪವಾದ ಶಾಸ್ತ್ರಗಳೆಲ್ಲವೂ ವ್ಯರ್ಥವಾಗಬೇಕಾಗುತ್ತದೆ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

## ಬ್ರಹ್ಮಸೂತ್ರಭಾಷ್ಯ

**भाष्यम् – ईश्वरस्यैव कर्तृत्वमुक्तं 'यत् कर्म कुरुते तदभिसम्पद्यते' (बृ.६.४.५) इति जीवस्योपलभ्यते ।**

ಅನುವಾದ - ಈಶ್ವರನಲ್ಲಿ ಮಾತ್ರ ಕರ್ತೃತ್ವವನ್ನು ಹಿಂದೆ ಹೇಳಲಾಗಿದೆ. ಆದರೆ 'ಯತ್ ಕರ್ಮ ಕುರುತೇ ತದಭಿಸಂಪದ್ಯತೇ' 'ಎಂಥ ಕರ್ಮವನ್ನು ಮಾಡುತ್ತಾನೊ ಅಂಥ ಫಲವನ್ನೇ ಹೊಂದುತ್ತಾನೆ' ಎಂಬುದಾಗಿ ಜೀವನಲ್ಲೂ ಕೂಡ ಕರ್ತೃತ್ವವು ಶ್ರುತವಾಗುತ್ತಿದೆ.

ಪ್ರತಿಪದಾರ್ಥ -- ಈಶ್ವರಸ್ಯೈವ = ನಾನ್ಯಃ ಕರ್ತಾ ಇತ್ಯಾದಿ ಶ್ರುತಿಯಲ್ಲಿ ಈಶ್ವರನಿಗೆ, ಕರ್ತೃತ್ವಮ್ = ಕರ್ತೃತ್ವವು, ಉಕ್ತಂ = ಹೇಳಲ್ಪಟ್ಟಿದೆ. ಆದರೆ ಯತ್ = ಎಂಥ ಕರ್ಮ ಕರ್ಮವನ್ನು ಕುರುತೇ ಜೀವನು ಮಾಡುತ್ತಾನೋ, ತತ್ = ಅಂಥದ್ದೇ, ಅಭಿಸಂಪದ್ಯತೇ = ಫಲವನ್ನು ಪಡೆಯುತ್ತಾನೆ. ಇತಿ = ಹೀಗೆ, ಜೀವಸ್ಯ = ಜೀವನಿಗೆ ಕರ್ತೃತ್ವವು, ಉಪಲಭ್ಯತೇ = ಉಪಲಬ್ಧವಾಗುತ್ತದೆ.

**भाष्यम् — अत आह —**

**।। कर्ता शास्त्रार्थवत्त्वात् ।।१।।**

**जीवस्य कर्तृत्वाभावे शास्त्रस्याप्रयोजकत्वप्राप्तेर्जीवोऽपि कर्ता ।।१।।**

ಅನುವಾದ - ಈಶ್ವರಕರ್ತೃತ್ವ ಜೀವಕರ್ತೃತ್ವಗಳ ವಿರೋಧವನ್ನು ಸೂತ್ರಕಾರರು ಪರಿಹರಿಸುತ್ತಿದ್ದಾರೆ. ಜೀವನಿಗೆ ಕರ್ತೃತ್ವವನ್ನು ಒಪ್ಪದಿದ್ದರೆ ಶಾಸ್ತ್ರಗಳೆಲ್ಲವೂ ವ್ಯರ್ಥವಾಗಬೇಕಾದೀತು. ಆದ್ದರಿಂದ ಜೀವನಿಗೂ ಕೂಡ ಕರ್ತೃತ್ವವನ್ನು ಒಪ್ಪಬೇಕು.

ಪ್ರತಿಪದಾರ್ಥ -- ಅತಃ = ಕರ್ತೃತ್ವದ ವಿರೋಧವನ್ನು, ಆಹ = ಸೂತ್ರಕಾರರು ಪರಿಹರಿಸುತ್ತಿದ್ದಾರೆ -

ಜೀವಸ್ಯ = ಜೀವನಿಗೆ, ಕರ್ತೃತ್ವಭಾವೇ = ಕರ್ತೃತ್ವವನ್ನು ಒಪ್ಪದಿದ್ದರೆ, ಶಾಸ್ತ್ರಸ್ಯ = ಶಾಸ್ತ್ರಗಳಿಗೆ, ಅಪ್ರಯೋಜಕತ್ವಪ್ರಾಪ್ತೇಃ = ವೈಯರ್ಥ್ಯದೋಷವು ಬರುವುದರಿಂದ, ಜೀವೋಽಪಿ = ಜೀವನೂ ಕೂಡ, ಕರ್ತಾ = ಕರ್ತೃವೆಂದು ಹೇಳಬೇಕು.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**तत्वप्रकाशिका – अत्रेश्वरे श्रुतिसमन्वयसिध्यर्थं जीवकर्तृत्वविषयश्रुतिविरोधपरिहारादस्ति शास्त्रादिसङ्गतिः । ईश्वरे श्रुतिसमन्वय उक्तः । स च जीवकर्तृताविषयश्रुतीनां विरोधेनाऽप्रामाण्येऽनुपपन्नः स्यादिति तन्निरासः कार्य एव।**

ಈ ಅಧಿಕರಣದಲ್ಲಿ ಈಶ್ವರನಲ್ಲಿ ಶ್ರುತಿಸಮನ್ವಯವು ಸಿದ್ಧವಾಗುವುದಕ್ಕಾಗಿ ಜೀವಕರ್ತೃತ್ವ ವಿಷಯಕವಾದ ಶ್ರುತಿಗಳ ವಿರೋಧವನ್ನು ಪರಿಹಾರ ಮಾಡಲಾಗಿದೆ. ಆದ್ದರಿಂದ ಶಾಸ್ತ್ರ-ಅಧ್ಯಾಯ-ಪಾದ ಸಂಗತಿಗಳು ಇರುತ್ತವೆ. ಈಶ್ವರನಲ್ಲಿ ಶ್ರುತಿಸಮನ್ವಯವು ಹೇಳಲ್ಪಟ್ಟಿತು. ಜೀವಕರ್ತೃತ್ವ ವಿಷಯಕವಾದ ಶ್ರುತಿಗಳ ವಿರೋಧವು ಈ ವಿಷಯದಲ್ಲಿ ಉಂಟಾಗುವುದರಿಂದ ಅಪ್ರಾಮಾಣ್ಯವು ಪ್ರಾಪ್ತವಾಗುತ್ತದೆ. ತನ್ಮೂಲಕವಾಗಿ ಈಶ್ವರನಲ್ಲಿ ಶ್ರುತಿಸಮನ್ವಯವೇ

॥ ಶ್ರೀಗುರುಭ್ಯೋ ನಮಃ ॥

# ಕರ್ತೃತ್ವಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**ब्रह्मसूत्रम् – कर्ता शास्त्रार्थवत्त्वात् ।।**

ವಿಧಿನಿಷೇಧರೂಪವಾದ ಶಾಸ್ತ್ರವು ಪ್ರಯೋಜನವುಳ್ಳದ್ದಾಗಬೇಕೆಂದರೆ ಜೀವನು ಕರ್ತೃವಾಗಿರಲೇಬೇಕು.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** – जीवोऽपि **कर्ता** । कुतः? तथा सत्येव **शास्त्रार्थवत्त्वात्** विधिनिषेधरूपशास्त्रस्य प्रयोजनवत्त्वात् अन्यथा वैयर्थ्यप्रसङ्गादित्यर्थः ।।१।।

ಕರ್ತಾ = ಜೀವನು ಕರ್ತೃವಾಗಿರಲೇಬೇಕು. ಏಕೆಂದರೆ ಶಾಸ್ತ್ರಾರ್ಥವತ್ತ್ವಾತ್ = ವಿಧಿನಿಷೇಧರೂಪವಾದ ಶಾಸ್ತ್ರವು ಪ್ರಯೋಜನವುಳ್ಳದ್ದರಿಂದ. ಒಂದು ವೇಳೆ ಜೀವನು ಕರ್ತೃವಾಗದಿದ್ದರೆ ವಿಧಿನಿಷೇಧರೂಪವಾದ ಶಾಸ್ತ್ರಗಳೆಲ್ಲವೂ ವ್ಯರ್ಥವಾಗಬೇಕಾಗುತ್ತದೆ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

## ಬ್ರಹ್ಮಸೂತ್ರಭಾಷ್ಯ

**भाष्यम् – ईश्वरस्यैव कर्तृत्वमुक्तं 'यत् कर्म कुरुते तदभिसम्पद्यते' (बृ.६.४.५) इति जीवस्योपलभ्यते ।**

**ಅನುವಾದ - ಈಶ್ವರನಲ್ಲಿ ಮಾತ್ರ ಕರ್ತೃತ್ವವನ್ನು ಹಿಂದೆ ಹೇಳಲಾಗಿದೆ. ಆದರೆ 'ಯತ್ ಕರ್ಮ ಕುರುತೇ ತದಭಿಸಂಪದ್ಯತೇ' 'ಎಂಥ ಕರ್ಮವನ್ನು ಮಾಡುತ್ತಾನೋ ಅಂಥ ಫಲವನ್ನೇ ಹೊಂದುತ್ತಾನೆ' ಎಂಬುದಾಗಿ ಜೀವನಲ್ಲೂ ಕೂಡ ಕರ್ತೃತ್ವವು ಶ್ರುತವಾಗುತ್ತಿದೆ.**

ಪ್ರತಿಪದಾರ್ಥ -- ಈಶ್ವರಸ್ಯೈವ = ನಾನ್ಯಃ ಕರ್ತಾ ಇತ್ಯಾದಿ ಶ್ರುತಿಯಲ್ಲಿ ಈಶ್ವರನಿಗೆ, ಕರ್ತೃತ್ವಮ್ = ಕರ್ತೃತ್ವವು, ಉಕ್ತಂ = ಹೇಳಲ್ಪಟ್ಟಿದೆ. ಆದರೆ ಯತ್ = ಎಂಥ ಕರ್ಮ ಕರ್ಮವನ್ನು ಕುರುತೇ ಜೀವನು ಮಾಡುತ್ತಾನೋ, ತತ್ = ಅಂಥದ್ದೇ, ಅಭಿಸಂಪದ್ಯತೇ = ಫಲವನ್ನು ಪಡೆಯುತ್ತಾನೆ. ಇತಿ = ಹೀಗೆ, ಜೀವಸ್ಯ = ಜೀವನಿಗೆ ಕರ್ತೃತ್ವವು, ಉಪಲಭ್ಯತೇ = ಉಪಲಬ್ಧವಾಗುತ್ತದೆ.

**भाष्यम् — अत आह —**

**।। कर्ता शास्त्रार्थवत्त्वात् ।।१।।**

**जीवस्य कर्तृत्वाभावे शास्त्रस्याप्रयोजकत्वप्राप्तेर्जीवोऽपि कर्ता ।।१।।**

**ಅನುವಾದ - ಈಶ್ವರಕರ್ತೃತ್ವ ಜೀವಕರ್ತೃತ್ವಗಳ ವಿರೋಧವನ್ನು ಸೂತ್ರಕಾರರು ಪರಿಹರಿಸುತ್ತಿದ್ದಾರೆ. ಜೀವನಿಗೆ ಕರ್ತೃತ್ವವನ್ನು ಒಪ್ಪದಿದ್ದರೆ ಶಾಸ್ತ್ರಗಳೆಲ್ಲವೂ ವ್ಯರ್ಥವಾಗಬೇಕಾದೀತು. ಆದ್ದರಿಂದ ಜೀವನಿಗೂ ಕೂಡ ಕರ್ತೃತ್ವವನ್ನು ಒಪ್ಪಬೇಕು.**

ಪ್ರತಿಪದಾರ್ಥ -- ಅತಃ = ಕರ್ತೃತ್ವದ ವಿರೋಧವನ್ನು, ಆಹ = ಸೂತ್ರಕಾರರು ಪರಿಹರಿಸುತ್ತಿದ್ದಾರೆ -

ಜೀವಸ್ಯ = ಜೀವನಿಗೆ, ಕರ್ತೃತ್ವಭಾವೇ = ಕರ್ತೃತ್ವವನ್ನು ಒಪ್ಪದಿದ್ದರೆ, ಶಾಸ್ತ್ರಸ್ಯ = ಶಾಸ್ತ್ರಗಳಿಗೆ, ಅಪ್ರಯೋಜಕತ್ವಪ್ರಾಪ್ತೇಃ = ವೈಯರ್ಥ್ಯದೋಷವು ಬರುವುದರಿಂದ, ಜೀವೋಽಪಿ = ಜೀವನೂ ಕೂಡ, ಕರ್ತಾ = ಕರ್ತೃವೆಂದು ಹೇಳಬೇಕು.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

## ತತ್ವಪ್ರಕಾಶಿಕಾ

**तत्वप्रकाशिका – अत्रेश्वरे श्रुतिसमन्वयसिध्यर्थं जीवकर्तृत्वविषयश्रुतिविरोधपरिहारादस्ति शास्त्रादिसङ्गतिः । ईश्वरे श्रुतिसमन्वय उक्तः । स च जीवकर्तृताविषयश्रुतीनां विरोधेनाऽप्रामाण्येऽनुपपन्नः स्यादिति तन्निरासः कार्य एव।**

ಈ ಅಧಿಕರಣದಲ್ಲಿ ಈಶ್ವರನಲ್ಲಿ ಶ್ರುತಿಸಮನ್ವಯವು ಸಿದ್ಧವಾಗುವುದಕ್ಕಾಗಿ ಜೀವಕರ್ತೃತ್ವ ವಿಷಯಕವಾದ ಶ್ರುತಿಗಳ ವಿರೋಧವನ್ನು ಪರಿಹಾರ ಮಾಡಲಾಗಿದೆ. ಆದ್ದರಿಂದ ಶಾಸ್ತ್ರ-ಅಧ್ಯಾಯ-ಪಾದ ಸಂಗತಿಗಳು ಇರುತ್ತವೆ. ಈಶ್ವರನಲ್ಲಿ ಶ್ರುತಿಸಮನ್ವಯವು ಹೇಳಲ್ಪಟ್ಟಿತು. ಜೀವಕರ್ತೃತ್ವ ವಿಷಯಕವಾದ ಶ್ರುತಿಗಳ ವಿರೋಧವು ಈ ವಿಷಯದಲ್ಲಿ ಉಂಟಾಗುವುದರಿಂದ ಅಪ್ರಾಮಾಣ್ಯವು ಪ್ರಾಪ್ತವಾಗುತ್ತದೆ. ತನ್ಮೂಲಕವಾಗಿ ಈಶ್ವರನಲ್ಲಿ ಶ್ರುತಿಸಮನ್ವಯವೇ

ಅನುಪಪನ್ನವಾಗುತ್ತದೆ. ಅದಕ್ಕಾಗಿ ಜೀವಕರ್ತೃತ್ವವಿಷಯಕವಾದ ಶ್ರುತಿಗಳ ವಿರೋಧವನ್ನು ಪರಿಹಾರ ಮಾಡಲೇಬೇಕು.

**ತತ್ವಪ್ರಕಾಶಿಕಾ – प्रकृतो जीव एव विषयः । किं कर्ता न वेति सन्देहः। सन्देहबीजं श्रुतिविगानं दर्शयति – ईश्वरस्येति ।। ईश्वरस्यैव कर्तृत्वमुक्तमित्यनेन 'नान्यः कर्ता' इत्यादिश्रुतिं सूचयति ।**

ಹಿಂದೆ ಪ್ರಕೃತನಾದ ಜೀವನೇ ಈ ಅಧಿಕರಣಕ್ಕೆ ವಿಷಯನಾಗಿದ್ದಾನೆ. ಇವನು ಕರ್ತೃವೋ, ಅಲ್ಲವೋ? ಎಂಬುದು ಸಂದೇಹ. ಶ್ರುತಿಗಳ ಪರಸ್ಪರ ವಿರೋಧವೇ ಸಂದೇಹಕ್ಕೆ ಕಾರಣವಾಗಿದೆ. ಇದನ್ನು ಭಾಷ್ಯಕಾರರೇ 'ಈಶ್ವರಸ್ಯ' ಎಂಬುದಾಗಿ ಉಲ್ಲೇಖ ಮಾಡುತ್ತಿದ್ದಾರೆ.

'ಈಶ್ವರಸ್ಯೈವ ಕರ್ತೃತ್ವಮುಕ್ತಂ' ಎಂಬ ಭಾಷ್ಯದ ಮಾತಿನಿಂದ 'ನಾನ್ಯಃಕರ್ತಾ' ಇವೇ ಮೊದಲಾದ ಶ್ರುತಿಯನ್ನು ಸೂಚನೆ ಮಾಡಿದ್ದಾರೆ.

**ತತ್ವಪ್ರಕಾಶಿಕಾ – जीवो न कर्तेति पूर्वः पक्षः । तत्कर्तृत्वाभावस्य श्रुतत्वात्।। जीवकर्तृत्वेऽप्यस्ति श्रुतिः न चासावीश्वरविषया । 'तदभिसम्पद्यते' इति फलसम्पत्तिश्रवणादिति चेन्न । अकर्तृकत्वश्रुतेः सयुक्तिकत्वेन प्राबल्यात् । समर्थितं हीश्वरस्यैवानन्ययोगेन कर्तृत्वमितर- व्यपदेशादित्यादौ ।**

ಜೀವನು ಕರ್ತೃವಲ್ಲ ಎಂಬುದು ಅಧಿಕರಣದ ಪೂರ್ವಪಕ್ಷ. ಜೀವನಿಗೆ ಕರ್ತೃತ್ವವಿಲ್ಲವೆನ್ನಲು 'ನಾನ್ಯಃ ಕರ್ತಾ' ಇತ್ಯಾದಿ ಶ್ರುತಿಗಳೇ ಪ್ರಮಾಣವಾಗಿವೆ. ಜೀವಕರ್ತೃತ್ವ ವಿಷಯದಲ್ಲಿಯೂ ಶ್ರುತಿಯು ಪ್ರಮಾಣವಾಗಿದೆ. ಇದು ಈಶ್ವರವಿಷಯಕವೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ 'ತದಭಿಸಂಪದ್ಯತೇ' ಎಂಬುದಾಗಿ ಕರ್ಮದ ಫಲವನ್ನು ಹೊಂದುತ್ತಾನೆಂದು ಶ್ರುತಿಯು ಹೇಳುತ್ತಿದೆ. ಹೀಗೆ ಪ್ರಶ್ನಿಸಬಾರದು. ಜೀವನಿಗೆ ಕರ್ತೃತ್ವ ಇಲ್ಲವೆಂದು ಹೇಳುವ ಶ್ರುತಿಯು ಯುಕ್ತಿಬದ್ಧವಾಗಿರುವುದರಿಂದ ಪ್ರಬಲವಾಗಿದೆ. ಜೀವನಿಗೆ ಕರ್ತೃತ್ವ ಇಲ್ಲವೆಂಬುದನ್ನು 'ಇತರವ್ಯಪದೇಶಾತ್' ಇತ್ಯಾದಿ ಸೂತ್ರಗಳಲ್ಲಿ ಮತ್ತೊಬ್ಬರ ಸಹಕಾರವಿಲ್ಲದೇ ಈಶ್ವರನೇ ಕರ್ತೃವಾಗಿದ್ದಾನೆಂದು ಸಮರ್ಥಿಸಲಾಗಿದೆ.

**ವಿವರಣೆ** – ಈಶ್ವರನೊಬ್ಬನೇ ಕರ್ತೃವೆಂದು ಹೇಳಲಾಗಿದೆ ಎಂದು ಭಾಷ್ಯದಲ್ಲಿ ಹೇಳಿದ್ದಾರೆ. ಹಾಗೆ ಎಲ್ಲಿ ಹೇಳಿದೆ? ಎಂಬ ಪ್ರಶ್ನೆಗೆ ಟೀಕೆಯಲ್ಲಿ 'ನಾನ್ಯಃ ಕರ್ತಾ ಇತಿ ಶ್ರುತಿಂ ಸೂಚಯತಿ' ಎಂಬುದರಿಂದ 'ನಾನ್ಯಃ ಕರ್ತಾ' ಇತ್ಯಾದಿ ಶ್ರುತಿಗಳಲ್ಲಿ ಈಶ್ವರನೊಬ್ಬನೇ ಕರ್ತೃವೆಂದು ಹೇಳಲಾಗಿದೆ ಎಂದು ವ್ಯಾಖ್ಯಾನ ಮಾಡಿದ್ದಾರೆ. ಈ ಅಧಿಕರಣದ ಪೂರ್ವಪಕ್ಷವೇನೆಂದರೆ ಜೀವನಲ್ಲಿ ಸ್ವತಂತ್ರಕರ್ತೃತ್ವವೂ ಇಲ್ಲ, ಅಸ್ವತಂತ್ರಕರ್ತೃತ್ವವೂ ಕೂಡ ಇಲ್ಲ ಎಂದು.

ಇತರವ್ಯಪದೇಶಾಧಿಕರಣದಲ್ಲಿ ಭಗವಂತನೊಬ್ಬನೇ ಕರ್ತೃ ಬೇರಾರೂ ಅಲ್ಲ ಎಂದು ಸಮರ್ಥಿಸಲಾಗಿದೆ. ಅದರ ಆಧಾರದಲ್ಲಿ ಈ ಅಧಿಕರಣದಲ್ಲಿ ಜೀವನಲ್ಲಿ ಯಾವುದೇ ಕರ್ತೃತ್ವವಿರುವುದಿಲ್ಲವೆಂದು ಪೂರ್ವಪಕ್ಷ ಮಾಡಲಾಗಿದೆ. 'ಯತ್ಕರ್ಮ ಕುರುತೇ' ಎಂಬ ಶ್ರುತಿ

ಭಗವತ್‌ಪರವೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ 'ತದಭಿಸಂಪದ್ಯತೇ' ಎಂಬುದಾಗಿ ಕರ್ಮದ ಫಲವನ್ನು ಭೋಗಿಸುವವನ ಬಗ್ಗೆ ಹೇಳುತ್ತಿದೆ. ಜೀವನಿಗೆ ಕರ್ತೃತ್ವವಿಲ್ಲವೆಂದು ಹೇಳುವ ಶ್ರುತಿಯು ಯುಕ್ತಿಬದ್ಧವಾದ್ದರಿಂದ ಪ್ರಬಲವಾಗಿದೆ ಎಂಬುದು ಪೂರ್ವಪಕ್ಷಕಾರರ ಅಭಿಪ್ರಾಯ.

**तत्वप्रकाशिका – अत एव द्वयोः कर्तृत्वमित्यपि प्रत्युक्तम् । ईश्वरस्यैव कर्तृत्वाङ्गीकारे कल्पनालाघवं च स्यात् । जीवस्यापि तदङ्गीकारे तु गौरवं स्यात् । न खलु लाघवाय श्रुत्यादिसिद्धमीश्वरस्य कर्तृत्वं हातुं युक्तम् । अतः सयुक्तिकश्रुतिविरोधेन कर्तृत्वश्रुतेरप्रामाण्यादयुक्तो नारायणे श्रुतिसमन्वय इति प्राप्ते सिद्धान्तयत्सूत्रमवतार्य व्याचष्टे – अत इति ।।**

ಆದ್ದರಿಂದಲೇ ಜೀವ ಹಾಗೂ ಪರಮಾತ್ಮ ಇಬ್ಬರಲ್ಲೂ ಕೂಡ ಕರ್ತೃತ್ವವನ್ನು ಒಪ್ಪಬಹುದೆಂಬುದನ್ನು ನಿರಾಕರಣೆ ಮಾಡಿದಂತಾಯಿತು. ಈಶ್ವರನೊಬ್ಬನಿಗೇ ಕರ್ತೃತ್ವವನ್ನು ಕಲ್ಪನೆ ಮಾಡುವುದರಿಂದ ಕಲ್ಪನಾಲಾಘವವಿದೆ. ಜೀವನಿಗೂ ಕೂಡ ಕರ್ತೃತ್ವವನ್ನು ಕಲ್ಪನೆ ಮಾಡಿದರೆ ಕಲ್ಪನಾಗೌರವ ದೋಷವು ಬರುತ್ತದೆ. ಹೀಗೆ ಲಾಘವರೂಪ ಯುಕ್ತಿಯಿಂದ ಕೂಡಿದ ಶ್ರುತಿಯಿಂದ ಸಿದ್ಧವಾದ ಈಶ್ವರನ ಕರ್ತೃತ್ವವನ್ನು ತ್ಯಾಗ ಮಾಡಲು ಕಾರಣವಿಲ್ಲ. ಹೀಗೆ ಯುಕ್ತಿಬದ್ಧವಾದ ಶ್ರುತಿವಿರೋಧವಿರುವುದರಿಂದ ಜೀವಕರ್ತೃತ್ವಶ್ರುತಿಗೆ ಅಪ್ರಾಮಾಣ್ಯವೆಂದೇ ಹೇಳಬೇಕು. ಆದ್ದರಿಂದ ನಾರಾಯಣನಲ್ಲಿ ಮಾಡಲ್ಪಟ್ಟ ಶ್ರುತಿಸಮನ್ವಯವು ಅಯುಕ್ತವಾಗಿದೆ. ಇಷ್ಟು ಅಧಿಕರಣದ ಪೂರ್ವಪಕ್ಷ.

ಸಿದ್ಧಾಂತಸ್ಥಾಪಕವಾದ ಸೂತ್ರಕ್ಕೆ 'ಅತಃ' ಎಂಬುದಾಗಿ ಅವತಾರಿಕೆಯನ್ನು ನೀಡಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ – ಒಬ್ಬನಿಗೆ ಕರ್ತೃತ್ವ ಹೇಳಿದರೆ ಲಾಘವವಿದೆ. ಇಬ್ಬರಿಗೆ ಕರ್ತೃತ್ವ ಹೇಳಿದರೆ ಗೌರವ ಇದೆ. ಈ ಲಾಘವ ಯುಕ್ತಿಯಿಂದ ಅನೇಕ ಪ್ರಮಾಣದಿಂದ ಸಿದ್ಧವಾದ ಶ್ರೀಹರಿಯ ಕರ್ತೃತ್ವವೇ ಸಿದ್ಧವಾಗುತ್ತದೆ. ಮತ್ತು 'ನಾನ್ಯಃ ಕರ್ತಾ' ಇತ್ಯಾದಿ ಶ್ರುತಿಗಳಿಂದ ಹಿತಾಕರಣಾದಿಯುಕ್ತಿಗಳಿಂದಲೂ ಜೀವನಿಗೆ ಕರ್ತೃತ್ವವು ನಿಷಿದ್ಧವಾಗಿದೆ. ಆದ್ದರಿಂದ ಜೀವನಿಗೆ ಕರ್ತೃತ್ವವನ್ನು ನಿರೂಪಣೆ ಮಾಡುವ ಶ್ರುತಿಗೆ ಅಪ್ರಾಮಾಣ್ಯವನ್ನು ಹೇಳಬೇಕು. ಇದರ ಆಧಾರದಲ್ಲಿ ಉಳಿದ ಶ್ರುತಿಗಳೂ ಕೂಡ ಅಪ್ರಮಾಣವಾಗುತ್ತವೆ. ಆದ್ದರಿಂದ ಎಲ್ಲಾ ಶ್ರುತಿಗಳನ್ನು ಭಗವಂತನಲ್ಲಿ ಸಮನ್ವಯ ಮಾಡುತ್ತೇವೆಂಬ ಪ್ರತಿಜ್ಞೆಯು ಭಗ್ನವಾಯಿತು.

**तत्वप्रकाशिका – अस्त्येव जीवस्यापि कर्तृत्वम् । तदभावे विधिनिषेधशास्त्रवैयर्थ्यप्रसङ्गात् । न हि कर्तारमन्तरेणारण्यरोदनायमानशास्त्रस्य सार्थक्यं भवति । न च जडं प्रति तौ भवतः नापीश्वरं प्रति । तथा सति पुण्यपापलेपप्रसङ्गेनानीश्वरत्वापत्तेः । अतो जीवस्य कर्तृत्वाङ्गीकारे शास्त्रस्यार्थवत्त्वसिद्धेः सोऽपि कर्ताङ्गीकार्य इति भावः ।।**

ಜೀವನಿಗೂ ಕೂಡ ಕರ್ತೃತ್ವವನ್ನು ಒಪ್ಪಲೇಬೇಕು. ಜೀವನಿಗೆ ಕರ್ತೃತ್ವವಿಲ್ಲದಿದ್ದರೆ ವಿಧಿನಿಷೇಧ ಶಾಸ್ತ್ರಗಳೇ ವ್ಯರ್ಥವಾಗಬೇಕಾಗುತ್ತವೆ. ಕರ್ತೃವೇ ಇಲ್ಲದೆ ಅರಣ್ಯರೋಧನ ಮಾಡುವ ಶಾಸ್ತ್ರಕ್ಕೆ

ಸಾರ್ಥಕ್ಯವನ್ನು ಹೇಳಲು ಸಾಧ್ಯವಿಲ್ಲ. ಜಡವನ್ನು ಕುರಿತು ವಿಧಿನಿಷೇಧಗಳು ಸಾರ್ಥಕವಾಗಲಾರವು. ಈಶ್ವರನ ವಿಷಯದಲ್ಲಿ ಇದು ವ್ಯರ್ಥ. ಹಾಗಾದರೆ ಪುಣ್ಯಪಾಪಲೇಪವು ಇರುವುದರಿಂದ ಈಶ್ವರನೂ ಕೂಡ ಅನೀಶ್ವರನಾಗಬೇಕಾಗುತ್ತದೆ. ಹಾಗಾಗಿ ಜೀವನಿಗೆ ಕರ್ತೃತ್ವವನ್ನು ಅಂಗೀಕಾರ ಮಾಡಿದರೆ ಶಾಸ್ತ್ರಗಳಿಗೆ ಸಾರ್ಥಕ್ಯವು ಯುಕ್ತವಾಗುತ್ತದೆ. ಜೀವನಿಗೂ ಕರ್ತೃತ ಸಿದ್ಧವಾಗುತ್ತದೆ.

## ಬ್ರಹ್ಮಸೂತ್ರ

**सूत्रम् – विहारोपदेशात् ।।**

ಮೋಕ್ಷದಲ್ಲಿ 'ಜಕ್ಷನ್ ಕ್ರೀಡನ್ ರಮಮಾಣಃ' ಎಂಬುದಾಗಿ ವಿಹಾರಕರ್ತೃತ್ವವನ್ನು ಜೀವನಿಗೆ ಹೇಳಿರುವುದರಿಂದ ಜೀವನಲ್ಲಿರುವ ಕರ್ತೃತ್ವವು ಪಾರಮಾರ್ಥಿಕವೇ ಆಗಿರುತ್ತದೆ. ಕಾಲ್ಪನಿಕವಲ್ಲ.

## ಸೂತ್ರದೀಪಿಕಾ

**सूत्रदीपिका –** मुक्तावपि 'जक्षन् क्रीडन्' इति **विहारकर्तृत्वोक्तेः** जीवः परमार्थत एव कर्ता । न काल्पनिककर्तेत्यर्थः ।।२।।

ಮೋಕ್ಷದಲ್ಲಿಯೂ ಕೂಡ 'ಜಕ್ಷನ್ ಕ್ರೀಡನ್ ರಮಮಾಣಃ' 'ಸ್ತ್ರೀಭಿರ್ವಾ ಯಾನೈರ್ವಾ ಜ್ಞಾತಿಭಿರ್ವಾಽಜ್ಞಾತಿಭಿರ್ವಾ' ಎಂಬುದಾಗಿ. ವಿಹಾರೋಪದೇಶಾತ್ = ವಿಹಾರಕರ್ತೃತ್ವವನ್ನು ಜೀವನಿಗೆ ಪಾರಮಾರ್ಥಿಕವಾಗಿ ಹೇಳಿರುವುದರಿಂದ, ಜೀವನಿಗಿರುವ ಕರ್ತೃತ್ವವು ಕಾಲ್ಪನಿಕವಲ್ಲ.

## ಬ್ರಹ್ಮಸೂತ್ರಭಾಷ್ಯ

**भाष्यम् – ।। विहारोपदेशात् ।।२।।**

**'स्त्रीभिर्वा यानैर्वा ज्ञातिभिर्वाऽज्ञातिभिर्वा' (छां. ८.१२.३) इत्यादि ।।२।।**

ಅನುವಾದ - ಸ್ತ್ರೀಯರಿಂದ ವಿಮಾನಗಳಿಂದ ಜೀವರು ವಿಹಾರ ಮಾಡುತ್ತಾರೆ ಹೀಗೆ ಛಾಂದೋಗ್ಯಶ್ರುತಿಯು ಹೇಳುತ್ತಿದೆ. ಆದ್ದರಿಂದ ಜೀವನ ಕರ್ತೃತ್ವವು ಸ್ವಾಭಾವಿಕವಾಗಿದೆ.

ಪ್ರತಿಪದಾರ್ಥ -- ಸ್ತ್ರೀಭಿರ್ವಾ ಯಾನೈರ್ವಾ ಜ್ಞಾತಿಭಿರ್ವಾ ಇತ್ಯಾದಿ = ಸ್ತ್ರೀಯರಿಂದ ವಿಮಾನಗಳಿಂದ ಜೀವರು ವಿಹಾರ ಮಾಡುತ್ತಾರೆ. ಇವೇ ಮೊದಲಾದ ಶ್ರುತಿಗಳಿಂದ ಮೋಕ್ಷದಲ್ಲಿಯೂ ಕರ್ತೃತ್ವ ಇರುವುದರಿಂದ ಕರ್ತೃತ್ವವು ಜೀವನ ಸ್ವಭಾವವೆಂದು ಸಿದ್ಧವಾಗುತ್ತದೆ.

## ತತ್ವಪ್ರಕಾಶಿಕಾ

**तत्वप्रकाशिका – जीवस्य स्वतः कर्तृत्वाभावेऽपि परगतकर्तृत्वे विवेकाग्रहोऽस्त्येवातस्तादृशं कर्तारं प्रति शास्त्रं प्रवर्ततामित्याशङ्कां परिहरत्सूत्रमुपन्यस्य व्याचष्टे**

**– विहारेति ।। न जीवस्य काल्पनिकं कर्तृत्वं किं तु पारमार्थिकमेव । विगलिताखिलकल्पनेऽपि कैवल्ये विहारादिकर्तृत्वोपदेशादिति भावः ।।**

ಜೀವನಿಗೆ ಸ್ವಾಭಾವಿಕವಾಗಿ ಕರ್ತೃತ್ವ ಇಲ್ಲದಿದ್ದರೂ ಕೂಡ ಇನ್ನೊಂದು ಕಡೆ ಕರ್ತೃತ್ವದ ವಿವೇಕದ ಆಗ್ರಹದಿಂದ ತಾನೇ ಕರ್ತೃವೆಂದು ತಿಳಿದಿದ್ದಾನೆ. ಇಂತಹ ಕರ್ತೃವನ್ನು ಕುರಿತು ಶಾಸ್ತ್ರಗಳು ಹೊರಟಿವೆ ಎಂದು ಹೇಳಬಹುದಲ್ಲವೇ? ಈ ಆಶಂಕೆಯನ್ನು ಪರಿಹಾರ ಮಾಡಲು ಸೂತ್ರವನ್ನು 'ವಿಹಾರ' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಜೀವನಿಗೆ ಕಾಲ್ಪನಿಕವಾದ ಕರ್ತೃತ್ವವು ಇರುವುದಿಲ್ಲ. ಪಾರಮಾರ್ಥಿಕವಾದ ಕರ್ತೃತ್ವವೇ ಇರುತ್ತದೆ. ಏಕೆಂದರೆ ಯಾವುದೇ ಕಲ್ಪನೆಗಳಿಗೆ ಅವಕಾಶವಿಲ್ಲದ ಮೋಕ್ಷದಲ್ಲಿ ವಿಹಾರಾದಿ ಕರ್ತೃತ್ವವನ್ನು ಶ್ರುತಿಯು ಹೇಳುತ್ತಿದೆ. ಇಷ್ಟು ಸೂತ್ರದ ಅಭಿಪ್ರಾಯ.

ವಿವರಣೆ - ಸಾಂಖ್ಯರು ಬುದ್ಧಿಯಲ್ಲಿ ಕರ್ತೃತ್ವವನ್ನು ಒಪ್ಪುತ್ತಾರೆ. ಜೀವ ಹಾಗೂ ಬುದ್ಧಿಗಳಿಗೆ ವಿವೇಕದ ಅರಿವಿಲ್ಲದೆ ಬುದ್ಧಿಯಲ್ಲಿರುವ ಕರ್ತೃತ್ವವನ್ನು ತಾನೇ ಕಲ್ಪನೆ ಮಾಡಿಕೊಳ್ಳುತ್ತಾನೆ. ಹೀಗೆ ಕಾಲ್ಪನಿಕವಾದ ಕರ್ತೃತ್ವವನ್ನು ವಿವಕ್ಷಿಸಿ ಶಾಸ್ತ್ರಗಳು ವಿಧಿನಿಷೇಧಗಳನ್ನು ಹೇಳುತ್ತಿವೆ ಎಂಬುದು ಪೂರ್ವಪಕ್ಷ.

ಸಂಸಾರಾವಸ್ಥೆಯಲ್ಲಿ ಇಂತಹ ಕಾಲ್ಪನಿಕ ಕರ್ತೃತ್ವವನ್ನು ಕಥಂಚಿತ್ ಉಪಪಾದನೆ ಮಾಡಬಹುದು. ಆದರೆ ಯಾವುದೇ ಭ್ರಾಂತಿಗೂ ಮೋಕ್ಷದಲ್ಲಿ ಅವಕಾಶವೇ ಇಲ್ಲ. ಇಂತಹ ಮೋಕ್ಷದಲ್ಲೂ ಕೂಡ ಮುಕ್ತನಾದ ಜೀವನು ವಿಹರಿಸುತ್ತಾನೆಂದು ಶ್ರುತಿಯು ಹೇಳುತ್ತಿದೆ. ಆದ್ದರಿಂದ ಭ್ರಾಂತಿಕಲ್ಪಿತಕರ್ತೃತ್ವವನ್ನು ಎಲ್ಲಿ ಹೇಳಲು ಸಾಧ್ಯವಿಲ್ಲವೋ ಅಂಥ ಮೋಕ್ಷದಲ್ಲಿ ಪಾರಮಾರ್ಥಿಕವಾದ ಕರ್ತೃತ್ವವನ್ನೇ ಒಪ್ಪಬೇಕು. ಸಂಸಾರಾವಸ್ಥೆಯಲ್ಲೂ ಕೂಡ ಅಂಥ ಪಾರಮಾರ್ಥಿಕವಾದ ಕರ್ತೃತ್ವವನ್ನು ಒಪ್ಪುವುದೇ ಉಚಿತವಾಗಿ.

## ಬ್ರಹ್ಮಸೂತ್ರ

**सूत्रम् – उपादानात् ।।**

ಮೋಕ್ಷಫಲದ ಉದ್ದೇಶದಿಂದ ಜೀವನು ಅನೇಕ ಸಾಧನೆಗಳನ್ನು ಅನುಷ್ಠಾನ ಮಾಡುತ್ತಾನೆ. ಇದು ಪ್ರತ್ಯಕ್ಷಸಿದ್ಧವಾದ್ದರಿಂದ ಸಂಸಾರಾವಸ್ಥೆಯಲ್ಲಿಯೂ ಕೂಡ ಜೀವನಿಗಿರುವ ಕರ್ತೃತ್ವವು ಕಾಲ್ಪನಿಕವಲ್ಲ.

## ಸೂತ್ರದೀಪಿಕಾ

**सूत्रदीपिका –** जीवस्य मोक्षार्थे साधनाद्यनुष्ठानदर्शनात् ततः फलदर्शनाच्च न जीवः संसारेऽपि काल्पनिककर्तेत्यर्थः ।।३।।

ಉಪಾದಾನಾತ್ = ಜೀವನು ಮೋಕ್ಷಾದಿಫಲದ ಉದ್ದೇಶದಿಂದ ಅನೇಕ ಸಾಧನೆಗಳ ಅನುಷ್ಠಾನವನ್ನು ಮಾಡಿ, ಅದಕ್ಕೆ ತಕ್ಕ ಫಲವನ್ನೂ ಕೂಡ ಪಡೆಯುತ್ತಿದ್ದಾನೆ. ಆದ್ದರಿಂದ ಜೀವನಲ್ಲಿರುವ ಕರ್ತೃತ್ವವು ಕಾಲ್ಪನಿಕವಲ್ಲ.

ಕರ್ತೃತ್ವಾಧಿಕರಣ (೨-೩-೧೭)

## ಬ್ರಹ್ಮಸೂತ್ರಭಾಷ್ಯ

**भाष्यम् – ।। उपादानात् ।।३।।**

**साधनाद्युपादानप्रतीतेश्च ।।३।।**

ಜೀವನು ಯಾವ ಕಾರ್ಯದಲ್ಲಿ ತೊಡಗುತ್ತಾನೋ ಆ ಕಾರ್ಯದ ಸಾಧನಾದಿಗಳನ್ನು ಸಂಗ್ರಹ ಮಾಡಿ ಕೆಲಸವನ್ನು ಸಮಾಪ್ತಿ ಮಾಡುತ್ತಾನೆ. ಇದರಿಂದ ಜೀವಕರ್ತೃತ್ವವು ಅನುಭವ ಸಿದ್ಧವಾಗುತ್ತದೆ.

ಪ್ರತಿಪದಾರ್ಥ -- ಸಾಧನಾದ್ಯುಪಾದಾನಪ್ರತೀತೇಶ್ಚ = ಸಾಧನ ಮೊದಲಾದವುಗಳನ್ನು ಸಂಗ್ರಹಿಸಿ ಕೆಲಸವನ್ನು ಮುಗಿಸುವುದರಿಂದಲೂ ಕರ್ತೃತ್ವವು ಸಿದ್ಧವಾಗುತ್ತದೆ.

## ತತ್ವಪ್ರಕಾಶಿಕಾ

**तत्वप्रकाशिका – अस्तु मोक्षे जीवस्य स्वाभाविकं कर्तृत्वं प्रामाणिकत्वात्। संसारे तु काल्पनिकमेव किं न स्यात्तावतापि च शास्त्रसार्थक्यादित्याशङ्कां परिहरत्सूत्रं पठित्वा व्याचष्टे – उपादानादिति ।।**

ಶ್ರುತಿಯ ಆಧಾರದಿಂದ ಜೀವನಿಗೆ ಸ್ವಾಭಾವಿಕವಾದ ಕರ್ತೃತ್ವವು ಮೋಕ್ಷದಲ್ಲಿ ಇರಲಿ ಸಂಸಾರಾವಸ್ಥೆಯಲ್ಲಿ ಕಾಲ್ಪನಿಕವಾದ ಕರ್ತೃತ್ವವನ್ನೇ ಒಪ್ಪಬಹುದು? ಹೀಗೆ ಒಪ್ಪುವುದರಿಂದಲೂ ಕೂಡ ಶಾಸ್ತ್ರಗಳೆಲ್ಲವೂ ಸಾರ್ಥಕವಾಗುತ್ತವಲ್ಲವೇ? ಈ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು 'ಉಪಾದಾನಾತ್' ಎಂಬುದಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – न जीवस्य संसारेऽपि कर्तृत्वं काल्पनिकम् । मोक्षार्थं साधनाद्युपादानप्रतीतेः ततश्च फलदर्शनात् । न हि परानुष्ठितसाधनेष्वात्मीयता-कल्पनमात्रेण फलाभिसम्बन्धो भवत्यतिप्रसङ्गादिति भावः ।।**

ಜೀವನಿಗೆ ಸಂಸಾರಾವಸ್ಥೆಯಲ್ಲೂ ಕೂಡ ಕಾಲ್ಪನಿಕ ಕರ್ತೃತ್ವವನ್ನು ಒಪ್ಪಬಾರದು. ಏಕೆಂದರೆ ಮೋಕ್ಷಕ್ಕೋಸ್ಕರ ಅನೇಕ ಸಾಧನೆಗಳನ್ನು ಆಚರಿಸುವುದು ಜೀವನಲ್ಲಿ ಕಾಣಿಸುತ್ತಿದೆ. ಇದರಿಂದ ಫಲವನ್ನು ಹೊಂದುವುದೂ ಕೂಡ ಕಾಣಿಸುತ್ತಿದೆ. ಸಾಧನೆಯು ಮತ್ತೊಂದು ಪದಾರ್ಥದಲ್ಲಿದ್ದು ಅದನ್ನು ತನ್ನದೆಂದು ಕಲ್ಪನೆ ಮಾಡುವ ಮಾತ್ರಕ್ಕೆ ಫಲವು ದೊರಕುವುದು ಎಲ್ಲಿಯೂ ಕೂಡ ಕಂಡಿಲ್ಲ. ಹಾಗೆ ಹೇಳಿದರೆ ಅತಿಪ್ರಸಂಗವು ಬರುತ್ತದೆಂಬುದು ಸೂತ್ರದ ಅಭಿಪ್ರಾಯ.

ವಿವರಣೆ - ಮೋಕ್ಷವನ್ನು ಹೊಂದುವುದಕ್ಕಾಗಿ ಅನೇಕ ಬಗೆಯ ಸಾಧನೆಗಳನ್ನು ಜೀವನು ಆಶ್ರಯಿಸುತ್ತಾನೆ. ಆದರಿಂದ ಫಲವನ್ನೂ ಕೂಡ ಪಡೆಯುತ್ತಾನೆ. ಇದರಿಂದ ಸಂಸಾರಾವಸ್ಥೆಯಲ್ಲಿ ಜೀವನಲ್ಲಿರುವ ಕರ್ತೃತ್ವವು ಪಾರಮಾರ್ಥಿಕವೆಂದೇ ಹೇಳಬೇಕು. ಒಂದುವೇಳೆ ಪೂರ್ವಪಕ್ಷಕಾರರು ಹೇಳುವಂತೆ ಬುದ್ಧಿಯಲ್ಲಿ ಕರ್ತೃತ್ವವಿದೆ, ಇದರ ಆರೋಪ ಮಾತ್ರ ಜೀವನಲ್ಲಿದೆ ಎನ್ನುವುದಾದರೆ ಪರನಲ್ಲಿರುವ ಕರ್ತೃತ್ವದ ಆರೋಪದಿಂದ ತನಗೆ ಫಲ ಸಿಗುವುದು ಎಲ್ಲಿ ಕಂಡಿದೆ? ಹಾಗೇನಾದರೂ ಕೇವಲ

ಅನುಸಂಧಾನದಿಂದ ಫಲವು ಸಿಗುವುದಾದರೆ ಅತಿಪ್ರಸಂಗವು ಬರುತ್ತದೆ. ತನಗೆ ಬಾಯಾರಿಕೆಯಾದಾಗ ಮತ್ತೊಬ್ಬನು ನೀರು ಕುಡಿಯುವುದನ್ನು ನೋಡಿ ತಾನು ತೃಪ್ತನಾಗುವ ಪ್ರಸಂಗ ಬರುತ್ತದೆ. ಹಾಗಾಗಿ ಸಂಸಾರಾವಸ್ಥೆಯಲ್ಲಿ ಜೀವನಲ್ಲಿರುವ ಕರ್ತೃತ್ವವನ್ನು ಪಾರಮಾರ್ಥಿಕವೆಂದೇ ಹೇಳಬೇಕು.

## ಬ್ರಹ್ಮಸೂತ್ರ

## सूत्रम् – व्यपदेशाच्च क्रियायां न चेन्निर्देशविपर्ययः ।।

'ಆತ್ಮಾನಮೇವ ಲೋಕಮುಪಾಸೀತ' ಎಂಬುದಾಗಿ ಉಪಾಸನಾ ಕ್ರಿಯೆಯಲ್ಲಿ ಜೀವನಿಗೆ ಕರ್ತೃತ್ವವನ್ನು ಶ್ರುತಿಯು ಹೇಳುತ್ತಿದೆ. ಆದ್ದರಿಂದಲೂ ಕರ್ತೃತ್ವಶ್ರುತಿಯು ಜೀವನಲ್ಲಿ ಸಿದ್ಧವಾಗುತ್ತದೆ. ಹೀಗಲ್ಲದಿದ್ದರೆ 'ಆತ್ಮಾನಮ್' ಎಂಬುದಾಗಿ ಪರಮಾತ್ಮನನ್ನು ಕರ್ಮವನ್ನಾಗಿ ನಿರ್ದೇಶಿಸುವ ಬದಲು 'ಆತ್ಮಾ' ಎಂದು ಕರ್ತೃವಾಗಿ ನಿರ್ದೇಶಿಸಬೇಕಿತ್ತು.

## ಸೂತ್ರದೀಪಿಕಾ

**सूत्रदीपिका –** क्रियायां 'आत्मानमेव लोकमुपासीत' इति उक्तोपासनक्रियायां व्यपदेशाज्जीवस्य कर्तृत्वोक्तेश्च । जीवः कर्ता न चेत् कर्तृत्वं न चेत् । निर्देशविपर्ययः निर्देशस्य जीवस्य कर्तृत्वेन ईश्वरस्य कर्मत्वेन वचनस्य विपर्ययः आत्मैवोपासीतेत्येवं-रूपवैपरीत्यं स्यादित्यर्थः ।।४।।

'ಆತ್ಮಾನಮೇವ ಲೋಕಮುಪಾಸೀತ' ಎಂಬುದಾಗಿ ಉಪಾಸನಾದಿಕ್ರಿಯೆಯಲ್ಲಿ, ವ್ಯಪದೇಶಾಚ್ಚ = ಜೀವನಿಗೆ ಕರ್ತೃತ್ವವನ್ನು ಹೇಳಿದ್ದರಿಂದಲೂ ಜೀವನು ಕರ್ತೃವಾಗಿದ್ದಾನೆಂದು ತಿಳಿಯುತ್ತದೆ. ನ ಚೇತ್ = ಜೀವನಲ್ಲಿರುವ ಕರ್ತೃತ್ವವು ಶ್ರುತಿಗೆ ವಿವಕ್ಷಿತ ಇಲ್ಲದಿದ್ದರೆ, ನಿರ್ದೇಶವಿಪರ್ಯಯಃ = ಜೀವನನ್ನು ಕರ್ತೃತ್ವೇನ ಈಶ್ವರನನ್ನು ಕರ್ಮತ್ವೇನ ನಿರ್ದೇಶಿಸುವ ವಚನವು ವಿಪರೀತವಾಗಬೇಕಿತ್ತು. ಅಂದರೆ 'ಆತ್ಮಾನಮ್' ಎಂದು ಹೇಳುವ ಬದಲು 'ಆತ್ಮಾ' ಎಂದಿರಬೇಕಿತ್ತು.

## ಬ್ರಹ್ಮಸೂತ್ರಭಾಷ್ಯ

**भाष्यम् –।। व्यपदेशाच्च क्रियायां न चेन्निर्देशविपर्ययः ।।४।।**

**'आत्मानमेव लोकमुपासीत' (बृ.३.४.१५) इति क्रियायां व्यपदेशाच्च । अन्यथाऽऽत्मैव लोकमिति निर्देशः स्यात् ।।४।।**

'ಆತ್ಮಾನಮೇವ ಲೋಕಮುಪಾಸೀತ' ಎಂಬ ಶ್ರುತಿಯು ಜೀವನಲ್ಲಿ ಉಪಾಸನೆ ಎಂಬ ಕ್ರಿಯೆಯನ್ನು ಹೇಳುತ್ತಿದೆ. ಜೀವನು ಕರ್ತೃವಾಗದಿದ್ದರೆ 'ಆತ್ಮಾನಮ್' ಎಂದು ಹೇಳದೆ 'ಆತ್ಮೈವ ಲೋಕಮ್' ಎಂದು ಪರಮಾತ್ಮನಿಗೆ ಕರ್ತೃತ್ವವನ್ನು ಹೇಳಬೇಕಿತ್ತು.

ಪ್ರತಿಪದಾರ್ಥ -- ಲೋಕಂ = ಸರ್ವಾಶ್ರಯನಾದ, ಆತ್ಮಾನಮ್ = ವಿಷ್ಣುವನ್ನು ಉಪಾಸೀತ = ಉಪಾಸನೆ ಮಾಡಬೇಕು. ಇತಿ = ಹೀಗೆ, ಕ್ರಿಯಾಯಾಂ = ಉಪಾಸನಾಕ್ರಿಯಯಲ್ಲಿ

ವ್ಯಪದೇಶಾಚ್ಚ = ಉಪದೇಶ ಮಾಡಿರುವುದರಿಂದಲೂ ಜೀವಕರ್ತೃತ್ವವು ಸಿದ್ಧವಾಗುತ್ತದೆ. ಅನ್ಯಥಾ = ಜೀವಕರ್ತೃತ್ವ ಇಲ್ಲದಿದ್ದರೆ, ಆತ್ಮೈವರೋಕಂ ಇತಿ = ಆತ್ಮೈವ ಲೋಕ ಎಂದೇ, ನಿರ್ದೇಶಃ ಸ್ಯಾತ್ = ಉಲ್ಲೇಖ ಮಾಡಬೇಕಿತ್ತು.

## ತತ್ವಪ್ರಕಾಶಿಕಾ

**तत्वप्रकाशिका – एवमुपपत्त्या प्रत्यक्षेण च साधितजीवकर्तृत्वं श्रुत्याऽपि समर्थयत्सूत्रमुपन्यस्य व्याचष्टे – व्यपदेशाच्चेति ।।**

ಹೀಗೆ ಯುಕ್ತಿಯಿಂದ ಹಾಗೂ ಪ್ರತ್ಯಕ್ಷದಿಂದ ಜೀವಕರ್ತೃತ್ವವನ್ನು ಹಿಂದಿನ ಸೂತ್ರದಲ್ಲಿ ಸಾಧನೆ ಮಾಡಿದ್ದಾಯಿತು. ಈ ಸೂತ್ರದಲ್ಲಿ ಶ್ರುತಿಯಿಂದಲೂ ಕೂಡ ಜೀವಕರ್ತೃತ್ವವು ಸಿದ್ಧವಾಗುತ್ತದೆಂದು ಸಮರ್ಥನೆ ಮಾಡಲು 'ವ್ಯಪದೇಶಾತ್ ಚ' ಇತ್ಯಾದಿಯಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – 'आत्मानमेव लोकमुपासीत' इत्यादावुपासनादिक्रियायां कर्तृत्वेनाऽत्मनो व्यपदेशात् तस्यापि कर्तृत्वमस्त्येव । अत्र 'जीव उपासीत' इत्युक्त्यभावात् कथमयं जीवस्य कर्तृत्वव्यपदेशः ? इति ।**

'ಆತ್ಮಾನಮೇವ ಲೋಕಮುಪಾಸೀತ' ಎಂಬ ಶ್ರುತಿಯಲ್ಲಿ ಉಪಾಸನೆ ಕ್ರಿಯೆಗೆ ಆತ್ಮನೇ ಕರ್ತೃವೆಂದು ಹೇಳಲಾಗಿದೆ. ಆದ್ದರಿಂದ ಜೀವನಿಗೂ ಕೂಡ ಕರ್ತೃತ್ವವು ಇದ್ದೇ ಇರುತ್ತದೆ. ಈ ಶ್ರುತಿಯಲ್ಲಿ 'ಉಪಾಸೀತ' ಎಂದಷ್ಟೇ ಹೇಳಲಾಗಿದೆ. 'ಜೀವಃ' ಎಂಬ ಪದವು ಇರುವುದಿಲ್ಲ. ಆದ್ದರಿಂದ ಇದರಲ್ಲಿ ಜೀವಕರ್ತೃತ್ವ ವ್ಯಪದೇಶವನ್ನು ಹೇಗೆ ಹೇಳುವಿರಿ?

ವಿವರಣೆ - 'ಆತ್ಮಾನಮೇವ ಲೋಕಮುಪಾಸೀತ' ಎಂಬ ಬೃಹದಾರಣ್ಯಕೋಪನಿಷತ್ತಿನಲ್ಲಿ ಶ್ರೀಹರಿಯೇ ಸರ್ವಕ್ಕೂ ಆಧಾರನಾಗಿದ್ದಾನೆಂದು ಉಪಾಸನೆ ಮಾಡಬೇಕೆಂದು ಶ್ರುತಿಯು ಹೇಳುತ್ತಿದೆ. ಜೀವನು ಉಪಾಸನೆ ಮಾಡಬೇಕೆಂಬುದು ಇದರ ಅಭಿಪ್ರಾಯ. ಆದ್ದರಿಂದ ಉಪಾಸನೆ ಕ್ರಿಯೆಗೆ ಕರ್ಮನಾದವನು ಪರಮಾತ್ಮನಾಗಿದ್ದಾನೆ, ಕರ್ತೃವಾದವನು ಜೀವನಾಗಿದ್ದಾನೆ. ಹೀಗೆ ಜೀವಕರ್ತೃತ್ವವು ಈ ಶ್ರುತಿಯಿಂದ ಸಿದ್ಧವಾಗುತ್ತದೆ.

ಕರ್ತೃವಾಚಕವಾದ ಜೀವ ಎಂಬ ಪದವೇ ಇಲ್ಲದಿದ್ದಾಗ ಜೀವನೇ ಕರ್ತೃವೆಂದು ಹೇಗೆ ಹೇಳುವಿರಿ? ಎಂಬ ಪ್ರಶ್ನೆಗೆ 'ಮೈವಂ' ಇತ್ಯಾದಿ ಟೀಕೆಯಿಂದ ಉತ್ತರವನ್ನು ನೀಡಿದ್ದಾರೆ.

**तत्वप्रकाशिका – मैवम् । न हि तावत्क्रिया कर्तृशून्या युक्ता । न तावज्जडं कर्तृ । जीवस्यात्र कृर्तत्वेन श्रुत्यनभिमतत्वे परमात्माभिप्रेतः स्यात् । अन्यथा श्रुतिवैयर्थ्यापातात् । तता च तस्य कर्तृत्वेन व्यपदेशः स्यान्न तु कर्मत्वेन । अतो जीस्यैवात्र कर्तृत्वमुच्यते । तथा च प्रामाणिकत्वान्न गौरवमिति भावः ।।**

ಪರಿಪೂರ್ಣಚಂದ್ರಿಕಾ

ಹೀಗೆ ಆಕ್ಷೇಪ ಮಾಡಬಾರದು. ಯಾವುದೇ ಒಂದು ಕ್ರಿಯೆಯು ಕರ್ತೃಶೂನ್ಯವಾಗಲು ಸಾಧ್ಯವಿಲ್ಲ. ಜಡವಾದದ್ದಕ್ಕೆ ಕರ್ತೃತ್ವವಿಲ್ಲ. ಒಂದುವೇಳೆ ಜೀವನು ಕರ್ತೃವೆಂಬುದು ಶ್ರುತಿಗೆ ಅಭಿಪ್ರಾಯವಿಲ್ಲದಿದ್ದರೆ ಪರಮಾತ್ಮನೇ ಕರ್ತೃವಾಗಬೇಕು. ಇಲ್ಲದಿದ್ದರೆ ಶ್ರುತಿಯು ನಿರರ್ಥಕವಾಗಬೇಕಾಗುತ್ತದೆ. ಆದ್ದರಿಂದ ಭಗವಂತನು ಕರ್ತೃತ್ವೇನ ಇಲ್ಲಿ ವ್ಯಪದಿಷ್ಟನಾದರೆ ಕರ್ಮತ್ವೇನ ವ್ಯಪದಿಷ್ಟನಾಗದೇ ಇರಬೇಕಾಗುತ್ತದೆ. ಆದ್ದರಿಂದ ಪರಿಶೇಷಾತ್ ಜೀವನಲ್ಲಿಯೇ ಕರ್ತೃತ್ವವನ್ನು ಈ ಶ್ರುತಿಯು ಹೇಳುತ್ತಿದೆ ಎಂದು ಒಪ್ಪಬೇಕು. ಆದ್ದರಿಂದ ಜೀವಕರ್ತೃತ್ವ ಪ್ರಾಮಾಣಿಕವಾದ್ದರಿಂದ ಕಲ್ಪನಾಗೌರವ ದೋಷಕ್ಕೆ ಅವಕಾಶವಿಲ್ಲ.

ವಿವರಣೆ - ಉಪಾಸನಾ ಕ್ರಿಯೆಗೆ ಜಡವಸ್ತುವು ಕರ್ತೃವಲ್ಲ. ಭಗವಂತನೂ ಕೂಡ ಕರ್ತೃವಲ್ಲ. ಭಗವಂತನು ಕರ್ತೃವಾದರೆ 'ಆತ್ಮೈವ ಲೋಕಂ ಉಪಾಸೀತ' ಎಂಬುದಾಗಿ ಶ್ರುತಿಯು ಇರಬೇಕಾಗುತ್ತದೆ. 'ಆತ್ಮಾನಮೇವ' ಎಂಬುದು ತಪ್ಪಾಗುತ್ತದೆ. ಮತ್ತು ಎಲ್ಲಿ ಕರ್ತೃತ್ವವಿರುತ್ತದೋ ಅಲ್ಲಿ ಕರ್ಮತ್ವವು ವಿರುದ್ಧವಾದ್ದರಿಂದ ಉಪಾಸನಾ ಕ್ರಿಯೆಗೆ ಕರ್ಮನಾದ ಭಗವಂತನು ಕರ್ತೃವಾಗಲಾರ. ಹೀಗೆ ಅನಿವಾರ್ಯವಾಗಿ ಪರಿಶೇಷ- ಪ್ರಮಾಣದಿಂದ ಜೀವನನ್ನೇ ಕರ್ತೃವೆಂದು ಹೇಳಬೇಕು. ಹಾಗಾಗಿ ಪರಮಾತ್ಮನ ಜೊತೆ ಜೀವನಿಗೂ ಕೂಡ ಕರ್ತೃತ್ವವನ್ನು ಒಪ್ಪಿದರೆ ಕಲ್ಪನಾಗೌರವ ದೋಷಬರುತ್ತದೆಂಬ ಪೂರ್ವಪಕ್ಷದಲ್ಲಿ ಹೇಳಿದ ದೋಷವು ನಿರಾಕೃತವಾಯಿತು.

## ಬ್ರಹ್ಮಸೂತ್ರ

**सूत्रम् – उपलब्धिवदनियमः ।।**

ಆದರೆ ಜೀವನಿಗೆ ಜ್ಞಾನದಲ್ಲಿ ಸ್ವಾತಂತ್ರ್ಯವಿಲ್ಲದಂತೆ ಕ್ರಿಯೆಯಲ್ಲಿಯೂ ಕೂಡ ಸ್ವಾತಂತ್ರ್ಯವಿರುವುದಿಲ್ಲ.

## ಸೂತ್ರದೀಪಿಕಾ

**सूत्रदीपिका – उपलब्धिवत्** उपलब्धाविव । यथा जीवस्योपलब्धौ ज्ञाने । **अनियमः** स्वेच्छानुसारेण ज्ञानालाभः । तथा क्रियायामपि अनियमो युक्त इत्यर्थः ।।९।।

ಉಪಲಬ್ಧಿವತ್ = ಯಾವ ರೀತಿಯಾಗಿ ಜೀವನಿಗೆ ಜ್ಞಾನದಲ್ಲಿ, ಅನಿಯಮಃ = ಸ್ವೇಚ್ಛಾನುಸಾರಿಯಾದ ಜ್ಞಾನಲಾಭವಿಲ್ಲವೋ, ಅದರಂತೆ ಕ್ರಿಯೆಯಲ್ಲಿಯೂ ಕೂಡ ಸ್ವಾತಂತ್ರ್ಯವಿರುವುದಿಲ್ಲ.

## ಬ್ರಹ್ಮಸೂತ್ರಭಾಷ್ಯ

**भाष्यम् – तर्हि कथमीश्वरस्यैव कर्तृत्वमित्यतो वक्ति –**

**।। उपलब्धिवदनियमः ।।९।।**

**यथा ज्ञाने इदं ज्ञास्यामीत्यनियमः प्रतीयते एवं कर्मणि । 'य आत्मानमन्तरो यमयति' इति च श्रुतिः ।।९।।**

ಅನುವಾದ - ಹಾಗಾದರೆ ಈಶ್ವರನಿಗೆ ಮಾತ್ರ ಕರ್ತೃತ್ವವನ್ನು ಹೇಗೆ ಹೇಳುತ್ತೀರಿ ? ಎಂಬ ಪ್ರಶ್ನೆಗೆ ಸೂತ್ರಕಾರರು ಉತ್ತರಿಸುತ್ತಿದ್ದಾರೆ.

ನಾನು ಇದನ್ನು ತಿಳಿಯಬೇಕು ಎಂಬುದಾಗಿ ಇಚ್ಛಿಪಟ್ಟರೂ ತಿಳಿದೇ ತಿಳಿಯುತ್ತದೆ ಎಂಬ ನಿಯಮವಿಲ್ಲ. ಅದರಂತೆ ನಾನು ಈ ಕೆಲಸವನ್ನು ಮಾಡುತ್ತೇನೆ ಎಂದು ಇಚ್ಛಿಪಟ್ಟರೂ ಮಾಡಿಯೇ ಮಾಡುತ್ತಾನೆಂಬ ನಿಯಮವಿರುವುದಿಲ್ಲ. ಆದ್ದರಿಂದ ಜೀವಕರ್ತೃತ್ವವು ಭಗವದಧೀನವಾಗಿದೆ. ಏಕೆಂದರೆ ಯಾವ ಪರಮಾತ್ಮನು ಜೀವನೊಳಗಿದ್ದ ಅವನನ್ನು ನಿಯಂತ್ರಣ ಮಾಡುತ್ತಾನೋ ಎಂಬುದಾಗಿ ಬೃಹದಾರಣ್ಯಕಶ್ರುತಿಯು ಹೇಳುತ್ತಿದೆ.

ಪ್ರತಿಪದಾರ್ಥ -- ತರ್ಹಿ = ಹಾಗಾದರೆ, ಈಶ್ವರಸ್ಯೈವ = ಈಶ್ವರನಿಗೆ ಕರ್ತೃತ್ವವನ್ನು, ಕಥಂ = ಹೇಗೆ ಕೂಡಿಸಬೇಕು. ಇತ್ಯತಃ = ಈ ಪ್ರಶ್ನೆಗೆ, ವಕ್ತಿ = ಸೂತ್ರಕಾರರು ಉತ್ತರಿಸುತ್ತಿದ್ದಾರೆ. ಯಥಾ = ಹೇಗೆ -

ಜ್ಞಾನೇ = ಜ್ಞಾನವನ್ನು ಸಂಪಾದನೆ ಮಾಡಬೇಕಾದರೆ, ಇದಂಜ್ಞಾಸ್ಯಾಮಿ = ಇದನ್ನು ತಿಳಿಯುತ್ತೇನೆ. ಇತಿ ಅನಿಯಮಃ = ಎಂಬ ಅಪೇಕ್ಷೆಯಿದ್ದರೂ ಜ್ಞಾನವು ತಿಳಿದೆ ತಿಳಿಯುತ್ತದೆ ಎಂಬ ನಿಯಮವಿಲ್ಲ. ಏವಂ = ಇದೇ ರೀತಿಯಾಗಿ, ಕರ್ಮಣ್ಯಪಿ = ಕರ್ಮದ ವಿಷಯದಲ್ಲಿ ಕೂಡ, ಜೀವಸ್ಯ = ಜೀವನಿಗೆ, ಪ್ರತೀಯತೇ = ಅನಿಯಮವು ಕಾಣಿಸುತ್ತದೆ. ಆದ್ದರಿಂದ ಯಃ = ಯಾವ ಪರಮಾತ್ಮನು, ಆತ್ಮಾನಂ = ಜೀವನನ್ನು, ಅಂತರಃ = ಒಳಗಡೆ ಇದ್ದು, ಯಮಯತಿ = ಪ್ರೇರಣೆ ಮಾಡುತ್ತಾನೋ, ಇತಿ ಚ = ಹೀಗೆ ಬೃಹದಾರಣ್ಯಕಶ್ರುತಿಯು ಹೇಳುತ್ತಿದೆ.

## ತತ್ವಪ್ರಕಾಶಿಕಾ

**तत्वप्रकाशिका – नन्वेवं जीवस्यापि कर्तृत्वे कथमीश्वरस्यैव कर्तृत्वं पूर्वं समर्थितं कथं च श्रुतिरुपपद्येत । अतस्तद्विरोधोऽस्त्येवेत्याशयेनाशङ्क्य तत्परिहाराय सूत्रमवतार्य व्याचष्टे – तर्हीति ।।**

ಹೀಗೆ ಜೀವನಿಗೂ ಕೂಡ ಕರ್ತೃತ್ವವನ್ನು ಹೇಳಿದರೆ ಹಿಂದೆ ಸಮರ್ಥನೆ ಮಾಡಲ್ಪಟ್ಟ ಈಶ್ವರನಿಗೆ ಕರ್ತೃತ್ವವೆಂಬುದು ಹೇಗೆ ಯುಕ್ತವಾಗುತ್ತದೆ? ಮತ್ತು 'ನಾನ್ಯಃ ಕರ್ತಾ' ಎಂಬ ಶ್ರುತಿಯೂ ಕೂಡ ಹೇಗೆ ಉಪಪನ್ನವಾಗುತ್ತದೆ? ಆದ್ದರಿಂದ ಈ ವಿರೋಧವು ಇದ್ದೇ ಇದೆ. ಈ ಅಭಿಪ್ರಾಯದಿಂದ ಆಶಂಕೆಯನ್ನು ಮಾಡಿ ಇದರ ಪರಿಹಾರಕ್ಕಾಗಿ ಸೂತ್ರಕ್ಕೆ 'ತರ್ಹಿ' ಇತ್ಯಾದಿಯಾಗಿ ಅವತಾರಿಕೆ ನೀಡಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - 'ನಾನ್ಯಃ ಕರ್ತಾ' ಎಂಬ ಶ್ರುತಿಯು ಮತ್ತೊಬ್ಬರಲ್ಲಿ ಕರ್ತೃತ್ವವಿಲ್ಲ, ಪರಮಾತ್ಮನಲ್ಲಿ ಮಾತ್ರ ಇದೆ ಎಂದು ಹೇಳಿದೆ. ಇಬ್ಬರೂ ಕೂಡ ಕರ್ತೃವಾದರೆ ಈ ಶ್ರುತಿಯು ಹೇಗೆ ಉಪಪನ್ನವಾಗುತ್ತದೆಂಬ ಆಕ್ಷೇಪದ ಪರಿಹಾರಕ್ಕಾಗಿ ಈ ಸೂತ್ರ ಹೊರಟಿದೆ.

**तत्वप्रकाशिका – 'इदं वस्त्वहं ज्ञास्यामि' इत्येवं निरूपितेऽपि यथा जीवस्य न ज्ञाने नियमोऽस्ति । स्वेच्छानुसारेण न ज्ञानलाभः, तथा करिष्यामीति**

**रनिरुपितेऽपि कर्मणि नियमाभावादीश्वरस्य तु तद्भावात् स एव कर्ता न जीव इत्युक्तं प्राङ् न तु सर्वथा कर्तृत्वाभावादिति भावः ।**

'ಈ ಪದಾರ್ಥವನ್ನು ನಾನು ತಿಳಿಯುತ್ತೇನೆ' ಎಂಬುದಾಗಿ ಪ್ರಯತ್ನಪಟ್ಟು ಪ್ರವೃತ್ತನಾದರೂ ಕೂಡ ಆ ಪದಾರ್ಥದ ಜ್ಞಾನ ಜೀವನಿಗೆ ಬಂದೇ ಬರುತ್ತದೆಂದು ಹೇಳಲು ಸಾಧ್ಯವಿಲ್ಲ. ತನ್ನ ಇಚ್ಛೆಗೆ ಅನುಸಾರಿಯಾಗಿ ಜ್ಞಾನವನ್ನು ಪಡೆದುಕೊಳ್ಳಲು ಅನರ್ಹನಾಗಿದ್ದಾನೆ. ಅದೇ ರೀತಿಯಾಗಿ ಈ ಕಾರ್ಯವನ್ನು ಮಾಡಿಯೇ ತೀರುತ್ತೇನೆ ಎಂದು ಸಂಕಲ್ಪ ಮಾಡಿ ಪ್ರವೃತ್ತಿ ಮಾಡಿದರೂ ಕೂಡ ಆ ಕಾರ್ಯವನ್ನು ನೆರವೇರಿಸುತ್ತಾನೆಂಬ ನಿಯಮವು ಕೂಡುವುದಿಲ್ಲ. ಈಶ್ವರನಾದರೂ ತಾನು ಸಂಕಲ್ಪ ಮಾಡಿದ್ದನ್ನು ಖಂಡಿತವಾಗಿಯೂ ಕೂಡ ಮಾಡುತ್ತಾನೆ. ಆದ್ದರಿಂದ ಈಶ್ವರನೊಬ್ಬನೇ ಕರ್ತೃವಾಗಿದ್ದಾನೆ, ಜೀವನಲ್ಲ ಎಂಬುದಾಗಿ ಹಿಂದೆ ಹೇಳಲಾಗಿದೆ. ಜೀವನಿಗೆ ಸರ್ವಥಾ ಕರ್ತೃತ್ವ ಇಲ್ಲವೆಂದು ಹೇಳಿಲ್ಲ.

**तत्वप्रकाशिका – न चायं दृष्टान्तः साध्यसमः । न हि जिज्ञासुर्ज्ञानक्रियायामेव साक्षाद् व्याप्रियते, किं तु तत्साधन एवेति । ईश्वरस्यैव नियमेन कर्तृत्वं न जीवस्येत्यत्र प्रमाणमाह – य इति ।।**

'ಜ್ಞಾಸ್ಯಾಮಿ' ಎಂಬ ದೃಷ್ಟಾಂತವು ವಿವಾದಗ್ರಸ್ತವಾಗಿದೆ ಎಂದು ಹೇಳಬಾರದು. ಜಿಜ್ಞಾಸುವಾದವನು ಜ್ಞಾನಕ್ರಿಯೆಯಲ್ಲಿಯೇ ನೇರವಾಗಿ ಪ್ರವೃತ್ತನಾಗುವುದಿಲ್ಲ. ಜ್ಞಾನಕ್ರಿಯೆಯ ಸಾಧನೆಯಲ್ಲಿ ಪ್ರವೃತ್ತನಾಗುತ್ತಾನೆ. ಆದ್ದರಿಂದ ಈಶ್ವರನೊಬ್ಬನೇ ನಿಯಮೇನ ಕರ್ತೃವಾಗಿದ್ದಾನೆ, ಜೀವನಲ್ಲ ಎಂಬುದು ಸಿದ್ಧವಾಯಿತು. ಈ ವಿಷಯದಲ್ಲಿ 'ಯಃ' ಇತ್ಯಾದಿಯಾಗಿ ಪ್ರಮಾಣವನ್ನು ನೀಡುತ್ತಿದ್ದಾರೆ.

**ವಿವರಣೆ** - ಯಾರಿಗೆ ಜ್ಞಾನದ ಇಚ್ಛೆ ಬರುತ್ತದೆ, ಯಾರಿಗೆ ಜ್ಞಾನದ ಇಚ್ಛೆ ಬರುವುದಿಲ್ಲವೆಂದು ನಮಗೆ ನಿರ್ಣಯ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಜ್ಞಾನದ ದೃಷ್ಟಾಂತವೂ ಕೂಡ ಕರ್ತೃತ್ವದಂತೆ ವಿವಾದಗ್ರಸ್ತವಾಯಿತು. 'ಜ್ಞಾಸ್ಯಾಮಿ' ಎಂದು ತಾನು ಸಂಕಲ್ಪ ಮಾಡಿದಾಗ ತನ್ನ ಇಚ್ಛಾನುಸಾರಿಯಾಗಿ ಜ್ಞಾನವನ್ನು ನಿಯಮೇನ ಪಡೆಯುತ್ತಾನೆ. ಆದ್ದರಿಂದ ದೃಷ್ಟಾಂತವು ಅನಿಶ್ಚಿತವಾದ್ದರಿಂದ ಸಾಧ್ಯತಮವಾಯಿತು ಎಂಬುದು 'ನ ಚಾಯಂ' ಎಂಬ ವಾಕ್ಯದ ಅಭಿಪ್ರಾಯ.

ಇದು ಸರಿಯಲ್ಲ. 'ಜ್ಞಾಸ್ಯಾಮಿ' ಎಂಬುದಾಗಿ ಉದ್ದೇಶ ಹೊಂದಿದರೂ ಕೂಡ ನಿಯಮೇನ ಜ್ಞಾನವನ್ನು ಪಡೆದುಕೊಳ್ಳಲಾರ. ಆದ್ದರಿಂದ ಜ್ಞಾನವನ್ನು ಅಪೇಕ್ಷೆ ಪಟ್ಟ ವ್ಯಕ್ತಿಯು ಜ್ಞಾನಕ್ರಿಯೆಯಲ್ಲಿ ಪ್ರಯತ್ನವನ್ನು ಪಡುವುದಿಲ್ಲ. ಜ್ಞಾನಕ್ರಿಯೆಯ ಸಾಧನೆಯಲ್ಲಿ ಪ್ರಯತ್ನವನ್ನು ಪಡುತ್ತಾನೆ. ಇದು ನಮಗೆ ಅನುಭವಸಿದ್ಧವಾಗಿದೆ. ಆದ್ದರಿಂದಲೇ ಕೆಲವೊಮ್ಮೆ ಆ ವ್ಯಕ್ತಿಯು ಆ ಸಾಧನೆಗಳಿಂದ ಜ್ಞಾನವನ್ನು ಪಡೆಯಲಾರ. ಹೀಗೆ 'ಜ್ಞಾಸ್ಯಾಮಿ' ಎಂಬುದೂ ಕೂಡ ನಿಶ್ಚಿತವಾಗಿದೆಯೇ ಹೊರತು ಸಂದಿಗ್ಧವಲ್ಲ. ಆದ್ದರಿಂದ ನಿಯಮೇನ ಕರ್ತೃತ್ವವಿರುವುದು ಶ್ರೀಹರಿಗೆ ಮಾತ್ರ, ಜೀವನಿಗಲ್ಲ ಎಂಬುದು ಶ್ರುತಿಗಳ ಅಭಿಪ್ರಾಯ.

**ಕರ್ತೃತ್ವಾಧಿಕರಣ (೨-೩-೧೭)**

## ಬ್ರಹ್ಮಸೂತ್ರ

**सूत्रम् – शक्तिविपर्ययात् ।।**

ಪರಮಾತ್ಮನ ಶಕ್ತಿಯು ಪರಿಪೂರ್ಣವಾಗಿದೆ. ಆದರೆ ಜೀವನಲ್ಲಿರುವ ಶಕ್ತಿಯು ಅಲ್ಪವಾಗಿದೆ. ಆದ್ದರಿಂದಲೂ ಜೀವನಿಗೆ ಸ್ವಾತಂತ್ರ್ಯವಿಲ್ಲ.

## ಸೂತ್ರದೀಪಿಕಾ

**सूत्रदीपिका – ईशजीवयोः शक्तिविपर्ययात्** पूर्णापूर्णरूपशक्ति-भेदमपेक्ष्य कर्तृत्वमपि स्वतन्त्रपरतन्त्रभेदभिन्नमित्यर्थः । यद्वा ईश्वरवत् जीवे पूर्णशक्त्यभावान्न तस्य स्वतन्त्रकर्तृत्वमित्यर्थः ।।६।।

ಶಕ್ತಿವಿಪರ್ಯಯಾತ್ = ಪರಮಾತ್ಮನ ಶಕ್ತಿಯು ಪರಿಪೂರ್ಣವಾಗಿದೆ. ಜೀವನ ಶಕ್ತಿಯು ಅಲ್ಪವಾಗಿದೆ. ಹೀಗೆ ಭೇದವಿರುವುದರಿಂದ ಜೀವನಲ್ಲಿರುವ ಕರ್ತೃತ್ವವು ಸ್ವತಂತ್ರವಾಗಿರುವುದಿಲ್ಲ. ಪರಮಾತ್ಮನಲ್ಲಿರುವ ಕರ್ತೃತ್ವವಷ್ಟೇ ಸ್ವತಂತ್ರವಾಗಿರುತ್ತದೆ. ಅಥವಾ ಈಶ್ವರನಂತೆ ಜೀವನಲ್ಲಿ ಪರಿಪೂರ್ಣವಾದ ಶಕ್ತಿಯಿಲ್ಲದ ಕಾರಣದಿಂದಲೂ ಸ್ವತಂತ್ರಕರ್ತೃತ್ವವು ಇರುವುದಿಲ್ಲ.

**भाष्यम् – कुतः ? ।। शक्तिविपर्ययात् ।।६।।**

**अल्पशक्तित्वाज्जीवस्य ।।६।।**

ಅನುವಾದ - ಹೀಗೇಕೆ ಅಸ್ವತಂತ್ರಕರ್ತೃತ್ವವನ್ನು ಹೇಳಬೇಕು ? ಎಂದರೆ ಜೀವನಿಗೆ ಅಲ್ಪಶಕ್ತಿ ಇರುವುದರಿಂದ ಎಂದು ಸೂತ್ರಕಾರರು ಉತ್ತರಿಸುತ್ತಿದ್ದಾರೆ.

ಪ್ರತಿಪದಾರ್ಥ -- ಕುತಃ = ಹೀಗೇಕೆ ಎಂದರೆ, ಜೀವಸ್ಯ = ಜೀವನಿಗೆ, ಅಲ್ಪಶಕ್ತಿತ್ವಾತ್ = ಅಲ್ಪಶಕ್ತಿ ಇರುವುದರಿಂದ

## ತತ್ವಪ್ರಕಾಶಿಕಾ

**तत्वप्रकाशिका – ननूभयोः कर्तृत्वाविशेषेऽपीश्वरस्यैव नियमेन कर्तृत्वं न जीवस्येत्येतत् किंनिबन्धनं वैलक्षण्यमिति पृच्छति – कुत इति ।।**

ಜೀವ ಹಾಗೂ ಈಶ್ವರ ಇಬ್ಬರು ಕೂಡ ಕರ್ತೃವಾಗಿರುವಾಗ ಈಶ್ವರನೊಬ್ಬನೇ ನಿಯಮೇನ ಕರ್ತೃವಾಗಿದ್ದಾನೆ, ಜೀವನಲ್ಲ ಎಂಬ ವೈಲಕ್ಷಣ್ಯಕ್ಕೆ ಏನು ಕಾರಣ? ಎಂಬುದಾಗಿ 'ಕುತಃ' ಎಂದು ಪ್ರಶ್ನಿಸುತ್ತಿದ್ದಾರೆ.

ವಿವರಣೆ - ಜೀವ ಹಾಗೂ ಈಶ್ವರ ಇಬ್ಬರೂ ಕೂಡ ಕರ್ತೃವಾಗಿದ್ದಾರೆ. ಆದರೆ ಕಾರ್ಯವನ್ನು ಸಾಧಿಸುವವನು ಈಶ್ವರನು ಮಾತ್ರ, ಜೀವನಲ್ಲ ಎಂದು ಹಿಂದಿನ ಸೂತ್ರದಲ್ಲಿ ಹೇಳಲಾಯಿತು. ಇದಕ್ಕೆ ಏನು ಕಾರಣ ? ಎಂಬುದಾಗಿ ಪ್ರಶ್ನೆಗೆ ಬಂದರೆ ಈ ಸೂತ್ರ ಹೊರಟದೆ.

ಪರಿಪೂರ್ಣಚಂದ್ರಿಕಾ

**तत्वप्रकाशिका – स्वातन्त्र्यपारतन्त्र्यनिमित्तौ नियमानियमाविति परिहारं वक्तुमीशजीवयोः स्वातन्त्र्यपारतन्त्र्ये साधयत्सूत्रं पठित्वं व्याचष्टे – शक्तीति ।। ईश्वरस्य पूर्णशक्तित्वात् स्वातन्त्र्यम् । जीवस्य तद्विपर्ययादस्वातन्त्र्यं प्रतीयत इति भावः ।।**

ಸ್ವಾತಂತ್ರ್ಯಪಾರತಂತ್ರ್ಯಗಳಿಗೆ ನಿಯಮ ಹಾಗೂ ಅನಿಯಮಗಳು ಕಾರಣವಾಗಿವೆ ಎಂಬ ಪರಿಹಾರವನ್ನು ಹೇಳುವುದಕ್ಕಾಗಿ ಪರಮಾತ್ಮನು ಸ್ವತಂತ್ರನಾಗಿದ್ದಾನೆ, ಜೀವನು ಅಸ್ವತಂತ್ರ-ನಾಗಿದ್ದಾನೆ ಎಂದು ಸಮರ್ಥಿಸಲು ಸೂತ್ರವನ್ನು ಶಕ್ತಿ ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಈಶ್ವರನು ಪೂರ್ಣಶಕ್ತಿಯುಳ್ಳವನಾದ್ದರಿಂದ ಸ್ವತಂತ್ರನಾಗಿದ್ದಾನೆ. ಜೀವನು ಇದಕ್ಕೆ ವಿರುದ್ಧನಾದ್ದರಿಂದ ಅಸ್ವತಂತ್ರನಾಗಿದ್ದಾನೆ ಎಂದು ತಿಳಿಯುತ್ತದೆ.

ವಿವರಣೆ - ಯಾವುದೇ ಕಾರ್ಯವನ್ನು ಸಾಧಿಸುವಾಗ ಭಗವಂತನು ನಿಯಮೇನ ಅದನ್ನು ಮಾಡಿಯೇ ತೀರುತ್ತಾನೆ. ಈ ವಿಷಯದಲ್ಲಿ ಅವನು ಸ್ವತಂತ್ರನಾಗಿದ್ದಾನೆ. ಆದರೆ ಜೀವನು ಈ ವಿಷಯದಲ್ಲಿ ಅಸ್ವತಂತ್ರನಾಗಿದ್ದಾನೆ. ನಿಯಮೇನ ಫಲವು ಪರಮಾತ್ಮನಿಗೆ ದೊರೆಯುತ್ತದೆ, ಜೀವನಿಗೆ ದೊರೆಯುವುದಿಲ್ಲ. ಈ ಪ್ರಮೇಯವನ್ನು ತಿಳಿಸುವುದು ಈ ಸೂತ್ರದ ಅಭಿಪ್ರಾಯವಾಗಿದೆ. ಸಂಪೂರ್ಣ ಫಲವು ದೊರೆಯಲು ಪರಮಾತ್ಮನ ಪೂರ್ಣಶಕ್ತಿಯೇ ಕಾರಣವಾಗಿದೆ.

## ಬ್ರಹ್ಮಸೂತ್ರ

**सूत्रम् – समाध्यभावाच्च ।।**

ಜೀವನಿಗೆ ತೃಪ್ತಿ ಇಲ್ಲದಿರುವುದರಿಂದ ಸ್ವಾತಂತ್ರ್ಯವಿಲ್ಲ.

## ಸೂತ್ರದೀಪಿಕಾ

**सूत्रदीपिका – समाधिरलंबुद्धिस्तदभावात्** न जीवस्य स्वतन्त्रकर्तृत्वं किन्तु परतन्त्रकर्तृत्वमेवेत्यर्थः ।।७।।

ಸಮಾಧ್ಯಾಭಾವಾಚ್ಚ = ಯಾವುದೇ ಸುಖಭೋಗಗಳಲ್ಲಿ ಜೀವನಿಗೆ ಅಲಂಬುದ್ಧಿಯು ಇಲ್ಲದ ಕಾರಣ ಸ್ವತಂತ್ರಕರ್ತೃತ್ವವು ಇಲ್ಲವೆಂದು ಸಿದ್ಧವಾಗುತ್ತದೆ. ಪರತಂತ್ರಕರ್ತೃತ್ವವಷ್ಟೇ ಇರುತ್ತದೆ.

## ಬ್ರಹ್ಮಸೂತ್ರಭಾಷ್ಯ

**भाष्यम् – ।। समाध्यभावाच्च ।।७।।**

**समाधानाभावाच्चास्वातन्त्र्यं प्रतीयते अतः ।।७।।**

**ಕರ್ತೃತ್ವಾಧಿಕರಣ (೨-೩-೧೮)**

ಅನುವಾದ - ಜೀವನಿಗೆ ತೃಪ್ತಿಯು ಇಲ್ಲದಿರುವುದರಿಂದಲೂ ಅವನು ಸ್ವತಂತ್ರಕರ್ತವಲ್ಲ.

ಪ್ರತಿಪದಾರ್ಥ -- ಸಮಾಧಾನಾಭಾವಾಚ್ಚ = ಯಾವುದೇ ಕೆಲಸದಲ್ಲಿ ತೃಪ್ತಿ ಇಲ್ಲದ್ದರಿಂದ, ಅಸ್ವಾತಂತ್ರ್ಯಮ್ = ಜೀವನಿಗೆ ಅಸ್ವಾತಂತ್ರ್ಯವು, ಪ್ರತೀಯತೇ = ತಿಳಿಯುತ್ತದೆ.

## ತತ್ವಪ್ರಕಾಶಿಕಾ

**तत्वप्रकाशिका – युक्त्यन्तरेणैतत्प्रतिपादयत्सूत्रमुपन्यस्य व्याचष्टे – समाधीति ।। समाधानम् = अलंबुद्धिरस्तीश्वरस्य इति तस्य स्वातन्त्र्यं, जीवस्य च तदभावादस्वातन्त्र्यं प्रतीयते । स्वतन्त्र्यस्य पूर्णकामत्वादिति भावः ।**

ಮತ್ತೊಂದು ಯುಕ್ತಿಯಿಂದ ಜೀವನಿಗೆ ಅಸ್ವಾತಂತ್ರ್ಯವನ್ನು ಪ್ರತಿಪಾದನೆ ಮಾಡುವ ಸೂತ್ರವನ್ನು 'ಸಮಾಧಿ' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಸಮಾಧಾನ' ಎಂದರೆ ಅಲಂಬುದ್ಧಿ ಎಂದರ್ಥ. ಈಶ್ವರನಿಗೆ ಅಲಂಬುದ್ಧಿಯು ಇದೆ. ಜೀವನಿಗೆ ಅಲಂಬುದ್ಧಿಯು ಇರುವುದಿಲ್ಲ. ಆದ್ದರಿಂದ ಶ್ರೀಹರಿಯು ಸ್ವತಂತ್ರನಾಗಿದ್ದಾನೆ. ಜೀವನು ಅಸ್ವತಂತ್ರನಾಗಿದ್ದಾನೆ. ಪೂರ್ಣತೃಪ್ತನಾಗಿರುವುದರಿಂದಲೇ ಸ್ವತಂತ್ರನಾಗಿದ್ದಾನೆಂದು ತಿಳಿಯಬೇಕು.

**तत्वप्रकाशिका – एवं चेत्किं तर्हीत्यत आह – अत इति ।। यत एवमीशजीवयोः स्वातन्त्र्ये प्रतीयते अतः स्वातन्त्र्यपारतन्त्र्याभ्यां नियमानियमाविति भावः ।।**

ಪರಮಾತ್ಮನು ಪೂರ್ಣಕಾಮನಾದ್ದರಿಂದ ಪ್ರಕೃತದಲ್ಲಿ ಏನು ಹೇಳಿದಂತಾಯಿತು? ಎಂಬ ಪ್ರಶ್ನೆಗೆ ಭಾಷ್ಯದಲ್ಲಿ 'ಅತಃ' ಎಂಬುದಾಗಿ ಉತ್ತರಿಸಿದ್ದಾರೆ. ಯಾವ ಕಾರಣದಿಂದ ಹಿಂದೆ ಹೇಳಲ್ಪಟ್ಟ ಶ್ರೀಹರಿಯಲ್ಲಿ ಸ್ವತಂತ್ರಕರ್ತೃತ್ವ, ಜೀವನಲ್ಲಿ ಅಸ್ವತಂತ್ರಕರ್ತೃತ್ವ ಪ್ರತೀತವಾಗುತ್ತಿದೆಯೋ, ಆ ಕಾರಣದಿಂದ ಪರಮಾತ್ಮನಲ್ಲಿ ಸ್ವಾತಂತ್ರ್ಯದ ನಿಯಮವಿದೆ, ಜೀವನಲ್ಲಿ ಅಸ್ವಾತಂತ್ರ್ಯದ ನಿಯಮವಿದೆ ಎಂದು ತಿಳಿಯಬೇಕು.

ವಿವರಣೆ - ಜೀವನಿಗೆ ಯಾವುದೇ ವಿಷಯದಲ್ಲೂ ತೃಪ್ತಿ ಇರುವುದಿಲ್ಲ. ಆದ್ದರಿಂದ ಅವನು ಸ್ವತಂತ್ರನಲ್ಲ. ಪರಮಾತ್ಮನಿಗೆ ತೃಪ್ತಿ ಇರುವುದರಿಂದ ಸ್ವತಂತ್ರನಾಗಿದ್ದಾನೆ. ಸ್ವಾತಂತ್ರ್ಯಪಾರತಂತ್ರ್ಯಗಳಿಗೆ ಅಲಂಬುದ್ಧಿ ಹಾಗೂ ಅಲಂಬುದ್ಧ್ಯಭಾವಗಳೇ ಕಾರಣವಾಗಿವೆ.

## ಬ್ರಹ್ಮಸೂತ್ರ

**सूत्रम् – यथा च तक्षोभयथा ।।**

ಯಾವರೀತಿಯಾಗಿ ಭವನಾದಿಗಳನ್ನು ನಿರ್ಮಿಸುವ ವ್ಯಕ್ತಿಯು ರಾಜಾದಿಗಳ ಅಧೀನನಾಗಿರುತ್ತಾನೋ, ಅದೇ ರೀತಿಯಲ್ಲಿ ಜೀವನೂ ಸಹ ಈಶ್ವರನ ಅಧೀನನಾಗಿ ಕರ್ತೃವಾಗಿದ್ದಾನೆ.

ಪರಿಪೂರ್ಣಚಂದ್ರಿಕಾ

## ಸೂತ್ರದೀಪಿಕಾ

**सूत्रदीपिका — दार्ष्टान्तिकसमुच्चये चशब्दः । यथा तक्षा वर्धकिः । उभयथा प्रासादादिकारयितृप्रेरितत्वेन तत्कर्तृत्वेन च व्यपदिश्यते तथा ईश्वरनियतोऽपि जीवः कर्तेति वक्तुं शक्यत इत्यर्थः ।।८।।**

ದಾರ್ಷ್ಟಾಂತಿಕವನ್ನು ಸಮುಚ್ಚಯ ಮಾಡಲು 'ಚ' ಶಬ್ದವಿದೆ. ಯಥಾ = ಯಾವರೀತಿಯಾಗಿ, ತಕ್ಷಾ = ಬಡಗಿಯು, ಉಭಯಥಾ = ಭವನಾದಿಗಳ ನಿರ್ಮಾಣದಲ್ಲಿ ಯಜಮಾನನ ಅಧೀನನಾಗಿರುತ್ತಾನೋ, ಅದೇ ರೀತಿಯಲ್ಲಿ ಜೀವನೂ ಕೂಡ ಈಶ್ವರನಿಂದ ಪ್ರೇರಿತನಾಗಿ ಕರ್ತೃವಾಗಿದ್ದಾನೆ.

## ಬ್ರಹ್ಮಸೂತ್ರಭಾಷ್ಯ

**भाष्यम् — ।। यथा च तक्षोभयथा ।।८।।**

**यथा तक्ष्णः कारयितृनियतत्वं कर्तृत्वं च विद्यते, एवं जीवस्यापि ।।८।।**

**ಅನುವಾದ - ಯಾವ ರೀತಿಯಾಗಿ ಬಡಗಿಯು ಯಜಮಾನನ ಆಜ್ಞೆಯಂತೆ ಕೆಲಸವನ್ನು ಮಾಡುವ ಮೂಲಕ ಅಸ್ವಾತಂತ್ರ್ಯವನ್ನು ಹೊಂದಿದ್ದಾನೊ ಅದೇ ರೀತಿಯಾಗಿ ಜೀವನೂ ಕೂಡ ಶ್ರೀಹರಿಯ ಅಧೀನವಾಗಿ ಕರ್ತೃತ್ವವನ್ನು ಹೊಂದಿದ್ದಾನೆ.**

ಪ್ರತಿಪದಾರ್ಥ -- ಯಥಾ = ಯಾವ ರೀತಿಯಾಗಿ, ತಕ್ಷ್ಣಃ = ಬಡಗಿಗೆ, ಕಾರಯತೃನಿಯತತ್ವಂ = ಯಜಮಾನನ ನಿಯಂತ್ರಣಕ್ಕೆ ಒಳಪಟ್ಟು, ಕರ್ತೃತ್ವಂ = ಕರ್ತೃತ್ವವು, ವಿದ್ಯತೇ = ಇರುತ್ತದೋ, ಏವಂ = ಇದೇ ರೀತಿ, ಜೀವಸ್ಯಾऽಪಿ = ಜೀವನಿಗೂ ಕೂಡ ಕರ್ತೃತ್ವ ಇರುತ್ತದೆ.

## ತತ್ವಪ್ರಕಾಶಿಕಾ

**तत्वप्रकाशिका — नन्वेवं यदि जीवस्य न स्वातन्त्र्येण कर्तृत्वमपि त्वीश्वरेच्छयैव, कथं तर्हि कर्तोच्यते? स्वतन्त्रः खलु कर्तेत्याशङ्कां परिहरत्सूत्रमुपन्यस्य व्याचष्टे — यथेति ।। यथा तक्षा प्रासादकारयितृनियतोऽपि कर्तोच्यते तथेश्वरनियतोऽपि जीवः कर्तेति व्यपदेष्टुं शक्यत इत्यर्थः ।।**

ಜೀವನಿಗೆ ಸ್ವತಂತ್ರಕರ್ತೃತ್ವವಿಲ್ಲ, ಈಶ್ವರನಿಗೆ ಮಾತ್ರ ಸ್ವತಂತ್ರಕರ್ತೃತ್ವವು ಇರುತ್ತದೆ ಎಂದು ಹೇಳಿದರೆ. ಜೀವನು ಕರ್ತೃವಾಗಿದ್ದಾನೆಂದು ಹೇಗೆ ಹೇಳುವುದು? ಸ್ವತಂತ್ರನಾದವನಷ್ಟೇ ಕರ್ತೃವಾಗಲು ಸಾಧ್ಯ. ಈ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು 'ಯಥಾ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಯಾವ ರೀತಿಯಾಗಿ ಬಡಗಿಯು ಮನೆ ಕಟ್ಟಿಸುವ ಯಜಮಾನನ ಅಧೀನವಾಗಿ ಕೆಲಸವನ್ನು ಮಾಡಿ ಕರ್ತೃ ಎಂದು ಕರೆಸಿಕೊಳ್ಳುತ್ತಾನೋ, ಅದೇ ರೀತಿಯಾಗಿ ಜೀವನು ಭಗವಂತನ ಅಧೀನನಾಗಿ ಕೆಲಸ ಮಾಡಿ ಕರ್ತೃವೆಂದು ಕರೆಸಿಕೊಳ್ಳುತ್ತಾನೆ.

## ಬ್ರಹ್ಮಸೂತ್ರ

**सूत्रम् – परात्तु तच्छ्रुतेः ।।**

ಜೀವನಲ್ಲಿರುವ ಕರ್ತೃತ್ವಶಕ್ತಿಯು ಪರಮಾತ್ಮನ ಅಧೀನವಾಗಿದೆಯೆಂದು ಶ್ರುತಿ ಸಾರುತ್ತಿದೆ.

## ಸೂತ್ರದೀಪಿಕಾ

**सूत्रदीपिका** – जीवस्य कर्तृत्वशक्तिः परात्तु परमात्मानमनुसृत्यैव तदधीनैवास्ति। कुतः । तच्छ्रुतेः । 'कर्तृत्वं करणत्वञ्च' इति जीवकर्तृत्वस्येशाधीनत्वश्रवणादित्यर्थः ।।९।।

ಜೀವನಿಗೆ ಕರ್ತೃತ್ವಶಕ್ತಿಯು, ಪರಾತ್ತು = ಪರಮಾತ್ಮನನ್ನು ಅನುಸರಿಸಿ ಅವನ ಅಧೀನವಾಗಿ ಇರುತ್ತದೆ. ಏಕೆಂದರೆ ತತ್‌ಶ್ರುತೇಃ = 'ಕರ್ತೃತ್ವಂ ಕರಣತ್ವಂ ಚ ಸ್ವಾಭಾವಶ್ಚೇತನಾ ಧೃತಿಃ । ಯತ್‌ಪ್ರಸಾದಾದಿಮೇ ಸಂತಿ ನ ಸಂತಿ ಯದುಪೇಕ್ಷಯಾ ॥' ಎಂಬ ಪೈಂಗಿಶ್ರುತಿಯು ಜೀವಕರ್ತೃತ್ವವು ಈಶಾಧೀನವೆಂದು ಸಾರುತ್ತಿದೆ.

## ಬ್ರಹ್ಮಸೂತ್ರಭಾಷ್ಯ

**भाष्यम् – ।। परात्तु तच्छ्रुतेः ।।९।।**

**सा च कर्तृत्वशक्तिः परादेव ।**
**'कर्तृत्वं करणत्वं च स्वभावश्चेतना धृतिः ।**
**यत्प्रसादादिमे सन्ति न सन्ति यदुपेक्षया ।।'**
**इति हि पैङ्गिश्रुतिः ।।९।।**

ಅನುವಾದ - ಜೀವನಲ್ಲಿ ಕರ್ತೃತ್ವಶಕ್ತಿಯು ಪರಮಾತ್ಮನಿಂದಲೇ ಬರುತ್ತದೆ. ಪೈಂಗಿಶ್ರುತಿಯು ಹೀಗೆ ಹೇಳುತ್ತಿದೆ. ಕರ್ತೃತ್ವಶಕ್ತಿ, ಇಂದ್ರಿಯಗಳಲ್ಲಿರುವ ಕರಣಶಕ್ತಿ, ಜೀವನ ಸ್ವಭಾವ, ಚೈತನ್ಯ, ದೇಹಧಾರಣಸಾಮರ್ಥ್ಯ ಇವೆಲ್ಲವೂ ಭಗವಂತನ ಸಾಮರ್ಥ್ಯದಿಂದಲೇ ಇರುತ್ತವೆ. ಅವನು ಉಪೇಕ್ಷೆ ಮಾಡಿದರೆ ಇವು ಇರುವುದಿಲ್ಲ. ಹೀಗೆ ಪೈಂಗಿಶ್ರುತಿಯು ಹೇಳುತ್ತಿದೆ.

ಪ್ರತಿಪದಾರ್ಥ -- ಸಾ ಚ = ಆ ಜೀವನಲ್ಲಿರುವ ಕರ್ತೃತ್ವಶಕ್ತಿಯು, ಪರಾದೇವ = ಭಗವಂತನ ಅನುಗ್ರಹದಿಂದಲೇ ಬರುತ್ತದೆ. ಏಕೆಂದರೆ ಕರ್ತೃತ್ವಂ = ಜೀವನಲ್ಲಿರುವ ಕರ್ತೃತ್ವವು, ಕರಣತ್ವಂ = ಇಂದ್ರಿಯಾದಿಗಳಲ್ಲಿರುವ ಕರಣಶಕ್ತಿಯು, ಸ್ವಭಾವಃ = ಜೀವನ ಸ್ವಭಾವವು, ಚೇತನಃ = ಚೈತನ್ಯ, ಧೃತಿಃ = ದೇಹಧಾರಣಶಕ್ತಿ, ಇಮೇ = ಇವೆಲ್ಲವು,

ಯತ್ ಪ್ರಸಾದಾತ್ = ಯಾವ ಭಗವಂತನ ಅನುಗ್ರಹದಿಂದ, ಸಂತಿ = ಇರುತ್ತವೋ, ಯದುಪೇಕ್ಷಯಾ = ಯಾವ ಪರಮಾತ್ಮನು ಉಪೇಕ್ಷೆ ಮಾಡುವುದರಿಂದ, ನ ಸಂತಿ = ಉಳಿಯಲಾರವು, ಇತಿ = ಹೀಗೆ, ಪೈಂಗಿಶ್ರುತಿಃ = ಪೈಂಗಿಶ್ರುತಿಯು ಹೇಳುತ್ತಿದೆ.

## ತತ್ವಪ್ರಕಾಶಿಕಾ

**तत्वप्रकाशिका – ननु किं तक्ष्ण इव जीवस्य कर्तृत्वशक्तिर्जीवाधीनैव, ईश्वराधीनता तु वचनवेतनदानादिवदुत कर्तृत्वशक्तिरपीश्वराधीना? यद्याद्यस्तर्हि 'ईश्वरस्यैव कर्तृत्वम्' इति गतः पक्षः । द्वितीये न जीवस्य कर्तृत्वमित्याशङ्कां परिहरत्सूत्रमुपन्यस्य व्याचष्टे – परादिति ।**

ಬಡಗಿಯಂತೆ ಜೀವನಲ್ಲಿರುವ ಕರ್ತೃತ್ವವು ಮತ್ತೊಬ್ಬ ಜೀವನ ಅಧೀನವೇ ಆಗಿದೆ. ಈಶ್ವರಾಧೀನತ್ವವಾದರೂ ಮಾತು, ವೇತನ ಮೊದಲಾದವುಗಳ ಪಾಲಿಗೆ ಮಾತ್ರ ಎಂದು ಹೇಳುತ್ತೀರೋ? ಅಥವಾ ಕರ್ತೃತ್ವಶಕ್ತಿಯೂ ಕೂಡ ಈಶ್ವರಾಧೀನವೆಂದು ಹೇಳುತ್ತೀರೋ? ಮೊದಲನೆಯ ಪಕ್ಷವನ್ನು ಒಪ್ಪಿದರೆ ಈಶ್ವರನಿಗೆ ಮಾತ್ರ ಕರ್ತೃತ್ವವಿದೆ ಎಂಬ ಪಕ್ಷವು ಹೋಯಿತು. ಎರಡನೆಯ ಪಕ್ಷವನ್ನು ಒಪ್ಪಿದರೆ ಜೀವನಿಗೆ ಕರ್ತೃತ್ವವೇ ಬರುವುದಿಲ್ಲ. ಈ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು 'ಪರಾತ್' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ಯಜಮಾನನ ಅಧೀನವಾಗಿ ಬಡಗಿಯು ಮನೆಯನ್ನು ಕಟ್ಟುತ್ತಾನೆಂದು ಹಿಂದಿನ ಸೂತ್ರದಲ್ಲಿ ಹೇಳಲಾಯಿತು. ಇದರ ಅಭಿಪ್ರಾಯವೇನೆಂದು ಪ್ರಶ್ನಿಸಿ ಉತ್ತರಿಸಲು ಈ ಸೂತ್ರ ಹೊರಟಿದೆ. ಬಡಗಿಯಲ್ಲಿರುವ ಮನೆ ಕಟ್ಟುವ ಶಕ್ತಿ ತನ್ನ ಅಧೀನವೇ ಆಗಿದೆ ಹೊರತು ಯಜಮಾನನ ಅಧೀನವಲ್ಲ. ಯಜಮಾನನ ಮಾತನ್ನು ಅನುಸರಿಸುತ್ತಾನೆ. ಅವನು ಕೊಡುವ ಸಂಬಳವನ್ನು ಸ್ವೀಕಾರ ಮಾಡುತ್ತಾನೆ. ಅಷ್ಟೇ ಹೊರತು, ತನ್ನಲ್ಲಿರುವ ಕರ್ತೃತ್ವವು ತನ್ನ ಅಧೀನವೇ ಆಗಿದೆ. ಅದರಂತೆ ಜೀವನಲ್ಲಿರುವ ಕರ್ತೃತ್ವವು ಜೀವನ ಅಧೀನವೇ ಆಗಿದೆ. ಈಶ್ವರಾಧೀನವೆಂದು ಶಾಸ್ತ್ರದಲ್ಲಿ ಹೇಳುವುದು, ಈಶ್ವರನ ಮಾತುಗಳನ್ನು ಕೇಳುವುದು, ಅವನು ನೀಡಿದ ಫಲವನ್ನು ಅನುಭವಿಸುವುದು ಇತ್ಯಾದಿ ವಿಷಯದಲ್ಲಿ ಮಾತ್ರ ಇಟ್ಟುಕೊಳ್ಳಬೇಕು. ಇದು ನಿಮ್ಮ ಅಭಿಪ್ರಾಯವೋ?

ಅಥವಾ ಜೀವನಲ್ಲಿ ಕರ್ತೃತ್ವವಿದೆಯೋ, ಅದೇ ಪರಮಾತ್ಮನ ಅಧೀನವೆಂದು ಅಭಿಪ್ರಾಯವೇ? ಎಂಬುದು ಎರಡು ವಿಕಲ್ಪಗಳ ಅಭಿಪ್ರಾಯ.

**तत्वप्रकाशिका – नास्माभिस्तत्कर्तृत्वसामर्थ्यं जीवाधीनमुच्यते येनापसिद्धान्तः स्यात् किं तु परमात्माधीनमेव । तथा श्रुतेरिति भावः ।।**

ಜೀವನಲ್ಲಿರುವ ಕರ್ತೃತ್ವವೆಂಬ ಸಾಮರ್ಥ್ಯವು ಜೀವಾಧೀನವೆಂದು ನಾವು ಹೇಳುವುದೇ ಇಲ್ಲ. ಹಾಗೆ ಹೇಳಿದ್ದರೆ ಅಪಸಿದ್ಧಾಂತ ದೋಷವು ಬರುತ್ತಿತ್ತು. ಪರಮಾತ್ಮನಾಧೀನವೆಂದೇ ಹೇಳುತ್ತೇವೆ. ಹಾಗೇ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ.

## ಬ್ರಹ್ಮಸೂತ್ರ

### सूत्रम् – कृतप्रयत्नापेक्षस्तु विहितप्रतिषेधावैयर्थ्यादिभ्यः ॥

ಶಾಸ್ತ್ರದಲ್ಲಿ ವಿಹಿತವಾದ ವಿಧಿನಿಷೇಧಗಳು ವ್ಯರ್ಥವಾಗಬಾರದು. ಆದಕ್ಕಾಗಿ ಪರಮಾತ್ಮನು ಜೀವನ ಕರ್ಮ, ಪ್ರಯತ್ನ, ಯೋಗ್ಯತೆ ಇವೇ ಮೊದಲಾದವುಗಳನ್ನು ಅವಲಂಬಿಸಿ ವಿವಿಧ ಕ್ರಿಯೆಗಳಲ್ಲಿ ಜೀವರನ್ನು ಪ್ರೇರಣೆ ಮಾಡುತ್ತಾನೆ.

## ಸೂತ್ರದೀಪಿಕಾ

**सूत्रदीपिका –** तुरवधारणे। यतः परमात्मा **विहितप्रतिषेधावैयर्थ्यादिभ्यः** । तादर्थ्ये चतुर्थी । विधिनिषेधशास्त्राऽऽवैयर्थ्याय स्वस्य वैषम्यनैर्घृण्यपरिहाराय च । **कृतप्रयत्नापेक्षः** जीवकर्मप्रयत्नयोग्यतामपेक्षमाण एव जीवं प्रेरयति न त्वनपेक्षः सन् अतो जीवशक्तेरीशाधीनत्वेऽपि तस्यापेक्षितकृतिमत्त्वमस्त्येवेत्यर्थः ॥१०॥

'ತು' ಶಬ್ದವು ಅವಧಾರಣಾರ್ಥದಲ್ಲಿ ಪ್ರಯುಕ್ತವಾಗಿದೆ. ಯಾವ ಕಾರಣದಿಂದ ಪರಮಾತ್ಮನು 'ವಿಹಿತಪ್ರತಿಷೇಧಾವೈಯರ್ಥ್ಯಾದಿಭ್ಯಃ' ಚತುರ್ಥೀ ವಿಭಕ್ತಿಯು ತಾದರ್ಥ್ಯದಲ್ಲಿ ಇರುತ್ತದೆ. ವಿಧಿನಿಷೇಧಶಾಸ್ತ್ರಗಳು ವ್ಯರ್ಥವಾಗಬಾರದೆಂದು ಮತ್ತು ತನಗೆ ವೈಷಮ್ಯನೈರ್ಘೃಣ್ಯದೋಷವು ಬರಬಾರದೆಂದು, ಕೃತಪ್ರಯತ್ನಾಪೇಕ್ಷಃ = ಜೀವನಿಗೆ ಸಂಬಂಧಪಟ್ಟ ಕರ್ಮ, ಪ್ರಯತ್ನ, ಯೋಗ್ಯತೆ ಇವುಗಳನ್ನು ಅವಲಂಬಿಸಿಕೊಂಡೇ ಜೀವನನ್ನು ಆಯಾ ಕಾರ್ಯಗಳಲ್ಲಿ ಪ್ರೇರಣೆ ಮಾಡುತ್ತಾನೆ. ತಾನು ಸ್ವತಂತ್ರನೆಂದು ಜೀವನಿಗೆ ಸಂಬಂಧಪಟ್ಟ ಕರ್ಮಾದಿಗಳನ್ನು ಅಪೇಕ್ಷಿಸದೇ ಪ್ರೇರಣೆ ಮಾಡಲಾರನು. ಆದ್ದರಿಂದ ಜೀವನಲ್ಲಿರುವ ಶಕ್ತಿಯು ಈಶಾಧೀನವಾಗಿದ್ದರೂ ಕೃತಿಮತ್ವರೂಪವಾದ ಕರ್ತೃತ್ವವು ಜೀವನಲ್ಲಿ ಇದ್ದೇ ಇರುತ್ತದೆಂದು ಸಿದ್ಧವಾಯಿತು.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ಕರ್ತೃತ್ವಾಧಿಕರಣವು ಮುಗಿಯಿತು.

## ಬ್ರಹ್ಮಸೂತ್ರಭಾಷ್ಯ

**भाष्यम् –॥ कृतप्रयत्नापेक्षास्तु विहितप्रतिषेधावैयर्थ्यादिभ्यः ॥१०॥**

**ततोऽप्रयोजकत्वं शास्त्रस्य नाऽपद्यते । कृतप्रयत्नापेक्षत्वात् तत्प्रेरकत्वस्य । आदिशब्देनावैषम्यादि ॥**

**'पूर्वकर्म प्रयत्नं च संस्कारं चाप्यपेक्ष्य तु ।**
**ईश्वरः कारयेत् सर्वं तच्चेश्वरकृतं मतम् ।**
**अनादित्वाददोषश्च पूर्णशक्तित्वतो हरेः ॥'**

**इति भविष्यत्पर्वणि ।**

ಪರಿಪೂರ್ಣಚಂದ್ರಿಕಾ

**'एतदेवं न चाप्येवम् एतदस्ति च नास्ति च ।।'**

**इति च मोक्षधर्मे ।।१०।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये कर्तृत्वाधिकरणम् ।। १७ ।।**

ಅನುವಾದ - ಜೀವಕರ್ತೃತ್ವವು ಭಗವಂತನ ಅಧೀನವಾಗಿದ್ದರೂ ಶಾಸ್ತ್ರಕ್ಕೆ ಅಪ್ರಯೋಜಕತ್ವವು ಬರುವುದಿಲ್ಲ. ಜೀವನ ಪ್ರಯತ್ನವು ಭಗವಂತನ ಪ್ರೇರಣೆಯನ್ನು ಅವಲಂಬಿಸಿ ಇರುತ್ತದೆ. ಆದಿಶಬ್ದದಿಂದ ವೈಷಮ್ಯನೈರ್ಘೃಣ್ಯದೋಷಗಳು ಕೂಡ ಭಗವಂತನಿಗೆ ಇರುವುದಿಲ್ಲವೆಂದು ತಿಳಿಸಿರುತ್ತಾರೆ. ಪೂರ್ವಕರ್ಮ (ಹಿಂದಿನ ಜನ್ಮದ ಪುಣ್ಯ ಹಾಗೂ ಪಾಪಗಳು) ಪ್ರಯತ್ನ ಹಾಗೂ ಯೋಗ್ಯತೆ ಈ ಮೂರನ್ನು ಅವಲಂಬಿಸಿ ಭಗವಂತನು ಜೀವನಿಂದ ಅನೇಕ ಕಾರ್ಯಗಳನ್ನು ಮಾಡಿಸುತ್ತಾನೆ. ಯಾವ ಕರ್ಮಗಳನ್ನು ಅವಲಂಬಿಸಿ ಭಗವಂತನು ಜೀವದ ಮೂಲಕ ಪುಣ್ಯಪಾಪಗಳನ್ನು ಮಾಡಿಸುತ್ತಾನೋ ಅವುಗಳು ಅನಾದಿಯಾಗಿವೆ. ಆದ್ದರಿಂದ ವೈಷಮ್ಯನೈರ್ಘೃಣ್ಯಕ್ಕೆ ಅವಕಾಶವಿಲ್ಲ. ಪರಿಪೂರ್ಣವಾದ ಶಕ್ತಿಯು ಶ್ರೀಹರಿಗೆ ಇರುವುದರಿಂದ ಅನಾದಿಕರ್ಮಗಳು ಕೂಡ ಶ್ರೀಹರಿಯ ಅಧೀನವೇ ಆಗಿವೆ. ಹೀಗೆ ಭವಿಷ್ಯತ್‌ಪರ್ವದಲ್ಲಿ ಹೇಳಿದ್ದಾರೆ.

ಮಹಾಭಾರತದ ಮೋಕ್ಷಧರ್ಮಪರ್ವದಲ್ಲಿಯೂ ಹೀಗೆ ಹೇಳಿದ್ದಾರೆ -

ಕರ್ತೃತ್ವವು ಜೀವನಲ್ಲಿ ಪ್ರಮಾಣಸಿದ್ಧವಾಗಿದೆ. ಆದರೆ ಸ್ವತಂತ್ರಕರ್ತೃತ್ವ ಪ್ರಮಾಣಸಿದ್ಧವಾಗಿಲ್ಲ. ಈಶ್ವರಾಧೀನವಾದ ಕರ್ತೃತ್ವವು ಅವನಲ್ಲಿ ಇರುತ್ತದೆ.

ಪ್ರತಿಪದಾರ್ಥ -- ತತಃ = ಜೀವನಲ್ಲಿ ಸ್ವತಂತ್ರಕರ್ತೃತ್ವವಿಲ್ಲವೆಂದು ಹೇಳಿದ್ದರಿಂದ ಶಾಸ್ತ್ರಸ್ಯ = ವಿಧಿನಿಷೇಧಾತ್ಮಕವಾದ ಶಾಸ್ತ್ರಗಳಿಗೆ, ಅಪ್ರಯೋಜಕತ್ವಂ = ವೈಯ್ಯರ್ಥ್ಯವನ್ನು ನಾಪದ್ಯತೇ = ಆಪಾದನೆ ಮಾಡಬಾರದು. ಕೃತಪ್ರಯತ್ನಾಪೇಕ್ಷತ್ವಾತ್ = ಹಿಂದಿನ ಕರ್ಮ, ಪ್ರಯತ್ನ ಮತ್ತು ಯೋಗ್ಯತೆಗಳನ್ನು ಅಪೇಕ್ಷಿಸಿ, ತತ್ಪ್ರೇರಕಸ್ಯ = ಜೀವನನ್ನು ಪರಮಾತ್ಮನು ಪ್ರೇರಣೆ ಮಾಡುತ್ತಾನಾದ್ದರಿಂದ ಕರ್ತೃತ್ವವು ಉಪಪನ್ನವಾಗುತ್ತದೆ. ಆದಿಶಬ್ದೇನ = ಸೂತ್ರದಲ್ಲಿರುವ ಆದಿಶಬ್ದದಿಂದ, ಅವೈಷಮ್ಯಾದಿ = ವೈಷಮ್ಯನೈರ್ಘೃಣ್ಯ ದೋಷವಿಲ್ಲವೆಂದು ತಿಳಿಯಬೇಕು.

ಪೂರ್ವಕರ್ಮ = ಹಿಂದಿನ ಕರ್ಮ, ಪ್ರಯತ್ನಂ = ಪ್ರಯತ್ನವನ್ನು, ಚ = ಮತ್ತು, ಸಂಸ್ಕಾರಂ ಚ = ಸಂಸ್ಕಾರವನ್ನು (ಯೋಗ್ಯತೆಯನ್ನು ಕೂಡ), ಅಪೇಕ್ಷ್ಯ = ಅಪೇಕ್ಷೆಪಟ್ಟು, ಈಶ್ವರಃ = ಈಶ್ವರನು, ಸರ್ವಂ = ಪ್ರತಿಯೊಂದು ಕಾರ್ಯಗಳನ್ನು, ಕಾರಯೇತ್ = ಜೀವನ ಮೂಲಕ ಮಾಡಿಸುತ್ತಾನೆ. ತಚ್ಚ = ಆ ಕರ್ತೃತ್ವವಾದರೂ, ಈಶ್ವರಕೃತಂ = ಈಶ್ವರನ ಅಧೀನವೆಂದು, ಮತಂ = ತಿಳಿಯಬೇಕು. ಅನಾದಿತ್ವಾತ್ = ಕರ್ಮವು ಅನಾದಿಯಾದ್ದರಿಂದ, ಹರೇಃ = ಶ್ರೀಹರಿಗೆ, ಪೂರ್ಣಶಕ್ತಿತ್ವಾತ್ = ಪರಿಪೂರ್ಣವಾದ ಶಕ್ತಿ ಇರುವುದರಿಂದ, ಅದೋಷಃ = ಯಾವುದೇ ದೋಷವು ಬರುವುದಿಲ್ಲ. ಇತಿ = ಹೀಗೆ, ಭವಿಷ್ಯತ್‌ಪರ್ವಣಿ = ಭವಿಷ್ಯತ್ ಪರ್ವದಲ್ಲಿ ಹೇಳಿದ್ದಾರೆ.

ಏತದೇವಂ = ಕರ್ತೃತ್ವವು ಜೀವನಿಗೆ ಪ್ರಮಾಣಸಿದ್ಧವಾಗಿದ್ದರೂ, ನಚಾಪ್ಯೇವಮ್ = ಸ್ವತಂತ್ರಕರ್ತೃತ್ವವು ಪ್ರಮಾಣಸಿದ್ಧವಲ್ಲ. ಏತದಸ್ತಿ = ಪರಾಧೀನಕರ್ತೃತ್ವವು ಜೀವನಿಗಿದೆ. ನಾಸ್ತಿ ಚ = ಸ್ವತಂತ್ರಕರ್ತೃತ್ವವು ಇರುವುದಿಲ್ಲ. ಇತಿ = ಹೀಗೆ, ಮೋಕ್ಷಧರ್ಮೇ = ಮೋಕ್ಷಧರ್ಮದಲ್ಲಿ ಹೇಳಿದ್ದಾರೆ.

**ಇಲ್ಲಿಗೆ ಕರ್ತೃತ್ವಾಧಿಕರಣದ ಭಾಷ್ಯ ಹಾಗೂ ಭಾಷ್ಯಾನುವಾದ ಮುಗಿಯಿತು.**

## ತತ್ವಪ್ರಕಾಶಿಕಾ

**तत्वप्रकाशिका – नन्वस्मिन्नपि पक्षे दोष उक्तः । कर्तृत्वशक्तेरीश्वराधीनत्वे तस्यैव कर्तृत्वं न जीवस्येति पुनः शास्त्रवैयर्थ्यमित्येतामाशङ्कां परिहरत्सूत्रं पठित्वा व्याचष्टे – कृतेति ।।**

ಈ ಪಕ್ಷದಲ್ಲಿಯೂ ಕೂಡ ದೋಷವನ್ನು ಹೇಳಿದ್ದೇವಲ್ಲವೇ? ಕರ್ತೃತ್ವಶಕ್ತಿಯು ಈಶ್ವರಾಧೀನವಾದರೆ ಪರಮಾತ್ಮನಿಗೆ ಮಾತ್ರ ಕರ್ತೃತ್ವ ಬರುತ್ತದೆ. ಜೀವನಲ್ಲಿ ಕರ್ತೃತ್ವವೇ ಇಲ್ಲವೆಂದಾಯಿತು. ಆಗ ಶಾಸ್ತ್ರಾರ್ಥದಲ್ಲಿ ವೈಯರ್ಥ್ಯವು ಬರುತ್ತದಲ್ಲವೇ? ಈ ಆಶಂಕೆಯನ್ನು ಪರಿಹಾರ ಮಾಡುವ 'ಕೃತ' ಇತ್ಯಾದಿಯಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ಹಿಂದಿನ ಸೂತ್ರದಲ್ಲಿ ಜೀವನಲ್ಲಿರುವ ಕರ್ತೃತ್ವ ಭಗವದಧೀನವೋ? ಅಥವಾ ಮಾತು ಮೊದಲಾದವುಗಳ ಮಾತ್ರ ಭಗವದಧೀನವೋ? ಎಂದು ಪ್ರಶ್ನಿಸಲಾಗಿತ್ತು. ಮಾತು ಮೊದಲಾದವುಗಳು ಭಗವದಧೀನವಲ್ಲವೆಂದು ಉತ್ತರವನ್ನು ನೀಡಿದ್ದಾಯಿತು. ಹಾಗಾದರೆ ಜೀವಕರ್ತೃತ್ವವೇ ಭಗವದಧೀನವೆಂದು ಒಪ್ಪಿದಾಗ ಶಾಸ್ತ್ರಗಳಿಗೆ ವೈಯರ್ಥ್ಯದೋಷವು ಬರುತ್ತದಲ್ಲವೇ? ಎಂಬ ಆಕ್ಷೇಪವು ಬರುತ್ತದೆ. ಅದಕ್ಕೆ ಈ ಸೂತ್ರದಲ್ಲಿ ಉತ್ತರಿಸುತ್ತಿದ್ದಾರೆ.

**तत्वप्रकाशिका – यतोऽयं परो विधिनिषेधशास्त्रावैयर्थ्यायैव स्वस्य वैषम्यनैर्घृण्यपरिहाराय च जीवस्यानादिकर्मप्रयत्नयोग्यतापेक्ष एव जीवं प्रेरयति न त्वनपेक्षोऽतो न जीवशक्तेरीश्वराधीनत्वेऽपि शास्त्रवैयर्थ्यम् । अनपेक्षया प्रेरणे हि तत्स्यादिति भावः ।**

ಯಾವ ಕಾರಣದಿಂದ ಪರಮಾತ್ಮನು ವಿಧಿನಿಷೇಧಾತ್ಮಕವಾದ ಶಾಸ್ತ್ರಗಳಿಗೆ ವೈಯರ್ಥ್ಯವು ಬರಬಾರದೆಂಬ ಉದ್ದೇಶದಿಂದ ಮತ್ತು ತನ್ನಲ್ಲಿ ವೈಷಮ್ಯನೈರ್ಘೃಣ್ಯದೋಷವು ಬರಬಾರದೆಂಬ ಉದ್ದೇಶದಿಂದಲೂ ಜೀವನ ಅನಾದಿಯಾದ ಕರ್ಮ, ಪ್ರಯತ್ನ, ಯೋಗ್ಯತೆಯನ್ನು ಅನುಸರಿಸಿಯೇ ಜೀವನನ್ನು ಪ್ರೇರಣೆ ಮಾಡುತ್ತಾನೆ. ಇವುಗಳನ್ನು ಅಪೇಕ್ಷೆ ಪಡದೇ ಜೀವನನ್ನು ಪ್ರೇರಣೆ ಮಾಡಲಾರನೋ, ಆದ್ದರಿಂದಲೂ ಜೀವನಲ್ಲಿರುವ ಶಕ್ತಿಯು ಈಶ್ವರಾಧೀನವಾಗಿದ್ದರೂ ಕೂಡ

ಶಾಸ್ತ್ರಗಳಿಗೆ ವೈಯರ್ಥ್ಯದೋಷವು ಬರುವುದಿಲ್ಲ. ಯಾವುದೇ ಶಾಸ್ತ್ರಗಳನ್ನು ಅಪೇಕ್ಷೆ ಪಡದೆ ಜೀವನನ್ನು ಪ್ರೇರಣೆ ಮಾಡುವುದಾಗಿದ್ದಲ್ಲಿ ಶಾಸ್ತ್ರಗಳಿಗೆ ವೈಯರ್ಥ್ಯದೋಷವು ಬರುತ್ತಿತ್ತು ಎಂಬುದು ಸೂತ್ರದ ಅಭಿಪ್ರಾಯ.

ವಿವರಣೆ - ಜೀವಕರ್ತೃತ್ವವು ಭಗವದಧೀನವೇ ಆಗಿದೆ. ಆದರೂ ಕೂಡ ಶಾಸ್ತ್ರಗಳು ವ್ಯರ್ಥವಲ್ಲ. ಭಗವಂತನು ಜೀವನಲ್ಲಿರುವ ಕರ್ಮ, ಯೋಗ್ಯತೆ, ಪ್ರಯತ್ನಗಳನ್ನು ಅನುಸರಿಸಿ ಫಲವನ್ನು ನೀಡುತ್ತಾನೆ. ಜೀವನು ಅಂತಹ ಕರ್ಮಗಳನ್ನು ಆಚರಿಸಬೇಕೆಂದರೆ ಶಾಸ್ತ್ರಗಳನ್ನು ಅನುಸರಿಸಿಯೇ ಪ್ರವೃತ್ತನಾಗಬೇಕು. ಆದ್ದರಿಂದ ಶಾಸ್ತ್ರವೈಯರ್ಥ್ಯದೋಷಕ್ಕೆ ಅವಕಾಶವಿಲ್ಲ.

**तत्वप्रकाशिका – अवैषम्यादि सङ्गृहीतमिति शेषः ।। उक्तोऽपि दोषरिहारः स्मारयितुं पुनरत्रोक्तः । सूत्रार्थे स्मृतिसम्मतिमाह – पूर्वेति ।। संस्कारो योग्यता। कर्मापेक्षया प्रेरकत्वे न तत्कर्मकर्तृत्वमीश्वरस्येत्यत आह – तच्चेति ।।**

ಆದಿಶಬ್ದೇನ ಅವೈಷಮ್ಯಾದಿ ಎಂಬ ಭಾಷ್ಯದ ಶಬ್ದಕ್ಕೆ 'ಸಂಗೃಹೀತಂ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ವೈಷಮ್ಯನೈರ್ಘೃಣ್ಯದೋಷವನ್ನು ಹಿಂದೆ ಪರಿಹಾರ ಮಾಡಲಾಗಿದೆ. ಅದನ್ನೇ ಸ್ಮರಣೆಗೆ ತಂದುಕೊಡಲು ಪುನಃ ಇಲ್ಲಿ ಹೇಳಿದ್ದಾರೆ. ಸೂತ್ರದ ಅರ್ಥದಲ್ಲಿ ಸ್ಮೃತಿಸಮ್ಮತಿಯನ್ನು 'ಪೂರ್ವ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

ಸಂಸ್ಕಾರ ಶಬ್ದಕ್ಕೆ ಯೋಗ್ಯತಾ ಎಂದರ್ಥ. ಕರ್ಮವನ್ನು ಅಪೇಕ್ಷಿಸಿ ಈಶ್ವರನು ಜೀವನಿಗೆ ಪ್ರೇರಣೆ ಮಾಡುತ್ತಾನೆಂದು ಹೇಳಿದರೆ ಆ ಕರ್ಮದ ಕರ್ತೃತ್ವವು ಈಶ್ವರನಿಗೆ ಹೇಗೆ ಬರುತ್ತದೆ? ಎಂಬ ಪ್ರಶ್ನೆಗೆ 'ತಸ್ಯ' ಎಂಬುದಾಗಿ ಉತ್ತರಿಸಿದ್ದಾರೆ.

ವಿವರಣೆ - ಸೂತ್ರದಲ್ಲಿರುವ ಆದಿಶಬ್ದದಿಂದ ವೈಷಮ್ಯನೈರ್ಘೃಣ್ಯ ದೋಷವನ್ನು ಪರಿಹಾರ ಮಾಡುವ ಉದ್ದೇಶದಿಂದ ಜೀವನಲ್ಲಿರುವ ಅನಾದಿಕರ್ಮ, ಪ್ರಯತ್ನ, ಯೋಗ್ಯತೆಗಳನ್ನು ಅನುಸರಿಸುತ್ತಾನೆ. ಕೇವಲ ಶಾಸ್ತ್ರಕ್ಕೆ ಸಾರ್ಥಕ್ಯವನ್ನು ತಂದುಕೊಡುವುದಕ್ಕೆ ಮಾತ್ರವಲ್ಲ ಎಂಬುದನ್ನು ವಿವಕ್ಷಿಸಬೇಕು. ಆದ್ದರಿಂದಲೇ ಸೂತ್ರಕಾರರು ಆದಿ ಶಬ್ದವನ್ನು ಪ್ರಯೋಗ ಮಾಡಿದ್ದಾರೆ. ವಾಸ್ತವಿಕವಾಗಿ ಈ ಅಧ್ಯಾಯದ ಪ್ರಥಮ ಪಾದದ ವೈಷಮ್ಯನೈರ್ಘೃಣ್ಯಾಧಿಕರಣದಲ್ಲಿಯೇ ಈ ದೋಷವನ್ನು ಪರಿಹರಿಸಿದ್ದಾಗಿದೆ. ಆದರೂ ಕೂಡ ಸೂತ್ರಕಾರರು ಪುನಃ ಇಲ್ಲಿ 'ಆದಿ' ಶಬ್ದದಿಂದ ಅದನ್ನು ಸ್ಮರಣೆಗೆ ತಂದುಕೊಡುತ್ತಿದ್ದಾರೆ.

ಸಂಸ್ಕಾರ ಶಬ್ದಕ್ಕೆ ಯೋಗ್ಯತೆ ಎಂಬರ್ಥವನ್ನು ವಿವಕ್ಷಿಸಬೇಕು. ಆಯಾ ಜೀವರ ಯೋಗ್ಯತೆಗೆ ಅನುಗುಣವಾಗಿ ಶುಭಕರ್ಮ, ಅಶುಭಕರ್ಮಗಳನ್ನು ಮಾಡಿಸುತ್ತಾನೆಂಬುದು ಇದರಿಂದ ತಿಳಿಯುತ್ತದೆ.

ಪರಮಾತ್ಮನು ಯಾವ ಜೀವನ ಕರ್ಮವನ್ನು ಅಪೇಕ್ಷಿಸಿಕೊಂಡು ಪ್ರೇರಣೆ ಮಾಡುತ್ತಾನೋ, ಆ ಕರ್ಮವೂ ಕೂಡ ಭಗವದಧೀನವೇ ಆಗಿದೆ. ಆದ್ದರಿಂದ ಸರ್ವಕರ್ತೃತ್ವವು ಪರಮಾತ್ಮನಲ್ಲಿ ಯುಕ್ತವಾಗುತ್ತದೆಂದು ತಿಳಿಯಬೇಕು.

**तत्वप्रकाशिका – तर्हि तत्प्रेरणापेक्षाभावः ? इत्यत आह – अनादित्वादिति।। तर्हि कर्मणामानन्त्यात् कथं तत्कारयितृत्वमीश्वरस्येति तत्राह – पूर्णेति ।।**

ಹಿಂದಿನ ಕರ್ಮವೂ ಕೂಡ ಈಶ್ವರಾಧೀನವಾದರೆ ಆ ಪ್ರೇರಣೆಗೆ ಅಪೇಕ್ಷಿತವಾದ ಕರ್ಮವೇ ಇಲ್ಲವೆಂದಾಯಿತಲ್ಲವೇ? ಎಂಬ ಪ್ರಶ್ನೆಗೆ 'ಅನಾದಿತ್ವಾತ್' ಎಂಬುದರಿಂದ ಉತ್ತರಿಸಿದ್ದಾರೆ. ಕರ್ಮಗಳು ಅನಾದಿಯಾದ್ದರಿಂದ ಅದನ್ನು ಪ್ರೇರಣೆ ಮಾಡಿ, ಮಾಡಿಸಲು ಈಶ್ವರನು ಹೇಗೆ ಸಮರ್ಥನಾಗುತ್ತಾನೆ ? ಎಂಬ ಪ್ರಶ್ನೆಗೆ 'ಪೂರ್ಣ' ಇತ್ಯಾದಿಯಾಗಿ ಉತ್ತರಿಸಿದ್ದಾರೆ.

ವಿವರಣೆ – ಜೀವನು ಭಗವತ್‌ಪ್ರೇರಿತವಾದ ಕರ್ಮದ ಅಧೀನವಾಗಿ ಕರ್ತೃತ್ವವನ್ನು ಹೊಂದಿದ್ದಾನೆ. ಆ ಕರ್ಮವನ್ನು ಸ್ವತಂತ್ರವಾಗಿ ಪ್ರೇರಣೆ ಮಾಡಲಾರ. ಹಿಂದಿನ ಕರ್ಮವನ್ನು ಅವಲಂಬಿಸಿ ಮಾಡಿಸುತ್ತಾನೆ. ಆ ಹಿಂದಿನ ಕರ್ಮಕ್ಕೆ ಭಗವಂತನು ಸಾಕ್ಷಾತ್ ಪ್ರೇರಕನೆಂದು ಹೇಳಿದರೆ ತನಗೆ ಅಪೇಕ್ಷ್ಯವಾದ ಕರ್ಮವೇ ಇಲ್ಲವೆಂದಾಯಿತಲ್ಲವೇ? ಎಂಬ ಪ್ರಶ್ನೆಯು ಬರುತ್ತದೆ. ಅದಕ್ಕೆ ಈ ಕರ್ಮದ ಪರಂಪರೆಯು ಅನಾದಿ ಎಂದು ಉತ್ತರಿಸಿದ್ದಾರೆ. ಆದ್ದರಿಂದ ಅಪೇಕ್ಷ್ಯವಾದ ಕರ್ಮವೇ ಇಲ್ಲವೆಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ಒಂದುವೇಳೆ ಕರ್ಮವು ಅನಾದಿಯಾದರೆ ಈ ಅನಾದಿಯಾದ ಕರ್ಮವನ್ನು ಪ್ರೇರಣೆ ಮಾಡಿ ಹುಟ್ಟಿಸಲು ಹೇಗೆ ಸಾಧ್ಯವಾಗುತ್ತದೆ? ಎಂಬ ಪ್ರಶ್ನೆಗೆ 'ಪೂರ್ಣಶಕ್ತಿತ್ವತಃ' ಎಂಬುದರಿಂದ ಉತ್ತರಿಸಿದ್ದಾರೆ. ಪರಿಮಿತ ಶಕ್ತಿ ಇರುವುದರಿಂದ ಜೀವರ ಎಲ್ಲಾ ಅನಾದಿಕರ್ಮಗಳನ್ನು ಮಾಡಿಸುವ ಸಾಮರ್ಥ್ಯವನ್ನು ಪರಮಾತ್ಮನು ಹೊಂದಿದ್ದಾನೆ.

**तत्वप्रकाशिका – अधिकरणार्थे स्मृतिं चाह – एतदिति ।। एतत् = जीवस्य कर्तृत्वम्, एवं = प्रामाणिकम् । न चाप्येवम् = ईश्वरवत्स्वातन्त्र्येणात 'एतदस्ति न चास्ति च' इत्युच्यत इत्यर्थः ।। अतः श्रुत्यविरोधेन जीवस्य कर्तृत्वसिद्धेर्युक्तो भगवति श्रुतिसमन्वय इति सिद्धम् ।।**

ಈ ಕರ್ತೃತ್ವಾಧಿಕರಣದ ಪ್ರಮೇಯದಲ್ಲಿ ಶ್ರುತಿಪ್ರಮಾಣವನ್ನು 'ಏತತ್' ಇತ್ಯಾದಿಯಾಗಿ ಉಲ್ಲೇಖ ಮಾಡುತ್ತಿದ್ದಾರೆ. 'ಏತತ್' ಎಂದರೆ ಜೀವನಲ್ಲಿರುವ ಕರ್ತೃತ್ವ ಎಂದರ್ಥ. 'ಏವಂ' ಎಂದರೆ ಪ್ರಾಮಾಣಿಕವಾಗಿದೆ ಎಂದರ್ಥ. ಆದರೂ ಕೂಡ ಜೀವನಲ್ಲಿರುವ ಕರ್ತೃತ್ವವು ಈಶ್ವರನಂತೆ ಸ್ವತಂತ್ರವಲ್ಲ. ಆದ್ದರಿಂದ ಕೆಲವೆಡೆ ಜೀವನಿಗೆ ಕರ್ತೃತ್ವ ಇಲ್ಲವೆಂದು ಹೇಳಲಾಗಿದೆ, ಕೆಲವೆಡೆ ಕರ್ತೃತ್ವ ಇದೆ ಎಂದು ಹೇಳಲಾಗಿದೆ.

ಹೀಗೆ ಶ್ರುತಿವಿರೋಧವಿಲ್ಲದ ಕಾರಣ ಜೀವನಲ್ಲಿ ಕರ್ತೃತ್ವವು ಸಿದ್ಧವಾಯಿತು. ಆದ್ದರಿಂದ ಭಗವಂತನಲ್ಲಿ ಮಾಡಲ್ಪಟ್ಟ ಶ್ರುತಿಸಮನ್ವಯವು ಯುಕ್ತವಾಗಿದೆ ಎಂಬುದೂ ಕೂಡ ಸಿದ್ಧವಾಯಿತು.

ವಿವರಣೆ - ಪರಮಾತ್ಮನೊಬ್ಬನೇ ಸ್ವತಂತ್ರಕರ್ತೃವಾಗಿದ್ದಾನೆ. ಜೀವನು ಸ್ವತಂತ್ರಕರ್ತೃವಲ್ಲ ಎಂಬುದಾಗಿ ಮೋಕ್ಷಧರ್ಮವಚನವು ಸ್ಪಷ್ಟವಾಗಿ ಹೇಳಿದೆ. ಆದ್ದರಿಂದ 'ನಾನ್ಯಃ ಕರ್ತಾ' ಎಂಬ ಶ್ರುತಿಯ ವಿರೋಧವು ಬಾರದೇ ಜೀವನಿಗೆ ಕರ್ತೃತ್ವವು ಸಿದ್ಧವಾಗುತ್ತದೆ. ಜೀವನಲ್ಲಿರುವ ಅಸ್ವತಂತ್ರಕರ್ತೃತ್ವವು ಯುಕ್ತಿಯಿಂದ ಸಿದ್ಧವಾಯಿತು. ಮತ್ತು ಶ್ರುತಿಯೂ ಕೂಡ ಈ ವಿಷಯದಲ್ಲಿ ಆಧಾರವಾಗಿದೆ.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಕರ್ತೃತ್ವಾಧಿಕರಣ ಮುಗಿಯಿತು

## ಕರ್ತೃತ್ವಾಧಿಕರಣ
## (೨-೩-೧೭)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

**ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ**

**ಸರಳ ಅನುವಾದ**

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## कर्तृत्वाधिकरणम्

ಜೀವನಿಗೆ ಕರ್ತೃತ್ವವಿದೆ

**कर्ता शास्त्रार्थवत्त्वात् ।। अस्त्वानन्दादीनां सतामेवाभिव्यक्तिः । कर्तृत्वस्य तु न । तस्य कदाप्यभावादिति पूर्वपक्षोत्थानात्सङ्गतिः ।**

ಜೀವನಲ್ಲಿರುವ ಆನಂದಾದಿಗಳು ಮೊದಲು ಇದ್ದದ್ದೇ ಅಭಿವ್ಯಕ್ತವಾಗುತ್ತದೆಂದು ಒಪ್ಪೋಣ. ಆದರೆ ಕರ್ತೃತ್ವವು ಮಾತ್ರ ಹಾಗೆ ಆಗಲು ಸಾಧ್ಯವಿಲ್ಲ. ಜೀವನಲ್ಲಿ ಎಂದೂ ಕೂಡ ಕರ್ತೃತ್ವವೇ ಇರುವುದಿಲ್ಲ. ಹೀಗೆ ಪೂರ್ವಪಕ್ಷವು ಹುಟ್ಟುತ್ತಿರುವುದರಿಂದ ಹಿಂದಿನ ಅಧಿಕರಣದಿಂದ ಆನಂತರ್ಯಸಂಗತಿಯು ಇರುತ್ತದೆ.

**अत्र जीवस्य कर्तृत्वश्रुतिः किं हिताकरणादियुक्त्यनुगृहीतया तदकर्तृत्वश्रुत्या बाधितोत नेति चिन्ता ।**

ಜೀವನಿಗೆ ಕರ್ತೃತ್ವವನ್ನು ಹೇಳುವ ಶ್ರುತಿಯು ಹಿತಾಕರಣಾದಿಯುಕ್ತಿಯಿಂದ ಅನುಗೃಹೀತವಾದ ಅಕರ್ತೃತ್ವ ಶ್ರುತಿಯಿಂದ ಬಾಧಿತವೆಂದು ಹೇಳಬೇಕೋ? ಅಥವಾ ಬಾಧಿತವಲ್ಲವೆಂದು ಹೇಳಬೇಕೋ? ಎಂಬುದು ಅಧಿಕರಣದ ಪ್ರಧಾನ ಸಂಶಯ.

**(अत्र श्रुतिसमन्वयेनोक्तं ब्रह्मणः स्रष्टृत्वादिकमयुक्तं न वेति चिन्ता । तदर्थं श्रुतिरप्रमाणं न वेति । तदर्थं जीवस्य कर्तृत्वश्रुतिः किं हिताकरणादियुक्त्यनुगृहीतया तदकर्तृत्वश्रुत्या बाधितोत नेति)**

ವಿವರವಾದ ಸಂಶಯ ಪರಂಪರೆ ಹೀಗಿದೆ – ಶ್ರುತಿಸಮನ್ವಯದ ಮೂಲಕ ಬ್ರಹ್ಮನಿಗೆ ಸ್ರಷ್ಟೃತ್ವಾದಿಗಳನ್ನು ಹೇಳಲಾಯಿತು. ಇದು ಅಯುಕ್ತವೋ, ಅಲ್ಲವೋ? ಎಂಬುದು ಪ್ರಧಾನ ಸಂಶಯ. ಇದಕ್ಕಾಗಿ ಶ್ರುತಿಯು ಅಪ್ರಮಾಣವೋ ಅಲ್ಲವೋ? ಎಂಬ ಸಂಶಯ ಪರಿಹಾರವಾಗಬೇಕು. ಇದರ ಪರಿಹಾರಕ್ಕಾಗಿ ಜೀವನಿಗೆ ಕರ್ತೃತ್ವ ಶ್ರುತಿಯು ಹಿತಾಕರಣಾದಿಯುಕ್ತ್ಯನುಗೃಹೀತವಾದ ಅಕರ್ತೃತ್ವ ಶ್ರುತಿಯಿಂದ ಬಾಧಿತವೋ ಅಲ್ಲವೋ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थमकर्तृत्वश्रुतिः किं कर्तृत्वमात्रनिषेधपरोत स्वतन्त्रकर्तृत्वनिषेधपरेति । तदर्थं जीवस्येश्वरवत् स्वतन्त्रकर्तृत्वाभावेऽपि परतन्त्र कर्तृत्वमात्रेण विध्यादिविषयत्वमयुक्तमुत नेति ॥**

ಹಿಂದಿನ ಸಂಶಯದ ಪರಿಹಾರಕ್ಕಾಗಿ ಜೀವನಿಗೆ ಕರ್ತೃತ್ವವಿಲ್ಲವೆಂದು ಹೇಳುವ ಶ್ರುತಿಯು ಕರ್ತೃತ್ವವನ್ನಷ್ಟೇ ನಿಷೇಧ ಮಾಡುತ್ತಿದೆಯೋ ಅಥವಾ ಸ್ವತಂತ್ರಕರ್ತೃತ್ವವನ್ನು ನಿಷೇಧ ಮಾಡುತ್ತಿದೆಯೋ? ಎಂಬ ಸಂಶಯ ಪರಿಹಾರವಾಗಬೇಕು. ಅದಕ್ಕಾಗಿ ಜೀವನಿಗೆ ಈಶ್ವರನಂತೆ ಸ್ವತಂತ್ರಕರ್ತೃತ್ವ ಇಲ್ಲದಿದ್ದರೂ ಪರತಂತ್ರಕರ್ತೃತ್ವವು ಇರುವ ಮಾತ್ರದಿಂದ ವಿಧಿನಿಷೇಧಾದಿಗಳ ವಿಷಯತ್ವವು ಅಯುಕ್ತವಾಗುತ್ತದೋ ಅಥವಾ ಅಯುಕ್ತವಾಗುವುದಿಲ್ಲವೋ ? ಎಂಬ ಕೊನೆಯ ಸಂಶಯವು ಪರಿಹಾರವಾಗಬೇಕು.

**न कर्तेति पूर्वपक्ष इति ॥ अयं भावः । जीवस्य कर्तृत्वं किं स्वतन्त्रमुत परतन्त्रम् । नाद्यः । श्रुत्यादिविरोधात् । हिताकरणादिदोषप्रसक्तेश्च ।**

ಜೀವನು ಕರ್ತೃವಲ್ಲ ಎಂಬುದೇ ಅಧಿಕರಣದ ಪೂರ್ವಪಕ್ಷ. ಪೂರ್ವಪಕ್ಷದ ಅಭಿಪ್ರಾಯ ಹೀಗಿದೆ – ಜೀವನಿಗೆ ಹೇಳಲ್ಪಟ್ಟ ಕರ್ತೃತ್ವವು ಸ್ವತಂತ್ರವೋ ಅಥವಾ ಪರತಂತ್ರವೋ? ಸ್ವತಂತ್ರವೆಂದು ಹೇಳಲಾಗದು. ಹಾಗಾದಲ್ಲಿ ಶ್ರುತ್ಯಾದಿಗಳ ವಿರೋಧ ಪ್ರಾಪ್ತವಾಗುತ್ತದೆ. ಮತ್ತು ಹಿತಾಕರಣಾದಿ ದೋಷಗಳಿಗೂ ಅವಕಾಶವಿದೆ.

ವಿವರಣೆ – ಜೀವನಿಗೆ ಕರ್ತೃತ್ವವೇ ಇಲ್ಲವೆಂದು ಪೂರ್ವಪಕ್ಷಿ ಆಕ್ಷೇಪ ಮಾಡುತ್ತಿದ್ದಾನೆ. ಒಂದುವೇಳೆ ಕರ್ತೃತ್ವವನ್ನು ಒಪ್ಪುವುದಾದರೆ ಸ್ವತಂತ್ರಕರ್ತೃತ್ವವನ್ನು ಹೇಳಲು ಸಾಧ್ಯವಿಲ್ಲ. ಹಾಗೆ ಹೇಳಿದರೆ ನಿಮ್ಮ ಸಿದ್ಧಾಂತಕ್ಕೆ ವಿರೋಧ ಬರುತ್ತದೆ, ಶ್ರುತಿವಿರೋಧವೂ ಬರುತ್ತದೆ ಮತ್ತು ಸ್ವತಃ ಸೂತ್ರಕಾರರೇ 'ವಿಹಾರೋಪದೇಶಾತ್' ಇತ್ಯಾದಿ ಸೂತ್ರಗಳಲ್ಲಿ ಹಿತಾಕರಣಾದಿದೋಷಗಳು ಬರುತ್ತವೆಂದು ಹೇಳುತ್ತಾರೆಂದು ಹೇಳಿದ್ದೀರಿ.

**द्वितीयेऽपि पारतन्त्र्यं किं कर्तृत्वशक्तेः स्वायत्तत्वेऽपि तक्ष्णः प्रासादादिकारयितृपुमधीनत्ववदीश्वराधीनत्वमात्रं किं वा दारुयोषावदीश्वराधीनचेष्टाकत्वम् । नाद्यः। ''य आत्मानमन्तरो यमयति'' इत्यादिश्रुतिविरोधात् । अन्त्ये दारुयोषावदेव न जीवो विधिनिषेधविषयः स्यादिति । न्यायविवरणोक्तां पूर्वपक्षयुक्तिमाह – कल्पनालाघवं चेति ॥**

ಎರಡನೆಯ ಪಕ್ಷದಲ್ಲೂ ಕೂಡ ಪುನಃ ಎರಡು ವಿಕಲ್ಪವನ್ನು ಮಾಡುತ್ತೇವೆ. ಜೀವನಲ್ಲಿರುವ ಕರ್ತೃತ್ವವು ಪರತಂತ್ರವೆಂದರೆ ಏನರ್ಥ. ಪಾರತಂತ್ರ್ಯ ಶಬ್ದಕ್ಕೆ ಮಹಡಿಯನ್ನು ಕಟ್ಟುವವನಿಗೆ ಯಾವ ಕರ್ತೃತ್ವ ಶಕ್ತಿಯಿದೆಯೋ ಅದು ತನ್ನ ಅಧೀನವೇ ಆಗಿದೆ. ಆದರೆ ಇವನು ಪ್ರಾಸಾದಾದಿಗಳನ್ನು ನಿರ್ಮಾಣ ಮಾಡಿಸುವ ಯಜಮಾನನ ಅಧೀನನಾಗಿದ್ದಾನೆ. ಅದೇ ರೀತಿಯಾಗಿ ಜೀವನಲ್ಲಿರುವ ಕರ್ತೃತ್ವ ಶಕ್ತಿಯು ಸ್ವಾಧೀನವೇ ಆಗಿದೆ. ಆ ಕರ್ತೃತ್ವವನ್ನು ಮಾಡಿಸುವವನು ಪರಮಾತ್ಮನೇ ಆಗಿದ್ದಾನೆ. ಈ ಅರ್ಥವನ್ನು ಹೇಳುತ್ತೀರೋ ಅಥವಾ ಕಟ್ಟಿಗೆಯಿಂದ ರಚಿತವಾದ ಹೆಣ್ಣು ಬೊಂಬೆಯ ಒಳಗೆ ಒಬ್ಬ ಪ್ರವೇಶ ಮಾಡಿರುತ್ತಾನೆ. ಈ ಬೊಂಬೆಯಲ್ಲಿ ಯಾವ ಚೇಷ್ಟೆಯೂ ಸ್ವತಃ ಇರುವುದೇ ಇಲ್ಲ. ಒಳಗಡೆ

ಇರುವ ಪುರುಷನಿಂದಲೇ ಇದರ ಚೇಷ್ಟೆಯಾಗಲು ಸಾಧ್ಯ. ಈ ರೀತಿಯಾಗಿ ಪ್ರತಿಯೊಬ್ಬ ಜೀವರ ಚೇಷ್ಟೆಯು ಈಶ್ವರಾಧೀನವಾಗಿದೆ ಎಂದು ಹೇಳುತ್ತೀರೋ?

ಮೊದಲನೇ ಪಕ್ಷವು ಅಯುಕ್ತ. ಏಕೆಂದರೆ ಮನೆ ಕಟ್ಟುವವನಲ್ಲಿ ಇರುವ ಕರ್ತೃತ್ವದಂತೆ ಜೀವನಲ್ಲಿರುವ ಕರ್ತೃತ್ವವೆಂದು ಹೇಳಲಾಗದು. ಹಾಗೆ ಹೇಳಿದರೆ 'ಆತ್ಮಾನಂ ಅಂತರೋ ಯಮಯತಿ' ಇತ್ಯಾದಿ ಶ್ರುತಿವಿರೋಧವು ಪ್ರಾಪ್ತವಾಗುತ್ತದೆ. ಏಕೆಂದರೆ ಈ ಶ್ರುತಿಯು ಪರಮಾತ್ಮನು ಪ್ರತಿಯೊಬ್ಬರ ಒಳಗಡೆ ಅಂತರ್ಯಾಮಿಯಾಗಿದ್ದು, ಪ್ರತಿಯೊಂದು ಕಾರ್ಯವನ್ನೂ ಕೂಡ ನಿಯಮನ ಮಾಡುತ್ತಾನೆ ಎಂದು ಹೇಳುತ್ತಿದೆ. ಆದರೆ ಮನೆ ಕಟ್ಟಿಸುವವನು ತಕ್ಷನಲ್ಲಿ ನಿಂತು ಇಂತಹ ಕೆಲಸವನ್ನು ಮಾಡುತ್ತಿಲ್ಲವಾದ್ದರಿಂದ ಆ ತಕ್ಷನ ದೃಷ್ಟಾಂತವು ಅಯುಕ್ತವಾಗಿದೆ.

ಎರಡನೇ ಪಕ್ಷವೂ ಕೂಡ ತಪ್ಪು. ಏಕೆಂದರೆ ಹೆಣ್ಣು ಬೊಂಬೆಯನ್ನು ಕುರಿತು ಯಾರೂ ಕೂಡ ಇದು ಮಾಡು, ಇದು ಬೇಡ ಎಂದು ಹೇಳಲು ಸಾಧ್ಯವೇ ಇಲ್ಲ. ಅದರಂತೆ ಜೀವನೂ ಕೂಡ ವಿಧಿನಿಷೇಧಕ್ಕೆ ವಿಷಯನೇ ಆಗುವುದಿಲ್ಲ. ನ್ಯಾಯವಿವರಣದಲ್ಲಿ ಹೇಳಲ್ಪಟ್ಟ ಪೂರ್ವಪಕ್ಷ ಯುಕ್ತಿಯನ್ನು 'ಕಲ್ಪನಾಲಾಘವಂ ಚ' ಎಂಬ ಟೀಕೆಯಲ್ಲಿ ಹೇಳಿದ್ದಾರೆ.

ವಿವರಣೆ – ಪೂರ್ವಪಕ್ಷಿಯ ಅಭಿಪ್ರಾಯ ಹೀಗಿದೆ – ಕರ್ತೃತ್ವವನ್ನು ಒಪ್ಪುವುದಾದರೆ ಸ್ವಾತಂತ್ರ್ಯೇಣ ಅಥವಾ ಪಾರತಂತ್ರ್ಯೇಣ ಹೇಳಬೇಕು. ಸ್ವಾತಂತ್ರ್ಯೇಣ ಕರ್ತೃತ್ವ ಹೇಳುವುದು ಶ್ರುತ್ಯಾದಿಗಳಿಗೆ ವಿರುದ್ಧವಾಗಿದೆ. ಪಾರತಂತ್ರ್ಯೇಣ ಕರ್ತೃತ್ವದಲ್ಲೂ ಈಶ್ವರನು ಹೊರಗಡೆ ನಿಂತು ಪ್ರೇರಣೆ ಮಾಡುತ್ತಾನೆ ಎಂದು ಹೇಳುವುದೂ ಕೂಡ ಶ್ರುತ್ಯಾದಿವಿರುದ್ಧ. ಈಶ್ವರಾಧೀನಚೇಷ್ಟಾಕರ್ತೃತ್ವರೂಪವಾದ ಪಾರತಂತ್ರ್ಯವನ್ನು ಹೇಳಿದರೆ ವಿಧಿನಿಷೇಧವಿಷಯತ್ವವು ಜೀವನಿಗೆ ನಾಶವಾಗುತ್ತದೆ. ಆದ್ದರಿಂದ ಜೀವನಿಗೆ ಕರ್ತೃತ್ವವನ್ನು ಒಪ್ಪುವುದೇ ಬೇಡ.

**सिद्धान्तयदिति ।। अयं भावः सूत्रोक्तरीत्या युक्तिप्रत्यक्षश्रुतिभिर्जीवः कर्तैव । नच ''नान्यः कर्ता'' इत्यादिश्रुत्या ''इतरव्यपदेशात्'' इति पूर्वोक्त्या च विरोधः ।**

ಸಿದ್ಧಾಂತದ ಅಭಿಪ್ರಾಯ ಹೀಗಿದೆ- ಸೂತ್ರದಲ್ಲಿ ಹೇಳಿದಂತೆ ಯುಕ್ತಿಯಿಂದ, ಪ್ರತ್ಯಕ್ಷದಿಂದ ಹಾಗೂ ಶ್ರುತಿಗಳಿಂದ ಜೀವನು ಕರ್ತೃವೆಂದೇ ಸಿದ್ಧವಾಗುತ್ತದೆ. ಹಾಗಾದಲಿ 'ನಾನ್ಯಃ ಕರ್ತಾ' ಇತ್ಯಾದಿ ಶ್ರುತಿಯಿಂದ ಹಾಗೂ 'ಇತರವ್ಯಪದೇಶಾತ್' ಇತ್ಯಾದಿಗಳಿಂದ ವಿರೋಧ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು.

**तत्र जीवे स्वतन्त्रकर्तृत्वनिषेधात् । इह चास्वतन्त्रकर्तृत्वोक्तेः । परतन्त्र-कर्तृत्वेऽपि जीवस्य विध्याद्यविषयत्वं न तावत्पुरुषेण नर्त्यमानदारुयोषावज्जडत्वात् ।**

ಶ್ರುತಿಸೂತ್ರಗಳಲ್ಲಿ ಸ್ವತಂತ್ರಕರ್ತೃತ್ವವನ್ನಷ್ಟೇ ನಿಷೇಧ ಮಾಡಿದ್ದಾರೆ ಹೊರತು ಅಸ್ವತಂತ್ರ್ಯ-ಕರ್ತೃತ್ವವನ್ನು ನಿಷೇಧ ಮಾಡಿಲ್ಲ. ಪ್ರಕೃತ ಅಸ್ವತಂತ್ರ್ಯಕರ್ತೃತ್ವವನ್ನು ಈ ಕರ್ತ್ರಾಧಿಕರಣದಲ್ಲಿ ಸಮರ್ಥಿಸಲಾಗಿದೆ. ಪರತಂತ್ರ್ಯಕರ್ತೃತ್ವವಿದ್ದರೂ ಕೂಡ ಜೀವನು ವಿಧಿ ನಿಷೇಧಗಳಿಗೆ ವಿಷಯನಾಗುತ್ತಾನೆ. ನರ್ತನ ಮಾಡುವ ದಾರುಯೋಷಾದಂತೆ ಇವನು ಜಡನಾಗಿರುವುದಿಲ್ಲ.

ವಿವರಣೆ – ಜೀವನಿಗೆ ಪಾರತಂತ್ರ್ಯವನ್ನು ಹೇಳಿದ ಮಾತ್ರಕ್ಕೆ ವಿಧಿನಿಷೇಧಗಳಿಗೆ ವಿಷಯನಾಗಲಾರ ಎಂದು ಹೇಳಲು ಏನು ಕಾರಣ ಎಂದು ಪೂರ್ವಪಕ್ಷಿಯನ್ನು ಕುರಿತು ಸಿದ್ಧಾಂತಿಗಳು ಇಲ್ಲಿ ಪ್ರಶ್ನಿಸುತ್ತಿದ್ದಾರೆ.

ಪರಿಪೂರ್ಣಚಂದ್ರಿಕಾ

'ಯದಿ ಜೀವಃ ಪಾರತಂತ್ರ್ಯೇಣ ಕರ್ತಾ ಸ್ಯಾತ್ । ತರ್ಹಿ ವಿಧ್ಯಾದಿವಿಷಯೋ ನ ಸ್ಯಾತ್' ಎಂಬುದಾಗಿ ಪೂರ್ವಪಕ್ಷಿಯು ತರ್ಕವನ್ನು ಹೇಳಿದ್ದಾನೆ. ಇಲ್ಲಿ ಆಪಾದಕ ಹಾಗೂ ಆಪಾದ್ಯಗಳಿಗೆ ಪ್ರಯೋಜ್ಯಪ್ರಯೋಜಕಭಾವಗಳು ಸ್ಪಷ್ಟವಾಗಿ ಇರುವುದಿಲ್ಲ. ಏಕೆಂದರೆ ಅಸ್ವತಂತ್ರ್ಯಕರ್ತೃವಾದ ಮಾತ್ರಕ್ಕೆ ಅವನು ವಿಧ್ಯಾದಿಗಳಿಗೆ ಏಕೆ ವಿಷಯನಾಗಬಾರದು? ಈ ಪ್ರಶ್ನೆಗೆ ಅನೇಕ ಹೇತುಗಳನ್ನು ಆಶಂಕಿಸಿ ಉತ್ತರವನ್ನು ನೀಡುತ್ತಿದ್ದಾರೆ.

ಹೆಣ್ಣು ಬೊಂಬೆಯು ಜಡಭೂತವಾಗಿದೆ. ಆದರಂತೆ ಜೀವನೂ ಕೂಡ ಜಡಭೂತನಾಗಿದ್ದಾನೆ ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಜೀವನು ಜಡವಲ್ಲ ಎಂಬುದು ಸಿದ್ಧವಾಗಿದೆ. ದಾರುಯೋಷಾವಿಗೆ ಜ್ಞಾನ, ಇಚ್ಛಾ, ಪ್ರಯತ್ನ ಮೂರೂ ಕೂಡ ಇರುವುದಿಲ್ಲ. ಜೀವನಿಗೆ ಮೂರೂ ಕೂಡ ಇರುತ್ತವೆ. ಆದ್ದರಿಂದ ದಾರುಯೋಷಾಗಿಂತ ವೈಲಕ್ಷಣ್ಯವು ಜೀವನಲ್ಲಿದೆ.

**नापि चेतनत्वेऽपि मत्तस्य मदेनेव दुर्बलस्य प्रबलजलौघादिनेवेश्वरेण बलान्नोद्यमानत्वात् । ईश्वरस्य जीवगतेच्छाद्युत्पाद्यैव प्रवर्तकत्वात् ।**

ಮದ್ಯಪಾನ ಮಾಡಿದ ವ್ಯಕ್ತಿಗೆ ನರ್ತನಾದಿಗಳಲ್ಲಿ ತೊಡಗಬೇಕು ಎಂಬ ಇಚ್ಛೆ ಸ್ವಾಭಾವಿಕವಾಗಿ ಇರುವುದಿಲ್ಲ. ಅವನ ಒಳಗಡೆ ಆಹಿತವಾಗಿ ಬಂದಿರುವ ಮದದಿಂದಾಗಿ ಬಲಾತ್ಕಾರವಾಗಿ ತನಗೆ ಇಚ್ಛೆ ಇಲ್ಲದಿದ್ದರೂ ನರ್ತನಾದಿಗಳಲ್ಲಿ ತೊಡಗುತ್ತಾನೆ. ಇಂತಹ ಮದ್ಯಪಾನ ಮಾಡಿದ ವ್ಯಕ್ತಿಯೂ ಕೂಡ ವಿಧಿನಿಷೇಧಗಳಿಗೆ ವಿಷಯನಾಗುವುದಿಲ್ಲ. ಆದರಂತೆ ಪ್ರಕೃತ ಜೀವನು ಸಹಜವಾದ ಜ್ಞಾನೇಚ್ಛಾದಿ-ಗಳುಳ್ಳವನಲ್ಲ. ಬಲಾತ್ಕಾರವಾದ ಜ್ಞಾನ ಇಚ್ಛಾದಿಗಳನ್ನು ಹೊಂದಿರುತ್ತಾನೆ ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಜೀವನಲ್ಲಿ ಈಶ್ವರನು ಜ್ಞಾನ ಇಚ್ಛಾದಿಗಳನ್ನು ಹುಟ್ಟಿಸಿಯೇ ಪ್ರವೃತ್ತಿ ಮಾಡುವಂತೆ ಪ್ರೇರಣೆ ಮಾಡುತ್ತಾನೆ. ಇದರಂತೆ ದುರ್ಬಲನಾದ ವ್ಯಕ್ತಿಯು ಪ್ರಬಲವಾದ ಜಲಪ್ರವಾಹದಲ್ಲಿ ಸಿಕ್ಕಿಹಾಕಿಕೊಳ್ಳುತ್ತಾನೆ. ಆದರಂತೆ ಜೀವನೂ ಕೂಡ ಬಲಾತ್ಕಾರವಾಗಿ ಕಾರ್ಯಪ್ರವೃತ್ತನಾಗಿದ್ದಾನೆ ಎನ್ನುವುದೂ ಕೂಡ ತಪ್ಪು.

**नापि जीवस्य कर्तृत्वेऽपीश्वरस्यापि कर्तृत्वात् । रथाकर्षणादौ सत्रादौ चान्यस्य कर्तृत्वेऽपि स्वस्य कर्तृत्वमात्रेण विध्यादिदर्शनात् ।**

ಜೀವನು ಕರ್ತೃವಾಗಿದ್ದರೂ ಕೂಡ ಜೊತೆಗೆ ಈಶ್ವರನೂ ಕೂಡ ಕರ್ತೃವಾಗಿದ್ದಾನೆ. ಇದು ಸಮುಚ್ಚಿತ ಪಕ್ಷ. ಒಬ್ಬನಲ್ಲಿಯೇ ಕರ್ತೃತ್ವವು ಬರಲಿಲ್ಲವಾದ್ದರಿಂದ ಜೀವನು ವಿಧಿನಿಷೇಧಗಳಿಗೆ ವಿಷಯನಾಗುವುದಿಲ್ಲ ಎಂಬುದು ಆಕ್ಷೇಪ.

ಇದು ಸರಿಯಲ್ಲ. ಏಕೆಂದರೆ ರಥವನ್ನು ಎಳೆಯುವ ಲೌಕಿಕ ಕಾರ್ಯದಲ್ಲಿ ಯಜ್ಞಾದಿಗಳನ್ನು ಮಾಡುವ ವೈದಿಕ ಕಾರ್ಯದಲ್ಲಿ ವಿಧಿನಿಷೇಧಗಳ ದರ್ಶನವು ಕಂಡಿದೆ. ಅನೇಕ ಜನರು ರಥವನ್ನು ಎಳೆಯುತ್ತಿರಬಹುದು. ಆದರೆ ಪ್ರತಿಯೊಬ್ಬರಿಗೂ ಕೂಡ ಕರ್ತೃತ್ವವು ಅಲ್ಲಿ ಇದ್ದೇ ಇರುತ್ತದೆ. ಕರ್ತೃತ್ವವು ಇರುವುದರಿಂದಲೇ ವಿಧಿನಿಷೇಧಗಳಿಗೆ ವಿಷಯನಾಗುತ್ತಾನೆ. ಎಲ್ಲರೂ ರಥವನ್ನು ಎಳೆಯುತ್ತಿರುವುದರಿಂದ ಒಬ್ಬನಿಗೆ ಮಾತ್ರ ವಿಧಿನಿಷೇಧಗಳನ್ನು ಹೇಳಲು ಬರುವುದಿಲ್ಲವೆಂದು ಸರ್ವಥಾ ಹೇಳಬಾರದು. ರಥವನ್ನು ಎಳೆಯಿರಿ ಎಂದಾಗ ಪ್ರತಿಯೊಬ್ಬರೂ ಕೂಡ ಆ ವಿಧಿಗೆ ಅರ್ಹರಾಗುತ್ತಾರೆ. ರಥವನ್ನು ನಿಲ್ಲಿಸಿರಿ ಎಂದಾಗ ಆ ನಿಷೇಧಕ್ಕೆ ಪ್ರತಿಯೊಬ್ಬರೂ ಕೂಡ ವಿಷಯರಾಗುತ್ತಾರೆ.

ಕರ್ತೃತ್ವಾಧಿಕರಣ (೨-೩-೧೭)

'ಯೇ ಋತ್ವಿಜಃ ತೇ ಯಜಮಾನಾಃ' ಎಂಬಂತೇ ಪ್ರತಿಯೊಬ್ಬರಿಗೂ ಕರ್ತೃತ್ವವು ಸಿದ್ಧವಾಗುತ್ತದೆ. ಒಬ್ಬನಿಗೆ ಮಾತ್ರ ಕರ್ತೃತ್ವ ಇಲ್ಲದೇ ಇರಬಹುದು. ಆದರೆ ಎಲ್ಲರ ಜೊತೆ ಇವನಿಗೂ ಕೂಡ ಕರ್ತೃತ್ವವಿರುವುದರಿಂದ ವಿಧಿನಿಷೇಧಗಳಿಗೆ ವಿಷಯ ಆಗಿಯೇ ಆಗುತ್ತಾನೆ.

**नापि विष्टिगृहीतस्येव स्वेच्छाधीनप्रवृत्त्याद्यभावात् । जीवप्रवृत्त्यादेरीशाधीनत्वेऽपि जीवेच्छाजन्यत्वस्यानुभवात् ।**

ಯಾವ ವ್ಯಕ್ತಿಯು ಪಿಶಾಚಗ್ರಸ್ತನಾಗಿದ್ದಾನೋ ಅವನಿಗೆ ಸ್ವೇಚ್ಛಾಧೀನವಾದ ಪ್ರವೃತ್ತಿ ಇರುವುದೇ ಇಲ್ಲ. ಅದರಂತೆ ಪ್ರತಿಯೊಬ್ಬ ಜೀವರೂ ಕೂಡ ಪರಮಾತ್ಮನಿಂದ ಪ್ರವೃತ್ತರಾಗುತ್ತಿದ್ದಾರೆ. ಇವರಿಗೆ ಸ್ವೇಚ್ಛಾಧೀನಪ್ರವೃತ್ತಿಯು ಕೂಡುವುದೇ ಇಲ್ಲ ಎಂದು ಆಕ್ಷೇಪ.

ಇದೂ ಕೂಡ ತಪ್ಪು. ಪ್ರತಿಯೊಬ್ಬರ ಪ್ರವೃತ್ತಿಯು ಈಶಾಧೀನವಾಗಿದ್ದರೂ ಕೂಡ, ತಮ್ಮ ಇಚ್ಛೆಯಂತೆ ಈ ಕೆಲಸ ನಡೆಯಿತು ಎಂಬ ಅನುಭವವೂ ಕೂಡ ಇರುತ್ತದೆ. ಪಿಶಾಚಗ್ರಸ್ತನಾದ ವ್ಯಕ್ತಿಗೆ ತನ್ನ ಇಚ್ಛಾಧೀನವಾಗಿ ಈ ಕೆಲಸ ನಡೆಯಿತು ಎಂಬ ಅನುಭವವು ಇರುವುದಿಲ್ಲ. ಆದ್ದರಿಂದ ಪಿಶಾಚಗ್ರಸ್ತನಾದ ವ್ಯಕ್ತಿಗೂ, ಸಂಸಾರಿಜೀವರಿಗೂ ವ್ಯತ್ಯಾಸವಿದೆ.

**नापि स्वेच्छामात्राधीनप्रवृत्त्याद्यभावात् । सर्वत्रापि प्रवृत्त्यादेरदृष्टादिजन्यत्वेन तस्य विध्याद्यविषयत्वातन्त्रत्वात् ।**

'ಜೀವಃ ನ ವಿಧಿನಿಷೇಧವಿಷಯಃ ಸ್ವೇಚ್ಛಾಮಾತ್ರಾಧೀನಪ್ರವೃತ್ತ್ಯಾದ್ಯಭಾವಾತ್' ಹೀಗೆ ಅನುಮಾನ ಮಾಡಿದಾಗ ಹಿಂದಿನ ಹೇತುವಿಗಿಂತ ಈ ಹೇತುವಿನಲ್ಲಿ ಮಾತ್ರಶಬ್ದವು ಅಧಿಕವಾಗಿದೆ. ಈ ಹೇತುವಿಗೆ ಅಸಿದ್ಧಿ ದೋಷವನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ ಯಾವ ಪ್ರವೃತ್ತಿ ಆಗಿದೆಯೋ ಆ ಪ್ರವೃತ್ತಿಯು ಸ್ವೇಚ್ಛಾಜನ್ಯವಾಗಿದ್ದರೂ ಕೂಡ ಈಶ್ವರೇಚ್ಛಾಜನ್ಯವೆಂದು ಸಿದ್ಧಾಂತಿಗಳಾದ ನೀವು ಅಂಗೀಕಾರ ಮಾಡುತ್ತೀರಿ. ಆದ್ದರಿಂದ ಮಾತ್ರಶಬ್ದವನ್ನು ಹಾಕಿರುವುದರಿಂದ ಅಸಿದ್ಧಿದೋಷವನ್ನು ನಿಮ್ಮಿಂದ ಹೇಳಲು ಸಾಧ್ಯವಿಲ್ಲ.

ಈ ಆಕ್ಷೇಪವು ತಪ್ಪು. ಏಕೆಂದರೆ ಇಲ್ಲಿ ಹೇತುವೇ ಅಪ್ರಸಿದ್ಧವಾಗಿದೆ. 'ಸ್ವೇಚ್ಛಾಮಾತ್ರಾಧೀನಪ್ರವೃತ್ತಿ' ಎಂಬುದು ಜಗತ್ತಿನಲ್ಲಿ ಎಲ್ಲಿಯೂ ಕೂಡ ಕಂಡಿಲ್ಲ. ಉತ್ಪತ್ತಿಮತ್ತಾದ ಸಕಲ ಪದಾರ್ಥಗಳಿಗೆ ಕಾಲ, ಈಶ್ವರಾದಿಗಳು ಕಾರಣವೆಂದು ಚಾರ್ವಾಕರನ್ನು ಬಿಟ್ಟು ಎಲ್ಲಾ ಸಿದ್ಧಾಂತಿಗಳು ಒಪ್ಪಿದ್ದಾರೆ. ಆದ್ದರಿಂದ ವಿಧ್ಯಾದ್ಯವಿಷಯತ್ವಕ್ಕೆ ಪ್ರಯೋಜಕವಾದುದು ಸ್ವೇಚ್ಛಾಮಾತ್ರಾಧೀನಪ್ರವೃತ್ತಿಯ ಅಭಾವವು ಆಗುವುದಿಲ್ಲ. ಹೀಗೆ ಹೇತು ಅಪ್ರಸಿದ್ಧವಾಗಿದೆ ಮತ್ತು ಸಾಧ್ಯಕ್ಕೆ ಪ್ರಯೋಜಕವೂ ಕೂಡ ಆಗಿರುವುದಿಲ್ಲ.

**नापि जीवेच्छादेरपीशेच्छोत्पादितत्त्वात् । पित्राद्युत्पादितेच्छादिमतोऽपि माणवकस्य सन्ध्योपासनादिविध्यादिदर्शनात् ।**

ಜೀವನಿಗೆ ಇರುವ ಇಚ್ಛಾದಿಗಳು ಈಶೇಚ್ಛಾದಿಂದ ಉತ್ಪಾದಿತವಾಗಿವೆ. ಆದ್ದರಿಂದ ಜೀವನು ವಿಧಿನಿಷೇಧಗಳಿಗೆ ವಿಷಯನಾಗುವುದಿಲ್ಲ ಎಂಬುದನ್ನು ಹೀಗೆ ಸಾಧನೆ ಮಾಡುತ್ತೇವೆ. 'ಜೀವಃ ನ

ವಿಧಿನಿಷೇಧವಿಷಯಃ' ಈಶ್ವರೇಚ್ಛೋತ್ಪಾದಿತ ಇಚ್ಛಾವತ್ವಾತ್ । ಯಃ ಅನ್ಯೇಚ್ಛೋತ್ಪಾದಿತ ಇಚ್ಛಾವಾನ್ ಸಃ ವಿಧಿನಿಷೇಧವಿಷಯೋ ನ ಭವತಿ' ಎಂಬುದಾಗಿ ಅನುಮಾನವನ್ನು ಮಾಡುತ್ತೇವೆ.

ಇದೂ ಕೂಡ ತಪ್ಪು. ಏಕೆಂದರೆ 'ಅಹರಹಃ ಸಂಧ್ಯಾಮುಪಾಸೀತ' ಎಂಬ ವಿಧಿಗೆ 'ನ ಪಲಾಂಡುಂ ಭಕ್ಷಯೇತ' ಎಂಬ ನಿಷೇಧಕ್ಕೆ ಮಾಣವಕನು ವಿಷಯನಾಗುತ್ತಾನೆ. ಆದರೆ ಮಾಣವಕನಿಗೆ ಸ್ವಾಭಾವಿಕವಾಗಿ ಸಂಧ್ಯಾವಂದನೆ ಮಾಡಬೇಕು, ಪಲಾಂಡುಭಕ್ಷಣ ಮಾಡಬಾರದು ಎಂಬ ಇಚ್ಛೆ ಇರುವುದೇ ಇಲ್ಲ. ತಂದೆತಾಯಿಯರ ಇಚ್ಛೆಯಿಂದಲೇ ಇವರ ಇಚ್ಛೆಯು ಉತ್ಪಾದಿತವಾಗಿದೆ. ಹೀಗೆ ಮಾಣವಕನು ಅನ್ಯೇಚ್ಛೋತ್ಪಾದಿತ ಇಚ್ಛಾ ಉಳ್ಳವನಾಗಿದ್ದಾನೆ . ಆದರೂ ಕೂಡ ಇವನು ವಿಧಿನಿಷೇಧಕ್ಕೆ ವಿಷಯನೇ ಆಗಿದ್ದಾನೆ. ಆದ್ದರಿಂದ ನಿಮ್ಮ ಹೇತುವು ಅಪ್ರಯೋಜಕವಾಯಿತು.

**नापि कर्तृत्वशक्तेरीशाधीनत्वात् । अन्वयव्यतिरेकाभ्यामीशाधीनाया एव तस्या विध्यादिविषयत्वे तन्त्रत्वात् । क्वेदमुपलब्धमङ्गभवता ईशानधीनैव सा तत्र हेतुर्न तु तदधीनेति ।**

'ಜೀವಃ ನ ವಿಧಿನಿಷೇಧವಿಷಯಃ ಈಶ್ವರಾಧೀನಕರ್ತೃತ್ವಶಕ್ತಿಮತ್ವಾತ್' ಎಂಬುದಾಗಿ ಜೀವನಲ್ಲಿರುವ ಕರ್ತೃತ್ವ ಶಕ್ತಿಯು ಭಗವದಧೀನವಾಗಿದೆ. ಆದ್ದರಿಂದ ಅಸ್ವತಂತ್ರನಾಗಿದ್ದಾನೆ. ಇಂತಹವನು ವಿಧಿನಿಷೇಧಗಳಿಗೆ ವಿಷಯನಾಗಲಾರ.

ಈ ಆಕ್ಷೇಪವೂ ಕೂಡ ತಪ್ಪು. ಈಶ್ವರಾಧೀನವಾದ ಕರ್ತೃತ್ವಶಕ್ತಿಯು ಇರುವುದರಿಂದ ವಿಧಿನಿಷೇಧಗಳಿಗೆ ವಿಷಯನಾಗುವುದಿಲ್ಲ ಎಂದು ಹೇಳಿದರೆ ವಿಧಿನಿಷೇಧಕ್ಕೆ ಪ್ರಯೋಜಕವಾದುದು ಈಶ್ವರಾಧೀನವಾಗದ ಕೇವಲ ತನ್ನ ಅಧೀನವೇ ಆದ ಕರ್ತೃತ್ವ ಶಕ್ತಿಯು ಪ್ರಯೋಜಕವೆಂದು ಹೇಳಿದಂತಾಯಿತು. ಈಶ್ವರಾಧೀ- ನವಾದ ಕರ್ತೃತ್ವವು ಇದ್ದರೆ ಅದು ವಿಧಿನಿಷೇಧಗಳ ಅವಿಷಯತ್ವಕ್ಕೆ ಪ್ರಯೋಜಕವೆಂದು ಹೇಳಿದಂತಾಯಿತು. ಈ ತರಹದ ವ್ಯಾಪ್ತಿಯು ನಿನಗೆ ಹೇಗೆ ಸಿದ್ಧವಾಯಿತು? ಏಕೆಂದರೆ ಪ್ರತಿಯೊಬ್ಬರಲ್ಲಿರುವ ಕರ್ತೃತ್ವಶಕ್ತಿಯೂ ಈಶ್ವರಾಧೀನವೆಂದೇ ನಾವು ಹೇಳುತ್ತಿದ್ದೇವೆ. ಆದ್ದರಿಂದ ವ್ಯಾಪ್ತಿಗ್ರಹಣವನ್ನು ಮಾಡಲು ನಿನಗೆ ದೃಷ್ಟಾಂತವೇ ಸಿಗುವುದಿಲ್ಲ. 'ಯತ್ರ ಈಶ್ವರಾನಧೀನಕರ್ತೃತ್ವಶಕ್ತಿಃ ತತ್ರ ವಿಧಿನಿಷೇಧವಿಷಯತ್ವಂ' ಎಂಬ ವ್ಯಾಪ್ತಿಗೆ ದೃಷ್ಟಾಂತವೇ ಸಿಗುವುದಿಲ್ಲ. ಜಡಪದಾರ್ಥಗಳಿಗೆ ಕರ್ತೃತ್ವಶಕ್ತಿಯೇ ಇರುವುದಿಲ್ಲ. ವಿಧಿನಿಷೇಧವಿಷಯತ್ವವೂ ಕೂಡ ಇರುವುದಿಲ್ಲ. ಈಶ್ವರನಿಗೆ ಕರ್ತೃತ್ವಶಕ್ತಿ ಇರಬಹುದು. ಆದರೆ ಆ ಕರ್ತೃತ್ವಶಕ್ತಿಯು ಈಶ್ವರಾಧೀನವೇ ಆಗಿದೆ. ಮತ್ತು ವಿಧ್ಯಾದಿವಿಷಯತ್ವವೆಂಬ ಸಾಧ್ಯವೂ ಕೂಡ ಅವನಲ್ಲಿ ಇರುವುದಿಲ್ಲ. ಆದ್ದರಿಂದ ಈ ವ್ಯಾಪ್ತಿಗೆ ದೃಷ್ಟಾಂತವಾಗಿ ಜೀವನನ್ನೇ ಹೇಳಬೇಕು. ಆದರೆ ಪ್ರತಿಯೊಬ್ಬ ಜೀವರಲ್ಲಿರುವ ಕರ್ತೃತ್ವ ಶಕ್ತಿಯು ಈಶ್ವರಾಧೀನವೆಂದೇ ನಾವು ಹೇಳುತ್ತಿದ್ದೇವೆ.

ಈಶ್ವರಾಧೀನವಾದ ಕರ್ತೃತ್ವಶಕ್ತಿಯೇ ವಿಧಿನಿಷೇಧಗಳಿಗೆ ವಿಷಯವಾಗಿದೆ ಎಂದು ನಾವು ಸಮರ್ಥಿಸುತ್ತೇವೆ. ನಮ್ಮ ಮತದಲ್ಲಿ ವ್ಯಾಪ್ತಿಯನ್ನು ಹೀಗೆ ತಿಳಿಯಬೇಕು. 'ಯತ್ರ ಅನಧೀನಕರ್ತೃತ್ವ ಶಕ್ತಿಃ ತತ್ರ ವಿಧಿನಿಷೇಧಾಭಾವಃ' 'ಯತ್ರ ಪರಾಧೀನಕರ್ತೃತ್ವಶಕ್ತಿಃ ತತ್ರ ವಿಧ್ಯಾದಿವಿಷಯತ್ವಂ' ಎಂದು. ಪರಮಾತ್ಮನಲ್ಲಿರುವ ಕರ್ತೃತ್ವಶಕ್ತಿಯು ಪರ ಅನಧೀನವಾಗಿದೆ. ಅವನಿಗೆ ವಿಧ್ಯಾದಿವಿಷಯತ್ವವೂ ಕೂಡ

ಇರುವುದಿಲ್ಲ. ಆದರೆ ಜೀವರುಗಳಿಗೆ ಪರಾಧೀನವಾದ ಕರ್ತೃತ್ವಶಕ್ತಿಯೂ ಇದೆ. ಅವರಲ್ಲಿ ವಿಧಿನಿಷೇಧವಿಷಯತ್ವವೂ ಕೂಡ ಇರುತ್ತದೆ. ಹೀಗೆ ಅನ್ವಯವ್ಯತಿರೇಕಗಳಿಂದ ಪರಾಧೀನವಾದ ಕರ್ತೃತ್ವಶಕ್ತಿಯೇ ವಿಧಿನಿಷೇಧಗಳಿಗೆ ಪ್ರಯೋಜಕವೆಂದು ಸಿದ್ಧವಾಗುತ್ತದೆ. ಇದೇ ಹೇತುವನ್ನು ಇಟ್ಟುಕೊಂಡು ವಿಧಿನಿಷೇಧವಿಷಯತ್ವ ಇಲ್ಲವೆಂದು ಹೇಳಿದರೆ ವಿರುದ್ಧವೆಂಬ ಹೇತ್ವಾಭಾಸವು ನಿಮಗೆ ಪ್ರಾಪ್ತವಾಗುತ್ತದೆ.

(ಹೇ ಅಂಗ = ಎಲೈ ಪೂರ್ವಪಕ್ಷಿಯೇ, ಭವತಾ = ನಿನ್ನಿಂದ, ಇದಂ = ಈ ವ್ಯಾಪ್ತಿಯು, ಕ್ವ ಉಪಲಬ್ಧಂ = ಎಲ್ಲಿ ಕಾಣಲ್ಪಟ್ಟಿದೆ?)

ವಿವರಣೆ – ಜೀವಕರ್ತೃತ್ವ ವಿಷಯದಲ್ಲಿ ಬರುವ ಪ್ರಶ್ನೆ ಒಟ್ಟು ಮೂರು –

೧. ಜೀವನಿಗೆ ಕರ್ತೃತ್ವವನ್ನು ಹೇಳದಿದ್ದರೆ ವಿಧಿನಿಷೇಧಗಳನ್ನು ಹೇಗೆ ಕೂಡಿಸಬೇಕು?

೨. ಪರಮಾತ್ಮನಿಗೆ ವೈಷಮ್ಯನೈರ್ಘೃಣ್ಯಾದಿ ದೋಷಗಳನ್ನು ಹೇಗೆ ಪರಿಹರಿಸಬೇಕು?

೩. ಜೀವನಿಗೆ ಕರ್ತೃತ್ವವಿಲ್ಲವೆಂದರೆ ಜೀವನು ಪುಣ್ಯಪಾಪಗಳಿಗೆ ಹೇಗೆ ಭಾಗಿಯಾಗುತ್ತಾನೆ? ಎಂದು.

ಈ ಮೂರರಲ್ಲಿ ಎರಡು ಹಾಗೂ ಮೂರನೇ ಪ್ರಶ್ನೆಗಳಿಗೆ ವೈಷಮ್ಯನೈರ್ಘೃಣ್ಯಾಧಿಕರಣದಲ್ಲಿಯೇ ಉತ್ತರವನ್ನು ನೀಡಿದ್ದಾಗಿದೆ. ಪರಮಾತ್ಮನು ನಮ್ಮ ಯೋಗ್ಯತಾನುಸಾರವಾಗಿ ಕರ್ಮಗಳನ್ನು ಮಾಡಿಸುವುದರಿಂದ ಪುಣ್ಯಪಾಪಗಳಿಗೆ ಜೀವನೇ ಭಾಗಿಯಾಗುತ್ತಾನೆ. ವೈಷಮ್ಯನೈರ್ಘೃಣ್ಯಾದಿದೋಷವು ಇದರಿಂದಲೇ ಪರಿಹಾರವಾಗುತ್ತದೆ. ಆದರೆ ಪರಾಧೀನವಾದ ಕರ್ತೃತ್ವವನ್ನು ಒಪ್ಪಿದರೆ ವಿಧಿನಿಷೇಧಗಳು ಹೇಗೆ ಕೂಡುತ್ತವೆ? ಎಂಬುದನ್ನು ಈ ಅಧಿಕರಣದಲ್ಲಿ ವಿಚಾರ ಮಾಡುತ್ತಿದ್ದಾರೆ.

**नापि विध्यादिविषयस्य जीवकृत्यसाध्यत्वात् । असिद्धेः । दृश्यते हि यागादेस्तत्कृतिसाध्यत्वम् । अस्ति हि जीवस्यापीश्वरदत्तं जडं प्रति स्वातन्त्र्यम् । उक्तं हि ''स्वातन्त्र्यं हि जडान् प्रति'' इति । परं तु सा कृतिरदृष्टादिनेवेशेनापि जायते ।**

ವಿಧಿನಿಷೇಧಗಳಿಗೆ ವಿಷಯವಾದ ಯಾಗಾದಿಗಳು ಜೀವನ ಕೃತಿಯಿಂದ ಸಾಧ್ಯವಾಗಿರುವುದಿಲ್ಲ ಎಂದು ಹೇಳಬಾರದು. ಹಾಗೆ ಹೇಳಿದರೆ ಅಸಿದ್ಧಿ ದೋಷವು ಬರುತ್ತದೆ. ಏಕೆಂದರೆ ಯಾಗಾದಿಗಳು ಜೀವನ ಕೃತಿಯಿಂದ ಸಾಧ್ಯವಾಗಿರುವುದು ಕಾಣಿಸುತ್ತಿದೆ. ಜೀವನಿಗೆ ಜಡದ ವಿಷಯದಲ್ಲಿ ಈಶ್ವರದತ್ತವಾದ ಸ್ವಾತಂತ್ರ್ಯ ಇದೆ ಎಂಬುದಾಗಿ 'ಸ್ವಾತಂತ್ರ್ಯಂ ಹಿ ಜಡಾನ್ ಪ್ರತಿ' ಎಂಬ ಸ್ಮೃತಿವಾಕ್ಯವು ಹೇಳುತ್ತಿದೆ. ಆದರೆ ಜೀವನಲ್ಲಿರುವ ಕೃತಿಯು ಹೇಗೆ ಅದೃಷ್ಟ, ಕಾಲ ಮೊದಲಾದವುಗಳನ್ನು ಅಪೇಕ್ಷಿಸುತ್ತದೋ ಅದರಂತೆ ಈಶ್ವರನನ್ನೂ ಕೂಡ ಅಪೇಕ್ಷಿಸುತ್ತದೆ. ಅವುಗಳ ನಡುವೆ ಈಶ್ವರನು ಮುಖ್ಯನಾಗಿದ್ದಾನೆ ಎಂಬುದಷ್ಟೇ ಮುಖ್ಯಪ್ರಮೇಯ.

ವಿವರಣೆ – ವಿಧಿ ಹಾಗೂ ನಿಷೇಧಗಳು ದ್ವಿಕರ್ಮಕವಾಗಿವೆ. ಯಾವ ವ್ಯಕ್ತಿಯನ್ನು ವಿವಕ್ಷಿಸಿ ವಿಧಿನಿಷೇಧ ಮಾಡಲಾಗುತ್ತದೋ ಆ ವ್ಯಕ್ತಿಯು ವಿಧಿನಿಷೇಧವಿಷಯ ಎಂದು ಕರೆಯಲಾಗುತ್ತದೆ. ಏನನ್ನು ವಿಧಾನ ಮಾಡಲಾಗುತ್ತದೋ ಅದನ್ನೂ ಕೂಡ ವಿಧಿನಿಷೇಧವಿಷಯ ಎಂದು ಕರೆಯಲಾಗುತ್ತದೆ. 'ಶ್ರುತಿಃ ಜೀವಂ ಪ್ರತಿ ಯಾಗಂ ವಿಧತ್ತೇ' ಎಂದು ಹೇಳಿದಾಗ ವಿಧಿಗೆ ವಿಷಯನಾದವನು ಜೀವ, ಅದರಂತೆ ಯಾಗವೂ ಕೂಡ. ಪ್ರಕೃತಿ 'ವಿಧ್ಯಾದಿವಿಷಯಸ್ಯ' ಎಂದರೆ ಯಾಗಾದಿಗಳನ್ನು ವಿವಕ್ಷಿಸಬೇಕು. ವಿಧ್ಯಾಧಿಗಳಿಗೆ

ವಿಷಯವಾದ ಯಾಗಾದಿಗಳು ಜೀವನ ಕೃತಿಯಿಂದ ಸಾಧ್ಯವೇ ಅಲ್ಲ. ನಾಶಕ್ಯೇ ಶಾಸ್ತ್ರಚೋದನಾ ಎಂಬ ಪ್ರಮಾಣದಂತೆ ಅಶಕ್ಯವಾದ ಕಾರ್ಯದಲ್ಲಿ ಶಾಸ್ತ್ರವು ಪ್ರೇರಣೆ ಮಾಡುವುದಿಲ್ಲ. ಉದಾಹರಣೆ – ತಕ್ಷಕ ಮಣಿಯನ್ನು ತೆಗೆದುಕೊಂಡು ಬರಬೇಕೆಂದು ಶಾಸ್ತ್ರಗಳು ವಿಧಾನ ಮಾಡಲು ಸಾಧ್ಯವಿಲ್ಲ. ಏಕೆಂದರೆ ಆ ತಕ್ಷಕಮಣಿಯ ಆಹರಣವು ನಮ್ಮ ಕೃತಿಯಿಂದ ಸಾಧ್ಯವೇ ಅಲ್ಲ. ಪ್ರಕೃತ ಯಾಗಾದಿಗಳೂ ಕೂಡ ನಮ್ಮ ಕೃತಿಯಿಂದ ಸಾಧ್ಯವೇ ಅಲ್ಲ. ಆದ್ದರಿಂದ ಜೀವಾದಿಗಳು ವಿಧ್ಯಾದಿಗಳಿಗೆ ವಿಷಯವಾಗುವುದೇ ಇಲ್ಲ ಎಂದು ಪೂರ್ವಪಕ್ಷಿಯು ಹೇಳುತ್ತಿದ್ದಾನೆ.

ಈ ಆಕ್ಷೇಪವು ತಪ್ಪು. 'ಯಾಗಾದಿಕಂ ನ ಜೀವಂ ಪ್ರತಿ ವಿಧೇಯಂ ಜೀವಕೃತ್ಯಸಾಧ್ಯತ್ವಾತ್' ಎಂದು ಅನುಮಾನವನ್ನು ಮಾಡಿದಂತಾಯಿತು. ಅಥವಾ 'ಜೀವಃ ನ ಯಾಗಾದಿವಿಷಯಕವಿಧಿವಿಷಯಃ ಯಾಗಾದಿ ಜನಕಕೃತಿಮತ್ವಶೂನ್ಯತ್ವಾತ್' ಎಂದು ಅನುಮಾನವನ್ನು ಮಾಡಬಹುದು. ಈ ಅನುಮಾನಕ್ಕೆ ಅಸಿದ್ಧಿದೋಷವು ಬರುತ್ತದೆ. ಜೀವನಿಗೂ ಕೂಡ ಪ್ರಯತ್ನವು ಇರುವುದರಿಂದ ಆ ಪ್ರಯತ್ನದಿಂದ ಯಾಗಾದಿಗಳು ಸಾಧ್ಯವೇ ಆಗಿವೆ. ಹೀಗೆ ಕೃತಿಸಾಧ್ಯವೇ ಆಗಿರುವಾಗ ಆಗಿಲ್ಲವೆಂದು ಹೇಳಬಾರದು. ಇದಕ್ಕೆ ಅಸಿದ್ಧಿದೋಷವು ಬರುತ್ತದೆ. ಏಕೆಂದರೆ ಯಾಗಾದಿಗಳು ಕೃತಿಸಾಧ್ಯವಾಗಿರುವುದು ಕಂಡಿದೆ.

ಜೀವರು ಪರತಂತ್ರರಾದ ಮೇಲೆ ಯಾಗಾದಿಗಳು ಕೃತಿಸಾಧ್ಯವಾಗಲು ಹೇಗೆ ಸಾಧ್ಯ? ಎಂದರೆ ಜೀವರಿಗೆ ಜಡದ ವಿಷಯದಲ್ಲಿ ಈಶ್ವರದತ್ತವಾದ ಒಂದು ಸ್ವಾತಂತ್ರ್ಯವಿದೆ. ಪ್ರಕೃತ ಇಲ್ಲಿ ವಿವಕ್ಷಿಸಲ್ಪಟ್ಟ ದತ್ತಸ್ವಾತಂತ್ರ್ಯವೆಂದರೆ ಸ್ವಶಕ್ತ್ಯಾದೌಪರಾನಪೇಕ್ಷತ್ವರೂಪವಾದ ಸ್ವಾತಂತ್ರ್ಯವಲ್ಲ, ಸ್ವೇಚ್ಛಾಧೀನ-ಪ್ರವೃತ್ತಿಮತ್ವವೆಂಬ ಸ್ವಾತಂತ್ರ್ಯವೂ ಕೂಡ ವಿವಕ್ಷಿತವಲ್ಲ, 'ಸ್ವತಂತ್ರಕರ್ತಾ' ಎಂಬ ಸೂತ್ರದಲ್ಲಿ ಪಾಣಿನಿ ಹೇಳಿದ ಕರ್ತೃತ್ವವನ್ನಷ್ಟೇ ಸ್ವಾತಂತ್ರ್ಯಶಬ್ದದಿಂದ ವಿವಕ್ಷಿಸಬೇಕು. ಕಾರಕಾಂತರದಿಂದ ಅಪ್ರಯೋಜ್ಯವಾದುದೇ ಸ್ವಾತಂತ್ರ್ಯ ಎಂದು ಕರೆಸಿಕೊಳ್ಳುತ್ತದೆ. ಇಂತಹ ಕರ್ತೃತ್ವ ಜೀವನಿಗೆ ಇದ್ದೇ ಇರುತ್ತದೆ. ಕಾರಕಾಂತರ ಎಂದರೆ ಕರ್ಮ, ಕರಣ, ಸಂಪ್ರದಾನ ಮೊದಲಾದವು. ಇವುಗಳೆಲ್ಲವೂ ಜಡಭೂತವಾಗಿವೆ. ಇವುಗಳಿಂದ ಜೀವನು ಅಪ್ರಯೋಜ್ಯನಾಗಿದ್ದಾನೆ. ಜೀವನಿಂದಲೇ ಆ ಕಾರಕಗಳು ಪ್ರಯೋಜ್ಯವಾಗುತ್ತವೆ. ಈಶ್ವರನು ಕಾರಕಾಂತರಗಳಲ್ಲಿ ಸೇರದ ಕಾರಣ ದೋಷವಿಲ್ಲ. ಹೀಗೆ ಜೀವನಿಗೆ ಈಶ್ವರದತ್ತವಾದ ಪರಾಧೀನರೂಪವಾದ ಕರ್ತೃತ್ವವು ಇದ್ದೇ ಇರುತ್ತದೆ.

**नापि क्वचिदीश्वरेण जीवकृतिविघातात् ।**

ಜೀವನು ವಿಧಿನಿಷೇಧಗಳಿಗೆ ವಿಷಯನಾಗಲಾರ. ಏಕೆಂದರೆ ಜೀವನ ಪ್ರಯತ್ನವನ್ನು ಈಶ್ವರನು ಭಂಗಪಡಿಸುತ್ತಾನೆ. ಕೆಲವೊಮ್ಮೆ ಪ್ರಯೋಜನ ಸಿಗದಂತೆ ಮಾಡುತ್ತಾನೆ. ಕೆಲವೊಮ್ಮೆ ಕಾರ್ಯವೇ ಆಗದಂತೆ ಮಾಡುತ್ತಾನೆ. ಹೀಗೆ ಜೀವನ ಪ್ರಯತ್ನವನ್ನು ವಿಘಾತ ಮಾಡುವುದರಿಂದ ವಿಧಿ ಹಾಗೂ ನಿಷೇಧಗಳಿಗೆ ಜೀವನು ಬದ್ಧನೆಂದು ಹೇಳುವುದು ಸರಿಯಲ್ಲ.

**ईश्वरः पुण्यपापादावुदासीन इति पक्षे द्वितीयादिप्रवृत्तावनुमन्तृत्वेऽपि प्रथमप्रवृत्तावुदासीन इति पक्षेऽपीश्वरेण अनीश्वरपक्षेऽप्यदृष्टादिना, अदृष्टाभावपक्षेऽपि दृष्टहेत्वन्तरेण पाकादिकृतिविघातदर्शनेन कस्यापि कुत्रापि नियोगानुपपत्तेः ।**

'ಯತ್ರ ಜೀವಕೃತೇಃ ವಿಘಾತಾ ತತ್ರ ವಿಧಿನಿಷೇಧವಿಷಯತ್ವಂ ನ ಸಂಭವತಿ' ಎಂಬ ವ್ಯಾಪ್ತಿಯೇ ತಪ್ಪು. ಈ ವ್ಯಾಪ್ತಿಯನ್ನು ಒಪ್ಪಿದರೆ ಯಾವುದೇ ಮತದಲ್ಲೂ ಕೂಡ ವಿಧಿನಿಷೇಧವಿಷಯತ್ವವನ್ನು ಜೀವನಿಗೆ ಸಮರ್ಥನೆ ಮಾಡಲು ಸಾಧ್ಯವಾಗುವುದಿಲ್ಲ -

೧. ಈಶ್ವರನು ಪುಣ್ಯಪಾಪಗಳಲ್ಲಿ ಉದಾಸೀನನಾಗಿದ್ದಾನೆ ಎಂದು ಕೆಲವರು ಹೇಳುತ್ತಾರೆ. (ಅಪ್ಪನು ಮಗನಿಗೆ ಹತ್ತು ರೂಪಾಯಿಯನ್ನು ಕೊಟ್ಟು ಸುಮ್ಮನಾಗುತ್ತಾನೆ. ಆ ಹತ್ತುರೂಪಾಯಿಯನ್ನು ಪುಣ್ಯದ ಕೆಲಸಕ್ಕೆ ಅಥವಾ ಪಾಪದ ಕೆಲಸಕ್ಕೆ ಹೇಗೆ ಮಗನು ಉಪಯೋಗಿಸಿಕೊಂಡರೂ ಅಪ್ಪನು ಅದಕ್ಕೆ ಜವಾಬ್ದಾರನಾಗುವುದಿಲ್ಲ. ಅದರಂತೆ ಈಶ್ವರನು ಜೀವನಿಗೆ ಕರ್ತೃತ್ವವನ್ನು ನೀಡಿದ್ದಾನೆ. ಅದರಿಂದ ಬರುವ ಪುಣ್ಯ ಹಾಗೂ ಪಾಪಗಳಿಗೆ ಈಶ್ವರನು ಜವಾಬ್ದಾರನಲ್ಲ ಎಂಬುದು ಈ ಪಕ್ಷದವರ ಅಭಿಪ್ರಾಯ.

೨. ಈಶ್ವರನು ಪ್ರಥಮಪ್ರವೃತ್ತಿಯಲ್ಲಿ ಉದಾಸೀನನಾಗಿದ್ದಾನೆ. ದ್ವಿತಿಯಾದಿ ಪ್ರವೃತ್ತಿಗಳಲ್ಲಿ ಅನುಮಂತ ಎಂದು ಕರೆಸಿಕೊಳ್ಳುತ್ತಾನೆ. ಹೀಗೆ ರಾಮಾನುಜರು ಹೇಳುತ್ತಾರೆ. ಈ ಎರಡು ಪಕ್ಷದವರೂ ಕೂಡ ಜೀವನ ಕೃತಿಯು ಈಶ್ವರನಿಂದ ವಿಘಾತವಾಗುತ್ತದೆಂದು ಒಪ್ಪಿರುತ್ತಾರೆ.

೩. ಸಾಂಖ್ಯರು ಈಶ್ವರನನ್ನೇ ಒಪ್ಪುವುದಿಲ್ಲ. ಆದರೆ ಅದೃಷ್ಟದಿಂದ ಜೀವನು ಪುಣ್ಯ-ಪಾಪಾದಿಗಳಲ್ಲಿ ಪ್ರವೃತ್ತಿ ಮಾಡುತ್ತಾನೆ ಎನ್ನುತ್ತಾರೆ.

೪. ಚಾರ್ವಾಕರು ಅದೃಷ್ಟವನ್ನೂ ಕೂಡ ಒಪ್ಪುವುದಿಲ್ಲ. ಆದರೆ ಲೌಕಿಕವಾದ ಬೇರೆ ಕಾರಣಗಳಿಂದ ಜೀವನ ಪ್ರಯತ್ನವು ವಿಘಾತವಾಗುತ್ತದೆ ಎಂದು ಒಪ್ಪಿದ್ದಾರೆ.

ಒಟ್ಟು ಈ ನಾಕು ಮತಗಳಲ್ಲೂ ಕೂಡ ಜೀವನು ಮಾಡುವ ಪ್ರಯತ್ನಕ್ಕೆ ವಿಘಾತ ಉಂಟಾಗುತ್ತದೆಂದು ಒಪ್ಪಲಾಗಿದೆ. ಒಂದು ವೇಳೆ ಜೀವನ ಪ್ರಯತ್ನಕ್ಕೆ ವಿಘಾತ ಬಂದಲ್ಲಿ ವಿಧಿನಿಷೇಧವಿಷಯತ್ವವು ಕೂಡುವುದಿಲ್ಲ ಎಂದು ಹೇಳಿದರೆ ಯಾರೊಬ್ಬನಿಗೂ ಯಾವುದೇ ವಿಷಯದಲ್ಲೂ ನಿಯೋಗ ಮಾಡುವುದೇ ಅನುಪಪನ್ನವಾಗುತ್ತದೆ.

**ತಸ್ಮಾಜ್ಜೀವೇऽಪಿ ವಿಧ್ಯವಿಷಯೇಭ್ಯ ಈಶಜಡಮುಕ್ತೇಭ್ಯೋ ವ್ಯಾವೃತ್ತಸ್ಯ ಸ್ವಸಮ್ಬನ್ಧಿತಯಾ ವಿಧಿಜ್ಞಾನಸ್ಯ ತಜ್ಜನ್ಯಾಯಾಃ ಫಲೇ ತತ್ಸಾಧನೇ ಚೇಚ್ಛಾಯಾಃ ಸಾಧನವಿಷಯಕಕೃತೇಶ್ಚಾನುಭವ-ಸಿದ್ಧತ್ವಾತ್ತಸ್ಯ ಚ ಜ್ಞಾನಾದೇಃ "ನ ಋತೇ ತ್ವತ್" ಇತ್ಯಾದಿಶ್ರುತಿಭಿರೀಶ್ವರಾಧೀನತ್ವೇऽಪ್ಯಸ್ವತನ್ತ್ರ ಕರ್ತೃತ್ವಮಾತ್ರೇಣ ವಿಧಿವಿಷಯತ್ವಂ ಕರ್ಮಫಲಭಾಕ್ತ್ವಂ ಚ ಯುಕ್ತಮ್ ।**

ಈ ದೋಷವನ್ನು ಪರಿಹರಿಸಿಕೊಳ್ಳಬೇಕೆಂದರೆ ಜೀವನಲ್ಲಿ ವಿಧಿನಿಷೇಧವಿಷಯತ್ವವನ್ನು ಅಂಗೀಕಾರ ಮಾಡಲೇಬೇಕು. ಏಕೆಂದರೆ ಜ್ಞಾನ, ಇಚ್ಛಾಪ್ರಯತ್ನಗಳು ಇರುತ್ತವೆ -

'ಅಹರಹಃ ಸಂಧ್ಯಾಮುಪಾಸೀತ' ಎಂಬ ವಿಧಿವಾಕ್ಯವನ್ನು ನೋಡಿದಾಗ, ಜೀವನು ಈ ವಾಕ್ಯವು ನನಗೆ ಸಂಬಂಧಪಟ್ಟಿದೆ ಎಂಬುದಾಗಿ ಸ್ವಸಂಬಂಧಿತಯಾ ವಿಧಿಜ್ಞಾನವುಳ್ಳವನಾಗುತ್ತಾನೆ. ಇಂಥ ವಿಧಿ ಹಾಗೂ ನಿಷೇಧದ ಜ್ಞಾನವು ಈಶನಿಗೆ ಹಾಗೂ ಜಡಕ್ಕೆ ಮತ್ತು ಮುಕ್ತರಿಗೆ ಇರುವುದಿಲ್ಲ. ಈಶನಿಗೆ ಹಾಗೂ ಮುಕ್ತರಿಗೆ ವಿಧಿಜ್ಞಾನವಿದ್ದರೂ ಕೂಡ ಸ್ವಸಂಬಂಧಿಯಾದ ವಿಧಿಜ್ಞಾನವು ಇರುವುದಿಲ್ಲ. ಅಂದರೆ ಅಹರಹ ಸಂಧ್ಯಾಮುಪಾಸೀತ ಇತ್ಯಾದಿ ವಾಕ್ಯಗಳು ನನ್ನನ್ನು ಕುರಿತು ಹೇಳುತ್ತಿವೆ ಎಂಬ ಜ್ಞಾನವು ಅವರಿಗೆ ಬರುವುದಿಲ್ಲ. ಅನಂತರ ಫಲಸಾಧನವಾದದ್ದರಲ್ಲಿ ಇಚ್ಛೆಯು ಹುಟ್ಟುತ್ತದೆ. ಸ್ವರ್ಗಾದಿಗಳಲ್ಲಿ ಇಚ್ಛೆಯು ಸಹಜವಾಗಿ ಬರುತ್ತದೆ. ತತ್‌ಸಾಧನಾದಿ ಜ್ಯೋತಿಷ್ಟೋಮಾದಿಯಾಗಗಳಲ್ಲಿ ವಿಧಿವಾಕ್ಯವು ಹುಟ್ಟುತ್ತದೆ. ('ತಜ್ಜನ್ಯಾಯಾಃ' ಎಂಬ ಪದಕ್ಕೆ ವಿಧಿಜ್ಞಾನಜನ್ಯವಾದ ಎಂದು ಅರ್ಥ

ಮಾಡಬಾರದು. ಸಾಧನವಿಷಯಕ ಇಚ್ಛಾಜನ್ಯವಾದದ್ದರ ಎಂದು ಅರ್ಥ ಮಾಡಬೇಕು.) ಹೀಗೆ ಜೀವನಿಗೆ ಜ್ಞಾನ ಹಾಗೂ ಇಚ್ಛೆಗಳು ಇರುತ್ತವೆ. ಮತ್ತು ಸಾಧನ ವಿಷಯಕವಾದ ಕೃತಿಯೂ ಕೂಡ ಅನುಭವಸಿದ್ಧವಾಗಿದೆ. ಇಂಥ ಜ್ಞಾನ, ಇಚ್ಛಾಕೃತಿಗಳು 'ನ ಋತೇ ತ್ವತ್‌ಕ್ರಿಯತೇ' ಇತ್ಯಾದಿ ಶ್ರುತಿಗಳ ಆಧಾರದಿಂದ ಈಶ್ವರಾಧೀನವೆಂದು ಸಿದ್ಧವಾಗಿದೆ. ಆದರೂ ಕೂಡ ಜೀವನಿಗೆ ಅಸ್ವತಂತ್ರಕರ್ತೃತ್ವವಿರುವ ಕಾರಣದಿಂದ ವಿಧಿವಿಷಯತ್ವ, ಕರ್ಮಫಲಭಾಕ್ತ್ವಗಳು ಯುಕ್ತವಾಗುತ್ತವೆ.

**एतदेवाभिप्रेत्योक्तं भगवत्पादैर्गीताभाष्ये ''अकर्तृत्वेऽपि विधिद्वारेश्वरप्रसादादिच्छोत्पत्त्योक्तकारणैः कर्मद्वारा पुरुषार्थो भवतीति न प्रवृत्तिविधिवैयर्थ्यम्'' इति ।**

ಇದೇ ಅಭಿಪ್ರಾಯದಿಂದ ಭಗವತ್ಪಾದರು ಗೀತಾಭಾಷ್ಯದಲ್ಲಿ ಹೀಗೆ ಹೇಳಿದ್ದಾರೆ 'ಅಕರ್ತೃತ್ವೇಽಪಿ ವಿಧಿದ್ವಾರೇಶ್ವರಪ್ರಸಾದಾದಿಚ್ಛೋಪತ್ತ್ಯೋಕ್ತಕಾರಣೈಃ ಕರ್ಮದ್ವಾರಾ ಪುರುಷಾರ್ಥೋ ಭವತೀತಿ ನ ಪ್ರವೃತ್ತಿವಿಧಿವೈಯರ್ಥ್ಯಯಮ್' ಜೀವನಿಗೆ ಸ್ವತಂತ್ರಕರ್ತೃತ್ವವಿಲ್ಲದಿದ್ದರೂ ಕೂಡ ವಿಧಿಯ ಮೂಲಕ ಈಶ್ವರನ ಪ್ರಸಾದದಿಂದ ಯಾವ ಇಚ್ಛೆಯು ಜೀವನಲ್ಲಿ ಹುಟ್ಟುತ್ತದೋ, ಆದರಿಂದ ಈಶ್ವರದತ್ತವಾದ ಕಾರಣಗಳಿಂದ ಕರ್ಮದ ಮೂಲಕ ಪುರುಷಾರ್ಥವನ್ನು ಹೊಂದುತ್ತಾನೆ. ಆದ್ದರಿಂದ ಜೀವನನ್ನು ಕುರಿತು ಹೊರಟಿರುವ ವಿಧಿವಾಕ್ಯಗಳಿಗೆ ವೈಯರ್ಥ್ಯದೋಷವು ಬರುವುದಿಲ್ಲ.

**भारततात्पर्यनिर्णयेऽपि**

**प्रत्यक्षैषा कर्तृता जीवसंस्था तथाऽगमादनुमानाच्च सर्वम् ।**
**विष्णोर्वशे तन्न हेयं द्वयं च जानन् विद्वान् कुरुते कार्यकर्म ।। इति ।**

ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಧರ್ಮರಾಜನನ್ನು ಕುರಿತು ಭೀಮಸೇನದೇವರು ಹೇಳಿದ ನುಡಿ ಹೀಗಿದೆ – 'ಪ್ರತ್ಯಕ್ಷೈಷಾ ಕರ್ತೃತಾ ಜೀವಸಂಸ್ಥಾ ತಥಾಽಗಮಾದನುಮಾನಾಚ್ಚ ಸರ್ವಮ್' ಜೀವರಲ್ಲಿರುವ ಕರ್ತೃತ್ವವು 'ಅಹಂಕರ್ತಾ ಇತ್ಯಾದಿಯಾದ ಪ್ರತ್ಯಕ್ಷದಿಂದ ಸಿದ್ಧವಾಗಿದೆ. 'ಯತ್ಕರ್ಮ ಕುರುತೇ ತದಭಿಸಂಪದ್ಯತೇ' ಎಂಬ ಆಗಮದಿಂದಲೂ ಕೂಡ ಜೀವಕರ್ತೃತ್ವವು ಸಿದ್ಧವಾಗಿದೆ. 'ಜೀವಃ ಕರ್ತಾ ವಿಧಿನಿಷೇಧವಿಷಯತ್ವಾತ್' ಎಂಬ ಅನುಮಾನದಿಂದಲೂ ಕೂಡ ಕರ್ತೃತ್ವವು ಜೀವನಲ್ಲಿ ಸಿದ್ಧವಾಗಿದೆ. ಯಾವ ಪ್ರಮೇಯವು ಮೂರು ಪ್ರಮಾಣಗಳಿಂದಲೂ ಸಿದ್ಧವಾಗುತ್ತದೋ ಅದು ಅತ್ಯಂತ ಪ್ರಾಮಾಣಿಕ ಎಂಬುದು ಸಿದ್ಧವಾಗಿದೆ. ಹೀಗೆ ಭೀಮಸೇನದೇವರು ಹೇಳಿದ್ದಾರೆ. ಕೆಲವು ವಾಕ್ಯಗಳ ಅನಂತರ ಮುಂದಿನ ವಾಕ್ಯವು ಕಾಣಿಸುತ್ತದೆ. 'ವಿಷ್ಣೋರ್ವಶೇ ತನ್ನ ಹೇಯಂ ದ್ವಯಂ ಚ ಜಾನನ್ ವಿದ್ವಾನ್ ಕುರುತೇ ಕಾರ್ಯಕರ್ಮ' ಪೂರ್ವಕರ್ಮ ಮೊದಲಾದವುಗಳೆಲ್ಲವೂ ಕೂಡ ವಿಷ್ಣುವಿನ ಅಧೀನವಾಗಿವೆ. ಹೀಗೆ ತಿಳಿದು ವಿದ್ವಾಂಸನಾದವನು ಕಾರ್ಯದಲ್ಲಿ ಪ್ರವೃತ್ತನಾಗುತ್ತಾನೆ ಎಂದು.

**पुण्यपापादिजनकक्रियाविषयजीवगतेच्छाप्रयत्नादौ सर्वत्रेश्वरस्य प्रयोजककर्तृत्वेऽपि जीवनिग्रहानुग्रहयोरीश्वरस्यानादिसिद्धजीवगतयोग्यतापेक्षत्वान्न वैषम्यादीत्युक्तं वैषम्याधिकरणे ।**

ನಮ್ಮ ಪುಣ್ಯಾಪಾಪಗಳು ಅಥವಾ ಅದಕ್ಕೆ ಜನಕವಾದ ಕ್ರಿಯೆಗಳು ಅಥವಾ ಆ ಕ್ರಿಯೆಗೆ ವಿಷಯಗಳು ಅಥವಾ ಜೀವಗತವಾದ ಇಚ್ಛಾಪ್ರಯತ್ನಾದಿಗಳು ಈ ಎಲ್ಲ ವಿಷಯದಲ್ಲೂ ಕೂಡ ಈಶ್ವರನೇ

ಪ್ರಯೋಜಕಕರ್ತೃವಾಗಿದ್ದಾನೆ. ಪುಣ್ಯ, ಪಾಪ, ತಜ್ಜನಕವಾದ ಕ್ರಿಯೆ, ಅದಕ್ಕೆ ವಿಷಯವಾದ ಯಾಗಾದಿಗಳು ನಮ್ಮಲ್ಲಿ ಹುಟ್ಟುವ ಇಚ್ಛಾ, ಪ್ರಯತ್ನ ಎಲ್ಲವೂ ಕೂಡ ಈಶ್ವರನ ಅಧೀನವೇ ಆಗಿವೆ. ಸಕಲವೂ ಅವನ ಅಧೀನವಾದ ಮೇಲೆ ವೈಷಮ್ಯನೈರ್ಘೃಣ್ಯದೋಷವು ಬರುತ್ತದಲ್ಲವೇ ಎಂದು ಪ್ರಶ್ನಿಸಬಾರದು. ಈಶ್ವರನು ಅನಾದಿಸಿದ್ಧವಾದ ಜೀವನಲ್ಲಿರುವ ಯೋಗ್ಯತೆ, ಕರ್ಮ ಇವುಗಳನ್ನು ಅಪೇಕ್ಷಿಸಿಯೇ ಜೀವನ ನಿಗ್ರಹ, ಅನುಗ್ರಹ ಮಾಡುತ್ತಾನಾದ್ದರಿಂದ ವೈಷಮ್ಯನೈರ್ಘೃಣ್ಯದೋಷಕ್ಕೆ ಅವಕಾಶವಿಲ್ಲ. ಈ ವಿಷಯವನ್ನು ವೈಷಮ್ಯನೈರ್ಘೃಣ್ಯಾಧಿಕರಣದಲ್ಲಿಯೇ ಸಮರ್ಥಿಸಿದ್ದೇವೆ.

**कर्माद्यनपेक्ष्य फलदाने शक्तस्यापीश्वरस्य तदपेक्ष्यैव फलं दास्यामीति स्वसङ्कल्पादेव तदपेक्षेति न स्वातन्त्र्यहानिः । उक्तं हि ''एतानपेक्ष्यैव फलं ददानीत्यस्यैव सङ्कल्प इति स्वतन्त्रत'' इति ।।**

ಯೋಗ್ಯತೆ, ಕರ್ಮ ಇವುಗಳನ್ನು ಅಪೇಕ್ಷಿಸಿ ಈಶ್ವರನು ಫಲವನ್ನು ನೀಡುತ್ತಾನೆಂದು ಹೇಳಿದರೆ ಅವನಲ್ಲಿ ಸ್ವಾತಂತ್ರ್ಯವೆಂಬ ಗುಣವೇ ನಾಶವಾಗುತ್ತದಲ್ಲವೇ? ಎಂಬ ಪ್ರಶ್ನೆಗೂ ಅವಕಾಶವಿಲ್ಲ. ಕರ್ಮಾದಿಗಳನ್ನು ಅಪೇಕ್ಷೆ ಪಡದೇ ಫಲವನ್ನು ಕೊಡಲು ಈಶ್ವರನು ಸಮರ್ಥನೇ ಆಗಿದ್ದಾನೆ. ಆದರೂ ಕೂಡ ಕರ್ಮಾದಿಗಳನ್ನು ಅಪೇಕ್ಷಿಸಿ ಫಲವನ್ನು ನೀಡುತ್ತೇನೆ ಎಂಬ ಸಂಕಲ್ಪವನ್ನು ಅವನು ಮಾಡಿಕೊಂಡಿದ್ದಾನೆ. ತನ್ನ ಸಂಕಲ್ಪದ ಅಧೀನವಾಗಿ ತಾನು ಕಾರ್ಯವನ್ನು ಮಾಡಿಸುತ್ತಾನಾದ್ದರಿಂದ ಸ್ವಾತಂತ್ರ್ಯಕ್ಕೆ ಹಾನಿ ಇಲ್ಲ. ಇದನ್ನೇ ಭೀಮಸೇನದೇವರು ಧರ್ಮರಾಜನಿಗೆ ಹೇಳಿದ್ದಾರೆ– 'ಏತಾನಪೇಕ್ಷ್ಯೈವ ಫಲಂ ದದಾನೀತ್ಯಸ್ಯೈವ ಸಂಕಲ್ಪ ಇತಿ ಸ್ವತಂತ್ರತಃ' ಈ ಕರ್ಮಾದಿಗಳನ್ನು ಅಪೇಕ್ಷಿಸಿ ಫಲವನ್ನು ಕೊಡುತ್ತೇನೆ ಎಂಬ ಸಂಕಲ್ಪ ಮಾಡುವಿಕೆಯೇ ಸ್ವತಂತ್ರ್ಯ ಎಂದು ಕರೆಸಿಕೊಳ್ಳುತ್ತದೆ ಎಂದು.

**अयं पर इति ।। ''परात्तु तच्छ्रुतेः'' इति सूत्रात्पर इत्यनुषज्यत इति भावः।। विधिनिषेधशास्त्रावैयर्थ्यायैवेति ।। न त्वशक्तस्य स्वस्य साहाय्यार्थमित्यर्थः ।**

ಟೀಕೆಯಲ್ಲಿ 'ಅಯಂ ಪರಃ' ಇತ್ಯಾದಿ ವಾಕ್ಯಗಳ ಅಭಿಪ್ರಾಯ ಹೀಗಿದೆ – 'ಪರಾತ್ತು ತಚ್ಛ್ರುತೇಃ' ಎಂಬ ಸೂತ್ರದಿಂದ ಪರಃ ಎಂಬುದನ್ನು ಇಲ್ಲಿ ಅನುಷಂಗ ಮಾಡಿಕೊಳ್ಳಬೇಕು. ಏಕೆಂದರೆ ವಿಧಿನಿಷೇಧಶಾಸ್ತ್ರಕ್ಕೆ ವೈಯರ್ಥ್ಯ ಬರಬಾರದು ಎಂಬ ಕಾರಣಕ್ಕಾಗಿ. ಅಶಕ್ತನಿಗೆ ತನ್ನ ಸಹಾಯಕ್ಕೋಸ್ಕರ ಅಲ್ಲವೆಂದು ಅದರ ಅರ್ಥ.

ವಿವರಣೆ – ಯೋಗ್ಯತೆ, ಕರ್ಮ ಹಾಗೂ ಈಗ ಮಾಡುತ್ತಿರುವ ಪ್ರಯತ್ನ ಈ ಮೂರರ ಅಪೇಕ್ಷೆ ಉಳ್ಳವನಾಗಿಯೇ ಪರಮಾತ್ಮನು ನಮ್ಮನ್ನು ಪ್ರೇರಣೆ ಮಾಡುತ್ತಾನೆ ಹೊರತು ಇವುಗಳಿಗೆ ವ್ಯತಿರಿಕ್ತವಾಗಿ ಪ್ರೇರಣೆಯನ್ನು ಮಾಡಲಾರ. ಏಕೆಂದರೆ ವಿಧಿನಿಷೇಧಗಳಿಗೆ ವೈಯರ್ಥ್ಯವು ಬರಬಾರದು ಎಂಬುದಕ್ಕೆ ಅವನು ಇದೇ ನಿಯಮವನ್ನು ಪಾಲಿಸುತ್ತಾನೆ. ಇಲ್ಲದಿದ್ದರೆ ಜೀವನಿಗೆ ಕರ್ತೃತ್ವವನ್ನು ಒಪ್ಪಿದರೂ ಕೂಡ ಪರಮಾತ್ಮನೇ ಎಲ್ಲವನ್ನೂ ಮಾಡುತ್ತಾನೆಂದು ಹೇಳಿದರೆ ಪುನಃ ವಿಧಿನಿಷೇಧಗಳಿಗೆ ವೈಯರ್ಥ್ಯವು ಬರುತ್ತಿತ್ತು. ಯೋಗ್ಯತೆ ಕರ್ಮಗಳನ್ನು ಈಶ್ವರನು ಏಕೆ ಅಪೇಕ್ಷಿಸುತ್ತಾನೆಂದರೆ ತಾನು ಅಶಕ್ತನಾಗಿದ್ದರಿಂದ ತನ್ನ ಸಹಾಯಕ್ಕಾಗಿ ಅವುಗಳನ್ನು ಅಪೇಕ್ಷಿಸುತ್ತಾನೆ ಎಂದಲ್ಲ. ವಿಧಿನಿಷೇಧಕ್ಕೆ ವೈಯರ್ಥ್ಯ ಬರಬಾರದು ಎಂಬ ಕಾರಣಕ್ಕಾಗಿ ಅವುಗಳನ್ನು ಅಪೇಕ್ಷಿಸುತ್ತಾನೆ. ಅಥವಾ ತನ್ನ ವೈಷಮ್ಯನೈರ್ಘೃಣ್ಯದೋಷವು ಬರಬಾರದೆಂಬುದಕ್ಕಾಗಿ ಆ ಕರ್ಮ, ಯೋಗ್ಯತೆಗಳನ್ನು ಅಪೇಕ್ಷಿಸುತ್ತಾನೆ ಎಂಬುದು 'ಅಯಂ ಪರ' ಇತ್ಯಾದಿ ವಾಕ್ಯದ ಅಭಿಪ್ರಾಯವಾಗಿದೆ.

ಪರಿಪೂರ್ಣಚಂದ್ರಿಕಾ

**अन्ये तु ''कर्ता'' इत्यादिसूत्रसप्तकमेकमधिकरणम् । तत्र च सांख्यरीत्या बुद्धेः कर्तृतेति प्राप्ते जीवस्येति सिद्धान्तः ।**

ಅದ್ವೈತಿಗಳು 'ಕರ್ತಾ' ಇತ್ಯಾದಿ ಏಳು ಸೂತ್ರಗಳು ಒಂದೇ ಅಧಿಕರಣದಲ್ಲಿ ಸೇರುತ್ತವೆ ಎಂದು ಅಂಗೀಕರಿಸುತ್ತಾರೆ. ಸಾಂಖ್ಯರ ಪ್ರಕಾರ ಬುದ್ಧಿಗೆ ಕರ್ತೃತ್ವವು ಪ್ರಾಪ್ತವಾದರೆ ಜೀವನಲ್ಲಿ ಕರ್ತೃತ್ವ ಬರುತ್ತದೆಂದು ಈ ಅಧಿಕರಣದಲ್ಲಿ ಸಿದ್ಧಾಂತ ಮಾಡಿದ್ದಾರೆ.

**''यथा चतक्ष'' इति सूत्रमधिकरणान्तरम् । तत्र च जीवस्य कर्तृत्वमग्नेरौष्ण्यमिव स्वाभाविकमिति प्राप्ते तक्ष्णः कर्तृत्वं वा स्यायुपाधिनेवान्तःकरणायुपाधिना कल्पितमिति सिद्धान्तः ।**

'ಯಥಾ ಚತಕ್ಷೋಭಯತಾ' ಎಂಬ ಒಂದೇ ಸೂತ್ರವನ್ನು ಬೇರೆ ಅಧಿಕರಣವೆಂದು ಹೇಳುತ್ತಾರೆ. ಅಗ್ನಿಗೆ ಔಷ್ಣ್ಯವು ಹೇಗೆ ಸ್ವಾಭಾವಿಕವಾಗಿ ಇದೆಯೋ ಅದರಂತೆ ಜೀವನಲ್ಲಿ ಕರ್ತೃತ್ವವು ಸ್ವಾಭಾವಿಕವಾಗಿ ಇದೆ ಎಂಬುದು ಈ ಅಧಿಕರಣದ ಪೂರ್ವಪಕ್ಷ. ಬಡಗಿಗಾರನಿಗೆ ಕರ್ತೃತ್ವವು ಸ್ವಾಭಾವಿಕವಾಗಿ ಇರುವುದಿಲ್ಲ. ಉಳಿ ಎಂಬ ಉಪಾಧಿಯ ಮೂಲಕವಾಗಿ ಕಲ್ಪಿತವಾದ ಕರ್ತೃತ್ವವಿದೆ. ಅದರಂತೆ ಜೀವನಿಗೂ ಸ್ವಾಭಾವಿಕವಾದ ಕರ್ತೃತ್ವವಿಲ್ಲ. ಅಂತಃಕರಣವೆಂಬ ಉಪಾಧಿಯ ಪ್ರಯುಕ್ತವಾಗಿ ಕಲ್ಪಿತವಾದ ಕರ್ತೃತ್ವವಿದೆ ಎಂಬುದು ಅಧಿಕರಣದ ಸಿದ್ಧಾಂತ.

**''परात्तु'' इत्यादि सूत्रद्वयमधिकरणान्तरम् । तत्र च जीवस्योक्तं कर्तृत्वमीश्वरानपेक्षमिति प्राप्ते तत्सापेक्षमिति सिद्धान्त इत्याहुः ।**

'ಪರಾತ್ತುತಚ್ಛ್ರುತೇಃ' ಇತ್ಯಾದಿ ಎರಡು ಸೂತ್ರಗಳು ಬೇರೆ ಅಧಿಕರಣವೆನ್ನುತ್ತಾರೆ. ಜೀವನಲ್ಲಿ ಹೇಳಲ್ಪಟ್ಟ ಕರ್ತೃತ್ವವು ಈಶ್ವರನ ಅಧೀನವಾಗಿರುವುದಿಲ್ಲ ಎಂಬುದು ಅಧಿಕರಣದ ಪೂರ್ವಪಕ್ಷ. ಈಶ್ವರನ ಅಧೀನವಾಗಿದೆ ಎಂಬುದು ಅಧಿಕರಣದ ಸಿದ್ಧಾಂತ.

**तन्न । जीवकर्तृत्वाकर्तृत्वश्रुत्योर्विरोधस्य भोक्तृत्वाभोक्तृत्वश्रुत्योरिव त्वदुक्तेन'' तद्गुणसारत्वात्'' इति न्यायेनैवौपाधिकानौपाधिकविषयतया निरासेनैतदधिकरणस्य वैयर्थ्यात् । सांख्यस्मृतिविरोधस्य चाद्यपादे निरासादिहासङ्गतेश्च ।**

ಇದು ತಪ್ಪು. ಜೀವಕರ್ತೃತ್ವ ಅಕರ್ತೃತ್ವ ಶ್ರುತಿಗಳ ವಿರೋಧವು ಭೋಕ್ತೃತ್ವ, ಅಭೋಕ್ತೃತ್ವ ಶ್ರುತಿಗಳ ವಿರೋಧವನ್ನು ನೀನು 'ತದ್ಗುಣಸಾರತ್ವಾತ್' ಎಂಬ ಸೂತ್ರದಲ್ಲಿ ಹೇಗೆ ಪರಿಹರಿಸಿದ್ದಿಯೋ ಅದೇ ನ್ಯಾಯದಿಂದಲೇ ಪರಿಹಾರವಾಗುತ್ತದೆ. ಔಪಾಧಿಕ ಹಾಗೂ ಅನೌಪಾಧಿಕ ವಿಷಯವಾಗಿ ಇದನ್ನು ನಿರಾಕರಣೆ ಮಾಡಬಹುದು. ಆದ್ದರಿಂದ ಈ ಅಧಿಕರಣವು ವ್ಯರ್ಥವಾಗುತ್ತದೆ. ಸಾಂಖ್ಯಸ್ಮೃತಿ-ವಿರೋಧವನ್ನು ಮೊದಲನೇ ಪಾದದಲ್ಲೇ ನಿರಾಸ ಮಾಡಬೇಕಾದ್ದರಿಂದ ಇಲ್ಲಿ ಅದರ ವಿರೋಧ ಪರಿಹಾರ ಮಾಡುವುದು ಅಸಂಗತವಾಗುತ್ತದೆ.

ಕರ್ತೃತ್ವಾಧಿಕರಣ (೨-೩-೧೭)

**ವಿವರಣೆ** – ಅದ್ವೈತಿಗಳ ಈ ಮೂರು ಅಧಿಕರಣಗಳ ರಚನೆಯೂ ಕೂಡ ಅಯುಕ್ತವಾಗಿದೆ. ಮೊದಲನೇ ಅಧಿಕರಣವು ಜೀವನಲ್ಲಿ ಕರ್ತೃತ್ವವಿದೆ ಎಂದು, ಎರಡನೇ ಅಧಿಕರಣವು ಔಪಾಧಿಕಕರ್ತೃತ್ವವಿದೆಯೆಂದೂ, ಮೂರನೇ ಅಧಿಕರಣವು ಈಶ್ವರಾಧೀನಕರ್ತೃತ್ವವಿದೆಯೆಂದೂ ಸಾಧಿಸಲು ಹೊರಟಿದೆ ಎಂದು ಹೇಳಿದಿರಿ. ಮೊದಲನೇ ಅಧಿಕರಣವು ವ್ಯರ್ಥವಾಗಿದೆ. ಏಕೆಂದರೆ ಇದು ಶ್ರುತಿವಿರೋಧವನ್ನು ಪರಿಹಾರ ಮಾಡುವ ಪಾದವಾಗಿದೆ. ಶ್ರುತಿವಿರೋಧವನ್ನು ಈ ಹಿಂದೆಯೇ ನೀನು ಪರಿಹಾರ ಮಾಡಿರುವಿ. 'ತದ್ಗುಣಸಾರತ್ವಾತ್' ಎಂಬ ಸೂತ್ರದಲ್ಲಿ ಈ ವಿಷಯವನ್ನು ನೀನು ಪ್ರತಿಪಾದನೆ ಮಾಡಿದ್ದಾಗಿದೆ. ಜೀವನು ಅಣುವಾಗಿದ್ದಾನೆ ಎಂದು ಪೂರ್ವಪಕ್ಷ ಮಾಡಿಕೊಂಡು ಬುದ್ಧಿಯಲ್ಲಿಯೇ ಗಮನಾಗಮನಗಳೆಲ್ಲವೂ ಇದೆ. ಅದು ಜೀವನಲ್ಲಿ ಗೌಣವಾಗಿ ಹೇಳಲ್ಪಡುತ್ತದೆ. ಬುದ್ಧಿಗುಣಸಾರನಾದ್ದರಿಂದ ಬುದ್ಧಿಯ ಧರ್ಮಗಳು ಜೀವನಲ್ಲಿ ಹೇಳಲಾಗಿದೆ ಎಂಬುದಾಗಿ ವ್ಯಾಖ್ಯಾನ ಮಾಡಿರುವಿ. ಇದರಿಂದ ಜೀವನಲ್ಲಿ ಭೋಕ್ತೃತ್ವ, ಅಭೋಕ್ತೃತ್ವ ಪ್ರಕಾರದ ಶ್ರುತಿಗಳ ವಿರೋಧವೂ ಪರಿಹಾರವಾಯಿತು. ಏಕೆಂದರೆ ಭೋಕ್ತೃತ್ವಾದಿಗಳೆಲ್ಲವೂ ಬುದ್ಧಿಯಲ್ಲಿಯೇ ಇವೆ. ಬುದ್ಧಿಗತವಾದುದನ್ನೇ ಜೀವನಲ್ಲಿ ಹೇಳಲಾಗುತ್ತದೆ ಎಂದು ನೀವು ಪರಿಹರಿಸಿದ್ದೀರಿ. ಜೀವನಲ್ಲಿರುವ ಅಭೋಕ್ತೃತ್ವವು ಅನೌಪಾಧಿಕವಾಗಿದೆ, ಭೋಕ್ತೃತ್ವವು ಔಪಾಧಿಕವಾಗಿದೆ ಎಂಬ ನ್ಯಾಯದಿಂದಲೇ ಜೀವನಿಗೆ ಕರ್ತೃತ್ವವಿದೆ ಎಂದು ಕೆಲವು ಶ್ರುತಿಯು ಹೇಳುತ್ತದೆ, ಇನ್ನು ಕೆಲವು ಕರ್ತೃತ್ವವಿಲ್ಲವೆಂದು ಹೇಳುತ್ತಿವೆ. ಇಲ್ಲೂ ಕೂಡ ಇದೇ ನ್ಯಾಯವನ್ನು ವಿವಕ್ಷಿಸಬಹುದು. ಜೀವನಲ್ಲಿ ಕರ್ತೃತ್ವವನ್ನು ಹೇಳುವುದು ಔಪಾಧಿಕ. ಅಕರ್ತೃತ್ವವು ಸ್ವಾಭಾವಿಕ. ಆದ್ದರಿಂದ ಶ್ರುತಿಗಳ ವಿರೋಧಕ್ಕೆ ಅವಕಾಶವಿಲ್ಲ. ಹೀಗೆ ಭೋಕ್ತೃತ್ವ, ಅಭೋಕ್ತೃತ್ವ ಶ್ರುತಿಗಳಿಗೆ ವಿರೋಧವನ್ನು ಯಾವ ನ್ಯಾಯದಿಂದ ಪರಿಹರಿಸಿದೆಯೋ ಅದೇ ನ್ಯಾಯದಿಂದಲೇ ಕರ್ತೃತ್ವ, ಅಕರ್ತೃತ್ವ ಶ್ರುತಿಗಳ ವಿರೋಧವೂ ಕೂಡ ಪರಿಹಾರವಾಗುತ್ತದೆ. ಹೀಗಿರುವಾಗ ಈ ಅಧಿಕರಣವು ಪುನಃ ವ್ಯರ್ಥವಾಗುತ್ತದೆ.

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**कर्ता** ।। ''जीवो न कर्तः'' इति टीकासूचितामाह – **अस्त्विति** ।। **कर्तृत्वश्रुतिरिति** ।। ''यत्कर्म कुरुते तदभिसम्पद्यत'' इति श्रुतिः ।। **श्रुत्येति** ।। ''नान्यः कर्त'' इतीश्वरान्यकर्तृत्वनिषेधश्रुत्येत्यर्थः ।

ಜೀವನು ಕರ್ತೃವೇ ಅಲ್ಲ ಇತ್ಯಾದಿ ಟೀಕೆಯಿಂದ ಸೂಚಿತವಾದುದನ್ನು 'ಅಸ್ತು' ಇತ್ಯಾದಿ ಗ್ರಂಥದಿಂದ ನಿರೂಪಣೆ ಮಾಡುತ್ತಿದ್ದಾರೆ. ಜೀವನಿಗೆ 'ಯತ್ಕರ್ಮ ಕುರುತೇ ತದಭಿಸಂಪದ್ಯತೇ' ಎಂಬ ಶ್ರುತಿಯು ಕರ್ತೃತ್ವವಿದೆ ಎಂದು ಹೇಳುತ್ತಿದೆ. 'ನಾನ್ಯಃ ಕರ್ತಾ' ಎಂಬ ಶ್ರುತಿಯು ಈಶ್ವರನನ್ನು ಬಿಟ್ಟು ಬೇರೆ ಯಾರೊಬ್ಬರಿಗೂ ಕರ್ತೃತ್ವವಿಲ್ಲವೆಂದು ಹೇಳುತ್ತಿದೆ. ಹೀಗೆ ಶ್ರುತಿಗಳಲ್ಲಿ ಪರಸ್ಪರ ವಿರೋಧವಿದೆ. ಅದನ್ನು ಈ ಅಧಿಕರಣದಲ್ಲಿ ಪರಿಹರಿಸುತ್ತಿದ್ದಾರೆ ಎಂದರ್ಥ.

**ಪರಿಪೂರ್ಣಚಂದ್ರಿಕಾ**

**प्रकाशः** – अस्पष्टत्वादाह – **अयं भाव इति** ।। ''उपलब्धिवदनियम'' इति सूत्रसम्बद्धटीकां हृदि कृत्वाऽऽह – **किं स्वतन्त्रमित्यादि** ।। ''नान्यः कर्त'' इत्यादिश्रुत्या ''इतरव्यपदेशात्'' इत्यधिकरणेन च विरोधादित्यर्थः ।

ಟೀಕೆಯಲ್ಲಿ ಪೂರ್ವಪಕ್ಷವು ಸ್ಪಷ್ಟವಾಗಿ ತಿಳಿಯದ ಕಾರಣ 'ಅಯಂ ಭಾವಃ' ಎಂದು ಹೇಳಿರುತ್ತಾರೆ. 'ಉಪಲಬ್ಧಿವದನಿಯಮಃ' ಎಂಬ ಸೂತ್ರಕ್ಕೆ ಸಂಬಂಧಪಟ್ಟ ಟೀಕೆಯನ್ನು ಮನಸ್ಸಿನಲ್ಲಿಟ್ಟುಕೊಂಡು 'ಕಿಂ ಸ್ವತಂತ್ರಮ್' ಎಂದು ಪ್ರಶ್ನಿಸಿದ್ದಾರೆ. 'ನಾನ್ಯಃ ಕರ್ತಾ' ಎಂಬ ಶ್ರುತಿಯಿಂದ ಹಾಗೂ ಇತರವ್ಯಪದೇಶಾಧಿಕರಣದಿಂದ ಜೀವಕರ್ತೃತ್ವಕ್ಕೆ ವಿರೋಧ ಬರುತ್ತದೆಂದರ್ಥ.

**प्रकाशः** – ''परात्तु तच्छ्रुतेः'' इति सूत्रसम्बद्धटीकां विकल्पमुखेन व्यनक्ति।। **किं कर्तृत्वशक्तेरिति** ।। ''कृतप्रयत्न'' इति सूत्रसम्बद्धटीकार्थमाह – **अन्त्य इति**।। इतिशब्दस्यायं भाव इति पूर्वेणान्वयः ।।

'ಪರಾತ್ತುತಚ್ಛ್ರುತೇಃ' ಎಂಬ ಸೂತ್ರಕ್ಕೆ ಸಂಬಂಧಪಟ್ಟ ಟೀಕೆಯನ್ನು ವಿಕಲ್ಪ ಮಾಡುವ ಮೂಲಕ 'ಕಿಂ ಕರ್ತೃತ್ವಶಕ್ತೇಃ' ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಕೃತಪ್ರಯತ್ನ' ಎಂಬ ಸೂತ್ರಕ್ಕೆ ಸಂಬಂಧಪಟ್ಟ ಟೀಕೆಯ ಅರ್ಥವನ್ನು ಅಂತ್ಯೇ ಎಂಬುದರಿಂದ ವ್ಯಾಖ್ಯಾನ ಮಾಡಿದ್ದಾರೆ. 'ಇತಿ' ಶಬ್ದಕ್ಕೆ 'ಅಯಂ ಭಾವಃ' ಎಂಬ ಹಿಂದಿನ ಪದಗಳ ಜೊತೆ ಅನ್ವಯವನ್ನು ತಿಳಿಯಬೇಕು.

**प्रकाशः** – **सूत्रोक्तरीत्येति** ।। ''शास्त्रार्थवत्त्वात्'' इत्यनेन युक्तेः, ''उपादानात्'' इत्यनेन ''मोक्षाद्यर्थं साधनाद्युपादानप्रतीतेः'' इत्युक्तया प्रत्यक्षस्य, ''विहारोपदेशात् । व्यपदेशाच्च क्रियायां न चेन्निर्देशविपर्यय'' इत्याभ्यां ''जक्षन् क्रीडन्नममाणः । आत्मानमेव लोकमुपासीत'' इत्यादिश्रुतेरुक्तेरिति भावः । एतेन त त्तत्सूत्रभाष्यटीकातात्पर्यार्थसङ्ग्रहः कृतो भवति ।

'ಕರ್ತಾ ಶಾಸ್ತ್ರಾರ್ಥವತ್ತ್ವಾತ್' ಎಂಬ ಸೂತ್ರದಲ್ಲಿ ಶಾಸ್ತ್ರವು ಸಾರ್ಥಕವಾಗಬೇಕಾದರೆ ಜೀವಕರ್ತೃತ್ವವನ್ನು ಒಪ್ಪಲೇಬೇಕು ಎಂಬ ಯುಕ್ತಿಯನ್ನು ಹೇಳಿದ್ದಾರೆ. 'ಉಪಾದಾನಾತ್' ಎಂಬ ಸೂತ್ರದಲ್ಲಿ ಮೋಕ್ಷಕ್ಕೋಸ್ಕರ ಮೋಕ್ಷಸಾಧನೆಯನ್ನು ಮಾಡುತ್ತಾನೆ. ಸ್ವರ್ಗಫಲಕ್ಕೋಸ್ಕರ ತದುದ್ದೇಶಕವಾದ ಸಾಧನೆಯನ್ನು ಮಾಡುತ್ತಾನೆ. ಹೀಗೆ ಸಾಧನಾದ್ಯುಪಾದಾನಗಳು ಪ್ರತ್ಯಕ್ಷ ಸಿದ್ಧವಾಗಿರುವಾಗ ಜೀವಕರ್ತೃತ್ವವು ಪ್ರತ್ಯಕ್ಷಸಿದ್ಧವಾಯಿತು ಎಂದು ಹೇಳಲಾಗಿದೆ. 'ವಿಹಾರೋಪದೇಶಾತ್' ಎಂಬ ಸೂತ್ರದಲ್ಲಿ ಜೀವನಿಗೆ ಆರೋಪಿತವಾದ ಕರ್ತೃತ್ವ ಇರಬಹುದಲ್ಲವೇ? ಎಂಬ ಪ್ರಶ್ನೆಗೆ ಉತ್ತರಿಸಲಾಗಿದೆ. ಮೋಕ್ಷದಲ್ಲೂ ಕೂಡ ಜೀವನಿಗೆ ಕರ್ತೃತ್ವವಿದೆ ಎಂದು ಹೇಳಿದ್ದರಿಂದ ವ್ಯಾವಹಾರಿಕವೆಂದಾಗಲೀ, ಆರೋಪಿತವೆಂದಾಗಲೀ ಹೇಳಲಾಗದು. ಈ ಸೂತ್ರದಲ್ಲಿ 'ಜಕ್ಷನ್ ಕ್ರೀಡನ್' ಎಂಬ ಸೂತ್ರವನ್ನು ಉದಾಹರಿಸಲಾಗಿದೆ. 'ವ್ಯಪದೇಶಾಚ್ಚ ಕ್ರಿಯಾಯಾಂ ನ ಚೇನ್ನಿರ್ದೇಶವಿಪರ್ಯಯಃ' ಎಂಬ ಸೂತ್ರದಲ್ಲಿ ಕ್ರಿಯಾದಲ್ಲಿ ಕರ್ತೃತ್ವವ್ಯಪದೇಶವು ಸ್ಪಷ್ಟವಾಗಿ ಕಾಣಿಸುತ್ತಿದೆ. ಪರಮಾತ್ಮನನ್ನು ನೀನು ಉಪಾಸನೆ ಮಾಡು ಎಂದು ಹೇಳಲಾಗಿದೆ. ಒಂದುವೇಳೆ ಪರಮಾತ್ಮನಲ್ಲಿ ಮಾತ್ರ ಕರ್ತೃತ್ವ ಇದೆ ಎಂದಾಗಿದ್ದಲ್ಲಿ 'ಆತ್ಮಾ ಉಪಾಸೀತ' ಎಂದು ಇರಬೇಕಾಗಿತ್ತು. ಪರಮಾತ್ಮನನ್ನು ನೀನು

ಉಪಾಸನೆ ಮಾಡು ಎಂದು ಹೇಳಿದ್ದರಿಂದ ಅರ್ಥಾತ್ ಜೀವನಿಗೆ ಕರ್ತೃತ್ವವಿದೆ ಎಂದು ಹೇಳಿದಂತಾಯಿತು. ಹೀಗೆ ಹೇಳಿದ್ದರಿಂದ ಆಯಾ ಸೂತ್ರಗಳ ಭಾಷ್ಯಟೀಕೆಯ ತಾತ್ಪರ್ಯದ ಅರ್ಥವನ್ನು ಭಾಷ್ಯಕಾರರು ಸಂಗ್ರಹ ಮಾಡಿದಂತಾಯಿತು.

**प्रकाशः** – ''उपलब्धिवदनियम'' इत्यादिसूत्रभाष्यटीकातात्पर्यं शङ्कापूर्वं व्यनक्ति ।। **नचेति** ।। ''कृतप्रयत्नापेक्षस्तु विहितप्रतिषेधावैयर्थ्यादिभ्यः'' इति सूत्रभाष्यादितात्पर्यं प्रागुक्तशङ्कानिवर्तकत्वेन व्यनक्ति ।। **परतन्त्रेति** ।।

'ಉಪಲಬ್ಧಿವದನಿಯಮಃ' ಇತ್ಯಾದಿ ಸೂತ್ರಭಾಷ್ಯದ ಟೀಕಾತಾತ್ಪರ್ಯವನ್ನು ಶಂಕಾಪೂರ್ವಕವಾಗಿ 'ನ ಚ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ವಿಹಿತಪ್ರತಿಷೇಧಗಳಿಗೆ ವೈಯರ್ಥ್ಯ ಬರಬಾರದು ಎಂದರೆ ಜೀವನಿಗೆ ಕರ್ತೃತ್ವವನ್ನು ಒಪ್ಪಲೇಬೇಕು ಎಂಬುದಾಗಿ 'ಕೃತಪ್ರಯತ್ನಾಪೇಕ್ಷಸ್ತು ವಿಹಿತಪ್ರತಿಷೇಧಾ-ವೈಯರ್ಥ್ಯಾದಿಭ್ಯಃ' ಎಂಬ ಸೂತ್ರಭಾಷ್ಯಾದಿಗಳಲ್ಲಿ ಸಮರ್ಥನೆ ಮಾಡಲಾಗಿದೆ. ಅದರ ತಾತ್ಪರ್ಯವನ್ನು ಹಿಂದೆ ಮಾಡಿದ ಶಂಕಾ ಪರಿಹಾರಕವಾಗಿ 'ಪರತಂತ್ರ' ಇತ್ಯಾದಿಯಾಗಿ ಸ್ಪಷ್ಟಪಡಿಸುತ್ತಿದ್ದಾರೆ.

**प्रकाशः** – प्रसक्तपक्षान् प्रतिक्षिपति – **न तावदित्यादिना** ।। **विध्यादिविषयस्येति** ।। ज्योतिष्टोमादियागादेरित्यर्थः ।। **उक्तं हीति** ।। गीताभाष्ये ।। **कृतिविघातादिति** ।। जीवस्य विध्याद्यविषयत्वमित्यन्वयः ।।

ಪ್ರಸಕ್ತವಾದ ಎಲ್ಲಾ ಆಕ್ಷೇಪಗಳನ್ನು 'ನ ತಾವತ್' ಎಂಬುದರಿಂದ ಪ್ರತಿಕ್ಷೇಪ ಮಾಡುತ್ತಿದ್ದಾರೆ. ಜ್ಯೋತಿಷ್ಟೋಮ ಯಾಗವು ಕೃತಿಸಾಧ್ಯವಲ್ಲ, ಫಲಾಂಡು ಭಕ್ಷಣವು ಪ್ರಯತ್ನಸಾಧ್ಯವಲ್ಲ ಎಂದು ಹೇಳಲು ಸಾಧ್ಯವಿಲ್ಲ. ಜ್ಯೋತಿಷ್ಟೋಮ ಯಾಗ ಹಾಗೂ ಪಲಾಂಡುಭಕ್ಷಣದ ನಿಷೇಧ ನಮ್ಮ ಕೃತಿಸಾಧ್ಯವಾಗಿದೆ ಎಂಬುದನ್ನು 'ವಿಧ್ಯಾದಿವಿಷಯಸ್ಯ' ಇತ್ಯಾದಿ ಗ್ರಂಥದಿಂದ ಹೇಳಿದ್ದಾರೆ. 'ಉಕ್ತಂ ಹಿ' ಎಂದರೆ ಗೀತಾಭಾಷ್ಯದಲ್ಲಿ ಎಂದರ್ಥ. 'ಕೃತಿವಿಘಾತಾತ್' ಎಂದರೆ 'ಜೀವಸ್ಯ ವಿಧ್ಯಾದ್ಯವಿಷಯತ್ವಂ' ಎಂದು ಇಲ್ಲಿ ಅನ್ವಯವನ್ನು ತಿಳಿಯಬೇಕು.

**प्रकाशः** – **इति पक्ष इति** ।। तार्किकपक्षे रामानुजपक्षेऽपीत्यर्थः ।। **अदृष्टाभावपक्षेऽपीति** ।। चार्वाकपक्षेऽपीत्यर्थः । गीताभाष्ये अष्टादशेऽध्याये ।।

'ಇತಿ ಪಕ್ಷೇ' ಎಂದರೆ ತಾರ್ಕಿಕರ ಪಕ್ಷದಲ್ಲಿ ಹಾಗೂ ರಾಮಾನುಜರ ಪಕ್ಷದಲ್ಲೂ ಕೂಡ ಎಂದರ್ಥ. 'ಅದೃಷ್ಟಾಭಾವಪಕ್ಷೇಪಿ' ಎಂದರೆ ಚಾರ್ವಾಕರ ಪಕ್ಷದಲ್ಲಿ ಎಂದರ್ಥ. ಗೀತಾಭಾಷ್ಯದಲ್ಲಿ ಎಂದರೆ ಹದಿನೆಂಟನೇ ಅಧ್ಯಾಯದ ಗೀತಾಭಾಷ್ಯದಲ್ಲಿ ಎಂದರ್ಥ.

**प्रकाशः** – **अकर्तृत्वेऽपीति** ।। अपराधीनकर्तृत्वाभावेऽपि जीवस्य न तं प्रति प्रवृत्तिविधिवैयर्थ्यं कुत इति हेतोरित्यन्वयः । विधिशब्देन तज्ज्ञानमुपलक्ष्यते । इच्छेत्यनेन प्रयत्नोऽपि । उक्तकारणैः अधिष्ठानादिभिः । उपयुक्तमात्रस्यान्वय-मुखेनेदमुदाहरणम् । नतु समग्रस्येति न विसंवादश्शङ्क्यः ।।

'ಅಕರ್ತೃತ್ವೇಪಿ' ಎಂಬುದರ ಅಭಿಪ್ರಾಯ ಹೀಗಿದೆ– ಅಪರಾಧೀನವಾದ ಕರ್ತೃತ್ವ ಇಲ್ಲದಿದ್ದರೂ ಕೂಡ ಜೀವನಿಗೆ ಪ್ರವೃತ್ತಿವಿಧಿವೈಯರ್ಥ್ಯವನ್ನು ಏಕೆ ಹೇಳಬೇಕು ಎಂಬ ಹೇತುವಿನಿಂದ ಎಂದು ಇಲ್ಲಿ ತಿಳಿಯಬೇಕು. ವಿಧಿಶಬ್ದದಿಂದ ಅದರ ಜ್ಞಾನವನ್ನು ಉಪಲಕ್ಷಣಯಾ ವಿವಕ್ಷಿಸಬೇಕು. ಇಚ್ಛಾ ಶಬ್ದದಿಂದ ಪ್ರಯತ್ನವನ್ನೂ ಕೂಡ ಉಪಲಕ್ಷಣಯಾ ವಿವಕ್ಷಿಸಬೇಕು. 'ಉಕ್ತಕಾರಣೈಃ' ಎಂದರೆ ಅಧಿಷ್ಠಾನಾದಿ ಕಾರಣಗಳಿಂದ ಎಂದರ್ಥ. ಗೀತಾಭಾಷ್ಯದಲ್ಲಿ ಇನ್ನೂ ಅನೇಕ ವಾಕ್ಯಗಳಿವೆ ಅದನ್ನು ಯಥಾವತ್ತಾಗಿ ಇಲ್ಲಿ ಗ್ರಂಥಕಾರರು ಏಕೆ ಉಲ್ಲೇಖ ಮಾಡಿಲ್ಲ ಎಂದರೆ ಉಪಯುಕ್ತವಾದ ಅಂಶವನ್ನಷ್ಟೆ ಇಲ್ಲಿ ಉಲ್ಲೇಖ ಮಾಡಿದ್ದಾರೆ ಎಂದು ತಿಳಿಯಬೇಕು. ಸಮಗ್ರ ವಾಕ್ಯವನ್ನು ನೀಡಿಲ್ಲವಾದ್ದರಿಂದ ವಿಸಂವಾದವನ್ನು ಆಶಂಕೆ ಮಾಡಬಾರದು.

**प्रकाशः – भारतेति** ।। हठवादे । ''उक्तोऽपि दोषपरिहारः स्मारयितुं पुनरत्रोक्त'' इति टीकावाक्यं व्यनक्ति ।। **पुण्यपापेति** ।। एतेन स्मारणं व्यर्थमिति प्रत्युक्तम् । विष्णोरेव स्वातन्त्र्ये वैषम्याद्यापत्तेः प्रागुक्तस्मारणेन विनाऽपरिहारादिति।। **उक्तं हीति** ।। हठवाद एव भगवत्पादैरित्यर्थः ।।

ಭಾರತೇ ಎಂದರೆ ಹಠವಾದದಲ್ಲಿ ಎಂದರ್ಥ. 'ಉಕ್ತೋऽಪಿ ದೋಷಪರಿಹಾರಃ ಸ್ಮಾರಯಿತುಂ ಪುನರತ್ರೋಕ್ತಃ' ಎಂಬ ಟೀಕಾವಾಕ್ಯವನ್ನು ಪುಣ್ಯಪಾಪ ಎಂಬುದರಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಹೀಗೆ ಹೇಳಿದ್ದರಿಂದ ವೈಷಮ್ಯನೈರ್ಘೃಣ್ಯದೋಷವನ್ನು ಈ ಹಿಂದೆಯೇ ಪರಿಹರಿಸಿದ್ದಾಗಿದೆ. ಪುನಃ ಇಲ್ಲೇಕೆ ಹೇಳುತ್ತಿದ್ದಾರೆ? ಎಂದರೆ ಕೇವಲ ಅದನ್ನು ಸ್ಮರಣೆಗೆ ತಂದುಕೊಡುತ್ತಿದ್ದಾರೆ ಎಂದಷ್ಟೇ ಅಭಿಪ್ರಾಯ. ಆದ್ದರಿಂದ ಸ್ಮಾರಣವು ವ್ಯರ್ಥವಲ್ಲ ಎಂದು ತಿಳಿಯಬೇಕು. ಹೀಗೆ ಹೇಳಿದ್ದರಿಂದ ಸ್ಮಾರಣವು ವ್ಯರ್ಥವಲ್ಲವೇ ಎಂಬುದನ್ನು ಪರಿಹರಿಸಿದಂತಾಯಿತು. ವಿಷ್ಣು ಒಬ್ಬನೇ ಸ್ವತಂತ್ರ ಎಂದು ಹೇಳಿದರೆ ಪುನಃ ವೈಷಮ್ಯಾದಿ ದೋಷವು ಬಂದೇ ಬರುತ್ತದೆ. ಈ ದೋಷವನ್ನು ಹಿಂದೆ ಹೇಳಿದ್ದ ಸ್ಮರಣೆ ಮಾಡದೇ ಪರಿಹಾರವಾಗುವುದಿಲ್ಲ. ಆದ್ದರಿಂದ ವೈಷಮ್ಯನೈರ್ಘೃಣ್ಯ ದೋಷವನ್ನು ಪರಿಹಾರ ಮಾಡಲೇಬೇಕು. 'ಉಕ್ತಂ ಹಿ' ಎಂದರೆ ಶ್ರೀಮದಾಚಾರ್ಯರು ಹಠವಾದದಲ್ಲಿಯೇ ಇದನ್ನು ಹೇಳಿದ್ದಾರೆ ಎಂದರ್ಥ.

**प्रकाशः – अन्ये त्विति** ।। मतान्तरे तु ''यथा चतक्ष'' इत्यन्तं सूत्राष्टकमेकमधिकरणम् । ''परात्तु'' इति योगद्वयमधिकरणान्तरम् । तत्प्रमेयनिरासोऽग्रे व्यक्तः ।। **सूत्रसप्तकमिति** ।। सूत्राणामर्थोऽग्रे व्यक्तः ।।

ಅದ್ವೈತಿಗಳು ಮೂರು ಅಧಿಕರಣ ಮಾಡಿದ್ದನ್ನು ರಾಮಾನುಜರು ಒಂದೇ ಅಧಿಕರಣವೆಂದು ಪರಿಗಣಿಸಿದ್ದಾರೆ. 'ಯಥಾ ಚ ತಕ್ಷೋಭಯಥಾ' ಎಂಬಲ್ಲಿಯ ತನಕ ಎಂಟು ಸೂತ್ರಗಳು ಒಂದೇ ಅಧಿಕರಣದಲ್ಲಿ ಸೇರಿವೆ. 'ಪರಾತ್ತುತಚ್ಛ್ರುತೇಃ' ಹಾಗೂ 'ಕೃತಪ್ರಯತ್ನಾಪೇಕ್ಷಸ್ತು' ಇತ್ಯಾದಿ ಎರಡು ಸೂತ್ರಗಳು ಬೇರೆ ಅಧಿಕರಣವೆಂದು ಪರಿಗಣಿಸಿದ್ದಾರೆ. ಇವರ ಅಧಿಕರಣ ಪ್ರಮೇಯವನ್ನು ಮುಂದೆ ಗ್ರಂಥಕಾರರೇ 'ಕೇಚಿತ್' ಎಂಬುದರಿಂದ ನಿರಾಕರಣೆ ಮಾಡುವವರಿದ್ದಾರೆ. ಸೂತ್ರಗಳ ಅರ್ಥವು ಮುಂದೆ ಸ್ಪಷ್ಟವಾಗುತ್ತದೆ.

**प्रकाशः – जीवकर्तृत्वाकर्तृत्वश्रुत्योरिति** ।। ''असङ्गो ह्ययमित्यादिश्रुतीनां विध्यादिश्रुतीनां चात्मकर्तृत्ववादिनीनां च विरोधः परिह्रियत'' इति कल्पतरूक्तया कर्तृत्वाकर्तृत्वश्रुत्योर्विरोधनिरासोऽत्र क्रियते ।

ಕರ್ತೃತ್ವಾಧಿಕರಣ (೨-೩-೧೭)

ಕಲ್ಪತರುವಿನಲ್ಲಿ ಹೀಗೆ ಹೇಳಲಾಗಿದೆ. 'ಅಸಂಗೋ ಹ್ಯಯಂ ಪುರುಷಃ' ಇತ್ಯಾದಿ ಶ್ರುತಿಗಳ ವಿರೋಧವನ್ನು 'ಅಹರಹಃ ಸಂಧ್ಯಾಮುಪಾಸೀತ' ಇತ್ಯಾದಿ ವಿಧಿಬೋಧಕ ಶ್ರುತಿಗಳು ಜೀವಕರ್ತೃತ್ವವನ್ನು ಸಮರ್ಥನೆ ಮಾಡುತ್ತಿವೆ. 'ಅಸಂಗೋ ಹ್ಯಯಂ ಪುರುಷಃ' ಇತ್ಯಾದಿ ಶ್ರುತಿಗಳು ಜೀವನಿಗೆ ಕರ್ತೃತ್ವವಿಲ್ಲವೆಂದು ಹೇಳುತ್ತಿವೆ. ಇವೆರಡರ ವಿರೋಧ ಪರಿಹಾರವನ್ನು ಈ ಅಧಿಕರಣದಲ್ಲಿ ಮಾಡಲಾಗಿದೆ ಎಂದು ಹೇಳಿದ್ದರಿಂದ ಕರ್ತೃತ್ವ ಅಕರ್ತೃತ್ವ ಶ್ರುತಿಗಳ ವಿರೋಧವನ್ನು ಇಲ್ಲಿ ಮಾಡಿದಂತಾಗುತ್ತದೆಂದು ತಿಳಿಯುತ್ತದೆ.

**प्रकाशः** – स च ''तद्गुणसारत्वात्'' इत्यत्र बुद्धिगुणप्रधानकत्वादात्मा बुद्धिगुणेनाणुत्वेन ''एषोऽणुरात्मा चेतसा वेदितव्य'' इति श्रुतौ व्यपदिश्यत इत्युक्तन्यायेनात्राप्यात्मनस्स्वतोऽकर्तुर्बुद्धिगुणेन कर्तृत्वेन ''यजेत'' इत्यादौ तस्य कर्तृत्वव्यपदेशः सेत्स्यतीतीयं चिन्ता नारम्भणीयैव । यथा भोक्तृत्वाभोक्तृत्व-श्रुत्योर्विरोधस्तेनैव निरस्त इति नाधिकरणान्तरारम्भस्तद्वत् । अन्यथा तदर्थमधिकरणान्तरारम्भस्स्यादित्यर्थः।

ಇದು ತಪ್ಪು. ಏಕೆಂದರೆ 'ತದ್ಗುಣಸಾರತ್ವಾತ್' ಎಂಬ ಸೂತ್ರದಲ್ಲಿ ಅಣುತ್ವವು ಬುದ್ಧಿಯ ಗುಣವಾಗಿದೆ. ಇದನ್ನು ಆತ್ಮನಲ್ಲಿ 'ಏಷೋಽಣುರಾತ್ಮಾ ಚೇತಸಾ ವೇದಿತವ್ಯಃ' ಎಂದು ಹೇಳಲಾಗಿದೆ. ವಾಸ್ತವಿಕವಾಗಿ ಆತ್ಮನಲ್ಲಿ ಅಣುತ್ವವು ಇರುವುದಿಲ್ಲ, ಬುದ್ಧಿಗುಣವನ್ನೇ ಆತ್ಮನಲ್ಲಿ ಹೇಳಲಾಗಿದೆ ಎಂಬ ನ್ಯಾಯವನ್ನು 'ತದ್ಗುಣಸಾರತ್ವಾತ್' ಎಂಬ ಸೂತ್ರದಲ್ಲಿ ಹೇಳಲಾಗಿದೆ. ಈ ನ್ಯಾಯದಿಂದ ಭೋಕ್ತೃತ್ವ-ಅಭೋಕ್ತೃತ್ವ ಶ್ರುತಿಗಳ ವಿರೋಧವು ಪರಿಹಾರವಾಯಿತು. ಹಾಗಾದರೆ ಇದೇ ನ್ಯಾಯದಿಂದಲೇ ಕರ್ತೃತ್ವ-ಅಕರ್ತೃತ್ವ ಶ್ರುತಿಗಳ ವಿರೋಧವೂ ಕೂಡ ಪರಿಹಾರವಾಗುವುದರಿಂದ ಪುನಃ ಮತ್ತೊಂದು ಅಧಿಕರಣವು ಹೊರಡುವುದು ವ್ಯರ್ಥವಾಗುತ್ತದೆ.

**प्रकाशः** – नन्वेतदेवाशङ्क्योक्तं भाष्यभामत्योः ''तस्यैवैष प्रपञ्च'' इतीति चेन्न । प्रपञ्चनस्यापि व्यर्थत्वात् । ननु प्रकृतिरेव कर्त्रीति सांख्यपक्षनिरासार्थोऽयमारम्भ इति चेन्न । प्रकृतिगतस्य वाऽन्तःकरणगतस्य वा कर्तृत्वस्यात्मन्यारोप इत्यस्य मतद्वयेऽपि संमतत्वेन तन्निरासस्यापि व्यर्थत्वात् । सूत्रे विशेषस्याप्रतीतेश्चेति भावः ।

ಇದನ್ನೇ ಆಶಂಕೆ ಮಾಡಿಕೊಂಡು ಭಾಷ್ಯ ಹಾಗೂ ಭಾಮತಿಗಳಲ್ಲಿ 'ತಸ್ಯೈವ ಏಷ ಪ್ರಪಂಚಃ' ಎಂದು ಉತ್ತರಿಸಲಾಗಿದೆ. ಹಿಂದಿನ ಅಧಿಕರಣದ ಪ್ರಮೇಯದ ವಿವರಣೆಗಾಗಿಯೇ ಈ ಅಧಿಕರಣ ಹೊರಟಿರುವುದು ವ್ಯರ್ಥವಲ್ಲ ಎಂದು. ಇದೂ ಕೂಡ ತಪ್ಪು. ಕೇವಲ ವಿವರಣೆಗೋಸ್ಕರ ಅಧಿಕಾರಣಾಂತರ ಹೊರಡುವುದು ವ್ಯರ್ಥವಾಗುತ್ತದೆ.

ಸಾಂಖ್ಯರು 'ಪ್ರಕೃತಿಃ ಕರ್ತ್ರೀ' ಎಂದು ಹೇಳುತ್ತಾರೆ. ಅವರನ್ನು ನಿರಾಕರಣೆ ಮಾಡುವುದಕ್ಕಾಗಿ ಈ ಅಧಿಕರಣ ಹೊರಟಿದೆ ಎಂದು ಹೇಳುತ್ತೇವೆ.

ಈ ಆಕ್ಷೇಪವೂ ಕೂಡ ತಪ್ಪು. ಏಕೆಂದರೆ ಪ್ರಕೃತಿಯಲ್ಲಿರುವ ಅಥವಾ ಅಂತಃಕರಣದಲ್ಲಿರುವ ಕರ್ತೃತ್ವವು ಆತ್ಮನಲ್ಲಿ ಆರೋಪಿತವಾಗಿದೆ ಎಂಬುದು ಇಬ್ಬರ ಮತದಲ್ಲೂ ಕೂಡ ಸಮಾನವಾಗಿದೆ. ಆದ್ದರಿಂದ ಅವರನ್ನು

ನಿರಾಕರಣೆ ಮಾಡುವುದರಿಂದ ನಿಮಗೇನೂ ಲಾಭವಿಲ್ಲ. ಪ್ರಕೃತಿಯಲ್ಲಿರುವ ಕರ್ತೃತ್ವವು ಆರೋಪಿತವೆಂದರೇನು? ಅಂತಃಕರಣದಲ್ಲಿರುವ ಕರ್ತೃತ್ವವು ಆರೋಪಿತವೆಂದರೇನು? ಎರಡೂ ಕೂಡ ಆರೋಪಿತವೇ ಆಗಿರುವುದರಿಂದ ವ್ಯರ್ಥವೇ ಆಗಿದೆ. ಮತ್ತು ಸೂತ್ರದಲ್ಲಿ ಸಾಂಖ್ಯಮತದ ನಿರಾಕರಣೆಗೋಸ್ಕರ ಈ ಅಧಿಕರಣ ಹೊರಟಿದೆ ಎನ್ನಲು ವಿಶೇಷ ಆಧಾರವೂ ಕಾಣಸುತ್ತಿಲ್ಲ.

**प्रकाशः – दोषान्तरं चाह – सांख्येति ।। ''स्मृत्यनवकाशदोषप्रसङ्ग'' इत्यत्रेति भावः ।। इहेति ।। श्रुतिविगाननिरासस्यैवेह सङ्गतत्वेन तत्र चात्मनः कर्तृत्वाकर्तृत्वयोरेव श्रवणेन त्वदभिमतनिरसनीयस्याप्रतीतेरिति भावः ।**

ಸಾಂಖ್ಯಮತ ನಿರಾಕರಣೆಗಾಗಿ ಈ ಅಧಿಕರಣ ಹೊರಡುವುದಾದಲ್ಲಿ ಇದನ್ನು ಎರಡನೇ ಪಾದದಲ್ಲಿ ಸೇರಿಸಬೇಕಿತ್ತು ಎಂಬುದನ್ನು 'ಸಾಂಖ್ಯ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ. 'ಸ್ಮೃತ್ಯನವಕಾಶ-ದೋಷಪ್ರಸಂಗಃ' ಎಂಬಲ್ಲಿಯೇ ಇದನ್ನು ಹೇಳಬಹುದಿತ್ತು ಎಂದಭಿಪ್ರಾಯ. 'ಇಹ' ಇತ್ಯಾದಿ ಗ್ರಂಥದ ಅಭಿಪ್ರಾಯ ಹೀಗಿದೆ – ಈ ಪಾದವು ಶ್ರುತಿವಿರೋಧವನ್ನು ಪರಿಹರಿಸಲು ಹೊರಟಿದೆ. ಶ್ರುತಿಯಲ್ಲಿ ಕರ್ತೃತ್ವ ಕೆಲವೆಡೆ ಕಾಣಸುತ್ತಿದೆ, ಇನ್ನು ಕೆಲವೆಡೆ ಅಕರ್ತೃತ್ವವು ಕಾಣಸುತ್ತಿದೆ. ಈ ವಿರೋಧವನ್ನು ನಿರಾಕರಣೆ ಮಾಡುವುದೇ ಸಂಗತವಾಗುತ್ತದೆ. ಇದನ್ನು ಬಿಟ್ಟು ನೀನು ನಿರಾಕರಣೆ ಮಾಡಲು ಹೊರಟಿರುವ ಸಾಂಖ್ಯಮತವು ಇಲ್ಲಿ ಪ್ರಸಕ್ತವೇ ಆಗಿರುವುದಿಲ್ಲ.

## तात्पर्यचन्द्रिका

**यच्चोक्तमुभाभ्यां कर्ता । ''विज्ञानात्मा पुरुषः'' इत्यादेः कर्तृत्वप्रतिपादकस्य ''यजेत'' इत्यादिविधिनिषेधरूपस्य च शास्त्रस्यार्थवत्त्वात् ।**

ಅದ್ವೈತಿಗಳು ಹಾಗೂ ವಿಶಿಷ್ಟಾದ್ವೈತಿಗಳು ಅಧಿಕರಣರಚನೆಯನ್ನು ಹೀಗೆ ಮಾಡಿದ್ದಾರೆ - 'ಕರ್ತಾ ಶಾಸ್ತ್ರಾರ್ಥವತ್ತ್ವಾತ್' ಎಂಬ ಸೂತ್ರ ವ್ಯಾಖ್ಯಾನ ಹೀಗಿದೆ - ಕರ್ತಾ = ವಿಜ್ಞಾನಾತ್ಮಾ ಪುರುಷಃ ಎಂಬ ಶ್ರುತಿಯು ಸ್ಪಷ್ಟವಾಗಿ ಕರ್ತೃತ್ವವು ಜೀವನಿಗೆ ಇದೆ ಎಂದು ಹೇಳುತ್ತಿದೆ. 'ಯಜೇತ ಸ್ವರ್ಗಕಾಮಃ' ಇವೇ ಮೊದಲಾದ ವಿಧಿನಿಷೇಧರೂಪವಾದ ಶಾಸ್ತ್ರಗಳು ಜೀವನಿಗೆ ಕರ್ತೃತ್ವವನ್ನು ಒಪ್ಪಿದರೆ ಮಾತ್ರ ಸಾರ್ಥಕಗಳಾಗುತ್ತವೆ. ಆದ್ದರಿಂದ ಜೀವನಿಗೆ ಕರ್ತೃತ್ವವನ್ನು ಒಪ್ಪಬೇಕು.

**''स्वे शरीरे यथाकामं परिवर्तते'' इति विहारोपदेशात् । ''प्राणान् गृहीत्वा'' इत्युपादानात् । ''विज्ञानं यज्ञं तनुत'' इति क्रियायां कर्तृत्वेन व्यपदेशाच्च जीवः कर्ता ।**

'ವಿಹಾರೋಪದೇಶಾತ್' ಎಂಬುದು ಎರಡನೆಯ ಸೂತ್ರ. ತನ್ನ ಶರೀರದಲ್ಲಿ ಜೀವನು ಯಥೇಚ್ಛವಾಗಿ ವಿಹಾರ ಮಾಡುತ್ತಾನೆ ಎಂಬುದು ಇದರ ಅರ್ಥ. 'ಪ್ರಾಣಾನ್ ಗೃಹೀತ್ವಾ' ಇಂದ್ರಿಯಗಳನ್ನು ಸ್ವೀಕರಿಸಿ, ಸಂಚಾರ ಮಾಡಬೇಕೆಂದರೆ ಅವನಲ್ಲಿ ಕರ್ತೃತ್ವವನ್ನು ಒಪ್ಪಲೇ ಬೇಕು. ಮತ್ತು 'ವಿಜ್ಞಾನಂ ಯಜ್ಞಂ ತನುತೇ' ಎಂಬಲ್ಲಿ ಕ್ರಿಯೆಯಲ್ಲಿ ಕರ್ತೃತ್ವದ ವ್ಯಪದೇಶವಿರುವುದರಿಂದಲೂ ಜೀವನು ಕರ್ತೃವಾಗುತ್ತಾನೆ.

**अत्र च विज्ञानशब्दस्य बुद्धिपरत्वे ''तदेतेषां प्राणानां विज्ञानेन'' इति श्रुत्यन्तर इव कर्तृत्वविपरीतकरणत्वेन निर्देशः स्यादिति ''कर्ता'' इत्यादिसूत्रचतुष्टयार्थ इति ।**

ಯಜ್ಞಕರಣರೂಪವಾದ ಕ್ರಿಯೆಯಲ್ಲಿ ಜೀವನಿಗೆ ಕರ್ತೃತ್ವದ ವ್ಯಪದೇಶವಿರುವುದರಿಂದ ಜೀವನೇ ಕರ್ತೃವಾಗಿದ್ದಾನೆ ಎಂದು ಹೇಳಲಾಯಿತು. ಇಲ್ಲಿ ವಿಜ್ಞಾನಶಬ್ದಕ್ಕೆ ಜೀವ ಎಂಬರ್ಥವನ್ನೇ ಹೇಗೆ ಮಾಡುತ್ತೀರಿ? ವಿಜ್ಞಾನಶಬ್ದಕ್ಕೆ ಬುದ್ಧಿ ಎಂಬರ್ಥವನ್ನು ಹೇಳಬೇಕಲ್ಲವೇ? ಎಂಬ ಪ್ರಶ್ನೆಗೆ 'ನ ಚೇತ್ ನಿರ್ದೇಶವಿಪರ್ಯಯಃ' ಎಂಬ ಸೂತ್ರದ ಭಾಗವು ಉತ್ತರಿಸುತ್ತಿದೆ. ಒಂದುವೇಳೆ ವಿಜ್ಞಾನ ಶಬ್ದಕ್ಕೆ ಬುದ್ಧಿ ಎಂಬರ್ಥವನ್ನು ಮಾಡುವುದಾದಲ್ಲಿ 'ವಿಜ್ಞಾನೇನ ಯಜ್ಞಂ ತನುತ' ಎಂದಿರಬೇಕಾಗಿತ್ತು. 'ವಿಜ್ಞಾನಂ' ಎಂಬ ಪ್ರಯೋಗವು ಅಸಾಧುವಾಗುತ್ತಿತ್ತು. ಏಕೆಂದರೆ ಯಜ್ಞಾಧಿಕರಣದಲ್ಲಿ ಬುದ್ಧಿಯು ಕರಣವೇ ಹೊರತು ಕರ್ತೃವಲ್ಲ. 'ತದೇತೇಷಾಂ ಪ್ರಾಣಾನಾಂ ವಿಜ್ಞಾನೇನ' ಎಂಬ ಶ್ರುತಿಯಲ್ಲಿ ಬುದ್ಧಿಯನ್ನು ಕರಣತ್ವೇನ ಹೇಳಲಾಗಿದೆ. ಕರ್ತೃತ್ವನಿರ್ದೇಶಕ್ಕೆ ವಿಪರೀತವಾಗಿ ಕರಣತ್ವ ನಿರ್ದೇಶನವು ಇರಬೇಕಾಗಿತ್ತು. ಕರ್ತೃತ್ವೇನ ನಿರ್ದೇಶವಿರುವುದರಿಂದಲೇ ವಿಜ್ಞಾನಶಬ್ದವು ಜೀವಪರವೆಂದು ತಿಳಿಯುತ್ತದೆ. ಹೀಗೆ 'ಕರ್ತಾ 'ಇತ್ಯಾದಿ ನಾಕುಸೂತ್ರಗಳ ವ್ಯಾಖ್ಯಾನವನ್ನು ಮಾಡಿದ್ದಾರೆ.

**तन्न । आद्यसूत्रस्थशास्त्रशब्देनैव ''यत्कर्म कुरुते तदभिसम्पद्यते । साधुकारी साधुर्भवति'' इत्यादेरिव ''यथाकामम्'' इत्यादेरपि कर्तृत्वप्रतिपादकशास्त्रस्य ग्रहणसम्भवेन द्वितीयादिसूत्रत्रयवैयर्थ्यात् ।**

ಇದು ತಪ್ಪು. 'ಕರ್ತಾ ಶಾಸ್ತ್ರಾರ್ಥವತ್ತ್ವಾತ್' ಎಂಬ ಒಂದೇ ಸೂತ್ರವು ಸಾಕು. ಉಳಿದ ಮೂರು ಸೂತ್ರಗಳು ವ್ಯರ್ಥವಾಗುತ್ತವೆ. ಪ್ರಥಮಸೂತ್ರದಲ್ಲಿರುವ ಶಾಸ್ತ್ರಶಬ್ದದಿಂದಲೇ ಜೀವನಿಗೆ ಕರ್ತೃತ್ವವನ್ನು ತಿಳಿಸುವ ಎಲ್ಲಾ ಪ್ರಮಾಣಗಳನ್ನು ವಿವಕ್ಷಿಸಲು ಬರುವಾಗ ಮುಂದಿನ ಮೂರು ಸೂತ್ರಗಳನ್ನು ವಿವಕ್ಷಿಸುವುದೇ ಅನಾವಶ್ಯಕ. ಏಕೆಂದರೆ 'ಯಥಾಕಾಮಮ್ ಪರಿವರ್ತತೇ' ಎಂಬುದಾಗಿ ಜೀವನಿಗೆ ಸಂಚಲನವನ್ನು ಹೇಳುವ ಶಾಸ್ತ್ರವಿದೆ. ಇಂದ್ರಿಯೋಪಾದಾನವನ್ನು ಹೇಳುವ ಶಾಸ್ತ್ರವಿದೆ. 'ವಿಜ್ಞಾನಂ ಯಜ್ಞಂ ತನುತೇ' ಎಂಬುದೊಂದು ಶಾಸ್ತ್ರಶಬ್ದದಿಂದಲೇ ವಿವಕ್ಷಿಸಬಹುದು. ಹೀಗೆ ಒಂದೊಂದು ಶ್ರುತಿಗಳನ್ನು ಸಂಗ್ರಹಿಸಲು ಒಂದೊಂದು ಸೂತ್ರಗಳನ್ನು ಉಲ್ಲೇಖ ಮಾಡುವುದು ವ್ಯರ್ಥ. ಯಾವರೀತಿಯಾಗಿ ಪ್ರಥಮಸೂತ್ರದಲ್ಲಿರುವ ಶಾಸ್ತ್ರಶಬ್ದದಿಂದ 'ಯತ್ಕರ್ಮ ಕುರುತೇ ತದಭಿಸಂಪದ್ಯತೇ। ಸಾಧುಕಾರೀ ಸಾಧುರ್ಭವತಿ' ಇತ್ಯಾದಿ ಶ್ರುತಿಗಳನ್ನು ಸಂಗ್ರಹಿಸುತ್ತೀರೋ, ಅದೇ ರೀತಿಯಾಗಿ ಮುಂದಿನ ಸೂತ್ರಗಳಲ್ಲಿರುವ ಶಾಸ್ತ್ರಗಳನ್ನೂ ಕೂಡ ವಿವಕ್ಷಿಸಲು ಬರುತ್ತದೆ.

**बुद्धेः कर्तृत्ववादिनं प्रति श्रुत्यन्तरे करणत्वोक्तिविरोधस्यैव वक्तव्यत्वेन''विज्ञानम्'' इति श्रुतौ बुद्ध्युक्तौ कर्तृत्वविपरीतकरणत्वोक्तिः स्यादित्यापादनस्यासङ्गतेश्च।**

ಯಾವ ವಾದಿಯು ಬುದ್ಧಿಗೆ ಕರ್ತೃತ್ವವನ್ನು ಹೇಳುತ್ತಾನೋ, ಅಂಥವನನ್ನು ಕುರಿತು ಬುದ್ಧಿಯು ಕರ್ತೃವಲ್ಲ. ಕರಣವೆಂದು ಶ್ರುತಿಯು ಹೇಳುತ್ತಿದೆ. ಆದ್ದರಿಂದ ಶ್ರುತಿವಿರೋಧವು ಬರುತ್ತದೆ ಎಂದು ನೀವು ವ್ಯಾಖ್ಯಾನ ಮಾಡಿದ್ದರೆ ಸಾಧುವಾಗುತ್ತಿತ್ತು. ಇದನ್ನು ಬಿಟ್ಟು, ಮೊದಲೇ ಬುದ್ಧಿಗೆ ಕರ್ತೃತ್ವವನ್ನು

ಹೇಳುವ ಸಾಂಖ್ಯನನ್ನು ಕುರಿತು ಒಂದುವೇಳೆ ವಿಜ್ಞಾನ ಶಬ್ದದಿಂದ ಕರಣತ್ವವನ್ನು ಹೇಳಬೇಕಾಗಿತ್ತು ಎಂದು ಆಪಾದನೆ ಮಾಡಿದರೆ, ಇದು ಹಾಸ್ಯಾಸ್ಪದವಾಗುತ್ತದೆ. ಏಕೆಂದರೆ ಅವನು ಬುದ್ಧಿಗೆ ಕರ್ತೃತ್ವವನ್ನು ಅವನು ಒಪ್ಪುತ್ತಿದ್ದಾನೆ. ಅಂಥವನನ್ನು ಕುರಿತು ಕರಣತ್ವವು ಬರಬೇಕಾದೀತು ಎಂದು ಆಪಾದನೆ ಮಾಡುವುದು ತಪ್ಪಾಗುತ್ತದೆ. ಆದ್ದರಿಂದ ಯಾರು ಬುದ್ಧಿಗೆ ಕರ್ತೃತ್ವವನ್ನು ಹೇಳುತ್ತಾನೋ, ಅವನಿಗೆ ಶ್ರುತ್ಯಂತರದಲ್ಲಿ ಕರಣತ್ವೋಕ್ತಿವಿರೋಧವನ್ನೇ ಹೇಳಬೇಕು. ವಿಜ್ಞಾನವೆಂಬ ಶ್ರುತಿಯಲ್ಲಿ ಕರ್ತೃತ್ವ-ವಿಪರೀತವಾದ ಕರಣತ್ವೋಕ್ತಿಯು ಬರಬೇಕಾದೀತೆಂದು ಆಪಾದನೆ ಮಾಡುವುದು ಅಸಂಗತವಾಗುತ್ತದೆ.

**यच्चोक्तं परैः जीवः कर्ता चेन्नियमेन सुखी स्यादित्यादिशङ्कानिरासार्थं ''उपलब्धिवत्'' इति सूत्रमिति,**

ಅದ್ವೈತಿಗಳು 'ಉಪಲಬ್ಧಿವದನಿಯಮಃ' ಎಂಬ ಸೂತ್ರಕ್ಕೆ ಹೀಗೆ ವ್ಯಾಖ್ಯಾನ ಮಾಡಿದ್ದಾರೆ - ಜೀವನು ಕರ್ತೃವಾದರೆ ನಿಯಮೇನ ಸುಖವುಳ್ಳವನಾಗಬೇಕಾಗುತ್ತದೆ. ಈ ಶಂಕೆಯನ್ನು ನಿರಾಕರಣೆ ಮಾಡುವುದಕ್ಕಾಗಿ 'ಉಪಲಬ್ಧಿವದನಿಯಮಃ' ಎಂಬ ಸೂತ್ರವು ಹೊರಟಿದೆ. ಅನಿಯಮೇನ = ನಿಯಮೇನ ಸುಖವೇ ಬರುತ್ತದೆ ಎಂದು ಹೇಳಲಾಗದು. ಜ್ಞಾನದಲ್ಲಿ ಹೇಗೆ ನಿಯಮವಿಲ್ಲವೋ, ಅದರಂತೆ ಸುಖದಲ್ಲೂ ಕೂಡ ನಿಯಮವಿಲ್ಲ. ದುಃಖವೂ ಕೂಡ ಬರುತ್ತದೆ.

**तन्न । क्रियावेशमात्रस्य नियतसुखाप्रसञ्जकत्वात् । तत्प्रसञ्जकस्य च स्वातन्त्र्यस्याभावेऽपि सांख्यानभिमतक्रियावेशानुरोधेन शङ्कानुदयात् ।**

ಇದು ತಪ್ಪು. ಕರ್ತೃತ್ವವಿದ್ದ ಮಾತ್ರಕ್ಕೆ ಸುಖವುಳ್ಳವನಾಗಬೇಕಾದೀತು ಎಂಬ ಆಪತ್ತಿಯೇ ತಪ್ಪು. 'ಕರ್ತೃತ್ವ' ಎಂದರೆ 'ಕ್ರಿಯಾವೇಶ' ಎಂದರ್ಥ. ಕ್ರಿಯಾವೇಶವು ನಿಯತಸುಖಕ್ಕೆ ಆಪಾದಕವೇ ಅಲ್ಲ. ಒಂದು ವೇಳೆ ಜೀವನು ಸ್ವತಂತ್ರನಾಗಿದ್ದಲ್ಲಿ ನಿತ್ಯಸುಖವುಳ್ಳವನಾಗಬೇಕಾದೀತು ಎಂದು ಆಪತ್ತಿ ಮಾಡುವುದು ಸಮಂಜಸವಾಗುತ್ತದೆ. ಹೀಗೆ ನಿತ್ಯಸುಖಕ್ಕೆ ಪ್ರಸಂಜಕವಾದದ್ದು, ಸ್ವಾತಂತ್ರ್ಯವೇ ಹೊರತು ಕರ್ತೃತ್ವವಲ್ಲ.

**यच्चोक्तं करणशक्तियुक्ताया बुद्धेः कर्तृत्वे करणकारकशक्तिविपरीता कर्तृकारकशक्तिः स्यादिति ''शक्ति'' इति सूत्रार्थ इति**

'ಶಕ್ತಿವಿಪರ್ಯಾತ್' ಎಂಬುದಕ್ಕೆ ಅದ್ವೈತಿಗಳ ವ್ಯಾಖ್ಯಾನ ಹೀಗಿದೆ - ಬುದ್ಧಿಯು ಕರ್ಣಶಕ್ತಿ-ಯುಳ್ಳದ್ದಾಗಿದೆ. ಇಂಥ ಬುದ್ಧಿಗೆ ಕರ್ತೃತ್ವವನ್ನು ಹೇಳಿದರೆ ಕರಣಕಾರಕಶಕ್ತಿಗಳು ವಿಪರೀತವಾಗುತ್ತವೆ. ಆಗ ಕರ್ತೃಕಾರಕಶಕ್ತಿಯು ಬುದ್ಧಿಗೆ ಬರುತ್ತದೆ ಎಂದು ಹೇಳಿದಂತಾಗುತ್ತದೆ. ಹೀಗೆ 'ಶಕ್ತಿವಿಪರ್ಯಾತ್' ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುತ್ತಾರೆ.

**तन्न । (कारकशक्तिवाचिविभक्तिविपर्ययापादकेन ''न चेन्निर्देश'' इत्यनेनास्यार्थिकपुनरुक्तेः) । सांख्यमते बुद्धेः कर्तृत्वेऽपि तत्वान्तरस्य मनसः करणत्वसम्भवेनेष्टापत्तेः ।**

ಇದು ತಪ್ಪು. ವ್ಯಪದೇಶಾಚ್ಚ ಕ್ರಿಯಾಯಾಂ ಎಂಬ ಸೂತ್ರದಿಂದಲೇ ಈ ವಿಷಯವು ತಿಳಿಯುವುದರಿಂದ ಪುನರುಕ್ತಿದೋಷವು ಬರುತ್ತದೆ. 'ವಿಜ್ಞಾನಂ ಯಜ್ಞಂ ತನುತೇ' ಎಂಬುದಾಗಿ ವಿಜ್ಞಾನ ಶಬ್ದದಿಂದ ಜೀವನಿಗೆ ಕರ್ತೃತ್ವವನ್ನು ಅಲ್ಲಿಯೇ ಹೇಳಿದ್ದಾಗಿದೆ. ವಿಜ್ಞಾನಶಬ್ದಕ್ಕೆ ಬುದ್ಧಿ ಎಂದರ್ಥವಲ್ಲ. ಬುದ್ಧಿ ಎಂಬರ್ಥವನ್ನು ವಿವಕ್ಷಿಸಿದಲ್ಲಿ ವಿಜ್ಞಾನೇನ' ಎಂದು ಹೇಳಬೇಕಾಗಿತ್ತು. ಹೀಗೆ ಆ ಸೂತ್ರದಲ್ಲಿ ಅರ್ಥವನ್ನು ಹೇಳಿರುವಿರಿ. ಪ್ರಕೃತ ಬುದ್ಧಿಗೆ ಕರ್ತೃತ್ವವನ್ನು ಹೇಳಿದರೆ ಕರಣಶಕ್ತಿಗೆ ವಿಪರೀತವಾದ ಕರ್ತೃತ್ವಶಕ್ತಿಯೇ ಬರಬೇಕಾದೀತು ಎಂಬರ್ಥವನ್ನು ಹೇಳಿದರೆ ಅದೇ ಅರ್ಥವನ್ನೇ ಹೇಳಿದಂತಾಯಿತು. ಅಲ್ಲಿ ಶಬ್ದದಲ್ಲಿ ಹೇಳಿದ್ದನ್ನೇ ಇಲ್ಲಿ ಪ್ರಮೇಯದಿಂದ ಹೇಳಿದಂತಾಯಿತು. ಮತ್ತು ಸಾಂಖ್ಯರನ್ನು ಕುರಿತು ಬುದ್ಧಿಯು ಕರ್ತೃವಾದರೆ ಕರಣವೇ ಇಲ್ಲವೆಂದು ಆಕ್ಷೇಪ ಮಾಡಲು ನಿಮ್ಮಿಂದ ಸಾಧ್ಯವಿಲ್ಲ. ಏಕೆಂದರೆ ಸಾಂಖ್ಯರು ಬುದ್ಧಿಯನ್ನು ಕರ್ತೃ ಎಂದು ಒಪ್ಪಿದರೂ ಕೂಡ ಮನಸ್ಸನ್ನು ಕರಣವೆಂದು ಒಪ್ಪಿದ್ದಾರೆ. ಇವರ ಸಿದ್ಧಾಂತದಲ್ಲಿ ಬುದ್ಧಿಯೇ ಬೇರೆ, ಮನಸ್ಸೇ ಬೇರೆಯೇ ಆಗಿದೆ. ಆದ್ದರಿಂದ ನಿಮ್ಮ ಆಪಾದನೆಗೆ ಸಾಂಖ್ಯನು ಇಷ್ಟಾಪತ್ತಿಯೆಂದು ಉತ್ತರಿಸುತ್ತಾನೆ.

**यच्चोक्तं जीवस्याकर्तृत्वे निदिध्यासनादिरूपसमाधेरप्यभावः स्यादिति ''समाधि'' इति सूत्रार्थ इति**

'ಸಮಾಧ್ಯಭಾವಾಚ್ಚ' ಎಂಬ ಸೂತ್ರಕ್ಕೆ ಅದ್ವೈತಿಗಳು ಹೀಗೆ ವ್ಯಾಖ್ಯಾನ ಮಾಡಿದ್ದಾರೆ – ಜೀವನಿಗೆ ಕರ್ತೃತ್ವವು ಇಲ್ಲದೇ ಹೋದರೆ ನಿದಿಧ್ಯಾಸನವೇ ಅಯುಕ್ತವಾದೀತು ಎಂಬುದು ಈ ಸೂತ್ರದ ಅರ್ಥ. ಆಗ 'ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ' ಎಂಬ ವಿಧಿಯೇ ವ್ಯರ್ಥವಾಗಬೇಕಾದೀತು.

**तन्न । यागादिविधिशास्त्रस्येव समाधिविधिशास्त्रस्याप्याद्यसूत्रस्थशास्त्रशब्देनैव ग्रहण सम्भवेनास्य वैयर्थ्यात् ।**

ಹೀಗೆ ವ್ಯಾಖ್ಯಾನ ಮಾಡುವುದಾದರೆ ಈ ಸೂತ್ರ ಹೊರಡುವುದೇ ಬೇಡ. ಏಕೆಂದರೆ 'ಕರ್ತಾ ಶಾಸ್ತ್ರಾರ್ಥವತ್ವಾತ್' ಎಂಬ ಮೊದಲನೇ ಸೂತ್ರದಿಂದಲೇ ಈ ಪ್ರಮೇಯವು ಸಿದ್ಧವಾಗಿದೆ. 'ಕರ್ತಾ ಶಾಸ್ತ್ರಾರ್ಥವತ್ವಾತ್' ಎಂಬ ಸೂತ್ರದಲ್ಲಿ ಶಾಸ್ತ್ರಶಬ್ದದಿಂದ ವಿಧಿನಿಷೇಧವತ್ವರೂಪವಾದ ಶಾಸ್ತ್ರವನ್ನು ಹೇಗೆ ವಿವಕ್ಷಿಸಲಾಗಿದೆಯೋ ಅದರಂತೆ 'ಶ್ರೋತವ್ಯೊ ಮಂತವ್ಯೋ ನಿಧಿಧ್ಯಾಸಿತವ್ಯಃ' ಎಂಬ ವಾಕ್ಯವನ್ನೂ ಕೂಡ ಅದೇ ಶಾಸ್ತ್ರ ಶಬ್ದದಿಂದ ವಿವಕ್ಷಿಸಲು ಬರುತ್ತದೆ. ಆದ್ದರಿಂದ ಕೇವಲ ಒಂದು ವಾಕ್ಯದ ಸ್ವೀಕಾರಕ್ಕಾಗಿ ಈ ಸೂತ್ರ ಹೊರಡುವುದು ವ್ಯರ್ಥವಾಗುತ್ತದೆ.

**यदि च समाधिदशायां कर्तृभूतबुद्ध्यविवेककृतस्य कर्तृत्वस्यायोग इतीहाभिप्रायस्तर्हि सिद्धान्त्यभिप्रेतस्यारोपितकर्तृत्वस्याप्ययोगः । किञ्च त्वन्मते ''शक्तिविपर्ययात्'' इत्यस्य ''समाध्यभावात्'' इत्यस्य च प्रसङ्गरूपहेतुता कल्प्या ।**

ಒಂದುವೇಳೆ ಸಮಾಧಿ ದೆಶೆಯಲ್ಲಿ ಕರ್ತೃವಾಗಿರುವ ಬುದ್ಧಿಯು ಇಲ್ಲದ ಕಾರಣ ತದವಿವೇಕಕೃತವಾಗಿ ಕರ್ತೃತ್ವವು ಇಲ್ಲವೆಂದು ಹೇಳುವುದಾದರೆ ಆಗ ನಿಮ್ಮ ಸಿದ್ಧಾಂತದಲ್ಲೂ ಈ ದೋಷವು ಬಂದೇ ಬರುತ್ತದೆ. ಬುದ್ಧಿಯಲ್ಲಿರುವ ಕರ್ತೃತ್ವವೇ ಆತ್ಮನಲ್ಲಿ ಆರೋಪಿತವಾಗಿದೆ ಎಂದು ನೀವೂ ಕೂಡ ಹೇಳುತ್ತೀರಿ. ಏಕೆಂದರೆ ಸಮಾಧಿದೆಶೆಯಲ್ಲಿ ಬುದ್ಧಿಯೇ ಇಲ್ಲದ ಕಾರಣ ತದವಿವೇಕಕೃತವಾಗಿ

ಕರ್ತೃತ್ವವೂ ಕೂಡ ಇರುವುದಿಲ್ಲ. ಆರೋಪಕ್ಕೆ ಸಾಧನವೂ ಕೂಡ ಆ ಸಂದರ್ಭದಲ್ಲಿ ಇರುವುದಿಲ್ಲ. ಮತ್ತು ನಿಮ್ಮ ಮತದಲ್ಲಿ ಶಕ್ತಿವಿಪರ್ಯಾತ್ ಎಂಬುದಕ್ಕೆ 'ಶಕ್ತಿವಿಪರ್ಯಯಪ್ರಸಂಗಂ' ಎಂಬುದಾಗಿ ಅಧ್ಯಾಹಾರ ಮಾಡುವುದರ ಮೂಲಕ ಅರ್ಥವನ್ನು ಹೇಳಿರುತ್ತೀರಿ. ಸಮಾಧ್ಯಭಾವಾತ್' ಎಂಬುದಕ್ಕೂ ಕೂಡ 'ಸಮಾಧ್ಯಭಾವಪ್ರಸಂಗಾತ್' ಎಂದು ಅರ್ಥವನ್ನು ಹೇಳುತ್ತಿದ್ದೀರಿ. ಹೀಗೆ ಪ್ರಸಂಗರೂಪ ಹೇತುತ್ವವನ್ನು ಕಲ್ಪನೆ ಮಾಡಬೇಕಾಗುತ್ತದೆ.

**''यथा'' इति सूत्रस्याधिकरणान्तरत्वमप्ययुक्तम् । उक्तार्थे दृष्टान्तान्तरमात्रार्पकेण यथाशब्देन, चशब्देन च पूर्वशेषत्वप्रतीतेः ।**

'ಯಥಾಚ ತಕ್ಷೋಭಯಥಾ' ಎಂಬ ಸೂತ್ರವನ್ನು ಅಧಿಕರಣಾಂತರವೆಂದು ಅದ್ವೈತಿಗಳು ಹೇಳುತ್ತಾರೆ. ಇದೂ ಕೂಡ ಅಯುಕ್ತವಾಗಿದೆ. ಹಿಂದೆ ಹೇಳಿದ ವಿಷಯದಲ್ಲಿಯೇ ಮತ್ತೊಂದು ಉದಾಹರಣೆಯನ್ನು ಹೇಳುವಂತಹ 'ಯಥಾ' ಶಬ್ದವು ಸೂತ್ರದಲ್ಲಿದೆ. ಚಶಬ್ದದಿಂದ ಹಿಂದಿನ ಅಧಿಕರಣದಿಂದ ಗುಣಸೂತ್ರವಾಗಿದೆ ಎಂದು ತಿಳಿಯುತ್ತದೆ. ಹೀಗಿರುವಾಗ ಇದನ್ನು ಪ್ರತ್ಯೇಕ ಅಧಿಕರಣವೆಂದು ಹೇಳುವುದು ಅಸಂಗತ.

**कल्पितत्वे स्फटिकलौहित्यस्यैव दृष्टान्तयितव्यत्वेन तक्षकर्तृत्वस्य तदयोगाच्च । नहि कार्योत्पादने सहकार्यपेक्षामात्रेण कर्तृकरणादेः कर्त्रादित्वं कल्पितं भवति ।**

ಬಡಗಿಯಲ್ಲಿ ಕಾರ್ಯನಿಷ್ಪಾದಕತ್ವಶಕ್ತಿಯು ಕಲ್ಪಿತವಾದಂತೆ ಜೀವನಲ್ಲಿರುವ ಕರ್ತೃತ್ವಶಕ್ತಿಯೂ ಕೂಡ ಕಲ್ಪಿತವಾಗಿದೆ ಎಂದು ಈ ಸೂತ್ರದ ಅರ್ಥವನ್ನು ನೀವು ಹೇಳುತ್ತೀರಿ. ಒಂದು ವೇಳೆ ಕಲ್ಪಿತತ್ವವನ್ನು ಹೇಳುವ ಉದ್ದೇಶವೇ ಸೂತ್ರಕಾರರಿಗೆ ಇರುವುದಾಗಿದ್ದಲ್ಲಿ ಸ್ಫಟಿಕಲೋಹಿತದ ಉದಾಹರಣೆಯನ್ನೇ ನೀಡುತ್ತಿದ್ದರು ಹೊರತು ತಕ್ಷಕರ್ತೃತ್ವವನ್ನು ಉದಾಹರಣೆಯನ್ನಾಗಿ ನೀಡುತ್ತಿರಲಿಲ್ಲ. ಏಕೆಂದರೆ ಕಾರ್ಯವನ್ನು ಹುಟ್ಟಿಸಲು ಮತ್ತೊಂದು ಸಹಕಾರಿಯನ್ನು ಅಪೇಕ್ಷೆ ಮಾಡಿದ ಮಾತ್ರಕ್ಕೆ ಕರ್ತೃಕರಣಾದಿಗಳಲ್ಲಿರುವ ಕರ್ತೃತ್ವವು ಕಲ್ಪಿತವಾಗಲು ಸಾಧ್ಯವಿಲ್ಲವಷ್ಟೇ ?

**यदि च तक्ष्ण इव जीवस्य शक्तेः स्वाभाविकत्वेऽपि कार्यनिष्पादकत्वं सहकार्यधीनत्वादागन्तुकमिति विवक्षा तदेष्टापत्तिः ।**

ಒಂದುವೇಳೆ ತಕ್ಷನಂತೆ ಜೀವನಲ್ಲಿರುವ ಶಕ್ತಿಯು ಸ್ವಾಭಾವಿಕವಾಗಿದ್ದರೂ ಕಾರ್ಯನಿಷ್ಪಾದಕತ್ವವು ಮತ್ತೊಂದು ಸಹಕಾರಿಯ ಅಧೀನವಾಗಿರುವುದರಿಂದ ಆಗಂತುಕ ಎಂಬರ್ಥವನ್ನು ವಿವಕ್ಷಿಸುವುದಾದಲ್ಲಿ ನಮಗೆ ಅದು ಇಷ್ಟಾಪತ್ತಿಯೇ ಆಗಿದೆ.

**किञ्च ''तन्मनो कुरुत'' इत्यादौ मनसः कृतिकर्मत्वश्रवणात् तथा ''मन उदक्रामत् । मीलित इवाश्नन् पिबन्नास्तैव'' इत्यादौ मनस उत्क्रमणेऽप्यात्मनः कर्तृत्वश्रुतेः । तथा ''एतं प्राणमयमात्मानमुपसङ्क्रम्य । एतं मनोमयमात्मान-मुपसंक्रम्य । इमाँल्लोकान् कामान्नीकामरूप्यनुसञ्चरन्'' इत्यादौ त्वद्रीत्या प्राणमयादित्यागेऽपि सञ्चरणकर्तृत्वश्रवणात् तथा ''स यदा मनसा मनस्यति ।**

**यन्मनसा न मनुते । यच्चक्षुषा न पश्यति । मनसा वा अग्रे सङ्कल्पयति । अथ वाचाव्याहरति'' इत्यादिश्रुतौ ''शरीरवाङ्मनोभिर्यत्कर्म प्रारभते नर'' इत्यादिस्मृतौ च मनसः करणत्वोक्तेः तथा मनसोऽन्तःकरणत्वप्रसिद्धेः । तथा सुप्तौ त्वद्रीत्या बुद्धेरभावेऽप्युच्छ्वासादिकर्तृतायाः प्रत्यक्षेण ''सुप्तो भूर्भूरित्येव प्रश्वसितीत्यादिश्रुत्या च सिद्धेः । तथा विहारेतिसूत्रीयभाष्योदाहृतया ''परंज्योतिरुपसम्पद्य स्वेन रूपेणाभिनिष्पद्यते । स तत्र पर्येति जक्षन् क्रीडन्रममाण'' इत्यादिश्रुत्या स्वरूपा-विर्भावरूपपरममुक्तावपि कर्तृत्वोक्तेर्न मनसः कर्तृकोटिता ।**

'ತನ್ಮನೋ ಕುರುತ' ಎಂಬಲ್ಲಿ ಮನಸ್ಸು ಕೃತಿಗೆ ಕರ್ಮವಾಗಿದೆ ಎಂದು ಶ್ರುತವಾಗಿದೆ. ಹೀಗೆ ಮನಸ್ಸಿಗೆ ಕರ್ಮತ್ವವು ಶ್ರುತವಾಗಿರುವುದರಿಂದ ಕರ್ತೃತ್ವವನ್ನು ಹೇಳಬಾರದು. ಆದರಂತೆ 'ಮನಃ ಉದಕ್ರಾಮತ್ ಮೀಲಿತ ಇವ ಅಶ್ನನ್ ಪಿಬನ್ ಆಸ್ತೆವ' ಎಂಬಲ್ಲಿ ಮನಸ್ಸು ತೆರಳಿದ ಅನಂತರ ಆತ್ಮನಿಗೆ ಕರ್ತೃತ್ವವು ಶ್ರುತವಾಗಿದೆ. ಆದ್ದರಿಂದಲೂ ಮನಸ್ಸಿಗೆ ಕರ್ತೃತ್ವವನ್ನು ಹೇಳಬಾರದು. ಇದರಂತೆ 'ಏತಂ ಪ್ರಾಣಮಯಮಾತ್ಮಾನಂ ಉಪಸಂಕ್ರಮ್ಯ । ಏತಂ ಮನೋಮಯಮಾತ್ಮಾನಂ ಉಪಸಂಕ್ರಮ್ಯ । ಇಮಾಂ ಲೋಕಾನ್ ಕಾಮಾನ್ನೀಕಾಮರೂಪ್ಯನುಸಂಚರನ್' ಎಂಬ ಶ್ರುತಿಗೆ ವ್ಯಾಖ್ಯಾನ ಮಾಡುವಾಗ ನಿನ್ನ ಪ್ರಕಾರ ಅನ್ನಮಯ ಶಬ್ದವು ದೇಹಪರವಾಗಿದೆ, ಪ್ರಾಣಮಯಾದಿ ಶಬ್ದಗಳು ಕೋಶಪರವಾಗಿವೆ ಎಂದು ಹೇಳಲಾಗಿದೆ. ಇಲ್ಲಿ ಪ್ರಾಣಮಯಾದಿಗಳನ್ನು ಬಿಟ್ಟ ಮೇಲೂ ಕೂಡ 'ಕಾಮಾನ್ನೀಕಾಮರೂಪ್ಯ ನುಸಂಚರನ್' ಎಂಬುದಾಗಿ ಆತ್ಮನಿಗೆ ಸಂಚರಣ ಕರ್ತೃತ್ವವನ್ನು ಹೇಳಲಾಗಿದೆ.

ಆದರಂತೆ 'ಸ ಯದಾ ಮನಸಾ ಮನಸ್ಯತೀ । ಯಾನ್ಮನಸಾ ನ ಮನುತೇ । ಯಚ್ಚಕ್ಷುಷಾ ನ ಪಶ್ಯತಿ । ಮನಸಾ ವಾ ಅಗ್ರೇ ಸಂಕಲ್ಪಯತಿ । ಅಥ ವಾಚಾ ವ್ಯಾಹರತಿ' ಎಂಬಲ್ಲಿ ಚಕ್ಷುರಾದಿ ಇಂದ್ರಿಯಗಳಿಗೆ ಕರಣತ್ವವನ್ನು ಹೇಳಿದಂತೆ 'ಮನಸಾ' ಎಂಬುದಾಗಿ ತೃತೀಯಾವಿಭಕ್ತಿಯಿಂದ ಕರಣತ್ವವನ್ನು ಹೇಳಲಾಗಿದೆ. ಆದರಂತೆ 'ಶರೀರವಾಙ್ಮನೋಭಿರ್ಯತ್ಕರ್ಮ ಪ್ರಾರಭತೇ ನರಃ' ಎಂಬಲ್ಲೂ ಕೂಡ ತೃತೀಯಾವಿಭಕ್ತಿಯಿಂದ ಮನಸ್ಸಿಗೆ ಕರಣತ್ವವನ್ನು ಹೇಳಲಾಗಿದೆ. ಒಂದುವೇಳೆ ಮನಸ್ಸಿಗೆ ಮಾತ್ರ ಕರ್ತೃತ್ವವನ್ನು ಹೇಳಿದರೆ ಸಹಪಠಿತವಾದ ಚಕ್ಷುರಾದಿ ಇಂದ್ರಿಯಗಳಿಗೂ ಕರ್ತೃತ್ವವನ್ನು ಹೇಳಬೇಕಾದೀತು.

ಮತ್ತು ಮನಸ್ಸನ್ನು ಅಂತಃಕರಣ ಎಂದೇ ಲೋಕದಲ್ಲಿ ಎಲ್ಲರೂ ಕೂಡ ಕರೆಯುತ್ತಾರೆ. ಅಂತಃ ಕರಣ ಎಂಬ ಪದದಿಂದಲೇ ಇದು ಕರಣ ಹೊರತು ಕರ್ತೃವಲ್ಲವೆಂದು ತಿಳಿಯುತ್ತದೆ. ಮತ್ತು ಸುಷುಪ್ತಿಯಲ್ಲಿ ನಿನ್ನ ಸಿದ್ಧಾಂತದ ಪ್ರಕಾರ ಬುದ್ಧಿಯೇ ಇರುವುದಿಲ್ಲ. ಆದರೂ ಕೂಡ ಉಚ್ಛ್ವಾಸಾದಿಕರ್ತೃತ್ವವು ಇರುವುದು ಪಕ್ಕದಲ್ಲಿರುವ ವ್ಯಕ್ತಿಯ ಪ್ರತ್ಯಕ್ಷದಿಂದ ಸಿದ್ಧವಾಗಿದೆ. ಮತ್ತು 'ಸುಪ್ತಂ ಭೂರ್ಭೂರಿತ್ಯೇವ ಪ್ರಶ್ವಸಿತಿ' ಇತ್ಯಾದಿ ಶ್ರುತಿಯು ಸುಷುಪ್ತಿಯ ಅವಸ್ಥೆಯಲ್ಲಿ 'ಭೂಃ ಭೂಃ' ಎಂಬುದಾಗಿ ಉಚ್ಛ್ವಾಶ ಮಾಡುತ್ತಾನೆ ಎಂಬುದಾಗಿ ಹೇಳುತ್ತಿದೆ.

ಮತ್ತು 'ವಿಹಾರೋಪದೇಶಾತ್' ಎಂಬ ಸೂತ್ರದ ಭಾಷ್ಯದಲ್ಲಿ 'ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ । ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್‌ರಮಮಾಣಃ' ಎಂಬ ಶ್ರುತಿಯನ್ನು

ಉದಾಹರಿಸಲಾಗಿದೆ. ಈ ಶ್ರುತಿಯು ಸಗುಣಮೋಕ್ಷವನ್ನು ಹೇಳುತ್ತದೆ ಎಂದು ತಿಳಿಯಬಾರದು. ಸ್ವರೂಪಾವಿರ್ಭಾವರೂಪವಾದ ನಿರ್ಗುಣ ಮೋಕ್ಷವನ್ನೇ ಹೇಳುತ್ತಿದೆ. ಅಲ್ಲೂ ಕೂಡ ಜೀವನಿಗೆ ಕ್ರೀಡಾದಿಕರ್ತೃತ್ವವನ್ನು ಹೇಳುತ್ತಿರುವುದರಿಂದ ಮನಸ್ಸಿಗೆ ಕರ್ತೃತ್ವವನ್ನು ಒಪ್ಪಲು ಸಾಧ್ಯವಿಲ್ಲ. ಏಕೆಂದರೆ ಮುಕ್ತ್ಯವಸ್ಥೆಯಲ್ಲಿ ಮನಸ್ಸು ಇರುವುದೇ ಇಲ್ಲ. ಹೀಗಿರುವಾಗ ನೀವು ಮನಸ್ಸಿಗೆ ಕರ್ತೃತ್ವವಿದೆ ಎಂದು ಸಿದ್ಧಾಂತ ಮಾಡಿದ್ದು ಅಯುಕ್ತವಾಗಿದೆ.

**किञ्च विशिष्टस्य कर्तृत्वे मोक्षसाधनविधिरयुक्तः स्यात् । कर्तुरिष्टसाधनत्वस्य विधिबोध्यत्वात् । न चाहं करोमीति प्रत्यक्षेण तथा ''शास्त्रफलं प्रयोक्तुः'' इति न्यायानुगृहीतेन मोक्षसाधनविषया कृतिर्मोक्षसमानाधिकरणा । तत्साधन विषयकृतित्वात् । संमतवदित्यनुमानेन तथा ''कर्ता विज्ञानात्मा पुरुषः । यत्कर्म कुरुते तदभिसम्पद्यत'' इत्यादिश्रुतिभिः तथा मोक्षसमानाधिकरणविधिनिषेधाद्यति-क्रमजन्यपापादिलेपयोग्यं चेतनत्वेन शासनयोग्यं च जीवमधिकृत्य कर्तव्यनिषिद्धार्पकविधिनिषेधशास्त्रवैयर्थ्यान्यथानुपपत्त्या च सिद्धे आत्मनः कर्तृत्वे बाधकमस्ति । येन तन्मिथ्या स्यात् । ''आत्मेन्द्रियमनोयुक्तं भोक्तेत्याहुर्मनीषिणः'' इति श्रुतिस्त्वात्मनो भोक्तृत्वे देहादेरिव मनसः सहकारित्वमाह । नतु मनसो भोक्तृकोटिताम् ।)**

ಅಂತಃಕರಣಾದಿವಿಶಿಷ್ಟನಾದ ಜೀವನಿಗೆ ಕರ್ತೃತ್ವ ಎಂದು ಹೇಳುವುದೂ ಕೂಡ ತಪ್ಪು. ಹಾಗಾದಲ್ಲಿ ಮೋಕ್ಷಸಾಧನ ವಿಧಿಯೇ ಅಯುಕ್ತವಾಗುತ್ತದೆ. ಏಕೆಂದರೆ ಇಷ್ಟಸಾಧನತ್ವವೇ ವಿಧಿ ಎನಿಸುತ್ತದೆ. ಯಾರು ಕರ್ತೃವಾಗಿದ್ದಾನೋ ಅವನನ್ನು ಕುರಿತು ಇದು ಇಷ್ಟಸಾಧನವಾಗಿದೆ ಎಂಬುದಾಗಿ ವಿಧಿವಾಕ್ಯವು ಬೋಧನೆಯನ್ನು ಮಾಡಬೇಕು. ಪ್ರಕೃತ ವಿಶಿಷ್ಟನಾದವನಿಗೆ ಇದು ಇಷ್ಟಸಾಧನ ಎಂಬುದಾಗಿ ವಿಧಿ ವಾಕ್ಯವು ಹೇಳಬೇಕು. ಆದರೆ ವಿಶಿಷ್ಟನಿಗೆ ಮೋಕ್ಷವೇ ದೊರೆಯುವುದಿಲ್ಲ. ಶುದ್ಧಚೈತನ್ಯನು ಮಾತ್ರ ಮೋಕ್ಷವನ್ನು ಹೊಂದುತ್ತಾನೆ. ಅಂತಃಕರಣವಾಗಲೀ, ಅಂತಃಕರಣವಿಶಿಷ್ಟವಾದ ಚೈತನ್ಯವಾಗಲೀ ಮೋಕ್ಷವನ್ನು ಹೊಂದದ ಕಾರಣ ವಿಧಿವಾಕ್ಯಗಳೆಲ್ಲವೂ ವ್ಯರ್ಥವಾಗಬೇಕಾಗುತ್ತವೆ.

ಆತ್ಮಕರ್ತೃತ್ವವು ಅನೇಕ ಪ್ರಮಾಣಗಳಿಂದ ಸಿದ್ಧವಾಗಿವೆ. ಇದನ್ನು ಕಲ್ಪಿತವೆಂದು ಹೇಳಲು ಯಾವುದೇ ಆಧಾರವಿಲ್ಲ. ಆತ್ಮಕರ್ತೃತ್ವ ವಿಷಯದಲ್ಲಿ ಪ್ರತ್ಯಕ್ಷ ಪ್ರಮಾಣ ಹೀಗಿದೆ – 'ಅಹಂ ಕರೋಮಿ' ಎಂಬುದಾಗಿ ಪ್ರತಿಯೊಬ್ಬರ ಅನುಭವವೇ ಪ್ರತ್ಯಕ್ಷರೂಪದ ಪ್ರಮಾಣವಾಗಿದೆ.

ಅನುಮಾನ ಪ್ರಮಾಣ – 'ಶಾಸ್ತ್ರಫಲಂ ಪ್ರಯೋಕ್ತುಃ' ಎಂಬ ಜೈಮಿನೀ ಸೂತ್ರದಲ್ಲಿ ಯಾರು ಸಾಧನಾನುಷ್ಠಾನವನ್ನು ಮಾಡುತ್ತಾನೋ ಅವನೇ ಶಾಸ್ತ್ರದ ಫಲವನ್ನು ಹೊಂದಲು ಸಾಧ್ಯ ಎಂಬುದಾಗಿ ಹೇಳಿದ್ದಾರೆ. ಈ ಸೂತ್ರದಿಂದ ತಿಳಿಯುವ ಅನುಮಾನ ಹೀಗಿದೆ – 'ಮೋಕ್ಷಸಾಧನವಿಷಯಾ ಕೃತಿಃ ಮೋಕ್ಷಸಮಾನಾಧಿಕರಣಾ, ತತ್ಸಾಧನವಿಷಯಕೃತಿತ್ವಾತ್ ಸಮ್ಮತವತ್' ಯಾರು ಯಾವ ಫಲದ ಉದ್ದೇಶದಿಂದ ಸಾಧನಾನುಷ್ಠಾನದಲ್ಲಿ ನಿರತನಾಗಿದ್ದಾನೋ ಅವನು ತತ್ಫಲ ಸಮಾನಾಧಿ-ಕರಣವುಳ್ಳವನಾಗಿದ್ದಾನೆ. ಉದಾಹರಣೆ – ಸ್ವರ್ಗರೂಪವಾದ ಫಲಕ್ಕೆ ಸಾಧನೀಭೂತವಾದ ಕೃತಿ

ಎಂದರೆ ಯಾಗರೂಪವಾದ ಕೃತಿ. ಸ್ವರ್ಗವನ್ನು ಪಡೆಯುವ ವ್ಯಕ್ತಿಯಲ್ಲಿಯೇ ಈ ಯಾಗವಿಷಯಕವಾದ ಕೃತಿಯು ಇರಬೇಕು. ಆದ್ದರಿಂದ ಫಲ ಎಂದರೆ ಸ್ವರ್ಗ. ಸಾಧನ ಎಂದರೆ ಜ್ಯೋತಿಷ್ಟೋಮ. ಜ್ಯೋತಿಷ್ಟೋಮ ಕೃತಿವಿಷಯಕ್ಕೆ ಆಶಯನಾದವನು ಸ್ವರ್ಗವನ್ನು ಪಡೆಯುವವನೇ ಆಗಬೇಕು. ಆದ್ದರಿಂದ ಮೋಕ್ಷವನ್ನು ಪಡೆಯುವವನು ಶುದ್ಧಾತ್ಮನಾದಮೇಲೆ ತದ್ವಿಷಯಕವಾದ ಕೃತಿಯೂ ಕೂಡ ಶುದ್ಧಾತ್ಮನಲ್ಲಿಯೇ ಬರಬೇಕು. ಅಂತಃಕರಣಾದಿವಿಶಿಷ್ಟನಾದ ಆತ್ಮನಲ್ಲಿ ಸರ್ವಥಾ ಇದನ್ನು ಹೇಳಬಾರದು.

ಶ್ರುತಿ ಪ್ರಮಾಣ – 'ಕರ್ತಾ ವಿಜ್ಞಾನಾತ್ಮಾ ಪುರುಷಃ' ಎಂಬ ಶ್ರುತಿಯು ಸ್ಪಷ್ಟವಾಗಿ ಆತ್ಮನೇ ಕರ್ತೃ ಎಂದು ಹೇಳುತ್ತಿದೆ. 'ಯತ್ಕರ್ಮಕುರುತೇ ತದಭಿಸಂಪದ್ಯತೇ' ಎಂಬ ಶ್ರುತಿಯೂ ಕೂಡ ಅದೇ ಕರ್ತೃತ್ವವನ್ನು ಸಮರ್ಥಿಸುತ್ತಿದೆ.

ಅರ್ಥಾಪತ್ತಿ ಪ್ರಮಾಣ – ವಿಧಿಶಾಸ್ತ್ರವು ಕರ್ತವ್ಯವನ್ನು ಹೇಳುತ್ತದೆ. ನಿಷೇಧಶಾಸ್ತ್ರವು ನಿಷಿದ್ಧವಾದುದನ್ನು ಹೇಳುತ್ತದೆ. ಜೀವನನ್ನು ಕುರಿತು ವಿಧಿನಿಷೇಧಗಳನ್ನು ಈ ಶಾಸ್ತ್ರವು ಹೇಳುತ್ತಿದೆಯೇ ಹೊರತು ಮನಸ್ಸನ್ನು ಕುರಿತು ಅಲ್ಲ. ಏಕೆಂದರೆ ಜೀವನು ಚೇತನತ್ವೇನ ಶಾಸನಯೋಗ್ಯನಾಗಿದ್ದಾನೆ. ಇಂತಹ ಶಾಸ್ತ್ರಕ್ಕೆ ವೈಯರ್ಥ್ಯವು ಬರಬಾರದೆಂದರೆ ಜೀವನಿಗೇ ಕರ್ತೃತ್ವವನ್ನು ಹೇಳಬೇಕು. ಮತ್ತು ಜೀವನು ವಿಧಿನಿಷೇಧಗಳನ್ನು ಅನುಸರಣೆ ಮಾಡದಿದ್ದರೆ ಪಾಪವುಳ್ಳವನಾಗುತ್ತಾನೆ. ವಿಧಿನಿಷೇಧಗಳನ್ನು ಅನುಸರಿಸಿದರೆ ಪುಣ್ಯಭಾಗಿಯಾಗುತ್ತಾನೆ. ಹೀಗೆ ಪಾಪಪುಣ್ಯಗಳ ಲೇಪವುಳ್ಳವನು ಜೀವನೇ ಆಗುತ್ತಾನೆ ಹೊರತು ಅಂತಃಕರಣವಾಗುವುದಿಲ್ಲ. ಏಕೆಂದರೆ ವಿಧಿನಿಷೇಧಾದ್ಯತಿಕ್ರಮಜನ್ಯವಾದ ಪಾಪಾದಿಲೇಪವು ಮೋಕ್ಷಸಮಾಧಿಕರಣವಾಗಿದೆ. ಪುಣ್ಯಪಾಪಾದಿಗಳ ಲೇಪವೇ ಬಂಧ ಎನಿಸುತ್ತದೆ. ಬಂಧ ಇರುವವನಿಗೆ ಮೋಕ್ಷವನ್ನು ಹೇಳಬೇಕು. ಆತ್ಮನಿಗೆ ಕರ್ತೃತ್ವವನ್ನು ಒಪ್ಪದೇ ಪಾಪಾದಿಲೇಪಯೋಗ್ಯತ್ವವಾಗಲೀ, ವಿಧಿನಿಷೇಧಶಾಸ್ತ್ರಗಳ ಸಾರ್ಥಕ್ಯವಾಗಲೀ ಕೂಡಿಸಲು ಸಾಧ್ಯವಿಲ್ಲ. ಏತದುಭಯ ಅನ್ಯಥಾನುಪಪತ್ತ್ಯಾ ಜೀವಕರ್ತೃತ್ವವು ಸಿದ್ಧವಾಗುತ್ತದೆ. ಹೀಗೆ ಆತ್ಮನಿಗೆ ಸಿದ್ಧವಾದ ಕರ್ತೃತ್ವ ವಿಷಯದಲ್ಲಿ ಯಾವುದೇ ಬಾಧಕವು ಇರುವುದಿಲ್ಲ. ಹಾಗೇನಾದರೂ ಬಾಧಕವಿದ್ದಲ್ಲಿ ಕರ್ತೃತ್ವವು ಮಿಥ್ಯಾವಾಗುತ್ತಿತ್ತು.

ಕೇವಲ ಆತ್ಮನು ಭೋಕ್ತೃವಾಗಲು ಸಾಧ್ಯವಿಲ್ಲ. ಇಂದ್ರಿಯಾದಿಗಳಿಂದ ಕೂಡಿದ ಆತ್ಮನೇ ಭೋಕ್ತೃವಾಗಲು ಸಾಧ್ಯ ಎಂಬುದಾಗಿ 'ಆತ್ಮೇಂದ್ರಿಯಮನೋ ಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ' ಎಂಬುದಾಗಿ ಶ್ರುತಿಯು ಹೇಳುತ್ತಿದೆಯಲ್ಲವೇ?

ಈ ಆಕ್ಷೇಪವು ತಪ್ಪು. ಈ ಶ್ರುತಿಯಲ್ಲಿರುವ ಆತ್ಮ ಶಬ್ದವು ದೇಹಪರವಾಗಿದೆ. ದೇಹ, ಇಂದ್ರಿಯ, ಮನಸ್ಸು ಇವುಗಳಿಂದ ಯುಕ್ತನಾಗಿರುವ ಜೀವನೇ ಭೋಕ್ತೃವಾಗಿದ್ದಾನೆ ಎಂದು ಹೇಳುತ್ತಿದೆ. ದೇಹ ಇಂದ್ರಿಯ ಮೊದಲಾದವುಗಳು ಕರ್ತೃಕೋಟಿಯಲ್ಲಿ ಪ್ರವಿಷ್ಟವಾಗಲು ಸಾಧ್ಯವಿಲ್ಲ. ಕರ್ತೃತ್ವಕ್ಕೆ ಕೇವಲ ಸಹಕಾರಿಯಾಗಿವೆ. ಅದರಂತೆ ಮನಸ್ಸೂ ಕೂಡ ಕರ್ತೃತ್ವಕ್ಕೆ ಸಹಕಾರಿಯೇ ಹೊರತು ಭೋಕ್ತೃಕೋಟಿಯಲ್ಲಿ ಮನಸ್ಸನ್ನು ನಿವೇಶ ಮಾಡಬಾರದು. ಒಂದುವೇಳೆ ಮನಸ್ಸನ್ನು ಭೋಕ್ತೃಕೋಟಿಯಲ್ಲಿ ಸೇರಿಸುವುದಾದರೆ ಆತ್ಮ ಹಾಗೂ ಇಂದ್ರಿಯಗಳನ್ನೂ ಕೂಡ ಭೋಕ್ತೃಕೋಟಿಯಲ್ಲಿ ನಿವೇಶ ಮಾಡಬೇಕಾಗುತ್ತದೆ.

**''अहंकारविमूढात्मा कर्ताहमिति मन्यत'' इति स्मृतिरपि जीवस्य स्वातन्त्र्य-निषेधपरा । ''तत्रैवं सति कर्तारमात्मानं केवलं तु यः । पश्यत्यकृतबुद्धित्वान्न स पश्यति'' इत्यादितद्वाक्यात् । ''ध्यायतीव लेलायतीव'' इत्यादिश्रुताविव-शब्दोऽप्यस्वातन्त्र्यात् ।**

'ಅಹಂಕಾರವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ' ಎಂಬ ಗೀತಾವಾಕ್ಯವು ಜೀವನಲ್ಲಿರುವ ಕರ್ತೃತ್ವವನ್ನು ನಿಂದನೆ ಮಾಡುತ್ತಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಸ್ವತಂತ್ರಕರ್ತೃತ್ವವನ್ನಷ್ಟೇ ಈ ವಾಕ್ಯವು ನಿಷೇಧ ಮಾಡುತ್ತಿದೆ. ಅಸ್ವತಂತ್ರ ಕರ್ತೃತ್ವವನ್ನು ನಿಷೇಧ ಮಾಡುತ್ತಿಲ್ಲ. ಏಕೆಂದರೆ 'ತತ್ರ ಏವಂ ಸತಿ ಕರ್ತಾರಂ ಆತ್ಮಾನಂ ಕೇವಲಂ ತು ಯಃ । ಪಶ್ಯತ್ಯಕೃತ ಬುದ್ಧಿತ್ವಾತ್ ನ ಸ ಪಶ್ಯತಿ' ಎಂಬುದಾಗಿ ಅದೇ ಗೀತಾವಾಕ್ಯದ ಮುಂದಿನ ಭಾಗದಲ್ಲಿ ಕೇವಲ ಕರ್ತೃತ್ವವನ್ನು ಸ್ಪಷ್ಟವಾಗಿ ನಿಷೇಧ ಮಾಡುತ್ತಿದೆ. ಈಶ್ವರ, ತತ್ತ್ವಾಭಿಮಾನಿದೇವತೆಗಳು, ಕಾಲ, ಪ್ರಕೃತಿ ಇವುಗಳೆಲ್ಲ ಸೇರಿ ಕಾರ್ಯವನ್ನು ಮಾಡಿಸಿರುವಾಗ ನಾನೊಬ್ಬನೇ ಕಾರ್ಯವನ್ನು ಮಾಡಿದೆನು ಎಂದು ತಿಳಿಯುವವನು ಮೂರ್ಖನಾಗಿದ್ದಾನೆ ಎಂದು ಈ ವಾಕ್ಯ ಹೇಳುತ್ತಿದೆ ಹೊರತು ಕರ್ತೃತ್ವವನ್ನೇ ನಿಷೇಧ ಮಾಡಲು ಈ ವಾಕ್ಯ ಹೊರಟಿಲ್ಲ.

'ಧ್ಯಾಯತೀವ ಲೇಲಾಯತೀವ' ಎಂಬ ಛಾಂದೋಗ್ಯಮಾತಿನಲ್ಲೂ ಕೂಡ ಧ್ಯಾನ ಮಾಡುವವನಂತೆ ಇದ್ದಾನೆ ಎಂಬುದಾಗಿ ಕರ್ತೃತ್ವವನ್ನು ನಿಷೇಧ ಮಾಡಲಾಗಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಇಲ್ಲಿರುವ ಯುವ ಶಬ್ದಕ್ಕೆ ಸ್ವತಂತ್ರನಾಗಿ ಧ್ಯಾನ ಮಾಡಲಾರ ಎಂದಷ್ಟೇ ಅರ್ಥ. ಹೀಗೆ ಯುವ ಶಬ್ದವು ಅಸ್ವಾತಂತ್ರ್ಯವನ್ನಷ್ಟೇ ನಿಷೇಧ ಮಾಡುತ್ತಿದೆಯೇ ಹೊರತು ಕರ್ತೃತ್ವವನ್ನು ನಿಷೇಧ ಮಾಡುತ್ತಿಲ್ಲ.

* ಕಿಂಚ ವಿಶಿಷ್ಟಸ್ಯ ಎಂಬ ವಾಕ್ಯದಿಂದ ಪ್ರಾರಂಭ ಮಾಡಿ ಭೋಕ್ತೃಕೋಟಿತಾಂ ಎಂಬ ವಾಕ್ಯದ ತನಕ ಹಾಗೂ ಕೃತ್ಯಾಶ್ರಯತ್ವೇ ಎಂಬುದರಿಂದ ಪ್ರಾರಂಭ ಮಾಡಿ ತಥಾ ಕೃತಿರಪಿ ಇತ್ಯುಕ್ತಂ ಎಂಬ ವಾಕ್ಯದ ತನಕ ಕಂಸದಲ್ಲಿ ಹೇಳಲಾಗಿದೆ. ಇದನ್ನು ರಾಯರು ವ್ಯಾಖ್ಯಾನ ಮಾಡಿಲ್ಲವಾದ್ದರಿಂದ ಪ್ರಕ್ಷಿಪ್ತವಿರಬಹುದು ಎಂದಭಿಪ್ರಾಯ. ಆದರೆ ವಿಷಯದಲ್ಲಿ ಸ್ವಾರಸ್ಯವಿರುವುದರಿಂದ ಇಲ್ಲಿ ಅನುವಾದ ಮಾಡಲಾಗಿದೆ.

**(कृत्याश्रयत्वं चाज्ञानाश्रयत्वमिव न द्रव्यान्तरापत्तिरूपविकारापादकम् ।**

**नच जीवकर्तृत्वस्य प्रत्यक्षप्राप्तत्वादपुरुषार्थत्वाच्च न तत्र श्रुतेस्तात्पर्यमिति युक्तम् । ईश्वरकर्तृत्वस्याप्राप्तत्वेन तच्छ्रुतेस्तत्परत्वस्य दुर्वारत्वात् । कर्तृत्वस्याहं करोमीति विशिष्टात्मनि प्राप्तावपि शुद्धेऽप्राप्त्या श्रुतेस्तत्परत्वोपपत्तेश्च । अन्यथा सत्यज्ञानादिवाक्यमपि सन् घटोऽहमस्मीत्यादिप्रत्यक्षप्राप्तविशिष्टात्मसत्यतानुवादि स्यात् ।**

ಒಂದುವೇಳೆ ಜೀವನಿಗೆ ಕರ್ತೃತ್ವವನ್ನು ಒಪ್ಪಿದರೆ ವಿಕಾರವನ್ನು ಒಪ್ಪಿದಂತಾಗುತ್ತದೆ. ಏಕೆಂದರೆ ಕರ್ತೃತ್ವವೆಂದರೆ ಕೃತ್ಯಾಶ್ರಯತ್ವ ಎಂದರ್ಥ. ಪ್ರಯತ್ನಕ್ಕೆ ಆಶ್ರಯನಾದರೆ ವಿಕಾರವನ್ನು

ಹೇಳಿದಂತಾಗುತ್ತದೆ. ಆದ್ದರಿಂದ ಜೀವನಿಗೆ ಕರ್ತೃತ್ವವನ್ನು ಹೇಳಬಾರದು ಎಂಬ ಅದ್ವೈತಿಯ ಆಕ್ಷೇಪ ತಪ್ಪು. ಏಕೆಂದರೆ ಇದೇ ಜೀವನು ಅಜ್ಞಾನಕ್ಕೆ ಆಶ್ರಯನಾಗಿದ್ದಾನೆಂದು ನೀವು ಹೇಳುವಿರಿ. ಅಂದಮಾತ್ರಕ್ಕೆ ವಿಕಾರವು ಉಂಟಾಯಿತು ಎಂದು ನೀವು ಒಪ್ಪುವುದಿಲ್ಲ. ಆದ್ದರಿಂದ ಆಶ್ರಯವಾದ ಮಾತ್ರಕ್ಕೆ ವಿಕಾರವಾಗುವುದಿಲ್ಲ, ಬೇರೆ ಒಂದು ದ್ರವ್ಯವಾಗಿ ಪರಿಣಾಮವಾದರೆ ಮಾತ್ರ ವಿಕಾರವು ಉಂಟಾಗುತ್ತದೆ. ಆತ್ಮನು ದ್ರವ್ಯಾಂತರಾಪತ್ತಿ-ವಿಕಾರರೂಪವನ್ನು ಹೊಂದಿಲ್ಲವಾದ್ದರಿಂದ ದೋಷವಿಲ್ಲ.

ಶ್ರುತಿಯು ಜೀವನಿಗೆ ಕರ್ತೃತ್ವವನ್ನು ಹೇಳಬಹುದು. ಆದರೆ ಅದರಲ್ಲಿ ಶ್ರುತಿಗೆ ತಾತ್ಪರ್ಯವಿಲ್ಲ. ಏಕೆಂದರೆ 'ಅಹಂ ಕರೋಮಿ' ಇತ್ಯಾದಿ ಪ್ರಮಾಣಾಂತರದಿಂದ ಜೀವಕರ್ತೃತ್ವವು ಪ್ರಾಪ್ತವಾಗಿದೆ. ಪ್ರಮಾಣಾಂತರದಿಂದ ಪ್ರಾಪ್ತವಾದುದರಲ್ಲಿ ಶ್ರುತಿಗೆ ತಾತ್ಪರ್ಯವಿರಲು ಸಾಧ್ಯವಿಲ್ಲ. ಮತ್ತು ಕರ್ತೃತ್ವವು ಅಪುರುಷಾರ್ಥವಾಗಿದೆ. ಯಾರಿಗೆ ಕರ್ತೃತ್ವ ಇರುತ್ತದೋ ಅವನು ದುಃಖಿಯಾಗಿರುತ್ತಾನೆ, ಕರ್ತೃತ್ವವು ಇಲ್ಲದಿದ್ದರೆ ಸುಖಿಯಾಗಿರುತ್ತಾನಾದ್ದರಿಂದ ಇದು ಅಪುರುಷಾರ್ಥವಾಗಿದೆ. ಇಂತಹ ಅಪುರುಷಾರ್ಥದಲ್ಲಿ ಶ್ರುತಿಗೆ ತಾತ್ಪರ್ಯವಿರಲು ಸಾಧ್ಯವಿಲ್ಲ.

ಈ ಆಕ್ಷೇಪವು ತಪ್ಪು. ತುಷ್ಯತು ದುರ್ಜನನ್ಯಾಯದಿಂದ ಜೀವನಲ್ಲಿರುವ ಕರ್ತೃತ್ವವು ಅಪುರುಷಾರ್ಥವಾದ್ದರಿಂದ ಮತ್ತು ಪ್ರಮಾಣಾಂತರಪ್ರಾಪ್ತವಾದುದರಿಂದ ಶ್ರುತಿತಾತ್ಪರ್ಯಕ್ಕೆ ವಿಷಯವಾಗುವುದು ಬೇಡ. ಆದರೆ ಈಶ್ವರಕರ್ತೃತ್ವವು ಪ್ರಮಾಣಾಂತರ ಪ್ರಾಪ್ತವೂ ಅಲ್ಲ, ಅಪುರುಷಾರ್ಥರೂಪವೂ ಅಲ್ಲ. ಇಂತಹ ಈಶ್ವರಕರ್ತೃತ್ವದಲ್ಲಿ ಶ್ರುತಿಗೆ ತಾತ್ಪರ್ಯವನ್ನು ಹೇಳಬಹುದು. ಆದ್ದರಿಂದ ಅಂತಃಕರಣಕ್ಕೆ ಮಾತ್ರ ಕರ್ತೃತ್ವವಿದೆ, ಜೀವನಿಗಾಗಲೀ ಈಶ್ವರನಿಗಾಗಲೀ ಕರ್ತೃತ್ವವು ಇಲ್ಲವೆಂಬ ನಿನ್ನ ವಾದವು ಅಯುಕ್ತವಾಯಿತು. 'ಅಹಂ ಕರೋಮಿ' ಎಂಬ ಅನುಭವದಿಂದ ಕರ್ತೃತ್ವವಿಶಿಷ್ಟಾತ್ಮನಲ್ಲಿ ಪ್ರಾಪ್ತವಾದರೂ ಕೂಡ ಶುದ್ಧಾತ್ಮನಲ್ಲಿ ಪ್ರಾಪ್ತವಲ್ಲದ ಕಾರಣ ಶ್ರುತಿಯು ಶುದ್ಧನಿಷ್ಠಪರವಾಗಲು ಯಾವುದೇ ಬಾಧಕವಿಲ್ಲ. ಹೀಗೊಪ್ಪದಿದ್ದರೆ ಶಕ್ತಿಜ್ಞಾನಾದಿವಾಕ್ಯವೂ ಕೂಡ 'ಸಂಘಟಃ ಅಹಮಸ್ಮಿ' ಇತ್ಯಾದಿ ಪ್ರತ್ಯಕ್ಷಪ್ರಾಪ್ತವಾದ ವಿಶಿಷ್ಟಾತ್ಮನ ಸತ್ಯತ್ವವನ್ನು ಅನುವಾದ ಮಾಡುತ್ತವೆ ಎಂದಾಗಬೇಕಾಗುತ್ತದೆ. ಆಗ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ಶ್ರುತಿಗೂ ಕೂಡ ಅಪ್ರಾಮಾಣ್ಯ ಬರುತ್ತದೆ.

**किञ्च यत्र प्रमाणेन निषेद्धुमनुवादस्तत्रानुवाद्यस्य सत्त्वाभावेऽपि यत्रान्यद्विधातुं सः तत्र तस्य सत्त्वमेव । अन्यथानुवाद्यस्यासत्त्वे आश्रयासिद्धौ धर्मधर्मिसंसर्ग-रूपानुमितिविषय इवानुवाद्यविधेयसंसर्गरूपवाक्यार्थो बाधितः स्यात् । न हि ''रूप्यं दक्षिणा न सुरां पिबेत्'' इत्यादिशास्त्रेष्वारोपितरूप्यादेर्धीः ।**

ಎಲ್ಲಿ ಪ್ರಮಾಣದಿಂದ ನಿಷೇಧ ಮಾಡಲು ಅನುವಾದ ಮಾಡಲಾಗುತ್ತದೋ ಅಲ್ಲಿ ಅನುವಾದ್ಯವು ಸತ್ಯಭೂತವಾಗಿರಬೇಕಾಗಿಲ್ಲ. ಆದರೆ ಮತ್ತೊಂದನ್ನು ವಿಧಾನ ಮಾಡಲು ಯಾವುದನ್ನು ಅನುವಾದ ಮಾಡಲಾಗುತ್ತದೋ ಅದಕ್ಕೆ ಸತ್ವವು ಇರಲೇಬೇಕು. ಹೀಗೊಪ್ಪದಿದ್ದರೆ ಅನುವಾದ್ಯವು ಅಸತ್ವವೆಂದು ಒಪ್ಪಿದಲ್ಲಿ ಆಶ್ರಯಾಸಿದ್ಧಿದೋಷವು ಬರುತ್ತದೆ. ಆಗ ಧರ್ಮಧರ್ಮಿಸಂಸರ್ಗರೂಪವಾದ ಅನುಮಿತಿಗೆ ವಿಷಯವಾದ ಅನುವಾದ್ಯವಿಧೇಯಗಳ ಸಂಸರ್ಗಗಳ ವ್ಯಾಕ್ಯಾರ್ಥವೇ ಬಾಧಿತವಾಗುತ್ತದೆ. 'ರೂಪ್ಯಂ ದಕ್ಷಿಣಾ' ಬೆಳ್ಳಿಯನ್ನು ದಕ್ಷಿಣೆಯನ್ನಾಗಿ ನೀಡಬೇಕು 'ನ ಸುರಾಂ ಪಿಬೇತ್' 'ಸುರೆಯನ್ನು

ಕುಡಿಯಬಾರದು' ಇತ್ಯಾದಿ ವಾಕ್ಯಗಳನ್ನು ನೋಡಿದಾಗ ಆರೋಪಿತವಾದ ರೂಪ್ಯಜ್ಞಾನವಾಗಲೀ, ಆರೋಪಿತವಾದ ಸುರೆಯ ಜ್ಞಾನವಾಗಲೀ ಬರುವುದಿಲ್ಲವಷ್ಟೆ. ಆದ್ದರಿಂದ ಪ್ರಮಾಣಾಂತರ-ಪ್ರಾಪ್ತವಾದುದನ್ನು ಶ್ರುತಿಯು ಅನುವಾದ ಮಾಡುತ್ತಿದೆ ಎಂದಮಾತ್ರಕ್ಕೆ ಅನುವಾದ್ಯವಾದ ಜೀವಕರ್ತೃತ್ವವು ಆರೋಪಿತವೆಂದು ಹೇಳಬಾರದು. ಪ್ರತ್ಯಕ್ಷಪ್ರಾಪ್ತವಾದ ಜೀವಕರ್ತೃತ್ವವನ್ನು ಶ್ರುತಿಯು ಅನುವಾದ ಮಾಡಿ ಹೆಚ್ಚಿನ ವಿಷಯವನ್ನು ವಿಧಾನ ಮಾಡುತ್ತದೆ.

**कर्तृत्वस्य क्लेशसम्बन्धे चाशक्यविषयत्वं तन्त्रम् । लीलादिकरणेन क्लेशादृष्टेः । लीलादेरुत्सवादेर्विहितकर्मणश्चाकरणेनैव तद्दृष्टेश्च । ''यदा वै करोत्यथ निस्तिष्ठति । नाकृत्वा निस्तिष्ठति । कृत्वेव निस्तिष्ठति । नासुखं लब्ध्वा करोति । सुखमेव लब्ध्वा करोति'' इत्यादिश्रुतेश्च । ''नहि कश्चित्क्षणमपि जातु तिष्ठत्यकर्मकृत्'' इत्यादिस्मृतेश्च । अन्यथा सुखज्ञानयोरपि क्लेशाविनाभावादात्मा तद्रूपो न स्यात् । यथा च सुप्तौ क्लेशाभावेऽपि ज्ञानादि तथा कृतिरपीत्युक्तम्) ।**

ಹಿಂದೆ ಅದ್ವೈತಿಯು ಕರ್ತೃತ್ವವಿದ್ದರೆ ಕ್ಲೇಶವಾಗುತ್ತದೆ ಆದ್ದರಿಂದ ಅಪುರುಷಾರ್ಥವೆಂದು ಹೇಳಿದ್ದನು. ಅದೂ ಕೂಡ ಅಯುಕ್ತವಾಗಿದೆ. ಕರ್ತೃತ್ವಪ್ರಯುಕ್ತವಾಗಿ ಕ್ಲೇಶಸಂಬಂಧವು ಇರುವುದಲ್ಲ, ಅಶಕ್ಯವಿಷಯತ್ವಪ್ರಯುಕ್ತವಾಗಿ ಕ್ಲೇಶಸಂಬಂಧವಾಗುತ್ತದೆ. ಏಕೆಂದರೆ ಕೆಲವೊಮ್ಮೆ ಲೀಲೆಯಿಂದ ಕಾರ್ಯಗಳನ್ನು ಮಾಡುತ್ತೇವೆ. ಆಗ ಅಲ್ಲಿ ಕ್ಲೇಶವು ಉಂಟಾಗುವುದೇ ಇಲ್ಲ. ಕರ್ತೃತ್ವವೇ ಕ್ಲೇಶಕಾರಕವಾಗಿದ್ದಲ್ಲಿ ಲೀಲೆಯಿಂದ ಕಾರ್ಯ ಮಾಡುವಾಗಲೂ ಕ್ಲೇಶವು ಆಗಬೇಕಾಗಿತ್ತು. ಅಷ್ಟೇ ಅಲ್ಲದೇ, ಕೆಲವೊಮ್ಮೆ ಲೀಲೆ ಹಾಗೂ ಉತ್ಸವ ಇವುಗಳನ್ನು ಆಚರಣೆ ಮಾಡದಿದ್ದರೆ ಕ್ಲೇಶವಾಗುತ್ತದೆ. ಮತ್ತು ವಿಹಿತವಾದ ಕರ್ಮವನ್ನು ಮಾಡದಿದ್ದರೆ ಕ್ಲೇಶವಾಗುತ್ತದೆ ಹೊರತು, ಮಾಡಿದರೆ ಕ್ಲೇಶವಾಗುವುದಿಲ್ಲ.'ಯದಾ ವೈ ಕರೋತ್ಯಥ ನಿಸ್ತಿಷ್ಠತಿ । ನಾಕೃತ್ವಾ ನಿಸ್ತಿಷ್ಠತಿ । ಕೃತ್ವೇವ ನಿಸ್ತಿಷ್ಠತಿ । ನಾಸುಖಂ ಲಬ್ಧ್ವಾ ಕರೋತಿ । ಸುಖಮೇವ ಲಬ್ಧ್ವಾ ಕರೋತಿ' ಜೀವನು ಕರ್ಮವನ್ನು ಮಾಡಿದರೆ ಮಾತ್ರ ಸುಖವನ್ನು ಪಡೆಯುತ್ತಾನೆ. ಕರ್ಮವನ್ನು ಮಾಡದಿದ್ದರೆ ಸುಖ ಪಡೆಯಲಾರ. ಪರಮಾತ್ಮನು ಪೂರ್ಣಾನಂದರೂಪ- ನಾಗಿರುವುದರಿಂದಲೇ ಜಗತ್ಕರ್ತೃವಾಗಿದ್ದಾನೆ ಇತ್ಯಾದಿ ಶ್ರುತಿಯಿಂದಲೂ ಕೂಡ ಕರ್ತೃತ್ವವು ಕ್ಲೇಶಕಾರಕವಲ್ಲ ಎಂಬುದು ಸ್ಪಷ್ಟವಾಗುತ್ತದೆ.

ಮತ್ತು 'ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್' ಎಂಬ ಗೀತೆಯ ಮಾತಿನಂತೆ ಕರ್ತೃತ್ವವಿಲ್ಲದೇ ಕ್ಷಣಕಾಲವೂ ಕೂಡ ಯಾರೂ ಇರಲಾರರು ಎಂದು ತಿಳಿಯುತ್ತದೆ. ನಾವು ಹೇಳಿದ್ದನ್ನು ಒಪ್ಪದೇ ಕರ್ತೃತ್ವವು ಇದ್ದಮಾತ್ರಕ್ಕೆ ದುಃಖವಾಗುತ್ತದೆಂದು ಹೇಳುವುದಾದರೆ ಸುಖವಿದ್ದಲ್ಲೆಲ್ಲಾ ದುಃಖವಿರುತ್ತದೆ, ಜ್ಞಾನವಿದ್ದಲ್ಲೆಲ್ಲಾ ಅಜ್ಞಾನವಿರುತ್ತದೆ. ಆದ್ದರಿಂದ ಸುಖ ಹಾಗೂ ಜ್ಞಾನಗಳನ್ನೂ ಕೂಡ ಆತ್ಮನಲ್ಲಿ ಒಪ್ಪದೇ ಇರಬೇಕಾದೀತು. ಸುಖ ಮತ್ತು ಜ್ಞಾನಗಳು ಇದ್ದಲ್ಲೆಲ್ಲಾ ದುಃಖ ಹಾಗೂ ಅಜ್ಞಾನಗಳು ಇರಬೇಕಾಗಿಲ್ಲ. ಸುಷುಪ್ತಿಯಲ್ಲಿ ಸುಖ-ಜ್ಞಾನಗಳು ಇದ್ದರೂ ಕೂಡ ದುಃಖ-ಅಜ್ಞಾನಗಳು ಇರುವುದಿಲ್ಲವಲ್ಲವೇ? ಎಂದು ಪ್ರಶ್ನಿಸಿದರೆ ಕೃತಿ ಇದ್ದಲ್ಲೂ ಕೂಡ ದುಃಖ ಇರಲೇಬೇಕಾಗಿಲ್ಲ. ಲೀಲಾದಿಕೃತಿಗಳಲ್ಲಿ ದುಃಖವು ಕಾಣಸುತ್ತಿಲ್ಲವೆಂದು ನಾವೂ ಕೂಡ ಹೇಳುತ್ತೇವೆ.

ಕರ್ತೃತ್ವಾಧಿಕರಣ (೨-೩-೧೭)

**किञ्च "कर्ता" इति पूर्वाधिकरणे बुद्धेरेव कर्तृत्वमात्मनस्तु तदविवेकादारोपितमिति सांख्यमतनिषेधेनात्मनः कर्तृत्वं समर्थ्येह "यथा च तक्ष" इत्यधिकरणे पुनर्बुद्धिगतमेवारोप्यत इति सिद्धान्तोक्तौ पूर्वाधिकरणपूर्वपक्ष एवेह सिद्धान्तः स्यादिति महदिदं व्याख्यानकौशलम् ।**

'ಕರ್ತಾ ಶಾಸ್ತ್ರಾರ್ಥವತ್ತ್ವಾತ್' ಎಂಬ ಹಿಂದಿನ ಅಧಿಕರಣದಲ್ಲಿ ಬುದ್ಧಿಯೇ ಕರ್ತೃವಾಗಿದೆ. ಆತ್ಮನಿಗೆ ಅದರ ಅವಿವೇಕದಿಂದ ಆರೋಪಿತವಾದ ಕರ್ತೃತ್ವವಿದೆ ಎಂದು ಹೇಳುವ ಸಾಂಖ್ಯಮತವನ್ನು ಹಿಂದಿನ ಅಧಿಕರಣದಲ್ಲಿ ನೀವು ನಿರಾಕರಣೆ ಮಾಡಿದಿರಿ. ಮತ್ತು ಆತ್ಮನಿಗೆ ಕರ್ತೃತ್ವವಿದೆ ಎಂದು ಸಮರ್ಥನೆ ಮಾಡಿದಿರಿ. ಈಗ 'ಯಥಾ ಚ ತಕ್ಷೋಭಯಥಾ' ಎಂಬ ಈ ಅಧಿಕರಣದಲ್ಲಿ ಪುನಃ ಜೀವನಲ್ಲಿ ಕರ್ತೃತ್ವವಿದ್ದರೂ ಕೂಡ ಅದು ಸ್ವಾಭಾವಿಕವಲ್ಲ, ಔಪಾಧಿಕವೆಂದು ಹೇಳುತ್ತಿದ್ದೀರಿ. ಔಪಾಧಿಕ ಎಂಬ ಶಬ್ದಕ್ಕೆ ಬುದ್ಧಿಯಲ್ಲಿರುವ ಕರ್ತೃತ್ವವು ಆತ್ಮನಲ್ಲಿ ಆರೋಪಿತವಾಗಿದೆ ಎಂದು ಸಿದ್ಧಾಂತವನ್ನು ಮಾಡುತ್ತಿದ್ದೀರಿ. ಹಾಗಾದರೆ ಹಿಂದಿನ ಅಧಿಕರಣದ ಪೂರ್ವಪಕ್ಷವನ್ನೇ ಈ ಅಧಿಕರಣದಲ್ಲಿ ಸಿದ್ಧಾಂತ ಮಾಡಿದಿರಿ. ನಿಮ್ಮ ಈ ವ್ಯಾಖ್ಯಾನಕೌಶಲವು ಅದ್ಭುತವಾಗಿದೆ.

**सांख्याभिमताख्यातिनिरासस्त्विदं रूप्यमिति प्रसिद्धस्थले तन्निरासं विना न सिध्यतीति तत्रैव निरस्यम् । न त्विह ।**

ಬುದ್ಧಿಯಲ್ಲಿರುವ ಕರ್ತೃತ್ವವು ಆತ್ಮನಲ್ಲಿ ಆರೋಪಿತವಾಗಿದೆ ಎಂಬುದು ಇಬ್ಬರಿಗೂ ಸಮಾನ. ಆದರೆ ಸಾಂಖ್ಯನು ಬುದ್ಧಿಯ ಅವಿವೇಕದಿಂದ ಆರೋಪಿತವೆನ್ನುತ್ತಾನೆ. ಸಾಂಖ್ಯರು ಅಖ್ಯಾತಿಪಕ್ಷದವರು. ಪ್ರಕೃತಿಗೂ, ಪುರುಷನಿಗೂ ವಿವೇಕಜ್ಞಾನವಿಲ್ಲ ಎಂದು ಹೇಳುತ್ತಾನೆ. ಅಭೇದವನ್ನು ತಿಳಿದಿದ್ದೇವೆ ಎಂದು ಒಪ್ಪುವುದಿಲ್ಲ. ಸಾಂಖ್ಯರಿಗೆ ಅಭಿಮತವಾದ ಈ ಅಖ್ಯಾತಿವಾದವನ್ನು ನಿರಾಕರಣೆ ಮಾಡುವುದಕ್ಕಾಗಿ ಈ ಅಧಿಕರಣವು ಹೊರಟಿದೆ. ಅಖ್ಯಾತಿಮತದ ನಿರಾಸ ಮಾಡುವುದಷ್ಟೇ ಈ ಅಧಿಕರಣದ ಉದ್ದೇಶವಾದ್ದರಿಂದ ಇದು ಸಾರ್ಥಕವಾಗಿದೆ.

ಅದ್ವೈತಿಗಳ ಈ ಆಕ್ಷೇಪವು ತಪ್ಪು. ಅಖ್ಯಾತಿವಾದ ನಿರಾಕರಣೆ ಮಾಡುವುದೇ ಈ ಅಧಿಕರಣದ ಉದ್ದೇಶವಾಗಿದ್ದಲ್ಲಿ ಪ್ರಸಿದ್ಧವಾದ 'ಇದಂ ರೂಪ್ಯಂ' ಎಂಬ ದೃಷ್ಟಾಂತದಲ್ಲಿಯೇ ಅಖ್ಯಾತಿವಾದವನ್ನು ನಿರಾಕರಣೆ ಮಾಡಬೇಕಿತ್ತು. ಅದನ್ನು ಬಿಟ್ಟು 'ಅಹಂ ಕರ್ತಾ' ಎಂಬ ಉದಾಹರಣೆಯಲ್ಲಿ ಅಖ್ಯಾತಿವಾದವನ್ನು ನಿರಾಕರಣೆ ಮಾಡುವುದು ಅಸಂಗತವಾಗುತ್ತದೆ. ಏಕೆಂದರೆ ಅಖ್ಯಾತಿವಾದಿಗಳು 'ಇದಂ ರೂಪ್ಯಂ' ಎಂಬುದನ್ನೇ ದೃಷ್ಟಾಂತವನ್ನಾಗಿ ನೀಡಿದಾಗ ಆ ಉದಾಹರಣೆಯಲ್ಲಿಯೇ ನಿರಾಕರಣೆ ಮಾಡಬೇಕೇ ಹೊರತು ಜೀವಕರ್ತೃತ್ವ ದೃಷ್ಟಾಂತದಲ್ಲಿ ನಿರಾಕರಣೆ ಮಾಡುವುದು ತಪ್ಪು.

**किञ्च त्वन्मते जीवेऽणुत्वोत्क्रान्त्यादिकं यथा बुद्ध्युपाधिकं मिथ्या तथा कर्तृत्वमपि । एवं चोत्क्रान्त्यधिकरणेऽणुत्वादेः पूर्वपक्षत्वं "कर्त" इत्यधिकरणे तु कर्तृत्वस्य सिद्धान्तत्वमिति विभागः किं कृतः ।**

ಉತ್ಕ್ರಾಂತ್ಯಧಿಕರಣದಲ್ಲಿ ಒಂಭತ್ತು ಸೂತ್ರಗಳು ಪೂರ್ವಪಕ್ಷಪ್ರಾಪಕವಾಗಿವೆ. 'ತದ್ಗುಣಸಾರತ್ವಾತ್' ಎಂಬಲ್ಲಿಂದ ನಾಲ್ಕು ಸೂತ್ರಗಳು ಸಿದ್ಧಾಂತಸ್ಥಾಪಕವಾಗಿವೆ ಎಂದು ಹೇಳಿರುವಿರಿ. ಅಲ್ಲಿ ಅಣುತ್ವ,

ಉತ್ಕ್ರಾಂತಿ ಮೊದಲಾದವುಗಳನ್ನು ಪೂರ್ವಪಕ್ಷ ಮಾಡಿರುವಿರಿ. ಇಲ್ಲಿ ಕರ್ತೃತ್ವವನ್ನು ಸಿದ್ಧಾಂತ ಮಾಡಿರುವಿರಿ. ಉತ್ಕ್ರಾಂತಿ, ಅಣುತ್ವ ಹಾಗೂ ಕರ್ತೃತ್ವ ಈ ಮೂರಕ್ಕೂ ಏನೂ ವ್ಯತ್ಯಾಸವಿಲ್ಲ. ಉತ್ಕ್ರಾಂತಿಯಾಗಲೀ, ಅಣುತ್ವವಾಗಲೀ ಜೀವನಲ್ಲಿ ಇರುವುದೇ ಇಲ್ಲ, ಬುದ್ಧಿಯಲ್ಲಿಯೇ ಇರುತ್ತವೆ. ಅದರಂತೆ ಕರ್ತೃತ್ವವೂ ಕೂಡ ಬುದ್ಧಿಯಲ್ಲಿಯೇ ಇದೆ. ಹೀಗಿರುವಾಗ ಉತ್ಕ್ರಾಂತ್ಯಾದಿಗಳನ್ನು ಪ್ರತಿಪಾದನೆ ಮಾಡುವ ಸೂತ್ರಗಳು ಪೂರ್ವಪಕ್ಷಪ್ರಾಪಕವಾಗಿವೆ ಎಂದು ಹೇಳಿದ ಮೇಲೆ, ಕರ್ತೃತ್ವಪ್ರಾಪಕವಾದ ಸೂತ್ರವೂ ಕೂಡ ಪೂರ್ವಪಕ್ಷಪ್ರಾಪಕವೇ ಆಗಬೇಕು.

**यथोत्क्रान्त्यधिकरणे ''उत्क्रान्ति'' इत्यादिसूत्राष्टकेन पूर्वपक्षयित्वा ''तद्गुणसारत्वादित्यनेन सिद्धान्तितमेवं ''कर्ता'' इत्यधिकरणेऽपि सूत्रसप्तकेन पूर्वपक्षयित्वा ''यथा च तक्ष'' इत्यनेन सिद्धान्तितमिति कस्मान्न भाष्यते ।**

ಆದ್ದರಿಂದ ಉತ್ಕ್ರಾಂತ್ಯಧಿಕರಣದಲ್ಲಿ 'ಉತ್ಕ್ರಾಂತಿ' ಇತ್ಯಾದಿ ಸೂತ್ರಾಷ್ಟಕಗಳನ್ನು ಪೂರ್ವಪಕ್ಷ ಸೂತ್ರಗಳೆಂದು 'ತದ್ಗುಣಸಾರತ್ವಾತ್' ಇತ್ಯಾದಿ ನಾಲ್ಕು ಸೂತ್ರಗಳನ್ನು ಸಿದ್ಧಾಂತ ಸೂತ್ರಗಳೆಂದು ಹೇಗೆ ಹೇಳಿದ್ದೀರೋ ಅದರಂತೆ ಕರ್ತ್ರಾಧಿಕರಣದಲ್ಲೂ 'ಕರ್ತಾ' ಇತ್ಯಾದಿ ಏಳುಸೂತ್ರಗಳು ಪೂರ್ವಪಕ್ಷಸ್ಥಾಪಕವೆಂದೂ, 'ಯಥಾ ಚ ತಕ್ಷ' ಇತ್ಯಾದಿ ಸೂತ್ರಗಳನ್ನು ಸಿದ್ಧಾಂತಸೂತ್ರವೆಂದು ನೀವು ಏಕೆ ಹೇಳಬಾರದು?

**''परात्तु'' इत्यधिकरणमप्ययुक्तम् । जीवेऽन्तःकरणसन्निधानादारोपितस्याविद्यककर्तृत्वस्य रूप्यादेरिवेश्वरानपेक्षत्वात् ।**

'ಪರಾತ್ತುತತ್‌ಶ್ರುತೇಃ' ಎಂಬುದನ್ನು ಅದ್ವೈತಿಯು ಅಧಿಕರಣಾಂತರವೆಂದು ಹೇಳಿದ್ದಾನೆ. ಈ ಅಧಿಕರಣದಲ್ಲಿ ಅದ್ವೈತಿಯು ಜೀವಕರ್ತೃತ್ವವು ಈಶ್ವರಾಧೀನವಾಗಿದೆ ಎಂದು ಸಾಧನೆ ಮಾಡಿದ್ದಾನೆ. ಇದು ಸರಿಯಲ್ಲ. ಜೀವನಲ್ಲಿ ಸ್ವಾಭಾವಿಕವಾಗಿ ಕರ್ತೃತ್ವವಿಲ್ಲ. ಅಂತಃಕರಣದ ಸನ್ನಿಧಾನದಿಂದ ಆರೋಪಿತವಾದ ಅಥವಾ ಆವಿದ್ಯಕವಾದ ಕರ್ತೃತ್ವವಿದೆ ಎಂದು ಸಿದ್ಧಾಂತ ಮಾಡಿದ್ದರಿಂದ, ಇಂತಹ ಕರ್ತೃತ್ವವು ಈಶ್ವರನನ್ನು ಅಪೇಕ್ಷೆ ಪಡುವುದೇ ಇಲ್ಲ. ಯಾವ ರೀತಿಯಾಗಿ ಕಲ್ಪಿತವಾದ ಶುಕ್ತಿರೂಪ್ಯವು ಈಶ್ವರಾಧೀನವೆಂದು ಹೇಳುವುದರಲ್ಲಿ ಅರ್ಥವೇ ಇಲ್ಲವೋ ಅದರಂತೆ ಕಲ್ಪಿತವಾದ ಕರ್ತೃತ್ವವೂ ಕೂಡ ಈಶ್ವರಾಧೀನವೆಂದು ಹೇಳುವ ಅವಶ್ಯಕತೆ ಇಲ್ಲ.

**यच्चोक्तं ''कृतप्रयत्नापेक्ष'' इत्यस्य जीवकृतो यः प्रयत्नो धर्माधर्मलक्षणस्तदपेक्ष ईश्वर इत्यर्थ इति । तन्न । कृतशब्देनैव धर्माधर्मरूपकर्मोक्तिसम्भवेन प्रयत्नशब्दवैयर्थ्यात् । धर्मादेरप्रयत्नरूपत्वाच्च । ''पूर्वकर्मप्रयत्नं च'' इत्यादि भाष्योदाहृतस्मृतिविरोधाच्चेति ।**

'ಕೃತಪ್ರಯತ್ನಾಪೇಕ್ಷಸ್ತು' ಎಂಬ ಸೂತ್ರಕ್ಕೆ ಅದ್ವೈತಿಗಳು ಹೀಗೆ ವ್ಯಾಖ್ಯಾನ ಮಾಡಿದ್ದಾರೆ. ಜೀವಕೃತವಾದ ಧರ್ಮಾಧರ್ಮರೂಪವಾದ ಯಾವ ಪ್ರಯತ್ನವಿದೆಯೋ ಅದನ್ನು ಅಪೇಕ್ಷಿಸಿ ಈಶ್ವರನು ಫಲವನ್ನು ಕೊಡುತ್ತಾನೆ ಹೊರತು ವಿನಾಕಾರಣ ಫಲವನ್ನು ಕೊಡುವುದಿಲ್ಲ ಎಂದು. ಇದು ತಪ್ಪು.

ಕೃತಶಬ್ದವೇ ಸಾಕು ಪ್ರಯತ್ನ ಪದ ವ್ಯರ್ಥವಾಗುತ್ತದೆ. ಏಕೆಂದರೆ ಕೃತಶಬ್ದವು ಪ್ರಯತ್ನ ಎಂಬರ್ಥದಲ್ಲಿ ಪ್ರಯುಕ್ತವಾಗುತ್ತದೆ. ಮತ್ತು ಧರ್ಮಾಧರ್ಮವನ್ನು ಪ್ರಯತ್ನವೆಂದು ಯಾರೂ ಕೂಡ ಹೇಳುವುದಿಲ್ಲ. ಧರ್ಮವೆಂಬ ಗುಣವೇ ಬೇರೆ, ಪ್ರಯತ್ನವೆಂಬ ಗುಣವೇ ಬೇರೆ. ಇವೆರಡನ್ನು ಒಂದೇ ಎಂದು ಹೇಳುವುದು ಅಯುಕ್ತವಾಗಿದೆ. ಪ್ರಯತ್ನದಿಂದ ಜನ್ಯವಾದುದು ಅತೀಂದ್ರಿಯವಾದ ಧರ್ಮಾಧರ್ಮಗಳು. ಇವೆರಡನ್ನೂ ಕೂಡ ಒಂದೇ ಎಂದು ಹೇಳಬಾರದು. ಮತ್ತು 'ಪೂರ್ವಕರ್ಮಪ್ರಯತ್ನಂ ಚ' ಇತ್ಯಾದಿಯಾಗಿ ಶ್ರೀಮದಾಚಾರ್ಯರು ಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿಯಂತೆ ಪ್ರಯತ್ನವೇ ಬೇರೆ ಕರ್ಮವೇ ಬೇರೆ ಎಂದು ತಿಳಿಯುತ್ತದೆ. ಆದ್ದರಿಂದ ಈ ಸ್ಮೃತಿವಿರೋಧವೂ ಕೂಡ ಬರುತ್ತದೆ.

**प्रकाशः —**

सूत्रार्थानप्यनूद्य निराह – **यच्चोक्तमुभाभ्यामिति** ।। यद्यप्यत्र सूत्राणां क्रमसंख्ये अस्मन्मते परमतेऽप्यविशिष्टे । मतान्तरे तु नैवम् । ''विहारोपदेशात् । उपादानात्'' इत्यनयोरुपादानाद्विहारोपदेशाच्चेत्येकयोगत्वक्रमव्यत्यासयोरुपगमात् । तथापि सूत्राणामर्थस्य मतद्वयेऽप्यनतिभेदेनोभाभ्यामित्युक्तम् ।

ಸೂತ್ರಗಳ ಅರ್ಥವನ್ನು ಅನುವಾದ ಮಾಡಿ ನಿರಾಕರಣೆ ಮಾಡಲು 'ಯಚ್ಚೋಕ್ತಂ ಉಭಾಭ್ಯಾಂ' ಇತ್ಯಾದಿ ಗ್ರಂಥವು ಹೊರಟಿದೆ. ವಾಸ್ತವಿಕವಾಗಿ ಸೂತ್ರಗಳಲ್ಲಿ ಹಾಗೂ ಸೂತ್ರಗಳ ಕ್ರಮಸಂಖ್ಯೆಯಲ್ಲಿ ನಮಗೂ ಅದ್ವೈತಿಗಳಿಗೂ ಏನೂ ವ್ಯತ್ಯಾಸವಿಲ್ಲ. ಆದರೆ ರಾಮಾನುಜಮತದಲ್ಲಿ ಹಾಗಲ್ಲ. 'ವಿಹಾರೋಪದೇಶಾತ್' ಮತ್ತು 'ಉಪಾದಾನಾತ್' ಎರಡೂ ಸೂತ್ರಗಳನ್ನು ಸೇರಿಸಿ ಒಂದೇ ಸೂತ್ರವೆಂದು ರಾಮಾನುಜರು ಹೇಳುತ್ತಾರೆ. ಮತ್ತು ಕ್ರಮವ್ಯತ್ಯಾಸ ಮಾಡಿದ್ದಾರೆ. ಹೀಗೆ ಕ್ರಮದಲ್ಲಿ ಹಾಗೂ ಸಂಖ್ಯೆಯಲ್ಲಿ ಅದ್ವೈತಿಗಳಿಗೂ ವಿಶಿಷ್ಟಾದ್ವೈತಿಗಳಿಗೂ ವ್ಯತ್ಯಾಸವಿರುವಾಗ ಗ್ರಂಥಕಾರರು 'ಯಚ್ಚೋಕ್ತಂ ಉಭಾಭ್ಯಾಂ' ಎಂದು ಇಬ್ಬರನ್ನೂ ಒಟ್ಟಿಗೆ ಹೇಗೆ ಸಂಗ್ರಹ ಮಾಡಿದರು?

ಹೌದು, ಆದರೆ ಕ್ರಮ ಹಾಗೂ ಸಂಖ್ಯೆಗಳಲ್ಲಿ ವ್ಯತ್ಯಾಸವಿದ್ದರೂ ಕೂಡ ಅರ್ಥದಲ್ಲಿ ಯಾವುದೇ ವ್ಯತ್ಯಾಸವಿಲ್ಲ. ಸ್ವಲ್ಪ ವ್ಯತ್ಯಾಸವಿದ್ದರೂ ಕೂಡ ಹೆಚ್ಚಿನ ವ್ಯತ್ಯಾಸವಿಲ್ಲದ ಕಾರಣ 'ಉಭಾಭ್ಯಾಂ' ಎಂದು ಇಬ್ಬರನ್ನೂ ಕೂಡ ಸಂಗ್ರಹಿಸಿದ್ದಾರೆ.

**प्रकाशः** – ''द्रष्टा श्रोता मन्ता बोद्धा कर्ता विज्ञानात्मा पुरुष इत्यादेः'' इत्येतत्परभाष्योक्तम् । ''यजेत'' इत्यादि तु भाष्यद्वयेऽप्युक्तम् । ''शास्त्रफलं प्रयोक्तरि तल्लक्षणत्वात्'' इति जैमिनिसूत्रोक्तदिशा फलभोक्तुरेव कर्तृत्वाद्भोक्तुर्जीवस्याकर्तृत्वे ''यजेत स्वर्गकामः'' इत्यादिशास्त्रमनर्थकं भवेदिति भावः । अर्थवत्त्वादित्यादिहेतूनां जीवः कर्तेति साध्येनान्वयः ।।

'ದೃಷ್ಟಾ ಶ್ರೋತಾ ಮಂತಾ ಬೋದ್ಧಾ ಕರ್ತಾ ವಿಜ್ಞಾನಾತ್ಮಾ ಪುರುಷಃ' ಇತ್ಯಾದಿ ವಾಕ್ಯಗಳನ್ನು ಶಂಕರಭಾಷ್ಯದಲ್ಲಿ ಉಲ್ಲೇಖಿಸಲಾಗಿದೆ. 'ಯಜೇತ' ಎಂಬುದು ಭಾಷ್ಯದ್ವಯಗಳಲ್ಲೂ ಕೂಡ ಉಕ್ತವಾಗಿದೆ.

'ಶಾಸ್ತ್ರಫಲಂ ಪ್ರಯೋಕ್ತರಿ ತಲ್ಲಕ್ಷಣತ್ವಾತ್' ಎಂದು ಜೈಮಿನೀಸೂತ್ರದಲ್ಲಿ ಹೇಳಿದ್ದರಿಂದ ಯಾರು ಕರ್ತೃವೋ ಅವನೇ ಫಲಭೋಕ್ತೃವಾಗುತ್ತಾನೆ ಎಂದು ತಿಳಿಯುತ್ತದೆ. ಫಲಭೋಗವನ್ನು ಮಾಡುವವನು ಜೀವನಾದ ಮೇಲೆ ಕರ್ತೃವೂ ಕೂಡ ಜೀವನೇ ಆಗಬೇಕು. ಒಂದುವೇಳೆ ಜೀವನಿಗೆ ಕರ್ತೃತ್ವವು ಇಲ್ಲವಾದಲ್ಲಿ 'ಯಜೇತ ಸ್ವರ್ಗಕಾಮಃ' ಇತ್ಯಾದಿ ಶಾಸ್ತ್ರಗಳೆಲ್ಲವೂ ವ್ಯರ್ಥವಾಗಬೇಕಾದೀತು. ಅರ್ಥವತ್ತ್ವಾತ್ ಎಂಬ ಹೇತುವಿಗೆ 'ಜೀವಃ ಕರ್ತಾ' ಎಂಬ ಸಾಧ್ಯದ ಜೊತೆ ಅನ್ವಯವನ್ನು ತಿಳಿಯಬೇಕು.

**प्रकाशः – विहारेति ।।** विहारस्संचारक्रिया । तत्र स्वातन्त्र्यं नाकर्तुस्सम्भवतीति कर्तृत्वसिद्धिरिति भावः ।। **प्राणानिति ।।** प्राणानिन्द्रियाणि गृहीत्वा यथाकामं स्वे स्वे शरीरे परिवर्तत इतीन्द्रियोपादाने स्वातन्त्र्यप्रतीतेस्तस्य चाकर्तुरयोगात्कर्तृत्वसिद्धिरिति भावः ।

ವಿಹಾರ ಎಂದರೆ ಸಂಚಾರಕ್ರಿಯೇ ಎಂದರ್ಥ. ಕರ್ತೃ ಅಲ್ಲದವನಿಗೆ ಸ್ವಾತಂತ್ರ್ಯವೇ ಕೂಡುವುದಿಲ್ಲ. ದೇಹದಲ್ಲಿ ಯಥೇಚ್ಛವಾಗಿ ಅವನು ಸಂಚಾರ ಮಾಡುತ್ತಾನೆಂದರೆ ಜೀವನಿಗೆ ಕರ್ತೃತ್ವವು ಸಿದ್ಧವಾಗುತ್ತದೆಂದು ತಿಳಿಯಬೇಕು. ಜೀವನು ಇಂದ್ರಿಯಗಳನ್ನು ಸ್ವೀಕರಿಸಿ ಯಥೇಚ್ಛವಾಗಿ ತನ್ನ ಪ್ರತಿಯೊಂದು ಶರೀರಗಳಲ್ಲಿ ವಿಹಾರ ಮಾಡುತ್ತಾನೆ ಎಂಬುದಾಗಿ ಇಂದ್ರಿಯಗಳನ್ನು ಸ್ವೀಕರಿಸಿ ಜೀವನು ಸಂಚಾರ ಮಾಡುವುದರಿಂದ ಸ್ವಾತಂತ್ರ್ಯವು ಪ್ರತೀತವಾಗುತ್ತದೆ. ಒಂದುವೇಳೆ ಜೀವನಿಗೆ ಕರ್ತೃತ್ವವೇ ಇಲ್ಲವಾದಲ್ಲಿ ಈ ಸಂಚಾರವು ಅಯುಕ್ತವಾಗುತ್ತದೆ. ಆದ್ದರಿಂದ ಜೀವನಿಗೆ ಕರ್ತೃತ್ವವು ಸಿದ್ಧವಾಯಿತು ಎಂದಭಿಪ್ರಾಯ.

**प्रकाशः –** ''व्यपदेशाच्च क्रियायां न चेन्निर्देशविपर्ययः'' इत्येतदर्थमाह – **विज्ञानमिति ।।** न चेदित्यादिसूत्रशेषार्थमाह – **अत्र चेति ।।** ''विज्ञानं यज्ञम्'' इति श्रुतावित्यर्थः ।।

'ವ್ಯಪದೇಶಾಚ್ಚ ಕ್ರಿಯಾಯಾಂ ನ ಚೇನ್ನಿರ್ದೇಶವಿಪರ್ಯಯಃ' ಎಂಬ ಸೂತ್ರದ ಅರ್ಥವನ್ನು 'ವಿಜ್ಞಾನಂ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. 'ನ ಚೇತ್' ಇತ್ಯಾದಿ ಸೂತ್ರದ ಶೇಷಾರ್ಥವನ್ನು 'ಅತ್ರ ಚ' ಎಂಬುದರಿಂದ ಸಮರ್ಥಿಸಿದ್ದಾರೆ. ವಿಜ್ಞಾನಂ ಯಜ್ಞಮ್' ಎಂಬ ಶ್ರುತಿಯಲ್ಲಿ ಎಂಬುದು ಇದರರ್ಥ.

**प्रकाशः – सूत्रचतुष्टयेति ।।** स्वपरमतानुरोधेनेदम् । मतान्तरे तु सूत्रत्रयार्थ इति योज्यम् ।। **इत्यादेरिवेति ।।** अन्यथा तदर्थमपि सूत्रान्तरं स्यात् । वाक्यभेदेन सूत्रभेदे शास्त्रापर्यवसानं च स्यादिति भावः ।।

ಗ್ರಂಥದಲ್ಲಿ ಸೂತ್ರಚತುಷ್ಟಯವೆಂದು ಪರಿಗಣಿಸಿದ್ದು ನಮ್ಮ ಸಿದ್ಧಾಂತ ಹಾಗೂ ಅದ್ವೈತಮತದ ಪ್ರಕಾರ ಮಾತ್ರ. ರಾಮಾನುಜರ ಮತ ಪ್ರಕಾರ ಅಲ್ಲ. ಅವರು ಈ ಅಧಿಕರಣದಲ್ಲಿ ಕೇವಲ ಮೂರೇ ಸೂತ್ರಗಳಿವೆ ಎಂದು ಹೇಳುತ್ತಾರೆ. 'ಇತ್ಯಾದೇರಿವ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. 'ಯತ್ಕರ್ಮ ಕುರುತೇ' ಇತ್ಯಾದಿ ವಿಷಯ ವಾಕ್ಯಕ್ಕಾಗಿ ಪುನಃ ಮತ್ತೊಂದು ಸೂತ್ರವನ್ನು ಉಲ್ಲೇಖ ಮಾಡಬೇಕಾಗಿತ್ತು ಎಂಬುದು ಇದರ ಅರ್ಥ. ವಾಕ್ಯಭೇದದಿಂದ ಸೂತ್ರಭೇದವನ್ನು ಒಪ್ಪಿದರೆ ಸೂತ್ರಕ್ಕೆ ಅಪರ್ಯವಸಾನದೋಷವು ಬರಬೇಕಾಗುತ್ತದೆ ಎಂಬುದು ಆಕ್ಷೇಪದ ಅಭಿಪ್ರಾಯ.

ಕರ್ತೃತ್ವಾಧಿಕರಣ (೨-೩-೧೭)

**प्रकाशः – सूत्रत्रयवैयर्थ्यादिति ।।** एतच्चोपलक्षणम् । विहारादिसूत्रयोः ''प्राणान् गृहीत्वा स्वे शरीर'' इत्यादिवाक्यविषयत्वे श्रुत्यनुरोधेनोपादानाद्विहारोपदेशादित्येव रामानुजमतवत्सूत्रणं स्यादिति परमते दोषः । मतान्तरे तु एवं सूत्रक्रमैकयोगत्वे असांप्रदायिके । उपादानेन विहारोपदेशादिति सूत्रणं स्यादिति दोष इत्यपि ध्येयम्।।

'ಸೂತ್ರತ್ರಯವೈಯರ್ಥ್ಯಾತ್' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಉಪಲಕ್ಷಣಯಾ ಇದನ್ನು ವಿವಕ್ಷಿಸಬೇಕು. 'ವಿಹಾರೋಪದೇಶಾತ್' ಹಾಗೂ 'ಉಪಾದಾನಾತ್' ಎಂಬೆರಡು ಸೂತ್ರಗಳಿಗೆ 'ಪ್ರಾಣಾನ್ ಗೃಹೀತ್ವಾ ಸ್ವೇ ಶರೀರೇ' ಎಂಬ ಶ್ರುತಿಯು ವಿಷಯವಾಕ್ಯವಾಗುವುದಾದರೆ 'ಉಪಾದಾನಾತ್ ವಿಹಾರೋಪದೇಶಾತ್' ಎಂದು ರಾಮಾನುಜರಂತೆ ನೀವೂ ಕೂಡ ಸೂತ್ರವಿನ್ಯಾಸ ಮಾಡಬೇಕಾಗುತ್ತದೆ. ಅದ್ವೈತಿಗಳಿಗೆ ಈ ದೋಷ ಬರುತ್ತದೆ. ರಾಮಾನುಜರಿಗೆ ಬರುವ ದೋಷವೇ ಬೇರೆ. ರಾಮಾನುಜರು 'ಉಪಾದಾನಾತ್ ವಿಹಾರೋಪದೇಶಾಚ್ಚ' ಎಂಬುದಾಗಿ ಸೂತ್ರವನ್ನು ವಿನ್ಯಾಸ ಮಾಡಿದ್ದಾರೆ. ಇದು ಅಸಾಂಪ್ರದಾಯಕವಾಗಿದೆ. ಏಕೆಂದರೆ ಇವರ ಪ್ರಕಾರ ಜೀವನು ಇಂದ್ರಿಯಗಳಿಂದ ವಿಹಾರ ಮಾಡುತ್ತಾನೆ ಎಂಬರ್ಥವನ್ನು ವಿವಕ್ಷಿಸುವುದಾದಲ್ಲಿ 'ಉಪಾದಾನೇನ ವಿಹಾರೋಪದೇಶಾತ್' ಎಂದು ಸೂತ್ರವಿನ್ಯಾಸವಿರಬೇಕಿತ್ತು.

**प्रकाशः – परैरिति ।।** मतान्तरे तु जीवस्याकर्तृत्वे दोषोक्तिपरमिदं सूत्रम् । जीवस्य विभुत्व उपलब्धिनियमो न स्यादित्युपलब्ध्यनियमः ''नित्योपलब्धि'' इति सूत्रे प्रागुक्तः । तथा चोपलब्धिवदात्मनोऽकर्तृत्वे प्रकृतेश्च कर्तृत्वे तस्यास्सर्वसाधारणत्वात् सर्वकर्माणि सर्वेषां भोगाय स्युरित्यनियमस्स्यादित्यर्थोक्तेरिति भावः ।।

ಗ್ರಂಥದಲ್ಲಿ 'ಪರೈಃ' ಎಂಬುದಾಗಿ ಅದ್ವೈತಿಗಳಿಗೆ ದೋಷವನ್ನು ಹೇಳಿದ್ದಾರೆ. ರಾಮಾನುಜರಿಗೆ ಬರುವ ದೋಷ ಹೀಗಿದೆ– ರಾಮಾನುಜರು ಜೀವನು ಕರ್ತೃವಾಗದಿದ್ದರೆ ದೋಷವನ್ನು ಹೇಳಲು 'ಉಪಲಬ್ಧಿವದನಿಯಮಃ' ಎಂಬ ಸೂತ್ರವು ಹೊರಟದೆ ಎಂದು ವ್ಯಾಖ್ಯಾನ ಮಾಡುತ್ತಾರೆ. ಆತ್ಮನು ವಿಭುವೆಂದು ಹೇಳಿದರೆ ಸತ್ಕರ್ಮ-ದುಷ್ಕರ್ಮಗಳ ಫಲವು ಯಾರಿಗೂ ಸಿಗದೇ ಇರಬೇಕಾದೀತು. ಈ ವಿಷಯವನ್ನು ನಿತ್ಯೋಪಲಬ್ಧಿ ಎಂಬ ಸೂತ್ರದಿಂದ ಹೇಳಿದ್ದಾಗಿದೆ. ರಾಮಾನುಜರು ಮಾಡುವ ವ್ಯಾಖ್ಯಾನ ಹೀಗಿದೆ – ಆತ್ಮನು ವಿಭುವಾದಲ್ಲಿ ಕರ್ತೃ ಆಗಲಾರ. ಆತ್ಮನು ಕರ್ತೃವಲ್ಲ ಎಂದು ಹೇಳಿದರೆ ಪ್ರಕೃತಿಯು ಕರ್ತೃವಾಗುತ್ತದೆ. ಆ ಪ್ರಕೃತಿಯು ಪ್ರತಿಯೊಬ್ಬರಿಗೂ ಸಾಧಾರಣವಾಗಿರುವುದರಿಂದ ಪ್ರಕೃತಿ ಮಾಡಿದ ಸತ್ಕರ್ಮ ಹಾಗೂ ದುಷ್ಕರ್ಮಗಳ ಫಲವು ಸರ್ವಸಾಧಾರಣವಾಯಿತು. ಆದ್ದರಿಂದ ಎಲ್ಲರಿಗೂ ಫಲ ಸಿಗಬೇಕು, ಇಲ್ಲದಿದ್ದರೆ ಯಾರಿಗೂ ಫಲ ಸಿಗಬಾರದು. ಹೀಗೆ ಅನಿಯಮ ದೋಷವು ಬರುತ್ತದೆ ಎಂಬುದಾಗಿ ಅವರು ವ್ಯಾಖ್ಯಾನವನ್ನು ಮಾಡುತ್ತಾರೆ. ಆದರೆ ಇದನ್ನು 'ನಿತ್ಯೋಪಲಬ್ಧಿ' ಎಂಬ ಸೂತ್ರದಲ್ಲಿಯೇ ಹೇಳಿದ್ದಾಗಿದೆ. ಆದ್ದರಿಂದ ಇವರಿಗೆ ಪುನರುಕ್ತಿದೋಷವು ಬರುತ್ತದೆಂದು ತಿಳಿಯಬೇಕು.

**प्रकाशः – इत्यादीति ।।** ''दुःखी न स्यादिति शङ्काऽऽदिपदार्थः । इष्टानिष्टोपलब्धिवद्देशकालादिवशादनियमेन हिताहितकारित्वोपपत्तिरिति सूत्रार्थः ।

शङ्काया एवानुदयेन तन्निरासाय सूत्रणं व्यर्थमिति भावेन किं कर्तृत्वमात्रेस्वतन्त्र कर्तृत्वे वेयमाशङ्केति विकल्पौ क्रमेण निराह – **क्रियेति** ।। मतान्तरे तु अनियमस्स्यादिति प्रसङ्गरूपत्वाध्याहारयोः कल्पनादिति दोषो ध्येयः ।।

ನಿಯಮೇನ ಸುಖವುಳ್ಳವನೇ ಆಗಬೇಕಾದೀತು ಎಂದು ಗ್ರಂಥದಲ್ಲಿ ಹೇಳಿದ್ದಾರೆ. ದುಃಖಿಯು ಆಗದೇ ಇರಬೇಕಾದೀತು ಎಂಬುದನ್ನು ಆದಿ ಪದದಿಂದ ವಿವಕ್ಷಿಸಬೇಕು.

'ಉಪಲಬ್ಧಿವದನಿಯಮಃ' ಎಂಬ ಸೂತ್ರಕ್ಕೆ ಅದ್ವೈತಿಗಳು ಮಾಡುವ ವ್ಯಾಖ್ಯಾನ ಹೀಗಿದೆ – ಆತ್ಮನು ತಾನು ಬಯಸದೇ ಇದ್ದರೂ ಜ್ಞಾನವನ್ನು ಹೊಂದುತ್ತಾನೆ. ಬಯಸಿದರೂ ಕೆಲವೊಮ್ಮೆ ಜ್ಞಾನವನ್ನು ಹೊಂದುವುದಿಲ್ಲ. ಈ ದೃಷ್ಟಾಂತದಂತೆ ಕೆಲವೊಮ್ಮೆ ಮಾಡಬಾರದ್ದನ್ನು ಮಾಡಿ ದುಃಖಕ್ಕೆ ಭಾಗಿಯಾಗುತ್ತಾನೆ. ಕೆಲವೊಮ್ಮೆ ಅಪೇಕ್ಷೆ ಪಡದಿದ್ದರೂ ಸುಖಕ್ಕೆ ಭಾಗಿಯಾಗುತ್ತಾನೆ. ಹೀಗೆ ಹೇಳಿದ ಮಾತ್ರಕ್ಕೆ ಅವನಿಗೆ ಕ್ರಿಯಾಸ್ವಾತಂತ್ರ್ಯವೇ ಇಲ್ಲವೆನ್ನಬಾರದು. ಏಕೆಂದರೆ ಕೆಲವೊಮ್ಮೆ ತನಗೆ ಅನಿಷ್ಟಸಾಧನವಾದ ಕೆಲಸಗಳನ್ನು ಇಷ್ಟಸಾಧನವೆಂದು ಭ್ರಮಿಸಿ ಹಾಗೆ ಮಾಡುತ್ತಾನೆ. ಆದ್ದರಿಂದ ದುಃಖಕ್ಕೆ ಭಾಗಿಯಾಗುತ್ತಾನಾದ್ದರಿಂದ ದೋಷವಿಲ್ಲ ಎಂದು ವ್ಯಾಖ್ಯಾನ ಮಾಡುತ್ತಾರೆ.

ಈ ಶಂಕೆಯೇ ಇಲ್ಲಿ ಹುಟ್ಟಲು ಸಾಧ್ಯವಿಲ್ಲವಾದ್ದರಿಂದ ಅದರ ನಿರಾಸಕ್ಕಾಗಿ ಸೂತ್ರವು ಹೊರಟಿರುವುದು ವ್ಯರ್ಥವಾಗುತ್ತದೆ. ಈ ಅಭಿಪ್ರಾಯದಿಂದ ಜೀವನು ಕರ್ತೃತ್ವ ಮಾತ್ರ ಉಳ್ಳವನೋ ಅಥವಾ ಸ್ವತಂತ್ರ ಕರ್ತೃತ್ವ ಉಳ್ಳವನೋ ಎಂದು ಆಶಂಕಿಸಿ ಈ ವಿಕಲ್ಪವನ್ನು ಕ್ರಮವಾಗಿ ಕ್ರಿಯಾ ಇತ್ಯಾದಿಯಾಗಿ ನಿರಾಕರಣೆ ಮಾಡುತ್ತಿದ್ದಾರೆ.

ರಾಮಾನುಜ ಮತದಲ್ಲಿ 'ಅನಿಯಮಃ ಸ್ಯಾತ್' ಎಂಬಲ್ಲಿ ಪ್ರಸಂಗರೂಪತ್ವ ಹಾಗೂ ಅಧ್ಯಾಹಾರವನ್ನು ಕಲ್ಪನೆ ಮಾಡಬೇಕೆಂಬ ದೋಷವು ಬರುತ್ತದೆ.

**प्रकाशः – यच्चेति** ।। परैरित्यस्ति । मतान्तरे तु आत्मनोऽकर्तृत्वे भोक्तृत्वशक्तेर्विपर्ययो हानिस्स्यात् । कर्तुरेव भोक्तृत्वादित्यर्थवर्णनात् ।। **मनस इति**।। यदत्रोक्तं भामत्यां ''करणान्तरकल्पनायां नाम्नि विवाद'' इति तन्न । बुद्धेर्जीवान्यत्वेन जीवकर्तृत्वाप्राप्तेः । ननु च बुद्धिर्मनोवृत्तिविशेष एवेति चेन्न । ''मनसस्तु परा बुद्धिः'' इत्यादौ मनो बुद्धिपुरुषाणां तत्वान्तरत्वप्रतीतेः । अत एव ''तत्वान्तर'' इत्युक्तम् । मतान्तरेतु भोक्तृत्वहानिरित्येव सूत्रणं स्यादिति दोष प्रसङ्गरूपत्वकल्पनादोषश्चध्येयः ।

ಅದ್ವೈತಿಗಳು ಹೇಳಿದ್ದನ್ನು 'ಯಚ್ಚ' ಇತ್ಯಾದಿಯಾಗಿ ಅನುವಾದ ಮಾಡುತ್ತಿದ್ದಾರೆ. ವಿಪರ್ಯಯ ಶಬ್ದಕ್ಕೆ ಹಾನಿ ಎಂಬರ್ಥವನ್ನು ಮಾಡಿದ್ದಾರೆ. ಶಕ್ತಿ ಶಬ್ದಕ್ಕೆ ಭೋಕ್ತೃತ್ವ ಎಂದರ್ಥ. ಭೋಕ್ತೃತ್ವಶಕ್ತಿಯ ನಾಶವು ಬರಬೇಕಾದೀತು ಎಂಬರ್ಥವನ್ನು ಶಕ್ತಿವಿಪರ್ಯಾತ್ ಎಂಬ ಸೂತ್ರಕ್ಕೆ ಅದ್ವೈತಿಗಳು ಮಾಡಿದ್ದಾರೆ. ಆತ್ಮನಿಗೆ ಕರ್ತೃತ್ವವು ಇಲ್ಲದಿದ್ದರೆ ಭೋಕ್ತೃತ್ವ ಶಕ್ತಿಯೂ ಕೂಡ ಇಲ್ಲದಿರಬೇಕಾದೀತು. ಆದ್ದರಿಂದ ಆತ್ಮನು ಕರ್ತೃವಾಗಿದ್ದಾನೆ ಎಂಬುದಾಗಿ ವ್ಯಾಖ್ಯಾನ ಮಾಡಿದ್ದಾರೆ. ಭಾಮತಿಯಲ್ಲಿ ಹೀಗೆ ಹೇಳಲಾಗಿದೆ – ಬುದ್ಧಿಗಿಂತ

ಅತಿರಿಕ್ತವಾದ ಮನಸ್ಸಿದೆ, ಇದು ಕರಣವಾಗಿದೆ ಎಂದು ಒಪ್ಪಿದರೆ ಕೇವಲ ನಾಮದಲ್ಲಿ ವಿವಾದ ಎಂದು ಹೇಳಿದಂತಾಯಿತು. ಬುದ್ಧಿಯು ಕರಣವಾಗುತ್ತದೆ, ಜೀವನು ಕರ್ತೃವಾಗಿದ್ದಾನೆ ಎಂಬುದೇ ಪ್ರಮಿತವಾಗಿದೆ. ಇದನ್ನು ವ್ಯತ್ಯಾಸ ಮಾಡಬಾರದು. ಆದ್ದರಿಂದ ಬುದ್ಧಿಗೆ ಕರ್ತೃತ್ವಶಕ್ತಿಯನ್ನು, ಜೀವನಿಗೆ ಕರಣತ್ವಶಕ್ತಿಯನ್ನು ಹೇಳಬಾರದು. ಬುದ್ಧಿಗೆ ಕರ್ತೃತ್ವಶಕ್ತಿಯನ್ನು, ಜೀವನಿಗೆ ಕರಣತ್ವಶಕ್ತಿಯನ್ನೇ ಹೇಳಬೇಕು ಎಂಬುದಾಗಿ ಸಮರ್ಥನೆ ಮಾಡಲಾಗಿದೆ.

ಇದು ತಪ್ಪು. ಬುದ್ಧಿಗಿಂತ ಭಿನ್ನವಾದ ಜೀವನಿಗೆ ಕರ್ತೃತ್ವವನ್ನು ಇದರಿಂದ ಹೇಳಿದಂತಾಗುವುದಿಲ್ಲ. ಮನಸ್ಸಿನ ವೃತ್ತಿವಿಶೇಷವೇ ಬುದ್ಧಿ ಎನ್ನುತ್ತೇವೆ ಎನ್ನುವುದೂ ಕೂಡ ತಪ್ಪು. ಏಕೆಂದರೆ 'ಮನಸಸ್ತು ಪರಾ ಬುದ್ಧಿಃ' ಎಂಬಲ್ಲಿ ಮನಸ್ಸು, ಬುದ್ಧಿ, ಪುರುಷ ಎಲ್ಲವೂ ಕೂಡ ಬೇರೆ ಬೇರೆ ತತ್ತ್ವಗಳೆಂದು ಹೇಳಲಾಗಿದೆ. ಆದ್ದರಿಂದ ಬುದ್ಧಿಯೇ ಮನೋವೃತ್ತಿ ವಿಶೇಷವೆಂದು ಹೇಳುವುದು ಹೇಗೆ ಸರಿ. ಆದ್ದರಿಂದಲೇ 'ತತ್ತ್ವಾಂತರಃ' ಎಂದು ಗ್ರಂಥದಲ್ಲಿ ಹೇಳಲಾಗಿದೆ. ರಾಮಾನುಜ ಮತದಲ್ಲಿ ವಿಪರ್ಯಯ ಶಬ್ದಕ್ಕೆ ಹಾನಿ ಎಂಬರ್ಥವನ್ನು ಹೇಳಿದರೆ 'ಭೋಕ್ತೃತ್ವ ಹಾನಿಃ' ಎಂದೇ ಸೂತ್ರವನ್ನು ಹೇಳಬೇಕಿತ್ತು. 'ಶಕ್ತಿವಿಪರ್ಯಾತ್' ಎಂದು ಹೇಳುವುದು ತಪ್ಪಾಗುತ್ತದೆ. ಮತ್ತು 'ಪ್ರಸಂಗಾತ್' ಎಂಬುದನ್ನು ಅಧ್ಯಾಹಾರ ಮಾಡಿಕೊಂಡಿದ್ದಾರೆ. ಇದನ್ನು ಕಲ್ಪನೆ ಮಾಡುವುದೂ ಕೂಡ ಅಯುಕ್ತವಾಗಿದೆ. ಈ ಎರಡು ದೋಷಗಳು ರಾಮಾನುಜರಿಗೆ ಪ್ರಾಪ್ತವಾಗುತ್ತವೆ.

**ಪ್ರಕಾಶಃ** – समाध्यभावाच्चेति सूत्रं सूत्रार्थं निराह – **यच्चोक्तमिति** ।। **परैरित्यन्वेति** । मतान्तरे तु बुद्धेः कर्तृत्व उपासनाविधावपि तस्या एव कर्तृत्वापत्तेस्समाधेश्च प्रकृतेरन्योऽस्मीत्येवंरूपत्वात्तादृशसमाधेः प्रकृतावभावात्तदन्यो जीवः कर्तेत्यर्थः ।

'ಸಮಾಧ್ಯಭಾವಾಚ್ಚ' ಎಂಬ ಸೂತ್ರಾರ್ಥವನ್ನು 'ಯಚ್ಚೋಕ್ತಂ' ಎಂಬುದರಿಂದ ನಿರಾಕರಣೆ ಮಾಡುತ್ತಿದ್ದಾರೆ. 'ಯಚ್ಚೋಕ್ತಂ' ಎಂಬುದಕ್ಕೆ 'ಪರೈಃ' ಎಂಬಲ್ಲಿ ಅನ್ವಯವನ್ನು ತಿಳಿಯಬೇಕು. ರಾಮಾನುಜ ಮತದಲ್ಲಿ ಬುದ್ಧ್ಯಾತ್ಮಕವಾದ ಪ್ರಕೃತಿಯು ಕರ್ತೃ ಎಂದು ಹೇಳಿದರೆ ಉಪಾಸನಾವಿಧಿಯಲ್ಲಿ ಆ ಪ್ರಕೃತಿಗೇ ಕರ್ತೃತ್ವವು ಪ್ರಾಪ್ತವಾಗುತ್ತದೆ. 'ಪ್ರಕೃತೇರನ್ಯೋಽಸ್ಮಿ' ಎಂಬುದೇ ಧ್ಯಾನರೂಪವಾಗಿರುವುದರಿಂದ ಸಮಾಧಿಯಲ್ಲಿ ಇಂತಹ ಧ್ಯಾನವನ್ನು ಪ್ರಕೃತಿಯೇ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಧ್ಯಾನವೇ ಇಲ್ಲದೇ ಇರಬೇಕಾದ ಪ್ರಸಂಗ ಬರುತ್ತದೆ ಎಂದು ಗ್ರಂಥದಲ್ಲಿ ಆಕ್ಷೇಪ ಮಾಡಿದ್ದಾರೆ. ಹಾಗಾಗಿ ಬುದ್ಧಿಗಿಂತ ಅನ್ಯವಾದ ಜೀವನಿಗೆ ಕರ್ತೃತ್ವವನ್ನು ಒಪ್ಪಬೇಕು.

**ಪ್ರಕಾಶಃ** – अवैयर्थ्यमाशङ्क्य निराह – **यदि चेति** ।। **अयोग इति** ।। बुद्ध्यविवेककृतकर्तृत्वस्य मुक्तिहेतुसमाधावनुपयोगादिति भावः ।। **आरोपितेति** ।। तथा च मन्मत इव स्वाभाविकमेव कर्तृत्वमुपेयमिति भावः ।

ಮೊದಲನೇ ಸೂತ್ರದಿಂದಲೇ ಈ ಪ್ರಮೇಯವು ಸಿದ್ಧವಾಗುತ್ತದೆ. ಆದ್ದರಿಂದ ಮುಂದಿನ ಸೂತ್ರಗಳು ಗ್ರಂಥದಲ್ಲಿ ವ್ಯರ್ಥವೆಂದು ಹೇಳಿದರು. ಅದಕ್ಕೆ ಅದ್ವೈತಿಗಳು ಅವೈಯರ್ಥ್ಯವನ್ನು ಆಶಂಕಿಸುತ್ತಿದ್ದಾರೆ. ಅದನ್ನು 'ಯದಿ ಚೇತ್' ಇತ್ಯಾದಿ ಗ್ರಂಥದಿಂದ ಅನುವಾದ ಮಾಡಿ ನಿರಾಕರಣೆ ಮಾಡುತ್ತಿದ್ದಾರೆ. 'ಅಯೋಗಃ' ಎಂಬುದರ ಅಭಿಪ್ರಾಯ ಹೀಗಿದೆ – ಮೋಕ್ಷಸಾಧನವಾದ ಧ್ಯಾನವು ಅವಿವೇಕಕೃತ ಎಂದು ಹೇಳುವುದು

ಅಯುಕ್ತ. ಬುದ್ಧಿಯ ಅವಿವೇಕದಿಂದ ಕರ್ತೃತ್ವವು ಜೀವನಲ್ಲಿ ಆರೋಪಿತವಾಗಿದೆ. ವಾಸ್ತವಿಕವಾಗಿ ಬುದ್ಧ್ಯಾತ್ಮಕವಾದ ಪ್ರಕೃತಿಗಿಂತ ನಾನು ಭಿನ್ನನಾಗಿದ್ದೇನೆ ಎಂಬ ಧ್ಯಾನವು ಮುಕ್ತಿಗೆ ಅನುಪಯುಕ್ತವಾಗಿದೆ. ಆದ್ದರಿಂದ ನಾವು ಹೇಳುವಂತೆ ಸ್ವಾಭಾವಿಕವಾದ ಕರ್ತೃತ್ವವನ್ನು ಜೀವನಲ್ಲಿ ಒಪ್ಪಿದರೆ ಯಾವುದೇ ಬಾಧಕವು ಬರುವುದಿಲ್ಲ.

**प्रकाशः** – मतान्तरे तु पूर्वत्र जीवस्याकर्तृत्वे दोष उक्तः । इह तु बुद्धेः कर्तृत्व इत्यस्य सूत्रस्योपलब्धिसूत्रानन्तर्यं स्यादिति दोषो ध्येयः ।

ರಾಮಾನುಜ ಮತದಲ್ಲಿ ಎರಡು ರೀತಿಯಲ್ಲಿ ಹೇಳುತ್ತಿದ್ದಾರೆ. ಜೀವನಿಗೆ ಕರ್ತೃತ್ವ ಒಪ್ಪದೇ ಇದ್ದರೆ ದೋಷ ಬರುತ್ತದೆ ಎಂಬುದು ಒಂದು. ಬುದ್ಧಿಗೆ ಕರ್ತೃತ್ವ ಒಪ್ಪಿದರೆ ದೋಷ ಬರುತ್ತದೆಂಬುದು ಇನ್ನೊಂದು ದೋಷ. ಸಮಾಧ್ಯಭಾವಾಚ್ಚ' ಎಂಬ ಸೂತ್ರದಲ್ಲಿ ಬುದ್ಧಿಗೆ ಕರ್ತೃತ್ವವನ್ನು ಒಪ್ಪಿದರೆ ದೋಷವನ್ನು ಹೇಳಲಾಗಿದೆ. ಹೀಗೆ ಹೇಳಿದರೆ ಈ ಸೂತ್ರವು 'ಉಪಲಬ್ಧಿವದನಿಯಮಃ' ಎಂಬ ಸೂತ್ರದ ಅನಂತರ ಇರಬೇಕಾಗಿತ್ತು. ಏಕೆಂದರೆ 'ಉಪಲಬ್ಧಿವದನಿಯಮಃ' ಎಂಬ ಸೂತ್ರದಲ್ಲಿ ಬುದ್ಧಿಗೆ ಕರ್ತೃತ್ವವನ್ನು ಒಪ್ಪಿದರೆ ದೋಷವನ್ನು ಹೇಳಲಾಗಿದೆ. ಈ ಸೂತ್ರದಲ್ಲೂ ಅದನ್ನೇ ಹೇಳುತ್ತಿರುವುದರಿಂದ ಅಲ್ಲಿಯೇ ಇದನ್ನು ವಿವಕ್ಷಿಸಬೇಕಿತ್ತು. ಪ್ರಕೃತ ಜೀವನಿಗೆ ಕರ್ತೃತ್ವವನ್ನು ಹೇಳಿದರೆ ದೋಷವನ್ನು ಈ ಪ್ರಕರಣದಲ್ಲಿ ಹೇಳುತ್ತಿದ್ದಾರೆಂಬುದು ನಿಮ್ಮ ಪ್ರಕಾರ ಸಾಧುವಾಗುತ್ತದೆ.

**प्रकाशः** – सूत्रार्थं च निराह – **कल्पितत्व इति** ।। यथा लोके तक्षा वास्यादिकरणसम्पन्नः कर्ता भवति । स एव विमुक्तवास्यादिकरणो निर्व्यापारस्सुखी भवति । एवमात्मान्तःकरणादिसंयुक्तः कर्ता दुःखी भवति । मुक्तौ तद्वियुक्तः सुखी भवतीति न कर्तृत्वं स्वाभाविकम् । येन तस्यानिवृत्त्यापत्त्या मोक्षो न स्यादिति सूत्रार्थ उक्तः । स न युक्तः । यथा च स्फटिकलौहित्यमुभयथेत्येव सूत्रणापत्तेरित्यर्थः।

ಸೂತ್ರಾರ್ಥದ ನಿರಾಕರಣೆಗಾಗಿ 'ಕಲ್ಪಿತತ್ವೇ' ಇತ್ಯಾದಿ ವಾಕ್ಯಗಳು ಹೊರಟಿವೆ. ಲೋಕದಲ್ಲಿ ತಕ್ಷನು ಉಳಿ ಮೊದಲಾದ ಸಾಧನೆಗಳನ್ನು ಅಪೇಕ್ಷಿಸಿದಾಗ ಕರ್ತೃವಾಗುತ್ತಾನೆ. ಆದ್ದರಿಂದಲೇ ದುಃಖಿಯಾಗುತ್ತಾನೆ. ಯಾವಾಗ ಉಳಿ ಮೊದಲಾದ ಸಾಧನೆಗಳಿಲ್ಲದವನಾಗುತ್ತಾನೋ ಆಗ ನಿರ್ವ್ಯಾಪಾರನಾಗಿ ಸುಖಿಯಾಗುತ್ತಾನೆ. ಆದ್ದರಿಂದ ತಕ್ಷನ ಕರ್ತೃತ್ವವು ಸ್ವಾಭಾವಿಕವಲ್ಲವೆಂದು ತಿಳಿಯುತ್ತದೆ. ಅದರಂತೆ ಆತ್ಮನು ಅಂತಃ ಕರಣಾದಿಸಂಯುಕ್ತನಾದಾಗ ಕರ್ತೃವಾಗಿ ದುಃಖಿಯಾಗುತ್ತಾನೆ. ಇವುಗಳಿಂದ ರಹಿತನಾದಾಗ ಮೋಕ್ಷದಲ್ಲಿ ಸುಖಿಯಾಗುತ್ತಾನೆ. ಆದ್ದರಿಂದ ಜೀವನಲ್ಲಿರುವ ಕರ್ತೃತ್ವವು ಸ್ವಾಭಾವಿಕವಲ್ಲ. ಒಂದುವೇಳೆ ಇಂತಹ ಕರ್ತೃತ್ವಕ್ಕೆ ನಿವೃತ್ತಿ ಇಲ್ಲವೆಂದಾಗಿದ್ದಲ್ಲಿ ಮೋಕ್ಷವೂ ಕೂಡ ಇಲ್ಲವೆಂದು ಆಕ್ಷೇಪ ಮಾಡಬಹುದಿತ್ತು ಎಂಬುದಾಗಿ ಸೂತ್ರಾರ್ಥವನ್ನು ಹೇಳಿದ್ದಾರೆ. ಆದರೆ ಇದು ಅಯುಕ್ತ. ಒಂದುವೇಳೆ ಇದೇ ಅರ್ಥವು ವಿವಕ್ಷಿತವಾಗಿದ್ದಲ್ಲಿ 'ಯಥಾಚ ತತ್‌ಕ್ಷೋಭಯಥಾ' ಎಂದು ಸೂತ್ರವು ಇರಬಾರದಿತ್ತು. 'ಯಥಾ ಚ ಸ್ಫಟಿಕಲೋಹಿತ್ಯಂ ಉಭಯಥಾ' ಎಂಬುದಾಗಿ ಸೂತ್ರವು ಇರಬೇಕಾಗಿತ್ತು. ಏಕೆಂದರೆ ಕರ್ತೃತ್ವವು ಕಲ್ಪಿತವೆಂದು ಹೇಳಲು ತಕ್ಷನ ಉದಾಹರಣೆಯು ಅನುಪಯುಕ್ತ. ಸ್ಫಟಿಕದಲ್ಲಿ ಲೌಹಿತ್ಯವು ಕಲ್ಪಿತವಾಗಿದೆ ಅದರಂತೆ ಕರ್ತೃತ್ವವು ಆತ್ಮನಲ್ಲಿ ಕಲ್ಪಿತವಾಗಿದೆ ಎಂದು ಹೇಳುವುದು ಸಾಧುವಾಗುತ್ತದೆ.

ಕರ್ತೃತ್ವಾಧಿಕರಣ (೨-೩-೧೭)

**प्रकाशः** – कर्तृत्वश्रुतेरित्यादिपञ्चम्यन्तानां न मनसः कर्तृकोटितेत्यनेनान्वयः। स्वातन्त्र्यनिषेधपरत्वे ज्ञापकमाह – **तत्रैवं सतीति** ।। केवलात्मानं परमात्मानधीनमात्मानमित्यर्थः । तद्वाक्यात् गीतावाक्यादित्यर्थः ।

'ಕರ್ತೃತ್ವ ಶ್ರುತೇಃ' ಇತ್ಯಾದಿ ಪಂಚಮ್ಯಂತ ಪದಗಳಿಗೆ 'ನ ಮನಸಃ ಕರ್ತೃಕೋಟಿತಾ' ಎಂಬುದರ ಜೊತೆ ಅನ್ವಯವನ್ನು ತಿಳಿಯಬೇಕು. ಸ್ವಾತಂತ್ರ್ಯನಿಷೇಧ ಪರವೆನ್ನಲು ಜ್ಞಾಪಕವನ್ನು 'ತತ್ರೈವಂ ಸತಿ' ಎಂಬುದರಿಂದ ತಿಳಿಸುತ್ತಿದ್ದಾರೆ. ಕೇವಲ 'ಆತ್ಮಾನಂ' ಎಂದರೆ ಪರಮಾತ್ಮನ ಅಧೀನವಲ್ಲದ ಆತ್ಮರು ಎಂದರ್ಥ. 'ತದ್ವಾಕ್ಯಾತ್' ಎಂದರೆ ಗೀತಾವಾಕ್ಯದಿಂದ ಎಂದರ್ಥ.

**प्रकाशः** – परभाष्योक्तश्रुतिरपि न कर्तृत्वस्यास्वाभाविकत्वे मानमित्याह – **ध्यायतीवेति** ।। ननु भ्रम एव नास्तीति सांख्यमतं निरसितुमात्मनि बुद्धिगतकर्तृत्वारोपोऽत्र साध्यत इत्यत आह – **सांख्येति** ।।

ಪರಭಾಷ್ಯದಲ್ಲಿ ಹೇಳಲ್ಪಟ್ಟ ಶ್ರುತಿಯೂ ಕೂಡ ಕರ್ತೃತ್ವವು ಅಸ್ವಾಭಾವಿಕವೆನ್ನಲು ಪ್ರಮಾಣವಾಗುವುದಿಲ್ಲ ಎಂಬುದನ್ನು 'ಧ್ಯಾಯತೀ ವಾ' ಎಂಬುದರಿಂದ ಸಮರ್ಥನೆ ಮಾಡುತ್ತಿದ್ದಾರೆ. ಭ್ರಮವೇ ಇಲ್ಲ ಎಂಬ ಸಾಂಖ್ಯ ಮತದ ನಿರಾಕರಣೆಗಾಗಿ ಆತ್ಮನಲ್ಲಿ ಬುದ್ಧಿಗತಕರ್ತೃತ್ವವು ಆರೋಪಿತವಾಗಿದೆ ಎಂಬುದನ್ನು ಈ ಅಧಿಕರಣವು ಸಾಧನೆ ಮಾಡುತ್ತಿದೆ. ಆದ್ದರಿಂದ ಈ ವ್ಯತ್ಯಾಸವಿದೆಯಲ್ಲವೇ? ಎಂಬ ಪ್ರಶ್ನೆಗೆ ಸಾಂಖ್ಯ ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – **तत्रैवेति** ।। इदं रूप्यमित्यादिस्थल एव । न त्वध्यात्मनिष्ठकर्तृत्वादिविषय इत्यर्थः । तत् औपाधिकमपि कर्तृत्वम् । परादेव । ''एष ह्येव साधुकर्म कारयति'' इति श्रुतेरिति परोक्तं प्रमेयं निराह – **जीव इति** ।।

'ತತ್ರೈವ' ಎಂದರೆ 'ಇದಂ ರೂಪ್ಯಂ' ಎಂಬ ಸ್ಥಳದಲ್ಲಿಯೇ ಎಂದರ್ಥ. 'ಇದಂ ರೂಪ್ಯಂ' ಎಂಬ ಸ್ಥಳವನ್ನೇ ದೃಷ್ಟಾಂತವನ್ನಾಗಿ ಕೊಡಲು ಬರುವಾಗ ಅಧ್ಯಾತ್ಮನಿಷ್ಠವಾದ ಕರ್ತೃತ್ವವಿಷಯಕವಾದ ದೃಷ್ಟಾಂತವನ್ನು ನೀಡುವುದು ಅನುಪಯುಕ್ತ ಎಂದರ್ಥ. 'ತತ್' ಎಂದರೆ ಔಪಾಧಿಕವಾದ ಕರ್ತೃ ಎಂದರ್ಥ. ಪರಾದೇವ ಎಂದರೆ 'ಏಷ ಹ್ಯೇವ ಸಾಧು ಕರ್ಮ ಕಾರಯತಿ' ಎಂಬ ಶ್ರುತಿಯಿಂದ ಎಂದರ್ಥ. ಪರರು ಹೇಳಿದ ಪ್ರಮೇಯವನ್ನು 'ಜೀವಃ' ಇತ್ಯಾದಿ ವಾಕ್ಯದಿಂದ ನಿರಾಕರಣೆ ಮಾಡುತ್ತಿದ್ದಾರೆ.

## तात्पर्यचन्द्रिका

**केचित्तु ईश्वरो जीवस्य चिच्छक्तिं प्रवृत्तिशक्तिं करणकलेवरादिसहकारिजातं च दत्वा प्रथमप्रवृत्तावुदास्ते । जीवस्तु स्वयमेव प्रवर्तते ।**

ರಾಮಾನುಜರ ಅಧಿಕರಣಶರೀರ ಹೀಗಿದೆ – ಈಶ್ವರನು ಜೀವನಿಗೆ ಚಿಚ್ಛಕ್ತಿಯನ್ನು ಹಾಗೂ ಪ್ರವೃತ್ತಿಶಕ್ತಿಯನ್ನು ಕೊಟ್ಟಿದ್ದಾನೆ. ಹಾಗೂ ಇಂದ್ರಿಯಗಳನ್ನು ದೇಹ ಮೊದಲಾದ ಸಹಕಾರಿ

ಸಾಮಗ್ರಿಗಳನ್ನು ನೀಡಿರುತ್ತಾನೆ. ಆದರೆ ಪ್ರಥಮ ಪ್ರವೃತ್ತಿಯಲ್ಲಿ ಅವನು ಉದಾಸೀನನಾಗಿದ್ದಾನೆ. ಮೊದಲು ಜೀವನೇ ಸ್ವಾಭಾವಿಕವಾಗಿ ಪ್ರವೃತ್ತಿಯನ್ನು ಮಾಡುತ್ತಾನೆ.

**तथा हि । विषयविशेषसन्निधिस्तावद्भोगादृष्टात् । तत्रेच्छादिश्च वासनाविशेषात्। वासनोन्मेषश्च तत्तद्देहारम्भकादृष्टाजन्मकाल एव सिद्ध इति नेशापेक्षा ।**

ಪ್ರಥಮ ಪ್ರವೃತ್ತಿಯಲ್ಲಿ ಈಶ್ವರನ ಅಪೇಕ್ಷೆ ಬರುವುದಿಲ್ಲವೆಂಬುದನ್ನು ಹೀಗೆ ತಿಳಿಯಬೇಕು– ವಿಷಯವಿಶೇಷದ ಸನ್ನಿಧಾನವು ಭೋಗದ ಅದೃಷ್ಟದಿಂದಷ್ಟೇ ಆಗುತ್ತದೆ. ಎದುರಿಗೆ ಹಣ್ಣು ಬಂದಾಗ ಅದನ್ನು ತಿನ್ನುವ ಇಚ್ಛೆಯು ಉಂಟಾಯಿತು. ಹಿಂದೆ ತಿಂದಿರುವ ಹಣ್ಣಿನ ಸಾದೃಶ್ಯದಿಂದ ಈ ಹಣ್ಣಿನಲ್ಲೂ ಇಷ್ಟಸಾಧನತಾ ಜ್ಞಾನವು ಉಂಟಾಯಿತು. ಹೀಗೆ ಇಚ್ಛಾದಿಗಳು ವಾಸನೆಯ ಉದ್ಬೋಧದಿಂದಾಗಿ ಉಂಟಾಗುತ್ತವೆ. ವಾಸನಾದ ಉದ್ಬೋಧಕ್ಕೂ ಕೂಡ ಈಶ್ವರನ ಅಪೇಕ್ಷೆಯು ಇರುವುದಿಲ್ಲ. ಏಕೆಂದರೆ ಹುಟ್ಟಿದಾರಭ್ಯದಿಂದಲೇ ಈಶ್ವರನ ಅಪೇಕ್ಷೆ ಇಲ್ಲದೇ ವಾಸನ ಉದ್ಬೋಧವಾಗುವುದು ಕಂಡಿದೆ. ಸ್ತನ್ಯಪಾನದಲ್ಲಿ ಪ್ರವೃತ್ತಿ ಮಾಡಬೇಕಾದರೆ ವಾಸನಾದ್ಬೋಧವೇ ಕಾರಣವಾಗಿದೆ. ಈ ವಾಸನೋದ್ಬೋಧಕ್ಕೆ ಅದೃಷ್ಟವೇ ಕಾರಣವಾಗಿದೆ. ದೇಹಾರಂಭಕಾದೃಷ್ಟ ಮೊದಲಾದವು ಜನ್ಮಕಾಲದಿಂದಲೇ ಸಿದ್ಧವಾಗಿದೆ. ಆದ್ದರಿಂದ ಈಶ್ವರನ ಅಪೇಕ್ಷೆಯು ಯಾವ ಹಂತದಲ್ಲೂ ಕೂಡ ಆವಶ್ಯಕವಾಗಿರುವುದಿಲ್ಲ.

**एवं च प्रथमेच्छाप्रयत्नयोरभग्नस्वातन्त्र्यस्य जीवस्य विध्यादिविषयत्वं, पुण्यपापादिकर्तृत्वं, तत्फलभोक्तृत्वं च युक्तम् । द्वितीयेच्छादावीश्वरोऽनुमन्ता । प्रवृत्तप्रवर्तको ह्यनुमन्ता । तदा हेत्वन्तरा सन्निधापितमपि विषयं बुद्धौ सन्निधापयति ।**

ಆದ್ದರಿಂದ ಪ್ರಥಮ ಇಚ್ಛಾದಲ್ಲಿ ಹಾಗೂ ಪ್ರಥಮ ಪ್ರಯತ್ನದಲ್ಲಿ ಅವನ ಸ್ವಾತಂತ್ರ್ಯಕ್ಕೆ ಭಂಗವೇ ಬರುವುದಿಲ್ಲ. ಇಂತಹ ಜೀವನು ವಿಧಿ ಹಾಗೂ ನಿಷೇಧಗಳಿಗೆ ವಿಷಯನಾಗುತ್ತಾನೆ. ಮತ್ತು ಪುಣ್ಯಪಾಪಾದಿ ಕರ್ತೃತ್ವ, ತತ್ಫಲಭೋಕ್ತೃತ್ವ ಇವೆಲ್ಲವೂ ಕೂಡ ಜೀವನಿಗೆ ಯುಕ್ತವಾಗುತ್ತವೆ.

ದ್ವಿತೀಯಾದಿ ಇಚ್ಛಾದಿಗಳಲ್ಲಿ ಈಶ್ವರನು ಅನುಮತಿ ನೀಡುವವನಾಗಿದ್ದಾನೆ. ಮೊದಲೇ ಪ್ರವೃತ್ತಿ ಮಾಡಿದ ಜೀವನಿಗೆ ಮುಂದಿನ ಪ್ರವೃತ್ತಿಯನ್ನು ಮಾಡಿಸುವವನೇ ಅನುಮಂತಾ ಎಂದು ಕರೆಸಿಕೊಳ್ಳುತ್ತಾನೆ. ಆ ಸಂದರ್ಭದಲ್ಲಿ ಬೇರೆ ಯಾವುದೇ ಹೇತುಗಳಿಂದ ಸನ್ನಿಧಿಯನ್ನು ಹೊಂದದ ವಿಷಯವನ್ನು ಭಗವಂತನು ಬುದ್ಧಿಯಲ್ಲಿ ತಂದುಕೊಡುತ್ತಾನೆ.

**अयमेव चौदासीन्यावस्थातोऽनुमन्तृत्वावस्थाया विशेषः । सा चानुमतिः प्रथमप्रवृत्तिफलप्रदानरूपेति नेश्वरस्य नैर्घृण्यादि ।**

ಮೇಲೆ ಹೇಳಿದಂತೆ ಔದಾಸೀನ್ಯಾವಸ್ಥೆಗೂ ಅನುಮಂತ್ರತ್ವಾದ್ಯವಸ್ಥೆಗಳಿಗೂ ಇರುವ ವ್ಯತ್ಯಾಸವನ್ನು ತಿಳಿಯಬೇಕು. ಪರಮಾತ್ಮನು ನೀಡುವ ದ್ವಿತೀಯಾದಿ ಪ್ರವೃತ್ತಿಯಲ್ಲಿ ಅನುಮತಿಯು ಪ್ರಥಮ ಪ್ರವೃತ್ತಿಯ ಫಲರೂಪವಾಗಿದೆ. ಆದ್ದರಿಂದ ಈಶ್ವರನಿಗೆ ನೈರ್ಘೃಣ್ಯಾದಿ ದೋಷಗಳು ಬರುವುದಿಲ್ಲ.

ಕರ್ತೃತ್ವಾಧಿಕರಣ (೨-೩-೧೭)

**एवं विशेषोपकारं प्रथमत एव केषुचिदीश्वरः करोतीति तत्र प्रयोजकोऽपि भवति । अप्रवृत्तप्रवर्तको हि प्रयोजकः । "एष ह्येव साधुकर्म कारयति" इत्यादिश्रुतिस्तु द्वितीयादिप्रवृत्तावनुमन्तृत्वादिविषया । अन्यथा हि विधिनिषेधशास्त्रानर्थक्यं स्यात् ।**

ಈಶ್ವರನು ಇದೇ ರೀತಿಯಾಗಿ ಕೆಲವರಿಗೆ ವಿಶೇಷ ಉಪಕಾರವನ್ನು ಮೊದಲೇ ಮಾಡುತ್ತಾನೆ. ಮೊದಲು ಪ್ರವೃತ್ತರಾದ ಕೆಲವು ವ್ಯಕ್ತಿಗಳಿಗೆ ಎರಡನೆಯ ಪ್ರವೃತ್ತಿಯಲ್ಲಿ ಈಶ್ವರನು ಪ್ರಯೋಜಕನೂ ಕೂಡ ಆಗುತ್ತಾನೆ. ಕೆಲವರು ದ್ವಿತೀಯಾದಿ ಪ್ರವೃತ್ತಿಯಲ್ಲಿ ಅಪ್ರವೃತ್ತರಾದಾಗ ಅದಕ್ಕೆ ಈಶ್ವರನು ಪ್ರವರ್ತಕನಾಗುತ್ತಾನೆ. ಇದನ್ನೇ ಪ್ರಯೋಜಕವೆಂದು ಕರೆಯುತ್ತೇವೆ. 'ಏಷ ಹ್ಯೇವ ಸಾಧು ಕರ್ಮ ಕಾರಯತಿ' ಇತ್ಯಾದಿ ಶ್ರುತಿಯಾದರೂ ದ್ವಿತೀಯಾದಿ ಪ್ರವೃತ್ತಿಯಲ್ಲಿ ಅನುಮಂತೃ ಆಗಿದ್ದಾನೆ ಎಂದಷ್ಟೇ ಹೇಳುತ್ತಿದೆ. ಪ್ರಥಮ ಪ್ರವೃತ್ತಿಯಲ್ಲಿ ಪ್ರವರ್ತಕನಾಗಿದ್ದಾನೆ ಎಂದು ಹೇಳುತ್ತಿಲ್ಲ. ಹೀಗೊಪ್ಪದಿದ್ದರೆ ವಿಧಿ ನಿಷೇಧ ಶಾಸ್ತ್ರಗಳೆಲ್ಲವೂ ವ್ಯರ್ಥವಾಗುತ್ತವೆ. ಆದ್ದರಿಂದ ಜೀವರೇ ಸ್ವತಃ ಪ್ರವೃತ್ತಿ ಮಾಡುತ್ತಾರೆ. ಈಶ್ವರನು ಕೇವಲ ಅನುಮಂತೃ ಆಗಿದ್ದಾನೆ ಎಂದು ಹೇಳಿದಾಗ ವಿಧಿನಿಷೇಧ ಶಾಸ್ತ್ರಗಳು ಸಾರ್ಥಕವಾಗುತ್ತವೆ.

**तदुक्तं "आदावीश्वरदत्तयैव पुरुषः स्वातन्त्र्यशक्त्या स्वयं तत्तज्ज्ञानचिकीर्षण-प्रयतनान्युत्पादयन् वर्तते । तत्रोपेक्ष्य ततोऽनुमत्य विदधत्तन्निग्रहानुग्रहौ तत्तत्कर्मफलं प्रयच्छति ततः सर्वस्य पुंसो हरिः" इतीति ।**

ಇದನ್ನೇ ರಾಮಾನುಜರು ಹೀಗೆ ಹೇಳಿದ್ದಾರೆ –

ಆದಾವೀಶ್ವರದತ್ತಯೈವ ಪುರುಷಃ ಸ್ವಾತಂತ್ರ್ಯಶಕ್ತ್ಯಾ ಸ್ವಯಂ
ತತ್ತಜ್ಞಾನಚಿಕೀರ್ಷಣಪ್ರಯತನಾನ್ಯುತ್ಪಾದಯನ್ ವರ್ತತೇ ।
ತತ್ರೋಪೇಕ್ಷ್ಯ ತತೋಽನುಮತ್ಯ ವಿದಧತ್ತನ್ನಿಗ್ರಹಾನುಗ್ರಹೌ
ತತ್ತತ್ಕರ್ಮಫಲಂ ಪ್ರಯಚ್ಛತಿ ತತಃ ಸರ್ವಸ್ಯ ಪುಂಸೋ ಹರಿಃ ॥

ಈಶ್ವರನಿಂದಲೇ ಕೊಡಲ್ಪಟ್ಟ ಸ್ವಾತಂತ್ರ್ಯಶಕ್ತಿಯಿಂದ ಪುರುಷನು ತನ್ನ ಜ್ಞಾನ, ಇಚ್ಛೆ, ಪ್ರಯತ್ನಗಳ ಶಕ್ತಿಯಿಂದ ಪ್ರವೃತ್ತಿ ಮಾಡುತ್ತಾನೆ. ಆಗ ಈಶ್ವರನು ಪ್ರವರ್ತಕನಾಗಲಿ, ಅನುಮಂತ್ರನಾಗಲೀ ಆಗದೇ ಉದಾಸೀನನಾಗಿರುತ್ತಾನೆ. ಪುರುಷನು ದ್ವಿತೀಯಾದಿ ಪ್ರವೃತ್ತಿಯನ್ನು ಮಾಡುವಾಗ ಈಶ್ವರನು ಅನುಮಂತೃವಾಗುತ್ತಾನೆ. ಅದಕ್ಕನುಗುಣವಾಗಿ ಪ್ರತಿಯೊಬ್ಬ ಜೀವರ ನಿಗ್ರಹ ಮತ್ತು ಅನುಗ್ರಹಗಳನ್ನು ಮಾಡುವವನಾಗಿ ಆಯಾ ಜೀವಿಗಳಿಗೆ ಕರ್ಮಫಲಗಳನ್ನು ನೀಡುತ್ತಾನೆ. ಹೀಗೆ ಸಕಲ ಪುರುಷರಿಗೂ ಶ್ರೀಹರಿಯು ಸಮಾನನಾದ್ದರಿಂದ ವೈಷಮ್ಯನೈರ್ಘೃಣ್ಯದೋಷವು ಬರುವುದಿಲ್ಲ.

**अत्र ब्रूमः । "एष ह्येव" इत्यादिश्रुतिसङ्कोचेनेश्वरस्याद्य प्रवृत्तावौदासीन्यकल्पनं न तावत् "तेषां सततयुक्तानां भजतां प्रीतिपूर्वकम् । ददामि बुद्धियोगं तम् ।**

**तानहं द्विषतः क्रूरान् संसारेषु नराधमान् । क्षिपाम्'' इत्यादिवचनाविरोधाय । अत्र साधनानुसारि फलदानस्यैवोक्तयाऽऽद्यप्रवृत्तावौदासीन्यानुक्तेः ।**

ರಾಮಾನುಜರ ಈ ವಾದವು ಅಯುಕ್ತವಾಗಿದೆ. 'ಏಷ ಹ್ಯೇವ ಸಾಧುಕರ್ಮ ಕಾರಯತಿ' ಎಂಬ ಶ್ರುತಿಯು ಪರಮಾತ್ಮನು ಪ್ರತಿಯೊಂದು ಹಂತದಲ್ಲಿಯೂ ಪ್ರೇರಕನಾಗಿದ್ದಾನೆಂದು ಹೇಳುತ್ತಿದೆ. ಹೀಗಿರುವಾಗ ನೀವು ಈ ಶ್ರುತಿಗೆ ಪ್ರಥಮಪ್ರವೃತ್ತಿಯಲ್ಲಿ ಈಶ್ವರನು ಪ್ರೇರಕನಲ್ಲ ಎಂಬುದಾಗಿ ಅರ್ಥಸಂಕೋಚವನ್ನು ಮಾಡುತ್ತಿದ್ದೀರಿ. ಪ್ರಥಮ ಪ್ರವೃತ್ತಿಯಲ್ಲಿ ಈಶ್ವರನು ಉದಾಸೀನನಾಗಿದ್ದಾನೆಂಬ ಅರ್ಥವನ್ನು ಇದಕ್ಕೆ ಕಲ್ಪನೆ ಮಾಡಲು ಏನು ಕಾರಣ?

ಗೀತಾವಾಕ್ಯ ವಿರೋಧ ಬರುವುದರಿಂದ ಹೀಗೆ ಅರ್ಥಸಂಕೋಚವನ್ನು ಮಾಡುತ್ತೇವೆಂದು ಹೇಳುತ್ತೇವೆಂದು ರಾಮಾನುಜರು ಉತ್ತರಿಸಬಹುದು. ಗೀತಾವಾಕ್ಯ ಹೀಗಿದೆ –

'ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಮ್ ।

ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ॥ ಕ್ಷಿಪಾಮಿ'

ಯಾರು ನನ್ನನ್ನು ಪ್ರೀತಿಪೂರ್ವಕವಾಗಿ ಭಜನೆಯನ್ನು ಮಾಡುತ್ತಾರೋ ಅವರಿಗೆ ಒಳ್ಳೆಯ ಜ್ಞಾನವನ್ನು ನೀಡುತ್ತೇನೆ. ಹೀಗೆ ಹೇಳಿ ಯಾರು ಸಂಸಾರದಲ್ಲಿ ದ್ವೇಷ ಮಾಡುತ್ತಾರೋ ಅವರಿಗೆ ಆಸರೀಜನ್ಮಗಳನ್ನು ನೀಡುತ್ತೇನೆ ಎಂಬ ಈ ಗೀತಾವಾಕ್ಯಕ್ಕೆ ರಾಮಾನುಜರು ಹೇಳುವ ಅರ್ಥ ಹೀಗಿದೆ– 'ಪ್ರಥಮ ಪ್ರವೃತ್ತಿಯಲ್ಲಿ ಯಾರು ಪ್ರೀತಿಪೂರ್ವಕವಾಗಿ ಭಜನೆಯನ್ನು ಮಾಡುತ್ತಾರೋ ಅವರಿಗೆ ಉತ್ತಮ ಜ್ಞಾನವನ್ನು ನೀಡುತ್ತೇನೆ. ಪ್ರಥಮ ಪ್ರವೃತ್ತಿಯಲ್ಲಿ ಯಾರು ದ್ವೇಷ ಮಾಡುವ ಮೂಲಕ ಕ್ರೂರಿಗಳಾಗುತ್ತಾರೋ ಅವರಿಗೆ ದ್ವಿತೀಯಾದಿ ಪ್ರವೃತ್ತಿಗಳಲ್ಲಿ ಆಸುರೀಜನ್ಮಾದಿಗಳನ್ನು ನೀಡುತ್ತೇನೆ' ಎಂದು ಗೀತಾ ವಚನವು ಹೇಳುತ್ತಿದೆ. ಆದ್ದರಿಂದ ಈ ಗೀತಾವಾಕ್ಯವು ಹೇಳುವಂತೆ ಪ್ರೀತಿ ಅಥವಾ ದ್ವೇಷ ಮಾಡುವುದು ಭಗವದಧೀನವಾಗಿ ಅಲ್ಲ. ಪ್ರಥಮಪ್ರವೃತ್ತಿಯಲ್ಲಿ ಈಶ್ವರನು ಉದಾಸೀನನೇ ಆಗಿದ್ದ ಎಂದು ತಿಳಿಯುತ್ತದೆ. ಈ ಗೀತಾವಾಕ್ಯಕ್ಕೆ ವಿರೋಧ ಬರಬಾರದೆನ್ನಲು ಪ್ರಥಮ ಪ್ರವೃತ್ತಿಯಲ್ಲಿ ಈಶ್ವರನು ಉದಾಸೀನನಾಗಿದ್ದಾನೆಂದು ನಾವು ಹೇಳುತ್ತೇವೆ.

ಇದು ತಪ್ಪು. ಗೀತಾವಾಕ್ಯಕ್ಕೆ ನೀವು ಹೇಳಿದ ಅರ್ಥವೇ ಅಲ್ಲ. ಯಾರು ಯಾವ ರೀತಿಯಲ್ಲಿ ಸಾಧನೆಯನ್ನು ಮಾಡಿದ್ದಾರೋ ಅವರಿಗೆ ಅದೇ ಫಲವನ್ನು ನೀಡುತ್ತೇನೆ ಎಂದಷ್ಟೇ ಅರ್ಥ. ಪ್ರೀತಿಯನ್ನು ಮಾಡಿದವರಿಗೆ ಭಕ್ತಿಯನ್ನು ನೀಡುತ್ತೇನೆ, ದ್ವೇಷ ಮಾಡಿದವರಿಗೆ ಅಧೋಗತಿಯನ್ನು ನೀಡುತ್ತೇನೆ ಎಂದಷ್ಟೇ ಅರ್ಥ. ಪ್ರಥಮ ಪ್ರವೃತ್ತಿಯಲ್ಲಿ ಈಶ್ವರನು ಉದಾಸೀನನಾಗಿದ್ದಾನೆಂದಾಗಲೀ, ದ್ವಿತೀಯಾದಿ ಪ್ರವೃತ್ತಿಗಳಲ್ಲಿ ಅನುಮಂತೃವಾಗಿದ್ದಾನೆಂದಾಗಲೀ ಈ ಗೀತಾವಾಕ್ಯದಲ್ಲಿ ಹೇಳಿಯೇ ಇಲ್ಲ.

**नापीश्वरस्य नैर्घृण्याद्यभावायौदासीन्यकल्पनम् । प्रथमप्रवृत्तावीश्वरस्य प्रयोजकत्वेऽपि तदभावस्य समर्थितत्वात् । अन्यथा महानिष्टान्निवर्तने शक्तस्याप्यौदासीन्येनानुमन्तृत्वेन च नैर्घृण्यादि दुर्वारम् । यदि च द्वितीयादिप्रवृत्ता**

**एवं विशेषोपकारं प्रथमत एव केषुचिदीश्वरः करोतीति तत्र प्रयोजकोऽपि भवति । अप्रवृत्तप्रवर्तको हि प्रयोजकः । ''एष ह्येव साधुकर्म कारयति'' इत्यादिश्रुतिस्तु द्वितीयादिप्रवृत्तावनुमन्तृत्वादिविषया । अन्यथा हि विधिनिषेधशास्त्रानर्थक्यं स्यात् ।**

ಈಶ್ವರನು ಇದೇ ರೀತಿಯಾಗಿ ಕೆಲವರಿಗೆ ವಿಶೇಷ ಉಪಕಾರವನ್ನು ಮೊದಲೇ ಮಾಡುತ್ತಾನೆ. ಮೊದಲು ಪ್ರವೃತ್ತರಾದ ಕೆಲವು ವ್ಯಕ್ತಿಗಳಿಗೆ ಎರಡನೆಯ ಪ್ರವೃತ್ತಿಯಲ್ಲಿ ಈಶ್ವರನು ಪ್ರಯೋಜಕನೂ ಕೂಡ ಆಗುತ್ತಾನೆ. ಕೆಲವರು ದ್ವಿತೀಯಾದಿ ಪ್ರವೃತ್ತಿಯಲ್ಲಿ ಅಪ್ರವೃತ್ತರಾದಾಗ ಅದಕ್ಕೆ ಈಶ್ವರನು ಪ್ರವರ್ತಕನಾಗುತ್ತಾನೆ. ಇದನ್ನೇ ಪ್ರಯೋಜಕವೆಂದು ಕರೆಯುತ್ತೇವೆ. 'ಏಷ ಹ್ಯೇವ ಸಾಧು ಕರ್ಮ ಕಾರಯತಿ' ಇತ್ಯಾದಿ ಶ್ರುತಿಯಾದರೂ ದ್ವಿತೀಯಾದಿ ಪ್ರವೃತ್ತಿಯಲ್ಲಿ ಅನುಮಂತೃ ಆಗಿದ್ದಾನೆ ಎಂದಷ್ಟೇ ಹೇಳುತ್ತಿದೆ. ಪ್ರಥಮ ಪ್ರವೃತ್ತಿಯಲ್ಲಿ ಪ್ರವರ್ತಕನಾಗಿದ್ದಾನೆ ಎಂದು ಹೇಳುತ್ತಿಲ್ಲ. ಹೀಗೊಪ್ಪದಿದ್ದರೆ ವಿಧಿ ನಿಷೇಧ ಶಾಸ್ತ್ರಗಳೆಲ್ಲವೂ ವ್ಯರ್ಥವಾಗುತ್ತವೆ. ಆದ್ದರಿಂದ ಜೀವರೇ ಸ್ವತಃ ಪ್ರವೃತ್ತಿ ಮಾಡುತ್ತಾರೆ. ಈಶ್ವರನು ಕೇವಲ ಅನುಮಂತೃ ಆಗಿದ್ದಾನೆ ಎಂದು ಹೇಳಿದಾಗ ವಿಧಿನಿಷೇಧ ಶಾಸ್ತ್ರಗಳು ಸಾರ್ಥಕವಾಗುತ್ತವೆ.

**तदुक्तं ''आदावीश्वरदत्तयैव पुरुषः स्वातन्त्र्यशक्त्या स्वयं तत्तज्ज्ञानचिकीर्षण-प्रयतनान्युत्पादयन् वर्तते । तत्रोपेक्ष्य ततोऽनुमत्य विदधत्तन्निग्रहानुग्रहौ तत्तत्कर्मफलं प्रयच्छति ततः सर्वस्य पुंसो हरिः'' इतीति ।**

ಇದನ್ನೇ ರಾಮಾನುಜರು ಹೀಗೆ ಹೇಳಿದ್ದಾರೆ –

ಆದಾವೀಶ್ವರದತ್ತಯೈವ ಪುರುಷಃ ಸ್ವಾತಂತ್ರ್ಯಶಕ್ತ್ಯಾ ಸ್ವಯಂ
ತತ್ತಜ್ಞಾನಚಿಕೀರ್ಷಣಪ್ರಯತನಾನ್ಯುತ್ಪಾದಯನ್ ವರ್ತತೇ ।
ತತ್ರೋಪೇಕ್ಷ್ಯ ತತೋಽನುಮತ್ಯ ವಿದಧತ್ತನ್ನಿಗ್ರಹಾನುಗ್ರಹೌ
ತತ್ತತ್ಕರ್ಮಫಲಂ ಪ್ರಯಚ್ಛತಿ ತತಃ ಸರ್ವಸ್ಯ ಪುಂಸೋ ಹರಿಃ ॥

ಈಶ್ವರನಿಂದಲೇ ಕೊಡಲ್ಪಟ್ಟ ಸ್ವಾತಂತ್ರ್ಯಶಕ್ತಿಯಿಂದ ಪುರುಷನು ತನ್ನ ಜ್ಞಾನ, ಇಚ್ಛೆ, ಪ್ರಯತ್ನಗಳ ಶಕ್ತಿಯಿಂದ ಪ್ರವೃತ್ತಿ ಮಾಡುತ್ತಾನೆ. ಆಗ ಈಶ್ವರನು ಪ್ರವರ್ತಕನಾಗಲಿ, ಅನುಮಂತ್ರನಾಗಲೀ ಆಗದೇ ಉದಾಸೀನನಾಗಿರುತ್ತಾನೆ. ಪುರುಷನು ದ್ವಿತೀಯಾದಿ ಪ್ರವೃತ್ತಿಯನ್ನು ಮಾಡುವಾಗ ಈಶ್ವರನು ಅನುಮಂತೃವಾಗುತ್ತಾನೆ. ಅದಕ್ಕನುಗುಣವಾಗಿ ಪ್ರತಿಯೊಬ್ಬ ಜೀವರ ನಿಗ್ರಹ ಮತ್ತು ಅನುಗ್ರಹಗಳನ್ನು ಮಾಡುವವನಾಗಿ ಆಯಾ ಜೀವಿಗಳಿಗೆ ಕರ್ಮಫಲಗಳನ್ನು ನೀಡುತ್ತಾನೆ. ಹೀಗೆ ಸಕಲ ಪುರುಷರಿಗೂ ಶ್ರೀಹರಿಯು ಸಮಾನನಾದ್ದರಿಂದ ವೈಷಮ್ಯನೈರ್ಘೃಣ್ಯದೋಷವು ಬರುವುದಿಲ್ಲ.

**अत्र ब्रूमः । ''एष ह्येव'' इत्यादिश्रुतिसङ्कोचेनेश्वरस्याद्य प्रवृत्तावौदासीन्यकल्पनं न तावत् ''तेषां सततयुक्तानां भजतां प्रीतिपूर्वकम् । ददामि बुद्धियोगं तम् ।**

**तानहं द्विषतः क्रूरान् संसारेषु नराधमान् । क्षिपाम्'' इत्यादिवचनाविरोधाय । अत्र साधनानुसारि फलदानस्यैवोक्तयाऽऽद्यप्रवृत्तावौदासीन्यानुक्तेः ।**

ರಾಮಾನುಜರ ಈ ವಾದವು ಅಯುಕ್ತವಾಗಿದೆ. 'ಏಷ ಹ್ಯೇವ ಸಾಧುಕರ್ಮ ಕಾರಯತಿ' ಎಂಬ ಶ್ರುತಿಯು ಪರಮಾತ್ಮನು ಪ್ರತಿಯೊಂದು ಹಂತದಲ್ಲಿಯೂ ಪ್ರೇರಕನಾಗಿದ್ದಾನೆಂದು ಹೇಳುತ್ತಿದೆ. ಹೀಗಿರುವಾಗ ನೀವು ಈ ಶ್ರುತಿಗೆ ಪ್ರಥಮಪ್ರವೃತ್ತಿಯಲ್ಲಿ ಈಶ್ವರನು ಪ್ರೇರಕನಲ್ಲ ಎಂಬುದಾಗಿ ಅರ್ಥಸಂಕೋಚವನ್ನು ಮಾಡುತ್ತಿದ್ದೀರಿ. ಪ್ರಥಮ ಪ್ರವೃತ್ತಿಯಲ್ಲಿ ಈಶ್ವರನು ಉದಾಸೀನನಾಗಿದ್ದಾನೆಂಬ ಅರ್ಥವನ್ನು ಇದಕ್ಕೆ ಕಲ್ಪನೆ ಮಾಡಲು ಏನು ಕಾರಣ?

ಗೀತಾವಾಕ್ಯ ವಿರೋಧ ಬರುವುದರಿಂದ ಹೀಗೆ ಅರ್ಥಸಂಕೋಚವನ್ನು ಮಾಡುತ್ತೇವೆಂದು ಹೇಳುತ್ತೇವೆಂದು ರಾಮಾನುಜರು ಉತ್ತರಿಸಬಹುದು. ಗೀತಾವಾಕ್ಯ ಹೀಗಿದೆ –

'ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಮ್ ।
ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ॥ ಕ್ಷಿಪಾಮಿ'

ಯಾರು ನನ್ನನ್ನು ಪ್ರೀತಿಪೂರ್ವಕವಾಗಿ ಭಜನೆಯನ್ನು ಮಾಡುತ್ತಾರೋ ಅವರಿಗೆ ಒಳ್ಳೆಯ ಜ್ಞಾನವನ್ನು ನೀಡುತ್ತೇನೆ. ಹೀಗೆ ಹೇಳಿ ಯಾರು ಸಂಸಾರದಲ್ಲಿ ದ್ವೇಷ ಮಾಡುತ್ತಾರೋ ಅವರಿಗೆ ಆಸರೀಜನ್ಮಗಳನ್ನು ನೀಡುತ್ತೇನೆ ಎಂಬ ಈ ಗೀತಾವಾಕ್ಯಕ್ಕೆ ರಾಮಾನುಜರು ಹೇಳುವ ಅರ್ಥ ಹೀಗಿದೆ– 'ಪ್ರಥಮ ಪ್ರವೃತ್ತಿಯಲ್ಲಿ ಯಾರು ಪ್ರೀತಿಪೂರ್ವಕವಾಗಿ ಭಜನೆಯನ್ನು ಮಾಡುತ್ತಾರೋ ಅವರಿಗೆ ಉತ್ತಮ ಜ್ಞಾನವನ್ನು ನೀಡುತ್ತೇನೆ. ಪ್ರಥಮ ಪ್ರವೃತ್ತಿಯಲ್ಲಿ ಯಾರು ದ್ವೇಷ ಮಾಡುವ ಮೂಲಕ ಕ್ರೂರಿಗಳಾಗುತ್ತಾರೋ ಅವರಿಗೆ ದ್ವಿತೀಯಾದಿ ಪ್ರವೃತ್ತಿಗಳಲ್ಲಿ ಆಸುರೀಜನ್ಮಾದಿಗಳನ್ನು ನೀಡುತ್ತೇನೆ' ಎಂದು ಗೀತಾ ವಚನವು ಹೇಳುತ್ತಿದೆ. ಆದ್ದರಿಂದ ಈ ಗೀತಾವಾಕ್ಯವು ಹೇಳುವಂತೆ ಪ್ರೀತಿ ಅಥವಾ ದ್ವೇಷ ಮಾಡುವುದು ಭಗವದಧೀನವಾಗಿ ಅಲ್ಲ. ಪ್ರಥಮಪ್ರವೃತ್ತಿಯಲ್ಲಿ ಈಶ್ವರನು ಉದಾಸೀನನೇ ಆಗಿದ್ದ ಎಂದು ತಿಳಿಯುತ್ತದೆ. ಈ ಗೀತಾವಾಕ್ಯಕ್ಕೆ ವಿರೋಧ ಬರಬಾರದೆನ್ನಲು ಪ್ರಥಮ ಪ್ರವೃತ್ತಿಯಲ್ಲಿ ಈಶ್ವರನು ಉದಾಸೀನನಾಗಿದ್ದಾನೆಂದು ನಾವು ಹೇಳುತ್ತೇವೆ.

ಇದು ತಪ್ಪು. ಗೀತಾವಾಕ್ಯಕ್ಕೆ ನೀವು ಹೇಳಿದ ಅರ್ಥವೇ ಅಲ್ಲ. ಯಾರು ಯಾವ ರೀತಿಯಲ್ಲಿ ಸಾಧನೆಯನ್ನು ಮಾಡಿದ್ದಾರೋ ಅವರಿಗೆ ಅದೇ ಫಲವನ್ನು ನೀಡುತ್ತೇನೆ ಎಂದಷ್ಟೇ ಅರ್ಥ. ಪ್ರೀತಿಯನ್ನು ಮಾಡಿದವರಿಗೆ ಭಕ್ತಿಯನ್ನು ನೀಡುತ್ತೇನೆ, ದ್ವೇಷ ಮಾಡಿದವರಿಗೆ ಅಧೋಗತಿಯನ್ನು ನೀಡುತ್ತೇನೆ ಎಂದಷ್ಟೇ ಅರ್ಥ. ಪ್ರಥಮ ಪ್ರವೃತ್ತಿಯಲ್ಲಿ ಈಶ್ವರನು ಉದಾಸೀನನಾಗಿದ್ದಾನೆಂದಾಗಲೀ, ದ್ವಿತೀಯಾದಿ ಪ್ರವೃತ್ತಿಗಳಲ್ಲಿ ಅನುಮಂತೃವಾಗಿದ್ದಾನೆಂದಾಗಲೀ ಈ ಗೀತಾವಾಕ್ಯದಲ್ಲಿ ಹೇಳಿಯೇ ಇಲ್ಲ.

**नापीश्वरस्य नैर्घृण्याद्यभावायौदासीन्यकल्पनम् । प्रथमप्रवृत्तावीश्वरस्य प्रयोजकत्वेऽपि तदभावस्य समर्थितत्वात् । अन्यथा महानिष्टान्निवर्तने शक्तस्याप्यौदासीन्येनानुमन्तृत्वेन च नैर्घृण्यादि दुर्वारम् । यदि च द्वितीयादिप्रवृत्ता**

**वनुमतिराद्यप्रवृत्तिफलदानरूपा तर्ह्याद्यप्रवृत्तिप्रयोजकतापि ''नानादित्वात्'' इत्युक्तरीत्याऽनादिपूर्वकर्मफलदानरूपास्तु ।**

ಈಶ್ವರನಿಗೆ ನೈರ್ಘೃಣ್ಯಾದಿ ದೋಷವು ಬರಬಾರದು. ಒಂದುವೇಳೆ ಪ್ರಥಮ ಪ್ರವೃತ್ತಿಯಲ್ಲಿಯೇ ಈಶ್ವರನು ಪ್ರಯೋಜಕನಾದಲ್ಲಿ ಕೆಲವರಿಗೆ ಸತ್ಪ್ರವೃತ್ತಿ ಮಾಡಿಸುತ್ತಾನೆ, ಕೆಲವರಿಗೆ ಅಸತ್ಪ್ರವೃತ್ತಿ ಮಾಡಿಸುತ್ತಾನೆ ಎಂದು ಹೇಳಿದಾಗ ಈಶ್ವರನಿಗೆ ಪಕ್ಷಪಾತ ದೋಷವು ಬರುತ್ತದೆ. ಅದಕ್ಕೋಸ್ಕರ ಪ್ರಥಮ ಪ್ರವೃತ್ತಿಯಲ್ಲಿ ಈಶ್ವರನು ಪ್ರೇರಕನೇ ಅಲ್ಲವೆಂದು ಹೇಳುತ್ತೇವೆ.

ಇದೂ ಕೂಡ ತಪ್ಪು. ಏಕೆಂದರೆ ಪ್ರಥಮ ಪ್ರವೃತ್ತಿಯಲ್ಲಿ ಈಶ್ವರನು ಪ್ರಯೋಜಕನಾದರೂ ಕೂಡ ವೈಷಮ್ಯ ನೈರ್ಘೃಣ್ಯ ದೋಷಗಳು ಬರುವುದಿಲ್ಲವೆಂದು ನಾವು ವೈಷಮ್ಯನೈರ್ಘೃಣ್ಯಾಧಿಕರಣದಲ್ಲಿಯೇ ಸಮರ್ಥನೆ ಮಾಡಿದ್ದೇವೆ. ಹೀಗೊಪ್ಪದಿದ್ದರೆ ದ್ವಿತೀಯಾದಿ ಪ್ರವೃತ್ತಿಗಳಲ್ಲಿ ಅನುಮಂತೃ ಎಂದು ಹೇಳಿದಾಗಲೂ ವೈಷಮ್ಯನೈರ್ಘೃಣ್ಯಾದಿ ದೋಷಗಳು ಬಂದೇ ಬರುತ್ತವೆ. ಏಕೆಂದರೆ ದೊಡ್ಡ ದೊಡ್ಡ ಅನಿಷ್ಟಗಳಿಂದ ನಿವೃತ್ತಿ ಮಾಡಲು ಈಶ್ವರನು ಶಕ್ತನಾಗಿದ್ದರೂ ಕೂಡ ಉದಾಸೀನನಾಗಿದ್ದಾನೆಂದು ಹೇಳಿದರೆ ನೈರ್ಘೃಣ್ಯದೋಷವನ್ನು ತಪ್ಪಿಸಿಕೊಳ್ಳಲು ಆಗುವುದಿಲ್ಲ.

ಒಂದುವೇಳೆ ದ್ವಿತೀಯಾದಿ ಪ್ರವೃತ್ತಿಗಳಲ್ಲಿ ಆದ್ಯಪ್ರವೃತ್ತಿ ಫಲದಾನವನ್ನಷ್ಟೇ ಕೊಡುವುದನ್ನು ಅನುಮತಿ ಎಂದು ಹೇಳುತ್ತೇವೆ ಎಂದು ಉತ್ತರಿಸಿದರೆ ಆಗ ಪ್ರಥಮ ಪ್ರವೃತ್ತಿಗೆ ಈಶ್ವರನೇ ಪ್ರಯೋಜಕನಾಗಿದ್ದಾನೆ. ಅದನ್ನು ಪೂರ್ವಕರ್ಮಕ್ಕೆ ಅನುಗುಣವಾಗಿ ಮಾಡಿಸಿದ್ದಾನೆ. 'ನಾನಾದಿತ್ವಾತ್' ಎಂದು ಹೇಳಿದಂತೆ ಅನಾದಿಪೂರ್ವಕರ್ಮದ ಫಲದಾನರೂಪವೆಂದೇ ಹೇಳಿ ಕೂಡಿಸಬಹುದು. ಆದ್ದರಿಂದ ಆದ್ಯಪ್ರವೃತ್ತಿಯಲ್ಲಿ ಈಶ್ವರನು ಉದಾಸೀನನಾಗಿದ್ದಾನೆಂಬುದು ತಪ್ಪು ಕಲ್ಪನೆ.

**नापीश्वरस्य कर्मफलानन्वयाय तत्कल्पनम् । प्रयोजकत्वेऽपि विधिनिषेधातीतत्वादेव तदुपपत्तेः । अन्यथा शक्तस्याप्यौदासीन्येनानुमन्तृत्वेन च तदन्वयो दुर्वारः ।**

ಪ್ರಥಮ ಪ್ರವೃತ್ತಿಯಲ್ಲಿ ಈಶ್ವರನೇ ಕರ್ಮವನ್ನು ಮಾಡಿಸುವುದಾದರೆ ಅದರ ಫಲ ಈಶ್ವರನಿಗೂ ಬರಬೇಕಾಗುತ್ತದೆ. ಆದ್ದರಿಂದ ನಾವು ಪ್ರಥಮ ಪ್ರವೃತ್ತಿಯಲ್ಲಿ ಈಶ್ವರನು ಉದಾಸೀನನಾಗಿದ್ದಾನೆಂದು ಕಲ್ಪನೆ ಮಾಡುತ್ತೇವೆ.

ಇದೂ ಕೂಡ ತಪ್ಪು. ಮಾಡಿಸಿದ್ದು, ಮಾಡಿಸದೇ ಇರುವುದು ಫಲಾನುಭವಕ್ಕೆ ಕಾರಣವಲ್ಲ. ವಿಧಿನಿಷೇಧಗಳಿಗೆ ಬದ್ಧನಾಗಿರುವಿಕೆಯೇ ಫಲಾನುಭವಕ್ಕೆ ಪ್ರಯೋಜಕವಾಗಿದೆ. ಈಶ್ವರನು ವಿಧಿನಿಷೇಧಗಳಿಂದ ಅತೀತನಾಗಿರುವ ಕಾರಣ ಫಲಭೋಗಕ್ಕೆ ಅವನು ಆಶ್ರಯನಾಗಿರುವುದಿಲ್ಲ. ಹೀಗೊಪ್ಪದಿದ್ದರೆ ಅನಿಷ್ಟಗಳನ್ನು ನಿವಾರಣೆ ಮಾಡಲು ಈಶ್ವರನು ಶಕ್ತನಾಗಿದ್ದರೂ ಕೂಡ ಉದಾಸೀನನಾಗಿದ್ದಾನೆ ಎಂದು ಹೇಳಿದರೆ ಆ ಕರ್ಮದ ಫಲಭೋಗ ಅವನಿಗೆ ಬಂದೇ ಬರುತ್ತದೆ. ಒಬ್ಬ ವ್ಯಕ್ತಿ ಆಪತ್ತಿಗೆ ಸಿಲುಕುತ್ತಿದ್ದಾನೆಂದು ತಿಳಿದಾಗಲೂ ಸುಮ್ಮನೆ ಕುಳಿತಿದ್ದರೆ ಆ ವ್ಯಕ್ತಿಗೆ ಪಾಪದ ಲೇಪ ಹೇಗೆ ಬರುತ್ತದೋ ಹಾಗೆ ಈಶ್ವರನಿಗೂ ಕೂಡ ಪಾಪದ ಲೇಪ ಬರಬೇಕಾದೀತು ಎಂದಭಿಪ್ರಾಯ.

**एतेन यथा पित्रा पुत्रयोः सदसद्व्ययसाधारणे वित्तक्षेत्रादिके विभज्य दत्ते तत्र कस्यचित्सद्व्यये कस्यचिदसद्व्यये च तत्फलान्वयः पुत्रयोरेव । नतु पितुः । तद्वदिहापि । ईश्वरस्य सदसत्प्रवृत्तिसाधारणकारणभूतचिच्छक्त्यादिमात्रदातृत्वा-द्विशिष्य तत्प्रवृत्त्यादौ प्रागहेतुत्वादिति निरस्तम् । पितृवदीश्वरस्य भाविसदसत्प्रवृत्त्यज्ञानाभावात् । अननुमन्तृत्वाभावात् । आद्येच्छाप्रयत्नौ प्रत्यहेतुत्वाभावाच्च ।**

ತಂದೆಯಾದವನು ತನ್ನ ಮಕ್ಕಳಿಗೆ ಸದಸದ್ವ್ಯಯಸಾಧಾರಣವಾಗಿ ಮನೆ, ಹೊಲಗಳನ್ನು ವಿಭಾಗ ಮಾಡಿ ನೀಡುತ್ತಾನೆ. ಹೀಗೆ ನೀಡಿದಾಗ ಒಬ್ಬ ಮಗ ಒಳ್ಳೆಯ ರೀತಿಯಲ್ಲಿ ವಿನಿಯೋಗವನ್ನು ಮಾಡಿದ. ಮತ್ತೊಬ್ಬನು ಕೆಟ್ಟ ರೀತಿಯಾಗಿ ಮಾಡಿದ. ಆಗ ಅದರ ಫಲದ ಅನ್ವಯ ಮಕ್ಕಳಿಗೆ ಆಗುತ್ತದೆ ಹೊರತು ತಂದೆಗೆ ಆಗುವುದಿಲ್ಲ. ಅದರಂತೆ ಈಶ್ವರನಿಗೆ ಸದಸದ್ವೃತ್ತಿಸಾಧಾರಣಕಾರಣವಾದ ಚಿಚ್ಛಕ್ತಿಯನ್ನು ಮಾತ್ರ ಜೀವನಿಗೆ ಸಾಧಾರಣವಾಗಿ ನೀಡುತ್ತಾನೆ. ಅನಂತರ ಆಯಾ ಜೀವರು ಮಾಡುವ ಒಳ್ಳೆ ಕೆಲಸಕ್ಕಾಗಲೀ, ಕೆಟ್ಟ ಕೆಲಸಕ್ಕಾಗಲೀ ಇವನು ಫಲಭಾಗಿಯಾಗುವುದಿಲ್ಲ. ದ್ವಿತೀಯಾದಿ ಪ್ರವೃತ್ತಿಗಳಲ್ಲಿ ಹೇತುವಾದರೂ ಪ್ರಥಮ ಪ್ರವೃತ್ತಿಯಲ್ಲಿ ಹೇತುವಾಗುವುದಿಲ್ಲ.

ರಾಮಾನುಜರ ಈ ಕಲ್ಪನೆಯೂ ಕೂಡ ತಪ್ಪು. ಮಕ್ಕಳು ಸದ್ವಿನಿಯೋಗ ಮಾಡುತ್ತಾರೋ, ಅಸದ್ವಿನಿಯೋಗ ಮಾಡುತ್ತಾರೋ ಎಂಬ ಕಲ್ಪನೆ ತಂದೆಯಾದವನಿಗೆ ಇರುವುದಿಲ್ಲ. ಆದರೆ ಈಶ್ವರನು ಸರ್ವಜ್ಞನಾದ್ದರಿಂದ ಭವಿಷ್ಯ ಜ್ಞಾನವು ಅವನಿಗೆ ಇದೆ. ಮತ್ತು ನಿವಾರಣೆ ಮಾಡಲು ತಂದೆಯಂತೆ ಅಶಕ್ತನಾಗಿಲ್ಲ, ಶಕ್ತನೇ ಆಗಿದ್ದಾನೆ. ಆದರೂ ಕೂಡ ಉದಾಸೀನನಾದರೆ ಈಶ್ವರನು ಫಲಾನುಭಾಗಿಯಾಗಿಯೇ ಆಗುತ್ತಾನೆ. ಮತ್ತು ದ್ವಿತೀಯಾದಿ ಪ್ರವೃತ್ತಿಗಳಲ್ಲಾದರೂ ಈಶ್ವರನು ಒಳ್ಳೆಯ ಕೆಲಸವನ್ನು ಮಾಡಿಸಬಹುದಿತ್ತು. ಮತ್ತು ಮೊದಲನೆಯ ಇಚ್ಛಾ ಪ್ರಯತ್ನಗಳಲ್ಲೂ ಕೂಡ ಅಹೇತುವಾಗಲು ಸಾಧ್ಯವಿಲ್ಲ. ಪ್ರಥಮಪ್ರವೃತ್ತಿ ಹಾಗೂ ಇಚ್ಛೆಗಳಲ್ಲೂ ಈಶ್ವರನು ಪ್ರೇರಕನಾಗಿದ್ದಾನೆಂದು ನಾವು ಸಮರ್ಥಿಸಿದ್ದೇವೆ.

**नापि जीवस्य विध्यादिविषयत्वाय तत्कल्पनम् । द्वितीयादिप्रवृत्ताविव प्रथम प्रवृत्तावप्यस्वातन्त्र्येऽप्युक्तरीत्या तदुपपत्तेः । नहि चुल्लीसंमार्जने स्वातन्त्र्यमात्रेण काष्ठप्रक्षेपादावस्वतन्त्रोऽपि पाके विनियुज्यते ।**

ಪ್ರಥಮ ಪ್ರವೃತ್ತಿಯಲ್ಲೂ ಕೂಡ ಜೀವನು ಅಸ್ವತಂತ್ರನಾದಲ್ಲಿ ವಿಧ್ಯಾದಿವಿಷಯತ್ವವೇ ಕೂಡುವುದಿಲ್ಲ. ವಿಧ್ಯಾದಿ ವಿಷಯತ್ವಕ್ಕೋಸ್ಕರ ಪ್ರಥಮ ಪ್ರವೃತ್ತಿಯಲ್ಲಿ ಜೀವನಿಗೆ ಸ್ವಾತಂತ್ರ್ಯವನ್ನು ಕಲ್ಪನೆ ಮಾಡಿ ಈಶ್ವರನಿಗೆ ಔದಾಸೀನ್ಯವನ್ನು ಕಲ್ಪನೆ ಮಾಡಿದ್ದೇವೆ.

ಹೀಗೆ ಆಕ್ಷೇಪ ಮಾಡುವುದೂ ಕೂಡ ತಪ್ಪು. ಏಕೆಂದರೆ ದ್ವಿತೀಯಾದಿ ಪ್ರವೃತ್ತಿಗಳಲ್ಲಿ ಹೇಗೆ ಜೀವನಿಗೆ ಅಸ್ವಾತಂತ್ರ್ಯವಿದೆಯೋ ಅದರಂತೆ ಪ್ರಥಮ ಪ್ರವೃತ್ತಿಯಲ್ಲೂ ಕೂಡ ಜೀವನು ಪರಮಾತ್ಮನ ಅಧೀನನಾಗಿಯೇ ಇದ್ದಾನೆ. ಹೀಗೆ ಒಪ್ಪಿದಾಗಲೂ ವಿಧಿನಿಷೇಧವಿಷಯತ್ವವು ಜೀವನಿಗೆ

ಯುಕ್ತವಾಗುತ್ತದೆ. ಈ ವಿಷಯವನ್ನು ನಾವು ಹಿಂದೆ ಸಮರ್ಥನೆ ಮಾಡಿದ್ದೇವೆ. ಮತ್ತು ಪ್ರಥಮ ಪ್ರವೃತ್ತಿಯಲ್ಲಿ ಜೀವನಿಗೆ ಸ್ವಾತಂತ್ರ್ಯವನ್ನು ಹೇಳುವ ನಿಮಗೆ ದೋಷವು ಪ್ರಾಪ್ತವಾಗುತ್ತದೆ. ಒಬ್ಬ ಒಲೆ ಮೊದಲಾದವುಗಳನ್ನು ತೊಳೆಯುವುದರಲ್ಲಿ ಸ್ವತಂತ್ರನಾಗಿರುತ್ತಾನೆ. ಆದರೆ ಅಡಿಗೆಗೆ ಬೇಕಾದ ಕಟ್ಟಿಗೆ ಮೊದಲಾದವುಗಳನ್ನು ಹಾಕಿ, ಅಕ್ಕಿತೊಳೆದು ಒಲೆಯ ಮೇಲೆ ಇಡುವುದರಲ್ಲಿ ಅಸ್ವತಂತ್ರನಾಗಿದ್ದಾನೆ. ಇಂತಹವನನ್ನು ಕುರಿತು ಯಾರೂ ಕೂಡ ಅಡಿಗೆ ಮಾಡಲು ಹೇಳುವುದಿಲ್ಲ. ಆದ್ದರಿಂದ ಪ್ರಥಮ ಪ್ರವೃತ್ತಿಯಲ್ಲಿ ಸ್ವತಂತ್ರನಾದ ಜೀವನು, ದ್ವಿತೀಯಾದಿ ಪ್ರವೃತ್ತಿಗಳಲ್ಲಿ ಅಸ್ವತಂತ್ರನಾದ ಮಾತ್ರದಿಂದ ಆವನು ವಿಧಿನಿಷೇಧಗಳಿಗೆ ಅರ್ಹನಾಗಲಾರ.

**नापीश्वरेतरहेतुभिरेव प्रथमप्रवृत्तेः उपपत्त्या तत्कल्पनम् । तत एव द्वितीयादिप्रवृत्तावपि तत्कल्पनापातात् । श्रुतिस्तूभयत्र समा ।**

ಈಶ್ವರನ ಅಪೇಕ್ಷೆ ಇಲ್ಲದೆ ಬೇರೆ ಹೇತುಗಳಿಂದಲೇ ಪ್ರಥಮ ಪ್ರವೃತ್ತಿಯು ಉಪಪನ್ನವಾಗಿದೆ. ಆದ್ದರಿಂದ ಈಶ್ವರನ ಅವಶ್ಯಕತೆ ಇರುವುದಿಲ್ಲ. ಈ ಕಾರಣದಿಂದ ಈಶ್ವರನಿಗೆ ಔದಾಸೀನ್ಯವನ್ನು ನಾವು ಕಲ್ಪನೆ ಮಾಡುತ್ತೇವೆ.

ಇದೂ ಕೂಡ ತಪ್ಪು. ದ್ವಿತೀಯಾದಿ ಪ್ರವೃತ್ತಿಯಲ್ಲಿ ಪರಾಧೀನನಾದರೆ ಪ್ರಥಮ ಪ್ರವೃತ್ತಿಯಲ್ಲೂ ಕೂಡ ಪರಾಧೀನನೇ ಆಗಲಿ. ಪ್ರಥಮ ಪ್ರವೃತ್ತಿಯಲ್ಲಿ ಸ್ವತಂತ್ರನಾದರೆ, ದ್ವಿತೀಯಾದಿ ಪ್ರವೃತ್ತಿಯಲ್ಲೂ ಕೂಡ ಸ್ವತಂತ್ರನೆಂದೇ ಹೇಳಿರಿ. ಅರ್ಧಜರತೀಯ ಮಾಡಲು ಕಾರಣವಿಲ್ಲ.'ಏಷಹ್ಯೇವ ಸಾಧು ಕರ್ಮಕಾರಯತಿ' ಇತ್ಯಾದಿ ಶ್ರುತಿಬಲದಿಂದ ದ್ವಿತೀಯಾದಿಪ್ರವೃತ್ತಿಯಲ್ಲಿ ಅಸ್ವತಂತ್ರನೆಂದು ಹೇಳುತ್ತೇವೆಂದರೆ ಇದೇ ಪ್ರಥಮ ಪ್ರವೃತ್ತಿಯಲ್ಲೂ ಕೂಡ ಇದು ಸಮಾನ.

**किञ्च यत्रेश्वर आदावेव प्रयोजकस्तत्र वैषम्यं दुर्वारम् । किञ्च प्रथमप्रवृत्तेरपि पूर्वकर्मफलत्वात्त्वन्मतेऽपीश्वरस्य सर्वकर्मफलदत्वात्कथं तत्रौदासीन्यम् ।**

ಮತ್ತು ಈಶ್ವರನು ಪ್ರಥಮ ಪ್ರವೃತ್ತಿಯಲ್ಲಿಯೇ ಪ್ರಯೋಜಕನಾಗುವುದಾದರೆ ಕೆಲವರಿಂದ ಏಕೆ ಕೆಟ್ಟ ಕೆಲಸ ಮಾಡಿಸುತ್ತಾನೆ? ಎಂಬ ದೋಷವು ನಿಮಗೆ ತಪ್ಪಿದ್ದಲ್ಲ.

ಮತ್ತು ಪ್ರಥಮಪ್ರವೃತ್ತಿಯೂ ಕೂಡ ಪೂರ್ವಕರ್ಮದ ಫಲರೂಪವೇ ಆಗಿದೆ. ಈ ವಿಷಯವನ್ನು ನೀವೂ ಕೂಡ ಒಪ್ಪಿರುವಿರಿ. ನಿಮ್ಮ ಮತದಲ್ಲಿ ಈಶ್ವರನು ಸರ್ವಕರ್ಮಫಲಪ್ರದ ಎಂದು ಒಪ್ಪಿರುವಾಗ ಪ್ರವೃತ್ತಿಯೂ ಕೂಡ ಒಂದು ಫಲವೇ ಆಯಿತು. ಆದ್ದರಿಂದ ಕರ್ಮದ ಫಲವನ್ನು ಕೊಡುತ್ತಾನೆ ಎಂದು ಹೇಳಿದಾಗ ಆ ಪ್ರವೃತ್ತಿಗೂ ಕೂಡ ಈಶ್ವರನೇ ನಿಯಾಮಕ ಎಂದು ಹೇಳಿದಂತಾಯಿತು. ಹೀಗಿರುವಾಗ ಈಶ್ವರನು ಪ್ರಥಮಪ್ರವೃತ್ತಿಯಲ್ಲಿ ಉದಾಸೀನನಾಗಿರುತ್ತಾನೆ ಎಂಬ ಮಾತು ಹೇಗೆ ಸರಿಯಾಗುತ್ತದೆ.

**ननु च प्राचीनकर्मफलदानेच्छयेशस्तां करोति । नतु फलान्तरसाधनानुष्ठापनेच्छया । द्वितीयादिप्रवृत्तिं तु तदनुष्ठापनेच्छया । ततश्चाभिसन्धिभेदाददोष इति चेन्न ।**

ಪ್ರಥಮಕರ್ಮವು ಪ್ರಾಚೀನಕರ್ಮಫಲರೂಪವೇ ಆಗಿವೆ. ಆದರೂ ಕೂಡ ಈಶ್ವರನೂ ಪ್ರಥಮ ಕರ್ಮದಲ್ಲಿ ಉದಾಸೀನನಾಗಿದ್ದಾನೆಂದು ಹೇಳುತ್ತೇವೆ. ಈಶ್ವರನು ಪ್ರಾಚೀನಕರ್ಮದ ಫಲವನ್ನು ಇವನಿಗೆ ಕೊಡಬೇಕು ಎಂದಷ್ಟೇ ಇಚ್ಛೆಯನ್ನು ಮಾಡುತ್ತಾನೆ. ಹೊರತು ಮುಂದೆ ಬರುವ ಫಲದ ಸಾಧನಾನುಷ್ಠಾನದ ಇಚ್ಛೆಯಿಂದ ಪ್ರವೃತ್ತಿಯನ್ನು ಮಾಡಿಸುವುದಿಲ್ಲ. ದ್ವಿತೀಯಾದಿಪ್ರವೃತ್ತಿಯನ್ನು ಮಾಡಿಸುವಾಗ ಪ್ರಥಮಪ್ರವೃತ್ತಿಯ ಫಲವನ್ನು ಕೊಡುವ ಇಚ್ಛೆಯುಳ್ಳವನೂ ಆಗಿದ್ದಾನೆ ಮತ್ತು ಫಲಾಂತರ ಸಾಧನಾನುಷ್ಠಾನ ಮಾಡಿಸುವ ಇಚ್ಛೆಯುಳ್ಳವನೂ ಆಗಿದ್ದಾನೆ. ಆದ್ದರಿಂದ ಹೀಗೆ ಇಚ್ಛೆಯಲ್ಲಿ ಭೇದವಿರುವುದರಿಂದ ಎರಡು ಬಗೆಯ ಪ್ರವೃತ್ತಿಗಳಲ್ಲಿ ವ್ಯತ್ಯಾಸವಿದೆ. ಆದ್ದರಿಂದ ದೋಷವಿಲ್ಲ.

**पूर्वापराधफलत्वेनैव चोरस्यातिपीडां कुर्वतस्तां च मृतिहेतुतया जानतो राजादेश्चोरमृत्यादावौदासीन्यादर्शनेन प्राचीनकर्मफलत्वेनाद्यप्रवृत्तिं कुर्वतस्तां चानर्थहेतुतया जानत ईश्वरस्य तत्रौदासीन्यायोगात् ।**

ಒಬ್ಬ ಚೋರ ಹಿಂದೆ ಅಪರಾಧವನ್ನು ಮಾಡಿದ್ದಾನೆ. ಈಗ ರಾಜನು ಶಿಕ್ಷೆಯನ್ನು ಕೊಡುತ್ತಿದ್ದಾನೆ. ಈ ಶಿಕ್ಷೆಯು ಅತಿಯಾದರೆ ಮುಂದೆ ಮರಣವನ್ನು ಹೊಂದುತ್ತಾನೆ ಎಂಬ ಜ್ಞಾನವೂ ಕೂಡ ರಾಜನಿಗೆ ಇದೆ. ಹೀಗೆ ರಾಜನು ಈಗ ಮಾಡುತ್ತಿರುವ ಪೀಡೆಯು ಮುಂದೆ ಆಗುವ ಮರಣಕ್ಕೆ ಹೇತುವಾಗಿದೆ ಎಂದು ತಿಳಿದಿದ್ದಾನೆ. ಇಂತಹ ಸಂದರ್ಭದಲ್ಲಿ ರಾಜನು ಚೋರನ ಮರಣದಲ್ಲಿ ಉದಾಸೀನನಾಗಿದ್ದಾನೆ. ಅವನ ಸಾಯುವಿಕೆಗೆ ರಾಜನು ಹೊಣೆಗಾರನಲ್ಲ. ಆದ್ದರಿಂದ ಚೋರನ ಮರಣಕ್ಕೆ ರಾಜನು ಕಾರಣನಲ್ಲ ಎಂದು ಯಾರೂ ಹೇಳುವುದಿಲ್ಲ. ಅದರಂತೆ ಪ್ರಕೃತ ಹಿಂದೆ ಜೀವರು ಯಾವ ಕರ್ಮವನ್ನು ಮಾಡಿದ್ದರೋ ಅದರ ಫಲರೂಪವಾಗಿ ಈಶ್ವರನು ಆದ್ಯಪ್ರವೃತ್ತಿಯಲ್ಲಿ ಪ್ರೇರಣೆಯನ್ನು ಮಾಡುತ್ತಿದ್ದಾನೆ. ಹಿಂದೆ ಮಾಡಿದ ಕರ್ಮವು ಇದಕ್ಕೆ ಹೇತುವೆಂಬ ಜ್ಞಾನವೂ ಕೂಡ ಈಶ್ವರನಿಗೆ ತಿಳಿದಿದೆ. ಈ ಆದ್ಯಪ್ರವೃತ್ತಿಯು ಮುಂದೆ ಆಗುವ ಅನರ್ಥಕ್ಕೆ ಕಾರಣವಾಗಿದೆ ಎಂಬುದನ್ನು ಕೂಡ ಈಶ್ವರನು ತಿಳಿದಿದ್ದಾನೆ. ಇಂತಹ ಈಶ್ವರನು ಪ್ರಥಮ ಪ್ರವೃತ್ತಿಯಲ್ಲಿ ಉದಾಸೀನನಾಗಿದ್ದಾನೆಂದು ಹೇಳುವುದು ಅತ್ಯಂತ ಹಾಸ್ಯಾಸ್ಪದ ವಿಚಾರ.

**घटप्रकाशनार्थं दीपमुपाददानस्य तु पुंसो दैवात्तेन पटे प्रकाशिते तत्रौदासीन्यं युक्तम् । तेन दीपेन नियमेन पटः प्रकाशयिष्यत इति ज्ञानाभावात् । तथा ज्ञाने तु तत्रापि नौदासीन्यम् । तस्मात्तत्तत्स्वभावाद्यनुसारित्वादेवेश्वरस्य न वैषम्यादीति भाष्योक्तमेव युक्तमिति ॥**

**॥ इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् कर्तृत्वाधिकरणं सम्पूर्णम् ॥१७॥**

ದೇವದತ್ತನು ಘಟವನ್ನು ತೋರಿಸುವುದಕ್ಕಾಗಿ ದೀಪವನ್ನು ತರುತ್ತಾನೆ. ದೈವವಶಾತ್ ಪಕ್ಕದಲ್ಲಿರುವ ಪಟವೂ ಕೂಡ ಪ್ರಕಾಶಿತವಾಯಿತು. ಆಗ ದೇವದತ್ತನು ಪಟಪ್ರಕಾಶದಲ್ಲಿ ಉದಾಸೀನನಾಗಿದ್ದಾನೆ.

ಕರ್ತೃತ್ವಾಧಿಕರಣ (೨-೩-೧೭)

ಏಕೆಂದರೆ 'ಅನೇನ ದೀಪೇನ ಘಟಂ ಪ್ರಕಾಶಯಾಮಿ' ಎಂಬ ಇಚ್ಛೆಯನ್ನಷ್ಟೇ ಅವನು ಹೊಂದಿದ್ದಾನೆ. ಅದರಂತೆ ಈಶ್ವರನೂ ಕೂಡ ಪ್ರಾಚೀನ ಕರ್ಮದ ಫಲವನ್ನಷ್ಟೇ ನಾನು ಕೊಡುತ್ತೇನೆ ಎಂದು ಸಂಕಲ್ಪ ಮಾಡಿದ. ಇದರಿಂದ ಮುಂದಿನ ಬೇರೆ ಫಲ ಉಂಟಾಯಿತು ಎಂದರೆ ಅದಕ್ಕೆ ಈಶ್ವರನು ಜವಾಬ್ದಾರನಲ್ಲ.

ಇದು ತಪ್ಪು. ದೇವದತ್ತನಿಗೆ ಈ ದೀಪವನ್ನು ಒಯ್ಯುವುದರಿಂದ ಪಟವು ಪ್ರಕಾಶವಾಗುತ್ತದೆ ಎಂಬ ಜ್ಞಾನವೇ ಇರುವುದಿಲ್ಲ. ಒಂದುವೇಳೆ ಆ ಜ್ಞಾನವು ಇದ್ದರೆ ಆ ದೃಷ್ಟಾಂತವೇ ಅಸಂಪ್ರತಿಪನ್ನವಾಗುತ್ತದೆ. ಪಟವನ್ನು ನಾನು ತಿಳಿಸಬೇಕೆಂಬ ಇಚ್ಛೆಯನ್ನೂ ಕೂಡ ದೇವದತ್ತನು ಹೊಂದುತ್ತಾನೆ ಹೊರತು ಆ ವಿಷಯದಲ್ಲಿ ಅವನು ಉದಾಸೀನನಾಗುವುದಿಲ್ಲ. ಈಶ್ವರನಿಗೆ ದೇವದತ್ತನಂತೆ ಜ್ಞಾನವಿಲ್ಲವೆಂದು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಅವನು ಮುಂದಿನ ಕರ್ಮದ ಫಲಪ್ರದಾನದಲ್ಲಿ ಉದಾಸೀನನಾಗಲೂ ಕೂಡ ಸಾಧ್ಯವಿಲ್ಲ. ಆದ್ದರಿಂದ ಈಶ್ವರನು ಆಯಾ ಜೀವರ ಸ್ವಭಾವಕ್ಕೆ ಅನುಸಾರಿಯಾಗಿ ಕಾರ್ಯವನ್ನು ಮಾಡಿಸುವುದರಿಂದ ವೈಷಮ್ಯನೈರ್ಘೃಣ್ಯದೋಷವು ಬರುವುದಿಲ್ಲವೆಂದು ಶ್ರೀಮದಾಚಾರ್ಯರು ಭಾಷ್ಯದಲ್ಲಿ ಹೇಳಿದ ಪ್ರಮೇಯವು ಯುಕ್ತವಾಯಿತು.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಕರ್ತೃತ್ವಾಧಿಕರಣವು ಸಂಪೂರ್ಣವಾಯಿತು

**प्रकाशः —**

**केचित्त्विति** ।। तन्मते ''परात्तु'' इति योगद्वयमधिकरणान्तरम् । तत्राद्य-सूत्रव्याख्या न विरुद्धा । जीवस्य पराधीनकर्तृत्वे दोषपरिहाराय ''कृतप्रयत्नापेक्षस्तु विहितप्रतिषेधावैयर्थ्यादिभ्य'' इति सूत्रम् । सर्वासु क्रियासु जीवकृतं प्रयत्नमुद्योग-मपेक्ष्यान्तर्यामी तदनुमतिदानेन प्रवर्तयति । विहितप्रतिषेधावैयर्थ्यनिग्रहानुग्रहादि-हेतुभ्य इत्यस्यार्थ उक्तः ।

ರಾಮಾನುಜಮತದಲ್ಲಿ 'ಪರಾತ್ತು ತಚ್ಛ್ರುತೇಃ' ಎಂಬೆರಡು ಸೂತ್ರಗಳು ಬೇರೆ ಅಧಿಕರಣವೆಂದು ಅಂಗೀಕರಿಸಲಾಗಿದೆ. ಇವೆರಡರಲ್ಲಿ ಮೊದಲನೇ ಸೂತ್ರವ್ಯಾಖ್ಯಾನವು ನಮ್ಮ ಮತದಂತೆ ಇರುವುದರಿಂದ ನಮಗೆ ವಿರುದ್ಧವಲ್ಲ. ಇನ್ನು ಜೀವನಿಗೆ ಪರಾಧೀನಕರ್ತೃತ್ವವಿಷಯದಲ್ಲಿ ದೋಷಪರಿಹಾರಕ್ಕೋಸ್ಕರ 'ಕೃತಪ್ರಯತ್ನಾಪೇಕ್ಷಸ್ತು ವಿಹಿತಪ್ರತಿಷೇಧಾವೈಯರ್ಥ್ಯಾದಿಭ್ಯಃ' ಎಂಬ ಸೂತ್ರವು ಹೊರಟದೆ ಎಂದು ಹೇಳುತ್ತಾರೆ. ಎಲ್ಲಾ ಕ್ರಿಯೆಗಳಲ್ಲಿ ಜೀವನಿಂದ ಮಾಡಲ್ಪಟ್ಟ ಪ್ರಯತ್ನ ಹಾಗೂ ಕಾರ್ಯ ಇವುಗಳನ್ನು ಅಪೇಕ್ಷಿಸಿ ಅಂತರ್ಯಾಮಿಯಾದ ಪರಮಾತ್ಮನು ಆ ಜೀವನಿಗೆ ಅನುಮತಿಯನ್ನು ಪ್ರದಾನ ಮಾಡುವ ಮೂಲಕ ಜೀವನ ಮೂಲಕ ಪ್ರವೃತ್ತಿ ಮಾಡಿಸುತ್ತಾನೆ. ವಿಹಿತಪ್ರತಿಷೇಧದ ಅವೈಯರ್ಥ್ಯ ಹಾಗೂ ನಿಗ್ರಹ, ಅನುಗ್ರಹಾದಿ ಹೇತುಗಳಿಂದ ಈ ಅರ್ಥವನ್ನು ಸೂತ್ರಕ್ಕೆ ಮಾಡಿರುತ್ತಾರೆ.

ಪರಿಪೂರ್ಣಚಂದ್ರಿಕಾ

**प्रकाशः** – तद्भाष्यटीकायामुक्तं तत्तात्पर्यं व्यनक्ति ।। **ईश्वर इति** ।। ''भोगादृष्टोपनीतार्थस्वभावाद्वासनान्वितात् । इच्छादेर्मनसोत्पत्तौ युक्तोदासीनता विभोः'' इति सङ्गहतत्प्रपञ्चने श्रुतप्रकाशोक्ते हृदि कृत्वाऽऽह – **विषयेति** ।।

ರಾಮಾನುಜಭಾಷ್ಯ ಹಾಗೂ ಟೀಕೆಗಳಲ್ಲಿ ಹೇಳಿದ ತಾತ್ಪರ್ಯವನ್ನು ಗ್ರಂಥಕಾರರು 'ಈಶ್ವರಃ' ಇತ್ಯಾದಿ ವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ.

ಭೋಗಾದೃಷ್ಟೋಪನೀತಾರ್ಥಸ್ವಭಾವಾದ್ವಾಸನಾನ್ವಿತಾತ್ ।

ಇಚ್ಛಾದೇರ್ಮನಸೋತ್ಪತ್ತೌ ಯುಕ್ತೋದಾಸೀನತಾ ವಿಭೋಃ ॥

ತಾನು ಭೋಗಿಸುವ ಅದೃಷ್ಟದ ಸಹಾಯದಿಂದ ಹಾಗೂ ಹಳೆಯ ಸಂಸ್ಕಾರದಿಂದ ಮನಸ್ಸಿನಲ್ಲಿ ಇಚ್ಛಾದಿಗಳು ಉತ್ಪತ್ತಿಯಾದಾಗ ಜೀವನು ಪ್ರಾರಂಭದಲ್ಲಿ ಪ್ರವೃತ್ತಿಯನ್ನು ಮಾಡುತ್ತಾನೆ. ಆಗ ಪರಮಾತ್ಮನು ಉದಾಸೀನನಾಗಿ ಇರುತ್ತಾನೆ. ಹೀಗೆ ಶ್ರುತಪ್ರಕಾಶದಲ್ಲಿ ಹೇಳಿದ್ದನ್ನು ಮನಸ್ಸಿನಲ್ಲಿಟ್ಟುಕೊಂಡು ವಿಷಯ ಇತ್ಯಾದಿ ವಾಕ್ಯವು ಹೊರಟಿದೆ.

**प्रकाशः** – इच्छाद्वारा हीश्वरो जीवान् प्रेरयति ।। इच्छा च जीवस्य विषयसन्निधापनेनोत्पाद्या । तच्चादृष्टादिनैव सिद्धमितीश्वरस्य तत्र न कृत्यमित्यर्थः। इच्छाप्रयत्नरूपद्वितीयादि-प्रवृत्तावेवमस्तु । किमीश्वरेणेत्यतः श्रुतप्रकाशोक्ते ''सन्निधापकवैधुर्येऽप्यर्थं बुद्धिस्थतां नयन् । प्रयोजकोऽनुमन्ता च भवतीशस्तदा तदा । पूर्वप्रवृत्तेश्च फलमनुमत्यादिकं भवेत्'' इति सङ्गहतत्प्रपञ्चने हृदि कृत्वाऽऽह – **द्वितीयेच्छादाविति** ।।

ಇಚ್ಛೆಯ ಮೂಲಕ ಈಶ್ವರನು ಜೀವನನ್ನು ಪ್ರೇರಣೆ ಮಾಡುತ್ತಾನೆ. ಜೀವನಿಗೆ ಇಚ್ಛೆಯಾದರೂ ಕೂಡ ವಿಷಯ ಸನ್ನಿಧಾನದಿಂದ ಪ್ರಾಪ್ತವಾಗುತ್ತದೆ. ಆ ವಿಷಯ ಸನ್ನಿಧಾನವು ಅದೃಷ್ಟದಿಂದ ಉಂಟಾಗುತ್ತದೆ. ಆದ್ದರಿಂದ ಈಶ್ವರನ ಅಪೇಕ್ಷೆಯು ಪ್ರಾರಂಭದಲ್ಲಿರುವುದಿಲ್ಲ ಎಂದಭಿಪ್ರಾಯ. ಇಚ್ಛಾ ಪ್ರಯತ್ನರೂಪವಾದ ದ್ವಿತೀಯಾದಿ ಪ್ರಯತ್ನದಲ್ಲೂ ಕೂಡ ಹೀಗೆ ಹೇಳಬಹುದಲ್ಲವೇ ಈಶ್ವರನನ್ನೇಕೆ ಒಪ್ಪಬೇಕು ಎಂಬ ಪ್ರಶ್ನೆಗೆ ಶ್ರುತಪ್ರಕಾಶದಲ್ಲಿ ಹೀಗೆ ಉತ್ತರಿಸಲಾಗಿದೆ -

ಸನ್ನಿಧಾಪಕವೈಧುರ್ಯೇಽಪ್ಯರ್ಥಂ ಬುದ್ಧಿಸ್ಥತಾಂ ನಯನ್ ।

ಪ್ರಯೋಜಕೋಽನುಮಂತಾ ಚ ಭವತೀಶಸ್ತದಾ ತದಾ ।

ಪೂರ್ವಪ್ರವೃತ್ತೇಶ್ಚ ಫಲಮನುಮತ್ಯಾದಿಕಂ ಭವೇತ್ ॥

ಅಸನ್ನಿಧಾಪಿತವಾದ ವಿಷಯಗಳನ್ನು ಪರಮಾತ್ಮನು ಬುದ್ಧಿಯಲ್ಲಿ ತಂದುಕೊಡುತ್ತಾನೆ. ಮತ್ತು ಜೀವನು ಮಾಡುವ ಪ್ರವೃತ್ತಿಯಲ್ಲಿ ಅನುಮಂತೃವಾಗಿದ್ದಾನೆ. ಪ್ರಥಮಪ್ರವೃತ್ತಿಗೆ ಫಲವನ್ನು ನೀಡುವಿಕೆಯೇ ಅನುಮತಿ ಎಂದು ಕರೆಸಿಕೊಳ್ಳುತ್ತದೆ. ಶ್ರುತಪ್ರಕಾಶದ ಈ ಮಾತಿನ ಸಂಗ್ರಹವನ್ನು ಮತ್ತು ವಿವರಣೆಯನ್ನು 'ದ್ವಿತೀಯೇಚ್ಛಾದೌ' ಇತ್ಯಾದಿ ವಾಕ್ಯಗಳಿಂದ ಗ್ರಂಥಕಾರರು ಮಾಡುತ್ತಿದ್ದಾರೆ.

ಕರ್ತೃತ್ವಾಧಿಕರಣ (೨-೩-೧೭)

**प्रकाशः – एवं विशेषोपकारमिति ।।** हेत्वन्तरासन्निधापितविषयस्य बुद्धौ सन्निधापनरूपं विशेषोपकारमित्यर्थः । करणकलेवरादिदानरूपप्रकारश्चेतनानां सर्वकार्यसाधारणः । तत्र विषयसन्निध्यादेरदृष्टादिनैव सिद्धतयेश्वरस्य तत्रौदासीन्येऽपीह द्वितीयेच्छादौ हेत्वन्तरासन्निधापितविषयसन्निधापनरूप-विशेषोपकारकर्तृत्वात्प्रयोजकत्वं तस्येत्यर्थः ।। **अप्रवृत्तेति ।।** विषयसन्निधापनेन तस्येच्छाप्रयत्नयोरीश्वरेणोत्पादनादिति भावः । आद्येच्छाप्रयत्नरूपाद्य-प्रवृत्तावीश्वरस्यौदासीन्ये सर्वकर्तृत्वश्रुतिः कथमित्यत आह – **एष हीति ।।** सङ्कोचे हेतुमाह – **अन्यथेति ।।** आद्यप्रवृत्तावपि जीवस्यास्वातन्त्र्ये तत्रापीश्वरस्यैवेच्छादि-कर्तृत्व इत्यर्थः ।। **तत्रोपेक्ष्येति ।।** आद्यप्रवृत्तावुदासीनो भूत्वा ततः अनन्तरम् । द्वितीयादि प्रवृत्तावित्यर्थः ।

ಹೇತ್ವಂತರದಿಂದ ಸನ್ನಿಧಾನವಾಗದ ವಿಷಯವನ್ನು ಬುದ್ಧಿಯಲ್ಲಿ ಸನ್ನಿಧಾನವಾಗುವಂತೆ ಮಾಡುವುದೇ ಪರಮಾತ್ಮನು ಮಾಡುವ ವಿಶೇಷೋಪಕಾರವಾಗಿದೆ ಎಂದು ತಿಳಿಯಬೇಕು. ಪರಮಾತ್ಮನು ಮೊದಲು ಇಂದ್ರಿಯಗಳನ್ನು, ದೇಹ ಮೊದಲಾದವುಗಳನ್ನು ಸಕಲ ಚೇತನಸಾಧಾರಣವಾಗಿ ನೀಡುತ್ತಾನೆ. ಅಲ್ಲಿ ವಿಷಯ ಸಾನ್ನಿಧ್ಯವು ಅದೃಷ್ಟಾದಿಗಳಿಂದಲೇ ಸಿದ್ಧವಾಗುವುದರಿಂದ ಈಶ್ವರನು ಪ್ರಥಮ ಪ್ರವೃತ್ತಿಯಲ್ಲಿ ಉದಾಸೀನನಾಗಿರುತ್ತಾನೆ. ಎರಡನೇ ಇಚ್ಛೆ ಮೊದಲಾದವುಗಳಲ್ಲಿ ಹೇತ್ವಂತರ ಸನ್ನಿಧಾನವು ಆಗದೇ ಇದ್ದಾಗ ಅದರ ಸನ್ನಿಧಾನವನ್ನು ಉಂಟುಮಾಡುವ ಮೂಲಕ ವಿಶೇಷೋಪಕಾರಿಯಾಗುತ್ತಾನೆ. ಹೀಗೆ ಈಶ್ವರನು ಜೀವರಿಗೆ ಪ್ರಯೋಜಕನಾಗಿದ್ದಾನೆಂದು ತಿಳಿಯಬೇಕು. ಗ್ರಂಥದಲ್ಲಿ 'ಅಪ್ರವೃತ್ತಪ್ರವರ್ತಕೋಹಿ ಪ್ರಯೋಜಕಃ' ಎಂದು ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ – ವಿಷಯ ಸನ್ನಿಧಾನವನ್ನು ತಂದುಕೊಡುವ ಮೂಲಕ ಜೀವನಿಗೆ ಇಚ್ಛಾಪ್ರಯತ್ನಗಳು ಈಶ್ವರನು ಹುಟ್ಟಿಸುತ್ತಾನೆ ಎಂದು. ಮೊದಲನೇ ಇಚ್ಛಾ ಹಾಗೂ ಪ್ರಯತ್ನರೂಪವಾದ ಪ್ರವೃತ್ತಿಯಲ್ಲಿ ಈಶ್ವರನು ಉದಾಸೀನನಾಗಿದ್ದರೆ ಸರ್ವಕರ್ತೃತ್ವ ಶ್ರುತಿಗೆ ಹೇಗೆ ವ್ಯಾಖ್ಯಾನ ಮಾಡುವುದು? ಎಂಬ ಪ್ರಶ್ನೆಗೆ 'ಏಷ ಹಿ' ಇತ್ಯಾದಿ ಗ್ರಂಥವು ಹೊರಟಿದೆ. ಈ ಶ್ರುತಿಗೆ ಸಂಕೋಚವಾಗಿ ಅರ್ಥವನ್ನು ಮಾಡಲು ಕಾರಣವನ್ನು 'ಅನ್ಯಥಾ' ಇತ್ಯಾದಿ ವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ.

**प्रकाशः – वैषम्यनये** त्वशुभशुभप्रवृत्त्योर्यथाक्रममुपेक्षानुमत्यर्थकत्वमुपेत्य संमतिरुक्ता ।। **इत्यादिवचनाविरोधायेति ।।** तद्भाष्ये स्वोक्तार्थसंमतित्वेन ''तेषाम्'' इति ''तानहम्'' इति च वाक्यद्वयस्यानुग्रहनिग्रहोक्तिपरस्योदाहृतत्वादिति भावः।।

ವೈಷಮ್ಯನೈರ್ಘೃಣ್ಯಾಧಿಕರಣದಲ್ಲಿ ಅಶುಭಪ್ರವೃತ್ತಿ ಹಾಗೂ ಶುಭಪ್ರವೃತ್ತಿಗಳಿಗೆ ಯಥಾ ಕ್ರಮವಾಗಿ ಉಪೇಕ್ಷ ಮತ್ತು ಅನುಮತಿ ಎಂಬರ್ಥವನ್ನು ಒಪ್ಪಿ ಸಮ್ಮತಿಯನ್ನು ತಿಳಿಸಲಾಗಿದೆ. ಇತ್ಯಾದಿವಚನವಿರೋಧಾಯ' ಎಂಬುದರ ಅಭಿಪ್ರಾಯ ಹೀಗಿದೆ – ರಾಮಾನುಜಭಾಷ್ಯದಲ್ಲಿ ತಾವು ಹೇಳಿದ ಅರ್ಥಕ್ಕೆ ಸಮ್ಮತಿಯನ್ನಾಗಿ 'ತೇಷಾಮ್ ಸತತಯುಕ್ತಾನಾಂ' ಎಂಬ ವಾಕ್ಯವನ್ನು ಪರಮಾತ್ಮನು ಮಾಡುವ ಅನುಗ್ರಹದ ವಿಷಯದಲ್ಲಿ ನೀಡಿದ್ದಾರೆ. 'ತಾನಹಂ ದ್ವಿಷತಃ ಕ್ರೂರಾನ್' ಎಂಬ ಶ್ಲೋಕವನ್ನು ಪರಮಾತ್ಮನ ನಿಗ್ರಹ ವಿಷಯದಲ್ಲಿ ಸಮ್ಮತಿಯನ್ನಾಗಿ ನೀಡಿರುತ್ತಾರೆ.

**प्रकाशः – समर्थितत्वादिति ।।** ''वैषम्यनैर्घृण्येन'' इत्यधिकरण इति भावः।। **अनुमन्तृत्वेन चेति ।।** द्वितीयादिप्रवृत्तिप्रेरकत्वे प्रवृत्तप्रवर्तकत्वरूपानुमन्तृत्वेन चेत्यर्थः । ''एतदुक्तं भवति'' इत्यादिना श्रुतप्रकाशोक्तमनूद्य निराह – **एतेनेति ।।**

'ಸಮರ್ಥಿತತ್ವಾತ್' ಎಂದರೆ ಈಶ್ವರನು ಪ್ರಥಮಪ್ರವೃತ್ತಿಯಲ್ಲಿ ಪ್ರಯೋಜಕನಾಗಿದ್ದರೂ ಕೂಡ ವೈಷಮ್ಯನೈರ್ಘೃಣ್ಯ ದೋಷವು ಬರುವುದಿಲ್ಲವೆಂದು ವೈಷಮ್ಯನೈರ್ಘೃಣ್ಯಾಧಿಕರಣದಲ್ಲೇ ಸಮರ್ಥನೆ ಮಾಡಲಾಗಿದೆ ಎಂದರ್ಥ. 'ಅನುಮಂತ್ರತ್ವೇನ ಚ' ಎಂಬುದರ ಅಭಿಪ್ರಾಯ ಹೀಗಿದೆ – ದ್ವಿತೀಯಾದ ಪ್ರವೃತ್ತಿಗಳಿಗೆ ಪ್ರೇರಕನಾಗಿದ್ದಾನೆ ಮತ್ತು ಮೊದಲೇ ಪ್ರವೃತ್ತನಾದವನಿಗೆ ಪ್ರವರ್ತಕನಾಗಿದ್ದಾನೆ. ಈ ರೀತಿಯಾದಾ ಅನುಮಂತ್ರದಿಂದ ಪರಮಾತ್ಮನಿಗೆ ವೈಷಮ್ಯನೈರ್ಘೃಣ್ಯದೋಷವು ಬಂದೇ ಬರುತ್ತದೆ ಎಂದರ್ಥ. 'ಏತದುಕ್ತಂ ಭವತಿ' ಇತ್ಯಾದಿಯಾಗಿ ಶ್ರುತಪ್ರಕಾಶದಲ್ಲಿ ಹೇಳಿದ್ದನ್ನೇ ಅನುವಾದ ಮಾಡಿ ನಿರಾಕರಣೆ ಮಾಡಲು 'ಏತೇನ' ಇತ್ಯಾದಿ ವಾಕ್ಯವು ಹೊರಟಿದೆ.

**प्रकाशः – अननुमन्तृत्वेति ।।** आदावसत्कार्ये प्रवृत्तं तथैव द्वितीयप्रवृत्तौ प्रेरयतीति प्रवृत्तप्रवर्तकत्वप्राप्तेरिति भावः ।। **अहेतुत्वाभावाच्चेति ।।** चिच्छक्त्यादिदानरूपसाधारणोपकारमुखेन प्राथमिकेच्छादावपि कारणत्वात् । अन्यथा सर्वकारणत्वभङ्गापत्तेः ।

बाह्यान्तःकरणव्याप्तितच्छक्त्याधानधारणैः ।
साधारणोपकारे स्यादिच्छादेः कारणं परः ।।

इति श्रुतप्रकाशोक्तेरिति भावः ।।

ಅನನುಮಂತ್ರತ್ವ ಇತ್ಯಾದಿ ವಾಕ್ಯದ ಅಭಿಪ್ರಾಯ ಹೀಗಿದೆ – ಯಾರು ಮೊದಲು ಅಸತ್ ಕಾರ್ಯದಲ್ಲಿ ಪ್ರವೃತ್ತನಾಗಿರುತ್ತಾನೋ ಅವನನ್ನು ಹಾಗೆಯೇ ದ್ವಿತೀಯಾದಿಪ್ರವೃತ್ತಿಯಲ್ಲಿ ಈಶ್ವರನು ಪ್ರೇರಣೆ ಮಾಡುತ್ತಾನೆ. ಆದರೆ ಮೊದಲು ಅಸತ್ ಕಾರ್ಯದಲ್ಲಿ ಪ್ರವೃತ್ತಿ ಮಾಡಿರುವವನಿಗೆ ಸತ್‌ಕಾರ್ಯದಲ್ಲಿ ಈಶ್ವರನು ಪ್ರವೃತ್ತಿ ಮಾಡಬೇಕು. ಅದನ್ನು ಮಾಡುತ್ತಿಲ್ಲ ಎಂದಭಿಪ್ರಾಯ. ಆದ್ದರಿಂದ ಈಶ್ವರನಿಗೂ ಕೂಡ ಫಲಾನ್ವಯವು ಆಗಲೇ ಬೇಕು ಎಂದಭಿಪ್ರಾಯ.

'ಹೇತುತ್ವಾಭಾವಾಚ್ಚ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ – ಈಶ್ವರನು ಸರ್ವಕಾರಣನೆಂದು ನೀವು ಅಂಗೀಕಾರ ಮಾಡಿದ್ದೀರಿ. ಹೀಗಿರುವಾಗ ಮೊದಲು ಬರುವ ಇಚ್ಛೆ ಸ್ವಾಭಾವಿಕವಾಗಿ ಬಂತು ಎಂದು ಹೇಳಿದರೆ ಸರ್ವಕಾರಣತ್ವವು ನಾಶವಾಗುತ್ತದೆ. ಆದ್ದರಿಂದ ಪ್ರಾಥಮಿಕ ಇಚ್ಛೆಯೂ ಕೂಡ ಈಶ್ವರಾಧೀನವೆಂದೇ ಹೇಳಬೇಕು. ಇಚ್ಛೆಯು ಬರಲು ಆವಶ್ಯಕವಾದ ಚಿಚ್ಛಕ್ತಿಯನ್ನು ಈಶ್ವರನು ನೀಡಿದ್ದಾನೆಂದು ಹೇಳಿದಾಗ ಪ್ರಾಥಮಿಕ ಇಚ್ಛೆಗೆ ಈಶ್ವರನು ಕಾರಣನೆಂದೇ ಹೇಳಿದಂತಾಯಿತು.

ಬಾಹ್ಯಾಂತಃಕರಣವ್ಯಾಪ್ತಿತಚ್ಛಕ್ತ್ಯಾಧಾನಧಾರಣೈಃ।
ಸಾಧಾರಣೋಪಕಾರೇ ಸ್ಯಾತ್ ಇಚ್ಛಾದೇಃ ಕಾರಣಂ ಪರಃ॥
ಕರ್ತೃತ್ವಾಧಿಕರಣ (೨-೩-೧೭)

ಪ್ರಥಮ ಇಚ್ಛೆ ಹಾಗೂ ಪ್ರಥಮಪ್ರವೃತ್ತಿಗಳಲ್ಲೂ ಕೂಡ ಪರಮಾತ್ಮನು ಕಾರಣನು ಆಗಿಯೇ ಆಗುತ್ತಾನೆ. ಏಕೆಂದರೆ ಬಾಹ್ಯಾಂತಃಕರಣಗಳಲ್ಲಿ ವ್ಯಾಪಿಸಿ ನೆಲೆಸಿರುತ್ತಾನೆ. ಮತ್ತು ಅಂತಃಕರಣಕ್ಕೆ ಆವಶ್ಯಕವಾದ ಶಕ್ತಿಯನ್ನು ಆಧಾನ ಮಾಡುತ್ತಾನೆ ಮತ್ತು ಧಾರಣೆ ಮಾಡುತ್ತಾನೆ. ಹೀಗೆ ಸಾಧಾರಣೋಪಕಾರವನ್ನು ಮಾಡಿದ ಮೇಲೆ ಬರುವ ಇಚ್ಛಾದಿಗಳಿಗೂ ಕೂಡ ಈಶ್ವರನು ಕಾರಣನೆಂದು ಹೇಳಿದಂತಾಯಿತು. ಈ ವಿಷಯವನ್ನು ಶ್ರುತಪ್ರಕಾಶದಲ್ಲಿ ಸ್ವತಃ ನೀವೇ ಹೇಳಿದ್ದೀರಿ. ಆದ್ದರಿಂದ ಪ್ರಥಮಪ್ರವೃತ್ತಿಯೂ ಕೂಡ ಈಶ್ವರಾಧೀನವೆಂದೇ ನೀವೂ ಒಪ್ಪಿದಂತಾಯಿತು.

**प्रकाशः** – द्वितीयप्रवृत्तिप्रेरणरूपस्यानुमन्तृत्वस्याद्यप्रवृत्तिफलदानरूपत्वाद-नुमन्तृत्वं न नैर्घृण्यादिदोषावहमित्यतो दोषान्तरमेतदुक्तमहेतुत्वाभावाच्चेति ।।

ದ್ವಿತೀಯಪ್ರವೃತ್ತಿಯಲ್ಲಿ ಈಶ್ವರನು ನೀಡುವ ಅನುಮತಿಯು ಪ್ರಥಮ ಪ್ರವೃತ್ತಿಯ ಫಲದಾನ-ರೂಪವಾಗಿದೆ. ಆದ್ದರಿಂದ ಪ್ರಥಮಪ್ರವೃತ್ತಿಯಲ್ಲಿ ಈಶ್ವರನು ಉದಾಸೀನನಾಗಿಯೇ ಇದ್ದಾನೆ. ಆದ್ದರಿಂದ ಫಲಾನ್ವಯವಾಗಲೀ, ವೈಷಮ್ಯಾದಿ ದೋಷಗಳಾಗಲಿ ಈಶ್ವರನಿಗೆ ಬರುವುದಿಲ್ಲ.

ಹೀಗೆ ಆಕ್ಷೇಪ ಮಾಡಬಾರದು. ಇದಕ್ಕೂ ಕೂಡ ನಾವು ಹಿಂದೆಯೇ ದೋಷವನ್ನು ಹೇಳಿದ್ದೇವೆ. ಅಸತ್ಕಾರ್ಯದಲ್ಲಿ ಪ್ರವೃತ್ತನಾದವನನ್ನು ನಿವಾರಣೆ ಮಾಡಲು ಈಶ್ವರನಿಗೆ ಸಾಧ್ಯವಿದ್ದಾಗ ಉದಾಸೀನನಾಗಿ ಕುಳಿತುಕೊಳ್ಳುವುದೇ ದೋಷವಾಗುತ್ತದೆ. ಮತ್ತು ಪ್ರಥಮ ಪ್ರವೃತ್ತಿಯಲ್ಲಿ ಉದಾಸೀನನಾಗಿದ್ದಾನೆ ಎಂಬ ವಿಷಯವೇ ತಪ್ಪು. ಪ್ರಥಮ ಪ್ರವೃತ್ತಿ ಎಂದರೆ ಇಚ್ಛಾ ಪ್ರಯತ್ನಗಳು ಎಂದರ್ಥ. ಈ ಇಚ್ಛಾ ಪ್ರಯತ್ನಗಳಿಗೆ ಈಶ್ವರನೇ ನಿಯಾಮಕನಾಗಿದ್ದಾನೆ. ಹೀಗೆ ಹಿಂದೆ ಹೇಳಿದ ದೋಷವನ್ನು ಅಪೇಕ್ಷಿಸಿ ಮತ್ತೊಂದು ದೋಷವನ್ನು ಇಲ್ಲಿ ಹೇಳಿದ್ದಾರೆಂದು ತಿಳಿಯಬೇಕು.

**प्रकाशः** – **उक्तरीत्येति** ।। अन्वयव्यतिरेकाभ्यामीशाधीनाया एव तस्या विध्यादिविषयत्वे तन्त्रत्वादित्युक्तरीत्येत्यर्थः ।

'ಉಕ್ತರೀತ್ಯಾ' ಎಂಬುದರ ಅಭಿಪ್ರಾಯ ಹೀಗಿದೆ - ನಮ್ಮ ಮತದಲ್ಲಿ ಈಶ್ವರಾಧೀನವಾದ ಪ್ರವೃತ್ತಿಯೇ ವಿಧ್ಯಾದಿವಿಷಯತ್ವಕ್ಕೆ ಪ್ರಯೋಜಕವಾಗಿದೆ. ಏಕೆಂದರೆ ನಾವು ಈಶ್ವರ ಅನಧೀನವಾದ ಪ್ರವೃತ್ತಿಯನ್ನು ಒಪ್ಪಿಯೇ ಇಲ್ಲ. ಆದ್ದರಿಂದ ಜ್ಞಾನೇಚ್ಛಾರೂಪವಾದ ಪ್ರವೃತ್ತಿಯು ಈಶ್ವರಾಧೀನವಾದರೂ ಕೂಡ ವಿಧ್ಯಾದಿವಿಷಯವಾಗುತ್ತದೆಂದು ನಾವು ಪೂರ್ವದಲ್ಲಿಯೇ ಹೇಳಿದ್ದೇವೆ. 'ಯತ್ರಪರಾಧೀನ ಪ್ರವೃತ್ತಿಃ ತತ್ರ ವಿಧ್ಯಾದಿವಿಷಯತ್ವಂ' 'ಯತ್ರ ಪರಾಧೀನ ಪ್ರವೃತ್ತ್ಯಭಾವಃ ತತ್ರ ವಿಧ್ಯಾದಿವಿಷಯತ್ವಾಭಾವಃ' ಜಡದಲ್ಲಿ ಹಾಗೂ ಈಶ್ವರನಲ್ಲಿ ಪರಾಧೀನಪ್ರವೃತ್ತಿಯು ಇರುವುದಿಲ್ಲ. ಅಲ್ಲಿ ವಿಧ್ಯಾದಿವಿಷಯತ್ವವೂ ಕೂಡ ಇರುವುದಿಲ್ಲ. ಜೀವರಲ್ಲಿ ಪರಾಧೀನಪ್ರವೃತ್ತಿಯು ಇದೆ. ಅಲ್ಲಿ ವಿಧ್ಯಾದಿವಿಷಯತ್ವವೂ ಕೂಡ ಇದೆ. ಹೀಗೆ ಅನ್ವಯವ್ಯತಿರೇಕದಿಂದ ಪರಾಧೀನಪ್ರವೃತ್ತಿಯು ವಿಧ್ಯಾದಿವಿಷಯಕ್ಕೆ ಪ್ರಯೋಜಕವೆಂದು ಹೇಳುತ್ತೇವೆ.

**प्रकाशः** – ''अंशे स्वातन्त्र्याजीवस्य विधिनिषेधविषयत्वम्'' इति श्रुतप्रकाशोक्तमेव प्रत्युतानुपपन्नमित्याह – **न हीति** ।।

ಅಂಶದಲ್ಲಿ ಸ್ವಾತಂತ್ರ್ಯವನ್ನು ಮಾತ್ರ ಜೀವನಿಗೆ ನೀವು ಒಪ್ಪಿದ್ದೀರಿ. ಏಕೆಂದರೆ ಪ್ರಥಮಪ್ರವೃತ್ತಿಯಲ್ಲಿ ಸ್ವಾತಂತ್ರ್ಯವಿದೆ. ದ್ವಿತೀಯಾದಿ ಪ್ರವೃತ್ತಿಯಲ್ಲಿ ಸ್ವಾತಂತ್ರ್ಯವಿಲ್ಲವೆಂದು ಹೇಳಿದ್ದೀರಿ. ಹಾಗಾದರೆ ಪ್ರಥಮ-

ಪ್ರವೃತ್ತಿಯಲ್ಲಿ ಸ್ವಾತಂತ್ರ್ಯವನ್ನು ಒಪ್ಪಿರುವುದರಿಂದಲೇ ವಿಧ್ಯಾದಿವಿಷಯತ್ವವು ಜೀವನಲ್ಲಿ ಅಯುಕ್ತವಾಗುತ್ತದೆ. 'ಅಂಶೇ ಸ್ವಾತಂತ್ರ್ಯಜ್ಜೀವಸ್ಯ ವಿಧಿನಿಷೇಧವಿಷಯತ್ವಾತ್' ಎಂಬ ಶ್ರುತಪ್ರಕಾಶದಲ್ಲಿ ಹೇಳಿದ್ದನ್ನೇ ಪ್ರಕೃತ ಅನುಪಯುಕ್ತವೆಂಬುದಾಗಿ 'ನಹಿ' ಇತ್ಯಾದಿ ವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ.

**प्रकाशः –** तथा च प्रथमेच्छाप्रयत्नयोरंशे स्वतन्त्रस्याप्यंशान्तरे पराधीनस्य न विध्यादिविषयत्वं करणकलेवरादिपरिकरलाभस्य पराधीनत्वेन तदंशे तस्यास्वातन्त्र्यादिति भावः ।।

ಪ್ರಥಮೇಚ್ಛಾಪ್ರಯತ್ನವೆಂಬ ಅಂಶದಲ್ಲಿ ಅಸ್ವಾತಂತ್ರ್ಯವನ್ನು ಒಪ್ಪಿದ್ದೀರಿ. ಆದರೆ ಪ್ರಥಮ ಪ್ರವೃತ್ತಿಯಲ್ಲೂ ಕೂಡ ಜೀವನು ಅಸ್ವತಂತ್ರನೇ ಆಗಿದ್ದಾನೆ. ಏಕೆಂದರೆ ಇಂದ್ರಿಯಗಳು ದೇಹ ಮೊದಲಾದ ಪರಿಕರಗಳ ಲಾಭವು ಈಶ್ವರ ಅಧೀನವಾಗಿಯೇ ಆಗುತ್ತದೆ ಎಂದು ಒಪ್ಪಿದ್ದೀರಿ. ಈ ಅಂಶದಲ್ಲಿ ನೀವು ಅಸ್ವಾತಂತ್ರ್ಯವನ್ನು ಒಪ್ಪಲೇಬೇಕು.

**प्रकाशः –** **तत्कल्पनापातादिति** ।। ईश्वरस्यौदासीन्यकल्पनापातादि-त्यर्थः । नन्वेतदाशङ्क्य श्रुतप्रकाशे ''अन्तःप्रविष्टश्शास्ता जनानामिति श्रुतिबलादेवमभ्युपगम्यत'' इत्युक्तमित्यत आह – **श्रुतिस्त्विति** ।।

'ನ ತತ್ಕಲ್ಪನಾಪಾತಾತ್' ಎಂದರೆ ಈಶ್ವರನಿಗೆ ಔದಾಸೀನ್ಯಕಲ್ಪನೆಯನ್ನು ದ್ವಿತೀಯಾದಿಕಲ್ಪನೆಗಳಲ್ಲೂ ಕೂಡ ಮಾಡಬೇಕಾದೀತು ಎಂದರ್ಥ. ಶ್ರುತಪ್ರಕಾಶದಲ್ಲಿ ಇದನ್ನೇ ಆಶಂಕೆ ಮಾಡಿಕೊಂಡು ಉತ್ತರಿಸಲಾಗಿದೆ. ಪ್ರಥಮಪ್ರವೃತ್ತಿಯಲ್ಲಿ ಈಶ್ವರೇತರಕಾರಣಗಳಿಂದ ಪ್ರವೃತ್ತಿವುಂಟಾಗುವುದಾದರೆ, ದ್ವಿತೀಯಾದಿ ಪ್ರವೃತ್ತಿಗಳಲ್ಲೂ ಕೂಡ ಹಾಗೆಯೇ ಹೇಳಬಹುದಲ್ಲ. ಈಶ್ವರನ ಆವಶ್ಯಕತೆಯಿರುವುದಿಲ್ಲ ಎಂದು ಆಕ್ಷೇಪ ಮಾಡಬಾರದು. ಏಕೆಂದರೆ 'ಅಂತಃಪ್ರವಿಷ್ಟಃ ಶಾಸ್ತಾ ಜನಾನಾಮ್' ಎಂಬ ಶ್ರುತಿಯು ಪರಮಾತ್ಮನೇ ಸಕಲಕ್ಕೂ ಪ್ರೇರಕನಾಗಿದ್ದಾನೆಂದು ಹೇಳುತ್ತಿದೆ. ಈ ಶ್ರುತಿಯ ಬಲದಿಂದ ದ್ವಿತೀಯಾದಿ ಪ್ರವೃತ್ತಿಗಳಲ್ಲಿ ಈಶ್ವರನೇ ಪ್ರೇರಕವೆಂದು ಹೇಳುತ್ತೇವೆ.

ಈ ಆಕ್ಷೇಪಕ್ಕೆ 'ಶ್ರುತಿಸ್ತು' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः –** उभयत्र प्रथमप्रवृत्तौ द्वितीयादिप्रवृत्तौ चेत्यर्थः । ''एवं विशेषोपकारं प्रथमत एव'' इत्यादिनोक्तं निराह – **किञ्च यत्रेति** ।। द्वितीयादि-प्रवृत्तावित्यर्थः ।

ಶ್ರುತಿಯು ದ್ವಿತೀಯಪ್ರವೃತ್ತಿಯಲ್ಲಿ ಶಾಸನ ಮಾಡುತ್ತಾನೆಂದು ಎಂದು ಹೇಳುತ್ತಿಲ್ಲ. ಸರ್ವಸಾಧಾರಣವಾಗಿ ಈಶ್ವರನೇ ಶಾಸಕನಾಗಿದ್ದಾನೆಂದಷ್ಟೇ ಹೇಳುತ್ತಿದೆ. ಹೀಗಿರುವಾಗ ಪ್ರಥಮಪ್ರವೃತ್ತಿಯಲ್ಲಿ ಹಾಗೂ ದ್ವಿತೀಯಪ್ರವೃತ್ತಿ ಎರಡರಲ್ಲೂ ಕೂಡ ಈಶ್ವರನು ಶಾಸಕನಾಗಿದ್ದಾನೆಂದು ಹೇಳುವುದೇ ಯುಕ್ತ.

ಪ್ರಥಮಪ್ರವೃತ್ತಿಯಲ್ಲಿ ಈಶ್ವರನು ವಿಶೇಷವಾದ ಉಪಕಾರವನ್ನು ಮಾಡುತ್ತಾನೆ ಎಂದು ಹೇಳುವುದಾದರೆ ಪುನಃ ಈಶ್ವರನಿಗೆ ವೈಷಮ್ಯದೋಷವು ಬಂದೇಬರುತ್ತದೆ ಎಂಬುದಾಗಿ 'ಕಿಂಚ' ಇತ್ಯಾದಿ ವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ. ಗ್ರಂಥದಲ್ಲಿ ಹೇಳಿದ ಕಿಂಚ ಯತ್ರ ಎಂದರೆ ದ್ವಿತೀಯಾದಿ ಪ್ರವೃತ್ತಿಗಳಲ್ಲಿ ಎಂದರ್ಥ.

**प्रकाशः – ननु द्वितीयादि प्रवृत्तिप्रेरणस्य प्रथमप्रवृत्तिफलदानरूपत्वान्न वैषम्यादीति चेन्न । अनिष्टप्रवृत्तिनिवारणशक्तस्य तथैव प्रेरणे वैषम्याद्यनिवारणादिति भावः ।**

ದ್ವಿತೀಯಾದಿ ಪ್ರವೃತ್ತಿಗಳಲ್ಲಿ ಈಶ್ವರನು ಪ್ರೇರಣೆ ಮಾಡಿದರೂ ಕೂಡ, ಪ್ರಥಮಪ್ರವೃತ್ತಿಯ ಫಲದಾನರೂಪವಾಗಿಯೇ ಮಾಡಿದ್ದಾನೆ. ಆದ್ದರಿಂದ ಈಶ್ವರನಿಗೆ ವೈಷಮ್ಯದೋಷವು ಬರುವುದಿಲ್ಲ.

ಹೀಗೆ ಆಕ್ಷೇಪ ಮಾಡಬಾರದು. ಏಕೆಂದರೆ ಅನಿಷ್ಟಪ್ರವೃತ್ತಿಯಲ್ಲಿ ನಿವಾರಣೆ ಮಾಡಲು ಈಶ್ವರನು ಶಕ್ತನಾಗಿದ್ದಾನೆ. ಆದರೂ ಕೂಡ ಅವನು ಅನಿಷ್ಟಾದಿಗಳಲ್ಲಿಯೇ ಪ್ರವೃತ್ತಿಯನ್ನು ಮಾಡಿಸುತ್ತಾನೆಂದು ಹೇಳಿದರೆ ವೈಷಮ್ಯನೈರ್ಘೃಣ್ಯದೋಷವು ಬಂದೇ ಬರುತ್ತದೆ.

**प्रकाशः – श्रुतप्रकाशोक्तं समाधिमाशङ्क्य निराह – ननु चेति ।। इति ।। भाष्योक्तमिति ।। ''पूर्वकर्मप्रयत्नं च संस्कारं चाप्यपेक्ष्य तु । ईश्वरः कारयेत्सर्वम्'' इत्यादि भाष्योक्तस्मृतितात्पर्यार्थानुवादोऽयम् ।।**

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते**
**चन्द्रिकाप्रकाशे कर्तृत्वाधिकरणं सम्पूर्णम् ।।१७।।**

ಶ್ರುತಪ್ರಕಾಶದಲ್ಲಿ ಹೇಳಿದ ಸಮಾಧಾನವನ್ನು ಆಶಂಕಿಸಿ 'ನನು ಚ' ಎಂಬುದರಿಂದ ನಿರಾಕರಣೆ ಮಾಡುತ್ತಿದ್ದಾರೆ.

**ಪೂರ್ವಕರ್ಮಪ್ರಯತ್ನಂ ಚ ಸಂಸ್ಕಾರಂ ಚಾಪ್ಯಪೇಕ್ಷ್ಯ ತು ।**
**ಈಶ್ವರಃ ಕಾರಯೇತ್ ಸರ್ವಮ್.........॥**

ಎಂಬುದಾಗಿ ಭಾಷ್ಯದಲ್ಲಿ ಪೂರ್ವಕರ್ಮ, ಪ್ರಯತ್ನ, ಸಂಸ್ಕಾರ ಇವುಗಳನ್ನು ಅಪೇಕ್ಷಿಸಿಕೊಂಡು ಈಶ್ವರನು ಆಯಾ ಜೀವರ ಮೂಲಕ ಕಾರ್ಯಗಳನ್ನು ಮಾಡಿಸುತ್ತಾನೆ ಎಂಬುದಾಗಿ ಭಾಷ್ಯದಲ್ಲಿ ಸ್ಮೃತಿವಾಕ್ಯವನ್ನು ಉದಾಹರಿಸಿದ್ದಾರೆ. ಅದರ ತಾತ್ಪರ್ಯಾರ್ಥದ ಅನುವಾದವನ್ನೇ ಸಮರ್ಥನೆ ಮಾಡಿದ್ದಾಯಿತು ಎಂಬುದನ್ನು ಗ್ರಂಥದಲ್ಲಿ 'ಭಾಷ್ಯೋಕ್ತಮ್' ಎಂಬುದರಿಂದ ತಿಳಿಸಿದ್ದಾರೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಕರ್ತೃತ್ವಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

ಪರಿಪೂರ್ಣಚಂದ್ರಿಕಾ

# ಅಂಶಾಧಿಕರಣ

(೨-೩-೧೮)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

॥ ಶ್ರೀಗುರುಭ್ಯೋ ನಮಃ ॥

# ಅಂಶಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – अंशो नानाव्यपदेशादन्यथा चापि दाशकितवादित्वमधीयत एके ॥**

ಜೀವನು ಪರಮಾತ್ಮನ ಭಿನ್ನಾಂಶವಾಗಿದ್ದಾನೆ. ಏಕೆಂದರೆ ಶ್ರುತಿಗಳಲ್ಲಿ ಜೀವನು ಪರಮಾತ್ಮನ ತಂದೆಯೆಂದು ಮತ್ತೊಂದು ಶ್ರುತಿಯಲ್ಲಿ ಪರಮಾತ್ಮನೇ ಜೀವನಿಗೆ ತಂದೆಯೆಂದು ಅನೇಕ ರೀತಿಯ ಸಂಬಂಧವನ್ನು ಜೀವಪರಮಾತ್ಮರಿಗೆ ಹೇಳಲಾಗಿದೆ. ಶ್ರುತಿಗಳಲ್ಲಿ, ಜೀವನಿಗೂ ಪರಮಾತ್ಮನಿಗೂ ಯಾವುದೇ ಸಂಬಂಧವಿಲ್ಲವೆಂದು ಹೇಳಲಾಗಿದೆ. ಇದರಿಂದ ಜೀವರಿಗೆ ಪರಮಾತ್ಮನಿಂದ ಯಾವುದೇ ಉಪಕಾರವಿಲ್ಲವೆಂದು ತಿಳಿಯುತ್ತದೆ. ಇನ್ನು ಕೆಲವೆಡೆ ಜೀವನಿಗೆ ಪರಮಾತ್ಮನಿಂದ ಉಪಕಾರವಿದೆಯೆಂದು ಹೇಳಲಾಗಿದೆ. ಆದ್ದರಿಂದ ಜೀವನು ಪರಮಾತ್ಮನ ಭಿನ್ನಾಂಶನಾಗಿದ್ದಾನೆ. ಅಥವಾ ಜೀವನು ಪರಮಾತ್ಮನ ಸಾದೃಶ್ಯವನ್ನು ಪಡೆದಿರುತ್ತಾನೆ. ಏಕೆಂದರೆ ಕೆಲವು ವೇದಶಾಖಿಗಳು ಜೀವನನ್ನು ಬ್ರಹ್ಮನಿಗಿಂತ ಅಭಿನ್ನನೆಂದು ಹೇಳುತ್ತಾರೆ. ಮತ್ತೆ ಕೆಲವರು ಬ್ರಹ್ಮನಿಂದ ಭಿನ್ನನೆಂದು ಹೇಳುತ್ತಾರೆ. ಇವೆರಡನ್ನು ಸಾದೃಶ್ಯದಿಂದಲೇ ಕೂಡಿಸಬೇಕು.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** जीवः परमात्मनोंऽश एव । पितापुत्रत्वादिसम्बन्धेन । केवलं तदुपजीवकस्वरूपांशत्वेन च न तु न कदाचित् ईश्वरवद् उपजीव्यः। कुतः । **नानाव्यपदेशात्** 'मां रक्षतु' इत्यादौ पितृत्वभ्रातृत्वादिनानाप्रकारेण जीवस्येशसम्बन्धित्वोक्तेः । किञ्च यतः एके शाखिनः 'अन्यः परोऽन्यो जीवः'

इत्यादिना एनं जीवं परात् **अन्यथा भिन्नत्वेन अधीयते पठन्ति** । यतः अन्ये च शाखिनः 'ब्रह्म दाशाः' इत्यादिना ब्रह्मणो **दाशकितवादित्वं** दाशकितवशब्दितजातिविशेषयुक्तजीवप्रभृतिभावम् । तदभेदमिति यावत् । दाशकितवादेव चाब्रह्मत्वमधीयते । अतोऽशत्वरूपांशत्ववानित्यर्थः ॥१॥

ಜೀವನು ಪರಮಾತ್ಮನ ಅಂಶಃ ಏವ = ಅಂಶನೇ ಆಗಿರುತ್ತಾನೆ. ನಾನಾವ್ಯಪದೇಶಾತ್ = ಜೀವನನ್ನು ಕೆಲವು ಶ್ರುತಿಗಳಲ್ಲಿ ಪರಮಾತ್ಮನ ತಂದೆಯೆಂದು, ಇನ್ನು ಕೆಲವೆಡೆ 'ಮಾಂ ರಕ್ಷತು ವಿಭುರ್ನಿತ್ಯಂ ಪುತ್ರೋऽಹಂ ಪರಮಾತ್ಮನಃ' ಎಂಬುದಾಗಿ ಮಗ ಇತ್ಯಾದಿಯಾಗಿ ಅನೇಕ ರೀತಿಯ ಸಂಬಂಧವನ್ನು ಹೇಳಲಾಗಿದೆ. ಅದರಂತೆ ಅನ್ಯಥಾ ಚ ವ್ಯಪದೇಶಾತ್ = ಕೆಲವು ಶಾಖೆಗಳು 'ಅನ್ಯಃ ಪರೋऽನ್ಯೋ ಜೀವೋ ನಾಸಾವಸ್ಯ ಕುತಶ್ಚನ । ನಾಯಂ ತಸ್ಯಾಪಿ ಕಶ್ಚನ' ಎಂಬುದಾಗಿ ಕಾಷಾಯಣಶ್ರುತಿಯು ದೇವರಿಗೂ, ಜೀವರಿಗೂ ಯಾವುದೇ ಸಂಬಂಧವಿಲ್ಲವೆಂದು ಹೇಳುತ್ತಿದೆ. ಮತ್ತು ಏಕೇ = ಕೆಲವು ಶಾಖಿಗಳಲ್ಲಿ ಜೀವನನ್ನು ಪರಮಾತ್ಮನಿಗಿಂತ, ಅನ್ಯಥಾ = ಭಿನ್ನನಾಗಿ, ಅಧೀಯತೇ = ಪಠಿಸುತ್ತಾರೆ. ಯಾವ ಕಾರಣದಿಂದ ಬೇರೆ ಶಾಖಿಗಳು 'ಬ್ರಹ್ಮ ದಾಶಾಃ ಬ್ರಹ್ಮಕಿತವಾಃ ಬ್ರಹ್ಮೈವೇಮೇ ದಾಶಾಃ' ಇತ್ಯಾದಿಯಾಗಿ ಬ್ರಹ್ಮನಿಗೆ ದಾಶಕಿತವಾದಿತ್ವಂ = ದಾಶಕಿತವ ಶಬ್ದಪ್ರತಿಪಾದ್ಯವಾದ ಜಾತಿವಿಶೇಷದಿಂದ ಕೂಡಿದ ಜೀವ ಮೊದಲಾದವರ ಭಾವವನ್ನು ಅಂದರೆ ಬ್ರಹ್ಮಾಭೇದವನ್ನು ಹೇಳಿದ್ದಾರೆ. ಇನ್ನೂ ಕೆಲವರು ಅನ್ಯಥಾ ಚ = ಜೀವನು ಬ್ರಹ್ಮನಿಂದ ಭಿನ್ನನೆಂದೂ ಕೂಡ ಹೇಳಿರುತ್ತಾರೆ. ಇದೆಲ್ಲವನ್ನು ಸಾದೃಶ್ಯದಿಂದ ಕೂಡಿಸಬೇಕು. ಆದ್ದರಿಂದ ಜೀವನು ಪರಮಾತ್ಮನ ಭಿನ್ನಾಂಶನಾಗಿದ್ದಾನೆ.

## ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् –**

**'अंशा एव हीमे जीवाः अंशी हि परमेश्वरः ।**
**स्वयमंशैरिदं सर्वं कारयत्यचलो हरिः ॥'**
**इति गौपवनश्रुतावंशत्वं जीवस्योपलभ्यते ।**

ಅನುವಾದ - ಎಲ್ಲಾ ಜೀವರು ಪರಮಾತ್ಮನ ಅಂಶರಾಗಿದ್ದಾರೆ. ಪರಮಾತ್ಮನು ಅಂಶಿಯಾಗಿದ್ದಾನೆ. ಅಂಶರಾದ ಜೀವರಿಂದ ಸ್ವತಃ ಶ್ರೀಹರಿಯೇ ಎಲ್ಲಾ ಕೆಲಸ ಮಾಡಿಸುತ್ತಾನೆ. ಶ್ರೀಹರಿಯು ಅಚಲನಾಗಿದ್ದಾನೆ. ಹೀಗೆ ಗೌಪವನ ಶ್ರುತಿಯಲ್ಲಿ ಜೀವನು ಪರಮಾತ್ಮನ ಅಂಶವೆಂದು ಹೇಳಲಾಗಿದೆ.

ಪ್ರತಿಪದಾರ್ಥ -- ಇಮೇ ಜೀವಾಃ = ಈ ಎಲ್ಲ ಜೀವರು, ಅಂಶಾಃ ಏವ = ಪರಮಾತ್ಮನ ಅಂಶರು, ಪರಮೇಶ್ವರಃ = ಪರಮಾತ್ಮನಾದರು, ಅಂಶೀ = ಅಂಶಿಯಾಗಿರುತ್ತಾನೆ. ಸ್ವಯಂ = ಸ್ವತಃ, ಹರಿಃ = ಶ್ರೀಹರಿಯು, ಅಚಲಃ = ಅಚಲಸ್ವರೂಪನಾಗಿದ್ದಾನೆ. ಇತಿ = ಹೀಗೆ, ಗೌಪವನಶ್ರುತೌ = ಗೌಪವನಶ್ರುತಿಯಲ್ಲಿ, ಜೀವಸ್ಯ = ಜೀವನಿಗೆ, ಅಂಶತ್ವಂ = ಪರಮಾತ್ಮನ ಅಂಶತ್ವವನ್ನು ಹೇಳಿರುವುದು, ಉಪಲಭ್ಯತೇ = ಕಾಣಸುತ್ತಿದೆ

ಅಂಶಾಧಿಕರಣ (೨-೩-೧೮)

भाष्यम् –

'नैवांशो न सम्बन्धो नापेक्ष्यो जीवः परस्य ।
तथाऽपि तु यथायोगं फलदः प्रभुरेकराट् ।।
न नियम्यः स कस्यापि स सर्वस्य नियामकः ।।'
इति च भाल्लवेयश्रुतौ ।

ಅನುವಾದ - ಜೀವನು ಪರಮಾತ್ಮನ ಅಂಶನಾಗಲು ಸಾಧ್ಯವೇ ಇಲ್ಲ ಪರಮಾತ್ಮನ ಜೊತೆ ಯಾವ ಸಂಬಂಧವು ಇರುವುದಿಲ್ಲ. ಪರಮಾತ್ಮನು ಜೀವರನ್ನು ಅಪೇಕ್ಷೆ ಪಡುವುದೇ ಇಲ್ಲ. ಸೃಷ್ಟ್ಯಾದಿಗಳನ್ನು ಮಾಡಲು ಪರಮಾತ್ಮನು ಜೀವರು ಅನಿವಾರ್ಯವಲ್ಲ ಆದರೂ ಕೂಡ ಜೀವರ ಯೋಗ್ಯತೆಗೆ ಅನುಗುಣವಾಗಿ ಫಲವನ್ನು ನೀಡುತ್ತಾನೆ. ಅವರ ಯೋಗ್ಯತೆಯನ್ನು ಅನುಸರಿಸಿದರೂ ಕೂಡ ಪರಮಾತ್ಮನು ಸ್ವತಂತ್ರನಾಗಿದ್ದಾನೆ. ಮತ್ತು ಸ್ವಾಮಿಯಾಗಿದ್ದಾನೆ. ಜೀವರ ಯೋಗ್ಯತೆಗೂ ಕೂಡ ಅವನೇ ಸ್ವಾಮಿಯಾಗಿರುತ್ತಾನೆ. ತನ್ನ ಅಧೀನವಾದ ಯೋಗ್ಯತೆಯನ್ನು ಅವಲಂಬಿಸಿದರೆ ಅವನ ಸ್ವಾತಂತ್ರ್ಯಕ್ಕೆ ಚ್ಯುತಿ ಬರುವುದಿಲ್ಲ. ಇಂಥ ಪರಮಾತ್ಮನು ಯಾರ ಅಧೀನನೂ ಅಲ್ಲ. ಪ್ರತಿಯೊಂದಕ್ಕೂ ನಿಯಾಮಕನು. ಹೀಗೆ ಭಾಲ್ಲವೇಯ ಶ್ರುತಿಯು ಹೇಳುತ್ತಿದೆ.

ಪ್ರತಿಪದಾರ್ಥ -- ಜೀವಃ = ಆ ಜೀವನು, ನ ಅಂಶಃ = ಪರಮಾತ್ಮನ ಅಂಶನಲ್ಲ, ನ ಸಂಬಂಧಃ = ಯಾವುದೇ ಸಂಬಂಧವಿರುವುದಿಲ್ಲ. ಜೀವಸ್ಯ = ಜೀವನು, ಪರಸ್ಯ = ಪರಮಾತ್ಮನಿಗೆ, ನಾಪೇಕ್ಷ್ಯಃ = ಅನಿವಾರ್ಯನೂ ಅಲ್ಲ. ಯಥಾಯೋಗಮ್ = ಯೋಗ್ಯತೆಗೆ ಅನುಗುಣವಾಗಿ, ಏಕರಾಟ್ = ಸ್ವತಂತ್ರನಾದ, ಪ್ರಭುಃ = ಸ್ವಾಮಿಯಾದ ಪರಮಾತ್ಮನು, ಫಲಃ = ಫಲಗಳನ್ನು ನೀಡುತ್ತಾನೆ. ಸಃ = ಆ ಪರಮಾತ್ಮನು, ಕಸ್ಯಾಪಿ = ಯಾರಿಂದಲೂ, ನ ನಿಯಮ್ಯಃ = ನಿಯಮ್ಯನಲ್ಲ. ಸರ್ವಸ್ಯ = ಸರ್ವಕ್ಕೂ, ನಿಯಾಮಕಃ = ನಿಯಾಮಕನೇ ಆಗಿರುತ್ತಾನೆ. ಇತಿ = ಹೀಗೆ, ಭಾಲ್ಲವೇಯಶ್ರುತೌ = ಭಾಲ್ಲವೇಯ ಶ್ರುತಿಯಲ್ಲಿ ಹೇಳಲಾಗಿದೆ.

भाष्यम् – अतो ब्रवीति –

।।अंशो नानाव्यपदेशादन्यथा चापि दाशकितवादित्वमधीयत एके ।।१।।

'मां रक्षतु विभुर्नित्यं पुत्रोऽहं परमात्मनः ।'
'अवः परेण पितरं यो अस्यानुवेद' (ऋ.१.१६४.१८)
'यस्तद् वेद स पितुष्पिताऽसत्' (महाना. २.४)
'द्वा सुपर्णा सयुजा सखाया' (मुं. ३.१.१.) इत्यादिना नाना-व्यपदेशादंशो जीवः ।

ಅನುವಾದ - ಒಂದು ಶ್ರುತಿಯಲ್ಲಿ ಜೀವರನ್ನು ಭಗವಂತನ ಅಂಶವೆಂದು ಮತ್ತೊಂದು ಕಡೆ ಅಂಶವಲ್ಲವೆಂದು ಹೇಳಿದ್ದರಿಂದ ಪರಸ್ಪರ ವಿರೋಧವನ್ನು ಸೂತ್ರಕಾರರು ಪರಿಹರಿಸುತ್ತಿದ್ದಾರೆ.

ಸಮರ್ಥನಾದ ಪರಮಾತ್ಮನು ನನ್ನನ್ನು ರಕ್ಷಿಸಲಿ ನಾನು ಪರಮಾತ್ಮನ ಮಗನು ಎಂಬುದಾಗಿ ಶ್ರುತಿಯಲ್ಲಿ ಜೀವರನ್ನು ಪರಮಾತ್ಮನ ಪುತ್ರರೆಂದು ಕರೆಯಲಾಗಿದೆ.

ಉತ್ತಮನಾದ ಪರಮಾತ್ಮನಿಗಿಂತ ಅಧಮನಾದ ಜೀವನು ಈ ಜಗತ್ತಿನ ತಂದೆಯಾದ ಪರಮಾತ್ಮನನ್ನು ಯಥಾರ್ಥವಾಗಿ ತಿಳಿಯುತ್ತಾನೆ. ಆದ್ದರಿಂದ ಪರಮಾತ್ಮನು ಜೀವನಿಂದ ಹುಟ್ಟಿದ್ದಾನೆ. ಎಂಬುದಾಗಿ 'ಅವಃ ಪರೇಣ' ಎಂಬ ಶ್ರುತಿಯಲ್ಲಿ ಪರಮಾತ್ಮನು ಜೀವನನ್ನು ಪರಮಾತ್ಮನ ತಂದೆಯೆಂದು ಕರೆಯಲಾಗಿದೆ. ಈ ಲೋಕದಲ್ಲಿ ಯಾರು ಭಗವಂತನನ್ನು ತಿಳಿದನೋ ಅವನು ಜಗತ್‌ಪಿತನಾದ ಭಗವಂತನಿಗೂ ತಂದೆಯಾಗುವನು. 'ದ್ವಾ ಸುಪರ್ಣಾ ಸಯುಜಾ ಸಖಾಯಾ' ಜೊತೆಯಲ್ಲೇ ಇದ್ದು ಸ್ನೇಹಿತರಾಗಿರುವ ಎರಡು ಹಕ್ಕಿಗಳು ಒಂದೇ ದೇಹವೆಂಬ ಮರವನ್ನು ಆಲಂಗಿಸಿವೆ ಎಂಬ ಶ್ರುತಿಯಲ್ಲಿ ಜೀವ ಪರಮಾತ್ಮರು ಪರಸ್ಪರ ಸ್ನೇಹಿತರೆಂದು ಹೇಳಲಾಗಿದೆ. 'ಯಸ್ತು ವಿಜಾನಾತ್' ಎಂಬ ಶ್ರುತಿಯಲ್ಲಿ ಬ್ರಹ್ಮಜ್ಞಾನಿಯು ಪರಮಾತ್ಮನಿಗೂ ತಂದೆ ಎಂದು ಹೇಳಲಾಗಿದೆ. ಇವೇ ಮೊದಲಾದ ಶ್ರುತಿಯಿಂದ ಪರಮಾತ್ಮನ ಜೊತೆ ಸಂಬಂಧವನ್ನು ಹೇಳಿರುವುದರಿಂದ ಜೀವನು ಪರಮಾತ್ಮನ ಅಂಶನಾಗಿದ್ದಾನೆ.

ಪ್ರತಿಪದಾರ್ಥ -- ನಿತ್ಯಂ = ಯಾವಾಗಲೂ, ವಿಭುಃ = ಸ್ವಾಮಿಯಾದ ಪರಮಾತ್ಮನು, ಮಾಂ = ನನ್ನನ್ನು, ರಕ್ಷತು = ರಕ್ಷಿಸಲಿ. ಅಹಂ = ನಾನು, ಪರಮಾತ್ಮನಃ = ಪರಮಾತ್ಮನ, ಪುತ್ರಃ = ಮಗನು, ಪರೇಣ = ಉತ್ತಮನಾದ ಪರಮಾತ್ಮನಿಗಿಂತ, ಅವಃ = ನೀಚನಾದ ಜೀವನು, ಅಸ್ಯ = ಜಗತ್ತಿನ, ಪಿತರಂ = ತಂದೆಯಾದ ಪರಮಾತ್ಮನನ್ನು, ಅನುವೇದ = ಯಥಾರ್ಥವಾಗಿ ತಿಳಿಯುತ್ತಾನೆ, ಆದ್ದರಿಂದ ಪರಃ = ಪರಮಾತ್ಮನು, ಅವರೇಣ = ಈ ಜೀವನಿಂದ, ಪ್ರಜಾತಃ = ಹುಟ್ಟಿದನು. ಯಃ = ಯಾವ ಜೀವನು, ತತ್ = ಬ್ರಹ್ಮನನ್ನು, ವೇದಃ = ತಿಳಿದನು. ಸಃ = ಆ ಜೀವನು, ಪಿತುಃ = ಜಗತ್‌ಪಿತನಾದ ಪರಮಾತ್ಮನಾದ, ಪಿತಾ = ತಂದೆಯಾಗಿ, ಅಸತ್ = ಆದನು

ಯಃ = ಯಾವ ಜೀವನು, ತಾಃ = ಅವುಗಳನ್ನು, ವಿಜಾನತ್ = ತಿಳಿದನೋ, ಸಃ = ಅವನು ಪಿತುಃ = ಜಗತ್‌ಪಿತನಾದ ಬ್ರಹ್ಮನಿಗೆ, ಪಿತಾ = ತಂದೆಯು, ಅಸತ್ = ಆದನು.

ಸಯುಜಾ = ಜೊತೆಯಲ್ಲಿ, ಸಖಾಯಾ = ಸ್ನೇಹಿತರಾಗಿರುವ, ದ್ವಾ = ಎರಡು, ಸುಪರ್ಣಾ = ಹಕ್ಕಿಗಳು, (ಸಮಾನಮ್ = ಒಂದೇ ವೃಕ್ಷವನ್ನು, ಪರಿಷಸ್ವಜಾ = ಆಲಿಂಗಿಸಿವೆ.) ಇತ್ಯಾದಿನಾ = ಇವೇ ಮೊದಲಾದ ಶ್ರುತಿಗಳಿಂದ, ನಾನಾವ್ಯಪದೇಶಾತ್ = ಅನೇಕ ರೀತಿಯಲ್ಲಿ ಹೇಳಿರುವುದರಿಂದ, ಜೀವಃ = ಜೀವನು, ಅಂಶಃ = ಪರಮಾತ್ಮನ ಅಂಶನು.

**भाष्यम् — तथा च पाराशर्यायणश्रुतिः —**

**'अंशो ह्येष परस्य योऽयं पुमानुत्पद्यते च म्रियते च नाना ह्येनं व्यपदिशन्ति । पितेति पुत्रेति भ्रातेति सखेति च' इति । 'अन्यः परोऽन्यो जीवो नासावस्य कुतश्चन । नायं तस्यापि कश्चन' इत्यन्यथा च काषायाणश्रुतिः ।**

ಅನುವಾದ - ಸೂತ್ರಕಾರರು ಹೇಳಿದ ಈ ಅಂಶತ್ವವನ್ನು ಪಾರಾಶರ್ಯಾಯಣಶ್ರುತಿಯು ಪ್ರತಿಪಾದನೆ ಮಾಡುತ್ತಿದೆ. ಯಾವ ಮನುಷ್ಯನು ಹುಟ್ಟುತ್ತಾನೊ ಸಾಯುತ್ತಾನೋ ಅವನು ಪರಮಾತ್ಮನ ಅಂಶನಾಗಿದ್ದಾನೆ. ಆ ಜೀವನನ್ನು ತಂದೆ ಎಂದು ಮಗನೆಂದು ಸ್ನೇಹಿತನೆಂದು ಅನೇಕ ವಿಧವಾಗಿ ಹೇಳುತ್ತಾರೆ.

ಪರಮಾತ್ಮನು ಜೀವರಿಗಿಂತ ಭಿನ್ನನಾಗಿದ್ದಾನೆ. ಜೀವನೂ ಕೂಡ ಪರಮಾತ್ಮನಿಗಿಂತ ಭಿನ್ನವಾಗಿದ್ದಾನೆ. ಈ ಪರಮಾತ್ಮನು ಜೀವನಿಗೆ ಯಾವುದೇ ರೀತಿಯಿಂದ ಉಪಕಾರ ಮಾಡಲು ಅರ್ಹನಲ್ಲ. ಈ ಜೀವನು ಪರಮಾತ್ಮನಿಗೆ ಉಪಕಾರಕನೂ ಅಲ್ಲವೆಂದು ಕಾಷಾಯಣಶ್ರುತಿಯು ಹೇಳುತ್ತಿದೆ.

ಪ್ರತಿಪದಾರ್ಥ -- ಯೋಽಯಂ ಪುಮಾನ್ = ಯಾವ ಮನುಷ್ಯನು, ಉತ್ಪದ್ಯತೇ = ಹುಟ್ಟುತ್ತಾನೋ, ಮ್ರಿಯತೇಚ = ಸಾಯುತ್ತಾನೋ, ಏಷಃ = ಅವನು, ಪರಸ್ಯ = ಪರಮಾತ್ಮನ, ಅಂಶಃ = ಅಂಶನು, ಏನಮ್ = ಈ ಜೀವನನ್ನು, ಪಿತೇತಿ = ತಂದೆಯೆಂದು, ಪುತ್ರೇತಿ = ಮಗನೆಂದು, ಭ್ರಾತೇತಿ = ಸಹೋದರನೆಂದು, ಸಖೇತಿ = ಗೆಳೆಯನೆಂದು, ಹೀಗೆ ನಾನಾ = ಅನೇಕವಿಧವಾಗಿ ಹೇಳುತ್ತಾರೆ. ಪರಃ = ಪರಮಾತ್ಮನು, ಭಿನ್ನಃ = ಭಿನ್ನನು, ಜೀವಃ = ಜೀವನು, ಅಸೌ = ಈ ಪರಮಾತ್ಮನು, ಕುತಶ್ಚನ = ಯಾವುದರಿಂದಲೂ ಉಪಕಾರ ಮಾಡಲು, ನ = ಅರ್ಹನಲ್ಲ, ಅಯಂ = ಈ ಜೀವನು, ಕಶ್ಚನ = ಯಾವುದೇ ರೀತಿಯ ಉಪಕಾರಕನು, ನ = ಅಲ್ಲ. ಇತಿ = ಹೀಗೆ, ಅನ್ಯಥಾಚ = ಮತ್ತೊಂದು ರೀತಿಯಲ್ಲೂ, ಕಾಷಾಯಣಶ್ರುತಿಃ = ಕಾಷಾಯಣಶ್ರುತಿಯು ಹೇಳುತ್ತಿದೆ.

**भाष्यम् – 'ब्रह्म दाशा ब्रह्म कितवाः, ब्रह्मैवेमे दासाः' इत्यभेदेनाप्येकेऽधीयते।**

**तथा चाऽग्निवेश्यश्रुतिः –**

**'अंशो ह्येष परस्य भिन्नं ह्येनमधीयिरेऽभिन्नं ह्येनमधीयिरे' इति ।**

**वाराहे च –**

**'पुत्रभ्रातृसखित्वेन स्वामित्वेन यतो हरिः ।**
**बहुधा गीयते वेदैर्जीवोंऽशस्तस्य तेन तु ।।**
**यतो भेदेन तस्यायमभेदेन च गीयते ।**
**अतश्चांशत्वमुद्दिष्टं भेदाभेदौ न मुख्यतः ।।' इति ।।१।।**

ಅನುವಾದ - 'ಬ್ರಹ್ಮ ದಾಶಾಃ' ಎಂಬ ಶ್ರುತಿಯಲ್ಲಿ ಬ್ರಹ್ಮನು ಜೀವನಿಗಿಂತ ಅಭಿನ್ನನೆಂದು ಹೇಳಲಾಗಿದೆ. ಮೀನುಗಾರರು ಬ್ರಹ್ಮರೂಪರು ಜೂಜುಕೋರರು ಪರಿಚಾರಕರೆಲ್ಲರೂ ಬ್ರಹ್ಮರೂಪರು ಎಲ್ಲರೂ ಕೂಡ ಬ್ರಹ್ಮರೂಪರು ಎಂದು ಇದರ ಅರ್ಥ.

ಅಗ್ನಿವೇಶ್ಯಶ್ರುತಿಯು ಹೀಗೆ ಹೇಳುತ್ತಿದೆ - ಜೀವನು ಪರಮಾತ್ಮನ ಅಂಶವೇ ಆಗಿದ್ದಾನೆ. ಏಕೆಂದರೆ ಪರಮಾತ್ಮನ ದೆಸೆಯಿಂದ ಜೀವನು ಭಿನ್ನನಾಗಿದ್ದಾನೆ ಎಂದು ಅಧ್ಯಯನ ಮಾಡಿದ್ದಾರೆ. ಅಭಿನ್ನನಾಗಿದ್ದಾನೆಂದು ಅಧ್ಯಯನ ಮಾಡುತ್ತಾರೆ.

ವರಾಹಪುರಾಣದಲ್ಲಿ ಹೀಗೆ ಹೇಳಲಾಗಿದೆ - ಯಾವ ಕಾರಣದಿಂದ ಶ್ರೀಹರಿಯು ಮಗನಾಗಿ, ಅಣ್ಣನಾಗಿ, ಗೆಳೆಯನಾಗಿ, ಸಹೋದರನಾಗಿ, ಒಡೆಯನಾಗಿ ಅನೇಕ ರೂಪಗಳಿಂದ ವೇದಗಳಿಂದ ಪ್ರತಿಪಾದ್ಯನಾಗಿದ್ದಾನೊ ಆದ್ದರಿಂದ ಜೀವನು ಪರಮಾತ್ಮನ ಅಂಶನು ಆಗಿದ್ದಾನೆ.

ಮತ್ತು ಯಾವ ಕಾರಣದಿಂದ ಜೀವನು ಭಗವಂತನಿಗಿಂತ ಭಿನ್ನನಾಗಿ ಮತ್ತು ಭಗವಂತನಿಂದ ಅಭಿನ್ನನಾಗಿ ಹೇಳಲ್ಪಟ್ಟಿದ್ದಾನೋ, ಆ ಕಾರಣದಿಂದ ಜೀವನಿಗೆ ಬ್ರಹ್ಮನ ಅಂಶವೆಂದು ಉಲ್ಲೇಖ ಮಾಡುತ್ತದೆ.

ಪ್ರತಿಪದಾರ್ಥ -- ದಾಶಾಃ = ಮೀನುಗಾರರು, ಬ್ರಹ್ಮ = ಬ್ರಹ್ಮರೂಪರು, ಕಿತವಾಃ = ಜೂಜುಕೋರರು, ಬ್ರಹ್ಮ = ಬ್ರಹ್ಮಸ್ವರೂಪರು, ಇಮೇ ದಾಶಾಃ = ಈ ಪರಿಚಾರಕರೂ ಕೂಡ, ಬ್ರಹ್ಮೈವ = ಬ್ರಹ್ಮರೇ ಆಗಿರುತ್ತಾರೆ. ಇತಿ = ಹೀಗೆ, ಅಭೇದೇನಾಪಿ = ಅಭೇದದಿಂದಲೂ, ಏಕೇ = ಕೆಲವರು, ಅಧೀಯತೇ = ಅಧ್ಯಯನ ಮಾಡುತ್ತಾರೆ. ತಥಾ ಚ = ಹಾಗೆಯೆ, ಅಗ್ನಿವೇಶ್ಯಶ್ರುತಿಃ = ಅಗ್ನಿವೇಶ್ಯಶ್ರುತಿಯು ಹೇಳುತ್ತಿದೆ.

ಏಷಃ = ಜೀವನು, ಪರಸ್ಯ = ಪರಮಾತ್ಮನ, ಅಂಶೋಹಿ = ಅಂಶವೇ ಆಗಿದ್ದಾನೆ. ಏಕೆಂದರೆ ಏನಂ = ಈ ಜೀವನನ್ನು, ಭಿನ್ನಂ = ಪರಮಾತ್ಮನಿಂದ ಭಿನ್ನನ್ನಾಗಿ, ಅಧೀಯಿರೇ = ಅಧ್ಯಯನ ಮಾಡುತ್ತಾರೆ. ಅಭಿನ್ನಂ = ಪರಮಾತ್ಮನಿಗಿಂತ ಅಭಿನ್ನನನ್ನಾಗಿಯು, ಏನಂ = ಈ ಜೀವನನ್ನು, ಅಧೀಯಿರೇ = ಅಧ್ಯಯನ ಮಾಡುತ್ತಾರೆ.

ವಾರಾಹೇಚ = ವಾರಾಹಪುರಾಣದಲ್ಲೂ ಹೀಗೆ ಹೇಳಲಾಗಿದೆ - ಪುತ್ರ ಭ್ರಾತೃಸಖಿತ್ವೇನ = ಮಗನಾಗಿ, ಸಹೋದರನಾಗಿ, ಸ್ನೇಹಿತನಾಗಿ, ಸ್ವಾಮಿತ್ವೇನ = ಒಡೆಯನನ್ನಾಗಿ ಹೀಗೆ, ಬಹುಧಾ = ಅನೇಕ ವಿಧವಾಗಿ, ವೇದೈಃ = ವೇದಗಳಿಂದ, ಗೀಯತೇ = ಹೇಳಲ್ಪಡುತ್ತಾನೆ. ತೇನ ತು = ಆ ಕಾರಣದಿಂದ, ಜೀವಃ = ಜೀವನು, ತಸ್ಯ = ಪರಮಾತ್ಮನ, ಅಂಶಃ = ಅಂಶನು.

ಯತಃ = ಯಾವ ಕಾರಣದಿಂದ, ಅಯಂ = ಈ ಜೀವನದಿಂದ, ಭೇದೇನ ಚ = ಭಗವಂತನಿಂದ ಭಿನ್ನನಾಗಿ, ತಸ್ಯ = ಆ ಭಗವಂತ, ಅಭೇದೇನ = ಅಭೇದವನ್ನು ಹೊಂದಿ, ಗೀಯತೇ = ಹೇಳಲ್ಪಡುತ್ತಾನೊ, ಅತಃ = ಆಕಾರಣದಿಂದ ಜೀವನಿಗೆ, ಅಂಶತ್ವಂ = ಬ್ರಹ್ಮ ಅಂಶವೆಂಬ, ಮುಖ್ಯಃ = ಮುಖ್ಯವಾದ ಮಾತು, ಉದ್ದಿಷ್ಟಂ = ಹೇಳಲ್ಪಟ್ಟಿದೆ.

### ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**तत्वप्रकाशिका – अत्र परमात्मनि श्रुतिसमन्वयसिद्ध्यर्थं जीवविषयश्रुतिविरोधपरिहारादस्ति शास्त्रादिसङ्गतिः । हरौ श्रुतिसमन्वयो निरूपितः । स च जीवविषयश्रुतिविरोधेनाप्रामाण्येऽनुपपन्नः स्यादिति निराकार्यः ।**

ಈ ಅಧಿಕರಣದಲ್ಲಿ ಪರಮಾತ್ಮನಲ್ಲಿ ಶ್ರುತಿಸಮನ್ವಯವು ಸಿದ್ಧವಾಗುವುದಕ್ಕಾಗಿ ಜೀವವಿಷಯಕವಾದ ಶ್ರುತಿವಿರೋಧವನ್ನು ಪರಿಹಾರ ಮಾಡಲಾಗಿದೆ. ಆದ್ದರಿಂದ ಶಾಸ್ತ್ರ-

ಅಧ್ಯಾಯ-ಪಾದ ಸಂಗತಿಗಳು ಇರುತ್ತವೆ. ಶ್ರೀಹರಿಯಲ್ಲಿ ಶ್ರುತಿಸಮನ್ವಯವನ್ನು ಈ ಹಿಂದೆ ಸಮರ್ಥಿಸಲಾಯಿತು. ಇದು ಜೀವವಿಷಯಕ ಶ್ರುತಿವಿರೋಧವು ಬರುವ ಮೂಲಕ ಅಪ್ರಾಮಾಣ್ಯವು ಬರುವುದರಿಂದ ಅನುಪಪನ್ನವಾಗುತ್ತದೆ. ಆದ್ದರಿಂದ ಜೀವವಿಷಯಕ ಶ್ರುತಿ ವಿರೋಧವನ್ನು ಪರಿಹಾರ ಮಾಡಲೇಬೇಕು.

**तत्वप्रकाशिका – प्रकृतो जीवोऽत्र विषयः । किमीश्वरांशो न वेति सन्देहः। संशयबीजं श्रुतिविगानं दर्शयति – अंशा एवेति ।। तत्र न जीवो हरेरंश नाप्यनंश इति निर्णयो युज्यत इति पूर्वः पक्षः ।**

ಪ್ರಕೃತನಾದ ಜೀವನೇ ಈ ಅಧಿಕರಣಕ್ಕೆ ವಿಷಯನಾಗಿದ್ದಾನೆ. ಇವನು ಈಶ್ವರನ ಅಂಶವೋ, ಅಲ್ಲವೋ ? ಎಂಬುದು ಸಂದೇಹ. ಶ್ರುತಿಗಳ ಪರಸ್ಪರ ವಿರೋಧವೇ ಸಂದೇಹಕ್ಕೆ ಕಾರಣವಾಗಿವೆ. ಅಂತಹ ಶ್ರುತಿಗಳ ವಿರೋಧವನ್ನು 'ಅಂಶಾ ಏವ' ಎಂಬುದಾಗಿ ತೋರಿಸುತ್ತಿದ್ದಾರೆ. ಜೀವನು ಶ್ರೀಹರಿಯ ಅಂಶವೆಂದಾಗಲಿ, ಅಂಶವಲ್ಲವೆಂದಾಗಲಿ ನಿರ್ಣಯ ಮಾಡಲು ಸಾಧ್ಯವಿಲ್ಲ ಎಂಬುದು ಅಧಿಕರಣದ ಪೂರ್ವಪಕ್ಷ.

**तत्वप्रकाशिका – न तावदंशत्वं निर्णेतुं शक्यम् । 'नैवांशः' इति श्रुतेः। न च तत्र परस्येति जीवान्तरविवक्षा । तथा पीत्यादिवाक्यशेषविरोधात् । नाप्यनंशत्वनिर्णयः । 'अंशा एव' इति श्रुतेः ।**

ಜೀವನು ಶ್ರೀಹರಿಯ ಅಂಶನೆಂದು ನಿರ್ಣಯ ಮಾಡಲು ಸಾಧ್ಯವಿಲ್ಲ. 'ನೈವಾಂಶಃ' ಎಂಬ ಶ್ರುತಿಯು ಈ ವಿಷಯದಲ್ಲಿ ಆಧಾರವಾಗಿದೆ. ಈ ಶ್ರುತಿಯಲ್ಲಿರುವ 'ಪರತ್ವ' ಎಂಬ ಪದಕ್ಕೆ ಮತ್ತೊಬ್ಬ ಜೀವನ ಅಂಶನಲ್ಲ ಎಂದು ಅರ್ಥಮಾಡಬಾರದು. 'ತಥಾಪಿ' ಇತ್ಯಾದಿ ವಾಕ್ಯಶೇಷದ ವಿರೋಧವು ಬರುತ್ತದೆ. ಅಂಶನಲ್ಲವೆಂದೂ ಕೂಡ ನಿರ್ಣಯ ಮಾಡಲು ಸಾಧ್ಯವಿಲ್ಲ. 'ಅಂಶಾ ಏವ' ಎಂಬ ಶ್ರುತಿಯು ಈ ವಿಷಯದಲ್ಲಿ ಆಧಾರವಾಗಿದೆ.

**तत्वप्रकाशिका – न च विकल्पेनाविरोधो यवव्रीहिश्रुत्योरिव । वस्तुविकल्पायोगात् । 'अंशा एव' 'नैवाशः' इति सावधारणत्वात् । न च देशकालविभेदेन व्यवस्थितो विकल्पः । विशेषप्रमाणमन्तरेण तादृशनिश्चयायोगात्।**

ವಿಕಲ್ಪವನ್ನು ಆಶ್ರಯಿಸಿ ವಿರೋಧವನ್ನು ಪರಿಹಾರ ಮಾಡಬಾರದು. ಯವಶ್ರುತಿ ಹಾಗೂ ವ್ರೀಹಿ ಶ್ರುತಿಗೆ ಪರಸ್ಪರ ವಿರೋಧ ಬಂದಾಗ ವಿಕಲ್ಪವನ್ನು ಆಶ್ರಯಿಸಿ ವಿರೋಧವನ್ನು ಪರಿಹಾರ ಮಾಡಿದಂತೆ ಇಲ್ಲೂ ಕೂಡ ಅಂಶನೂ ಆಗಬಹುದು, ಅನಂಶನೂ ಆಗಬಹುದು ಎಂದು ಹೇಳಬಹುದಲ್ಲವೇ?

ಹೀಗೆ ಪ್ರಶ್ನಿಸಬಾರದು. 'ಅಂಶಾ ಏವ' ಎಂಬ ಶ್ರುತಿಯಲ್ಲಿ ಜೀವನು ಅಂಶನೇ ಆಗಿದ್ದಾನೆಂದು ಅವಧಾರಣ ಮಾಡಲಾಗಿದೆ. 'ನೈವಾಂಶಃ' ಎಂಬಲ್ಲೂ ಕೂಡ ಜೀವನು ಅಂಶನಲ್ಲವೇ ಅಲ್ಲವೆಂದು

ಅವಧಾರಣ ಪುರಸ್ಸರವಾಗಿ ಹೇಳಲಾಗಿದೆ. ದೇಶಕಾಲದ ಭೇದದಿಂದ ವ್ಯವಸ್ಥಿತವಾಗಿ ವಿಕಲ್ಪವನ್ನು ಆಶ್ರಯಿಸಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಯಾವುದೇ ವಿಶೇಷ- ಪ್ರಮಾಣವಿಲ್ಲದೆ ಹಾಗೆ ನಿಶ್ಚಯ ಮಾಡಲು ಸಾಧ್ಯವಿಲ್ಲ.

ಒಂದೇ ಘಟ ಏತದ್ದೇಶಾವಚ್ಛೇದೇನ ಇದ್ದರೂ ಕೂಡ, ದೇಶಾಂತರಾವಚ್ಛೇದೇನ ಇರುವುದಿಲ್ಲವೆಂದು ಹೇಳಬಹುದು. ಏತತ್ಕಾಲಾವಚ್ಛೇದೇನ ಇದ್ದರೂ ಕೂಡ, ಕಾಲಾಂತರಾವಚ್ಛೇದೇನ ಇರುವುದಿಲ್ಲನೆಂದು ಹೇಳಬಹುದು. ಅದರಂತೆ ಜೀವನೂ ಕೂಡ ಏತದ್ದೇಶಾವಚ್ಛೇದೇನ ಅಂಶನಾಗಿದ್ದಾನೆ, ದೇಶಾಂತರಾವಚ್ಛೇದೇನ ಅಂಶನಾಗಿರುವುದಿಲ್ಲ.ಅಥವಾ ಏತತ್ಕಾಲಾವಚ್ಛೇದೇನ ಅಂಶನಾಗಿದ್ದಾನೆ, ತತ್ಕಾಲಾವಚ್ಛೇದೇನ ಅಂಶನಾಗಿರುವುದಿಲ್ಲವೆಂದು ಹೇಳಬಹುದಲ್ಲವೇ? ಎಂಬುದು ಪ್ರಶ್ನೆಯ ಅಭಿಪ್ರಾಯ. ಆದರೆ ಇದೂ ಕೂಡ ತಪ್ಪು. ಹೀಗೆ ದೇಶಕಾಲಭೇದೇನ ವ್ಯವಸ್ಥಿತ ವಿಕಲ್ಪವನ್ನು ಆಶ್ರಯಿಸಬೇಕೆಂದರೆ ವಿಶೇಷ ಪ್ರಮಾಣವಿರಲೇಬೇಕು. ಅಂತಹ ಪ್ರಮಾಣವು ಇಲ್ಲದ ಕಾರಣ ಹಾಗೆ ನಿಶ್ಚಯ ಮಾಡಲು ಸಾಧ್ಯವಿಲ್ಲ.

**तत्वप्रकाशिका – न च जीवेशाभेदस्य सयुक्तिकं निरस्तत्वादनंशत्व-श्रुतिर्बलवतीति वाच्यम् । अभेदाभावेऽप्यंशत्वस्याविरोधात् । समस्त-पटाद्भिन्नस्याप्येकस्य तन्तोस्तदंशत्वदर्शनात् ।**

ಜೀವಬ್ರಹ್ಮರಿಗೆ ಐಕ್ಯವಿದೆ ಎಂಬುದನ್ನು ಯುಕ್ತಿಬದ್ಧವಾಗಿ ನಿರಾಸ ಮಾಡಲಾಗಿದೆ. ಆದ್ದರಿಂದ ಅನಂಶತ್ವ ಶ್ರುತಿಯು ಬಲಿಷ್ಠವಾಗಿದೆ ಎಂದು ಹೇಳಬಹುದಲ್ಲವೇ?

ಹೀಗೆ ಪ್ರಶ್ನಿಸಬಾರದು. ಅಭೇದವಿಲ್ಲದಿದ್ದರೂ ಕೂಡ ಜೀವನು ಪರಮಾತ್ಮನ ಅಂಶನಾಗಿದ್ದಾನೆಂದು ಹೇಳಲು ಯಾವುದೇ ವಿರೋಧವಿಲ್ಲ. ಸಮಗ್ರವಾದ ಬಟ್ಟೆಯಿಂದ ಭಿನ್ನವಾಗಿದ್ದರೂ ಕೂಡ ಒಂದು ತಂತುವು ಅದರ ಅಂಶವೆಂದೇ ವ್ಯವಹರಿಸುತ್ತೇವೆ.

**तत्वप्रकाशिका – अतः श्रुतिद्वयस्यापि नानात्वादप्रामाण्यमेवेति नोक्तसमन्वयो युक्त इति प्राप्ते सिद्धान्तयत्सूत्रमवतार्य व्याचष्टे – अत इति।।**

ಆದ್ದರಿಂದ ಎರಡೂ ಶ್ರುತಿಗಳು ಕೂಡ ಪರಸ್ಪರ ವಿರುದ್ಧವಾದ್ದರಿಂದ ಅಪ್ರಮಾಣವಾಗಿವೆ ಎಂದೇ ಹೇಳಬೇಕು. ಆದ್ದರಿಂದ ಪರಮಾತ್ಮನ ವಿಷಯದಲ್ಲಿ ಮಾಡಲ್ಪಟ್ಟ ಶ್ರುತಿಸಮನ್ವಯವು ಅಯುಕ್ತವಾಯಿತು. ಇಷ್ಟು ಅಧಿಕರಣದ ಪೂರ್ವಪಕ್ಷ.

ಸಿದ್ಧಾಂತ ಸ್ಥಾಪಕವಾದ ಸೂತ್ರಕ್ಕೆ 'ಅತಃ' ಎಂಬುದಾಗಿ ಅವತಾರಿಕೆ ನೀಡಿ ವ್ಯಾಖ್ಯಾನವನ್ನು ನೀಡುತ್ತಿದ್ದಾರೆ.

**तत्वप्रकाशिका – जीवः परमात्मनोंऽशो भवत्येव । 'मां रक्षतु' इत्यादिना नानाप्रकारेण जीवस्येशसम्बन्धित्वव्यपदेशात् । तत्सम्बन्धित्वमेव तदंशत्वमिति वक्ष्याम इति भावः ।**

ಜೀವನು ಪರಮಾತ್ಮನ ಅಂಶನೇ ಆಗಿದ್ದಾನೆ. 'ಮಾಂ ರಕ್ಷತು' ಇತ್ಯಾದಿ ಪ್ರಮಾಣವಚನದಿಂದ ಜೀವನಿಗೆ ಪರಮಾತ್ಮನ ಜೊತೆ ಅನೇಕ ಪ್ರಕಾರದಿಂದ ಸಂಬಂಧವಿದೆ ಎಂದು ಹೇಳಿರುವುದೇ ಇದಕ್ಕೆ ಪೂರಕವಾಗಿದೆ. ಜೀವನಿಗೆ ಪರಮಾತ್ಮನ ಜೊತೆಗಿರುವ ಸಂಬಂಧವನ್ನೇ ಪರಮಾತ್ಮನ ಅಂಶ ಎಂಬುದಾಗಿ ಮುಂದೆ ಹೇಳುತ್ತೇವೆ.

**तत्वप्रकाशिका – यः पराद्धरेरवमो जीवोऽस्य जगतः पितरं वेदानेनावरेणायं परो जात इति व्यपदिश्यते तज्ज्ञानं च दुर्लभं को नु सर्वज्ञकल्पः प्रजासु ब्रह्म प्रावोचत् कस्य चैतदेवं मनो ज्ञानमाधिक्येन जातमित्यर्थः ।**

ಯಾವ ಜೀವನು ಶ್ರೇಷ್ಠನಾದ ಪರಮಾತ್ಮನಿಂದ ಅಧಮನಾಗಿ ಜಗತ್ತಿಗೆ ತಂದೆಯಾದ ಪರಮಾತ್ಮನನ್ನು ತಿಳಿದಿದ್ದಾನೋ ಅಂತಹ ಅಧಮನಾದ ಜೀವನಿಗಿಂತ ಉತ್ಕೃಷ್ಟನಾದ ಭಗವಂತನು ಶಾಸ್ತ್ರದಲ್ಲಿ ವ್ಯವಹರಿಸಲ್ಪಡುತ್ತಾನೆ. ಅಂತಹ ಭಗವಂತನ ಜ್ಞಾನವು ದುರ್ಲಭವಾಗಿದೆ. ಹೀಗಿರುವಾಗ ಜೀವರ ನಡುವೆ ಸರ್ವಜ್ಞಕಲ್ಪನಾದ ಯಾರು ತಾನೇ ಬ್ರಹ್ಮನ ಬಗ್ಗೆ ಹೇಳಲು ಸಾಧ್ಯ. ಯಾರಿಗೆ ತಾನೇ ಭಗವಂತನ ವಿಷಯದಲ್ಲಿ ಅಧಿಕವಾದ ಜ್ಞಾನ ಹುಟ್ಟಲು ಸಾಧ್ಯ ಎಂಬುದು 'ಅವಃ ಪರೇಣ ಪಿತರಂ' ಇತ್ಯಾದಿ ಶ್ರುತಿಯ ಅರ್ಥ.

ವಿವರಣೆ - ಜೀವನು ಶ್ರೀಹರಿಯಿಂದ ಅಧಮನಾಗಿದ್ದಾನೆ. ಆದ್ದರಿಂದ ಶ್ರೀಹರಿಯ ಅಂಶನೆಂಬುದು ಈ ಶ್ರುತಿಯ ಅಭಿಪ್ರಾಯ. ಲೋಕದಲ್ಲಿ ಯಾವುದೇ ಒಂದು ಪದಾರ್ಥದ ಜ್ಞಾನವು ಸುಲಭವಾಗಿ ಬರುತ್ತದೆ. ಆದರೆ ಪರಮಾತ್ಮನ ಜ್ಞಾನವು ಹಾಗೆ ಸುಲಭವಾಗಿ ಬರುವುದಿಲ್ಲ. ಹಾಗಾಗಿ ಪರಮಾತ್ಮನ ಜ್ಞಾನವನ್ನು ಯಾರು ಪಡೆದಿದ್ದಾನೋ ಅವನನ್ನು ಶ್ರುತಿಯು ಪರಮಾತ್ಮನ ತಂದೆ ಎಂದು ಪ್ರಶಂಸೆ ಮಾಡುತ್ತಿದೆ.

**तत्वप्रकाशिका – यस्तद् ब्रह्म वेद स तस्य पितुः पिताऽभवदित्यर्थः । या भगवन्मूर्तयो मदुपास्याः स्त्रीलिङ्गशब्दवाच्यास्ता एव परमपुरुषानाहुः । यस्ताः पश्यति स एव चक्षुष्मान् यो न जानाति सोऽन्धः । सः सर्वज्ञो भगवत्पुत्रो विरिञ्चः स एव सम्यक् जानाति । यश्च जानाति स तस्य जगत्पितुरभिव्यञ्जकत्वात् पिताऽभवदित्यर्थः । एतद्दीर्घतमो वाक्यम् । नानाव्यपदेशादंशो जीव इत्यत्र श्रुतिं चाह – तथा चेति ।।**

'ಯಾರು ಬ್ರಹ್ಮನನ್ನು ತಿಳಿದಿದ್ದಾನೋ ಅವನು ಪರಮಾತ್ಮನ ತಂದೆ ಎಂದು ಕರೆಸಿಕೊಳ್ಳುತ್ತಾನೆ. ಉಪಾಸನೆ ಮಾಡಲ್ಪಡುವ ಭಗವಂತನ ಯಾವ ಸ್ತ್ರೀಲಿಂಗ ಶಬ್ದವಾಚ್ಯವಾದ ರೂಪಗಳಿವೆಯೋ ಅವುಗಳನ್ನು ಪರಮಪುರುಷರೂಪಗಳೆಂದು ಹೇಳುತ್ತಾರೆ. ಯಾರು ಆ ರೂಪಗಳನ್ನು ನೋಡುತ್ತಾರೋ ಅವನೇ ಕಣ್ಣು ಇರುವವನು; ಯಾರು ಆ ರೂಪಗಳನ್ನು ತಿಳಿಯುವುದಿಲ್ಲವೋ ಅವನು ಕುರುಡನಾಗಿದ್ದಾನೆ. ಸರ್ವಜ್ಞನಾದ ಭಗವಂತನ ಮಗನಾದ ಚತುರ್ಮುಖನು ಮಾತ್ರ ಆ ಪರಮಾತ್ಮನನ್ನು ಚೆನ್ನಾಗಿ ತಿಳಿಯುತ್ತಾನೆ. ಯಾರು ಆ ಭಗವಂತನನ್ನು ತಿಳಿಯುತ್ತಾನೋ ಅವನೇ ಭಗವಂತನಿಗೆ ತಂದೆ ಎನಿಸುತ್ತಾನೆ. ಏಕೆಂದರೆ ಜಗತ್ಸ್ವಾಮಿಯಾದ ಭಗವಂತನ ಆವಿರ್ಭಾವಕ್ಕೆ ಅವನು ಕಾರಣನಾಗಿದ್ದಾನೆ.

ಇದು ದೀರ್ಘತಮ ಋಷಿಯ ಮಾತು. ಹೀಗೆ ಅನೇಕ ರೀತಿಯ ವ್ಯಪದೇಶದಿಂದ ಜೀವನು ಪರಮಾತ್ಮನ ಅಂಶನಾಗಿದ್ದಾನೆ. ಈ ವಿಷಯದಲ್ಲಿ ಶ್ರುತಿಯನ್ನು 'ತಥಾ ಚ' ಇತ್ಯಾದಿಯಾಗಿ ಉಲ್ಲೇಖ ಮಾಡುತ್ತಿದ್ದಾರೆ.

**ವಿವರಣೆ** - ಸ್ತ್ರೀಲಿಂಗ ಶಬ್ದಗಳಿಂದ ಪ್ರತಿಪಾದ್ಯನಾದ ಭಗವಂತನೇ ಪರಮಪುರುಷನೆನಿಸುತ್ತಾನೆ. 'ಯಾ ದೇವತಾ' ಇತ್ಯಾದಿಯಾಗಿ ಸ್ತ್ರೀಲಿಂಗ ಶಬ್ದಗಳಿಂದ ಯಾವ ವೇದವು ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತದೋ, ಆ ಭಗವಂತನು ಪುರುಷ ಶಬ್ದದಿಂದಲೂ ಕೂಡ ಪ್ರತಿಪಾದ್ಯನಾಗಿದ್ದಾನೆ. ಆದ್ದರಿಂದ ಅವನು ಪರಮ ಪುರುಷನೆನಿಸುತ್ತಾನೆ. ಪರಮಾತ್ಮನ ಇಂತಹ ರೂಪಗಳನ್ನು ಕಂಡವನೇ ಕಣ್ಣುಗಳುಳ್ಳವನು, ಕಾಣದಿದ್ದವನೇ ಕುರುಡನು. ಚತುರ್ಮುಖನೊಬ್ಬನೇ ಪರಮಾತ್ಮನನ್ನು ಸರಿಯಾಗಿ ತಿಳಿಯಲು ಸಾಧ್ಯ. ಆದ್ದರಿಂದ ಅವನೇ ಪರಮಾತ್ಮನಿಗೆ ತಂದೆ ಎಂದು ಕರೆಸಿಕೊಳ್ಳುತ್ತಾನೆ. ಏಕೆಂದರೆ ಸಮಗ್ರ ಲೋಕದಲ್ಲಿ ಪರಮಾತ್ಮನನ್ನು ಚತುರ್ಮುಖನೊಬ್ಬನೇ ಪರಿಚಯ ಮಾಡಿಸಿಕೊಟ್ಟಿದ್ದಾನೆ. ಹೀಗೆ ಪರಮಾತ್ಮನ ಅಭಿವ್ಯಕ್ತಿಗೆ ಕಾರಣನಾದ್ದರಿಂದ ಅವನೊಬ್ಬನೇ ಪರಮಾತ್ಮನಿಗೆ ತಂದೆ ಎನಿಸಲು ಸಾಧ್ಯ.

**तत्वप्रकाशिका – हेत्वन्तरेणैतत्समर्थयति – अन्य इति । अन्यथा वक्ष्यमाणाभेदापेक्षया । एतच्छ्रुतिद्वयेन जीवेशयोर्भेदाभेदावुच्येते । न चान्यतरश्रुतिबाधो युक्तः । न च साक्षाद्भेदाभेदावुपपन्नौ । विरोधात् । अतः श्रुतिद्वयान्यथानुपपत्त्या भेदमङ्गीकृत्याभेदस्थानेंऽशत्वं वक्तव्यमिति भावः ।**

ಮತ್ತೊಂದು ಹೇತುವಿನಿಂದ ಇದೇ ವಿಷಯವನ್ನು 'ಅನ್ಯ' ಇತ್ಯಾದಿಯಾಗಿ ಸಮರ್ಥನೆ ಮಾಡುತ್ತಿದ್ದಾರೆ.

ಭಾಷ್ಯದಲ್ಲಿರುವ 'ಅನ್ಯಥಾ' ಎಂಬ ಪದಕ್ಕೆ ಮುಂದೆ ಹೇಳುವ ಅಭೇದಾಪೇಕ್ಷೆಯಿಂದ ಎಂದರ್ಥ. ಎರಡು ಶ್ರುತಿಗಳಿಂದ ಜೀವೇಶರಿಗೆ ಭೇದ ಮತ್ತು ಅಭೇದವು ಹೇಳಲ್ಪಟ್ಟಿದೆ. ಇವೆರಡರಲ್ಲಿ ಒಂದಕ್ಕೆ ಬಾಧವನ್ನು ಹೇಳುವುದು ಯುಕ್ತವಾಗುವುದಿಲ್ಲ. ಸಾಕ್ಷಾತ್ತಾಗಿ ಭೇದ ಅಭೇದಗಳೆರಡು ಒಟ್ಟಿಗೆ ಕೂಡುವುದಿಲ್ಲ. ಪರಸ್ಪರ ವಿರೋಧ ಬರುತ್ತದೆ. ಈ ಎರಡು ಶ್ರುತಿಗಳ ಅನ್ಯಥಾನುಪಪತ್ತಿಯಿಂದ ಜೀವೇಶರಿಗೆ ಭೇದವನ್ನು ಒಪ್ಪಿ ಅಭೇದವನ್ನೊಪ್ಪುವ ಸ್ಥಳದಲ್ಲಿ ಅಂಶತ್ವವನ್ನು ಒಪ್ಪಬೇಕು.

ವಿವರಣೆ - ಸಂಬಂಧಿತ್ವವೆಂಬ ನಾನಾವ್ಯಪದೇಶದಿಂದ ಜೀವನು ಪರಮಾತ್ಮನ ಅಂಶವೆಂದು ಸಮರ್ಥಿಸಿದ್ದಾಯಿತು. ಈಗ ಭೇದಾಭೇದವ್ಯಪದೇಶಾನ್ಯಥಾನುಪಪತ್ತಿಯಿಂದಲೂ ಕೂಡ ಜೀವನು ಪರಮಾತ್ಮನ ಅಂಶನೆಂಬುದನ್ನು ಸಮರ್ಥಿಸುತ್ತಿದ್ದಾರೆ. ವೇದದಲ್ಲಿ ಕೆಲವು ವಾಕ್ಯಗಳು ಜೀವಬ್ರಹ್ಮರಿಗೆ ಭೇದವನ್ನು ಹೇಳುತ್ತಿವೆ. ಕೆಲವು ವಾಕ್ಯಗಳು ಅಭೇದವನ್ನು ಹೇಳುತ್ತಿವೆ. ವಿರುದ್ಧವಾದ ಈ ಎರಡು ವಾಕ್ಯಗಳು ಹೇಳುವ ಭೇದಾಭೇದವನ್ನು ಒಟ್ಟಿಗೆ ಹೇಳಲು ಸಾಧ್ಯವಿಲ್ಲ. ಪರಸ್ಪರ ವಿರುದ್ಧವಾಗಿವೆ. ಆದ್ದರಿಂದ ಜೀವಬ್ರಹ್ಮರಿಗೆ ಭೇದವನ್ನು ಒಪ್ಪಿ ಅಭೇದವನ್ನು ಹೇಳುವ ವಾಕ್ಯಗಳಿಗೆ ಅಂಶತ್ವವನ್ನು ಅರ್ಥೈಸಬೇಕು. ಜೀವನು ಪರಮಾತ್ಮನ ಅಂಶನೆಂದು ಒಪ್ಪದಿದ್ದರೆ ಭೇದಾಭೇದವ್ಯಪದೇಶವೇ ಕೂಡುವುದಿಲ್ಲ. ಭೇದಾಭೇದವ್ಯಪದೇಶಾನ್ಯಥಾನುಪಪತ್ತಿಯಿಂದ ಜೀವನಿಗೆ ಪರಮಾತ್ಮನ ಅಂಶತ್ವವು ಯುಕ್ತವಾಗುತ್ತದೆ.

ಅಂಶಾಧಿಕರಣ (೨-೩-೧೮)

**तत्वप्रकाशिका – उक्तं चाभेदश्रुतयोंऽशत्वादिति । भेदाभेदोक्त्यन्यथानुपपत्त्यांऽशो जीव इत्यत्रापि श्रुतिमाह – तथा चेति ।। समस्तसूत्रार्थे स्मृतिं चाह – वाराहे चेति ।।**

ಅಭೇದಶ್ರುತಿಗಳು ಅಂಶವೆಂಬರ್ಥದಲ್ಲಿಯೇ ಯುಕ್ತವಾಗುತ್ತವೆಂಬುದನ್ನು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಭೇದಾಭೇದವ್ಯಪದೇಶಾನ್ಯಥಾನುಪಪತ್ತಿಯಿಂದ ಜೀವನು ಪರಮಾತ್ಮನ ಅಂಶನಾಗಿದ್ದಾನೆಂಬ ವಿಷಯದಲ್ಲಿ ಶ್ರುತಿಪ್ರಮಾಣವನ್ನು 'ತಥಾ ಚ' ಎಂಬುದಾಗಿ ಉಲ್ಲೇಖ ಮಾಡಿದ್ದಾರೆ. ಸಮಗ್ರ ಸೂತ್ರಾರ್ಥದ ವಿಷಯದಲ್ಲಿ ಶ್ರುತಿಪ್ರಮಾಣವನ್ನು 'ವಾರಾಹೇ ಚ' ಎಂಬುದರಿಂದ ಉಲ್ಲೇಖ ಮಾಡಿದ್ದಾರೆ.

## ಬ್ರಹ್ಮಸೂತ್ರ

**सूत्रम् – मन्त्रवर्णात् ।।**

'ಪಾದೋऽಸ್ಯ ವಿಶ್ವಾ ಭೂತಾನಿ' ಎಂಬ ಶ್ರುತಿಯಲ್ಲಿ ಜೀವನು ಪರಮಾತ್ಮನ ಅಂಶವೆಂದು ಹೇಳಲಾಗಿದೆ.

## ಸೂತ್ರದೀಪಿಕಾ

**सूत्रदीपिका – 'पादोऽस्य' इति श्रुतेश्च जीवः परमात्मांश इत्यर्थः ।।२।।**

ಮಂತ್ರವರ್ಣಾತ್ = 'ಪಾದೋऽಸ್ಯ ವಿಶ್ವಾ ಭೂತಾನಿ' ಎಂಬ ಶ್ರುತಿಯಲ್ಲಿ ಜೀವನು ಪರಮಾತ್ಮನ ಅಂಶನೆಂದು ಹೇಳಲಾಗಿದೆ.

## ಬ್ರಹ್ಮಸೂತ್ರಭಾಷ್ಯ

**भाष्यम् – ।। मन्त्रवर्णात् ।।२।।**

**'पादोऽस्य विश्वा भूतानि' (ऋ. १०.९०.३.) इति ।।२।।**

ಅನುವಾದ - 'ಪಾದೋऽಸ್ಯ ವಿಶ್ವಾಭೂತಾನಿ' ಎಲ್ಲ ಜೀವರು ಭಗವಂತನ ಒಂದು ಅಂಶವೆಂಬ ಪುರುಷಸೂಕ್ತದಿಂದಲೂ ಜೀವರು ಭಗವಂತನ ಅಂಶವೆಂದು ತಿಳಿಯುತ್ತದೆ.

ಪ್ರತಿಪದಾರ್ಥ -- ವಿಶ್ವಾಭೂತಾನಿ = ಸಕಲ ಜೀವರು, ಅಸ್ಯ = ಪರಮಾತ್ಮನ, ಪಾದಃ = ಅಂಶರು, ಇತಿ = ಹೀಗೆ ಪುರುಷಸೂಕ್ತದ ಆಧಾರದಿಂದಲೂ ಜೀವರು ಪರಮಾತ್ಮನ ಅಂಶರು.

## ತತ್ವಪ್ರಕಾಶಿಕಾ

**तत्वप्रकाशिका – श्रुत्या चैतमर्थं साधयत्सूत्रं पठित्वा तां श्रुतिमुदाहरति – मन्त्रेति ।। पादोंशः ।।**

ಪರಿಪೂರ್ಣಚಂದ್ರಿಕಾ

ಶ್ರುತಿಯಿಂದಲೂ ಕೂಡ ಹಿಂದಿನ ಸೂತ್ರದಲ್ಲಿ ಹೇಳಿದ ಪ್ರಮೇಯವನ್ನು ಸಾಧಿಸುವ ಸೂತ್ರವನ್ನು ಮಂತ್ರ ಇತ್ಯಾದಿಯಾಗಿ ಉಲ್ಲೇಖ ಮಾಡುತ್ತಿದ್ದಾರೆ. ಪಾದ ಶಬ್ದಕ್ಕೆ ಅಂಶ ಎಂದರ್ಥ.

ವಿವರಣೆ - ಜೀವನು ಪರಮಾತ್ಮನ ಅಂಶನಾಗಿದ್ದಾನೆ ಎಂಬುದನ್ನು ಶ್ರುತಿಪ್ರಮಾಣದಿಂದ ಇಲ್ಲಿ ಸಮರ್ಥಿಸಲಾಗಿದೆ . 'ಪಾದೋऽಸ್ಯ ವಿಶ್ವಾ ಭೂತಾನಿ' ಎಂಬ ಪುರುಷಸೂಕ್ತವು ಸಮಗ್ರ ವಿಶ್ವವು ಪರಮಾತ್ಮನ ಮುಂದೆ ಅಂಶವಾಗಿದೆ ಎಂದು ಹೇಳುತ್ತಿದೆ.

## ಬ್ರಹ್ಮಸೂತ್ರ

**सूत्रम् – अपि स्मर्यते ।।**

'ಮಮೈವಾಂಶಃ ಜೀವಲೋಕೇ' ಎಂಬ ಭಗವದ್ಗೀತೆಯ ಮಾತಿನಿಂದಲೂ ಜೀವನು ಪರಮಾತ್ಮನ ಭಿನ್ನಾಂಶನೆಂದು ತಿಳಿಯುತ್ತದೆ.

## ಸೂತ್ರದೀಪಿಕಾ

**सूत्रदीपिका –** जीवस्यांशत्वं कृष्णादिभिः 'ममैवांशः' इति स्मृत्या कथ्यते चेत्यर्थः ।।३।।

ಅಪಿ ಸ್ಮರ್ಯತೇ = ಜೀವನು ಕೃಷ್ಣಾದಿ ಭಗವದ್‌ರೂಪಗಳಿಂದ ಭಿನ್ನಾಂಶನಾಗಿದ್ದಾನೆಂದು 'ಮಮೈವಾಂಶಃ' ಎಂಬ ಭಗವದ್ಗೀತೆಯ ವಾಕ್ಯವು ಸಾರುತ್ತಿದೆ.

## ಬ್ರಹ್ಮಸೂತ್ರಭಾಷ್ಯ

**भाष्यम् – ।। अपि स्मर्यते ।।३।।**

**'ममैवांशो जीवलोके जीवभूतः सनातनः' (गी. १५.७.) इति ।।३।।**

ಅನುವಾದ - ಶರೀರದಲ್ಲಿರುವ ನಿತ್ಯರಾದ ಬ್ರಹ್ಮಾದಿ ಜೀವರೆಲ್ಲರೂ ನನ್ನ ಅಂಶರೇ ಆಗಿದ್ದಾರೆ. ಹೀಗೆ ಭಗವದ್ಗೀತೆಯಲ್ಲಿಯೂ ಹೇಳಲಾಗಿದೆ.

ಪ್ರತಿಪದಾರ್ಥ -- ಜೀವಲೋಕೇ = ಜೀವ್ಚರೀರದಲ್ಲಿ, ಸನಾತನಃ = ನಿತ್ಯನಾದ, ಜೀವಭೂತಃ = ಜೀವರಾಗಿರುವ ಬ್ರಹ್ಮಾದಿ ಚೇತನಸ್ವರೂಪವು, ಮಮೈವಾಂಶೋ = ನನ್ನ ಅಂಶರೇ ಆಗಿದ್ದಾರೆ.

## ತತ್ವಪ್ರಕಾಶಿಕಾ

**तत्वप्रकाशिका – स्मृत्याप्येतमर्थं साधयत्सूत्रं पठित्वा तां स्मृतिमुदाहरति – अपीति ।। जीवलोके जीवच्छरीरे जीवभूतो जीवाख्यः ।।**

ಸ್ಮೃತಿಯಿಂದಲೂ ಕೂಡ ಇದೇ ಅರ್ಥವನ್ನು ಸಾಧಿಸುವ ಸೂತ್ರವನ್ನು ಪಠಿಸಿ ಆ ಸ್ಮೃತಿವಾಕ್ಯವನ್ನು 'ಅಪಿ' ಇತ್ಯಾದಿಯಾಗಿ ಉದಾಹರಣೆ ಮಾಡುತ್ತಿದ್ದಾರೆ. 'ಜೀವಲೋಕೇ' ಎಂಬ ಪದಕ್ಕೆ 'ಜೀವವುಳ್ಳ ಶರೀರದಲ್ಲಿ ಜೀವ ಎಂಬುವನು' ಎಂದರ್ಥ.

ಅಂಶಾಧಿಕರಣ (೨-೩-೧೮)

**ವಿವರಣೆ** - 'ಮಮೈವಾಂಶಃ ಜೀವಲೋಕೇ' ಎಂಬ ಶ್ರುತಿಯಲ್ಲಿ ಸ್ಪಷ್ಟವಾಗಿ ಜೀವನು ಪರಮಾತ್ಮನ ಅಂಶನೆಂದು ಹೇಳಲಾಗಿದೆ. 'ಜೀವಭೂತಃ' ಎಂಬ ಪದಕ್ಕೆ 'ಜೀವನೆಂಬುವನು' ಎಂದಷ್ಟೇ ಅರ್ಥ. ಲೋಕ ಶಬ್ದಕ್ಕೆ ಶರೀರ ಎಂದರ್ಥ.

## ಬ್ರಹ್ಮಸೂತ್ರ

**सूत्रम् — प्रकाशादिवन्नैवं परः ।।**

ಪ್ರಕಾಶಾದಿಗಳ ಅಭಿಮಾನಿಗಳಂತೆ ಜೀವನು ಪರಮಾತ್ಮನ ಭಿನ್ನಾಂಶನು. ಆದರೆ ಮತ್ಸ್ಯಾದಿರೂಪಿಯಾದ ವಿಷ್ಣುವು ಭಿನ್ನಾಂಶನಲ್ಲ.

## ಸೂತ್ರದೀಪಿಕಾ

**सूत्रदीपिका** — जीवः प्रकाशादिवत् खद्योताद्यभिमानि-तेजोंऽशवत् । परमात्मनो भिन्नांशः । परः मत्स्यादिरूपी विष्णुस्तु । नैवं जीववद्भिन्नांशो न । किन्तु प्रकाशादिवत् कालाग्न्याद्यभिमानितेजोंऽशवत् ईशाभिन्नांश एवेत्यर्थः ।।४।।

ಜೀವನು ಪ್ರಕಾಶಾದಿವತ್ = ಪ್ರಕಾಶಾಭಿಮಾನಿಯಂತೆ ಅಂದರೆ ಖದ್ಯೋತಕ್ಕೆ ಅಭಿಮಾನಿಯಾದ ತೇಜಸ್ಸಿನ ಅಂಶದಂತೆ ಪರಮಾತ್ಮನು ಭಿನ್ನಾಂಶನಾಗಿದ್ದಾನೆ. ಪರಃ = ಮತ್ಸ್ಯಾದಿರೂಪವುಳ್ಳ ವಿಷ್ಣುವಾದರೂ, ನೈವಂ = ಜೀವಾದಿಗಳಂತೆ ಭಿನ್ನಾಂಶನಲ್ಲ. ಹೊರತಾಗಿ, ಪ್ರಕಾಶಾದಿವತ್ = ಕಾಲಾಗ್ನಿಗೆ ಅಭಿಮಾನಿಯಾದ ತೇಜಸ್ಸಿನ ಅಂಶದಂತೆ ಅಭಿನ್ನಾಂಶನೇ ಆಗಿದ್ದಾನೆ.

## ಬ್ರಹ್ಮಸೂತ್ರಭಾಷ್ಯ

**भाष्यम् — अनंशत्वश्रुतेर्गतिं चाऽह —**

**।। प्रकाशादिवन्नैवं परः ।।४।।**

**अंशत्वेऽपि न मत्स्यादिरूपी पर एवंविधः । यथा तेजोंऽशस्यैव कालाग्नेः खद्योतस्य च नैकप्रकारता । यथा जलांशस्यामृतसमुद्रस्य मूत्रादेश्च । तथा च पृथिव्यंशस्य मेरोर्विष्ठादेश्च । अभिमानिदेवतापेक्षयैतत् ।।४।।**

ಅನುವಾದ - 'ನೈವಾಂಶಃ' ಎಂಬ ಶ್ರುತಿಯು ಜೀವನು ಭಗವಂತನ ಅಂಶನಲ್ಲವೆಂದು ಹೇಳುತ್ತಿದೆ. ಇದರ ಅರ್ಥವನ್ನು ಸೂತ್ರಕಾರರೇ ಸ್ಪಷ್ಟ ಪಡಿಸುತ್ತಿದ್ದಾರೆ. ಜೀವರು ಪರಮಾತ್ಮನ ಅಂಶರಾಗಿದ್ದಾರೆ. ಮತ್ಸ್ಯಾದಿರೂಪಗಳೂ ಕೂಡ ಭಗವಂತನ ಅಂಶಗಳೇ ಆಗಿವೆ. ಹಾಗಿದ್ದರೂ ಮತ್ಸ್ಯಾದ್ಯವತಾರಗಳು ಜೀವನಂತೆ ಅಲ್ಲ. ಏಕೆಂದರೆ ಜೀವರಂತೆ ಮತ್ಸ್ಯಾದ್ಯವತಾರಗಳು ಭಿನ್ನಾಂಶಗಳಾಗಿಲ್ಲ. ಬ್ರಹ್ಮನ ಸ್ವರೂಪಾಂಶಗಳಾಗಿವೆ. ಯಾವರೀತಿಯಾಗಿ ಮಿಣುಕುಹುಳವು ತೇಜಸ್ಸಿನ ಅಂಶವಾಗಿದೆ. ಪ್ರಳಯಾಗ್ನಿಯೂ ಕೂಡ ತೇಜಸ್ಸಿನ ಅಂಶವಾಗಿದೆ. ಎರಡೂ ಪ್ರಳಯಾಗ್ನಿಯ ಅಂಶಗಳಾಗಿದ್ದರೂ ಅವೆರಡು ಒಂದೇ ರೀತಿಯಾಗಿಲ್ಲ. ಹಾಗೇ ಜೀವರು ಹಾಗೂ ಮತ್ಸ್ಯಾದ್ಯವತಾರಗಳು ಬ್ರಹ್ಮನ ಅಂಶರಾಗಿದ್ದರೂ ಕೂಡ ಬಹಳಷ್ಟು ವ್ಯತ್ಯಾಸವಿದೆ ಎಂದು ತಿಳಿಯಬೇಕು.

ಅಮೃತಸಮುದ್ರವು ನಿರೀನ ಅಂಶವಾಗಿದೆ. ಮೂತ್ರವೂ ಕೂಡ ನೀರಿನ ಅಂಶವಾಗಿದೆ. ಮೇರುಪರ್ವತವು ಪೃಥಿವಿಯ ಅಂಶವಾಗಿದೆ. ಅಮೇಧ್ಯವೂ ಕೂಡ ಪೃಥಿವಿಯ ಅಂಶವಾಗಿದೆ. ಆದರೂ ಇವುಗಳಲ್ಲಿ ಹೇಗೆ ಬಹಳಷ್ಟು ವ್ಯತ್ಯಾಸವಿದೆಯೋ, ಅದರಂತೇ ಜೀವರಿಗೂ ಮತ್ಸ್ಯಾದವತಾರಗಳಿಗೂ ಬಹಳಷ್ಟು ವ್ಯತ್ಯಾಸವಿದೆ. ಈ ದೃಷ್ಟಾಂತವನ್ನು ಅಭಿಮಾನಿದೇವತೆಗಳ ದೃಷ್ಟಿಯಲ್ಲಿ ಮಾತ್ರ ಹೇಳಲಾಗಿದೆ.

ಪ್ರತಿಪದಾರ್ಥ -- ಅನಂಶತ್ವಶ್ರುತೇಃ = 'ನೈವಾಂಶಃ' ಎಂಬುದಾಗಿ ಅಂಶವಿಲ್ಲವೆಂದು ಹೇಳುವ ಶ್ರುತಿಗೆ, ಗತಿಂ ಚ = ನಿಜವಾದ ಅಭಿಪ್ರಾಯವನ್ನು, ಆಹ = ಸೂತ್ರಕಾರರೇ ಹೇಳುತ್ತಿದ್ದಾರೆ.

ಅಂಶತ್ವೇಪಿ = ಜೀವರು ಪರಮಾತ್ಮನ ಅಂಶರೇ ಆಗಿದ್ದರೂ ಕೂಡ, ಮತ್ಸ್ಯಾದಿರೂಪೀ = ಮತ್ಸ್ಯಾದಿರೂಪಗಳು ಭಗವಂತನ ಅಂಶಗಳೇ ಆಗಿದ್ದರೂ, ಏವಂವಿಧಃ ನ = ಜೀವರಂತೆ ಭಿನ್ನಾಂಶರಲ್ಲ, ಏವಂ ವಿಧಃ = ಸ್ವರೂಪಾಂಶಗಳು. ಯಥಾ = ಯಾವರೀತಿಯಾಗಿ, ಕಾಲಾಗ್ನೇಃ = ಪ್ರಳಯಾಗ್ನಿಯು, ತೇಜಃ = ತೇಜಸ್ಸಿನ, ಅಂಶಸ್ಸೈವ = ಅಂಶವೇ ಆಗಿದ್ದರೂ, ಖದ್ಯೋತಸ್ಯ ಚ = ಮಿಣುಕುಹುಳದ ತೇಜಸ್ಸು ಕೂಡ ತೇಜಸ್ಸಿನ ಅಂಶವೇ ಆಗಿದ್ದರೂ, ನೈಕಪ್ರಕಾರತಾ = ಎರಡೂ ಒಂದೇ ರೀತಿಯಾಗಿ ಇರುವುದಿಲ್ಲ. ಯಥಾ = ಯಾವ ರೀತಿಯಾಗಿ, ಅಮೃತಸಮುದ್ರಸ್ಯ = ಅಮೃತಸಮುದ್ರದ ನೀರು, ಜಲಾಂಶಸ್ಯ = ಜಲದ ಅಂಶವಾಗಿದ್ದರೂ, ಮೂತ್ರಾದೇಶ್ಚ = ಮೂತ್ರಾದಿಗಳು ಜಲದ ಅಂಶವಾಗಿದ್ದರೂ, ತಥಾ = ಹಾಗೆಯೇ, ಮೇರೋಃ = ಮೇರುಪರ್ವತವು, ಪೃಥಿವ್ಯಾಂಶಸ್ಯ = ಪೃಥಿವಿಯ ಅಂಶವಾಗಿದ್ದರೂ, ವಿಷ್ಠಾದೇಶ್ಚ = ಅಮೇಧ್ಯವು ಪೃಥಿವಿಯ ಅಂಶವಾಗಿದ್ದರೂ ಬಹಳಷ್ಟು ವ್ಯತ್ಯಾಸವಿದೆಯೊ ಆದರಂತೆ ಭಿನ್ನಾಂಶವೆಂದು ತಿಳಿಯಬೇಕು.

ಏತತ್ = ಪುರಾಣದಲ್ಲಿ ಹೇಳಿದ ದೃಷ್ಟಾಂತವು, ಅಭಿಮಾನಿದೇವತಾಪೇಕ್ಷಯಾ = ಪ್ರಕಾಶಾದ್ಯಭಿಮಾನಿದೇವತೆಗಳ ದೃಷ್ಟಿಯಿಂದ ಹೇಳಲಾಗಿದೆ.

## ತತ್ವಪ್ರಕಾಶಿಕಾ

**तत्वप्रकाशिका – न जीवस्येश्वरांशत्वं युक्तम् । तथा सत्यंशत्वा-विशेषान्मत्स्यादिसाम्यापातादनंशत्वश्रुतिविरोधाच्चेत्याशङ्कां परिहरत्सूत्रमवतारयति – अनंशत्वेति ।। मत्स्याद्यसाम्यं चार्थः । सूत्रं व्याचष्टे –अंशत्वेऽपीति ।।**

ಜೀವನು ಪರಮಾತ್ಮನ ಅಂಶನಾಗುತ್ತಾನೆಂಬುದು ಯುಕ್ತವಲ್ಲ. ಹಾಗಾದರೆ ಮತ್ಸ್ಯಾದಿ ರೂಪಗಳಿಗೆ ಜೀವನು ಸಮಾನನಾಗಬೇಕಾಗುತ್ತದೆ. ಏಕೆಂದರೆ ಮತ್ಸ್ಯಾದಿ ರೂಪಗಳು ಪರಮಾತ್ಮನ ಅಂಶವೆನ್ನುವಿರಿ. ಈಗ ಜೀವನನ್ನೂ ಕೂಡ ಅಂಶನೆನ್ನುತ್ತಿರುವಿರಿ. ಆದ್ದರಿಂದ ಅನಂಶತ್ವವನ್ನು ಹೇಳುವ 'ನೈವಾಂಶಃ' ಎಂಬ ಶ್ರುತಿ ವಿರೋಧವೂ ಕೂಡ ಬರುತ್ತದೆ. ಈ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರಕ್ಕೆ 'ಅನಂಶತ್ವೇ' ಇತ್ಯಾದಿಯಾಗಿ ಅವತಾರಿಕೆ ನೀಡುತ್ತಿದ್ದಾರೆ.

ಭಾಷ್ಯದಲ್ಲಿರುವ 'ಚ' ಶಬ್ದಕ್ಕೆ ಮತ್ಸ್ಯಾದ್ಯವತಾರದ ಜೊತೆ ಜೀವನು ಸಮಾನವಲ್ಲ ಎಂದರ್ಥ. ಸೂತ್ರವನ್ನು 'ಅಂಶತ್ವೇಪಿ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - 'ಮಮೈವಾಂಶಃ ಜೀವಲೋಕೇ' ಎಂಬ ಶ್ರುತಿಯಲ್ಲಿ ಸ್ಪಷ್ಟವಾಗಿ ಜೀವನು ಪರಮಾತ್ಮನ ಅಂಶನೆಂದು ಹೇಳಲಾಗಿದೆ. 'ಜೀವಭೂತಃ' ಎಂಬ ಪದಕ್ಕೆ 'ಜೀವನೆಂಬುವನು' ಎಂದಷ್ಟೇ ಅರ್ಥ. ಲೋಕ ಶಬ್ದಕ್ಕೆ ಶರೀರ ಎಂದರ್ಥ.

## ಬ್ರಹ್ಮಸೂತ್ರ

**सूत्रम् — प्रकाशादिवन्नैवं परः ।।**

ಪ್ರಕಾಶಾದಿಗಳ ಅಭಿಮಾನಿಗಳಂತೆ ಜೀವನು ಪರಮಾತ್ಮನ ಭಿನ್ನಾಂಶನು. ಆದರೆ ಮತ್ಸ್ಯಾದಿರೂಪಿಯಾದ ವಿಷ್ಣುವು ಭಿನ್ನಾಂಶನಲ್ಲ.

## ಸೂತ್ರದೀಪಿಕಾ

**सूत्रदीपिका —** जीवः प्रकाशादिवत् खद्योताद्यभिमानि-तेजोंऽशवत् । परमात्मनो भिन्नांशः । परः मत्स्यादिरूपी विष्णुस्तु । नैवं जीववद्भिन्नांशो न । किन्तु प्रकाशादिवत् कालाग्न्याद्यभिमानितेजोंऽशवत् ईशाभिन्नांश एवेत्यर्थः ।।४।।

ಜೀವನು ಪ್ರಕಾಶಾದಿವತ್ = ಪ್ರಕಾಶಾಭಿಮಾನಿಯಂತೆ ಅಂದರೆ ಖದ್ಯೋತಕ್ಕೆ ಅಭಿಮಾನಿಯಾದ ತೇಜಸ್ಸಿನ ಅಂಶದಂತೆ ಪರಮಾತ್ಮನು ಭಿನ್ನಾಂಶನಾಗಿದ್ದಾನೆ. ಪರಃ = ಮತ್ಸ್ಯಾದಿರೂಪವುಳ್ಳ ವಿಷ್ಣುವಾದರೂ, ನೈವಂ = ಜೀವಾದಿಗಳಂತೆ ಭಿನ್ನಾಂಶನಲ್ಲ. ಹೊರತಾಗಿ, ಪ್ರಕಾಶಾದಿವತ್ = ಕಾಲಾಗ್ನಿಗೆ ಅಭಿಮಾನಿಯಾದ ತೇಜಸ್ಸಿನ ಅಂಶದಂತೆ ಅಭಿನ್ನಾಂಶನೇ ಆಗಿದ್ದಾನೆ.

## ಬ್ರಹ್ಮಸೂತ್ರಭಾಷ್ಯ

**भाष्यम् — अनंशत्वश्रुतेर्गतिं चाऽह —**

**।। प्रकाशादिवन्नैवं परः ।।४।।**

**अंशत्वेऽपि न मत्स्यादिरूपी पर एवंविधः । यथा तेजोंऽशस्यैव कालाग्नेः खद्योतस्य च नैकप्रकारता । यथा जलांशस्यामृतसमुद्रस्य मूत्रादेश्च । तथा च पृथिव्यंशस्य मेरोर्विष्ठादेश्च । अभिमानिदेवतापेक्षयैतत् ।।४।।**

ಅನುವಾದ - 'ನೈವಾಂಶಃ' ಎಂಬ ಶ್ರುತಿಯು ಜೀವನು ಭಗವಂತನ ಅಂಶನಲ್ಲವೆಂದು ಹೇಳುತ್ತಿದೆ. ಇದರ ಅರ್ಥವನ್ನು ಸೂತ್ರಕಾರರೇ ಸ್ಪಷ್ಟ ಪಡಿಸುತ್ತಿದ್ದಾರೆ. ಜೀವರು ಪರಮಾತ್ಮನ ಅಂಶರಾಗಿದ್ದಾರೆ. ಮತ್ಸ್ಯಾದಿರೂಪಗಳೂ ಕೂಡ ಭಗವಂತನ ಅಂಶಗಳೇ ಆಗಿವೆ. ಹಾಗಿದ್ದರೂ ಮತ್ಸ್ಯಾದ್ಯವತಾರಗಳು ಜೀವನಂತೆ ಅಲ್ಲ. ಏಕೆಂದರೆ ಜೀವರಂತೆ ಮತ್ಸ್ಯಾದ್ಯವತಾರಗಳು ಭಿನ್ನಾಂಶಗಳಾಗಿಲ್ಲ. ಬ್ರಹ್ಮನ ಸ್ವರೂಪಾಂಶಗಳಾಗಿವೆ. ಯಾವರೀತಿಯಾಗಿ ಮಿಣುಕುಹುಳವು ತೇಜಸ್ಸಿನ ಅಂಶವಾಗಿದೆ. ಪ್ರಳಯಾಗ್ನಿಯೂ ಕೂಡ ತೇಜಸ್ಸಿನ ಅಂಶವಾಗಿದೆ. ಎರಡೂ ಪ್ರಳಯಾಗ್ನಿಯ ಅಂಶಗಳಾಗಿದ್ದರೂ ಅವೆರಡು ಒಂದೇ ರೀತಿಯಾಗಿಲ್ಲ. ಹಾಗೇ ಜೀವರು ಹಾಗೂ ಮತ್ಸ್ಯಾದ್ಯವತಾರಗಳು ಬ್ರಹ್ಮನ ಅಂಶರಾಗಿದ್ದರೂ ಕೂಡ ಬಹಳಷ್ಟು ವ್ಯತ್ಯಾಸವಿದೆ ಎಂದು ತಿಳಿಯಬೇಕು.

ಅಮೃತಸಮುದ್ರವು ನಿರೀನ ಅಂಶವಾಗಿದೆ. ಮೂತ್ರವೂ ಕೂಡ ನೀರಿನ ಅಂಶವಾಗಿದೆ. ಮೇರುಪರ್ವತವು ಪೃಥಿವಿಯ ಅಂಶವಾಗಿದೆ. ಅಮೇಧ್ಯವೂ ಕೂಡ ಪೃಥಿವಿಯ ಅಂಶವಾಗಿದೆ. ಆದರೂ ಇವುಗಳಲ್ಲಿ ಹೇಗೆ ಬಹಳಷ್ಟು ವ್ಯತ್ಯಾಸವಿದೆಯೋ, ಅದರಂತೇ ಜೀವರಿಗೂ ಮತ್ಸ್ಯಾದವತಾರಗಳಿಗೂ ಬಹಳಷ್ಟು ವ್ಯತ್ಯಾಸವಿದೆ. ಈ ದೃಷ್ಟಾಂತವನ್ನು ಅಭಿಮಾನಿದೇವತೆಗಳ ದೃಷ್ಟಿಯಲ್ಲಿ ಮಾತ್ರ ಹೇಳಲಾಗಿದೆ.

ಪ್ರತಿಪದಾರ್ಥ -- ಅನಂಶತ್ವಶ್ರುತೇಃ = 'ನೈವಾಂಶಃ' ಎಂಬುದಾಗಿ ಅಂಶವಿಲ್ಲವೆಂದು ಹೇಳುವ ಶ್ರುತಿಗೆ, ಗತಿಂ ಚ = ನಿಜವಾದ ಅಭಿಪ್ರಾಯವನ್ನು, ಆಹ = ಸೂತ್ರಕಾರರೇ ಹೇಳುತ್ತಿದ್ದಾರೆ.

ಅಂಶತ್ವೇಪಿ = ಜೀವರು ಪರಮಾತ್ಮನ ಅಂಶರೇ ಆಗಿದ್ದರೂ ಕೂಡ, ಮತ್ಸ್ಯಾದಿರೂಪೀ = ಮತ್ಸ್ಯಾದಿರೂಪಗಳು ಭಗವಂತನ ಅಂಶಗಳೇ ಆಗಿದ್ದರೂ, ಏವಂವಿಧಃ ನ = ಜೀವರಂತೆ ಭಿನ್ನಾಂಶರಲ್ಲ, ಏವಂ ವಿಧಃ = ಸ್ವರೂಪಾಂಶಗಳು. ಯಥಾ = ಯಾವರೀತಿಯಾಗಿ, ಕಾಲಾಗ್ನೇಃ = ಪ್ರಳಯಾಗ್ನಿಯು, ತೇಜಃ = ತೇಜಸ್ಸಿನ, ಅಂಶಸ್ಯೈವ = ಅಂಶವೇ ಆಗಿದ್ದರೂ, ಖದ್ಯೋತಸ್ಯ ಚ = ಮಿಣುಕುಹುಳದ ತೇಜಸ್ಸು ಕೂಡ ತೇಜಸ್ಸಿನ ಅಂಶವೇ ಆಗಿದ್ದರೂ, ನೈಕಪ್ರಕಾರತಾ = ಎರಡೂ ಒಂದೇ ರೀತಿಯಾಗಿ ಇರುವುದಿಲ್ಲ. ಯಥಾ = ಯಾವ ರೀತಿಯಾಗಿ, ಅಮೃತಸಮುದ್ರಸ್ಯ = ಅಮೃತಸಮುದ್ರದ ನೀರು, ಜಲಾಂಶಸ್ಯ = ಜಲದ ಅಂಶವಾಗಿದ್ದರೂ, ಮೂತ್ರಾದೇಶ್ಚ = ಮೂತ್ರಾದಿಗಳು ಜಲದ ಅಂಶವಾಗಿದ್ದರೂ, ತಥಾ = ಹಾಗೆಯೇ, ಮೇರೋಃ = ಮೇರುಪರ್ವತವು, ಪೃಥಿವ್ಯಾಂಶಸ್ಯ = ಪೃಥಿವಿಯ ಅಂಶವಾಗಿದ್ದರೂ, ವಿಷ್ಠಾದೇಶ್ಚ = ಅಮೇಧ್ಯವು ಪೃಥಿವಿಯ ಅಂಶವಾಗಿದ್ದರೂ ಬಹಳಷ್ಟು ವ್ಯತ್ಯಾಸವಿದೆಯೊ ಅದರಂತೆ ಭಿನ್ನಾಂಶವೆಂದು ತಿಳಿಯಬೇಕು.

ಏತತ್ = ಪುರಾಣದಲ್ಲಿ ಹೇಳಿದ ದೃಷ್ಟಾಂತವು, ಅಭಿಮಾನಿದೇವತಾಪೇಕ್ಷಯಾ = ಪ್ರಕಾಶಾದ್ಯಭಿಮಾನಿದೇವತೆಗಳ ದೃಷ್ಟಿಯಿಂದ ಹೇಳಲಾಗಿದೆ.

## ತತ್ವಪ್ರಕಾಶಿಕಾ

**तत्वप्रकाशिका – न जीवस्येश्वरांशत्वं युक्तम् । तथा सत्यंशत्वाविशेषान्मत्स्यादिसाम्यापातादनंशत्वश्रुतिविरोधाच्चेत्याशङ्कां परिहरत्सूत्रमवतारयति – अनंशत्वेति ।। मत्स्याद्यसाम्यं चार्थः । सूत्रं व्याचष्टे –अंशत्वेऽपीति ।।**

ಜೀವನು ಪರಮಾತ್ಮನ ಅಂಶನಾಗುತ್ತಾನೆಂಬುದು ಯುಕ್ತವಲ್ಲ. ಹಾಗಾದರೆ ಮತ್ಸ್ಯಾದಿ ರೂಪಗಳಿಗೆ ಜೀವನು ಸಮಾನನಾಗಬೇಕಾಗುತ್ತದೆ. ಏಕೆಂದರೆ ಮತ್ಸ್ಯಾದಿ ರೂಪಗಳು ಪರಮಾತ್ಮನ ಅಂಶವೆನ್ನುವಿರಿ. ಈಗ ಜೀವನನ್ನೂ ಕೂಡ ಅಂಶನೆನ್ನುತ್ತಿರುವಿರಿ. ಆದ್ದರಿಂದ ಅನಂಶತ್ವವನ್ನು ಹೇಳುವ 'ನೈವಾಂಶಃ' ಎಂಬ ಶ್ರುತಿ ವಿರೋಧವೂ ಕೂಡ ಬರುತ್ತದೆ. ಈ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರಕ್ಕೆ 'ಅನಂಶತ್ವೇ' ಇತ್ಯಾದಿಯಾಗಿ ಅವತಾರಿಕೆ ನೀಡುತ್ತಿದ್ದಾರೆ.

ಭಾಷ್ಯದಲ್ಲಿರುವ 'ಚ' ಶಬ್ದಕ್ಕೆ ಮತ್ಸ್ಯಾದ್ಯವತಾರದ ಜೊತೆ ಜೀವನು ಸಮಾನವಲ್ಲ ಎಂದರ್ಥ. ಸೂತ್ರವನ್ನು 'ಅಂಶತ್ವೇಪಿ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ಭಗವಂತನ ಮತ್ಸ್ಯಾದಿರೂಪಗಳು ಭಗವಂತನ ಅಂಶವಾಗಿರುವಾಗ ಜೀವನನ್ನೂ ಕೂಡ ಅಂಶವೆಂದು ಹೇಗೆ ಹೇಳುತ್ತೀರಿ ? ಎಂಬ ಆಕ್ಷೇಪದ ಪರಿಹಾರಕ್ಕಾಗಿ ಈ ಸೂತ್ರ ಹೊರಟಿದೆ.

**तत्वप्रकाशिका – जीवानां मत्स्यदीनां च भगवदंशत्वाविशेषेऽपि न सर्वसाम्यम् । मत्स्यादीनां स्वरूपांशत्वात् जीवानां भिन्नांशत्वात् । नच अंशत्वविशेषात् भेदाभेदानुपपत्तिः । कालाग्निखद्योतादिष्वद्वयाद्यंशेषु अंशत्वाविशेषेऽपि तद्दर्शनादिति भावः।**

ಮತ್ಸ್ಯಾದಿ ಅವತಾರಗಳು ಭಗವಂತನ ಅಂಶವೇ ಆಗಿವೆ. ಜೀವರೂ ಕೂಡ ಭಗವಂತನ ಅಂಶರೇ ಆಗಿದ್ದಾರೆ. ಇದರಲ್ಲಿ ಏನೂ ವ್ಯತ್ಯಾಸವಿಲ್ಲ. ಅಂದಮಾತ್ರಕ್ಕೆ ಜೀವರು ಹಾಗೂ ಮತ್ಸ್ಯಾದ್ಯವತಾರಗಳು ಸಮಾನವಾಗಲು ಸಾಧ್ಯವೇ ಇಲ್ಲ. ಏಕೆಂದರೆ ಮತ್ಸ್ಯಾದಿಗಳು ಸ್ವರೂಪಾಂಶ ಎನಿಸುತ್ತವೆ. ಜೀವರು ಭಿನ್ನಾಂಶ ಎನಿಸುತ್ತಾರೆ. ಎರಡರಲ್ಲಿಯೂ ಅಂಶತ್ವವು ಸಮಾನವಾದ್ದರಿಂದ ಭೇದಾಭೇದವನ್ನು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಪ್ರಳಯಾಗ್ನಿ ಹಾಗೂ ಮಿಣುಕು ಹುಳದ ಅಗ್ನಿ ಎರಡರಲ್ಲಿಯೂ ಅಂಶತ್ವವು ಸಮಾನವಾಗಿದ್ದರೂ ಬಹಳಷ್ಟು ವ್ಯತ್ಯಾಸವಿರುವುದು ಕಾಣಿಸುತ್ತಿದೆ.

ವಿವರಣೆ - ಜೀವರಿಗೆ ಅಂಶತ್ವವನ್ನು ಹಿಂದಿನ ಮೂರು ಸೂತ್ರಗಳಲ್ಲಿ ಪ್ರತಿಪಾದನೆ ಮಾಡಿ ಅನಂಶತ್ವ ಶ್ರುತಿಯನ್ನು ಈ ಸೂತ್ರದಲ್ಲಿ ಹೇಳುತ್ತಿದ್ದಾರೆಂದು ಆಪಾತತಃ ಕಾಣಿಸುತ್ತದೆ. ಹಾಗೇನಾದರೂ ಒಪ್ಪಿದರೆ ಜೀವರಿಗೆ ಮತ್ಸ್ಯಾದಿರೂಪದಿಂದ ಸಾಮ್ಯಪ್ರಸಂಗವಿದೆ ಎಂಬ ದೋಷಪರಿಹಾರವನ್ನು ಭಾಷ್ಯವಾಕ್ಯದಲ್ಲಿ ಮಾಡಿಯೇ ಇಲ್ಲವೆಂದು ತಿಳಿಯುತ್ತದೆ. ಆದ್ದರಿಂದ ಈ ದೋಷದ ಪರಿಹಾರವನ್ನು ಭಾಷ್ಯದಲ್ಲಿರುವ ಚಶಬ್ದದಿಂದ ಅನುಸಂಧಾನ ಮಾಡಿಕೊಳ್ಳಬೇಕು. ಇಲ್ಲದಿದ್ದರೆ ಮುಂದಿನ ಐದು ಸೂತ್ರಗಳಲ್ಲಿ ಮುಖತಃ ಹೇಳಲ್ಪಟ್ಟ ಜೀವನಿಗೆ ಮತ್ಸ್ಯಾದಿ ರೂಪಗಳಿಗೆ ಸಾಮ್ಯವಿಲ್ಲ ಎಂಬ ವಿಷಯಕ್ಕೆ ಹಾಗೂ ಅನಂಶತ್ವಶ್ರುತಿಗೆ ಗತಿಯೂ ಕೂಡ ತೋರುವುದರಿಂದ ಈ ಸೂತ್ರದ ಅವತಾರಿಕಾ ಭಾಷ್ಯಕ್ಕೆ ನ್ಯೂನತ್ವವು ಬರಬೇಕಾಗುತ್ತದೆ (ವಾಕ್ಯಾರ್ಥಮುಕ್ತಾವಳಿ).

ಟೀಕೆಯಲ್ಲಿ ಕಾಲಾಗ್ನಿ ಹಾಗೂ ಖದ್ಯೋತಗಳ ಉದಾಹರಣೆಯನ್ನು ನೀಡಿ ಭಿನ್ನಾಂಶತ್ವವನ್ನು ಸಮರ್ಥಿಸಲಾಗಿದೆ. ಇದನ್ನು ಸ್ಪಷ್ಟವಾಗಿ ಹೀಗೆ ತಿಳಿಯಬೇಕು. ಕಾಲಾಗ್ನಿಯು ಅತ್ಯಂತ ಪ್ರಕಾಶವುಳ್ಳದ್ದಾಗಿದೆ. ಅದು ತೇಜಸ್ಸಿನ ಒಂದು ಅಂಶ. ಖದ್ಯೋತವೂ ಕೂಡ ಸಣ್ಣ ಪ್ರಕಾಶವುಳ್ಳದ್ದಾದರೂ ತೇಜಸ್ಸಿನ ಅಂಶವಾಗಿದೆ. ಈ ಎರಡೂ ತೇಜಸ್ಸುಗಳಿಗೆ ಅಭಿಮಾನಿದೇವತೆಯು ಒಬ್ಬನೇ ಆಗಿದ್ದಾನೆ.

ಸಮುದ್ರವು ನೀರು, ಮೂತ್ರವೂ ಕೂಡ ನೀರಾಗಿದೆ. ಸಮುದ್ರದ ನೀರು ಬೃಹತ್ ಪ್ರಮಾಣದಲ್ಲಿದೆ. ಮೂತ್ರದ ನೀರು ಅಲ್ಪ ಪ್ರಮಾಣದಲ್ಲಿದೆ. ಇದೊಂದು ವ್ಯತ್ಯಾಸ ಬಿಟ್ಟರೆ ಅಂಶತ್ವದಲ್ಲಿ ಹೆಚ್ಚು ವ್ಯತ್ಯಾಸವಿಲ್ಲ. ಆದ್ದರಿಂದ ಅಲ್ಲಿ ಸಮುದ್ರಕ್ಕೆ ಅಭಿಮಾನಿದೇವತೆಯೇ ಮೂತ್ರಕ್ಕೂ ಕೂಡ ಅಭಿಮಾನಿದೇವತೆಯಾಗಿದ್ದಾನೆ. ತೇಜೋಭಿಮಾನಿಯಾದವನು ಸೂರ್ಯ, ಜಲಾಭಿಮಾನಿಯಾದವನು ವರುಣ, ಪೃಥಿವಿಗೆ ಅಭಿಮಾನಿಯಾದವಳು ಧರಾದೇವಿ. ತೇಜೋಭಿಮಾನಿಯಾದ ಸೂರ್ಯನ ಅಂಶವೇ ಪ್ರಳಯಾಗ್ನಿ, ಜಲಾಭಿಮಾನಿಯಾದ ವರುಣನ ಅಂಶವೇ ಅಮೃತ ಸಮುದ್ರಕ್ಕೆ ಅಭಿಮಾನಿ, ಪೃಥಿವಿಗೆ ಅಭಿಮಾನಿಯಾದ ಧರಾದೇವಿಯ ಅಂಶವೇ ಮೇರುಪರ್ವತಕ್ಕೆ ಅಭಿಮಾನಿನೀ. ಆದ್ದರಿಂದ ಇವರೆಲ್ಲರೂ ಮೂಲದೇವತೆಗಳಿಂದ ಅಭಿನ್ನಾಂಶರು. ಆದರೆ ಮಿಣುಕುಹುಳ, ಮೂತ್ರ, ಅಮೇಧ್ಯಗಳಿಗೆ ಕ್ಷುದ್ರದೇವತೆಗಳು ಅಭಿಮಾನಿಯಾಗಿದ್ದಾರೆ. ಅವರು ಮೂಲದೇವತೆಗಳಿಂದ ಭಿನ್ನಾಂಶರೇ ಹೊರತು ಅಭಿನ್ನಾಂಶರಲ್ಲ. ಆದ್ದರಿಂದ ದೃಷ್ಟಾಂತದಲ್ಲಿ ಸ್ವರೂಪಾಂಶ, ಭಿನ್ನಾಂಶದಲ್ಲಿ ವ್ಯತ್ಯಾಸವಿದೆ. ಪ್ರಕೃತದಲ್ಲೂ

ಕೂಡ ಮತ್ಸ್ಯಾದಿಗಳು ಪರಮಾತ್ಮನ ಅಂಶವಾಗಿದೆ, ಜೀವರೂ ಕೂಡ ಅಂಶರಾಗಿದ್ದಾರೆ. ಮತ್ಸ್ಯಾದಿಗಳು ಅಭಿನ್ನಾಂಶರೆಂದೂ, ಜೀವರು ಭಿನ್ನಾಂಶರೆಂದು ದಾರ್ಷ್ಟಾಂತಿಕವು ದೃಷ್ಟಾಂತಕ್ಕೆ ಅನುಗುಣವಾಗಿದೆ ಎಂದು ತಿಳಿಯಬೇಕು (ವಾಕ್ಯಾರ್ಥಮುಕ್ತಾವಳಿ).

**तत्वप्रकाशिका – ननु कालाग्निखद्योतादीनां तेजःप्रभृतिभूतकार्याणां भेदाभेदसाम्यात् कथमत्रैते दृष्टान्ता इत्यत आह – अभिमानीति ।। तेजोजलपृथिव्यभिमानिनां कालाग्न्यमृताब्धिमेर्वभिमानिनामभिन्नत्वात्खद्योताद्यभिमानिनां भिन्नत्वाद्युक्तं दृष्टान्तत्वमिति भावः ।। ४६ ।।**

ಪ್ರಳಯಾಗ್ನಿ ಹಾಗೂ ಖದ್ಯೋತಗಳು ಅಗ್ನಿಯ ಅಂಶವಾದರೂ ಕೂಡ ಎರಡರಲ್ಲೂ ಬಹಳಷ್ಟು ವ್ಯತ್ಯಾಸವಿದೆ. ಪ್ರಳಯಾಗ್ನಿ ಹಾಗೂ ಮಿಣುಕುಹುಳು ಇವೆರಡಕ್ಕೆ ಭೇದಾಭೇದ ಇರುವುದರಿಂದ ಇದನ್ನು ದೃಷ್ಟಾಂತವನ್ನಾಗಿ ಹೇಗೆ ಹೇಳುತ್ತೀರಿ? ಈ ಪ್ರಶ್ನೆಗೆ 'ಅಭಿಮಾನಿ' ಇತ್ಯಾದಿಯಾಗಿ ಉತ್ತರಿಸಿದ್ದಾರೆ (ತೇಜಸ್ಸಿನ ಕಾರ್ಯವಾದ್ದರಿಂದ ಭೇದಾಭೇದವನ್ನು ಒಪ್ಪಲಾಗಿದೆ ಎಂದಭಿಪ್ರಾಯ).

ತೇಜಸ್ಸು, ಜಲ, ಪೃಥಿವೀ ಇವುಗಳ ಅಭಿಮಾನಿದೇವತೆಗಳಿಗೆ ಹಾಗೂ ಪ್ರಳಯಾಗ್ನಿ, ಅಮೃತಸಮುದ್ರ, ಮೇರುಪರ್ವತಗಳ ಅಭಿಮಾನಿದೇವತೆಗಳಿಗೆ ಅಭೇದವಿದೆ. ಮಿಣುಕುಹುಳ ಮೊದಲಾದ ಅಭಿಮಾನಿದೇವತೆಗಳಿಗೆ ಭೇದವೇ ಇದೆ. ಆದ್ದರಿಂದ ದೃಷ್ಟಾಂತವು ಯುಕ್ತವಾಗಿದೆ ಎಂದು ತಿಳಿಯಬೇಕು.

ವಿವರಣೆ - ತೇಜಸ್ಸಿಗೆ ಅಭಿಮಾನಿಯಾದವನು ಸೂರ್ಯ, ಜಲಕ್ಕೆ ಅಭಿಮಾನಿಯಾದವನು ವರುಣ, ಪೃಥಿವಿಗೆ ಅಭಿಮಾನಿಯಾದವಳು ಭೂದೇವಿ. ಸೂರ್ಯನ ಅಂಶವು ಪ್ರಳಯಾಗ್ನಿಗೆ ಅಭಿಮಾನಿ. ವರುಣನ ಅಂಶವು ಅಮೃತಸಮುದ್ರಕ್ಕೆ ಅಭಿಮಾನಿ. ಪೃಥಿವಿಯ ಅಂಶವು ಮೇರುಪರ್ವತಕ್ಕೆ ಅಭಿಮಾನಿ. ಈ ಅಂಶಗಳಿಗೂ ಮೂಲದೇವತೆ ಎನಿಸಿದ ಸೂರ್ಯಾದಿ ದೇವತೆಗಳಿಗೂ ಅಭೇದವಿದೆ. ಆದರೆ ಮಿಣುಕುಹುಳದ ಬೆಳಕಿಗೆ, ಮೂತ್ರ, ಮಲಗಳಿಗೆ ಅಭಿಮಾನಿದೇವತೆಗಳಾಗಿಲ್ಲ, ಕ್ಷುದ್ರದೇವತೆಗಳು ಅಭಿಮಾನಿಗಳಾಗಿದ್ದಾರೆ. ಇವರು ಸೂರ್ಯಾದಿದೇವತೆಗಳಿಗಿಂತ ಭಿನ್ನರೇ ಆಗಿದ್ದಾರೆ. ಅದರಂತೆ ಭಗವಂತನ ಸ್ವರೂಪಾಂಶವೆನಿಸಿದ ಮತ್ಸ್ಯಾದಿ ರೂಪಗಳಿಂದ ಭಗವಂತನಿಗೆ ಅಭೇದವಿರುತ್ತದೆ, ಭಿನ್ನಾಂಶರಾದ ಜೀವರಿಗೆ ಭೇದವಿರುತ್ತದೆಂದು ತಿಳಿಯಬೇಕು.

## ಬ್ರಹ್ಮಸೂತ್ರ

**सूत्रम् – स्मरन्ति च ।।**

ಜೀವನು ಪರಮಾತ್ಮನ ಭಿನ್ನಾಂಶನೆಂದು, ಮತ್ಸ್ಯಾದಿ ರೂಪಗಳು ಅಭಿನ್ನಾಂಶವೆಂದು ಸ್ಮೃತಿವಾಕ್ಯವೇ ಹೇಳುತ್ತಿದೆ.

## ಸೂತ್ರದೀಪಿಕಾ

**सूत्रदीपिका – स्मर्तारः जीवेशयोः भिन्नांशत्वाभिन्नांशत्वे 'एते स्वांशकलाः' इत्यादिस्मृत्या कथयन्ति चेत्यर्थः ।।९।।**

ಸ್ಮರಂತಿ ಚ = ಸ್ಮೃತಿಕಾರರು ಜೀವನು ಪರಮಾತ್ಮನ ಭಿನ್ನಾಂಶನೆಂದು, ಮತ್ಸ್ಯಾದಿರೂಪಗಳು ಅಭಿನ್ನಾಂಶವೆಂದು, 'ಏತೇ ಸ್ವಾಂಶಕಲಾಃ' ಇತ್ಯಾದಿ ವಾಕ್ಯಗಳಿಂದ ಹೇಳಿರುತ್ತಾರೆ.

ಅಂಶಾಧಿಕರಣ (೨-೩-೧೮)

## ಬ್ರಹ್ಮಸೂತ್ರಭಾಷ್ಯ

**भाष्यम् – ।। स्मरन्ति च ।।९।।**

**''एते स्वांशकलाः पुंसः कृष्णस्तु भगवान् स्वयम् ।**
**(इन्द्रारिव्याकुलं लोकं मृडयन्ति युगे युगे ।।)**
**अतः परं यदव्यक्तमव्यूढगुणबृंहितम् ।**
**अदृष्टाश्रुतवस्तुत्वात् स जीवो यः पुनर्भवः ।।''**
**'स्वांशश्चाथो विभिन्नांश इति द्वेधांऽश इष्यते ।**
**अंशिनो यत्तु सामर्थ्यं यत् स्वरूपं यथा स्थितिः ।।**
**तदेव नाणुमात्रोऽपि भेदः स्वांशांशिनोः क्वचित् ।**
**विभिन्नांशोऽल्पशक्तिः स्यात् किञ्चित्सादृश्यमात्रयुक् ।।'**
**(इति वाराहे ।)**

**न त्वत्समोऽस्त्यभ्यधिकः कुतोऽन्यः । (गी.११.४३.) इत्यादि ।।९।।**

ಅನುವಾದ - ಸ್ಮೃತಿಯಲ್ಲೂ ಕೂಡ ಭಗವಂತನ ಸ್ವರೂಪಾಂಶ ಭಿನ್ನಾಂಶಗಳನ್ನು ಸ್ಪಷ್ಟವಾಗಿ ಹೇಳಲಾಗಿದೆ -

ಮತ್ಸ್ಯ, ಕೂರ್ಮ, ವರಾಹಾದಿಗಳು ಪುರುಷನಾಮಕನಾದ ಪರಮಾತ್ಮನ ಸ್ವರೂಪಾಂಶಗಳು. ಸಾಕ್ಷಾತ್‌ಕೃಷ್ಣನು ಮೂಲರೂಪನಾದ ನಾರಾಯಣನು ಇಂದ್ರನ ಶತ್ರುಗಳಾದ ದೈತ್ಯರು ಲೋಕವನ್ನು ಪೀಡಿಸಿದಾಗ ಪ್ರತಿಯುಗದಲ್ಲಿ ಭಗವಂತನು ಅವತಾರವನ್ನು ತಾಳುತ್ತಾನೆ. ಶ್ರೀಮನ್ ನಾರಾಯಣನಿಂದ ಯಾವುದು ಸೂಕ್ಷ್ಮವಾಗಿ ಅನಾದಿಕಾಲದಿಂದ ಸತ್ವಗುಣಯುಕ್ತವಾದ ಚೈತನ್ಯವಿದೆಯೋ ಅದು ಭಗವಂತನ ಶ್ರವಣದರ್ಶನಾದಿಗಳನ್ನು ಮಾಡದಿರುವ ಕಾರಣ ಮತ್ತೆ ಮತ್ತೆ ಹುಟ್ಟಿಬರುತ್ತದೆ. ಅವನೇ ಜೀವನು.

ಸ್ವಾಂಶವೆಂದು ಮತ್ತು ಭಿನ್ನಾಂಶವೆಂದು ಎರಡು ಬಗೆಯಲ್ಲಿ ವಿಭಜನೆ ಮಾಡಲಾಗಿದೆ. ಅಂಶಿಯಾದ ಭಗವಂತನಿಗೆ ಯಾವ ಸಾಮರ್ಥ್ಯವಿದೆಯೋ ಮತ್ತು ಜ್ಞಾನಾನಂದಗಳೇ ಮೊದಲಾದ ಸರ್ವೋತ್ತಮತ್ವಗುಣವು ಇವೆಯೋ, ಅವೆಲ್ಲವೂ ಸ್ವರೂಪಾಂಶಕ್ಕೂ ಇರುತ್ತವೆ. ಸ್ವರೂಪಾಂಶ ಮತ್ತು ಅಂಶಗಳಿಗೆ ಯಾವ ಕಾಲದಲ್ಲೂ ಅಣುವಿನಷ್ಟು ವ್ಯತ್ಯಾಸ ಇರುವುದಿಲ್ಲ. ಭೇದವು ಕೂಡ ಇರುವುದಿಲ್ಲ. ಆದರೆ ಭಿನ್ನಾಂಶಗಳಾದ ಜೀವರಿಗೆ ಅಂಶಿಗಿಂತ ಬಹಳ ಕಡಿಮೆ ಸಾಮರ್ಥ್ಯವಿರುತ್ತದೆ. ಜ್ಞಾನಾನಂದಾದಿಗಳ ಸಾದೃಶ ಮಾತ್ರ ಇರುತ್ತದೆ ಎಂದು ತಿಳಿಯಬೇಕು.

ಭಗವದ್ಗೀತೆಯಲ್ಲಿ ನಿನಗೆ ಸಮಾನನಾದ ಮತ್ತೊಬ್ಬರು ಇರುವುದಿಲ್ಲ. ನಿನಗೆ ಉತ್ತಮರಂತೂ ಇರುವುದು ದೂರತೋಪಾಸ್ತು ಹೀಗೆ ಅರ್ಜುನನು ಕೃಷ್ಣನನ್ನು ನೋಡಿ ಹೇಳಿರುತ್ತಾನೆ.

ಪ್ರತಿಪದಾರ್ಥ -- ಏತೇ = ಮತ್ಸ್ಯಕೂರ್ಮಾದಿಗಳು, ಪುಂಸಃ = ಪುರುಷನಾಮಕನಾದ ಪರಮಾತ್ಮನ, ಸ್ವಾಂಶಕಲಾಃ = ಸ್ವರೂಪಾಂಶಗಳು, ಸ್ವಯಂ = ಸಾಕ್ಷಾತ್, ಭಗವಾನ್ ಕೃಷ್ಣಸ್ತು = ಮೂಲರೂಪನಾದ ಶ್ರೀಕೃಷ್ಣನು, (ಇಂದ್ರಾರಿವ್ಯಾಕುಲಂ = ದೈತ್ಯರಿಂದ

ದುಃಖಿತವಾದ, ಲೋಕಮ್ = ಲೋಕವನ್ನು, ಮೃಡಯಂತಿ = ಪೀಡಿಸುತ್ತಿರಲು, ಯುಗೇ ಯುಗೇ = ಪ್ರತಿಯುಗಗಳಲ್ಲಿ ಅವತಾರವನ್ನು ತಾಳುತ್ತಾನೆ.)

ಅತಃ = ಆ ಪರಮಾತ್ಮನಿಂದ, ಪರಂ = ಬೇರೆಯಾದ, ಯತ್ = ಯಾವ, ಅವ್ಯಕ್ತಮ್ = ಸೂಕ್ಷ್ಮವಾದ, ಅವ್ಯೂಢಗುಣಬೃಂಹಿತಮ್ = ಸತ್ವಾದಿಗುಣಯುಕ್ತವಾದ ಯಾವ ಚೈತನ್ಯವಿದೆಯೋ ಅದು, ಅದೃಷ್ಟಾಶ್ರುತವಸ್ತುತ್ವಾತ್ = ಭಗವಂತನ ಶ್ರವಣದರ್ಶನಾದಿಗಳನ್ನು ಮಾಡದಿರುವ ಕಾರಣ, ಪುನರ್ಭವಃ = ಮತ್ತೆ ಮತ್ತೆ ಹುಟ್ಟಿಬರುತ್ತದೆ. ಸಃ = ಅದೇ, ಜೀವಃ = ಜೀವನೆಂದು ಕರೆಸಿಕೊಳ್ಳುತ್ತಾರೆ.

ಸ್ವಾಂಶಃ = ಸ್ವಾಂಶವೆಂದು, ಚ = ಮತ್ತು ಅದಕ್ಕಿಂತ ಬೇರೆಯಾದ, ವಿಭಿನ್ನಾಂಶಃ = ಭಿನ್ನಾಂಶವೆಂದು, ಇತಿ = ಹೀಗೆ, ದ್ವೇಧಾ = ಎರಡು ಬಗೆಯಲ್ಲಿ, ಅಂಶಃ = ಅಂಶವು, ಇಷ್ಯತೇ = ಅಂಗೀಕರಿಸಲಾಗುತ್ತದೆ. ಯತ್ತು= ಯಾವ ವಿಧವಾದ, ಸಾಮರ್ಥ್ಯಂ = ಸಾಮರ್ಥ್ಯವಿದೆಯೋ, ಯತ್ = ಯಾವ ಜ್ಞಾನಾನಂದಾದಿರೂಪವಿದೆಯೋ, ಯಥಾ ಸ್ಥಿತಿಃ = ಯಾವರೀತಿಯ ಸರ್ವೋತ್ತಮತ್ವಾದಿಗಳು ಇವೆಯೋ, ತದೇವ = ಅವೆಲ್ಲವೂ ಸ್ವರೂಪಾಂಶದಲ್ಲೂ ಇರುತ್ತವೆ. ಸ್ವಾಂಶಾಂಶಿನೋಃ = ಸ್ವರೂಪಾಂಶ ಮತ್ತು ಅಂಶಿಗಳಿಗೆ, ಕ್ವಚಿತ್ = ಯಾವಾಗಲೂ, ಅಣುಮಾತ್ರೋಽಪಿ = ಅಣುಮಾತ್ರದಲ್ಲೂ, ಭೇದಃ = ಭೇದವು, ನ = ಇರುವುದಿಲ್ಲ. ವಿಭಿನ್ನಾಂಶಃ = ಭಿನ್ನಾಂಶರಾದ ಜೀವಾದಿಗಳು, ಅಲ್ಪಶಕ್ತಿಃ = ಅಂಶಿಗಿಂತ ಕಡಿಮೆ ಶಕ್ತಿಯುಳ್ಳವರು, ಕಿಂಚಿತ್ = ಸ್ವಲ್ಪವೇ ಮಾತ್ರ, ಸಾದೃಶ್ಯಮಾತ್ರಯುಕ್ = ಜ್ಞಾನಾನಂದಾದಿಗಳ ಸಾದೃಶ್ಯವನ್ನು ಪಡೆದಿರುತ್ತಾರೆ. (ಇತಿ = ಹೀಗೆ, ವಾರಾಹೇ = ವರಾಹಪುರಾಣದಲ್ಲಿ ಹೇಳಲಾಗಿದೆ.)

ತ್ವತ್ = ನಿನಗೆ, ಸಮಃ = ಸಮರಾದವರು, ನಾಸ್ತಿ = ಇರುವುದಿಲ್ಲ. ಅಧಿಕಃ = ಅಧಿಕರಾದವರಂತು, ಅನ್ಯಃ = ಮತ್ತೊಬ್ಬ, ಕುತಃ = ಹೇಗೆ ತಾನೇ ಇದ್ದಾರು?

## ತತ್ವಪ್ರಕಾಶಿಕಾ

**तत्वप्रकाशिका – ननु तत्र तथात्वेऽपि जीवानां मत्स्यादीनां स्वरूपांशत्वं चाभेदः किं न स्यादित्याशङ्कां स्मृतिभिः परिहरत्सूत्रमुपनस्य ताः स्मृतीरुदाहरति – स्मरन्ति चेति ।।**

ಪೃಥಿವ್ಯಾದ್ಯಭಿಮಾನಿದೇವತೆಗಳ ಭೇದಾಭೇದವೇ ಇರಲಿ. ಆದರೆ ಜೀವರು ಹಾಗೂ ಮತ್ಸ್ಯಾದವತಾರಗಳ ವಿಷಯದಲ್ಲಿ ಸ್ವರೂಪಾಂಶತ್ವವನ್ನೇ ಅಂಗೀಕರಿಸುತ್ತೇವೆ. ಭಗವಂತನಿಂದ ಜೀವರು ಹಾಗೂ ಮತ್ಸ್ಯಾದಿಗಳು ಅಭಿನ್ನರೇ ಏಕಾಗಬಾರದು ? ಆಕ್ಷೇಪವನ್ನು ಪರಿಹರಿಸುವುದಕ್ಕಾಗಿ ಅನೇಕ ಸ್ಮೃತಿಪ್ರಮಾಣಗಳನ್ನು ಉಲ್ಲೇಖಿಸುತ್ತಿದ್ದಾರೆ. ಆ ಸ್ಮೃತಿಪ್ರಮಾಣಗಳನ್ನು ಉಲ್ಲೇಖ ಮಾಡುವ ಸೂತ್ರಗಳನ್ನು ಪಠಿಸಿ, ಸ್ಮೃತಿಗಳನ್ನೂ ಕೂಡ ಉದಾಹರಿಸುತ್ತಿದ್ದಾರೆ.

**तत्वप्रकाशिका – परमपुरुषांशैः सर्वमवतिष्ठतः इत्युक्ते के तेंऽशा इत्याशङ्कायां सविस्तरं वराहादीनां भगवदंशत्वमुक्त्वा जीवानामपि तदुक्तम् ।**

**'ऋषयो मनवो देवा मनुपुत्रा महौजसः ।**

**कलाः सर्वे हरेरेव सप्रजापतयः स्मृताः' (भा. १.३.२७) इति ।**

ಪರಮಪುರುಷನಾದ ಪರಮಾತ್ಮನ ಅಂಶದಿಂದ ಸಮಸ್ತ ಜಗತ್ತಿನಲ್ಲಿ ಸೃಷ್ಟ್ಯಾದಿಗಳು ನಡೆಯುತ್ತವೆ ಎಂದು ಹೇಳಿದಾಗ ಹೀಗೆ ಆಶಂಕೆ ಮೂಡುತ್ತದೆ. ಅಂಶಗಳು ಯಾವುದು? ಎಂದು. ವರಾಹಾದಿಗಳೇ ಆ ಪರಮಾತ್ಮನ ಅಂಶಗಳೆಂದು ಹೇಳಿ, ಜೀವರಿಗೂ ಕೂಡ, ಆ ಪರಮಾತ್ಮನ ಅಂಶತ್ವವನ್ನು ಭಾಗವತವು ಹೀಗೆ ಹೇಳುತ್ತಿದೆ -

ಋಷಯೋ ಮನವೋ ದೇವಾ ಮನುಪುತ್ರಾ ಮಹೌಜಸಃ।

ಕಲಾಃ ಸರ್ವೇ ಹರೇರೇವ ಸಪ್ರಜಾಪತಯಃ ಸ್ಮೃತಾಃ ॥

ಋಷಿಗಳು, ಮನುಗಳು, ದೇವತೆಗಳು, ಅಮಿತವಾದ ಓಜಸ್ಸುಳ್ಳ ಮನುಪುತ್ರರು, ಪ್ರಜಾಪತಿಗಳು ಇವರೆಲ್ಲರೂ ಶ್ರೀಹರಿಯ ಅಂಶರಾಗಿದ್ದಾರೆಂದು ಹೇಳಲಾಗಿದೆ.

**तत्वप्रकाशिका – तत्र वराहादीनां स्वरूपांशत्वमभिधीयते । एते परमपुरुषस्य स्वरूपांशविभागाः स्वयं कृष्णो भगवान्मूलरूप्येव । वराहादयो लोकं मृढयन्तीति ।**

ಈ ಅಂಶಗಳಲ್ಲಿ ವರಾಹಾದಿಗಳು ಭಗವಂತನ ಸ್ವರೂಪಾಂಶರು ಎಂದು ಹೇಳಲಾಗಿದೆ. 'ಏತೇ ಸ್ವಾಂಶಕಲಾಃ ಪುಂಸಃ ಕೃಷ್ಣಸ್ತು ಭಗವಾನ್ ಸ್ವಯಂ' ಎಂಬ ಪ್ರಥಮಸ್ಕಂದದ ಭಾಗವತ ಶ್ಲೋಕದಲ್ಲಿ 'ಏತೇ' ಎಂಬುದಕ್ಕೆ ಪರಮಪುರುಷನ ಸ್ವರೂಪಾಂಶಗಳಾದ ವರಾಹಾದಿಗಳು 'ಸ್ವಯಂ ಕೃಷ್ಣೋ ಭಗವಾನೇವ' ಎಂಬಲ್ಲಿ ಮೂಲರೂಪಿಯಾದ ಭಗವಂತನೇ ಈ ವರಾಹಾದಿಗಳಾಗಿ ಅವತರಿಸಿದ್ದಾನೆ. ಅಸುರರಿಂದ ಪೀಡಿತವಾದ ಲೋಕವನ್ನು ಸಂತೈಸುತ್ತಾನೆ. 'ವರಾಹಾದಯೋ ಲೋಕಂ ಮೃಢಯಂತಿ' ಎಂಬುದಾಗಿ ವರಾಹಾದಿಗಳು ಸ್ವಾಂಶರೂಪಗಳಾಗಿವೆ. ಇವುಗಳೇ ಲೋಕವನ್ನು ರಕ್ಷಿಸುತ್ತವೆ ಎಂಬುದಾಗಿ ಭಾಗವತದಲ್ಲಿ ವರ್ಣಿಸಲಾಗಿದೆ.

**तत्वप्रकाशिका – जीवानाम् अंशत्वेनोक्तानां भिन्नत्वमुच्यते यदतः परमपुरुषाद् भिन्नमकार्यमनाद्यनपगतसत्त्वादिगुणयुक्तं चैतन्यं स जीवः । यश्चादृष्टा श्रुताभगवत्स्वरूपत्वात्संसरतीति ।**

ಜೀವರುಗಳು ಪರಮಾತ್ಮನ ಅಂಶರಾಗಿದ್ದಾರೆ. ಆದರೆ ಸಂಪೂರ್ಣವಾಗಿ ಪರಮಾತ್ಮನಿಂದ ಭಿನ್ನರಾಗಿದ್ದಾರೆ. ಅನಾದಿಯು ಪ್ರಾಕೃತವಾದ ಗುಣಗಳಿಂದ ಚೈತನ್ಯನೇ ಆಗಿದ್ದಾನೆ. ಪರಮಾತ್ಮನನ್ನು ತಿಳಿಯದಿರುವ ಕಾರಣ ಹಾಗೂ ಅವನ ಬಗ್ಗೆ ಕೇಳದಿರುವ ಕಾರಣ ಸಂಸಾರಿಯಾಗಿದ್ದಾನೆ. ಹೀಗೆ ಜೀವರು ಪರಮಾತ್ಮನಿಂದ ಭಿನ್ನಾಂಶರಾಗಿದ್ದಾರೆಂದೂ ಕೂಡ ಅದೇ ಭಾಗವತದಲ್ಲಿ ವರ್ಣಿಸಲಾಗಿದೆ.

**तत्वप्रकाशिका – कृष्णशब्दश्च नारायणेऽपि दृष्टः 'कृष्णो मुक्तैरिज्यते वीतमोहैः' (म.भा.ता.नि. २.६१) इत्यदौ । मत्स्यादीनां जीवानां च**

**स्वरूपास्वरूपांशलक्षणयोगित्वाचांशिना भेदाभेदाविति भावेन स्वरूपास्वरूपांशलक्षणं तावत् स्मृत्या दर्शयति – स्वांशश्चेति ।।**

ಕೃಷ್ಣಶಬ್ದವನ್ನು ನಾರಾಯಣನಲ್ಲೂ ಕೂಡ ಮಹಾಭಾರತವು ಪ್ರಯೋಗ ಮಾಡಿದೆ - 'ಕೃಷ್ಣೋ ಮುಕ್ತೈರಿಜ್ಯತೇ ವೀತಮೋಹೈಃ' ಇತ್ಯಾದಿಯಾಗಿ ಮಹಾಭಾರತದ ಮಂಗಳಶ್ಲೋಕದಲ್ಲಿ ನಾರಾಯಣನನ್ನು ಕೃಷ್ಣನೆಂದು ಹೆಸರಿಸಲಾಗಿದೆ. ಆದ್ದರಿಂದ ಭಾಷ್ಯದಲ್ಲಿ ಕೃಷ್ಣಶಬ್ದಕ್ಕೆ ನಾರಾಯಣನೆಂದು ವ್ಯಾಖ್ಯಾನ ಮಾಡಿರುತ್ತಾರೆ. ಮತ್ಸ್ಯಾದಿ ಅವತಾರಗಳು ಪರಮಾತ್ಮನಿಂದ ಸ್ವರೂಪಾಂಶರಾಗಿರುವುದರಿಂದ ಅಭಿನ್ನರಾಗಿದ್ದಾರೆ. ಜೀವರು ಸ್ವರೂಪಾಂಶರಲ್ಲದ ಕಾರಣ ಭಿನ್ನರಾಗಿದ್ದಾರೆ. ಈ ವಿಷಯವನ್ನು ಸ್ಪಷ್ಟಪಡಿಸಲು ಸ್ವರೂಪಾಂಶದ ಲಕ್ಷಣವನ್ನು ಹಾಗೂ ಸ್ವರೂಪಾಂಶರಲ್ಲದವರ ಲಕ್ಷಣವನ್ನು ವರಾಹಪುರಾಣದಲ್ಲಿ 'ಸ್ವಾಂಶಶ್ಚ' ಇತ್ಯಾದಿಯಾಗಿ ಹೇಳಿದ್ದಾರೆ.

**तत्वप्रकाशिका – यत्स्वरूपं यथाऽऽनन्दादि यथास्थितिर्यथासर्वोत्तमत्वादि तदेव स्वरूपांशस्य भवति । एतच्च स्वरूपांशलक्षणं कृष्णाद्यवतारेष्वस्तीति स्मृत्याऽऽह – नेति ।।**

ಅಂಶಿಯಲ್ಲಿರುವ ಆನಂದ, ಸರ್ವೋತ್ತಮತ್ವ ಮೊದಲಾದವುಗಳು ಅಂಶದಲ್ಲೂ ಕೂಡ ಇದ್ದೇ ಇರುತ್ತದೆ. ಇಂಥ ಸ್ವರೂಪಾಂಶವು ಕೃಷ್ಣಾದ್ಯವತಾರಗಳಲ್ಲಿದೆ. ಮೂಲರೂಪದಲ್ಲಿರುವ ಸಂಪೂರ್ಣ ಶಕ್ತಿಯು ಅವತಾರರೂಪದಲ್ಲಿ ಇರುತ್ತದೆ. ಇದನ್ನು ಗೀತೆಯು 'ನತ್ವತ್ಸಮಃ' ಇತ್ಯಾದಿಯಾಗಿ ನಿರೂಪಣೆ ಮಾಡಿದೆ.

**तत्वप्रकाशिका – जीवेषु विभिन्नांशलक्षणं त्वनुभवसिद्धम् ।।**

ಜೀವರಲ್ಲಿ ಭಿನ್ನಾಂಶದ ಲಕ್ಷಣವಿದೆ. ಇದು ಅನುಭವಸಿದ್ಧವಾದ್ದರಿಂದ ಸ್ಮೃತ್ಯಾದಿಪ್ರಮಾಣಗಳನ್ನು ಇದರಲ್ಲಿ ಹೇಳಬೇಕಾಗಿಲ್ಲ.

## ಬ್ರಹ್ಮಸೂತ್ರ

## सूत्रम् – अनुज्ञापरिहारौ देहसम्बन्धाज्ज्योतिरादिवत् ।।

ಭಗವದಾಜ್ಞೆಯೆಂದರೆ ಜೀವನು ಎಲ್ಲಾ ಪದಾರ್ಥಗಳಲ್ಲಿ ಪ್ರವೃತ್ತಿ ಮಾಡುತ್ತಾನೆ. ಮತ್ತು ಸಂಸಾರದ ನಿವೃತ್ತಿಯನ್ನು ಹೊಂದುತ್ತಾನೆ. ಏಕೆಂದರೆ ಪಾಂಚಭೌತಿಕ ದೇಹದ ಸಂಬಂಧದಿಂದ ಕಣ್ಣಿಗೆ ಅಭಿಮಾನಿಯಾದ ದೇವತೆಯು ಶರೀರಸಂಬಂಧವಿರುವ ಪ್ರಯುಕ್ತ ಸೂರ್ಯನ ಅಧೀನವಾಗಿರುವಂತೆ

## ಸೂತ್ರದೀಪಿಕಾ

**सूत्रदीपिका – यतो ज्योतिरादिवत् चक्षुर्गोलकादिस्थितापभ्रष्टदेवतादेः तत्तद्देहसम्बन्धात् सूर्यवरुणाद्यनुज्ञया तत्प्रवृत्त्यादेरिव जीवस्यापि तत्तद्देहसम्बन्धाद्धेतोः ।**

ಅಂಶಾಧಿಕರಣ (೨-೩-೧೮)

**अनुज्ञापरिहारौ परमात्मानुज्ञाधीनप्रवृत्तिसम्बन्धपरिहारौ न तथा मत्स्यादेः। किन्तु ज्योतिरादिवत् सूर्यप्रभाद्यभिमानिनः यथा तदधीनप्रवृत्त्यादिमत्त्वं तयेशाधीनप्रवृत्तिरेव अतोऽपि जीवः परमात्मनो भिन्नांशः । मत्स्यादिस्तु अभिन्नांश इति व्यवस्था सिद्धेत्यर्थः ।।६।।**

ಯಾವ ಕಾರಣದಿಂದ **ಜ್ಯೋತಿರಾದಿವತ್** = ಚಕ್ಷುರ್ಗೋಲಕಾದಿಗಳಲ್ಲಿ ಅಪಭ್ರಷ್ಟದೇವತೆಗಳು, ತತ್ತದ್ದೇಹಸಂಬಂಧಾತ್ = ಸೂರ್ಯ, ವರುಣ ಮೊದಲಾದ ದೇವತೆಗಳ ಅನುಜ್ಞೆಯಿಂದ ಇಂದ್ರಿಯಾದಿಗಳ ಪ್ರವೃತ್ತಿಯನ್ನು ಮಾಡುವಂತೆ ಜೀವನೂ ಕೂಡ ದೇಹ ಸಂಬಂಧವಿರುವ ಕಾರಣ, ಅನುಜ್ಞಾಪರಿಹಾರೌ = ಪರಮಾತ್ಮನ ಅನುಜ್ಞಾಧೀನವಾದ ಪ್ರವೃತ್ತಿಯ ಸಂಬಂಧವನ್ನು ಪರಿಹಾರವನ್ನು ತಿಳಿಯಬೇಕು. ಹೊರತು, ಮತ್ಸ್ಯಾದಿ ರೂಪಗಳಂತೆ ಅಲ್ಲ. ಜ್ಯೋತಿರಾದಿವತ್ = ಸೂರ್ಯಪ್ರಭಾದ್ಯಭಿಮಾನಿ ದೇವತೆಗಳಿಗೆ ಹೇಗೆ ಸೂರ್ಯಾಧೀನವಾದ ಪ್ರವೃತ್ತ್ಯಾದಿಗಳಿರುತ್ತವೋ, ಅದರಂತೆ ಈಶಾಧೀನವಾದ ಪ್ರವೃತ್ತಿಯನ್ನೇ ಜೀವನಿಗೆ ಹೇಳಬೇಕು. ಆದ್ದರಿಂದ ಜೀವನು ಪರಮಾತ್ಮನಿಗಿಂತ ಭಿನ್ನಾಂಶನಾಗಿದ್ದಾನೆ. ಮತ್ಸ್ಯಾದಿರೂಪಗಳು ಅಭಿನ್ನಾಂಶವಾಗಿರುತ್ತವೆ ಎಂಬ ವ್ಯವಸ್ಥೆಯನ್ನು ತಿಳಿಯಬೇಕು.

## ಬ್ರಹ್ಮಸೂತ್ರಭಾಷ್ಯ

**भाष्यम् — ।। अनुज्ञापरिहारौ देहसम्बन्धाज्ज्योतिरादिवत् ।।६।।**

**परानुज्ञया प्रवृत्तिः परतो बन्धनिवृत्तिश्च जीवस्य प्रतीयते, अंशत्वेऽपि देहसम्बन्धात् ।**

ಅನುವಾದ - ಪರಮಾತ್ಮನ ಅನುಜ್ಞೆಯಿಂದಲೇ ಜೀವನು ಪ್ರವೃತ್ತಿಯನ್ನು ಮಾಡುತ್ತಾನೆ. ಪರಮಾತ್ಮನಿಂದಲೇ ಸಂಸಾರ ಬಂಧನದಲ್ಲಿ ಸಿಲುಕುತ್ತಾನೆ. ಮತ್ತು ಮೋಕ್ಷವನ್ನು ಪಡೆಯುತ್ತಾನೆ. ಜೀವರು ಪರಮಾತ್ಮನ ಅಂಶನೇ ಆಗಿದ್ದರೂ ದೇಹಸಂಬಂಧಪ್ರಯುಕ್ತ ಅವನ ಆಜ್ಞೆಯಿಂದ ಕರ್ಮಗಳಲ್ಲಿ ಪ್ರವೃತ್ತಿ ಮಾಡುತ್ತಾನೆ.

ಪ್ರತಿಪದಾರ್ಥ -- ಪರಾನುಜ್ಞಯಾ = ಪರಮಾತ್ಮನ ಆಜ್ಞೆಯಿಂದ, ಪ್ರವೃತ್ತಿಃ = ಪ್ರವೃತ್ತಿ ಮಾಡುತ್ತಾನೆ. ಪರತಃ = ಪರಮಾತ್ಮನಿಂದ, ಬಂಧನಿವೃತ್ತಿಶ್ಚ = ಸಂಸಾರದ ಬಂಧನ ಹಾಗೂ ನಿವೃತ್ತಿಗಳು, ಜೀವಸ್ಯ = ಜೀವನಿಗೆ, ಪ್ರತೀಯತೇ = ಪ್ರತೀತವಾಗುತ್ತದೆ. ಅಂಶತ್ವೇऽಪಿ = ಜೀವನು ಪರಮಾತ್ಮನ ಅಂಶನಾಗಿದ್ದರೂ, ದೇಹಸಂಬಂಧಾತ್ = ದೇಹಸಂಬಂಧವಿರುವ ಪ್ರಯುಕ್ತ ಪ್ರವೃತ್ತಿಯು ಕೂಡುತ್ತದೆ.

**भाष्यम् — 'य आत्मानमन्तरो यमयति' (माध्यन्दिनशा.) 'तमेवं विद्वानमृत इह भवति' (तै.आ.३.१२) इत्यादिना । न तु परस्य ।**

ಅನುವಾದ - ಜೀವಾತ್ಮನನ್ನು ಪರಮಾತ್ಮನು ಪ್ರೇರಣೆ ಮಾಡುತ್ತಾನೆ ಎಂಬುದಾಗಿ ಮಾಧ್ಯಂದಿನಶ್ರುತಿಯು ಹೇಳುತ್ತಿದೆ. ಪರಮಾತ್ಮನಿಂದಲೇ ಜೀವನಿಗೆ ಮೋಕ್ಷವಾಗುತ್ತದೆ ಎಂದು ತೈತ್ತಿರೀಯ ಶ್ರುತಿಯು ಹೇಳುತ್ತಿದೆ. ಆದರೆ ಪರಮಾತ್ಮನ ಅಂಶವಾದ ಮತ್ಸ್ಯಾದಿಗಳಲ್ಲಿ ಹೀಗೆ ಇರುವುದಿಲ್ಲ.

ಪ್ರತಿಪದಾರ್ಥ -- ಯಃ = ಯಾವ ಪರಮಾತ್ಮನು, ಆತ್ಮನಂ = ಜೀವನನ್ನು, ಅಂತರಃ = ಒಳಗಿದ್ದು, ಯಮಯತಿ = ಪ್ರೇರಣೆ ಮಾಡುತ್ತಾನೆ, ತಂ = ಆ ಪರಮಾತ್ಮನನ್ನು, ಏವಂ = ಹೀಗೆ, ವಿದ್ವಾನ್ = ತಿಳಿಯುತ್ತಾನೆ. ಇತ್ಯಾದಿನಾ = ಇವೇ ಮೊದಲಾದ ಶ್ರುತಿಗಳಿಂದ, ನ ತು ಪರಸ್ಯ = ಪರಮಾತ್ಮನ ಮತ್ಸ್ಯಾದಿರೂಪಗಳಲ್ಲಿ ಹೀಗಿರುವುದಿಲ್ಲ.

**भाष्यम् – 'वासुदेवः सङ्कर्षणः प्रद्युम्नोऽनिरुद्धोऽहं मत्स्यः कूर्मो वराहो नारसिंहो वामनो रामो रामः कृष्णो बुद्धः कल्किरहं शतधाऽहं सहस्रधाऽहममितोऽहमनन्तोऽहं नैवैते जायन्ते न म्रियन्ते नेषामनुज्ञा न बन्धो न मुक्तिः सर्व एव ह्येते पूर्णा अजरा अमृताः पराः परानन्दाः' इति हि चतुर्वेदशिखायाम् ॥**

ಅನುವಾದ - ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ, ಮತ್ಸ್ಯ, ಕೂರ್ಮ, ವರಾಹ ನಾರಸಿಂಹ, ವಾಮನ, ಪರುಶುರಾಮ ,ರಾಮ , ಕೃಷ್ಣ , ಬುದ್ಧ , ಕಲ್ಕಿ ಎಂಬ ರೂಪವನ್ನು ಹೊಂದಿರುವ ನಾನು ನೂರು ರೂಪವನ್ನು ಸಾವಿರ ರೂಪವನ್ನು ಅಮಿತರೂಪವನ್ನು ಅನಂತರೂಪವನ್ನು ಧರಿಸಿರುವೆನು. ಆ ಎಲ್ಲ ರೂಪಗಳಿಗೂ ಹುಟ್ಟು ಸಾವು ಇರುವುದಿಲ್ಲ. ಯಾರ ಆಜ್ಞೆಗೂ ಒಳಪಟ್ಟಿಲ್ಲ. ಬಂಧ ಮೋಕ್ಷಗಳು ಇರುವುದಿಲ್ಲ. ಮತ್ತು ಎಲ್ಲಾ ರೂಪಗಳು ಪರಿಪೂರ್ಣವಾಗಿವೆ. ಮುಪ್ಪು, ನಾಶ ಮೊದಲಾದ ದೋಷಗಳಿಂದ ರಹಿತವಾಗಿವೆ. ಪ್ರತಿಯೊಂದು ಸರ್ವೋತ್ತಮವೂ ಪರಿಪೂರ್ಣವೂ ಆನಂದರೂಪಗಳೂ ಆಗಿವೆ. ಹೀಗೆ ಚತುರ್ವೇದಶಿಖೆಯಲ್ಲಿ ಹೇಳಿದ್ದಾರೆ.

ಪ್ರತಿಪದಾರ್ಥ -- ವಾಸುದೇವಃ = ವಾಸುದೇವನು, ಸಂಕರ್ಷಣಃ = ಸಂಕರ್ಷಣನು, ಪ್ರದ್ಯುಮ್ನಃ = ಪ್ರದ್ಯುಮ್ನನು, ಅನಿರುದ್ಧಃ = ಅನಿರುದ್ಧನು, ಆದ ಅಹಂ = ನಾನು, ಮತ್ಸ್ಯಃ = ಮತ್ಸ್ಯನು, ಕೂರ್ಮಃ = ಕೂರ್ಮನು, ವರಾಹಃ = ವರಾಹನು, ನಾರಸಿಂಹಃ = ನಾರಸಿಂಹನು, ವಾಮನಃ = ವಾಮನನು, ರಾಮಃ = ಪರಶುರಾಮನು, ಕೃಷ್ಣಃ = ಕೃಷ್ಣನು, ಬುದ್ಧಃ = ಬುದ್ಧನು, ಕಲ್ಕಿಃ = ಕಲ್ಕಿಯು ಆದ, ಅಹಂ = ನಾನು, ಶತಧಾ = ನೂರುರೂಪಗಳನ್ನು, ಅಹಂ = ನಾನು, ಸಹಸ್ರಧಾ = ಸಾವಿರೂಪಗಳನ್ನು, ಅಹಂ = ನಾನು, ಅಮಿತಃ = ಅಮಿತವಾದರೂಪಗಳನ್ನು, ಅಹಂ = ನಾನು, ಅನಂತಃ = ಅನಂತವಾದರೂಪಗಳನ್ನು ಧರಿಸಿರುವೆನು, ಏತೇ = ಈ ರೂಪಗಳು, ನೈವ ಜಾಯಂತೇ = ಹುಟ್ಟಲಾರವು, ನ ಮ್ರಿಯಂತೇ = ಸಾಯಲಾರವು, ಏಷಾಂ = ಇವುಗಳಿಗೆ, ಅನುಜ್ಞಾ = ಮತ್ತೊಬ್ಬರ ಆಜ್ಞೆಯು, ನ = ಇರುವುದಿಲ್ಲ, ಬಂಧಃ = ಬಂಧನವು, ನ = ಇರುವುದಿಲ್ಲ. ಮುಕ್ತಿಃ = ಮೋಕ್ಷವು, ನ = ಇರುವುದಿಲ್ಲ. ಏತೇ ಸರ್ವೇ ಏವ = ಇವೆಲ್ಲವೂ ಕೂಡ, ಪೂರ್ಣಾಃ = ಪೂರ್ಣಗಳು, ಅಜರಾಃ = ಮುಪ್ಪಿಲ್ಲದವು, ಅಮೃತಾಃ = ಸಾವಿಲ್ಲದವು, ಪರಃ = ಸರ್ವೋತ್ತಮವಾದವು, ಪರಾನಂದಾಃ = ಉತ್ಕೃಷ್ಟವಾದ ಆನಂದಸ್ವರೂಪವಾದವು, ಇತಿ = ಹೀಗೆ, ಚತುರ್ವೇದಶಿಖಾಯಾಮ್ = ಚತುರ್ವೇದಶಿಖೆಯಲ್ಲಿ ಹೇಳಿದ್ದಾರೆ.

**भाष्यम् – युज्यते च ज्योतिरादिवत् । यथाऽऽदित्यो वियद्गतस्तत्प्रकाशश्चैक-प्रकारः ।**

**अनुज्ञापरिहारौ परमात्मानुज्ञाधीनप्रवृत्तिसम्बन्धपरिहारौ न तथा मत्स्यादेः। किन्तु ज्योतिरादिवत् सूर्यप्रभाद्यभिमानिनः यथा तदधीनप्रवृत्त्यादिमत्त्वं तयेशाधीनप्रवृत्तिरेव अतोऽपि जीवः परमात्मनो भिन्नांशः । मत्स्यादिस्तु अभिन्नांश इति व्यवस्था सिद्धेत्यर्थः ।।६।।**

ಯಾವ ಕಾರಣದಿಂದ **ಜ್ಯೋತಿರಾದಿವತ್** = ಚಕ್ಷುರ್ಗೋಲಕಾದಿಗಳಲ್ಲಿ ಅಪಭ್ರಷ್ಟದೇವತೆಗಳು, ತತ್ತದ್ದೇಹಸಂಬಂಧಾತ್ = ಸೂರ್ಯ, ವರುಣ ಮೊದಲಾದ ದೇವತೆಗಳ ಅನುಜ್ಞೆಯಿಂದ ಇಂದ್ರಿಯಾದಿಗಳ ಪ್ರವೃತ್ತಿಯನ್ನು ಮಾಡುವಂತೆ ಜೀವನೂ ಕೂಡ ದೇಹ ಸಂಬಂಧವಿರುವ ಕಾರಣ, ಅನುಜ್ಞಾಪರಿಹಾರೌ = ಪರಮಾತ್ಮನ ಅನುಜ್ಞಾಧೀನವಾದ ಪ್ರವೃತ್ತಿಯ ಸಂಬಂಧವನ್ನು ಪರಿಹಾರವನ್ನು ತಿಳಿಯಬೇಕು. ಹೊರತು, ಮತ್ಸ್ಯಾದಿ ರೂಪಗಳಂತೆ ಅಲ್ಲ. ಜ್ಯೋತಿರಾದಿವತ್ = ಸೂರ್ಯಪ್ರಭಾದ್ಯಭಿಮಾನಿ ದೇವತೆಗಳಿಗೆ ಹೇಗೆ ಸೂರ್ಯಾಧೀನವಾದ ಪ್ರವೃತ್ತ್ಯಾದಿಗಳಿರುತ್ತವೋ, ಅದರಂತೆ ಈಶಾಧೀನವಾದ ಪ್ರವೃತ್ತಿಯನ್ನೇ ಜೀವನಿಗೆ ಹೇಳಬೇಕು. ಆದ್ದರಿಂದ ಜೀವನು ಪರಮಾತ್ಮನಿಗಿಂತ ಭಿನ್ನಾಂಶನಾಗಿದ್ದಾನೆ. ಮತ್ಸ್ಯಾದಿರೂಪಗಳು ಅಭಿನ್ನಾಂಶವಾಗಿರುತ್ತವೆ ಎಂಬ ವ್ಯವಸ್ಥೆಯನ್ನು ತಿಳಿಯಬೇಕು.

## ಬ್ರಹ್ಮಸೂತ್ರಭಾಷ್ಯ

**भाष्यम् – ।। अनुज्ञापरिहारौ देहसम्बन्धाज्ज्योतिरादिवत् ।।६।।**

**परानुज्ञया प्रवृत्तिः परतो बन्धनिवृत्तिश्च जीवस्य प्रतीयते, अंशत्वेऽपि देहसम्बन्धात् ।**

ಅನುವಾದ - ಪರಮಾತ್ಮನ ಅನುಜ್ಞೆಯಿಂದಲೇ ಜೀವನು ಪ್ರವೃತ್ತಿಯನ್ನು ಮಾಡುತ್ತಾನೆ. ಪರಮಾತ್ಮನಿಂದಲೇ ಸಂಸಾರ ಬಂಧನದಲ್ಲಿ ಸಿಲುಕುತ್ತಾನೆ. ಮತ್ತು ಮೋಕ್ಷವನ್ನು ಪಡೆಯುತ್ತಾನೆ. ಜೀವರು ಪರಮಾತ್ಮನ ಅಂಶನೇ ಆಗಿದ್ದರೂ ದೇಹಸಂಬಂಧಪ್ರಯುಕ್ತ ಅವನ ಆಜ್ಞೆಯಿಂದ ಕರ್ಮಗಳಲ್ಲಿ ಪ್ರವೃತ್ತಿ ಮಾಡುತ್ತಾನೆ.

ಪ್ರತಿಪದಾರ್ಥ -- ಪರಾನುಜ್ಞಯಾ = ಪರಮಾತ್ಮನ ಆಜ್ಞೆಯಿಂದ, ಪ್ರವೃತ್ತಿಃ = ಪ್ರವೃತ್ತಿ ಮಾಡುತ್ತಾನೆ. ಪರತಃ = ಪರಮಾತ್ಮನಿಂದ, ಬಂಧನಿವೃತ್ತಿಶ್ಚ = ಸಂಸಾರದ ಬಂಧನ ಹಾಗೂ ನಿವೃತ್ತಿಗಳು, ಜೀವಸ್ಯ = ಜೀವನಿಗೆ, ಪ್ರತೀಯತೇ = ಪ್ರತೀತವಾಗುತ್ತದೆ. ಅಂಶತ್ವೇऽಪಿ = ಜೀವನು ಪರಮಾತ್ಮನ ಅಂಶನಾಗಿದ್ದರೂ, ದೇಹಸಂಬಂಧಾತ್ = ದೇಹಸಂಬಂಧವಿರುವ ಪ್ರಯುಕ್ತ ಪ್ರವೃತ್ತಿಯು ಕೂಡುತ್ತದೆ.

**भाष्यम् – 'य आत्मानमन्तरो यमयति' (माध्यन्दिनशा.) 'तमेवं विद्वानमृत इह भवति' (तै.आ.३.१२) इत्यादिना । न तु परस्य ।**

ಅನುವಾದ - ಜೀವಾತ್ಮನನ್ನು ಪರಮಾತ್ಮನು ಪ್ರೇರಣೆ ಮಾಡುತ್ತಾನೆ ಎಂಬುದಾಗಿ ಮಾಧ್ಯಂದಿನಶ್ರುತಿಯು ಹೇಳುತ್ತಿದೆ. ಪರಮಾತ್ಮನಿಂದಲೇ ಜೀವನಿಗೆ ಮೋಕ್ಷವಾಗುತ್ತದೆ ಎಂದು ತೈತ್ತಿರೀಯ ಶ್ರುತಿಯು ಹೇಳುತ್ತಿದೆ. ಆದರೆ ಪರಮಾತ್ಮನ ಅಂಶವಾದ ಮತ್ಸ್ಯಾದಿಗಳಲ್ಲಿ ಹೀಗೆ ಇರುವುದಿಲ್ಲ.

ಪ್ರತಿಪದಾರ್ಥ -- ಯಃ = ಯಾವ ಪರಮಾತ್ಮನು, ಆತ್ಮನಂ = ಜೀವನನ್ನು, ಅಂತರಃ = ಒಳಗಿದ್ದು, ಯಮಯತಿ = ಪ್ರೇರಣೆ ಮಾಡುತ್ತಾನೆ, ತಂ = ಆ ಪರಮಾತ್ಮನನ್ನು, ಏವಂ = ಹೀಗೆ, ವಿದ್ವಾನ್ = ತಿಳಿಯುತ್ತಾನೆ. ಇತ್ಯಾದಿನಾ = ಇವೇ ಮೊದಲಾದ ಶ್ರುತಿಗಳಿಂದ, ನ ತು ಪರಸ್ಯ = ಪರಮಾತ್ಮನ ಮತ್ಸ್ಯಾದಿರೂಪಗಳಲ್ಲಿ ಹೀಗಿರುವುದಿಲ್ಲ.

**भाष्यम् – 'वासुदेवः सङ्कर्षणः प्रद्युम्नोऽनिरुद्धोऽहं मत्स्यः कूर्मो वराहो नारसिंहो वामनो रामो रामः कृष्णो बुद्धः कल्किरहं शतधाऽहं सहस्रधाऽहममितोऽहमनन्तोऽहं नैवैते जायन्ते न म्रियन्ते नेषामनुज्ञा न बन्धो न मुक्तिः सर्व एव ह्येते पूर्णा अजरा अमृताः पराः परानन्दाः' इति हि चतुर्वेदशिखायाम् ॥**

ಅನುವಾದ - ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ, ಮತ್ಸ್ಯ, ಕೂರ್ಮ, ವರಾಹ ನಾರಸಿಂಹ, ವಾಮನ, ಪರುಶುರಾಮ ,ರಾಮ , ಕೃಷ್ಣ , ಬುದ್ಧ , ಕಲ್ಕಿ ಎಂಬ ರೂಪವನ್ನು ಹೊಂದಿರುವ ನಾನು ನೂರು ರೂಪವನ್ನು ಸಾವಿರ ರೂಪವನ್ನು ಅಮಿತರೂಪವನ್ನು ಅನಂತರೂಪವನ್ನು ಧರಿಸಿರುವೆನು. ಆ ಎಲ್ಲ ರೂಪಗಳಿಗೂ ಹುಟ್ಟು ಸಾವು ಇರುವುದಿಲ್ಲ. ಯಾರ ಆಜ್ಞೆಗೂ ಒಳಪಟ್ಟಿಲ್ಲ. ಬಂಧ ಮೋಕ್ಷಗಳು ಇರುವುದಿಲ್ಲ. ಮತ್ತು ಎಲ್ಲಾ ರೂಪಗಳು ಪರಿಪೂರ್ಣವಾಗಿವೆ. ಮುಪ್ಪು, ನಾಶ ಮೊದಲಾದ ದೋಷಗಳಿಂದ ರಹಿತವಾಗಿವೆ. ಪ್ರತಿಯೊಂದು ಸರ್ವೋತ್ತಮವೂ ಪರಿಪೂರ್ಣವೂ ಆನಂದರೂಪಗಳೂ ಆಗಿವೆ. ಹೀಗೆ ಚತುರ್ವೇದಶಿಖೆಯಲ್ಲಿ ಹೇಳಿದ್ದಾರೆ.

ಪ್ರತಿಪದಾರ್ಥ -- ವಾಸುದೇವಃ = ವಾಸುದೇವನು, ಸಂಕರ್ಷಣಃ = ಸಂಕರ್ಷಣನು, ಪ್ರದ್ಯುಮ್ನಃ = ಪ್ರದ್ಯುಮ್ನನು, ಅನಿರುದ್ಧಃ = ಅನಿರುದ್ಧನು, ಆದ ಅಹಂ = ನಾನು, ಮತ್ಸ್ಯಃ = ಮತ್ಸ್ಯನು, ಕೂರ್ಮಃ = ಕೂರ್ಮನು, ವರಾಹಃ = ವರಾಹನು, ನಾರಸಿಂಹಃ = ನಾರಸಿಂಹನು, ವಾಮನಃ = ವಾಮನನು, ರಾಮಃ = ಪರಶುರಾಮನು, ಕೃಷ್ಣಃ = ಕೃಷ್ಣನು, ಬುದ್ಧಃ = ಬುದ್ಧನು, ಕಲ್ಕಿಃ = ಕಲ್ಕಿಯು ಆದ, ಅಹಂ = ನಾನು, ಶತಧಾ = ನೂರುರೂಪಗಳನ್ನು, ಅಹಂ = ನಾನು, ಸಹಸ್ರಧಾ = ಸಾವಿರೂಪಗಳನ್ನು, ಅಹಂ = ನಾನು, ಅಮಿತಃ = ಅಮಿತವಾದರೂಪಗಳನ್ನು, ಅಹಂ = ನಾನು, ಅನಂತಃ = ಅನಂತವಾದರೂಪಗಳನ್ನು ಧರಿಸಿರುವೆನು, ಏತೇ = ಈ ರೂಪಗಳು, ನೈವ ಜಾಯಂತೇ = ಹುಟ್ಟಲಾರವು, ನ ಮ್ರಿಯಂತೇ = ಸಾಯಲಾರವು, ಏಷಾಂ = ಇವುಗಳಿಗೆ, ಅನುಜ್ಞಾ = ಮತ್ತೊಬ್ಬರ ಆಜ್ಞೆಯು, ನ = ಇರುವುದಿಲ್ಲ, ಬಂಧಃ = ಬಂಧನವು, ನ = ಇರುವುದಿಲ್ಲ. ಮುಕ್ತಿಃ = ಮೋಕ್ಷವು, ನ = ಇರುವುದಿಲ್ಲ. ಏತೇ ಸರ್ವೇ ಏವ = ಇವೆಲ್ಲವೂ ಕೂಡ, ಪೂರ್ಣಾಃ = ಪೂರ್ಣಗಳು, ಅಜರಾಃ = ಮುಪ್ಪಿಲ್ಲದವು, ಅಮೃತಾಃ = ಸಾವಿಲ್ಲದವು, ಪರಃ = ಸರ್ವೋತ್ತಮವಾದವು, ಪರಾನಂದಾಃ = ಉತ್ಕೃಷ್ಟವಾದ ಆನಂದಸ್ವರೂಪವಾದವು, ಇತಿ = ಹೀಗೆ, ಚತುರ್ವೇದಶಿಖಾಯಾಮ್ = ಚತುರ್ವೇದಶಿಖೆಯಲ್ಲಿ ಹೇಳಿದ್ದಾರೆ.

**भाष्यम् – युज्यते च ज्योतिरादिवत् । यथाऽऽदित्यो वियद्गतस्तत्प्रकाशश्चैक-प्रकारः ।**

ಅನುವಾದ - ಸೂರ್ಯನ ಪ್ರಕಾಶದಂತೆ ಮತ್ಸ್ಯಾದಿಗಳು ಪರಮಾತ್ಮನ ಸ್ವರೂಪಭೂತವಾದ ಅಂಶವೇ ಆಗಿವೆ. ಯಾವ ರೀತಿಯಾಗಿ ಸೂರ್ಯಮಂಡಲದ ಅಭಿಮಾನಿಯಾದ ಆದಿತ್ಯ ಹಾಗೂ ಅವನ ಪ್ರಕಾಶ ಎರಡೂ ಕೂಡ ಒಂದೇ ಆಗಿವೆಯೋ ಅದರಂತೆ.

ಪ್ರತಿಪದಾರ್ಥ -- ಜ್ಯೋತಿರಾದಿವತ್ = ಸೂರ್ಯಾದಿಪ್ರಕಾಶಗಳಂತೆ, ಯುಜ್ಯತೇ ಚ = ಮತ್ಸ್ಯಾದಿ ಅಂಶಗಳು ಪರಮಾತ್ಮನ ಸ್ವರೂಪವೇ ಆಗುತ್ತವೆ. ಯಥಾ = ಯಾವ ರೀತಿಯಾಗಿ, ವಿಯದ್ಗತಃ = ಯಾವರೀತಿಯಾಗಿ ಆಕಾಶದಲ್ಲಿರುವ, ಆದಿತ್ಯಃ = ಸೂರ್ಯನು, ತತ್ಪ್ರಕಾಶಶ್ಚ = ಅವನ ಪ್ರಕಾಶವು ಕೂಡ, ಏಕಪ್ರಕಾರಃ = ಒಂದೇ ಪ್ರಕಾರವುಳ್ಳದ್ದಾಗಿವೆ.

**भाष्यम् — 'शुक्लं कृष्णं कनीनिका' (ऐ.आ.२.१.५.) इति तदंशस्याप्यक्ष्णो देहसम्बन्धान्न तादृशी शक्तिः । तदनुग्राह्यत्वं तेनैवाऽवृतिपरिहारश्च ।**

ಅನುವಾದ - 'ಶುಕ್ಲಂ ಕೃಷ್ಣಂ ಕನೀನಿಕಾ' ಎಂಬ ಐತರೇಯಶ್ರುತಿಯಲ್ಲಿ ಹೇಳಿದಂತೆ ಸೂರ್ಯನಂತೆ ಬಿಳಿ ಕಪ್ಪು ರೂಪಗಳುಳ್ಳ ಕಣ್ಣಿನ ಅಭಿಮಾನಿದೇವತೆಯು ಸೂರ್ಯನ ಅಂಶವೆಂದು ತಿಳಿಯುತ್ತದೆ. ಆದರೆ ದೇಹಸಂಬಂಧವಿರುವುದರಿಂದ ಸೂರ್ಯನಷ್ಟು ಶಕ್ತಿ ಇರುವುದಿಲ್ಲ. ಮತ್ತು ಸೂರ್ಯನ ಅಧೀನನೂ ಸೂರ್ಯನಿಂದ ಆವೃತನೂ ಆಗಿರುತ್ತಾನೆ.

ಪ್ರತಿಪದಾರ್ಥ -- ಶುಕ್ಲಂ ಕೃಷ್ಣಂ ಕನೀನಿಕಾ ಎಂಬ ಐತರೇಯ ಶ್ರುತಿಯಲ್ಲಿ ಹೇಳಿದಂತೆ ಇತಿ = ಹೀಗೆ, ತದಂಶಸ್ಯಾಪಿ = ಸೂರ್ಯನ ಅಂಶವೇ ಆಗಿದ್ದರು, ದೇಹಸಂಬಂಧಾತ್ = ದೇಹಸಂಬಂಧವಿರುವ ಪ್ರಯುಕ್ತ, ನ ತಾದೃಶೀ ಶಕ್ತಿಃ = ಸೂರ್ಯನಷ್ಟು ಶಕ್ತಿ ಇರುವುದಿಲ್ಲ. ತದನುಗ್ರಾಹ್ಯತ್ವಂ = ಸೂರ್ಯನಿಂದ ಅನುಗ್ರಾಹ್ಯನು, ಆವೃತಿಪರಿಹಾರಶ್ಚ = ಸೂರ್ಯನಿಂದಲೇ ಆವರಣ ಹಾಗೂ ಅದರ ಪರಿಹಾರವು ಇರುತ್ತದೆ.

**ब्रह्मसूत्रभाष्यम् — यथा बाह्यामृतजलस्यामृतसमुद्रस्य चैकत्वं तदंशस्यापि श्लेष्मणस्तदनुग्राह्यत्वं तेनैव विरोधिनिवृत्तिश्च ।**

**मोक्षधर्मे च —**

**'यत्किञ्चिदिह लोकेऽस्मिन् देहबद्धं विशाम्पते ।**
**सर्वं पञ्चभिराविष्टं भूतैरीश्वरबुद्धिजैः ॥**
**ईश्वरो हि महद्भूतं प्रभुर्नारायणो विराट् ।**
**भूतान्तरात्मा वरदः सगुणो निर्गुणोऽपि च ॥**
**भूतप्रलयमव्यक्तं शुश्रूषुर्नृपसत्तम ॥' इति ॥**

ಅನುವಾದ - ಬ್ರಹ್ಮಾಂಡದ ಹೊರಗೆ ಯಾವ ನೀರಿದೆಯೋ ಅದಕ್ಕೆ ಅಭಿಮಾನಿಯಾದ ವರುಣ ಹಾಗೂ ಅಮೃತಸಮುದ್ರಕ್ಕೆ ಅಭಿಮಾನಿಯಾದ ವರುಣನು ಒಬ್ಬನೇ ಆಗಿದ್ದಾನೆ. ಆದರೆ ದೇಹದಲ್ಲಿರುವ ಕಫಕ್ಕೆ ಅಭಿಮಾನಿಯಾದ ವರುಣನು ಮೂಲ ಸ್ವರೂಪನ ಅಂಶನಾದ್ದರಿಂದ ಮೂಲರೂಪದ ವರುಣನ ನಿಯಂತ್ರಣದಲ್ಲಿ ಇರುತ್ತಾನೆ.

ಮೋಕ್ಷಧರ್ಮಪರ್ವದಲ್ಲಿ ಹೀಗೆ ಹೇಳಲಾಗಿದೆ - ಎಲೈ ಧರ್ಮರಾಜನೇ ! ಈ ಲೋಕದಲ್ಲಿ ಯಾವ ಚೇತನವು ದೇಹಸಂಬಂಧವನ್ನು ಪಡೆದಿದೆಯೋ, ಅದೆಲ್ಲವೂ ಭಗವಂತನ

ಸಂಕಲ್ಪಾಧೀನವಾಗಿ ಐದು ಭೂತಗಳಿಂದ ಬಂಧಿತವಾಗಿದೆ. ಪರಮಾತ್ಮನು ಪಂಚಭೂತಗಳನ್ನು ಮೀರಿದವನು, ಸರ್ವಸಮರ್ಥನು, ಮುಕ್ತರಿಗೆ ಆಶ್ರಯನು, ನಿತ್ಯವಾದ ಅಭಿವ್ಯಕ್ತಸ್ವರೂಪನು, ಸಕಲ ಜೀವರ ಅಂತರ್ಯಾಮಿಯು ವರ ನೀಡುವವನು, ಕಲ್ಯಾಣಗುಣಪರಿಪೂರ್ಣನು ಮತ್ತು ಪ್ರಾಕೃತಗುಣರಹಿತನೂ, ಪಂಚಭೂತಗಳ ಸಂಬಂಧವಿರುವ ಕಾರಣ ನಾಶ ಹೊಂದುವವನು ಹುಟ್ಟಿಲ್ಲದ್ದರಿಂದ ಅವ್ಯಕ್ತರೂಪನೂ ಆದ ಜೀವನು ಭಗವಂತನ ಬಗ್ಗೆ ಜಿಜ್ಞಾಸೆಯನ್ನು ಮಾಡುತ್ತಾನೆ.

ಪ್ರತಿಪದಾರ್ಥ -- ಯಥಾ = ಯಾವರೀತಿಯಾಗಿ, ಬಾಹ್ಯಾಮೃತಜಲಸ್ಯ = ಬ್ರಹ್ಮಾಂಡ ಹೊರಗಿರುವ ಜಲಕ್ಕೂ ಅಮೃತಸಮುದ್ರಕ್ಕೂ, ಏಕತ್ವಮ್ = ಐಕ್ಯವು ಯುಕ್ತವಾಗುತ್ತದೆ. ತದಂಶಸ್ಯಾಪಿ = ವರುಣನ ಅಂಶವಾಗಿದ್ದರೂ, ಶ್ಲೇಷ್ಮಣಃ = ಶರೀರದಲ್ಲಿರುವ ಕಫಕ್ಕೆ ಅಭಿಮಾನಿಯಾದ ವರುಣನು, ತದನುಗ್ರಾಹ್ಯತ್ವಂ = ಮೂಲವರುಣನ ಅನುಗ್ರಹಕ್ಕೆ ಒಳಗಾಗಿರುತ್ತಾನೆ. ತೇನೈವ = ಮೂಲರೂಪದ ವರುಣನಿಂದಲೇ, ವಿರೋಧಿನಿವೃತ್ತಿಶ್ಚ = ಕಫಕ್ಕೆ ವಿರೋಧಿಯಾದ ಪಿತ್ತಧಾತುವನ್ನು ದೂರ ಮಾಡುತ್ತವೆ.

ಮೋಕ್ಷಧರ್ಮೇ ಚ = ಮೋಕ್ಷಧರ್ಮಪರ್ವದಲ್ಲಿ ಹೀಗೆ ಹೇಳಲಾಗಿದೆ - ಇಹಲೋಕೇ = ಈ ಲೋಕದಲ್ಲಿ, ಯತ್ಕಿಂಚಿತ್ = ಯಾವ ಚೇತನವಿದೆಯೋ, ದೇಹಬದ್ಧಮ್ = ಮತ್ತು ದೇಹದ ಸಂಬಂಧವನ್ನು ಪಡೆದಿದೆಯೊ, ಸರ್ವಂ = ಅದೆಲ್ಲವೂ, ಈಶ್ವರಬುದ್ಧಿಜೈಃ = ಭಗವಂತನ ಸಂಕಲ್ಪಕ್ಕೆ ಅಧೀನವಾದ, ಪಂಚಭಿಃ = ಪಂಚಭೂತಗಳಿಂದ, ಆವಿಷ್ಟಂ = ಕೂಡಿದೆ. ಈಶ್ವರೋಹಿ = ಈಶ್ವರನಾದರೂ, ಮಹದ್ಭೂತಂ = ಪಂಚಭೂತಗಳನ್ನು ದಾಟಿದವನು, ಪ್ರಭುಃ = ಸ್ವಾಮಿಯು, ನಾರಾಯಣಃ = ದೋಷವಿದೂರನು, ವಿರಾಟ್ = ನಿತ್ಯವಾಗಿಯೂ ಅಭಿವ್ಯಕ್ತಿಯಾದವನು, ಭೂತಾಂತರಾತ್ಮಾ = ಸಕಲಜೀವರ ಅಂತರ್ಯಾಮಿಯು, ವರದಃ = ವರ ನೀಡುವವನು, ಸಗುಣಃ = ಕಲ್ಯಾಣಗುಣಪರಿಪೂರ್ಣನು, ಅಪಿ ಚ = ಮತ್ತು, ನಿರ್ಗುಣಃ = ಪ್ರಾಕೃತಗುಣರಹಿತನು, ಭೂತಪ್ರಲಯಂ = ಪಂಚಭೂತಗಳ ಸಂಬಂಧವು ಇರುವ, ಅವ್ಯಕ್ತಂ = ಹುಟ್ಟಿಲ್ಲದ ಕಾರಣ ಅವ್ಯಕ್ತನೆನಿಸುವ ಜೀವನು, ಶುಶ್ರೂಷುಃ = ನಾರಾಯಣನ ಬಗ್ಗೆ ಜಿಜ್ಞಾಸೆ ಮಾಡುವವನಾಗಿದ್ದಾನೆ.

**ಭಾಷ್ಯಮ್ – ವಾರಾಹೆ ಚ –**

**'ಅಂಶಾಶ್ಚ ದೇಹಯೋಗ್ಯತ್ವಾಜ್ಜೀವಾ ಬನ್ಧಾದಿಸಂಯುತಾಃ ।**
**ಅನುಗ್ರಾಹ್ಯಾಶ್ಚೇಶ್ವರೇಣ ನ ತು ಮತ್ಸ್ಯಾದಿಕೋ ಹರಿಃ ।।**
**ಅದೇಹಬನ್ಧಯೋಗ್ಯತ್ವಾದ್ ಯಥಾ ಸೂರ್ಯಪ್ರಭಾಕ್ಷಿಣೀ ।**
**ಯಥಾಽಮೃತಸಮುದ್ರಸ್ಯ ಶ್ಲೇಷ್ಮಾದೇಶ್ಚ ದ್ವಿರೂಪತಾ ।।**
**ಅನುಗ್ರಾಹ್ಯತ್ವಮನ್ಯಸ್ಯ ತೇನೈವಾಽವೃತ್ತಿರೋಧನಮ್ ।।' ಇತಿ ।।೬।।**

ಅನುವಾದ - ಜೀವರು ಪರಮಾತ್ಮನ ಅಂಶರೇ ಆಗಿದ್ದಾರೆ. ಆದರೂ ಕೂಡ ದೇಹಸಂಬಂಧವನ್ನು ಹೊಂದುವ ಕಾರಣದಿಂದ ಜೀವರುಗಳಿಗೆ ಬಂಧಾದಿಗಳು ಆಗುತ್ತವೆ. ಮತ್ತು ಅಂಶಿಯಾದ ಪರಮಾತ್ಮನ ಅನುಗ್ರಹಕ್ಕೆ ಪಾತ್ರರೂ ಆಗುತ್ತಾರೆ. ಮತ್ಸ್ಯಾದಿರೂಪನಾದ ಶ್ರೀಹರಿಯು ದೇಹಸಂಬಂಧಕ್ಕೆ ಅನರ್ಹನಾಗಿದ್ದಾನೆ. ಯಾವರೀತಿಯಾಗಿ ಸೂರ್ಯನ ಪ್ರಭೆ ಮತ್ತು ಕಣ್ಣು, ಅಮೃತಸಮುದ್ರ ಹಾಗೂ ಕಫ ಇವುಗಳು ಅಂಶಗಳೇ ಆಗಿವೆ. ಆದರೂ ಕೂಡ ಇವುಗಳಲ್ಲಿ

ಹೇಗೆ ದ್ವಿರೂಪತ್ವವಿದೆಯೋ, ಅದರಂತೆ ಮತ್ಸ್ಯಾದಿ ದೇವತಾದಿಗಳಿಗೂ, ಜೀವರುಗಳಿಗೂ ಭೇದವೇ ಇರುತ್ತದೆ. ಕಣ್ಣು ಮತ್ತು ಕಫಾದಿಗಳಿಗೆ ಅಂಶಿಯಿಂದ ಕಣ್ಣಿಗೆ ಕತ್ತಲು, ಕಫಕ್ಕೆ ಪಿತ್ತ ಇವುಗಳ ಬಾಧವು ಇದೆ. ಅದರಿಂದ ಪರಿಹಾರವೂ ಇದೆ. ಈ ಕಾರಣದಿಂದ ಇವೆರಡು ಅಂಶಿಯ ಅಧೀನವಾಗಿವೆ ಎಂದು ಹೇಳಬೇಕು. ವರಾಹಪುರಾಣದಲ್ಲಿ ಹೀಗೆ ಹೇಳಲಾಗಿದೆ –

ಪ್ರತಿಪದಾರ್ಥ:- ಅಂಶಾಶ್ಚ = ಜೀವರು ಪರಮಾತ್ಮನ ಅಂಶರಾಗಿದ್ದರೂ ಕೂಡ, ದೇಹಯೋಗ್ಯತ್ವಾತ್ = ದೇಹಸಂಬಂಧವನ್ನು ಹೊಂದು ಅರ್ಹತೆಯಿರುವ ಪ್ರಯುಕ್ತ, ಜೀವಾ: = ಜೀವರು, ಬಂಧಾದಿಸಂಯುತಾ: = ಬಂಧಮೋಕ್ಷಗಳಿಗೆ ಅರ್ಹರಾಗಿದ್ದಾರೆ. ಚ = ಮತ್ತು , ಈಶ್ವರೇಣ = ಭಗವಂತನಿಂದ, ಅನುಗ್ರಾಹ್ಯಾ: = ಅನುಗ್ರಹಕ್ಕೆ ಪಾತ್ರರಾಗಿದ್ದಾರೆ. ತು = ಆದರೆ, ಮತ್ಸ್ಯಾದಿಕ: = ಮತ್ಸ್ಯಾದಿರೂಪಿಯಾದ, ಹರಿ: = ಶ್ರೀಹರಿಯು, ನ = ಹೀಗಲ್ಲ. ಏಕೆಂದರೆ ಅದೇಹಬಂಧಯೋಗ್ಯತ್ವಾತ್ = ದೇಹದ ಪಡೆಯುವಿಕೆ ಹಾಗೂ ಬಂಧಮೋಕ್ಷಾದಿಗಳಿಗೆ ಅನರ್ಹನಾಗಿದ್ದಾನೆ. ಯಥಾ = ಯಾವರೀತಿಯಾಗಿ, ಸೂರ್ಯಪ್ರಭಾಕ್ಷಿಣೇ = ಸೂರ್ಯನ ಪ್ರಭೆ ಹಾಗೂ ಕಣ್ಣು ಇವುಗಳು, ಯಥಾ = ಹೇಗೆ, ಅಮೃತಸಮುದ್ರಸ್ಯ = ಅಮೃತಸಮುದ್ರ , ಚ = ಮತ್ತು ಶ್ಲೇಷ್ಮಾದೇ: = ಕಫ ಇವುಗಳಿಗೆ, ದ್ವಿರೂಪತಾ = ವೈವಿಧ್ಯವಿದೆಯೋ, ಅದರಂತೆ (ಮತ್ಸ್ಯಾದಿಗಳಿಗೂ ಜೀವನಿಗೂ ಭೇದವಿದೆ) ಅಕ್ಷ್ಯಸ್ಯ = ಕಣ್ಣು ಮತ್ತು ಕಫ ಇವುಗಳಿಗೆ ಅಂಶಿಯಿಂದ, ತೇನೈವ = ಆ ಅಂಶಿಯಿಂದಲೇ, ಆವೃತ್ತಿರೋಧನಮ್ = ಕಣ್ಣಿಗೆ ಕತ್ತಲು, ಕಫಕ್ಕೆ ಪಿತ್ತ ಎಂಬುದರ ಬಾಧೆ ಹಾಗೂ ಅವುಗಳ ಪರಿಹಾರ, ಇವುಗಳು ಅನುಗ್ರಾಹ್ಯತ್ವಂ = ಅಂಶಿಯ ದೆಸೆಯಿಂದಲೇ ಉಂಟಾಗುತ್ತವೆ.

## ತತ್ವಪ್ರಕಾಶಿಕಾ

**तत्वप्रकाशिका – एवं जीवानां मत्स्यादिनां चांशिना भेदाभेदसद्भावान्नैकविघतेत्युक्तम् । युक्त्यन्तरेणैकविघतां पराकुर्वत्सूत्रमुपन्यस्य व्याचष्टे – अनुज्ञेति ।। जीवानां प्रवृत्तिमोक्षयोरंशिपरमात्माधीनत्वात्तेषां मत्स्यादीनां चांशत्वसाम्येऽपि नैकविघतेत्यर्थः । केन प्रतीयत इत्यत आह – देहेति ।।**

ಇಲ್ಲಿಯತನಕ ಜೀವರಿಗೆ ಅಂಶದಿಂದ ಭೇದವಿದೆ ಎಂದು ಮತ್ಸ್ಯಾದ್ಯವತಾರಗಳಿಗೆ ಅಂಶಿಯಿಂದ ಅಭೇದವಿದೆ ಎಂದು ಹೇಳಿ ಜೀವರಿಗೂ ಮತ್ಸ್ಯಾದ್ಯವತಾರಗಳಿಗೂ ಏಕವಿಧತ್ವವು ಉಪಪನ್ನವಾಗುವುದಿಲ್ಲವೆಂದು ಸಮರ್ಥಿಸಿದ್ದಾಯಿತು. ಈಗ ಮತ್ತೊಂದು ಯುಕ್ತಿಯಿಂದ ಏಕವಿಧತ್ವವನ್ನು ನಿರಾಕರಣೆ ಮಾಡುವ ಸೂತ್ರವನ್ನು 'ಅನುಜ್ಞ' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಜೀವರ ಪ್ರವೃತ್ತಿ ಹಾಗೂ ಮೋಕ್ಷ ಇವುಗಳು ಪರಮಾತ್ಮನ ಅಧೀನವಾಗಿವೆ. ಹಾಗಾಗಿ ಮತ್ಸ್ಯಾದ್ಯವತಾರಗಳಿಗೂ ಜೀವರಿಗೂ ಅಂಶತ್ವವು ಸಮಾನವಾಗಿದ್ದರೂ ಏಕವಿಧತ್ವವು ಇರುವುದಿಲ್ಲ. ಇದು ಹೇಗೆ ತಿಳಿಯುತ್ತದೆ ? ಎಂಬ ಪ್ರಶ್ನೆಗೆ 'ದೇಹ' ಇತ್ಯಾದಿಯಾಗಿ ಭಾಷ್ಯದಲ್ಲಿ ಉತ್ತರಿಸಿದ್ದಾರೆ.

**तत्वप्रकाशिका – परानुज्ञया प्रवृत्तिः परतो बन्धनिवृत्तिश्च जीवस्येत्यत्र क्रमेण श्रुती चाह – य इति ।। मत्स्यादीनामपि प्रवृत्तिमोक्षयोरीश्वराधीनत्वात् कथं न जीवविघतेत्यत आह – नेति ।।**

## ಪರಿಪೂರ್ಣಚಂದ್ರಿಕಾ

ಪರಮಾತ್ಮನ ಅನುಜ್ಞೆಯಿಂದ ಜೀವನಿಗೆ ಪ್ರವೃತ್ತಿಯಾಗುತ್ತದೆ. ಪರಮಾತ್ಮನ ಆಜ್ಞೆಯಿಂದಲೇ ಬಂಧನಿವೃತ್ತಿಯೂ ಕೂಡ ಆಗುತ್ತದೆ ಎಂಬ ವಿಷಯದಲ್ಲಿ ಕ್ರಮವಾಗಿ ಶ್ರುತಿಪ್ರಮಾಣವನ್ನು 'ಯಃ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

ಮತ್ಸ್ಯಾದಿಗಳಿಗೂ ಕೂಡ ಪ್ರವೃತ್ತಿ ಹಾಗೂ ಮೋಕ್ಷವು ಈಶ್ವರಾಧೀನವೇ ಆಗಿದೆ. ಹೀಗಿರುವಾಗ ಜೀವನಿಗೆ ಮತ್ಸ್ಯಾದಿಗಳು ಏಕೆ ಸಮಾನರಲ್ಲ ? ಎಂಬ ಪ್ರಶ್ನೆಗೆ 'ನ' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ.

ವಿವರಣೆ - ಪ್ರತಿಯೊಬ್ಬ ಜೀವನ ಲೌಕಿಕ ಪ್ರವೃತ್ತಿ ಹಾಗೂ ಸಂಸಾರನಿವೃತ್ತಿಯು ಭಗವಂತನ ಆಜ್ಞಾಧೀನವಾಗಿದೆ. ಇದು ಪಾಂಚಭೌತಿಕದೇಹಸಂಬಂಧ ನಿಮಿತ್ತದಿಂದಷ್ಟೇ ಜೀವನಲ್ಲಿರುತ್ತದೆ. ಉದಾ - ಕಣ್ಣಿಗೆ ಅಭಿಮಾನಿಯಾದ ದೇವತೆಯು ಶರೀರ ಸಂಬಂಧವಿರುವ ಪ್ರಯುಕ್ತ ಸೂರ್ಯನ ಅಧೀನವಾಗಿರುತ್ತಾನೆ. ಅದರಂತೆ ಜೀವನ ಸಂಸಾರವೂ ಕೂಡ ಭಗವದಧೀನವಾಗಿದೆ. ಆದರೆ ಮತ್ಸ್ಯಾದಿಗಳಲ್ಲಿ ಭಗವದಧೀನವಾದ ಸಂಸಾರ ಮತ್ತು ಅದರ ನಿವೃತ್ತಿಗಳು ಇರುವುದಿಲ್ಲ. ಆದ್ದರಿಂದ ಮತ್ಸ್ಯಾದಿಗಳಿಗೂ ಜೀವರಿಗೂ ಏಕವಿಧತ್ವವು ಇರುವುದಿಲ್ಲ.

**तत्वप्रकाशिका – तदेव कुत इत्यत आह – वासुदेव इति ।। शतधा नारायणादिः । सहस्रधा विश्वादिः । अमितोऽतिबहुरूपः परादिः । अनन्तोऽजितादिः। यदुक्तं जीवोऽश्यधीनप्रवृत्त्यादिमान् देहसम्बन्धित्वादिति तद् व्यास्यभावान्न युज्यत इत्यत आह – युज्यते चेति ।। तदेव स्फुटयति ।। यथेति ।।**

ಈ ವಿಷಯವು ಯಾವ ಪ್ರಮಾಣದಿಂದ ಸಿದ್ಧವಾಗಿದೆ ? ಎಂಬ ಪ್ರಶ್ನೆಗೆ 'ವಾಸುದೇವ' ಇತ್ಯಾದಿ ಭಾಷ್ಯದಿಂದ ಉತ್ತರಿಸಿದ್ದಾರೆ. 'ಶತಧಾ' ಎಂಬುದರಿಂದ ನಾರಾಯಣ ಮೊದಲಾದ ನೂರು ರೂಪಗಳನ್ನು ವಿವಕ್ಷಿಸಬೇಕು. 'ಸಹಸ್ರಧಾ' ಎಂಬುದರಿಂದ ವಿಶ್ವಾದಿ ಸಾವಿರ ರೂಪಗಳನ್ನು ವಿವಕ್ಷಿಸಬೇಕು. 'ಅಮಿತಃ' ಎಂಬುದರಿಂದ ಪರಾದಿ ಬಹಳ ರೂಪಗಳನ್ನು ವಿವಕ್ಷಿಸಬೇಕು. 'ಅನಂತಃ' ಎಂಬುದರಿಂದ ಅಜಿತ ಮೊದಲಾದ ಅನಂತರೂಪಗಳನ್ನು ವಿವಕ್ಷಿಸಬೇಕು. ಜೀವನು ದೇಹಸಂಬಂಧ ಉಳ್ಳವನಾದ್ದರಿಂದ ಅಂಶಿಯಾದ ಭಗವಂತನ ಅಧೀನನಾಗಿ ಪ್ರವೃತ್ತಿ ಮಾಡುತ್ತಾನೆ. ಈ ವಿಷಯವು ವ್ಯಾಪ್ತಿ ಇಲ್ಲದ್ದರಿಂದ ಕೂಡುವುದಿಲ್ಲವೆಂಬ ಆಕ್ಷೇಪಕ್ಕೆ 'ಯುಜ್ಯತೇ' ಎಂಬುದಾಗಿ ಉತ್ತರಿಸಿದ್ದಾರೆ. ಅದನ್ನೇ 'ಯಥಾ' ಇತ್ಯಾದಿ ಭಾಷ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ.

ವಿವರಣೆ - ಭಗವಂತನ ಎಲ್ಲಾ ರೂಪಗಳು ಅನಾದ್ಯನಂತವಾಗಿವೆ. ಸಂಸಾರಬಂಧನವೇ ಇವಗಳಿಗಿರುವುದಿಲ್ಲ. ಮೋಕ್ಷವೂ ಕೂಡ ಇರುವುದಿಲ್ಲ. ಪ್ರತಿಯೊಂದು ರೂಪಗಳೂ ಕೂಡ ಪರಿಪೂರ್ಣವಾಗಿವೆ ಎಂಬುದಾಗಿ ಚತುರ್ವೇದಶಿಖಾ ವಾಕ್ಯಗಳು ಹೇಳುತ್ತಿವೆ. ಆದರೆ ಜೀವನು ಹೀಗೆ ಅನಾದಿನಿತ್ಯನಾಗಿದ್ದಾನೆನ್ನಲು ಯಾವುದೇ ಪ್ರಮಾಣವಿರುವುದಿಲ್ಲ. ದೇಹಸಂಬಂಧವು ಜೀವನಿಗಿರುವುದರಿಂದ ಉತ್ಪತ್ತಿನಾಶವುಳ್ಳವನಾಗಿದ್ದಾನೆ. ಆದ್ದರಿಂದ ಸಂಸಾರದ ಬಿಡುಗಡೆಗಾಗಿ ಪರಮಾತ್ಮನನ್ನೇ ಜೀವನು ಆಶ್ರಯಿಸಬೇಕು.

**तत्वप्रकाशिका – आदित्यो मण्डलाभिमानी वियद्गतस्तत्प्रकाशाभिमानी तदंशश्चैकप्रकारोऽनुज्ञादिरहितः । 'त्रिवृदिव वै चक्षुः शुक्लं कृष्णं कनीनिका' इति**

**श्रुतावक्ष्णः सूर्यमण्डलसाम्योक्त्या तदंशत्वमुच्यते । अत एव तदभिमानिनोऽपि तदभिमान्यंशत्वं तस्य चापभ्रष्टस्य देहदोषलिप्तत्वादंश्यधीनप्रवृत्त्यादिमत्त्वमिति भावः। आवरणं तमः । एवमुत्तरत्राप्यभिमानिविवक्षा द्रष्टव्या । विरोधी पित्तधातुः । अत्रायं प्रयोगो भवति – जीवः स्वांश्यधीन-प्रवृत्त्यादिमान् स्वांशिकर्मानिर्मितशरीर सम्बन्धित्वादप्रभ्रष्टवदिति ।**

ಸೂರ್ಯಮಂಡಲಕ್ಕೆ ಅಭಿಮಾನಿಯಾದ ಆದಿತ್ಯನು ಹಾಗೂ ಆಕಾಶದಲ್ಲಿರುವ ಸೂರ್ಯಪ್ರಕಾಶಕ್ಕೆ ಅಭಿಮಾನಿಯಾದ ಅವನ ಅಂಶವು ಏಕಪ್ರಕಾರವಾಗಿದೆ. ಅನುಜ್ಞಾದಿರಹಿತವಾಗಿದೆ. ಇವೆರಡರಲ್ಲಿ ವೈಲಕ್ಷಣ್ಯವಿಲ್ಲ. 'ತ್ರಿವೃದಿವ ವೈ ಚಕ್ಷುः ಶುಕ್ಲಂ ಕೃಷ್ಣಂ ಕನೀನಿಕಾ' ಎಂಬ ಶ್ರುತಿಯಲ್ಲಿ ಕಣ್ಣಿಗೆ ಸೂರ್ಯಮಂಡಲದ ಸಾಮ್ಯವನ್ನು ಹೇಳಿದ್ದರಿಂದ ಕಣ್ಣು ಸೂರ್ಯನ ಅಂಶವೆಂದು ಹೇಳಲ್ಪಡುತ್ತದೆ. ಆದ್ದರಿಂದ ಕಣ್ಣಿಗೆ ಅಭಿಮಾನಿಯಾದವನೂ ಕೂಡ ಸೂರ್ಯಮಂಡಲಾಭಿಮಾನಿಯ ಅಂಶವೇ ಆಗಿದ್ದಾನೆ. ಕಣ್ಣಿಗೆ ಅಭಿಮಾನಿಯಾದ ಈ ಅಪಭ್ರಷ್ಟದೇವತೆಯು ದೇಹದೋಷದಿಂದ ಲೇಪವನ್ನು ಹೊಂದಿರುವ ಕಾರಣ ಅಂಶಿಯಾದ ಸೂರ್ಯನ ಅಧೀನವಾಗಿ ಪ್ರವೃತ್ತಿ ಉಳ್ಳವನಾಗಿದ್ದಾನೆಂದು ತಿಳಿಯಬೇಕು. ಇಲ್ಲಿರುವ ಆವರಣ ಶಬ್ದಕ್ಕೆ ತಮಸ್ಸು ಎಂದರ್ಥ. ಇದೇ ರೀತಿಯಾಗಿ ಮುಂದೆಯೂ ಕೂಡ ಅಭಿಮಾನಿವಿವಕ್ಷೆಯಿಂದ ಎಲ್ಲವನ್ನೂ ಕೂಡಿಸಬೇಕು. ವಿರೋಧಿ ಎಂದರೆ ಕಫಕ್ಕೆ ವಿರೋಧಿಯಾದ ಪಿತ್ತಧಾತು ಎಂದರ್ಥ. ಅನುಮಾನವನ್ನು ಹೀಗೆ ಪ್ರಯೋಗಿಸಿದಂತಾಯಿತು - 'ಜೀವಃ ಸ್ವಾಂಶ್ಯಧೀನಪ್ರವೃತ್ತಿಮಾನ್ ಸ್ವಾಂಶಿಕರ್ಮನಿರ್ಮಿತ-ಶರೀರಸಂಬಂಧಿತ್ವಾತ್ ಅಪಭ್ರಷ್ಟವತ್' 'ಅಪಭ್ರಷ್ಟದೇವತೆಯು ತನ್ನ ಅಂಶಿಯ ಕರ್ಮದಿಂದ ನಿರ್ಮಿತವಲ್ಲದ ಶರೀರದ ಸಂಬಂಧವುಳ್ಳವನಾಗಿದ್ದಾನೆ ಮತ್ತು ತನ್ನ ಅಂಶಿಯ ಅಧೀನವಾದ ಪ್ರವೃತ್ತಿಯುಳ್ಳವನಾಗಿದ್ದಾನೆ. ಆದರಂತೆ ಜೀವನೂ ಕೂಡ ತನ್ನ ಅಂಶಿಯ ಕರ್ಮದಿಂದ ನಿರ್ಮಿತವಲ್ಲದ ಶರೀರದ ಸಂಬಂಧವನ್ನು ಹೊಂದಿರುವುದರಿಂದ ಅಂಶಿಯ ಅಧೀನವಾದ ಪ್ರವೃತ್ತಿಯುಳ್ಳವನಾಗಲೇಬೇಕು ಎಂದು.

ವಿವರಣೆ - ಮತ್ಸ್ಯಾದಿರೂಪಗಳು ಸೂರ್ಯನ ಪ್ರಕಾಶದಂತೆ ಅಂಶಿಯ ಸ್ವರೂಪವೇ ಆಗಿವೆ. ಸೂರ್ಯಮಂಡಲಕ್ಕೆ ಅಭಿಮಾನಿಯಾದ ಆದಿತ್ಯ ಹಾಗೂ ಸೂರ್ಯಪ್ರಕಾಶಕ್ಕೆ ಅಭಿಮಾನಿಯಾದ ಅವನ ಅಂಶಗಳು ಹೇಗೆ ಒಂದೇ ಆಗಿವೆಯೋ ಆದರಂತೆ ಮತ್ಸ್ಯಾದಿ ಅವತಾರಗಳನ್ನು ತಿಳಿಯಬೇಕು. ಪ್ರಕೃತ ಸೂರ್ಯಮಂಡಲಕ್ಕೆ ಅಭಿಮಾನಿಯಾದ ಆದಿತ್ಯನೆಂಬ ಅಂಶಿಯ ಅಧೀನವಾಗಿ ಸೂರ್ಯಪ್ರಕಾಶಕ್ಕೆ ಅಭಿಮಾನಿಯಾದ ಅಂಶವು ಇರುವುದಿಲ್ಲ. ಒಂದು ಮತ್ತೊಂದರ ಅಧೀನವಲ್ಲ. 'ಶುಕ್ಲಂ ಕೃಷ್ಣಂ ಕನೀನಿಕಾ' ಎಂಬಲ್ಲಿ ಕಣ್ಣಿನ ಗೋಳಕದ ಅಭಿಮಾನಿದೇವತೆಯು ಸೂರ್ಯನ ಅಂಶವೇ ಆಗಿದೆ. ಆದರೂ ಸೂರ್ಯನ ಅಧೀನವಾಗಿದೆ. ಏಕೆಂದರೆ ಈ ಗೋಳಕಕ್ಕೆ ಅಭಿಮಾನಿದೇವತೆಯು ಅಪಭ್ರಷ್ಟದೇವತೆಯಾಗಿದ್ದಾನೆ ಹೊರತು ನೇರವಾಗಿ ಸೂರ್ಯನೇ ಅಲ್ಲ. ಈ ಅಪಭ್ರಷ್ಟದೇವತೆಗೆ ದೇಹಸಂಬಂಧವಿರುವುದರಿಂದ ಸೂರ್ಯನಲ್ಲಿರುವ ಶಕ್ತಿ ಇರುವುದಿಲ್ಲ. ಆದರೆ ಸೂರ್ಯನ ಅಧೀನವಾಗಿ ಪ್ರಕಾಶಪಡಿಸುವ ಶಕ್ತಿಯು ಹೊಂದಿರುತ್ತಾನೆ.

ಪರಿಪೂರ್ಣಚಂದ್ರಿಕಾ

ಟೀಕೆಯಲ್ಲಿ 'ಅಕ್ಷ್ಣಿ ಸೂರ್ಯಮಂಡಲಸಾಮ್ಯೋಕ್ತ್ಯಾ' ಎಂದು ಹೇಳಿದ್ದಾರೆ. ಇಲ್ಲಿರುವ ಅಕ್ಷಿ ಶಬ್ದದಿಂದ ಗೋಳಕವನ್ನೇ ವಿವಕ್ಷಿಸಬೇಕು. ಚಕ್ಷುರಿಂದ್ರಿಯವನ್ನಲ್ಲ. ಚಕ್ಷುರಿಂದ್ರಿಯಕ್ಕೆ ನೇರವಾಗಿ ಸೂರ್ಯನೇ ಅಭಿಮಾನಿಯಾಗಿದ್ದಾನೆ. ಆದರೆ ಗೋಳಕಕ್ಕೆ ಮತ್ತೊಬ್ಬ ಅಪಭ್ರಷ್ಟದೇವತೆಯು ಅಭಿಮಾನಿಯಾಗಿದ್ದಾನೆ. ಇವನು ಸೂರ್ಯನಿಗಿಂತ ಭಿನ್ನನೇ ಆಗಿದ್ದಾನೆ. ಆದ್ದರಿಂದ ಸೂರ್ಯನಿಗಿಂತ ಭಿನ್ನವಾದ ಅಪಭ್ರಷ್ಟದೇವತೆಯು ಸೂರ್ಯನ ಅಂಶವೆಂಬ ವ್ಯವಹಾರವಿದ್ದಂತೆ ಜೀವಾತ್ಮರು ಪರಮಾತ್ಮನ ಅಂಶರೆಂದರೆ ಪರಮಾತ್ಮರಿಗಿಂತ ಭಿನ್ನರಾಗಿದ್ದಾರೆಂದೇ ಅರ್ಥ.

**तत्वप्रकाशिका – यदुक्तं मत्स्यादीनां नांश्यधीनप्रवृत्त्यादिमत्वमिति । तदसत् । तेषामप्युक्तविधदेहसम्बन्धित्त्वात् । तथा च न विशेषः । अथ देहसम्बन्धित्वेऽपि नांश्यधीनप्रवृत्तित्वं तर्हि तत्रैव हेतोर्व्यभिचार इत्यत आह – मोक्षधर्मे चेति ।।**

ಮತ್ಸ್ಯಾದಿಗಳಿಗೆ ಅಂಶ್ಯಧೀನವಾದ ಪ್ರವೃತ್ತಿಯು ಇರುವುದಿಲ್ಲವೆಂದು ಹೇಳಿದ್ದು ತಪ್ಪು. ಏಕೆಂದರೆ ಮತ್ಸ್ಯಾದಿಗಳಿಗೂ ಕೂಡ ಜೀವರಂತೆ ದೇಹದ ಸಂಬಂಧವು ಇದ್ದೇ ಇರುತ್ತದೆ. ಜೀವರಿಗೂ ಈ ಮತ್ಸ್ಯಾದಿಗಳಿಗೂ ಯಾವುದೇ ವಿಶೇಷ ಇರುವುದಿಲ್ಲ ಮತ್ತು ದೇಹಸಂಬಂಧವಿದ್ದರೂ ಕೂಡ ಅಂಶಿಯ ಅಧೀನವಾದ ಪ್ರವೃತ್ತಿಯು ಮತ್ಸ್ಯಾದಿಗಳಲ್ಲಿ ಇಲ್ಲವೆಂದು ಹೇಳಿದರೆ ಈ ಮತ್ಸ್ಯಾದಿ ಶರೀರದಲ್ಲಿಯೇ ಅನುಮಾನಕ್ಕೆ ವ್ಯಭಿಚಾರದೋಷವು ಬರುತ್ತದಲ್ಲವೇ? ಈ ಪ್ರಶ್ನೆಗೆ 'ಮೋಕ್ಷಧರ್ಮೇಚ' ಎಂಬುದರಿಂದ ಉತ್ತರವನ್ನು ನೀಡುತ್ತಿದ್ದಾರೆ.

**तत्वप्रकाशिका – शुश्रूषुः तस्येति शेषः । अवतारप्रसङ्गे चैतदुक्तम् । अत्राप्ययं प्रयोगः । मत्स्यादिः स्वांश्यधीनप्रवृत्त्यादिर्न भवति स्वांशिकर्मा-निर्मितदेहासम्बन्धित्वात् वियद्गतप्रकाशाद्यभिमानिवदिति । अत एव दृष्टान्तो विवृतः । सूत्रार्थे स्मृतिं चाह – वाराहे चेति ।। देहयोग्यत्वादित्युक्त्या मुक्तानामपि सङ्ग्रहो भवति । सूर्यप्रभाक्षिणी नैकप्रकारे ।।**

ಭಾಷ್ಯದಲ್ಲಿ ಉದಾಹರಿಸಲ್ಪಟ್ಟ ಮೋಕ್ಷಧರ್ಮವಚನದಲ್ಲಿ 'ಶುಶ್ರೂಷುಃ' ಎಂಬಲ್ಲಿ 'ತಸ್ಯ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಅವತಾರಪ್ರಸಂಗದಲ್ಲಿಯೂ ಕೂಡ ಇದನ್ನು ಹೇಳಲಾಗಿದೆ. ಇಲ್ಲಿ ತಿಳಿಬೇಕಾದ ಅನುಮಾನ ಪ್ರಯೋಗ ಹೀಗಿದೆ - 'ಮತ್ಸ್ಯಾದಿಃ ಸ್ವಾಂಶ್ಯಧೀನಪ್ರವೃತ್ತ್ಯಾದಿಃ ನ ಭವತಿ ಸ್ವಾಂಶಿಕರ್ಮಾನಿರ್ಮಿತದೇಹಾಸಂಬಂಧಿತ್ವಾತ್ ವಿಯದ್ಗತ-ಪ್ರಕಾಶಾದ್ಯಭಿಮಾನಿವತ್' ಆಕಾಶದಲ್ಲಿರುವ ಸೂರ್ಯಪ್ರಕಾಶಕ್ಕೆ ಅಭಿಮಾನಿಯಾದವನು ಸ್ವಾಂಶಿಯ ಕರ್ಮದಿಂದ ನಿರ್ಮಿತವಲ್ಲದ ದೇಹದ ಸಂಬಂಧವಿಲ್ಲದೆ ಇರುತ್ತಾನೆ ಮತ್ತು ಸ್ವಾಂಶಿಯ ಅಧೀನವಾಗಿ ಪ್ರವೃತ್ತಿಯನ್ನು ಮಾಡುವುದಿಲ್ಲ. ಅದರಂತೆ ಮತ್ಸ್ಯಾದಿಗಳೂ ಕೂಡ ಸ್ವಾಂಶಿಯ ಕರ್ಮದಿಂದ ನಿರ್ಮಿತವಲ್ಲದ ದೇಹದ ಸಂಬಂಧ ಇಲ್ಲದೇ ಇರುವುದಿಲ್ಲ. ಸ್ವಾಂಶಿಯ ಅಧೀನವಾಗಿ ಪ್ರವೃತ್ತಿ ಮಾಡಲು ಸಾಧ್ಯವೇ ಇಲ್ಲ. ಹೀಗೆ ಸಾಧಿಸುತ್ತೇವೆ. ಹೀಗೆ ಹೇಳಿದ್ದರಿಂದ ದೃಷ್ಟಾಂತವನ್ನು ಕೂಡ ವಿವರಿಸಿದಂತಾಯಿತು.

ಅಂಶಾಧಿಕರಣ (೨-೩-೧೮)

ಸೂತ್ರಾರ್ಥದಲ್ಲಿ ಸ್ಮೃತಿಪ್ರಮಾಣವನ್ನು 'ವಾರಾಹೇ' ಎಂದು ಹೇಳುತ್ತಿದ್ದಾರೆ. 'ದೇಹಯೋಗ್ಯತ್ವಾತ್' ಎಂಬ ಯುಕ್ತಿಯಿಂದ ಮುಕ್ತರನ್ನೂ ಕೂಡ ಸಂಗ್ರಹ ಮಾಡಿದ್ದಾರೆ. ಸೂರ್ಯನ ಪ್ರಭೆ ಮತ್ತು ಕಣ್ಣು ಏಕಪ್ರಕಾರದಲ್ಲಿ ಇರುವುದಿಲ್ಲ ಎಂದು ತಿಳಿಯಬೇಕು.

ವಿವರಣೆ - ಮೋಕ್ಷಧರ್ಮದ ವಚನದಲ್ಲಿ 'ಭೂತಪ್ರಳಯಮವ್ಯಕ್ತಂ ಶುಶ್ರೂಷುರ್ನೃಪಸತ್ತಮ' ಎಂದು ಹೇಳಲಾಗಿದೆ. 'ಶುಶ್ರೂಷುಃ' ಎಂಬ ಪದಕ್ಕೆ ಜಿಜ್ಞಾಸುವಾಗಿದ್ದಾನೆ ಎಂದರ್ಥ. ಇಲ್ಲಿ 'ತಸ್ಯ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಅವ್ಯಕ್ತತತ್ವಕ್ಕೆ ಅಭಿಮಾನಿಯಾದ ಶ್ರೀದೇವಿಯು ನಾರಾಯಣನ ಸೇವೆಯನ್ನು ಮಾಡುತ್ತಾಳೆ ಎಂಬರ್ಥವನ್ನು ವಿವಕ್ಷಿಸಬೇಕು. ಆದ್ದರಿಂದಲೇ 'ಶುಶ್ರೂಷುಃ' ಎಂಬುದಾಗಿ ಸ್ತ್ರೀಲಿಂಗ ಪ್ರಯೋಗವನ್ನು ಮಾಡಲಾಗಿದೆ (ಗುರ್ವರ್ಥದೀಪಿಕಾ).

ಹಯಗ್ರೀವಾವತಾರಕ್ಕೆ ಸಂಬಂಧಪಟ್ಟಂತೆ ಮೋಕ್ಷಧರ್ಮದ ಈ ಮಾತು ಹೊರಟದೆ. ಆದ್ದರಿಂದ ಈ ಹಯಗ್ರೀವಾವತಾರವೂ ಕೂಡ ದೇಹಕ್ಕೆ ಸಂಬಂಧಪಟ್ಟದ್ದಲ್ಲ ಎಂದು ತಿಳಿಯುತ್ತದೆ. ಇದೇ ಯುಕ್ತಿಯಿಂದ ಯಾವುದೇ ಅವತಾರವೂ ಕೂಡ ದೇಹಸಂಬಂಧವುಳ್ಳದ್ದಲ್ಲ ಎಂದು ತಿಳಿಯಬೇಕು.

ದೇಹಸಂಬಂಧಯೋಗ್ಯರಾದ್ದರಿಂದ ಸಂಸಾರದಲ್ಲಿ ಮುಕ್ತರು ದೇಹವನ್ನು ಹೊಂದಿರುತ್ತಾರೆ. ಆದ್ದರಿಂದ ಮುಕ್ತರನ್ನು ಮತ್ಸ್ಯಾದಿಗಳಂತೆ ಅಭಿನ್ನಾಂಶರೆಂದು ಹೇಳಬಾರದು. ಭಿನ್ನಾಂಶರೆಂದೇ ಹೇಳಬೇಕು. ಸೂರ್ಯನ ಪ್ರಭೆಯು ಸೂರ್ಯನಿಂದ ಅಭಿನ್ನಾಂಶವಾಗಿದೆ, ಕಣ್ಣು ಭಿನ್ನಾಂಶವಾಗಿದೆ. ಅದರಂತೆ ಮತ್ಸ್ಯಾದಿಗಳು ಪರಮಾತ್ಮನ ಅಭಿನ್ನಾಂಶವೆಂದು, ಜೀವರು ಭಿನ್ನಾಂಶರೆಂದು ವರಾಹಪುರಾಣದ ಆಧಾರದಲ್ಲಿ ನಿರ್ಣಯ ಮಾಡಬೇಕು.

## ಬ್ರಹ್ಮಸೂತ್ರ

**ब्रह्मसूत्रम् — असन्ततेश्चाव्यतिकरः ॥**

ಜೀವನು ಶಕ್ತಿಯಿಂದ ಅಪೂರ್ಣನಾದ ಕಾರಣದಿಂದ ಮತ್ಸ್ಯಾದ್ಯಂಶವು ಜೀವನಂತೆ ಆಗಿರುವುದಿಲ್ಲ. ಆದ್ದರಿಂದ ಹಿಂದೆ ಹೇಳಿದ್ದರಲ್ಲಿ ಯಾವುದೇ ವ್ಯತ್ಯಾಸವಿಲ್ಲ.

## ಸೂತ್ರದೀಪಿಕಾ

**सूत्रदीपिका — असन्ततेः** जीवस्य सम्यक् शक्त्यभावात् मत्स्यादीनां तु तद्भावात् । **अव्यतिकरः** जीवेशयोर्भिन्नाभिन्नांशत्वमित्युक्तार्थस्य व्यत्यासाभाव इत्यर्थः ॥७॥

ಅಸಂತತೇಶ್ಚ = ಜೀವನಿಗೆ ಪೂರ್ಣವಾದ ಶಕ್ತಿಯು ಇಲ್ಲದ ಕಾರಣ, ಮತ್ತು ಮತ್ಸ್ಯಾದಿಗಳಿಗೆ ಪೂರ್ಣಶಕ್ತಿಯು ಇರುವುದರಿಂದ, ಅವ್ಯತಿರೇಕಃ = ಜೀವರಿಗೆ ಭಿನ್ನಾಂಶತ್ವವು, ಮತ್ಸ್ಯಾದಿರೂಪಗಳಿಗೆ ಅಭಿನ್ನಾಂಶತ್ವರೂಪ ಯುಕ್ತವಾಗುತ್ತದೆ. ಇದರಲ್ಲಿ ಯಾವುದೇ ವ್ಯತ್ಯಾಸವಿಲ್ಲ.

## ಬ್ರಹ್ಮಸೂತ್ರಭಾಷ್ಯ

**भाष्यम् — ॥ असन्ततेश्चाव्यतिकरः ॥७॥**

**अपूर्णशक्तित्वाच्च जीवस्य न मत्स्यादिसाम्यम् ।**

ಪರಿಪೂರ್ಣಚಂದ್ರಿಕಾ

**तथा च चतुर्वेदशिखायाम् –**

**'तस्य ह वा एतस्य परमस्य त्रीणि रूपाणि कृष्णो रामः कपिल इति । तस्य ह वा एतस्य परमस्य पञ्चरूपाणि दशरूपाणि सहस्ररूपाण्यमितरूपाणि । तानि ह वा एतानि सर्वाणि पूर्णानि सर्वाण्यनन्तानि सर्वाण्यसम्मितानि सर्वाण्यमितानि । अथावराः सर्व एवापूर्णाः सर्व एव बध्यन्ते अथ मुच्यन्ते च केचन' इति ।।७।।**

ಅನುವಾದ - ಜೀವನು ಅಪರಿಪೂರ್ಣವಾದ ಶಕ್ತಿಯುಳ್ಳವನು ಆದ್ದರಿಂದ ಮತ್ಸ್ಯಾದಿರೂಪಗಳ ಸಾಮ್ಯವನ್ನು ತಿಳಿಯಬಾರದು. ಹೀಗೆ ಚತುರ್ವೇದಶಿಖಾದಲ್ಲಿ ಹೇಳಲಾಗಿದೆ.

ಪರಮಾತ್ಮನಿಗೆ ಮೂರು ರೂಪಗಳಿವೆ. ಕೃಷ್ಣ, ರಾಮ, ಕಪಿಲ ಎಂದು, ಆ ಪರಮಾತ್ಮನಿಗೆ ಐದು ರೂಪಗಳಿವೆ, ಹತ್ತು ರೂಪಗಳಿವೆ. ನೂರು ರೂಪಗಳಿವೆ. ಸಾವಿರ ರೂಪಗಳಿವೆ. ಅನಂತ ರೂಪಗಳಿವೆ ಅವೆಲ್ಲವೂ ಪರಿಪೂರ್ಣವಾಗಿವೆ. ಮತ್ತು ಅನಂತವಾಗಿವೆ. ಪ್ರತಿಯೊಂದೂ ಗುಣದಿಂದ ಅಸದೃಶವಾಗಿವೆ. ಅವರರಾದ ಜೀವರೆಲ್ಲರೂ ಅಪೂರ್ಣರಾಗಿದ್ದಾರೆ. ಬಂಧನಕ್ಕೆ ಒಳಗಾಗಿದ್ದಾರೆ. ಕೆಲವರು ಮಾತ್ರ ಮೋಕ್ಷವನ್ನು ಪಡೆಯುತ್ತಾರೆ.

ಪ್ರತಿಪದಾರ್ಥ -- ಜೀವಸ್ಯ = ಜೀವನಿಗೆ, ಅಪೂರ್ಣಶಕ್ತಿತ್ವಾತ್ = ಪರಿಪೂರ್ಣವಾದ ಶಕ್ತಿಯುಳ್ಳವನಲ್ಲವಾದ್ದರಿಂದ, ನ ಮತ್ಸ್ಯಾದಿಸಾಮ್ಯಮ್ = ಮತ್ಸ್ಯಾದಿರೂಪಗಳಂತೆ ತಿಳಿಯಬಾರದು.

ತಥಾ ಚ = ಆದ್ದರಿಂದ, ಚತುರ್ವೇದಶಿಖಾಯಾಮ್ = ಚತುರ್ವೇದಶಿಖಾ ಎಂಬ ಗ್ರಂಥದಲ್ಲಿ ಹೇಳಲಾಗಿದೆ. ತಸ್ಯ ಹವಾ = ಆ ಪರಮಾತ್ಮನಿಗಾದರೋ, ಏತಸ್ಯ ಪರಮಸ್ಯ = ಸರ್ವೋತ್ತಮನಾದ ಪರಮಾತ್ಮನಿಗೆ, ತ್ರೀಣಿ = ಮೂರು, ರೂಪಾಣಿ = ರೂಪಗಳಿವೆ, ಕೃಷ್ಣಃ = ಕೃಷ್ಣನು, ರಾಮಃ = ರಾಮನು, ಕಪಿಲಃ = ಕಪಿಲ ಎಂದು, ತಸ್ಯ ಹವಾ ಏತಸ್ಯ ಪರಮಸ್ಯ = ಆ ಪರಮಾತ್ಮನಿಗಾದರೂ, ಪಂಚರೂಪಾಣಿ = ಐದುರೂಪಗಳು, ದಶರೂಪಾಣಿ = ಹತ್ತುರೂಪಗಳು, ಸಹಸ್ರಾಣಿ = ಸಾವಿರೂಪಗಳು, ಅಮಿತರೂಪಾಣಿ = ಅಮಿತರೂಪಗಳು ಇರುತ್ತವೆ. ತಾನಿ ಹ ವಾ ಏತಾನಿ ಸರ್ವಾಣಿ = ಆ ಎಲ್ಲಾ ರೂಪಗಳು, ಪೂರ್ಣಾನಿ = ಪರಿಪೂರ್ಣವಾಗಿವೆ. ಸರ್ವಾಣಿ = ಎಲ್ಲವೂ, ಅನಂತಾನಿ = ಅನಂತವಾಗಿವೆ, ಸರ್ವಾಣಿ = ಎಲ್ಲವೂ, ಅಸಂಯತಾನಿ = ಪರಿಮಿತಿ ಇಲ್ಲದವುಗಳಾಗಿವೆ, ಸರ್ವಾಣಿ = ಎಲ್ಲವೂ, ಅಮಿತಾನಿ = ಅಮಿತವಾಗಿವೆ, ಅಥ = ಮತ್ತು, ಅವರಾಃ ಸರ್ವೇಃ = ಅಧಮರಾದ ಜೀವರೆಲ್ಲರೂ, ಅಪೂರ್ಣಾಃ = ಅಪರಿಪೂರ್ಣರು, ಸರ್ವೇ ಏವ = ಈ ಎಲ್ಲ ಜೀವರ, ಬಧ್ಯಂತೇ = ಬಂಧನದಲ್ಲಿ ಸಿಲುಕಿದ್ದಾರೆ, ಅಥ = ಮತ್ತು, ಕೇಚನ = ಕೆಲವರು, ಮುಚ್ಯಂತೇ = ಮುಕ್ತರಾಗುತ್ತಾರೆ.

## ಬ್ರಹ್ಮಸೂತ್ರ

**सूत्रम् – आभास एव च ।।**

ಪರಮಾತ್ಮನು ಬಿಂಬನಾಗಿದ್ದರೆ, ಜೀವನು ಪ್ರತಿಬಿಂಬನಾಗಿದ್ದಾನೆ. ಮತ್ಸ್ಯಾದಿಗಳಲ್ಲಿ ಇಂಥ ಬಿಂಬ-ಪ್ರತಿಬಿಂಬ ಭಾವಗಳನ್ನು ಹೇಳಲಾಗದು. ಆದ್ದರಿಂದ ಹಿಂದೆ ಹೇಳಿದ್ದರಲ್ಲಿ ಯಾವುದೇ ವ್ಯತ್ಯಾಸವಿಲ್ಲ.

ಅಂಶಾಧಿಕರಣ (೨-೩-೧೮)

## ಸೂತ್ರದೀಪಿಕಾ

**सूत्रदीपिका — चः समुच्चये । यता जीवः परस्य आभास एव प्रतिबिम्ब एव । मत्स्यादिस्तु न तथा । अतोऽप्युक्तस्य न व्यत्यास इत्यर्थः ।।८।।**

'ಚ'ಶಬ್ದವು ಸಮುಚ್ಚಾಯಾರ್ಥದಲ್ಲಿ ಪ್ರಯುಕ್ತವಾಗಿದೆ. ಯಾವ ಕಾರಣದಿಂದ ಜೀವನು ಪರಮಾತ್ಮನ ಆಭಾಸ ಏವ = ಪ್ರತಿಬಿಂಬನೇ ಆಗಿದ್ದಾನೋ, ಮತ್ಸ್ಯಾದಿಗಳು ಪ್ರತಿಬಿಂಬವಾಗಿಲ್ಲವೋ, ಆ ಕಾರಣದಿಂದಲೂ ಹಿಂದೆ ಹೇಳಿದ ಯಾವುದೇ ವ್ಯತ್ಯಾಸವಿರುವುದಿಲ್ಲ.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ಅಂಶಾಧಿಕರಣವು ಮುಗಿಯಿತು.

## ಬ್ರಹ್ಮಸೂತ್ರಭಾಷ್ಯ

**भाष्यम् — ।। आभास एव च ।।८।।**

**'रूपं रूपं प्रतिरूपो बभूव' (ऋ.४.४७.१८.) इति प्रतिबिम्बत्वाच्च न साम्यम् ।**

ಅನುವಾದ - "ರೂಪಂರೂಪಂ ಪ್ರತಿರೂಪೋ ಬಭೂವ" "ಒಂದೊಂದು ರೂಪವೂ ಕೂಡ ಪ್ರತಿಬಿಂಬಭಾವವನ್ನು ಪಡೆದವು" ಹೀಗೆ ಜೀವನು ಬ್ರಹ್ಮನ ಪ್ರತಿಬಿಂಬನೆಂದು ಹೇಳಿರುವುದರಿಂದ ಮತ್ಸ್ಯಾದಿರೂಪಗಳ ಸಾಮ್ಯವು ಬರುವುದಿಲ್ಲ.

ಪ್ರತಿಪದಾರ್ಥ -- ರೂಪಂರೂಪಂ = ಪ್ರತಿಯೊಂದು ಜೀವನ ರೂಪಗಳು, ಪ್ರತಿರೂಪಃ = ಪ್ರತಿಬಿಂಬವು, ಬಭೂವ = ಆದವು. ಹೀಗೆ, ಪ್ರತಿಬಿಂಬತ್ವಾಚ್ಚ = ಪ್ರತಿಬಿಂಬಭಾವವನ್ನು ಹೇಳಿರುವುದರಿಂದ, ನ ಸಾಮ್ಯಮ್ = ಮತ್ಸ್ಯಾದಿರೂಪಗಳ ಸಾಮ್ಯವು ಇರುವುದಿಲ್ಲ.

**भाष्यम् — वाराहे च —**

**'द्विरूपावंशकौ तस्य परमस्य हरेर्विभोः ।**
**प्रतिबिम्बांशकश्चाथ स्वरूपांशक एव च ।।**
**प्रतिबिम्बांशका जीवाः प्रादुर्भावाः परे स्मृताः ।**
**प्रतिबिम्बेष्वल्पसाम्यं स्वरूपाणीतराणि तु ।।' इति**
**'सोपाधिरनुपाधिश्च प्रतिबिम्बो द्विधेयते ।**
**जीवः परस्यानुपाधिरिन्द्रचापो यथा रवेः ।।' इति पैङ्गिश्रुतिः ।।**
**'यथैषा पुरुषे च्छाया एतस्मिन्नेतदाततम्' (प्र.३.३.)**
**इति च श्रुतिः ।।८।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये अंशाधिकरणम् ।। १८ ।।**

ಅನುವಾದ - ವರಾಹಪುರಾಣದಲ್ಲಿ ಹೀಗೆ ಹೇಳಲಾಗಿದೆ - ಸರ್ವಸಮರ್ಥನಾದ ಶ್ರೇಷ್ಠನಾದ ಶ್ರೀಹರಿಯು ಎರಡು ಅಂಶವನ್ನು ಹೊಂದಿದ್ದಾನೆ. ಪ್ರತಿಬಿಂಬಾಂಶ ಮತ್ತು ಸ್ವರೂಪಾಂಶ ಎಂದು. ಜೀವರೆಲ್ಲರು ಪ್ರತಿಬಿಂಬರಾದ ಅಂಶರು. ಭಗವಂತನ ಮತ್ಸ್ಯಾದ್ಯವತಾರಗಳು ಸ್ವರೂಪಾಂಶಗಳು. ಪ್ರತಿಬಿಂಬಾಂಶದಲ್ಲಿ ಭಗವಂತನ ಅಲ್ಪಸಾಮ್ಯವು ಮಾತ್ರ ಇರುತ್ತದೆ. ಸ್ವರೂಪಾಂಶವು ಭಗವಂತನ ಸ್ವರೂಪವೇ ಆಗಿರುತ್ತದೆ. ಮತ್ತು ಉಪಾಧಿಸಹಿತವಾದ ಪ್ರತಿಬಿಂಬ ಉಪಾಧಿ ಇಲ್ಲದ ಪ್ರತಿಬಿಂಬ ಎಂಬುದಾಗಿ ಎರಡು ಬಗೆಯ ಪ್ರತಿಬಿಂಬಗಳಿವೆ. ಕಾಮನ ಬಿಲ್ಲು ಹೇಗೆ ಸೂರ್ಯನ ಪ್ರತಿಬಿಂಬವೋ ಅದರಂತೆ ಜೀವನು ಪರಮಾತ್ಮನ ನಿರುಪಾಧಿಕಪ್ರತಿಬಿಂಬನಾಗಿರುತ್ತಾನೆ.

ಯಾವ ರೀತಿಯಾಗಿ ನಮ್ಮ ನೆರಳು ನಮ್ಮ ಅಧೀನವಾಗಿರುತ್ತವೋ ಅದರಂತೆ ಎಲ್ಲ ಜೀವರು ಪರಮಾತ್ಮನ ಅಧೀನರು ಎಂಬುದಾಗಿ ಪ್ರಶ್ನೋಪನಿಷತ್ತು ಹೇಳುತ್ತಿದೆ.

ಪ್ರತಿಪದಾರ್ಥ -- ವಾರಾಹೇ ಚ = ವರಾಹ ಪುರಾಣದಲ್ಲಿ ಹೀಗೆ ಹೇಳಲಾಗಿದೆ -

ವಿಭೋಃ = ಸರ್ವಸಮರ್ಥನಾದ, ಪರಮಸ್ಯ = ಶ್ರೇಷ್ಠನಾದ, ತಸ್ಯ = ಆ, ಹರೇಃ = ಶ್ರೀಹರಿಯ, ದ್ವಿರೂಪೌ = ಎರಡು, ಅಂಶಕೌ = ಅಂಶಗಳು ಪ್ರಸಿದ್ಧವಾಗಿವೆ. ಪ್ರತಿಬಿಂಬಾಂಶಕಃ ಸ್ವರೂಪಾಂಶಕಃ ಏವ = ಪ್ರತಿಬಿಂಬಾಂಶವೆಂದು, ಸ್ವರೂಪಾಂಶವೆಂದು. ಜೀವಾಃ = ಜೀವರು, ಪ್ರತಿಬಿಂಬಾಂಶಕಾಃ = ಪ್ರತಿಬಿಂಬಭೂತರಾದ ಅಂಶರು, ಪ್ರಾದುರ್ಭಾವಾಃ = ಮತ್ಸ್ಯಾದಿ ರೂಪಗಳು, ಪರೇ ಸ್ಮೃತಾಃ = ಸ್ವರೂಪಾಂಶವೆಂದೇ ಕರೆಸಿಕೊಳ್ಳುತ್ತವೆ. ಪ್ರತಿಬಿಂಬೇಷು = ಪ್ರತಿಬಿಂಬರಲ್ಲಿ, ಅಲ್ಪಸಾಮ್ಯಂ = ಸ್ವಲ್ಪ ಮಾತ್ರ ಸಾಮ್ಯವಿರುತ್ತದೆ. ಇತರಾಣಿ = ಬೇರೆ ಮತ್ಸ್ಯಾದಿ ರೂಪಗಳು, ಸ್ವರೂಪಾಣಿ = ಸ್ವರೂಪಾಂಶಗಳೆಂದೇ ಕರೆಸಿಕೊಳ್ಳುತ್ತವೆ.

ಪ್ರತಿಬಿಂಬಃ = ಪ್ರತಿಬಿಂಬವು, ಸೋಪಾಧಿಃ = ಉಪಾಧಿಸಹಿತವಾದ್ದು, ಚ = ಮತ್ತು, ಅನುಪಾಧಿಃ = ನಿರುಪಾಧಿಕವಾದದ್ದು ಎಂದು, ದ್ವಿಧಾ = ಎರಡು ಬಗೆಯಲ್ಲಿ ಅಂಗೀಕರಿಸಲ್ಪಡುತ್ತದೆ. ಜೀವಃ = ಜೀವನು, ಈಶಸ್ಯ = ಭಗವಂತನ, ಅನುಪಾಧಿಃ = ನಿರುಪಾಧಿಕನಾದ ಪ್ರತಿಬಿಂಬನು, ಯಥಾ = ಯಾವ ರೀತಿಯಾಗಿ, ರವೇಃ = ಸೂರ್ಯನಿಗೆ, ಇಂದ್ರಚಾಪಃ = ಕಾಮನಬಿಲ್ಲು ನಿರುಪಾಧಿಕ ಪ್ರತಿಬಿಂಬವಾಗಿದೆಯೋ ಅದರಂತೆ, ಇತಿ = ಹೀಗೆ, ಪೈಂಗಿಶ್ರುತಿಃ = ಪೈಂಗಿಶ್ರುತಿಯು ಹೇಳುತ್ತಿದೆ.

ಯಥಾ = ಯಾವ ರೀತಿಯಾಗಿ, ಏಷಾ ಪುರುಷೇ ಛಾಯಾ = ಈ ನೆರಳು ಪುರುಷನ ಅಧೀನವಾಗಿದೆಯೋ, ಏತತ್ = ಜೀವನು, ಏತಸ್ಮಿನ್ = ಭಗವಂತನಲ್ಲಿ, ಆತತಂ = ಆಶ್ರಯವನ್ನು ಪಡೆದಿದೆ, ಇತಿ ಚ = ಹೀಗೆ, ಶ್ರುತಿಃ = ಪ್ರಶ್ನೋಪನಿಷತ್ ಹೇಳುತ್ತಿದೆ.

ಇಲ್ಲಿಗೆ ಅಂಶಾಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

## ತತ್ವಪ್ರಕಾಶಿಕಾ

**तत्वप्रकाशिका – युक्त्यन्तरेण मत्स्यादीनां जीवानां चैकविध्यं निराकुर्वत्सूत्रं पठित्वा व्याचष्टे – असन्ततेश्चेति ।। जीवस्य सम्यक् शक्त्यभावान्मत्स्यादीनां तु तद्भावादंशत्वेऽप्युक्तस्याव्यतिकरो व्यत्यासाभाव इति भावः ।**

ಮತ್ತೊಂದು ಯುಕ್ತಿಯಿಂದ ಮತ್ಸ್ಯಾದಿರೂಪಗಳಿಗೆ ಹಾಗೂ ಜೀವರುಗಳಿಗೆ ಸಮಾನರೂಪತೆಯು ಇರುವುದಿಲ್ಲವೆಂದು ನಿರಾಕರಣೆ ಮಾಡುವುದಕ್ಕಾಗಿ 'ಅಸಂತತೇಶ್ಚ' ಎಂಬುದಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಜೀವನಿಗೆ ಸಂಪೂರ್ಣವಾದ ಶಕ್ತಿಯು ಇರುವುದಿಲ್ಲ. ಮತ್ಸ್ಯಾದಿರೂಪಗಳಿಗೆ ಸಂಪೂರ್ಣ ಶಕ್ತಿಯು ಇರುತ್ತದೆ. ಆದ್ದರಿಂದ ಇಬ್ಬರೂ ಅಂಶರೇ ಆಗಿದ್ದರೂ ಕೂಡ ಹಿಂದೆ ಹೇಳಿದಂತೆ ಜೀವನಂತೆ ಮತ್ಸ್ಯಾದಿ ರೂಪಗಳಲ್ಲ ಎಂಬ ವಿಷಯದಲ್ಲಿ ಯಾವುದೇ ವ್ಯತ್ಯಾಸ ಇರುವುದಿಲ್ಲ ಎಂದಭಿಪ್ರಾಯ.

**ತತ್ವಪ್ರಕಾಶಿಕಾ – मत्स्यादीनां पूर्णशक्तित्वं न जीवस्येत्येतत्कुत इत्यत आह – तथा चेति ।। कृष्णादिः कश्चन व्यूहः । पञ्च नारायणादीनि । असंमितानि निरुपमानि ।।**

ಮತ್ಸ್ಯಾದಿಗಳಲ್ಲಿ ಪೂರ್ಣವಾದ ಶಕ್ತಿ ಇದೆ, ಜೀವರಲ್ಲಿ ಇಲ್ಲ ಎನ್ನಲು ಏನು ಪ್ರಮಾಣ? ಎಂಬ ಪ್ರಶ್ನೆಗೆ 'ತಥಾ ಚ' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ. ಕೃಷ್ಣ ಮೊದಲಾದವು ಒಂದು ಸಮೂಹ. ಪಂಚ ಎಂದರೆ ನಾರಾಯಣ ಮೊದಲಾದವುಗಳು. 'ಅಸಂಮಿತಾನಿ' ಎಂದರೆ ಉಪಮೆ ಇಲ್ಲದವುಗಳು ಎಂದರ್ಥ.

ವಿವರಣೆ - ಚತುರ್ವೇದಶಿಖೆಯಲ್ಲಿ 'ತ್ರೀಣಿ ರೂಪಾಣಿ ಕೃಷ್ಣಃ ರಾಮಃ ಕಪಿಲಃ' ಕೃಷ್ಣ, ರಾಮ, ಕಪಿಲ ಮೂರು ರೂಪಗಳೇ ಒಂದು ಪ್ರತ್ಯೇಕ ಸಮೂಹವಾಗಿದೆ. ನಾರಾಯಣ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಈ ಐದು ರೂಪಗಳು ಪಂಚರೂಪಗಳೆನಿಸುತ್ತವೆ. ದಶರೂಪಗಳೆಂದರೆ ಮತ್ಸ್ಯಾದಿಗಳು. ಇದೇ ಭಾಷ್ಯದಲ್ಲಿ 'ಅಸಂಮಿತಾನಿ' ಎಂಬ ಪದಕ್ಕೆ ಉಪಮಾನ ಇಲ್ಲದವುಗಳು ಎಂದರ್ಥ. ಪರಸ್ಪರಸಮಾನವಲ್ಲ ಎಂದರ್ಥವಲ್ಲ.

**ತತ್ವಪ್ರಕಾಶಿಕಾ – युक्त्यन्तरेणोक्तमर्थं स्वापयत्सूत्रमुपन्यस्य व्याचष्टे - आभास एवेति ।। अंशत्वाविशेऽपि जीवानां प्रतिबिम्बांशत्वमस्ति । 'रूपं रूपम्' (ऋ. ६.४७.१८) इति श्रुतेः । न च तन्मत्स्यदीनामतो नैकविधतेति भावः ।**

ಮತ್ತೊಂದು ಯುಕ್ತಿಯಿಂದ ಹಿಂದಿನ ಸೂತ್ರದಲ್ಲಿ ಹೇಳಿದ ಪ್ರಮೇಯವನ್ನೇ ಸ್ಥಾಪನೆ ಮಾಡುವುದಕ್ಕಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಆಭಾಸ ಏವ' ಇತ್ಯಾದಿಯಾಗಿ.

ಮತ್ಸ್ಯಾದಿಗಳಂತೆ ಜೀವರಲ್ಲಿಯೂ ಅಂಶತ್ವವು ಸಮಾನವಾಗಿರಬಹುದು. ಆದರೂ ಕೂಡ ಜೀವರು ಪರಮಾತ್ಮನ ಪ್ರತಿಬಿಂಬಭೂತರಾಗಿ ಅಂಶರೆನಿಸಿಕೊಳ್ಳುತ್ತಾರೆ. 'ರೂಪಂ ರೂಪಂ' ಎಂಬ ಶ್ರುತಿಯೇ ಈ ವಿಷಯದಲ್ಲಿ ಆಧಾರವಾಗಿದೆ. ಇಂತಹ ಪ್ರತಿಬಿಂಬರೂಪವಾಗಿ ಅಂಶವಾಗುವಿಕೆಯು ಮತ್ಸ್ಯಾದಿರೂಪಗಳಲ್ಲಿ ಕೂಡುವುದಿಲ್ಲ. ಆದ್ದರಿಂದಲೂ ಏಕರೂಪತೆಯನ್ನು ತಿಳಿಯಬಾರದು.

ವಿವರಣೆ - 'ರೂಪಂ ರೂಪಂ ಪ್ರತಿರೂಪೋ ಬಭೂವ ತದಸ್ಯ ರೂಪಂ ಪ್ರತಿಚಕ್ಷಣಾಯ । ಇಂದ್ರೋ ಮಾಯಾಭಿಃ ಪುರರೂಪ ಈಯತೇ ಯುಕ್ತಾ ಹ್ಯಸ್ಯ ಹರಯಃ ಶತಾದಶ' ಎಂಬ ಶ್ರುತಿಯಲ್ಲಿ ಹೇಳಿದಂತೆ ಎಲ್ಲಾ ಜೀವರುಗಳು ಈಶ್ವರನಿಗೆ ಪ್ರತಿಬಿಂಬರಾಗಿದ್ದಾರೆ. ಈ ಶ್ರುತಿಯಲ್ಲಿರುವ ಇಂದ್ರ ಶಬ್ದದಿಂದ ದೇವೇಂದ್ರನ ಪ್ರತಿಬಿಂಬರೆಂದು ಭ್ರಾಂತಿ ಬರಬಾರದೆಂದು ತಿಳಿಸಲು 'ಭಗವತಃ ರೂಪಂ' ಎಂಬುದಾಗಿ ಬೃಹದಾರಣ್ಯಕ ಭಾಷ್ಯದಲ್ಲಿ ಶ್ರೀಮದಾಚಾರ್ಯರು ಹೇಳಿದ್ದಾರೆ (ಭಾವದೀಪ).

**तत्वप्रकाशिका – जीवसमुदायः परमेश्वरस्य रूपं रूपं प्रतिरूपो भूत्वा वर्तते तद्बिम्बरूपमस्य मुक्त्यर्थं साक्षात्कारविषयो भवति । स च परमेश्वरः स्वसामर्थ्येनानन्तजीवबिम्बरूपो ज्ञायते । अस्यनन्तानि हरिनामकानि रूपाणि व्यूहशः सन्तीति प्रसिद्धमित्यर्थः ।**

ಜೀವಸಮುದಾಯವು ಪರಮಾತ್ಮನ ಒಂದೊಂದು ರೂಪಕ್ಕೂ ಕೂಡ ಪ್ರತಿಬಿಂಬವಾಗಿವೆ. ಆ ಬಿಂಬರೂಪವನ್ನು ಈ ಜೀವನು ಮೋಕ್ಷಕ್ಕೋಸ್ಕರ ಸಾಕ್ಷಾತ್ಕಾರವಿಷಯವನ್ನಾಗಿ ಮಾಡಿಕೊಳ್ಳುತ್ತಾನೆ. ಆ ಪರಮಾತ್ಮನು ತನ್ನ ಸಾಮರ್ಥ್ಯದಿಂದ ಅನಂತ ಜೀವರ ಬಿಂಬರೂಪನಾಗಿ ತಿಳಿಯಲು ಯೋಗ್ಯನಾಗಿದ್ದಾನೆ. ಇವನ ಅನಂತ ರೂಪಗಳು ಹರಿ ಎಂಬ ಹೆಸರನ್ನು ಹೊಂದಿವೆ. ಈ ವಿಷಯವು ಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿವೆ. ಇದು ಮಂತ್ರದ ಅರ್ಥ.

ವಿವರಣೆ - 'ರೂಪಂ ರೂಪಂ ಪ್ರತಿರೂಪೋ ಬಭೂವ ತದಸ್ಯ ರೂಪಂ ಪ್ರತಿಚಕ್ಷಣಾಯ । ಇಂದ್ರೋ ಮಾಯಾಭಿಃ ಪುರರೂಪ ಈಯತೇ ಯುಕ್ತಾ ಹ್ಯಸ್ಯ ಹರಯಃ ಶತಾದಶ' ಈ ಋಙ್ಮಂತ್ರದ ಅರ್ಥವನ್ನು 'ಜೀವಸಮುದಾಯಃ' ಇತ್ಯಾದಿ ಟೀಕೆಯಿಂದ ವ್ಯಾಖ್ಯಾನ ಮಾಡಿದ್ದಾರೆ.

**तत्वप्रकाशिका – सूत्रार्थे स्मृतिं चाऽह – वाराहे चेति ।। परे स्वरूपांशाः । न जीवस्य परमात्मांशत्वं युक्तं तदतिरिक्तोपाध्यभावादित्यत आह – सोपाधिरिति।। एवमंशत्वेन श्रुत्यादिसिद्धस्य जीवस्य मत्स्यादिवदंशत्वं नास्ति । अत एवानंशत्व-श्रुतिरुपपन्नेत्युक्तं भवति ।**

ಸೂತ್ರಾರ್ಥದಲ್ಲಿ ಶ್ರುತಿಪ್ರಮಾಣವನ್ನು 'ವಾರಾಹೇ ಚ' ಎಂದು ಉಲ್ಲೇಖ ಮಾಡುತ್ತಿದ್ದಾರೆ. ಭಾಷ್ಯದಲ್ಲಿ ಉದಾಹರಿಸಿದ ವರಾಹಪುರಾಣದಲ್ಲಿ 'ಪರೇ' ಎಂದರೆ ಸ್ವರೂಪಾಂಶಗಳು ಎಂದರ್ಥ. ಜೀವನಿಗೆ ಪರಮಾತ್ಮನ ಅಂಶತ್ವವು ಯುಕ್ತವಾಗುವುದಿಲ್ಲ. ಏಕೆಂದರೆ ಅತಿರಿಕ್ತವಾದ ಉಪಾಧಿಯೇ ಇರುವುದಿಲ್ಲ ? ಈ ಪ್ರಶ್ನೆಗೆ 'ಸೋಪಾಧಿಃ' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

ಹೀಗೆ ಶ್ರುತಿ ಮೊದಲಾದ ಆಧಾರದಿಂದ ಜೀವನು ಪರಮಾತ್ಮನ ಅಂಶನೆಂಬುದು ಯುಕ್ತವಾಗುತ್ತದೆ. ಆದರೂ ಮತ್ಸ್ಯಾದಿಗಳಂತೆ ಇವನು ಪರಮಾತ್ಮನ ಸ್ವರೂಪಾಂಶನು ಆಗಿರುವುದಿಲ್ಲ. ಆದ್ದರಿಂದಲೇ ಅನಂಶತ್ವಶ್ರುತಿಯೂ ಉಪಪನ್ನವಾಗುತ್ತದೆಂದು ಹೇಳಿದಂತಾಯಿತು.

ವಿವರಣೆ - ಪರಮಾತ್ಮನಿಗೆ ಜೀವನು ಅಂಶನಾಗಲು ಸಾಧ್ಯವಿಲ್ಲ. ಏಕೆಂದರೆ ತದತಿರಿಕ್ತವಾದ ಉಪಾಧಿಯೇ ಇರುವುದಿಲ್ಲ? ಎಂಬ ಪ್ರಶ್ನೆಗೆ ಇಲ್ಲಿ ಉತ್ತರಿಸುತ್ತಿದ್ದಾರೆ. ಅತಿರಿಕ್ತವಾದ ಉಪಾಧಿ ಇಲ್ಲದಿದ್ದರೂ ವಿಶೇಷ ಶಕ್ತಿಯಿಂದ ಸ್ವರೂಪಭೂತವಾದ ಅಂತಃಕರಣವೇ ಉಪಾಧಿಯಾಗುತ್ತದೆ. ತದಧೀನತ್ವೇ ಸತಿ ತತ್ಸಾದೃಶ್ಯ ರೂಪವಾದ ಪ್ರತಿಬಿಂಬತ್ವವು ಇದರಲ್ಲಿ ಯುಕ್ತವಾಗುತ್ತದೆ (ವಾಕ್ಯಾರ್ಥಮುಕ್ತಾವಳಿ).

ಅಂಶಾಧಿಕರಣ (೨-೩-೧೮)

**तत्वप्रकाशिका – न चाप्रामाण्यमेव किं न स्यात्किं यथा कथञ्चिद् अविरोधापादनेनेति वाच्यम् । वाक्याप्रमाण्यकल्पनस्य वक्तृमिथ्याज्ञानादिमूलत्वात् । वेदस्यापौरुषेयत्वादिति । अतः श्रुत्यविरोधेन जीवस्येश्वरांशत्वोपपत्तेर्युक्तो हरौ श्रुतिसमन्वय इति सिद्धम् ।।**

ಶ್ರುತಿಯು ಅಪ್ರಮಾಣವೆಂದು ಏಕೆ ಹೇಳಬಾರದು? ಯಥಾಕಥಂಚಿತ್ ವಿರೋಧವಿಲ್ಲವೆಂದು ಏಕೆ ಉಪಪಾದನೆ ಮಾಡಬೇಕು? ಎಂದು ಪ್ರಶ್ನಿಸಬಾರದು. ಯಾವುದೇ ವಾಕ್ಯವು ಅಪ್ರಮಾಣವಾಗಬೇಕಾದರೆ ಆ ವಾಕ್ಯವನ್ನು ಪ್ರಯೋಗಿಸಿದ ವಕ್ತೃವಿನಲ್ಲಿ ಮಿಥ್ಯಾಜ್ಞಾನ ಮೊದಲಾದವುಗಳಿರಬೇಕು. ಆದರೆ ವೇದವು ಅಪೌರುಷೇಯವಾದ್ದರಿಂದ ವಕ್ತೃದೋಷ ಪ್ರಯುಕ್ತವಾಗಿ ಅಪ್ರಾಮಾಣ್ಯವನ್ನು ಹೇಳಲು ಸಾಧ್ಯವಿಲ್ಲ.

ಆದ್ದರಿಂದ ಯಾವುದೇ ಶ್ರುತಿಯ ವಿರೋಧವಿಲ್ಲದ್ದರಿಂದ ಜೀವನಿಗೆ ಈಶ್ವರನ ಅಂಶತ್ವವು ಉಪಪನ್ನವಾಗುತ್ತದೆ. ಹಾಗಾಗಿ ಶ್ರೀಹರಿಯಲ್ಲಿ ಮಾಡಲ್ಪಟ್ಟ ಶ್ರುತಿಸಮನ್ವಯವು ನಿರ್ದುಷ್ಟವೆಂದು ಸಿದ್ಧವಾಯಿತು.

ವಿವರಣೆ - ಅಂಶತ್ವಶ್ರುತಿಗೆ ಏಕೆ ವ್ಯವಸ್ಥೆಯನ್ನು ಕಲ್ಪನೆ ಮಾಡುತ್ತೀರಿ? ಅಪ್ರಾಮಾಣ್ಯವನ್ನು ಹೇಳಬಹುದಲ್ಲವೇ? ಎಂಬ ಪ್ರಶ್ನೆಗೆ 'ನ ಚ' ಇತ್ಯಾದಿ ಟೀಕೆಯಿಂದ ಉತ್ತರಿಸುತ್ತಿದ್ದಾರೆ.

ಈ ಅಧಿಕರಣದಲ್ಲಿ ಒಟ್ಟು ಎಂಟು ಸೂತ್ರಗಳಿವೆ. ಪ್ರಾರಂಭದ ಮೂರು ಸೂತ್ರಗಳು ಜೀವನ ಅಂಶತ್ವಕ್ಕೆ ಸಾಧಕವಾಗಿದೆ. ಅದರಲ್ಲಿ ಮೊದಲನೇ ಸೂತ್ರದಲ್ಲಿ ಜೀವನು ಪರಮಾತ್ಮನ ಜೊತೆ ಅನೇಕ ಬಗೆ ಸಂಬಂಧಗಳನ್ನು ಹೊಂದಿರುವುದರಿಂದ ಅವನ ಅಂಶನೆನಿಸಿಕೊಳ್ಳುತ್ತಾನೆಂದು ಸಮರ್ಥಿಸಲಾಗಿದೆ. ಎರಡನೇ ಸೂತ್ರದಲ್ಲಿ 'ಪಾದೋಽಸ್ಯ' ಎಂಬ ಪುರುಷಸೂಕ್ತದ ಆಧಾರದಿಂದ ಅಂಶತ್ವವನ್ನು ಉಪಪಾದನೆ ಮಾಡಲಾಗಿವೆ. ಮೂರನೇ ಸೂತ್ರದಲ್ಲಿ 'ಮಮೈವಾಂಶಃ' ಎಂಬ ಗೀತೆಯ ಆಧಾರದಿಂದ ಅಂಶತ್ವವನ್ನು ಉಪಪಾದನೆ ಮಾಡಲಾಗಿದೆ. ಮುಂದಿನ ಐದು ಸೂತ್ರಗಳಲ್ಲಿ ಜೀವನು ಪರಮಾತ್ಮನ ಅಂಶನಾದರೆ ಮತ್ಸ್ಯಾದಿರೂಪಗಳಿಂದ ಸಾಮ್ಯವು ಬರುತ್ತದಲ್ಲವೇ ? ಎಂಬ ಆಪತ್ತಿಯನ್ನು ಪರಿಹರಿಸಲಾಗಿದೆ. ಅವುಗಳಲ್ಲಿ ಮೊದಲು ಸೂರ್ಯಪ್ರಕಾಶದ ದೃಷ್ಟಾಂತದಿಂದ ಮತ್ಸ್ಯಾದಿಗಳು ಸ್ವರೂಪಾಂಶರೆಂದು, ಜೀವರು ಸ್ವರೂಪಾಂಶರಲ್ಲರೆಂದು ಸಾಮ್ಯವನ್ನು ವ್ಯವಚ್ಛೇದ ಮಾಡಲಾಗಿದೆ. ಐದನೆಯ ಸೂತ್ರದಲ್ಲಿ ಸ್ಮೃತಿಯ ಆಧಾರದಿಂದ ಜೀವರು ಸ್ವರೂಪಾಂಶರಲ್ಲವೆಂದು ಉಪಪಾದನೆ ಮಾಡಿ, ಆರನೆಯ ಸೂತ್ರದಲ್ಲಿ ಅಂಶ್ಯಧೀನವಾದ ಪ್ರವೃತ್ತಿವುಳ್ಳವರೆಂದು ಉಪಪಾದನೆ ಮಾಡಿ, ಏಳನೆಯ ಸೂತ್ರದಲ್ಲಿ ಜೀವರು ಅಪೂರ್ವಶಕ್ತಿಯುಳ್ಳವರಾಗಿದ್ದಾರೆಂದು ತಿಳಿಸಿ, ಎಂಟನೆಯ ಸೂತ್ರದಲ್ಲಿ ಪ್ರತಿಬಿಂಬರಾದ್ದರಿಂದ ಜೀವರು ಪರಮಾತ್ಮನ ಅಂಶರಾಗಿದ್ದಾರೆಂದು ಉಪಪಾದನೆ ಮಾಡಲಾಗಿದೆ. ಹೀಗೆ ಈ ಎಂಟು ಸೂತ್ರಗಳ ಆನುಪೂರ್ವೀಕ್ರಮವು ಅತ್ಯಂತ ಸ್ವರಸವಾಗಿದೆ.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಅಂಶಾಧಿಕರಣ ಮುಗಿಯಿತು

ಅಂಶಾಧಿಕರಣ

(೨-೩-೧೮)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अंशाधिकरणम्

### ಜೀವಾತ್ಮನು ಪರಮಾತ್ಮನ ಅಂಶ

**अंशो नानाव्यपदेशादन्यथा चापि दाशकितवादित्वमधीयत एके ।। ''परात्तु तच्छ्रुतेः'' इति पूर्वोक्तो जीवेश्वरयोरुपजीव्योपजीवकत्वरूपः सम्बन्धः समर्थ्यते इति वा पूर्वोक्तस्य जीवानामस्वतन्त्रकर्तृत्वस्य निर्वाहाय भिन्नांशत्वमुच्यत इति वा सङ्गतिः ।**

ಹಿಂದಿನ ಅಧಿಕರಣದಲ್ಲಿ 'ಪರಾತ್ತು ತಚ್ಛ್ರುತೇಃ' ಎಂಬ ಸೂತ್ರದಿಂದ ಜೀವನ ಕರ್ತೃತ್ವವು ಪರಾಧೀನವಾಗಿದೆ. ಏಕೆಂದರೆ ಶ್ರುತಿಪ್ರಮಾಣವಿರುವುದರಿಂದ ಎಂದು ಹೇಳಲಾಯಿತು. ಅರ್ಥಾತ್ ಜೀವನು ಉಪಜೀವಕನಾಗಿದ್ದಾನೆ. ಪರಮಾತ್ಮನು ಉಪಜೀವ್ಯನಾಗಿದ್ದಾನೆಂಬುದಾಗಿ ಉಪಜೀವ್ಯ-ಉಪಜೀವಕ-ಸಂಬಂಧವನ್ನು ಸಮರ್ಥನೆ ಮಾಡಲಾಯಿತು. ಈ ಸಂಬಂಧವನ್ನೇ ಪ್ರಕೃತ ಈ ಅಧಿಕರಣದಲ್ಲಿ ಸಮರ್ಥನೆ ಮಾಡಲಾಗಿದೆ. ಜೀವನಿಗೆ ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ಅಸ್ವತಂತ್ರಕರ್ತೃತ್ವವನ್ನು ನಿರಾಕರಣೆ ಮಾಡುವುದಕ್ಕಾಗಿ ಭಿನ್ನಾಂಶತ್ವವನ್ನು ಇಲ್ಲಿ ಸಮರ್ಥನೆ ಮಾಡಲಾಗಿದೆ. ಒಂದುವೇಳೆ ಜೀವನು ಸ್ವರೂಪಾಂಶನೆಂದು ಹೇಳಿದರೆ ಆಗ ಪರಮಾತ್ಮನಂತೆ ಜೀವನೂ ಕೂಡ ಸ್ವತಂತ್ರಕರ್ತೃವೇ ಆಗುತ್ತಾನೆ. ಅಸ್ವತಂತ್ರಕರ್ತೃತ್ವವು ಜೀವನಲ್ಲಿ ನಿರ್ವಾಹವಾಗುವುದಿಲ್ಲ. ಆದ್ದರಿಂದ ಕರ್ತೃವೂ ಆಗಬೇಕು, ಅಸ್ವತಂತ್ರನೂ ಆಗಬೇಕು ಎಂಬುದನ್ನು ಕೂಡಿಸಬೇಕೆಂದರೆ ಜೀವನು ಪರಮಾತ್ಮನ ಅಂಶನೂ ಆಗಬೇಕು, ಅವನಿಂದ ಭಿನ್ನನೂ ಆಗಬೇಕು. ಒಂದುವೇಳೆ ಜೀವನು ಪರಮಾತ್ಮನಿಗೆ ಅಂಶನೇ ಆಗುವುದಿಲ್ಲ ಎಂದು ಹೇಳಿದರೆ ಅಂದರೆ ಚೇತನತ್ವೇನ ಸಾದೃಶವು ಜೀವನಿಗೇ ಬರುವುದಿಲ್ಲವೆಂದಾದರೆ ಜೀವನು ಜಡನಾಗುತ್ತಾನೆ. ಚೇತನತ್ವವೇ ಇಲ್ಲದ ಸ್ಥಿತಿ ಬರುತ್ತದೆ. ಆದಕ್ಕೋಸ್ಕರ ಜೀವನು ಪರಮಾತ್ಮನ ಅಂಶನಾಗಲೇಬೇಕು. ಹೀಗೆ ಈ ಅಂಶಾಧಿಕರಣಕ್ಕೆ ಹಿಂದಿನ ಅಧಿಕರಣದಿಂದ ಸಂಗತಿಯನ್ನು ತಿಳಿಯಬೇಕು.

**अत्र जीवानां ब्रह्मांशत्वं निर्णेतुमशक्यमुत शक्यमिति चिन्ता । तदर्थमंशत्वविधिनिषेधौ किमेकरूपांशत्वविषयावुत विधिर्भिन्नांशत्वविषयो निषेधस्तु स्वरूपांशत्वविषय इति ।**

ಶ್ರುತಿಯಲ್ಲಿ ಅಂಶತ್ವ ಹಾಗೂ ಅನಂಶತ್ವ ಎರಡೂ ಕೂಡ ಕೇಳಿ ಬರುತ್ತಿರುವುದರಿಂದ ಯಾವುದನ್ನೂ ಕೂಡ ನಿರ್ಣಯ ಮಾಡಲು ಸಾಧ್ಯವಿಲ್ಲ. ಜೀವನು ಬ್ರಹ್ಮನ ಅಂಶನಾಗಿದ್ದಾನೆ ಎಂಬುದನ್ನು ನಿರ್ಣಯ ಮಾಡಲು ಸಾಧ್ಯವಿಲ್ಲವಾದ್ದರಿಂದ ಎರಡೂ ಶ್ರುತಿಗಳು ಅಪ್ರಮಾಣವಾಗುತ್ತವೆ ಎಂದು ಪೂರ್ವಪಕ್ಷ ಮಾಡಲಾಗಿದೆ. ಸಿದ್ಧಾಂತದಲ್ಲಿ ಜೀವನಿಗೆ ಬ್ರಹ್ಮಾಂಶತ್ವವನ್ನು ನಿರ್ಣಯ ಮಾಡಲು ಸಾಧ್ಯವಿದೆ ಎಂದು ಹೇಳಲಾಗಿದೆ. ಅಂಶತ್ವವನ್ನು ವಿಧಾನ ಮಾಡಿದರೆ ಅದು ಭಿನ್ನಾಂಶತ್ವಕ್ಕೆ ವಿಧಾಯಕವಾಗುತ್ತದೆ. ಅಂಶತ್ವವನ್ನು ನಿಷೇಧ ಮಾಡಿದರೆ ಸ್ವರೂಪಾಂಶದ ನಿಷೇಧಕ್ಕೆ ವಿಷಯವಾಗುತ್ತದೆಂದು ನಿರ್ಣಯ ಮಾಡಲು ಸಾಧ್ಯವಿದೆ. ಆದ್ದರಿಂದ ಸಂಶಯಕೋಟಿಯನ್ನು ಹೀಗೆ ತಿಳಿಯಬೇಕು – ಜೀವರಿಗೆ ಬ್ರಹ್ಮಾಂಶತ್ವವನ್ನು ನಿರ್ಣಯ ಮಾಡಲು ಸಾಧ್ಯವಿಲ್ಲ ಎಂದು ಹೇಳಬೇಕೋ? ಅಥವಾ ಸಾಧ್ಯವಿದೆ ಎಂದು ಹೇಳಬೇಕೋ? ಎಂಬುದು ಪ್ರಧಾನ ಸಂಶಯ. ಅದಕ್ಕಾಗಿ ಅಂಶತ್ವವನ್ನು ವಿಧಾನ ಮಾಡುವ ಹಾಗೂ ನಿಷೇಧ ಮಾಡುವ ವಾಕ್ಯಗಳು ಏಕರೂಪವಾದ ಅಂಶತ್ವವಿಷಯಕವೋ ಅಥವಾ ವಿಧಿಯು ಭಿನ್ನಾಂಶತ್ವ ವಿಷಯವಾಗಿದೆ, ನಿಷೇಧವು ಸ್ವರೂಪಾಂಶತ್ವ ವಿಷಯವಾಗಿದೆ ಎಂದು ಹೇಳಬೇಕೋ?

**सन्देहटीकायां तु सन्देहात्मकपूर्वपक्षकोटिकीर्तनेन तद्विरुद्धा सिद्धान्तकोटिरर्थलब्धेति पृथङ्नोक्ता । अत्र भाष्ये सन्देहकारणं श्रुतिविगानमेवोक्तम् । नतु पूर्वपक्षेऽनंशत्वनिर्णये हेतुरुक्तः ।**

ಸಂದೇಹದ ಟೀಕೆಯಲ್ಲಿ ಹೀಗೆ ಹೇಳಲಾಗಿದೆ – 'ಪ್ರಕೃತಃ ಜೀವ ಏವ ವಿಷಯಃ ಬ್ರಹ್ಮಾಂಶೋ ನ ವಾ ಇತಿ ಸಂದೇಹಃ ಉಭಯತ್ರ ಶ್ರುತಿಃ ಸಂದೇಹಬೀಜಮ್' ಎಂದು. ಇದನ್ನು ನೋಡಿದಾಗ 'ಅಂಶೋವಾ ನ ವಾ' ಎಂದು ಹೇಳಿದ್ದನ್ನು ನೋಡಿದಾಗ ಜೀವನು ಅಂಶನಲ್ಲ ಎಂಬುದು ಅಧಿಕರಣದ ಪೂರ್ವಪಕ್ಷ, ಅಂಶನಾಗಿದ್ದಾನೆ ಎಂಬುದು ಸಿದ್ಧಾಂತ ಎಂದು ತಿಳಿಯುತ್ತದೆ. ಆದರೆ ಹೀಗೆ ತಿಳಿಯಬಾರದು. ಟೀಕೆಯಲ್ಲಿ ಪೂರ್ವಪಕ್ಷಕೋಟಿಯನ್ನಷ್ಟೇ ಹೇಳಲಾಗಿದೆ, ಸಿದ್ಧಾಂತ ಕೋಟಿಯನ್ನು ಹೇಳಿಯೇ ಇಲ್ಲ. ನಿರ್ಣಯ ಮಾಡಲು ಬರುತ್ತದೆ ಎಂಬ ಸಿದ್ಧಾಂತವನ್ನು ಟೀಕೆಯಲ್ಲಿ ಹೇಳಿರುವುದೇ ಇಲ್ಲ. ಆದ್ದರಿಂದ ಸಂದೇಹಟೀಕೆಯಲ್ಲಿ ಸಂದೇಹಾತ್ಮಕವಾದ ಪೂರ್ವಪಕ್ಷಕೋಟಿಯನ್ನು ಮಾತ್ರ ಹೇಳಿದ್ದರಿಮ್ದ ಅದಕ್ಕೆ ವಿರುದ್ಧವಾದ ಸಿದ್ಧಾಂತ ಕೋಟಿಯನ್ನು ಅರ್ಥಾತ್ ಲಭ್ಯವಾಗುತ್ತದೆ. ಈ ಅಭಿಪ್ರಾಯದಿಂದ ಟೀಕೆಯಲ್ಲಿ ಸಿದ್ಧಾಂತ ಕೋಟಿಯನ್ನು ಹೇಳಿರುವುದಿಲ್ಲ ಎಂದು ತಿಳಿಯಬೇಕು.

ಆಚಾರ್ಯರು ಭಾಷ್ಯದಲ್ಲಿ ಸಂದೇಹಕ್ಕೆ ಕಾರಣವಾದ ಶ್ರುತಿವಿಧಾನವನ್ನಷ್ಟೇ ಹೇಳಿದ್ದಾರೆ. ಜೀವನು ಅಂಶನಲ್ಲ ಎಂಬ ವಿಷಯದಲ್ಲಿ ಯಾವುದೇ ಹೇತುವನ್ನು ಹೇಳಿರುವುದಿಲ್ಲ. ಅಧಿಕರಣದ ಮುಂದಿನ ಭಾಗದಲ್ಲೂ ಕೂಡ ಈ ವಿಷಯವು ಕಾಣಿಸುತ್ತಿಲ್ಲ.

**न्यायविवरणेऽपि. नानाश्रुतेरप्रामाण्यमित्येव पूर्वपक्षयित्वा प्रामाण्येनैव सिद्धान्तितम् । अनंशत्वेन पूर्वपक्षकरणं सिद्धान्ताविरुद्धं च । सिद्धान्तेऽपि मुख्यांशत्वाभावात् । अतः टीकाकारोऽप्यनध्यवसायेनैव पूर्वपक्षमाह – निर्णयो न युज्यत इति पूर्वपक्ष इति ।।**

ನ್ಯಾಯವಿವರಣದಲ್ಲೂ ಕೂಡ ಅನೇಕ ಶ್ರುತಿಗಳಿಗೆ ಅಪ್ರಾಮಾಣ್ಯವನ್ನು ಪೂರ್ವಪಕ್ಷ ಮಾಡಿ ಪ್ರಾಮಾಣ್ಯ ಸ್ಥಾಪನೆಯ ಮೂಲಕ ಸಿದ್ಧಾಂತವನ್ನು ಮಾಡಿದ್ದಾರೆ. ಒಂದುವೇಳೆ ಅನಂಶನಾಗಿದ್ದಾನೆಂದು ಪೂರ್ವಪಕ್ಷ ಮಾಡಿ ಅಂಶನಾಗಿದ್ದಾನೆಂದು ಸಿದ್ಧಾಂತ ಮಾಡಿದರೆ ಪೂರ್ವಪಕ್ಷ ಹಾಗೂ ಸಿದ್ಧಾಂತಕ್ಕೆ ಪರಸ್ಪರ ವಿರೋಧವೇ ಬರುವುದಿಲ್ಲ. ಏಕೆಂದರೆ ಜೀವನು ಪರಮಾತ್ಮನ ಸ್ವರೂಪಾಂಶನಾಗುವುದಿಲ್ಲವೆಂದು ಸಿದ್ಧಾಂತಿಗಳಾದ ನಾವೂ ಕೂಡ ಒಪ್ಪಿದ್ದೇವೆ. ಸಿದ್ಧಾಂತದಲ್ಲಿ ಜೀವನು ಪರಮಾತ್ಮನ ಮುಖ್ಯವಾದ ಅಂಶನಾಗಿದ್ದಾನೆಂದು ಒಪ್ಪಿರುವುದೇ ಇಲ್ಲ. ಆದ್ದರಿಂದ ಟೀಕಾಕಾರರೂ ಕೂಡ ಅಂಶನೋ, ಅಲ್ಲವೋ? ಎಂಬುದನ್ನು ನಿರ್ಣಯ ಮಾಡಲು ಸಾಧ್ಯವಿಲ್ಲ ಎಂಬುದೇ ಪೂರ್ವಪಕ್ಷ ಎಂದು ಹೇಳಿದ್ದಾರೆ. ಇದನ್ನೇ 'ನಿರ್ಣಯೋ ನ ಯುಜ್ಯತೇ ಇತಿ ಪೂರ್ವಪಕ್ಷಃ' ಎಂಬ ಟೀಕಾವಾಕ್ಯವು ಹೇಳುತ್ತಿದೆ.

**सिद्धान्ते त्वयं भावः । जीवस्य ब्रह्मांशत्वं अत एव तदुपजीवकत्वेन तच्छेषत्वरूपः सम्बन्ध एव मुमुक्षुणाऽवश्यं ज्ञेयः ।**

ಸಿದ್ಧಾಂತದ ಅಭಿಪ್ರಾಯ ಹೀಗಿದೆ – ಜೀವನು ಬ್ರಹ್ಮನ ಅಂಶನಾಗಿದ್ದಾನೆ ಎಂದರೆ ತದುಪಜೀವಕತ್ವೇನ ತಚ್ಛೇಷತ್ವರೂಪ ಸಂಬಂಧವುಳ್ಳವನಾಗಿದ್ದಾನೆ ಎಂದಷ್ಟೇ ಅರ್ಥ. ಹೀಗೆ ಅಂಶತ್ವವು ಸಂಬಂಧರೂಪವೆಂದು ಮುಮುಕ್ಷುವಾದವನು ತಿಳಿಯಬೇಕು.

**भाष्योक्तास्वंशत्वपरासु ''अंशो ह्येष परस्य नाना ह्येनं व्यपदिशन्ति । पितेति पुत्रेति भ्रातेति सखेति च'' इत्यादिश्रुतिषु, ''पुत्रभ्रातृसखित्वेन स्वामित्वेन यतो हरिः । बहुधा गीयते वेदैर्जीवोंऽशस्तस्य तेन तु'' इत्यादिस्मृतिषु च ''अवः परेण पितरम्'' इत्यादिभाष्योक्त श्रुतिस्मृतिसिद्धपितृत्वपुत्रत्वस्वामित्वभ्रातृत्वसखित्वादि-प्रकारैर्भगवत उपजीव्यत्वरूपसम्बन्धव्यपदेश एव जीवस्यांशत्वे हेतुरुक्तः ।**

ಜೀವನು ಪರಮಾತ್ಮನ ಅಂಶನಾಗಿದ್ದಾನೆ, ಪರಮಾತ್ಮನು ಅಂಶಿಯಾಗಿದ್ದಾನೆ ಎಂದು ಹೇಗೆ ತಿಳಿಯುತ್ತದೆ ಎಂದರೆ ಭಾಷ್ಯದಲ್ಲಿ ಅಂಶತ್ವವನ್ನು ಹೇಳುವ ಶ್ರುತಿಗಳಲ್ಲಿ ಜೀವನು ಪರಮಾತ್ಮನ ಅಂಶನೆಂದು ಹೇಳಿ, ಏಕೆ? ಎಂಬ ಪ್ರಶ್ನೆಗೆ ಅನೇಕ ಬಗೆಯ ಸಂಬಂಧಗಳನ್ನು ಹೇಳಲಾಗಿದೆ. ಆದ್ದರಿಂದ ಅಂಶತ್ವವು ತಚ್ಛೇಷತ್ವರೂಪವಾದ ಸಂಬಂಧವಾಗಿದೆ ಎಂದು ತಿಳಿಯಬೇಕು. ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಸ್ಮೃತಿಗಳು ಹೀಗಿವೆ – 'ಅಂಶೋ ಹ್ಯೇಷ ಪರಸ್ಯ ನಾನಾ ಹ್ಯೇನಂ ವ್ಯಪದಿಶಂತಿ' ಯಾವ ಕಾರಣದಿಂದ ನಾನಾ ಸಂಬಂಧದಿಂದ ಪರಮಾತ್ಮನನ್ನು ಹೀಗೆ ಕರೆಯುತ್ತಾರೆ. ತಂದೆ, ಮಗ, ಅಣ್ಣ, ಗೆಳೆಯ ಇತ್ಯಾದಿಯಾಗಿ ಸಂಬಂಧವ್ಯಪದೇಶವನ್ನು ಅಂಶತ್ವದಲ್ಲಿ ಹೇತುವನ್ನಾಗಿ ನೀಡಲಾಗಿದೆ. ಮತ್ತು

ಪುತ್ರಭ್ರಾತೃಸಖಿತ್ವೇನ ಸ್ವಾಮಿತ್ವೇನ ಯತೋ ಹರಿಃ ।
ಬಹುಧಾ ಗೀಯತೇ ವೇದೈರ್ಜೀವೋಂऽಶಸ್ತಸ್ಯ ತೇನ ತು ॥

ಯಾವ ಕಾರಣದಿಂದ ಶ್ರೀಹರಿಯು ಮಗ, ಸಹೋದರ, ಗೆಳೆಯ, ಸ್ವಾಮಿ ಇತ್ಯಾದಿಯಾಗಿ ಅನೇಕ ರೀತಿಯಲ್ಲಿ ವೇದಗಳಿಂದ ಸ್ತುತ್ಯನಾಗಿದ್ದಾನೋ, ಆದ್ದರಿಂದ ಜೀವನು ಪರಮಾತ್ಮನ ಅಂಶನಾಗಿದ್ದಾನೆ ಎಂದು ಸ್ಮೃತಿಯು ಸ್ಪಷ್ಟವಾಗಿ ಹೇಳುತ್ತಿದೆ.

ಮತ್ತು 'ಅವಃ ಪರೇಣ ಪಿತರಂ' ಉತ್ತಮನಾದ ಪರಮಾತ್ಮನಿಗಿಂತ ಅವರನಾದ ಜೀವನು ಜಗತ್ತಿನ ತಂದೆಯಾದ ಪರಮಾತ್ಮನನ್ನು ಯಥಾರ್ಥವಾಗಿ ತಿಳಿಯುತ್ತಾನೆ. ಹೀಗೆ ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಸ್ಮೃತಿಗಳಿಂದ ಪಿತೃತ್ವ-ಪುತ್ರತ್ವ-ಸ್ವಾಮಿತ್ವ-ಭ್ರಾತೃತ್ವ ಮೊದಲಾದ ಪ್ರಕಾರಗಳಿಂದ ಭಗವಂತನು ಜೀವ್ಯರಿಗೆ ಉಪಜೀವ್ಯನಾಗಿದ್ದಾನೆ ಎಂಬುದಾಗಿ ಉಪಜೀವ್ಯತ್ವರೂಪವಾದ ಸಂಬಂಧವು ತಿಳಿಯುತ್ತದೆ. ಇಂತಹ ಸಂಬಂಧವೇ ಪರಮಾತ್ಮನ ಅಂಶನೆನ್ನಲು ಹೇತುವಾಗುತ್ತದೆ.

**''नैवांशो न सम्बन्ध'' इत्याद्यनंशत्वश्रुतिषु चानंशत्वे सम्बन्धाभावो हेतुरुक्तः। टीकायामपि ''तत्संबन्धित्वमेवांशत्वम्'' इत्युक्तम् ।**

'ನೈವಾಂಶಃ ನ ಸಂಬಂಧಃ' ಇತ್ಯಾದಿಯಾಗಿ ಅನಂಶತ್ವ ಶ್ರುತಿಗಳಲ್ಲಿ ಅನಂಶತ್ವವಿಷಯಕ್ಕೆ ಸಂಬಂಧಾಭಾವವನ್ನು ಹೇತುವಾಗಿ ಹೇಳಲಾಗಿದೆ. ಟೀಕೆಯಲ್ಲೂ ಕೂಡ 'ತತ್ಸಂಬಂಧಿತ್ವಮೇವಾಂಶತ್ವಮ್' ಎಂಬುದಾಗಿ ಸಂಬಂಧಿಯನ್ನೇ ಅಂಶತ್ವವೆಂದು ಕರೆಯಲಾಗಿದೆ. ಆದ್ದರಿಂದ ಅಂಶವು ಸಂಬಂಧರೂಪವೆಂದು ಸ್ಪಷ್ಟವಾಗುತ್ತದೆ.

**परैरपि ''सोऽन्वेष्टव्यः स विजिज्ञासितव्यः । य आत्मानमन्तरो यमयतीत्यादिसम्बन्धव्यपदेश एव नानाव्यपदेश'' इत्युक्तम् । परं तु तन्मते सम्बन्धो मिथ्या ।**

ನಾವಷ್ಟೇ ಅಲ್ಲ ಅದ್ವೈತಿಗಳೂ ಕೂಡ ಅಂಶವು ಸಂಬಂಧರೂಪವೆಂದೇ ಹೇಳಿದ್ದಾರೆ. 'ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ । ಯ ಆತ್ಮಾನಮಂತರೋ ಯಮಯತಿ' ಇತ್ಯಾದಿಯಾಗಿ ಸಂಬಂಧವ್ಯಪದೇಶವೇ ನಾನಾ ವ್ಯಪದೇಶವೆಂದು ಕರೆಸಿಕೊಳ್ಳುತ್ತದೆಂಬುದು ಅವರ ವಾಕ್ಯ. ಆದರೆ ಇಷ್ಟು ಮಾತ್ರ ವ್ಯತ್ಯಾಸ – ಅವರು ಸಂಬಂಧವನ್ನು ಮಿಥ್ಯಾ ಎನ್ನುತ್ತಾರೆ, ನಾವು ಸತ್ಯ ಎನ್ನುತ್ತೇವೆ.

**नच श्रुत्यैव श्रौतांशशब्दार्थ उक्तेऽप्यन्योर्थो युक्तः । नच कस्यापि मते जीवस्य तन्त्वादिवदंशत्वमस्ति । नियतं च तन्त्वादेरंशस्यांशिनं प्रति शेषत्वम् । तस्मात्पुत्रः पितुरिव भृत्यादिः स्वाम्यादेरिव च जीवोऽपीश्वरपोष्यत्वादिना तद्गर्भवासित्वेन तदन्तर्भूतत्वादीश्वरस्यांशः ।**

ಶ್ರುತಿಯಲ್ಲಿ ಪ್ರಯುಕ್ತವಾದ ಅಂಶ ಶಬ್ದಕ್ಕೆ ಸ್ವತಃ ಶ್ರುತಿಯೇ ಸಂಬಂಧರೂಪವಾದ ಅರ್ಥವನ್ನು ಹೇಳಿದೆ. ಹೀಗಿರುವಾಗ ಬೇರೆ ಅರ್ಥವನ್ನು ಕಲ್ಪನೆ ಮಾಡುವುದು ಅಯುಕ್ತವಾಗಿದೆ.

ಯಾರ ಮತದಲ್ಲೂ ಕೂಡ ತಂತುವು ಪಟಕ್ಕೆ ಹೇಗೆ ಅಂಶವೋ ಹಾಗೆ ಜೀವನು ಪರಮಾತ್ಮನ ಅಂಶನಾಗಿದ್ದಾನೆಂದು ಒಪ್ಪಿರುವುದಿಲ್ಲ. ಏಕೆಂದರೆ ತಂತು ಪಟದ ಅಂಶವಷ್ಟೇ ಅಲ್ಲ, ಪಟಕ್ಕೆ ಆರಂಭಕವೂ ಕೂಡ ಆಗಿದೆ. ಶೇಷತ್ವವಿದ್ದಲ್ಲೆಲ್ಲಾ ಅಂಶವೆಂಬ ವ್ಯವಹಾರವು ಇರುವುದಿಲ್ಲ. ಎಲ್ಲಿ ಉಪಜೀವ್ಯ ಉಪಜೀವಕಭಾವವಿದೆಯೋ ಅಲ್ಲಿ ಎಲ್ಲೆಡೆಯೂ ಅಂಶ ಅಂಶಿ ಎಂಬ ವ್ಯವಹಾರವಿರುವುದು ಕಂಡಿಲ್ಲ. ತಂತುಪಟಾದಿಗಳಲ್ಲಿ ಅಂಶ-ಅಂಶಿಭಾವವಿದೆ. ಅಲ್ಲಿ ಉಪಜೀವ್ಯ ಉಪಜೀವಕಭಾವ ಇದ್ದೇ ಇರುತ್ತದೆ. ಆದ್ದರಿಂದ ಅಂಶಾಂಶಿಭಾವವಿದ್ದಲ್ಲಿ ಉಪಜೀವ್ಯಉಪಜೀವಕಭಾವ ಇದ್ದೇ ಇರುತ್ತದೆ. ಪಟವು ನಿಯಮೇನ ಅಂಶಿಯಾಗಿರುತ್ತದೆ, ತಂತುವು ಅಂಶವಾಗಿರುತ್ತದೆ. ಇಲ್ಲಿ ಪಟವು ಉಪಜೀವ್ಯವೇ ಆಗಿದೆ, ತಂತು

ಉಪಜೀವಕವೇ ಆಗಿದೆ. ಆದ್ದರಿಂದ ತಂದೆಗೆ ಮಗನಂತೆ, ಸ್ವಾಮಿಗೆ ಭೃತ್ಯನಂತೆ, ಈಶ್ವರನಿಗೆ ಜೀವನು ಅಂಶನಾಗಿದ್ದಾನೆ. ಏಕೆಂದರೆ ಈಶ್ವರನಿಂದ ಜೀವನು ಪೋಷಣನಾಗಿದ್ದಾನೆ. ಆವನ ಗರ್ಭದಲ್ಲಿ ನೆಲೆಸಿದ್ದಾನೆ. ಆದ್ದರಿಂದಲೇ ತದಂತರ್ಭೂತನಾಗಿರುವುದರಿಂದ ಜೀವನು ಈಶ್ವರನ ಅಂಶನೆನಿಸಿಕೊಳ್ಳುತ್ತಾನೆ.

**''यो नः पिता पतिं विश्वस्यात्मेश्वरम्'' इत्यादिश्रुतेः । ''पितासि लोकस्य चराचरस्य पितामहस्य जगतो माता धाता पितामाहः । गतिर्भर्ता प्रभुस्साक्षी निवासश्शरणं सुहृत् । पितेव पुत्रस्य सखेव सख्युः पिता माता सुहृद्बंधुर्भ्राता पुत्रस्त्वमेव मे'' इत्यादिस्मृतेश्च ।**

'ಯೋ ನಃ ಪಿತಾ ಪತಿಂ ವಿಶ್ವಸ್ಯಾತ್ಮೇಶ್ವರಮ್' ಇತ್ಯಾದಿ ಶ್ರುತಿಯಲ್ಲಿ ಪಿತಾ ಮತ್ತು ಪತಿ ಎಂಬ ಶಬ್ದಕ್ಕೆ ಪೋಷಕ ಎಂಬರ್ಥವೇ ಪ್ರಸಿದ್ಧವಾಗಿವೆ. ಮತ್ತು 'ಪಿತಾಸಿ ಲೋಕಸ್ಯ ಚರಾಚರಸ್ಯ' ಎಂಬ ಸ್ಮೃತಿವಾಕ್ಯದಲ್ಲಿ 'ಪಿತಾಮಹಸ್ಯ ಜಗತಃ ಮಾತಾ ಧಾತಾ ಪಿತಾಮಹಃ' ಎಂಬಲ್ಲಿ 'ಗತಿರ್ಭರ್ತಾ ಪ್ರಭುಸ್ಸಾಕ್ಷೀ ನಿವಾಸಶ್ಶರಣಂ ಸುಹೃತ್' ಎಂಬ ವಾಕ್ಯದಲ್ಲಿ 'ಪಿತೇವ ಪುತ್ರಸ್ಯ ಸಖೇವ ಸಖ್ಯುಃ' ಎಂಬ ಸ್ಮೃತಿವಾಕ್ಯದಲ್ಲಿ 'ಪಿತಾ ಮಾತಾ ಸುಹೃದ್ಬಂಧುರ್ಭ್ರಾತಾ ಪುತ್ರಸ್ತ್ವಮೇವ ಮೇ' ಎಂಬ ವಾಕ್ಯದಲ್ಲೂ ಕೂಡ ಪರಮಾತ್ಮನು ಜೀವರುಗಳಿಗೆ ಉಪಜೀವ್ಯನಾಗಿದ್ದಾನೆ ಎಂದು ಹೇಳಲಾಗಿದೆ.

**भगवतः पुत्रत्वमपि पुन्नाम्नो नरकात्त्राणकर्तृत्वादुपजीव्यत्वेनैव । जीवस्य व्यञ्जकत्वरूपं पितृत्वमप्यभिव्यक्तेन भगवता संरक्ष्यत्वादुपजीवकत्वेनैव ।**

ಭಗವಂತನು ಜೀವರುಗಳಿಗೆ ಪುತ್ರನಾಗಿದ್ದಾನೆ ಎಂದರೆ 'ಪುತ್' ಎಂಬ ನರಕದಿಂದ ಜೀವರನ್ನು ರಕ್ಷಣೆ ಮಾಡಿದ್ದಾನೆ. ಆದ್ದರಿಂದ ಉಪಜೀವ್ಯನಾಗಿದ್ದಾನೆ ಎಂಬ ಕಾರಣದಿಂದಲೇ ಜೀವರುಗಳಿಗೆ ಪರಮಾತ್ಮನು ಪುತ್ರ ಎಂದು ಕರೆಸಿಕೊಳ್ಳುತ್ತಾನೆ. ಹಾಗಾದರೆ ಪರಮಾತ್ಮನು ಜೀವರಿಗೆ ಪುತ್ರರಾದರೆ, ಜೀವರು ಪರಮಾತ್ಮನಿಗೆ ತಂದೆಯಾದರಲ್ಲವೇ? ಎಂದರೆ ಅದು ವ್ಯಂಜಕರೂಪತ್ವವಾದ ಪಿತೃತ್ವವಷ್ಟೇ ಜೀವರಿಗೆ ಬರುತ್ತದೆ. ಪರಮಾತ್ಮನನ್ನು ತಮ್ಮ ಮಾತಿನ ಮೂಲಕ ಸಮರ್ಥನೆ ಮಾಡುವುದರಿಂದ ತಂದೆ ಎಂದು ಕರೆಸಿಕೊಳ್ಳುತ್ತಾರೆ. ಹೀಗೆ ಅಭಿವ್ಯಕ್ತನಾದ ಭಗವಂತನಿಂದ ಜೀವರುಗಳು ಸಂರಕ್ಷ್ಯರಾಗಿದ್ದಾರೆ ಮತ್ತು ಉಪಜೀವಕರಾಗಿದ್ದಾರೆ. ಈ ಕಾರಣದಿಂದ ಪರಮಾತ್ಮನಲ್ಲಿ ಪುತ್ರತ್ವವನ್ನು ತಿಳಿಯಬೇಕು.

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**अंशो नानाव्यपदेशात्** ।। ''जीवस्येश्वरसम्बन्धित्वव्यपदेशात्'' इति टीकासूचितामाह – **परात्त्विति** ।। ''किमीश्वरांशो न वा'' इति संशयटीकां ''इति निर्णयो न युज्यते'' इत्युत्तरटीकानुरोधेन व्यनक्ति ।। **अत्र जीवानामिति** ।।

'ಜೀವಸ್ಯ ಈಶ್ವರಸಂಬಂಧಿತ್ವವ್ಯಪದೇಶಾತ್' ಜೀವನಿಗೆ ಉಪಜೀವಕತ್ವ ಎಂಬ ಈಶ್ವರನ ಸಂಬಂಧವಿದೆ ಎಂದು ಸಿದ್ಧಾಂತಟೀಕೆಯಲ್ಲಿ ಹೇಳಿದ್ದಾರೆ. ಇದರಿಂದ ಪೂರ್ವಾಧಿಕರಣದ ಸಂಗತಿಯನ್ನು ಪರಾತ್ತು ಇತ್ಯಾದಿಯಾಗಿ ಗ್ರಂಥದಲ್ಲಿ ಹೇಳಿದ್ದಾರೆ.

ಪೂರ್ವಪಕ್ಷ ಮಾಡುವಾಗ 'ಇತಿ ನಿರ್ಣಯೋ ನ ಯುಜ್ಯತೇ' ನಿರ್ಣಯವು ಸಾಧ್ಯವಿಲ್ಲವೆಂದು ಹೇಳಿದ್ದಾರೆ. ಇದಕ್ಕೆ ಅನುಸಾರಿಯಾಗಿ 'ಕಿಂ ಈಶ್ವರಾಂಶೋ ನ ವಾ' ಎಂಬ ಸಂಶಯಟೀಕೆಗೆ ವ್ಯಾಖ್ಯಾನ ಮಾಡಬೇಕು ಎಂಬ ದೃಷ್ಟಿಯಿಂದ 'ಅತ್ರ ಜೀವಾನಾಂ' ಇತ್ಯಾದಿ ಗ್ರಂಥವು ಹೊರಟಿದೆ.

**प्रकाशः – विधिनिषेधाविति** ।। ''अंशा एव हीमे जीवा'' इति विधिः । ''नैवांश'' इति निषेधः ।। **सिद्धान्तकोटिरिति** ।। एतेन ईश्वरांश एवेति टीका योज्येति दर्शितम् । बीजोक्तिपूर्वं टीकां व्याचष्टे ।। **अत्र भाष्य इति** ।।

'ವಿಧಿನಿಷೇಧೌ' ಎಂದರೆ 'ಅಂಶಾ ಏವ ಹಿಮೇ ಜೀವಾಃ' ಎಂಬ ವಿಧಿವಾಕ್ಯವೆಂದು 'ನೈವಾಂಶಃ' ಎಂಬುದು ನಿಷೇಧ ವಾಕ್ಯವೆಂದು ತಿಳಿಯಬೇಕು. 'ಸಿದ್ಧಾಂತಕೋಟಿಃ' ಎಂಬುದರ ಅಭಿಪ್ರಾಯ ಹೀಗಿದೆ– 'ಪ್ರಕೃತಃ ಜೀವಃ ಏವ ವಿಷಯಃ ಸಃ ಈಶ್ವರಾಂಶೋ ನ ವಾ' ಈ ರೀತಿಯಾಗಿ ಟೀಕೆಯಲ್ಲಿ ಅಧ್ಯಾಹಾರವನ್ನು ಮಾಡಬೇಕು. ಈ ರೀತಿಯಲ್ಲಿ ಅಧ್ಯಾಹಾರ ಮಾಡಲು ಏನು ಕಾರಣ? ಎಂಬುದಕ್ಕೆ ಕಾರಣವನ್ನು 'ಅತ್ರ ಭಾಷ್ಯೇ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡುತ್ತಿದ್ದಾರೆ.

**प्रकाशः** – अत्र तत्वप्रदीपे ''अन्यथा च'' इति सौत्रांशस्य ''नानाव्यपदेशादन्यथा च'' इति पूर्वेणान्वयमुपेत्य पितृपुत्रत्वादिनानाप्रकार-सम्बन्धव्यपदेशात्सम्बन्धराहित्येन च व्यपदेशादित्यर्थ उक्तः । टीकायां तु ''अन्यथा चापि दाशकितवादित्वम्'' इत्युत्तरेणान्वयमुपेत्य भेदेनाभेदेन चाध्ययनमर्थ उक्तः। तद्योजनाद्वयमप्यत्र युक्तमेव । योजनाद्वयेऽपि भाष्ये स्वारस्यदर्शनात् । तत्र सम्बन्धतद्राहित्याभ्यां व्यपदेशरूपाद्यहेतावंशत्वरूपं साध्यं नित्यमुपजीवकत्वरूपम्। भेदाभेदाभ्यामध्ययनरूपद्वितीयहेतौ ब्रह्मांशत्वं नाम ततो न्यूनत्वे सति किञ्चित्तत्सदृशत्वमिति भावेन तत्वप्रदीपरीत्या टीकां नयन्नाद्यपक्षं तावद्विवृणोति ।। जीवस्येत्यादिना किं चेत्यतः प्राक्तनेन ग्रन्थेन ।। सम्बन्ध एव न त्वभेद इत्यर्थः ।

ಸೂತ್ರಯೋಜನೆಯನ್ನು ತತ್ತ್ವಪ್ರದೀಪದಲ್ಲಿ ಮಾಡಿದ ರೀತಿ ಹಾಗೂ ಸೂತ್ರಯೋಜನೆಯಲ್ಲಿ ಮಾಡಿದ ರೀತಿಯು ವಿಭಿನ್ನವಾಗಿದೆ. 'ಅಂಶೋ ನಾನಾವ್ಯಪದೇಶಾತ್' ಎಂಬ ಸೂತ್ರದ ಮಧ್ಯದಲ್ಲಿ 'ಅನ್ಯಥಾ' ಎಂಬ ಪದವಿದೆ. ತತ್ವಪ್ರದೀಪದಲ್ಲಿ 'ನಾನಾವ್ಯಪದೇಶಾತ್ ಅನ್ಯಥಾವ್ಯಪದೇಶಾತ್' ಎಂಬುದಾಗಿ ಅನ್ವಯವನ್ನು ಅಂಗೀಕರಿಸಿದ್ದಾರೆ. ಮಧ್ಯದಲ್ಲಿರುವ ಅನ್ಯಥಾ ಪದವನ್ನು ಹಿಂದಿನ ನಾನಾವ್ಯಪದೇಶಾತ್ ಎಂಬುದರ ಜೊತೆ ಅನ್ವಯವನ್ನು ಅಂಗೀಕಾರ ಮಾಡಿದ್ದಾರೆ. ಪಿತೃತ್ವ, ಪುತ್ರತ್ವ ಎಂಬ ನಾನಾ ಪ್ರಕಾರದ ಸಂಬಂಧದ ವ್ಯಪದೇಶವಿರುವುದರಿಂದ ಮತ್ತು ಸಂಬಂಧರಾಹಿತ್ಯದಿಂದಲೂ ವ್ಯಪದೇಶವಿರುವುದರಿಂದ ಎಂಬುದಾಗಿ ತತ್ವಪ್ರದೀಪದಲ್ಲಿ ಸೂತ್ರಕ್ಕೆ ಅರ್ಥವನ್ನು ಹೇಳಲಾಗಿದೆ. ಆದರೆ ಟೀಕೆಯಲ್ಲಿ ಅನ್ಯಥಾ ಎಂಬ ಪದಕ್ಕೆ ಹಿಂದೆ ಅನ್ವಯವನ್ನು ಮಾಡದೇ 'ಅನ್ಯಥಾ ಚಾಪಿ ದಾಶಕಿತವಾದಿತ್ವಮ್' ಎಂಬುದಾಗಿ ಮುಂದಿನ ಪದಗಳ ಜೊತೆ ಅನ್ವಯವನ್ನು ಮಾಡಿದ್ದಾರೆ. ದಾಶರೆನಿಸಿದ ಮೀನುಗಾರರು, ವಂಚಕರೆನಿಸಿದ ಕಿತವರು ಇವರೆಲ್ಲರೂ ಬ್ರಹ್ಮರೇ ಆಗಿದ್ದಾರೆಂದು ಒಂದು ಶ್ರುತಿ ಹೇಳುತ್ತದೆ. ಇದಕ್ಕೆ ವಿಪರೀತವಾಗಿ ಅನ್ಯಥಾ = ಭೇದವನ್ನು ಪ್ರತಿಪಾದನೆ

ಮಾಡುವ ಶ್ರುತಿಯೂ ಕೂಡ ಇದೆ. ಹೀಗೆ ಭೇದಪ್ರತಿಪಾದಕವಾದ ಶ್ರುತಿ ಹಾಗೂ ವಿರುದ್ಧವಾದ ಅಭೇದ ಪ್ರತಿಪಾದಕವಾದ ಶ್ರುತಿಯು ಇದೆ ಎಂಬುದಾಗಿ ವ್ಯಾಖ್ಯಾನವನ್ನು ಮಾಡಿದ್ದಾರೆ.

ವಿಚಾರ ಮಾಡಿದಾಗ ಈ ಎರಡು ಬಗೆಯ ಟೀಕಾವಾಕ್ಯಗಳು ಯುಕ್ತವೇ ಆಗುತ್ತವೆ. ತತ್ತ್ವಪ್ರದೀಪಕಾರರ ಪ್ರಕಾರ 'ಸಂಬಂಧವ್ಯಪದೇಶಾತ್' ಹಾಗೂ 'ಸಂಬಂಧರಾಹಿತ್ಯವ್ಯಪದೇಶಾತ್' ಎಂಬುದಾಗಿ ಹೇತುವನ್ನು ವಿವಕ್ಷಿಸಿದಾಗ ನಿತ್ಯಂ ಉಪಜೀವಕತ್ವ ಎಂಬುದು ಸಾಧ್ಯವಾಗುತ್ತದೆ. ಜೀವಃ = ನಿತ್ಯಂ, ಉಪಜೀವ್ಯ-ಉಪಜೀವಕಭಾವಸಂಬಂಧವಾನ್ ನಾನಾಪ್ರಕಾರಸಂಬಂಧವ್ಯಪದೇಶಾತ್ ಸಂಬಂಧರಾಹಿತ್ಯವ್ಯಪದೇಶಾತ್ ಎಂಬುದಾಗಿ ಅನುಮಾನವನ್ನು ಹೇಳಿದಂತಾಯಿತು.

ಟೀಕೆಯ ಪ್ರಕಾರ ಭೇದವ್ಯಪದೇಶಾತ್ ಎಂಬ ಹೇತುವನ್ನು ವಿವಕ್ಷಿಸಿದಾಗ 'ತತೋ ನ್ಯೂನತ್ವೇ ಸತಿ ಕಿಂಚಿತ್ ತತ್ಸಾದೃಶ್ಯ' ಎಂಬುದು ಸಾಧ್ಯವಾಗುತ್ತದೆ. ಈ ಪಕ್ಷದಲ್ಲಿ 'ಜೀವಃ ಬ್ರಹ್ಮಾಂಶಃ' ಎಂಬುದೇ ಪ್ರತಿಜ್ಞೆಯ ಭಾಗವಾಗುತ್ತದೆ. ಅಂಶ ಶಬ್ದಕ್ಕೆ 'ತತೋ ನ್ಯೂನತ್ವೇ ಸತಿ ತತ್ಸಾದೃಶ್ಯಂ' ಎಂದೇಕೆ ಅರ್ಥವನ್ನು ಹೇಳಬೇಕು ಎಂದರೆ ಶ್ರುತಿಯಲ್ಲಿ ಭೇದವ್ಯಪದೇಶ ಹಾಗೂ ಅಭೇದ ವ್ಯಪದೇಶವಿರುವುದರಿಂದ ಎಂಬುದು ಟೀಕೆಯ ಅಭಿಪ್ರಾಯ. ಪ್ರಕೃತ ತತ್ತ್ವಪ್ರದೀಪಕ್ಕೆ ಅನುಸಾರವಾಗಿ ಟೀಕೆಯನ್ನು ವ್ಯಾಖ್ಯಾನ ಮಾಡುತ್ತಾ ಆದ್ಯ ಪಕ್ಷವನ್ನು ವಿವರಣೆ ಮಾಡಲು 'ಜೀವಸ್ಯ' ಎಂಬಲ್ಲಿಂದ ಪ್ರಾರಂಭ ಮಾಡಿ 'ಕಿಂಚ' ಎಂಬ ಪ್ರಾಕ್ತನಗ್ರಂಥದ ತನಕ ವಾಕ್ಯಗಳು ಹೊರಟಿವೆ. ಸಂಬಂಧವೇ ಹೊರತು ಅಭೇದವೆಂದರ್ಥವಲ್ಲ.

**प्रकाशः** – एतेनांशत्वरूपव्यक्तीकरणेन ''अंशो भवत्येव'' इति टीकास्थांशशब्दो विवृतः । ''मां रक्षत्वि'' इत्यादिटीकार्थमाह – **भाष्येति** ।। ''परस्य नान''इत्युपयुक्तांश-मात्रानुवादो न समग्रस्येति न भाष्योक्तविसंवादश्शङ्क्यः । ''समस्तसूत्रार्थे स्मृतिं चाह'' इति टीकोक्तेरत्राद्यपक्षे सङ्गतांशं तावदुदाहरति ।। **पुत्रेति** ।।

ಅಂಶತ್ವ ಎಂದರೆ ಉಪಜೀವಕತ್ವೇನ ತಚ್ಛೇಷತ್ವರೂಪವಾದ ಸಂಬಂಧ ಎಂಬರ್ಥವನ್ನು ಹೇಳಿದ್ದರಿಂದ 'ಅಂಶೋ ಭವತ್ಯೇವ' ಎಂಬ ಅಂಶ ಶಬ್ದವನ್ನು ವ್ಯಾಖ್ಯಾನ ಮಾಡಿದಂತಾಯಿತು. 'ಮಾಂ ರಕ್ಷತು' ಇತ್ಯಾದಿ ಟೀಕೆಯ ಅರ್ಥವನ್ನು ಭಾಷ್ಯ ಇತ್ಯಾದಿ ಗ್ರಂಥದಿಂದ ನಿರೂಪಣೆ ಮಾಡುತ್ತಿದ್ದಾರೆ. ಅಂಶತ್ವ ವಿಷಯದಲ್ಲಿ ಅನೇಕ ಶ್ರುತಿಸ್ಮೃತಿಗಳನ್ನು ಪ್ರಮಾಣವಾಗಿ ನೀಡುತ್ತಿದ್ದಾರೆ. 'ಅಂಶೋ ಹ್ಯೇಶ' ಎಂಬ ವಾಕ್ಯದ ಅನಂತರ ಭಾಷ್ಯದಲ್ಲಿ ಇನ್ನು ಕೆಲವು ವಾಕ್ಯಗಳಿವೆ ಅದನ್ನೆಲ್ಲಾ ಏಕೆ ಉದಾಹರಿಸಿಲ್ಲ? ಎಂದು ಪ್ರಶ್ನಿಸಬಾರದು. 'ಪರಸ್ಯ ನಾನಾ' ಎಂಬ ಸೂತ್ರದಲ್ಲಿ ಹೇಳಿದ ವಿಷಯಕ್ಕೆ ಉಪಯುಕ್ತವಾದ ಅಂಶವನ್ನಷ್ಟೇ. ಗ್ರಂಥಕಾರರು ಅನುವಾದ ಮಾಡುತ್ತಿದ್ದಾರೆ. ಆದ್ದರಿಂದ ಸಮಗ್ರ ಭಾಷ್ಯದ ವಾಕ್ಯವನ್ನು ಉದಾಹರಿಸಿಲ್ಲ. ಸಮಸ್ತ ಸೂತ್ರಾರ್ಥದಲ್ಲಿ ಭಾಷ್ಯಕಾರರು ಒಂದು ಸ್ಮೃತಿವಾಕ್ಯವನ್ನು ಉದಾಹರಿಸಿದ್ದಾರೆ. ಆ ಸಮಗ್ರ ಶ್ರುತಿಯಲ್ಲಿ ಪ್ರಕೃತಕ್ಕೆ ಉಪಯೋಗವಾದ ಅಂಶವನ್ನಷ್ಟೇ 'ಪುತ್ರ' ಇತ್ಯಾದಿ ಗ್ರಂಥದಲ್ಲಿ ಉದಾಹರಿಸಿದ್ದಾರೆ.

**प्रकाशः** – अत एव सुधायां सौत्रान्त्यभागार्थ एव ''यथोक्तम्'' इत्यादिना''यतो भेदेन'' इत्यादिरेव सम्मतित्वेनोदाहृतो नतु ''पुत्र'' इत्यादि पूर्वभागोऽपीति भावः।।

ಆದ್ದರಿಂದ ನ್ಯಾಯಸುಧೆಯಲ್ಲಿ ಸೂತ್ರದ ಅಂತ್ಯಭಾಗಕ್ಕೆ ಅರ್ಥವನ್ನು ಹೇಳುವಾಗ 'ಯಥೋಕ್ತಮ್' ಇತ್ಯಾದಿಯಾಗಿ ಇಲ್ಲಿ ಉದಾಹರಿಸಿದ ಸ್ಮೃತಿವಾಕ್ಯವನ್ನು ಉದಾಹರಿಸಿದ್ದಾರೆ. 'ಯತೋ ಭೇದೇನ' ಎಂಬ ವಾಕ್ಯವನ್ನೇ ಸ್ಮೃತಿಯಲ್ಲಿ ಸಮ್ಮತಿಯಾಗಿ ಉದ್ಧಹರಿಸಿದ್ದಾರೆಯೇ ಹೊರತು 'ಪುತ್ರ' ಇತ್ಯಾದಿ ಪೂರ್ವಭಾಗವನ್ನು

ಸಮನ್ವಿಯಾಗಿ ಉದಾಹರಿಸಿಲ್ಲ. ಸಂಬಂಧವ್ಯಪದೇಶ ಹಾಗೂ ಸಂಬಂಧರಾಹಿತ್ಯದ ವ್ಯಪದೇಶಕ್ಕೆ ಶ್ರುತಿಯಲ್ಲಿರುವ ಪೂರ್ವಭಾಗವು ಪ್ರಮಾಣವಾಗುತ್ತದೆ. ಭೇದವ್ಯಪದೇಶ ಹಾಗೂ ಅಭೇದವ್ಯಪದೇಶಕ್ಕೆ ಉತ್ತರಭಾಗವು ಪ್ರಮಾಣವಾಗುತ್ತದೆ. ಆದಕ್ಕಾಗಿ ಟೀಕಾಕಾರರು ನ್ಯಾಯಸುಧೆಯಲ್ಲಿ ಭೇದ ಹಾಗೂ ಅಭೇದವಿಷಯಕವಾದ ಭೇದಾಭೇದವ್ಯಪದೇಶವನ್ನು ಹೇಳುವಾಗ ಉತ್ತರ ಭಾಗವನ್ನೇ ಉದಾಹರಿಸಿದ್ದಾರೆ, ಪೂರ್ವಭಾಗವನ್ನು ಉದಾಹರಿಸಿಲ್ಲ ಎಂದಭಿಪ್ರಾಯ.

**प्रकाशः** – श्रुतिस्मृतिसिद्धेति ।। एतेन भाष्ये ''अवः परेण'' इत्याद्युक्तेः पितृत्वादिसिद्धावुपयोगो ''नाना ह्येनम्'' इत्यादेस्तेन प्रकारेण व्यपदेशसिद्धावुपयोगो दर्शितः । एवकारेणाभेदादिव्यपदेशो निवार्यते । अयमेव हेतुरभिमतो न त्वभेद इत्यत्र ज्ञापकमाह – **नैवेति** ।। भाष्योक्तश्रुतिषु चेत्यर्थः ।

ಶ್ರುತಿಸ್ಮೃತಿಸಿದ್ಧ ಇತ್ಯಾದಿ ಗ್ರಂಥದ ಅಭಿಪ್ರಾಯ ಹೀಗಿದೆ – ಭಾಷ್ಯಕಾರರು ಪರಮಾತ್ಮನು ಪಿತೃವಾಗಿದ್ದಾನೆ ಮತ್ತು ಪುತ್ರನಾಗಿದ್ದಾನೆ ಎಂಬ ವಿಷಯದಲ್ಲಿ 'ಮಾಂ ರಕ್ಷತು ವಿಭುರ್ನಿತ್ಯಂ' ಎಂಬ ವಾಕ್ಯವನ್ನು ಉದಾಹರಿಸಿದರು. ಮತ್ತು 'ಅವಃ ಪರೇಣ' ಇತ್ಯಾದಿ ಶ್ರುತಿಯನ್ನೂ ಕೂಡ ಉದಾಹರಿಸಿದ್ದಾರೆ. ಅನಂತರ 'ನಾನಾ ಹ್ಯೇನಮ್' ಇತ್ಯಾದಿ ವಾಕ್ಯಗಳನ್ನೂ ಕೂಡ ಉದಾಹರಿಸಿದ್ದಾರೆ. ಪಿತೃತ್ವಾದಿ ಸಿದ್ಧಿಗಾಗಿ ಒಂದು ವಾಕ್ಯವನ್ನು ಪ್ರಮಾಣವನ್ನಾಗಿ ನೀಡಿದರೆ ಸಾಕು ಅನೇಕ ಪ್ರಮಾಣವನ್ನು ಏಕೆ ಉದಾಹರಿಸಬೇಕು? ಎಂಬ ಪ್ರಶ್ನೆಗೆ ಉತ್ತರವನ್ನು ಹೀಗೆ ತಿಳಿಯಬೇಕು. 'ಅವಃ ಪರೇಣ' ಇತ್ಯಾದಿ ಶ್ರುತಿಗಳು ಪಿತೃತ್ವಾದಿಗಳು ಪರಮಾತ್ಮನಿಗೆ ಶ್ರುತಿಯಲ್ಲಿ ಹೇಳಲ್ಪಟ್ಟಿದೆ ಎಂದಷ್ಟೇ ತಿಳಿಯುತ್ತದೆ. ಆದರೆ 'ನಾನಾ ಹ್ಯೇನಂ' ಇತ್ಯಾದಿ ಶ್ರುತಿಯಲ್ಲಿ ಪಿತೃತ್ವಾದಿ ಸಂಬಂಧವಿರುವುದರಿಂದ ಜೀವನು ಪರಮಾತ್ಮನಿಗೆ ಅಂಶನಾಗುತ್ತಾನೆ ಎಂಬ ಅಧಿಕವಿಷಯವನ್ನು ಹೇಳಲಾಗಿದೆ. ಹೀಗೆ ಪ್ರಮೇಯಭೇದವಿರುವುದರಿಂದ ಪುನರುಕ್ತಿಗೆ ಅವಕಾಶವಿಲ್ಲ. ಏವಕಾರದಿಂದ ಅದ್ವೈತಿಗಳನ್ನು ನಿರಾಕರಣೆ ಮಾಡಿದ್ದಾರೆ. ಅವರು ಅಭೇದವ್ಯಪದೇಶವನ್ನೇ ಅಂಶವ್ಯಪದೇಶವೆಂದು ಕರೆಯುತ್ತಾರೆ. ನಾವು ಹೇಳಿದ ಹೇತುವೇ ಅಭಿಮತವಾಗಿದೆ ಹೊರತು ಅಭೇದವು ಅಭಿಮತವಲ್ಲ ಎಂಬ ಅಭಿಪ್ರಾಯದಿಂದ 'ನೈವ' ಇತ್ಯಾದಿ ವಾಕ್ಯದಿಂದ ಮತ್ತೊಂದು ಕಾರಣವನ್ನು ಹೇಳಲಾಗಿದೆ. ಅಂಶತ್ವ ಹೇಳುವ ಶ್ರುತಿಗಳಲ್ಲಿ ಸಂಬಂಧಬೋಧಕವಾದ ಹೇತುಗಳೇ ಹೇಳಲಾಗಿದೆ. ಅಂಶತ್ವಾಭಾವವನ್ನು ಹೇಳುವ ಶ್ರುತಿಯಲ್ಲಿ ಸಂಬಂಧಾಭಾವವನ್ನೇ ಹೇತುವನ್ನಾಗಿ ಹೇಳಲಾಗಿದೆ. ಇದರಿಂದ ಅಂಶತ್ವವೆಂದರೆ ಸಂಬಂಧವೇ ಆಗಿದೆ ಎಂದು ಸ್ಪಷ್ಟವಾಗುತ್ತದೆ. 'ನೈವಾಂಶಃ' ಎಂದರೆ ಭಾಷ್ಯೋಕ್ತ ಶ್ರುತಿಗಳಲ್ಲಿ ಎಂದರ್ಥ.

**प्रकाशः** – ननु तदारम्भकत्वं तदेकदेशत्वं वा तदंशत्वं मुख्यम् । न तु सम्बन्धित्वमेवांशत्वमित्यत आह – **श्रुत्येति** ।। ''नाना ह्येनम्'' इत्यादिश्रुत्यैवेत्यर्थः। मुख्यांशत्वं तु न सम्भवति । ब्रह्मणो नारब्धत्वात् । घटादिवत्प्रदेशवत्त्वाभावाच्चेति भावः ।

ಅಂಶತ್ವವೆಂದರೆ ಪ್ರಸಿದ್ಧವಾಗಿರುವುದು ಆರಂಭಕತ್ವ ಎಂದು ಅಥವಾ ತದೇಕದೇಶತ್ವ ಎಂದು ವಿವಕ್ಷಿಸಬೇಕು. ಇದನ್ನು ಬಿಟ್ಟು ಉಪಜೀವಕತ್ವರೂಪಸಂಬಂಧವನ್ನು ಅಂಶವೆಂದು ಎಲ್ಲಿಯೂ ಕೂಡ ಹೇಳುವುದು ಕಾಣಸುತ್ತಿಲ್ಲ. ಈ ಪ್ರಶ್ನೆಗೆ 'ಶ್ರುತ್ಯಾ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

ಶ್ರುತಿಯಲ್ಲಿರುವ ಅಂಶ ಶಬ್ದಕ್ಕೆ ಶ್ರುತಿಯೇ ಅರ್ಥವನ್ನು ಹೇಳುತ್ತಿದೆ. ಹೀಗಿರುವಾಗ ನೀವು ಆರಂಭಕತ್ವ, ಏಕದೇಶತ್ವ ಇತ್ಯಾದಿ ಅರ್ಥವನ್ನು ಹೇಳುವುದು ಅಪ್ರಾಮಾಣಿಕವಾಗುತ್ತದೆ. 'ನಾನಾ ಹ್ಯೇನಮ್' ಇತ್ಯಾದಿ ಶ್ರುತಿಯು ಅಂಶ ಶಬ್ದದ ಅರ್ಥವನ್ನು ವಿವರಿಸುತ್ತಿದೆ ಎಂದರ್ಥ.

ಅಂಶಾಧಿಕರಣ (೨-೩-೧೮)

ಮುಖ್ಯವಾದ ಅಂಶವೆಂದರೆ ಆರಂಭಕತ್ವ ಅಥವಾ ತದೇಕದೇಶತ್ವ ಎಂಬ ಅರ್ಥವನ್ನು ನೀವು ಹೇಳುತ್ತಿದ್ದೀರಿ. ಇದು ಬ್ರಹ್ಮನಲ್ಲಿ ಕೂಡುವುದೇ ಇಲ್ಲ. ಏಕೆಂದರೆ ಬ್ರಹ್ಮನು ಆರಬ್ಧನೇ ಅಲ್ಲ. ಅದರಂತೆ ಘಟಾದಿಗಳಂತೆ ಬ್ರಹ್ಮನಿಗೆ ಒಂದು ಏಕದೇಶವಿದ್ದರೆ ಆ ಬ್ರಹ್ಮನ ಏಕದೇಶರು ಜೀವರಾಗಿದ್ದಾರೆಂದು ಹೇಳಬಹುದಿತ್ತು. ಆದರೆ ಬ್ರಹ್ಮನಿಗೆ ಪ್ರದೇಶವೇ ಇಲ್ಲದ್ದರಿಂದ ತದೇಕದೇಶವಾದ ಅಂಶತ್ವವನ್ನೂ ಕೂಡ ವಿವಕ್ಷಿಸಲು ಸಾಧ್ಯವಿಲ್ಲ ಎಂದು ತಿಳಿಯಬೇಕು.

**प्रकाशः** – अस्मदुक्तं तु तत्राप्यस्तीत्याह – **नियतं चेति** ।। तन्त्वादेः पटाद्यारम्भकस्येत्यर्थः । तस्मात् आरम्भकत्वतदेकदेशत्वादिरूपमुख्यांशत्वस्यासम्भवात् । एवं रूपस्यैव श्रुत्यादिसिद्धत्वाच्चेत्यर्थः । ईश्वरस्य पितृत्वपोषकत्वस्वामित्वादौ श्रुतिमाह – **यो नःपितेति** ।।

ನಾವು ಹೇಳಿದ ಉಪಜೀವಕ-ಉಪಜೀವ್ಯಭಾವರೂಪವಾದ ಸಂಗತಿಯು ಪ್ರಕೃತ ಬ್ರಹ್ಮ ಹಾಗೂ ಜೀವರ ವಿಷಯದಲ್ಲಿ ಹೇಳಬಹುದು. ತಂತು ಮೊದಲಾದವುಗಳು ಪಟಾರಂಭಕವಾಗಿದೆ ಎಂಬಲ್ಲಿ ಉಪಜೀವಕತ್ವವು ನಿಯತವಾಗಿ ಇರುತ್ತದೆ. ಆದ್ದರಿಂದ ಆರಂಭಕತ್ವ ಮತ್ತು ತದೇಕದೇಶತ್ವರೂಪವಾದ ಮುಖ್ಯಾಂಶತ್ವವು ಅಸಂಭವವಾಗಿರುವುದರಿಂದ ಎಂಬುದು 'ತಸ್ಮಾತ್' ಎಂಬ ಪದದ ಅರ್ಥವಾಗಿದೆ. ಮತ್ತು ಇದೇ ರೀತಿಯಲ್ಲಿ ಶ್ರುತಿಸಿದ್ಧವಾಗಿರುವುದರಿಂದ ಎಂಬುದು ಎರಡನೆಯ ಅರ್ಥ. ಈಶ್ವರನು ಪಿತೃವಾಗಿದ್ದಾನೆ, ಪೋಷಕನಾಗಿದ್ದಾನೆ, ಸ್ವಾಮಿಯಾಗಿದ್ದಾನೆಂಬ ವಿಷಯದಲ್ಲಿ ಶ್ರುತಿ ಪ್ರಮಾಣವನ್ನು 'ಯೋ ನಃ ಪಿತಾ' ಎಂಬುದರಿಂದ ನೀಡುತ್ತಿದ್ದಾರೆ.

**प्रकाशः** – ''पतिं विश्वस्यात्मेश्वरऽशाश्वतऽशिवमच्युतम् । नारायणं महाज्ञेयं'' इति नारायणोपनिषदि । ''पितासि'' इत्यादि गीता । उपजीव्यत्वाद्यसिद्धिमाशङ्क्य निराह – **भगवत इति** ।।

'ಪತಿಂ ವಿಶ್ವಸ್ಯಾತ್ಮೇಶ್ವರಂ ಶಾಶ್ವತಂ ಶಿವಮಚ್ಯುತಮ್ । ನಾರಾಯಣಂ ಮಹಾಜ್ಞೇಯಂ' ಎಂಬ ನಾರಾಯಣೋಪನಿಷತ್ತಿನಲ್ಲಿ ಈ ವಾಕ್ಯವಿದೆ ಎಂದರ್ಥ. 'ಪಿತಾಸಿ' ಎಂಬುದು ಭಗವದ್ಗೀತೆಯ ವಾಕ್ಯವಾಗಿದೆ. ಉಪಜೀವ್ಯತ್ವವೇ ಅಸಿದ್ಧವಾಗಿದೆ ಎಂಬ ಆಶಂಕೆಯನ್ನು ಪರಿಹರಿಸಲು 'ಭಗವತಃ' ಇತ್ಯಾದಿ ವಾಕ್ಯವು ಹೊರಟಿದೆ. ಪರಮಾತ್ಮನು ನಮಗೆ ಪಿತಾ ಎಂದಾದರೆ ಅವನು ಉಪಜೀವ್ಯನಾಗುತ್ತಾನೆ. ಆದರೆ ಪರಮಾತ್ಮನು ಪುತ್ರ ಎಂದು ವಿವಕ್ಷಿಸಿದಾಗ ಉಪಜೀವ್ಯತ್ವವೇ ಅಸಿದ್ಧವಾಗುತ್ತದಲ್ಲವೇ? ಎಂಬ ಪ್ರಶ್ನೆಗೆ 'ಭಗವತಃ' ಎಂಬ ವಾಕ್ಯವು ಉತ್ತರಿಸುತ್ತಿದೆ ಎಂದರ್ಥ.

## तात्पर्यचन्द्रिका

**अनंशत्वश्रुतिस्तु लोके स्वामिभृत्यादेरन्योन्यमुपकार्योपकारकत्वेऽपीहेश्वर उपकर्तैव । न तूपकर्तव्यः । जीवस्तूपकर्तव्य एव न तूपकर्तेत्यभिप्राया । अत एव भाष्योदाहृतानंशत्वश्रुतौ ''नापेक्ष्यो जीवः परस्य'' इति जीवस्यानुपकर्तृत्वमुक्त्वा ''फलदःप्रभुरेकराट् । न नियम्यः स कस्यापि स सर्वस्य नियामकः'' इतीश्वरस्यैवोपकर्तृत्वमुक्तम् ।**

ಅನೇಕ ಕಡೆ ಜೀವನು ಪರಮಾತ್ಮನ ಅಂಶ ಅಲ್ಲ ಎಂದು ಹೇಳುವ ಶ್ರುತಿಗಳಿವೆ. ಇದರ ಅಭಿಪ್ರಾಯ ಹೀಗಿದೆ – ಲೋಕದಲ್ಲಿ ಸ್ವಾಮಿಭೃತ್ಯರಲ್ಲಿ ಪರಸ್ಪರ ಉಪಕಾರಿ-ಉಪಕಾರಕಭಾವವಿದೆ. ಭೃತ್ಯನು ಉಪಕಾರಿಯೂ ಹೌದು, ಉಪಕಾರಕನೂ ಹೌದು. ಅದರಂತೆ ಸ್ವಾಮಿಯು ಉಪಕಾರಿಯೂ ಆಗುತ್ತಾನೆ, ಉಪಕಾರಕನೂ ಆಗುತ್ತಾನೆ. ಆದರೆ ಜೀವ ಮತ್ತು ಈಶ್ವರರಲ್ಲಿ ಹೀಗೆ ಪರಸ್ಪರ ಉಪಕಾರಿ-ಉಪಕಾರಕ ಭಾವವು ಇರುವುದಿಲ್ಲ. ಹೊರತಾಗಿ ಈಶ್ವರನು ಉಪಕರ್ತೃವೇ ಆಗುತ್ತಾನೆ, ಉಪಕರ್ತವ್ಯನಾಗುವುದಿಲ್ಲ. ಜೀವನು ಉಪಕರ್ತವ್ಯನೇ ಆಗುತ್ತಾನೆ, ಉಪಕರ್ತೃ ಆಗುವುದಿಲ್ಲ ಎಂಬುದು 'ಅನಂಶತ್ವ' ಶ್ರುತಿಯ ಅಭಿಪ್ರಾಯವಾಗಿದೆ.

ಆದ್ದರಿಂದ ಭಾಷ್ಯದಲ್ಲಿ ಉದಾಹರಿಸಲ್ಪಟ್ಟ 'ಅನಂಶತ್ವ' ಶ್ರುತಿಯಲ್ಲಿ 'ನಾಪೇಕ್ಷೋ ಜೀವಃ ಪರಸ್ಯ' ಎಂಬುದಾಗಿ ಜೀವನು ಉಪಕರ್ತೃವಲ್ಲ ಎಂಬುದಾಗಿ ಹೇಳಲಾಗಿದೆ ಹಾಗೂ 'ಫಲದಃ ಪ್ರಭುರೇಕರಾಟ್ । ನ ನಿಯಮ್ಯಃ ಸ ಕಸ್ಯಾಪಿ ಸ ಸರ್ವಸ್ಯ ನಿಯಾಮಕಃ' ಈಶ್ವರನೊಬ್ಬನೇ ಫಲಪ್ರದನಾಗಿದ್ದಾನೆ ಹಾಗೂ ನಿಯಾಮಕನಾಗಿದ್ದಾನೆ ಎಂಬುದಾಗಿ ಈಶ್ವರನಿಗೆ ಉಪಕರ್ತೃತ್ವವನ್ನು ಹೇಳಲಾಗಿದೆ.

**एवञ्च ''नासावस्य कुतश्चन । नायं तस्यापि कश्चन'' इति श्रुतेरपि असौ ईश्वरः । अस्य जीवस्य । कुतश्चन केनापि प्रकारेण । नोपकर्तव्यः । अयं जीवः । तस्य ईश्वरस्य । कुतश्चन नोपकर्तेत्येवार्थः ।**

ಆದ್ದರಿಂದ 'ನಾಸಾವಸ್ಯ ಕುತಶ್ಚನ । ನಾಯಂ ತಸ್ಯಾಪಿ ಕಶ್ಚನ' ಎಂಬ ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಗೆ ಹೀಗರ್ಥ – ಅಸೌ = ಈಶ್ವರನು, ಅಸ್ಯ = ಜೀವನಿಗೆ, ಕುತಶ್ಚನ = ಯಾವುದೇ ಪ್ರಕಾರದಿಂದಲೂ, ನ = ಉಪಕರ್ತವ್ಯನಲ್ಲ. ಹಾಗೆಯೇ ಅಯಂ = ಜೀವನು, ತಸ್ಯ = ಈಶ್ವರನಿಗೆ, ಕುತಶ್ಚನ = ಯಾವುದೇ ಪ್ರಕಾರದಿಂದಲೂ, ನ = ಉಪಕರ್ತೃ ಆಗುವುದಿಲ್ಲ ಎಂದು.

**उक्तसम्बन्धरूपशेषत्वे सौत्रान्यथाशब्दोक्तः सम्बन्धाभावव्यपदेशोऽपि हेतुः । न चेद्भाष्ये ''अन्यथा च'' इति चशब्दोऽस्वरसः स्यात् ।**

ಜೀವನು ಪರಮಾತ್ಮನ ಶೇಷನಾಗಿದ್ದಾನೆ, ಪರಮಾತ್ಮನು ಶೇಷಿಯಾಗಿದ್ದಾನೆ ಎಂದು ಕೆಲವೆಡೆ ಹೇಳಲಾಗಿದೆ. ಇದರ ಅಭಿಪ್ರಾಯ ಹೀಗಿದೆ – ಈ ಸಂಬಂಧರೂಪವಾದ ಶೇಷತ್ವಕ್ಕೆ ಸೂತ್ರದಲ್ಲಿ ಇರುವ 'ಅನ್ಯಥಾ' ಶಬ್ದದಿಂದ ಹೇಳಲ್ಪಟ್ಟ ಸಂಬಂಧಾಭಾವವ್ಯಪದೇಶವೂ ಕೂಡ ಹೇತುವಾಗುತ್ತದೆ. 'ಜೀವಃ ಉಪಜೀವಕತ್ವ ಅಂಶತ್ವವಾನೇವ ಸಂಬಂಧವ್ಯಪದೇಶಾತ್ ಸಂಬಂಧಾಭಾವವ್ಯಪದೇಶಾಚ್ಚ' ಶ್ರುತಿಗಳಲ್ಲಿ ಪಿತೃತ್ವ ಪುತ್ರತ್ವ ಮೊದಲಾದ ಸಂಬಂಧವನ್ನೂ ಹೇಳಿದ್ದಾರೆ, ಸಂಬಂಧವಿಲ್ಲವೆಂದೂ ಹೇಳಲಾಗಿದೆ. ಸಂಬಂಧಾಭಾವವ್ಯಪದೇಶವು ಅಂಶತ್ವಕ್ಕೆ ಹೇತುವಾಗುತ್ತದೆ. ಏಕೆಂದರೆ ಉಪಜೀವಕತ್ವವೇ ಅಂಶ ಎಂದು ಕರೆಸಿಕೊಳ್ಳುತ್ತದೆ. ಆದ್ದರಿಂದ ಸಂಬಂಧಾಭಾವವೆಂದರೆ ಪರಮಾತ್ಮನಿಗೆ ಜೀವನು ಎಂದೂ ಉಪಕಾರಕನಾಗುವುದಿಲ್ಲ, ಕೇವಲ ಉಪಕಾರ್ಯನಾಗುತ್ತಾನೆ ಎಂಬರ್ಥವನ್ನೇ ವಿವಕ್ಷಿಸುತ್ತೇವೆ. ವ್ಯಪದೇಶವು ಇಂತಹ ಉಪಜೀವಕತ್ವವಾದ ಅಂಶದಲ್ಲಿ ಹೇತುವಾಗುತ್ತದೆ. ಸಂಬಂಧವು ಇಲ್ಲವೆಂದರೆ ಅವನು ಎಂದೂ ಕೂಡ ಪರಮಾತ್ಮನಿಂದ ಉಪಕೃತನಲ್ಲ ಎಂದಭಿಪ್ರಾಯ.

ಅಂಶಾಧಿಕರಣ (೨-೩-೧೮)

ಇದು ವಿರುದ್ಧವಾಗುತ್ತದೆ. ಏಕೆಂದರೆ ಸಂಬಂಧರೂಪವಾದ ಸಾಧ್ಯಕ್ಕೆ ಸಂಬಂಧಾಭಾವವನ್ನು ಹೇತುವನ್ನಾಗಿ ಹೇಳಬೇಕಾಗಿಲ್ಲ. 'ನಾನಾವ್ಯಪದೇಶಾತ್' ಎಂಬ ಹೇತುವಷ್ಟೇ ಸಾಕು. ಹೀಗೆ ಒಪ್ಪದಿದ್ದರೆ ಭಾಷ್ಯದಲ್ಲಿ 'ಅನ್ಯಥಾ ಚ' ಎಂಬಲ್ಲಿರುವ ಚ ಶಬ್ದವು ಅಸ್ವರಸವಾಗುತ್ತಿತ್ತು. 'ಅನ್ಯಥಾ ಚ' ಎಂಬುದರಿಂದ ಸಂಬಂಧವ್ಯಪದೇಶ ಹಾಗೂ ಸಂಬಂಧಾಭಾವವ್ಯಪದೇಶ ಎರಡೂ ಕೂಡ ಸ್ಪಷ್ಟವಾಗಿ ತಿಳಿಯುತ್ತಿದೆ.

**भाष्योदाहृतश्रुतौ ''नासावस्य कुतश्चन'' इति सम्बन्धनिषेधोऽपि प्रकृतानुपयुक्तः स्यात् । ईश्वरस्य सदोपजीव्यत्वमेवेत्यादिमाहात्म्यं च न सिध्येत् । असम्बन्धरूपानंशत्वश्रुतेर्गत्युक्तिश्च सूत्रभाष्यारूढा न स्यात् ।**

ಜೀವನು ಪರಮಾತ್ಮನ ಅಂಶನಾಗಿದ್ದಾನೆಂದು ಸಮರ್ಥನೆ ಮಾಡುವ ಸಂದರ್ಭದಲ್ಲಿ 'ನಾಸಾವಸ್ಯ ಕುತಶ್ಚನ' ಎಂಬುದಾಗಿ ಸಂಬಂಧನಿಷೇಧಪರವಾದ ವಾಕ್ಯವನ್ನು ಆಚಾರ್ಯರು ಉದಾಹರಿಸಿದ್ದು ತಪ್ಪಾಗುತಿತ್ತು. ಅದಕ್ಕೋಸ್ಕರ ಸಂಬಂಧಾಭಾವವೂ ಕೂಡ ಪ್ರಕೃತ ಹೇತುವಾಗುತ್ತದೆ ಎಂದು ತಿಳಿಯಬೇಕು. ಮತ್ತು ಈಶ್ವರನು ಸದಾ ಉಪಜೀವ್ಯನೇ ಆಗಿದ್ದಾನೆ, ಎಂದೆಂದೂ ಉಪಜೀವಕನಾಗಿಲ್ಲ ಎಂಬ ಮಾಹಾತ್ಮ್ಯವು ಸಿದ್ಧವಾಗಬೇಕೆಂದರೆ ಸಂಬಂಧಾಭಾವವನ್ನು ಹೇತುವನ್ನಾಗಿ ಹೇಳಲೇಬೇಕು. ಇಲ್ಲದಿದ್ದರೆ ಈ ಮಾಹಾತ್ಮ್ಯವು ಸಿದ್ಧವಾಗುತ್ತಿರಲಿಲ್ಲ. ಸಂಬಂಧವ್ಯಪದೇಶವನ್ನು ಹೇತುವನ್ನಾಗಿ ಹೇಳದಿದ್ದರೆ ಅಸಂಬಂಧರೂಪವಾದ ಅನಂಶತ್ವ ಶ್ರುತಿಗೆ ಗತಿಯನ್ನು ಹೇಳಿದಂತೆ ಆಗುತ್ತಿರಲಿಲ್ಲ. ಅನಂಶತ್ವ ಶ್ರುತಿಗೆ ಗತ್ಯುಕ್ತಿಯು ಸೂತ್ರಾರೂಢ ಹಾಗೂ ಭಾಷ್ಯಾರೂಢ ಆಗಲೇಬೇಕು. ಅದಕ್ಕಾಗಿ ಸಂಬಂಧಾಭಾವವನ್ನು ಹೇತುವನ್ನಾಗಿ ಹೇಳಲೇಬೇಕು.

**''अनंशत्वश्रुतेर्गतिं चाहे''ति भाष्यं तु भेदाभेदव्यपदेशप्रयुक्तांशत्वप्रतियोगिकानंशत्वविषयम् । न त्वसम्बन्धरूपानंशत्वविषयम् ।**

'ಅನಂಶತ್ವಶ್ರುತೇಃ ಗತಿಂ ಚಾಹ' ಎಂಬ ಭಾಷ್ಯದ ಅಭಿಪ್ರಾಯ ಹೀಗಿದೆ – 'ಪ್ರಕಾಶಾದಿ ನೈವಂ ಪರಃ' ಎಂಬ ಸೂತ್ರಕ್ಕೆ ಅವತಾರಿಕೆಯನ್ನು ಶ್ರೀಮದಾಚಾರ್ಯರು 'ಅನಂಶತ್ವಶ್ರುತೇಃ ಗತಿಂ ಚಾಹ' ಎಂದು ಹೇಳಿದ್ದಾರೆ. ಪ್ರಥಮ ಸೂತ್ರದಲ್ಲಿಯೇ ಅನಂಶತ್ವ ಶ್ರುತಿಗೆ ಗತಿಯನ್ನು ಹೇಳಿದ್ದಾಯಿತು. ಪುನಃ ಅದೇ ವಿಷಯವನ್ನು ಈ ಸೂತ್ರದಲ್ಲೂ ಹೇಳಿದರೆ ಪುನರುಕ್ತಿ ದೋಷ ಬರುತ್ತದಲ್ಲವೇ? ಎಂದು ಪ್ರಶ್ನೆ.

ಭೇದಾಭೇದವ್ಯಪದೇಶಪ್ರಯುಕ್ತವಾದ ಯಾವ ಅಂಶತ್ವವಿದೆಯೋ ತತ್ಪ್ರತಿದ್ವಂದಿಯಾದ ಯಾವ ಅನಂಶತ್ವವಿದೆಯೋ ಅದಕ್ಕೆ ಗತಿಯನ್ನು ಪ್ರಥಮ ಸೂತ್ರದಲ್ಲಿ ಹೇಳಿದ್ದಾರೆ. ಪ್ರಕೃತ ಈ ಸೂತ್ರದಲ್ಲಿ ಸಂಬಂಧ ಹಾಗೂ ಅಸಂಬಂಧಗಳ ಪ್ರಯುಕ್ತವಾದ ಯಾವ ಅಂಶತ್ವವಿದೆಯೋ ತದ್ವಿರೋಧಿಯಾದ ಅನಂಶತ್ವಕ್ಕೆ ಗತಿಯನ್ನು ಹೇಳುತ್ತಿದ್ದಾರೆ. ಆದ್ದರಿಂದ ಪುನರುಕ್ತಿಯು ಬರುವುದಿಲ್ಲ.

**अत एव तत्वप्रदीपे ''नानाव्यपदेशः सम्बन्धव्यपदेशः । अन्यथाव्यपदेशः सम्बन्धाभावव्यपदेश'' इत्युक्तम् ।**

ಆದ್ದರಿಂದ ತತ್ತ್ವಪ್ರದೀಪದಲ್ಲಿ 'ನಾನಾವ್ಯಪದೇಶಃ' ಎಂಬುದಕ್ಕೆ 'ಸಂಬಂಧವ್ಯಪದೇಶಃ' ಎಂಬರ್ಥವನ್ನು, 'ಅನ್ಯಥಾವ್ಯಪದೇಶಃ' ಎಂಬುದಕ್ಕೆ 'ಸಂಬಂಧಾಭಾವವ್ಯಪದೇಶಃ'. ಎಂಬರ್ಥವನ್ನು ಹೇಳಿದ್ದಾರೆ.

**''हेत्वन्तरेणैतत्समर्थयत'' इति टीकास्यैतच्छब्दोऽप्युक्तवक्ष्यमाण-सम्बन्धाभेदरूपोभयविषयः ।**

'ಹೇತ್ವಂತರೇಣೈತತ್ಸಮರ್ಥಯತೇ' ಎಂಬ ಟೀಕಾದಲ್ಲಿರುವ ಏತತ್‌ಶಬ್ದವು ಉಕ್ತವಕ್ಷ್ಯಮಾಣ-ಸಂಬಂಧಾಭೇದವೆಂಬ ಉಭಯವಿಷಯಕವಾಗಿದೆ. ಅಭೇದವನ್ನು ಹೇಳಿ, ಅಭೇದಕ್ಕಿಂತ ಭಿನ್ನವಾದ ಭೇದವನ್ನೂ ಕೂಡ ಹೇಳಿದ್ದಾರೆ. ಆದ್ದರಿಂದ 'ಅನ್ಯಃ ಪರಃ' ಎಂಬ ಶ್ರುತಿಯು ಕೇವಲ ಭೇದವಿಷಯದಲ್ಲಷ್ಟೇ ಪ್ರಮಾಣವಾಗುತ್ತದೆ. ಆದ್ದರಿಂದ ಭಾಷ್ಯದಲ್ಲಿ 'ಅನ್ಯಥಾ' ಎಂಬ ಪದಕ್ಕೆ ವಕ್ಷ್ಯಮಾಣವಾದ ಅಭೇದಕ್ಕಿಂತ ಭಿನ್ನವಾದ ಎಂದರ್ಥವನ್ನು ಹೇಳಬೇಕು. ಇದಕ್ಕೆ ಟೀಕೆಯಲ್ಲಿ 'ಹೇತ್ವಂತರೇಣ ಏತತ್ ಸಮರ್ಥಯತೇ' ಎಂದು ಹೇಳಿದ್ದಾರೆ. ಆದ್ದರಿಂದ ಜೀವನು ಪರಮಾತ್ಮನ ಅಂಶನಾಗುತ್ತಾನೆ ಎನ್ನಲು ಪೂರ್ವೋಕ್ತವಾದ ನಾನಾವ್ಯಪದೇಶವು ಮೊದಲನೇ ಹೇತು, ಭೇದಾಭೇದವ್ಯಪದೇಶದಿಂದ ಇದೇ ವಿಷಯವನ್ನು ಸಮರ್ಥನೆ ಮಾಡುತ್ತಿದ್ದಾರೆ. ಇಲ್ಲಿ 'ಏತತ್' ಶಬ್ದಕ್ಕೆ ಉಕ್ತವಕ್ಷ್ಯಮಾಣಸಂಬಂಧಾಭೇದವೆಂದರ್ಥ.

**टीकाकारीया ''अन्यथ'' इत्यस्य वक्ष्यमाणसम्बन्धोक्तिरपि वक्ष्यमाणेनापि सम्बन्धाभिप्राया । न तूक्तेनासम्बन्धाभिप्राया । जीवेश्वरयोः सदोपजीव्योपजीवकत्व-रूपसम्बन्धव्यपदेशोऽपि भेदव्यपदेश एवेति टीकोक्तो वक्ष्यमाणेनापि सम्बन्धो युक्तः ।**

ಟೀಕಾಕಾರರು 'ಅಂಶೋ ನಾನಾವ್ಯಪದೇಶಾತ್' ಎಂಬ ಸೂತ್ರದಲ್ಲಿರುವ 'ಅನ್ಯಥಾ' ಎಂಬ ಪದವನ್ನು ದಾರ್ಶಕಿತವಾದಿತ್ವಂ ಎಂಬಲ್ಲೂ ಕೂಡ ಅನ್ವಯ ಮಾಡಬೇಕು ಎಂದು ಹೇಳಿದ್ದಾರೆ. ಮುಂದೆಯೂ ಕೂಡ ಅನ್ವಯ ಮಾಡಬೇಕು ಎಂದು ಹೇಳಿದ್ದರಿಂದ 'ನಾನಾವ್ಯಪದೇಶಾತ್' ಎಂಬಲ್ಲಿಯೂ ಅನ್ವಯವಿದೆ, ಮುಂದೆಯೂ ಅನ್ವಯವಿದೆ ಎಂದು ತಿಳಿಯುತ್ತದೆ. ಆದ್ದರಿಂದ ಇಲ್ಲಿ ಸಂಬಂಧವೆಂಬ ಅಂಶ ಹಾಗೂ ಅಭೇದವೆಂಬ ಅಂಶವು ವಿವಕ್ಷಿತವಾಗಿದೆ. ಅಸಂಬಂಧವು ವಿವಕ್ಷಿತವಾಗಿಲ್ಲ ಎಂದು ತಿಳಿಯಬೇಕು. ಪರಮಾತ್ಮನು ಉಪಜೀವ್ಯನಾಗಿದ್ದಾನೆ, ಜೀವನು ಉಪಜೀವಕನಾಗಿದ್ದಾನೆ. ಈ ಉಪಜೀವ್ಯ-ಉಪಜೀವಕತ್ವರೂಪವಾದ ಸಂಬಂಧವು ಜೀವೇಶ್ವರರಲ್ಲಿ ನಿರಂತರವಾಗಿ ಇರುತ್ತದೆ ಎಂಬುದಾಗಿ ಯಾವ ಸಂಬಂಧವ್ಯಪದೇಶವಿದೆಯೋ ಇದೂ ಕೂಡ ಭೇದವ್ಯಪದೇಶವೇ ಆಗಿದೆ. ಆದ್ದರಿಂದ ಟೀಕೆಯಲ್ಲಿ 'ವಕ್ಷ್ಯಮಾಣೇನಾಪಿ ಸಂಬಂಧಃ' ಎಂದು ಹೇಳಿದ್ದು ಯುಕ್ತವೇ ಆಗಿದೆ.

**तस्माजीवः सदा सर्वत्र सर्वैरपि प्रकारैरीश्वरोपजीवकरूपभिन्नांश एव । नतु मत्स्यादिवत्स्वरूपांशः ।**

ಆದ್ದರಿಂದ ಜೀವನು ಯಾವಾಗಲೂ ಎಲ್ಲಾ ಪ್ರಕಾರದಲ್ಲೂ, ಎಲ್ಲೆಡೆಯೂ ಈಶ್ವರನಿಂದ ಉಪಜೀವಕರೂಪನಾಗಿದ್ದು ಭಿನ್ನಾಂಶನೇ ಆಗಿದ್ದಾನೆ. ಮತ್ಸ್ಯಾದಿಗಳಂತೆ ಸ್ವರೂಪಾಂಶನಲ್ಲ ಎಂಬುದು ಈ ಅಧಿಕರಣದ ಸಿದ್ಧಾಂತದ ಸಾರ.

**किञ्च संवर्तकाग्निं प्रति ततोऽत्यन्तभिन्नस्याग्निकणस्येवानर्घेण महारत्नेन तुलितस्य गुरुत्वमात्रेण समस्य रत्नाभासस्येव जीवस्य ततो न्यूनत्वे सति**

**किञ्चित्सादृश्यरूपं गौणं भिन्नांशत्वमेव । अस्य महारत्नस्यायं रत्नाभासः सहस्रांश इत्यादिव्यवहारात् ।**

ಮತ್ತು ಅಂಶ ಎಂದರೆ 'ತತೋ ನ್ಯೂನತ್ವೇ ಸತಿ ಕಿಂಚಿತ್‌ಸಾದೃಶ್ಯಂ' ಎಂಬರ್ಥವನ್ನು ತಿಳಿಯಬೇಕು. ಪ್ರಳಯಕಾಲದಲ್ಲಿ ಶೇಷದೇವರ ಮುಖದಿಂದ ಹೊರಹೊಮ್ಮುವ ಸಂವರ್ತಕಾಗ್ನಿಯ ಮುಂದೆ ನಾವು ನೋಡುವ ಅಗ್ನಿಯ ಒಂದು ಕಣವು ಒಂದಂಶವಾಗಿದೆ ಎಂದು ವ್ಯವಹರಿಸುತ್ತೇವೆ. ಈ ಅಗ್ನಿ ಕಣವು ಸಂವರ್ತಕಾಗ್ನಿಗಿಂತ ಅತ್ಯಂತ ಭಿನ್ನವಾಗಿವೆ. ಸ್ವಲ್ಪವೇ ಸಾದೃಶ್ಯವಿರುವ ಪ್ರಯುಕ್ತ ಅಂಶ ಎಂಬ ವ್ಯವಹಾರವನ್ನು ಮಾಡುತ್ತೇವೆ. ಅದರಂತೆ ಅನರ್ಘ್ಯವಾದ ಬೆಲೆಕಟ್ಟಲಾಗದ ಮಹಾರತ್ನದ ಮುಂದೆ ಅತ್ಯಲ್ಪ ಬೆಲೆಗೆ ದೊರೆಯುವ ರತ್ನಾಭಾಸವು ಒಂದಂಶವಾಗಿದೆ ಎಂದು ವ್ಯವಹರಿಸುತ್ತೇವೆ. ಎರಡೂ ರತ್ನಗಳಲ್ಲಿ ಇರುವ ಗುರುತ್ವ ಒಂದೇ ಆಗಿರುವ ವಿವಕ್ಷೆಯಿಂದ ಹೀಗೆ ಅಂಶವಾಗಿದೆ ಎಂಬ ವ್ಯವಹಾರವನ್ನು ಮಾಡುತ್ತೇವೆ. ಈ ಮಹಾರತ್ನದ ಮುಂದೆ ಈ ರತ್ನಾಭಾಸವು ಸಹಸ್ರಾಂಶವಾಗಿದೆ ಎಂಬ ವ್ಯವಹಾರವು ಹೇಗೋ ಅದರಂತೆ ಬ್ರಹ್ಮನ ಅಂಶನು ಜೀವನಾಗಿದ್ದಾನೆ ಎಂಬಲ್ಲಿಯೂ ಹಾಗೆಯೇ ತಿಳಿಯಬೇಕು. ಜೀವನು ಪರಮಾತ್ಮನ ಅಧೀನನಾಗಿದ್ದಾನೆ ಮತ್ತು ಅವನ ಹೋಲಿಕೆಯು ಜೀವನಲ್ಲಿ ಅತ್ಯಲ್ಪ ಪ್ರಮಾಣದಲ್ಲಿದೆ. ಈ ಅಭಿಪ್ರಾಯವಷ್ಟೆ ವಿವಕ್ಷಿತ.

**उक्तं हि ''स्फुलिङ्ग संवर्तकयोर्यदन्तरम्'' इति । उक्तं चानुव्याख्याने ''सादृश्यं चांशतास्यत्'' इति । भाष्ये च ''विभिन्नांशोऽल्पशक्तिस्स्यात् किञ्चित्सादृश्यमात्रयुग्'' इति ।**

ಇದನ್ನೇ 'ಸ್ಫುಲಿಂಗಸಂವರ್ತಕಯೋಃ ಯದಂತರಂ' 'ಸ್ಫುಲಿಂಗ ಹಾಗೂ ಸಂವರ್ತಕಗಳಿಗೆ ಯಾವ ಅಂತರ್ಯವಿದೆಯೋ ಅದೇ ಅಂತರ್ಯ ಜೀವಪರಮಾತ್ಮರಲ್ಲಿದೆ' ಎಂದೂ ಹೇಳಲಾಗಿದೆ. ಅನುವ್ಯಾಖ್ಯಾನದಲ್ಲಿ 'ಸಾದೃಶ್ಯಂ ಚಾಂಶತಾಶ್ಯಾತ್' ಎಂಬುದಾಗಿ ಸಾದೃಶ್ಯವನ್ನೇ ಅಂಶತ್ವವೆಂದು ಹೇಳಿದ್ದಾರೆ. ಭಾಷ್ಯದಲ್ಲಿ 'ವಿಭಿನ್ನಾಂಶೋ ಅಲ್ಪಶಕ್ತಿಃ ಸ್ಯಾತ್ ಕಿಂಚಿತ್ಸಾದೃಶ್ಯಮಾತ್ರಯುಕ್' ಜೀವರು ಪರಮಾತ್ಮನ ವಿಭಿನ್ನಾಂಶರಾಗಿದ್ದಾರೆ. ಅಂಶಿಯಾದ ಪರಮಾತ್ಮನಿಂದ ಅತ್ಯಲ್ಪವಾದ ಸಾದೃಶ್ಯವನ್ನು ಹೊಂದಿರುವುದರಿಂದ ಅಲ್ಪಶಕ್ತಿಯುಳ್ಳವನಾದ ಜೀವನು ಅಂಶನೆಂದು ಕರೆಸಿಕೊಳ್ಳುತ್ತಾನೆ.

**अत्र चार्थेऽशत्वे सौत्रनानाव्यपदेशशब्दोक्तस्सम्बन्धव्यपदेशः सौत्रान्यथा-व्यपदेशशब्दोक्तासम्बन्धव्यपदेशसहितो हेतुः ।**

ಸೂತ್ರದಲ್ಲಿ ಹೇಳಲ್ಪಟ್ಟ ಅಂಶತ್ವವು ಎರಡು ವಿಧದಲ್ಲಿ ವಿವಕ್ಷಿತವಾಗಿದೆ. ಮೊದಲನೆಯದ್ದು ಉಪಜೀವ್ಯತ್ವ ಎಂಬ ಅರ್ಥದಿಂದ, ಎರಡನೆಯದ್ದು 'ತತೋ ನ್ಯೂನತ್ವೇಸತಿ ಕಿಂಚಿತ್‌ಸಾದೃಶ್ಯ' ಎಂಬ ಅಭಿಪ್ರಾಯದಿಂದ. ಇವೆರಡರಲ್ಲಿ ಮೊದಲನೇ ಉಪಜೀವ್ಯತ್ವ ಎಂಬ ಅಂಶತ್ವಕ್ಕೆ ಸೂತ್ರದಲ್ಲಿ ಎರಡು ಹೇತುಗಳನ್ನು ಹೇಳಿದ್ದಾರೆ. (೧) ನಾನಾವ್ಯಪದೇಶಾತ್ ಜೀವ ಹಾಗೂ ಪರಮಾತ್ಮರ ಸಂಬಂಧವನ್ನು ಅನೇಕ ರೀತಿಯಲ್ಲಿ ಶ್ರುತಿಗಳು ಹೇಳುತ್ತಿವೆ ಎಂದರ್ಥ. ಹೀಗೆ ಸಂಬಂಧ ವ್ಯಪದೇಶವು ಮೊದಲನೇ ಹೇತುವಾಗಿದೆ. (೨) ಅನ್ಯಥಾ ಚಾಪಿ ವ್ಯಪದೇಶಾತ್ - 'ನೈವಾಂಶೋ ನ ಸಂಬಂಧಃ' ಎಂಬುದಾಗಿ ಪರಮಾತ್ಮನಿಗೆ ಜೀವರ ಜೊತೆ ಯಾವುದೇ ಸಂಬಂಧವಿಲ್ಲ ಎಂದು ಶ್ರುತಿ ಹೇಳುತ್ತಿದೆ. ಇದರ ಅಭಿಪ್ರಾಯ ಪರಮಾತ್ಮನು

ಯಾರನ್ನೂ ಕೂಡ ಉಪಜೀವಿಸಿಲ್ಲ ಎಂದಷ್ಟೇ ಆಗಿದೆ. ಹೀಗೆ ಅಸಂಬಂಧ ವ್ಯಪದೇಶದಿಂದ ಸಹಿತವಾದ ಸಂಬಂಧ ವ್ಯಪದೇಶದಿಂದ ಜೀವನು ಕೇವಲ ಉಪಜೀವಕನಾಗಿದ್ದಾನೆ, ಪರಮಾತ್ಮನು ಕೇವಲ ಉಪಜೀವ್ಯನಾಗಿದ್ದಾನೆ ಎಂದು ನಿರ್ಣಯವಾಗುತ್ತದೆ. ಇಂತಹ ಉಪಜೀವ್ಯತ್ವ ಎಂಬ ಅಂಶತ್ವವು ಸಂಬಂಧ ಹಾಗೂ ಅಸಂಬಂಧ ಎಂಬ ಹೇತುವಿನಿಂದ ಸಿದ್ಧವಾಯಿತು.

**द्वितीये तु सौत्रदाशकितवादित्वशब्दोक्तोऽभेदव्यपदेशः सौत्रान्यथाशब्दोक्त-भेदव्यपदेशसहितो हेतुरिति द्रष्टव्यम् ।**

ಎರಡನೆಯ ಅಂಶ ಶಬ್ದಾರ್ಥಕ್ಕೆ ಪುನಃ ಎರಡು ಹೇತುಗಳನ್ನು ತಿಳಿಯಬೇಕು. ಸೂತ್ರದಲ್ಲಿ ಮೀನುಗಾರರು, ಜೂಜುಕೋರರು ಇವರುಗಳಿಂದ ಅಭೇದವ್ಯಪದೇಶವನ್ನು ಮಾಡಲಾಗಿದೆ. 'ಅನ್ಯಥಾ' ಎಂಬ ಶಬ್ದದಿಂದ ಮುಂದೆ ಹೇಳುವುದಕ್ಕಿಂತ ವಿಭಿನ್ನವಾಗಿ ಎಂದರ್ಥ. ಅಂದರೆ ಮೀನುಗಾರರು, ಜೂಜುಕೋರರು ಇವರೆಲ್ಲರೂ ಬ್ರಹ್ಮಸ್ವರೂಪರೇ ಆಗಿದ್ದಾರೆ ಎಂಬುದಕ್ಕೆ ವಿಪರೀತವಾಗಿ ಬ್ರಹ್ಮಭಿನ್ನರಾಗಿದ್ದಾರೆಂಬ ವಿಷಯದಲ್ಲೂ ಶ್ರುತಿ ಇದೆ. ಹೀಗೆ ಭೇದವ್ಯಪದೇಶವೂ ಕೂಡ ಇದೆ. ಶ್ರುತಿಯಲ್ಲಿ ಕೆಲವೆಡೆ ಅಭೇದವ್ಯಪದೇಶ, ಕೆಲವೆಡೆ ಭೇದವ್ಯಪದೇಶವು ಇರುವುದು ವಿರುದ್ಧವಾಗಿದೆ. ಆದ್ದರಿಂದ ಬ್ರಹ್ಮನಿಗಿಂತ ಭಿನ್ನರಾಗಿದ್ದಾರೆಂಬ ಶ್ರುತಿಯನ್ನು ಪ್ರಮಾಣವಾಗಿ ಒಪ್ಪಿ, ಅಭಿನ್ನರಾಗಿದ್ದಾರೆಂಬುದಕ್ಕೆ ಅವರ ಅಧೀನರಾಗಿ ಕಿಂಚಿತ್ಸಾದೃಶ್ಯವನ್ನು ಹೊಂದಿದ್ದಾರೆಂದೇ ಅರ್ಥವನ್ನು ಮಾಡಬೇಕು. ಹೀಗೆ 'ತದಧೀನತ್ವೇಸತಿ ಕಿಂಚಿತ್ ಸಾದೃಶ್ಯ' ಎಂಬ ಅಂಶತ್ವಕ್ಕೆ ಭೇದವ್ಯಪದೇಶ ಹಾಗೂ ಅಭೇದವ್ಯಪದೇಶಗಳೆರಡು ಹೇತುಗಳಾಗಿವೆ.

**अत एव सिद्धान्तभाष्योदाहृतायामाद्यश्रुतौ नानाव्यपदेशो भेदाभेदव्यपदेश-निरपेक्ष एव हेतुरुक्तः ।**

ಆದ್ದರಿಂದಲೇ ಸಿದ್ಧಾಂತ ಭಾಷ್ಯದಲ್ಲಿ ಸ್ಪಷ್ಟವಾದ ಈ ವಿವೇಕವನ್ನು ಕಾಣಬಹುದು. ಮೊದಲು ಉಪಜೀವ್ಯತ್ವ ರೂಪವಾದ ಅಂಶತ್ವವನ್ನು ಸಮರ್ಥನೆ ಮಾಡುವಾಗ 'ಮಾಂ ರಕ್ಷತು ವಿಭುರ್ನಿತ್ಯಂ' ಇತ್ಯಾದಿಯಾಗಿ ಸಂಬಂಧ ವ್ಯಪದೇಶ ಹಾಗೂ ಸಂಬಂಧಾಭಾವ ವ್ಯಪದೇಶಗಳನ್ನೇ ಹೇತುವನ್ನಾಗಿ ನೀಡಿದ್ದಾರೆ. ಅಲ್ಲಿ ಭೇದಾಭೇದವ್ಯಪದೇಶವನ್ನು ಹೇಳಿರುವುದೇ ಇಲ್ಲ. ಆದ್ದರಿಂದ ಉಪಜೀವ್ಯತ್ವ-ರೂಪವಾದ ಅಂಶತ್ವಕ್ಕೆ ಸಂಬಂಧವ್ಯಪದೇಶ ಹಾಗೂ ಸಂಬಂಧಾಭಾವ ವ್ಯಪದೇಶಗಳೇ ಹೇತುವಾಗಿವೆ ಎಂದು ತಿಳಿಯಬೇಕು.

**द्वितीयश्रुतौ तु नानाव्यपदेशनिरपेक्ष एव भेदाभेदव्यपदेशो हेतुरुक्तः । स्मृतौ च नानाव्यपदेशं हेतुमुक्त्वा ''अतश्चांशत्वमुद्दिष्टम्'' इति भेदाभेदव्यपदेशाख्यं हेत्वन्तरमुक्तम् ।**

'ತತೋ ನ್ಯೂನತ್ವೇ ಸತಿ ಕಿಂಚಿತ್ಸಾದೃಶ್ಯಂ' ಎಂಬ ಎರಡನೆಯ ಉಪಜೀವ್ಯತ್ವವನ್ನು ಸಮರ್ಥನೆ ಮಾಡುವಾಗ ಭೇದವ್ಯಪದೇಶ ಹಾಗೂ ಅಭೇದವ್ಯಪದೇಶವನ್ನಷ್ಟೇ ಹೇತುವನ್ನಾಗಿ ಉಲ್ಲೇಖ ಮಾಡಿದ್ದಾರೆ. ಸಂಬಂಧವ್ಯಪದೇಶ ಹಾಗೂ ಅಸಂಬಂಧ ವ್ಯಪದೇಶಗಳನ್ನು ಇಲ್ಲಿ ಉಲ್ಲೇಖ ಮಾಡಿರುವುದೇ ಇಲ್ಲ. ಆದ್ದರಿಂದ 'ತತೋ ನ್ಯೂನತ್ವೇ ಸತಿ' ಕಿಂಚಿತ್ಸಾದೃಶ್ಯರೂಪವಾದ ಉಪಜೀವ್ಯತ್ವಕ್ಕೆ ಸಂಬಂಧವ್ಯಪದೇಶ, ಅಸಂಬಂಧವ್ಯಪದೇಶವು ಹೇತುವಾಗುವುದಿಲ್ಲವೆಂದು ತಿಳಿಯುತ್ತದೆ.

ಅಂಶಾಧಿಕರಣ (೨-೩-೧೮)

ಸ್ಮೃತಿಯಲ್ಲೂ ಕೂಡ ನಾನಾವ್ಯಪದೇಶವನ್ನು ಹೇತುವನ್ನಾಗಿ ಹೇಳಿ ಅನಂತರ 'ಅತಶ್ಚ ಅಂಶತ್ವಮುದ್ದಿಷ್ಟಮ್' ಎಂಬುದಾಗಿ ಭೇದಾಭೇದವ್ಯಪದೇಶವೆಂಬ ಮತ್ತೊಂದು ಹೇತುವನ್ನು ಹೇಳಲಾಗಿದೆ.

**टीकायामपि ''हेत्वन्तरेणैतत्समर्थयत'' इत्युक्तम् । एवं चांशत्वविधिनिषेधौ भिन्नांशत्वस्वरूपांशत्वविषयाविति न विरोध इति ।।**

ಟೀಕಾಕಾರರೂ ಕೂಡ 'ಹೇತ್ವಂತರೇಣೈತತ್ಸಮರ್ಥಯತೇ' ಎಂಬುದಾಗಿ ಬೇರೆ ಹೇತುವಿನಿಂದಲೇ ತತೋ ನ್ಯೂನತ್ವೇ ಸತಿ ಕಿಂಚಿತ್‌ಸಾದೃಶ್ಯ ರೂಪವಾದ ಅಂಶತ್ವವನ್ನು ಸಮರ್ಥನೆ ಮಾಡುತ್ತಿದ್ದಾರೆಂದು ಉಲ್ಲೇಖ ಮಾಡಿದ್ದಾರೆ. ಆದ್ದರಿಂದ ಯಾವ ಶ್ರುತಿಗಳಲ್ಲಿ ಅಂಶತ್ವವನ್ನು ವಿಧಾನ ಮಾಡಲಾಗುತ್ತದೋ ಅಲ್ಲಿ ಜೀವರು ಪರಮಾತ್ಮನ ಭಿನ್ನಾಂಶರಾಗಿದ್ದಾರೆ ಎಂದರ್ಥ. ಯಾವುದಾದರೂ ಶ್ರುತಿಯಲ್ಲಿ ಜೀವರು ಪರಮಾತ್ಮನ ಅಂಶರಲ್ಲ ಎಂಬುದರಲ್ಲಿ ನಿಷೇಧ ಮಾಡಿದ್ದರೆ ಮತ್ಸ್ಯಾದಿ ರೂಪಗಳಂತೆ ಜೀವರು ಸ್ವರೂಪಾಂಶರಲ್ಲ ಎಂದರ್ಥವನ್ನು ವಿವಕ್ಷಿಸಬೇಕು. ಆದ್ದರಿಂದ ಅಂಶತ್ವ ಶ್ರುತಿ ಹಾಗೂ ಅನಂಶತ್ವ ಶ್ರುತಿಗಳಿಗೆ ಪರಸ್ಪರ ವಿರೋಧ ಬರುವುದಿಲ್ಲ.

**एतद्दीर्घतमो वाक्यमिति ।। यदि हि ''अहं शतधाऽहं सहस्रधा'' इत्यादिवदिदमीश्वरवाक्यं स्यात्तदा श्रुतिस्थेन ''मे'' इति शब्देनोक्तं स्वोपास्यत्वमयुक्तं स्यादिति भावः ।।**

ಟೀಕೆಯಲ್ಲಿ 'ಏತದ್ದೀರ್ಘತಮೋ ವಾಕ್ಯಂ' ಎಂದು ಹೇಳಿದ್ದಾರೆ. ಒಂದುವೇಳೆ 'ಅಹಂ ಶತಧಾ ಅಹಂ ಸಹಸ್ರಧಾ' ಇತ್ಯಾದಿ ವಾಕ್ಯಗಳು ಹೇಗೆ ಈಶ್ವರನಿಂದ ಪ್ರಣೀತವಾಗಿವೆಯೋ ಅದರಂತೆ 'ಸ ಪಿತುಃ ಪಿತಾಸತ್' ಎಂಬ ವಾಕ್ಯವೂ ಕೂಡ ಈಶ್ವರನಿಂದ ಪ್ರಣೀತವಾಗಿದ್ದಲ್ಲಿ 'ಮೇ' ಎಂಬ ಶಬ್ದದಿಂದ ಹೇಳಲ್ಪಟ್ಟ ಸ್ವೋಪಾಸ್ಯತ್ವವು ಅಯುಕ್ತವಾಗುತ್ತಿತ್ತು. ಆದ್ದರಿಂದ ಇದು ದೀರ್ಘತಮ ಎಂಬ ಋಷಿಯ ವಾಕ್ಯವೆಂದು ಪರಿಗಣಿಸಬೇಕು. ಯಾವ ಸ್ತ್ರೀಲಿಂಗ ಶಬ್ದದಿಂದ ವಾಚ್ಯನಾದ ಭಗವಂತನ ರೂಪಗಳಿವೆಯೋ ಅದೇ ರೂಪಗಳನ್ನು ಪುರುಷರೂಪಗಳನ್ನಾಗಿ ಜ್ಞಾನಿಗಳು ಹೇಳುತ್ತಾರೆ ಎಂಬುದು ಆ ರೂಪವು ನನ್ನಿಂದ ಉಪಾಸ್ಯವಾಗಿದೆ ಎಂಬುದಾಗಿ ದೀರ್ಘತಮ ಋಷಿಯು ಹೇಳುವ ವಾಕ್ಯವಾಗಿದೆ.

**सूर्यमण्डलसाम्योक्तयेति ।। ''अथ यदेतदादित्यस्य शुक्लं भाः सैवर्गथ यन्नीलं परः कृष्णम् । अथ यदेतदक्ष्णः शुक्लं भाः सैवर्गथ यन्नीलं परः कृष्णम्'' इति तत्वप्रदीपोदाहृतश्रुत्यन्तरोक्तस्याक्षिगतस्य शुक्लादिरूपत्रयवत्त्वेनादित्यसाम्यस्य ''त्रिवृदिव वै चक्षुः शुक्लकृष्णं कनीनिक'' इति महैतरेयोपनिषदि कथितत्वेनेत्यर्थः।**

ಟೀಕೆಯಲ್ಲಿ ಹೀಗೆ ಹೇಳಿದ್ದಾರೆ – ಸೂರ್ಯಮಂಡಲಕ್ಕೆ ಅಭಿಮಾನಿಯಾದವನು ಆದಿತ್ಯ. ಸೂರ್ಯಪ್ರಕಾಶಕ್ಕೆ ಅಭಿಮಾನಿಯಾದವನು ಆದಿತ್ಯನ ಅಂಶನಾಗಿದ್ದಾನೆ. ಇವರಿಬ್ಬರಿಗೆ ಸ್ವರೂಪಾಂಶವೇ ಇರುವುದರಿಂದ ಅನುಗ್ರಾಹ್ಯಾನುಗ್ರಹಭಾವವು ಇರುವುದಿಲ್ಲ. ಇಂತಹ ಸೂರ್ಯಮಂಡಲದ ಸಾಮ್ಯವನ್ನು ಚಕ್ಷುರಿಂದ್ರಿಯಕ್ಕೆ ಹೇಳಲಾಗಿದೆ. ಕಣ್ಣಿನ ಅಭಿಮಾನಿಯಾದ ಅಪಭ್ರಷ್ಟದೇವತೆಯು ಸೂರ್ಯಮಂಡಲಾಭಿ-ಮಾನಿಯ ಅಂಶನಾಗಿದ್ದಾನೆ. ಕಣ್ಣು ಸೂರ್ಯಮಂಡಲದ ಅಂಶವಾಗಿದೆ. ಆದ್ದರಿಂದ ಈ ಅಪಭ್ರಷ್ಟದೇವತೆಯು ಅಂಶಿಯಾದ ಸೂರ್ಯನ ಅಧೀನವಾದ ಪ್ರವೃತ್ತಿಯುಳ್ಳವನಾಗಿದ್ದಾನೆ ಎಂದು

ಟೀಕೆಯಲ್ಲಿ ಹೇಳಿದ್ದಾರೆ. ತತ್ವಪ್ರದೀಪದಲ್ಲಿ ಇದಕ್ಕೆ ಸಂವಾದಿಯಾದ ಛಾಂದೋಗ್ಯಶ್ರುತಿಯನ್ನು ಹೀಗೆ ಉದಾಹರಿಸುತ್ತಾರೆ – 'ಅಥ ಯದೇತದಾದಿತ್ಯಸ್ಯ ಶುಕ್ಲಂ ಭಾಃ ಸೈವರ್ಗಥ ಯನ್ನೀಲಂ ಪರಃ ಕೃಷ್ಣಮ್ । ಅಥ ಯದೇತದಕ್ಷ್ಣಃ ಶುಕ್ಲಂ ಭಾಃ ಸೈವರ್ಗಥ ಯನ್ನೀಲಂ ಪರಃ ಕೃಷ್ಣಮ್ ।' ಆದಿತ್ಯನಿಗೆ ಶುಕ್ಲ, ನೀಲ, ಕೃಷ್ಣ ಎಂಬ ಮೂರು ಬಣ್ಣಗಳಿವೆ. ಕಣ್ಣಿಗೂ ಕೂಡ ಈ ಮೂರು ಬಣ್ಣಗಳಿವೆ. ಹೀಗೆ ಆದಿತ್ಯಸಾಮ್ಯವನ್ನು ತಿಳಿಯಬೇಕು ಎಂದು. ಇದೇ ಅಭಿಪ್ರಾಯವನ್ನು ಭಾಷ್ಯದಲ್ಲಿ ಉದಾಹರಿಸಿದ 'ತ್ರಿವೃದಿವ ವೈ ಚಕ್ಷುಃ ಶುಕ್ಲಕೃಷ್ಣಂ ಕನೀನಿಕಾ' ಎಂಬ ಮಹೈತರೋಪನಿಷತ್ತಿನ ಮಾತಿಗೂ ತಿಳಿಯಬೇಕು.

**मोक्षधर्मे ''शुश्रूषुः'' इत्यत्र जीवनिष्ठशुश्रूषां प्रति प्रकृतो नारायण एव विषयत्वेन सबंध्यत इत्याह – शुश्रूषुस्तस्येति ।।**

ಟೀಕೆಯಲ್ಲಿ 'ಶುಶ್ರೂಷುಃ ತಸ್ಯ ಇತಿ ಶೇಷಃ' ಎಂದು ಹೇಳಿದ್ದಾರೆ. ಭಾಷ್ಯದಲ್ಲಿ ಉದಾಹರಿಸಲ್ಪಟ್ಟ 'ಯದ್ಕಿಂಚಿದಿಹ ಲೋಕೇಸ್ಮಿನ್' ಎಂಬ ಮೋಕ್ಷಧರ್ಮವಚನದಲ್ಲಿ 'ಶುಶ್ರೂಷುಃ' ಎಂಬ ಪದದ ಅನಂತರ 'ತಸ್ಯ' ಎಂಬುದನ್ನು ಶೇಷಪೂರ್ಣ ಮಾಡಿಕೊಳ್ಳಬೇಕು. ಆಗ ಜೀವನಲ್ಲಿರುವ ಶುಶ್ರೂಷತ್ವಕ್ಕೆ ನಾರಾಯಣನು ವಿಷಯನಾಗಿದ್ದಾನೆ ಎಂಬ ಅರ್ಥವು ತಿಳಿಯುತ್ತದೆ. ಹೀಗೆ ನಾರಾಯಣನೇ ವಿಷಯನಾಗಿ ಸಂಬಂಧವನ್ನು ಹೊಂದುತ್ತಾನೆಂಬುದನ್ನು ತಿಳಿಸಲು 'ಶುಶ್ರೂಷುಃ ತಸ್ಯ' ಎಂದು ಹೇಳಿದ್ದಾರೆ.

**एवञ्च भूतसम्बन्धाधीनप्रलयादिमत्त्वाकार्यत्वप्रवृत्तिनिमित्तकाभ्यां भूतप्रलयाव्यक्तशब्दाभ्यामुक्तो जीवसमूहस्तस्य नारायणस्य शुश्रूषुर्मोक्षार्थं जिज्ञासुरिति योजनेति भावः ।**

ಮೋಕ್ಷಧರ್ಮವಚನಕ್ಕೆ ಹೀಗೆ ಯೋಜನೆ ಮಾಡಿದಂತಾಯಿತು – ಭೂತಸಂಬಂಧಪ್ರಯುಕ್ತವಾಗಿ ಜನ್ಮವನ್ನು ಹೊಂದುತ್ತಾನೆ. ಭೂತಸಂಬಂಧವಿರಹಪ್ರಯುಕ್ತವಾಗಿ ಪ್ರಳಯವನ್ನು ಹೊಂದುತ್ತಾನೆ. ಆದ್ದರಿಂದ ಜೀವನು ಭೂತಪ್ರಳಯ ಎಂಬ ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ. ಅದರಂತೆ ಸ್ವರೂಪತಃ ಅಕಾರ್ಯನಾಗಿರುವುದರಿಂದ ಅವ್ಯಕ್ತ ಎಂಬ ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ. ಭೂತಸಂಬಂಧಾಧೀನ-ಪ್ರಳಯಾದಿಮತ್ವ ಎಂಬ ಪ್ರವೃತ್ತಿನಿಮಿತ್ತದಿಂದ ಮತ್ತು ಅಕಾರ್ಯನಿಮಿತ್ತ ಎಂಬ ಪ್ರವೃತ್ತಿನಿಮಿತ್ತದಿಂದ ಭೂತಪ್ರಳಯ ಎಂಬ ಶಬ್ದದಿಂದ ಮತ್ತು ಅವ್ಯಕ್ತ ಎಂಬ ಶಬ್ದದಿಂದ ಜೀವನು ಪ್ರತಿಪಾದ್ಯನಾಗಿದ್ದಾನೆ. ಇಂಥ ಜೀವಸಮೂಹವು ನಾರಾಯಣನನ್ನು ಮೋಕ್ಷಕ್ಕೋಸ್ಕರ ಜಿಜ್ಞಾಸೆ ಮಾಡುತ್ತದೆ ಎಂದು.

**तत्वप्रदीपे तु ''भूतप्रलयस्थानभूताऽव्यक्तशब्दिता श्रीः प्रकृतस्य नारायणस्य शुश्रूषुः । ये चाप्यक्षरमव्यक्तमिति स्मृतेः'' इति प्रकारान्तरेण योजितम् ।**

ತತ್ವಪ್ರದೀಪದಲ್ಲಿ ಭೂತಪ್ರಳಯಗಳಿಗೆ ಆಶ್ರಯಳಾದವಳು ಅವ್ಯಕ್ತಶಬ್ದಪ್ರತಿಪಾದ್ಯಳಾದ ಲಕ್ಷ್ಮೀದೇವಿಯೇ ಆಗಿದ್ದಾಳೆ. ಇವಳು ತನ್ನ ಪತಿಯಾದ ನಾರಾಯಣನ ಬಗ್ಗೆ ನಿರಂತರವಾಗಿ ಜಿಜ್ಞಾಸೆಯನ್ನು ಮಾಡುತ್ತಾಳೆ. 'ಯೇ ಚಾಪ್ಯಕ್ಷರಮವ್ಯಕ್ತಂ' ಎಂಬ ಸ್ಮೃತಿಯು ಇದಕ್ಕೆ ಆಧಾರವಾಗಿದೆ. ಹೀಗೆ ಮತ್ತೊಂದು ಪ್ರಕಾರದಲ್ಲಿ ಯೋಜನೆಯನ್ನು ಮಾಡಿದ್ದಾರೆ.

**ननु मोक्षधर्मे यत्किञ्चिज्जीवजातं देहबद्धमित्यनेन जीवानां देहबन्धमुक्त्वा ''ईश्वरो हि'' इत्यादिनांशिनो नारायणस्यैव निर्गुणादिशब्दैर्देहासम्बघ उक्तो न**

**त्ववताराणामंशानामित्यत आह – अवतारप्रसङ्ग इति ।। प्रकरणादवतारविषयमेव तद्वाक्यम् । नारायणशब्दस्त्वंश्यंशाभेदाभिप्राय इत्यर्थः ।**

ಮೋಕ್ಷಧರ್ಮವಚನದಲ್ಲಿ ಜೀವರ ಸಮೂಹವು ದೇಹಸಂಬಂಧವನ್ನು ಹೊಂದುತ್ತದೆ ಎಂದು ಹೇಳುವುದರ ಮೂಲಕ ಜೀವರಿಗೆ ದೇಹದ ಬಂಧನವನ್ನು ಹೇಳಿದ್ದಾರೆ. 'ಈಶ್ವರೋ ಹಿ' ಇತ್ಯಾದಿ ವಾಕ್ಯದಿಂದ ಅಂಶಿಯಾದ ನಾರಾಯಣನು ನಿರ್ಗುಣಾದಿ ಶಬ್ದಗಳಿಂದ ಪ್ರತಿಪಾದ್ಯನಾಗಿ ದೇಹಸಂಬಂಧ ಇಲ್ಲದವನೆಂದು ಹೇಳಲಾಗಿದೆ. ಹೀಗೆ ಹೇಳುವುದರಿಂದ ಪ್ರಕೃತಕ್ಕೆ ಏನೂ ಉಪಯೋಗವಾಗುವುದಿಲ್ಲ. ಭಗವಂತನ ಅವತಾರಗಳಿಗೂ, ಜೀವರಿಗೂ ವೈಲಕ್ಷಣ್ಯವಿದೆ ಎಂದು ಪ್ರತಿಪಾದನೆ ಮಾಡಬೇಕು. ಅದನ್ನು ಬಿಟ್ಟು ಕೇವಲ ಜೀವರಿಗೆ ದೇಹಸಂಬಂಧವಿದೆ ಎಂದು, ನಾರಾಯಣನಿಗೆ ದೇಹಸಂಬಂಧವಿಲ್ಲವೆಂದು ಹೇಳುವುದರಿಂದ ಏನು ಉಪಯೋಗ? ಈ ಪ್ರಶ್ನೆಗೆ ಟೀಕೆಯಲ್ಲಿ 'ಅವತಾರಪ್ರಸಂಗೇ' ಎಂಬುದರಿಂದ ಉತ್ತರಿಸಿದ್ದಾರೆ.

ಈ ಪ್ರಕರಣ ಬಂದಿರುವುದೇ ಪರಮಾತ್ಮನ ಅವತಾರವಿಷಯದಲ್ಲಿ. ಪರಮಾತ್ಮನ ಅವತಾರಗಳಿಗೆ ದೇಹಸಂಬಂಧವಿಲ್ಲ, ಜೀವರಿಗೆ ದೇಹಸಂಬಂಧವಿದೆ ಎಂದು ಹೇಳಿದರೆ ಪರಮಾತ್ಮನ ಸ್ವರೂಪಾವತಾರಕ್ಕೂ ಭಿನ್ನಾಂಶರಾದ ಜೀವರಿಗೂ ವೈಲಕ್ಷಣ್ಯವಿದೆ ಎಂದು ಅರ್ಥಾತ್ ಸಿದ್ಧವಾಗುತ್ತದೆ. ಹಾಗಾದರೆ ಮತ್ಸ್ಯಾದಿ ಶಬ್ದಗಳು ಇರಬೇಕಿತ್ತು, ನಾರಾಯಣ ಎಂಬ ಶಬ್ದ ಇದೆಯಲ್ಲವೇ? ಎಂದರೆ, ನಾರಾಯಣನಿಗೂ ಮತ್ಸ್ಯಾದಿ ರೂಪಗಳಿಗೂ ಅಭೇದದ ಅಭಿಪ್ರಾಯದಿಂದ ನಾರಾಯಣ ಶಬ್ದವನ್ನು ಪ್ರಯೋಗಿಸಲಾಗಿದೆ.

**''प्रतिरूपो बभूव'' इत्यत्रेन्द्रशब्दोक्तेश्वरस्य प्रतिबिम्बत्वं नोच्यते । प्रतिरूपप्रतियोगिवाचकरूपशब्देनैवोक्तेः । किन्तु ''अस्य'' इति शब्दनिर्दिष्टजीवसमुदायस्यैवेत्याह – जीवसमुदाय इति ।।**

ಟೀಕೆಯಲ್ಲಿ 'ಜೀವಸಮುದಾಯಃ ಪರಮೇಶ್ವರಸ್ಯ' ಎಂಬುದಾಗಿ ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ – 'ಪ್ರತಿರೂಪೋ ಬಭೂವ' ಎಂಬ ಶ್ರುತಿಯನ್ನು ನೋಡಿದಾಗ ಇಂದ್ರಶಬ್ದವಾಚ್ಯನಾದ ಈಶ್ವರನೇ ಪ್ರತಿಬಿಂಬನಾಗಿದ್ದಾನೆ ಎಂಬ ಭ್ರಾಂತಿ ಬರುತ್ತದೆ. ಆದರೆ ಇದು ತಪ್ಪು.

'ಪ್ರತಿರೂಪೋ ಬಭೂವ' ಎಂಬಲ್ಲಿ ಇಂದ್ರ ಶಬ್ದದಿಂದ ಪ್ರತಿಪಾದ್ಯನಾದ ಈಶ್ವರನಿಗೆ ಪ್ರತಿಬಿಂಬತ್ವವನ್ನು ಹೇಳುತ್ತಿಲ್ಲ. ಏಕೆಂದರೆ ಪ್ರತಿಬಿಂಬಪ್ರತಿಯೋಗಿವಾಚಕವಾದ ರೂಪಶಬ್ದದಿಂದಲೇ ಅವನು ಹೇಳಲ್ಪಟ್ಟಿದ್ದಾನೆ. ಆದ್ದರಿಂದ 'ಅಸ್ಯ' ಎಂಬ ಶಬ್ದನಿರ್ದಿಷ್ಟವಾದ ಜೀವಸಮುದಾಯಕ್ಕೆ ಪರಮಾತ್ಮನು ಬಿಂಬನಾಗಿದ್ದಾನೆ ಎಂದು ಶ್ರುತಿ ಹೇಳುತ್ತಿದೆ. ಈ ಅಭಿಪ್ರಾಯವನ್ನು ತಿಳಿಸಲು 'ಜೀವಸಮುದಾಯಃ ಪರಮೇಶ್ವರಸ್ಯ' ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. ಜೀವಸಮುದಾಯವು ಪರಮಾತ್ಮನ ಒಂದೊಂದು ರೂಪಕ್ಕೂ ಕೂಡ ಪ್ರತಿಬಿಂಬವಾಗಿದೆ. ಇಂತಹ ಬಿಂಬರೂಪವನ್ನು ಮುಕ್ತಿಗೋಸ್ಕರ ಜೀವನು ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾನೆ. ಅನಂತ ಜೀವರ ಬಿಂಬರೂಪನಾಗಿ ಪರಮಾತ್ಮನು ತಿಳಿಯುತ್ತಾನೆ ಎಂಬುದು ಶ್ರುತಿಯ ಅಭಿಪ್ರಾಯ.

**अत्र सूत्रे ''स्मर्यते'' इत्यनेन जीवस्येश्वरांशत्वे स्मृतिरुक्ता । ''स्मरन्ति च'' इत्यनेन त्वंशत्वेऽपि मत्स्याद्यवताराणां स्वरूपांशत्वं जीवानां भिन्नांशत्वमित्यत्र स्मृतिरुक्ता ।**

ಸೂತ್ರಗಳ ಸಾರ್ಥಕ್ಯದ ಚಿಂತನೆಯನ್ನು ಮಾಡುತ್ತಿದ್ದಾರೆ. 'ಅಪಿ ಸ್ಮರ್ಯತೇ' ಎಂಬ ಸೂತ್ರದಿಂದಲೇ ಜೀವನು ಈಶ್ವರನ ಅಂಶನಾಗಿದ್ದಾನೆ ಎಂಬ ವಿಷಯದಲ್ಲಿ ಶ್ರುತಿಪ್ರಮಾಣವನ್ನು ಉಲ್ಲೇಖ ಮಾಡಿದ್ದಾಯಿತು. ಪುನಃ 'ಸ್ಮರಂತಿ ಚ' ಎಂಬ ಮತ್ತೊಂದು ಸೂತ್ರದಿಂದ ಅದೇ ವಿಷಯವನ್ನು ಹೇಳಿದರೆ ಪುನರುಕ್ತಿ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು.

ಏಕೆಂದರೆ ಜೀವನು ಈಶ್ವರನ ಅಂಶನಾಗಿದ್ದಾನೆ ಎಂಬ ವಿಷಯದಲ್ಲಿ ಸ್ಮೃತಿಪ್ರಮಾಣವನ್ನು 'ಅಪಿ ಸ್ಮರ್ಯತೇ' ಎಂಬ ಸೂತ್ರವು ಹೇಳುತ್ತಿದೆ. ಆದರೆ 'ಸ್ಮರಂತಿ ಚ' ಎಂಬ ಸೂತ್ರದಲ್ಲಿ ಮತ್ಸ್ಯಾದ್ಯವತಾರಗಳು ಸ್ವರೂಪಾಂಶರಾಗಿದ್ದಾರೆ, ಜೀವರು ಭಿನ್ನಾಂಶರಾಗಿದ್ದಾರೆ, ಈ ವೈಲಕ್ಷಣ್ಯವನ್ನು ತಿಳಿಸಲು ಸ್ಮೃತಿವಾಕ್ಯವನ್ನು ಪ್ರಮಾಣವಾಗಿ ಉಲ್ಲೇಖ ಮಾಡಲಾಗಿದೆ.

**''प्रकाशादिवत्'' इत्यनेनोक्तस्वरूपांशत्वभिन्नांशत्वात्मके वैषम्ये तेजोभिमानिवह्निदेवतांशयोः कालाद्यभिमानिखद्योताभिमानिनोः स्वरूपांशत्वभिन्नांशत्वरूपं वैषम्यं दृष्टान्तितम् ।**

'ಪ್ರಕಾಶಾದಿವನ್ನೈವಂ ಪರಃ' ಎಂಬ ಸೂತ್ರದಲ್ಲೂ ಸೂರ್ಯನ ದೃಷ್ಟಾಂತವನ್ನು ನೀಡಿದ್ದಾರೆ. 'ಅನುಜ್ಞಾ ಪರಿಹಾರೌ' ಎಂಬ ಸೂತ್ರದಲ್ಲೂ ಕೂಡ 'ಜ್ಯೋತಿರಾದಿವತ್' ಎಂಬುದಾಗಿ ತೇಜಸ್ಸಿನ ದೃಷ್ಟಾಂತವನ್ನು ನೀಡಿದ್ದಾರೆ. ಹೀಗೆ ಒಂದೇ ದೃಷ್ಟಾಂತವನ್ನು ಎರಡು ಕಡೆ ನೀಡಿದ್ದು ಪುನರುಕ್ತವಲ್ಲವೇ?

ಈ ಪ್ರಶ್ನೆ ತಪ್ಪು. 'ಪ್ರಕಾಶಾದಿವತ್' ಎಂಬ ಸೂತ್ರದಲ್ಲಿ ಹೇಳಿದ ದೃಷ್ಟಾಂತದ ಅಭಿಪ್ರಾಯ ಹೀಗಿದೆ – ಸ್ವರೂಪಾಂಶತ್ವ ಭಿನ್ನಾಂಶತ್ವದಲ್ಲಿ ವೈಷಮ್ಯವನ್ನು ತೋರಿಸುವುದಕ್ಕಾಗಿ ತೇಜೋಭಿಮಾನಿಯಾದ ವಹ್ನಿಯ ಸ್ವರೂಪಾಂಶವು ಕಾಲಾದ್ಯಭಿಮಾನಿ ದೇವತೆಯಲ್ಲಿ ಇರುತ್ತದೆ. ತೇಜೋಭಿಮಾನಿಯಾದ ವಹ್ನಿದೇವತೆಯ ಭಿನ್ನಾಂಶವು ಖದ್ಯೋತಾಭಿಮಾನಿಯಾದ ದೇವತೆಯಲ್ಲಿ ಇರುತ್ತದೆ. ಹೀಗೆ ಕಾಲಾದ್ಯಭಿಮಾನಿ ಹಾಗೂ ಖದ್ಯೋತಾಭಿಮಾನಿ ದೇವತೆಗಳಲ್ಲಿ ಸ್ವರೂಪಾಂಶತ್ವ-ಭಿನ್ನಾಂಶತ್ವ ಎಂಬ ವೈಷಮ್ಯ ಇರುವಂತೆ ಮತ್ಸ್ಯಾದಿಗಳು ಪರಮಾತ್ಮನ ಸ್ವರೂಪಾಂಶರಾಗಿದ್ದಾರೆ, ಜೀವರು ಭಿನ್ನಾಂಶರಾಗಿದ್ದಾರೆ ಎಂಬ ವಿಷಯದಲ್ಲಿ ಮಾತ್ರ ದೃಷ್ಟಾಂತವನ್ನು ಹೇಳಿದ್ದಾರೆ.

**''ज्योतिरादिवत्'' इत्यनेन त्वंशत्वेऽप्यवताराणां जीवानां वाऽसाम्ये हेत्वन्तरत्वेनोक्तदेहासम्बन्धतत्सम्बन्धप्रयुक्तेऽश्यननुग्राह्यत्वानुग्राह्यत्वरूपवैषम्ये सूर्यमण्डलाभिमान्यादित्यांशयोर्वियद्गतप्रभाभिमान्यक्षिगोलकाभिमानिनोः परदेहासम्बन्धसम्बन्धप्रयुक्तमंश्यननुग्राह्यत्वानुग्राह्यत्वरूपं वैषम्यं दृष्टान्तितमिति भेदः। अक्ष्यभिमानिनी देवता हि परदेहदोषेण दुष्टा । तस्या देवतात्वं त्वन्तर्धानादिशक्तियोगमात्रेणेति द्रष्टव्यम् ।**

'ಜ್ಯೋತಿರಾದಿವತ್' ಎಂಬ ಸೂತ್ರದಲ್ಲಿ ನೀಡಿದ ದೃಷ್ಟಾಂತದ ಅಭಿಪ್ರಾಯ ಹೀಗಿದೆ – ಅವತಾರರೂಪಗಳಿಗೂ ಜೀವರಿಗೂ ಸಾಮ್ಯವು ಇರುವುದಿಲ್ಲ. ಏಕೆಂದರೆ ಅವತಾರರೂಪದಲ್ಲಿ ಅಂಶಿಯ ಅನನುಗ್ರಾಹ್ಯತ್ವ ಇದೆ. ಜೀವರಲ್ಲಿ ಅಂಶಿಯ ಅನುಗ್ರಾಹ್ಯತ್ವವಿದೆ. ಇದಕ್ಕೆ ಕಾರಣವೇನೆಂದರೆ ಮತ್ಸ್ಯಾದಿಗಳಿಗೆ ದೇಹಸಂಬಂಧವಿಲ್ಲ, ಜೀವಾದಿಗಳಿಗೆ ದೇಹಸಂಬಂಧವಿದೆ. ಹೀಗೆ ದೇಹಸಂಬಂಧ ಮತ್ತು ಅಸಂಬಂಧ

ಪ್ರಯುಕ್ತವಾಗಿ ಅಂಶಿಯ ಅನನುಗ್ರಾಹ್ಯತ್ವ ಹಾಗೂ ಅನುಗ್ರಾಹ್ಯತ್ವ ಎಂಬ ವೈಷಮ್ಯವಿದೆ. ಆದ್ದರಿಂದ ಮತ್ಸ್ಯಾದಿಗಳಿಗೂ ಜೀವರುಗಳಿಗೂ ಸಾಮ್ಯವು ಇರುವುದಿಲ್ಲ. ಈ ವಿಷಯದಲ್ಲಿ ದೃಷ್ಟಾಂತವನ್ನು ಈ ಸೂತ್ರವು ಹೇಳುತ್ತಿದೆ. ಇದೇ ವಿಷಯದಲ್ಲಿ ದೃಷ್ಟಾಂತವನ್ನು ಹೀಗೆ ನೀಡಿದ್ದಾರೆ – ಸೂರ್ಯಮಂಡಲಕ್ಕೆ ಅಭಿಮಾನಿಯಾದ ದೇವತೆಯು ಆದಿತ್ಯನ ಅಂಶನಾಗಿದ್ದಾನೆ. ಜ್ಯೋತಿ ಎಂದರೆ ಸೂರ್ಯಮಂಡಲ. ಅದಕ್ಕೆ ಅಭಿಮಾನಿಯಾದ ಪ್ರಕಾಶಕ್ಕೆ ಅಭಿಮಾನಿಯಾದ ದೇವತೆಯು ಸೂರ್ಯನ ಸ್ವರೂಪಾಂಶನಾಗಿದ್ದಾನೆ. ಕಣ್ಣಿನಲ್ಲಿ ಅಭಿಮಾನಿಯಾದ ಅಪಭ್ರಷ್ಟಚೇತನನು ಭಿನ್ನಾಂಶನಾಗಿದ್ದಾನೆ. ಈ ಅಪಭ್ರಷ್ಟಚೇತನನಿಗೂ ಪ್ರಕಾಶಾಭಿಮಾನಿಯಾದ ದೇವತೆಗೂ ಸಾಮ್ಯವು ಇರುವುದಿಲ್ಲ. ಏಕೆಂದರೆ ಅಪಭ್ರಷ್ಟ ದೇವತೆಗೆ ದೇಹಸಂಬಂಧವಿದೆ. ಆದ್ದರಿಂದಲೇ ಅಂಶಿಯಿಂದ ಅನುಗ್ರಾಹ್ಯನೂ ಆಗಿದ್ದಾನೆ. ಪ್ರಕಾಶಾಭಿಮಾನಿ ದೇವತೆಗೆ ದೇಹಸಂಬಂಧವಿಲ್ಲ. ಆದ್ದರಿಂದ ಅಂಶಿಯ ಅನುಗ್ರಾಹ್ಯತ್ವವೂ ಕೂಡ ಇರುವುದಿಲ್ಲ. ಈ ವೈಷಮ್ಯವನ್ನು ತಿಳಿಸುವುದಕ್ಕಾಗಿ ಎರಡನೆಯ ಸೂತ್ರದಲ್ಲಿ 'ಜ್ಯೋತಿರಾದಿವತ್' ಎಂಬ ದೃಷ್ಟಾಂತವನ್ನು ನೀಡಿದ್ದಾರೆ. ಆದ್ದರಿಂದ ಮೇಲ್ನೋಟಕ್ಕೆ ಒಂದೇ ದೃಷ್ಟಾಂತವೆಂದು ಕಂಡರೂ ಬಹಳಷ್ಟು ವ್ಯತ್ಯಾಸವಿದೆ. ಅಕ್ಷ್ಯಭಿಮಾನಿದೇವತೆಗೆ ಪರದೇಹದ ಸಂಬಂಧದಿಂದ ದೋಷವು ಪ್ರಾಪ್ತವಾಗಿದೆ ಹೀಗೆ – ಇವನು ಅಪಭ್ರಷ್ಟನಾದ ಮೇಲೆ ದೇವತೆ ಎಂದು ಹೇಗೆ ಕರೆಯುತ್ತೀರಿ ಎಂದರೆ ಕೇವಲ ಅಂತರ್ದಾನ ಶಕ್ತಿಯು ಇದೆ ಎಂಬ ಕಾರಣದಿಂದ ಮಾತ್ರ ದೇವತಾ ಪದವನ್ನು ಪ್ರಯೋಗಿಸಲಾಗಿದೆ.

**[1]अत्र चांशत्वमयं ज्येष्ठस्यांशोऽयं तु कनिष्ठस्येत्यादाविव शेषत्वविशेषः । न चोपात्तस्य षष्ठीनिर्दिष्टस्य ज्येष्ठादेरप्यंशं प्रति सम्बन्ध्यंशित्वत्यागेन समुदायस्य तत्कल्पनं युक्तम् । अवयवस्याप्यवयविनं प्रति शेषत्वविशेष एवांशत्वम् । स्वरूपांशस्याप्यभेदेऽप्यंशत्वादेवांशिनं प्रत्युपसर्जनत्वमस्त्येव । भेदाभेदाभ्यां तु स्वरूपांशभिन्नांशविभागः । यद्वा संवर्तकाग्निं प्रत्यग्निकणस्येव ब्रह्म प्रति जीवस्य ततो न्यूनत्वे सति तत्सदृशत्वमंशत्वम्। उक्तं हि ''यथार्चिषोऽग्नेः'' इति । स्वरूपांशस्यापि शक्तयात्मना महत्त्वेऽप्यंशिवद्व्यक्तयात्मना तदभावात्ततो न्यूनत्वम् । यद्यपि स्वरूपांशे तद्भिन्नत्वे सति तन्निष्ठबहुधर्मयोगित्वरूपं सादृश्यं नास्ति । तथापीह विवक्षितस्तन्निष्ठबहुधर्मयोगित्वरूपस्तदेकदेशोऽस्त्येव । परं तु भिन्नांशे जीवे बहुत्वं त्रिचतुरादौ सङ्कुचितम् । स्वरूपांशे त्वसङ्कुचितम् । अत एव स्वरूपभिन्नांशयोर्भेदः। प्रतिबिम्बत्वमपि तदधीनत्वे सति तत्सादृश्यविशेष एवेति न प्रतिबिम्बवाचिश्रुतिस्मृति-सूत्रविरोधः। यद्वा तदेकदेशत्वं तदंशत्वम् । एवञ्च स्वरूपांश इव जीवे तदेकदेशत्वाभावान्महारत्नेन सह तुलित(काचखण्डे)काञ्चनखण्डे रत्नचतुर्थांशत्ववन्मार्गे विन्यस्तपादाकृतौ पादत्ववच्चांशत्वं गौणम्। मुख्यत्वे प्रबलबहुभेदश्रुत्यादिबाधात् । उक्तं ह्यनुव्याख्याने ''अंशाभासाश्च सर्वेऽपि**

(೧) (''ಅತ್ರಚ .........'' ಎಂಬಲ್ಲಿಂದ ''......ದರ್ಶಯಿತುಮುಭಯೋಕ್ತಿಃ'' ಎಂಬಲ್ಲಿಯ ತನಕ ರಾಯರು ವ್ಯಾಖ್ಯಾನ ಮಾಡಿರುವುದಿಲ್ಲ. ಆದ್ದರಿಂದ ಪ್ರಕ್ಷಿಪ್ತವೆಂದು ಭಾವಿಸಿ ಇದನ್ನು ಅನುವಾದ ಮಾಡಿಲ್ಲ. ಮತ್ತು ಇಲ್ಲಿರುವ ವಿಷಯವು ಹಿಂದೆ ಪ್ರಸಕ್ತವಾಗಿದೆ)

**परस्यांशा न मुख्यत'' इति । अत्र चाद्ये सौत्रो नानाव्यपदेशो हेतुः । अत एव भाष्ये पितृत्वस्वामित्वादिना ब्रह्मणः शेषित्वमुक्तम् । द्वितीयतृतीययोर्भेदाभेदव्यपदेशौ हेतू । प्रबला भेदश्रुतिः सादृश्याभिप्रायेति दर्शयितुमुभयोक्तिः ।**

**प्रकाशः –**

एवं तर्हि नैवांशो न सम्बन्धो नापेक्ष्यो जीवः परस्येत्यादिश्रुतिविरोध इत्यतस्तत्वप्रदीपोक्तमेव समाधिं तदुक्तमेव ज्ञापकमाह – **अनंशत्वश्रुतिस्त्विति ।। अत एव भाष्येति ।।** एतेन श्रुतिशेषोक्तेरुपयोगश्चोक्तो भवति ।।

ಒಂದುವೇಳೆ ಜೀವನು ಪರಮಾತ್ಮನ ಅಂಶನೆಂದು ಹೇಳಿದರೆ 'ನೈವಾಂಶೋ ನ ಸಂಬಂಧಃ ನಾಪೇಕ್ಷ್ಯೋ ಜೀವಃ ಪರಸ್ಯ' ಇತ್ಯಾದಿ ಶ್ರುತಿವಿರೋಧವು ಬರುತ್ತದಲ್ಲವೇ? ಎಂಬ ಪ್ರಶ್ನೆಗೆ ತತ್ವಪ್ರದೀಪದಲ್ಲಿ ಸಮಾಧಾನವನ್ನು ಹೇಳಿದ್ದಾರೆ. ಆ ಸಮಾಧಾನಕ್ಕೆ ಜ್ಞಾಪಕವನ್ನೂ ಕೂಡ ತತ್ವಪ್ರದೀಪದಲ್ಲಿಯೇ ಹೇಳಿದ್ದಾರೆ. ಅದನ್ನು ಗ್ರಂಥಕಾರರು 'ಅನಂಶತ್ವಶ್ರುತಿಸ್ತು' ಎಂಬುದರಿಂದ ವಿವರಿಸುತ್ತಿದ್ದಾರೆ. ಪರಮಾತ್ಮನು ಕೇವಲ ಉಪಕಾರನಾಗುತ್ತಾನೆ ಹೊರತು ಉಪಕಾರ್ಯನಾಗುವುದಿಲ್ಲ ಎಂಬುದು ಅಭಿಪ್ರಾಯ. ಜೀವನು ಪರಮಾತ್ಮನ ಅಂಶನಲ್ಲವೆಂದು ತಿಳಿಸಲು 'ನೈವಾಂಶೋ ನ ಸಂಬಂಧಃ' ಎಂಬ ಶ್ರುತಿಭಾಗವನ್ನಷ್ಟೇ ಉಲ್ಲೇಖ ಮಾಡಿದರೆ ಸಾಕು 'ನಾಪೇಕ್ಷ್ಯೋ ಜೀವಃ ಪರಸ್ಯ' ಇತ್ಯಾದಿ ಶ್ರುತಿಶೇಷವನ್ನು ಏಕೆ ಉದಾಹರಣೆ ಮಾಡಬೇಕು? ಎಂದರೆ ಸಿದ್ಧಾಂತದಲ್ಲಿ ಅಂಶ ಅಲ್ಲ ಎಂಬುದಕ್ಕೆ ಸಮರ್ಥನೆಯನ್ನು ಮಾಡಬೇಕು. ಅದಕ್ಕೆ ಅನುಕೂಲವಾಗುವುದಕ್ಕಾಗಿ ಶ್ರುತಿಶೇಷವನ್ನು ಉಲ್ಲೇಖ ಮಾಡಿದ್ದಾರೆ.

**प्रकाशः – इत्येवार्थ इति ।।** ननु सर्वात्मना सम्बन्धमात्रनिषेधोऽर्थः । येन तद्विरोधस्स्यादित्यर्थः । एवं ''नानाव्यपदेशात्'' इति टीकोक्तं हेतुं समर्थ्यांशत्वमुपपाद्येदानीं तत्वप्रदीपोक्तं हेत्वन्तरं चोक्त्वा तत्रोपष्टंभकानि चाह – **उक्तेति ।।** नचेत् अयमपि हेतुरस्मिन्पक्षेऽभिमतो न चेदित्यर्थः ।।

'ನಾಸೌ ಅಸ್ಯ ಕುತಶ್ಚನ' ಎಂಬುದಕ್ಕೆ ಸರ್ವಾತ್ಮನಾ ಸಂಬಂಧವಿಲ್ಲ ಎಂದರ್ಥವಲ್ಲ. ನಾವು ಹೇಳಿದ ಅರ್ಥವನ್ನೇ ವಿವಕ್ಷಿಸಬೇಕು. ಆದ್ದರಿಂದ ಶ್ರುತಿಗಳಿಗೆ ಪರಸ್ಪರ ವಿರೋಧ ಬರುವುದಿಲ್ಲ ಎಂದಭಿಪ್ರಾಯ.

ಹೀಗೆ 'ನಾನಾವ್ಯಪದೇಶಾತ್' ಎಂಬ ಟೀಕೆಯಲ್ಲಿ ಹೇಳಲ್ಪಟ್ಟ ಹೇತುವನ್ನು ಸಮರ್ಥನೆ ಮಾಡಿದರು. ಮತ್ತು ಅಂಶತ್ವವನ್ನು ಉಪಪಾದನೆ ಮಾಡಿ ಈಗ ತತ್ವಪ್ರದೀಪದಲ್ಲಿ ಹೇಳಲ್ಪಟ್ಟ ಮತ್ತೊಂದು ಹೇತುವನ್ನು ಕೂಡ ಸಮರ್ಥನೆ ಮಾಡಲು ಉಪಷ್ಟಂಭಕವಾದ ವಿಷಯವನ್ನು 'ಉಕ್ತ' ಇತ್ಯಾದಿ ಗ್ರಂಥದಿಂದ ಪ್ರತಿಪಾದನೆ ಮಾಡುತ್ತಿದ್ದಾರೆ. ಒಂದುವೇಳೆ ಸಂಬಂಧಾಭಾವವನ್ನು ಹೇತುವನ್ನಾಗಿ ವಿವಕ್ಷಿಸದೇ ಇದ್ದರೆ ಚ ಶಬ್ದದ ಅಸ್ವಾರಸ್ಯ ಮೊದಲಾದ ದೋಷಗಳು ಪ್ರಾಪ್ತವಾಗುತ್ತವೆ.

**प्रकाशः – उपजीव्यत्वमेवेति ।।** अन्यथा जीवोपकार्यत्वेनोपजीवकत्वस्याप्यापत्तेरिति भावः ।

ಈಶ್ವರನು ಕೇವಲ ಉಪಜೀವ್ಯನಾಗಿದ್ದಾನೆಂಬ ಮಹಿಮೆಯು ಸಿದ್ಧವಾಗದೇ ಇರಬೇಕಾದೀತು ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಹೀಗೆ ಒಪ್ಪದಿದ್ದರೆ ಕೇವಲ ಸಂಬಂಧ ವ್ಯಪದೇಶವನ್ನಷ್ಟೇ ಹೇಳಿದರೆ ಕೆಲವೊಮ್ಮೆ

ಜೀವನೂ ಕೂಡ ಪರಮಾತ್ಮನಿಗೆ ಉಪಕಾರವನ್ನು ಮಾಡುತ್ತಾನೆ ಎಂಬ ಭ್ರಾಂತಿಯು ಬರುತ್ತಿತ್ತು. ಇದನ್ನು ಪರಿಹಾರ ಮಾಡುವುದಕ್ಕಾಗಿ ಪರಮಾತ್ಮನು ಕೇವಲ ಉಪಜೀವ್ಯನಾಗಿದ್ದಾನೆ ಎಂಬ ಸಮರ್ಥನೆಗೋಸ್ಕರ ಮತ್ತೊಂದು ಹೇತುವನ್ನು ವಿವಕ್ಷಿಸಲಾಗಿದೆ.

**प्रकाशः** – ''प्रकाशादिवन्नैवं पर'' इत्यत्र तु ''नैवांश'' इति सामान्यतोऽनंशत्वश्रुतेरभिन्नांशनिरासपरत्वरूपगतेरार्थिकत्वेऽपि ''न सम्बन्ध'' इति विशिष्यासम्बन्धरूपानंशत्वश्रुतेस्साक्षात्सूत्राद्यारूढगत्युक्तिर्न स्यात् । ''अन्यथा च'' इति सूत्रांशभाष्यांशाभ्यां तच्छ्रुतेरपि हेत्वर्पकतया ग्रहणे तु भगवतोऽनुपकार्यत्वपरतया गतिरुक्ता भवतीति भावेनाह – **असम्बन्धरूपेति** ।।

ಗ್ರಂಥದಲ್ಲಿ 'ಅಸಂಬಂಧರೂಪ ಅನಂಶತ್ವಶ್ರುತೇಃ' ಎಂದು ಹೇಳಿದ್ದಾರೆ. ಅಸಂಬಂಧರೂಪ ಎಂದು ಹೇಳದೇ ಇದ್ದರೆ ಪ್ರಕೃತ 'ನಾನಾವ್ಯಪದೇಶಾತ್' ಎಂದಷ್ಟೇ ಸಾಕು. ಏಕೆಂದರೆ ಅನಂಶತ್ವ ಶ್ರುತಿಗೆ ಗತಿಯನ್ನು ಮುಂದೆ ಸೂತ್ರಕಾರರೇ ಹೇಳುವವರಿದ್ದಾರೆಂಬ ಪ್ರಶ್ನೆ ಬರುತ್ತದೆ. ಈ ಪ್ರಶ್ನೆಗೆ ಉತ್ತರ ಕೊಡುವುದಕ್ಕಾಗಿ ಗ್ರಂಥಕಾರರು 'ಅಸಂಬಂಧರೂಪ ಅನಂಶತ್ವಶ್ರುತೇಃ' ಎಂದು ಹೇಳಿದ್ದಾರೆ. ಜೀವನು ಪರಮಾತ್ಮನ ಅಂಶನಲ್ಲ ಎಂದು ಹೇಳಲು ಎರಡು ಬಗೆಯ ಶ್ರುತಿಗಳಿವೆ. ಅವುಗಳಲ್ಲಿ ನೈವಾಂಶಃ ಎಂಬ ಶ್ರುತಿಯು ಮತ್ಸ್ಯಾದಿಗಳಂತೆ ಜೀವನು ಸ್ವರೂಪಾಂಶನಲ್ಲ ಎಂಬರ್ಥವನ್ನು ಹೇಳಲು ಸಾಧ್ಯವಿಲ್ಲ. ಪರಮಾತ್ಮನು ಉಪಕಾರ್ಯನಾಗುವುದಿಲ್ಲ, ಕೇವಲ ಉಪಕಾರಕನೇ ಆಗುತ್ತಾನೆ ಎಂಬ ಗತಿಯನ್ನೇ ಹೇಳಬೇಕು. ಆದ್ದರಿಂದ ಸಂಬಂಧಾಭಾವವ್ಯಪದೇಶವು ಸಾರ್ಥಕವಾಗಿದೆ. ಆದ್ದರಿಂದ 'ಪ್ರಕಾಶಾದಿವನ್ನೈವಂ ಪರಃ' ಎಂಬ ಸೂತ್ರದಲ್ಲಿ 'ನೈವಾಂಶಃ' ಎಂಬುದಾಗಿ ಸಾಮಾನ್ಯತಃ ಅಂಶನಲ್ಲ ಎಂದು ಹೇಳುವ ಶ್ರುತಿಗೆ ಅಭಿನ್ನಾಂಶನಿರಾಸಪರತ್ವರೂಪವಾದ ಗತಿಯು ಆರ್ಥಿಕವಾದರೂ ಕೂಡ 'ನ ಸಂಬಂಧಃ' ಎಂಬ ಶ್ರುತಿಯು ವಿಶೇಷವಾಗಿ ಸಂಬಂಧರೂಪವಾದ ಅನಂಶತ್ವವರೂಪವನ್ನು ಹೇಳುತ್ತಿದೆ. ಇದಕ್ಕೆ ಸಾಕ್ಷಾತ್ತಾಗಿ ಸೂತ್ರಾರೂಢವಾದ ಗತಿಯನ್ನು ಹೇಳಿದಂತೆ ಆಗುತ್ತಿರಲಿಲ್ಲ. 'ಅನ್ಯಥಾ ಚ' ಎಂಬ ಸೂತ್ರಾಂಶ ಹಾಗೂ ಭಾಷ್ಯದ ಅಂಶದಿಂದ ಆ ಶ್ರುತಿಗೂ ಕೂಡ ಹೇತುಸಮರ್ಪಕವಾಗಿ ಗ್ರಹಣ ಮಾಡಿದಾಗ ಭಗವಂತನು ಅನುಪಕಾರ್ಯನಾಗಿದ್ದಾನೆ ಎಂಬ ಗತಿಯನ್ನು ಹೇಳಿದಂತಾಗುತ್ತದೆ. ಈ ಅಭಿಪ್ರಾಯದಿಂದ ಅಸಂಬಂಧರೂಪ ಎಂದು ಗ್ರಂಥದಲ್ಲಿ ಹೇಳಿದ್ದಾರೆ.

**प्रकाशः** – स्वोक्तेर्मूलमाह – **अत एवेति** ।। सम्बन्धाभावव्यपदेशस्याप्युक्तरूपांशत्व पक्षे हेतुत्वादेवेति वा उक्तोपष्टंभकबाहुल्यादेवेति वार्थः ।।

ತಾವು ಹೇಳಿದ್ದಕ್ಕೆ ಮೂಲವನ್ನು 'ಅತ ಏವ' ಎಂಬುದರಿಂದ ತೋರಿಸುತ್ತಿದ್ದಾರೆ. ಸಂಬಂಧಾಭಾವವ್ಯಪದೇಶವೂ ಕೂಡ ಹಿಂದೆ ಹೇಳಲ್ಪಟ್ಟ ಅಂಶತ್ವರೂಪದಲ್ಲಿ ಹೇತುವಾಗಿರುವುದರಿಂದಲೇ ಅಥವಾ ಉಕ್ತೋಪಷ್ಟಂಭಕಬಾಹುಲ್ಯ ಇರುವುದರಿಂದಲೇ ಎಂಬುದು 'ಅತ ಏವ' ಪದದ ಅರ್ಥವಾಗಿದೆ.

**प्रकाशः** – **उक्तेति** ।। उक्तः शेषत्वरूपस्सम्बन्धः । वक्ष्यमाणः सारूप्यलक्षणोऽभेदः। तदुभयरूपमंशत्वं समर्थयत इत्येवमर्थतया व्याख्येयमित्यर्थः ।

'ಉಕ್ತಃ' ಎಂದರೆ ಶೇಷತ್ವರೂಪವಾದ ಸಂಬಂಧ ಎಂದರ್ಥ. 'ವಕ್ಷ್ಯಮಾಣ' ಎಂದರೆ ಸಾರೂಪ್ಯಲಕ್ಷಣರೂಪವಾದ ಅಭೇದ ಎಂದರ್ಥ. ತದುಭಯರೂಪವಾದ ಅಂಶತ್ವವನ್ನು ಇಲ್ಲಿ ಸಮರ್ಥನೆ ಮಾಡುತ್ತಿದ್ದಾರೆಂದು ವ್ಯಾಖ್ಯಾನವನ್ನು ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

**प्रकाशः** – ननु ''अन्यःपर'' इत्यादिभाष्योक्तश्रुतिरीश्वरस्य जीवोपकार्यत्व-रूपसम्बन्धनिषेधार्थिकाप्यर्थान्नित्यमीश्वरस्य जीवोपजीव्यत्वरूपसम्बन्धपरेति पूर्वान्वयस्य सम्भवेऽपि कथं टीकायां भेदव्यपदेशपरत्वमुपेत्य श्रुतेर्वक्ष्यमाणेनान्वय उक्त इत्यत आह – **जीवेश्वरयोरिति** ।।

'ಅನ್ಯಃ ಪರಃ' ಇತ್ಯಾದಿ ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಯು ಈಶ್ವರನಿಂದ ಜೀವನು ನಿತ್ಯವಾಗಿ ಉಪಕಾರ್ಯನಾಗಿದ್ದಾನೆ. ಈಶ್ವರನಿಗೆ ಜೀವನು ಉಪಕಾರಿಯಾಗಿರುವುದಿಲ್ಲ. ಆದ್ದರಿಂದ ಉಪಕಾರಿತ್ವ ರೂಪವಾದ ಸಂಬಂಧವನ್ನು ನಿಷೇಧ ಮಾಡುತ್ತಿದೆ. ಅರ್ಥಾತ್ ನಿತ್ಯವಾಗಿ ಈಶ್ವರನಿಗೆ ಜೀವೋಪಜೀವ್ಯತ್ವ ಎಂಬ ಸಂಬಂಧವಿದೆ ಎಂದು ಅಭಿಪ್ರಾಯ. ಹೀಗೆ ಹಿಂದಿನ ಅರ್ಥದ ಜೊತೆ ಅನ್ವಯವನ್ನು ಭಾಷ್ಯಕ್ಕೆ ತಿಳಿಯಬೇಕು. ಆದರೂ ಕೂಡ ಟೀಕೆಯಲ್ಲಿ ಭೇದವ್ಯಪದೇಶಪರತ್ವವನ್ನು ಅಂಗೀಕರಿಸಿ ಶ್ರುತಿಗೆ ಮುಂದಿನ ವಾಕ್ಯದ ಜೊತೆ ಅನ್ವಯವನ್ನು ಏಕೆ ಹೇಳಿದರು? ಎಂಬ ಪ್ರಶ್ನೆಗೆ 'ಜೀವೇಶ್ವರಯೋಃ' ಎಂದು ಉತ್ತರಿಸುತ್ತಿದ್ದಾರೆ.

**प्रकाशः** – एतेन ''जीवः परमात्मनोंऽश इति प्रतिज्ञातेऽर्थे नानाव्यपदेशादिति पुत्रभ्रातृत्वादिनानासम्बन्धव्यपदेशं हेतुमभिधायान्यथा चापीत्यादिनाऽर्थापत्तिरप्यच्युत'' इत्यादि सुधायामपि ''अभिधाय'' इत्यनन्तरं अन्यथा चेश्वरजीवयोरुप-कार्योपकारित्वरूपं सम्बन्धाभावरूपं हेतुं चाभिधायेत्यप्युपलक्ष्यमित्युक्तं भवति । ''श्रुतिद्वयेन जीवेश्वरयोर्भेदाभेदावुच्येते'' इत्यादिटीकां विवृण्वन् द्वितीयपक्षमुपपादयति।। **किञ्चेति** ।।

ಹೀಗೆ ಹೇಳಿದ್ದರಿಂದ 'ಜೀವಃ ಪರಮಾತ್ಮನೋ ಅಂಶಃ' ಎಂಬ ಪ್ರತಿಜ್ಞೆಗೆ 'ನಾನಾವ್ಯಪದೇಶಾತ್' ಎಂಬುದನ್ನು ಹೇತುವನ್ನಾಗಿ ಹೇಳಿದಂತಾಯಿತು. 'ನಾನಾವ್ಯಪದೇಶಾತ್' ಎಂದರೆ ಪುತ್ರಭ್ರಾತೃತ್ವಾದಿ ನಾನಾವಿಧವಾದ ಸಂಬಂಧ ವ್ಯಪದೇಶವಿರುವುದರಿಂದ ಎಂದರ್ಥ. 'ಅನ್ಯಥಾಚಾಪಿ' ಎಂಬ ಸೂತ್ರದ ಭಾಗದಿಂದ ಅರ್ಥಾಪತ್ತಿ ಪ್ರಮಾಣವನ್ನೂ ಕೂಡ ತಿಳಿಸಿದ್ದಾರೆ. ಇಷ್ಟು ನ್ಯಾಯಸುಧಾಗ್ರಂಥದಲ್ಲಿ ತಿಳಿಸಿದ್ದಾರೆ. ಈ ನ್ಯಾಯಸುಧಾ ಗ್ರಂಥದಲ್ಲಿ 'ಅಭಿಧಾಯ' ಎಂಬ ಪದದ ಅನಂತರ 'ಅನ್ಯಥಾ ಚ ಈಶ್ವರ ಜೀವಯೋಃ ಉಪಕಾರ್ಯ-ಉಪಕಾರಿತ್ವರೂಪಸಂಬಂಧಾಭಾವಂ ಹೇತುಂ ಚ ಅಭಿದಾಯ' ಎಂಬುದನ್ನು ಉಪಲಕ್ಷಣಯಾ ವಿವಕ್ಷಿಸಬೇಕು. ಹೀಗೆ ಅಂಶಾಂಶಿಭಾವವನ್ನು ಒಪ್ಪದಿದ್ದರೆ ಈಶ್ವರ ಹಾಗೂ ಜೀವರಿಗೆ ಉಪಕಾರ್ಯ ಹಾಗೂ ಉಪಕಾರಿತ್ವರೂಪವಾದ ಸಂಬಂಧವೇ ಇಲ್ಲದೇ ಇರಬೇಕಾದೀತು ಎಂಬುದನ್ನು ಇಟ್ಟುಕೊಳ್ಳಬೇಕು ಎಂದಭಿಪ್ರಾಯ.

'ಶ್ರುತಿದ್ವಯೇನ ಜೀವೇಶ್ವರಯೋಃ ಭೇದಾಭೇದೌ ಉಚ್ಯೇತೇ' ಇತ್ಯಾದಿ ಟೀಕೆಯನ್ನು ವಿವರಿಸುತ್ತಾ ಎರಡನೇ ಪಕ್ಷವನ್ನು ಉಪಪಾದನೆ ಮಾಡಲು 'ಕಿಂಚ' ಇತ್ಯಾದಿ ಗ್ರಂಥವು ಹೊರಟಿದೆ.

**प्रकाशः** – **उक्तं हीति** ।। द्वितीयगीताभाष्योक्ते स्कान्दवाक्ये ''यदन्तरं प्रलयजवारिविप्रुषोर्यदन्तरं स्तम्बहिरण्यगर्भयोः । स्फुलिङ्गसंवर्तकयोर्यदन्तरं तदन्तरं विष्णुहिरण्यगर्भयोः'' इत्युक्तया जीवमात्रे महदन्तरं कैमुत्यसिद्धमिति भावः ।

'ಉಕ್ತಂ ಹಿ' ಎಂದರೆ ಎರಡನೇ ಅಧ್ಯಾಯದ ಗೀತಾಭಾಷ್ಯದಲ್ಲಿ ಉದಾಹರಿಸಿದ ಸ್ಕಾಂದಪುರಾಣದಲ್ಲಿ ಹೀಗೆ ಹೇಳಿದ್ದಾರೆ ಎಂದರ್ಥ.

'ಯದಂತರಂ ಪ್ರಲಯಜವಾರಿವಿಪ್ರುಷೋ ಯದಂತರಂ ಸ್ತಂಬಹಿರಣ್ಯಗರ್ಭಯೋಃ।

ಸ್ಫುಲಿಂಗಸಂವರ್ತಕಕಾರ್ಯಯೋರ್ದಂತರಂ ತದಂತರಂ ವಿಷ್ಣುಹಿರಣ್ಯಗರ್ಭಯೋಃ॥'

ಪ್ರಳಯಜಲಕ್ಕೂ ಒಂದು ಬಿಂದು ಹನಿನೀರಿಗೂ ಯಾವ ವ್ಯತ್ಯಾಸವಿದೆಯೋ, ಒಂದು ಕಂಬಕ್ಕೂ ಚತುರ್ಮುಖನಿಗೂ ಯಾವ ವ್ಯತ್ಯಾಸವಿದೆಯೋ, ಪ್ರಳಯಾಗ್ನಿಗೂ ಒಂದು ಸಣ್ಣ ಬೆಂಕಿಯ ಕಿಡಿಗೂ ಯಾವ ವ್ಯತ್ಯಾಸವಿದೆಯೋ ಇಷ್ಟು ಅಂತರ್ಯ ವಿಷ್ಣು ಹಾಗೂ ಹಿರಣ್ಯಗರ್ಭರ ನಡುವೆ ಇದೆ.

ಹೀಗೆ ಹಿರಣ್ಯಗರ್ಭ ಹಾಗೂ ವಿಷ್ಣುವಿಗೆ ಅಂತರ್ಯವನ್ನು ಹೇಳಿದ ಮೇಲೆ ಜೀವರಿಗೂ, ಮಹಾವಿಷ್ಣುವಿಗೂ ಬಹಳಷ್ಟು ಅಂತರ್ಯವಿದೆ ಎಂಬುದು ಕೈಮುತ್ಯನ್ಯಾಯದಿಂದ ಸಿದ್ಧವಾಯಿತು ಎಂದಭಿಪ್ರಾಯ.

**प्रकाशः –** आद्ये सदोपजीव्यत्वरूपतच्छेषत्वाख्यांशत्वे ।। **असम्बन्धेति** ।। जीवेशयोरुपकर्तृपकार्यत्वरूपसम्बन्धाभावव्यपदेशोत्यर्थः । द्वितीये किञ्चिन्न्यूनत्वे सति सादृश्यरूपेऽशत्वे ।।

'ಆದ್ಯೇ' ಎಂದರೆ ಸದಾ ಉಪಜೀವ್ಯತ್ವರೂಪವಾದ ತಚ್ಛೇಷತ್ವ ಎಂಬ ಅಂಶತ್ವದಲ್ಲಿ ಎಂದರ್ಥ. 'ಅಸಂಬಂಧ' ಎಂಬುದರ ಅಭಿಪ್ರಾಯ ಹೀಗಿದೆ– ಜೀವ ಹಾಗೂ ಈಶ್ವರರಿಗೆ ಉಪಕರ್ತೃ ಹಾಗೂ ಉಪಕಾರ್ಯತ್ವ ರೂಪವಾದ ಸಂಬಂಧವು ಇಲ್ಲದಿದ್ದರೆ ಎಂದರ್ಥ. 'ದ್ವಿತೀಯೇ' ಎಂದರೆ ಕಿಂಚಿನ್ನ್ಯೂನತ್ವೇ ಸತಿ ಸಾದೃಶ್ಯರೂಪವಾದ ಅಂಶತ್ವವು ವಿವಕ್ಷಿತವಾದಾಗ ಎಂದರ್ಥ.

**प्रकाशः – अत एवेति** ।। हेतुसाध्ययोर्व्यवस्थितत्वादेवेत्यर्थः । द्वितीयपक्षे कथं श्रुत्योरविरोध इत्यत आह – **एवञ्चेति** ।। सादृश्यादि रूपेऽशत्वेऽभिमते सतीत्यर्थः। टीकाक्षरार्थानाह – **एतद्दीर्घतमो वाक्यमितीत्यादिना** ।। सूत्राणां पौनरुक्त्यं टीकाद्युक्तार्थभेदप्रदर्शनेन निराह – **अत्र सूत्र इत्यादिना** ।।

'ಅತ ಏವ' ಎಂದರೆ ಹೇತು ಹಾಗೂ ಸಾಧ್ಯಗಳು ವ್ಯವಸ್ಥಿತವಾಗಿರುವುದರಿಂದಲೇ ಎಂದರ್ಥ. ಎರಡನೇ ಪಕ್ಷದಲ್ಲಿ ಶ್ರುತಿದ್ವಯಗಳಿಗೆ ವಿರೋಧವು ಹೇಗೆ ಪರಿಹಾರವಾಗುತ್ತದೆ? ಎಂಬ ಪ್ರಶ್ನೆಗೆ 'ಏವಂ ಚ' ಎಂಬುದರಿಂದ ಉತ್ತರಿಸಿದ್ದಾರೆ. ಸಾದೃಶ್ಯಾದಿರೂಪ ಅಂಶತ್ವವು ಅಭಿಮತವಾಗಿರುವುದರಿಂದಲೇ ಎಂಬುದು 'ಏವಂ ಚ' ಎಂಬುದರ ಅಭಿಪ್ರಾಯವಾಗಿದೆ. ಟೀಕೆಯ ಕಠಿಣಪದದ ಅರ್ಥವನ್ನು 'ಏತದ್ದೀರ್ಘತಮೋ ವಾಕ್ಯಂ' ಇತ್ಯಾದಿಯಾಗಿ ಹೇಳಿದ್ದಾರೆ. ಸೂತ್ರಗಳಲ್ಲಿರುವ ಪೌನರುಕ್ತ್ಯವನ್ನು ಟೀಕಾದಿಗಳಲ್ಲಿ ಹೇಳಲ್ಪಟ್ಟ ಅರ್ಥಭೇದಪ್ರದರ್ಶನದಿಂದಲೇ ನಿರಾಕರಣೆ ಮಾಡಲು 'ಅತ್ರ ಸೂತ್ರೇ' ಇತ್ಯಾದಿ ಗ್ರಂಥವು ಹೊರಟಿದೆ.

## तात्पर्यचन्द्रिका

**अन्ये तु ।। भेदाभेदश्रुत्योर्विरोध इति पूर्वपक्षे भेदस्य प्रत्यक्षादिना प्राप्तत्वात् श्रुतेस्तत्रातात्पर्यात् स मिथ्या । अभेदस्य त्वप्राप्तत्वात् श्रुतेस्तत्र तात्पर्यात् स सत्य इति सिद्धान्त इत्यधिकरणतात्पर्यमित्याहुः ।**

ಪರಿಪೂರ್ಣಚಂದ್ರಿಕಾ

ಅದ್ವೈತಿಗಳು ಈ ಅಧಿಕರಣದ ರಚನೆಯನ್ನು ಹೀಗೆ ಹೇಳುತ್ತಾರೆ – ಭೇದಾಭೇದಶ್ರುತಿಗಳಿಗೆ ವಿರೋಧವು ಬರುತ್ತದಲ್ಲವೇ ಎಂಬುದು ಪೂರ್ವಪಕ್ಷ. ಭೇದವು ಪ್ರತ್ಯಕ್ಷದಿಂದ ಪ್ರಾಪ್ತವಾಗಿದೆ. ಇಂತಹ ಭೇದದಲ್ಲಿ ಶ್ರುತಿಗೆ ತಾತ್ಪರ್ಯವು ಇರುವುದಿಲ್ಲ. ಆದ್ದರಿಂದ ಭೇದವು ಮಿಥ್ಯಾಭೂತವಾಗಿದೆ. ಅಭೇದವು ಪ್ರತ್ಯಕ್ಷಪ್ರಾಪ್ತವಲ್ಲದ್ದರಿಂದ ಶ್ರುತಿಗೆ ಅಲ್ಲಿ ತಾತ್ಪರ್ಯವಿದೆ. ಆದ್ದರಿಂದ ಅಭೇದವು ಸತ್ಯವಾಗಿದೆ ಎಂಬುದು ಅಧಿಕರಣದ ಸಿದ್ಧಾಂತ.

**तत्र । मद्रीत्यांशानंशत्वश्रुत्योर्विरोधे प्राप्ते तदविरोधायानंशत्वश्रुतेर्गतिमुक्त्वां शत्वोक्तेरेव ''अंशो नानाव्यपदेशात्'' इति सूत्राक्षरानुसारित्वात् । अन्यथांशपदस्थानेऽभिन्नपदं प्रयुज्येत । न ह्यंशत्वमेवाभिन्नत्वम् । नापि तद्व्याप्तम्। पटांशस्याप्येकस्य तन्तोः पटाद्भेददर्शनात् ।**

ಈ ಅಧಿಕರಣ ರಚನೆ ತಪ್ಪು. ನಾವು ಹೇಳುವಂತೆ ಕೆಲವು ಶ್ರುತಿಗಳು ಜೀವನು ಪರಮಾತ್ಮನ ಅಂಶವೆಂದು ಹೇಳುತ್ತಿವೆ. ಕೆಲವು ಅಂಶ ಅಲ್ಲ ಎನ್ನುತ್ತಿವೆ. ಈ ಎರಡು ಶ್ರುತಿಗಳಿಗೆ ಪರಸ್ಪರ ವಿರೋಧವು ಪ್ರಾಪ್ತವಾಗುತ್ತದೆ. ಇದರ ಪರಿಹಾರಕ್ಕಾಗಿ ಅಂಶನಲ್ಲ ಎಂದು ಹೇಳುವ ಶ್ರುತಿಯ ತಾತ್ಪರ್ಯವನ್ನು ತಿಳಿಸಿ ಜೀವರು ಪರಮಾತ್ಮರ ಅಂಶರೂಪರೇ ಆಗಿದ್ದಾರೆ ಎಂಬುದರ ಸಮರ್ಥನೆಗಾಗಿ 'ಅಂಶೋ ನಾನೋವ್ಯಪದೇಶಾತ್' ಇತ್ಯಾದಿ ಅಂಶಾಧಿಕರಣವು ಹೊರಟಿದೆ ಎಂದು ಹೇಳುವುದೇ ಅತ್ಯಂತ ಸೂಕ್ತವಾಗಿದೆ. ಇದನ್ನು ಬಿಟ್ಟು ಅಭೇದ ಸಮರ್ಥನೆಗಾಗಿ ಈ ಅಧಿಕರಣವು ಹೊರಟಿದೆ ಎನ್ನುವುದು ಅಸಂಬದ್ಧವಾಗಿದೆ. ಹಾಗೇನಾದರೂ ಸೂತ್ರಕಾರರಿಗೆ ಭೇದವನ್ನು ನಿರಾಕರಣೆ ಮಾಡಿ ಅಭೇದವನ್ನು ಸಮರ್ಥನೆ ಮಾಡುವ ಉದ್ದೇಶವಿದ್ದಲ್ಲಿ ಅಂಶಪದದ ಬದಲು ಅಭಿನ್ನ ಎಂಬ ಪದವನ್ನು ಪ್ರಯೋಗ ಮಾಡುತ್ತಿದ್ದರು.

ಅಂಶತ್ವವನ್ನೇ ಅಭಿನ್ನತ್ವವೆಂದು ವಿವಕ್ಷಿಸಲು ಸಾಧ್ಯವಿಲ್ಲ. ಅಥವಾ ಅಂಶತ್ವದಿಂದ ಅಭಿನ್ನತ್ವವು ವ್ಯಾಪ್ತವೂ ಅಲ್ಲ. ಏಕೆಂದರೆ ಒಂದು ತಂತುವು ಪಟದ ಅಂಶವಾಗಿದ್ದರೂ ಪಟದಿಂದ ಭೇದವಿರುವುದೇ ಲೋಕದಲ್ಲಿ ಕಂಡಿದೆ.

**किञ्च त्वन्मते सूत्रोक्तं जीवस्यांशत्वं न तावदारम्भकत्वम् । ब्रह्मणोऽनादित्वात्। नापि खण्डत्वम् । अच्छेद्यत्वात् ।**

ಮತ್ತು ನಿಮ್ಮ ಮತದಲ್ಲಿ ಸೂತ್ರೋಕ್ತವಾದ ಜೀವಾಂಶತ್ವವು ಆರಂಭಕತ್ವವೆಂದು ವಿವಕ್ಷಿಸಲಾಗಿದೆ. ಬ್ರಹ್ಮನು ಅನಾದಿಯಾಗಿದ್ದಾನೆ. ಸಾದಿಯಾಗಿದ್ದಲ್ಲಿ ಮಾತ್ರ ಆರಂಭಕತ್ವವನ್ನು ಹೇಳಲು ಸಾಧ್ಯ. ಖಂಡತ್ವವನ್ನೂ ಕೂಡ ಅಂಶತ್ವವೆನ್ನಲಾಗದು. ಬ್ರಹ್ಮನು ಅಚ್ಛೇದ್ಯನಾಗಿದ್ದಾನೆ. ಖಂಡನಾಗಬೇಕಾದರೆ ಛೇದ್ಯನಾಗಿರಬೇಕು. ಸಮುದಾಯಿತ್ವವನ್ನೂ ಕೂಡ ಅಂಶತ್ವವೆನ್ನಲಾಗದು. ಸಮುದಾಯವು ಸಮುದಾಯಿಗಿಂತ ಅಭಿನ್ನವಾಗಿದೆ. ಆಗ ವ್ಯವಹಾರದಶೆಯಲ್ಲೂ ಕೂಡ ಜೀವನಿಗಿಂತ ಭಿನ್ನನಾದ ಬ್ರಹ್ಮನು ಇರದೇ ಇರಬೇಕಾಗುತ್ತದೆ.

**नापि समुदायित्वम् । (समुदाय्यनन्यत्वात्समुदायस्य व्यवहारदशायामपि जीवान्यब्रह्मायोगात् ।) एकैकस्य जीवस्य मुक्तावेकैकस्य कन्याभागस्यापगमे कन्थाया इव ब्रह्मणो ह्रासप्रसङ्गात् । अनङ्गीकाराच्च ।**

ಅಂಶಾಧಿಕರಣ (೨-೩-೧೮)

ಸಮುದಾಯಿತ್ವವನ್ನು ಅಂಶತ್ವವೆಂದು ವಿವಕ್ಷಿಸಲಾಗದು. ಜೀವರುಗಳು ಸಮುದಾಯಿ ಎನಿಸುತ್ತಾರೆ. ಬ್ರಹ್ಮನು ಸಮುದಾಯ ಎನಿಸುತ್ತಾನೆ. ಹೀಗೆ ಹೇಳಿದಾಗ ಒಬ್ಬೊಬ್ಬ ಜೀವರಿಗೆ ಮೋಕ್ಷವಾದಾಗ ಕೊನೆಯಲ್ಲಿ ಬ್ರಹ್ಮನೇ ಸಂಪೂರ್ಣವಾಗಿ ನಾಶವಾಗುವ ಪರಿಸ್ಥಿತಿ ಬರುತ್ತದೆ. ಉದಾಹರಣೆ – ಹರಿದ ಬಟ್ಟೆಯ ಒಂದೊಂದೇ ಭಾಗವು ನಾಶವಾಗುತ್ತಾ ಬಂದಾಗ ಕೊನೆಯಲ್ಲಿ ಆ ಬಟ್ಟೆಯೇ ಪೂರ್ಣ ನಾಶವಾಗುತ್ತದೆ. ಇದರಂತೆ ಬ್ರಹ್ಮನೇ ಪೂರ್ಣವಾಗಿ ನಾಶವಾಗುವ ಪ್ರಸಂಗ ಬರುತ್ತದೆ. ಆದ್ದರಿಂದ ಸಮುದಾಯಿತ್ವವನ್ನು ಅಂಶತ್ವವೆಂದು ವಿವಕ್ಷಿಸಲಾಗದು. ಅಷ್ಟೇ ಅಲ್ಲದೇ, ಇದನ್ನು ನೀವು ಅಂಗೀಕಾರ ಮಾಡಿಯೂ ಇಲ್ಲ. ಜೀವರುಗಳ ಸಮುದಾಯವನ್ನೇ ಬ್ರಹ್ಮ ಎಂದು ನೀವು ಎಲ್ಲಿಯೂ ಹೇಳಿಲ್ಲ.

**नापि भिन्नाभिन्नत्वम् । विरोधात् । ''भेदाभेदौ न मुख्यत'' इत्यादिस्मृतिविरोधाच्च । नाप्यवयवत्वम् । तन्तोः पटं प्रतीव निरवयवब्रह्मप्रत्य-कल्पितस्य तस्यायोगात् । अत एव परेषां भाष्यम् ''अंश इवांशः । नहि निरवयवस्य मुख्योंऽशः सम्भवति'' इति ।**

ಅಂಶತ್ವವನ್ನು ಭೇದಾಭೇದವೆಂದು ವಿವಕ್ಷಿಸಲಾಗದು. ಏಕೆಂದರೆ ಇವೆರಡಕ್ಕೆ ಪರಸ್ಪರ ವಿರೋಧವಿದೆ. ಮತ್ತು 'ಭೇದಾಭೇದೌ ನ ಮುಖ್ಯತಃ' ಎಂಬ ಸ್ಮೃತಿವಿರೋಧವೂ ಕೂಡ ಇದೆ. ಅವಯತ್ವವನ್ನು ಅಂಶತ್ವವೆನ್ನಲಾಗದು. ಏಕೆಂದರೆ ಬಟ್ಟೆಗೆ ತಂತುವು ಅವಯವವೆನಿಸಿದೆ. ಅದರಂತೆ ಬ್ರಹ್ಮನಿಗೆ ಜೀವನು ಅವಯವ ಎನಿಸಿದ್ದಾನೆ ಎನ್ನಬೇಕು. ಆದರೆ ನೂಲು ಬಟ್ಟೆಯ ಅವಯವವಾದಂತೆ ಜೀವನು ಬ್ರಹ್ಮನ ಅವಯವ ಆಗಲಾರನು. ಬಟ್ಟೆಯು ಸಾವಯವವಾದ್ದರಿಂದ ತಂತುವು ಅದರ ಅವಯವವೆನಿಸುತ್ತದೆ. ಬ್ರಹ್ಮನು ನಿರವಯವನಾದ್ದರಿಂದ ಜೀವನು ಅವನ ಅವಯವನೆನಿಸಲು ಸಾಧ್ಯವಿಲ್ಲ. ಆದ್ದರಿಂದಲೇ ಪರರ ಭಾಷ್ಯದಲ್ಲಿ 'ಅಂಶ ಇವಾಂಶಃ, ನಹಿ ನಿರವಯವಸ್ಯ ಮುಖ್ಯೋಂಶಃ ಸಂಭವತಿ' ನಿರವಯವನಾದ ಬ್ರಹ್ಮನಿಗೆ ಮುಖ್ಯವಾದ ಅಂಶವು ಕೂಡುವುದಿಲ್ಲ. ಅಂಶದಂತೆ ಇದ್ದಾನೆ ಎಂದಷ್ಟೇ ವಿವಕ್ಷಿಸಬೇಕು ಎನ್ನಲಾಗಿದೆ. ಆದ್ದರಿಂದ ಅಕಲ್ಪಿತವಾದ ಅಂಶವನ್ನು ಹೇಳಲು ಸಾಧ್ಯವಿಲ್ಲ.

**नापि घटाकाशस्याकाशं प्रतीव कल्पितावयवत्वम् । प्रतिबिम्बपक्षे तदयोगात्। अवच्छेदपक्षस्य च विवरण एव निरासात् । आकाशांशः स्वाभाविक इत्यन्यत्रोक्तत्वात्।**

ಘಟಾಕಾಶವು ಮಹಾಕಾಶದಲ್ಲಿ ಹೇಗೆ ಕಲ್ಪಿತವಾದ ಅವಯವವುಳ್ಳದ್ದಾಗಿದೆಯೋ ಅದರಂತೆ ಮಹಾಕಾಶದಂತೆ ಬ್ರಹ್ಮನಿದ್ದಾನೆ, ಘಟಾಕಾಶ ಇದ್ದಂತೆ ಜೀವನಿದ್ದಾನೆ. ಘಟಾಕಾಶವು ಕಲ್ಪಿತವಾದಂತೆ ಜೀವನೂ ಕೂಡ ಕಲ್ಪಿತನಾಗಿದ್ದಾನೆ. ಇದನ್ನೇ ಅಂಶ ಶಬ್ದದಿಂದ ಸೂತ್ರವು ಹೇಳುತ್ತಿದೆ ಎನ್ನಬೇಕು.

ಇದೂ ಕೂಡ ತಪ್ಪು. ಜೀವನನ್ನು ನೀವು ಪ್ರತಿಬಿಂಬವೆಂದು ವಿವಕ್ಷಿಸಿರುವುದರಿಂದ ಘಟಾಕಾಶದ ದೃಷ್ಟಾಂತವೇ ಯುಕ್ತವಾಗುವುದಿಲ್ಲ. ಇನ್ನು ಅವಚ್ಛೇದಪಕ್ಷವನ್ನು ವಿವರಣದಲ್ಲಿಯೇ ನಿರಾಕರಣ ಮಾಡಿದ್ದಾಗಿದೆ. ಆಕಾಶಾಂಶವು ಸ್ವಾಭಾವಿಕವಾಗಿದೆ ಎಂದು ಬೇರೆಡೆ ನಾವು ಹೇಳಿದ್ದೇವೆ.

**''आभास एव च'' इत्युत्तरसूत्रेण ''आभास एव चैष जीवः परस्य जलसूर्यकादिवत्'' इति त्वद्भाष्येण च विरोधाच्च ।**

'ಆಭಾಸ ಏವ ಚ' ಎಂಬ ಮುಂದಿನ ಸೂತ್ರದಲ್ಲಿ 'ಆಭಾಸ ಏವ ಚೈಷ ಜೀವಃ ಪರಸ್ಯ ಜಲಸೂರ್ಯಕಾದಿವತ್' ಎಂಬುದಾಗಿ ಶಂಕರಭಾಷ್ಯದಲ್ಲಿ ಹೇಳಲಾಗಿದೆ. ಆದ್ದರಿಂದ ಸೂರ್ಯನ

ಪ್ರತಿಬಿಂಬವು ನೀರಿನಲ್ಲಿ ಇರುವಂತೆ ಜೀವನು ಪರಮಾತ್ಮನ ಪ್ರತಿಬಿಂಬನಾಗಿದ್ದಾನೆ ಎಂಬುದು ಈ ಭಾಷ್ಯವಾಕ್ಯದ ಅಭಿಪ್ರಾಯವಾಗಿದೆ. ಹೀಗೆ ನೀವು ಬಿಂಬ ಪ್ರತಿಬಿಂಬದ ಭಾವವನ್ನು ಒಪ್ಪಿದ ಮೇಲೆ ಘಟಾಕಾಶದಂತೆ ಅಂಶಾಂಶಿಭಾವವನ್ನು ಒಪ್ಪುವುದು ತಪ್ಪಾಗುತ್ತದೆ.

**कल्पितपरत्वे ''पादोऽस्य विश्वा भूतानि'' इत्यादिश्रुतेः, ''ममैवांश'' इत्यादिस्मृतेः, ''अंश'' इति सूत्रस्य चाप्रामाण्यापाताच्च ।**

ಕಲ್ಪಿತವಾದ ಅಂಶತ್ವವನ್ನು ಜೀವನಲ್ಲಿ ಒಪ್ಪುತ್ತೇನೆಂದರೆ 'ಪಾದೋಽಸ್ಯ ವಿಶ್ವಾ ಭೂತಾನಿ' 'ಮಮೈವಾಂಶಃ' ಇವೇ ಮೊದಲಾದ ಶ್ರುತಿಸ್ಮೃತಿಗಳಿಂದ ವಿರೋಧವು ಪ್ರಾಪ್ತವಾಗುತ್ತದೆ. ಮತ್ತು 'ಅಂಶೋ ನಾನಾ' ಇತ್ಯಾದಿ ಸೂತ್ರವೂ ಕೂಡ ಅಪ್ರಮಾಣವಾಗಬೇಕಾಗುತ್ತದೆ.

**नाप्यत्यन्ताभिन्नत्वम् । ''नानाव्यपदेशात्'' इतिसौत्रहेत्वयोगात् । तत्रांशशब्दास्वारस्याच्च । (प्रतिबिम्बवाद्युक्तश्रुत्यादिविरोधाच्च । पटाद्भिन्नेऽप्येकस्मिन् तन्तौ पटांशत्वदर्शनाच्च ।) नापि प्रतिबिम्बत्वम् । परपक्षे प्रतिबिम्बनासम्भवस्यान्यत्रोक्तत्वात् । तेनात्यन्तभेदस्यैव सिद्धेश्च ।**

ಜೀವನು ಪರಮಾತ್ಮನಿಗಿಂತ ಅತ್ಯಂತ ಅಭಿನ್ನನಾಗಿದ್ದಾನೆ. ಆದ್ದರಿಂದ ಅಂಶವೆನ್ನಲಾಗಿದೆ ಎಂಬುದೂ ಕೂಡ ತಪ್ಪು. ಏಕೆಂದರೆ 'ನಾನಾವ್ಯಪದೇಶಾತ್' ಎಂಬ ಸೂತ್ರದಲ್ಲಿರುವ ಹೇತುವೇ ಅಯುಕ್ತವಾದೀತು. ಮತ್ತು ಅಂಶ ಶಬ್ದಕ್ಕೆ ಸ್ವಾರಸ್ಯವೂ ಬರುವುದಿಲ್ಲ. ಯಾರು ಜೀವನು ಪ್ರತಿಬಿಂಬನೆಂದು ಹೇಳುತ್ತಾನೋ ಅವನು ಹೇಳುವ ಶ್ರುತ್ಯಾದಿ ವಿರೋಧವು ಅದ್ವೈತಿಗಳಿಗೆ ಪ್ರಾಪ್ತವಾಗುತ್ತದೆ. ಪಟಕ್ಕಿಂತ ಭಿನ್ನವಾದ ಒಂದು ತಂತುವಿನಲ್ಲಿ ಪಟಾಂಶತ್ವವು ಇರುವುದೂ ಕೂಡ ಲೋಕದಲ್ಲಿ ಕಂಡಿದೆ.

ಪ್ರತಿಬಿಂಬತ್ವವನ್ನು ಅಂಶತ್ವವೆನ್ನಲಾಗದು. ಅದ್ವೈತ ಮತದಲ್ಲಿ ಪ್ರತಿಬಿಂಬವೇ ಅಸಂಭಾವಿತವಾಗಿದೆ ಎಂಬುದು ನಾವು ಬೇರೆ ಗ್ರಂಥಗಳಲ್ಲಿ ಸಮರ್ಥನೆ ಮಾಡಿದ್ದೇವೆ. ಮತ್ತು ಈ ಪ್ರತಿಬಿಂಬತ್ವವನ್ನು ಒಪ್ಪಿದಾಗ ಅತ್ಯಂತ ಭೇದವೇ ಬರುತ್ತದೆ ಹೊರತು ಅಭೇದವು ಪ್ರಾಪ್ತವಾಗುವುದಿಲ್ಲ.

**[1](यच्चोक्तमुभाभ्यां सूत्रे त्वंशत्वे नानाव्यपदेशोऽन्यथाव्यपदेशश्च समुचित्य हेतुरिति तन्न । ''व्रीहिभिर्यजेत'' इत्यादौ तृतीययेव ''नाना व्यपदेशात्'' इति पञ्चम्या निरपेक्षस्य हेतुत्वप्रतीतेः । यच्चोक्तमुभाभ्यां आद्यसूत्रे ''अन्यथ'' इत्यनेन नानात्वादन्यथात्वं विवक्षितमिति तन्न । तथात्वे ''अन्यथ'' इत्यनेनैव वा ''दाशकितवादित्वमधीयत'' इत्येतावतैव वा पूर्णत्वेनोभयवैयर्थ्यात् । यच्चोक्तं भेदश्रुतिः प्राप्तविषयेति तन्न । सौत्रेणापिशब्देनाभेदइव भेदेऽपि तात्पर्यप्रतीतेः ।**

(೧) *(ಯಚ್ಚೋಕ್ತಂ ಎಂಬುದರಿಂದ ಜಿಜ್ಞಾಸಾಸೂತ್ರೇ ಎಂಬಲ್ಲಿಯ ತನಕ ಗ್ರಂಥಕ್ಕೆ ರಾಯರು ವ್ಯಾಖ್ಯಾನವನ್ನು ಮಾಡಿಲ್ಲ. ಆದ್ದರಿಂದ ಇದು ಪ್ರಕ್ಷಿಪ್ತವೆಂಬ ಅಭಿಪ್ರಾಯದಿಂದ ಅನುವಾದವನ್ನು ಮಾಡಿಲ್ಲ.)

**त्वदुक्तस्य नियम्यनियामकोपास्योपासकरूपेण नानाव्यपदेशस्याप्राप्तप्रतिबोधनत्वाच्च। नच तात्पर्यविषयेण सत्येन नियामकत्वादिनाक्षिप्तो भेदो मिथ्या । किञ्च प्रत्यक्षादिसिद्धो भेदो यदि सत्यो न तर्हि श्रुत्याप्यभेदसिद्धिः । यदि तु मिथ्या तर्हि न भेदश्रुतिरनुवादिनी । तदप्राप्तसत्यभेदप्रापकत्वोपपत्तेरित्युक्तं जिज्ञासासूत्रे ।)**

**किञ्च जीवस्यांशत्वं किं शुद्धचिन्मात्रं प्रति किं वोपहितमीश्वरम् प्रति । नाद्यः। ''परात्तु तच्छ्रुतेः'' इति पूर्वोक्तस्येश्वरनियन्तृत्वस्य सिध्यर्थं जीवेश्वरयोरंशांशिसम्बन्ध उच्यत इति त्वयापि भाषितत्वेन प्रक्रमाननुगुणत्वात् ।**

ಮತ್ತು ಜೀವನು ಯಾರ ಅಂಶನಾಗಿದ್ದಾನೆ? ಶುದ್ಧಚಿನ್ಮಾತ್ರನ ಅಂಶನೋ ಅಥವಾ ಉಪಹಿತ ಈಶ್ವರನನಾದ ಅಂಶನೋ?

ಮೊದಲನೇ ಪಕ್ಷ ತಪ್ಪು. 'ಪರಾತ್ತು ತಚ್ಛ್ರುತೇಃ' ಎಂಬ ಸೂತ್ರದಲ್ಲಿ ಈಶ್ವರನೇ ನಿಯಾಮಕನಾಗಿದ್ದಾನೆ ಎಂಬುದಾಗಿ ಈಶ್ವರ ನಿಯಂತೃತ್ವವು ಸಿದ್ಧವಾಗುವುದಕ್ಕಾಗಿ ಜೀವ ಹಾಗೂ ಈಶ್ವರನಿಗೆ ಅಂಶಾಂಶಿ-ಸಂಬಂಧವನ್ನು ಈ ಸೂತ್ರವು ಹೇಳುತ್ತಿದೆ ಎಂದು ಸ್ವತಃ ನೀವೇ ವ್ಯಾಖ್ಯಾನ ಮಾಡಿದ್ದೀರಿ. ಹೀಗೆ ಪ್ರಾರಂಭವಾದದ್ದನ್ನೇ ಮರೆತು ಶುದ್ಧಚಿನ್ಮಾತ್ರನ ಅಂಶನಾಗಿದ್ದಾನೆ ಎಂದು ಹೇಳುವುದು ಅಸಂಗತವಾಗುತ್ತದೆ.

**द्वितीयसूत्रोक्ते ''पादोऽस्य विश्वा भूतानि'' इति मन्त्रवर्ण इदंशब्देन सहस्रशीर्षत्वादिविशिष्टप्रकृतेश्वरस्य तृतीयसूत्रो(क्तायां)क्ते ''ममैवांश'' इति (स्मृतौ) स्मरणे चेश्वर प्रयुक्तास्मच्छब्देनेश्वरस्यैवोक्तेश्च ।**

ಮತ್ತು ಎರಡನೆಯ ಸೂತ್ರದಲ್ಲಿ 'ಪಾದೋಽಸ್ಯ ವಿಶ್ವಾ ಭೂತಾನಿ' ಎಂಬ ಪುರುಷಸೂಕ್ತದ ಮಂತ್ರದಲ್ಲಿರುವ 'ಇದಂ' ಶಬ್ದದಿಂದ ಸಹಸ್ರಶೀರ್ಷತ್ವಾದಿ ವಿಶಿಷ್ಟನಾದ ಈಶ್ವರನೇ ಪ್ರಕೃತನಾಗಿದ್ದಾನೆ. ಅವನನ್ನೇ ಮೂರನೇ ಸೂತ್ರದಲ್ಲಿ ಉಲ್ಲೇಖ ಮಾಡಲ್ಪಟ್ಟ 'ಮಮೈವಾಂಶಃ' ಎಂಬ ಗೀತೆಯ ಶ್ಲೋಕದಲ್ಲಿರುವ 'ಅಸ್ಮತ್' ಶಬ್ದದಿಂದ ವಿವಕ್ಷಿಸಲಾಗಿದೆ. ಹೀಗೆ ವಿಶಿಷ್ಟನಾದ ಈಶ್ವರನೇ ಪ್ರಕೃತನಾಗಿದ್ದಾನೆ. ಅವನ ಅಂಶವೇ ಜೀವರಾಗಿದ್ದಾರೆ ಎಂಬುದಾಗಿ ಎರಡನೇ ಹಾಗೂ ಮೂರನೇ ಸೂತ್ರದಿಂದ ತಿಳಿಯುತ್ತದೆ. ಇದಕ್ಕೆ ವಿರುದ್ಧವಾಗಿ ಚಿನ್ಮಾತ್ರನ ಅಂಶನೆಂದು ಹೇಳುವುದು ತಪ್ಪಾಗುತ್ತದೆ.

**नान्त्यः । त्वन्मतेऽपि विरुद्धधर्मवतो जीवेशयोरभेदाभावेनाभेदव्यपदेशस्यायोगात्। त्वया ''निरतिशयोपाधिसम्पन्नश्चेश्वरो, हीनोपाधिसम्पन्नाञ्जीवान् प्रशास्ति'' इति भाषितत्वेनेश्वरस्याप्युपहिततया महागृहाकाशंप्रत्यल्पगृहाकाशस्येवेश्वरं प्रति जीवस्यांशत्वायोगाच्च ।**

ಜೀವನು ಉಪಹಿತ ಈಶ್ವರನ ಅಂಶನಾಗಿದ್ದಾನೆ ಎಂಬ ಎರಡನೇ ಪಕ್ಷವೂ ಕೂಡ ತಪ್ಪು. ಏಕೆಂದರೆ ನೀವೂ ಸಹ ವಿರುದ್ಧ ಧರ್ಮವುಳ್ಳ ಜೀವೇಶ್ವರರಿಗೆ ಅಭೇದವನ್ನು ಅಂಗೀಕಾರ ಮಾಡಿಲ್ಲ. ಪ್ರಕೃತ ಜೀವನು ಉಪಹಿತನಾದ ಈಶ್ವರನ ಅಂಶನಾಗಿದ್ದಾನೆ. ತನ್ಮೂಲಕನಾಗಿ ಉಪಹಿತ ಈಶ್ವರನಿಗೂ ಜೀವನಿಗೂ ಅಭೇದವನ್ನು ಹೇಳುವುದು ಈ ಅಧಿಕರಣದ ಉದ್ದೇಶವಾಗಿದೆ ಎಂಬುದಾಗಿ ಹೇಗೆ ಹೇಳುತ್ತೀರಿ?

ಸ್ವತಃ ನೀವೇ 'ನಿರತಿಶಯೋಪಾಧಿಸಂಪನ್ನಶ್ಚ ಈಶ್ವರೋ ಹೀನೋಪಾಧಿಸಂಪನ್ನಾನ್ ಜೀವಾನ್ ಪ್ರಶಾಸ್ತಿ' ಎಂದು ಹೇಳುತ್ತೀರಿ. ನಿರತಿಶಯವಾದ ಉಪಾಧಿಯಿಂದ ಕೂಡಿದ ಈಶ್ವರನು ಹೀನವಾದ ಉಪಾಧಿಯಿಂದ ಕೂಡಿದ ಜೀವನನ್ನು ನಿಯಮನ ಮಾಡುತ್ತಾನೆ ಎಂಬುದಾಗಿ ಹೇಳಿದ್ದರಿಂದ ಈಶ್ವರನೂ ಕೂಡ ಉಪಾಧಿವಿಶಿಷ್ಟನಾಗಿದ್ದಾನೆ ಎಂದು ಹೇಳಿದಂತಾಯಿತು. ಇಂತಹ ಈಶ್ವರನಿಗೆ ಜೀವನು ಅಂಶನಾಗುವುದಿಲ್ಲ. ಯಾವ ರೀತಿಯಾಗಿ ಮಹಾಗೃಹಾಕಾಶಕ್ಕೆ ಅಲ್ಪಗೃಹಾಕಾಶವನ್ನು ಅಂಶವೆಂದು ಯಾರೂ ಕೂಡ ಹೇಳುವುದಿಲ್ಲವೋ ಅದರಂತೆ ಉಪಾಧಿಸಂಪನ್ನನಾದ ಈಶ್ವರನಿಗೆ ಈ ಜೀವನು ಅಂಶನಾಗಲು ಸಾಧ್ಯವಿಲ್ಲ. ಮಹಾಕಾಶವನ್ನು ಕುರಿತು ಘಟ, ಮಠ ಮೊದಲಾದವು ಅಂಶವಾಗುತ್ತವೆ ಎಂದು ಹೇಳುವಂತೆ ನೀವು ಹೇಳಿರುವುದಿಲ್ಲ ಎಂದಭಿಪ್ರಾಯ.

**नच मठाकाशः पुनर्घटेनेवेश्वरोपाधिनाऽवच्छिन्नमेव चैतन्यं पुनर्जीवोपाधिना चावच्छिद्यते । तथात्वे हि मुक्तस्य शुद्धब्रह्मत्वं न स्यात् ।**

ಮಠಾಕಾಶವು ಘಟವೆಂಬ ಉಪಾಧಿವಿಶಿಷ್ಟ ಆಗುತ್ತದೆ. ಆಗ ಘಟಾಕಾಶವು ಮಠಾಕಾಶದ ಅಂಶವಾಗುತ್ತದೆಂದು ಹೇಳಲು ಯಾವುದೇ ತೊಂದರೆ ಇಲ್ಲ. ಅದರಂತೆ ಉಪಾಧಿಯಿಂದ ವಿಶಿಷ್ಟನಾದ ಚೈತನ್ಯನೇ ಪುನಃ ಜೀವ ಎಂಬ ಉಪಾಧಿಯಿಂದ ವಿಶಿಷ್ಟನಾಗುತ್ತಾನೆ. ಹೀಗೆ ಹೇಳಿದಾಗ ಜೀವನು ವಿಶಿಷ್ಟನಾದ ಈಶ್ವರನ ಅಂಶನೆಂದು ಪರಿಗಣಿಸಲು ಯಾವುದೇ ಬಾಧಕವಿಲ್ಲ.

ಇದು ತಪ್ಪು. ಹಾಗಾದರೆ ಮುಕ್ತನೂ ಶುದ್ಧಬ್ರಹ್ಮನಾಗುತ್ತಾನೆ ಎಂಬ ನಿಮ್ಮ ಸಿದ್ಧಾಂತವೇ ಬಿದ್ದುಹೋಯಿತು. ಏಕೆಂದರೆ ಜೀವನು ವಿಶಿಷ್ಟನಾದ ಈಶ್ವರನ ಅಂಶನಾಗಿರುವುದರಿಂದ ಜೀವಾತ್ಮನು ತನ್ನ ಉಪಾಧಿಯನ್ನು ಕಳಚಿಕೊಂಡಾಗ ವಿಶಿಷ್ಟ ಬ್ರಹ್ಮನೇ ಆಗುತ್ತಾನೆ ಹೊರತು ಶುದ್ಧಬ್ರಹ್ಮನಾಗಲು ಸಾಧ್ಯವೇ ಇಲ್ಲ.

**किञ्च न तावदविद्यान्तःकरणाद्युपाधिविशिष्टस्यांशत्वम् । तत्राभेदव्यपदेशायोगात्। नापि तदुपलक्षितस्य चिन्मात्रस्य । तत्र काल्पनिकभेदस्याप्यभावेन नानाव्यपदेशायोगात् ।**

ಮತ್ತು ಅವಿದ್ಯಾ, ಅಂತಃಕರಣ ಮೊದಲಾದ ಉಪಾಧಿವಿಶಿಷ್ಟನ ಅಂಶನಾಗಿದ್ದಾನೆ ಎಂಬುದೂ ಕೂಡ ಯುಕ್ತವಾಗುವುದಿಲ್ಲ. ಏಕೆಂದರೆ ವಿಶಿಷ್ಟಗಳಿಗೆ ಅಭೇದವ್ಯಪದೇಶವು ಅಯುಕ್ತವಾಗಿದೆ.

ತದುಪಲಕ್ಷಿತನಾದ ಚಿನ್ಮಾತ್ರನ ಅಂಶನಾಗಿದ್ದಾನೆ ಎಂಬುದೂ ಕೂಡ ತಪ್ಪು. ಚಿನ್ಮಾತ್ರನಲ್ಲಿ ಕಾಲ್ಪನಿಕಭೇದವೇ ಇಲ್ಲದಿರುವುದರಿಂದ ನಾನಾವ್ಯಪದೇಶವು (ಭೇದವ್ಯಪದೇಶವು) ಅಯುಕ್ತವಾಗುತ್ತದೆ.

**यच्चोक्तमुभाभ्यां आद्यसूत्रेऽन्यथेत्यनेन नानात्वादन्यथात्वं विवक्षितमिति तन्न । तथात्वे चान्यथाचापीत्यनेनैव वा ''दाशकितवादित्वमधीयत एक'' इत्यनेनैव वा पूर्णत्वेनेतरवैयर्थ्यात् । द्वितीयतृतीयसूत्रयोस्त्वनुपपत्तिरुक्ता ।**

ಅದ್ವೈತಿಗಳು ಹಾಗೂ ವಿಶಿಷ್ಟಾದ್ವೈತಿಗಳು ಪ್ರಥಮ ಸೂತ್ರದಲ್ಲಿ 'ಅನ್ಯಥಾ' ಎಂಬುದರಿಂದ ಭೇದವಿರುವುದರಿಂದ ಅನ್ಯಥಾತ್ವವು ವಿವಕ್ಷಿತವಾಗಿದೆ ಎಂದು ಹೇಳಿದ್ದಾರೆ. ಇದು ತಪ್ಪು. ಹಾಗಾದಲ್ಲಿ 'ಅನ್ಯಥಾऽಚಾಪಿ' ಎಂಬುದರಿಂದ ಅಥವಾ 'ದಾಶಕಿತವಾದಿತ್ವಮಧೀಯತೇ' ಎಂಬುದರಿಂದಲೇ ಈ

ವಿಷಯವು ತಿಳಿಯುವಾಗ ಇತರ ಪದಗಳೆಲ್ಲವೂ ಕೂಡ ವ್ಯರ್ಥವಾಗಿವೆ. ಎರಡನೇ ಹಾಗೂ ಮೂರನೇ ಸೂತ್ರದಲ್ಲಿರುವ ಅನುಪಪತ್ತಿಯನ್ನು ಈಗಾಗಲೇ ಹೇಳಿದ್ದಾಗಿದೆ.

**प्रकाशः –**

**अन्ये त्विति ।।** सूत्रार्थमग्रे निरसिष्यन्नधिकरणप्रमेयं तावदनूद्य निराह – **भेदेति ।।** ''जीवब्रह्मभेदाभेदश्रुतिसन्देह'' इत्यादिकल्पतरूक्तेरिति भावः ।। **अभिन्नपदं प्रयुज्येतेति ।।** अभिन्नो नानाव्यपदेशादिति सूत्रणं स्यादित्यर्थः ।

ಅದ್ವೈತಿಗಳ ಸೂತ್ರಾರ್ಥವನ್ನು ಮುಂದೆ ನಿರಾಕರಣೆ ಮಾಡುವವರಿದ್ದಾರೆ. ಈಗ ಅಧಿಕರಣದ ಪ್ರಮೇಯವನ್ನು ಅನುವಾದ ಮಾಡಿ 'ಭೇದ' ಇತ್ಯಾದಿ ಗ್ರಂಥದಿಂದ ನಿರಾಕರಣೆ ಮಾಡುತ್ತಿದ್ದಾರೆ. 'ಜೀವಬ್ರಹ್ಮ ಭೇದಾಭೇದಶ್ರುತಿಸಂದೇಹಃ' ಇತ್ಯಾದಿಯಾಗಿ ಕಲ್ಪತರುವಿನಲ್ಲಿ ಹೇಳಿದ್ದರಿಂದ 'ಭೇದಾಭೇದಶ್ರುತ್ಯೋಃ ವಿರೋಧಃ ಇತಿ ಪೂರ್ವಪಕ್ಷೇ' ಎಂದು ಗ್ರಂಥದಲ್ಲಿ ಹೇಳಿರುತ್ತಾರೆ. 'ಅಭಿನ್ನಪದಂ ಪ್ರಯುಜ್ಯೇತ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಈ ಸೂತ್ರದಲ್ಲಿ ಅಭೇದವು ವಿವಕ್ಷಿತವಾಗಿದ್ದರೆ 'ಅಂಶೋ ನಾನಾವ್ಯಪದೇಶಾತ್' ಎಂದು ಇರಬಾರದಿತ್ತು, 'ಅಭಿನ್ನೋ ನಾನಾವ್ಯಪದೇಶಾತ್' ಎಂದು ಇರಬೇಕಿತ್ತು ಎಂಬುದು ಇದರ ಅರ್ಥ.

**प्रकाशः –** नन्वंशत्वं भिन्नाभिन्नत्वम् । एकैकस्य तन्तोः पटाद्भेदाभेदवत्त्वेन भेददर्शनोपपत्तेरिति चेत्तर्हीहापि तत्रैव भेदाभेदौ समसत्ताकौ स्याताम् । नतु भेदोऽसत्योऽभेदस्सत्य इति दोषः स्पष्टः । दोषान्तरं चाह – **किञ्चेति ।।**

ಅಂಶತ್ವ ಎಂದರೆ ಭೇದಾಭೇದ ಎಂದರ್ಥ. ತಂತುವಿಗೆ ಪಟದಿಂದ ಭೇದಾಭೇದವಿದ್ದಾಗ ಭೇದವಿರುವುದೂ ಕೂಡ ಕಂಡಿದೆ. ಹಾಗೆ ಜೀವರಿಗೆ ಬ್ರಹ್ಮನಿಂದ ಭೇದಾಭೇದವಿದ್ದರೂ ಭೇದದರ್ಶನವು ಉಪಪನ್ನವಾಗುತ್ತದೆ. ಹೀಗೆ ಆಕ್ಷೇಪ ಮಾಡಬಾರದು. ತಂತುವಿನ ದೃಷ್ಟಾಂತವನ್ನು ನೀಡಿದರೆ ಹೇಗೆ ಪಟಕ್ಕೂ ತಂತುವಿಗೂ ಇರುವ ಭೇದಾಭೇದಗಳು ಸಮಸತ್ತಾಕವಾಗಿವೆಯೋ ಅದರಂತೆ ಇಲ್ಲಿಯೂ ಕೂಡ ಸಮಸತ್ತಾಕವೇ ಆಗಬೇಕಾಗುತ್ತದೆ. ಆದರೆ ಜೀವಬ್ರಹ್ಮರ ಭೇದವು ಅಸತ್ಯವೆಂದು, ಅಭೇದವು ಸತ್ಯವೆಂದು ನೀವು ಹೇಳುತ್ತೀರಿ. ಇದು ಕೂಡುವುದಿಲ್ಲ. ಮತ್ತೊಂದು ದೋಷವನ್ನು 'ಕಿಂಚ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ.

**प्रकाशः – समुदायित्वमिति ।।** ब्रह्मसमुदायो जीवास्तु समुदायिन इति ब्रह्मांशत्वं जीवस्येत्यर्थः ।। **अनङ्गीकाराच्चेति ।।** प्रतिबिम्बत्वोपगमेन जीवानां ब्रह्मसमुदायित्वस्य मिथ्यावादिनाऽनङ्गीकाराच्चेत्यर्थः ।

ಬ್ರಹ್ಮನು ಸಮುದಾಯ ಎನಿಸಿಕೊಳ್ಳುತ್ತಾನೆ, ಜೀವರು ಸಮುದಾಯಿ ಎನಿಸಿಕೊಳ್ಳುತ್ತಾರೆ. ಹೀಗೆ ಜೀವರು ಬ್ರಹ್ಮರ ಅಂಶರೆಂಬುದನ್ನು 'ಸಮುದಾಯಿತ್ವಂ' ಎಂಬುದರಿಂದ ನಿರೂಪಣೆ ಮಾಡಿದ್ದಾರೆ. 'ಅನಂಗೀಕಾರಾಚ್ಚ' ಎಂಬುದರ ಅಭಿಪ್ರಾಯ ಹೀಗಿದೆ– ಜೀವರು ಬ್ರಹ್ಮರ ಪ್ರತಿಬಿಂಬಭೂತರೆಂಬುದನ್ನು ನೀವೇ ಅಂಗೀಕಾರ ಮಾಡಿರುವುದರಿಂದ ಜೀವರುಗಳಿಗೆ ಬ್ರಹ್ಮಸಮುದಾಯಿತ್ವವನ್ನು ಅಂಗೀಕಾರ ಮಾಡಲು ಮಿಥ್ಯಾವಾದಿಗಳಾದ ನಿಮಗೆ ಸಾಧ್ಯವಿಲ್ಲ ಎಂದರ್ಥ.

**प्रकाशः** – ''एकस्यैव ब्रह्मणोऽनाद्यनिर्वचनीयाविद्योपधानभेदादेकस्येव बिम्बस्य दर्पणाद्युपाधिभेदात्प्रतिबिम्बभेद'' इति भामत्युक्तेः । ''आभास एव च'' इति सूत्रभाष्ये प्रतिबिम्बत्वोक्तेश्चेति भावः ।।

'ಏಕಸ್ಯೈವ ಬ್ರಹ್ಮಣೋಽನಾದ್ಯನಿರ್ವಚನೀಯ-ಅವಿದ್ಯೋಪಾದಾನಭೇದಾದೇಕಸ್ಯೇವ ಬಿಂಬಸ್ಯ ದರ್ಪಣಾದ್ಯುಪಾಧಿಭೇದಾತ್ ಪ್ರತಿಬಿಂಬಭೇದಃ' ಒಬ್ಬನೇ ಬ್ರಹ್ಮನಿಗೆ ಅನಾದಿಯಾದ ಅನಿರ್ವಚನೀಯವಾದ ಅವಿದ್ಯೆ ಎಂಬ ಉಪಾಧಿ ಭೇದದಿಂದ ಒಬ್ಬನೇ ಬಿಂಬನಾಗಿದ್ದರೂ ದರ್ಪಣಾದ್ಯುಪಾಧಿಭೇದದಿಂದ ಪ್ರತಿಬಿಂಬಭೇದವು ಯುಕ್ತವಾಗುತ್ತದೆಂದು ಭಾಮತಿಯಲ್ಲಿ ಹೇಳಿದ್ದೀರಿ. ಹೀಗೆ ಒಪ್ಪಿದ ಮೇಲೆ ಪ್ರಕೃತ ಸಮುದಾಯ-ಸಮುದಾಯಿ ಭಾವವನ್ನು ಹೇಳಲು ಹೇಗೆ ಸಾಧ್ಯ? ಮತ್ತು 'ಆಭಾಸ ಏವ ಚ' ಎಂಬ ಸೂತ್ರಭಾಷ್ಯದಲ್ಲಿ ಸ್ಪಷ್ಟವಾಗಿ ಜೀವರುಗಳು ಪ್ರತಿಬಿಂಬರುಗಳೆಂದು ನಿರೂಪಣೆ ಮಾಡಲಾಗಿದೆ.

**प्रकाशः** – **इत्यादिस्मृतीति** ।। भाष्योक्तस्मृतीत्यर्थः ।। **अन्यत्रेति** ।। ''अतस्सर्वपदार्थानां भागास्सन्त्येव सर्वदा । सर्वदिक्ष्वभिसम्बन्धादविभागः पराणुता'' इत्यादि वैशेषिकाधिकरणानुव्याख्यानसुधयोः ''खेऽपि देशान्तरस्य स'' इत्याद्युपाधिखण्डनतट्टीकादावुक्तत्वादित्यर्थः ।।

ಇತ್ಯಾದಿ ಸ್ಮೃತಿ ಎಂದರೆ ಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿವಾಕ್ಯಗಳು ಎಂದರ್ಥ. 'ಅನ್ಯತ್ರ' ಎಂಬ ಪದಕ್ಕೆ 'ಅತಃ ಸರ್ವಪದಾರ್ಥಾನಾಂ ಭಾಗಾಸ್ಸಂತ್ಯೇವ ಸರ್ವದಾ । ಸರ್ವದಿಕ್ಷ್ವಭಿಸಂಬಂಧಾದವಿಭಾಗಃ ಪರಾಣುತಾ' ಪ್ರತಿಯೊಂದು ಪದಾರ್ಥಗಳಿಗೂ ನಿರಂತರವಾಗಿ ಅನೇಕ ಭಾಗಗಳಿವೆ. ಎಲ್ಲಾ ದಿಕ್ಕುಗಳಲ್ಲಿ ಸಂಬಂಧವನ್ನು ಹೊಂದಿರುವುದರಿಂದ ಪರಮಾಣು ಎಂದರೆ ಅವಿಭಾಗ ಎಂದೇ ಹೇಳಬೇಕು. ಇತ್ಯಾದಿಯಾಗಿ ವೈಶೇಷಿಕಾಧಿಕರಣದ ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನ ಮಾಡುವ ಸಂದರ್ಭದಲ್ಲಿ ನ್ಯಾಯಸುಧೆಯಲ್ಲಿ ಹೇಳಿದ್ದಾರೆ. ಮತ್ತು 'ಖೇऽಪಿ ದೇಶಾಂತರಸ್ಯ ಸಃ' ಎಂಬ ಉಪಾಧಿಖಂಡನ ಟೀಕೆಯಲ್ಲೂ ಕೂಡ ಆಕಾಶದ ಅಂಶಗಳು ಸ್ವಾಭಾವಿಕವೇ ಆಗಿವೆ ಹೊರತು ಔಪಾಧಿಕವಾಗಿಲ್ಲ ಎಂಬುದನ್ನು ನಾವು ನಿರೂಪಣೆ ಮಾಡಿದ್ದೇವೆ.

**प्रकाशः** – **त्वद्भाष्येण चेति** ।। तत्र प्रतिबिम्बत्वोक्तया कल्पितावयवत्वादि-रूपांशत्ववचनं विरुद्धमित्यर्थः ।। **सौत्रहेत्विति** ।। तस्य भेदव्यपदेशादिति त्वया भाषणादिति भावः ।। **तत्रेति** ।। अभेद इत्यर्थः ।

'ತ್ವದ್ಭಾಷ್ಯೇಣ ಚ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಶಾಂಕರಭಾಷ್ಯದಲ್ಲಿ 'ಆಭಾಸ ಏವ ಚ' ಇತ್ಯಾದಿ ಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ ಜೀವನಿಗೆ ಪ್ರತಿಬಿಂಬತ್ವವನ್ನು ಹೇಳಲಾಗಿದೆ. ಈಗ ಕಲ್ಪಿತವಾದ ಅವಯವತ್ವರೂಪ ಅಂಶತ್ವವನ್ನು ಹೇಳಿದರೆ ಭಾಷ್ಯಕ್ಕೆ ವಿರೋಧ ಬರುತ್ತದೆಂದರ್ಥ. ಗ್ರಂಥದಲ್ಲಿ 'ಸೌತ್ರಹೇತ್ವಯೋಗಾತ್' ಎಂದು ಹೇಳಿದ್ದಾರೆ. 'ನಾನಾವ್ಯಪದೇಶಾತ್' ಎಂಬುದಾಗಿ ಸೂತ್ರದಲ್ಲಿ ಹೇಳಿದ ಹೇತುವೇ ಅಯುಕ್ತವಾಗಬೇಕಾಗುತ್ತದೆ. ಏಕೆಂದರೆ 'ನಾನಾವ್ಯಪದೇಶಾತ್' ಎಂಬುದಕ್ಕೆ ನೀವು 'ಭೇದವ್ಯಪದೇಶಾತ್' ಎಂದು ವ್ಯಾಖ್ಯಾನ ಮಾಡಿದ್ದೀರಿ. ಈಗ ಅತ್ಯಂತ ಭೇದ ಎಂಬ ಅರ್ಥವನ್ನು ಹೇಳಿದರೆ ಇದಕ್ಕೆ ವಿರುದ್ಧವಾಗುತ್ತದೆಂದರ್ಥ. 'ತತ್ರ' ಎಂಬ ಪದಕ್ಕೆ ಅಭೇದ ಎಂಬರ್ಥದಲ್ಲಿ ಎಂದರ್ಥ.

ಅಂಶಾಧಿಕರಣ (೨-೩-೧೮)

**प्रकाशः – भिन्नाभिन्ने तन्त्वादौ वाऽस्मदभिमतांशत्वादौ वा तस्य स्वारस्येन त्वत्पक्षे सूत्रेऽभिन्नपदमेव स्यादिति भावः । अन्यत्र न्यायामृते । तेन प्रतिबिम्बत्वेनेत्यर्थः । तयैव बिम्बप्रतिबिम्ब वादे द्वितीयपरिच्छेदे समर्थनादिति भावः ॥**

ತಂತುವಿಗೂ ಪಟಕ್ಕೂ ಭೇದಾಭೇದವಿದೆ ಎಂಬುದು ನಮ್ಮ ವಾದ. ನಮಗೆ ಅಭಿಮತವಾದ ಅಂಶತ್ವವು ಅಲ್ಲಿ ಸ್ವರಸವಾಗಿ ಯುಕ್ತವಾಗುತ್ತದೆ. ಆದರೆ ನಿಮ್ಮ ಮತದಲ್ಲಿ ಸೂತ್ರದಲ್ಲಿ ಅಂಶ ಪದವನ್ನು ಹೇಳುವುದು ಅಯುಕ್ತವಾಗುತ್ತದೆ. ಅಭಿನ್ನಪದವನ್ನೇ ಸೂತ್ರದಲ್ಲಿ ಉಲ್ಲೇಖ ಮಾಡಬೇಕಾಗುತ್ತದೆ ಎಂದರ್ಥ. 'ಅನ್ಯತ್ರ' ಎಂದರೆ ನ್ಯಾಯಾಮೃತದಲ್ಲಿ ಎಂದು ತಿಳಿಯಬೇಕು. 'ತೇನ' ಎಂಬ ಪದಕ್ಕೆ ಪ್ರತಿಬಿಂಬತ್ವವನ್ನು ಒಪ್ಪುವುದರಿಂದ ಎಂದರ್ಥ. ನ್ಯಾಯಾಮೃತದ ದ್ವಿತೀಯ ಪರಿಚ್ಛೇದದ ಬಿಂಬಪ್ರತಿಬಿಂಬವಾದದಲ್ಲಿ ನಾವು ಅದ್ವೈತಿಗಳನ್ನು ಕುರಿತು ಬಿಂಬಪ್ರತಿಬಿಂಬಭಾವ ಒಪ್ಪಿದಾಗ ಅತ್ಯಂತ ಭೇದವೇ ಸಿದ್ಧವಾಗುತ್ತದೆ ಎಂಬುದನ್ನು ಸಮರ್ಥನೆ ಮಾಡಿದ್ದೇವೆ.

**प्रकाशः – इति त्वयेति ॥ ''उपकार्योपकारकभावो जीवेश्वरयोरुक्तः । स च सम्बद्धयोरेव दृष्टो लोके । यथा स्वामिभृत्ययोर्यथाऽग्निविष्फुलिङ्गयोः'' इत्यादिना भाष्ये कथितत्वेनेत्यर्थः । प्रक्रमे भाष्यादावेवमुक्त्वा सूत्रव्याख्याने जीवस्य चिन्मात्रांशत्वभाषणे प्रक्रमविरोध इति वा ''परात्त्वि''ति सूत्र ईश्वरस्यैव जीवकर्तृत्वनियन्तृत्वोक्तया तद्घटनार्थं प्रवृत्तेऽस्मिन्नधिकरणे शुद्धांशत्वोक्तौ कथं प्रक्रान्तेश्वरनियन्तृत्वनिर्वाहकमिदं भवेदिति वार्थः ।**

'ಉಪಕಾರ್ಯೋಪಕಾರಕಭಾವೋ ಜೀವೇಶ್ವರಯೋರುಕ್ತಃ । ಸ ಚ ಸಂಬದ್ಧಯೋರೇವ ದೃಷ್ಟೋ ಲೋಕೇ ಯಥಾ ಸ್ವಾಮಿಭೃತ್ಯಯೋರ್ಯಥಾಽಗ್ನಿವಿಷ್ಫುಲಿಂಗಯೋಃ' ಜೀವನು ಉಪಕಾರ್ಯನಾಗಿದ್ದಾನೆ, 'ಈಶ್ವರನು ಉಪಕಾರಕನಾಗಿದ್ದಾನೆ. ಈ ಉಪಕಾರ್ಯ-ಉಪಕಾರಕಭಾವವು ಸಂಬಂಧವಿರುವ ಎರಡು ಪದಾರ್ಥಗಳಲ್ಲಷ್ಟೇ ಯುಕ್ತವಾಗುತ್ತದೆಂದು ಲೋಕದಲ್ಲಿ ಕಂಡಿದೆ. ಸ್ವಾಮಿಭೃತ್ಯರಿಗೆ ಅಗ್ನಿವಿಷ್ಫುಲಿಂಗಗಳಿಗೆ ಇರುವ ಸಂಬಂಧದಂತೆ' ಇತ್ಯಾದಿಯಾಗಿ ನೀವೇ ಭಾಷ್ಯದಲ್ಲಿ ಹೇಳಿದ್ದೀರಿ. ಹೀಗೆ ಪ್ರಾರಂಭದ ಭಾಷ್ಯದಲ್ಲಿ ಹೇಳಿ ಸೂತ್ರವನ್ನು ವ್ಯಾಖ್ಯಾನ ಮಾಡುವಾಗ ಜೀವನು ಕೇವಲ ಚಿನ್ಮಾತ್ರನಿಗೆ ಅಂಶನಾಗಿದ್ದಾನೆ ಎಂದು ಹೇಳಿದರೆ ಉಪಕ್ರಮವಿರೋಧ ಬರುತ್ತದೆ. ಅಥವಾ ಹೀಗೂ ದೋಷವನ್ನು ತಿಳಿಯಬಹುದು, 'ಪರಾತ್ತು ತಚ್ಛ್ರುತೇಃ' ಎಂಬ ಸೂತ್ರದಲ್ಲಿ ಜೀವಕರ್ತೃತ್ವಕ್ಕೆ ನಿಯಾಮಕನಾದವನು ಈಶ್ವರನೇ ಆಗಿದ್ದಾನೆಂದು ನೀವು ಹೇಳಿದ್ದೀರಿ. ಅದರ ಉಪಪಾದನೆಗೋಸ್ಕರವೇ ಈ ಅಧಿಕರಣವು ಹೊರಟಿದೆ ಎಂದು ಪ್ರಾರಂಭ ಮಾಡಿದ ನೀವು ಈ ಅಧಿಕರಣಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ ಶುದ್ಧಬ್ರಹ್ಮನ ಅಂಶನಾಗಿದ್ದಾನೆ ಎಂದು ಹೇಳಿದರೆ ಪ್ರಾರಂಭದ ಪ್ರತಿಜ್ಞೆಗೆ ಏನು ಉತ್ತರಿಸಿದಂತಾಯಿತು? ಈಶ್ವರ ನಿಯಂತೃತ್ವಕ್ಕೆ ಇದು ನಿರ್ವಾಹಕವಾಗಿದೆ ಎಂದು ಹೇಳಲು ನಿಮಗೆ ಸಾಧ್ಯವಾಗುವುದಿಲ್ಲ.

**प्रकाशः** – चिन्मात्रांशो जीव इति प्रतिज्ञार्थपक्षे ''मन्त्रवर्णात्'' इति ''स्मर्यत'' इति सूत्रद्वये परभाष्योक्तश्रुतिस्मृत्यनानुगुण्यं चाह – **द्वितीयेति** ॥ इदंशब्देन अस्येति षष्ठ्यन्तपदेन ॥ **अस्मच्छब्देनेति** ॥ ममेतिशब्देनेत्यर्थः । तत्रेदमादिशब्देन चिन्मात्रोक्तावप्रकृतपरत्वलाक्षणिकत्वयोरापात इति भावः ॥

ಪರಿಪೂರ್ಣಚಂದ್ರಿಕಾ

ಜೀವನು ಚಿನ್ಮಾತ್ರನ ಅಂಶನಾಗಿದ್ದಾನೆ ಎಂಬುದಾಗಿ ಪ್ರತಿಜ್ಞೆ ಮಾಡಿದರೆ 'ಮಂತ್ರವರ್ಣಾತ್' ಹಾಗೂ 'ಸ್ಮರ್ಯತೇ' ಎಂಬೆರಡು ಸೂತ್ರಗಳಿಗೆ ವ್ಯಾಖ್ಯಾನ ಮಾಡುವಾಗ ಶಾಂಕರಭಾಷ್ಯದಲ್ಲಿ ಯಾವ ಶ್ರುತಿಸ್ಮೃತಿಗಳನ್ನು ಉದಾಹರಣೆ ಮಾಡಿದ್ದಾರೋ ಅದರ ಅನಾನುಗುಣ್ಯವು ಬರುತ್ತದೆಂಬುದನ್ನು 'ದ್ವಿತೀಯೇ' ಇತ್ಯಾದಿ ಗ್ರಂಥದಿಂದ ಉಪಪಾದನೆ ಮಾಡಿದ್ದಾರೆ.

'ಇದಂ ಶಬ್ದೇನ' ಎಂದರೆ 'ಪಾದೋಽಸ್ಯ' ಎಂಬಲ್ಲಿರುವ 'ಅಸ್ಯ' ಎಂಬ ಷಷ್ಠ್ಯಂತಪದದಿಂದ ಎಂದರ್ಥ. 'ಅಸ್ಮಚ್ಛಬ್ದೇನ' ಎಂದರೆ 'ಮಮೈವಾಂಶಃ' ಎಂಬಲ್ಲಿರುವ ಮಮ ಎಂಬ ಅಸ್ಮದ್ ಶಬ್ದದ ಷಷ್ಠ್ಯಂಗಪದದಿಂದ ಎಂದರ್ಥ.

ಒಂದುವೇಳೆ ಪುರುಷಸೂಕ್ತದಲ್ಲಿರುವ 'ಇದಂ' ಶಬ್ದದಿಂದ ಹಾಗೂ ಗೀತೆಯಲ್ಲಿರುವ ಅಸ್ಮದ್ ಶಬ್ದದಿಂದ ಚಿನ್ಮಾತ್ರನನ್ನೇ ವಿವಕ್ಷಿಸುವುದಾದರೆ ಅಪ್ರಕೃತವಾದುದನ್ನು ಅಲ್ಲಿ ಹೇಳಿದಂತಾಗುತ್ತದೆ. ಅಷ್ಟೇ ಅಲ್ಲದೇ ಲಾಕ್ಷಣಿಕತ್ವ ದೋಷವೂ ಕೂಡ ಪ್ರಾಪ್ತವಾಗುತ್ತದೆ ಎಂಬುದು ಗ್ರಂಥಕಾರರ ಅಭಿಪ್ರಾಯ.

**प्रकाशः – विरुद्धेति ।।** अल्पज्ञत्वसर्वज्ञत्वादिविरुद्धधर्मवतोरित्यर्थः ।। **अभेदव्यपदेशायोगादिति ।।** त्वया हि नानाव्यपदेशादन्यथा चापि व्यपदेशादित्यन्वयमुपेत्य स विजिज्ञासितव्य इत्यादौ जीवेशयोर्ज्ञातृज्ञेयत्वादिना भेदव्यपदेशादन्यथा चाप्यनानात्वेनाप्यभेदेनापि व्यपदेशात् । तथा हि ''दाशकितवादित्वमधीयत एक'' इति भाषितत्वेन जीवो मायोपहितेश्वरांश इत्यभिप्रेते प्रतिज्ञार्थे ''नानाव्यपदेशात्'' इत्यस्य भेदव्यपदेशरूपहेतोर्योगेऽपि ''अन्यथा चापि'' इत्यंशोक्ताभेदव्यपदेशरूपहेतोरयोगादित्यर्थः ।।

ವಿರುದ್ಧ ಎಂದರೆ ಅಲ್ಪಜ್ಞತ್ವಸರ್ವಜ್ಞತ್ವಾದಿವಿರುದ್ಧಧರ್ಮಗಳಿರುವವರೆಗೆ ಅಭೇದವನ್ನು ನೀವೂ ಕೂಡ ಒಪ್ಪಿಲ್ಲ ಎಂದರ್ಥ. 'ಅಭೇದವ್ಯಪದೇಶಾಯೋಗಾತ್' ಎಂಬುದರ ಅಭಿಪ್ರಾಯ ಹೀಗಿದೆ – 'ಅಂಶೋ ನಾನಾವ್ಯಪದೇಶಾತ್ ಅನ್ಯಥಾ ಚಾಪಿ ದಾಶಕಿತವಾದಿತ್ವಮಧೀಯತೇ ಏಕೇ' ಎಂಬ ಸೂತ್ರಕ್ಕೆ ನೀವು ಹೀಗೆ ವ್ಯಾಖ್ಯಾನ ಮಾಡಿದ್ದೀರಿ – ಜೀವನು ಬ್ರಹ್ಮನ ಅಂಶನಾಗಿದ್ದಾನೆ. ಏಕೆಂದರೆ 'ನಾನಾವ್ಯಪದೇಶಾತ್'= ಸವಿಜಿಜ್ಞಾಸಿತವ್ಯಃ ಇತ್ಯಾದಿಯಾಗಿ ಜೀವೇಶರಿಗೆ ಜ್ಞಾತೃಜ್ಞೇಯತ್ವಭಾವದಿಂದ ಭೇದವ್ಯಪದೇಶವು ಶ್ರುತಿಯಲ್ಲಿ ಇರುವುದರಿಂದ ಭೇದವನ್ನಷ್ಟೇ ಹೇಳದೆ ಶ್ರುತಿಯು 'ಅನ್ಯಥಾ ಚಾಪಿ ವ್ಯಪದೇಶಾತ್'= ಅಭೇದವನ್ನೂ ಕೂಡ ಹೇಳುತ್ತಿದೆ. 'ಅನ್ಯಥಾ ಚಾಪಿ' ಎಂಬುದಕ್ಕೆ 'ಅನಾನಾತ್ವೇನಾಪಿ ವ್ಯಪದೇಶಾತ್' ಎಂದು ಅನ್ವಯ. ಏಕೆಂದರೆ 'ದಾಶಕಿತವಾದಿತ್ವಂ ಅಧೀಯತೇ ಏಕೇ' ಕೆಲವು ಶಾಖೆಯವರು ಬ್ರಹ್ಮನಿಗೆ ಬೆಸ್ತರಿಂದ ಜೂಜುಕೋರರಿಂದ ಅಭೇದವನ್ನು ಹೇಳುತ್ತಾರೆ. ಆದ್ದರಿಂದ ಜೀವರು ಬ್ರಹ್ಮರ ಅಂಶರಾಗುತ್ತಾರೆ. ಜೀವರು ಮಾಯಾ ಉಪಹಿತನಾದ ಈಶ್ವರನ ಅಂಶರಾಗಿದ್ದಾರೆ ಎಂಬ ಪ್ರತಿಜ್ಞಾರ್ಥಕ್ಕೆ 'ನಾನಾವ್ಯಪದೇಶಾತ್' ಎಂಬ ಸೂತ್ರದಲ್ಲಿರುವ ಹೇತು ಭೇದವ್ಯಪದೇಶವನ್ನು ಹೇಳುತ್ತಿರುವುದರಿಂದ ಯುಕ್ತವಾಗುತ್ತದೆ. ಆದರೆ 'ಅನ್ಯಥಾ ಚಾಪಿ' ಎಂಬುದರಿಂದ ಹೇಳಲ್ಪಟ್ಟ ಅಭೇದವ್ಯಪದೇಶವೆಂಬ ಹೇತುವು ಅಯುಕ್ತವಾಗುತ್ತದೆ ಎಂಬುದು 'ಅಭೇದವ್ಯಪದೇಶಾಯೋಗಾತ್' ಎಂಬ ಗ್ರಂಥದ ಅಭಿಪ್ರಾಯವಾಗಿದೆ.

**प्रकाशः – इति भाषितत्वेनेति ।।** ''अपि स्मर्यत'' इति सूत्रे स्वामिभृत्ययोरत्यन्तभिन्नयोरीशित्रीशितव्यभावो दृष्ट इति शङ्कानिरासाय ''निरतिशयोपाधिसम्पन्नश्च'' इत्यादिना भाष्ये जीवस्येश्वरप्रशास्यत्वस्योक्ततया ''जीवो ब्रह्मांश इव तत्तन्त्रतया

**न त्वंश इति तात्पर्यार्थः'' इति भामत्युक्तदिशा तदधीनत्वरूपांशत्वस्येश्वरं प्रत्ययोगात् । नहि महागृहावच्छिन्नाकाशं प्रत्यल्प-गृहावच्छिन्नमाकाशमंशो भवतीत्यर्थः ।**

'ಅಪಿ ಸ್ಮರ್ಯತೇ' ಎಂಬ ಸೂತ್ರದಲ್ಲಿ ಅತ್ಯಂತ ಭಿನ್ನರಾದ ಸ್ವಾಮಿಭೃತ್ಯರಿಗೆ ನಿಯಮ್ಯನಿಯಾಮಕಭಾವವು ಕಂಡಿದೆ. ಈ ಆಶಂಕೆಯನ್ನು ಪರಿಹಾರ ಮಾಡುವುದಕ್ಕಾಗಿ 'ನಿರತಿಶಯೋಪಾಧಿಸಂಪನ್ನಶ್ಚ' ಇತ್ಯಾದಿ ಭಾಷ್ಯದಲ್ಲಿ ಜೀವನು ಈಶ್ವರನಿಂದ ನಿಯಮ್ಯನಾಗಿದ್ದಾನೆಂದು ಹೇಳಲಾಗಿದೆ. ಆದ್ದರಿಂದ ತದಧೀನತ್ವ ರೂಪವಾದ ಅಂಶತ್ವವನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ ಭಾಮತಿಯಲ್ಲಿ ಜೀವನು ಬ್ರಹ್ಮನ ಅಂಶನಂತೆ ಇದ್ದಾನೆ. ಏಕೆಂದರೆ ತದಧೀನನಾಗಿರುವುದರಿಂದ. ಆದರೆ ಜೀವನು ಬ್ರಹ್ಮನ ಅಂಶನಲ್ಲ ಎಂಬುದೇ ತಾತ್ಪರ್ಯಾರ್ಥ ಎಂದು ವ್ಯಾಖ್ಯಾನ ಮಾಡಲಾಗಿದೆ. ಹೀಗಿರುವಾಗ ಜೀವನು ಈಶ್ವರನನ್ನು ಕುರಿತು ಅಂಶನೆಂದು ಹೇಗೆ ಹೇಳಲು ಸಾಧ್ಯ? ಮಹಾಗೃಹಾವಚ್ಛನ್ನವಾದ ಆಕಾಶವನ್ನು ಕುರಿತು ಅಲ್ಪಗೃಹಾವಚ್ಛನ್ನವಾದ ಆಕಾಶವು ಅಂಶವಾಗಲು ಸಾಧ್ಯವಿಲ್ಲವಷ್ಟೆ?

**प्रकाशः – एवं ब्रह्मशब्दार्थविकल्पेन जीवस्य तदंशत्वं निरस्य जीवशब्दार्थविकल्पेनापि तस्यांशत्वं निराह – किञ्चेति ।। तत्राभेदेति ।। नानाव्यपदेशादन्यथा चापीत्यनेनोक्तभेदाभेदव्यपदेशाभ्यां ह्यंशत्वावगमस्त्वयोक्त इत्यन्यथा चापीत्यंशोक्ताभेदव्यपदेशो हेतुर्न युज्यते । विशिष्टस्य जीवस्य शुद्धादीश्व राद्वाऽभेदाभावादित्यर्थः ।**

ಹೀಗೆ ಬ್ರಹ್ಮಶಬ್ದಾರ್ಥವನ್ನು ವಿಕಲ್ಪ ಮಾಡುವ ಮೂಲಕ ಜೀವನು ಬ್ರಹ್ಮನ ಅಂಶನಾಗಲಾರ ಎಂಬುದನ್ನು ನಿರಾಕರಣೆ ಮಾಡಿ ಜೀವಶಬ್ದದ ಅರ್ಥ ವಿಕಲ್ಪ ಮಾಡುವ ಮೂಲಕ ಬ್ರಹ್ಮನ ಅಂಶನಾಗಲಾರ ಎಂಬುದನ್ನು 'ಕಿಂಚ' ಇತ್ಯಾದಿ ಗ್ರಂಥದಿಂದ ನಿರಾಕರಣೆ ಮಾಡುತ್ತಿದ್ದಾರೆ. 'ತತ್ರ ಅಭೇದ' ಇತ್ಯಾದಿ ಗ್ರಂಥದ ಅಭಿಪ್ರಾಯ ಹೀಗಿದೆ – 'ನಾನಾ ವ್ಯಪದೇಶಾತ್' ಎಂಬುದಾಗಿ ಸೂತ್ರದಲ್ಲಿ ಅಂಶತ್ವಕ್ಕೆ ಒಂದು ಹೇತುವನ್ನು ಹೇಳಿ 'ಅನ್ಯಥಾ ಚಾಪಿ' ಎಂಬುದರಿಂದ ಮತ್ತೊಂದು ಹೇತುವನ್ನು ಹೇಳಿದ್ದೀರಿ. ಇದರಿಂದ 'ಭೇದಾಭೇದವ್ಯಪದೇಶತ್ವ'ವೆಂಬ ಕಾರಣದಿಂದ ಅಂಶತ್ವವು ಸ್ಪಷ್ಟವಾಗುತ್ತದೆ ಎಂದು ತಿಳಿಯುತ್ತದೆ. ಈಗ 'ಅನ್ಯಥಾ ಚಾಪಿ' ಎಂಬ ಅಂಶದಿಂದ ಹೇಳಲ್ಪಟ್ಟ 'ಅಭೇದವ್ಯಪದೇಶ' ವು ಹೇತುವಾಗದೇ ಇರಬೇಕಾದೀತು ಎಂಬುದನ್ನು 'ತತ್ರ ಅಭೇದ' ಇತ್ಯಾದಿ ಗ್ರಂಥದಿಂದ ಹೇಳಿದ್ದಾರೆ. ವಿಶಿಷ್ಟನಾದ ಜೀವನಿಗೆ ಶುದ್ಧನಾದ ಈಶ್ವರನ ದೆಸೆಯಿಂದ ಅಭೇದವು ಇರುವುದಿಲ್ಲ ಎಂದಭಿಪ್ರಾಯ.

## तात्पर्यचन्द्रिका

**– यच्चोक्तं जीवं प्रत्यंशयपीश्वरो न जीववद्दुःखी । प्रतिबिम्बे कम्पयुक्तेऽपि तद्रहितसूर्यादिवदिति चतुर्थार्थ इति ।**

ಜೀವನು ಅಂಶನಾಗಿದ್ದಾನೆ. ಇಂತಹ ಜೀವನಿಗೆ ಈಶ್ವರನು ಅಂಶಿಯಾಗಿದ್ದಾನೆ. ಆದರೂ ಕೂಡ ಜೀವನಂತೆ ಈಶ್ವರನು ದುಃಖಿಯಾಗಲಾರ. ಏಕೆಂದರೆ ಸರೋವರದಲ್ಲಿ ಸೂರ್ಯನ ಪ್ರತಿಬಿಂಬವು

ಕಾಣಿಸುತ್ತದೆ. ನೀರಿನಲ್ಲಿ ಚಲನೆಯಾದಾಗ ಆ ಪ್ರತಿಬಿಂಬದಲ್ಲೂ ಕೂಡ ಚಲನೆ ಉಂಟಾಗುತ್ತದೆ. ಅಂದಮಾತ್ರಕ್ಕೆ ಬಿಂಬನಾದ ಸೂರ್ಯನಲ್ಲಿ ಚಲನೆ ಉಂಟಾಗುವುದಿಲ್ಲ. ಅದರಂತೆ ಜೀವನಲ್ಲಿ ದುಃಖಾದಿಗಳು ಬಂದರು ಬಿಂಬನೆನಿಸಿದ ಈಶ್ವರನಲ್ಲಿ ದುಃಖಾದಿಗಳು ಬರುವುದಿಲ್ಲ. ಹೀಗೆ ನಾಕನೇ ಸೂತ್ರದ ಅರ್ಥವನ್ನು ಅದ್ವೈತಿಗಳು ಹೇಳುತ್ತಾರೆ.

**तन्न । मम रीत्येश्वरावताराणां जीवाना-श्चांशत्वाविशेषेऽपि स्वरूपांशत्वाभिन्नांशत्वात्मकावान्तरविशेषरूप सिषाधयिषितधर्मवतोर्वैदिकयोश्चेतनयोर्वैदिकौ चेतनौ प्रति सूत्रप्रामाण्यापादकतात्विकव्यवस्थायां ''यथा सूर्यप्रभाक्षिणि'' इति स्मृतिसिद्धयोर्दृष्टान्तत्वस्य सम्भवे तव रीत्या सिषाधयिषितदुःखादि व्यवस्थारहितयोर्लौकिकयोरचेतनयोर्वैदिकौ चेतनौ प्रति सूत्राप्रामाण्यापादकातात्विकव्यवस्थायाम् ''बहवः सूर्यका यद्वत्सूर्यस्य सदृशा जल'' इत्यादि-स्मृत्यादिविरुद्धस्य दृष्टान्तत्वस्यासम्भवात् ।**

ಇದು ತಪ್ಪು. ನಾವು ಮಾಡುವ ಸೂತ್ರವ್ಯಾಖ್ಯಾನದಲ್ಲಿ ಅತ್ಯಂತ ಸ್ವಾರಸ್ಯವಿದೆ. ನೀವು ಮಾಡುವ ಸೂತ್ರಾರ್ಥದಲ್ಲಿ ಅಸ್ವಾರಸ್ಯವಿದೆ. ಅದು ಹೀಗೆ– ಜೀವರುಗಳಿಗೆ ಹಾಗೂ ಈಶ್ವರನ ಅವತಾರವೆನಿಸಿದ ಮತ್ಸ್ಯಾದಿಗಳಿಗೆ ಅಂಶತ್ವವು ಸಮಾನವಾಗಿದೆ. ಆದರೂ ಕೂಡ ಸ್ವರೂಪಾಂಶತ್ವ, ಭಿನ್ನಾಂಶತ್ವವೆಂಬ ಅವಾಂತರವಿಶೇಷವಿದೆ. ಇಂತಹ ಅವಾಂತರವಿಶೇಷಸ್ವರೂಪವಾದ ಸಿಷಾಧಯಿಷಿತ (ಸಾಧನೆ ಮಾಡಲು ಅಪೇಕ್ಷಿಸಲ್ಪಟ್ಟ) ಧರ್ಮವುಳ್ಳ ದೃಷ್ಟಾಂತವನ್ನೇ ನಾವು ನೀಡಿದ್ದೇವೆ. ಜೀವೇಶ್ವರರು ಚೇತನರಾಗಿದ್ದಾರೆ ಮತ್ತು ವೈದಿಕರಾಗಿದ್ದಾರೆ. ಇಂತಹವರನ್ನು ಕುರಿತು ವೈದಿಕರಾದ ಚೇತನರನ್ನೇ ದೃಷ್ಟಾಂತವನ್ನು ನಾವು ನೀಡಿದ್ದೇವೆ. ಮತ್ತು ಸ್ವರೂಪಾಂಶತ್ವ, ಭಿನ್ನಾಂಶತ್ವ ಎಂಬ ತಾತ್ವಿಕವ್ಯವಸ್ಥೆಯು ಸೂತ್ರಪ್ರಾಮಾಣ್ಯಕ್ಕೆ ಆಪಾದಕವಾಗಿವೆ. ಇಂತಹ ವ್ಯವಸ್ಥೆಯಲ್ಲಿ 'ಯಥಾ ಸೂರ್ಯಪ್ರಭಾಕ್ಷಿಣಿ' ಎಂಬ ಸ್ಮೃತಿಸಿದ್ಧವಾದ ದೃಷ್ಟಾಂತವನ್ನೇ ನಾವು ನೀಡಿದ್ದೇವೆ. ಹೀಗೆ ನಮ್ಮ ಮತದಲ್ಲಿ ಪ್ರತಿಯೊಂದೂ ಕೂಡ ಅತ್ಯಂತ ಸಮಂಜಸವಾಗಿದೆ.

ಆದರೆ ನಿಮ್ಮ ಮತದಲ್ಲಿ ಇವೆಲ್ಲವೂ ವಿರುದ್ಧವಾಗಿವೆ. ನಿಮ್ಮ ಪ್ರಕಾರ ಸಿಷಾಧಯಿಷಿತವಾದ ವ್ಯವಸ್ಥೆ ಎಂದರೆ ದುಃಖಾದಿಗಳ ವ್ಯವಸ್ಥೆ. ಇದು ದೃಷ್ಟಾಂತದಲ್ಲಿ ಇರುವುದೇ ಇಲ್ಲ. ಪ್ರತಿಬಿಂಬದಲ್ಲಿ ಕಂಪನ ಇದೆ, ಕಂಪನ ಇಲ್ಲ ಎನ್ನುವುದರಲ್ಲಿ ದುಃಖಾದಿಗಳ ವ್ಯವಸ್ಥೆಯನ್ನು ಮಾಡಲು ಸಾಧ್ಯವಿಲ್ಲ. ಮತ್ತು ವೈದಿಕರಾದ ಚೇತನರನ್ನು ಕುರಿತು, ಲೌಕಿಕವಾದ ಅಚೇತನವನ್ನು ದೃಷ್ಟಾಂತವನ್ನಾಗಿ ನೀಡಿದ್ದೀರಿ. ಮತ್ತು ಸೂತ್ರ ಅಪ್ರಾಮಾಣ್ಯಕ್ಕೆ ಆಪಾದಕವಾದ ಅತಾತ್ವಿಕವ್ಯವಸ್ಥೆಯಲ್ಲಿ ದೃಷ್ಟಾಂತವನ್ನು ನೀಡುತ್ತಿದ್ದೀರಿ. ಮತ್ತು 'ಬಹವಃ ಸೂರ್ಯಕಾ ಯದ್ವತ್ ಸೂರ್ಯಸ್ಯ ಸದೃಶಾ ಜಲೇ' ಇತ್ಯಾದಿ ಸ್ಮೃತಿ ವಿರುದ್ಧವಾದ ದೃಷ್ಟಾಂತವನ್ನು ನೀಡುತ್ತಿದ್ದೀರಿ.

**बिम्बप्रतिबिम्बयोरपि तात्विकाभेदस्य पक्षतुल्यतया दृष्टान्तत्वायोगाच्च । आदिशब्देन घटाकाशमहाकाशादिके उक्तेऽपि प्रकाशपदस्य ''आभास एव'' इत्यनेन पुनरुक्तेश्च ।**

ಅಂಶಾಧಿಕರಣ (೨-೩-೧೮)

ಬಿಂಬ ಪ್ರತಿಬಿಂಬಗಳಿಗೆ ತಾತ್ವಿಕಾಭೇದವಿರುವುದರಿಂದ ಪಕ್ಷತುಲ್ಯವೇ ಆಗಿದೆ. ಆದ್ದರಿಂದ ಇದು ದೃಷ್ಟಾಂತವೂ ಕೂಡ ಆಗುವುದಿಲ್ಲ. ಆದಿ ಶಬ್ದದಿಂದ ಘಟಾಕಾಶ ಹಾಗೂ ಮಹಾಕಾಶಾದಿಗಳನ್ನು ಹೇಳುವುದರಿಂದ ಸಾರ್ಥಕವಾದರೂ ಕೂಡ ಪ್ರಕಾಶ ಪದಕ್ಕೆ 'ಆಭಾಸ ಏವ' ಎಂಬ ಸೂತ್ರದಿಂದ ಪುನರುಕ್ತಿ ದೋಷವು ಬರುತ್ತದೆ.

**ननु चन्द्रादावङ्गुल्यवष्टम्भादिना प्रतीतवक्रत्वादिवज्जीवे प्रतीतं दुःखादिकं मिथ्येतीह प्रकाशपदेन विवक्षितमिति चेन्न । ईशेऽपि जीववत्संसारित्वापादकं मिथ्यादुःखं स्यादिति शङ्काया अनेनापरिहारात् ।**

ಅಂಗುಲ್ಯವಷ್ಟಂಭದಿಂದ ಚಂದ್ರನಲ್ಲಿ ವಕ್ರತ್ವವು ಹೇಗೆ ಪ್ರತೀತವಾಗುತ್ತದೋ ಹಾಗೆ ಜೀವನಲ್ಲಿ ಪ್ರತೀತವಾಗುವ ದುಃಖಗಳು ಮಿಥ್ಯಾಭೂತವಾಗಿವೆ. ಇದನ್ನು ತಿಳಿಸುವುದಕ್ಕಾಗಿ ಪ್ರಕಾಶ ಪದವು ಸಾರ್ಥಕವಲ್ಲವೇ ಎಂದು ಹೇಳಬಾರದು. ಏಕೆಂದರೆ ಈಶ್ವರನಲ್ಲೂ ಕೂಡ ಜೀವನಂತೆ ಸಂಸಾರಿತ್ವಾಪಾದಕವಾದ ಮಿಥ್ಯಾಭೂತವಾದ ದುಃಖವು ಬರಬೇಕಾಗುತ್ತದೆ ಎಂಬ ಶಂಕೆಯು ಇದರಿಂದ ಪರಿಹರಿಸಲು ಸಾಧ್ಯವಾಗುವುದಿಲ್ಲ.

**यच्चोक्तम् ''तत्र यःपरमात्मा हि स नित्यो निर्गुणःस्मृतः । न लिप्यते फलैश्चापि'' इति स्मृतिः पञ्चमेन ''स्मरन्ति च'' इत्यनेन विवक्षितेति तन्न । अत्र भेदस्यैवोक्त्याऽभेदेऽपि व्यवस्थेत्यनुक्तेः । काल्पनिकभेदेन व्यवस्थायामपि तात्त्विकाभेदेनाव्यवस्थापि स्यादिति शङ्काया अपरिहाराच्च ।**

'ಸ್ಮರಂತಿ ಚ' ಎಂಬ ಐದನೆಯ ಸೂತ್ರಕ್ಕೆ ಹೀಗೆ ವ್ಯಾಖ್ಯಾನ ಮಾಡಿದ್ದಾರೆ. 'ತತ್ರ ಯಃ ಪರಮಾತ್ಮಾ ಹಿ ಸ ನಿತ್ಯಃ ನಿರ್ಗುಣಃ ಸ್ಮೃತಃ । ನ ಲಿಪ್ಯತೇ ಫಲೈಶ್ಚಾಪಿ' ಯಾವ ಪರಮಾತ್ಮನಿದ್ದಾನೋ ಅವನು ನಿತ್ಯನೂ ನಿರ್ಗುಣನೂ ಆಗಿದ್ದಾನೆ. ಯಾವುದೇ ಫಲಗಳಿಂದ ಲಿಪ್ತನಾಗುವುದಿಲ್ಲ ಎಂಬ ಸ್ಮೃತಿ ಪ್ರಮಾಣವನ್ನು ಹೇಳುವುದಕ್ಕಾಗಿ 'ಸ್ಮರಂತಿ ಚ' ಎಂಬ ಐದನೆಯ ಸೂತ್ರವು ಹೊರಟಿದೆ ಎಂದು.

ಇದೂ ಕೂಡ ತಪ್ಪು. 'ತತ್ರ ಯಃ ಪರಮಾತ್ಮಾ' ಎಂಬ ವಾಕ್ಯದಲ್ಲಿ ಭೇದವೇ ಸ್ಪಷ್ಟವಾಗಿ ಹೇಳಿದೆ. ಅಭೇದವಿದ್ದರೂ ವ್ಯವಸ್ಥೆಯನ್ನು ಮಾಡಬಹುದು ಎಂದು ಇದು ಹೇಳುತ್ತಲೇ ಇಲ್ಲ. ಕಾಲ್ಪನಿಕಭೇದದಿಂದ ವ್ಯವಸ್ಥೆಯನ್ನು ಮಾಡುತ್ತೇವೆನ್ನುವುದಾದರೆ ತಾತ್ವಿಕವಾದ ಅಭೇದದಿಂದಲೂ ಅವ್ಯವಸ್ಥೆಯು ಬರಬೇಕಾಗುತ್ತದೆ ಎಂಬ ಶಂಕೆಯನ್ನು ನೀವು ಪರಿಹರಿಸಿಕೊಳ್ಳಲಾಗುವುದಿಲ್ಲ.

**यच्चोक्तं ब्रह्माभेदेऽपि जीवस्य विधिनिषेधबद्धत्वं देहाभिमानाद्युक्तमशुचिदेश सम्बन्धात्सवितृप्रकाशस्य हेयत्वमिव । देहानभिमानाद्धि ज्ञानिनो न विघ्यादीति षष्ठार्थ इति**

'ಅನುಜ್ಞಾಪರಿಹಾರೌ ದೇಹಸಂಬಂಧಾತ್ ಜ್ಯೋತಿರಾದಿವತ್' – ಎಂಬ ಆರನೆಯ ಸೂತ್ರಕ್ಕೆ ಅದ್ವೈತಿಗಳ ವ್ಯಾಖ್ಯಾನ ಹೀಗಿದೆ – ಜೀವನು ಬ್ರಹ್ಮನಿಂದ ಅಭಿನ್ನನಾಗಿದ್ದರೂ ಕೂಡ ವಿಧಿನಿಷೇಧಬದ್ಧನಾಗುತ್ತಾನೆ. ದೇಹಾಭಿಮಾನ ಇರುವುದರಿಂದ. ಯಾವ ರೀತಿಯಾಗಿ ಅಶುಚಿದೇಶದ ಸಂಬಂಧವನ್ನು ಹೊಂದಿದಾಗ ಸವಿತೃಪ್ರಕಾಶವು ಹೇಯವಾಗುತ್ತದೋ ಅದರಂತೆ. ಇಲ್ಲಿ ಅನುಮಾನವನ್ನು

ಹೀಗೆ ತಿಳಿಯಬೇಕು. 'ಬ್ರಹ್ಮಾಭಿನ್ನೋ ಜೀವಃ ವಿಧಿನಿಷೇಧ ಬದ್ಧಃ ದೇಹಾಭಿಮಾನಾತ್ ಅಶುಚಿದೇಶ ಸಂಬಂಧಸ್ಯ ಸವಿತೃಪ್ರಕಾಶಸ್ಯ ಹೇಯತ್ವವತ್' ಎಂದು.

ಜ್ಞಾನಿಯಾದ ಚೇತನನಿಗೆ ದೇಹಾಭಿಮಾನವೇ ಇಲ್ಲದ ಕಾರಣ ಅವನು ವಿಧಿನಿಷೇಧಗಳಿಂದ ಬದ್ಧನಾಗುವುದಿಲ್ಲ ಎಂದು.

**तन्न । मम रीत्यांश्यधीनत्वरूपसाध्येन देहसम्बन्धरूपेण साधनेन च युक्तस्य ''यथा सूर्य'' इति स्मृतिसिद्धस्य चेतनस्य चेतनं प्रति दृष्टान्तत्वसम्भवे तव रीत्या विध्यादिबद्धत्वरूपसाध्येन देहसम्बन्धरूपहेतुना च रहितस्य स्मृत्याद्यसिद्धस्य दृष्टान्तत्वायोगात् ।**

ಇದು ತಪ್ಪು. ನಾವು ಹೇಳುವ ಸೂತ್ರವ್ಯಾಖ್ಯಾನವೇ ಅತ್ಯಂತ ಉಚಿತವಾಗಿದೆ. ಏಕೆಂದರೆ ಕಣ್ಣಿಗೆ ಅಭಿಮಾನಿಯಾದ ಅಪಭ್ರಷ್ಟದೇವತೆಯು ನಮ್ಮ ಅನುಮಾನದಲ್ಲಿ ಉದಾಹರಣೆಯಾಗಿರುತ್ತಾನೆ. ಇವನಲ್ಲಿ ದೇಹಸಂಬಂಧವೆಂಬ ಹೇತುವೂ ಇದೆ, ಅಂಶ್ಯಧೀನತ್ವವೆಂಬ ಸಾಧ್ಯವೂ ಇದೆ. ಮತ್ತು 'ಯಥಾ ಸೂರ್ಯ' ಇತ್ಯಾದಿ ಸ್ಮೃತಿಸಿದ್ಧವೂ ಆಗಿದೆ. ಚೇತನವು ಅಂಶಹೀನವೆಂದು ಸಾಧನೆ ಮಾಡುತ್ತಿರುವುದರಿಂದ ದೃಷ್ಟಾಂತವೂ ಕೂಡ ಚೇತನವೇ ಆಗಿರಬೇಕು. ಇದು ನಮ್ಮ ಮತದ ಪ್ರಕಾರ ಅತ್ಯಂತ ಯುಕ್ತವಾಗುತ್ತದೆ. ಆದರೆ ನಿಮ್ಮಲ್ಲಿ ಇದು ಕೂಡುವುದೇ ಇಲ್ಲ. ಏಕೆಂದರೆ ಸವಿತೃ ಪ್ರಕಾಶದ ಹೇಯತ್ವದಲ್ಲಿ ವಿಧ್ಯಾದಿಬದ್ಧತ್ವ ಎಂಬ ಸಾಧ್ಯವೂ ಇಲ್ಲ, ದೇಹಸಂಬಂಧವೆಂಬ ಹೇತುವೂ ಇಲ್ಲ. ಅಷ್ಟೇ ಅಲ್ಲದೆ ಸವಿತೃಪ್ರಕಾಶವು ಅಶುಚಿದೇಶಸಂಬಂಧವಾದಾಗ ಹೇಯವಾಗುತ್ತದೆಂಬ ಯಾವುದೇ ಸ್ಮೃತಿವಚನವೂ ಕಾಣಸುತ್ತಿಲ್ಲ. ಈ ಎಲ್ಲಾ ಅನುಪಪತ್ತಿಗಳಿಂದ ನಿಮ್ಮ ಅನುಮಾನ ಅಯುಕ್ತವಾಗಿದೆ, ದೃಷ್ಟಾಂತವೂ ಕೂಡ ಅಯುಕ್ತವಾಗಿದೆ.

**ब्रह्मैव जीव इति मते तस्य देहसम्बन्धापरिहाराच्च । अमुक्तावस्थायामाहाराद्यर्थे प्रयतमानस्य ज्ञानिनो विहितानुष्ठानकाल एवानभिमानस्यायोगाच्च ।**

ಬ್ರಹ್ಮನೇ ಜೀವನಾಗಿದ್ದಾನೆಂಬುದು ನಿಮ್ಮ ಮತ. ಹೀಗಿರುವಾಗ ಜೀವನಿಗೆ ಮಾತ್ರ ದೇಹಾಭಿಮಾನ ಇದೆ, ಬ್ರಹ್ಮನಿಗೆ ದೇಹಾಭಿಮಾನ ಇಲ್ಲವೆಂದು ಸಮರ್ಥಿಸಲಾಗದು. ಆದ್ದರಿಂದ ದೇಹಸಂಬಂಧವು ಜೀವನಿಗೆ ಇರುವಂತೆ ಬ್ರಹ್ಮನಿಗೂ ಇದೆ. ವಿಧಿನಿಷೇಧಗಳು ಜೀವನಿಗೆ ಸಂಬಂಧಪಡುವಂತೆ ಬ್ರಹ್ಮನಿಗೂ ಕೂಡ ಸಂಬಂಧಪಡಬೇಕಾಗುತ್ತದೆ.

ಜ್ಞಾನಿಗೆ ದೇಹಾಭಿಮಾನ ಇಲ್ಲವೆಂದು ಹೇಳಿದಿರಿ. ಇದೂ ಕೂಡ ತಪ್ಪು. ಅಪರೋಕ್ಷ ಜ್ಞಾನಿಯಾದರೂ ಕೂಡ ಅಮುಕ್ತಾವಸ್ಥೆಯಲ್ಲಿ ಆಹಾರಾದಿ ವಿಷಯದಲ್ಲ ಪ್ರಯತ್ನಶೀಲನಾಗುತ್ತಾನೆ. ಹೀಗೆ ವಿಹಿತಾನುಷ್ಠಾನ ಕಾಲದಲ್ಲೂ ಕೂಡ ಅವರಿಗೆ ಅಭಿಮಾನ ಇಲ್ಲವೆಂದು ಹೇಳಲು ಸಾಧ್ಯವಿಲ್ಲ.

**यच्चोक्तं कर्तुर्भोक्तुश्चोपहितात्मनः सान्तत्याभावेन सर्वशरीरसम्बन्धात्कर्मभोगा सङ्कर इति सप्तमार्थ इति**

ಒಬ್ಬನೇ ಆತ್ಮನು ಸಕಲ ಶರೀರದಲ್ಲಿರುವುದಾದರೆ ಒಬ್ಬ ಮಾಡಿದ ಕರ್ಮದ ಫಲವನ್ನು ಮತ್ತೊಬ್ಬ ಅನುಭವಿಸಬೇಕಾದೀತು. ಈ ಆಕ್ಷೇಪಕ್ಕೆ ಅವಕಾಶವಿಲ್ಲ. ಏಕೆಂದರೆ ಕರ್ತೃ ಹಾಗೂ ಭೋಕ್ತೃವೆನಿಸಿದ ಉಪಹಿತಾತ್ಮನಿಗೆ ಸಾಂತತ್ಯವು ಇರುವುದಿಲ್ಲ. ಶರೀರಾದಿ ವಿಶಿಷ್ಟನಾಗಿರುವುದರಿಂದ ಅನೇಕ ದೇಹಗಳಲ್ಲಿ

ಅನುಸ್ಯೂತನಾಗಿರುವುದಿಲ್ಲ. ಆದ್ದರಿಂದ ಸರ್ವಶರೀರಕ್ಕೆ ಸಂಬಂಧಪ್ರಯುಕ್ತವಾಗಿ ಕರ್ಮಭೋಗ ಸಾಂಕರ್ಯಕ್ಕೆ ಅವಕಾಶವಿಲ್ಲ ಎಂಬುದು ಏಳನೇ ಸೂತ್ರದ ಅರ್ಥ ಎಂದು ಅದ್ವೈತಿಗಳು ವ್ಯಾಖ್ಯಾನ ಮಾಡುತ್ತಾರೆ.

**तन्न । दुःखादिभोक्तृत्वस्योपाधिविशिष्टगतत्वे बन्धस्य शुद्धगतमोक्ष सामानाधिकरण्यायोगात् । उपाधिसम्बन्धाच्छुद्धगतत्वे साङ्कर्यापरिहारात् ।**

ಇದೂ ಕೂಡ ತಪ್ಪು. ಏಕೆಂದರೆ ದುಃಖಾದಿಗಳು ಉಪಾಧಿವಿಶಿಷ್ಟನಲ್ಲಿವೆ ಎನ್ನುತ್ತಿರುವಿರಿ. ಹಾಗಾದರೆ ದುಃಖಾದಿ ಭೋಕ್ತೃತ್ವವು ಉಪಾಧಿವಿಶಿಷ್ಟಗತವಾಯಿತು. ಮೋಕ್ಷವು ಶುದ್ಧಬ್ರಹ್ಮನಲ್ಲಿದೆ. ಹೀಗಿರುವಾಗ ಬಂಧ ಹಾಗೂ ಮೋಕ್ಷಗಳಿಗೆ ಸಾಮಾನಾಧಿಕರಣ್ಯವೂ ಕೂಡ ಅಯುಕ್ತವಾಗುತ್ತದೆ. ಉಪಾಧಿಸಂಬಂಧದಿಂದ ಬಂಧ ಶುದ್ಧನಲ್ಲಿದೆ ಎನ್ನುವುದಾದರೆ ಪುನಃ ಸಾಂಕರ್ಯದೋಷವು ಬಂದೇ ಬರುತ್ತದೆ.

**एतेन यदुक्तं जीवेशयोर्बिम्बप्रतिबिम्बत्वान्मुख प्रतिमुखयोःश्यामत्वावदातत्वत्दुःखित्वादीत्यष्टमार्थ इति ।**

ಹೀಗೆ ಹೇಳಿದ್ದರಿಂದ ಮತ್ತೊಂದು ಅದ್ವೈತಿಗಳ ಅಭಿಪ್ರಾಯವನ್ನು ನಿರಾಕರಣೆ ಮಾಡಿದಂತಾಯಿತು. ಅವರ ಅಭಿಪ್ರಾಯ ಹೀಗಿದೆ – ಜೀವ ಹಾಗೂ ಈಶ್ವರರಿಗೆ ಬಿಂಬಪ್ರತಿಬಿಂಬಭಾವವಿದೆ. ಬಿಂಬಪ್ರತಿಬಿಂಬಗಳಿಗೆ ಐಕ್ಯವಿದ್ದರೂ ಕೂಡ ಉಪಾಧಿಯಲ್ಲಿರುವ ದೋಷ ಬಿಂಬದಲ್ಲೇ ಕಾಣಿಸುತ್ತದೆ ಹೊರತು ಪ್ರತಿಬಿಂಬದಲ್ಲಿ ಕಾಣಿಸುವುದಿಲ್ಲ. ಅದರಂತೆ ದುಃಖಾದಿಗಳೆಲ್ಲವೂ ಕೂಡ ಜೀವನಲ್ಲೇ ಬರುತ್ತದೆ ಹೊರತು ಈಶ್ವರನಲ್ಲಿ ಬರುವುದಿಲ್ಲ ಎಂಬುದನ್ನು ತಿಳಿಸಲು 'ಆಭಾಸ ಏವಚ' ಎಂಬ ಎಂಟನೆಯ ಸೂತ್ರ ಹೊರಟಿದೆ ಎಂದು ಹೇಳುತ್ತಾರೆ.

**तदपि निरस्तम् । सौत्रेणाभासशब्देनैव हेतुतदाभासयोरिव बिम्बयोर्भिन्नत्वस्य सूचितत्वात् ।।**

ಈ ಸೂತ್ರವ್ಯಾಖ್ಯಾನವನ್ನೂ ಕೂಡ ಈಗ ಹೇಳಿದ ವಿಷಯದಿಂದಲೇ ನಿರಾಕರಣೆ ಮಾಡಿದಂತಾಯಿತು. ಏಕೆಂದರೆ ಸೂತ್ರದಲ್ಲಿರುವ ಆಭಾಸ ಶಬ್ದದಿಂದಲೇ ಬಿಂಬ ಪ್ರತಿಬಿಂಬಗಳಿಗೆ ಭೇದವಿದೆ ಎಂದು ಸೂಚನೆ ಮಾಡಿದ್ದಾರೆ. ಹೇಗೆ ಹೇತು ಮತ್ತು ಹೇತ್ವಾಭಾಸಗಳಿಗೆ ಭೇದವಿದೆಯೋ ಅದರಂತೆ ಬಿಂಬ ಹಾಗೂ ತದಾಭಾಸಗಳಿಗೂ ಕೂಡ ಭೇದವನ್ನು ಹೇಳಲೇಬೇಕು.

**केचित्तु ।। एकवस्त्वेकदेशत्वमंशत्वम् । तच्च जीवविशिष्टं ब्रह्म प्रति विशेषणस्य जीवस्यास्तीत्याहुः ।।**

ರಾಮಾನುಜರು ಅಂಶತ್ವವನ್ನು ಹೀಗೆ ಉಪಪಾದನೆ ಮಾಡುತ್ತಾರೆ – ಒಂದು ವಸ್ತುವಿನ ಏಕದೇಶವೇ ಅಂಶವೆಂದು ಕರೆಸಿಕೊಳ್ಳುತ್ತದೆ. ಈ ಅಂಶತ್ವವು ಜೀವವಿಶಿಷ್ಟನಾದವನು ಬ್ರಹ್ಮ ಎಂದು ಹೇಳಿದಾಗ ವಿಶೇಷಣಭೂತನಾದ ಜೀವನಿಗೆ ಬರುತ್ತದೆ ಹೊರತು ಬ್ರಹ್ಮನಿಗೆ ಬರುವುದಿಲ್ಲ ಎಂದು.

**तन्न ।। शुक्लःपटः पटस्य शौक्ल्यमिति विशेषणविशेष्यभावस्य कामचारित्वेन ब्रह्मविशिष्टं जीवं प्रति ब्रह्मणोऽप्यंशत्वप्रसङ्गात् । स्वविशिष्टब्रह्मैकदेशस्य जडस्यापि ब्रह्मांशत्वप्रसङ्गाच्च । विशिष्टान्तर्गतस्य विशेष्यस्य ब्रह्मणोऽप्यंशत्वापाताच्च ।**

ಇದು ತಪ್ಪು. 'ಶುಕ್ಲಃ ಪಟಃ' ಎಂದೂ ಕೂಡ ವ್ಯವಹರಿಸುತ್ತಾರೆ. ಅಥವಾ 'ಪಟಸ್ಯ ಶೌಕ್ಲ್ಯಂ' ಎಂದೂ ಕೂಡ ವ್ಯವಹರಿಸುತ್ತಾರೆ. 'ಶುಕ್ಲಃ ಪಟಃ' ಎಂದಾಗ ಶೌಕ್ಲ್ಯವು ವಿಶೇಷ್ಯವಾಗಿದೆ. 'ಪಟಸ್ಯ ಶೌಕ್ಲ್ಯಂ' ಎಂದಾಗ ಪಟವು ವಿಶೇಷಣವಾಗಿದೆ. ಹೀಗೆ ವಿಶೇಷಣವಿಶೇಷ್ಯಭಾವಗಳು ಕಾಮಚಾರಿಯಾದ್ದರಿಂದ 'ಜೀವವಿಶಿಷ್ಟಂ ಬ್ರಹ್ಮ' ಎಂದಾಗ ಜೀವನು ವಿಶೇಷಣನಾಗುತ್ತಾನೆ. 'ಬ್ರಹ್ಮವಿಶಿಷ್ಟಃ ಜೀವಃ' ಎಂದು ಹೇಳಿದಾಗ ಬ್ರಹ್ಮನು ವಿಶೇಷಣನಾಗುತ್ತಾನೆ. ಹೀಗೆ ಹೇಳಿದಾಗ ಬ್ರಹ್ಮನೂ ಕೂಡ ಜೀವನಿಗೆ ಅಂಶನಾಗುವ ಪ್ರಸಂಗ ಬರುತ್ತದೆ. ಅಷ್ಟೇ ಅಲ್ಲದೇ, ಸ್ವವಿಶಿಷ್ಟಬ್ರಹ್ಮನ ಏಕದೇಶವಾದ ಜಡವೂ ಕೂಡ ಬ್ರಹ್ಮನ ಅಂಶವೆಂದು ಹೇಳಬೇಕಾಗುತ್ತದೆ. ಹಾಗೂ ವಿಶಿಷ್ಟಾಂತರ್ಗತನಾದ ವಿಶೇಷ್ಯ ಎನಿಸಿದ ಬ್ರಹ್ಮನೂ ಕೂಡ ಅಂಶನಾಗಬೇಕಾಗುತ್ತದೆ.

**द्वितीयसूत्रोक्तायाम् ''पादोऽस्य'' इति श्रुताविदंशब्देन ''उतामृतत्वस्येशानः'' इति पूर्वप्रकृतस्य मुक्तनियामकस्य निष्कृष्टस्य तृतीयोक्तायाम् ''ममैवांशः'' इति स्मृतावप्यस्मच्छब्देन ''तत्तेजो विद्धि मामकम्'' इत्याद्युत्तरवाक्य इव निष्कृष्टस्य विशेष्यस्य ब्रह्मण एवांशित्वोक्तेश्च ।**

ಮತ್ತು ಎರಡನೇ ಸೂತ್ರದಲ್ಲಿ ಉಲ್ಲೇಖ ಮಾಡಲ್ಪಟ್ಟ 'ಪಾದೋಽಸ್ಯ ವಿಶ್ವಾ ಭೂತಾನಿ' ಎಂಬ ಶ್ರುತಿಯಲ್ಲಿ 'ಇದಂ' ಶಬ್ದದಿಂದ ಬ್ರಹ್ಮನೇ ವಿವಕ್ಷಿತನಾಗಿದ್ದಾನೆ. ಏಕೆಂದರೆ 'ಉತಾಮೃತತ್ವಸ್ಯೇಶಾನಃ' ಎಂಬುದಾಗಿ ಮುಕ್ತನಿಯಾಮಕತ್ವೇನ ನಿಖರವಾಗಿ ಬ್ರಹ್ಮನೇ ಪ್ರಸಕ್ತನಾಗಿದ್ದಾನೆ. ಹಾಗೂ ಮೂರನೇ ಸೂತ್ರದಲ್ಲಿ ಉಲ್ಲೇಖ ಮಾಡಲ್ಪಟ್ಟ 'ಮಮೈವಾಂಶಃ' ಎಂಬ ಸ್ಮೃತಿವಾಕ್ಯದಲ್ಲಿರುವ 'ಅಸ್ಮತ್' ಶಬ್ದದಿಂದಲೂ ಕೂಡ ಬ್ರಹ್ಮನೇ ವಿವಕ್ಷಿತನಾಗಿದ್ದಾನೆ. ಏಕೆಂದರೆ 'ತತ್ತೇಜೋ ವಿದ್ಧಿ ಮಾಮಕಮ್' ಎಂಬ ಉತ್ತರವಾಕ್ಯದಲ್ಲಿ ಹೇಗೆ ನಿಷ್ಕೃಷ್ಟವಾಗಿ ಬ್ರಹ್ಮನು ಪ್ರತಿಪಾದ್ಯನಾಗಿದ್ದಾನೋ ಅದರಂತೆ ಇಲ್ಲೂ ಕೂಡ ಬ್ರಹ್ಮನೇ ವಿವಕ್ಷಿತನಾಗಿದ್ದಾನೆ. ಇದರಿಂದ ಬ್ರಹ್ಮನನ್ನು ಅಂಶಿ ಎಂದೇ ತಿಳಿಯಬೇಕೇ ಹೊರತು ಅಂಶನೆಂದು ಹೇಳಬಾರದು.

**किञ्च जीव विशिष्टं ब्रह्मेति कोऽर्थः । किं विशेष्यमब्रह्मैव तत्तु जीवशिष्टं सद्ब्रह्म भवतीति वा किं वा विशेष्यमेव ब्रह्म तस्य तु जीवो विशेषणमिति ।**

ಮತ್ತು ಜೀವವಿಶಿಷ್ಟನಾಗಿದ್ದಾನೆ ಬ್ರಹ್ಮ ಎಂಬುದರ ಅರ್ಥವೇನು? ವಿಶೇಷ್ಯನು ಬ್ರಹ್ಮನೇ ಅಲ್ಲ. ಜೀವಭಾವವನ್ನು ಕಳಸಿಕೊಂಡು ಬ್ರಹ್ಮನು ಆಗುತ್ತಾನೆ ಎಂದೋ? ಅಥವಾ ವಿಶೇಷ್ಯನೇ ಬ್ರಹ್ಮನಾಗಿದ್ದಾನೆ. ಅವನಲ್ಲಿ ಜೀವನು ವಿಶೇಷಣನಾಗಿದ್ದಾನೆ ಎಂದೋ?

**आद्ये जीवस्य ब्रह्मैकदेशत्वसिद्धावपि ब्रह्मणो जीवान्तर्यामित्वतच्छेषित्वमुक्त-नियामकत्वजगत्कारणत्वादयो न स्युः । नहि नियम्यजीवविशिष्टस्तन्नियामकः ।**

ಪ್ರಥಮ ಪಕ್ಷದಲ್ಲಿ ಜೀವನು ಬ್ರಹ್ಮನ ಏಕದೇಶ ಎಂದು ಸಿದ್ಧವಾಗಬಹುದು. ಆದರೆ ಬ್ರಹ್ಮನು ಜೀವನಲ್ಲಿ ಅಂತರ್ಯಾಮಿಯಾಗಿದ್ದಾನೆ ಅಥವಾ ಜೀವನಿಗೆ ಶೇಷಿಯಾಗಿದ್ದಾನೆ ಅಥವಾ ಮುಕ್ತನಿಯಾಮಕನಾಗಿದ್ದಾನೆ, ಜಗತ್ಕಾರಣನಾಗಿದ್ದಾನೆ ಇತ್ಯಾದಿಗಳು ಯುಕ್ತವಾಗುವುದಿಲ್ಲ. ಏಕೆಂದರೆ ನಿಯಮ್ಯನಾದ ಜೀವವಿಶಿಷ್ಟನಾದವನಿಗೆ ಜೀವನಿಯಾಮಕತ್ವವು ಯುಕ್ತವಾಗುವುದಿಲ್ಲ. ಜೀವವಿಶಿಷ್ಟನಾದವನೇ ಬ್ರಹ್ಮನೆಂದಾದರೆ ಬ್ರಹ್ಮನು ಜೀವರ ಅಂತರ್ಯಾಮಿ, ಜೀವರಿಗೆ ನಿಯಾಮಕ ಎಂದು ಹೇಳಲು ಹೇಗೆ ಸಾಧ್ಯ ? ವಿಶಿಷ್ಟನು ವಿಶೇಷ್ಯನಲ್ಲಿ ಪ್ರವೇಶ ಮಾಡುವುದು ಎಲ್ಲಿಯೂ ಕಂಡಿಲ್ಲ. ಅದನ್ನು ನಿಯಮನ ಮಾಡುವುದೂ ಕೂಡ ಎಲ್ಲೂ ಕಂಡಿಲ್ಲ.

**अन्त्ये च ब्रह्मणोऽन्तर्यामित्वादिसिद्धावपि जीवस्य ब्रह्मैकदेशत्वासिद्धिः । नहि विशेषणं विशेष्यस्यैकदेशः ॥**

**॥ इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् अंशाधिकरणं सम्पूर्णम् ॥१८॥**

ಎರಡನೇ ಪಕ್ಷವೂ ಕೂಡ ತಪ್ಪು. ವಿಶೇಷ್ಯನೇ ಬ್ರಹ್ಮನೆಂದಾಗ ಅಂತರ್ಯಾಮಿತ್ವಾದಿಗಳು ಯುಕ್ತವಾಗಬಹುದು ಆದರೆ ಜೀವನಿಗೆ ಬ್ರಹ್ಮನ ಏಕದೇಶತ್ವವು ಸರ್ವಥಾ ಕೂಡುವುದಿಲ್ಲ. ಅಂದರೆ ಜೀವನು ಬ್ರಹ್ಮನ ಅಂಶನಾಗಲು ಸಾಧ್ಯವಿಲ್ಲ. ಏಕೆಂದರೆ ವಿಶೇಷಣವು ವಿಶೇಷ್ಯದ ಏಕದೇಶವಾಗಿರುವುದು ಎಲ್ಲಿಯೂ ಕೂಡ ಕಂಡಿಲ್ಲ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಅಂಶಾಧಿಕರಣವು ಸಂಪೂರ್ಣವಾಯಿತು

**प्रकाशः –**

एवं ब्रह्मांशो जीव इति प्रतिज्ञांशमन्यमते निरस्य मतान्तरेऽग्रे निरसिष्यन् मतद्वयेऽपि हेत्वंशार्थमनूद्य निराह – **यच्चोक्तमिति** ॥

ಇಲ್ಲಿಯತನಕ ಜೀವನು ಬ್ರಹ್ಮನ ಅಂಶನಾಗಿದ್ದಾನೆ ಎಂಬ ಪ್ರತಿಜ್ಞೆಯನ್ನು ಅದ್ವೈತಮತದ ಪ್ರಕಾರ ನಿರಾಕರಣೆ ಮಾಡಿದ್ದಾಯಿತು. ಈಗ ರಾಮಾನುಜಮತವನ್ನು ನಿರಾಕರಣೆ ಮಾಡಬೇಕಾಗಿದೆ. ಅದಕ್ಕೂ ಮೊದಲು ಎರಡೂ ಮತಗಳಲ್ಲಿ ಹೇತ್ವಂಶದ ಬಗ್ಗೆ ಅವರ ವಿಚಾರವನ್ನು ನಿರಾಕರಣೆ ಮಾಡಲು 'ಯಚ್ಚೋಕ್ತಂ' ಇತ್ಯಾದಿ ಗ್ರಂಥವು ಹೊರಟಿದೆ.

**प्रकाशः –**

''ज्ञातृज्ञेयत्वसृज्यस्रष्टृत्व-नियम्यनियामकत्वादिनानात्वव्यपदेशादन्यथा चानानात्वेनाप्यभेदेनापि व्यपदेशादित्यर्थो विवक्षित'' इत्युक्तमित्यर्थः ॥

'ಜ್ಞಾತೃಜ್ಞೇಯತ್ವಸೃಜ್ಯಸ್ರಷ್ಟೃತ್ವನಿಯಮ್ಯನಿಯಾಮಕತ್ವಾದಿನಾನಾತ್ವವ್ಯಪದೇಶಾದನ್ಯಥಾಚಾನಾನಾತ್ವೇನಾಪ್ಯ ಭೇದೇನಾಪಿ ವ್ಯಪದೇಶಾದಿತ್ಯರ್ಥೋ ವಿವಕ್ಷಿತಃ' ಜ್ಞಾತೃಜ್ಞೇಯತ್ವ, ಸೃಜ್ಯಸ್ರಷ್ಟೃತ್ವ, ನಿಯಮ್ಯನಿಯಾಮಕತ್ವ ಇವೇ ಮೊದಲಾದ ರೀತಿಯಲ್ಲಿ ಭೇದವನ್ನು ಹೇಳಿರುವುದರಿಂದ ಇದಕ್ಕೆ ವಿಪರೀತವಾಗಿ ಅಭೇದವನ್ನೂ ಕೂಡ ಹೇಳಿರುವುದರಿಂದ ಎಂಬರ್ಥವನ್ನು ಸೂತ್ರದಲ್ಲಿರುವ ಹೇತ್ವಂಶಕ್ಕೆ ಹೇಳಿರುತ್ತಾರೆ ಎಂಬುದು 'ಯಚ್ಚೋಕ್ತಂ' ಎಂಬುದರ ಅಭಿಪ್ರಾಯವಾಗಿದೆ.

**प्रकाशः** – **अन्यथापीत्यनेनैव वेति** ।। नानाव्यपदेशादन्यथापीति वा नानाव्यपदेशाद्दाशकितवादित्वमप्यधीयत एक इति वा पूर्णत्वेनेतरवैयर्थ्यादन्यथा चापीत्यस्य विवरणपरतयैव दाशेत्याद्यंस्य परभाष्ये प्रतीतेः ।

ಪರಭಾಷ್ಯದಲ್ಲಿ 'ಅನ್ಯಥಾಚಾಪಿ' ಎಂಬುದರ ವಿವರಣೆಯನ್ನು ಮಾಡುವುದಕ್ಕಾಗಿಯೇ ದಾಶಕಿತವಾದಿತ್ವಂ' ಇತ್ಯಾದಿ ಸೂತ್ರಭಾವವು ಹೊರಟದೆ ಎಂದು ವ್ಯಾಖ್ಯಾನ ಮಾಡಿದ್ದಾರೆ. ವಾಸ್ತವಿಕವಾಗಿ ಇವರ ಪ್ರಕಾರ 'ನಾನಾವ್ಯಪದೇಶಾತ್ ಅನ್ಯಥಾಪಿ' ಎಂದಷ್ಟೇ ಸೂತ್ರ ಸಾಕು. ಅಥವಾ 'ನಾನಾವ್ಯಪದೇಶಾದ್ದಾಶಕಿತ-ವಾದಿತ್ವಮ್ಯಧೀಯತೇ ಏಕೇ' ಎಂದಷ್ಟೇ ಸಾಕು. ಉಳಿದ ಸೂತ್ರಭಾಗವು ವ್ಯರ್ಥವಾಗುತ್ತದೆ.

**प्रकाशः** – ननु ''अन्यथा च'' इत्यनेन ''तत्त्वमसि'' इत्याद्यभेदव्यपदेशोऽभिमतः। ''अपि दाशकितवादित्वम्'' इत्यनेन तु सर्वजीवाभेदः। अत एव रामानुजभाष्ये ''अपि दाशकितवादित्वमधीयत एके । ब्रह्मदाशा ब्रह्मकितवा इत्याद्याथर्वणिकाब्रह्मदाशकितवादित्वमप्यधीयते । ततश्च सर्वजीवव्यापित्वेनाभेदो व्यपदिश्यत इत्यर्थ'' इत्युक्तम् । सुधायामप्येव मेव सूत्रार्थोऽनूदित इत्यतो दाशकितवादित्वमित्यनेनैव वेत्युक्तम् ।

'ಅನ್ಯಥಾ ಚ' ಎಂಬ ಸೂತ್ರದ ಭಾಗದಿಂದ 'ತತ್ತ್ವಮಸಿ' ಎಂಬ ಸೂತ್ರದಲ್ಲಿ ಹೇಳಿದ ಅಭೇದವ್ಯಪದೇಶವನ್ನು ವಿವಕ್ಷಿಸಲಾಗಿದೆ. 'ಅಪಿ ದಾಶಕಿತವಾದಿತ್ವಮ್' ಎಂಬ ಸೂತ್ರಭಾಗದಿಂದ ಸಕಲಜೀವರ ಜೊತೆ ಅಭೇದವನ್ನು ವಿವಕ್ಷಿಸಲಾಗಿದೆ. ಆದ್ದರಿಂದಲೇ ರಾಮಾನುಜಭಾಷ್ಯದ ಮಾತು ಹೀಗೆ ಹೊರಟದೆ– 'ಅಪಿ ದಾಶಕಿತವಾದಿತ್ವಮಧೀಯತೇ ಏಕೇ । ಬ್ರಹ್ಮ ದಾಶಾ ಬ್ರಹ್ಮ ಕಿತವಾ ಇತ್ಯಾದ್ಯಾಥರ್ವಣಿಕಾ ಬ್ರಹ್ಮ ದಾಶಕಿತವಾದಿತ್ವಮಪ್ಯಧೀಯತೇ' ಎಂದು. 'ಅಪಿ ದಾಶಕಿತವಾದಿತ್ವಮಧೀಯತೇ ಏಕೆ' ಎಂಬ ಸೂತ್ರಕ್ಕೆ ಹೀಗೆ ಅರ್ಥ – ಬ್ರಹ್ಮನು ಬೆಸ್ತರ ಜೊತೆ ಅಭಿನ್ನನಾಗಿದ್ದಾನೆ. ಬ್ರಹ್ಮನು ಜೂಜುಕಾರರ ಜೊತೆ ಅಭಿನ್ನನಾಗಿದ್ದಾನೆ ಎಂಬುದಾಗಿ ಆಥರ್ವಣಿಕರು ಬ್ರಹ್ಮನನ್ನೇ ದಾಶರೆಂದು, ಕಿತವರೆಂದು ಅಧ್ಯಯನ ಮಾಡುತ್ತಾರೆ. ಹೀಗೆ ಸಕಲ ಜೀವರನ್ನು ವಿವಕ್ಷಿಸಿ ಅಭೇದವನ್ನು ಬ್ರಹ್ಮನಿಗೆ ಹೇಳಲಾಗಿದೆ ಎಂಬುದು ರಾಮಾನುಜಭಾಷ್ಯದ ಅರ್ಥ.

ಅದ್ವೈತಿಗಳ ಸುಧಾಗ್ರಂಥದಲ್ಲೂ ಕೂಡ ಹೀಗೆ ಸೂತ್ರಾರ್ಥವನ್ನು ಅನುವಾದ ಮಾಡಿರುವುದರಿಂದ 'ದಾಶಕಿತವಾದಿತ್ವಂ ಇತ್ಯನೇನೈವ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಉಳಿದ ಸೂತ್ರಭಾಗವು ವ್ಯರ್ಥವೆಂದು ಅಭಿಪ್ರಾಯ.

**प्रकाशः** – यद्वा जीवो ब्रह्मांश इत्यस्य यदि ब्रह्माभिन्न इत्यर्थस्तदाऽभेदव्यपदेश-मात्रस्यैवोपयोगेन तन्मात्रोक्त्यैवांशत्वसिद्धेर्नानाव्यपदेशादन्यथा चापीत्येतत्सर्वं व्यर्थमित्यर्थः ।

ಅಂಶಾಧಿಕರಣ (೨-೩-೧೮)

ಅಥವಾ ಜೀವನು ಬ್ರಹ್ಮಾಂಶನಾಗಿದ್ದಾನೆ ಎಂಬ ಮಾತಿಗೆ ಬ್ರಹ್ಮನಿಂದ ಅಭಿನ್ನನಾಗಿದ್ದಾನೆಂಬ ಅರ್ಥವನ್ನು ವಿವಕ್ಷಿಸಿದರೆ ಆಗ ಅಭೇದವ್ಯಪದೇಶಕ್ಕೆ ಉಪಯುಕ್ತವಾದ ಹೇತ್ವಂಶವನ್ನಷ್ಟೇ ಹೇಳಿದರೆ ಸಾಕು 'ನಾನಾವ್ಯಪದೇಶಾತ್ ಅನ್ಯಥಾ ಚಾಪಿ' ಇತ್ಯಾದಿ ಸೂತ್ರಭಾಗವನ್ನು ಹೇಳಿದ್ದು ವ್ಯರ್ಥವಾಗುತ್ತದೆ ಎಂದಭಿಪ್ರಾಯ.

**प्रकाशः –** न चांश इत्यस्य भिन्नाभिन्न इत्यर्थः । विरोधात् । भेदस्य परमते मिथ्यात्वेन तस्यावक्तव्यतयाऽभेदस्यैव वक्तव्यत्वात् । मतान्तरे च भिन्नाभिन्नत्वानभ्युपगमात् । जीवविशिष्टब्रह्माख्यवस्त्वेकदेशत्वरूपांशत्वस्याभेदोपदेशमात्रेण हेतुनोपपत्तेरिति भावः ।

ಅಂಶ ಶಬ್ದಕ್ಕೆ ಭೇದಾಭೇದವೆಂದರ್ಥ. ಆದ್ದರಿಂದ ಸೂತ್ರದಲ್ಲಿರುವ ಎರಡೂ ಹೇತುಗಳು ಸಾರ್ಥಕವಲ್ಲವೇ?

ಇದೂ ಕೂಡ ತಪ್ಪು. ಭೇದವಿದ್ದಲ್ಲಿ ಅಭೇದವಿರಲು ಸಾಧ್ಯವೇ ಇಲ್ಲ. ಇವೆರಡಕ್ಕೆ ಪರಸ್ಪರ ವಿರೋಧವಿದೆ. ಮತ್ತು ಅದ್ವೈತಮತದಲ್ಲಿ ಭೇದವು ಮಿಥ್ಯಾಭೂತವಾಗಿದೆ. ಮಿಥ್ಯಾಭೂತವಾದ ಭೇದವನ್ನು ಹೇಳುವ ಆವಶ್ಯಕತೆಯೂ ಇಲ್ಲ. ಕೇವಲ ಅಭೇದವನ್ನು ಹೇಳಿದರೆ ಸಾಕು. ರಾಮಾನುಜಮತದಲ್ಲಿ ಭೇದಾಭೇದವನ್ನು ಅಂಗೀಕರಿಸಿಯೇ ಇಲ್ಲ. ಹೀಗಿರುವಾಗ ಭೇದಾಭೇದಸಾಧಕವಾದ ಹೇತುವನ್ನು ಏಕೆ ಉಲ್ಲೇಖ ಮಾಡಬೇಕು? ಜೀವವಿಶಿಷ್ಟ ಬ್ರಹ್ಮನೆಂಬ ವಸ್ತುವು ಹಾಗೂ ಏಕದೇಶತ್ವರೂಪತ್ವವಾದ ಅಂಶತ್ವವು ಅಭೇದ ಉಪದೇಶ ಮಾಡುವ ಹೇತುವಿನಿಂದಲೇ ಸಿದ್ಧವಾಗುತ್ತದೆ ಎಂದಭಿಪ್ರಾಯ.

**प्रकाशः –** उक्तेति ।। द्वितीयसूत्रेत्यादिनेति भावः । नन्वीश्वरं प्रत्येवांशत्वम्। अतो नोक्तानुपपत्तिरिति चेन्न । तत्पक्षस्य ''नान्त्य'' इत्यादिना दूषितत्वादिति भावः । अयं च दोषः परमते । मतान्तरे तु सूत्रद्वयोपात्त श्रुतिस्मृतिस्थेदंशब्दास्मच्छब्दयोर्जीवाविशिष्टकेवलभगवत्परामर्शितया विशिष्टब्रह्मैकदेशत्वरूपांशत्वस्य जीवे भावेऽपि केवलब्रह्मैकदेशत्वाभावात् । ''पादोस्य विश्वा भूतानि । ममैवांश'' इति च निर्देशानुपपत्तिरिति दोषो ध्येयः ।

ಉಕ್ತ ಎಂದರೆ ಎರಡನೇ ಸೂತ್ರದಲ್ಲಿ ಹೇಳಲ್ಪಟ್ಟ ಎಂದರ್ಥ.

ಈಶ್ವರನನ್ನು ಕುರಿತು ಜೀವನು ಅಂಶನಾಗಿದ್ದಾನೆ ಎಂದು ಹೇಳಬೇಕು. ಆದ್ದರಿಂದ ಸೂತ್ರದ ಇತರ ಭಾಗಗಳು ವ್ಯರ್ಥವಾಗುವುದಿಲ್ಲ ಎಂಬ ಪರವಾದಿಗಳ ಅಭಿಪ್ರಾಯವೂ ಕೂಡ ಸರಿಯಿಲ್ಲ. ಈ ಪಕ್ಷವನ್ನು 'ನಾಂತ್ಯಃ' ಎಂಬುದರಿಂದ ಈ ಹಿಂದೆಯೇ ನಿರಾಕರಣೆ ಮಾಡಿದ್ದಾಗಿದೆ. ಈ ದೋಷ ಅದ್ವೈತಮತಕ್ಕೆ ಮಾತ್ರ. ರಾಮಾನುಜ ಮತದಲ್ಲಿ ಎರಡು ಸೂತ್ರಗಳಲ್ಲಿ ಉಲ್ಲೇಖ ಮಾಡಿದ ಶ್ರುತಿಸ್ಮೃತಿಗಳಲ್ಲಿರುವ 'ಇದಂ' ಶಬ್ದ ಹಾಗೂ 'ಅಸ್ಮತ್' ಶಬ್ದಗಳು ಜೀವವಿಶಿಷ್ಟನಾಗದ ಕೇವಲ ಭಗವಂತನನ್ನೇ ಪರಾಮರ್ಶ ಮಾಡುತ್ತದೆ. ಆದ್ದರಿಂದ ವಿಶಿಷ್ಟ ಬ್ರಹ್ಮನ ಏಕದೇಶತ್ವರೂಪವಾದ ಅಂಶತ್ವವು ಜೀವನಲ್ಲಿದರೂ ಕೂಡ ಕೇವಲ ಬ್ರಹ್ಮನ ಏಕದೇಶತ್ವವು ಯುಕ್ತವಾಗುವುದಿಲ್ಲ. ಹಾಗಾದಲ್ಲಿ 'ಪಾದೋಽಸ್ಯ ವಿಶ್ವಾ ಭೂತಾನಿ ಮಮೈವಾಂಶಃ' ಎಂಬ ನಿರ್ದೇಶವೇ ಅನುಪಪನ್ನವಾಗುತ್ತಿತ್ತು ಎಂಬ ದೋಷವನ್ನು ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

**प्रकाशः** – ''प्रकाशादिवन्नैवं पर'' इत्येतदर्थमनूद्य निराह – **यच्चेति** ।। उभाभ्यामित्यस्ति । नैवं पर इत्यस्यार्थो दुःखीत्यन्तो मतद्वयेऽप्यविशिष्टः । प्रकाशादिवदित्यस्य परमतेऽर्थमाह – **प्रतिबिम्ब इति** ।। सौत्रापिपदार्थोऽस्मिन्मतेऽग्रे व्यक्तः ।

'ಪ್ರಕಾಶಾದಿವನ್ನೈವಂ ಪರಃ' ಎಂಬ ನಾಲ್ಕನೇ ಸೂತ್ರವನ್ನು ಅನುವಾದ ಮಾಡಿ 'ಯಚ್ಚ' ಇತ್ಯಾದಿ ಗ್ರಂಥದಿಂದ ನಿರಾಕರಣೆ ಮಾಡುತ್ತಿದ್ದಾರೆ. 'ಉಭಾಭ್ಯಾಂ' ಎಂಬುದನ್ನು ಇಲ್ಲಿ ಶೇಷಪೂರಣಾ ಮಾಡಿಕೊಳ್ಳಬೇಕು. 'ನೈವಂ ಪರಃ' ಎಂಬಲ್ಲಿಂದ ಪ್ರಾರಂಭ ಮಾಡಿ 'ದುಃಖೀ' ಎಂಬಲ್ಲಿಯ ತನಕ ಹೇಳಿದ ವಿಷಯವು ಎರಡೂ ಮತಗಳಲ್ಲಿ ಸಮಾನವಾಗಿದೆ ಎಂದು ತಿಳಿಯಬೇಕು. 'ಪ್ರಕಾಶಾದಿವತ್' ಎಂಬ ಸೂತ್ರಕ್ಕೆ ಅದ್ವೈತಿಗಳಿಗೆ ಅಭಿಪ್ರೇತವಾದ ಅರ್ಥವನ್ನು 'ಪ್ರತಿಬಿಂಬೇ' ಇತ್ಯಾದಿ ಗ್ರಂಥದಿಂದ ಅನುವಾದ ಮಾಡುತ್ತಿದ್ದಾರೆ. ಸೂತ್ರದಲ್ಲಿ 'ಅಪಿ' ಪದದ ಅರ್ಥವು ಪರಮತದಂತೆ ಮುಂದೆ ಸ್ಪಷ್ಟವಾಗುತ್ತದೆ.

**प्रकाशः** – मतान्तरे तु यथाऽग्न्यादित्यादेर्भास्वतो विशिष्टस्य प्रभारूपप्रकाशोंऽशो भवति । स्वभावविलक्षणौ च तौ भवतस्तथेत्यर्थः ।

ರಾಮಾನುಜಮತದಲ್ಲಿ ಅಗ್ನಿಯು ತೇಜೋವಿಶಿಷ್ಟನಾಗಿದ್ದಾನೆ, ಆದಿತ್ಯನೂ ಕೂಡ ತೇಜೋವಿಶಿಷ್ಟನಾಗಿದ್ದಾನೆ. ಇವರಲ್ಲಿರುವ ಪ್ರಭಾ ಎಂಬ ಪ್ರಕಾಶವು ಅಂಶ ಎಂದು ಕರೆಸಿಕೊಳ್ಳುತ್ತದೆ. ಆದ್ದರಿಂದಲೇ ಅವರಿಬ್ಬರ ಸ್ವಭಾವವು ಪರಸ್ಪರ ವಿಲಕ್ಷಣವಾಗಿದೆ, ಅದರಂತೆ ಎಂದು ತಿಳಿಯಬೇಕು. ಆದಿ ಪದದಿಂದ ಗೋ ಹಾಗೂ ಅಶ್ವದಲ್ಲಿರುವ ಶುಕ್ಲ ಹಾಗೂ ಕೃಷ್ಣವರ್ಣವಿಶಿಷ್ಟವಾದಾಗ ಗೋತ್ವಾದಿವಿಶೇಷಣಗಳು ಅಂಶ ಎಂದು ಹೇಗೆ ಕರೆಸಿಕೊಳ್ಳುತ್ತದೋ ಅದರಂತೆ ಎಂಬುದನ್ನು ತಿಳಿಯಬೇಕು. ಅಭಿಪ್ರಾಯ ಹೀಗಿದೆ– ಬ್ರಹ್ಮನಿಗೂ, ಜೀವನಿಗೂ ಶರೀರಶರೀರೀಭಾವಸಂಬಂಧವಿದೆ. ಇಲ್ಲಿ ಜೀವನು ಬ್ರಹ್ಮನಲ್ಲಿ ವಿಶೇಷ್ಯನಾಗಿದ್ದಾನೆ, ವಿಶೇಷಣವು ವಿಶೇಷ್ಯದ ಅಂಶವಾಗಿದೆ. ಆದ್ದರಿಂದ ಜೀವನು ಬ್ರಹ್ಮನ ಅಂಶನಾಗಿದ್ದಾನೆಂದು ಅಭಿಪ್ರಾಯ. ವಿಶೇಷಣವಿಶೇಷ್ಯಭಾವವಿರುವುದರಿಂದ ಶ್ರುತಿಯಲ್ಲಿ ಜೀವಬ್ರಹ್ಮರಿಗೆ ಭೇದವನ್ನು ಹೇಳಲಾಗಿದೆ. ವಿಶೇಷಣವಾಚಕಪದವು ವಿಶೇಷ್ಯವಾಚಕವೂ ಆಗುವುದರಿಂದ ಬ್ರಹ್ಮನನ್ನು ಜೀವನೆಂದು ಕೆಲವು ಉಪನಿಷತ್ತು ಕರೆಯುತ್ತದೆ. ಜೀವನು ಬ್ರಹ್ಮನ ವಿಶೇಷಣನಾದ್ದರಿಂದ ಅಂಶನೆಂದು ಪ್ರಕೃತ ತಿಳಿಯಬೇಕು.

**प्रकाशः** – आदिपदेन गवाश्वशुक्लकृष्णादीनां विशिष्टवस्तूनां गोत्वादिविशेषणान्यंशो यथा तथेति गृह्यते ।। **सिषाधयिषितधर्मवतोरिति** ।। अंशत्वरूपधर्मवतोरित्यर्थः ।।

ಗ್ರಂಥದಲ್ಲಿ ಸೂರ್ಯಾದಿವತ್' ಎಂದು ಹೇಳಿದ್ದಾರೆ. ಆದಿಪದದಿಂದ ಹಸು, ಕುದುರೆ, ಬಿಳಿ, ಕಪ್ಪು ಮೊದಲಾದ ವಿಶಿಷ್ಟ ವಸ್ತುಗಳನ್ನು ವಿವಕ್ಷಿಸಬೇಕು. ಈ ವಿಶಿಷ್ಟವಸ್ತುಗಳಿಗೆ ಗೋತ್ವ, ಅಶ್ವತ್ವ, ಶುಕ್ಲತ್ವ, ಕೃಷ್ಣತ್ವಗಳು ಹೇಗೆ ವಿಶೇಷಣವಾಗುತ್ತವೋ ಅದರಂತೆ ಈಶ್ವರನನ್ನು ಕುರಿತು ಜೀವನು ವಿಶೇಷಣನಾಗುತ್ತಾನೆ. 'ಸಿಷಾಧಯಿಷಿತ ಧರ್ಮವತೋಃ' ಎಂಬುದಕ್ಕೆ ಅಂಶತ್ವವೆಂಬ ಧರ್ಮವಿರುವ ಜೀವ ಹಾಗೂ ಮತ್ಸ್ಯಾದ್ಯವತಾರಗಳಿಗೆ ಎಂದರ್ಥ.

**प्रकाशः** – **चेतनयोरिति** ।। कालाग्न्याद्यभिमानिखद्योतादिचेतनयोरित्यर्थः । तात्त्विकव्यवस्थायामिति परमताभिप्रायेण । मतान्तरे त्वस्मन्मत इव

तात्विकत्वाद्यवस्थायाः ।। **सिषाधयिषितेति** ।। सिषाधयिषिता या दुःखादिव्यवस्था तच्छून्ययोरित्यर्थः ।

'ಚೇತನಯೋಃ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಪ್ರಳಯಕಾಲದ ಅಗ್ನ್ಯಭಿಮಾನಿ ಎಂಬ ಚೇತನ ಹಾಗೂ ಬೆಂಕಿಯ ಸಣ್ಣ ಕಿಡಿಗೆ ಅಭಿಮಾನಿಯಾದ ಚೇತನ ಇವರಿಗೆ ಎಂದರ್ಥ. 'ತಾತ್ವಿಕವ್ಯವಸ್ಥಾಯಾಂ' ಎಂಬ ಪದವನ್ನು ಪರಮತವನ್ನು ಅನುಸರಿಸಿ ಪ್ರಯೋಗಿಸಿದ್ದಾರೆ. ಏಕೆಂದರೆ ವಿಶಿಷ್ಟಾದ್ವೈತಿಗಳ ಮತದಲ್ಲಿ ನಮ್ಮ ಮತದಂತೆ ತಾತ್ವಿಕವ್ಯವಸ್ಥೆಯನ್ನೇ ಅಂಗೀಕರಿಸಲಾಗಿದೆ. ಆದ್ದರಿಂದ ಅವರ ಮತವನ್ನು ಇಲ್ಲಿ ವಿವಕ್ಷಿಸಬಾರದು. 'ಸಿಷಾಧಯಿಷಿತ' ಇತ್ಯಾದಿ ವಾಕ್ಯದ ಅರ್ಥ ಹೀಗಿದೆ – ಸಾಧನೆ ಮಾಡಲು ಇಚ್ಛಿಸಲ್ಪಟ್ಟ ಯಾವ ವ್ಯವಸ್ಥೆ ಇದೆಯೋ ತದ್ರಹಿತವಾದ ಎಂದರ್ಥ.

**प्रकाशः** – सूत्राप्रामाण्येत्यादिविरुद्धस्येत्यन्तं परमतासाधारणम् । तदन्यत्तु मतान्तरेऽपि समम् ।। **इत्यादिस्मृत्यादीति** ।। ''अत एव चोपमा सूर्यकादिवत्'' इत्यत्र भाष्योक्तस्मृतौ सूर्यसूर्यकयोस्सादृश्याभेदस्यैव प्रतीतेर्मुख्याभेदाप्रतीतेरिति भावः ।

'ಸೂತ್ರ-ಅಪ್ರಾಮಾಣ್ಯ' ಎಂಬಲ್ಲಿಂದ ಪ್ರಾರಂಭ ಮಾಡಿ 'ಸ್ಮೃತ್ಯಾದಿವಿರುದ್ಧಸ್ಯ' ಎಂಬಲ್ಲಿಯ ತನಕ ಹೇಳಿದ ದೋಷ ಕೇವಲ ಅದ್ವೈತಿಗಳಿಗೆ ಸಂಬಂಧಪಡುತ್ತದೆ. ಉಳಿದ ದೋಷಗಳೆಲ್ಲವೂ ರಾಮಾನುಜರಿಗೂ ಕೂಡ ಸಂಬಂಧಪಡುತ್ತದೆಂದು ತಿಳಿಯಬೇಕು. 'ಇತ್ಯಾದಿ ಸ್ಮೃತ್ಯಾದಿ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. 'ಅತ ಏವ ಚೋಪಮಾ ಸೂರ್ಯಕಾದಿವತ್' ಎಂಬ ಸೂತ್ರದ ಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿವಾಕ್ಯದಲ್ಲಿ ಸೂರ್ಯ ಹಾಗೂ ಸೂರ್ಯನ ಪ್ರತಿಬಿಂಬಕ್ಕೆ ಇರುವ ಸಾದೃಶ್ಯದಲ್ಲಷ್ಟೇ ಅಭೇದವು ಪ್ರತೀತವಾಗುತ್ತಿದೆ. ಸೂರ್ಯ-ಸೂರ್ಯಕರಿಗೆ ಮುಖ್ಯವಾದ ಅಭೇದವು ಪ್ರತೀತವಾಗುತ್ತಿಲ್ಲ ಎಂದು ಅಭಿಪ್ರಾಯ.

**प्रकाशः** – आदिपदेन बिम्बप्रतिबिम्बभेदसाधकयुक्त्यादिग्रहः । बिम्बेत्याद्यपि परमत एव । न रामानुजमत इति बोध्यम् ।।

ಆದಿಪದದಿಂದ ಬಿಂಬಪ್ರತಿಬಿಂಬಗಳಿಗೆ ಭೇದಸಾಧಕವಾದ ಯುಕ್ತ್ಯಾದಿಗಳನ್ನೂ ಕೂಡ ವಿವಕ್ಷಿಸಬೇಕು. ಬಿಂಬ ಇತ್ಯಾದಿ ವಾಕ್ಯದಿಂದ ಹೇಳಿದ್ದೂ ಕೂಡ ಕೇವಲ ಅದ್ವೈತಿಗಳಿಗೆ, ರಾಮಾನುಜರಿಗಲ್ಲ ಎಂದು ತಿಳಿಯತಕ್ಕದ್ದು.

**प्रकाशः** – **पुनरुक्तेश्चेति** ।। ''आभास एव'' इत्यस्य ''जलसूर्यकादिवदाभास एव जीवः परस्यात्मनः । यथा नैकस्मिञ्जलसूर्यके कम्पमाने जलसूर्यकान्तरं कम्पते। एवं नैकस्मिन् जीवे कर्मफलसम्बन्धिनि जीवान्तरस्य तत्सम्बन्धः । कर्मफलयोराभासस्य चाविद्याकृतत्वात्तदाश्रयस्य संसारस्याविद्याकृतत्वेनोपपत्तेः'' इति त्वद्भाषणरीत्येश्वरजीवयोरप्यदुःखित्वादेरुपपत्तेरिदं सूत्रं तेन गतार्थमित्यर्थः।।

'ಪುನರುಕ್ತೇಶ್ಚ' ಇತ್ಯಾದಿ ಗ್ರಂಥದ ಅಭಿಪ್ರಾಯವನ್ನು ಹೀಗೆ ತಿಳಿಯಬೇಕು – ಸೂತ್ರದಲ್ಲಿರುವ ಆದಿಪದವು ಸಾರ್ಥಕವಾದರೂ ಕೂಡ ಪ್ರಕಾಶಪದವು ಪುನರುಕ್ತವಾಗುತ್ತದೆ. ಏಕೆಂದರೆ 'ಅಭಾಸ ಏವ' ಎಂಬ ಸೂತ್ರಕ್ಕೆ ನೀವು ಹೀಗೆ ವ್ಯಾಖ್ಯಾನ ಮಾಡಿದ್ದೀರಿ –

'ಸರೋವರದಲ್ಲಿ ಸೂರ್ಯನ ಪ್ರತಿಬಿಂಬವು ಕಾಣಿಸುತ್ತದೆ. ನೀರಿನಲ್ಲಿ ಚಲನೆ ಉಂಟಾದಾಗ ಆ ಪ್ರತಿಬಿಂಬದಲ್ಲೂ ಚಲನೆ ಉಂಟಾಗುತ್ತದೆ. ಆದರೂ ಕೂಡ ಮತ್ತೊಂದು ಸರೋವರದಲ್ಲಿರುವ ಸೂರ್ಯನ ಪ್ರತಿಬಿಂಬವು ನಿಶ್ಚಲವಾಗಿಯೇ ಇರುತ್ತದೆ. ಅದರಂತೆ ಒಬ್ಬ ಜೀವನು ದುಃಖಿಯಾದರೂ ಕೂಡ ಮತ್ತೊಬ್ಬ ಜೀವನು ದುಃಖಿಯಾಗಬೇಕಾಗಿಲ್ಲ. ಆದ್ದರಿಂದ ಜೀವನು ಪರಮಾತ್ಮನ ಪ್ರತಿಬಿಂಬನೇ ಆಗಿದ್ದಾನೆ ಎಂದು ಹೇಳಿದರೆ ಯಾವುದೇ ಬಾಧಕವಿಲ್ಲ. ಕರ್ಮಫಲಗಳಿಗೆ ಆಭಾಸತ್ವ ಹೇಳಿದ್ದು ಕೇವಲ ಅವಿದ್ಯಾಕೃತವಾದ ಎಂಬ ಅಭಿಪ್ರಾಯದಿಂದ. ತದಾಶ್ರಯನಿಗೆ ಸಂಸಾರವೂ ಕೂಡ ಆವಿದ್ಯಕವಾದ್ದರಿಂದಲೇ ಉಪಪನ್ನವಾಗುತ್ತದೆ'.

ಹೀಗೆ ನೀವು 'ಆಭಾಸ ಏವ ಚ' ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡಿದ್ದೀರಿ. ಇದರಿಂದ ಈಶ್ವರ ಹಾಗೂ ಜೀವರಿಗೆ ಅದುಃಖಿತ್ವವು ಉಪಪನ್ನವಾಗುತ್ತದೆ. ಆದ್ದರಿಂದ ಪ್ರಕಾಶ ಪದವು 'ಆಭಾಸ ಏವ' ಸೂತ್ರದಿಂದ ಪುನರುಕ್ತವಾಯಿತು.

**ಪ್ರಕಾಶಃ – ಮಿಥ್ಯೇತೀಹೇತಿ** ।। यद्यप्येतत्तत्रापि प्रतीयते तथाप्यत्र विवक्षितमेव तत्रोक्तमिति वा अन्यतरवैयर्थ्ये सत्यपि दूषणान्तरं वक्तुं वा एतद्योद्यावतारः ।। **अपरिहारादिति** ।। तत्परिहारार्थतयैवास्य सूत्रस्य त्वयाऽवतारितत्वादिति भावः । प्रकाशादिवत्तु नैवं पर इति मतान्तरपाठोऽसाम्प्रदायिक इति ध्येयम् ।

ಗ್ರಂಥದಲ್ಲಿ 'ಮಿಥ್ಯಾದುಃಖಂ ಸ್ಯಾತ್' ಎಂದು ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ – ಈಶನಲ್ಲೂ ಕೂಡ ಜೀವನಂತೆ ಮಿಥ್ಯಾಭೂತವಾದ ದುಃಖವು ಬರಬೇಕಾದೀತು ಎಂಬ ಶಂಕೆಯನ್ನು 'ಪ್ರಕಾಶಾದಿವತ್' ಎಂಬ ಸೂತ್ರದಿಂದ ಪರಿಹರಿಸಿಲ್ಲ ಎಂದು. ವಾಸ್ತವಿಕವಾಗಿ ಈ ದೋಷವನ್ನು 'ಆಭಾಸ ಏವ ಚ' ಎಂಬ ಸೂತ್ರದಲ್ಲೂ ಕೂಡ ಹೇಳಲಾಗಿದೆ. ಇಲ್ಲಿ ವಿವಕ್ಷಿತವಾದದ್ದನ್ನೇ ಅಲ್ಲೂ ಹೇಳಿದ್ದಾರೆಂದು ತಿಳಿಯಬೇಕು. ಅಥವಾ ಎರಡೂ ಸೂತ್ರಗಳಲ್ಲಿ ಒಂದಕ್ಕೆ ವೈಯರ್ಥ್ಯವಿದ್ದರೂ ಕೂಡ ಮತ್ತೊಂದು ದೋಷವನ್ನು ಹೇಳಲು ಈ ಆಕ್ಷೇಪವನ್ನು ಮಾಡಿದ್ದಾರೆ ಎಂದು ತಿಳಿಯಬಹುದು. 'ಅಪರಿಹಾರಾತ್' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ – ಈಶ್ವರನಲ್ಲೂ ಕೂಡ ಮಿಥ್ಯಾಭೂತವಾದ ದುಃಖ ಬರಬೇಕಾದೀತು ಎಂಬುದರ ಪರಿಹಾರಕ್ಕೋಸ್ಕರ ಈ ಸೂತ್ರವು ಹೊರಟಿದೆ ಎಂಬುದಾಗಿ ನೀವೇ ಸೂತ್ರಕ್ಕೆ ಅವತಾರಿಕೆ ನೀಡಿದ್ದೀರಿ. ಆದರೆ ಆ ದೋಷವನ್ನು ಪರಿಹರಿಸಿಲ್ಲ ಎಂದರ್ಥ.

'ಪ್ರಕಾಶಾದಿವನ್ನೈವಂ ಪರಃ' ಎಂಬ ರಾಮಾನುಜರ ಸೂತ್ರಪಾಠವು ಅಸಾಂಪ್ರದಾಯಿಕವಾಗಿದೆ.

**ಪ್ರಕಾಶಃ** – ''स्मरंति च'' इति सूत्रार्थं निराह – **यच्चोक्तमिति** ।। अन्यैरिति योज्यम् । फलैश्चापि पद्मपत्रमिवांभसेति स्मृतिशेषः । ननु काल्पनिकभेदमाश्रित्येयं व्यवस्थोक्तिरित्यत आह – **काल्पनिकेति** ।।

'ಸ್ಮರಂತಿ ಚ' ಎಂಬ ಸೂತ್ರಕ್ಕೆ ಅದ್ವೈತಿಗಳು ಹೇಳಿದ ವ್ಯಾಖ್ಯಾನವನ್ನು ಅನುವಾದ ಮಾಡಿ ನಿರಾಕರಣೆ ಮಾಡಲು 'ಯಚ್ಚೋಕ್ತಂ' ಇತ್ಯಾದಿ ಗ್ರಂಥವು ಹೊರಟಿದೆ. 'ಯಚ್ಚೋಕ್ತಂ' ಎಂಬ ವಾಕ್ಯದಿಂದ ಅದ್ವೈತಿಗಳ ಅರ್ಥವನ್ನಷ್ಟೇ ಅನುವಾದ ಮಾಡಿದ್ದಾರೆ. 'ಫಲೈಶ್ಚಾಪಿ ಪದ್ಮಪತ್ರಮಿವಾಂಭಸಾ' ಎಂಬ ಪೂರ್ಣಶ್ರುತಿವಾಕ್ಯವನ್ನು ಇಲ್ಲಿ ತಿಳಿಯಬೇಕು.

ಕಾಲ್ಪನಿಕವಾದ ಭೇದವನ್ನು ಆಶ್ರಯಿಸಿ ಪರಮಾತ್ಮನಿಗೆ ಫಲಲೇಪವಾದರೂ ಕೂಡ ಜೀವನಿಗೆ ಆಗುವುದಿಲ್ಲವೆಂದು ವ್ಯವಸ್ಥೆ ಮಾಡಬಹುದಲ್ಲವೇ? ಎಂಬ ಪ್ರಶ್ನೆಗೆ 'ಕಾಲ್ಪನಿಕ' ಇತ್ಯಾದಿ ಗ್ರಂಥದಿಂದ ಉತ್ತರಿಸಿದ್ದಾರೆ.

ಅಂಶಾಧಿಕರಣ (೨-೩-೧೮)

तात्विकत्वाद्व्यवस्थायाः ।। **सिषाधयिषितेति** ।। सिषाधयिषिता या दुःखादिव्यवस्था तच्छून्ययोरित्यर्थः ।

'ಚೇತನಯೋಃ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಪ್ರಳಯಕಾಲದ ಅಗ್ನ್ಯಭಿಮಾನಿ ಎಂಬ ಚೇತನ ಹಾಗೂ ಬೆಂಕಿಯ ಸಣ್ಣ ಕಿಡಿಗೆ ಅಭಿಮಾನಿಯಾದ ಚೇತನ ಇವರಿಗೆ ಎಂದರ್ಥ. 'ತಾತ್ವಿಕವ್ಯವಸ್ಥಾಯಾಂ' ಎಂಬ ಪದವನ್ನು ಪರಮತವನ್ನು ಅನುಸರಿಸಿ ಪ್ರಯೋಗಿಸಿದ್ದಾರೆ. ಏಕೆಂದರೆ ವಿಶಿಷ್ಟಾದ್ವೈತಿಗಳ ಮತದಲ್ಲಿ ನಮ್ಮ ಮತದಂತೆ ತಾತ್ವಿಕವ್ಯವಸ್ಥೆಯನ್ನೇ ಅಂಗೀಕರಿಸಲಾಗಿದೆ. ಆದ್ದರಿಂದ ಅವರ ಮತವನ್ನು ಇಲ್ಲಿ ವಿವಕ್ಷಿಸಬಾರದು. 'ಸಿಷಾಧಯಿಷಿತ' ಇತ್ಯಾದಿ ವಾಕ್ಯದ ಅರ್ಥ ಹೀಗಿದೆ – ಸಾಧನೆ ಮಾಡಲು ಇಚ್ಛಿಸಲ್ಪಟ್ಟ ಯಾವ ವ್ಯವಸ್ಥೆ ಇದೆಯೋ ತದ್ರಹಿತವಾದ ಎಂದರ್ಥ.

**प्रकाशः** – सूत्राप्रामाण्येत्यादिविरुद्धस्येत्यन्तं परमतासाधारणम् । तदन्यत्तु मतान्तरेऽपि समम् ।। **इत्यादिस्मृत्यादीति** ।। ''अत एव चोपमा सूर्यकादिवत्'' इत्यत्र भाष्योक्तस्मृतौ सूर्यसूर्यकयोस्सादृश्याभेदस्यैव प्रतीतेर्मुख्याभेदाप्रतीतेरिति भावः ।

'ಸೂತ್ರ-ಅಪ್ರಾಮಾಣ್ಯ' ಎಂಬಲ್ಲಿಂದ ಪ್ರಾರಂಭ ಮಾಡಿ 'ಸ್ಮೃತ್ಯಾದಿವಿರುದ್ಧಸ್ಯ' ಎಂಬಲ್ಲಿಯ ತನಕ ಹೇಳಿದ ದೋಷ ಕೇವಲ ಅದ್ವೈತಿಗಳಿಗೆ ಸಂಬಂಧಪಡುತ್ತದೆ. ಉಳಿದ ದೋಷಗಳೆಲ್ಲವೂ ರಾಮಾನುಜರಿಗೂ ಕೂಡ ಸಂಬಂಧಪಡುತ್ತದೆಂದು ತಿಳಿಯಬೇಕು. 'ಇತ್ಯಾದಿ ಸ್ಮೃತ್ಯಾದಿ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. 'ಅತ ಏವ ಚೋಪಮಾ ಸೂರ್ಯಕಾದಿವತ್' ಎಂಬ ಸೂತ್ರದ ಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿವಾಕ್ಯದಲ್ಲಿ ಸೂರ್ಯ ಹಾಗೂ ಸೂರ್ಯನ ಪ್ರತಿಬಿಂಬಕ್ಕೆ ಇರುವ ಸಾದೃಶ್ಯದಲ್ಲಷ್ಟೇ ಅಭೇದವು ಪ್ರತೀತವಾಗುತ್ತಿದೆ. ಸೂರ್ಯ-ಸೂರ್ಯಕರಿಗೆ ಮುಖ್ಯವಾದ ಅಭೇದವು ಪ್ರತೀತವಾಗುತ್ತಿಲ್ಲ ಎಂದು ಅಭಿಪ್ರಾಯ.

**प्रकाशः** – आदिपदेन बिम्बप्रतिबिम्बभेदसाधकयुक्त्यादिग्रहः । बिम्बेत्याद्यपि परमत एव । न रामानुजमत इति बोध्यम् ।।

ಆದಿಪದದಿಂದ ಬಿಂಬಪ್ರತಿಬಿಂಬಗಳಿಗೆ ಭೇದಸಾಧಕವಾದ ಯುಕ್ತ್ಯಾದಿಗಳನ್ನೂ ಕೂಡ ವಿವಕ್ಷಿಸಬೇಕು. ಬಿಂಬ ಇತ್ಯಾದಿ ವಾಕ್ಯದಿಂದ ಹೇಳಿದ್ದೂ ಕೂಡ ಕೇವಲ ಅದ್ವೈತಿಗಳಿಗೆ, ರಾಮಾನುಜರಿಗಲ್ಲ ಎಂದು ತಿಳಿಯತಕ್ಕದ್ದು.

**प्रकाशः – पुनरुक्तेश्चेति** ।। ''आभास एव'' इत्यस्य ''जलसूर्यकादिवदाभास एव जीवः परस्यात्मनः । यथा नैकस्मिञ्जलसूर्यके कम्पमाने जलसूर्यकान्तरं कम्पते। एवं नैकस्मिन् जीवे कर्मफलसम्बन्धिनि जीवान्तरस्य तत्सम्बन्धः । कर्मफलयोराभासस्य चाविद्याकृतत्वात्तदाश्रयस्य संसारस्याविद्याकृतत्वेनोपपत्तेः'' इति त्वद्भाषणरीत्येश्वरजीवयोरप्यदुःखित्वादेरुपपत्तेरिदं सूत्रं तेन गतार्थमित्यर्थः।।

'ಪುನರುಕ್ತೇಶ್ಚ' ಇತ್ಯಾದಿ ಗ್ರಂಥದ ಅಭಿಪ್ರಾಯವನ್ನು ಹೀಗೆ ತಿಳಿಯಬೇಕು – ಸೂತ್ರದಲ್ಲಿರುವ ಆದಿಪದವು ಸಾರ್ಥಕವಾದರೂ ಕೂಡ ಪ್ರಕಾಶಪದವು ಪುನರುಕ್ತವಾಗುತ್ತದೆ. ಏಕೆಂದರೆ 'ಆಭಾಸ ಏವ' ಎಂಬ ಸೂತ್ರಕ್ಕೆ ನೀವು ಹೀಗೆ ವ್ಯಾಖ್ಯಾನ ಮಾಡಿದ್ದೀರಿ –

'ಸರೋವರದಲ್ಲಿ ಸೂರ್ಯನ ಪ್ರತಿಬಿಂಬವು ಕಾಣಿಸುತ್ತದೆ. ನೀರಿನಲ್ಲಿ ಚಲನೆ ಉಂಟಾದಾಗ ಆ ಪ್ರತಿಬಿಂಬದಲ್ಲೂ ಚಲನೆ ಉಂಟಾಗುತ್ತದೆ. ಆದರೂ ಕೂಡ ಮತ್ತೊಂದು ಸರೋವರದಲ್ಲಿರುವ ಸೂರ್ಯನ ಪ್ರತಿಬಿಂಬವು ನಿಶ್ಚಲವಾಗಿಯೇ ಇರುತ್ತದೆ. ಅದರಂತೆ ಒಬ್ಬ ಜೀವನು ದುಃಖಿಯಾದರೂ ಕೂಡ ಮತ್ತೊಬ್ಬ ಜೀವನು ದುಃಖಿಯಾಗಬೇಕಾಗಿಲ್ಲ. ಆದ್ದರಿಂದ ಜೀವನು ಪರಮಾತ್ಮನ ಪ್ರತಿಬಿಂಬನೇ ಆಗಿದ್ದಾನೆ ಎಂದು ಹೇಳಿದರೆ ಯಾವುದೇ ಬಾಧಕವಿಲ್ಲ. ಕರ್ಮಫಲಗಳಿಗೆ ಆಭಾಸತ್ವ ಹೇಳಿದ್ದು ಕೇವಲ ಅವಿದ್ಯಾಕೃತವಾದ ಎಂಬ ಅಭಿಪ್ರಾಯದಿಂದ. ತದಾಶ್ರಯನಿಗೆ ಸಂಸಾರವೂ ಕೂಡ ಆವಿದ್ಯಕವಾದ್ದರಿಂದಲೇ ಉಪಪನ್ನವಾಗುತ್ತದೆ'.

ಹೀಗೆ ನೀವು 'ಆಭಾಸ ಏವ ಚ' ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡಿದ್ದೀರಿ. ಇದರಿಂದ ಈಶ್ವರ ಹಾಗೂ ಜೀವರಿಗೆ ಅದುಃಖಿತ್ವವು ಉಪಪನ್ನವಾಗುತ್ತದೆ. ಆದ್ದರಿಂದ ಪ್ರಕಾಶ ಪದವು 'ಆಭಾಸ ಏವ' ಸೂತ್ರದಿಂದ ಪುನರುಕ್ತವಾಯಿತು.

**ಪ್ರಕಾಶಃ – मिथ्येतीहेति ।।** यद्यप्येतत्तत्रापि प्रतीयते तथाप्यत्र विवक्षितमेव तत्रोक्तमिति वा अन्यतरवैयर्थ्ये सत्यपि दूषणान्तरं वक्तुं वा एतच्चोद्यावतारः ।। **अपरिहारादिति ।।** तत्परिहारार्थतयैवास्य सूत्रस्य त्वयाऽवतारितत्वादिति भावः । प्रकाशादिवत्तु नैवं पर इति मतान्तरपाठोऽसाम्प्रदायिक इति ध्येयम् ।

ಗ್ರಂಥದಲ್ಲಿ 'ಮಿಥ್ಯಾದುಃಖಂ ಸ್ಯಾತ್' ಎಂದು ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ – ಈಶನಲ್ಲೂ ಕೂಡ ಜೀವನಂತೆ ಮಿಥ್ಯಾಭೂತವಾದ ದುಃಖವು ಬರಬೇಕಾದೀತು ಎಂಬ ಶಂಕೆಯನ್ನು 'ಪ್ರಕಾಶಾದಿವತ್' ಎಂಬ ಸೂತ್ರದಿಂದ ಪರಿಹರಿಸಿಲ್ಲ ಎಂದು. ವಾಸ್ತವಿಕವಾಗಿ ಈ ದೋಷವನ್ನು 'ಆಭಾಸ ಏವ ಚ' ಎಂಬ ಸೂತ್ರದಲ್ಲೂ ಕೂಡ ಹೇಳಲಾಗಿದೆ. ಇಲ್ಲಿ ವಿವಕ್ಷಿತವಾದದ್ದನ್ನೇ ಅಲ್ಲೂ ಹೇಳಿದ್ದಾರೆಂದು ತಿಳಿಯಬೇಕು. ಅಥವಾ ಎರಡೂ ಸೂತ್ರಗಳಲ್ಲಿ ಒಂದಕ್ಕೆ ವೈಯರ್ಥ್ಯವಿದ್ದರೂ ಕೂಡ ಮತ್ತೊಂದು ದೋಷವನ್ನು ಹೇಳಲು ಈ ಆಕ್ಷೇಪವನ್ನು ಮಾಡಿದ್ದಾರೆ ಎಂದು ತಿಳಿಯಬಹುದು. 'ಅಪರಿಹಾರಾತ್' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ – ಈಶ್ವರನಲ್ಲೂ ಕೂಡ ಮಿಥ್ಯಾಭೂತವಾದ ದುಃಖ ಬರಬೇಕಾದೀತು ಎಂಬುದರ ಪರಿಹಾರಕ್ಕೋಸ್ಕರ ಈ ಸೂತ್ರವು ಹೊರಟಿದೆ ಎಂಬುದಾಗಿ ನೀವೇ ಸೂತ್ರಕ್ಕೆ ಅವತಾರಿಕೆ ನೀಡಿದ್ದೀರಿ. ಆದರೆ ಆ ದೋಷವನ್ನು ಪರಿಹರಿಸಿಲ್ಲ ಎಂದರ್ಥ.

'ಪ್ರಕಾಶಾದಿವನ್ನೈವಂ ಪರಃ' ಎಂಬ ರಾಮಾನುಜರ ಸೂತ್ರಪಾಠವು ಅಸಾಂಪ್ರದಾಯಿಕವಾಗಿದೆ.

**ಪ್ರಕಾಶಃ –** ''स्मरंति च'' इति सूत्रार्थं निराह **– यच्चोक्तमिति ।।** अन्यैरिति योज्यम् । फलैश्चापि पद्मपत्रमिवांभसेति स्मृतिशेषः । ननु काल्पनिकभेदमाश्रित्येयं व्यवस्थोक्तिरित्यत आह **– काल्पनिकेति ।।**

'ಸ್ಮರಂತಿ ಚ' ಎಂಬ ಸೂತ್ರಕ್ಕೆ ಅದ್ವೈತಿಗಳು ಹೇಳಿದ ವ್ಯಾಖ್ಯಾನವನ್ನು ಅನುವಾದ ಮಾಡಿ ನಿರಾಕರಣೆ ಮಾಡಲು 'ಯಚ್ಚೋಕ್ತಂ' ಇತ್ಯಾದಿ ಗ್ರಂಥವು ಹೊರಟಿದೆ. 'ಯಚ್ಚೋಕ್ತಂ' ಎಂಬ ವಾಕ್ಯದಿಂದ ಅದ್ವೈತಿಗಳ ಅರ್ಥವನ್ನಷ್ಟೇ ಅನುವಾದ ಮಾಡಿದ್ದಾರೆ. 'ಫಲೈಶ್ಚಾಪಿ ಪದ್ಮಪತ್ರಮಿವಾಂಭಸಾ' ಎಂಬ ಪೂರ್ಣಶ್ರುತಿವಾಕ್ಯವನ್ನು ಇಲ್ಲಿ ತಿಳಿಯಬೇಕು.

ಕಾಲ್ಪನಿಕವಾದ ಭೇದವನ್ನು ಆಶ್ರಯಿಸಿ ಪರಮಾತ್ಮನಿಗೆ ಫಲಲೇಪವಾದರೂ ಕೂಡ ಜೀವನಿಗೆ ಆಗುವುದಿಲ್ಲವೆಂದು ವ್ಯವಸ್ಥೆ ಮಾಡಬಹುದಲ್ಲವೇ? ಎಂಬ ಪ್ರಶ್ನೆಗೆ 'ಕಾಲ್ಪನಿಕ' ಇತ್ಯಾದಿ ಗ್ರಂಥದಿಂದ ಉತ್ತರಿಸಿದ್ದಾರೆ.

ಅಂಶಾಧಿಕರಣ (೨-೩-೧೮)

**प्रकाशः** – परमते हीदं सूत्रं पूर्वसूत्रे प्रकृतजीवेश्वरदुःखित्वादुःखित्वव्यवस्था-सिद्ध्यर्थमित्युपेतम् । मतान्तरे त्वीश्वरशरीरत्वेन तदंशत्वरूपप्रतिज्ञातार्थ-साधकत्वेनेत्युपेत्य स्मरन्तिश्रावयन्ति चेत्यर्थमुपेत्य ''यस्यात्मा शरीरम् । तत्सर्वं वै हरेस्तनुः'' इत्यादिश्रुतिस्मृतय उक्ताः । तत्र जीवादेर्हरिशरीरत्वप्रतीतावपीश्वर-शरीरत्वेनेश्वरांशत್ವस्याप्रतीतेरिति दोषः ।

ಅದ್ವೈತಮತದ ಪ್ರಕಾರ ಈ ಸೂತ್ರವು ಹಿಂದೆ ಪ್ರಕೃತರಾದ ಜೀವನಲ್ಲಿ ದುಃಖಿತ್ವವು, ಈಶ್ವರನಲ್ಲಿ ಅದುಃಖಿತ್ವವು ಹೇಗೆ ಬರುತ್ತದೆ? ಎಂಬ ಪ್ರಶ್ನೆಗೆ ಉತ್ತರಿಸುವುದಕ್ಕಾಗಿ ಈ ಸೂತ್ರ ಹೊರಟಿದೆ. ಆದರೆ ರಾಮಾನುಜಮತದಲ್ಲಿ ಬೇರೆ ಅರ್ಥದಲ್ಲೇ ಈ ಸೂತ್ರ ಹೊರಟಿದೆ. ಹಿಂದಿನ 'ಪ್ರಕಾಶಾದಿವತ್ತು' ಎಂಬ ಸೂತ್ರದಲ್ಲಿ ವಿಶೇಷ್ಯವಿಶೇಷಣಭಾವ ಇರುವುದರಿಂದ ಜೀವಬ್ರಹ್ಮರಿಗೆ ಅಂಶಾಂಶಿಭಾವವನ್ನು ಹೇಳಲಾಯಿತು. ಇದಕ್ಕೆ ಶರೀರಶರೀರಿಭಾವ ಇರುವುದೇ ಕಾರಣವಾಗಿದೆ ಎಂಬುದನ್ನು ತಿಳಿಸುವುದಕ್ಕಾಗಿ ಈ ಸೂತ್ರ ಹೊರಟಿದೆ. ಜೀವನು ಈಶ್ವರನ ಶರೀರನಾಗಿರುವುದರಿಂದ ಈಶ್ವರನ ಅಂಶ ಎಂದು ಯಾವ ಪ್ರತಿಜ್ಞೆಯನ್ನು ಮಾಡಲಾಯಿತೋ ಅದಕ್ಕೆ ಸಾಧಕವಾಗಿಯೇ ಸ್ಮೃತಿವಾಕ್ಯ ಹಾಗೂ ಶ್ರುತಿವಾಕ್ಯಗಳನ್ನು ಈ ಸೂತ್ರವು ಉಲ್ಲೇಖ ಮಾಡಲಾಗಿದೆ. 'ಯಸ್ಯಾತ್ಮಾ ಶರೀರಮ್ ತತ್ಸರ್ವಂ ವೈ ಹರೇಸ್ತನುಃ' ಇವೇ ಮೊದಲಾದ ಶ್ರುತಿಸ್ಮೃತಿಗಳನ್ನು ತಿಳಿಯಬೇಕು.

ರಾಮಾನುಜರ ಈ ಸೂತ್ರವ್ಯಾಖ್ಯಾನ ಅಯುಕ್ತವಾಗಿದೆ. ಏಕೆಂದರೆ 'ಯಸ್ಯಾತ್ಮಾ ಶರೀರಮ್' ಇತ್ಯಾದಿ ವಾಕ್ಯಗಳಲ್ಲಿ ಜೀವಾದಿಗಳು ಶ್ರೀಹರಿಯ ಶರೀರರಾಗಿದ್ದಾರೆ ಎಂದು ತಿಳಿಯುತ್ತಿದೆ. ಆದರೆ ಈಶ್ವರನ ಶರೀರ ಆಗಿರುವುದರಿಂದ ಅಂಶರಾಗಿದ್ದಾರೆ ಎಂಬರ್ಥವು ತಿಳಿಯುತ್ತಿಲ್ಲ. ಇದು ಮಾತ್ರ ನಿಮ್ಮ ಕಪೋಲಕಲ್ಪಿತವಾದದು.

**प्रकाशः** – श्रुतेः प्राधान्येन श्रावयन्ति चेति निर्देशापाताच्चेत्यपि दोषो ध्येयः। ''अनुज्ञापरिहारौ देहसम्बन्धाज्ज्योतिरादिवत्'' इत्येतदर्थं परमतेऽनुवदति ।। **यच्चोक्तमिति** ।।

ಮತ್ತು ಸೂತ್ರದಲ್ಲಿ 'ಶ್ರುತೇಃ ಪ್ರಾಧಾನ್ಯೇನ ಶ್ರಾವಯಂತಿ ಚ' ಎಂದು ನಿರ್ದೇಶ ಮಾಡಬೇಕಿತ್ತು. ಈ ದೋಷವೂ ಕೂಡ ರಾಮಾನುಜರಿಗೆ ಅಧಿಕವಾಗಿ ಪ್ರಾಪ್ತವಾಗುತ್ತದೆ.

'ಅನುಜ್ಞಾಪರಿಹಾರೌ ದೇಹಸಂಬಂಧಾಜ್ಜ್ಯೋತಿರಾದಿವತ್' ಎಂಬ ಮುಂದಿನ ಸೂತ್ರದ ಅರ್ಥವನ್ನು ಅದ್ವೈತ ಮತದ ಪ್ರಕಾರ ಅನುವಾದ ಮಾಡಿ ನಿರಾಕರಣೆ ಮಾಡಲು 'ಯಚ್ಚೋಕ್ತಂ' ಇತ್ಯಾದಿ ಗ್ರಂಥವು ಹೊರಟಿದೆ.

**प्रकाशः** – ''ऋतौ भार्यामुपेयादित्यनुज्ञा । गुर्वंगनां नोपगच्छेदिति परिहारः'' इति परभाष्योक्तानुज्ञापरिहारशब्दार्थमाह – **विधिनिषेधेति** ।। मतान्तरे तु ब्रह्मांशत्वेऽपि जीवानां केषाञ्चिद्वेदाध्ययनाद्यनुज्ञा केषाञ्चित्तत्परिहारः शुच्यशुचि-देहसम्बन्धात् । अग्नेश्शुच्यशुचिगृहश्मशानसम्बन्धादनुज्ञापरिहारावित्यर्थः।

'ಋತೌ ಭಾರ್ಯಾಮುಪೇಯಾತ್' 'ಋತುಸ್ನಾತಳನ್ನು ಸಮೀಪಿಸಬೇಕು' ಎಂಬುದು ವಿಧಿವಾಕ್ಯ. 'ಗುರ್ವಂಗನಾಂ ನೋಪಗಚ್ಛೇತ್' 'ದಪ್ಪ ಅಂಗನೆಯರನ್ನು ವಿವಾಹವಾಗಬಾರದು' ಎಂಬುದು ನಿಷೇಧ.

ಹೀಗೆ ಅದ್ವೈತಭಾಷ್ಯದಲ್ಲಿ ವಿಧಿನಿಷೇಧಗಳಿಗೆ ಆತ್ಮನು ಬದ್ಧನಾಗಲು ದೇಹಸಂಬಂಧವೇ ಕಾರಣವೆಂದು ಹೇಳಲಾಗಿದೆ. ಇದನ್ನು ವಿಧಿನಿಷೇಧ ಇತ್ಯಾದಿ ಗ್ರಂಥದಿಂದ ನಿರೂಪಣೆ ಮಾಡಿದ್ದಾರೆ.

ರಾಮಾನುಜಮತದಲ್ಲಿ ಈ ಸೂತ್ರದ ಅರ್ಥ ಹೀಗಿದೆ – ಸಕಲ ಜೀವರು ಬ್ರಹ್ಮನ ಅಂಶರೇ ಆಗಿದ್ದರೂ ಕೂಡ ಯಾರಿಗೆ ಶುಚಿರ್ಭೂತವಾದ ಬ್ರಾಹ್ಮಣದೇಹವು ಪ್ರಾಪ್ತವಾಗಿದೆಯೋ ಅವರಿಗೆ ವೇದಾಧ್ಯಯನ ಮಾಡಬೇಕು ಎಂದು ವಿಧಿ ವಾಕ್ಯ ಹೇಳುತ್ತಿದೆ. ಯಾರಿಗೆ ಶುಚಿಯಾದ ದೇಹವು ಇಲ್ಲವೋ ಅಂತಹವರು ವೇದಾಧ್ಯಯನವು ಮಾಡಬಾರದು ಎಂದು ನಿಷೇಧವಾಕ್ಯವು ಹೇಳುತ್ತಿದೆ. ಆದ್ದರಿಂದ ವಿಧಿನಿಷೇಧಗಳು ಕೇವಲ ದೇಹಕ್ಕೆ ಸಂಬಂಧಪಟ್ಟವೆ, ಆತ್ಮನಿಗಲ್ಲ. ಉದಾಹರಣೆ – ಎಲ್ಲಾ ಅಗ್ನಿಯು ಒಂದೇ ಆದರೂ ಶ್ರೋತ್ರೀಯರ ಮನೆಯಲ್ಲಿರುವ ಅಗ್ನಿಯು ಪವಿತ್ರವಾಗಿದೆ, ಸ್ಮಶಾನದ ಅಗ್ನಿಯು ಅಪವಿತ್ರವಾಗಿದೆ. ಅದರಂತೆ ಇಲ್ಲಿಯೂ ತಿಳಿಯಬೇಕು.

**प्रकाशः** – मतद्वयेऽपि दोषमाह – **मम रीत्येति** ।। अनुज्ञापरिहारावित्यंशस्यार्थोऽश्यधीनत्वरूपेति ।। ''यथा सूर्यप्रभाक्षिणी'' इति भाष्योक्तस्मृतिः ।। **इति मत इति** ।। परमत इत्यर्थः ।

ಎರಡೂ ಮತದವರಿಗೆ ಸಮಾನವಾದ ದೋಷವನ್ನು 'ಮಮ ರೀತ್ಯಾ' ಇತ್ಯಾದಿ ಗ್ರಂಥದಿಂದ ನಿರೂಪಣೆ ಮಾಡಿದ್ದಾರೆ. 'ಅನುಜ್ಞಾಪರಿಹಾರೌ' ಎಂಬ ಸೂತ್ರಭಾಗದ ಅರ್ಥವನ್ನು 'ಅಂಶ್ಯಧೀನತ್ವರೂಪ' ಇತ್ಯಾದಿಯಾಗಿ ಹೇಳಿದ್ದಾರೆ. 'ಯಥಾ ಸೂರ್ಯಪ್ರಭಾಕ್ಷಿಣೀ' ಎಂಬುದು ಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿವಾಕ್ಯವಾಗಿದೆ. 'ಇತಿ ಮತೇ' ಎಂದರೆ ಅದ್ವೈತ ಮತದಲ್ಲಿ ಎಂದರ್ಥ.

**प्रकाशः** – यदपि ''देहानभिमानात्'' इत्यादि तदपि नेत्याह – **अमुक्तेति** ।। समाध्यभावदशायामित्यर्थः । ''असन्ततेश्चाव्यतिकर'' इत्यपि सूत्रं मतद्वयेऽपि जीवानामन्योन्यभोगासांकर्योक्त्यर्थमित्युपेतम् । मतद्वयेऽपि तदर्थमनुवदति ।। **कर्तुर्भोक्तुश्चेति** ।। कर्मकर्तुः कर्मफलभोक्तुश्चेत्यर्थः ।

ಜ್ಞಾನಿಯಾದ ಜೀವನಿಗೆ ದೇಹದ ಅಭಿಮಾನ ಇರುವುದಿಲ್ಲ ಎಂಬುದಾಗಿ ಅದ್ವೈತಿಗಳು ಏನು ಹೇಳಿದ್ದಾರೋ ಅದನ್ನು 'ಅಮುಕ್ತ' ಇತ್ಯಾದಿ ವಾಕ್ಯದಿಂದ ನಿರಾಕರಣೆ ಮಾಡಿದ್ದಾರೆ. ಸಮಾಧ್ಯವಸ್ಥೆ ಇಲ್ಲದ ಅಮುಕ್ತ ಜೀವರಲ್ಲಿ ದೇಹಾಭಿಮಾನ ಇರುವುದು ಕಂಡಿದೆ ಎಂದು ತಿಳಿಯಬೇಕು.

'ಅಸಂತತೇಶ್ಚಾವ್ಯತಿಕರಃ' ಎಂಬ ಮುಂದಿನ ಸೂತ್ರಕ್ಕೆ ಇಬ್ಬರು ಮತದವರು ಸಮಾನವಾದ ಅರ್ಥವನ್ನೇ ಅಂಗೀಕರಿಸಿದ್ದಾರೆ. ಜೀವರುಗಳಿಗೆ ಪರಸ್ಪರ ಭೋಗಸಾಂಕರ್ಯದೋಷದ ಪರಿಹಾರಕ್ಕಾಗಿ ಈ ಸೂತ್ರ ಹೊರಟಿದೆ ಎನ್ನುತ್ತಾರೆ. ಈ ಇಬ್ಬರ ಮತದಲ್ಲಿ ಯಾವ ಸೂತ್ರಾರ್ಥವು ಅಭಿಪ್ರೇತವಾಗಿದೆಯೋ ಅದನ್ನು 'ಕರ್ತೃಭೋಕ್ತುಶ್ಚ' ಇತ್ಯಾದಿ ಗ್ರಂಥದಿಂದ ಅನುವಾದ ಮಾಡಿದ್ದಾರೆ. ಕರ್ಮಕರ್ತೃವಿಗೆ ಹಾಗೂ ಕರ್ಮಫಲಭೋಕ್ತೃವಿಗೆ ಎಂಬುದು 'ಕರ್ತೃಭೋಕ್ತುಃ' ಎಂಬುದರ ಅರ್ಥವಾಗಿದೆ.

**प्रकाशः** – उपहितात्मन इति परमताभिप्रायम् । मतान्तरे तु कर्तुर्भोक्तुश्चात्मन इत्येव ध्येयम् । अन्यत्समम् । सान्तत्याभावेन विभुत्वाभावेनेत्यर्थः । परमते दोषमाह – **दुःखादीति** ।। **उपाधीति** ।। शुद्धस्यैवोपाधिसम्बन्धाद्बन्धस्य शुद्धगतत्व इत्यर्थः ।

'ಉಪಹಿತಾತ್ಮನಃ' ಎಂದು ಅದ್ವೈತಮತಕ್ಕೆ ಅನುಗುಣವಾಗಿ ಹೇಳಿದ್ದಾರೆ. ರಾಮಾನುಜಮತದಲ್ಲಿ 'ಕರ್ತೃಭೋಕ್ತುಶ್ಚ ಆತ್ಮನಃ' ಎಂದೇ ತಿಳಿಯಬೇಕು. ಉಳಿದೆಲ್ಲ ವಿಷಯವು ಉಭಯಪಕ್ಷ ಸಾಧಾರಣವಾಗಿದೆ. 'ಸಾತಂತ್ರ್ಯಾಭಾವೇನ' ಎಂದರೆ ವಿಭುತ್ವವು ಇಲ್ಲದ್ದರಿಂದ ಎಂದರ್ಥ. ಅದ್ವೈತಿಗಳಿಗೆ ಅಸಾಧಾರಣವಾದ ದೋಷವನ್ನು 'ದುಃಖಾದಿ' ಎಂಬ ವಾಕ್ಯದಿಂದ ಹೇಳಿದ್ದಾರೆ. ಉಪಾಧಿ ಎಂಬಲ್ಲಿ ಶುದ್ಧಬ್ರಹ್ಮನಿಗೆ ಉಪಾಧಿ ಸಂಬಂಧವಾದಾಗ ಬಂಧವು ಶುದ್ಧಗತವಾಗುವುದಾದರೆ ಎಂಬರ್ಥವನ್ನು ತಿಳಿಯಬೇಕು.

**प्रकाशः** – रामानुजमते तु परमत इव स्वरूपैक्याभावेन जीवानां भगवदंशत्वेऽप्यन्योन्यं भोगाव्यवस्थाशङ्कोदयायोगेन तन्निरासार्थमिदं सूत्रं व्यर्थम्।

ರಾಮಾನುಜ ಮತದಲ್ಲಿ ಅದ್ವೈತ ಮತದಂತೆ ಸ್ವರೂಪೈಕ್ಯವನ್ನು ಒಪ್ಪಿರುವುದಿಲ್ಲ. ಆದ್ದರಿಂದ ಸಕಲಜೀವರೂ ಪರಮಾತ್ಮನ ಅಂಶಭೂತರಾದರೂ ಕೂಡ ಪರಸ್ಪರವಾಗಿ ಕರ್ಮ ಹಾಗೂ ತದ್ಭೋಗಗಳು ಪ್ರಾಪ್ತವಾಗಬೇಕಾಗುತ್ತದೆ. ಹೀಗೆ ಭೋಗದ ಅವ್ಯವಸ್ಥೆಯ ಪರಿಹಾರಕ್ಕಾಗಿ ಈ ಸೂತ್ರ ಹೊರಟಿದೆ ಎನ್ನುವುದೇ ತಪ್ಪು. ಏಕೆಂದರೆ ಸ್ವರೂಪೈಕ್ಯವನ್ನು ಒಪ್ಪದ ಕಾರಣ ಭೋಗದ ಅವ್ಯವಸ್ಥೆ ಇವರ ಪ್ರಕಾರ ಬರಲು ಸಾಧ್ಯವಿಲ್ಲ.

**प्रकाशः** – यत्त्विदं सूत्रमैक्यवादे भोगाव्यवस्थोक्तयभिप्रायमिति तन्न । तथात्वे पूर्वपाद एव निवेशापातेनेहासङ्गतिरिति दोषो ध्येयः । ''आभास एव च'' इति सूत्रार्थं परमतेऽनूद्य निराह – **एतेनेति** ।।

ಈ ಆಕ್ಷೇಪಕ್ಕೆ ರಾಮಾನುಜ ಮತದವರು ಹೀಗೆ ಉತ್ತರಿಸಿದ್ದಾರೆ – ಐಕ್ಯವಾದದಲ್ಲಿ ಭೋಗದ ಅವ್ಯವಸ್ಥೆಯು ಉಂಟಾಗುತ್ತದೆ. ಆದಕ್ಕಾಗಿ ಐಕ್ಯವನ್ನು ಒಪ್ಪಬಾರದು ಎಂಬ ಅದ್ವೈತ ಮತದ ನಿರಾಸಕ್ಕಾಗಿ ಈ ಸೂತ್ರಹೊರಟಿದೆ ಎಂದು ಉತ್ತರಿಸುತ್ತೇವೆ.

ಇದು ತಪ್ಪು. ಹಾಗಾದಲ್ಲಿ ಹಿಂದಿನ ಸಮಯಪಾದದಲ್ಲಿ ಈ ಸೂತ್ರವನ್ನು ಉಲ್ಲೇಖ ಮಾಡಬೇಕಿತ್ತು. ಶ್ರುತಿವಿರೋಧದ ಪರಿಹಾರಕ್ಕಾಗಿ ಹೊರಟಿರುವ ಈ ಪಾದದಲ್ಲಿ ಉಲ್ಲೇಖಿಸಿದ್ದು ಅಸಂಗತವಾಗುತ್ತದೆ.

'ಆಭಾಸ ಏವ ಚ' ಎಂಬ ಸೂತ್ರದ ಅರ್ಥವನ್ನು ಅದ್ವೈತ ಮತದ ಪ್ರಕಾರ ಅನುವಾದ ಮಾಡಿ ನಿರಾಕರಣೆ ಮಾಡಲು 'ಏತೇನ' ಇತ್ಯಾದಿ ಗ್ರಂಥವು ಹೊರಟಿದೆ.

**प्रकाशः** – एतेन निरस्तमित्युक्तहेतुं व्यनक्ति ।। **सौत्रेणेति** ।।

तत आभासते नित्यं तद्वदाभासतेऽपि च ।
भानमस्तित्वमपि चैवासमन्ताद्यतस्ततः ।
जीव आभास उद्दिष्टः सदैव परमात्मनः ।।

इति ''अत एव चोपम'' इति सूत्रानुव्याख्यानोक्तदिशाऽवयवयोगेनापि भिन्नत्वप्रतीतिराभासपदेन बोध्या ।

ಏತೇನ ನಿರಸ್ತಂ' ಎಂಬಲ್ಲಿ ಹೇಳಿದ ಹೇತುವನ್ನು 'ಸೌತ್ರೇಣ' ಇತ್ಯಾದಿ ವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ.

ತತ ಆಭಾಸತೇ ನಿತ್ಯಂ ತದ್ವದಾಭಾಸತೇऽಪಿ ಚ।
ಭಾನಮಸ್ತಿತ್ವಮಪಿ ಚೈವಾಸಮಂತಾದ್ಯತಸ್ತತಃ।
ಜೀವ ಆಭಾಸ ಉದ್ದಿಷ್ಟಃ ಸದೈವ ಪರಮಾತ್ಮನಃ॥

ಪರಿಪೂರ್ಣಚಂದ್ರಿಕಾ

ಜೀವನು ಪರಮಾತ್ಮನಿಂದಲೇ ಕಾಣಿಸುತ್ತಾನೆ. ಮತ್ತು ಪರಮಾತ್ಮನಂತೆ ಕಾಣುತ್ತಾನೆ. ಪರಮಾತ್ಮನಿಂದಲೇ ಜೀವನಿಗೆ ಜ್ಞಾನವು ಪ್ರಾಪ್ತವಾಗುತ್ತದೆ. ಅಸ್ತಿತ್ವವೂ ಕೂಡ ಪರಮಾತ್ಮನಿಂದಲೇ ಪ್ರಾಪ್ತವಾಗಿದೆ. ಆದ್ದರಿಂದ ಜೀವನು ಪರಮಾತ್ಮನ ಅಂಶನಾಗಿದ್ದಾನೆಂದು ಶ್ರುತಿಸ್ಮೃತಿಗಳಲ್ಲಿ ಹೇಳಲಾಗಿದೆ. ಹೀಗೆ 'ಅತ ಏವ ಚೋಪಮಾ' ಎಂಬ ಮೂರನೇ ಅಧ್ಯಾಯದ ಎರಡನೇ ಪಾದದಲ್ಲಿ ಬರುವ ಸೂತ್ರದಲ್ಲಿ ಬರುವ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಆದ್ದರಿಂದ ಆಭಾಸ ಪದದಿಂದ ಭೇದಪ್ರತೀತಿಯು ಪ್ರಾಪ್ತವಾಗುತ್ತದೆಂದು ತಿಳಿಯಬೇಕು.

**प्रकाशः** – यत्तु रामानुजमतेऽद्वैतिमते जीवानां सुखदुःखादिभोग-व्यवस्थापकौपाधिकभेदादिरूपो हेतुराभास एव । चकाराद्भेदश्रुतिविरोधश्चेत्यर्थ इति तत्तु न युक्तम् । असन्ततेरव्यतिकरः आभासत्वाच्चाव्यतिकर इति पूर्वोक्त-साध्येनैवास्यान्वयसम्भवे विशेष्याध्याहारेण व्यवस्थापकहेतुरित्यनेनान्वयायोगात्।

ರಾಮಾನುಜ ಮತದಲ್ಲಿ ಅದ್ವೈತ ಮತ ನಿರಾಕರಣೆಗಾಗಿ 'ಆಭಾಸ ಏವ ಚ' ಎಂಬ ಸೂತ್ರ ಹೊರಟಿದೆ ಎಂದು ವ್ಯಾಖ್ಯಾನ ಮಾಡಲಾಗಿದೆ. ಅದ್ವೈತವನ್ನು ಒಪ್ಪಿದರೆ ಸುಖದುಃಖಾದಿ ಭೋಗವ್ಯವಸ್ಥೆಯು ನಾಶವಾಗಬೇಕಾದೀತು ಎಂಬ ಆಕ್ಷೇಪಕ್ಕೆ ಔಪಾಧಿಕ ಭೇದವನ್ನು ಒಪ್ಪಬೇಕೆಂದು ಅದ್ವೈತಿಗಳು ಹೇಳಿದ ಹೇತುವು ಆಭಾಸವೇ ಆಗಿದೆ. ಮತ್ತು ಚಕಾರದಿಂದ ಭೇದಶ್ರುತಿಯು ವಿರೋಧವೂ ಪ್ರಾಪ್ತವಾಗುತ್ತದೆ. ಹೀಗೆ ರಾಮಾನುಜರು ವ್ಯಾಖ್ಯಾನ ಮಾಡಿದ್ದಾರೆ.

ಇದು ತಪ್ಪು. 'ಆಭಾಸ ಏವ ಚ' ಎಂಬುದಕ್ಕೆ ಹಿಂದಿನ ಸೂತ್ರದಲ್ಲಿರುವ 'ಅತಂತೇಶ್ಚಾ ವ್ಯತಿಕರಃ' ಎಂಬುದರ ಜೊತೆ ಅನ್ವಯವನ್ನು ತಿಳಿದು 'ಆಭಾಸತ್ವಾಚ್ಚ ಅವ್ಯತಿಕರಃ' ಪ್ರತಿಬಿಂಬನಾದರೂ ಸಾಂಕರ್ಯಕ್ಕೆ ಅವಕಾಶವಿಲ್ಲ ಎಂದೇ ಸುಲಭವಾಗಿ ಅನ್ವಯ ಮಾಡಲು ಬರುತ್ತದೆ. ಇದನ್ನು ಬಿಟ್ಟು ವಿಶೇಷ್ಯವಾಚಕ ಪದವನ್ನು ಅಧ್ಯಾಹಾರ ಮಾಡಿ 'ವ್ಯವಸ್ಥಾಪಕ ಹೇತುಃ' ಎಂಬುದರ ಜೊತೆ ಅನ್ವಯವನ್ನು ತಿಳಿಯುವುದು ಅತ್ಯಂತ ಕಠಿಣವಾಗಿದೆ.

**प्रकाशः** – हेतव इत्यध्याहृत्याभासा एवेति बहुवचनान्तपाठकल्पनं चासां-प्रदायिकमित्युपेक्षितम् । आभासत्वाच्चेति वक्तव्य आभास इति प्रथमोक्तिस्तु अदृष्टानियमादाभासो जीव इत्युत्तरार्था । आद्यसूत्रे हेत्वंशस्य वैयर्थ्यदोषेण प्रागेव निरासात्प्रतिज्ञार्थमनूद्य निराह – **एकवस्त्विति** ।।

ಮತ್ತು ರಾಮಾನುಜರು 'ಹೇತವಃ' ಎಂಬ ಬಹುವಚನ ಪದವನ್ನು ಅಧ್ಯಾಹಾರ ಮಾಡಿಕೊಂಡು 'ಆಭಾಸ ಏವ' ಎಂಬ ಬಹುವಚನಾಂತವಾದ ಮತ್ತೊಂದು ಪಾಠವಿದೆ ಎಂದು ಕಲ್ಪನೆ ಮಾಡುತ್ತಾರೆ. ಇದು ಅತ್ಯಂತ ಅಸಾಂಪ್ರದಾಯಿಕವಾದ್ದರಿಂದ ಗ್ರಂಥಕಾರರು ಉಪೇಕ್ಷೆ ಮಾಡಿದ್ದಾರೆ.

'ಆಭಾಸತ್ವಾಚ್ಚ' ಎಂದು ಹೇಳಬೇಕು. 'ಆಭಾಸಃ' ಎಂಬ ಪ್ರಥಮಾ ಏಕವಚನವು 'ಅದೃಷ್ಟಾನಿಯಮಾದಾಭಾಸಃ ಜೀವಃ' ಎಂಬ ಮುಂದಿನ ಸೂತ್ರದ ಜೊತೆ ಅನ್ವಯಕ್ಕಾಗಿ ಹೇಳಲಾಗಿದೆ.

'ಅಂಶೋ ನಾನಾ' ಇತ್ಯಾದಿ ಪ್ರಥಮಸೂತ್ರದಲ್ಲಿ ಹೇತ್ವಂಶವನ್ನು ವೈಯರ್ಥ್ಯದೋಷದ ಮೂಲಕ ಹಿಂದೆಯೇ ನಿರಾಕರಣೆ ಮಾಡಿದ್ದಾಯಿತು. ಈಗ ಪ್ರತಿಜ್ಞಾರ್ಥವನ್ನು ಅನುವಾದ ಮಾಡಿ ನಿರಾಕರಣೆ ಮಾಡಲು 'ಏಕವಸ್ತು' ಇತ್ಯಾದಿ ಗ್ರಂಥವು ಹೊರಟಿದೆ.

ಅಂಶಾಧಿಕರಣ (೨-೩-೧೮)

**प्रकाशः – स्वविशिष्टेति ।।** जडविशिष्टेत्यर्थः । श्रूयते हि ''यस्यात्मा शरीरम्'' इतिवत् ''यस्य पृथिवी शरीरम्'' इत्यादिना जडस्यापि त्वन्मतरीत्या ब्रह्मशरीरतया जडवैशिष्ट्यं ब्रह्मण इति भावः ।।

'ಸ್ವವಿಶಿಷ್ಟ' ಎಂಬ ಪದಕ್ಕೆ ಜಡವಿಶಿಷ್ಟ ಎಂದರ್ಥ. 'ಯಸ್ಯಾತ್ಮಾ ಶರೀರಮ್' ಎಂಬಂತೆ 'ಯಸ್ಯ ಪೃಥಿವೀ ಶರೀರಮ್' ಇತ್ಯಾದಿ ವಾಕ್ಯದಿಂದ ರಾಮಾನುಜ ಮತದಲ್ಲಿ ಜಡವೂ ಕೂಡ ಬ್ರಹ್ಮನ ಶರೀರವೆಂದು ತಿಳಿಯುತ್ತಿದೆ. ಜಡವೈಶಿಷ್ಟ್ಯವು ಬ್ರಹ್ಮನಿಗೆ ಬರುತ್ತದೆ. ಆದ್ದರಿಂದ ಜಡವೂ ಕೂಡ ಅವನ ಅಂಶವೆಂದಾಯಿತು.

**प्रकाशः – द्वितीयेत्यादि ।।** विवृतमेतत्प्रागस्माभिः । सूत्रान्तरदूषणं तु स्फुटत्वान्नोक्तम् । तथा च विवृतं प्रागस्माभिः । एकवस्त्वेकदेशत्वरूपांशत्वाभिप्राये द्वितीयतृतीयसूत्रोपात्तश्रुतिस्मृत्यनानुगुण्यमुक्तम् । इदानीमेकवस्त्वेकदेशत्वमित्येतदेव न युक्तमित्याह – **किञ्चेति** ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे अंशाधिकरणं सम्पूर्णम् ।।१८।।**

'ದ್ವಿತೀಯಸೂತ್ರೋಕ್ತಾಯಾಂ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಈ ವಾಕ್ಯದ ವಿವರಣೆಯನ್ನು ಹಿಂದೆಯೇ ನಾವು ಮಾಡಿದ್ದೇವೆ. ರಾಮಾನುಜ ಮತದಲ್ಲಿರುವ ಬೇರೆ ದೋಷವು ಸ್ಪಷ್ಟವಾಗಿರುವುದರಿಂದ ಗ್ರಂಥಕಾರರು ಎಲ್ಲವನ್ನೂ ಹೇಳಿರುವುದಿಲ್ಲ. ಇದರ ಬಗ್ಗೆ ಹಿಂದೆ ನಾವು ವಿವರಿಸಿದ್ದೇವೆ.

ಒಂದು ವಸ್ತುವಿನ ಏಕದೇಶವೇ ಅಂಶ ಎಂದು ಕರೆಸಿಕೊಳ್ಳುತ್ತಿದೆ ಎಂದು ಹೇಳಿದರೆ ಅದನ್ನು ಒಪ್ಪಿ ಎರಡನೇ ಹಾಗೂ ಮೂರನೇ ಸೂತ್ರದಲ್ಲಿ ಉದಾಹರಿಸಿದ ಶ್ರುತಿಸ್ಮೃತಿಗಳಿಗೆ ಅನಾನುಗುಣ್ಯದೋಷವು ಪ್ರಾಪ್ತವಾಗುತ್ತದೆ ಎಂದು ಹಿಂದೆ ಹೇಳಲಾಯಿತು. ಪ್ರಕೃತ ಏಕವಸ್ತುವಿನ ಏಕದೇಶವು ಅಂಶವೆನಿಸುತ್ತದೆ ಎಂಬುದೇ ತಪ್ಪು ಎಂಬುದನ್ನು 'ಕಿಂಚ' ಇತ್ಯಾದಿ ಗ್ರಂಥದಿಂದ ಉಪಪಾದನೆ ಮಾಡುತ್ತಿದ್ದಾರೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಅಂಶಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

# ಅದೃಷ್ಟಾಧಿಕರಣ
(೨-೩-೧೯)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

॥ ಶ್ರೀಗುರುಭ್ಯೋ ನಮಃ ॥

# ಅದೃಷ್ಟಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – अदृष्टानियमात् ।।**

ಜ್ಞಾನ, ಕರ್ಮ, ಸಂಸ್ಕಾರ ಮೊದಲಾದವುಗಳಲ್ಲಿ ವೈಚಿತ್ರ್ಯವಿರುವುದರಿಂದ ಜೀವರಲ್ಲಿಯೂ ಕೂಡ ವೈಚಿತ್ರ್ಯವಿರುತ್ತದೆ. ಇಂಥ ವೈಚಿತ್ರ್ಯಪಡೆದ ಜೀವರೆಲ್ಲರೂ ಒಬ್ಬನೇ ಪರಮಾತ್ಮನ ಆಧೀನರಾಗಿ ಪ್ರತಿಬಿಂಬರೆನಿಸಿದ್ದಾರೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** अदृष्टपदोपलक्षितविद्याकर्मसंस्काराणामनियमात् । नियमो नामैकप्रकारता अनियमोऽनेकप्रकारता । तथाच वैचित्र्यं वैचित्र्यात् प्रतिबिम्ब भूतजीवोनामपि देवदानवमानवादिवैचित्र्यं युज्यत इत्यर्थः ।।१।।

ಅದೃಷ್ಟಾನಿಯಮಾತ್ = ಅದೃಷ್ಟಪದದಿಂದ ಉಪಲಕ್ಷಿತವಾದ ವಿದ್ಯಾ, ಕರ್ಮ, ಸಂಸ್ಕಾರ ಇವುಗಳಲ್ಲಿ ವೈಚಿತ್ರ್ಯವಿರುವುದರಿಂದ ನಿಯಮ ಶಬ್ದಕ್ಕೆ ಒಂದೇ ರೀತಿಯಲ್ಲಿರುವಿಕೆ ಎಂದರ್ಥ. ಅನಿಯಮಶಬ್ದಕ್ಕೆ ವೈಚಿತ್ರ್ಯವನ್ನು ಪಡೆದಿರುವಿಕೆ ಎಂದರ್ಥ. ಹೀಗೆ ವೈಚಿತ್ರ್ಯವಿರುವುದರಿಂದ ಪ್ರತಿಬಿಂಬರಾದ ಜೀವರು ದೇವ, ದಾನವ, ಮಾನವ ಇತ್ಯಾದಿಯಾಗಿ ಅನೇಕ ರೀತಿಯಲ್ಲಿರುತ್ತಾರೆ. ಇವರೆಲ್ಲರೂ ಪರಮಾತ್ಮನ ಅಧೀನನಾಗಿ ಪ್ರತಿಬಿಂಬರಾಗಿದ್ದಾರೆ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

## ಬ್ರಹ್ಮಸೂತ್ರಭಾಷ್ಯ

**भाष्यम् – प्रतिबिम्बानां मिथो वैचित्र्ये कारणमाह –**

**।। अदृष्टानियमात् ।।१।।**

**अनादिविद्याकर्मादिवैचित्र्याद् वैचित्र्यम् ।।१।।**

ಅನುವಾದ - ಪ್ರತಿಬಿಂಬಸ್ವರೂಪರಾದ ಜೀವರಲ್ಲಿ ಪರಸ್ಪರ ವೈಚಿತ್ರ್ಯವಿದೆ. ಇದಕ್ಕೆ ಕಾರಣವನ್ನು ಸೂತ್ರಕಾರರೇ ಹೇಳುತ್ತಿದ್ದಾರೆ. ಅನಾದಿಯಾದ ಜ್ಞಾನ, ಕರ್ಮ ಮೊದಲಾದವುಗಳು ಪ್ರತಿಯೊಬ್ಬರಲ್ಲೂ ವಿಚಿತ್ರವಾಗಿವೆ. ಆದ್ದರಿಂದ ಜೀವರಲ್ಲೂ ವೈಚಿತ್ರ್ಯವಿದೆ.

ಪ್ರತಿಪದಾರ್ಥ -- ಪ್ರತಿಬಿಂಬಾನಾಂ = ಪ್ರತಿಬಿಂಬಸ್ವರೂಪರಾದ ಜೀವರ, ಮಿಥಃ = ಪರಸ್ಪರವಾದ, ವೈಚಿತ್ರ್ಯೇ = ವೈಚಿತ್ರ್ಯದಲ್ಲಿ, ಕಾರಣಂ = ಕಾರಣವನ್ನು, ಆಹ = ಸೂತ್ರಕಾರರು ಹೇಳುತ್ತಿದ್ದಾರೆ -

ಅನಾದಿವಿದ್ಯಾಕರ್ಮಾದಿವೈಚಿತ್ರ್ಯಾತ್ = ಅನಾದಿಯಾದ ಜ್ಞಾನ, ಕರ್ಮ ಮೊದಲಾದವುಗಳ ವೈಚಿತ್ರ್ಯದಿಂದ, ವೈಚಿತ್ರ್ಯಮ್ = ಜೀವರಲ್ಲಿಯೂ ವೈಚಿತ್ರ್ಯವಿದೆ.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

## ತತ್ವಪ್ರಕಾಶಿಕಾ

**तत्वप्रकाशिका – अत्र ब्रह्मणि श्रुतिसमन्वयसिद्ध्यर्थं जीवस्येश्वरप्रतिबिम्बत्वविषयश्रुतिविरोधपरिहारादस्ति शास्त्रादिसङ्गतिः । हरौ सर्वश्रुतीनां समन्वयो निरूपितः । तत्र जीवप्रतिबिम्बताविषयश्रुतीनां विरोधेनाप्रामाण्ये समन्वयानुपपत्तिरित्यसौ निरसनीय एव ।**

ಈ ಅಧಿಕರಣದಲ್ಲಿ ಬ್ರಹ್ಮನಲ್ಲಿ ಶ್ರುತಿಸಮನ್ವಯವು ಸಿದ್ಧವಾಗುವುದಕ್ಕಾಗಿ ಜೀವನಿಗೆ ಈಶ್ವರಪ್ರತಿಬಿಂಬತ್ವ ವಿಷಯಕವಾದ ಶ್ರುತಿವಿರೋಧವನ್ನು ಪರಿಹಾರ ಮಾಡಲಾಗಿದೆ. ಆದ್ದರಿಂದ ಶಾಸ್ತ್ರ-ಅಧ್ಯಾಯ-ಪಾದ ಸಂಗತಿಗಳು ಇರುತ್ತವೆ. ಶ್ರೀಹರಿಯಲ್ಲಿ ಸಕಲ ಶ್ರುತಿಗಳ ಸಮನ್ವಯವು ನಿರೂಪಿತವಾಗಿದೆ. ಈ ವಿಷಯದಲ್ಲಿ ಜೀವ ಪ್ರತಿಬಿಂಬತ್ವವನ್ನು ಸಮರ್ಥಿಸುವ ವಿರೋಧವು ಬರುವ ಮೂಲಕ ಅಪ್ರಾಮಾಣ್ಯವು ಬರುವುದರಿಂದ ಸಮನ್ವಯವು ಅನುಪಪನ್ನವಾಗುತ್ತದೆ. ಆದ್ದರಿಂದ ಜೀವನು ಪ್ರತಿಬಿಂಬನೆಂಬ ವಿಷಯದಲ್ಲಿರುವ ಶ್ರುತಿಗಳ ವಿರೋಧವನ್ನು ಪರಿಹಾರ ಮಾಡಲೇಬೇಕು.

**तत्वप्रकाशिका – प्रकृतो जीव एव विषयः । भगवत्प्रतिबिम्बो न वेति सन्देहः । श्रुतिविगानं सन्देहबीजम् । 'रूपं रूपम्' इति श्रुतिरेका । प्रकरणवशाद्विरुद्धश्रुत्यन्तरमनुमीयते ।**

ಹಿಂದೆ ಪ್ರಕೃತನಾದ ಜೀವನೇ ಅಧಿಕರಣಕ್ಕೆ ವಿಷಯನಾಗಿದ್ದಾನೆ. ಭಗವಂತನಿಗೆ ಈ ಜೀವನು ಪ್ರತಿಬಿಂಬನೋ, ಅಲ್ಲವೋ? ಎಂಬುದು ಅಧಿಕರಣದ ಸಂದೇಹ. ಶ್ರುತಿಗಳಲ್ಲಿರುವ ಪರಸ್ಪರ ವಿರೋಧವೇ ಸಂದೇಹಕ್ಕೆ ಕಾರಣ. 'ರೂಪಂ ರೂಪಂ' ಎಂಬ ಶ್ರುತಿಯು ಜೀವನು ಪ್ರತಿಬಿಂಬನೆಂದು ಹೇಳುತ್ತಿದೆ. ಪ್ರಕರಣದ ಅಧೀನವಾಗಿ ವಿರುದ್ಧವಾದ ಶ್ರುತಿಯನ್ನು ಅನುಮಾನ ಮಾಡುತ್ತೇವೆ. ಆದ್ದರಿಂದ ಸಂದೇಹವು ಉಂಟಾಗುತ್ತದೆ.

ವಿವರಣೆ - ಹಿಂದಿನ ಅಧಿಕರಣದಲ್ಲಿ ಜೀವರು ಭಗವಂತನ ಪ್ರತಿಬಿಂಬರಾಗಿದ್ದಾರೆಂದು ಸಮರ್ಥಿಸಲಾಯಿತು. ಹಾಗಾದರೆ ಪ್ರತಿಬಿಂಬರಲ್ಲವೆಂದು ಹೇಳುವ ಶ್ರುತಿವಿರೋಧ ಬರುತ್ತದಲ್ಲವೇ? ಎಂಬ ಅಧಿಕಾಕ್ಷೇಪಕ್ಕೆ ಈ ಅಧಿಕರಣವು ಉತ್ತರವನ್ನು ನೀಡುತ್ತಿದೆ. ಆದ್ದರಿಂದ ಇದಕ್ಕೆ ಹಿಂದಿನ ಅಧಿಕರಣದಿಂದ ಆನಂತರ್ಯ ಸಂಗತಿಯು ಇರುತ್ತದೆ.

**तत्वप्रकाशिका – न जीवा भगवत्प्रतिबिम्बा इति पूर्वः पक्षः । तथा श्रुतेर्विद्यमानत्वात् । नच प्रतिबिम्बत्वश्रुतिविरोधः । अन्यश्रुतेः सयुक्तिकत्वात् । अस्ति खल्वयं जीवानामन्योन्यं भेदः सुरनरतिर्यगादिरूपः। न चैकप्रतिबिम्बानां मिथो वैचित्र्यं सम्भवति । भवति चेद्भवत्वेको भगवत्प्रतिबिम्बः। तदयं प्रयोगः – न जीवा एकप्रतिबिम्बा भेदवत्वात् घटपटवदिति । अतः सयुक्तिकश्रुतिविरोधात्प्रतिबिम्बत्वश्रुतिरप्रमाणमिति नोक्तसमन्वयसिद्धिरित्येवं प्राप्ते सिद्धान्तयत्सूत्रमवारयति – प्रतिबिम्बानामिति ।।**

ಜೀವರುಗಳು ಭಗವಂತನ ಪ್ರತಿಬಿಂಬರಾಗಲು ಸಾಧ್ಯವಿಲ್ಲ ಎಂಬುದು ಅಧಿಕರಣದ ಪೂರ್ವಪಕ್ಷ. ಏಕೆಂದರೆ ಶ್ರುತಿಯು ಪ್ರತಿಬಿಂಬರಲ್ಲವೆಂದೇ ಹೇಳುತ್ತಿದೆ. 'ರೂಪಂ ರೂಪಂ' ಎಂಬ ಶ್ರುತಿಯು ಪ್ರತಿಬಿಂಬತ್ವವನ್ನು ಹೇಳುತ್ತಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಪ್ರತಿಬಿಂಬರಲ್ಲವೆಂದು ಹೇಳುವ ಶ್ರುತಿಯು ಯುಕ್ತಿಬದ್ಧವಾಗಿದೆ.

ಜೀವರಿಗೆ ಪರಸ್ಪರ ಭೇದವಿರುವುದು ಪ್ರತ್ಯಕ್ಷ ಸಿದ್ಧವಾಗಿದೆ. ದೇವತೆಗಳು, ಮನುಷ್ಯರು, ಪಶು-ಪ್ರಾಣಿಗಳು ಇತ್ಯಾದಿಯಾಗಿ ಪ್ರಾಣಿ ಪ್ರಪಂಚದಲ್ಲಿರುವ ವೈವಿಧ್ಯವೇ ಭೇದಕ್ಕೆ ಪೂರಕವಾಗಿದೆ. ಇವರೆಲ್ಲರೂ ಒಬ್ಬನೇ ಆದ ಪರಮಾತ್ಮನ ಪ್ರತಿಬಿಂಬರಾದರೆ ಪರಸ್ಪರ ಈ ವೈಚಿತ್ರ್ಯವೇ ಕೂಡುವುದಿಲ್ಲ. ಒಬ್ಬನು ಬೇಕಾದರೆ ಭಗವಂತನ ಪ್ರತಿಬಿಂಬರಾಗಲಿ. ಉಳಿದವರು ಭಗವಂತನ ಪ್ರತಿಬಿಂಬರಾಗುವುದಿಲ್ಲ. ಅನುಮಾನವನ್ನು ಹೀಗೆ ಪ್ರಯೋಗ ಮಾಡಿದಂತಾಯಿತು. 'ನ ಜೀವಃ ಏಕಪ್ರತಿಬಿಂಬಾಃ ಭೇದವತ್ವಾತ್ ಘಟಪಟವತ್' 'ಘಟಪಟಗಳಿಗೆ ಭೇದವಿದೆ. ಒಂದರಿಂದ ನಿರ್ಮಾಣವಾಗಿದ್ದಲ್ಲ. ಆದರಂತೆ ಜೀವರಲ್ಲಿಯೂ ಪರಸ್ಪರ ಭೇದವಿರುವುದರಿಂದ ಒಂದರ ಪ್ರತಿಬಿಂಬರಾಗಲು ಸಾಧ್ಯವಿಲ್ಲ'. ಆದ್ದರಿಂದ ಯುಕ್ತಿಬದ್ಧವಾದ ಶ್ರುತಿವಿರೋಧವಿರುವುದರಿಂದ ಪ್ರತಿಬಿಂಬತ್ವ ಶ್ರುತಿಯು ಅಪ್ರಮಾಣವಾಗುತ್ತದೆ. ಹೀಗೆ ಪರಮಾತ್ಮನಲ್ಲಿ ಶ್ರುತಿಸಮನ್ವಯವು ಸಿದ್ಧವಾಗುವುದಿಲ್ಲ. ಇಷ್ಟು ಅಧಿಕರಣದ ಪೂರ್ವಪಕ್ಷ.

ಸಿದ್ಧಾಂತ ಸ್ಥಾಪಕವಾದ ಸೂತ್ರಕ್ಕೆ 'ಪ್ರತಿಬಿಂಬಾನಾಂ' ಎಂದು ಅವತಾರಿಕೆಯನ್ನು ನೀಡುತ್ತಿದ್ದಾರೆ.

ವಿವರಣೆ - 'ರೂಪಂ ರೂಪಂ ಪ್ರತಿರೂಪೋ ಬಭೂವ' ಎಂಬ ಶ್ರುತಿಯು ಜೀವರು ಪರಮಾತ್ಮನ ಪ್ರತಿಬಿಂಬರಾಗಿದ್ದಾರೆಂದು ಹೇಳುತ್ತಿದೆ. 'ನೈವಾಂಶ ನ ಸಂಬಂಧಃ ನಾಯಂ ತಸ್ಯಾಪಿ ಕಶ್ಚನ' ಇವೇ ಮೊದಲಾದ ಶ್ರುತಿಗಳು ಜೀವರು ಭಗವಂತನ ಪ್ರತಿಬಿಂಬರಲ್ಲವೆಂದು ಹೇಳುತ್ತಿವೆ. ಈ 'ನಾಯಂ ತಸ್ಯಾಪಿ ಕಶ್ಚನ' ಎಂಬ ಶ್ರುತಿಯು ಅನುಮಾನದಿಂದ ಊಹೆ ಮಾಡಲ್ಪಟ್ಟದ್ದು. ಹೊರತು ಶ್ರುತಿ ಇರುವುದಿಲ್ಲವೆಂದು ತಿಳಿಯಬೇಕು. ಆದ್ದರಿಂದ ಪರಸ್ಪರ ಶ್ರುತಿದ್ವಯವಿರೋಧವನ್ನು ಪರಿಹಾರ ಮಾಡುವ ಈ ಪಾದದಲ್ಲಿ ಅಧಿಕರಣ ಸಂಗತಿಗೆ ಅಂತರ್ಭಾವವು ಯುಕ್ತವಾಗುತ್ತದೆ. ಈ ಶ್ರುತಿಯು 'ಜೀವಾಃ ನ ಏಕಪ್ರತಿಬಿಂಬಾಃ ಏಕವತ್ತ್ವಾತ್ ಘಟಪಟವತ್' ಎಂಬ ಯುಕ್ತಿಯಿಂದ ಉಪೋದ್ಬಲಿತವಾಗಿದೆ. ಯುಕ್ತಿಯಿಂದ ಉಪೋದ್ಬಲಿತವಾಗಿರುವುದರಿಂದ ಊಹಿಸಲ್ಪಟ್ಟರೂ ಕೂಡ ಈ ಶ್ರುತಿಯು ಅತ್ಯಂತ ಪ್ರಬಲವಾಗಿದೆ. 'ರೂಪಂ ರೂಪಂ ಪ್ರತಿರೂಪೋ ಬಭೂವ' ಎಂಬ ಶ್ರುತಿಯು ದುರ್ಬಲವಾಗಿದೆ. ಹಾಗಾಗಿ ಜೀವರು ಪರಮಾತ್ಮನ ಅಂಶರಲ್ಲವೆಂಬ ಪೂರ್ವಪಕ್ಷವು ದೃಢವಾಯಿತು.

**तत्वप्रकाशिका – जीवानां प्रतिबिम्बत्वमभ्युपेत्य तेषां वैचित्र्ये कारणान्तरमाह सूत्रकार इत्यर्थः । सूत्रं व्याचष्टे – अनादीति ।। न वैचित्र्यान्यथानुपपत्त्या सर्वेषां प्रतिबिम्बत्वाभावो वाच्यः । अशेषजीवानां भगवत्प्रतिबिम्बत्वेऽपि विद्यायदृष्टवैचित्र्येण देवदानवमानवादिवैचित्र्यस्योपपत्तेः। 'यथाप्रज्ञं हि सम्भवाः' इत्यादिश्रुतेः । न चादृष्टवैचित्र्यमेवासम्भावितम् । तस्यापि पूर्वादृष्टवैचित्र्यादुपपत्तेः । तस्याप्येवमनादित्वादिति भावः ।।**

ಜೀವರುಗಳು ಪರಮಾತ್ಮನ ಪ್ರತಿಬಿಂಬರೆಂದು ಒಪ್ಪಿ ಅವರಲ್ಲಿರುವ ವೈಚಿತ್ರ್ಯಕ್ಕೆ ಕಾರಣವೇನೆಂಬುದನ್ನು ಸೂತ್ರಕಾರರು ಹೇಳುತ್ತಿದ್ದಾರೆಂಬುದು 'ಪ್ರತಿಬಿಂಬಾನಾಮ್' ಎಂಬ ಭಾಷ್ಯವಾಕ್ಯದ ಅರ್ಥ. ಸೂತ್ರವನ್ನು ಭಾಷ್ಯಕಾರರು 'ಅನಾದಿ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವೈಚಿತ್ರ್ಯದ ಅನ್ಯಥಾನುಪಪತ್ತಿಯಿಂದ ಸಕಲರು ಪ್ರತಿಬಿಂಬರಾಗುವುದಿಲ್ಲವೆಂದು ಹೇಳಬಾರದು. ಸಕಲ ಜೀವರು ಭಗವಂತನ ಪ್ರತಿಬಿಂಬರಾದರೂ ಕೂಡ ವಿದ್ಯೆ, ಅದೃಷ್ಟ, ಮೊದಲಾದ ಕಾರಣಗಳಲ್ಲಿರುವ ವೈಚಿತ್ರ್ಯದಿಂದ ದೇವ, ದಾನವ, ಮಾನವ ಇತ್ಯಾದಿಯಾದ ವೈಚಿತ್ರ್ಯವು ಉಪಪನ್ನವಾಗುತ್ತದೆ. 'ಯಥಾಪ್ರಜ್ಞಂ ಹಿ ಸಂಭವಾಃ' 'ಜ್ಞಾನಕ್ಕೆ ಅನುಸಾರಿಯಾಗಿ ವ್ಯವಸ್ಥೆಯು' ಇತ್ಯಾದಿ ಶ್ರುತಿಯು ಈ ವಿಷಯದಲ್ಲಿ ಆಧಾರವಾಗಿದೆ.

ಅದೃಷ್ಟವೈಚಿತ್ರ್ಯವೇ ಅಸಂಭಾವಿತವೆಂದು ಪ್ರಶ್ನಿಸಬಾರದು? ಆ ಅದೃಷ್ಟದ ವೈಚಿತ್ರ್ಯವು ಪೂರ್ವಾದೃಷ್ಟ ವೈಚಿತ್ರ್ಯದಿಂದ ಉಪಪನ್ನವಾಗುತ್ತದೆ. ಅದೂ ಕೂಡ ಅದರ ಹಿಂದಿನ ಅದೃಷ್ಟವೈಚಿತ್ರ್ಯದಿಂದ ಉಪಪನ್ನವಾಗುತ್ತದೆ. ಈ ಅದೃಷ್ಟದ ಪರಂಪರೆಯು ಅನಾದಿಯಾದ್ದರಿಂದ ದೋಷವಿಲ್ಲ.

ವಿವರಣೆ - ಜೀವರಲ್ಲಿ ದೇವತೆಗಳು, ದಾನವರು, ಮನುಷ್ಯರು ಇತ್ಯಾದಿಯಾದ ವೈಚಿತ್ರ್ಯವಿದೆ. ಈ ವೈಚಿತ್ರ್ಯವು ಕೂಡಬೇಕೆಂದರೆ ಒಬ್ಬನೇ ಪರಮಾತ್ಮನ ಪ್ರತಿಬಿಂಬರೆಂದು ಒಪ್ಪಬಾರದು.

ಅದೃಷ್ಟಾಧಿಕರಣ (೨-೩-೧೯)

ಆದ್ದರಿಂದ ವೈಚಿತ್ರ್ಯದ ಅನ್ಯಥಾನುಪಪತ್ತಿಯಿಂದ ಪ್ರತಿಬಿಂಬತ್ವಾಭಾವವು ಸಿದ್ಧವಾಗುತ್ತದೆಂದು, ಪ್ರತಿಬಿಂಬವಲ್ಲವೆನ್ನಲು ಅನ್ಯಥಾನುಪಪತ್ತಿ ಪ್ರಮಾಣವನ್ನು ಪೂರ್ವಪಕ್ಷಕಾರರು ಆಕ್ಷೇಪ ಮಾಡುತ್ತಾರೆ. ಆದರೆ ಇದು ತಪ್ಪು. ಏಕೆಂದರೆ ಪ್ರತಿಬಿಂಬತ್ವವಿದ್ದರೂ ವೈಚಿತ್ರ್ಯವು ಅನ್ಯಥಾ ಉಪಪನ್ನವಾಗುತ್ತದೆ. ಆದ್ದರಿಂದ ಅನ್ಯಥಾನುಪಪತ್ತಿಯನ್ನು ಹೇಳಲು ಸಾಧ್ಯವಿಲ್ಲ. ಅದೇನೆಂದರೆ ಆಯಾ ಜೀವಿಗಳ ಅದೃಷ್ಟವು ಹೇಗಿರುತ್ತದೋ ಅದಕ್ಕನುಗುಣವಾದ ಜನ್ಮಗಳನ್ನು ತಾಳುತ್ತಾರೆ. ಹಾಗಾಗಿ ಜನ್ಮದಲ್ಲಿರುವ ವೈಚಿತ್ರ್ಯಕ್ಕೆ ಅದೃಷ್ಟದ ವೈಚಿತ್ರ್ಯವೇ ಕಾರಣವಾಗುತ್ತದೆ. ಆದ್ದರಿಂದ ಜೀವರು ಪರಸ್ಪರ ಒಬ್ಬನೇ ಪರಮಾತ್ಮನಾಗಿದ್ದಾನೆ. ಪ್ರತಿಬಿಂಬರಲ್ಲವೆಂಬುದು ತಪ್ಪು. ಸಕಲ ಜೀವರು ಭಗವಂತನ ಪ್ರತಿಬಿಂಬರಾದರೂ ಕೂಡ ಪ್ರವಾಹತಃ ಅನಾದಿಯಾದ ಅವಿದ್ಯಾ, ಕರ್ಮ, ಸಂಸ್ಕಾರ ರೂಪವಾದ ಅದೃಷ್ಟದ ವೈಚಿತ್ರ್ಯದಿಂದ ಜನ್ಮಗಳಲ್ಲಿ ವೈಚಿತ್ರ್ಯವಿದೆ. ಈ ಅಭಿಪ್ರಾಯದಿಂದ ಭಾಷ್ಯದ ಅಭಿಪ್ರಾಯವನ್ನು 'ನ ವೈಚಿತ್ರ್ಯ' ಇತ್ಯಾದಿ ಟೀಕೆಯಿಂದ ಸಮರ್ಥಿಸುತ್ತಿದ್ದಾರೆ (ವಾಕ್ಯಾರ್ಥಮುಕ್ತಾವಳಿ).

## ಬ್ರಹ್ಮಸೂತ್ರ

**सूत्रम् – अभिसन्ध्यादिष्वपि चैवम् ।।**

ರಾಗ, ದ್ವೇಷ ಮೊದಲಾದ ವಿಷಯಗಳಲ್ಲಿಯೂ ವೈಚಿತ್ರ್ಯವು ಅದೃಷ್ಟಪ್ರಯುಕ್ತವಾಗಿಯೇ ಇರುತ್ತದೆ.

## ಸೂತ್ರದೀಪಿಕಾ

**सूत्रदीपिका—यतोऽभिसन्ध्यादिषु कामक्रोधादिदोषेष्वपि।एवमदृष्टादिवैचित्र्यादेव वैचित्र्यं वाच्यम् । अत आवश्यकत्वाददृष्टवैचित्र्यमेव जीववैचित्र्यकारणम् । न दोषादिवैचित्र्यमित्यर्थः ।।२।।**

ಯಾವ ಕಾರಣದಿಂದ ಅಭಿಸಂಧ್ಯಾದಿಷು = ಕಾಮ, ಕ್ರೋಧ ಮೊದಲಾದ ದೋಷಗಳ ವಿಷಯದಲ್ಲಿಯೂ ಏವಂ = ಅದೃಷ್ಟಾದಿ ವೈಚಿತ್ರ್ಯವೇ ಕಾರಣ. ಆದ್ದರಿಂದ ಅದೃಷ್ಟವೈಚಿತ್ರ್ಯವೇ ಜೀವರಲ್ಲಿರುವ ವೈಚಿತ್ರ್ಯಕ್ಕೆ ಕಾರಣ. ಹೊರತು, ದೋಷಾದಿಗಳ ವೈಚಿತ್ರ್ಯವಲ್ಲ.

## ಬ್ರಹ್ಮಸೂತ್ರಭಾಷ್ಯ

**भाष्यम् – ।। अभिसन्ध्यादिष्वपि चैवम् ।।२।।**

**इच्छाद्वेषसुखदुःखादिवैचित्र्यं चादृष्टादेव । चशब्देन प्रतिक्षणवैचित्र्यं च ।।२।।**

ಅನುವಾದ - ಇಚ್ಛಾ, ದ್ವೇಷ, ಸುಖ, ದುಃಖ ಇವುಗಳ ವೈಚಿತ್ರ್ಯವು ಕರ್ಮದ ವೈಚಿತ್ರ್ಯದಿಂದಲೇ ಯುಕ್ತವಾಗುತ್ತದೆ. ಸೂತ್ರದಲ್ಲಿರುವ 'ಚ' ಶಬ್ದದಿಂದ ಪ್ರತಿಕ್ಷಣ ಕಾಣುತ್ತಿರುವ ವೈಚಿತ್ರ್ಯಕ್ಕೂ ಅದೃಷ್ಟವೇ ಕಾರಣವೆಂದು ತಿಳಿಯಬೇಕು.

ಪ್ರತಿಪದಾರ್ಥ -- ಇಚ್ಛಾದ್ವೇಷಸುಖದುಃಖಾದಿವೈಚಿತ್ರ್ಯಂ = ಜೀವರ ಇಚ್ಛಾ, ದ್ವೇಷ, ಸುಖ, ದುಃಖ ಇವುಗಳ ವೈಲಕ್ಷಣ್ಯವು, ಅದೃಷ್ಟಾದೇವ = ಕರ್ಮಗಳ ವೈಚಿತ್ರ್ಯದಿಂದಲೇ ಉಂಟಾಗುತ್ತದೆ. ಚ ಶಬ್ದೇನ = ಸೂತ್ರದಲ್ಲಿರುವ ಚ ಶಬ್ದದಿಂದ, ಪ್ರತಿಕ್ಷಣವೈಚಿತ್ರಮ್ = ಪ್ರತಿಕ್ಷಣದಲ್ಲೂ ಕಾಣಸುತ್ತಿರುವ ವೈಚಿತ್ರ್ಯವು ಅದೃಷ್ಟದ ಅಧೀನವೆಂದು ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

## ತತ್ವಪ್ರಕಾಶಿಕಾ

**तत्वप्रकाशिका – किं वैचित्र्यस्यादृष्टाकारणकल्पनया रागद्वेषमोहादीनां दोषाणामेव तन्निमित्तत्वोपपत्तेरित्याशङ्कां परिहरत्सूत्रमुपन्यस्य व्याचष्टे – अभिसन्धीति ।। न दोषवैचित्र्यादेतद्वैचित्र्यं वाच्यम् । तस्यापि सादित्वेन कारणगवेषणेऽदृष्टस्यैव ग्राह्यत्वादिति भावः ।**

ವೈಚಿತ್ರ್ಯಕ್ಕೆ ಅದೃಷ್ಟವನ್ನೇ ಕಾರಣವೆಂದು ಏಕೆ ಕಲ್ಪನೆ ಮಾಡಬೇಕು? ರಾಗ-ದ್ವೇಷ-ಮೋಹ ಮೊದಲಾದ ದೋಷಗಳನ್ನೇ ಕಾರಣವೆಂದು ಏಕೆ ಹೇಳಬಾರದು? ಈ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು 'ಅಭಿಸಂಧಿ' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ದೋಷವೈಚಿತ್ರ್ಯದಿಂದ ಪ್ರತಿಬಿಂಬದಲ್ಲಿ ವೈಚಿತ್ರ್ಯವನ್ನು ಹೇಳಬಾರದು. ಏಕೆಂದರೆ ಆ ದೋಷವು ಸಾದಿಯಾದ್ದರಿಂದ ಅದಕ್ಕೆ ಕಾರಣವನ್ನು ಅನ್ವೇಷಣೆ ಮಾಡಿದರೆ ಅದೃಷ್ಟಕ್ಕೆ ಮೊರೆ ಹೋಗಬೇಕು ಎಂಬುದು ಸೂತ್ರದ ಅಭಿಪ್ರಾಯ.

ವಿವರಣೆ – ತಟಸ್ಥನ ಆಶಂಕೆಯನ್ನು 'ಕಿಂ ವೈಚಿತ್ರ್ಯಂ' ಇತ್ಯಾದಿಯಾಗಿ ಉಪಸ್ಥಾಪನೆ ಮಾಡುತ್ತಿದ್ದಾರೆ.

ಸಂಸಾರಾವಸ್ಥೆಯಲ್ಲಿ ರಾಗಾದಿದೋಷಗಳು ಯಾರಲ್ಲಿ ಪ್ರಚುರವಾಗಿದ್ದು ಸುಖವು ಅಲ್ಪವಾಗಿರುತ್ತದೋ ಅವನು ಪ್ರಾಣಿಯಾಗಿ ಹುಟ್ಟುತ್ತಾನೆ. ಯಾರಲ್ಲಿ ರಾಗಾದಿಗಳು ಅಪ್ರಚುರವಾಗಿದ್ದು ಸುಖವು ಸಮಾನವಾಗಿರುತ್ತದೋ ಅವನು ಮನುಷ್ಯನಾಗಿ ಹುಟ್ಟುತ್ತಾನೆ. ಯಾರು ಅಲ್ಪವಾದ ರಾಗಾದ್ಯಾಭಾಸವುಳ್ಳವನೋ, ಸಂಪೂರ್ಣವಾದ ಸುಖವುಳ್ಳವನೋ ಅವನು ದೇವತೆಯಾಗಿ ಹುಟ್ಟುತ್ತಾನೆ. ಹೀಗೆ ರಾಗಾದಿಗಳಲ್ಲಿರುವ ವೈಚಿತ್ರ್ಯವು ದೇವತೆಗಳು, ಮನುಷ್ಯರು, ಪ್ರಾಣಿಗಳಾಗಿ ಹುಟ್ಟಲು ಕಾರಣವಾಗುತ್ತದೆ ಎಂದು ಹೇಳಬಹುದಲ್ಲವೇ? ಎಂಬುದು ತಟಸ್ಥನು ಮಾಡುತ್ತಿರುವ ಆಕ್ಷೇಪದ ಅಭಿಪ್ರಾಯ.

**तत्वप्रकाशिका–पूर्वदोषवैचित्र्यादुत्तरोपपत्तौ किमदृष्टेनेत्यत आह – चशब्देनेति।। सङ्गृहीतमिति शेषः । दोषवैचित्र्यस्यादृष्टवैचित्र्यं विना जीववैचित्र्यनिमित्तत्वे तदभावेऽप्येकस्मिन्पुंसि प्रतिक्षणवैचित्र्यं न स्यात् । अस्ति चैतदतस्तदन्यथानुपपत्याऽदृष्टमेव कारणं ग्राह्यमिति भावः ।।**

ಹಿಂದಿನ ರಾಗದ್ವೇಷಾದಿ ವೈಚಿತ್ರ್ಯದಿಂದಲೇ ರಾಗದ್ವೇಷಾದಿ ದೋಷಗಳ ವೈಚಿತ್ರ್ಯವನ್ನು ಕೂಡಿಸಲು ಬರುವಾಗ ಅದೃಷ್ಟವೈಚಿತ್ರ್ಯವನ್ನು ಏಕೆ ಆಶ್ರಯಿಸಬೇಕು? ಎಂಬ ಪ್ರಶ್ನೆಗೆ 'ಚಶಬ್ದೇನ' ಎಂಬ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ. ಈ ಭಾಷ್ಯವಾಕ್ಯದಲ್ಲಿ 'ಸಂಗೃಹೀತಂ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು.

ದೋಷವೈಚಿತ್ರ್ಯಕ್ಕೆ ಅದೃಷ್ಟವೈಚಿತ್ರ್ಯವನ್ನು ಬಿಟ್ಟು ಜೀವವೈಚಿತ್ರ್ಯಕ್ಕೆ ನಿಮಿತ್ತತ್ವವನ್ನು ಒಪ್ಪಿದರೆ ದೋಷವೈಚಿತ್ರ್ಯ ಇಲ್ಲದಿದ್ದಾಗ ಒಬ್ಬನೇ ಮನುಷ್ಯನಲ್ಲಿ ಪ್ರತಿಕ್ಷಣ ಇರುವ ವೈಚಿತ್ರ್ಯವು ಇಲ್ಲದೆ ಇರಬೇಕಾಗುತ್ತದೆ. ಆದರೆ ಪ್ರತಿಕ್ಷಣದಲ್ಲಿ ವೈಚಿತ್ರ್ಯವು ಕಂಡುಬರುತ್ತಿದೆ. ಆದ್ದರಿಂದ ಇದನ್ನು

ಅದೃಷ್ಟವನ್ನು ಒಪ್ಪಿಯೇ ಕೂಡಿಸಬೇಕು. ಹೀಗೆ ಅನ್ಯಥಾನುಪಪತ್ತಿಯ ಪ್ರಮಾಣದಿಂದ ಅದೃಷ್ಟವೇ ಕಾರಣವೆಂದು ತಿಳಿಯುತ್ತದೆ.

**ವಿವರಣೆ** - ರಾಗದ್ವೇಷಾದಿಗಳಲ್ಲಿರುವ ವೈಚಿತ್ರ್ಯಕ್ಕೆ ಅದೃಷ್ಟವನ್ನು ಮೊರೆಹೊಂದಬೇಕಾಗಿಲ್ಲ. ಅದಕ್ಕೆ ಮತ್ತೊಂದು ರಾಗದ್ವೇಷಗಳನ್ನೇ ಕಾರಣವೆಂದು ಹೇಳಿದರೆ ಏನು ತಪ್ಪು? ಎಂಬುದು ಇಲ್ಲಿ ಮಾಡುತ್ತಿರುವ ಪ್ರಶ್ನೆ. ಹಾಗೆ ಹೇಳಿದರೆ ಕೇವಲ ದೋಷ ವೈಚಿತ್ರ್ಯದಿಂದ ಜೀವಗಳಲ್ಲಿ ವೈಚಿತ್ರ್ಯವಿದೆ ಎಂದು ಒಪ್ಪಿದರೆ, ದೋಷ ವೈಚಿತ್ರ್ಯವಿಲ್ಲದಿದ್ದರೂ ಪ್ರತಿಕ್ಷಣದಲ್ಲಿ ಸುಖದುಃಖಾದಿಗಳಲ್ಲಿ ವೈಚಿತ್ರ್ಯವು ಅನುಭೂತವಾಗುತ್ತಿದೆ. ಇದು ಇಲ್ಲದೇ ಇರಬೇಕಾಗುತ್ತದೆ. ಪ್ರತಿಕ್ಷಣವೂ ಸುಖದುಃಖಗಳನ್ನು ಅನುಭವಿಸುತ್ತಲೇ ಇದ್ದಾರೆ. ಇದನ್ನು ಕೂಡಿಸಬೇಕೆಂದರೆ ಅದೃಷ್ಟವನ್ನೇ ಕಾರಣವೆಂದು ಹೇಳಬೇಕೇ ಹೊರತು ರಾಗದ್ವೇಷಗಳನ್ನು ಕಾರಣವೆಂದು ಹೇಳಲು ಸಾಧ್ಯವಿಲ್ಲ. ಆದ್ದರಿಂದ 'ಅದೃಷ್ಟವೈಚಿತ್ರ್ಯಂ ಅನ್ಯಥಾ ಸುಖದುಃಖಾದಿವೈಚಿತ್ರ್ಯಂ ನೋಪಪದ್ಯತೇ' ಎಂಬ ಅನ್ಯಥಾನುಪಪತ್ತಿ ಪ್ರಮಾಣದಿಂದ ಸುಖದುಃಖಾದಿಗಳಿಗೆ ಅದೃಷ್ಟವೇ ಕಾರಣವೆಂದು ನಿರ್ಣಯವಾಗುತ್ತದೆ. ತನ್ಮೂಲಕವಾಗಿ ಜೀವವೈಚಿತ್ರ್ಯಕ್ಕೂ ಕೂಡ ಅದೃಷ್ಟವೇ ಕಾರಣವೆಂದು ನಿರ್ಣಯವಾಗುತ್ತದೆ.

## ಬ್ರಹ್ಮಸೂತ್ರ

## सूत्रम् – प्रदेशादिति चेन्नान्तर्भावात् ।।

ಸ್ವರ್ಗಾದಿಪ್ರದೇಶ ಭೇದದಿಂದ ಜೀವರಲ್ಲಿ ವೈಚಿತ್ರ್ಯವಿದೆ ಎಂದು ಹೇಳಬಾರದು. ಪ್ರದೇಶವೈಚಿತ್ರ್ಯವು ಅದೃಷ್ಟವೈಚಿತ್ರ್ಯದಲ್ಲೇ ಅಂತರ್ಭಾವವನ್ನು ಪಡೆಯುತ್ತದೆ.

ಇಲ್ಲಿಗೆ ಶ್ರೀಮದ್‌ಕೃಷ್ಣದ್ವೈಪಾಯನರಿಂದ ರಚಿತವಾದ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ದ್ವಿತೀಯಾಧ್ಯಾಯದ ಮೂರನೆಯ ಪಾದವು ಮುಗಿಯಿತು ॥

॥ ಶ್ರೀ ಕೃಷ್ಣಾರ್ಪಣಮಸ್ತು ॥

## ಸೂತ್ರದೀಪಿಕಾ

**सूत्रदीपिका** – ननु **प्रदेशात्** स्वर्गभूम्यादिस्थानवैचित्र्यादेव सुरनरादिजन-वैचित्र्यमस्तु नादृष्टवैचित्र्यादिति **चेन्न** । कुतः? **अन्तर्भावात्** स्थानवैचित्र्ये किं कारणमिति कारणान्वेषणे तत्कारणस्यादृष्टवैचित्र्य एवान्तर्भावात् तद्रूपत्वात्। अत आवश्यकत्वाददृष्टवैचित्र्यमेव सुरनरादिवैचित्र्यनियामकमित्यर्थः ।।३।।

।। इति श्रीजगन्नाथयतिविरचितायां सूत्रदीपिकायां द्वितीयाध्यायस्य तृतीयः पादः ।।२।।३।।

ಪ್ರದೇಶಾತ್ = ಸ್ವರ್ಗ, ಭೂಮಿ ಮೊದಲಾದ ಪ್ರದೇಶದ ವೈಚಿತ್ರ್ಯದಿಂದಲೇ ದೇವತೆಗಳು, ಮನುಷ್ಯರು ಎಂಬ ವೈಚಿತ್ರ್ಯವಿರುತ್ತದೆ. ಹೊರತಾಗಿ, ಕೇವಲ ಅದೃಷ್ಟವೈಚಿತ್ರ್ಯದಿಂದಲೇ ಜೀವರಲ್ಲಿ ವೈಚಿತ್ರ್ಯವೆಂದು ಹೇಳಬಾರದು. ಇತಿ ಚೇನ್ನ = ಇದು ತಪ್ಪು. ಏಕೆಂದರೆ, ಅಂತರ್ಭಾವಾತ್ = ಸ್ಥಾನವೈಚಿತ್ರ್ಯದಲ್ಲಿ ಏನು ಕಾರಣ? ಎಂಬುದಾಗಿ ಕಾರಣದ ಅನ್ವೇಷಣೆ ಮಾಡಿದರೆ, ಆ ಕಾರಣವು ಅದೃಷ್ಟವೈಚಿತ್ರ್ಯದಲ್ಲಿ ಅಂತರ್ಭಾವವನ್ನು ಹೊಂದುತ್ತದೆ. ಆದ್ದರಿಂದ ಅವಶ್ಯವಾಗಿ ಅದೃಷ್ಟವೈಚಿತ್ರ್ಯವೇ ಜೀವರಲ್ಲಿರುವ ವೈಚಿತ್ರ್ಯಕ್ಕೆ ನಿಯಾಮಕವೆಂದು ತಿಳಿಯಬೇಕು.

ಇಲ್ಲಿಗೆ ಶ್ರೀ ಜಗನ್ನಾಥಯತಿಗಳಿಂದ ರಚಿತವಾದ ಸೂತ್ರದೀಪಿಕೆಯಲ್ಲಿ ದ್ವಿತೀಯಾಧ್ಯಾಯದ ಮೂರನೆಯ ಪಾದವು ಸಮಾಪ್ತವಾಯಿತು.

**ಪರಿಪೂರ್ಣಚಂದ್ರಿಕಾ**

## ಬ್ರಹ್ಮಸೂತ್ರಭಾಷ್ಯ

**भाष्यम् – ।। प्रदेशादिति चेन्नान्तर्भावात् ।।३।।**

**न स्वर्गनरकभूम्यादिप्रदेशविशेषाद् वैचित्र्यम्, तत्प्राप्तेरप्यदृष्टापेक्षत्वात्। एकदेशस्थितानामेव वैचित्र्यदर्शनाच्च ।।३।।**

**।। इति अदृष्टाधिकरणम् ।। १९ ।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये द्वितीयस्याध्यास्य तृतीयः पादः ।। ३ ।।**

ಅನುವಾದ - ಕೇವಲ ಸ್ವರ್ಗ, ನರಕ, ಭೂಮಿ ಎಂಬ ಪ್ರದೇಶದ ಭೇದದಿಂದ ದೇವತೆಗಳು ಅಸುರರು ಮನುಷ್ಯರು ಎಂಬ ಭೇದವನ್ನು ಸಮರ್ಥನೆ ಮಾಡುವುದು ತಪ್ಪು. ಏಕೆಂದರೆ ಆ ಪ್ರದೇಶಗಳು ದೊರಕಬೇಕೆಂದರೆ ಅದಕ್ಕೆ ಕಾರಣವಾದ ಅದೃಷ್ಟವು ಇರಬೇಕು. ಮತ್ತು ಆ ಪ್ರದೇಶದಲ್ಲಿ ಇರುವವರಲ್ಲಿಯೂ ಪರಸ್ಪರ ವೈಲಕ್ಷಣ್ಯವಿರುತ್ತದೆ.

ಪ್ರತಿಪದಾರ್ಥ -- ಸ್ವರ್ಗನರಕಭೂಮ್ಯಾದಿಪ್ರದೇಶವಿಶೇಷಾತ್ = ಸ್ವರ್ಗ, ಭೂಮಿ, ನರಕ ಮೊದಲಾದ ಪ್ರದೇಶದ ಭೇದದಿಂದ, ವೈಚಿತ್ರ್ಯಮ್ = ದೇವತೆಗಳು ರಾಕ್ಷಸರು ಮನುಷ್ಯರು ಎಂಬ ವೈಚಿತ್ರ್ಯವನ್ನು ಸಮರ್ಥನೆ ಮಾಡಬಾರದು. ತತ್ ಪ್ರಾಪ್ತೇಃ = ಆ ಪ್ರದೇಶಗಳು ದೊರಕಬೇಕೆಂದರೆ, ಅದೃಷ್ಟಾಪೇಕ್ಷತ್ವಾತ್ = ಅದೃಷ್ಟವು ಬೇಕೇ ಬೇಕು. ಏಕದೇಶಸ್ಥಿತಾನಾಮೇವ = ಒಂದೇ ಪ್ರದೇಶದಲ್ಲಿ ಇರುವವರಲ್ಲೂ, ವೈಚಿತ್ರ್ಯದರ್ಶನಾಚ್ಚ = ಒಬ್ಬೊಬ್ಬರ ವೈಚಿತ್ರ್ಯವು ಒಂದೊಂದು ರೀತಿಯಲ್ಲಿದೆ.

ಅದೃಷ್ಟಾಧಿಕರಣವು ಮುಗಿಯಿತು.

ಇಲ್ಲಿಗೆ ಶ್ರೀಮದಾನಂದತೀರ್ಥಭಗತ್ಪಾದಚಾರ್ಯ ವಿರಚಿತವಾದ ಬ್ರಹ್ಮಸೂತ್ರಭಾಷ್ಯದಲ್ಲಿ ಎರಡನೇ ಅಧ್ಯಾಯದ ಮೂರನೇ ಪಾದವು ಸಮಾಪ್ತವಾಯಿತು.

## ತತ್ವಪ್ರಕಾಶಿಕಾ

**तत्वप्रकाशिका – स्वर्गस्थाः सुरा भूमिष्ठाः नरा इत्यादिस्थानवैचित्र्यादेव वैचित्र्योपपत्तेः किमदृष्टेनेत्याशङ्कां परिहरत्सूत्रं पठित्वा व्याचष्टे – प्रदेशादिति ।। न स्थानवैचित्र्यमेव वैचित्र्ये हेतुः । निष्कारणस्थानवैचित्र्यस्यैवानुपपत्त्या तत्कारणान्वेषणेऽदृष्टस्यैवाङ्गीकार्यत्वादिति भावः ।**

ದೇವತೆಗಳು ಸ್ವರ್ಗದಲ್ಲಿದ್ದಾರೆ. ಮನುಷ್ಯರು ಭೂಮಿಯಲ್ಲಿದ್ದಾರೆ. ಹೀಗೆ ಸ್ಥಾನದಲ್ಲಿರುವ ವೈಚಿತ್ರ್ಯದಿಂದ ಇವರು ದೇವತೆಗಳು, ಇವರು ಮನುಷ್ಯರು ಎಂದು ವ್ಯವಸ್ಥೆಯನ್ನು ಮಾಡಬಹುದು. ಹೀಗಿರುವಾಗ ಅದೃಷ್ಟವನ್ನೇಕೆ ಕಲ್ಪನೆ ಮಾಡಬೇಕು ? ಎಂಬ ಆಶಂಕೆಯನ್ನು ಪರಿಹಾರ ಮಾಡುವ

ಸೂತ್ರವನ್ನು 'ಪ್ರದೇಶಾತ್' ಇತ್ಯಾದಿಯಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಕೇವಲ ಸ್ಥಾನವೈಚಿತ್ರ್ಯವು ಪ್ರತಿಬಿಂಬರಲ್ಲಿರುವ ವೈಚಿತ್ರ್ಯಕ್ಕೆ ಕಾರಣವಲ್ಲ. ಹಾಗೆ ಹೇಳಿದರೆ ನಿಷ್ಕಾರಣವಾಗಿ ಸ್ಥಾನವೈಚಿತ್ರ್ಯವೇ ಅನುಪಪನ್ನವಾಗುವುದರಿಂದ ಅದಕ್ಕೊಂದು ಕಾರಣವನ್ನು ಅನ್ವೇಷಣೆ ಮಾಡಿದರೆ ಅದೃಷ್ಟವನ್ನೇ ಒಪ್ಪಬೇಕಾಗುತ್ತದೆ ಎಂಬುದು ಸಿದ್ಧಾಂತದ ಅಭಿಪ್ರಾಯ.

ವಿವರಣೆ - ಸ್ವರ್ಗಾದಿ ಪ್ರದೇಶಭೇದದಿಂದ ಜೀವರಲ್ಲಿ ವೈಚಿತ್ರ್ಯಭೇದವನ್ನು ಹೇಳುವುದು ಸರಿಯಲ್ಲ. ಏಕೆಂದರೆ ಆ ಪ್ರದೇಶವಾದರೂ ಜೀವರಿಗೆ ಏಕೆ ದೊರಕಿತು ? ಎಂದು ಪ್ರಶ್ನೆ ಮಾಡಿದರೆ ಅದೃಷ್ಟವನ್ನೇ ಕಾರಣವೆಂದು ಹೇಳಬೇಕು. ಯಾರೊಬ್ಬರಿಗೂ ಯಾವುದೇ ಕಾರಣವಿಲ್ಲದೇ ಸ್ವರ್ಗಪ್ರದೇಶವಾಗಲಿ, ಭೂಪ್ರದೇಶವಾಗಲಿ ದೊರಕಲು ಸಾಧ್ಯವಿಲ್ಲ. ಆದ್ದರಿಂದ ಅದೃಷ್ಟವನ್ನೊಪ್ಪದೇ ಜೀವವೈಚಿತ್ರ್ಯವನ್ನು ಕೂಡಿಸಲು ಸಾಧ್ಯವಾಗುವುದಿಲ್ಲ.

**ತत्वप्रकाशिका – युक्त्यन्तरमाह – एकेति ।। एवं युक्तेरविरुद्धत्वादन्या श्रुतिर्निरुपाधिप्रतिबिम्बत्वादिविषयेति द्रष्टव्यम् । तदेवं श्रुत्यविरोधेन जीवस्य प्रतिबिम्बत्वसिद्धेर्युक्तो जगत्करणे नारायणे श्रुतिसमन्वय इति सिद्धम् ।।**

ಇದೇ ವಿಷಯದಲ್ಲಿ ಮತ್ತೊಂದು ಯುಕ್ತಿಯನ್ನು 'ಏಕ' ಇತ್ಯಾದಿ ಭಾಷ್ಯದಿಂದ ಹೇಳುತ್ತಿದ್ದಾರೆ. ಹೀಗೆ ಯಾವುದೇ ಯುಕ್ತಿಗಳ ವಿರೋಧವು ಇರುವುದಿಲ್ಲ. ಮತ್ತೊಂದು ಶ್ರುತಿಯು ನಿರುಪಾಧಿಕವಾದ ಪ್ರತಿಬಿಂಬವಿಷಯಕವೇ ಆಗಿದೆ ಎಂದು ತಿಳಿಯಬೇಕು.

ಹೀಗೆ ಶ್ರುತಿಯ ವಿರೋಧವಿಲ್ಲದ್ದರಿಂದ ಜೀವನು ಪರಮಾತ್ಮನ ಪ್ರತಿಬಿಂಬನಾಗಿದ್ದಾನೆಂಬ ಪ್ರಮೇಯವು ಸಿದ್ಧವಾಯಿತು. ಆದ್ದರಿಂದ ಜಗತ್ಕಾರಣನಾದ ನಾರಾಯಣನಲ್ಲಿ ಶ್ರುತಿಸಮನ್ವಯವು ಯುಕ್ತವಾಗಿದೆ ಎಂಬ ಪ್ರಮೇಯವು ಸಾಧಿಸಲ್ಪಟ್ಟಿತು.

ವಿವರಣೆ - ಜೀವರಲ್ಲಿರುವ ವೈಚಿತ್ರ್ಯವು ಅದೃಷ್ಟವೈಚಿತ್ರ್ಯದಿಂದಲೇ ಯುಕ್ತವಾಗುತ್ತದೆ. ಆದ್ದರಿಂದ ಜೀವರು ಪರಮಾತ್ಮನ ಅಂಶರೇ ಆಗಿದ್ದಾರೆ, ಅಂಶರಲ್ಲವೆಂದು ಹೇಳಲು ಸಾಧ್ಯವಿಲ್ಲ. ಹಾಗಾಗಿ ಜೀವರು ಅಂಶರಲ್ಲವೆಂದು ಹೇಳುವ ಅನುಮಾನದಿಂದ ಪರಿಕಲ್ಪನೆ ಮಾಡಲ್ಪಟ್ಟ ಶ್ರುತಿಯು ಯುಕ್ತಿಯ ಬೆಂಬಲವನ್ನು ಹೊಂದಿರುವುದಿಲ್ಲ. ಪರಮಾತ್ಮನಿಗೆ ಜೀವನು ನಿರುಪಾಧಿಕ ಪ್ರತಿಬಿಂಬನಾಗಿದ್ದಾನೆ ಎಂಬ ಪ್ರಮೇಯವು ಸಿದ್ಧವಾಯಿತು.

ಹೀಗೆ ತೃತೀಯ ಪಾದದಲ್ಲಿ ಶ್ರುತಿಗಳಲ್ಲಿರುವ ಪರಸ್ಪರ ವಿರೋಧವನ್ನೆಲ್ಲಾ ಪರಿಹಾರ ಮಾಡಿದಂತಾಯಿತು. ಆದ್ದರಿಂದ ಜಗತ್ಕಾರಣನಾದ ನಾರಾಯಣನಲ್ಲಿ ಶ್ರುತಿಸಮನ್ವಯ ಮಾಡಲು ಯಾವುದೇ ಆತಂಕವು ಇರುವುದಿಲ್ಲ.

ಇಲ್ಲಿಗೆ ಅದೃಷ್ಟಾಧಿಕರಣವು ಮುಗಿಯಿತು

ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ
ಶ್ರೀಮದ್ಬ್ರಹ್ಮಸೂತ್ರಭಾಷ್ಯದ ಟೀಕೆಯಲ್ಲಿ ಶ್ರೀಮಜ್ಜಯತೀರ್ಥಮುನಿಗಳಿಂದ ವಿರಚಿತವಾದ
ತತ್ವಪ್ರಕಾಶಿಕೆಯಲ್ಲಿ ಎರಡನೇ ಅಧ್ಯಾಯದ ಮೂರನೇ ಪಾದವು ಸಮಾಪ್ತವಾಯಿತು.

॥ ಶ್ರೀಕೃಷ್ಣಾರ್ಪಣಮಸ್ತು ॥

ಪರಿಪೂರ್ಣಚಂದ್ರಿಕಾ

ಅದೃಷ್ಟಾಧಿಕರಣ

(೨-೩-೧೯)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अदृष्टाधिकरणम्

### ಜೀವಾತ್ಮನು ಪರಮಾತ್ಮನ ಪ್ರತಿಬಿಂಬ

**।। अदृष्टानियमात् ।। अंशत्वेऽपि जीवस्यावतारसाम्यं नेत्यत्र हेत्वन्तरत्वेन पूर्वोक्तं प्रतिबिम्बत्वमाक्षिप्य समाधीयत इति सङ्गतिः ।**

ಹಿಂದಿನ ಅಧಿಕರಣದಲ್ಲಿ ಜೀವನು ಪರಮಾತ್ಮನ ಅಂಶನಾಗಿದ್ದಾನೆ ಎಂದು ಸಮರ್ಥನೆ ಮಾಡಲಾಯಿತು. ಹಾಗಾದರೆ ಮತ್ಸ್ಯಾದ್ಯವತಾರಗಳು ಹೇಗೆ ಪರಮಾತ್ಮನ ಅಂಶವೋ, ಅದರಂತೆ ಜೀವನೂ ಕೂಡ ಪರಮಾತ್ಮನ ಅಂಶನೆಂದಾಯಿತು. ಆಗ ಅವತಾರಸಾಮ್ಯವು ಜೀವನಿಗೆ ಬಂದಿತು ಅಲ್ಲವೇ? ಎಂಬ ಪ್ರಶ್ನೆಗೆ ಅನೇಕ ಬಗೆಯಲ್ಲಿ ಸಮಾಧಾನಗಳನ್ನು ಹೇಳಲಾಯಿತು. ಅವುಗಳ ಮಧ್ಯದಲ್ಲಿ ಜೀವನು ಪರಮಾತ್ಮನ ಪ್ರತಿಬಿಂಬನಾಗಿದ್ದಾನೆ. ಆದರೆ ಮತ್ಸ್ಯಾದ್ಯವತಾರಗಳು ಪರಮಾತ್ಮನ ಪ್ರತಿಬಿಂಬವಲ್ಲದ್ದರಿಂದ ಅವತಾರಸಾಮ್ಯವು ಬರುವುದಿಲ್ಲ ಎಂಬುದು ಒಂದು ಹೇತು. ಇದನ್ನು ಈಗ ಆಕ್ಷೇಪ ಮಾಡಿ ಸಮಾಧಾನವನ್ನು ನೀಡಲಾಗುತ್ತಿದೆ. ಆದ್ದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಸಂಗತಿ ಇರುತ್ತದೆ.

**अत्र जीवस्य प्रतिबिम्बत्वश्रुतिः किमेकब्रह्मप्रतिबिम्बत्वे वैचित्र्यायोग इति युक्त्यनुगृहीतया प्रतिबिम्बत्वाभावश्रुत्या बाधितोत नेति चिन्ता ।**

ಬಿಂಬನಾದ ಬ್ರಹ್ಮನು ಒಬ್ಬನೇ ಆಗಿದ್ದಾನೆ. ಪ್ರತಿಬಿಂಬರಾದ ಜೀವರುಗಳು ಅನಂತ ಸಂಖ್ಯೆಯಲ್ಲಿದ್ದಾರೆ. ಮತ್ತು ಪ್ರತಿಯೊಬ್ಬರಲ್ಲೂ ಕೂಡ ವೈಚಿತ್ರ್ಯವಿದೆ. ಇದು ಹೇಗೆ ಸಾಧ್ಯ? ಪ್ರತಿಬಿಂಬತ್ವಪ್ರತಿಪಾದಕವಾದ ಶ್ರುತಿಯು ಒಬ್ಬ ಬ್ರಹ್ಮನೇ ಬಿಂಬನಾಗಿದ್ದಾನೆ ಎಂದು ಹೇಳುವುದಾದರೆ ಜೀವರುಗಳಲ್ಲಿ ವೈಚಿತ್ರ್ಯವೇ ಕೂಡುವುದಿಲ್ಲ. ಈ ಯುಕ್ತಿಯಿಂದ ಅನುಗೃಹೀತವಾದ ಪ್ರತಿಬಿಂಬತ್ವಾಭಾವವನ್ನು ಪ್ರತಿಪಾದನೆ ಮಾಡುವ ಶ್ರುತಿಯಿಂದ ಪ್ರತಿಬಿಂಬತ್ವ ಪ್ರತಿಪಾದಕವಾದ ಶ್ರುತಿಯು ಬಾಧಿತವಾಗುತ್ತದೋ ಅಥವಾ ಬಾಧಿತವಾಗುವುದಿಲ್ಲವೋ? ಎಂಬುದು ಪ್ರಧಾನ ಸಂಶಯ.

**(अत्र श्रुतिसमन्वयेनोक्तं ब्रह्मणःस्रष्टृत्वादिकमयुक्तमुत नेति चिन्ता । तदर्थं श्रुतिरप्रमाणमुत नेति । तदर्थं जीवस्य प्रतिविम्बत्वश्रुतिः किमेकब्रह्मप्रतिबिम्बत्वे वैचित्र्यायोग इति युक्त्यनुगृहीतया प्रतिबिम्बत्वाभावश्रुत्या बाधितोत प्रतिबिम्बत्वाभावश्रुतेः सोपाधिकप्रतिबिम्बत्वाभावविषयत्वादबाधितेति)**

ವಿವರವಾದ ಸಂಶಯ ಪರಂಪರೆ ಹೀಗಿದೆ – ಶ್ರುತಿಸಮನ್ವಯದ ಮೂಲಕ ಬ್ರಹ್ಮನಲ್ಲಿ ಸ್ರಷ್ಟೃತ್ವಾದಿಗಳನ್ನು ಸಮರ್ಥನೆ ಮಾಡಲಾಯಿತು. ಇದು ಅಯುಕ್ತವೋ ಅಥವಾ ಯುಕ್ತವೋ? ಎಂಬುದು ಪ್ರಧಾನ ಸಂಶಯ. ಇದಕ್ಕಾಗಿ ಶ್ರುತಿಯು ಅಪ್ರಮಾಣವೋ ಅಥವಾ ಅಪ್ರಮಾಣವಲ್ಲವೋ? ಎಂಬ ಸಂಶಯವು ಪರಿಹಾರವಾಗಬೇಕು. ಅದಕ್ಕಾಗಿ ಜೀವನಿಗೆ ಪ್ರತಿಬಿಂಬತ್ವಶ್ರುತಿಯು ಒಬ್ಬನೇ ಬ್ರಹ್ಮನ ಪ್ರತಿಬಿಂಬತ್ವವನ್ನು ಪ್ರತಿಪಾದನೆ ಮಾಡುತ್ತದೆಂದು ಹೇಳಿದಲ್ಲಿ ವೈಚಿತ್ರ್ಯವು ಕೂಡುವುದಿಲ್ಲ ಎಂಬ ಯುಕ್ತ್ಯನುಗೃಹೀತವಾದ ಪ್ರತಿಬಿಂಬತ್ವಾಭಾವಪ್ರತಿಪಾದಕವಾದ ಶ್ರುತಿಯಿಂದ ಬಾಧಿತವೋ? ಅಥವಾ ಪ್ರತಿಬಿಂಬತ್ವಾಭಾವಶ್ರುತಿಗೆ ಉಪಾಧಿ ಸಹಿತವಾದ ಪ್ರತಿಬಿಂಬತ್ವಾಭಾವ ವಿಷಯತ್ವವನ್ನು ಪ್ರತಿಪಾದನೆ ಮಾಡುವ ಮೂಲಕ ಬಾಧದೋಷವು ಬರುವುದಿಲ್ಲವೋ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थं बिम्बस्यैकत्वेऽपि स्वरूपोपाधिवैचित्र्यात् प्रतिबिम्बवैचित्र्यमयुक्तमुत नेति । (तदर्थं स्वरूपस्योपाधित्वमयुक्तमुत नेति ।) ।।**

ಇದರ ಪರಿಹಾರಕ್ಕಾಗಿ ಬಿಂಬನು ಒಬ್ಬನೇ ಆದರೆ ಸ್ವರೂಪೋಪಾಧಿಯ ವೈಚಿತ್ರ್ಯದಿಂದ ಪ್ರತಿಬಿಂಬದಲ್ಲಿ ವೈಚಿತ್ರ್ಯವು ಅಯುಕ್ತವಾಗುತ್ತದೋ ಅಥವಾ ಅಯುಕ್ತವಾಗುವುದಿಲ್ಲವೋ? ಎಂಬ ಸಂಶಯವು ಪರಿಹಾರವಾಗಬೇಕು. ಅಥವಾ ಸ್ವರೂಪತ್ವಕ್ಕೆ ಉಪಾಧಿಯು ಅಯುಕ್ತವೋ ಅಥವಾ ಅಲ್ಲವೋ? ಎಂಬ ಸಂಶಯವು ಪರಿಹಾರವಾಗಬೇಕು.

**श्रुत्यन्तरमनुमीयत इति ।। ''न सम्बन्धः'' इत्यतीताधिकरणोदाहृतं बिम्बप्रतिबिम्बभावरूपसम्बन्धनिषेधकं श्रुत्यन्तरमिह भाष्ये सन्देहबीजत्वेनोदाहृतमित्यनुमीयते । सन्देहबीजत्वेन श्रुतिविगानोक्तेः पूर्वाधिकरणभाष्येषु प्रकृतत्वादित्यर्थः।।**

ಹಿಂದಿನ ಅಧಿಕರಣದಲ್ಲಿ ಬಿಂಬಪ್ರತಿಬಿಂಬಭಾವ ಎಂಬ ಸಂಬಂಧವನ್ನು ನಿಷೇಧ ಮಾಡುವ 'ನ ಸಂಬಂಧಃ' ಎಂಬ ಶ್ರುತಿಯನ್ನು ಈ ಅಧಿಕರಣಭಾಷ್ಯದಲ್ಲಿ ಸಂದೇಹಬೀಜತ್ವೇನ ಉದಾಹರಿಸಲ್ಪಟ್ಟಿದೆ ಎಂಬುದಾಗಿ ಅನುಮಾನ ಮಾಡುತ್ತೇವೆ ಎಂದು 'ಶ್ರುತ್ಯಂತರಮನುಮೀಯತೇ' ಎಂಬುದರ ಅಭಿಪ್ರಾಯವಾಗಿದೆ. ಹಿಂದಿನ ಅಧಿಕರಣದ ಭಾಷ್ಯದಲ್ಲಿ ಪ್ರಕೃತವಾಗಿದ್ದರಿಂದ ಸಂದೇಹಬೀಜತ್ವೇನ ಶ್ರುತಿವಿಗಾನವನ್ನು ಹೇಳಲಾಗಿದೆ.

**सिद्धान्तयदिति ।। अयं भावः । युक्तमेव जीवानां ब्रह्मप्रतिबिम्बत्वम् । जीवतद्गुणयोरभेदेऽपि विशेषबलाद्गुणगुणिभाववत्स्वरूपभेदयोश्चैतन्याभेदेऽपि विशेष-**

**णविशेष्यभाववत्समवायस्य सम्बन्धिभाववत्ताभेदेऽप्युपाधिप्रतिबिम्बभावस्यापि सम्भवात् ।**

'ಸಿದ್ಧಾಂತಯತ್' ಇತ್ಯಾದಿ ಟೀಕೆಯಲ್ಲಿ ಈ ಅಧಿಕರಣದ ಸಿದ್ಧಾಂತವನ್ನು ಸ್ಥಾಪನೆ ಮಾಡಿದ್ದಾರೆ. ಅದರ ಅಭಿಪ್ರಾಯ ಹೀಗಿದೆ – ಜೀವರು ಬ್ರಹ್ಮನ ಪ್ರತಿಬಿಂಬರು ಆಗುತ್ತಾರೆಂಬುದು ಯುಕ್ತವೇ ಆಗಿದೆ. ಜೀವ ಹಾಗೂ ಅವರ ಗುಣಗಳಿಗೆ ಅಭೇದವಿದ್ದರೂ ಕೂಡ ವಿಶೇಷ ಬಲದಿಂದ ಗುಣಗುಣಿಭಾವವು ಯುಕ್ತವಾಗುತ್ತದೆ. ಜೀವರ ಸ್ವರೂಪ ಎಂದು ಹೇಳಿದಾಗ ಜೀವನಿಗೂ ಸ್ವರೂಪಕ್ಕೂ ಅಭೇದವಿದ್ದರೂ ಕೂಡ ವಿಶೇಷಣವಿಶೇಷ್ಯಭಾವವು ಯುಕ್ತವಾಗುತ್ತದೆ. ಜೀವರ ಭೇದ ಎಂದು ಹೇಳಿದಾಗ ಜೀವರಿಗೂ ಭೇದಕ್ಕೂ ಅಭೇದವಿದ್ದರೂ ಕೂಡ ವಿಶೇಷಣವಿಶೇಷ್ಯಭಾವವು ಯುಕ್ತವಾಗುತ್ತದೆ. ಸಮವಾಯಕ್ಕೆ ಸಂಬಂಧಿಭಾವವು ಅಭೇದವಿದ್ದರೂ ಯುಕ್ತವಾಗುತ್ತದೆ. ಈ ಎಲ್ಲ ದೃಷ್ಟಾಂತಗಳಂತೆ ಉಪಾಧಿ ಹಾಗೂ ಪ್ರತಿಬಿಂಬಗಳಿಗೆ ಅಭೇದವಿದ್ದರೂ ಕೂಡ ಉಪಾಧಿ-ಪ್ರತಿಬಿಂಬಭಾವವು ಯುಕ್ತವಾಗುತ್ತದೆ.

**उक्तं हि –**

**जीवोपाधिर्द्विधा प्रोक्तः स्वरूपं बाह्यमेव च ।**
**बाह्योपाधिर्लयं याति मुक्तावन्यस्य तु स्थितिः ।। इति ।**

ಇದನ್ನೇ ಹೀಗೆ ಹೇಳಲಾಗಿದೆ –

ಜೀವೋಪಾಧಿರ್ದ್ವಿಧಾ ಪ್ರೋಕ್ತಃ ಸ್ವರೂಪಂ ಬಾಹ್ಯಮೇವ ಚ ।
ಬಾಹ್ಯೋಪಾಧಿರ್ಲಯಂ ಯಾತಿ ಮುಕ್ತಾವನ್ಯಸ್ಯ ತು ಸ್ಥಿತಿಃ ॥

ಸ್ವರೂಪೋಪಾಧಿ, ಬಾಹ್ಯೋಪಾಧಿ ಎಂಬುದಾಗಿ ಜೀವರುಗಳಿಗೆ ಎರಡು ಬಗೆಯ ಉಪಾಧಿಗಳಿವೆ. ಬಾಹ್ಯೋಪಾಧಿಯು ಲಯವನ್ನು ಹೊಂದುತ್ತದೆ, ಸ್ವರೂಪೊಪಾಧಿಯು ಮುಕ್ತಿಯಲ್ಲಿಯೂ ಇರುತ್ತದೆ ಎಂದು.

**अन्यथोद्भूतरूप विशेषवद्द्रव्यस्यैव बिम्बग्राहित्वादविद्यान्तःकरणादेस्तन्न स्यात्। अचाक्षुषस्य च द्रव्यस्याप्रतिबिम्बनाद्ब्रह्मणस्तन्न स्यात् ।**

ಅಭೇದವಿದ್ದರೂ ಕೂಡ ಉಪಾಧಿ ಪ್ರತಿಬಿಂಬಭಾವವು ಯುಕ್ತವಾಗುತ್ತದೆಂದು ಒಪ್ಪದಿದ್ದರೆ ಅದ್ವೈತಿಗಳಿಗೂ ಕೂಡ ಅವಿದ್ಯೆ ಹಾಗೂ ಅಂತಃಕರಣಗಳನ್ನು ಉಪಾಧಿ ಎಂದು ಸಮರ್ಥಿಸಲು ಸಾಧ್ಯವಾಗುವುದಿಲ್ಲ. ಏಕೆಂದರೆ ಉದ್ಭೂತರೂಪವುಳ್ಳ ದ್ರವ್ಯವೇ ಉಪಾಧಿಯಾಗಿರುವುದು ಲೋಕದಲ್ಲಿ ಕಂಡಿದೆ. ಅವಿದ್ಯೆ ಹಾಗೂ ಅಂತಃಕರಣಗಳು ಉದ್ಭೂತರೂಪವುಳ್ಳವುಗಳಾಗಿಲ್ಲ. ಮತ್ತು ಚಾಕ್ಷುಷವಾದ ದ್ರವ್ಯವೇ ಪ್ರತಿಫಲವನ್ನು ಹೊಂದುತ್ತದೆ. ಬ್ರಹ್ಮನು ಚಾಕ್ಷುಷನಲ್ಲದ ಕಾರಣ ಅವನಲ್ಲಿ ಪ್ರತಿಬಿಂಬನವೂ ಕೂಡ ಅಯುಕ್ತವಾಗಬೇಕಾಗುತ್ತದೆ.

**दृश्यन्ते च प्रतिध्वनिप्रतिसूर्यछायापुरुषेन्द्रचापादीनि भिन्नोपाधिरहितान्यपि-प्रतिबिम्बानि । श्रुतिश्च ''सोपाधिरनुपाधिश्च प्रतिबिम्बो द्विधेयते ।**

**जीवःपरस्यानुपाधिरिन्द्रचापो यथा रवेः'' इति । नहि प्रतिध्वन्यादेःस्वधर्माधायक उपाधिरस्ति ।**

ಪ್ರತಿಬಿಂಬಕ್ಕಿಂತ ಅತಿರಿಕ್ತವಾದ ಉಪಾಧಿಯು ಕೆಲವೆಡೆ ಬೇಕಾಗಿರುವುದಿಲ್ಲ ಎನ್ನಲು ಲೋಕದಲ್ಲಿಯೂ ಕೂಡ ದೃಷ್ಟಾಂತ ಕಂಡಿದೆ. ಪ್ರತಿಧ್ವನಿ, ಪ್ರತಿಸೂರ್ಯ, ಛಾಯಾಪುರುಷ, ಇಂದ್ರಚಾಪ ಈ ಎಲ್ಲಾ ಸ್ಥಳಗಳಲ್ಲಿ ಭಿನ್ನವಾದ ಉಪಾಧಿಗಳೇ ಇಲ್ಲ. ಆದರೂ ಕೂಡ ಇವುಗಳು ಪ್ರತಿಬಿಂಬಿತವಾಗುತ್ತಿವೆ. ಈ ವಿಷಯದಲ್ಲಿ ಶ್ರುತಿಯೂ ಕೂಡ ಪ್ರಮಾಣವಾಗಿದೆ.

ಸೋಪಾಧಿರನುಪಾಧಿಶ್ಚ ಪ್ರತಿಬಿಂಬೋ ದ್ವಿಧೇಯತೇ ।
ಜೀವಃ ಪರಸ್ಯಾನುಪಾಧಿರಿಂದ್ರಚಾಪೋ ಯಥಾ ರವೇಃ ॥

ಹೇಗೆ ರವಿಗೆ ಇಂದ್ರಚಾಪವು ಪ್ರತಿಬಿಂಬವೋ ಹಾಗೆ ಜೀವನೂ ಕೂಡ ಪರಮಾತ್ಮನ ಪ್ರತಿಬಿಂಬನಾಗುತ್ತಾನೆ. ಪ್ರತಿಬಿಂಬವು ಉಪಾಧಿಯುಳ್ಳದ್ದು ಹಾಗೂ ಉಪಾಧಿ ಇಲ್ಲದ್ದು ಎಂಬುದಾಗಿ ಎರಡು ಬಗೆಯಲ್ಲಿದೆ. ಪ್ರಕೃತ ಅನುಪಾಧಿಯಾದ ಪ್ರತಿಬಿಂಬವೆಂದು ಇಲ್ಲಿ ತಿಳಿಯಬೇಕು. ಪ್ರತಿಧ್ವನ್ಯಾದಿಗಳಲ್ಲಿ ಸ್ವಧರ್ಮಾಧಾಯಕವಾದ ಮತ್ತೊಂದು ಉಪಾಧಿ ಇರುವುದಿಲ್ಲವಷ್ಟೆ?

**नच प्रतिबिम्बेने-वोपाधिनापि निरूप्यत्वं नियतम् । प्रतिध्वन्यादावदर्शनात्। जीवस्य प्रतिबिम्बत्व निषेधश्रुतिस्तु भिन्नोपाध्यायत्तत्वादिरूप प्रतिबिम्बत्व-निषेधपरा।**

ಪ್ರತಿಬಿಂಬದಂತೆ ಉಪಾಧಿಯಿಂದಲೂ ಕೂಡ ನಿರೂಪ್ಯತ್ವವು ನಿಯತವಲ್ಲ. ಪ್ರತಿಧ್ವನ್ಯಾದಿಗಳಲ್ಲಿ ಇದು ಕಂಡಿಲ್ಲ. ಜೀವನಿಗೆ ಪ್ರತಿಬಿಂಬತ್ವವನ್ನು ನಿಷೇಧ ಮಾಡುವ ಶ್ರುತಿಯು ಭಿನ್ನೋಪಾಧಿ ನಿಮಿತ್ತಕವಾದ ಪ್ರತಿಬಿಂಬತ್ವವನ್ನು ನಿಷೇಧ ಮಾಡಲು ಹೊರಟಿದೆ.

**वक्ष्यति च भाष्यकारः ''अत एव चोपमासूर्यकादिवत्'' इत्यत्र तदधीनत्वतत्सादृश्याभ्यामेव जीवस्य सूर्यकाद्युपमा । न तूपाध्यायत्तत्वादिनेति ।**

ಇದನ್ನು ಭಾಷ್ಯಕಾರರು 'ಅತ ಏವ ಚೋಪಮಾರ್ಸೂ ಸೂರ್ಯಕಾದಿವತ್' ಎಂಬ ಸೂತ್ರದಲ್ಲಿ ಹೇಳುವವರಿದ್ದಾರೆ. ತದಧೀನತ್ವ ಹಾಗೂ ತದ್ಸಾದೃಶ್ಯದಿಂದಲೇ ಜೀವನಿಗೆ ಪ್ರತಿಸೂರ್ಯಾದಿಗಳ ಉಪಮೆಯನ್ನು ನೀಡಿದ್ದು, ಹೊರತು ಉಪಾಧಿಯ ಅಧೀನವಾಗಿದೆ ಎಂಬ ಕಾರಣದಿಂದಲ್ಲ ಎಂದು.

**बिम्बप्रतिबिम्बयोर्भेदश्च न दर्पणे मम मुखं किन्तु मम प्रतिमुखमेवेत्यादि-प्रत्यक्षेण, कस्तूरीगुडाग्निपर्वततत्प्रतिबिम्बानां सौरभमाधुर्यौष्ण्यगुरुत्वतदभावात्मक-वैधर्म्यरूपेणानुमानेन, ''यथैषा पुरुषे छाया एतस्मिन्नेतदाततम्'' इत्यादिश्रुत्या ''तवैव सदृशश्चायं बिम्बस्य प्रतिबिम्बवत्'' ''बहवस्सूर्यका यद्वत्सूर्यस्य सदृशा जले । एवमेवात्मका लोके परात्मसदृशा मताः''इत्यादिस्मृत्या च सिद्धः ।**

ಅದೃಷ್ಟಾಧಿಕರಣ (೨-೩-೧೯)

ಬಿಂಬ ಪ್ರತಿಬಿಂಬಗಳಿಗೆ ಭೇದವಿದೆ ಎನ್ನಲು ಪ್ರತ್ಯಕ್ಷ, ಅನುಮಾನ, ಶ್ರುತಿ ಹಾಗೂ ಸ್ಮೃತಿಗಳು ಪ್ರಮಾಣವಾಗಿವೆ. ಪ್ರತ್ಯಕ್ಷಪ್ರಮಾಣ ಹೀಗಿದೆ – ದರ್ಪಣದಲ್ಲಿ ನನ್ನ ಮುಖವಿಲ್ಲ. ನನ್ನ ಮುಖ ನನ್ನ ಕಂಠದಲ್ಲೇ ನಿಂತಿದೆ. ದರ್ಪಣದಲ್ಲಿ ಕಾಣಿಸುತ್ತಿರುವುದು ಕೇವಲ ನನ್ನ ಪ್ರತಿಬಿಂಬ ಎಂಬುದಾಗಿ ಎಲ್ಲರೂ ವ್ಯವಹರಿಸುತ್ತಾರೆ. ಆದ್ದರಿಂದ ಬಿಂಬವೇ ಬೇರೆ, ಪ್ರತಿಬಿಂಬವೇ ಬೇರೆ ಎಂಬುದು ಪ್ರತ್ಯಕ್ಷಸಿದ್ಧವಾಯಿತು. ಅನುಮಾನ ಹೀಗಿದೆ – ಕಸ್ತೂರಿಕಾ, ಬೆಲ್ಲ, ಅಗ್ನಿ, ಪರ್ವತ ಇವುಗಳು ಕನ್ನಡಿಯಲ್ಲಿ ಕಾಣಿಸುತ್ತವೆ. ಆದರೆ ಕಸ್ತೂರಿಯಲ್ಲಿರುವ ಸೌರಭ್ಯವು ಗೋಚರವಾಗುತ್ತಿಲ್ಲ. ಬೆಲ್ಲದಲ್ಲಿ ಮಾಧುರ್ಯವಿದೆ ಪ್ರತಿಬಿಂಬದಲ್ಲಿ ಅದು ಕಾಣಿಸುತ್ತಿಲ್ಲ. ಬಿಂಬವಾದ ಅಗ್ನಿಯಲ್ಲಿ ಔಷ್ಣ್ಯವಿದೆ ಆದರೆ ಪ್ರತಿಬಿಂಬದಲ್ಲಿ ಅದು ಕಾಣಿಸುತ್ತಿಲ್ಲ. ಪರ್ವತದಲ್ಲಿ ಗುರುತ್ವವಿದೆ ಅದೂ ಕೂಡ ಪ್ರತಿಬಿಂಬದಲ್ಲಿ ಕಾಣಿಸುತ್ತಿಲ್ಲ. ಈ ವೈಧರ್ಮ್ಯದಿಂದ ಕಸ್ತೂರಿಯೇ ಬೇರೆ, ಉಪಾಧಿಯಲ್ಲಿ ಕಾಣಿಸುತ್ತಿರುವ ಪ್ರತಿಬಿಂಬಭೂತವಾದ ಕಸ್ತೂರಿಯೇ ಬೇರೆ. ಇದರಂತೆ ಗುಡಾದಿಗಳಲ್ಲೂ ಕೂಡ ಬಿಂಬವೇ ಬೇರೆ ಪ್ರತಿಬಿಂಬವೇ ಬೇರೆ ಎಂದು ತಿಳಿಯುತ್ತೇವೆ. ವೈಧರ್ಮ್ಯವೆಂಬ ಹೇತುವಿನಿಂದ ಬಿಂಬ ಪ್ರತಿಬಿಂಬಗಳಿಗೆ ಭೇದವನ್ನು ಅನುಮಾನ ಮಾಡುತ್ತೇವೆ.

'ಯಥೈಷಾ ಪುರುಷೇ ಛಾಯಾ ಏತಸ್ಮಿನ್ನೇತದಾತತಮ್' ಎಂಬ ಶ್ರುತಿಯು ಸಮಸ್ತ ಜಗತ್ತು ಪರಮಾತ್ಮನ ಅಧೀನವಾಗಿದೆ. ಉದಾಹರಣೆ – ಛಾಯೆಯು ಹೇಗೆ ಪುರುಷನ ಅಧೀನವಾಗಿದೆಯೋ ಅದರಂತೆ ಎಂದು ಹೇಳಲಾಗಿದೆ. ಛಾಯೆಯ ಉದಾಹರಣೆಯನ್ನು ಅಧೀನತ್ವವಿಷಯದಲ್ಲಿ ಹೇಳಲಾಗಿದೆ. ಎಲ್ಲಿ ಆಧೀನ್ಯವಿರುತ್ತದೋ ಅಲ್ಲಿ ಭೇದವೂ ನಿಯತವಾದ್ದರಿಂದ ಛಾಯಾ ಪುರುಷರಲ್ಲಿರುವ ಭೇದದಂತೆ ಜೀವಬ್ರಹ್ಮರಲ್ಲೂ ಕೂಡ ಭೇದವಿದೆ ಎಂದು ಈ ಶ್ರುತಿಯಿಂದ ಸಿದ್ಧವಾಗುತ್ತದೆ.

'ತವೈವ ಸದೃಶ್ಚಾಯಂ ಬಿಂಬಸ್ಯ ಪ್ರತಿಬಿಂಬವತ್' ಎಂಬ ಸ್ಮೃತಿವಾಕ್ಯವು ಬಿಂಬಕ್ಕೆ ಪ್ರತಿಬಿಂಬದಂತೆ ಈ ಜೀವನು ನಿನಗೆ ಸದೃಶನಾಗಿದ್ದಾನೆ ಎಂದು. 'ಬಹವಸ್ಸೂರ್ಯಕಾ ಯದ್ವತ್ಸೂರ್ಯಸ್ಯ ಸದೃಶಾ ಜಲೇ' 'ಏವಮೇವಾತ್ಮಕಾ ಲೋಕೇ ಪರಾತ್ಮಸದೃಶಾ ಮತಾಃ' ಸೂರ್ಯನಿಗೆ ಸದೃಶರಾದ ಅನೇಕ ಸೂರ್ಯಕರು ಜಲದಲ್ಲಿ ಕಾಣಿಸುತ್ತಿದ್ದಾರೆ. ಇದರಂತೆ ಲೋಕದಲ್ಲಿ ಒಬ್ಬನೇ ಬ್ರಹ್ಮನಿಗೆ ಸದೃಶರಾದ ಅನೇಕ ಜೀವರು ಕಾಣಿಸುತ್ತಿದ್ದಾರೆ ಎಂಬುದಾಗಿ ಸ್ಮೃತಿವಾಕ್ಯವು ಹೇಳುತ್ತಿದೆ. ಪ್ರತಿಸೂರ್ಯವು ಸೂರ್ಯನಿಗಿಂತ ಭಿನ್ನವಾದ್ದರಿಂದ ಈ ಜೀವರುಗಳೂ ಕೂಡ ಪರಮಾತ್ಮರಿಗಿಂತ ಭಿನ್ನರಾಗಿದ್ದಾರೆ ಎಂಬುದು ಈ ಸ್ಮೃತಿಯ ಅಭಿಪ್ರಾಯ.

**नहि दर्पणे मम मुखं लग्नं कूपे वा पतितमिति कश्चित्प्रत्येति ।**

ಕನ್ನಡಿಯಲ್ಲಿ ನನ್ನ ಮುಖವು ಇದೆ ಎಂದು ಯಾರೂ ತಿಳಿಯುವುದಿಲ್ಲ. ಅಥವಾ ಬಾವಿಯಲ್ಲಿ ತಮ್ಮ ಪ್ರತಿಬಿಂಬವನ್ನು ನೋಡಿ ನನ್ನ ಮುಖ ಬಾವಿಯಲ್ಲಿ ಬಿದ್ದಿತು ಎಂದು ಯಾರೂ ತಿಳಿಯುವುದಿಲ್ಲ. ಆದ್ದರಿಂದ ಬಿಂಬವೇ ಬೇರೆ, ಪ್ರತಿಬಿಂಬವೇ ಬೇರೆ ಎಂಬುದು ಪ್ರತಿಯೊಬ್ಬರ ಅನುಭವ ಸಿದ್ಧವಾಗಿದೆ.

**किञ्चाभेदपक्षे ग्रीवास्थमेव मुखं दर्पणस्थं किं वा दर्पणे मुखान्तरमारोप्यते यद्वा ग्रीवास्थस्यैव संसर्गमात्रमारोप्यते ।**

ಬಿಂಬ ಹಾಗೂ ಪ್ರತಿಬಿಂಬಗಳಿಗೆ ಅಭೇದವಿದೆ ಎಂದು ಹೇಳುವ ನಿಮ್ಮ ಅಭಿಪ್ರಾಯವೇನು? ಕತ್ತಿನ ಮೇಲಿರುವ ಮುಖವೇ ಕನ್ನಡಿಯಲ್ಲಿದೆ ಎಂದು ಹೇಳುವಿರೋ? ಅಥವಾ ಕನ್ನಡಿಯಲ್ಲಿ ಮತ್ತೊಂದು ಮುಖವು ಆರೋಪಿತವಾಗಿದೆ ಎಂದು ಹೇಳುವಿರೋ? ಅಥವಾ ಮುಖವು ಕತ್ತಿನ ಮೇಲೆಯೇ ಇದೆ, ಇದರ ಸಂಸರ್ಗಮಾತ್ರವಷ್ಟೇ ಕನ್ನಡಿಯಲ್ಲಿ ಆರೋಪಿತವಾಗಿದೆ ಎಂದು ಹೇಳುವಿರೋ?

**नाद्यः । प्रादेशमात्रमुखस्यैकदैवोभयत्रानवस्थानात् । कालभेदेन चेच्चैत्रो बहिरवस्थानकाले गृहान्तरिव मुखं दर्पणेऽवस्थानकाले ग्रीवायां न स्यात् ।**

ಗೇಣುದ್ದ ಮಾತ್ರವಿರುವ ಮುಖವು ಒಂದೇ ಸಮಯದಲ್ಲಿ ಕನ್ನಡಿಯಲ್ಲಿ ಹಾಗೂ ಕತ್ತಿನಲ್ಲಿ ಎರಡೂ ಕಡೆ ಇರಲು ಸಾಧ್ಯವಿಲ್ಲ. ಅಥವಾ ಇಲ್ಲಿಂದ ಅಲ್ಲಿಯತನಕ ಬೆಳೆದಿದೆ ಎಂದು ಹೇಳಲು ಸಾಧ್ಯವಿಲ್ಲ. ಅಥವಾ ಒಂದುಕಾಲದಲ್ಲಿ ಕತ್ತಿನ ಮೇಲೆ ಮುಖ ಇರುತ್ತದೆ, ಇನ್ನೊಂದು ಕಾಲದಲ್ಲಿ ದರ್ಪಣಸ್ಥವಾಗುತ್ತದೆ ಎಂದು ಹೇಳಲು ಸಾಧ್ಯವಿಲ್ಲ. ಹಾಗಾದರೆ ಕನ್ನಡಿಯಲ್ಲಿ ಮುಖವನ್ನು ನೋಡಿಕೊಳ್ಳುವ ಸಂದರ್ಭದಲ್ಲಿ ಕತ್ತಿನ ಮೇಲೆ ಮುಖವೇ ಇರಬಾರದು. ಹೇಗೆ ಚೈತ್ರನು ಹೊರಗಡೆ ಇರುವಾಗ ಮನೆಯ ಒಳಗಡೆ ಇರಲು ಸಾಧ್ಯವಿಲ್ಲವೋ ಅಥವಾ ಮನೆಯ ಒಳಗಡೆ ಇದ್ದಾಗ ಹೊರಗೆ ಇರಲು ಸಾಧ್ಯವಿಲ್ಲವೋ ಅದರಂತೆ ಕನ್ನಡಿಯಲ್ಲಿ ಮುಖವು ಇರುವ ಕಾಲದಲ್ಲಿ ಕತ್ತಿನ ಮೇಲಿರಲು ಸಾಧ್ಯವಿಲ್ಲ ಎಂದಭಿಪ್ರಾಯ.

**द्वितीयतृतीययोः कथं प्रत्यभिज्ञा प्रमा । द्वितीये तदेवेदमिति प्रत्यभिज्ञाविषयस्यैक्यस्य बाधितत्वात् । तृतीये तद्विषयस्येदमित्यस्य बाधितत्वात्। नहि प्रातिभासिकव्यावहारिकयोरैक्यं व्यावहारिकम् । न वा गृह एव स्थितस्य चैत्रस्य बहिःसत्त्वज्ञानं प्रमा ।**

ಎರಡು ಹಾಗೂ ಮೂರನೆಯ ವಿಕಲ್ಪವೂ ಕೂಡ ಅಯುಕ್ತವಾಗಿದೆ. ಒಂದು ವೇಳೆ ಎರಡನೇ ಹಾಗೂ ಮೂರನೇ ವಿಕಲ್ಪಗಳನ್ನು ಅಂಗೀಕಾರ ಮಾಡಿದರೆ ಪ್ರತ್ಯಭಿಜ್ಞೆಯು ಹೇಗೆ ತಾನೇ ಪ್ರಮಾ ಆಗಲು ಸಾಧ್ಯ ? 'ತದೇವೇದಂ ಮುಖಂ' ಎಂಬುದು ಪ್ರತಿಭಿಜ್ಞಾ ಎಂದು ಕರೆಸಿಕೊಳ್ಳುತ್ತದೆ. ತತ್ ಎಂಬ ಶಬ್ದದಿಂದ ಬೋಧಿತವಾದ ಬಿಂಬವು, ಇದಂ ಶಬ್ದದಿಂದ ಬೋಧಿತವಾದ ಪ್ರತಿಬಿಂಬದಿಂದ ಅಭಿನ್ನವಾಗಿದೆ ಎಂಬುದು ಪ್ರತಿಭಿಜ್ಞಾಂದ ತಿಳಿಯುತ್ತದೆ. ಈ ಐಕ್ಯವು ಎರಡನೇ ಪಕ್ಷದಲ್ಲಿ ಬಾಧಿತವಾಗುತ್ತದೆ. ಏಕೆಂದರೆ ಕತ್ತಿನ ಮೇಲಿರುವ ಮುಖವು ವ್ಯಾವಹಾರಿಕವಾಗಿದೆ. ದರ್ಪಣದಲ್ಲಿರುವ ಆರೋಪಿತವಾದ ಮುಖವು ಪ್ರಾತಿಭಾಸಿಕವಾಗಿದೆ. ವ್ಯಾವಹಾರಿಕವಾದ ಮುಖಕ್ಕೂ, ಪ್ರಾತಿಭಾಸಿಕವಾದ ಮುಖಕ್ಕೂ ಐಕ್ಯವು ಸಾಧ್ಯವಿಲ್ಲ. ಇವೆರಡರ ಐಕ್ಯವು ವ್ಯಾವಹಾರಿಕವಾಗಲು ಸಾಧ್ಯವಿಲ್ಲ, ಇದೂ ಕೂಡ ಪ್ರಾತಿಭಾಸಿಕವೇ ಆಗುತ್ತದೆ. ಮನೆಯಲ್ಲಿ ಚೈತ್ರನು ಇದ್ದಾಗ, ಹೊರಗಡೆ ಚೈತ್ರನು ಇದ್ದಾನೆ ಎಂಬ ಜ್ಞಾನವು ಪ್ರಮಾವಾಗಲು ಸಾಧ್ಯವಿಲ್ಲವಷ್ಟೆ?

ಎರಡನೇ ಪಕ್ಷದಲ್ಲಿ 'ತದೇವೇದಂ' ಎಂಬ ಪ್ರತಿಭಿಜ್ಞೆಗೆ ವಿಷಯವಾದ ಐಕ್ಯವು ಬಾಧಿತವಾಗುತ್ತದೆ. ಮೂರನೇ ಪಕ್ಷದಲ್ಲಿ ಪ್ರತಿಭಿಜ್ಞೆಗೆ ವಿಷಯವಾದ 'ಇದಂ' ಎಂಬುದು ಬಾಧಿತವಾಗುತ್ತದೆ. ಏಕೆಂದರೆ

'ಇದಂ' ಎಂದರೆ ಎದುರು ತೋರುತ್ತಿರುವ ಮುಖ ಎಂದರ್ಥ. ದರ್ಪಣದಲ್ಲಿ ಸಂಸರ್ಗವು ಆರೋಪಿತವಾದ್ದರಿಂದ 'ಇದಂ' ಎಂಬ ನಿರ್ದೇಶವೇ ಬಾಧಿತವಾಗುತ್ತದೆ.

**न चेदं ज्ञानमिदमित्यंशे भ्रमः ऐक्यांशे तु प्रमेति वाच्यम् । वैपरीत्यस्यापि सुवचत्वात् । शुक्ताविदं पूर्वस्थापितं रूप्यमिति ज्ञानस्याप्यैक्यांशे प्रमात्वापाताच्च।**

ಮೂರನೇ ಪಕ್ಷದಲ್ಲಿ ಪ್ರತ್ಯಭಿಜ್ಞೆಯು ಅಯುಕ್ತವಾಗುವುದಿಲ್ಲ. ಅದು ಹೀಗೆ – 'ತದೇವೇದಂ ಮುಖಮ್' ಎಂಬ ಪ್ರತಿಭಿಜ್ಞೆಯು ಒಂದಂಶದಲ್ಲಿ ಭ್ರಮೆ ಎನಿಸುತ್ತದೆ, ಮತ್ತೊಂದಂಶದಲ್ಲಿ ಪ್ರಮೆ ಎನಿಸುತ್ತದೆ. ಯಾವ ರೀತಿಯಾಗಿ 'ಇದಂ ರಜತಂ' ಎಂಬ ಭ್ರಮೆಯಲ್ಲಿ 'ಇದಂ' ಅಂಶದಲ್ಲಿ 'ಪ್ರಮಾ' ಆಗಿ 'ರಜತಂ' ಎಂಬ ಅಂಶದಲ್ಲಿ ಭ್ರಮೆ ಎನಿಸುತ್ತದೋ ಅದರಂತೆ ಸಂಸರ್ಗವನ್ನು ಅವಗಾಹನೆ ಮಾಡುವ ಇದಂ ಅಂಶ ಜ್ಞಾನದಲ್ಲಿ ಭ್ರಮೆಯಾಗಿದ್ದರೂ ಕೂಡ ಐಕ್ಯಾಂಶದಲ್ಲಿ ಪ್ರಮಾತ್ಮಕವಾಗಿದೆ ಎಂದು ಹೇಳಬಹುದಲ್ಲವೇ?

ಹೀಗೆ ಹೇಳಬಾರದು. ಸಾಮಾನಾಧಿಕರಣ್ಯದಿಂದ ಬೋಧಿತವಾದ ಐಕ್ಯಾಂಶದಲ್ಲಿ ಭ್ರಮೆ ಎಂದು ಹೇಳಿ ಇದಂ ಅಂಶದಲ್ಲಿಯೇ ಪ್ರಮಾ ಎಂದು ಏಕೆ ಹೇಳಬಾರದು. ಹೀಗೆ ವಿಪರೀತವಾಗಿ ಹೇಳಿದರೆ ನಿಮ್ಮಿಂದ ಉತ್ತರಿಸಲಾಗದು.

ಮತ್ತೊಂದು ದೋಷ– ಶುಕ್ತಿಯನ್ನು ನೋಡಿದಾಗ 'ಇದಂ ಪೂರ್ವಸ್ಥಾಪಿತಂ ರೂಪ್ಯಂ' ಎಂದು ತಿಳಿಯುತ್ತಾನೆ. ಇಲ್ಲಿ ನಿಮ್ಮ ಪ್ರಕಾರ 'ಇದಂ' ಎಂಬ ಅಂಶದಲ್ಲೇ ಭ್ರಮೆ ಎಂದು ರೂಪ್ಯಾಂಶದಲ್ಲಿ ಪ್ರಮಾ ಎಂದು ಹೇಳಬೇಕಾಗುತ್ತದೆ. ನೀವು ಇದಂ ಎಂಬುದಾಗಿ ದರ್ಪಣಸ್ಥತ್ವವು ತೋರಿದ್ದು ಭ್ರಮೆ ಎಂದು, ಐಕ್ಯ ತೋರಿದ್ದು ಪ್ರಮೆ ಎಂದು ಹೇಳುವುದಾದರೆ ಇಲ್ಲಿಯೂ ಕೂಡ ನೋಡುತ್ತಿರುವ ಶುಕ್ತಿಯಲ್ಲಿ ರಜತತಾದಾತ್ಮ್ಯವನ್ನು ಆರೋಪ ಮಾಡುತ್ತಾನೆ. ಇಲ್ಲಿ ತೋರುತ್ತಿರುವ ರೂಪ್ಯದ ಐಕ್ಯವು ಸತ್ಯವೇ ಆಗಿದೆ. 'ಇದಂ ಪೂರ್ವಸ್ಥಾಪಿತಂ' ಎಂಬುದಾಗಿ ಹಿಂದೆ ನಾನು ಇಟ್ಟದ್ದು ಎಂಬುದಾಗಿ ಏನು ತಿಳಿಯುತ್ತಾನೋ ಈ ಅಂಶದಲ್ಲಿ ಭ್ರಮೆ ಎಂದು ಹೇಳಬೇಕಾಗುತ್ತದೆ ಎಂದಭಿಪ್ರಾಯ.

**एतेन ग्रीवास्थमुखस्य दर्पणे प्रतीतेन मुखेनैक्यं प्रत्यभिज्ञाविषय इति निरस्तम् । अत्र प्रतिसूर्य एव नतु सूर्य इतिवद्दर्पणे मुखच्छायैव नतु मुखमित्येव प्रतीतेः । अन्यथा प्रतिबिम्बेनबिम्बानुमितिर्न स्यात् ।**

ಹೀಗೆ ಹೇಳಿದ್ದರಿಂದ ನಾಲ್ಕನೇ ಪಕ್ಷವನ್ನು ನಿರಾಕರಣೆ ಮಾಡಿದಂತಾಯಿತು. ಆ ಪಕ್ಷ ಹೀಗಿದೆ – ದರ್ಪಣದಲ್ಲಿ ಪ್ರತೀತವಾದ ಒಂದು ಮುಖವಿದೆ. ಕತ್ತಿನ ಮೇಲೆ ಒಂದು ಮುಖವಿದೆ. ಈ ಎರಡು ಮುಖದಲ್ಲಿರುವ ಐಕ್ಯವು ಪ್ರತ್ಯಭಿಜ್ಞೆಗೆ ವಿಷಯವಾಗುತ್ತದೆ ಎಂದು ಹೇಳುತ್ತೇವೆ.

ಈ ಪಕ್ಷವು ತಪ್ಪು. ಏಕೆಂದರೆ ಪ್ರತ್ಯಭಿಜ್ಞೆಗೆ ಬಾಧಕವಾದ ಭೇದಪ್ರತ್ಯಕ್ಷವೇ ಇಲ್ಲಿ ಇರುತ್ತದೆ. ನೀರಿನಲ್ಲಿ ಇದು ಪ್ರತಿಸೂರ್ಯವೇ ಹೊರತು ನಿಜವಾದ ಸೂರ್ಯವಲ್ಲ ಎಂಬ ಪ್ರತೀತಿ ಬರುವಂತೆ ಕನ್ನಡಿಯಲ್ಲೂ ಕೂಡ ಮುಖದ ಛಾಯೆ ಇದೆ ಹೊರತು, ನಿಜವಾದ ಮುಖವಲ್ಲ ಎಂದು ಪ್ರತೀತಿ ಬರುತ್ತಿದೆ. ಇಷ್ಟಾದರೂ ಆಗ್ರಹ ಮಾಡಿ ಬಿಂಬ ಹಾಗೂ ಪ್ರತಿಬಿಂಬಗಳಿಗೆ ನೀವು ಅಭೇದವನ್ನು ಹೇಳುವುದಾದರೆ ಪ್ರತಿಬಿಂಬದಿಂದ ಬಿಂಬವನ್ನು ಅನುಮಾನ ಮಾಡಲು ಸಾಧ್ಯವೇ ಆಗದಿರಬೇಕಾದೀತು.

'ಅಯಂ ಪ್ರದೇಶಃ ಬಿಂಬವಾನ್' 'ಪ್ರತಿಬಿಂಬವತ್ತ್ವಾತ್' ಎಂದು ಅನುಮಾನ ಮಾಡಿದಾಗ ಐಕ್ಯವನ್ನು ಹೇಳಿದಾಗ ಸಾಧ್ಯಾವೈಶಿಷ್ಟ್ಯದೋಷವು ಬರುತ್ತದೆ.

**किञ्च दर्पणे प्रतिमुखस्याभावे सप्रतिबिम्बदर्पणसम्बद्धदर्पणान्तरे प्रतिबिम्बस्यापि प्रतिबिम्बं दृश्यते । तन्न स्यात् ।**

ದರ್ಪಣದಲ್ಲಿ ಮುಖಕ್ಕಿಂತ ಅತಿರಿಕ್ತವಾದ ಪ್ರತಿಮುಖ ಎಂಬ ಪದಾರ್ಥವನ್ನು ನೀವು ಒಪ್ಪಬೇಕು. ಹೀಗೊಪ್ಪದೇ ಕೇವಲ ಅದು ಆರೋಪಿತವೆಂದು ಹೇಳುವುದಾದರೆ ಆಗ ಪ್ರತಿಬಿಂಬದ ಪ್ರತಿಬಿಂಬವೇ ಇಲ್ಲದೇ ಹೋಗಬೇಕಾಗುತ್ತದೆ. ಏಕೆಂದರೆ ಪ್ರತಿಮುಖವೇ ಇಲ್ಲವೆಂದು ನೀವು ಹೇಳುವುದಾದರೆ ಆಗ ಅದರ ಪ್ರತಿಬಿಂಬವಿರಲು ಹೇಗೆ ಸಾಧ್ಯ ?

ಮೊದಲನೇ ಪ್ರತಿಬಿಂಬವು ಪ್ರಾತಿಭಾಸಿಕವಾದರೆ, ಅದರ ಪ್ರತಿಬಿಂಬವು ಅದಕ್ಕಿಂತ ನ್ಯೂನಸತ್ತಾಕವಾದ ಮತ್ತೊಂದು ಪ್ರಾತಿಭಾಸಿಕ ಆಗಬೇಕಾಗುತ್ತದೆ. ಆದರೆ ನಿಮ್ಮ ಸಿದ್ಧಾಂತದಲ್ಲಿ ಹೀಗೆ ಒಪ್ಪಿಲ್ಲ.

**किञ्च घटे तदवच्छिन्नाकाशस्येव दर्पणेऽविद्यायाञ्च मुखाभासस्य चैतन्याभासस्य चाभावे कथं श्यामत्वादिकं प्रतिमुख एव संसारश्च जीव एवेति व्यवस्था । नहि श्यामत्वसंसारावुपाधिगतौ । न वोपाधावारोपितबिम्बगतौ ।**

ಮತ್ತೊಂದು ದೋಷ – ಮಹಾಕಾಶದಲ್ಲಿ ಪರಿಚ್ಛಿನ್ನತ್ವ, ಗಮನಾಗಮನ ಮೊದಲಾದವುಗಳು ಇರುವುದಿಲ್ಲ. ಆದರೆ ಘಟಾವಚ್ಛಿನ್ನ ಆಕಾಶದಲ್ಲಿ ಪರಿಚ್ಛಿನ್ನತ್ವ, ಗಮನಾಗಮನಗಳನ್ನು ಹೇಳಬಹುದು. ಅದರಂತೆ ದರ್ಪಣದಲ್ಲಿ ಮುಖಾಭಾಸ ಇರಬೇಕು. ಅವಿದ್ಯೆಯಲ್ಲಿ ಚೈತನ್ಯಾಭಾಸ ಇರಬೇಕು. ಇವೆರಡೂ ಇಲ್ಲವೇ ಇಲ್ಲ ಎಂದು ಹೇಳಿದರೆ ಮಾಲಿನ್ಯಾದಿಗಳೆಲ್ಲವೂ ಪ್ರತಿಮುಖದಲ್ಲೇ ಬರುತ್ತವೆ. ಅಜ್ಞಾನಿಯಾದ ಸಂಸಾರಿಯಾದ ಜೀವನಲ್ಲೇ ಬರುತ್ತದೆ ಎಂಬುದಾಗಿ ವ್ಯವಸ್ಥೆ ಮಾಡಲು ನಿಮ್ಮಿಂದ ಸಾಧ್ಯವಿಲ್ಲ. ಪಕ್ಷಪಾತಿತ್ವ ಎಂದರೆ 'ಸ್ವನಿಷ್ಠಧರ್ಮ-ಆಧಾಯಕತ್ವಂ' ಎಂದರ್ಥ. ಉಪಾಧಿಯು ಸ್ವನಿಷ್ಠವಾದ ಧರ್ಮವನ್ನು ಸ್ವನಿಷ್ಠದಲ್ಲೇ ಮಾಡಬೇಕೇ ಹೊರತು ಬಿಂಬದಲ್ಲಿ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಪ್ರತಿಮುಖದಲ್ಲಿ ಶ್ಯಾಮತ್ವಾದಿಗಳು ಕಾಣಿಸುತ್ತವೆ ಎಂಬುದಾಗಿ ನೀವೇ ಅಂಗೀಕಾರ ಮಾಡಿದ್ದೀರಿ. ಅದರಂತೆ ಅವಿದ್ಯೆಯಲ್ಲಿರುವ ಸಂಸಾರವು ಸುಖಚೈತನ್ಯದ ಪ್ರತಿಬಿಂಬನಾದ ಜೀವನಲ್ಲಿಯೇ ತೋರುತ್ತದೆ ಹೊರತು ಬಿಂಬನಾದ ಶುದ್ಧಬ್ರಹ್ಮನಲ್ಲಿ ತೋರುವುದಿಲ್ಲ ಎಂಬುದಾಗಿ ನೀವು ವ್ಯವಸ್ಥೆ ಮಾಡಿದ್ದೀರಿ. ಈ ವ್ಯವಸ್ಥೆಯು ಯಾವಾಗ ಸಾಧ್ಯವಾಗುತ್ತದೆ ಎಂದರೆ ದರ್ಪಣದಲ್ಲಿ ಮುಖಾಭಾಸವಿದ್ದರೆ, ಅವಿದ್ಯೆಯಲ್ಲಿ ಚೈತನ್ಯಾಭಾಸವಿದ್ದರೆ ಹೇಳಬಹುದು. ಈಗ ಪ್ರತಿಬಿಂಬ ಎಂಬ ವ್ಯಕ್ತಿಯೇ ಇಲ್ಲವೆಂದು ಹೇಳಿದರೆ ವ್ಯವಸ್ಥೆಯನ್ನು ಹೇಗೆ ಮಾಡಲು ಸಾಧ್ಯ ?

ಆರೋಪಿತವಾದ ಉಪಾಧಿಯಲ್ಲಿ ಶ್ಯಾಮತ್ವ ಹಾಗೂ ಸಂಸಾರಗಳು ಇರಲು ಸಾಧ್ಯವಿಲ್ಲ. ಏಕೆಂದರೆ ಉಪಾಧಿಯಲ್ಲಿರುವ ಶ್ಯಾಮತ್ವವು ಹಾಗೂ ಅವಿದ್ಯೆಯಲ್ಲಿರುವ ಸಂಸಾರವು ಪ್ರತಿಬಿಂಬದಲ್ಲಿ ಹಾಗೂ ಜೀವನಲ್ಲಿ ಬಂದಿದೆ ಎಂದು ಹೇಳಲು ಸಾಧ್ಯವಿಲ್ಲ. ಆದರೆ ಸಂಸಾರವು ಉಪಾಧಿಯಲ್ಲಿರಲು ಸಾಧ್ಯವಿಲ್ಲ. ಆದರಂತೆ ಶ್ಯಾಮತ್ವವು ಶುದ್ಧವಾದ ಬ್ರಹ್ಮನ ಸಂಸಾರವಷ್ಟೇ ಆರೋಪಿತವೆಂದು ಹೇಳಿದಾಗ

ಅವಿದ್ಯಾರೂಪ ಉಪಾಧಿಯಲ್ಲಿ ಆರೋಪಿತವಾದ ಬಿಂಬನಲ್ಲಿಯೇ ಶ್ಯಾಮತ್ವಾದಿಗಳನ್ನು ಹೇಳಬೇಕು. ಅದು ಹೇಳಲು ಸಾಧ್ಯವೇ ಇಲ್ಲ. ಹಾಗೆ ಹೇಳಿದಲ್ಲಿ ಬ್ರಹ್ಮನಿಗೆ ಸಂಸಾರವನ್ನು ಒಪ್ಪಿದಂತಾಗುತ್ತದೆ. ಬಿಂಬನಿಗೇ ಮಾಲಿನ್ಯವನ್ನು ಒಪ್ಪಿದಂತಾಗುವುದರಿಂದ ಪ್ರತಿಬಿಂಬಕ್ಕಾಗಲಿ, ಜೀವನಿಗಾಗಲೀ ಮಾಲಿನ್ಯವನ್ನು ಒಪ್ಪಿದಂತಾಗುವುದಿಲ್ಲ.

**ವಿವರಣೆ** – 'ಕಿಂಚ ದರ್ಪಣೇ' ಇತ್ಯಾದಿ ವಾಕ್ಯಗಳಲ್ಲಿ ಹೇಳಲ್ಪಟ್ಟ ದೋಷವು ಕೇವಲ ಮೂರನೆಯ ಪಕ್ಷಕ್ಕೆ ಸಂಬಂಧಪಟ್ಟದ್ದು ಎಂದು ಭಾವಿಸಬೇಕು. ಏಕೆಂದರೆ ಎರಡನೇ ಪಕ್ಷದಲ್ಲಿ ವಸ್ತ್ವಂತರವು ಆರೋಪಿತವಾಗಿದೆ ಎಂದು ಅವನೂ ಒಪ್ಪಿದ್ದಾನೆ. ಮೂರನೇ ಪಕ್ಷದಲ್ಲಿ ವಸ್ತ್ವಂತರವೇ ಇರುವುದಿಲ್ಲ. ಇದರ ಸಂಸರ್ಗವು ಆರೋಪಿತವಾಗಿದೆ ಎಂದು ಹೇಳುತ್ತಾನೆ. ವಸ್ತುವೇ ಬೇರೆ ಕಡೆ ಇದ್ದು, ಸಂಸರ್ಗವನ್ನು ಇನ್ನೊಂದು ಕಡೆ ಆರೋಪ ಮಾಡಿದಾಗ ಇದಕ್ಕೂ ಆ ವಸ್ತುವಿಗೂ ಭೇದವನ್ನು ಆರೋಪ ಮಾಡುವುದು ಲೋಕದಲ್ಲಿ ಕಂಡಿದೆ. ಉದಾ – ಅಂಗುಲ್ಯವಷ್ಟಂಭದಿಂದ ಚಂದ್ರನನ್ನು ನೋಡುವಾಗ ಚಂದ್ರನಲ್ಲಿ ಭೇದವು ಆರೋಪಿತವಾಗಿದೆ. ಮತ್ತು ಪ್ರಥಮ ಚಂದ್ರನಲ್ಲಿ ದ್ವಿತೀಯ ಚಂದ್ರನು ಆರೋಪಿತನಾಗಿದ್ದಾನೆ. ಅದೇ ರೀತಿಯಾಗಿ ಇಲ್ಲೂ ಕೂಡ ಗ್ರೀವದಲ್ಲಿರುವ ಮುಖ ಒಂದೇ ಆಗಿದೆ. ಇದರ ಸಂಸರ್ಗವನ್ನು ಕನ್ನಡಿಯಲ್ಲಿ ದರ್ಪಣಸ್ಥ ಮುಖಕ್ಕೂ, ಗ್ರೀವಾಸ್ಥ ಮುಖಕ್ಕೂ ಭೇದವನ್ನು ಆರೋಪ ಮಾಡಲಾಗಿದೆ. ಇದು ಮೂರನೇ ಪಕ್ಷದ ಅಭಿಪ್ರಾಯವಾಗಿದೆ.

'ನ ಹಿ ಶ್ಯಾಮತ್ವಸಂಸಾರೌ ಉಪಾಧಿಗತೌ' ಎಂಬ ವಾಕ್ಯದ ಅಭಿಪ್ರಾಯ ಹೀಗೆ ತಿಳಿಯಬೇಕು. ಶ್ಯಾಮತ್ವ ಮತ್ತು ಸಂಸಾರಗಳು ಉಪಾಧಿಯಲ್ಲಿ ನಿಯಮೇನ ಇದ್ದೇ ಇರುತ್ತವೆ ಎಂದು ಹೇಳಲಾಗದು. ಕೆಲವೊಮ್ಮೆ ಉಪಾಧಿಯಲ್ಲಿ ಇಲ್ಲದ ಧರ್ಮಗಳೂ ಕೂಡ ಪ್ರತಿಬಿಂಬದಲ್ಲಿ ಕಾಣುವುದು ಕಂಡಿದೆ.

**किञ्च गगनं तारकितमितिवन्मुखं प्रतिबिम्बितमिति प्रयोगप्रत्ययौ मुखस्य सञ्जातप्रति बिम्बसम्बन्धविषयावेव । न त्वभेदविषयौ ।**

'ದರ್ಪಣೇ ಮುಖಂ ಪ್ರತಿಬಿಂಬಿತಮ್' ಎಂದು ಹೇಳಿದಾಗ ಮುಖವೇ ಕನ್ನಡಿಯಲ್ಲಿ ಪ್ರತಿಬಿಂಬಿತವಾಗಿದೆ ಎಂಬರ್ಥವು ತಿಳಿಯುತ್ತದೆ. ಇದರಿಂದ ಮುಖ ಮತ್ತು ಪ್ರತಿಬಿಂಬಗಳಿಗೆ ಅಭೇದವು ತಿಳಿಯುತ್ತದಲ್ಲವೇ?

ಈ ಪ್ರಶ್ನೆಯು ತಪ್ಪು. 'ಗಗನಂ ತಾರಕಿತಮ್' ಈ ಗಗನದಲ್ಲಿ ನಕ್ಷತ್ರಗಳು ಹುಟ್ಟಿದವು ಎಂಬುದಾಗಿ ಪ್ರಯೋಗ ಮಾಡುತ್ತೇವೆ. ಇಲ್ಲಿ ಪ್ರತ್ಯಯವು 'ತಸ್ಮಿನ್ ಸಂಜಾತ' ಎಂಬರ್ಥದಲ್ಲಿ ಪ್ರಾಪ್ತವಾಗಿದೆ. ಅದರಂತೆ 'ಮುಖಂ ಪ್ರತಿಬಿಂಬಿತಮ್' ಎಂಬಲ್ಲೂ ಕೂಡ ಪ್ರತ್ಯಯವನ್ನು 'ತಸ್ಮಿನ್ ಸಂಜಾತ' ಎಂಬರ್ಥದಲ್ಲಿಯೇ ವಿವಕ್ಷಿಸಬೇಕು. ಮುಖ ಹುಟ್ಟಿ ಎಷ್ಟೋ ವರ್ಷಗಳಾಗಿವೆ ಪ್ರತಿಬಿಂಬವು ಈಗ ಹುಟ್ಟಿತು ಎಂಬರ್ಥವು ಇದರಿಂದ ತಿಳಿಯುತ್ತದೆ. ದರ್ಪಣದಲ್ಲಿ ಯಾವ ಪ್ರತಿಬಿಂಬವು ಈಗ ಹುಟ್ಟಿತೋ ಅದರ ಸಂಬಂಧವನ್ನು ಷಷ್ಠೀ ವಿಭಕ್ತಿಯಿಂದ ವಿವಕ್ಷಿಸುತ್ತೇವೆ. ಆದ್ದರಿಂದ 'ಮುಖಂ ಪ್ರತಿಬಿಂಬಿತಮ್' ಎಂಬ ವ್ಯವಹಾರದಿಂದ ಬಿಂಬ ಪ್ರತಿಬಿಂಬಗಳಿಗೆ ಐಕ್ಯವು ಸಿದ್ಧವಾಗುವುದಿಲ್ಲ.

**प्रतिबिम्बस्योपादानन्तु अन्धकारपरिवेषेन्द्रचापादाविव स्पर्शहीनं रूपि किञ्चिद्द्रव्यं कार्यबलात्कल्प्यम् । न ह्यस्माकं तार्किकाणामिव नवैव द्रव्याणि । विस्तरस्तु न्यायामृते बिम्बाप्रतिबिम्ब भेदवाददेर्द्रष्टव्यः ।**

ಪರಿಪೂರ್ಣಚಂದ್ರಿಕಾ

ಪ್ರತಿಬಿಂಬವು ಈ ಕನ್ನಡಿಯಲ್ಲಿ ಹುಟ್ಟಿತು ಎಂದು ಹೇಳಿದರೆ ಇದಕ್ಕೆ ಉಪಾದಾನಕಾರಣವನ್ನು ಅವಶ್ಯವಾಗಿ ಹೇಳಬೇಕು. ಯಾವ ಉಪಾದಾನ ಕಾರಣವನ್ನು ಹೇಳುವಿರಿ?

ಅಂಧಕಾರ, ಪರಿವೇಷ, ಇಂದ್ರಚಾಪಗಳಂತೆ ಇವುಗಳಿಗೆ ಸ್ಪರ್ಶ ಇಲ್ಲದ ರೂಪ ಇರುವ ಯಾವುದಾದರೂ ಒಂದು ದ್ರವ್ಯವನ್ನು ಪ್ರತಿಬಿಂಬಕ್ಕೆ ಉಪಾದಾನಕಾರಣವನ್ನು ಹೇಳಲೇಬೇಕು. ಏಕೆಂದರೆ ನಾವು ತಾರ್ಕಿಕರಂತೆ ಕೇವಲ ಒಂಭತ್ತೇ ದ್ರವ್ಯವಿದೆ ಎಂದು ಹೇಳುವುದಿಲ್ಲ. ಅಂಧಕಾರ, ಪರಿವೇಶ, ಇಂದ್ರಚಾಪ ಎಂಬ ಈ ಮೂರಕ್ಕೂ ಕೂಡ ಸ್ಪರ್ಶವೆಂಬ ಗುಣವಿಲ್ಲ ರೂಪವೆಂಬ ಗುಣವಿದೆ. ಇದಕ್ಕನುಗುಣವಾಗಿ ಉಪಾದಾನಕಾರಣವೂ ಕೂಡ ಇಂಥದ್ದೇ ಆಗಿರಬೇಕು. ಇದರಂತೆ ಪ್ರಕೃತ ಪ್ರತಿಬಿಂಬಕ್ಕೂ ಕೂಡ ಸ್ಪರ್ಶವಿಲ್ಲದ, ರೂಪ ಮಾತ್ರವಿರುವ ಒಂದು ಉಪಾದಾನಕಾರಣವನ್ನು ಅಂಗೀಕಾರ ಮಾಡಲೇಬೇಕು. ಕನ್ನಡಿಯಲ್ಲಿ ಒಂದು ರಸವಿಶೇಷವಿದೆ. ಅದಕ್ಕೆ ಸ್ಪರ್ಶವಿರುವುದಿಲ್ಲ, ರೂಪ ಮಾತ್ರ ಇರುತ್ತದೆ. ಇದು ಪ್ರತಿಬಿಂಬಕ್ಕೆ ಕಾರಣವಾಗುತ್ತದೆ ಎಂದು ಒಪ್ಪಬೇಕು. ಹೆಚ್ಚಿನ ವಿಚಾರವನ್ನು ನ್ಯಾಯಾಮೃತದ ಬಿಂಬಪ್ರತಿಬಿಂಬ ಭೇದವಾದದಲ್ಲಿ ತಿಳಿಯಬೇಕು.

**(यद्वा भोक्तृरहितसुखवज्ज्ञातृरहितज्ञानवत्प्रलये व्यक्तिरहितघटत्वादि-जातिवदतीतादौ ज्ञेयरहितज्ञातातावत्फलरहितनित्यनियोगवच्च जीवोऽप्युपाधिरहित-प्रतिबिम्बोऽस्तु ।**

ಅಥವಾ ಉಪಾಧಿಯೇ ಬೇಡ. ಹೇಗೆಂದರೆ ಮೋಕ್ಷದಲ್ಲಿ ಭೋಕ್ತೃ ಇಲ್ಲದಿದ್ದರೂ ಸುಖವನ್ನು ಶುದ್ಧ ಬ್ರಹ್ಮನಲ್ಲಿ ಅದ್ವೈತಿಗಳು ಒಪ್ಪಿದ್ದಾರೆ. ಅದರಂತೆ ಶುದ್ಧಬ್ರಹ್ಮನು ಜ್ಞಾತೃವಲ್ಲ ಆದರೆ ಜ್ಞಾನವುಳ್ಳವನು ಎಂದು ಒಪ್ಪಲಾಗಿದೆ. ಅಥವಾ ಪ್ರಳಯ ಕಾಲದಲ್ಲಿ ತಾರ್ಕಿಕರಂತೆ ಯಾವುದೇ ಘಟವಿಲ್ಲ ಆದರೆ ಘಟತ್ವ ಜಾತಿಯಿದೆ. ಅಥವಾ ಪ್ರಾಭಾಕರರ ಮತದಂತೆ ಅತೀತವಾದ ಘಟ ಇಲ್ಲದಿದ್ದರೂ ಕೂಡ ಅಲ್ಲಿ ಜ್ಞಾತತಾ ಇದೆ. ಮತ್ತು 'ಅಹರಹಃ ಸಂಧ್ಯಾಮುಪಾಸೀತ' ಇತ್ಯಾದಿ ವಾಕ್ಯಗಳು ನಿತ್ಯಕರ್ಮವನ್ನು ವಿಧಾನ ಮಾಡುತ್ತಿವೆ. ನಿತ್ಯಕರ್ಮಗಳಿಗೆ ಯಾವುದೇ ಫಲವಿಲ್ಲ. ಆದರೂ ಕೂಡ ವಿಧಾನ ಮಾಡುವುದು ಕಂಡಿದೆ. ನಿಷ್ಫಲವಾದ ಕ್ಲೇಶಕರವಾದ ಕರ್ಮದಲ್ಲಿ ಪುರುಷನನ್ನು ಪ್ರೇರಣೆ ಮಾಡಿದರೆ ವೇದಕ್ಕೆ ಅಪ್ರಾಮಾಣ್ಯ ಬರುತ್ತದೆ. ಆದರೂ ಕೂಡ ನಿತ್ಯಕರ್ಮದ ವಿನಿಯೋಗವನ್ನು ಪೂರ್ವ ಮೀಮಾಂಸಕರು ಹೇಗೆ ಒಪ್ಪಿದ್ದಾರೋ ಅದರಂತೆ ಪ್ರಕೃತ ಜೀವನೂ ಕೂಡ ಉಪಾಧಿರಹಿತವಾದ ಪ್ರತಿಬಿಂಬವುಳ್ಳವನಾಗಲಿ.

**प्रतिध्वनिवत्प्रतिसूर्यवच्छायापुरुषवदिन्द्रचापवच्च ।**

**सोपाधिरनुपाधिश्च प्रतिबिम्बो द्विधेयते ।**
**जीवः परस्यानुपाधिरिन्द्रचापो यथा रवेः ।। इति श्रुतेः ।**

**नहि प्रतिध्वन्यादेः स्वधर्माधायक उपाधिरस्ति । नच हेतुमात्रमुपाधिः । अनादिप्रतिबिम्बस्य जीवस्य तदनपेक्षणात् ।**

ಅದೃಷ್ಟಾಧಿಕರಣ (೨-೩-೧೯)

ಯಾವುದು ಕಾರಣವಾಗಿದೆಯೋ ಅದನ್ನೇ ಉಪಾಧಿ ಎಂದು ಕರೆಯುವುದು ತಪ್ಪು. ಉದಾ– ಬಂಡೆಗಲ್ಲಿನಿಂದ ಪ್ರತಿಧ್ವನಿ ಹುಟ್ಟುತ್ತದೆ. ಇಂತಹ ಕಾರಣವಾದ ಬಂಡೆಗಲ್ಲನ್ನೇ ಉಪಾಧಿ ಎಂದು ಕರೆಯಬಾರದು. ಇದರಂತೆ ಪ್ರತಿಸೂರ್ಯ, ಛಾಯಾ ಪುರುಷ, ಇಂದ್ರಚಾಪ ಇವುಗಳಂತೆ ಜೀವನೂ ಕೂಡ ಉಪಾಧಿರಹಿತವಾದ ಪ್ರತಿಬಿಂಬನಾಗುತ್ತಾನೆ. ಇದನ್ನೇ ಶ್ರುತಿ ಹೀಗೆ ಹೇಳಿದೆ –

ಸೋಪಾಧಿರನುಪಾಧಿಶ್ಚ ಪ್ರತಿಬಿಂಬೋ ದ್ವಿಧೇಯತೇ ।

ಜೀವಃ ಪರಸ್ಯಾನುಪಾಧಿರಿಂದ್ರಚಾಪೋ ಯಥಾ ರವೇಃ ॥

ಪ್ರತಿಬಿಂಬವು ಎರಡು ವಿಧ. ಸೋಪಾಧಿ ಮತ್ತು ಅನುಪಾಧಿ ಎಂದು. ಜೀವನು ಪರಮಾತ್ಮನ ಅನುಪಾಧಿಯಾದ ಪ್ರತಿಬಿಂಬನಾಗಿದ್ದಾನೆ. ಕಾಮನ ಬಿಲ್ಲು ಸೂರ್ಯನಿಗೆ ಪ್ರತಿಬಿಂಬವೆನಿಸಿದಂತೆ ಎಂದು.

ಪ್ರತಿಧ್ವನ್ಯಾದಿಗಳಲ್ಲಿ ಸ್ವಧರ್ಮಾಧಾಯಕವಾದ ಯಾವುದೇ ಉಪಾಧಿಗಳು ಕಾಣಿಸುತ್ತಿಲ್ಲ. ಕೇವಲ ಕಾರಣವಾದದ್ದನ್ನು ಉಪಾಧಿ ಎಂದು ಕರೆಯಬಾರದು. ಅನಾದಿಪ್ರತಿಬಿಂಬನಾದ ಜೀವನಿಗೆ ಕ್ಷಣಿಕವಾದ ಉಪಾಧಿಯ ಅವಶ್ಯಕತೆಯೇ ಇರುವುದಿಲ್ಲ.

**ನಚ ಪ್ರತಿಬಿಮ್ಬಸ್ಯ ಬಿಮ್ಬೇನೇವೋಪಾಧಿನಾಪಿ ನಿರೂಪ್ಯತ್ವಂ ನಿಯತಮ್ । ಪ್ರತಿಧ್ವನ್ಯಾದಾವದರ್ಶನಾತ್ । ಬಿಮ್ಬಪ್ರತಿಬಿಮ್ಬಭೇದಶ್ಚಾನ್ಯತ್ರ ಸಮರ್ಥಿತಃ ।)**

ಪ್ರತಿಬಿಂಬವು ಬಿಂಬನಿರೂಪ್ಯವಾದಂತೆ ಉಪಾಧಿಯಿಂದಲೂ ನಿರೂಪ್ಯವಾಗಲು ಸಾಧ್ಯವಿಲ್ಲ. ಪ್ರತಿಧ್ವನ್ಯಾದಿಗಳಲ್ಲಿ ಇದು ಕಂಡಿಲ್ಲ. ಇನ್ನು ಬಿಂಬ ಹಾಗೂ ಪ್ರತಿಬಿಂಬಗಳಲ್ಲಿರುವ ಭೇದವನ್ನು ನ್ಯಾಯಾಮೃತದಲ್ಲಿ ಸಮರ್ಥನೆ ಮಾಡಿದ್ದೇವೆ.[೧]

**ಅತ್ರ ಜೀವಾನಾಂ ವಿಚಿತ್ರತ್ವಾದವಿಚಿತ್ರಬ್ರಹ್ಮಪ್ರತಿಬಿಮ್ಬತ್ವಂ ನೇತಿ ಶಙ್ಕಾಯಾಃ ಪ್ರವಾಹಾನಾದ್ಯದೃಷ್ಟಾದಿವೈಚಿತ್ರ್ಯೋಕ್ತ್ಯಾ ನಿರಾಸಃ ।**

ಪ್ರಕೃತ ಅದ್ವೈತಿಗಳ ಮತ್ತೊಂದು ಆಕ್ಷೇಪವನ್ನು ನಿರಾಕರಣೆ ಮಾಡಬೇಕು. ಜೀವರುಗಳಲ್ಲಿ ವೈಚಿತ್ರ್ಯವಿದೆ. ಆದರೆ ಒಬ್ಬನೇ ಬ್ರಹ್ಮನಲ್ಲಿ ವೈಚಿತ್ರ್ಯವಿಲ್ಲ. ಇಂತಹ ಬ್ರಹ್ಮನಲ್ಲಿ ಪ್ರತಿಬಿಂಬರಾಗಲು ಹೇಗೆ ಸಾಧ್ಯ? ಈ ಆಶಂಕೆಯು ತಪ್ಪು. ಅನಾದಿಯಾದ ಅದೃಷ್ಟಾದಿಗಳ ವೈಚಿತ್ರ್ಯದಿಂದ ಜೀವರುಗಳಲ್ಲಿ ವೈಚಿತ್ರ್ಯವು ಯುಕ್ತವಾಗುತ್ತದೆ.

**ಭಕ್ತಿಪಾದೇ ''ಸ್ಥಾನವಿಶೇಷಾತ್ ಪ್ರಕಾಶಾದಿವತ್'' ಇತ್ಯತ್ರ ತು ವಿಚಿತ್ರಜೀವಾನನ್ದಾದಿಬಿಮ್ಬತ್ವಾದ್ಬ್ರಹ್ಮಾನನ್ದಾದೇರ್ವೈಚಿತ್ರ್ಯಂ ಸ್ಯಾತ್ । ಬಿಮ್ಬವೈಚಿತ್ರ್ಯಂ ವಿನಾ ಪ್ರತಿಬಿಮ್ಬಾನಾಂ**

(೧)' ಯದ್ವಾ ಭೋಕ್ತೃರಹಿತ' ಎಂಬುದರಿಂದ ಪ್ರಾರಂಭ ಮಾಡಿ 'ಸಮರ್ಥಿತಃ' ಎಂಬುದರ ತನಕ ಕಂಸದಲ್ಲಿರುವ ಪಾಠವು ಪ್ರಕ್ಷಿಪ್ತವಾಗಿದೆ. ಸಾಮಾನ್ಯವಾಗಿ ಈ ವಿಷಯವೆಲ್ಲವೂ ಹಿಂದೆ ಪ್ರಸಕ್ತವಾಗಿದೆ.

**स्वाभाविकवै (जलदर्पणसूर्यकान्ताद्युपाधिवैचित्र्येऽपि बिम्बभूतमुखावैचित्र्ये प्रतिबिम्बवै) चित्र्यादृष्टेरिति शङ्कायाः न केवलमेतदधिकरणोक्तं प्रवाहानाद्यदृष्टादिवैचित्र्यमात्रं तत्र हेतुः, किन्तु उपाधेः स्वरूपानादिज्ञानभक्त्यादिवैचित्र्यं बिम्बस्येश्वरस्य शक्तिविशेषश्च तत्र हेतुः ।**

ಭಕ್ತಿಪಾದದಲ್ಲಿರುವ 'ಸ್ಥಾನವಿಶೇಷಾತ್‌ಪ್ರಕಾಶವತ್' ಎಂಬ ಸೂತ್ರದಿಂದ ಈ ವಿಷಯವು ಗತಾರ್ಥವಾಗಿದೆ. ಹೇಗೆಂದರೆ ಪರಮಾತ್ಮನ ಆನಂದಾದಿ ಗುಣಗಳು ಬಿಂಬಭೂತವಾಗಿವೆ. ನಮ್ಮ ಆನಂದಾದಿ ಗುಣಗಳು ಆ ಬಿಂಬನ ಪ್ರತಿಬಿಂಬ ಭೂತವಾಗಿದೆ. ನಮ್ಮಲ್ಲಿರುವ ಆನಂದಾದಿ ಗುಣಗಳು ವಿಚಿತ್ರವಾಗಿವೆ. ಆದರೆ ಪರಮಾತ್ಮನಲ್ಲಿರುವ ಆನಂದ ಎಂಬ ಗುಣವು ಏಕಪ್ರಕಾರವಾಗಿದೆ. ಇದು ಹೇಗೆ ಸಾಧ್ಯ ? ಎಂಬ ಪ್ರಶ್ನೆಗೆ 'ಸ್ಥಾನವಿಶೇಷಾತ್‌ಪ್ರಕಾಶಾದಿವತ್' ಎಂಬ ಸೂತ್ರದಿಂದ ಉತ್ತರಿಸಲಾಗಿದೆ.

ಹೀಗೆ ಪುನರುಕ್ತಿಯನ್ನು ಆಕ್ಷೇಪ ಮಾಡಬಾರದು. ಏಕೆಂದರೆ ಈ ಅಧಿಕರಣದಲ್ಲಿ ಜೀವರಲ್ಲಿ ವೈಚಿತ್ರ್ಯವಿರುವುದರಿಂದ ಅವಿಚಿತ್ರಬ್ರಹ್ಮಸ್ವರೂಪರಾಗಲು ಸಾಧ್ಯವಿಲ್ಲ ಎಂದು ಆಶಂಕೆ ಮಾಡಿ ಪ್ರವಾಹತಃ ಅನಾದಿಯಾದ್ದರಿಂದ ಅದೃಷ್ಟವೈಚಿತ್ರ್ಯದಿಂದ ಜೀವರಲ್ಲಿ ವೈಚಿತ್ರ್ಯವು ಯುಕ್ತವಾಗುತ್ತದೆಂದು ನಿರಾಕರಣೆ ಮಾಡಲಾಗಿದೆ. ಆದರೆ ಭಕ್ತಿಪಾದದಲ್ಲಿ 'ಸ್ಥಾನವಿಶೇಷಾತ್ ಪ್ರಕಾಶಾದಿವತ್' ಎಂಬ ಸೂತ್ರದಿಂದ ಪ್ರತಿಬಿಂಬಭೂತರಾದ ಜೀವರ ಆನಂದಗಳು ವಿಚಿತ್ರವಾಗಿರುವುದರಿಂದ, ಬಿಂಬಭೂತವಾದ ಪರಮಾತ್ಮನ ಆನಂದದಲ್ಲೂ ಕೂಡ ವೈಚಿತ್ರ್ಯ ಬರಲಿ. ಏಕೆಂದರೆ ಬಿಂಬದಲ್ಲಿ ವೈಚಿತ್ರ್ಯವಿಲ್ಲದೇ ಪ್ರತಿಬಿಂಬಗಳಲ್ಲಿ ಸ್ವಾಭಾವಿಕವಾದ ವೈಚಿತ್ರ್ಯವು ಬರುವುದು ಎಲ್ಲಿಯೂ ಕಂಡಿಲ್ಲ ಎಂಬ ಆಕ್ಷೇಪವನ್ನು ಈ ಅಧಿಕರಣದಲ್ಲಿ ಮಾಡಲಾಗಿದೆ. ಈ ಆಶಂಕೆಗೆ ಅಲ್ಲಿ ಹೀಗೆ ಉತ್ತರಿಸಲಾಗಿದೆ – ಪ್ರವಾಹತಃ ಅನಾದಿಯಾದ ಅದೃಷ್ಟವೈಚಿತ್ರ್ಯವು ಜೀವರಲ್ಲಿರುವ ವೈಚಿತ್ರ್ಯಕ್ಕೆ ಕಾರಣವಾಗಿದೆ. ಇದೊಂದೇ ಕಾರಣವಲ್ಲ. ಮತ್ತೊಂದು ಕಾರಣವೂ ಇದೆ. ನಮ್ಮ ಸ್ವರೂಪಭೂತವಾದ ಜ್ಞಾನ, ಭಕ್ತ್ಯಾದಿಗಳಲ್ಲಿ ವೈಚಿತ್ರ್ಯವಿದೆ. ಕೇವಲ ಈ ಅಧಿಕರಣದಲ್ಲಿ ಹೇಳಲ್ಪಟ್ಟ ಪ್ರವಾಹತಃ ಅನಾದಿಯಾದ ಅದೃಷ್ಟವೈಚಿತ್ರ್ಯವಷ್ಟೇ ಕಾರಣವಲ್ಲ. ಕಿಂತು ಉಪಾಧಿ ಎನಿಸಿದ ಸ್ವರೂಪತಃ ಅನಾದಿಯಾದ ಜ್ಞಾನಭಕ್ತ್ಯಾದಿ ವೈಚಿತ್ರ್ಯವು ಹಾಗೂ ಬಿಂಬರೂಪನಾದ ಈಶ್ವರನ ಶಕ್ತಿವಿಶೇಷವೂ ಕೂಡ ಇದಕ್ಕೆ ಹೇತುವಾಗಿದೆ.

**न ह्यादित्यस्येवान्यस्यापि सूर्यकान्तादौ प्रतिबिम्बोऽग्निं जनयति । न वा सूर्यस्यैव जलादौ स तं जनयतीति निरास इति भेदः ।**

ಸೂರ್ಯನ ಪ್ರತಿಬಿಂಬವು ಸೂರ್ಯಕಾಂತದಲ್ಲಿ ಹಾಗೂ ನೀರಿನಲ್ಲಿ ಎರಡೂ ಕೂಡ ಕಾಣುತ್ತದೆ. ನೀರಿನಲ್ಲಿ ಕಂಡ ಸೂರ್ಯನ ಪ್ರತಿಬಿಂಬವು ಅಗ್ನಿಜನಕವಲ್ಲ, ಸೂರ್ಯಕಾಂತಿಯಲ್ಲಿ ಕಂಡ ಸೂರ್ಯನ ಪ್ರತಿಬಿಂಬವು ಅಗ್ನಿಜನಕವಾಗುತ್ತದೆ. ಅದೇ ಸೂರ್ಯಕಾಂತದಲ್ಲಿ ನಮ್ಮ ಮುಖವು ಪ್ರತಿಬಿಂಬಿತವಾದಾಗ ಆಗಲೂ ಅಗ್ನಿ ಹುಟ್ಟುವುದಿಲ್ಲ. ಆದ್ದರಿಂದ ಬಿಂಬಶಕ್ತಿ ಹಾಗೂ ಉಪಾಧಿಶಕ್ತಿಗಳೆರಡೂ ಕೂಡ ವೈಚಿತ್ರ್ಯಕ್ಕೆ ಕಾರಣವೆಂದು ಹೇಳಿದಂತಾಯಿತು. ಉಪಾಧಿವೈಚಿತ್ರ್ಯವನ್ನು ಕಾರಣದಲ್ಲಿ ಸೇರಿಸದಿದ್ದರೆ ಆಗ ನೀರಿನಲ್ಲಿ ಕಂಡ ಸೂರ್ಯನ ಪ್ರತಿಬಿಂಬವೂ ಕೂಡ ಅಗ್ನಿಜನಕವಾಗಬೇಕಾಗಿತ್ತು. ಆದರೆ ಹಾಗೆ

ಆಗಿಲ್ಲ. ಒಂದುವೇಳೆ ಉಪಾಧಿಶಕ್ತಿಯಷ್ಟೇ ವೈಚಿತ್ರ್ಯಕ್ಕೆ ಜನಕ ಎಂದು ಹೇಳುವುದಾದರೆ ನಮ್ಮ ಮುಖದ ಪ್ರತಿಬಿಂಬವೂ ಕೂಡ ಅಗ್ನಿಜನಕವಾಗಬೇಕಾಗಿತ್ತು. ಆದರೆ ಇದೂ ಕೂಡ ಸಾಧ್ಯವಿಲ್ಲ. ಆದ್ದರಿಂದ ಉಪಾಧಿಶಕ್ತಿ ಹಾಗೂ ಬಿಂಬಶಕ್ತಿ ಇವೆರಡೂ ಕೂಡ ಕಾರಣವಾಗುತ್ತವೆ ಎಂದು ಹೇಳಬೇಕು. ಆದ್ದರಿಂದ ಪ್ರಕೃತ ನಮ್ಮ ಆನಂದಾದಿಗಳಲ್ಲಿ ವೈಚಿತ್ರ್ಯಬರಲು ನಮ್ಮಲ್ಲೇ ಇರುವ ಜ್ಞಾನಭಕ್ತ್ಯಾದಿಗಳ ವೈಚಿತ್ರ್ಯವು ಕಾರಣವಾಗುತ್ತದೆ, ಬಿಂಬಭೂತನಾದ ದೇವರ ಶಕ್ತಿವಿಶೇಷವೂ ಕೂಡ ಕಾರಣವಾಗುತ್ತದೆಂದು ಒಪ್ಪಬೇಕು.

**अत एवात्र भाष्यादावदृष्टवैचित्र्यमेवोक्तम् । तत्र तु ''ऐश्वर्यात्परमाद्विष्णोर्भक्त्ययादीनामनादितः'' इतीश्वरशक्तिः स्वरूपानादिभक्त्यादि-वैचित्र्यश्चोक्तम् ।**

ಆದ್ದರಿಂದಲೇ ಈ ಅಧಿಕರಣದ ಭಾಷ್ಯದಲ್ಲಿ ಅದೃಷ್ಟವೈಚಿತ್ರ್ಯವನ್ನೇ ಕಾರಣವೆಂದು ಹೇಳಲಾಗಿದೆ. ಮೂರನೇ ಪಾದದಲ್ಲಿ 'ಐಶ್ವರ್ಯಾತ್ಪರಮಾದ್ವಿಷ್ಣೋಃ ಭಕ್ತ್ಯಾದೀನಾಂ ಅನಾದಿತಃ' ಎಂಬುದಾಗಿ ಈಶ್ವರಶಕ್ತಿ, ಹಾಗೂ ಸ್ವರೂಪದಲ್ಲಿ ಅನಾದಿಭಕ್ತ್ಯಾದಿಗಳು ಎರಡರ ವೈಚಿತ್ರ್ಯವನ್ನೂ ಕೂಡ ಅಲ್ಲಿ ಹೇಳಲಾಗಿದೆ.

**टीकायामपि ''न चादृष्टानियमेन वैचित्र्यम् । स्वाभाविकानन्दादेरादि-मत्कारणानुपपत्तेः'' इत्यादिनाऽत्रोक्तमदृष्टवैचित्र्यं तत्र पूर्वपक्ष एवाशङ्क्य परिहृतम्।**

'ಸ್ಥಾನವಿಶೇಷಾತ್' ಎಂಬ ಟೀಕೆಯಲ್ಲೂ ಕೂಡ ಪೂರ್ವಪಕ್ಷ ಮಾಡುವ ಸಂದರ್ಭದಲ್ಲಿ ಹೀಗೆ ಹೇಳಿದ್ದಾರೆ – 'ನ ಚ ಅದೃಷ್ಟನಿಯಮೇನ ವೈಚಿತ್ರ್ಯಮ್, ಸ್ವಾಭಾವಿಕಾನಂದಾದೇಃ ಆದಿಮತ್ಕಾರಣಾನುಪಪತ್ತೇಃ' ಬ್ರಹ್ಮನ ಆನಂದಾದಿಗಳು ಏಕಪ್ರಕಾರವಾಗಿದ್ದರೆ ಜೀವನ ಆನಂದಾದಿಗಳಲ್ಲೇಕೆ ವೈಚಿತ್ರ್ಯವನ್ನು ಒಪ್ಪಬೇಕು? ಎಂಬ ಪ್ರಶ್ನೆಗೆ ಅದೃಷ್ಟದ ಅನಿಯಮದಿಂದ ವೈಚಿತ್ರ್ಯವನ್ನು ಹೇಳಬಹುದಲ್ಲವೇ ಎಂದು ಪ್ರಶ್ನಿಸಿಕೊಂಡು, ಸಾಧ್ಯವಿಲ್ಲವೆಂದು ಉತ್ತರಿಸಲಾಗಿದೆ. ಅದೃಷ್ಟಾದಿಗಳು ಕ್ಷಣಿಕವಾಗಿವೆ. ಜ್ಞಾನಭಕ್ತ್ಯಾದಿಗಳು ಸ್ವಾಭಾವಿಕವಾಗಿವೆ. ಸ್ವಾಭಾವಿಕವಾದ ಜ್ಞಾನಭಕ್ತ್ಯಾದಿಗಳಿಗೆ ಅನಿತ್ಯವಾದ ಅದೃಷ್ಟಾದಿಗಳು ಕಾರಣವಾಗಲು ಸಾಧ್ಯವಿಲ್ಲ ಇತ್ಯಾದಿಯಾಗಿ ಇಲ್ಲಿ ಹೇಳಲ್ಪಟ್ಟ ಅದೃಷ್ಟವೈಚಿತ್ರ್ಯವನ್ನೇ ಅಲ್ಲಿ ಪೂರ್ವಪಕ್ಷ ಮಾಡಿ ವಿವರಿಸಿದ್ದಾರೆ.

**अत्र यदुक्तं परैः अदृष्टेत्यादिसूत्रत्रयेण किन्त्वनेकात्मवादिसाङ्ख्यादिमत एवाव्यवस्थेत्युच्यत इति तन्न । मम रीत्या ''अदृष्टानियमात्'' इति हेतोः ''आभास एव च'' इति श्रुतसाध्यान्वयसम्भवे साङ्ख्यादिमतेऽव्यवस्थेति साध्याध्याहारायोगात्। आत्मभेदे न व्यवस्था । ऐक्ये तु व्यवस्थेत्यस्य विरुद्धत्वाच्च । विस्तृतश्चैतदन्यत्रेति।**

ಅದ್ವೈತಿಗಳು 'ಅದೃಷ್ಟಾನಿಯಮಾತ್' ಇತ್ಯಾದಿ ಮೂರುಸೂತ್ರಗಳು ಸೇರಿ ಒಂದು ಅಧಿಕರಣವೆಂದು ಪರಿಗಣಿಸಿದ್ದಾರೆ. ಹಿಂದಿನ ಅಧಿಕರಣದಲ್ಲಿ ಜೀವನು ಬ್ರಹ್ಮಾಂಶನಾಗಿದ್ದಾನೆಂದು ಸಮರ್ಥಿಸಿದ್ದಾರೆ. ಪ್ರತಿಯೊಬ್ಬ ಜೀವರು ಬ್ರಹ್ಮರ ಅಂಶರಾಗಿದ್ದಾರೆಂದು ಹೇಳಿದ ಮೇಲೆ ಬ್ರಹ್ಮರಿಂದ

ಅಭಿನ್ನರಾಗಿದ್ದಾರೆಂದು ಹೇಳಿದಂತಾಯಿತು. ಜೀವರಿಗೆ ಪರಸ್ಪರ ಅಭೇದವಿದ್ದರೆ ಅವ್ಯವಸ್ಥೆಯು ಉಂಟಾಗಬೇಕಲ್ಲವೇ? ಎಂಬ ಪ್ರಶ್ನೆಗೆ ಅಸಂತತೇಃ ಎಂಬ ಸೂತ್ರವು ಉತ್ತರಿಸುತ್ತಿದೆ. ಒಬ್ಬನೇ ಜೀವನು ಪ್ರತಿಯೊಬ್ಬರ ಶರೀರದಲ್ಲಿ ಇರುವುದಿಲ್ಲ. ಆದ್ದರಿಂದ ನಮ್ಮ ಮತದಲ್ಲಿ ಅವ್ಯವಸ್ಥಾ ದೋಷವು ಬರುವುದಿಲ್ಲ. ಆದರೆ ಭೇದವಾದಿಗಳಾದ ಸಾಂಖ್ಯ, ತಾರ್ಕಿಕ ಮೊದಲಾದವರ ಮತದಲ್ಲಿ ಸುಖದುಃಖಾದಿಗಳ ಅವ್ಯವಸ್ಥಾದೋಷವು ಉಂಟಾಗುತ್ತದೆ. ನಾವು ಹೇಳುವಂತೆ 'ಅದೃಷ್ಟಾನಿಯಮಾತ್' ಎಂಬ ಹೇತುವಿಗೆ 'ಆಭಾಸ ಏವಚ' ಎಂಬ ಹಿಂದಿನ ಸೂತ್ರದಲ್ಲಿ ಪ್ರಸಕ್ತವಾದ ಪರಮಾತ್ಮನ ಪ್ರತಿಬಿಂಬರೇ ಆಗಿದ್ದಾರೆ ಎಂಬ ಸಾಧ್ಯದ ಜೊತೆ ಅನ್ವಯ ಕೂಡುತ್ತಿರುವಾಗ ನೀವು ಸಾಂಖ್ಯಾದಿಮತದ ಪ್ರಕಾರ ಅವ್ಯವಸ್ಥಾ ಎಂಬ ಸಾಧ್ಯವನ್ನು ಅಧ್ಯಾಹಾರ ಮಾಡಿಕೊಂಡು ಅದರ ಜೊತೆ ಅನ್ವಯವನ್ನು ಹೇಳುವುದು ಅಯುಕ್ತವಾಗುತ್ತದೆ. ವಾಸ್ತವಿಕವಾಗಿ ಜೀವಬ್ರಹ್ಮರಿಗೆ ಐಕ್ಯವನ್ನು ಹೇಳಿದಾಗ ಸುಖದುಃಖದ ಅವ್ಯವಸ್ಥೆ ಉಂಟಾಗುತ್ತದೆ. ಭೇದವಾದದಲ್ಲಿ ಆ ದೋಷವು ಪರಿಹಾರವಾಗುತ್ತದೆ. ಆದರೆ ನೀನು ಇದಕ್ಕೆ ವಿರುದ್ಧವಾಗಿ ಆತ್ಮಭೇದವಾದದಲ್ಲಿಯೇ ಅವ್ಯವಸ್ಥೆ ಬರುತ್ತದೆ, ಐಕ್ಯವಾದದಲ್ಲಿ ವ್ಯವಸ್ಥೆ ಬರುತ್ತದೆಂದು ಹೇಳುತ್ತಿರುವಿ. ಇನ್ನೂ ಹೆಚ್ಚಿನ ದೋಷವನ್ನು ಉಪಾಧಿಖಂಡನಾದಿ ಗ್ರಂಥಗಳಲ್ಲಿ ವಿವರಿಸಲಾಗಿದೆ.

**अस्मिन्पाद आद्यमधिकरणत्रिकमुत्पत्त्यनुत्पत्तिश्रुत्योर्विरोधनिरासेनैका पेटिका। तत्राद्ये द्वितीये च ब्रह्मेतरयोर्नभोनभस्वतोरुत्पत्त्या सिद्धान्तः । तृतीये तु ब्रह्मणोऽनुत्पत्त्या सिद्धान्त इति भेदः ।**

ಈ ಪಾದದಲ್ಲಿ ಒಟ್ಟು ಹತ್ತೊಂಭತ್ತು ಅಧಿಕರಣಗಳಿವೆ. ೧. ವಿಯದಧಿಕರಣ, ೨. ಮಾತರಿಶ್ವಾಧಿಕರಣ, ೩.ಅಸಂಭವಾಧಿಕರಣ ಈ ಮೂರು ಅಧಿಕರಣಗಳು ಉತ್ಪತ್ತಿಶ್ರುತಿ ಹಾಗೂ ಅನುತ್ಪತ್ತಿ ಶ್ರುತಿಗೆ ವಿರೋಧವನ್ನು ಪರಿಹಾರ ಮಾಡುತ್ತಿವೆ. ವಿಯದಧಿಕರಣದಲ್ಲಿ ಆಕಾಶಕ್ಕೆ ಉತ್ಪತ್ತಿ ಇದೆ ಎಂದು, ಮಾತರಿಶ್ವಾಧಿಕರಣದಲ್ಲಿ ವಾಯುದೇವರಿಗೆ ಉತ್ಪತ್ತಿ ಇದೆ ಎಂದು, ಅಸಂಭವಾಧಿಕರಣದಲ್ಲಿ ಪರಮಾತ್ಮನಿಗೆ ಉತ್ಪತ್ತಿ ಇಲ್ಲ ಎಂಬುದಾಗಿ ಹೇಳಲಾಗಿದೆ. ಈ ಮೂರು ಅಧಿಕರಣಗಳಲ್ಲಿ ಉತ್ಪತ್ತಿಶ್ರುತಿ ಹಾಗೂ ಅನುತ್ಪತ್ತಿ ಶ್ರುತಿಗಳಿಗೆ ವಿರೋಧ ಪರಿಹಾರ ಮಾಡುವುದು ಸಾಧಾರಣವಾಗಿದೆ. ಆದರೆ ಮೊದಲೆರಡು ಅಧಿಕರಣಗಳಲ್ಲಿ ಅನುತ್ಪತ್ತಿ ಶ್ರುತಿಯನ್ನು ಸಾವಕಾಶ ಮಾಡಿ ಉತ್ಪತ್ತಿ ಶ್ರುತಿಯ ಬಲದಿಂದ ಆಕಾಶಕ್ಕೆ ಹಾಗೂ ಬ್ರಹ್ಮೇತರವಾದ ಸಕಲಕ್ಕೂ ಕೂಡ ಉತ್ಪತ್ತಿ ಇದೆ ಎಂದು ಸಿದ್ಧಾಂತ ಮಾಡಲಾಗಿದೆ. ಮೂರನೇ ಅಧಿಕರಣದಲ್ಲಿ ಬ್ರಹ್ಮನಿಗೂ ಕೂಡ ಉತ್ಪತ್ತಿ ಇದೆಯೋ ಏನೋ? ಎಂಬ ಸಂಶಯ ಬಂದರೆ, ಉತ್ಪತ್ತಿ ಶ್ರುತಿಯನ್ನು ಸಾವಕಾಶ ಮಾಡಿ ಅನುತ್ಪತ್ತಿ ಶ್ರುತಿಯು ಮುಖ್ಯ ಎಂದು ಸಿದ್ಧಾಂತ ಮಾಡಲಾಗಿದೆ. ಹೀಗೆ ಈ ಮೂರು ಅಧಿಕರಣಗಳಿಗೆ ಏಕವಿಧವಾದ ಪೀಠಿಕಾಸಂಗತಿ ಇದೆ.

**चतुर्थपञ्चमषष्ठानि तेजआदेरुत्प (त्तावप्युत्पा)त्तिं स्वीकृत्योत्पाद्योत्पादकभावरूपसम्बन्धविषयकविरोधे शङ्किते तन्निरासकत्वेनैका पेटिका । तत्राप्याद्यद्वितीययोरुत्पादकविशेषविषयविरोधनिरासेन सिद्धान्तः । तृतीय उत्पाद्यविशेषविषयविरोधनिरासेन सिद्धान्त इति भेदः ।**

ಅದೃಷ್ಟಾಧಿಕರಣ (೨-೩-೧೯)

೪. ತೇಜೋಧಿಕರಣ, ೫. ಅಬಧಿಕರಣ, ೬. ಪೃಥಿವ್ಯಧಿಕರಣ ಹೀಗೆ ನಾಲ್ಕು, ಐದು, ಆರನೆಯ ಅಧಿಕರಣದಲ್ಲಿ ತೇಜಸ್ಸು ಮೊದಲಾದವುಗಳಿಗೆ ಉತ್ಪತ್ತಿಯನ್ನು ಪೂರ್ವಪಕ್ಷಿಯು ಒಪ್ಪಿದ್ದಾನೆ. ಆದರೆ ಉತ್ಪಾದ್ಯಉತ್ಪಾದಕ ಭಾವರೂಪವಾದ ಸಂಬಂಧವಿಷಯದಲ್ಲಿ ವಿರೋಧವನ್ನು ಆಶಂಕಿಸಲಾಗಿದೆ. ಅದನ್ನು ಪರಿಹಾರ ಮಾಡುವ ಮೂಲಕ ಈ ಮೂರು ಅಧಿಕರಣಗಳು ಏಕವಿಧವಾದ ಪೇಟಿಕಾ ಸಂಗತಿಯನ್ನು ಹೊಂದಿವೆ. ತೇಜಸ್ಸು ಬ್ರಹ್ಮನಿಂದ ಹುಟ್ಟುತ್ತದೋ, ವಾಯುವಿನಿಂದ ಹುಟ್ಟುತ್ತದೋ? ಅದರಂತೆ ಆಪವು ತೇಜಸ್ಸಿನಿಂದ ಹುಟ್ಟುತ್ತದೋ, ಬ್ರಹ್ಮನಿಂದ ಹುಟ್ಟುತ್ತದೋ? ಹೀಗೆ ಉತ್ಪಾದ್ಯ-ಉತ್ಪಾದಕಭಾವಸಂಬಂಧದ ವಿಷಯದಲ್ಲಿ ಶ್ರುತಿವಿರೋಧವು ಪ್ರಾಪ್ತವಾಗುತ್ತದೆ. ಪೃಥಿವ್ಯಧಿ-ಕರಣದಲ್ಲಿ ವಿಲಕ್ಷಣವಾಗಿ ವಿಚಾರ ಮಾಡಲಾಗಿದೆ. ಆ ನೀರಿನಿಂದ ಹುಟ್ಟುವುದು ಅನ್ನವೋ ಅಥವಾ ಪೃಥಿವಿಯೋ? ಎಂದು ಸಂಶಯವು ಬಂದಾಗ ಪೃಥಿವಿಯೇ ಹುಟ್ಟುತ್ತದೆ ಎಂದು ಹೇಳಲಾಗಿದೆ. ಅನ್ನಶಬ್ದವೂ ಕೂಡ ಪೃಥಿವಿಪರವೇ ಆಗಿದೆ. ಹೀಗೆ ಮೊದಲೆರಡು ಅಧಿಕರಣಗಳು ಉತ್ಪಾದಕ-ವಿಶೇಷವಿಷಯವಿರೋಧದ ನಿರಾಸಕವಾಗಿದೆ. ಉತ್ಪಾದಕ ಸಾಮಾನ್ಯದಲ್ಲಿ ವಿರೋಧವಿಲ್ಲ, ಉತ್ಪಾದಕವಿಶೇಷದಲ್ಲೇ ವಿರೋಧವಿದೆ. ಉತ್ಪತ್ತಿ ಇದೆ ಎಂದು ಒಪ್ಪಿದ ಮೇಲೆ ಯಾವುದೋ ಒಂದು ಉತ್ಪಾದಕವಿದೆ ಎಂದು ಸಿದ್ಧವಾಯಿತು. ಅದು ಬ್ರಹ್ಮನೋ, ತೇಜಸ್ಸೋ? ಎಂಬ ವಿಶೇಷವಿಷಕವಾದ ವಿರೋಧವನ್ನು ಪರಿಹಾರ ಮಾಡಲಾಗಿದೆ. ಮೂರನೆಯ ಪೃಥಿವ್ಯಧಿಕರಣದಲ್ಲಿ ಉತ್ಪಾದ್ಯದ ವಿಷಯದಲ್ಲಿ ವಿರೋಧವನ್ನು ಆಶಂಕಿಸಿ ಸಿದ್ಧಾಂತ ಮಾಡಲಾಗಿದೆ. ಆದರೆ ಮೂರರಲ್ಲೂ ಕೂಡ ಉತ್ಪಾದ್ಯ-ಉತ್ಪಾದಕಭಾವಸಂಬಂಧ ಸಾಧಾರಣವಾಗಿದೆ.

**सप्तमाष्टमनवमदशमानि संहारविषयविरोधनिरासकत्वेनैका पेटिका । तत्राप्याद्ये संहर्तृविषयविरोधनिरासः । द्वितीये तृतीये च संहारक्रमविषयविरोधनिरासः। चतुर्थे ब्रह्मविषयकसंहारविरोधपरिहारः ।**

೭. ತದಭಿಜ್ಞಾನಾಧಿಕರಣ, ೮. ವಿಪರ್ಯಯಾಧಿಕರಣ, ೯. ಅಂತರಾಧಿಕರಣ, ೧೦. ಆತ್ಮಾಧಿ-ಕರಣ ಹೀಗೆ ಏಳರಿಂದ ಹತ್ತನೆಯ ಅಧಿಕರಣದ ತನಕ ಸಂಹಾರವಿಷಯಕವಾದ ವಿರೋಧವನ್ನು ಪರಿಹರಿಸಲಾಗಿದೆ. ಆದ್ದರಿಂದ ಈ ನಾಲ್ಕುವಿಧವಾದ ಅಧಿಕರಣಗಳು ಏಕವಿಧವಾದ ಪೇಟಿಕಾ ಸಂಗತಿಯನ್ನು ಹೊಂದಿವೆ.

ಮೊದಲನೆಯ ತದಭಿಜ್ಞಾನಾಧಿಕರಣದಲ್ಲಿ ಸಂಹಾರಕನಾದವನು ಶಿವನೋ, ಬ್ರಹ್ಮನೋ? ಎಂದು ಆಕ್ಷೇಪ ಮಾಡಿಕೊಂಡು ಬ್ರಹ್ಮನೇ ಸಂಹಾರಕನಾಗಿದ್ದಾನೆಂದು ಸಮರ್ಥನೆ ಮಾಡಲಾಗಿದೆ. ಮುಂದಿನ ವಿಪರ್ಯಯಾಧಿಕರಣ ಹಾಗೂ ಅಂತರಾಧಿಕರಣವೆಂಬ ಎರಡನೇ ಹಾಗೂ ಮೂರನೇ ಅಧಿಕರಣದಲ್ಲಿ ಸೃಷ್ಟಿಯ ಕ್ರಮದಲ್ಲಿಯೇ ಸಂಹಾರವು ಆಗುತ್ತದೋ ಅಥವಾ ಉತ್ಪತ್ತಿ ಕ್ರಮಕ್ಕೆ ವಿಪರೀತ ಕ್ರಮದಲ್ಲಿ ಲಯವಾಗುತ್ತದೋ? ಎಂಬ ಸಂಶಯವು ಬಂದರೆ ವಿಪರೀತ ಕ್ರಮದಲ್ಲಿಯೇ ಲಯವಾಗುತ್ತದೆಂದು ಸಿದ್ಧಾಂತ ಮಾಡಲಾಗಿದೆ. ನಾಲ್ಕನೆಯ ಆತ್ಮಾಧಿಕರಣದಲ್ಲಿ ಬ್ರಹ್ಮನಿಗೂ ಕೂಡ ಲಯವಿದೆಯೋ ಏನೋ? ಎಂಬ ಸಂಶಯವು ಬಂದರೆ ಬ್ರಹ್ಮನಿಗೆ ಲಯವಿಲ್ಲ ಎಂದು ಸಿದ್ಧಾಂತ

ಮಾಡಲಾಗಿದೆ. ಹೀಗೆ ಬ್ರಹ್ಮವಿಷಯಕಸಂಹಾರ ವಿರೋಧ ಪರಿಹಾರಕ್ಕಾಗಿ ಆತ್ಮಾಧಿಕರಣ ಹೊರಟಿದೆ. ಹೀಗೆ ಏಳರಿಂದ ಹತ್ತನೆಯ ಅಧಿಕರಣದ ತನಕ ಎಲ್ಲಾ ಅಧಿಕರಣಗಳು ಸಂಹಾರ ವಿಷಯಕವಾದ ಶ್ರುತಿವಿರೋಧ ಪರಿಹಾರಕ್ಕಾಗಿಯೇ ಹೊರಟಿವೆ.

**एकादशमारभ्यैकोनविंशतिपर्यन्तानि जीवविषयत्वेनैका पेटिका । तच्चाधिकरणनवकं यथाक्रमं जीवस्य सादित्वाणुत्वानेकदेहस्थितत्वेश्वरभिन्नत्वानन्तत्व-ज्ञानानन्दादिरूपत्वपरतन्त्रकर्तृत्वेश्वरांशत्वतत्प्रतिबिम्बत्वरूपप्रमेयनवकप्रतिपादक-मिति द्रष्टव्यम् ।। ।**

इति श्रीमद्ब्रह्मण्यतीर्थपूज्यपादानां शिष्येण व्यासयतिना विरचितायां श्रीमद्भाष्यटीकाविवृतौ तात्पर्यचन्द्रिकायाम् अदृष्टाधिकरणं सम्पूर्णम् द्वितीयाध्यायस्य तृतीयःपादः ।।१९।।२।।३।।

ಹನ್ನೊಂದನೆಯ ಅಧಿಕರಣದಿಂದ ಪ್ರಾರಂಭ ಮಾಡಿ ಹತ್ತೊಂಭತ್ತನೆಯ ಅಧಿಕರಣದ ತನಕ ಎಲ್ಲಾ ಅಧಿಕರಣಗಳು ಜೀವವಿಷಯಕವಾದ ಶ್ರುತಿವಿರೋಧವನ್ನು ಪರಿಹಾರ ಮಾಡಲು ಹೊರಟಿವೆ. ಆದ್ದರಿಂದ ಏಕವಿಧವಾದ ಪೇಟಿಕಾ ಸಂಗತಿಯನ್ನು ಹೊಂದಿವೆ. ಈ ಒಂಭತ್ತು ಅಧಿಕರಣಗಳಲ್ಲಿ ಕ್ರಮವಾಗಿ ಜೀವನ ಸಾದಿತ್ವ, ಅಣುತ್ವ, ಅನೇಕದೇಹಸ್ಥಿತತ್ವ, ಈಶ್ವರಭಿನ್ನತ್ವ, ಅನಂತತ್ವ, ಜ್ಞಾನಾನಂದಾದಿರೂಪತ್ವ, ಪರತಂತ್ರಕರ್ತೃತ್ವ, ಈಶ್ವರಾಂಶತ್ವ, ತತ್ಪ್ರತಿಬಿಂಬತ್ವ ಎಂಬ ಒಂಭತ್ತು ಪ್ರಮೇಯಗಳನ್ನು ಪ್ರತಿಪಾದನೆ ಮಾಡಲಾಗಿದೆ. ಮೊದಲನೆಯ ಜ್ಞಾನಾಧಿಕರಣದಲ್ಲಿ ಪರಾಧೀನಾವಾಪ್ತಿ ಅಥವಾ ದೇಹಯೋಗವೆಂಬ ಉತ್ಪತ್ತಿಯು ಜೀವನಿಗಿದೆ ಎಂದು ಸಮರ್ಥನೆ ಮಾಡಲಾಗಿದೆ. ಅಂತಹ ಜೀವನು ಅಣುವೋ ವ್ಯಾಪ್ತನೋ? ಎಂಬ ಸಂಶಯವನ್ನು ಮುಂದಿನ ಉತ್ಕ್ರಾಂತ್ಯಧಿಕರಣದಲ್ಲಿ ಪರಿಹರಿಸಲಾಗಿದೆ. ಜೀವನು ಅಣುವಾಗಿದ್ದರೂ ಕೂಡ ಪರಮಾತ್ಮನ ಅಚಿಂತ್ಯಾದ್ಭುತಶಕ್ತಿಯಿಂದ ಅನೇಕ ದೇಹದಲ್ಲಿ ನೆಲೆಸಿದ್ದಾನೆ ಎಂಬುದನ್ನು ಹದಿಮೂರನೆಯ ವ್ಯತಿರೇಕಾಧಿಕರಣದಲ್ಲಿ ಸಮರ್ಥನೆ ಮಾಡಲಾಗಿದೆ. ಜೀವನಿಗೆ ಈಶ್ವರಸಾಮ್ಯವನ್ನು ಪರಿಹರಿಸಿದಿರಿ ಆದರೆ ಈಶ್ವರನೇ ಆಗಿರಬಹುದಲ್ಲವೇ? ಎಂಬ ಆಶಂಕೆಯನ್ನು ಪರಿಹರಿಸಲು ಹದಿನಾಲ್ಕನೆಯ ಪೃಥಗುಪದೇಶಾಧಿಕರಣ ಹೊರಟಿದೆ. ಉಪಾಧಿ ನಾಶದಿಂದ ಜೀವನೂ ಕೂಡ ನಾಶವಾಗಬಹುದಲ್ಲವೇ? ಎಂಬ ಶಂಕೆಯು ಪ್ರಾಪ್ತವಾದರೆ ಅವನ ಉಪಾಧಿಯು ಯಾವದಾತ್ಮಭಾವಿಯಾಗಿದೆ ಆದ್ದರಿಂದ ಉಪಾಧಿನಾಶವೂ ಇಲ್ಲ, ತತ್ಪ್ರಯುಕ್ತವಾಗಿ ಜೀವಸ್ವರೂಪವೂ ನಾಶವಾಗುವುದಿಲ್ಲ ಎಂಬುದನ್ನು ಯಾವದಧಿಕರಣದಲ್ಲಿ ಸಮರ್ಥನೆ ಮಾಡಲಾಗಿದೆ. ಜೀವನು ಜ್ಞಾನಾನಂದಾದಿಸ್ವರೂಪವುಳ್ಳವನಾದರೆ ಏಕೆ ಅಭಿವ್ಯಕ್ತನಾಗುವುದಿಲ್ಲ ಎಂಬ ಪ್ರಶ್ನೆಗೆ ಪುಂಸ್ತ್ವಾಧಿಕರಣವು ಉತ್ತರಿಸುತ್ತಿದೆ. ಮುಕ್ತಿಯಲ್ಲಿ ಅದು ಅಭಿವ್ಯಕ್ತವಾಗುತ್ತದೆ. ಆದ್ದರಿಂದ

ದೋಷವಿಲ್ಲ. ಇಂತಹ ಜೀವನಿಗೆ ಕರ್ತೃತ್ವ ಪ್ರತಿಪಾದನೆ ಮಾಡಲು ಕರ್ತೃತ್ವಾಧಿಕರಣವು ಹೊರಟದೆ. ಇಂತಹ ಜೀವನು ಪರಮಾತ್ಮನ ಭಿನ್ನಾಂಶನಾಗಿದ್ದಾನೆ ಎಂಬುದನ್ನು ಅಂಶಾಧಿಕರಣದಲ್ಲಿ ಪರಮಾತ್ಮನ ಪ್ರತಿಬಿಂಬನಾಗಿದ್ದಾನೆ ಎಂಬ ವಿಷಯವನ್ನು ಅದೃಷ್ಟಾಧಿಕರಣದಲ್ಲಿ ಸಮರ್ಥನೆ ಮಾಡಲಾಗಿದೆ.

ಇಲ್ಲಿಗೆ ಶ್ರೀಮದ್ಬ್ರಹ್ಮಣ್ಯತೀರ್ಥರ ಪೂಜ್ಯಪಾದರ ಶಿಷ್ಯರಾದ ಶ್ರೀವ್ಯಾಸತೀರ್ಥಯತಿಗಳಿಂದ ವಿರಚಿತವಾದ ಶ್ರೀಮದ್ಬ್ರಹ್ಮಸೂತ್ರಭಾಷ್ಯ ಟೀಕಾವಿವೃತ್ತಿ ಎನಿಸಿದ ತಾತ್ಪರ್ಯಚಂದ್ರಿಕಾ ಗ್ರಂಥದಲ್ಲಿ ಅದೃಷ್ಟಾಧಿಕರಣವು ಸಂಪೂರ್ಣವಾಯಿತು. ಇಲ್ಲಿಗೆ ದ್ವಿತೀಯಾಧ್ಯಾಯದ ಮೂರನೇ ಪಾದವು ಸಮಾಪ್ತವಾಯಿತು.

॥ ಶ್ರೀಮಧ್ವೇಶಾರ್ಪಣಮಸ್ತು ॥

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**अदृष्टानियमात्** ।। ''न जीवा भगवत्प्रतिबिम्बा'' इति टीकासूचितसङ्गतिमाह – **अंशत्वेऽपीति** ।। **पूर्वोक्तमिति** ।। ''आभास एव च'' इत्युक्तमित्यर्थः । पूर्वपक्षटीकासूचितचिन्तामाह – **अत्र जीवस्येति** ।।

'ನ ಜೀವಾಃ ಭಗವತ್‌ಪ್ರತಿಬಿಂಬಾಃ' ಎಂಬ ಟೀಕೆಯಿಂದ ಸೂಚಿತವಾದ ಅಧಿಕರಣದ ಸಂಗತಿಯನ್ನು 'ಅಂಶತ್ವೇಪಿ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. 'ಪೂರ್ವೋಕ್ತಂ' ಎಂದರೆ 'ಆಭಾಸ ಏವ ಚ' ಎಂಬ ಸೂತ್ರದಿಂದ ಹೇಳಲ್ಪಟ್ಟದ್ದು ಎಂದರ್ಥ. ಪೂರ್ವಪಕ್ಷಟೀಕೆಯಿಂದ ಸೂಚಿತವಾದ ಸಂಶಯವನ್ನು 'ಅತ್ರ ಜೀವಸ್ಯ' ಎಂಬುದರಿಂದ ನಿರೂಪಣೆ ಮಾಡುತ್ತಿದ್ದಾರೆ.

ವಿವರಣೆ – ಹಿಂದಿನ ಅಧಿಕರಣದಲ್ಲಿ ಜೀವರು ಭಗವಂತನ ಅಂಶರೆಂದು ಸಮರ್ಥನೆ ಮಾಡಲಾಯಿತು. ಹಾಗಾದರೆ ಮತ್ಸ್ಯಾದಿಗಳೂ ಕೂಡ ಭಗವದಂಶ ಆಗಿರುವಾಗ ಜೀವರಿಗೂ ಮತ್ಸ್ಯಾದಿ ಅವತಾರಕ್ಕೂ ಏನೂ ವ್ಯತ್ಯಾಸವಿಲ್ಲ? ಎಂಬ ಆಕ್ಷೇಪಕ್ಕೆ ಮತ್ಸ್ಯಾದಿಗಳು ಭಗವಂತನ ಸ್ವರೂಪಾಂಶರಾಗಿದ್ದಾರೆ, ಜೀವರುಗಳು ಭಿನ್ನಾಂಶರಾಗಿದ್ದಾರೆ ಎಂದು ಹೇಳಲಾಯಿತು. ಮತ್ಸ್ಯಾದಿಗಳಿಗೆ ದೇಹಸಂಬಂಧವಿದೆ, ಜೀವಾದಿಗಳಿಗೆ ದೇಹಸಂಬಂಧವಿಲ್ಲ. ಜೀವರುಗಳು ಅಂಶಿಯ ಅಧೀನರಾಗಿದ್ದಾರೆ, ಮತ್ಸ್ಯಾದಿಗಳು ಅಂಶಿಯ ಅಧೀನವಾಗಿಲ್ಲ. ಹೀಗೆ ಅನೇಕ ಹೇತುಗಳನ್ನು ಹೇಳುವ ಸಂದರ್ಭದಲ್ಲಿ ಜೀವರು ಭಗವಂತನ ಪ್ರತಿಬಿಂಬರಾಗಿದ್ದಾರೆ, ಮತ್ಸ್ಯಾದಿಗಳು ಭಗವಂತನ ಪ್ರತಿಬಿಂಬರಾಗಿಲ್ಲ ಎಂದು ಹೇಳಲಾಯಿತು. ಜೀವಾದಿಗಳಲ್ಲಿರುವ ಈ ಪ್ರತಿಬಿಂಬತ್ವವನ್ನೇ ಸಮರ್ಥನೆ ಮಾಡಲು ಈ ಅಧಿಕರಣವು ಹೊರಟದೆ. ಹೀಗೆ ಹಿಂದಿನ ಅಧಿಕರಣದಿಂದ ಸಂಗತಿಯನ್ನು ತಿಳಿಯಬೇಕು.

**प्रकाशः –** अत्र न्यायविवरणरीत्या टीकायां ''न चैकप्रतिबिम्बानां मिथो वैचित्र्यं सम्भवति'' इत्युक्तिरुपलक्षणम् । नच स्वरूपोपाधेर्वैचित्र्याद्वैचित्र्यमिति

वाच्यम् । स्वरूपभूते प्रतिबिम्बनोपाधित्वस्यैवादृष्टचरत्वात् । लोके दर्पणाद्युपाधेर्भिन्नस्यैव प्रतिबिम्बनोपाधित्वदर्शनादित्यपि पूर्वपक्षो ध्येयः ।

ಟೀಕೆಯಲ್ಲಿ ಹೀಗೆ ಆಕ್ಷೇಪ ಮಾಡಲಾಗಿದೆ– ಒಂದುವೇಳೆ ಜೀವರು ಭಗವಂತನ ಪ್ರತಿಬಿಂಬರಾಗಿದ್ದಲ್ಲಿ ಬಿಂಬಭೂತನಾದ ಭಗವಂತನಲ್ಲಿ ಏನೂ ವೈಚಿತ್ರ್ಯವಿಲ್ಲ. ಆದ್ದರಿಂದ ಪ್ರತಿಬಿಂಬರಾದ ಜೀವರಲ್ಲಿ ಪರಸ್ಪರ ವೈಚಿತ್ರ್ಯವು ಇರಲೇಬಾರದು. ಯಾವಾಗ ಪರಸ್ಪರ ವೈಚಿತ್ರ್ಯವಿದೆಯೋ ಆದರಿಂದಲೇ ಜೀವರುಗಳು ಪರಮಾತ್ಮನ ಪ್ರತಿಬಿಂಬರಲ್ಲ ಎಂದು ಹೇಳಿದ್ದಾರೆ. ಇದರ ಜೊತೆ ಮತ್ತೊಂದು ಅಧಿಕಾಕ್ಷೇಪವನ್ನೂ ಕೂಡ ತಿಳಿಯಬೇಕು. ಪರಮಾತ್ಮನು ಏಕಪ್ರಕಾರನಾಗಿದ್ದರೂ ಕೂಡ ಉಪಾಧಿಯಲ್ಲಿ ವೈಚಿತ್ರ್ಯವಿದೆ. ಆದ್ದರಿಂದ ಜೀವರಲ್ಲೂ ಕೂಡ ವೈಚಿತ್ರ್ಯವಿರಬಹುದಲ್ಲವೇ? ಎಂದು.

ಇಲ್ಲಿ ಉಪಾಧಿ ಎಂದರೆ ಯಾವುದು? ಬಾಹ್ಯೋಪಾಧಿಯೋ? ಸ್ವರೂಪೋಪಾಧಿಯೋ? ಬಾಹ್ಯೋಪಾಧಿ ಎಂದರೆ ಉಪಾಧಿ ನಾಶದಿಂದ ಜೀವನಾಶವನ್ನು ಹೇಳುವ ಪರಿಸ್ಥಿತಿ ಬರುತ್ತದೆ. ಸ್ವರೂಪಭೂತವಾದ ಉಪಾಧಿ ವೈಚಿತ್ರ್ಯವನ್ನು ಹೇಳುವುದಾಗಿದ್ದಲ್ಲಿ ಸ್ವರೂಪಕ್ಕೆ ಉಪಾಧಿತ್ವವು ಎಲ್ಲಿಯೂ ಕೂಡ ಕಂಡಿಲ್ಲ. ಏಕೆಂದರೆ ಲೋಕದಲ್ಲಿ ಪ್ರತಿಬಿಂಬಕ್ಕೆ ದರ್ಪಣವು ಉಪಾಧಿಯಾಗುವುದು ಕಂಡಿದೆ. ಇಲ್ಲಿ ದರ್ಪಣವೇ ಬೇರೆ, ಬಿಂಬಭೂತವಾದ ಮುಖವೇ ಬೇರೆ. ಆದ್ದರಿಂದ ಪ್ರತಿಬಿಂಬಕ್ಕಿಂತ ಭಿನ್ನವಾದ ದರ್ಪಣಾದಿಗಳಿಗೆ ಉಪಾಧಿತ್ವವಿರುವುದು ಲೋಕದಲ್ಲಿ ಕಂಡಿದೆ. ಹೀಗಿರುವಾಗ ಪ್ರತಿಬಿಂಬವನ್ನೇ ಉಪಾಧಿಯನ್ನಾಗಿ ಹೇಳುವುದು ಸರಿಯಾಗುವುದಿಲ್ಲ. ಈ ಆಕ್ಷೇಪವನ್ನು ಟೀಕೆಯಲ್ಲಿ ಹೇಳದಿದ್ದರೂ ಕೂಡ ಉಪಲಕ್ಷಣಯಾ ವಿವಕ್ಷಿಸಬೇಕು. ಟೀಕೆಯಲ್ಲಿ ಮಾಡಲ್ಪಟ್ಟ 'ನ ಚ ಏಕಪ್ರತಿಬಿಂಬಾನಾಂ ಮಿಥೋವೈಚಿತ್ರ್ಯಂ ಸಂಭವತಿ' ಎಂಬ ಆಕ್ಷೇಪವು ನ್ಯಾಯವಿವರಣದ ಅನುಸಾರಿಯಾಗಿ ಇರುತ್ತದೆ.

**प्रकाशः** – सिद्धान्ताशयस्तु विवरिष्यत इति भावेन तदुपयुक्तचिन्तामाह – **तदर्थं बिम्बस्येति** ।। **अतीतेति** ।। ''अंशो नान'' इत्यधिकरण इत्यर्थः ।

ಸಿದ್ಧಾಂತದ ಅಭಿಪ್ರಾಯವನ್ನು ಮುಂದೆ ವಿವರಿಸುತ್ತೇವೆ ಎಂಬ ವಿವಕ್ಷೆಯಿಂದ ತದುಪಯುಕ್ತವಾದ ಸಂಶಯವನ್ನು 'ತದರ್ಥಂ ಬಿಂಬಸ್ಯ' ಎಂಬ ವಾಕ್ಯದಿಂದ ತೋರಿಸಿದ್ದಾರೆ. ಅತೀತಾಧಿಕರಣವೆಂದರೆ 'ಅಂಶೋ ನಾನಾವ್ಯಪದೇಶಾತ್' ಎಂಬ ಅಧಿಕರಣದಲ್ಲಿ ಎಂದು ತಿಳಿಯಬೇಕು.

**प्रकाशः** – ननु सिद्धान्तेऽदृष्टवैचित्र्याद्वैचित्र्यमुच्यते । तदयुक्तमिव । अनादिप्रतिबिम्बवैचित्र्यस्यागन्तुकादृष्टवैचित्र्यनिमित्ततानुपपत्तेः । तद्वैचित्र्यस्यापि किञ्चिदनादिवस्तुवैचित्र्यनिबन्धनत्वावश्यंभावाच्च । मुक्तौ कर्माभावाच्च । प्रागुपलक्षितपूर्वपक्षस्य यथाश्रुतटीकादिना परिहारायोगाच्च । अत आह – **अयं भाव इति** ।

ಸೂತ್ರವನ್ನು ಆಪಾತತಃ ನೋಡಿದಾಗ ಬಿಂಬನಾದ ಪರಮಾತ್ಮನೊಬ್ಬನೇ ಇದ್ದರೂ ಅದೃಷ್ಟಗಳಲ್ಲಿರುವ ವೈಚಿತ್ರ್ಯದಿಂದ ಪ್ರತಿಬಿಂಬಭೂತರಾದ ಜೀವರಲ್ಲಿ ವೈಚಿತ್ರ್ಯವು ಬರುತ್ತದೆ ಎಂಬರ್ಥವು ಕಾಣಿಸುತ್ತದೆ. ಆದರೆ ಇದು ಅಯುಕ್ತವಾಗಿದೆ. ಅದೃಷ್ಟಾದಿಗಳೆಲ್ಲವೂ ಆಗಂತುಕವಾಗಿವೆ. ಪ್ರತಿಬಿಂಬರಾದ ಜೀವರುಗಳು

ಅನಾದಿಯಾಗಿದ್ದಾರೆ. ಅನಾದಿಯಾದ ಜೀವರ ವೈಚಿತ್ರ್ಯಕ್ಕೆ ಆಗಂತುಕವಾದ ಅದೃಷ್ಟದಲ್ಲಿರುವ ವೈಚಿತ್ರ್ಯವು ಹೇಗೆ ಕಾರಣವಾಗಲು ಸಾಧ್ಯ ? ಮತ್ತೊಂದು ಆಕ್ಷೇಪ – ಜೀವರ ವೈಚಿತ್ರ್ಯವು ಅದೃಷ್ಟವೈಚಿತ್ರ್ಯದಿಂದ ಎಂದು ಹೇಳುತ್ತಿದ್ದೀರಿ. ಈ ಅದೃಷ್ಟದಲ್ಲಿರುವ ವೈಚಿತ್ರ್ಯಕ್ಕೆ ಏನು ಕಾರಣ? ಎಂದು ಪ್ರಶ್ನಿಸಿದರೆ ಯಾವುದಾದರು ಮತ್ತೊಂದು ಅನಾದಿವಸ್ತುವಿನ ವೈಚಿತ್ರ್ಯವನ್ನೇ ನೀವು ಕಾರಣವಾಗಿ ಹೇಳಬೇಕು.

ಮತ್ತೊಂದು ದೋಷ – ಜೀವರುಗಳಲ್ಲಿರುವ ವೈಚಿತ್ರ್ಯವು ಅದೃಷ್ಟವೈಚಿತ್ರ್ಯಪ್ರಯುಕ್ತವಾಗಿ ಹೇಳಲು ಸಾಧ್ಯವಿಲ್ಲ ಎಂಬುದಕ್ಕೆ ಮತ್ತೊಂದು ಕಾರಣ ಹೀಗಿದೆ – ಮೋಕ್ಷದಲ್ಲಿ ಕರ್ಮಗಳೇ ಇರುವುದಿಲ್ಲ. ಆದರೆ ಅಲ್ಲೂ ಕೂಡ ಜೀವರಲ್ಲಿ ಪರಸ್ಪರ ವೈಚಿತ್ರ್ಯವಿದೆ. ಹೀಗಿರುವಾಗ ಅದೃಷ್ಟವೈಚಿತ್ರ್ಯವನ್ನು ಕಾರಣವನ್ನಾಗಿ ಹೇಗೆ ಹೇಳುವುದು. ಮತ್ತು ಟೀಕೆಯಲ್ಲಿ ಪೂರ್ವಪಕ್ಷ ಮಾಡುವಾಗ ಸ್ವರೂಪೋಪಾದಿಯಲ್ಲಿ ವೈಚಿತ್ರ್ಯವಿರುವುದರಿಂದ ಜೀವರಲ್ಲಿ ವೈಚಿತ್ರ್ಯವಿರಬಹುದೆಂಬುದನ್ನು ಉಪಲಕ್ಷಣಯಾ ವಿವಕ್ಷಿಸಲಾಗಿದೆ. ಆದರೆ ಸ್ವರೂಪವು ಉಪಾಧಿಯಾಗಿರುವುದು ಎಲ್ಲಿಯೂ ಕೂಡ ಕಂಡಿಲ್ಲವಲ್ಲ? ಈ ಎಲ್ಲಾ ಆಕ್ಷೇಪಗಳಿಗೆ ಉತ್ತರವನ್ನು ನೀಡಲು ಸಮಗ್ರ ಸಿದ್ಧಾಂತದ ಅಭಿಪ್ರಾಯವನ್ನು 'ಅಯಂ ಭಾವಃ' ಇತ್ಯಾದಿ ಗ್ರಂಥದಿಂದ ನಿರೂಪಣೆ ಮಾಡುತ್ತಿದ್ದಾರೆ.

**प्रकाशः – चैतन्याभेदयोश्चेति परमते ।। उक्तं हीति ।। चतुर्थस्कन्धैकविंशाध्याय-तात्पर्योक्तस्कान्दवचने स्वरूपोपाधिनिमित्तत्वं प्रतिबिम्बस्योक्तमित्यर्थः । तथा चोदाहृतैषा स्मृतिः ''यावदात्मभावित्वात्'' इत्यत्र टीकायाम् ।। अन्यथेति ।। वाचनिकस्याप्यन्यत्रादृष्टिमात्रेण त्याग इत्यर्थः ।**

'ಅಭಿನ್ನಂ ಚೈತನ್ಯಂ' ಎಂದು ಹೇಳಿದಾಗ ಅಭಿನ್ನವು ವಿಶೇಷಣವಾಗುತ್ತದೆ, ಚೈತನ್ಯವು ವಿಶೇಷ್ಯವಾಗುತ್ತದೆ. ಹೀಗೆ ಅಭೇದವಿದ್ದರೂ ಕೂಡ ವಿಶೇಷಣ-ವಿಶೇಷ್ಯಭಾವವು ಕೂಡುತ್ತದೆ. 'ಉಕ್ತಂ ಹಿ' ಎಂದರೆ ಚತುರ್ಥಸ್ಕಂದದ ಇಪ್ಪತ್ತನೆಯ ಅಧ್ಯಾಯದ ಭಾಗವತ ತಾತ್ಪರ್ಯನಿರ್ಣಯದಲ್ಲಿ ಉದಾಹರಿಸಿದ ಸ್ಕಾಂದಪುರಾಣದಲ್ಲಿ ಹೇಳಲ್ಪಟ್ಟಿದೆ ಎಂದರ್ಥ. ಸ್ವರೂಪ ಎಂಬ ಉಪಾಧಿಯೇ ಪ್ರತಿಬಿಂಬಕ್ಕೆ ನಿಮಿತ್ತವಾಗಿದೆ ಎಂದು ಅಲ್ಲಿ ಹೇಳಲಾಗಿದೆ. ಉದಾಹೃತವಾದ ಶ್ರುತಿವಾಕ್ಯವನ್ನು 'ಯಾವದಾತ್ಮಭಾವಿತ್ವಾತ್' ಎಂಬ ಸೂತ್ರದ ಟೀಕೆಯಲ್ಲೂ ಕೂಡ ಹೇಳಲಾಗಿದೆ. ಅನ್ಯಥಾ ಎಂದರೆ ಲೋಕದಲ್ಲಿ ಎಲ್ಲಿಯೂ ಕಂಡಿಲ್ಲವಾದ್ದರಿಂದ ಆಗಮಸಿದ್ಧವಾದ ಪ್ರಮೇಯವನ್ನು ಅಪಲಾಪ ಮಾಡುವುದಾದರೆ ಎಂದರ್ಥ.

ವಿವರಣೆ – ಸ್ವರೂಪವೇ ಉಪಾಧಿಯಾಗುತ್ತದೆ ಎಂದು ಹೇಳುವುದಾದರೆ ಜೀವನಿಗೂ ಅವನ ಸ್ವರೂಪಕ್ಕೂ ಅಭೇದವಿದ್ದರೂ ಕೂಡ ಉಪಾಧಿ-ಪ್ರತಿಬಿಂಬ ಭಾವವು ಹೇಗೆ ಕೂಡುತ್ತದೆ? ಏಕೆಂದರೆ ಉಪಾಧಿ-ಪ್ರತಿಬಿಂಬ ಭಾವವು ಭೇದವ್ಯಾಪ್ತವಾಗಿದೆ. ಲೋಕದಲ್ಲಿ ಕಂಡಂತೆ ದರ್ಪಣವು ಪ್ರತಿಬಿಂಬಕ್ಕಿಂತ ಭಿನ್ನವೇ ಆಗಿದೆ. ಆದರೂ ಕೂಡ ಸ್ವರೂಪವೇ ಉಪಾಧಿಯಾಗಿದೆ ಎಂದು ನಾವು ಆಗಮಪ್ರಮಾಣದಿಂದ ಸಮರ್ಥನೆ ಮಾಡುತ್ತಿದ್ದೇವೆ. ಹೀಗೆ ಆಗಮಪ್ರಮಾಣವನ್ನು ಹೇಳಿದರೂ ಕೂಡ ಪರಿತ್ಯಾಗ ಮಾಡುವುದಾದರೆ ಅದ್ವೈತಿಗಳಿಗೂ ಕೂಡ ಬಾಧಕವು ಬಂದೇ ಬರುತ್ತದೆ. ಅದ್ವೈತಿಗಳು ಅವಿದ್ಯೆ ಹಾಗೂ ಅಂತಃಕರಣವನ್ನು ಉಪಾಧಿ ಎಂದು ಕರೆಯುತ್ತಾರೆ. ಆದರೆ ಉದ್ಭೂತರೂಪವಿಶೇಷ ಉಳ್ಳದ್ದೇ ಉಪಾಧಿಯಾಗಿರುವುದು ಲೋಕದಲ್ಲಿ ಕಂಡಿದೆ. ಅವಿದ್ಯೆಗಾಗಲೀ, ಅಂತಃಕರಣಕ್ಕಾಗಲೀ ಉದ್ಭೂತರೂಪವಿರುವುದು ಕಂಡಿಲ್ಲ. ಮತ್ತು ಬಿಂಬವಾದ ವಸ್ತು ಪ್ರತಿಫಲನವಾಗಲು ಚಾಕ್ಷುಷತ್ವ ಇರಬೇಕು. ಬ್ರಹ್ಮನು ಅಚಾಕ್ಷುಷನಾದ್ದರಿಂದ ಅವನು ಪ್ರತಿಬಿಂಬಿತನಾಗಲು ಸಾಧ್ಯವಿಲ್ಲ. ಹೀಗೆ ಅನ್ಯತ್ರ ಅದೃಷ್ಟವಾದದ್ದನ್ನು ಅದ್ವೈತಿಗಳಾದರೂ ಕೂಡ

ಹೇಳಲು ಹೇಗೆ ಸಾಧ್ಯ? ಅಂತಿಮವಾಗಿ ನೀವು ಆಗಮವನ್ನೇ ಆಶ್ರಯಿಸಬೇಕು. ನಾವೂ ಕೂಡ ಅದೇ ಆಗಮಪ್ರಮಾಣದಿಂದ ಸ್ವರೂಪವೇ ಉಪಾಧಿ ಎಂದು ಹೇಳುತ್ತೇವೆ.

**प्रकाशः – अदृष्टिरप्यसिद्धेत्याह – दृश्यन्ते चेति ।। श्रुतिश्चेति ।।** ''आभास एव च'' इत्यत्र भाष्योक्ता ।। **नियतमिति ।।** येनात्रैव भेदो नियतस्स्यादिति भावः।

ಇಲ್ಲಿಯತನಕ ಸ್ವರೂಪವೇ ಉಪಾಧಿಯಾಗಿರುವುದು ಎಲ್ಲಿಯೂ ಕಂಡಿಲ್ಲವೆಂಬುದನ್ನು ಅಂಗೀಕೃತ್ಯ ಸಮರ್ಥನೆ ಮಾಡಲಾಯಿತು. ಈಗ ಕಂಡಿಲ್ಲವೆಂಬುದೇ ಅಸಿದ್ಧವೆಂದು 'ದೃಶ್ಯಂತೇ ಚ' ಇತ್ಯಾದಿ ವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ. ಪ್ರತಿಧ್ವನಿ, ಛಾಯಾಪುರುಷ, ಇಂದ್ರಚಾಪ ಇತ್ಯಾದಿ ಸ್ಥಳಗಳಲ್ಲಿ ಪ್ರತಿಬಿಂಬವೇ ಉಪಾಧಿಯಾಗಿರುವುದು ಲೋಕದಲ್ಲಿ ಕಂಡಿದೆ. 'ಶ್ರುತಿಶ್ಚ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. 'ಸೋಪಾಧಿಃ' ಇತ್ಯಾದಿ ಶ್ರುತಿವಾಕ್ಯವು 'ಆಭಾಸ ಏವ ಚ' ಇತ್ಯಾದಿ ಭಾಷ್ಯದಲ್ಲಿ ಉದಾಹರಿಸಲಾಗಿದೆ ಎಂದು ತಿಳಿಯಬೇಕು. 'ನಿಯತಂ' ಎಂಬುದರ ಅಭಿಪ್ರಾಯ ಹೀಗಿದೆ– 'ಯಃ ಯಃ ಪ್ರತಿಬಿಂಬಃ ಸಃ ಸಃ ಬಿಂಬನಿರೂಪ್ಯಃ' ಎಂಬ ವ್ಯಾಪ್ತಿ ಇದೆ. ಇದರಂತೆ ಪ್ರತಿಬಿಂಬವು ಉಪಾಧಿ ನಿರೂಪ್ಯ ಎಂದು ಹೇಳಿದರೆ ಆಗ ಉಪಾಧಿಗೂ ಪ್ರತಿಬಿಂಬಕ್ಕೂ ಭೇದವನ್ನು ಅವಶ್ಯವಾಗಿ ಹೇಳಲೇಬೇಕಾಗಿತ್ತು. ಆದರೆ ಪ್ರತಿಬಿಂಬವು ಬಿಂಬದಿಂದ ನಿರೂಪ್ಯವಾಗುತ್ತದೆ ಹೊರತು ಉಪಾಧಿಯಿಂದ ನಿರೂಪ್ಯವಾಗಿರುವುದು ಕಂಡಿಲ್ಲ. ಪ್ರತಿಧ್ವನಿ ಮೊದಲಾದವುಗಳಲ್ಲಿ ಅತಿರಿಕ್ತವಾದ ಉಪಾಧಿ ಇಲ್ಲದೇ ಇದ್ದರೂ ಕೂಡ ಶ್ರವಣಾದಿ ಆಗುವುದು ಕಂಡಿದೆ. ಆದ್ದರಿಂದ ಉಪಾಧಿನಿರೂಪ್ಯತ್ವದ ನಿಯಮ ಪ್ರತಿಬಿಂಬಕ್ಕೆ ಇರುವುದಿಲ್ಲ.

**प्रकाशः – कथं तर्हि** ''नैवांशो न सम्बन्धः परस्य'' इति बिम्बप्रतिबिम्बभावसम्बन्धनिषेधपरा श्रुतिरित्यतः ''अन्या श्रुतिर्निरुपाधिप्रतिबिम्बविषय'' इति टीकां विवृण्वन्नाह – **जीवस्येति ।।**

ಹಾಗಾದರೆ 'ನೈವಾಂಶೋ ನ ಸಂಬಂಧಃ ಪರಸ್ಯ' ಎಂಬ ವಾಕ್ಯವು ಜೀವಾತ್ಮನಿಗೆ ಪರಮಾತ್ಮನ ಜೊತೆ ಯಾವುದೇ ರೀತಿಯಲ್ಲಿ ಸಂಬಂಧವಿಲ್ಲವೆಂದು ಹೇಳುತ್ತಿದೆ. ಇದರಿಂದ ಬಿಂಬಪ್ರತಿಬಿಂಬಭಾವಸಂಬಂಧವನ್ನೂ ಕೂಡ ನಿಷೇಧ ಮಾಡಿದಂತಾಯಿತಲ್ಲವೇ? ಈ ಪ್ರಶ್ನೆಗೆ 'ಅನ್ಯಾ ಶ್ರುತಿಃ ನಿರುಪಾಧಿಪ್ರತಿಬಿಂಬವಿಷಯಃ' ಎಂಬ ಟೀಕೆಯನ್ನು ವಿವರಿಸಲು 'ಜೀವಸ್ಯ' ಇತ್ಯಾದಿ ವಾಕ್ಯವು ಹೊರಟಿದೆ. 'ನೈವಾಂಶೋ ನ ಸಂಬಂಧಃ' ಎಂಬ ಶ್ರುತಿಗೆ ಜೀವಾತ್ಮನು ಪ್ರತಿಬಿಂಬನೇ ಅಲ್ಲ ಎಂದಭಿಪ್ರಾಯವಲ್ಲ. ಅತಿರಿಕ್ತ ಉಪಾಧಿಯ ಅಧೀನವಾಗಿ ಜೀವನು ಪರಮಾತ್ಮನ ಪ್ರತಿಬಿಂಬನಾಗಲಾರ ಎಂಬುದಷ್ಟೇ ಅಭಿಪ್ರಾಯ.

**प्रकाशः – ननु** बिम्बप्रतिबिम्बयोरभेदात्कथं तदधीनत्वादीत्यत आह – **बिम्बेति ।।** भेदश्च सिद्ध इत्यन्वयः ।।

ಬಿಂಬಕ್ಕಿಂತ ಅತಿರಿಕ್ತವಾದ ಪ್ರತಿಬಿಂಬವೇ ಇಲ್ಲದಿದ್ದಾಗ ಪ್ರತಿಬಿಂಬವು ಬಿಂಬಾಧೀನ ಇತ್ಯಾದಿಯಾಗಿ ಸಮರ್ಥನೆ ಮಾಡುವುದು ಎಷ್ಟು ಸರಿ? ಎಂಬ ಅದ್ವೈತಿಯ ಪ್ರಶ್ನೆಗೆ ಬಿಂಬ ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಬಿಂಬ ಪ್ರತಿಬಿಂಬಗಳಿಗೆ ಭೇದವು ಸಿದ್ಧವಾಗಿದೆ ಎಂಬುದಾಗಿ ಅನ್ವಯವನ್ನು ತಿಳಿಯಬೇಕು.

ಅದೃಷ್ಟಾಧಿಕರಣ (೨-೩-೧೯)

**प्रकाशः – श्रुत्येति ।। पूर्वत्र भाष्योक्त्या ।। तवैवेति ।।** स्थानान्तरगतं वाक्यम्। ''बहव'' इत्यादि तु ''अत एव चोपमा'' इत्यत्र भाष्योक्तम् ।। प्रत्यक्षेणेत्युक्तं व्यनक्ति – **न हीति ।।**

'ಇತ್ಯಾದಿಶ್ರುತ್ಯಾಃ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಈ ಶ್ರುತಿಯನ್ನು ಹಿಂದೆ ಭಾಷ್ಯದಲ್ಲಿ ಉದಾಹರಿಸಲಾಗಿದೆ ಎಂದು ತಿಳಿಯಬೇಕು. 'ತವೈವ ಸದೃಶಶ್ಚಾಯಂ' ಎಂಬುದು ಬೇರೆ ಕಡೆ ಇರುವ ವಾಕ್ಯವಾಗಿದೆ. 'ಬಹವಃ ಸೂರ್ಯಕಾಃಯದ್ವತ್' ಎಂಬುದು 'ಅತ ಏವ ಚೋಪಮಾ' ಎಂಬ ಭಾಷ್ಯದಲ್ಲಿ ಉದಾಹರಿಸಲ್ಪಟ್ಟಿದೆ. ಪ್ರತ್ಯಕ್ಷಕ್ಕೆ ವಿರುದ್ಧವಾಗಿದೆ ಎಂಬುದನ್ನು 'ನ ಹಿ ದರ್ಪಣೇ' ಎಂಬುದರಿಂದ ತೋರಿಸುತ್ತಿದ್ದಾರೆ.

**प्रकाशः** – नन्विदं प्रत्यक्षं ममैवेदं मुखं तदेवेदं मुखमित्याद्यैक्य-प्रत्यभिज्ञाबाधितमित्यतस्तद्भ्रान्तित्वमाह – **किञ्चेति ।।**

ಈ ಪ್ರತ್ಯಕ್ಷವು ಪ್ರತ್ಯಭಿಜ್ಞಾಂದ ಬಾಧಿತವಾಗಿದೆ. ಏಕೆಂದರೆ 'ನಮ್ಮೆವ ಇದಂ ಮುಖಂ' ತದೇವೇದ ಮುಖಂ' ಎಂಬುದಾಗಿ ದರ್ಪಣಸ್ಥಮುಖಕ್ಕೂ ಬಾಹ್ಯಮುಖಕ್ಕೂ ಐಕ್ಯಪ್ರತೀತಿಯು ಈ ಪ್ರತ್ಯಭಿಜ್ಞೆಯಿಂದ ಉಂಟಾಗುತ್ತಿದೆಯಲ್ಲವೇ? ಈ ಪ್ರಶ್ನೆಗೆ ಪ್ರತಿಭಿಜ್ಞೆಯೇ ಭ್ರಾಂತಿಯಾಗಿದೆ ಎಂಬುದನ್ನು 'ಕಿಂಚ' ಇತ್ಯಾದಿಯಾಗಿ ಉಪಪಾದನೆ ಮಾಡುತ್ತಿದ್ದಾರೆ.

**प्रकाशः** – कथं प्रमेत्युक्तं व्यनक्ति ।। **द्वितीय इति ।।** संसर्गः किमैक्यं तत्र सत्त्वं वा । नोभयमित्याह – **न हीति ।।** ननु प्रतिबिम्बस्य जन्मोक्तावुपादानं किं स्यादित्यत आह – **प्रतिबिम्बस्योपादानं त्विति ।।** न्यायामृते द्वितीयपरिच्छेद इत्यर्थः ।

ಪ್ರಮಾವಾಗಲು ಸಾಧ್ಯ ಎಂದು ಹೇಳಿದ್ದನ್ನೇ 'ದ್ವಿತೀಯಾ' ಇತ್ಯಾದಿ ವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ. ಐಕ್ಯವನ್ನು ಸಂಸರ್ಗ ಎನ್ನುತ್ತೀರೋ, ಅಥವಾ ಸತ್ತ್ವವನ್ನೋ? ಎರಡೂ ಕೂಡ ಸಾಧ್ಯವಿಲ್ಲ ಎಂಬುದಾಗಿ 'ನಹಿ' ಇತ್ಯಾದಿ ವಾಕ್ಯ ಪ್ರತಿಪಾದನೆ ಮಾಡುತ್ತಿದೆ. ಪ್ರತಿಬಿಂಬಕ್ಕೆ ಜನ್ಮವನ್ನು ಹೇಳಿದರೆ ಉಪಾದಾನಕಾರಣವನ್ನು ಹೇಳಲೇಬೇಕು. ಆದಕ್ಕೆ ಯಾವುದು ಉಪಾದಾನ ಎಂಬ ಪ್ರಶ್ನೆಗೆ 'ಪ್ರತಿಬಿಂಬಸ್ಯ ಉಪಾದಾನಂ ತು' ಎಂಬುದರಿಂದ ಉತ್ತರಿಸುತ್ತಿದ್ದಾರೆ. 'ನ್ಯಾಯಾಮೃತೇ' ಎಂದರೆ ನ್ಯಾಯಾಮೃತದ ದ್ವಿತೀಯಪರಿಚ್ಛೇದದಲ್ಲಿ ಎಂದರ್ಥ.

**प्रकाशः** – पौनरुक्त्यं निराह – **अत्र जीवानामिति ।।** बिम्बशक्तिरुपाधिवैचित्र्यं चोभयं प्रतिबिम्बवैचित्र्ये कारणमित्येतत्क्रमेण व्यनक्ति ।। **नहीति ।। अत एवेति ।।** बिम्बशक्तेरपि तत्राभिमतत्वादेवेत्यर्थः ।

ಪುನರುಕ್ತಿದೋಷವನ್ನು ಪರಿಹರಿಸಲು 'ಅತ್ರ ಜೀವಾನಾಂ' ಇತ್ಯಾದಿ ವಾಕ್ಯಗಳು ಹೊರಟಿವೆ. ಬಿಂಬಶಕ್ತಿ ಹಾಗೂ ಉಪಾಧಿವೈಚಿತ್ರ್ಯ ಎರಡೂ ಕೂಡ ಪ್ರತಿಬಿಂಬವೈಚಿತ್ರ್ಯಕ್ಕೆ ಕಾರಣವಾಗಿದೆ ಎಂಬುದನ್ನು ಕ್ರಮವಾಗಿ 'ನಹಿ' ಇತ್ಯಾದಿ ವಾಕ್ಯದಿಂದ ಪ್ರತಿಪಾದನೆ ಮಾಡುತ್ತಿದ್ದಾರೆ. 'ಅತ ಏವ' ಎಂದರೆ ಬಿಂಬಶಕ್ತಿ ಅಭಿಮತವಾಗಿರುವುದರಿಂದಲೇ ಎಂದರ್ಥ.

**प्रकाशः** – मतद्वयेऽपीदं ''अदृष्टानियमात् । अभिसंध्यादिष्वपि चैवम् । प्रदेशादिति चेन्नान्तर्भावात्'' इति सूत्रत्रयं पूर्वशेषो नाधिकरणान्तरम् । तत्र ''असन्ततेः । आभास एव च'' इत्याभ्यामैक्यवादे भोगव्यवस्थामुपपाद्य ''अदृष्ट'' इत्यादिना सर्वगतबहुजीववादिनां सांख्यकाणादादीनां मते भोगाव्यवस्थोच्यत इति परमतम् ।

ಅದ್ವೈತಮತದಲ್ಲಿ ಹಾಗೂ ರಾಮಾನುಜಮತದಲ್ಲಿ ಇದು ಪ್ರತ್ಯೇಕ ಅಧಿಕರಣವೇ ಅಲ್ಲ. 'ಅದೃಷ್ಟಾನಿಯಮಾತ್' ಹಾಗೂ 'ಅಭಿಸಂಧ್ಯಾದಿಷ್ವಪಿ ಚೈವಮ್' ಹಾಗೂ 'ಪ್ರದೇಶಾದಿತಿ ಚೇನ್ನಾಂತರ್ಭಾವಾತ್' ಎಂಬ ಮೂರೂ ಸೂತ್ರಗಳು ಹಿಂದಿನ ಅಧಿಕರಣದ ಗುಣಸೂತ್ರಗಳಾಗಿವೆ. ಇವುಗಳಲ್ಲಿ 'ಅಸಂತತೇಃ' 'ಆಭಾಸ ಏವ ಚ' ಎಂಬೆರಡು ಸೂತ್ರಗಳಿಂದ ಐಕ್ಯವಾದದಲ್ಲಿ ಭೋಗವ್ಯವಸ್ಥೆಯನ್ನು ಉಪಪಾದನೆ ಮಾಡಿ 'ಅದೃಷ್ಟಾ ನಿಯಮಾತ್' ಇತ್ಯಾದಿ ಸೂತ್ರಗಳಿಂದ ಸಕಲ ಜೀವರು ಸರ್ವಗತರಾಗಿದ್ದಾರೆಂದು ಹೇಳುವ ಸಾಂಖ್ಯಮತ ಹಾಗೂ ಕಾಣಾದಮತದಲ್ಲಿ ಸುಖದುಃಖಭೋಗಗಳ ಅವ್ಯವಸ್ಥೆ ಉಂಟಾಗುತ್ತದೆಂದು ಪರರು ವ್ಯಾಖ್ಯಾನ ಮಾಡಿದ್ದಾರೆ.

**प्रकाशः** – मतान्तरं तु मायावादिनां मते पूर्वसूत्रद्वयेन भोगाव्यवस्थामुक्त्वा सत्योपाधिकृतसत्यभेदवादेऽपि जीवानां स्वरूपैक्येन भोगाव्यवस्थोच्यत इति । तत्र परमतोक्तदोषेणैव मतान्तरं दुष्टं स्यादिति भावेन परमतमेवानूद्य निराह – **अत्र यदुक्तं परैरिति ।।**

ವಿಶಿಷ್ಟಾದ್ವೈತಿಗಳ ವ್ಯಾಖ್ಯಾನ ಹೀಗಿದೆ– ಮಾಯಾವಾದ ಮತದಲ್ಲಿ ಭೋಗದಲ್ಲಿ ಅವ್ಯವಸ್ಥಾ ದೋಷವಿದೆ ಎಂದು ಮೊದಲೆರಡು ಸೂತ್ರಗಳು ಪ್ರತಿಪಾದನೆ ಮಾಡುತ್ತವೆ. ಸತ್ಯೋಪಾಧಿಕೃತವಾಗಿ ಸತ್ಯಭೇದವನ್ನು ಹೇಳುವ ಭಾಸ್ಕರರ ಮತವನ್ನು ನಿರಾಕರಣೆ ಮಾಡಲು ಮುಂದಿನ ಸೂತ್ರವು ಹೊರಟಿದೆ. ಸತ್ಯಭೇದವನ್ನು ಒಪ್ಪಿದರೂ ಕೂಡ ಜೀವಸ್ವರೂಪಕ್ಕೆ ಐಕ್ಯವನ್ನು ಒಪ್ಪುವುದರಿಂದ ಭೋಗದಲ್ಲಿ ಅವ್ಯವಸ್ಥಾದೋಷವನ್ನು ಪರಿಹರಿಸಿಕೊಳ್ಳಲು ಭಾಸ್ಕರರಿಗೂ ಕೂಡ ಸಾಧ್ಯವಿಲ್ಲ ಎಂಬುದು ರಾಮಾನುಜರ ಅಭಿಪ್ರಾಯ. ಗ್ರಂಥದಲ್ಲಿ ಅದ್ವೈತಮತವನ್ನಷ್ಟೇ ಉಲ್ಲೇಖ ಮಾಡಿ ನಿರಾಕರಣೆ ಮಾಡಿದ್ದಾರೆ. ಇದರಿಂದಲೇ ರಾಮಾನುಜಮತವೂ ಕೂಡ ನಿರಾಕೃತವಾಗುತ್ತದೆಂಬುದು ಗ್ರಂಥಕಾರರ ಅಭಿಪ್ರಾಯ. ಈ ದೃಷ್ಟಿಯಿಂದ 'ಅತ್ರ ಯದುಕ್ತಂ ಪರೈಃ' ಇತ್ಯಾದಿ ವಾಕ್ಯವು ಹೊರಟಿದೆ.

ಅದೃಷ್ಟಾಧಿಕರಣ (೨-೩-೧೯)

**प्रकाशः – किं त्विति ।।** न केवलं स्वमते भोगव्यवस्थेत्यर्थः । न व्यवस्थेति पदच्छेदः ।। **अन्यत्रेति ।।** "अत एव चोपम" इत्यत्रानुव्याख्यानसुधयोरुपाधिखण्डनतत्वनिर्णयटीकादौ न्यायामृते चेत्यर्थः । पेटिका सङ्गतिग्रन्थः स्पष्टः ।।

**श्री श्री सुधीन्द्रगुरुपादशिष्यराघवेन्द्रयतिकृते चन्द्रिकाप्रकाशे**
**अदृष्टाधिकरणं सम्पूर्णम् द्वितीयाध्यायस्य तृतीयः पादः ।।१९।।२।।३।।**

ಭೇದವಾದಿಗಳಾದ ನಮ್ಮ ಮತದಲ್ಲಿ ಸುಖದುಃಖದ ಭೋಗವು ಯುಕ್ತವಾಗುತ್ತೆಂದಷ್ಟೆ ಅಲ್ಲ, ಪರಮತದಲ್ಲಿ ಅವ್ಯವಸ್ಥೆ ಉಂಟಾಗುತ್ತದೆ ಎಂಬುದು 'ಕಿಂತು' ಪದದ ಧ್ವನಿಯಾಗಿದೆ. 'ಆತ್ಮ ಭೇದೇ' ಎಂಬ ಪದದ ನಂತರ 'ನ ವ್ಯವಸ್ಥಾ' ಎಂಬುದಾಗಿ ಪದಚ್ಛೇದವನ್ನು ತಿಳಿಯಬೇಕು. 'ಅನ್ಯತ್ರ' ಎಂದರೆ 'ಅತ ಏವ ಚೋಪಮಾ' ಎಂಬ ಸೂತ್ರದ ಅನುವ್ಯಾಖ್ಯಾನ ಹಾಗೂ ನ್ಯಾಯಸುಧೆಗಳಲ್ಲಿ ಮತ್ತು ಉಪಾಧಿಖಂಡನದ ಟೀಕೆ ಹಾಗೂ ತತ್ವನಿರ್ಣಯದ ಟೀಕೆಗಳಲ್ಲಿ ಮತ್ತು ನ್ಯಾಯಾಮೃತದಲ್ಲೂ ಕೂಡ ಇದರ ಬಗ್ಗೆ ವಿವರಣೆ ಇರುತ್ತದೆ ಎಂದರ್ಥ. ಪೇಟಿಕಾಸಂಗತಿಗ್ರಂಥವು ಅತ್ಯಂತ ಸ್ಪಷ್ಟವಾಗಿರುವುದರಿಂದ ನಾವು ಪ್ರತ್ಯೇಕವಾಗಿ ಅದನ್ನು ವ್ಯಾಖ್ಯಾನ ಮಾಡಿಲ್ಲ.

ಇಲ್ಲಿಗೆ ಶ್ರೀಸುಧೀಂದ್ರಗುರುಪಾದಶಿಷ್ಯರಾದ ಶ್ರೀರಾಘವೇಂದ್ರತೀರ್ಥರಿಂದ ವಿರಚಿತವಾದ
ಚಂದ್ರಿಕಾಪ್ರಕಾಶ ಗ್ರಂಥದಲ್ಲಿ ಅದೃಷ್ಟಾಧಿಕರಣವು ಸಂಪೂರ್ಣವಾಯಿತು.

ಎರಡನೆಯ ಅಧ್ಯಾಯದ ಮೂರನೇ ಪಾದವು ಸಮಾಪ್ತವಾಯಿತು.
॥ ಶ್ರೀಮಧ್ವೇಶಾರ್ಪಣಮಸ್ತು ॥

ಪರಿಪೂರ್ಣಚಂದ್ರಿಕಾ

# ಪ್ರಾಣೋತ್ಪತ್ತ್ಯಧಿಕರಣ
(೨-೪-೧)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

***

॥ ಶ್ರೀಗುರುಭ್ಯೋ ನಮಃ ॥

# ಪ್ರಾಣೋತ್ಪತ್ತ್ಯಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् — तथा प्राणाः ॥**

ಆಕಾಶಾದಿಗಳು ವಿಷ್ಣುವಿನಿಂದ ಹೇಗೆ ಹುಟ್ಟುತ್ತವೋ ? ಅದರಂತೆ ಇಂದ್ರಿಯಾದಿಗಳೂ ಕೂಡ ವಿಷ್ಣುವಿನಿಂದ ಹುಟ್ಟುತ್ತವೆ. ಇಂದ್ರಿಯಗಳಿಗೆ ಉತ್ಪತ್ತಿಯಿಲ್ಲವೆಂದು ಹೇಳಬಾರದು.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका —** यथा आकाशादयः विष्णोरुत्पद्यन्ते । **तथा प्राणाः** इन्द्रियाण्यपि उत्पद्यन्त एव न त्वनुत्पत्तिमन्तीत्यर्थः ॥१॥

ಯಾವರೀತಿಯಾಗಿ ಆಕಾಶಾದಿಗಳು ವಿಷ್ಣುವಿನಿಂದ ಉತ್ಪತ್ತಿಯನ್ನು ಹೊಂದಿವೆಯೋ, ತಥಾ = ಅದರಂತೆ, ಪ್ರಾಣಾಃ = ಇಂದ್ರಿಯಗಳೂ ಕೂಡ ವಿಷ್ಣುವಿನಿಂದ ಉತ್ಪತ್ತಿಯನ್ನು ಹೊಂದುತ್ತವೆ. ಉತ್ಪತ್ತಿ ಇಲ್ಲವೆಂದು ಹೇಳಬಾರದು.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

## ಬ್ರಹ್ಮಸೂತ್ರಭಾಷ್ಯ

**भाष्यम् — युक्तिसहितश्रुतिविरोधं श्रुतीनामपाकरोत्यनेन पादेन । 'प्राणा एवेदमग्र आसुस्तेभ्यो भूतानि जज्ञिरे । भूतेभ्योऽण्डमण्डस्यान्तस्त्विमे लोकाः ।**

**अथ प्राणा एवानादयः प्राणा नित्याः' इति काषायणश्रुतौ प्राणानामनुत्पत्तिः प्रतीयते ।**

ಅನುವಾದ - ಹಿಂದಿನ ಪಾದದಲ್ಲಿ ಶ್ರುತಿಗಳ ಪರಸ್ಪರ ವಿರೋಧವನ್ನು ಪರಿಹಾರ ಮಾಡಿದರು. ಈ ಪಾದದಲ್ಲಿ ಯುಕ್ತಿಯ ಬೆಂಬಲವಿರುವ ಶ್ರುತಿವಿರೋಧವನ್ನು ಪರಿಹಾರ ಮಾಡುತ್ತಿದ್ದಾರೆ.

ಸೃಷ್ಟಿಯ ಪ್ರಾರಂಭದಲ್ಲಿ ಇಂದ್ರಿಯಗಳು ಮಾತ್ರ ಇದ್ದವು. ಅವುಗಳಿಂದ ಪಂಚಭೂತಗಳು, ಅವುಗಳಿಂದ ಬ್ರಹ್ಮಾಂಡವು, ಬ್ರಹ್ಮಾಂಡದ ಒಳಗಿರುವ ಹದಿನಾಕು ಲೋಕಗಳು ಸೃಷ್ಟಿಯಾದವು. ಆದ್ದರಿಂದ ಇಂದ್ರಿಯಗಳು ಅನಾದಿನಿತ್ಯವಾಗಿವೆ. ಹೀಗೆ ಕಾಷಾಯಣಶ್ರುತಿಯು ಇಂದ್ರಿಯಗಳಿಗೆ ಉತ್ಪತ್ತಿ ಇಲ್ಲವೆಂದು ಹೇಳುತ್ತಿದೆ.

ಪ್ರತಿಪದಾರ್ಥ -- ಯುಕ್ತಿಸಹಿತಶ್ರುತಿವಿರೋಧಂ = ಯುಕ್ತಿಯ ಬೆಂಬಲವಿರುವ ಶ್ರುತಿವಿರೋಧವನ್ನು, ಶ್ರುತೀನಾಮ್ = ಶ್ರುತಿಗಳಿಗೆ, ಅನೇನ ಪಾದೇನ = ಈ ಪಾದದಿಂದ ಅಪಾಕರೋತಿ = ಸೂತ್ರಕಾರರು ನಿರಾಕರಣೆ ಮಾಡುತ್ತಿದ್ದಾರೆ. ಇದಮಗ್ರೇ = ಈ ಸೃಷ್ಟಿಯ ಮೊದಲು, ಪ್ರಾಣಾ ಏವ = ಇಂದ್ರಿಗಳು ಮಾತ್ರ, ಆಸುಃ = ಇದ್ದವು, ತೇಭ್ಯಃ = ಆ ಇಂದ್ರಿಯಗಳಿಂದ, ಭೂತಾನಿ = ಪಂಚಭೂತಗಳು, ಜಜ್ಞಿರೇ = ಹುಟ್ಟಿದವು. ಭೂತೇಭ್ಯಃ = ಆ ಪಂಚಭೂತಗಳಿಂದ, ಅಂಡಮಂಡಸ್ಯ = ಬ್ರಹ್ಮಾಂಡದ, ಅಂತಃ = ಒಳಗಡೆ, ಇಮೇ ಲೋಕಾಃ = ಹದಿನಾಲ್ಕು ಲೋಕಗಳು ಹುಟ್ಟಿದವು, ಅಥ = ಅನಂತರ, ಪ್ರಾಣಾಃ ಏವ = ಇಂದ್ರಿಯಗಳೇ, ಅನಾದಯಃ = ಅನಾದಿಯಾಗಿವೆ. ಪ್ರಾಣಾಃ = ಇಂದ್ರಿಯಗಳು ನಿತ್ಯಾಃ = ನಿತ್ಯವಾಗಿವೆ. ಇತಿ = ಹೀಗೆ, ಕಾಷಾಯಣಶ್ರುತೌ = ಕಾಷಾಯಣಶ್ರುತಿಯಲ್ಲಿ, ಪ್ರಾಣಾನಾಮ್ = ಇಂದ್ರಿಗಳಿಗೆ, ಅನುತ್ಪತ್ತಿಃ = ಉತ್ಪತ್ತಿ ಇಲ್ಲವೆಂದು, ಪ್ರತೀಯತೇ = ಹೇಳಲಾಗಿದೆ.

**भाष्यम् —**

**नोपादानं हीन्द्रियाणाम् अतोऽनुत्पत्तिरिष्यते ।**
**उपादानकृता सृष्टिः सर्वलोकेषु दृश्यते ।। इति भविष्यत्पर्वणि ।**

**'एतस्माज्जायते प्राणो मनः सर्वेन्द्रियाणि च' इति च । (मु.२.१.३.)**

ಅನುವಾದ - ಇಂದ್ರಿಯಗಳಿಗೆ ಉಪಾದಾನಕಾರಣವೇ ಇರುವುದಿಲ್ಲ. ಆದ್ದರಿಂದ ಅವುಗಳಿಗೆ ಹುಟ್ಟು ಇರುವುದಿಲ್ಲ ಎಂದು ಹೇಳಲಾಗಿದೆ. ಏಕೆಂದರೆ ಸಕಲಲೋಕಗಳಲ್ಲಿಯೂ ಉಪಾದಾನಕಾರಣದಿಂದಲೇ ಸೃಷ್ಟಿಯಾಗುವುದು ಕಾಣಸುತ್ತಿದೆ. ಹೀಗೆ ಭವಿಷ್ಯತ್‌ಪರ್ವದಲ್ಲಿ ಕಾಷಾಯಣಶ್ರುತಿ ಹೇಳಿದ್ದನ್ನೇ ಯುಕ್ತಿಯಿಂದ ಸಮರ್ಥಿಸಲಾಗಿದೆ.

ಆದರೆ ಮುಂಡಕೋಪನಿಷತ್ತು ಇದಕ್ಕೆ ವಿಪರೀತವಾಗಿ ಹೇಳುತ್ತಿದೆ - ಪರಮಾತ್ಮನಿಂದಲೇ ಮುಖ್ಯಪ್ರಾಣನು ಹುಟ್ಟುತ್ತಾನೆ. ಸಕಲ ಇಂದ್ರಿಯಗಳಿಗೆ ಉತ್ಪತ್ತಿಯನ್ನು ಹೇಳುತ್ತಿದೆ.

ಪ್ರತಿಪದಾರ್ಥ -- ಇಂದ್ರಿಯಾಣಾಂ = ಇಂದ್ರಿಯಗಳಿಗೆ, ಉಪಾದಾನಂ = ಉಪಾದಾನಕಾರಣವು, ನ = ಇರುವುದಿಲ್ಲ. ಅತಃ = ಆದ್ದರಿಂದ, ಅನುತ್ಪತ್ತಿಃ = ಇಂದ್ರಿಯಗಳಿಗೆ ಉತ್ಪತ್ತಿಯಿಲ್ಲವೆಂದು, ಇಷ್ಯತೇ = ಅಂಗೀಕರಿಸುತ್ತೇವೆ. ಸರ್ವಲೋಕೇಷು = ಎಲ್ಲಾ ಲೋಕಗಳಲ್ಲಿ ಉಪಾದಾನಕೃತಾ = ಉಪಾದಾನಕಾರಣದಿಂದಲೇ, ಸೃಷ್ಟಿಃ = ಸೃಷ್ಟಿಯಾಗುವುದು, ದೃಶ್ಯತೇ = ಕಾಣುತ್ತಿದೆ. ಇತಿ = ಹೀಗೆ, ಭವಿಷ್ಯತ್ಪರ್ವಣಿ = ಭವಿಷ್ಯತ್ಪರ್ವದಲ್ಲಿ ಹೇಳಲಾಗಿದೆ.

ಏತಸ್ಮಾತ್ = ಈ ಪರಮಾತ್ಮನಿಂದಲೇ, ಪ್ರಾಣಃ = ಮುಖ್ಯಪ್ರಾಣನು, ಮನಃ = ಮನಸ್ಸು, ಚ = ಮತ್ತು , ಸರ್ವೇಂದ್ರಿಯಾಣಿ = ಎಲ್ಲಾ ಇಂದ್ರಿಯಗಳು, ಜಾಯತೇ = ಹುಟ್ಟುತ್ತವೆ, ಇತಿ ಚ = ಹೀಗೂ ಕೂಡ ಹೇಳಲಾಗಿದೆ.

**भाष्यम् – अत उच्यते –**

**।। तथा प्राणाः ।।१।।**

**यथाऽऽकाशादयः परमात्मन उत्पद्यन्ते तथा प्राणा अपि ।।१।।**

ಅನುವಾದ - ಶ್ರುತಿಗಳ ಈ ವಿರೋಧವನ್ನು ಸೂತ್ರಕಾರರು ಪರಿಹರಿಸುತ್ತಿದ್ದಾರೆ. ಯಾವ ರೀತಿಯಾಗಿ ಆಕಾಶಾದಿಗಳು ಪರಮಾತ್ಮನಿಂದಲೇ ಹುಟ್ಟುತ್ತವೋ, ಅದೇ ರೀತಿಯಾಗಿ ಇಂದ್ರಿಯಗಳೂ ಪರಮಾತ್ಮನಿಂದಲೇ ಹುಟ್ಟುತ್ತವೆ.

ಪ್ರತಿಪದಾರ್ಥ -- ಅತಃ = ಶ್ರುತಿವಿರೋಧಪರಿಹಾರಕ್ಕಾಗಿ, ಉಚ್ಯತೇ = ಸೂತ್ರಕಾರರು ಹೇಳುತ್ತಿದ್ದಾರೆ -

ಯಥಾ = ಯಾವರೀತಿಯಾಗಿ, ಆಕಾಶಾದಯಃ = ಆಕಾಶಾದಿಗಳು, ಪರಮಾತ್ಮನಃ = ಪರಮಾತ್ಮನ ದೆಸೆಯಿಂದ, ಉತ್ಪದ್ಯಂತೇ = ಹುಟ್ಟುತ್ತವೋ, ತಥಾ = ಅದೇರೀತಿಯಾಗಿ, ಪ್ರಾಣಾಃ ಅಪಿ = ಇಂದ್ರಿಯಗಳೂ ಕೂಡ ಹುಟ್ಟುತ್ತವೆ.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

## ತತ್ವಪ್ರಕಾಶಿಕಾ

**श्रीमद्धनुमद्भीममध्वान्तर्गतरामकृष्णवेदव्यासात्मकलक्ष्मीहयग्रीवाय नमः।**

**एतत्पादार्थं दर्शयति – युक्तीति ।। अत्रापि पूर्ववच्छ्रुतीनां परस्परविरोधपरिहार एव पदार्थः । युक्तिसाहित्यस्य पूर्वत्रापि साम्यात् । अत्रत्ययुक्तीनां श्रुत्यादिसिद्धत्वेन प्राबल्यात् पादभेदः । अध्यात्मविषयतया च ।**

ಈ ಪಾದದ ಪ್ರಮೇಯವನ್ನು ಯುಕ್ತಿ ಇತ್ಯಾದಿ ಭಾಷ್ಯದಿಂದ ತೋರಿಸುತ್ತಿದ್ದಾರೆ. ಈ ಪಾದದಲ್ಲೂ ಕೂಡ ಹಿಂದಿನ ಪಾದದಂತೆ ಶ್ರುತಿಗಳ ಪರಸ್ಪರ ವಿರೋಧವನ್ನು ಪರಿಹಾರ

ಮಾಡಲಾಗಿದೆ. ಯುಕ್ತಿಸಾಹಿತ್ಯವು ಹಿಂದಿನ ಪಾದದಲ್ಲೂ ಸಮಾನ. ಆದರೆ ಈ ಪಾದದಲ್ಲಿ ಉಲ್ಲೇಖ ಮಾಡಲ್ಪಡುವ ಯುಕ್ತಿಗಳಿಗೆ ಶ್ರುತಿಗಳ ಬೆಂಬಲ ಇದ್ದೇ ಇರುತ್ತದೆ. ಆದ್ದರಿಂದ ಯುಕ್ತಿಗಳು ಪ್ರಬಲವಾಗಿರುತ್ತವೆ. ಹಾಗಾಗಿ ಹಿಂದಿನ ಪಾದಕ್ಕಿಂತ ಈ ಪಾದಕ್ಕೆ ವ್ಯತ್ಯಾಸವು ಇರುತ್ತದೆ. ಅಧ್ಯಾತ್ಮವಿಷಯಕಶಬ್ದಗಳನ್ನು ಸಮನ್ವಯ ಮಾಡುತ್ತಿರುವುದರಿಂದಲೂ ಪಾದಭೇದವು ಯುಕ್ತವಾಗುತ್ತದೆ.

ವಿವರಣೆ – ಎರಡನೆಯ ಈ ಅವಿರೋಧಾಧ್ಯಾಯದಲ್ಲಿರುವ ಪ್ರಥಮಪಾದದಲ್ಲಿ ಯುಕ್ತಿವಿರೋಧವನ್ನು ಪರಿಹರಿಸಲಾಯಿತು. ಎರಡನೆಯ ಪಾದದಲ್ಲಿ ಸಮಯವಿರೋಧವನ್ನು, ಮೂರನೆಯ ಪಾದದಲ್ಲಿ ಶ್ರುತಿಗಳ ಪರಸ್ಪರ ವಿರೋಧವನ್ನು ಪರಿಹರಿಸಿದ್ದಾಯಿತು. ಪ್ರಕೃತ ನಾಕನೆಯ ಈ ಪಾದದಲ್ಲಿ ಯುಕ್ತಿಸಹಿತವಾದ ಶ್ರುತಿಗಳ ವಿರೋಧವನ್ನು ಪರಿಹರಿಸುತ್ತಿದ್ದಾರೆ. ಹಿಂದಿನ ಪಾದದಲ್ಲಿ ಶ್ರುತಿಗಳ ಪರಸ್ಪರ ವಿರೋಧವನ್ನು ಪರಿಹಾರ ಮಾಡಲಾಗಿದೆ. ಆದರೆ ಯಾವ ಯುಕ್ತಿಯನ್ನು ಆಶ್ರಯಿಸಿ ಶ್ರುತಿ ಹೊರಟಿರುತ್ತದೋ ಆ ಯುಕ್ತಿಗೆ ಶ್ರುತಿಯ ಬೆಂಬಲ ಇರುತ್ತಿರಲಿಲ್ಲ. ಪ್ರಕೃತ ಈ ಪಾದದಲ್ಲಿ ಯಾವ ಶ್ರುತಿಗಳ ವಿರೋಧವನ್ನು ಪರಿಹರಿಸುತ್ತಿದ್ದಾರೋ ಆ ಶ್ರುತಿಗಳಿಗೆ ಯುಕ್ತಿಗಳ ಬೆಂಬಲವಿರುತ್ತದೆ. ಹಾಗಾಗಿ ಮತ್ತಷ್ಟು ಕಠಿಣವಾದ ಶಬ್ದಗಳ ಸಮನ್ವಯಕ್ಕಾಗಿ ಈ ಪಾದವು ಹೊರಟಿದೆ.

ಯುಕ್ತಿಸಹಿತವಾದ ಶ್ರುತಿವಿರೋಧವು ಹಿಂದಿನ ಪಾದದಲ್ಲೂ ಸಮಾನವಾದ್ದರಿಂದ ಪಾದಭೇದಕ್ಕೆ ಕಾರಣವಿರುವುದಿಲ್ಲವೆಂಬ ಪ್ರಶ್ನೆಗೂ ಈಗ ಉತ್ತರ ಕೊಟ್ಟಂತಾಯಿತು. ಈ ಪಾದಭೇದಕ್ಕೆ ಮತ್ತೊಂದು ಕಾರಣವೇನೆಂದರೆ ಅಧ್ಯಾತ್ಮ ವಿಷಯತ್ವ. ಆತ್ಮನಿಗೆ ಸಂಬಂಧಪಟ್ಟ ಶರೀರ, ಇಂದ್ರಿಯ, ಚಿತ್ತ, ಚೇತನ ಮೊದಲಾದ ಅಧ್ಯಾತ್ಮ ವಿಷಯಕ ಶಬ್ದಗಳ ಸಮನ್ವಯವನ್ನು ಮಾಡುವುದೂ ಕೂಡ ಈ ಪಾದದ ಮತ್ತೊಂದು ಉದ್ದೇಶವಾಗಿದೆ. ಆದ್ದರಿಂದಲೂ ಪಾದಭೇದವು ಯುಕ್ತವಾಗುತ್ತದೆ.

ಟೀಕೆಯಲ್ಲಿರುವ 'ಅಧ್ಯಾತ್ಮವಿಷಯತಯಾ' ಎಂಬುದರ ಅಭಿಪ್ರಾಯ ಹೀಗಿದೆ - ಅಧ್ಯಾತ್ಮಪದದಿಂದ ಆತ್ಮನಿಗೆ ಸಂಬಂಧಪಟ್ಟ ಇಂದ್ರಿಯಾದಿಗಳನ್ನು ವಿವಕ್ಷಿಸಬೇಕು. ಆತ್ಮ ಶಬ್ದಕ್ಕೆ ಶರೀರ ಎಂಬರ್ಥವನ್ನು ಇಟ್ಟುಕೊಂಡಾಗ ಶರೀರಕ್ಕೆ ಸಂಬಂಧಪಟ್ಟ ಇಂದ್ರಿಯಾದಿಗಳು ಎಂಬರ್ಥವನ್ನು ತಿಳಿಯಬೇಕು. ಈ ಪಾದದ ಕೊನೆಯ ಎರಡು ಅಧಿಕರಣಗಳಲ್ಲಿ ಶರೀರದ ಬಗ್ಗೆ ವಿಚಾರ ಮಾಡಿದ್ದಾರೆ. ಶರೀರವು ಅಧ್ಯಾತ್ಮ ಪದದಿಂದ ಪ್ರತಿಪಾದ್ಯವಾಗದಿದ್ದಾಗ ಶರೀರದ ಬಗ್ಗೆ ವಿಚಾರ ಮಾಡುವುದು ಅಸಂಗತವಾಗುತ್ತದಲ್ಲವೇ? ಹೀಗೆ ಪ್ರಶ್ನಿಸಬಾರದು. ಪಾದವು ಪ್ರಾಯಿಕವಾದ್ದರಿಂದ ಎರಡು ಅಧಿಕರಣಗಳಲ್ಲಿ ಶರೀರದ ಬಗ್ಗೆ ವಿಚಾರ ಮಾಡದಿದ್ದರೂ ಅಸಂಗತಿಯು ಬರುವುದಿಲ್ಲ.

ಇಂದ್ರಿಯಗಳ ಉತ್ಪತ್ತಿ, ಅವುಗಳ ಸಂಖ್ಯೆ ಹಾಗೂ ಪರಿಮಾಣ ಇವುಗಳಲ್ಲಿ ಮೊದಲು ಉತ್ಪತ್ತಿಯ ವಿಚಾರವೇ ಪ್ರಸಕ್ತವಾಗುತ್ತದೆ. ಮತ್ತು ಒಂದೊಂದೇ ಇಂದ್ರಿಯಗಳನ್ನು ವಿಚಾರ ಮಾಡುವ ಮೊದಲು ಸಮುದಾಯವಿಚಾರವೇ ಪ್ರಥಮಪ್ರಾಪ್ತವಾಗುತ್ತದೆ. ಈ ಕಾರಣದಿಂದ ಎಲ್ಲಾ ಇಂದ್ರಿಯಗಳ ಉತ್ಪತ್ತಿ ವಿಷಯಕವಾದ ಶ್ರುತಿ ವಿರೋಧವನ್ನು ಈ ಅಧಿಕರಣದಲ್ಲಿ ಮಾಡುತ್ತಿದ್ದಾರೆ.

ಹಿಂದಿನ ಪಾದದ ಕೊನೆಯಲ್ಲಿ ಜೀವಸ್ವರೂಪದ ವಿಚಾರವನ್ನು ಮುಕ್ತಾಯ ಮಾಡಿದರು. ಅನಂತರ ಜೀವನಿಗೆ ಸಂಬಂಧಪಟ್ಟ ಇಂದ್ರಿಯಗಳ ವಿಚಾರವೇ ಪ್ರಸಕ್ತವಾಗುತ್ತದೆ. ಆದ್ದರಿಂದ ಈ ಅಧಿಕರಣಕ್ಕೆ ಆನಂತರ್ಯ ಸಂಗತಿಯೂ ಕೂಡ ಇರುತ್ತದೆ. ಮತ್ತು ಈ ಪಾದದಲ್ಲಿ ಪ್ರಥಮಪ್ರಾಪ್ತತ್ವವೂ ಕೂಡ ಇರುತ್ತದೆ. (ವಾಕ್ಯಾರ್ಥಮುಕ್ತಾವಳಿ).

ಪ್ರಾಣೋತ್ಪತ್ತ್ಯಧಿಕರಣ (೨-೪-೧)

**तत्वप्रकाशिका – तत्रादावीश्वरस्य श्रुतिसमन्वयेन जगत्कारणत्वसिध्यर्थमिन्द्रियोत्पत्तिविषयश्रुतिविरोध परिहारादस्ति शास्त्रादिसङ्गतिः । जगत्कारणे ब्रह्मणि सर्वश्रुतिसमन्वयो निरुपितः । तत्र प्राणोत्पत्तिविषयश्रुतीनां विरोधेनाप्रामाण्ये तदसिद्धेः स परिहर्तव्यो भवति ।**

ಮೊದಲು ಈಶ್ವರನಿಗೆ ಶ್ರುತಿ ಸಮನ್ವಯದಿಂದ ಜಗತ್ಕಾರಣತ್ವವು ಸಿದ್ಧವಾಗುವುದಕ್ಕಾಗಿ ಇಂದ್ರಿಯೋತ್ಪತ್ತಿ ವಿಷಯಕವಾದ ಶ್ರುತಿವಿರೋಧವನ್ನು ಈ ಅಧಿಕರಣದಲ್ಲಿ ಪರಿಹರಿಸಲಾಗಿದೆ. ಆದ್ದರಿಂದ ಶಾಸ್ತ್ರ, ಅಧ್ಯಾಯ, ಪಾದಸಂಗತಿಗಳು ಇರುತ್ತವೆ. ಜಗತ್ಕಾರಣನಾದ ಬ್ರಹ್ಮನಲ್ಲಿ ಸಕಲ ಶ್ರುತಿಗಳ ಸಮನ್ವಯವನ್ನು ಸಮರ್ಥಿಸಲಾಯಿತು. ಹೀಗಿರುವಾಗ ಪ್ರಾಣೋತ್ಪತ್ತಿವಿಷಯಕವಾದ ಶ್ರುತಿಗಳ ವಿರೋಧ ಬರುವುದರಿಂದ ಅಪ್ರಾಮಾಣ್ಯವು ಪ್ರಾಪ್ತವಾದರೆ ಸಮನ್ವಯವೇ ಅಸಿದ್ಧವಾಗುತ್ತದೆ. ಆದ್ದರಿಂದ ಈ ಪ್ರಾಣೋತ್ಪತ್ತಿವಿಷಯಕವಾದ ಶ್ರುತಿಗಳ ವಿರೋಧವನ್ನು ಪರಿಹಾರ ಮಾಡಲೇಬೇಕು.

**तत्वप्रकाशिका – सर्वजगदन्तःपातिनः प्राणा एव विषयः । किमुत्पत्तिमन्तो न वेति सन्देहः । संशयबीजं श्रुतिविगानं दर्शयन् पूर्वपक्षं सूचयति – प्राणा इति।।**

ಸಕಲ ಜಗತ್ತಿನಲ್ಲಿ ಅಂತರ್ಗತವಾದ ಇಂದ್ರಿಯಗಳೇ ಅಧಿಕರಣದ ವಿಷಯ. ಇಂದ್ರಿಯಗಳಿಗೆ ಉತ್ಪತ್ತಿ ಇದೆಯೋ? ಇಲ್ಲವೋ? ಎಂಬುದು ಸಂದೇಹ. ಸಂದೇಹಕ್ಕೆ ಕಾರಣ ಶ್ರುತಿಗಳ ಪರಸ್ಪರ ವಿರೋಧವೇ ಆಗಿದೆ. ಈ ವಿರೋಧವನ್ನು ತೋರಿಸುವ ಮೂಲಕ ಪೂರ್ವಪಕ್ಷವನ್ನು 'ಪ್ರಾಣಾಃ' ಇತ್ಯಾದಿಯಾಗಿ ಸೂಚನೆ ಮಾಡುತ್ತಿದ್ದಾರೆ.

**तत्वप्रकाशिका – अथ तस्मात् । इति च 'प्राणानामुत्पत्तिः श्रूयते' इति शेषः। प्राणा नोत्पत्तिमन्तः 'प्राणा एवानादयः' इति श्रुतेः । न चोत्पत्तावपि श्रुतिरस्तीति वाच्यम् । अस्याः स्पष्टार्थाया निरवकाशत्वेन प्राबल्यात् । प्राणा नोत्पत्तिमन्तो निरुपादानत्वाद् व्यतिरेकेण घटवदिति युक्तियुक्तत्वेनापि प्राबल्यात्।**

ಕಾಷಾಯಣ ಶ್ರುತಿಯಲ್ಲಿರುವ 'ಅಥ' ಎಂಬ ಪದಕ್ಕೆ 'ಆದ್ದರಿಂದ' ಎಂದರ್ಥ. 'ಇತಿ ಚ' ಎಂಬಲ್ಲಿ 'ಪ್ರಾಣಾನಾಂ ಉತ್ಪತ್ತಿಃ ಶ್ರೂಯತೇ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಇಂದ್ರಿಯಗಳಿಗೆ ಉತ್ಪತ್ತಿಯು ಇರುವುದಿಲ್ಲವೆಂದು 'ಪ್ರಾಣಾಃ ಏವ ಅನಾದಯಃ' ಎಂಬ ಶ್ರುತಿಯು ಹೇಳುತ್ತಿದೆ. ಉತ್ಪತ್ತಿಯ ವಿಷಯದಲ್ಲೂ ಕೂಡ ಶ್ರುತಿಯು ಇದೆಯಲ್ಲವೇ? ಎಂದು ಪ್ರಶ್ನಿಸಬಾರದು. ಉತ್ಪತ್ತಿ ಇಲ್ಲವೆಂದು ಹೇಳುವ ಮುಂಡಕದ ಮಾತು ಅತ್ಯಂತ ಸ್ಪಷ್ಟವಾಗಿದೆ. ಆದ್ದರಿಂದಲೇ ನಿರವಕಾಶವಾಗಿದೆ. ನಿರವಕಾಶವಾದ್ದರಿಂದ ಬಲಿಷ್ಠವಾಗಿದೆ. ಅಷ್ಟೇ ಅಲ್ಲದೇ, 'ಪ್ರಾಣಾಃ ನೋತ್ಪತ್ತಿಮಂತಃ ನಿರುಪಾದಾನತ್ವಾತ್ ವ್ಯತಿರೇಕೇಣ ಘಟವತ್' 'ಘಟವು ಉಪಾದಾನ

ಕಾರಣವುಳ್ಳದ್ದಾಗಿದೆ ಉತ್ಪತ್ತಿಯುಳ್ಳದ್ದಾಗಿದೆ. ಆದರೆ ಇಂದ್ರಿಯಗಳು ಉಪಾದಾನ ಕಾರಣವನ್ನು ಹೊಂದಿಲ್ಲದ ಕಾರಣ ಉತ್ಪತ್ತಿವುಳ್ಳವುಗಳಲ್ಲ' ಎಂಬ ಯುಕ್ತಿಯಿಂದಲೂ ಕೂಡ ಇಂದ್ರಿಯಗಳಿಗೆ ಉತ್ಪತ್ತಿ ಹೇಳುವ ಶ್ರುತಿಯು ಉಪೋದ್ಬಲಿತವಾಗಿದೆ. ಆದ್ದರಿಂದ ಮತ್ತಷ್ಟು ಪ್ರಬಲವಾಯಿತು.

ವಿವರಣೆ - 'ಪ್ರಾಣಾ ಏವ ಇದಮಗ್ರ ಆಸುಃ ತೇಭ್ಯೋ ಭೂತಾನಿ' ಎಂಬುದಾಗಿ ಪ್ರಳಯದಲ್ಲಿ ಇಂದ್ರಿಯಗಳು ಇರುತ್ತವೆಂದು ಹೇಳಿ ಆ ಇಂದ್ರಿಯಗಳಿಂದ ಪಂಚಭೂತಗಳು ಹುಟ್ಟುತ್ತವೆಂದು ಹೇಳಲಾಗಿದೆ. ಪ್ರಳಯಕಾಲದಲ್ಲಿಯೂ ಇಂದ್ರಿಯಗಳಿರುವುದರಿಂದ ಅನಾದಿತ್ವವು ಸಿದ್ಧವಾಗುತ್ತದೆ. ಅದೇ ಶ್ರುತಿಯು ಮುಂದೆ 'ಪ್ರಾಣಾಃ ನಿತ್ಯಾಃ' ಎಂಬುದಾಗಿ ಸ್ಪಷ್ಟವಾಗಿ ನಿತ್ಯತ್ವವನ್ನೇ ಹೇಳುತ್ತಿದೆ. ಆದ್ದರಿಂದ ಈ ಶ್ರುತಿಯು ಯುಕ್ತಿಬದ್ಧವಾಗಿದೆ. ಮತ್ತು ಅವಧಾರಣಪುರಸ್ಸರವಾಗಿ ಅನಾದಿತ್ವವನ್ನು ಹೇಳುತ್ತಿದೆ. ಆದ್ದರಿಂದ ಇಂದ್ರಿಯಗಳಿಗೆ ಉತ್ಪತ್ತಿಯನ್ನು ಹೇಳುವ ಶ್ರುತಿಗೆ ಗೌಣಾರ್ಥವನ್ನೇ ಮಾಡಬೇಕು.

ಮತ್ತೊಂದು ಪ್ರಕಾರದಿಂದಲೂ ಅನಾದಿತ್ವ ಹೇಳುವ ಶ್ರುತಿಗೆ ಪ್ರಾಬಲ್ಯವನ್ನು 'ಪ್ರಾಣಾಃ' ಇತ್ಯಾದಿ ವಾಕ್ಯದಿಂದ ಟೀಕೆಯಲ್ಲಿ ಸಮರ್ಥಿಸುತ್ತಿದ್ದಾರೆ. ಅನಾದಿತ್ವಸಾಧಕವಾದ ಈ ಅನುಮಾನದಲ್ಲಿ ಅಸಿದ್ಧ್ಯಾದಿಗಳಿಲ್ಲವೆಂದು ಹೇಳಿದ್ದಾರೆ. ಆದಿಪದದಿಂದ ಬಾಧ ಹಾಗೂ ವ್ಯಭಿಚಾರಗಳನ್ನು ವಿವಕ್ಷಿಸಬೇಕು. ಸಾಧ್ಯವು ಪ್ರಮಾಣಸಿದ್ಧವಾದ್ದರಿಂದ ಬಾಧವಿಲ್ಲ. ವ್ಯತಿರೇಕವ್ಯಾಪ್ತಿಯು ಘಟಪಟಾದಿಗಳಲ್ಲಿ ಪ್ರತ್ಯಕ್ಷಸಿದ್ಧವಾದ್ದರಿಂದ ವ್ಯಭಿಚಾರ ದೋಷವಿಲ್ಲ.

**तत्वप्रकाशिका – न चात्रासिद्ध्यादिशङ्का कर्तव्या 'नोपादानम्' इति स्मृतिगृहीतत्वात् । अतः प्रबलश्रुतिविरोधादुत्पत्तिश्रुतिरप्रमाणमेवेति नेश्वरस्य श्रुतिसमन्वयेन जगत्कारणत्वसिद्धिरिति भावः । सिद्धान्तयत्सूत्रमवतार्य व्याचष्टे – अत इति ।।**

ಈ ಅನುಮಾನದಲ್ಲಿ ಅಸಿದ್ಧಿ ಮೊದಲಾದ ದೋಷಗಳನ್ನು ಆಶಂಕಿಸಬಾರದು. ಏಕೆಂದರೆ 'ನೋಪಾದಾನಂ' ಎಂಬ ಸ್ಮೃತಿಯ ಆಧಾರದಿಂದ ಇಂದ್ರಿಯಗಳಿಗೆ ಉಪಾದಾನವಿಲ್ಲವೆಂದು ನಿರ್ಣಯವಾಗಿದೆ. ಹಾಗಾಗಿ ಪ್ರಬಲವಾದ ಶ್ರುತಿವಿರೋಧವು ಬರುವುದರಿಂದ ಇಂದ್ರಿಯಗಳಿಗೆ ಉತ್ಪತ್ತಿಯನ್ನು ಹೇಳುವ ಶ್ರುತಿಗೆ ಅಪ್ರಾಮಾಣ್ಯವನ್ನೇ ಹೇಳಬೇಕು. ಹೀಗಿರುವಾಗ ಈಶ್ವರನಲ್ಲಿ ಶ್ರುತಿಸಮನ್ವಯದಿಂದ ಜಗತ್ಕಾರಣತ್ವವು ಹೇಗೆ ಸಿದ್ಧವಾಗುತ್ತದೆ? ಇಷ್ಟು ಅಧಿಕರಣದ ಪೂರ್ವಪಕ್ಷ. ಸಿದ್ಧಾಂತ ಸ್ಥಾಪಕವಾದ ಸೂತ್ರಕ್ಕೆ 'ಅತಃ' ಎಂಬುದಾಗಿ ಅವತಾರಿಕೆಯನ್ನು ನೀಡಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – उत्पत्तिमन्त एव प्राणाः । आकाशादीनामुत्पत्तिमत्त्वे कथित-युक्तिसमुदायादेवेत्यर्थः । अत्र पुनर्विप्रतिपत्त्याभावेन कारणस्याविचारात्सिद्धवत्कृत्य परमात्मन इत्युक्तम् ।।**

ಇಂದ್ರಿಯಗಳಿಗೆ ಉತ್ಪತ್ತಿಯು ಇದ್ದೇ ಇದೆ. ಆಕಾಶಾದಿಗಳಿಗೆ ಉತ್ಪತ್ತಿ ಇದೆ ಎಂಬ ವಿಷಯದಲ್ಲಿ ಯಾವ ಯುಕ್ತಿಗಳ ಸಮುದಾಯವನ್ನೇ ಹಿಂದೆ ಹೇಳಲಾಯಿತೋ ಅದೇ ಯುಕ್ತಿಗಳ

ಸಮುದಾಯದಿಂದ ಇಂದ್ರಿಯಗಳಿಗೂ ಕೂಡ ಉತ್ಪತ್ತಿಯು ಸಿದ್ಧವಾಗುತ್ತದೆ. ಪ್ರಕೃತ ಯಾವುದೇ ವಿವಾದವಿಲ್ಲದ್ದರಿಂದ ಕಾರಣದ ಬಗ್ಗೆ ವಿಚಾರ ಮಾಡದೇ ಸಿದ್ಧವತ್ಕೃತ್ಯ ಪರಮಾತ್ಮನೇ ಇಂದ್ರಿಯಗಳಿಗೆ ಕಾರಣನೆಂದು ಭಾಷ್ಯದಲ್ಲಿ ಹೇಳಲಾಗಿದೆ.

**ವಿವರಣೆ** – ವಿಯದಧಿಕರಣದಲ್ಲಿ ಆಕಾಶಕ್ಕೂ ಕೂಡ ಉತ್ಪತ್ತಿ ಇದೆ ಎಂದು ಸಮರ್ಥಿಸಲಾಗಿದೆ. ಅದೇ ನ್ಯಾಯವನ್ನು ಇಲ್ಲಿಯೂ ಕೂಡ ಇಟ್ಟುಕೊಂಡು ಇಂದ್ರಿಯಗಳಿಗೆ ಉತ್ಪತ್ತಿ ಇದೆ ಎಂದು ತಿಳಿಯಬೇಕು. ಶ್ರೀಮದಾಚಾರ್ಯರು ಭಾಷ್ಯದಲ್ಲಿ 'ಯಥಾ ಆಕಾಶಾದಯಃ ಪರಮಾತ್ಮನಃ ಉತ್ಪದ್ಯಂತೇ ತಥಾ ಪ್ರಾಣಾಃ ಅಪಿ' 'ಆಕಾಶಾದಿಗಳು ಪರಮಾತ್ಮನಿಂದ ಹೇಗೆ ಹುಟ್ಟುತ್ತವೋ ಅದೇ ರೀತಿಯಾಗಿ ಇಂದ್ರಿಯಗಳೂ ಕೂಡ ಹುಟ್ಟುತ್ತವೆಂದು' ಹೇಳಿದ್ದಾರೆ. ಪರಮಾತ್ಮನು ಇಂದ್ರಿಯಗಳಿಗೆ ಕಾರಣನೆಂದೇ ಇದುವರೆಗೂ ಸಿದ್ಧವಾಗಿಲ್ಲ. ಹೀಗಿರುವಾಗ ಸಿದ್ಧವತ್ಕೃತ್ಯ ಪರಮಾತ್ಮನೇ ಕಾರಣನೆಂದು ಹೇಗೆ ಹೇಳಿದ್ದಾರೆ? ಎಂದು ಆಕ್ಷೇಪ ಮಾಡಬಾರದು. ಏಕೆಂದರೆ ಪರಮಾತ್ಮನು ಕಾರಣನಾಗಿದ್ದಾನೆಂಬ ವಿಷಯದಲ್ಲಿ ಯಾವುದೇ ವಿವಾದವಿಲ್ಲ. ಪರಮಾತ್ಮನಿಗೆ ಕಾರಣತ್ವವನ್ನು ಸಮರ್ಥಿಸುವ ಪ್ರತ್ಯೇಕ ಸೂತ್ರವನ್ನು ಹೇಳಿರುವುದಿಲ್ಲ. ಆದ್ದರಿಂದ ಇಂದ್ರಿಯಗಳಿಗೂ ಕೂಡ ಪರಮಾತ್ಮನೇ ಕಾರಣನಾಗಿದ್ದಾನೆಂಬುದು ಸಿದ್ಧವತ್ಕೃತ್ಯ ಭಾಷ್ಯದಲ್ಲಿ ಹೇಳಿದ್ದು ಯುಕ್ತವಾಗಿದೆ. ಅಭಿಪ್ರಾಯವೇನೆಂದರೆ ತೇಜಸ್ಸು ಮೊದಲಾದವುಗಳು ಬ್ರಹ್ಮನನ್ನು ಬಿಟ್ಟು ಬೇರೆದರಿಂದ ಹುಟ್ಟುತ್ತದೆನ್ನಲು ಪ್ರತ್ಯಕ್ಷ ಪ್ರಮಾಣವಿದೆ. ಬಿಸಿಲಿನಿಂದ ಬೆವರು ಹುಟ್ಟುವುದು ಕಂಡಿದೆ. ಆದರೆ ಪ್ರಕೃತ ಇಂದ್ರಿಯಗಳು ಬ್ರಹ್ಮನನ್ನು ಬಿಟ್ಟು ಬೇರೆದರಿಂದ ಹುಟ್ಟಿದೆ ಎನ್ನಲು ಯಾವುದೇ ಪ್ರಾಪಕವಿಲ್ಲ. ಆದ್ದರಿಂದ ಈ ವಿಷಯದಲ್ಲಿ ವಿವಾದವಿಲ್ಲ ಎಂದು ತಿಳಿಯಬೇಕು.

## ಬ್ರಹ್ಮಸೂತ್ರ

**सूत्रम् – गौण्यसम्भवात् ।।**

'ಪ್ರಾಣಾ ಏವಾನಾದಯಃ' ಎಂಬುದಾಗಿ ಇಂದ್ರಿಯಗಳು ಅನಾದಿಯಾಗಿವೆ ಎಂಬುದಾಗಿ ಶ್ರುತಿಯು ಹೇಳುತ್ತಿರಬಹುದು. ಆದರೆ ಈ ಶ್ರುತಿಗೆ ಸೂಕ್ಷ್ಮರೂಪದಿಂದಷ್ಟೇ ಉತ್ಪತ್ತಿಯಿಲ್ಲ ಎಂಬುದಾಗಿ ಗೌಣಾರ್ಥವನ್ನು ಮಾಡಬೇಕು. ಹೊರತು, ಮುಖ್ಯವಾದ ಅನಾದಿತ್ವವನ್ನು ಒಪ್ಪುವುದು ಅತ್ಯಂತ ಅಸಂಭಾವಿತ.

## ಸೂತ್ರದೀಪಿಕಾ

**सूत्रदीपिका** – प्राणा एवानादय इत्यनादित्वश्रुतिः **गौणी** अमुख्या सूक्ष्मरूपेणानुत्पत्तिविषया। कुतः? **असम्भवात्** इन्द्रियाणां मुख्यानादित्वायोगात्। 'एतस्मात्' इति श्रुत्ययोगाच्चेत्यर्थः ।।२।।

'ಪ್ರಾಣಾ ಏವಾನಾದಯಃ' ಎಂಬ ಅನಾದಿತ್ವಶ್ರುತಿಯು, ಗೌಣೀ = ಅಮುಖ್ಯವಾಗಿದೆ. ಅಂದರೆ ಸೂಕ್ಷ್ಮರೂಪದಿಂದ ಉತ್ಪತ್ತಿಯನ್ನು ಪಡೆದಿಲ್ಲ ಎಂದು ಹೇಳುತ್ತಿದೆ. ಏಕೆಂದರೆ ಅಸಂಭವಾತ್ = ಇಂದ್ರಿಯಗಳಿಗೆ ಮುಖ್ಯವಾದ ಅನಾದಿತ್ವವು ಅತ್ಯಂತ ಅಸಂಭಾವಿತವಾಗಿದೆ. ಮತ್ತು 'ಏತಸ್ಮಾಜ್ಜಾಯತೇ ಪ್ರಾಣಃ' ಎಂಬ ಶ್ರುತಿಯು ಅಯುಕ್ತವಾಗಬೇಕಾದೀತು.

## ಬ್ರಹ್ಮಸೂತ್ರಭಾಷ್ಯ

**भाष्यम् — ।। गौण्यसम्भवात् ।।२।।**

**अनादित्वश्रुतिर्गौणानादित्वापेक्षया, मुख्यासम्भवात् ।**

ಅನುವಾದ - ಇಂದ್ರಿಯಗಳಿಗೆ ಅನಾದಿತ್ವವನ್ನು ಹೇಳುವ ಶ್ರುತಿಯು ಗೌಣವಾದ ಅನಾದಿತ್ವವನ್ನು ಹೇಳುತ್ತಿದೆ. ಮುಖ್ಯವಾದ ಅನಾದಿತ್ವವು ಅಸಂಭಾವಿತವಾಗಿದೆ.

ಪ್ರತಿಪದಾರ್ಥ -- ಅನಾದಿತ್ವಶ್ರುತಿಃ = ಇಂದ್ರಿಯಗಳಿಗೆ ಅನಾದಿತ್ವವನ್ನು ಹೇಳುವ ಶ್ರುತಿಯು, ಗೌಣಾನಾದಿತ್ವಾಪೇಕ್ಷಯಾ = ಅಮುಖ್ಯವಾದ ಅನಾದಿತ್ವವನ್ನು ಹೇಳುವ ದೃಷ್ಟಿಯಿಂದ ಹೊರಟಿದೆ. ಮುಖ್ಯಾಸಂಭವಾತ್ = ಮುಖ್ಯವಾದ ಅನಾದಿತ್ವವು ಅಸಂಭಾವಿತವಾಗಿದೆ.

**भाष्यम् —**

**नित्यान्येतानि सौक्ष्म्येण हीन्द्रियाणि तु सर्वशः ।**
**तेषां भूतैरुपचयः सृष्टिकाले विधीयते ।**
**परेण साम्यसम्प्राप्तेः कस्य स्यान्मुख्यनित्यता ।।'**
**इति हि भविष्यत्पर्वणि ।।२।।**

ಅನುವಾದ - ವಸ್ತುತಃ ಎಲ್ಲಾ ಇಂದ್ರಿಯಗಳು ಸೂಕ್ಷ್ಮರೂಪದಿಂದ ನಿತ್ಯವೇ ಆಗಿವೆ. ಸೃಷ್ಟಿಯ ಕಾಲದಲ್ಲಿ ಆ ಇಂದ್ರಿಯಗಳು ಪಂಚಭೂತಗಳಿಂದ ಉಪಚಯವನ್ನು ಪಡೆಯುತ್ತವೆ. ಯಾವುದೇ ವ್ಯತ್ಯಾಸವಿಲ್ಲದಿದ್ದಲ್ಲಿ ನಿತ್ಯತ್ವವಿಷಯದಲ್ಲಿ ಭಗವಂತನ ಸಾಮ್ಯ ಬರುತ್ತಿತ್ತು. ಆದರೆ ಭಗವಂತನು ಹೇಗೆ ನಿತ್ಯನೋ ಹಾಗೆ ಯಾವ ಪದಾರ್ಥವೂ ನಿತ್ಯವಲ್ಲ. ಆದ್ದರಿಂದ ಮುಖ್ಯನಿತ್ಯತ್ವವು ಇಂದ್ರಿಯಗಳಿಗೆ ಇರುವುದಿಲ್ಲ. ಹೀಗೆ ಭವಿಷ್ಯತ್‌ಪರ್ವದಲ್ಲಿ ಹೇಳಲಾಗಿದೆ.

ಪ್ರತಿಪದಾರ್ಥ -- ಏತಾನಿ = ಈ, ಸರ್ವಶಃ = ಎಲ್ಲಾ, ಇಂದ್ರಿಯಾಣಿ = ಇಂದ್ರಿಯಗಳು, ಸೌಕ್ಷ್ಮ್ಯೇಣ = ಸೂಕ್ಷ್ಮರೂಪದಿಂದ, ನಿತ್ಯಾನಿ = ನಿತ್ಯವೇ ಆಗಿರುತ್ತವೆ. ತೇಷಾಂ = ಆ ಇಂದ್ರಿಯಗಳಿಗೆ, ಭೂತೈಃ = ಪಂಚಭೂತಗಳಿಂದ, ಸೃಷ್ಟಿಕಾಲೇ = ಸೃಷ್ಟಿಕಾಲದಲ್ಲಿ, ಉಪಚಯಃ = ಉಪಚಯವು, ವಿಧೀಯತೇ = ವಿಧಿಸಲ್ಪಡುತ್ತದೆ. ಪರೇಣ = ಪರಮಾತ್ಮನಿಂದ, ಸಾಮ್ಯಸಂಪ್ರಾಪ್ತೇಃ = ಸೌಮ್ಯವು ಬರಬೇಕಾದ್ದರಿಂದ, ಕಸ್ಯ = ಯಾವ ಇಂದ್ರಿಯಕ್ಕೆ, ಮುಖ್ಯನಿತ್ಯತಾ = ಮುಖ್ಯನಿತ್ಯತ್ವವು, ಸ್ಯಾತ್ = ಬಂದೀತೂ, ಇತಿ ಹಿ = ಹೀಗೆ, ಭವಿಷ್ಯತ್‌ಪರ್ವಣಿ = ಭವಿಷ್ಯತ್‌ಪರ್ವದಲ್ಲಿ ಹೇಳಿದ್ದಾರೆ.

ಪ್ರಾಣೋತ್ಪತ್ತ್ಯಧಿಕರಣ (೨-೪-೧)

ಸಮುದಾಯದಿಂದ ಇಂದ್ರಿಯಗಳಿಗೂ ಕೂಡ ಉತ್ಪತ್ತಿಯು ಸಿದ್ಧವಾಗುತ್ತದೆ. ಪ್ರಕೃತ ಯಾವುದೇ ವಿವಾದವಿಲ್ಲದ್ದರಿಂದ ಕಾರಣದ ಬಗ್ಗೆ ವಿಚಾರ ಮಾಡದೇ ಸಿದ್ಧವತ್ಕೃತ್ಯ ಪರಮಾತ್ಮನೇ ಇಂದ್ರಿಯಗಳಿಗೆ ಕಾರಣನೆಂದು ಭಾಷ್ಯದಲ್ಲಿ ಹೇಳಲಾಗಿದೆ.

**ವಿವರಣೆ** - ವಿಯದಧಿಕರಣದಲ್ಲಿ ಆಕಾಶಕ್ಕೂ ಕೂಡ ಉತ್ಪತ್ತಿ ಇದೆ ಎಂದು ಸಮರ್ಥಿಸಲಾಗಿದೆ. ಅದೇ ನ್ಯಾಯವನ್ನು ಇಲ್ಲಿಯೂ ಕೂಡ ಇಟ್ಟುಕೊಂಡು ಇಂದ್ರಿಯಗಳಿಗೆ ಉತ್ಪತ್ತಿ ಇದೆ ಎಂದು ತಿಳಿಯಬೇಕು. ಶ್ರೀಮದಾಚಾರ್ಯರು ಭಾಷ್ಯದಲ್ಲಿ 'ಯಥಾ ಆಕಾಶಾದಯಃ ಪರಮಾತ್ಮನಃ ಉತ್ಪದ್ಯಂತೇ ತಥಾ ಪ್ರಾಣಾಃ ಅಪಿ' 'ಆಕಾಶಾದಿಗಳು ಪರಮಾತ್ಮನಿಂದ ಹೇಗೆ ಹುಟ್ಟುತ್ತವೋ ಅದೇ ರೀತಿಯಾಗಿ ಇಂದ್ರಿಯಗಳೂ ಕೂಡ ಹುಟ್ಟುತ್ತವೆಂದು' ಹೇಳಿದ್ದಾರೆ. ಪರಮಾತ್ಮನು ಇಂದ್ರಿಯಗಳಿಗೆ ಕಾರಣನೆಂದೇ ಇದುವರೆಗೂ ಸಿದ್ಧವಾಗಿಲ್ಲ. ಹೀಗಿರುವಾಗ ಸಿದ್ಧವತ್ಕೃತ್ಯ ಪರಮಾತ್ಮನೇ ಕಾರಣನೆಂದು ಹೇಗೆ ಹೇಳಿದ್ದಾರೆ? ಎಂದು ಆಕ್ಷೇಪ ಮಾಡಬಾರದು. ಏಕೆಂದರೆ ಪರಮಾತ್ಮನು ಕಾರಣನಾಗಿದ್ದಾನೆಂಬ ವಿಷಯದಲ್ಲಿ ಯಾವುದೇ ವಿವಾದವಿಲ್ಲ. ಪರಮಾತ್ಮನಿಗೆ ಕಾರಣತ್ವವನ್ನು ಸಮರ್ಥಿಸುವ ಪ್ರತ್ಯೇಕ ಸೂತ್ರವನ್ನು ಹೇಳಿರುವುದಿಲ್ಲ. ಆದ್ದರಿಂದ ಇಂದ್ರಿಯಗಳಿಗೂ ಕೂಡ ಪರಮಾತ್ಮನೇ ಕಾರಣನಾಗಿದ್ದಾನೆಂಬುದು ಸಿದ್ಧವತ್ಕೃತ್ಯ ಭಾಷ್ಯದಲ್ಲಿ ಹೇಳಿದ್ದು ಯುಕ್ತವಾಗಿದೆ. ಅಭಿಪ್ರಾಯವೇನೆಂದರೆ ತೇಜಸ್ಸು ಮೊದಲಾದವುಗಳು ಬ್ರಹ್ಮನನ್ನು ಬಿಟ್ಟು ಬೇರೆದರಿಂದ ಹುಟ್ಟುತ್ತದೆನ್ನಲು ಪ್ರತ್ಯಕ್ಷ ಪ್ರಮಾಣವಿದೆ. ಬಿಸಿಲಿನಿಂದ ಬೆವರು ಹುಟ್ಟುವುದು ಕಂಡಿದೆ. ಆದರೆ ಪ್ರಕೃತ ಇಂದ್ರಿಯಗಳು ಬ್ರಹ್ಮನನ್ನು ಬಿಟ್ಟು ಬೇರೆದರಿಂದ ಹುಟ್ಟಿದೆ ಎನ್ನಲು ಯಾವುದೇ ಪ್ರಾಪಕವಿಲ್ಲ. ಆದ್ದರಿಂದ ಈ ವಿಷಯದಲ್ಲಿ ವಿವಾದವಿಲ್ಲ ಎಂದು ತಿಳಿಯಬೇಕು.

## ಬ್ರಹ್ಮಸೂತ್ರ

**सूत्रम् – गौण्यसम्भवात् ।।**

'ಪ್ರಾಣಾ ಏವಾನಾದಯಃ' ಎಂಬುದಾಗಿ ಇಂದ್ರಿಯಗಳು ಅನಾದಿಯಾಗಿವೆ ಎಂಬುದಾಗಿ ಶ್ರುತಿಯು ಹೇಳುತ್ತಿರಬಹುದು. ಆದರೆ ಈ ಶ್ರುತಿಗೆ ಸೂಕ್ಷ್ಮರೂಪದಿಂದಷ್ಟೇ ಉತ್ಪತ್ತಿಯಿಲ್ಲ ಎಂಬುದಾಗಿ ಗೌಣಾರ್ಥವನ್ನು ಮಾಡಬೇಕು. ಹೊರತು, ಮುಖ್ಯವಾದ ಅನಾದಿತ್ವವನ್ನು ಒಪ್ಪುವುದು ಅತ್ಯಂತ ಅಸಂಭಾವಿತ.

## ಸೂತ್ರದೀಪಿಕಾ

**सूत्रदीपिका** – प्राणा एवानादय इत्यनादित्वश्रुतिः **गौणी** अमुख्या सूक्ष्मरूपेणानुत्पत्तिविषया। कुतः? **असम्भवात्** इन्द्रियाणां मुख्यानादित्वायोगात्। 'एतस्मात्' इति श्रुत्ययोगाच्चेत्यर्थः ।।२।।

'ಪ್ರಾಣಾ ಏವಾನಾದಯಃ' ಎಂಬ ಅನಾದಿತ್ವಶ್ರುತಿಯು, ಗೌಣೀ = ಅಮುಖ್ಯವಾಗಿದೆ. ಅಂದರೆ ಸೂಕ್ಷ್ಮರೂಪದಿಂದ ಉತ್ಪತ್ತಿಯನ್ನು ಪಡೆದಿಲ್ಲ ಎಂದು ಹೇಳುತ್ತಿದೆ. ಏಕೆಂದರೆ ಅಸಂಭವಾತ್ = ಇಂದ್ರಿಯಗಳಿಗೆ ಮುಖ್ಯವಾದ ಅನಾದಿತ್ವವು ಅತ್ಯಂತ ಅಸಂಭಾವಿತವಾಗಿದೆ. ಮತ್ತು 'ಏತಸ್ಮಾಜ್ಜಾಯತೇ ಪ್ರಾಣಃ' ಎಂಬ ಶ್ರುತಿಯು ಅಯುಕ್ತವಾಗಬೇಕಾದೀತು.

## ಬ್ರಹ್ಮಸೂತ್ರಭಾಷ್ಯ

**भाष्यम् — ।। गौण्यसम्भवात् ।।२।।**

**अनादित्वश्रुतिर्गौणानादित्वापेक्षया, मुख्यासम्भवात् ।**

ಅನುವಾದ - ಇಂದ್ರಿಯಗಳಿಗೆ ಅನಾದಿತ್ವವನ್ನು ಹೇಳುವ ಶ್ರುತಿಯು ಗೌಣವಾದ ಅನಾದಿತ್ವವನ್ನು ಹೇಳುತ್ತಿದೆ. ಮುಖ್ಯವಾದ ಅನಾದಿತ್ವವು ಅಸಂಭಾವಿತವಾಗಿದೆ.

ಪ್ರತಿಪದಾರ್ಥ -- ಅನಾದಿತ್ವಶ್ರುತಿಃ = ಇಂದ್ರಿಯಗಳಿಗೆ ಅನಾದಿತ್ವವನ್ನು ಹೇಳುವ ಶ್ರುತಿಯು, ಗೌಣಾನಾದಿತ್ವಾಪೇಕ್ಷಯಾ = ಅಮುಖ್ಯವಾದ ಅನಾದಿತ್ವವನ್ನು ಹೇಳುವ ದೃಷ್ಟಿಯಿಂದ ಹೊರಟಿದೆ. ಮುಖ್ಯಾಸಂಭವಾತ್ = ಮುಖ್ಯವಾದ ಅನಾದಿತ್ವವು ಅಸಂಭಾವಿತವಾಗಿದೆ.

**भाष्यम् —**

**नित्यान्येतानि सोक्ष्म्येण हीन्द्रियाणि तु सर्वशः ।**
**तेषां भूतैरुपचयः सृष्टिकाले विधीयते ।**
**परेण साम्यसम्प्राप्तेः कस्य स्यान्मुख्यनित्यता ।।'**
**इति हि भविष्यत्पर्वणि ।।२।।**

ಅನುವಾದ - ವಸ್ತುತಃ ಎಲ್ಲಾ ಇಂದ್ರಿಯಗಳು ಸೂಕ್ಷ್ಮರೂಪದಿಂದ ನಿತ್ಯವೇ ಆಗಿವೆ. ಸೃಷ್ಟಿಯ ಕಾಲದಲ್ಲಿ ಆ ಇಂದ್ರಿಯಗಳು ಪಂಚಭೂತಗಳಿಂದ ಉಪಚಯವನ್ನು ಪಡೆಯುತ್ತವೆ. ಯಾವುದೇ ವ್ಯತ್ಯಾಸವಿಲ್ಲದಿದ್ದಲ್ಲಿ ನಿತ್ಯತ್ವವಿಷಯದಲ್ಲಿ ಭಗವಂತನ ಸಾಮ್ಯ ಬರುತ್ತಿತ್ತು. ಆದರೆ ಭಗವಂತನು ಹೇಗೆ ನಿತ್ಯನೋ ಹಾಗೆ ಯಾವ ಪದಾರ್ಥವೂ ನಿತ್ಯವಲ್ಲ. ಆದ್ದರಿಂದ ಮುಖ್ಯನಿತ್ಯತ್ವವು ಇಂದ್ರಿಯಗಳಿಗೆ ಇರುವುದಿಲ್ಲ. ಹೀಗೆ ಭವಿಷ್ಯತ್‌ಪರ್ವದಲ್ಲಿ ಹೇಳಲಾಗಿದೆ.

ಪ್ರತಿಪದಾರ್ಥ -- ಏತಾನಿ = ಈ, ಸರ್ವಶಃ = ಎಲ್ಲಾ, ಇಂದ್ರಿಯಾಣಿ = ಇಂದ್ರಿಯಗಳು, ಸೌಕ್ಷ್ಮ್ಯೇಣ = ಸೂಕ್ಷ್ಮರೂಪದಿಂದ, ನಿತ್ಯಾನಿ = ನಿತ್ಯವೇ ಆಗಿರುತ್ತವೆ. ತೇಷಾಂ = ಆ ಇಂದ್ರಿಯಗಳಿಗೆ, ಭೂತೈಃ = ಪಂಚಭೂತಗಳಿಂದ, ಸೃಷ್ಟಿಕಾಲೇ = ಸೃಷ್ಟಿಕಾಲದಲ್ಲಿ, ಉಪಚಯಃ = ಉಪಚಯವು, ವಿಧೀಯತೇ = ವಿಧಿಸಲ್ಪಡುತ್ತದೆ. ಪರೇಣ = ಪರಮಾತ್ಮನಿಂದ, ಸಾಮ್ಯಸಂಪ್ರಾಪ್ತೇಃ = ಸೌಮ್ಯವು ಬರಬೇಕಾದ್ದರಿಂದ, ಕಸ್ಯ = ಯಾವ ಇಂದ್ರಿಯಕ್ಕೆ, ಮುಖ್ಯನಿತ್ಯತಾ = ಮುಖ್ಯನಿತ್ಯತ್ವವು, ಸ್ಯಾತ್ = ಬಂದೀತೂ, ಇತಿ ಹಿ = ಹೀಗೆ, ಭವಿಷ್ಯತ್‌ಪರ್ವಣಿ = ಭವಿಷ್ಯತ್‌ಪರ್ವದಲ್ಲಿ ಹೇಳಿದ್ದಾರೆ.

ಪ್ರಾಣೋತ್ಪತ್ತ್ಯಧಿಕರಣ (೨-೪-೧)

## ತತ್ವಪ್ರಕಾಶಿಕಾ

**तत्वप्रकाशिका – नन्वाकाशोत्पत्तिसिद्ध्यर्थमनुत्पत्तौ श्रुत्यभावो हेतुरुक्तः। कथमसाविह सम्भवति श्रुतेर्विद्यमानत्वादित्याशङ्कां परिहरत्सूत्रमुपन्यस्य व्याचष्टे – गौणीति ।।**

ಆಕಾಶಕ್ಕೆ ಉತ್ಪತ್ತಿ ಇದೆ ಎಂಬುದರ ಸಿದ್ಧಿಗಾಗಿ ಆಕಾಶಕ್ಕೆ ಉತ್ಪತ್ತಿ ಇಲ್ಲ ಎಂದು ಹೇಳುವ ವಿಷಯದಲ್ಲಿ ಶ್ರುತ್ಯಭಾವವನ್ನು ಹೇತುವನ್ನಾಗಿ ಹೇಳಲಾಯಿತು. ಆದರೆ ಪ್ರಕೃತ ಇಂದ್ರಿಯಗಳ ವಿಷಯದಲ್ಲಿ ಹೀಗೆ ಹೇಳಲು ಹೇಗೆ ಸಾಧ್ಯ ? ಉತ್ಪತ್ತಿ ಇಲ್ಲ ಎಂಬ ವಿಷಯದಲ್ಲಿ ಶ್ರುತಿಯು ಪ್ರಮಾಣವಾಗಿದೆಯಲ್ಲವೇ? ಈ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು 'ಗೌಣ್ಯಸಂಭವಾತ್' ಎಂದು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – सत्यमस्त्यनुत्पत्तिश्रुतिरिति तथापि नासौ प्राणानामनुत्पत्तिं वक्ति किंतु गौणानुत्पत्तिवादिन्येव । मुख्यानुत्पत्तेरसम्भवात्। मुख्यासम्भवे गौणार्थाङ्गीकारस्य न्यायप्राप्तत्वादिति भावः ।**

ಹೌದು. ಇಂದ್ರಿಯಗಳಿಗೆ ಅನಾದಿತ್ವವನ್ನು ಹೇಳುವ ಶ್ರುತಿಯು ಇದೆ. ಆದರೂ ಕೂಡ ಇಂದ್ರಿಯಗಳಿಗೆ ಮುಖ್ಯವಾದ ಅನಾದಿತ್ವವನ್ನು ಈ ಶ್ರುತಿಯು ಹೇಳುತ್ತಿಲ್ಲ. ಗೌಣವಾದ ಅನಾದಿತ್ವವನ್ನೇ ಹೇಳುತ್ತಿವೆ. ಮುಖ್ಯವಾದ ಉತ್ಪತ್ತಿ ಇಲ್ಲದಿರುವಿಕೆಯು ಇಂದ್ರಿಯಗಳಿಗೆ ಕೂಡುವುದೇ ಇಲ್ಲ. ಮುಖ್ಯಾರ್ಥವು ಕೂಡದಿದ್ದಾಗ ಗೌಣಾರ್ಥವನ್ನು ಸ್ವೀಕರಿಸುವುದು ನ್ಯಾಯಪ್ರಾಪ್ತವಾಗಿದೆ ಎಂದು ತಿಳಿಯಬೇಕು.

ವಿವರಣೆ - 'ಪ್ರಾಣಾಃ ಏವ ಅನಾದಯಃ' ಇತ್ಯಾದಿ ಶ್ರುತಿಯು ಇಂದ್ರಿಯಗಳಿಗೆ ಉತ್ಪತ್ತಿ ಇಲ್ಲವೆಂದು ಸಮರ್ಥನೆ ಮಾಡುತ್ತಿದೆ. ಆದರೂ 'ಆತ್ಮೈವೇದಮಗ್ರ ಆಸೀತ್ ಸಃ ಪ್ರಾಣಮಸೃಜತ' ಎಂಬ ಶ್ರುತಿಯು ಪರಮಾತ್ಮನೊಬ್ಬನೇ ಪ್ರಳಯಕಾಲದಲ್ಲಿದ್ದನು. ಇವನು ಇಂದ್ರಿಯಗಳನ್ನು ಸೃಷ್ಟಿ ಮಾಡಿದನು ಎಂಬುದಾಗಿ ಮತ್ತೊಂದು ನಿರವಕಾಶ ಶ್ರುತಿಯು ಇಂದ್ರಿಯಗಳಿಗೆ ಉತ್ಪತ್ತಿಯನ್ನು ಸಮರ್ಥನೆ ಮಾಡುತ್ತಿದೆ. ಈ ಶ್ರುತಿಯು ಅತ್ಯಂತ ಸ್ಪಷ್ಟವಾಗಿರುವುದರಿಂದ ಪ್ರಬಲವಾಗಿದೆ. ಈ ಶ್ರುತಿಯ ವಿರೋಧ ಬರುವುದರಿಂದ ಅನಾದಿತ್ವ ಶ್ರುತಿಗೆ ಗೌಣಾರ್ಥವನ್ನು ಮಾಡಬೇಕು.

**तत्वप्रकाशिका – 'एतस्माज्जायते' इत्यादिश्रुत्यसम्भवोऽपि द्रष्टव्यः । किं तद्गौणानादित्वं? प्राणानां कथं च मुख्यासम्भवः ? प्रत्युतोत्पत्तिरेव न सम्भवत्युपादानाभावादित्यत उक्तम् – सृष्टिकाल इति ।।**

'ಏತಸ್ಮಾಜ್ಜಾಯತೇ' ಇತ್ಯಾದಿ ಶ್ರುತಿಯು ಇಂದ್ರಿಯಗಳಿಗೆ ಅನಾದಿತ್ವವನ್ನು ಹೇಳಿದರೆ ಅನುಪಪನ್ನವಾಗುತ್ತದೆ.

ಇಂದ್ರಿಯಗಳಿಗೆ ಗೌಣವಾದ ಅನಾದಿತ್ವ ಎಂದರೇನು? ಮುಖ್ಯವಾದ ಅನಾದಿತ್ವವು ಇಂದ್ರಿಯಗಳಲ್ಲಿ ಏಕೆ ಯುಕ್ತವಾಗುವುದಿಲ್ಲ? ಅಷ್ಟೇ ಅಲ್ಲದೇ, ಉಪಾದಾನಕಾರಣವಿಲ್ಲದ್ದರಿಂದ ಉತ್ಪತ್ತಿ ಇಲ್ಲವೆಂದು ಹೇಳಬಹುದಲ್ಲವೇ? ಈ ಪ್ರಶ್ನೆಗೆ 'ಸೃಷ್ಟಿಕಾಲೇ' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

**तत्वप्रकाशिका – प्रलये वियुक्तांशानां प्रति सृष्टिकालमिति भावः । अत्राहङ्कारकारणत्वस्याप्यनिषेधादविरोधः । अहङ्कारोत्पन्नभूतानामपि सूक्ष्मप्राणैरस्त्युपचय इति तत्राप्यविरोधः । मुख्यनित्यतायां स्वातन्त्र्यं भवति। अनेन यावद्विकारमित्यादियुक्तयो गृहीता भवन्ति ।।**

ಪ್ರಳಯಕಾಲದಲ್ಲಿ ಇಂದ್ರಿಯಗಳಿಂದ ಬೇರ್ಪಡಿಸಲ್ಪಟ್ಟ ಭೂತಪದಾರ್ಥಗಳ ಅಂಶಗಳು ಸೃಷ್ಟಿಯ ಕಾಲದಲ್ಲಿ ಅವುಗಳ ಜೊತೆ ಸಂಬಂಧವನ್ನು ಹೊಂದಿರುತ್ತವೆ ಎಂದಭಿಪ್ರಾಯ. ಅಹಂಕಾರವು ಇಂದ್ರಿಯಗಳಿಗೆ ಕಾರಣವೆಂದೂ ಕೂಡ ಇಲ್ಲಿ ನಿಷೇಧ ಮಾಡಿರುವುದಿಲ್ಲ. ಆದ್ದರಿಂದ ಇಂದ್ರಿಯಗಳು ತೈಜಸಾಹಂಕಾರಾತ್ಮಕವಾಗಿವೆ ಎನ್ನಲು ಯಾವುದೇ ವಿರೋಧವಿಲ್ಲ. ಅಹಂಕಾರತತ್ವದಿಂದ ಉತ್ಪನ್ನವಾದ ಪಂಚಭೂತಗಳು ಸೂಕ್ಷ್ಮವಾದ ಇಂದ್ರಿಯಗಳಿಂದಲೂ ಕೂಡ ಉಪಚಯ ಹೊಂದುತ್ತವೆ. ಈ ವಿಷಯದಲ್ಲೂ ಕೂಡ ವಿರೋಧವಿಲ್ಲ.

ಮುಖ್ಯವಾದ ನಿತ್ಯತ್ವ ಬರಲು ಸ್ವಾತಂತ್ರ್ಯ ಬರಬೇಕು. ಆಗ ಪರಮಾತ್ಮನ ಜೊತೆ ಸಾಮ್ಯವು ಬರಬೇಕಾಗುತ್ತದೆ. ಆದ್ದರಿಂದ 'ಯಾವದ್ವಿಕಾರಂ ತು' ಇತ್ಯಾದಿ ಸೂತ್ರಗಳಲ್ಲಿ ಹೇಳಲ್ಪಟ್ಟ ಯುಕ್ತಿಗಳನ್ನು ಇಲ್ಲಿಯೂ ಕೂಡ ಸಂಗ್ರಹ ಮಾಡಿದಂತಾಗುತ್ತದೆ.

ವಿವರಣೆ - ಮುಖ್ಯಾರ್ಥವು ಅನುಪಪನ್ನವಾದಾಗ ಅಮುಖ್ಯಾರ್ಥವನ್ನು ಆಶ್ರಯಿಸುವುದು ನ್ಯಾಯಸಮ್ಮತವಾಗಿದೆ. ಇಂದ್ರಿಯಗಳಿಗೆ ಮುಖ್ಯವಾದ ಅನಾದಿತ್ವವನ್ನು ಸ್ವೀಕರಿಸಲು ಸಾಧ್ಯವಿಲ್ಲ. ಆದ್ದರಿಂದ ಅಮುಖ್ಯವಾದ ಅನಾದಿತ್ವವನ್ನೇ ಹೇಳಬೇಕು. ಇದರ ಅಭಿಪ್ರಾಯ ಹೀಗಿದೆ - ಇಂದ್ರಿಯಗಳು ಸೂಕ್ಷ್ಮರೂಪದಿಂದ ನಿತ್ಯವಾಗಿವೆ, ಅನಾದಿಯೂ ಆಗಿವೆ. ಆದರೆ ಸೃಷ್ಟಿಕಾಲದಲ್ಲಿ ಪಂಚಭೂತಗಳಿಂದ ಉಪಚಯವಾಗುತ್ತವೆ. ಪ್ರಳಯ ಕಾಲದಲ್ಲಿ ಆ ಪಂಚಭೂತಗಳಿಂದ ಬೇರ್ಪಟ್ಟು ಸೂಕ್ಷ್ಮರೂಪದಲ್ಲಿರುತ್ತವೆ. ಹಾಗಾಗಿ ಮುಖ್ಯವಾದ ಅನಾದಿತ್ವವು ಇಂದ್ರಿಯಗಳಲ್ಲಿ ಕೂಡಲು ಸಾಧ್ಯವೇ ಇಲ್ಲ. ಮುಖ್ಯ ಅನಾದಿತ್ವವು ಬರುವುದು ಪರಮಾತ್ಮನಲ್ಲಿ ಮಾತ್ರ. ಮುಖ್ಯ ಅನಾದಿತ್ವವನ್ನು ಹೇಳುವುದಾದರೆ ಪರಮಾತ್ಮನಲ್ಲಿರುವ ಸ್ವಾತಂತ್ರ್ಯವನ್ನು ಈ ಇಂದ್ರಿಯಗಳಲ್ಲೂ ಕೂಡ ಒಪ್ಪಬೇಕಾದ ಪರಿಸ್ಥಿತಿ ಬರುತ್ತದೆ.

ಪ್ರಶ್ನೆ - ಒಂದುವೇಳೆ ಇಂದ್ರಿಯಗಳಿಗೆ ಭೂತಪದಾರ್ಥಗಳಿಂದ ಉಪಚಯವನ್ನು ಹೇಳಿದರೆ ಪ್ರಮಾಣವಿರೋಧವು ಬರುತ್ತದೆ. ಏಕೆಂದರೆ 'ತೈಜಸಾನೀಂದ್ರಿಯಾಣ್ಯಾಹುಃ' ಎಂಬುದಾಗಿ ಇಂದ್ರಿಯಗಳನ್ನು ತೇಜಸ್ಸಿನ ಕಾರ್ಯವೆಂದು ಪ್ರಮಾಣವಚನವಿದೆ. ಆದ್ದರಿಂದ ತೈಜಸಾಹಂಕಾರದಿಂದ

ಇಂದ್ರಿಯಗಳು ಉಪಚಯವನ್ನು ಹೊಂದುತ್ತವೆ ಹೊರತು ಭೂತಪದಾರ್ಥಗಳಿಂದಲ್ಲ. ಹೀಗಿರುವಾಗ ಭಾಷ್ಯದಲ್ಲಿ ಹೇಳಿದ್ದು ತಪ್ಪಾಯಿತಲ್ಲವೇ?

ಉತ್ತರ - ತೈಜಸಾಹಂಕಾರದಿಂದ ಉಪಚಯವನ್ನು ಹೊಂದಿದ ಇಂದ್ರಿಯಗಳು ಪುನಃ ಭೂತಪದಾರ್ಥಗಳಿಂದಲೂ ಉಪಚಯವನ್ನು ಹೊಂದುತ್ತವೆಂದು ಇಲ್ಲಿ ವಿವಕ್ಷಿಸಬೇಕು. ಸೃಷ್ಟಿಯ ಪ್ರಾರಂಭದಲ್ಲಿ ಇಂದ್ರಿಯಗಳು ಸೂಕ್ಷ್ಮವಾದ ಪಂಚಭೂತಗಳಿಂದ ಉಪಚಯವನ್ನು ಹೊಂದಿ, ಅನಂತರ ತೈಜಸಾಹಂಕಾರದಿಂದ ಉಪಚಯವನ್ನು ಹೊಂದಿ, ಅನಂತರ ಸ್ಥೂಲವಾದ ಪಂಚಭೂತಗಳ ಜೊತೆ ಉಪಚಯವನ್ನು ಹೊಂದುತ್ತವೆ.

ಪ್ರಶ್ನೆ - ಪಂಚಭೂತಗಳು ತಾಮಸಾಹಂಕಾರಗಳ ಕಾರ್ಯವೆಂದು 'ತಾಮಸಾ ನಿ ತು ಭೂತಾನಿ' ಇತ್ಯಾದಿ ಪ್ರಮಾಣ ವಚನವು ಹೇಳುತ್ತಿದೆ. ಆದ್ದರಿಂದ ಇಂದ್ರಿಯಗಳ ಕಾರ್ಯವೆಂದು ಹೇಳುವುದು ಹೇಗೆ ಸರಿ?

ಉತ್ತರ - ಪಂಚಭೂತಗಳು ತಾಮಸಾಹಂಕಾರದಿಂದ ಹುಟ್ಟುವುದಾದರೂ ಕೂಡ ಮೊದಲು ಸೂಕ್ಷ್ಮೇಂದ್ರಿಯಗಳಿಂದ ಉಪಚಯವನ್ನು ಹೊಂದಿವೆಯೆಂದು ಒಪ್ಪಬಹುದು. ಆದ್ದರಿಂದ ವಿರೋಧಕ್ಕೆ ಅವಕಾಶವಿಲ್ಲ.

ಪ್ರಶ್ನೆ - ಇಂದ್ರಿಯಗಳಿಗೆ ಮುಖ್ಯವಾದ ನಿತ್ಯತ್ವವನ್ನು ಹೇಳಿದರೆ ಏನು ಸಮಸ್ಯೆ ?

ಉತ್ತರ - ಮುಖ್ಯವಾದ ನಿತ್ಯತ್ವ ಹೇಳಿದರೆ ಭಗವಂತನಂತೆ ಸ್ವಾತಂತ್ರ್ಯವು ಬರಬೇಕಾಗುತ್ತದೆ.

## ಬ್ರಹ್ಮಸೂತ್ರ

### सूत्रम् — प्रतिज्ञानुपरोधाच ।।

'ಸ ಇದಂ ಸರ್ವಮಸೃಜತ' ಎಂಬ ಪ್ರತಿಜ್ಞಾವಾಕ್ಯಕ್ಕೆ ಅನುಸಾರಿಯಾಗಿ ಇಂದ್ರಿಯಗಳಿಗೆ ಉತ್ಪತ್ತಿಯನ್ನು ಅಂಗೀಕರಿಸಬೇಕು.

## ಸೂತ್ರದೀಪಿಕಾ

**सूत्रदीपिका** — 'स इदं सर्वमसृजत' इति **प्रतिज्ञानुपरोधात्** प्रतिज्ञानुसाराच प्राणा उत्पाद्यन्त इत्यङ्गीकार्यमित्यर्थः ।।३।।

'ಸ ಇದಂ ಸರ್ವಮಸೃಜತ' ಎಂಬ ಶ್ರುತಿವಾಕ್ಯದ, ಪ್ರತಿಜ್ಞಾನುಪರೋಧಾತ್ = ಪ್ರತಿಜ್ಞಾವಾಕ್ಯಕ್ಕೆ ಅನುಸಾರಿಯಾಗಿ ಇಂದ್ರಿಯಗಳಿಗೆ ಉತ್ಪತ್ತಿಯನ್ನು ಅಂಗೀಕರಿಸಬೇಕು.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ಪ್ರಾಣೋತ್ಪತ್ತ್ಯಧಿಕರಣವು ಮುಗಿಯಿತು.

ಪರಿಪೂರ್ಣಚಂದ್ರಿಕಾ

## ಬ್ರಹ್ಮಸೂತ್ರಭಾಷ್ಯ

**भाष्यम् – ।। प्रतिज्ञानुपरोधाच्च ।।३।।**

**'स इदं सर्वमसृजत' (तै.२.६.) इति ।।३।।**

**।। इति श्रीमदानन्दतीर्थभगवत्पादाचार्यविरचिते**

**ब्रह्मसूत्रभाष्ये प्राणोत्पत्त्यधिकरणम् ।। १ ।।**

ಅನುವಾದ - ಒಂದುವೇಳೆ ಇಂದ್ರಿಯಗಳಿಗೆ ನಿತ್ಯತ್ವವನ್ನು ಹೇಳಿದರೆ 'ಸ ಇದಂ ಸರ್ವಮಸೃಜತ್' ಭಗವಂತನು ಎಲ್ಲವನ್ನು ಸೃಷ್ಟಿ ಮಾಡಿದನು ಎಂಬ ಪ್ರತಿಜ್ಞೆಗೆ ವಿರೋಧ ಬರುತ್ತದೆ.

ಪ್ರತಿಪದಾರ್ಥ -- ಸಃ = ಪರಮಾತ್ಮನು, ಇದಂ ಸರ್ವಂ = ಈ ಸಮಸ್ತ ಜಗತ್ತನ್ನು, ಅಸೃಜತ್ = ಸೃಷ್ಟಿಮಾಡಿದು, ಇತಿ = ಇದು ಪ್ರತಿಜ್ಞೆಯ ಮಾತು

ಇಲ್ಲಿಗೆ ಪ್ರಾಣೋತ್ಪತ್ತ್ಯಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

## ತತ್ವಪ್ರಕಾಶಿಕಾ

**तत्वप्रकाशिका – प्रतिज्ञाहानिरित्युक्तयुक्त्याऽप्येतमर्थं समर्थयत्सूत्रं पठित्वा तदुपात्तश्रुतिमेवोदाहरति – प्रतिज्ञेति।।**

ಪ್ರತಿಜ್ಞೆಗೆ ಹಾನಿಯು ಬರುತ್ತದೆ ಎಂದು ಹಿಂದೆ ಹೇಳಿದ ಯುಕ್ತಿಯಿಂದಲೂ ಕೂಡ ಇಂದ್ರಿಯಗಳಿಗೆ ಉತ್ಪತ್ತಿ ಇದೆ ಎಂದು ಸಮರ್ಥಿಸುವ ಸೂತ್ರವನ್ನು ಪಠಿಸಿ ಸೂತ್ರದಲ್ಲಿ ಉಲ್ಲೇಖಿಸಿದ ಶ್ರುತಿಯನ್ನೇ 'ಪ್ರತಿಜ್ಞಾ' ಇತ್ಯಾದಿಯಾಗಿ ಉದಾಹರಿಸುತ್ತಿದ್ದಾರೆ.

ವಿವರಣೆ - 'ಸ ಇದಂ ಸರ್ವಮಸೃಜತ' 'ಪರಮಾತ್ಮನು ಈ ಸಮಸ್ತ ಜಗತ್ತನ್ನು ಸೃಷ್ಟಿ ಮಾಡಿದನು' ಎಂಬ ಪ್ರತಿಜ್ಞೆಗೆ ಅನುಗುಣವಾಗಿ ಇಂದ್ರಿಯಗಳಿಗೆ ಉತ್ಪತ್ತಿಯನ್ನು ಒಪ್ಪಬೇಕು. ಒಂದುವೇಳೆ ಇಂದ್ರಿಯಗಳಿಗೆ ಉತ್ಪತ್ತಿಯನ್ನು ಒಪ್ಪದಿದ್ದರೆ 'ಸ ಇದಂ ಸರ್ವಮಸೃಜತ' ಎಂಬ ಪ್ರತಿಜ್ಞೆಯು ಭಗ್ನವಾಗುತ್ತದೆ. ಈ ಯುಕ್ತಿಯನ್ನು ಹಿಂದೆ ಹೇಳಿದ್ದರು. ಇದೇ ಯುಕ್ತಿಯನ್ನು 'ಪ್ರತಿಜ್ಞಾನುಪರೋಧಾಚ್ಚ' ಎಂಬ ಸೂತ್ರವು ಸಮರ್ಥನೆ ಮಾಡುತ್ತಿದೆ.

**तत्वप्रकाशिका – सूत्रेणान्वयः । प्राणानामुत्पत्त्यङ्गीकारे 'सर्वमसृजत' इति श्रुत्युक्तप्रतिज्ञानुपरोधादुत्पत्तिमन्तः प्राणा इति । अतः श्रुत्यविरोधेन प्राणानां परमात्मोत्पन्नत्वसिद्धेर्युक्तमीश्वरस्य श्रुतिसमन्वयेन जगत्कारणत्वमिति सिद्धम् ।।**

'ಸ ಇದಂ ಸರ್ವಮಸೃಜತ' ಎಂಬ ವಾಕ್ಯವನ್ನು ಸೂತ್ರದ ಜೊತೆ ಅನ್ವಯ ಮಾಡಿಕೊಳ್ಳಬೇಕು. ಇಂದ್ರಿಯಗಳಿಗೆ ಉತ್ಪತ್ತಿಯನ್ನು ಅಂಗೀಕಾರ ಮಾಡಿದರೆ 'ಸರ್ವಮಸೃಜತ' ಎಂಬಲ್ಲಿ ಹೇಳಲ್ಪಟ್ಟ ಪ್ರತಿಜ್ಞೆಯು ಯುಕ್ತವಾಗುತ್ತದೆ. ಆದ್ದರಿಂದ ಇಂದ್ರಿಯಗಳಿಗೆ ಉತ್ಪತ್ತಿ ಇದೆ ಎಂಬುದು ಸಿದ್ಧವಾಯಿತು.

ಶ್ರುತಿಯ ವಿರೋಧವಿಲ್ಲದ್ದರಿಂದ ಇಂದ್ರಿಯಗಳಿಗೆ ಪರಮಾತ್ಮನಿಂದ ಉತ್ಪತ್ತಿಯು ಸಿದ್ಧವಾಯಿತು. ಆದ್ದರಿಂದ ಈಶ್ವರನಲ್ಲಿ ಶ್ರುತಿಸಮನ್ವಯದಿಂದ ಜಗತ್ಕಾರಣತ್ವವೆಂಬ ಪ್ರಮೇಯವೂ ಕೂಡ ಸಿದ್ಧವಾಯಿತು.

ವಿವರಣೆ - ಈ ಅಧಿಕರಣದಲ್ಲಿ ಒಟ್ಟು ಮೂರು ಸೂತ್ರಗಳಿವೆ. ಮೊದಲನೆಯ ಸೂತ್ರದಲ್ಲಿ ವಿಯದಧಿಕರಣದ ಯುಕ್ತಿಯ ಅತಿದೇಶದಿಂದ ಇಂದ್ರಿಯಗಳು ಪರಮಾತ್ಮನಿಂದ ಹುಟ್ಟುತ್ತವೆಂದು ಸಮರ್ಥಿಸಲಾಯಿತು. ಎರಡನೆಯ ಸೂತ್ರದಲ್ಲಿ ಅನಾದಿತ್ವ ಶ್ರುತಿಗೆ ಗೌಣಾರ್ಥವನ್ನು ಒಪ್ಪುವ ಮೂಲಕ ಶ್ರುತಿಯ ವಿರೋಧವನ್ನು ಪರಿಹರಿಸಲಾಯಿತು. ಮೂರನೆಯ ಸೂತ್ರದಲ್ಲಿ 'ಸ ಇದಂ ಸರ್ವಮಸೃಜತ' ಎಂಬ ಶ್ರುತಿಯ ಬೆಂಬಲದಿಂದ ಉತ್ಪತ್ತಿವಾಚಕ ಶ್ರುತಿಗೆ ಪ್ರಾಬಲ್ಯವನ್ನು ಸಮರ್ಥಿಸಲಾಯಿತು. ಹೀಗೆ ಸೂತ್ರಗಳ ಕ್ರಮವು ಅತ್ಯಂತ ಅನುಗುಣವಾಗಿದೆ.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಪ್ರಾಣೋತ್ಪತ್ತ್ಯಧಿಕರಣ ಮುಗಿಯಿತು

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ द्वितीयाध्यायः ।।

## चतुर्थः पादः

## प्राणोत्पत्त्यधिकरणम्

ಯುಕ್ತಿಸಹಿತ ಶ್ರುತಿವಿರೋಧ ಪರಿಹಾರಕ್ಕಾಗಿ ನಾಕನೆಯ ಪಾದ
ಇಂದ್ರಿಯಗಳಿಗೆ ಉತ್ಪತ್ತಿ ಇದೆ.

**तथा प्राणाः ।। अत्रोक्तं ब्रह्मणः सर्वस्रष्टृत्वं किं प्राणानादित्वश्रुतिविरुद्धं न वेति चिन्ता । तदर्थं किं प्राणानादित्वश्रुतिर्मुख्यार्थोत गौणीति । तदर्थमनादित्वश्रुतिसहकारित्वेन स्मृत्युक्तानुपादानत्वं किं सर्वथा निरुपादनत्वं किं वा सूक्ष्मरूपेणेति ।**

ಜನ್ಮಾಧಿಕರಣದಲ್ಲಿ ಬ್ರಹ್ಮನೇ ಸರ್ವಸೃಷ್ಟ ಎಂದು ನಿರ್ಣಯ ಮಾಡಲಾಯಿತು. ಈ ಸರ್ವಸೃಷ್ಟತ್ವವು ಇಂದ್ರಿಯಗಳಿಗೆ ಅನಾದಿತ್ವವನ್ನು ಪ್ರತಿಪಾದನೆ ಮಾಡುವ ಶ್ರುತಿಗೆ ವಿರುದ್ಧವಾಗಿದೆಯೋ ಇಲ್ಲವೋ? ಎಂಬುದು ಈ ಅಧಿಕರಣದ ಪ್ರಧಾನ ವಿಚಾರ. ಅದಕ್ಕಾಗಿ ಇಂದ್ರಿಯಗಳಿಗೆ ಅನಾದಿತ್ವ ಶ್ರುತಿಯು ಮುಖ್ಯಾರ್ಥವುಳ್ಳದ್ದೋ ಅಥವಾ ಗೌಣಾರ್ಥಕವೋ ? ಎಂಬುದು ಅನಂತರದ ವಿಚಾರ. ಅದಕ್ಕಾಗಿ ಅನಾದಿತ್ವಶ್ರುತಿಯ ಸಹಕಾರಿ ಇರುವ ಸ್ಮೃತಿಯಲ್ಲಿ ಹೇಳಲ್ಪಟ್ಟ ಅನುಪಾದಾನತ್ವವು ಅನುಪಚರಿತವಾಗಿ ಉಪಾದಾನವೇ ಇಲ್ಲವೆನ್ನುತ್ತಿದೆಯೋ ಅಥವಾ ಸೂಕ್ಷ್ಮರೂಪದಿಂದ ಉಪಾದಾನವಿಲ್ಲವೆಂದು ಹೇಳುತ್ತಿದೆಯೋ? ಎಂಬುದರ ಬಗ್ಗೆ ವಿಚಾರ.

**''प्रतिज्ञानुपरोधाच्च'' इति सिद्धान्तसूत्रोक्ताया इदं सर्वमसृजत'' इतिसामान्यश्रुतेर्बाधाय पूर्वपक्षन्यायविवरणे स्पष्टार्थवद्विशेषश्रुतिविरोध इत्युक्तम् ।**

**तत्र सामान्यव्यवधानाभावरूपं स्पष्टार्थत्वं निरवकाशत्वरूपविशेषश्रुतित्वेऽपि हेतुरित्याह – स्पष्टार्थाया निरवकाशत्वेनेति ॥**

'ಪ್ರತಿಜ್ಞಾನುಪರೋಧಾಚ್ಚ' ಎಂಬ ಸಿದ್ಧಾಂತ ಸೂತ್ರದಲ್ಲಿ 'ಇದಂ ಸರ್ವಮಸೃಜತ' ಎಂಬ ಶ್ರುತಿಯನ್ನು ಉಲ್ಲೇಖ ಮಾಡಲಾಗಿದೆ. ಇದು ಸಕಲ ಪದಾರ್ಥಗಳು ಈಶ್ವರನಿಂದ ಹುಟ್ಟುತ್ತವೆ ಎಂದು ಸಾಮಾನ್ಯವಾಗಿ ಹೇಳುತ್ತಿದೆ. ಇದನ್ನು ಬಾಧಿಸಿ ಪೂರ್ವಪಕ್ಷವನ್ನು ಸ್ಥಾಪನೆ ಮಾಡುವುದಕ್ಕಾಗಿ ಶ್ರೀಮದಾಚಾರ್ಯರು ನ್ಯಾಯವಿವರಣದಲ್ಲಿ 'ಸ್ಪಷ್ಟಾರ್ಥವಿಶೇಷಶ್ರುತಿವಿರೋಧಃ' ಸ್ಪಷ್ಟಾರ್ಥವುಳ್ಳ ಶ್ರುತಿಯ ವಿರೋಧ ಬರುತ್ತದೆ ಎಂದು ಹೇಳಿದ್ದಾರೆ. ಇಲ್ಲಿ ಸ್ಪಷ್ಟಾರ್ಥತ್ವ ಎಂದರೆ 'ಸಾಮಾನ್ಯವ್ಯವಧಾನಾಭಾವ' ಎಂದರ್ಥ. ಇದರ ಅಭಿಪ್ರಾಯ ಹೀಗಿದೆ – 'ಸ ಇದಂ ಸರ್ವಮಸೃಜತ' ಎಂಬ ಶ್ರುತಿಯು ಇಂದ್ರಿಯಗಳಿಗೂ ಕೂಡ ಉತ್ಪತ್ತಿ ಇದೆ ಎಂದು ಹೇಳುತ್ತಿದೆ. ಆದರೆ ನೇರವಾಗಿ ಹೇಳದೇ ಸಾಮಾನ್ಯ ವ್ಯವಧಾನದ ಮೂಲಕ ಹೇಳುತ್ತಿದೆ. ಇಂದ್ರಿಯಗಳನ್ನು ನೇರವಾಗಿ ಸೃಷ್ಟಿ ಮಾಡಿದನು ಎಂದು ಹೇಳುವುದಿಲ್ಲ, ಎಲ್ಲವನ್ನೂ ಸೃಷ್ಟಿ ಮಾಡಿದ ಎಂದು ಹೇಳಿದಾಗ ಎಲ್ಲದರಲ್ಲಿ ಇಂದ್ರಿಯಗಳನ್ನೂ ಸೃಷ್ಟಿ ಮಾಡಿದ ಎಂದು ಅರ್ಥಾತ್ ಸಿದ್ಧವಾಗುತ್ತದೆ. ಆದ್ದರಿಂದ ಸಾಮಾನ್ಯವ್ಯವಧಾನದ ಮೂಲಕ ಇಂದ್ರಿಯಗಳಿಗೆ ಉತ್ಪತ್ತಿಯನ್ನು ಈ ಶ್ರುತಿಯು ಹೇಳುತ್ತಿದೆ. ಆದರೆ 'ಪ್ರಾಣಃ ಏವ ಅನಾದಯಃ' ಎಂಬ ಶ್ರುತಿಯಲ್ಲಿ ಸಾಮಾನ್ಯವ್ಯವಧಾನವು ಇರುವುದಿಲ್ಲ. ಸ್ಪಷ್ಟವಾಗಿ ಇಂದ್ರಿಯಗಳು ಅನಾದಿಯಾಗಿವೆ ಎಂದು ಹೇಳಲಾಗಿದೆ. ಆದ್ದರಿಂದ ಸಾಮಾನ್ಯವ್ಯವಧಾನಾಭಾವವನ್ನೇ ಇಲ್ಲಿ ಸ್ಪಷ್ಟಾರ್ಥತ್ವವೆಂದು ತಿಳಿಯಬೇಕು.

ಈ ಸ್ಪಷ್ಟಾರ್ಥತ್ವವು ಪ್ರಾಬಲ್ಯಕ್ಕೂ ಕಾರಣವಾಗಿದೆ, ನಿರವಕಾಶತ್ವರೂಪವಿಶೇಷಶ್ರುತಿತ್ವಕ್ಕೂ ಕಾರಣವಾಗಿದೆ ಎಂಬುದನ್ನು 'ಸ್ಪಷ್ಟಾರ್ಥಾಯಾಃ ನಿರವಕಾಶತ್ವೇನ' ಇತ್ಯಾದಿ ಟೀಕೆಯಿಂದ ಹೇಳಿದ್ದಾರೆ.

**''एतस्माज्जायते प्राणो मनः सर्वेन्द्रियाणि च'' इति सिद्धान्तीयविशेषश्रुतिबाधार्थं भाष्योक्तां पूर्वपक्षयुक्तिमाह – निरुपादानत्वादिति ॥**

ಒಂದುವೇಳೆ ಸಿದ್ಧಾಂತಿಯು 'ಸ ಇದಂ ಸರ್ವಮಸೃಜತ' ಎಂಬ ಸಾಮಾನ್ಯಶ್ರುತಿಯನ್ನು ಉಲ್ಲೇಖ ಮಾಡದೇ 'ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇಂದ್ರಿಯಾಣಿ ಚ' ಎಂಬ ವಿಶೇಷ ಶ್ರುತಿಯನ್ನು ಉಲ್ಲೇಖ ಮಾಡಿದರೆ ಆಗ ಪೂರ್ವಪಕ್ಷಿಯು ನಿರುಪಾದಾನತ್ವ ಎಂಬ ಯುಕ್ತಿಯನ್ನು ಹೇಳಬೇಕು. ಈ ಯುಕ್ತಿಯು ಭಾಷ್ಯದಲ್ಲಿ ಹೇಳಲ್ಪಟ್ಟಿದೆ. ಅದನ್ನು ಟೀಕೆಯಲ್ಲಿ 'ನಿರುಪಾದಾನತ್ವಾತ್' ಎಂಬುದರಿಂದ ಸ್ಪಷ್ಟಪಡಿಸಿದ್ದಾರೆ.

**व्यतिरेकेणेति ॥ यद्यप्यन्वयदृष्टान्तो ब्रह्मास्ति । तथापि व्यतिरेकव्याप्तिं विना व्यभिचारशङ्काया अनिरासाद्भाष्योक्तस्मृत्यनुसारेण व्यतिरेक एवोक्तः ॥**

'ಪ್ರಾಣಾಃ ನ ಉತ್ಪತ್ತಿಮಂತಃ ವ್ಯತಿರೇಕೇಣ ಘಟವತ್' ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. ಇಲ್ಲಿ ಅನ್ವಯವ್ಯಾಪ್ತಿಗೆ ದೃಷ್ಟಾಂತ ಬ್ರಹ್ಮನನ್ನು ಹೇಳಬಹುದು. ಆದರೂ ಕೂಡ ಟೀಕೆಯಲ್ಲಿ ವ್ಯತಿರೇಕವ್ಯಾಪ್ತಿಯನ್ನು ಏಕೆ ಹೇಳಿದ್ದಾರೆ? ಎಂದರೆ 'ಯತ್ರ ಯತ್ರ ಸಾಧ್ಯಾಭಾವಃ ತತ್ರ ತತ್ರ ಹೇತ್ವಭಾವಃ' ಎಂದು ವ್ಯತಿರೇಕವ್ಯಾಪ್ತಿಯನ್ನು ಹೇಳಿದಾಗ ವ್ಯತಿರೇಕವ್ಯಾಪ್ತಿಯು ಇರುವುದರಿಂದ ವ್ಯಭಿಚಾರ ಶಂಕೆಯೇ ಬರುವುದಿಲ್ಲ. ಅದಕ್ಕೋಸ್ಕರ ಟೀಕೆಯಲ್ಲಿ ವ್ಯತಿರೇಕ ವ್ಯಾಪ್ತಿಯನ್ನು ಹೇಳಿದ್ದಾರೆ. ಮತ್ತು ಸ್ಮೃತಿಯಲ್ಲಿ 'ನೋಪಾದಾನಂ ಇಂದ್ರಿಯಾಣಾಮ್' ಎಂಬುದಾಗಿ ವ್ಯತಿರೇಕ ವ್ಯಾಪ್ತಿಯನ್ನೇ ಹೇಳಲಾಗಿದೆ. ಈ ದೃಷ್ಟಿಯಿಂದಲೂ 'ವ್ಯತಿರೇಕೇಣ ಘಟವತ್' ಎಂದು ಟೀಕೆಯಲ್ಲಿ ಹೇಳಿದ್ದು ಯುಕ್ತವಾಗಿದೆ.

**विप्रतिपत्त्यभावेनेति ।। तेजोऽत इत्यादौ तेजआदेर्ब्रह्मकार्यत्व इव प्रकृते तत्र विप्रतिपत्त्यभावेनेत्यर्थः ।।**

ಇಂದ್ರಿಯಗಳು ಹುಟ್ಟುತ್ತವೆ ಎಂದು ಹೇಳಿದರೆ ಸಾಕು, ಪರಮಾತ್ಮನಿಂದ ಹುಟ್ಟುತ್ತವೆ ಎಂದು ಏಕೆ ಹೇಳಬೇಕು? ಅಂದರೆ ಕಾರಣದಲ್ಲಿ ವಿಪ್ರತಿಪತ್ತಿ ಇಲ್ಲ. ಪರಮಾತ್ಮನಿಂದಲೇ ಹುಟ್ಟುತ್ತವೆ ಎಂಬುದು ತೇಜೋಧಿಕರಣದ ನ್ಯಾಯದಿಂದಲೇ ಸಿದ್ಧವಾಗಿದೆ. 'ತೇಜೋಽತಃ' ಇತ್ಯಾದಿ ಸೂತ್ರಗಳಲ್ಲಿ ತೇಜ ಮೊದಲಾದವುಗಳು ಬ್ರಹ್ಮನಿಂದಲೇ ಹುಟ್ಟುತ್ತವೆ ಎಂದು ಸಿದ್ಧವಾಗಿರುವುದರಿಂದ ಪ್ರಕೃತ ಇಂದ್ರಿಯಗಳೂ ಕೂಡ ಬ್ರಹ್ಮನಿಂದಲೇ ಹುಟ್ಟುತ್ತವೆ ಎಂಬುದರಲ್ಲಿ ವಿಪ್ರತಿಪತ್ತಿ ಇಲ್ಲ ಎಂಬುದನ್ನು ಟೀಕೆಯಲ್ಲಿ 'ವಿಪ್ರತಿಪತ್ತ್ಯಭಾವೇನ' ಎಂಬುದರಿಂದ ತಿಳಿಸಿದ್ದಾರೆ.

**प्रतिसृष्टिकालमिति ।। यस्मिन् प्रलयकालेऽनुपचयस्तदा न समर्थानि यस्मिंस्तु सृष्टिकाले समर्थानि तदाऽस्त्वेवोपचय इत्यर्थः ।**

'ಪ್ರತಿಸೃಷ್ಟಿಕಾಲಂ' ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. 'ನಿತ್ಯಾನ್ಯೇತಾನಿ ಸೌಕ್ಷ್ಮ್ಯೇಣ' ಎಂಬ ಶ್ಲೋಕದಲ್ಲಿ 'ಸೃಷ್ಟಿಕಾಲೇ ವಿಧೀಯತೇ' ಎಂದು ಹೇಳಲಾಗಿದೆ. ಅಂದರೆ ಪ್ರತಿಯೊಂದು ಸೃಷ್ಟಿಕಾಲದಲ್ಲಿಯೂ ತನ್ನ ಅಂಶಗಳಿಂದ ವಿಯೋಗ ಪಡೆದಿರುತ್ತದೆ. ಸೃಷ್ಟಿಕಾಲದಲ್ಲಿ ವಿಯುಕ್ತವಾದ ಅಂಶಗಳೆಲ್ಲವೂ ಪುನಃ ಸೇರುತ್ತವೆ. ಯಾವಾಗ ಪ್ರಳಯಕಾಲದಲ್ಲಿ ಅನುಪಚಯವನ್ನು ಹೊಂದಿರುತ್ತದೋ ಆಗ ಇಂದ್ರಿಯಗಳು ಸಮರ್ಥವಾಗುವುದಿಲ್ಲ. ಯಾವಾಗ ಸೃಷ್ಟಿಕಾಲವು ಬರುತ್ತದೋ ಆಗ ಸಮರ್ಥವಾಗುತ್ತವೆ. ಹೀಗೆ ಉಪಚಯವನ್ನು ಹೇಳಬೇಕು ಎಂಬುದು ಇದರ ಅಭಿಪ್ರಾಯ.

**इन्द्रियाणां भूतैरुपचये तैजसाहङ्कारकार्यत्वविरोध इत्यत आह – अहङ्कारेति ।। ननु तथापि तामासाहङ्कारकार्याणां भूतानां कथं भाष्योक्त श्रुतौ प्राणकारणत्वोक्तिः इत्यत आह – अहङ्करोत्पन्नेति ।।**

ಇಂದ್ರಿಯಗಳು ಭೂತಗಳಿಂದ ಉಪಚಯವನ್ನು ಹೊಂದುತ್ತವೆ ಎಂದು ಹೇಳಿದಿರಿ. ಹಾಗಾದರೆ ತೈಜಸಾಹಂಕಾರದ ಕಾರ್ಯವೆಂದು ಹೇಳಿದ್ದರ ವಿರೋಧ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ಅಹಂಕಾರೋತ್ಪನ್ನ' ಇತ್ಯಾದಿ ಟೀಕೆಯಿಂದ ಉತ್ತರಿಸುತ್ತಿದ್ದಾರೆ. ಅಹಂಕಾರಗಳಿಂದಲೂ ಕೂಡ ಇಂದ್ರಿಯಗಳಿಗೆ ಉಪಚಯವಿದೆ. ಭೂತಪದಾರ್ಥಗಳಿಂದಲೂ ಕೂಡ ಉಪಚಯವಿದೆ. ಒಂದು ಪದಾರ್ಥಕ್ಕೆ ಎರಡು ಬಾರಿ ಉಪಚಯವಾಗಬಾರದು ಎಂದೇನೂ ಇರುವುದಿಲ್ಲ. ಆದ್ದರಿಂದ ವಿರೋಧಕ್ಕೆ ಅವಕಾಶವಿಲ್ಲ.

**उक्तयुक्तयापीति ।। ''युक्तियुक्ताया अप्यविशेषश्रुतेः सकाशादुभय (विशेषश्रुते स्सकाशादुभय)'' श्रुतेः प्राबल्यात्'' इति[1] न्यायविवरणोक्तरीत्या ''स प्राणमसृजत स प्राणान्'' इत्यादिसिद्धान्तीयविशेषश्रुतेः पूर्वपक्षीयविशेषश्रुतितःप्राबल्यार्थं पूर्वोक्ता सामान्यश्रुतिः स्मारितेति भावः ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् प्राणोत्पत्त्यधिकरणं सम्पूर्णम् ।।१।।**

ಟೀಕೆಯ ಕೊನೆಯ ಸೂತ್ರದ ಅವತಾರಿಕೆಯಲ್ಲಿ 'ಉಕ್ತಯುಕ್ತ್ಯಾಪಿ' ಎಂದು ಹೇಳಿದ್ದಾರೆ. ಇದರ ಅಭಿಪ್ರಾಯವನ್ನು ಹೀಗೆ ತಿಳಿಯಬೇಕು – 'ಏತಸ್ಮಾಜ್ಜಾಯತೇ ಪ್ರಾಣಃ' ಎಂಬುದಾಗಿ ಸ್ಪಷ್ಟವಾದ ವಿಶೇಷಶ್ರುತಿಯನ್ನು ಹೇಳಿದ್ದೇವೆ. ಇದನ್ನು ಹೇಳಿದ ಮೇಲೆ 'ಸ ಇದಂ ಸರ್ವಮಸೃಜತ' ಎಂಬ ಸಾಮಾನ್ಯಶ್ರುತಿಯನ್ನು ಏಕೆ ಉಲ್ಲೇಖ ಮಾಡಬೇಕು? ಎಂದು ಶಂಕೆಯು ಬರುತ್ತದೆ. ಮತ್ತು ಹಿಂದಿನ ಪಾದದಲ್ಲಿ ಹೇಳಿದ್ದನ್ನೇ ಇಲ್ಲಿಯೂ ಹೇಳಿದರೆ ಪುನರುಕ್ತಿ ದೋಷವೂ ಕೂಡ ಬರುತ್ತದೆ. ಈ ಎರಡು ಆಕ್ಷೇಪಗಳಿಗೆ ಉತ್ತರವನ್ನು ಹೀಗೆ ತಿಳಿಯಬೇಕು – ಪ್ರಯೋಜನವಿದ್ದಾಗ ಪುನರುಕ್ತಿಯು ದೋಷವಾಗುವುದಿಲ್ಲ. ಹಿಂದೆ ಹೇಳಿದ್ದನ್ನು ಸ್ಮರಣೆಗೆ ತಂದುಕೊಡುವುದಕ್ಕಾಗಿ ಇಲ್ಲಿ ಹೇಳಿದ್ದು ತಪ್ಪಲ್ಲ. ಮತ್ತು ಸಾಮಾನ್ಯಶ್ರುತಿಯನ್ನು ಉಲ್ಲೇಖ ಮಾಡಲು ಕಾರಣವಿದೆ. ಪೂರ್ವಪಕ್ಷಿಯೂ ವಿಶೇಷ ಶ್ರುತಿಯನ್ನು ಹೇಳಿದ್ದಾನೆ, ಸಿದ್ಧಾಂತಿಯೂ ಕೂಡ ವಿಶೇಷ ಶ್ರುತಿಯನ್ನು ಹೇಳಿದ್ದಾನೆ. ಆಗ ಸಿದ್ಧಾಂತಿಗಳು ಹೇಳಿದ ವಿಶೇಷ ಶ್ರುತಿಗೆ ಪ್ರಾಬಲ್ಯವನ್ನು ಉಪಪಾದನೆ ಮಾಡುವುದಕ್ಕಾಗಿ ಈ ಸಾಮಾನ್ಯಶ್ರುತಿಯನ್ನು ಹೇಳಲೇಬೇಕು. ಏಕೆಂದರೆ ಪೂರ್ವಪಕ್ಷಿಯು ವಿಶೇಷಶ್ರುತಿಯನ್ನು ಉಲ್ಲೇಖ ಮಾಡಲು ಯುಕ್ತಿಯ ಸಹಕಾರವನ್ನು ಹೇಳಿದ್ದಾನೆ. ನಾವೂ ಕೂಡ ವಿಶೇಷಶ್ರುತಿಗೆ ಪ್ರಾಬಲ್ಯವನ್ನು ಸೂಚನೆ ಮಾಡುವುದಕ್ಕಾಗಿ ಶ್ರುತಿಪ್ರಮಾಣವನ್ನು ನೀಡುತ್ತಿದ್ದೇವೆ.

(१) (इदं वाक्यं न्यायविवरणे मुद्रितपुस्तके नास्ति)

ನೀವು ಯುಕ್ತಿಯುಕ್ತವಾದ ವಿಶೇಷಶ್ರುತಿಯನ್ನು ನೀಡಿದ್ದೀರಿ. ನಾವು ಶ್ರುತಿಯುಕ್ತವಾದ ವಿಶೇಷ-ಶ್ರುತಿಯನ್ನು ನೀಡಿದ್ದೇವೆ. ಯುಕ್ತಿಯುಕ್ತವಾದ ವಿಶೇಷಶ್ರುತಿಗಿಂತ ಸಾಮಾನ್ಯಶ್ರುತಿಯುಕ್ತವಾದ ವಿಶೇಷಶ್ರುತಿಯು ಪ್ರಬಲವಾಗಿದೆ. ಹೀಗೆ ನ್ಯಾಯವಿವರಣದಲ್ಲಿ ಹೇಳಲಾಗಿದೆ. ಹೀಗೆ ನ್ಯಾಯವಿವರಣದಲ್ಲಿ ಹೇಳಿದಂತೆ 'ಸ ಪ್ರಾಣಮಸೃಜತ' 'ಸ ಪ್ರಾಣಮ್' ಇತ್ಯಾದಿಯಾಗಿ ಸಿದ್ಧಾಂತಿಗಳು ನೀಡಿದ ವಿಶೇಷಶ್ರುತಿಗೆ ಪೂರ್ವಪಕ್ಷಿ ಹೇಳಿದ ವಿಶೇಷಶ್ರುತಿಗಿಂತ ಪ್ರಾಬಲ್ಯವು ಸಂಪಾದಿತವಾಗುತ್ತದೆ. ಹೀಗೆ ಹಿಂದೆ ಹೇಳಿದ ಸಾಮಾನ್ಯಶ್ರುತಿಯನ್ನು ಸ್ಮರಣೆಗೆ ತಂದುಕೊಟ್ಟಿದ್ದಾರೆ ಎಂದು ತಿಳಿಯಬೇಕು.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಪ್ರಾಣೋತ್ಪತ್ತ್ಯಧಿಕರಣವು ಸಂಪೂರ್ಣವಾಯಿತು

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

एतत्पादाभिधेयं पूर्वपादानन्तर्ये बीजादिकं च प्रागेव विवृतम् ।। **तथा प्राणाः** ।। ''जगत्कारणे ब्रह्मणि'' इत्यादिफलोक्तिपरटीकातात्पर्योक्तिपूर्वं विषयसंशयटीकां व्यनक्ति ।। **अत्रोक्तमिति** ।।

ಈ ಪಾದದ ಪ್ರಮೇಯವನ್ನು ಹಾಗೂ ಹಿಂದಿನ ಪಾದದ ಆನಂತರ್ಯಕ್ಕೆ ಕಾರಣವನ್ನು ಈ ಅಧ್ಯಾಯದ ಪ್ರಾರಂಭದಲ್ಲಿಯೇ ವಿವರಿಸಿದ್ದಾಗಿದೆ. ಹಾಗಾಗಿ ಪುನಃ ಇಲ್ಲಿ ಹೇಳುವ ಅವಶ್ಯಕತೆ ಇಲ್ಲ. 'ಜಗತ್ಕಾರಣೇ ಬ್ರಹ್ಮಣಿ' ಎಂಬುದಾಗಿ ಫಲವನ್ನು ಹೇಳುವ ಟೀಕಾವಾಕ್ಯದ ತಾತ್ಪರ್ಯವನ್ನು ಹೇಳುವ ಮೂಲಕ ವಿಷಯ ಹಾಗೂ ಸಂಶಯ ಪ್ರತಿಪಾದಕವಾದ ಟೀಕಾವಾಕ್ಯವನ್ನು 'ಅತ್ರೋಕ್ತಂ' ಎಂಬುದರಿಂದ ಸ್ಪಷ್ಟಪಡಿಸುತ್ತಿದ್ದಾರೆ.

**प्रकाशः – अत्रेति** ।। चिन्तेत्यन्वयः । उक्तमित्यस्य जन्मादिसूत्रोक्तमित्यर्थः। एवमग्रेऽपि । आद्यसूत्रसूचितचिन्तामुक्त्वा द्वितीयसूत्रसूचितचिन्तामाह – **किं प्राणेति** ।।

'ಅತ್ರ' ಎಂಬ ಪದಕ್ಕೆ 'ಉಕ್ತಂ' ಎಂಬಲ್ಲಿ ಅನ್ವಯವನ್ನು ಮಾಡಬಾರದು. 'ಚಿಂತಾ' ಎಂಬ ಪದದ ಜೊತೆ ಅನ್ವಯವನ್ನು ತಿಳಿಯಬೇಕು. 'ಉಕ್ತಂ' ಎಂಬುದಕ್ಕೆ 'ಜನ್ಮಾದಿಸೂತ್ರೋಕ್ತಂ' ಎಂದರ್ಥ. ಹೀಗೆ ಮುಂದೆಯೂ

ಕೂಡ ತಿಳಿಯಬೇಕು. 'ತಥಾ ಪ್ರಾಣಾಃ' ಎಂಬ ಮೊದಲನೆಯ ಸೂತ್ರದಿಂದ ಸೂಚಿತವಾದ ಚಿಂತೆಯನ್ನು ಹೇಳಿ ದ್ವಿತೀಯ ಸೂತ್ರದಿಂದ ಸೂಚಿತವಾದ ಚಿಂತೆಯನ್ನು 'ಕಿಂ ಪ್ರಾಣ' ಎಂಬುದರಿಂದ ಹೇಳುತ್ತಿದ್ದಾರೆ.

**प्रकाशः – टीकाक्षरार्थमाह – प्रतिज्ञेत्यादिना ।। विशेषश्रुतिबाधार्थमिति ।।** एतेन टीकायां ''उत्पत्तिश्रुतिरस्ति'' इत्यस्य सामान्यश्रुतिश्चास्तीत्यर्थ उक्तो भवति ।। **भाष्योक्तस्मृत्यनुसारेणेति** ।। ''उपादानकृता सृष्टिस्सर्वलोकेषु दृश्यत'' इति स्मृतीत्यर्थः ।।

ಟೀಕೆಯಲ್ಲಿರುವ ಕೆಲವು ಕಠಿಣಪದಗಳ ಅರ್ಥವನ್ನು 'ಪ್ರತಿಜ್ಞಾ' ಇತ್ಯಾದಿ ಪದಗಳಿಂದ ಹೇಳುತ್ತಿದ್ದಾರೆ. 'ವಿಶೇಷ ಶ್ರುತಿಬಾಧಾರ್ಥಂ' ಎಂದು ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ – ಹೀಗೆ ಹೇಳಿದ್ದರಿಂದ ಟೀಕೆಯಲ್ಲಿ 'ಉತ್ಪತ್ತಿಶ್ರುತಿರಸ್ತಿ' ಎಂಬುದಕ್ಕೆ ಸಾಮಾನ್ಯಶ್ರುತಿಯೂ ಇದೆ, ವಿಶೇಷಶ್ರುತಿಯೂ ಇದೆ ಎಂದು ಎರಡರ್ಥವನ್ನು ಹೇಳಿದಂತಾಯಿತು. 'ಭಾಷ್ಯೋಕ್ತಸ್ಮೃತ್ಯನುಸಾರೇಣ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. 'ಉಪಾದಾನಕೃತಾ ಸೃಷ್ಟಿಸ್ಸರ್ವಲೋಕೇಷು ದೃಶ್ಯತೇ' ಎಂಬ ಸ್ಮೃತಿಗೆ ಅನುಸಾರಿಯಾಗಿ ಎಂದು ಇದರ ಅರ್ಥ.

**प्रकाशः – तैजसाहंकारेति** ।। ''तैजसात्तु विकुर्वाणादिन्द्रियाणि दशाभवन्'' इति द्वितीयस्कन्धस्य पञ्चमाध्याये ''अतिजाज्वल्यमानत्वात्तैजसानीन्द्रियाण्यपि'' इत्यादितत्तात्पर्योक्तवाक्येषु च ''तैजसानीन्द्रियाण्येव क्रियाज्ञानविभागतः'' इत्यादितृतीयस्कन्धकापिलेयवाक्यादौ च तैजसाहंकारकार्यत्वश्रवणादिति भावः ।।

'ತೈಜಸಾತ್ತು ವಿಕುರ್ವಾಣಾದಿಂದ್ರಿಯಾಣಿ ದಶಾಭವನ್' ಎಂದು ದ್ವಿತೀಯಸ್ಕಂದದ ಪಂಚಮಾಧ್ಯಾಯದಲ್ಲಿ ಪ್ರಸಕ್ತವಾಗಿದೆ. ಇದಕ್ಕೆ ಭಾಗವತತಾತ್ಪರ್ಯದಲ್ಲಿ 'ಅತಿಜಾಜ್ವಲ್ಯಮಾನತ್ವಾತ್ ತೈಜಸಾನೀಂದ್ರಿಯಾಣ್ಯಪಿ' ಎಂಬುದಾಗಿ ಹೇಳಿದ್ದಾರೆ. ಮತ್ತು ತೃತೀಯಸ್ಕಂದದ ಕಪಿಲೋಪಾಖ್ಯಾನದಲ್ಲೂ ಕೂಡ 'ತೈಜಸಾನೀಂದ್ರಿಯಾಣ್ಯೇವ ಕ್ರಿಯಾಜ್ಞಾನವಿಭಾಗತಃ' ಎಂದು ಹೇಳಲಾಗಿದೆ. ಆದ್ದರಿಂದ ಈ ಎಲ್ಲ ವಾಕ್ಯಗಳನ್ನು ಅವಲೋಕಿಸಿದಾಗ ಇಂದ್ರಿಯಗಳೆಲ್ಲವೂ ತೈಜಸಾಹಂಕಾರದ ಕಾರ್ಯಗಳಾಗಿವೆ ಎಂದು ಸ್ಪಷ್ಟವಾಗುತ್ತದೆ.

**प्रकाशः – तामसेति** ।। तामसादपि भूतादेर्विकुर्वाणादभून्नभ'' इत्यादि-द्वितीयस्कन्धवाक्यात् ''तामसात्तु विकुर्वाणाद्भगवद्वीर्यचोदितात् । शब्दमात्रमभूत्तस्मान्नभश्श्रोत्रं तु शब्दगम्'' इत्यादितृतीयस्कन्धोक्तेरिति भावः । प्रतिज्ञानुपरोधादिति तृतीयसूत्रसार्थक्यमाह – **युक्तियुक्ताया अपीत्यादिना** ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते**
**चन्द्रिकाप्रकाशे प्राणोत्पत्त्यधिकरणं सम्पूर्णम् ।।१।।**
ಪ್ರಾಣೋತ್ಪತ್ತ್ಯಧಿಕರಣ (೨-೩-೧)

'ತಾಮಸಾದಪಿ ಭೂತಾದೇರ್ವಿಕುರ್ವಾಣಾದಭೂನ್ನಭಃ' ಇತ್ಯಾದಿಯಾಗಿ ದ್ವಿತೀಯಸ್ಕಂದದ ವಚನದಿಂದ 'ತಾಮಾಸಾತ್ತು ವಿಕುರ್ವಾಣಾತ್ ಭಗವದ್ವೀರ್ಯಚೋದಿತಾತ್ ಶಬ್ದಮಾತ್ರಮಭೂತ್ ತಸ್ಮಾತ್ ನಭಃಶ್ರೋತ್ರಂತು ಶಬ್ದಗಮ್' ಎಂಬ ತೃತೀಯಸ್ಕಂದದ ವಚನದಿಂದ ಇಂದ್ರಿಯಗಳು ತಾಮಸಾಹಂಕಾರದಿಂದ ಸೃಷ್ಟಿಯಾಗಿವೆ ಎಂದು ತಿಳಿಯಬೇಕು. 'ಪ್ರತಿಜ್ಞಾನುಪರೋಧಾತ್' ಎಂಬ ತೃತೀಯಸೂತ್ರದ ಸಾರ್ಥಕ್ಯವನ್ನು 'ಯುಕ್ತಿಯುಕ್ತಾಯಾಃ ಅಪಿ' ಎಂಬುದರಿಂದ ಸಮರ್ಥನೆ ಮಾಡುತ್ತಿದ್ದಾರೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಪ್ರಾಣೋತ್ಪತ್ತ್ಯಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

# ತತ್ಪ್ರಾಗಧಿಕರಣ

(೨-೪-೨)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

॥ ಶ್ರೀಗುರುಭ್ಯೋ ನಮಃ ॥

# ತತ್‌ಪ್ರಾಗಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – तत्प्राक् श्रुतेश्च ॥**

ಇಂದ್ರಿಯಗಳು ಹುಟ್ಟುವ ಮೊದಲು ಮನಸ್ಸು ಪರಮಾತ್ಮನಿಂದ ಹುಟ್ಟಿದೆ ಎಂಬುದಾಗಿ ಮನಸ್ಸಿಗೂ ಕೂಡ ಉತ್ಪತ್ತಿಯನ್ನು ಮುಂಡಕೋಪನಿಷತ್ತು ಹೇಳುತ್ತಿದೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** तदनुत्पत्तीति स्मृतिसमुच्चये चशब्दः । तस्य मनसः । तेभ्योऽन्येन्द्रियेभ्यः **प्राक्** पूर्वम् उत्पन्नत्वेन । **श्रुतेः** 'मनः सर्वेन्द्रियाणि च' इति श्रवणात् । मन उत्पत्तिमदेव न त्वनुत्पत्तिमदित्यर्थः ॥१॥

'ತದನುತ್ಪತ್ತಿ' ಎಂಬ ಸ್ಮೃತಿಯನ್ನು ಸಮುಚ್ಚಯ ಮಾಡಲು 'ಚ' ಶಬ್ದವಿರುತ್ತದೆ. ತತ್ = ಮನಸ್ಸು, ಪ್ರಾಕ್ = ಉಳಿದ ಇಂದ್ರಿಯಗಳು ಹುಟ್ಟುವ ಮೊದಲೇ ಹುಟ್ಟಿರುತ್ತದೆ. ಹೀಗೆ ಶ್ರುತೇಃ = 'ಜಾಯತೇ ಪ್ರಾಣೋ ಮನಃ ಸರ್ವೇಂದ್ರಿಯಾಣಿ ಚ' ಎಂಬ ಮುಂಡಕೋಪನಿಷತ್ತು ಹೇಳುತ್ತಿದೆ. ಆದ್ದರಿಂದ ಇಂದ್ರಿಯಗಳು ಹೇಗೆ

ವಿಷ್ಣುವಿನಿಂದ ಹುಟ್ಟುತ್ತವೋ, ಅದರಂತೆ ಮನಸ್ಸೂ ಕೂಡ ವಿಷ್ಣುವಿನಿಂದ ಹುಟ್ಟುತ್ತದೆ. ಆದ್ದರಿಂದ ಮನಸ್ಸನ್ನು ಅನಾದಿಯೆಂದು ಹೇಳಬಾರದು.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ತತ್‌ಪ್ರಾಗಧಿಕರಣವು ಮುಗಿಯಿತು.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – 'द्विधा हैवेन्द्रियाणि नित्यान्यनित्यानि च । तत्र नित्यं मनोऽनादित्वात्। न ह्यमनाः पुंमास्तिष्ठत्यनित्यान्यन्यानि' इति गौपवनश्रुतौ मनसोऽनुत्पत्तिः सयुक्तिका श्रूयते ।**

ಅನುವಾದ - ಇಂದ್ರಿಯಗಳು ಎರಡುವಿಧವಾಗಿದೆ. ನಿತ್ಯ ಮತ್ತು ಅನಿತ್ಯ ಎಂದು. ಅವುಗಳಲ್ಲಿ ಮನಸ್ಸು ನಿತ್ಯವೆನಿಸುತ್ತದೆ. ಮನಸ್ಸಿಲ್ಲದೆ ಪುರುಷನು ಇರಲಾರ. ಬೇರೆ ಇಂದ್ರಿಯಗಳೆಲ್ಲವೂ ಅನಿತ್ಯವಾಗಿವೆ. ಹೀಗೆ ಗೌಪವನಶ್ರುತಿಯಲ್ಲಿ ಮನಸ್ಸೆಂಬ ಇಂದ್ರಿಯವು ಸತ್ಯವೆಂದು ಯುಕ್ತಿಬದ್ಧವಾಗಿ ಶ್ರುತಿಯು ಹೇಳುತ್ತಿದೆ.

ಪ್ರತಿಪದಾರ್ಥ -- ಇಂದ್ರಿಯಾಣಿ = ಇಂದ್ರಿಯಗಳು, ದ್ವಿಧಾ ಹಿ = ಎರಡು ಬಗೆಯವುಗಳಾಗಿವೆ. ನಿತ್ಯಾನಿ = ನಿತ್ಯೇಂದ್ರಿಯಗಳು, ಅನಿತ್ಯಾನಿ ಚ = ಅನಿತ್ಯೇಂದ್ರಿಯಗಳೆಂದು. ತತ್ರ = ಇವೆರಡರಲ್ಲಿ, ಮನಃ = ಮನಸ್ಸು, ಅನಾದಿತ್ವಾತ್ = ಅನಾದಿಯಾದ್ದರಿಂದ, ನಿತ್ಯಂ = ನಿತ್ಯವಾಗಿವೆ. ಪುಮಾನ್ = ಪುರುಷನು, ಅಮನಾಃ = ಮನಸ್ಸಿಲ್ಲದೆ, ನಹಿ ತಿಷ್ಠತಿ = ಇರಲಾರ. ಅನ್ಯಾನಿ = ಬೇರೆ ಇಂದ್ರಿಯಗಳು, ಅನಿತ್ಯಾನಿ = ಅನಿತ್ಯಗಳಾಗಿವೆ. ಇತಿ = ಹೀಗೆ, ಗೌಪವನಶ್ರುತೌ = ಗೌಪವನ ಶ್ರುತಿಯಲ್ಲಿ, ಮನಸಃ = ಮನಸ್ಸಿಗೆ, ಸಯುಕ್ತಿಕಾ = ಯುಕ್ತಬದ್ಧವಾಗಿ, ಅನುತ್ಪತ್ತಿಃ = ಉತ್ಪತ್ತಿ ಇಲ್ಲವೆಂದು, ಶ್ರೂಯತೇ = ಶ್ರುತಿಯು ಹೇಳುತ್ತಿದೆ.

**भाष्यम् – अत आह –**

**।। तत्प्राक् श्रुतेश्च ।।१।।**

**'मनः सर्वेन्द्रियाणि च' (मु.२.१.३.) इति पूर्वोक्तत्वान्नानुत्पत्तिर्मनसो युज्यते ।**

ತತ್‌ಪ್ರಾಗಧಿಕರಣ (೨-೪-೨)

**'पूर्वं मनः समुत्पन्नं ततोऽन्येषां समुद्भवः ।**
**तदनुत्पत्तिवचनमल्पोपचयकारणात् ॥'**
**इति वायुप्रोक्तवचनं चशब्देन गृहीतम् ॥१॥**

**॥ इति श्रीमदानन्दतीर्थभगवत्पादाचार्यविरचिते**
**ब्रह्मसूत्रभाष्ये तत्प्रागधिकरणम् ॥ २ ॥**

ಅನುವಾದ - ಈ ವಿರೋಧವನ್ನು ಸೂತ್ರಕಾರರು ಪರಿಹರಿಸುತ್ತಿದ್ದಾರೆ -

'ಮನಃ ಸರ್ವೇಂದ್ರಿಯಾಣಿ ಚ' ಎಂಬ ಅಥರ್ವಣ ಶ್ರುತಿಯನ್ನು ಹಿಂದೆ ಹೇಳಿದ್ದರಿಂದ ಮನಸ್ಸಿಗೆ ಉತ್ಪತ್ತಿಯಿಲ್ಲವೆಂದು ಹೇಳಲು ಸಾಧ್ಯವಿಲ್ಲ.

ಮೊದಲು ಮನಸ್ಸು ಹುಟ್ಟಿತು. ಅನಂತರ ಉಳಿದ ಇಂದ್ರಿಯಗಳು ಹುಟ್ಟಿದವು. ಶ್ರುತಿಯಲ್ಲಿ ಮನಸ್ಸಿಗೆ ಹುಟ್ಟುವಿಕೆ ಇಲ್ಲವೆಂದು ಹೇಳಿದ್ದಾರೆ. ಉಳಿದ ಇಂದ್ರಿಯಗಳಿಗಿಂತ ಮನಸ್ಸಿಗೆ ಸ್ವಲ್ಪ ಮಾತ್ರ ಉಪಚಯವಿರುತ್ತದೆ. ಈ ದೃಷ್ಟಿಯಿಂದ ಶ್ರುತಿಯು ಹೇಳಿರುತ್ತದೆ. ಹೀಗೆ ವಾಯು ಹೇಳಿದ ಮಾತನ್ನು ಆಧಾರವಾಗಿ ಸೂತ್ರದಲ್ಲಿರುವ ಚ ಶಬ್ದವು ಸಂಗ್ರಹ ಮಾಡುತ್ತದೆ.

ಪ್ರತಿಪದಾರ್ಥ -- ಅತಃ = ಮನಸ್ಸಿಗೆ ಉತ್ಪತ್ತಿಯಿಲ್ಲವೆಂಬ ಶ್ರುತಿವಿರೋಧದ ಪರಿಹಾರಕ್ಕಾಗಿ, ಆಹ = ಸೂತ್ರಕಾರರು ಹೇಳುತ್ತಿದ್ದಾರೆ - ಮನಃ = ಮನಸ್ಸು, ಸರ್ವೇಂದ್ರಿಯಾಣಿ = ಎಲ್ಲಾ ಇಂದ್ರಿಯಗಳೂ ಕೂಡ (ಹುಟ್ಟಿದವು) ಈ ಶ್ರುತಿಯನ್ನು, ಇತಿ = ಹೀಗೆ, ಪೂರ್ವೋಕ್ತತ್ವಾತ್ = ಹಿಂದೆ ಹೇಳಿದ್ದರಿಂದ, ಮನಸಾ = ಮನಸ್ಸಿಗೆ, ಅನುತ್ಪತ್ತಿಃ = ಹುಟ್ಟುವಿಕೆ ಇಲ್ಲವೆಂಬುದು, ನಯುಜ್ಯತೇ = ಕೂಡುವುದಿಲ್ಲ.

ಮನಃ = ಮನಸ್ಸು , ಪೂರ್ವಂ = ಮೊದಲು, ಸಮುತ್ಪನ್ನಂ = ಹುಟ್ಟಿತು, ತತಃ = ಅನಂತರ, ಅನ್ಯೇಷಾಂ = ಉಳಿದ ಇಂದ್ರಿಯಗಳು, ಸಮುದ್ಭವಃ = ಹುಟ್ಟಿದವು, ತದನುತ್ಪತ್ತಿವಚನಮ್ = ಮನಸ್ಸಿಗೆ ಉತ್ಪತ್ತಿ ಇಲ್ಲವೆಂದು ಹೇಳುವ ಮಾತಿಗೆ, ಅಲ್ಪೋಪಚಯಕಾರಣಾತ್ = ಸ್ವಲ್ಪಮಾತ್ರ ಉಪಚಯವಿದೆ ಎಂಬ ದೃಷ್ಟಿಯಿಂದ ವ್ಯಾಖ್ಯಾನ ಮಾಡಬೇಕು. ಇತಿ = ಹೀಗೆ, ವಾಯುಪ್ರೋಕ್ತವಚನಂ = ವಾಯುವಿನಿಂದ ಹೇಳಲ್ಪಟ್ಟ ಮಾತನ್ನು, ಚ ಶಬ್ದೇನ = ಸೂತ್ರದಲ್ಲಿರುವ ಚ ಶಬ್ದದಿಂದ, ಸಂಗೃಹೀತಮ್ = ಸಂಗ್ರಹಿಸಿದ್ದಾರೆ.

**ಇಲ್ಲಿಗೆ ತತ್‌ಪ್ರಾಗಧಿಕರಣದ ಭಾಷ್ಯ ಹಾಗೂ**
**ಭಾಷ್ಯಾನುವಾದ ಮುಗಿಯಿತು.**

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

## ತತ್ವಪ್ರಕಾಶಿಕಾ

**तत्वप्रकाशिका – अत्र ब्रह्मणि श्रुतिसमन्वयेन जगत्कारणत्वसिद्ध्यर्थं मनोजन्मविषयश्रुतिविरोधपरिहारादस्ति शास्त्रादिसङ्गतिः । जगत्कारणे ब्रह्मणि श्रुतिसमन्वय उक्तः । तत्र मनोजनमविषयश्रुतीनां विरोधेनाप्रामाण्ये नासावुपपद्यत इति स निराकार्य एव ।**

ಈ ಅಧಿಕರಣದಲ್ಲಿ ಬ್ರಹ್ಮನಲ್ಲಿ ಶ್ರುತಿಸಮನ್ವಯದ ಮೂಲಕ ಜಗತ್ಕಾರಣತ್ವವು ಸಿದ್ಧವಾಗುವುದಕ್ಕಾಗಿ ಮನಸ್ಸಿನ ಹುಟ್ಟಿನ ಬಗ್ಗೆ ಇರುವ ಶ್ರುತಿಯ ವಿರೋಧವನ್ನು ಪರಿಹಾರ ಮಾಡುತ್ತಿದ್ದಾರೆ. ಆದ್ದರಿಂದ ಶಾಸ್ತ್ರ-ಅಧ್ಯಾಯ-ಪಾದ ಸಂಗತಿಗಳು ಇರುತ್ತವೆ. ಜಗತ್ಕಾರಣನಾದ ಬ್ರಹ್ಮನಲ್ಲಿ ಶ್ರುತಿಸಮನ್ವಯವು ಹೇಳಲ್ಪಟ್ಟಿತು. ಈ ವಿಷಯದಲ್ಲಿ ಮನೋಜನ್ಮವಿಷಯಕವಾದ ಶ್ರುತಿಗಳ ವಿರೋಧ ಬರುವುದರಿಂದ ಅಪ್ರಾಮಾಣ್ಯವು ಬರುತ್ತದೆ. ಆದ್ದರಿಂದ ಶ್ರುತಿಸಮನ್ವಯವು ಪರಮಾತ್ಮನಲ್ಲಿ ಉಪಪನ್ನವಾಗುವುದಿಲ್ಲ. ಈ ಕಾರಣಕ್ಕಾಗಿ ಮನೋಜನ್ಮವಿಷಯಕವಾದ ಶ್ರುತಿಗಳ ವಿರೋಧವನ್ನು ಪರಿಹಾರ ಮಾಡಲೇಬೇಕು.

**तत्वप्रकाशिका – अत्र प्रकृतेन्द्रियान्तर्गतं मनो विषयः । किमुत्पत्तिमन्न वेति संशयः । 'मनः सर्वेन्द्रियाणि च' 'नित्यं मनोऽनादित्वात्' इति श्रुतिविरोधः सन्देबीजम् । पूर्वपक्षयति – द्विधेति ॥**

ಈ ಅಧಿಕರಣದಲ್ಲಿ ಇಂದ್ರಿಯಾಂತರ್ಗತವಾದ ಮನಸ್ಸೇ ವಿಷಯವಾಗಿದೆ. ಅದಕ್ಕೆ ಉತ್ಪತ್ತಿ ಇದೆಯೋ, ಇಲ್ಲವೋ ? ಎಂಬುದು ಸಂಶಯ. 'ಮನಸ್ಸರ್ವೇಂದ್ರಿಯಾಣಿ ಚ' 'ನಿತ್ಯಂ ಮನೋಽನಾದಿತ್ವಾತ್' ಈ ಎರಡು ಪರಸ್ಪರ ವಿರುದ್ಧವಾದ ಶ್ರುತಿಗಳು ಸಂದೇಹಕ್ಕೆ ಕಾರಣವಾಗಿವೆ. ಪೂರ್ವಪಕ್ಷವನ್ನು 'ದ್ವಿಧಾ' ಇತ್ಯಾದಿ ಭಾಷ್ಯದಿಂದ ತೋರಿಸುತ್ತಿದ್ದಾರೆ.

ವಿವರಣೆ - ಹಿಂದಿನ ಅಧಿಕರಣದಲ್ಲಿ ಸಕಲ ಇಂದ್ರಿಯಗಳಿಗೆ ಉತ್ಪತ್ತಿ ಇದೆ ಎಂಬುದನ್ನು ಸಮರ್ಥಿಸಲಾಯಿತು. ಆ ಎಲ್ಲಾ ಇಂದ್ರಿಯಗಳಲ್ಲಿ ಅಂತರ್ಗತವಾದ ಮನಸ್ಸಿಗೆ ಮಾತ್ರ ಉತ್ಪತ್ತಿ ಇದೆ ಎಂದು ಒಪ್ಪಬೇಕಾಗಿಲ್ಲ ಎಂದು ಈ ಅಧಿಕರಣದಲ್ಲಿ ಪೂರ್ವಪಕ್ಷ ಮಾಡಲಾಗಿದೆ. ಆದ್ದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಆನಂತರ್ಯ ಸಂಗತಿಯು ಇರುತ್ತದೆ.

**तत्वप्रकाशिका – मनो नोत्पत्तिमत् । 'नित्यं मनोऽनादित्वात्,' इति श्रुतेः। न चोत्पत्तिश्रुत्यनुसारेणोन्द्रियानुत्पत्तिश्रुतिवदनादित्वश्रुतेर्गौणात्वमिति साम्प्रतम् । इन्द्रियाणामनित्यत्वमुक्त्वा विशिष्य मनसो नित्यत्वाभिधानात् । किं च मनसः सादित्वे तद्विना कदाचिदनादिपुरुषेणावस्थातव्यम् । न चैवं भवति ॥**

ಮನಸ್ಸು ಉತ್ಪತ್ತಿ ಉಳ್ಳದ್ದಲ್ಲ. 'ನಿತ್ಯಂ ಮನೋಽನಾದಿತ್ವಾತ್' ಎಂಬ ಶ್ರುತಿಯು ಈ ವಿಷಯದಲ್ಲಿ ಆಧಾರವಾಗಿದೆ. ಉತ್ಪತ್ತಿ ಶ್ರುತಿಗೆ ಅನುಸಾರಿಯಾಗಿ ಅನುತ್ಪತ್ತಿ ಶ್ರುತಿಗೆ ಅಮುಖ್ಯಾರ್ಥವನ್ನು ಹೇಳಿದಂತೆ ಮನಸ್ಸಿಗೆ ನಿತ್ಯತ್ವವನ್ನು ಹೇಳುವ ಶ್ರುತಿಗೂ ಕೂಡ ಗೌಣಾರ್ಥವನ್ನು ಹೇಳಬಹುದಲ್ಲವೇ? ಎಂಬುದು ಯುಕ್ತವಲ್ಲ. ಏಕೆಂದರೆ ಇಂದ್ರಿಯಗಳಿಗೆ ಅನಿತ್ಯತ್ವವನ್ನು ಹೇಳಿ ಮನಸ್ಸಿಗೆ ಮಾತ್ರ ನಿತ್ಯತ್ವವನ್ನು ಶ್ರುತಿಯು ಹೇಳುತ್ತಿದೆ.

ಮತ್ತು ಮನಸ್ಸು ಉತ್ಪತ್ತಿ ಉಳ್ಳದ್ದೆಂದು ಹೇಳಿದರೆ ಮನಸ್ಸಿಲ್ಲದೇ ಅನಾದಿಪುರುಷನು ಇರಬೇಕಾದ ಪ್ರಸಂಗ ಉಂಟಾಗುತ್ತದೆ. ಆದರೆ ಇದು ಅಯುಕ್ತ. ಹಾಗೊಂದು ವೇಳೆ ಮನಸ್ಸಿಲ್ಲದೇ ಪುರುಷನು ಇರುವುದಾದಲ್ಲಿ ಸಂಸಾರವೇ ಇಲ್ಲದಾಗಬೇಕಾಗುತ್ತದೆ. ಏಕೆಂದರೆ ಮನಸ್ಸೇ ಸಂಸಾರಕ್ಕೆ ಕಾರಣವಷ್ಟೆ?

ವಿವರಣೆ - ಇಂದ್ರಿಯಗಳಿಗೆ ಅನಿತ್ಯತ್ವವನ್ನು ಹೇಳಿ ಆ ಶ್ರುತಿಯು 'ನಿತ್ಯಂ ಮನಃ' ಎಂಬುದಾಗಿ ನಿರ್ಧಾರಾತ್ಮಕವಾಗಿ ಮನಸ್ಸಿಗೆ ನಿತ್ಯತ್ವವನ್ನು ಹೇಳುತ್ತಿದೆ.

'ಮನಸ್ಸರ್ವೇಂದ್ರಿಯಾಣಿ ಚ' ಎಂಬ ಮುಂಡಕೋಪನಿಷತ್ತಿನ ವಾಕ್ಯವು ಪ್ರತ್ಯೇಕವಾಗಿ ಮನಸ್ಸಿಗೆ ಜನ್ಮವನ್ನು ಹೇಳುತ್ತಿದೆ. ಆದ್ದರಿಂದ ಮನಸ್ಸಿಗೆ ಅನಾದಿತ್ವವನ್ನು ಹೇಳುವ ಶ್ರುತಿಯಿಂದಲೇ ನಿರ್ಣಯ ಮಾಡಲು ಹೇಗೆ ಸಾಧ್ಯ ? ಎಂಬ ಪ್ರಶ್ನೆಗೆ 'ಕಿಂಚ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಅದಕ್ಕಾಗಿಯೇ ಭಾಷ್ಯದಲ್ಲಿ 'ನಹ್ಯಮನಾಃ ಪುಮಾನ್ ತಿಷ್ಠತಿ' ಎಂಬ ಶ್ರುತಿವಾಕ್ಯವನ್ನು ಉದಾಹರಿಸಿದ್ದಾರೆ.

**तत्वप्रकाशिका – तथा सति तदा संसाराभावप्रसङ्गात् । मनो हि संसारहेतुः यदाहुः 'मन एव मनुष्याणां कारणं बन्धमोक्षयोः' । संसारसादित्वं त्वप्रामाणिकं सर्वप्रमाणविरुद्धं च । अतो नित्यमेव मनः । एवं च युक्तियुक्तविशेषश्रुतेः प्राबल्यात् तद्विरोधेनोत्पत्तिश्रुतेरप्रामाण्यान्न श्रुतिसमन्वयेनेश्वरस्य जगत्कारणत्व-सिद्धिरिति प्राबल्यात् तद्विरोधेनोत्पत्तिश्रुतेरप्रामाण्यान्न श्रुतिसमन्वयेनेश्वरस्य जगत्कारणत्वसिद्धिरिति भावः ।**

ಸಂಸಾರಕ್ಕೆ ಮನಸ್ಸೇ ಕಾರಣವೆನ್ನಲು ಪ್ರಮಾಣವಾಕ್ಯ ಹೀಗಿದೆ - 'ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ' 'ಮನುಷ್ಯರ ಸಂಸಾರಬಂಧನ ಹಾಗೂ ಮೋಕ್ಷಗಳಿಗೆ ಮನಸ್ಸೇ ಕಾರಣವಾಗಿದೆ' ಎಂದು. ಸಂಸಾರವು ಸಾದಿಯಾಗಿದೆ ಎಂಬುದು ಅಪ್ರಾಮಾಣಿಕವಾಗಿದೆ ಮತ್ತು ಸರ್ವಪ್ರಮಾಣವಿರುದ್ಧವೂ ಆಗಿದೆ. ಆದ್ದರಿಂದ ಮನಸ್ಸನ್ನು ನಿತ್ಯವೆಂದೇ ಹೇಳಬೇಕು. ಆದ್ದರಿಂದ ಯುಕ್ತಿಯಿಂದ ಸಹಿತವಾದ ವಿಶೇಷ ಶ್ರುತಿಯು ಪ್ರಬಲವಾಯಿತು. ಇದರ ವಿರೋಧದಿಂದ ಉತ್ಪತ್ತಿ ಶ್ರುತಿಗೆ ಅಪ್ರಾಮಾಣ್ಯವನ್ನು ಹೇಳಬೇಕು. ಹಾಗಾಗಿ ಶ್ರುತಿಸಮನ್ವಯದ ಮೂಲಕ ಈಶ್ವರನಿಗೆ ಜಗತ್ಕಾರಣತ್ವವು ಸಿದ್ಧವಾಗುವುದಿಲ್ಲ. ಇಷ್ಟು ಅಧಿಕರಣದ ಪೂರ್ವಪಕ್ಷ.

ವಿವರಣೆ - 'ಮನ ಏವ ಮನುಷ್ಯಾಣಾಂ' ಎಂಬ ವಾಕ್ಯವು ಗೀತಾಭಾಷ್ಯದ ಆರನೆಯ ಅಧ್ಯಾಯದಲ್ಲಿ ಉಲ್ಲೇಖಿತವಾಗಿದೆ.

**तत्वप्रकाशिका – सिद्धान्तयत्सूत्रमवतार्य व्याचष्टे – अत इति ।। नानुत्पत्तिर्मनसः । उत्पन्नत्वे श्रुतिसद्भावात् । न चास्या गत्यन्तरं वाच्यम् । पृथङ्मनसरो जन्माभिधायकत्वेन विशेषश्रुतित्वात् ।**

ಸಿದ್ಧಾಂತ ಸ್ಥಾಪಕವಾದ ಸೂತ್ರಕ್ಕೆ ಅವತಾರಿಕೆ ನೀಡಿ 'ಅತಃ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಮನಸ್ಸಿಗೆ ಉತ್ಪತ್ತಿ ಇಲ್ಲವೆಂದು ಹೇಳಬಾರದು. ಉತ್ಪತ್ತಿ ಇದೆ ಎನ್ನಲು ಶ್ರುತಿಪ್ರಮಾಣವಿದೆ. ಈ ಶ್ರುತಿಗೆ ಬೇರೆ ಅರ್ಥವನ್ನು ಮಾಡುವುದು ತಪ್ಪು. ಪ್ರತ್ಯೇಕವಾಗಿ ಮನಸ್ಸಿಗೆ ಉತ್ಪತ್ತಿಯನ್ನು ಈ ಶ್ರುತಿಯು ಹೇಳುತ್ತಿರುವುದರಿಂದ ಇದು ವಿಶೇಷಶ್ರುತಿಯಾಗಿದೆ.

ವಿವರಣೆ - ಎಲ್ಲ ಇಂದ್ರಿಯಗಳಿಗೆ ಉತ್ಪತ್ತಿಯನ್ನು ಹೇಳಿ ಅದೇ ಸಂದರ್ಭದಲ್ಲಿ 'ಮನಸೋ ಮನಃ' ಎಂಬುದಾಗಿ ಪ್ರತ್ಯೇಕವಾಗಿ ಮನಸ್ಸಿಗೆ ಅನಿತ್ಯತ್ವವನ್ನು ಶ್ರುತಿಯು ಹೇಳುತ್ತಿದೆ. ಪ್ರತ್ಯೇಕವಾಗಿ ಹೀಗೆ ಹೇಳುವಿಕೆಯೇ ನಿರವಕಾಶವಾಗಿದೆ. (ಗುರ್ವರ್ಥದೀಪಿಕಾ).

**तत्वप्रकाशिका – न चान्येन्द्रियवन्मनसोऽप्युत्पत्तिमत्त्वे तस्येन्द्रियान्तर्गतस्य पृथगभिधानं व्यर्थमिति मन्तव्यम् । अन्येन्द्रियेभ्योऽपि प्रागुत्पन्नत्वाभिप्रायेण तदुपपत्तेरिति भावः । पूर्वोक्तत्वादिति ।। पूर्वमुत्पन्नतयोक्तत्वात् । ननु कुतो मनसः पूर्वोत्पत्तिः कथं चोत्पत्त्यङ्गीकारे श्रुत्यादिविरोधपरिहार इत्यत आह – पूर्वमिति ।।**

ಇಂದ್ರಿಯಗಳಂತೆ ಮನಸ್ಸಿಗೂ ಕೂಡ ಉತ್ಪತ್ತಿಯನ್ನು ಹೇಳುವುದಾದರೆ ಇಂದ್ರಿಯಗಳ ಮಧ್ಯದಲ್ಲಿ ಮನಸ್ಸನ್ನು ಪ್ರತ್ಯೇಕವಾಗಿ ಉಲ್ಲೇಖ ಮಾಡಿದ್ದು ವ್ಯರ್ಥವಾಗುತ್ತದಲ್ಲವೇ? ಎಂದು ತಿಳಿಯಬಾರದು. ಉಳಿದೆಲ್ಲ ಇಂದ್ರಿಯಗಳಿಗಿಂತ ಮನಸ್ಸು ಮೊದಲು ಉತ್ಪನ್ನವಾಗಿದೆ ಎಂಬ ಅಭಿಪ್ರಾಯದಿಂದ ಅದನ್ನು ಕೂಡಿಸಬಹುದು. 'ಪೂರ್ವೋಕ್ತತ್ವಾತ್' ಎಂಬುದಕ್ಕೆ 'ಮೊದಲು ಹುಟ್ಟಿದೆ ಎಂದು ಹೇಳಲ್ಪಟ್ಟದ್ದರಿಂದ' ಎಂದರ್ಥ.

ಮನಸ್ಸಿಗೆ ಮೊದಲು ಹುಟ್ಟುವಿಕೆಯು ಹೇಗೆ ಕೂಡುತ್ತದೆ? ಒಂದುವೇಳೆ ಮನಸ್ಸಿಗೆ ಜನ್ಮವನ್ನು ಒಪ್ಪಿದರೆ ಶ್ರುತ್ಯಾದಿವಿರೋಧವನ್ನು ಹೇಗೆ ಪರಿಹರಿಸುವುದು? ಈ ಪ್ರಶ್ನೆಗೆ 'ಪೂರ್ವಂ' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

ವಿವರಣೆ - 'ಮನಸ್ಸರ್ವೇಂದ್ರಿಯಾಣಿ ಚ' ಎಂಬ ಶ್ರುತಿಯು ಮನಸ್ಸಿಗೆ ಪ್ರತ್ಯೇಕವಾಗಿ ಉತ್ಪತ್ತಿಯನ್ನು ಹೇಳುತ್ತಿದೆ. ಆದ್ದರಿಂದ ಎಲ್ಲ ಇಂದ್ರಿಯಗಳಿಗಿಂತ ಮೊದಲು ಮನಸ್ಸು ಹುಟ್ಟಿತು ಎಂದು ತಿಳಿಯಬೇಕು. ಬೇರೆ ಇಂದ್ರಿಯಗಳಿಗೆ ಅಹಂಕಾರತತ್ವದಿಂದ ಎಷ್ಟು ಉಪಚಯವು ಇದೆಯೋ ಮನಸ್ಸಿಗೆ ಅಷ್ಟು ಉಪಚಯವು ಇರುವುದಿಲ್ಲ. ಆದ್ದರಿಂದಲೂ ಮನಸ್ಸನ್ನು ನಿತ್ಯವೆಂದು ಹೇಳಲಾಗಿದೆ.

**तत्वप्रकाशिका – नोत्पत्तिमत्त्वे मनसः श्रुतिविरोधः । प्रलयेऽपीन्द्रियवत्सूक्ष्म-स्वरूपसत्ताभ्युपगमात् । अत एव न युक्तिविरोधः । न च विशिष्योक्तिविरोधः ।**

**अन्येन्द्रियेभ्योऽल्पोपचयाभिप्रायेण तदुपपत्तेरिति भावः। अतः श्रुत्यविरोधेन मनसो भगवदुत्पन्नत्वसिद्धेर्युक्तो जगत्कारणे ब्रह्मणि श्रुतिसमन्वय इति सिद्धम् ।।**

ಮನಸ್ಸಿಗೆ ಉತ್ಪತ್ತಿಯನ್ನು ಒಪ್ಪಿದಾಗ ಯಾವುದೇ ಶ್ರುತಿಯ ವಿರೋಧವು ಬರುವುದಿಲ್ಲ. ಪ್ರಳಯಕಾಲದಲ್ಲಿಯೂ ಕೂಡ ಬೇರೆ ಇಂದ್ರಿಯಗಳಂತೆ ಮನಸ್ಸಿಗೂ ಸೂಕ್ಷ್ಮರೂಪದಲ್ಲಿ ಅವಸ್ಥಾನವನ್ನು ಅಂಗೀಕರಿಸಲಾಗಿದೆ. ಆದ್ದರಿಂದಲೇ ಯುಕ್ತಿವಿರೋಧಕ್ಕೆ ಅವಕಾಶವಿಲ್ಲ. ಮನಸ್ಸಿಗೆ ಪ್ರತ್ಯೇಕವಾಗಿ ನಿತ್ಯತ್ವವನ್ನು ಹೇಳುವ ಶ್ರುತಿವಿರೋಧಕ್ಕೂ ಅವಕಾಶವಿಲ್ಲ. ಉಳಿದೆಲ್ಲ ಇಂದ್ರಿಯಗಳಿಗಿಂತ ಅಲ್ಪವಾದ ಉಪಚಯಾಭಿಪ್ರಾಯದಿಂದ ಆ ಶ್ರುತಿಯನ್ನು ಕೂಡಿಸಬಹುದು.

ಶ್ರುತಿಯ ವಿರೋಧವಿಲ್ಲದ್ದರಿಂದ ಮನಸ್ಸು ಭಗವಂತನಿಂದ ಉತ್ಪನ್ನವಾಗುತ್ತದೆಂಬ ಪ್ರಮೇಯವು ಸಿದ್ಧವಾಯಿತು. ಜಗತ್ಕಾರಣನಾದ ಬ್ರಹ್ಮನಲ್ಲಿ ಶ್ರುತಿಸಮನ್ವಯವೂ ಕೂಡ ಸಿದ್ಧವಾಯಿತು.

ವಿವರಣೆ - ಮನಸ್ಸಿಗೆ ಅನಾದಿತ್ವವನ್ನು ಹೇಳುವ ವಿಶೇಷಶ್ರುತಿಯ ವಿರೋಧವು ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. 'ಮನಸ್ಸರ್ವೇಂದ್ರಿಯಾಣಿ ಚ' ಎಂಬ ಉತ್ಪತ್ತಿಯನ್ನು ಹೇಳುವ ಶ್ರುತಿ ಅದಕ್ಕಿಂತಲೂ ಬಲಿಷ್ಠವಾಗಿದೆ. ಆದ್ದರಿಂದ ಮನಸ್ಸಿಗೆ ಉತ್ಪತ್ತಿಯನ್ನು ಹೇಳಲೇಬೇಕು. ಭಗವಂತನಿಂದಲೇ ಇಂಥ ಮನಸ್ಸು ಉತ್ಪನ್ನವಾಗುತ್ತದೆಂಬ ಪ್ರಮೇಯವು ಇದರಿಂದ ಸಿದ್ಧವಾಯಿತು.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ತತ್‌ಪ್ರಾಗಧಿಕರಣ ಮುಗಿಯಿತು

## ತತ್ಪ್ರಾಗಧಿಕರಣ

(೨-೪-೨)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## तत्प्रागधिकरणम्

### ಮನಸ್ಸಿಗೂ ಕೂಡ ಉತ್ಪತ್ತಿ ಇದೆ

**मनसः उत्पत्तिमत्वसमर्थनम्**

**।। तत्प्राक् श्रुतेश्च ।। अवान्तरसङ्गतिं सूचयितुं प्रकृतेन्द्रियान्तर्गतमित्युक्तम्।**

ಈ ಅಧಿಕರಣಕ್ಕೆ ಅವಾಂತರಸಂಗತಿಯನ್ನು ಸೂಚನೆ ಮಾಡುವುದಕ್ಕಾಗಿ ಟೀಕೆಯಲ್ಲಿ 'ಪ್ರಕೃತೇಂದ್ರಿಯಾಂತರ್ಗತಂ' ಎಂದು ಹೇಳಿದ್ದಾರೆ. ಇಂದ್ರಿಯಗಳ ವಿಚಾರಗಳು ಈ ಹಿಂದೆ ಪ್ರಸಕ್ತವಾಗಿವೆ. ಆ ಇಂದ್ರಿಯಗಳಲ್ಲೇ ಮನಸ್ಸು ಸೇರಿರುವುದರಿಂದ ಆ ಮನಸ್ಸಿನ ಉತ್ಪತ್ತಿಯ ಬಗ್ಗೆ ಈ ಅಧಿಕರಣದಲ್ಲಿ ವಿಚಾರ ಮಾಡುವುದು ಸಂಗತವಾಗಿದೆ.

**अत्रोक्तं ब्रह्मणः सर्वस्रष्टृत्वं मनोऽनादित्वश्रुतिविरुद्धं न वेति चिन्ता । तदर्थं मनोऽनादित्वश्रुतिर्मुख्यार्थोत गौणीति । तदर्थं गौणत्व इन्द्रियान्तराणामनित्यत्व-मुक्त्वा मनसोनित्यत्वोक्तिर्युक्ता नवेति । तदर्थं मनसः सृष्टिकाले किमिन्द्रियान्त-राणामिव बह्ववयवोपचयः किं वाल्पावयवोपचय इति ।**

ಜನ್ಮಾಧಿಕರಣದಲ್ಲಿ ಬ್ರಹ್ಮನಿಗೆ ಸರ್ವಸ್ರಷ್ಟೃತ್ವವನ್ನು ಪ್ರತಿಪಾದನೆ ಮಾಡಲಾಯಿತು. ಈ ಪ್ರಮೇಯಕ್ಕೆ ಮನಸ್ಸಿಗೆ ಅನಾದಿತ್ವವನ್ನು ಹೇಳುವ ಶ್ರುತಿವಿರೋಧ ಬರುತ್ತದೋ ಇಲ್ಲವೋ? ಎಂಬುದು ಈ ಅಧಿಕರಣದ ಪ್ರಧಾನ ವಿಚಾರ. ಅದಕ್ಕಾಗಿ ಮನಸ್ಸು ಅನಾದಿಯಾಗಿದೆ ಎಂದೇ ಹೇಳುವ ಶ್ರುತಿಯು ಮುಖ್ಯಾರ್ಥವುಳ್ಳದ್ದೋ, ಗೌಣಾರ್ಥವುಳ್ಳದ್ದೋ ಎಂಬ ವಿಚಾರ ಮಾಡಬೇಕು. ಅದಕ್ಕಾಗಿ ಮನಸ್ಸಿಗೆ ಅನಾದಿತ್ವವನ್ನು ಹೇಳುವ ಶ್ರುತಿಯು ಗೌಣಾರ್ಥಕವಾಗುವುದಾದರೆ ಬೇರೆ ಇಂದ್ರಿಯಗಳಿಗೆಲ್ಲಾ

ಅನಿತ್ಯತ್ವವನ್ನು ಹೇಳಿ ಮನಸ್ಸಿಗೆ ಮಾತ್ರ ನಿತ್ಯತ್ವವನ್ನು ಹೇಳಿದ್ದು ಯುಕ್ತವೋ ಅಲ್ಲವೋ? ಎಂಬುದನ್ನು ವಿಚಾರ ಮಾಡಬೇಕು. ಆದಕ್ಕಾಗಿ ಮನಸ್ಸು ಸೃಷ್ಟಿಕಾಲದಲ್ಲಿ ಬೇರೆ ಇಂದ್ರಿಯಗಳಂತೆ ಬಹುವಾದ ಅವಯವಗಳ ಉಪಚಯವನ್ನು ಹೊಂದುವುದಿಲ್ಲ ಎಂದೋ ಅಥವಾ ಅಲ್ಪವಾದ ಅವಯವಗಳ ಉಪಚಯವುಳ್ಳದ್ದು ಎಂದೋ? ಎಂಬುದರ ಬಗ್ಗೆ ವಿಚಾರ ಮಾಡಬೇಕು.

**''विशेषश्रुतिविरोधः'' इति पूर्वपक्षन्यायविवरणे पूर्वाधिकरण इव विशेषश्रुतिर्न विशिष्य धर्मिनिर्देशमात्रम् । ''एतस्माज्जायते प्राणो मन'' इति सादित्वेऽपि तस्य सत्त्वात् । ''प्राणा एवानादय'' इतीन्द्रियेष्वपि तस्य सत्त्वेन पूर्वाधिकरण-साङ्कर्यापाताच्च । असाङ्कर्यस्य च ''तत्र स्पष्टार्थवच्छ्रुतिः । विशेषश्रुतिवैरूप्यम्'' इत्याद्यनुव्याख्यान उक्तत्वात् ।**

ಹಿಂದಿನ ಅಧಿಕರಣದಲ್ಲಿ 'ಸ್ಪಷ್ಟಾರ್ಥವತ್ ವಿಶೇಷಶ್ರುತಿಃ' ಎಂಬುದು ಪೂರ್ವಪಕ್ಷ ನ್ಯಾಯವಾಗಿದೆ. ಈ ಅಧಿಕರಣದಲ್ಲಿ 'ವಿಶೇಷಶ್ರುತಿವೈರೂಪ್ಯಂ' ಎಂಬುದು ಪೂರ್ವಪಕ್ಷ ನ್ಯಾಯವಾಗಿದೆ. ಹೀಗೆ ಎರಡು ಅಧಿಕರಣಗಳ ನ್ಯಾಯವನ್ನು ಬೇರೆ ಬೇರೆ ಪದಗಳ ಪ್ರಯೋಗವನ್ನು ಮಾಡುವ ಮೂಲಕ ಅನುವ್ಯಾಖ್ಯಾನದಲ್ಲಿ ಬೇರೆ ಬೇರೆ ಪೂರ್ವಪಕ್ಷ ನ್ಯಾಯವೆಂದು ತಿಳಿಸಿದ್ದಾರೆ. ಆದರೆ ಆಪಾತತಃ ನೋಡಿದಾಗ 'ಸ್ಪಷ್ಟಾರ್ಥವತ್ ಶ್ರುತಿವಿರೋಧಃ' ಎಂಬ ಪದಕ್ಕೂ ವಿಶೇಷಶ್ರುತಿವಿರೋಧ ಎಂಬುದಕ್ಕೂ ಒಂದೇ ಅರ್ಥ ಕಾಣಿಸುತ್ತಿದೆ. ಈ ಸಾಂಕರ್ಯದೋಷವನ್ನು ಹೇಗೆ ಪರಿಹಾರ ಮಾಡುವುದು? ಒಂದುವೇಳೆ ವಿಶೇಷಶ್ರುತಿ ಎಂಬುದಕ್ಕೆ 'ವಿಶಿಷ್ಯ ಧರ್ಮಿನಿರ್ದೇಶಃ' ಎಂಬರ್ಥವನ್ನು ವಿವಕ್ಷಿಸುವುದಾದಲ್ಲಿ ಆಗ ಪೂರ್ವಾಧಿಕರಣದ ನ್ಯಾಯದಿಂದ ಸಾಂಕರ್ಯದೋಷವು ಪ್ರಾಪ್ತವಾಗುತ್ತದೆ. ಏಕೆಂದರೆ ಈಗ 'ವಿಶಿಷ್ಯ ಶ್ರುತಿವಿರೋಧಾತ್' ಎಂಬುದಕ್ಕೆ ಮನಸ್ಸನ್ನು ವಿಶೇಷವಾಗಿ ನಿರ್ದೇಶ ಮಾಡಿ ವಿರೋಧವನ್ನು ಹೇಳುವುದು ಎಂದರ್ಥವು ತಿಳಿಯುತ್ತದೆ. ಆದರೆ ಹಿಂದಿನ ಅಧಿಕರಣದಲ್ಲೂ ಕೂಡ ಇಂದ್ರಿಯ ಎಂಬ ಧರ್ಮಿಯನ್ನು ನಿರ್ದೇಶ ಮಾಡಿ ಅನಾದಿತ್ವವನ್ನು ಹೇಳಿದ್ದಾರೆ. ಆದ್ದರಿಂದ ಈ ಅಧಿಕರಣದಲ್ಲಿರುವ ವಿಶೇಷ್ಯ ಶ್ರುತಿ ವಿರೋಧ ಎಂಬುದಕ್ಕೆ ವಿಶಿಷ್ಯಧರ್ಮಿ ನಿರ್ದೇಶ ಎಂಬರ್ಥವನ್ನು ಹೇಳಿದರೆ ಪೂರ್ವಾಧಿಕರಣದ ಶ್ರುತಿಯಲ್ಲೂ ಕೂಡ ಇದು ಸಮಾನವಾದ್ದರಿಂದ ಸಾಂಕರ್ಯ ದೋಷವು ಬರುತ್ತದೆ.

ಮತ್ತೊಂದು ದೋಷ – ವಿಶಿಷ್ಯಧರ್ಮಿನಿರ್ದೇಶವನ್ನು ಮಾಡಿ ಅನಾದಿನಿತ್ಯತ್ವವನ್ನು ಹೇಳಿದ್ದಾರೆ ಎಂಬುದನ್ನು ಪೂರ್ವಪಕ್ಷ ನ್ಯಾಯವನ್ನಾಗಿ ವಿವಕ್ಷಿಸಿದರೆ ಈ ನ್ಯಾಯವೇ ದುರ್ಬಲವಾಗುತ್ತದೆ. ಸಿದ್ಧಾಂತದಲ್ಲಿ 'ಏತಸ್ಮಾತ್ ಜಾಯತೇ ಪ್ರಾಣಃ ಮನಃ' ಎಂಬ ಶ್ರುತಿಯನ್ನೂ ಹೇಳಲಾಗುತ್ತದೆ. ಸಿದ್ಧಾಂತದಲ್ಲಿ ಉಲ್ಲೇಖ ಮಾಡುವ ಶ್ರುತಿಯಲ್ಲೂ ಕೂಡ ಮನಃ ಎಂಬುದಾಗಿ ವಿಶಿಷ್ಯಧರ್ಮಿ-ನಿರ್ದೇಶವು ಇರುತ್ತದೆ. ಆದ್ದರಿಂದ ವಿಶೇಷಶ್ರುತಿ ಎಂಬುದಕ್ಕೆ ವಿಶಿಷ್ಯಧರ್ಮಿ ನಿರ್ದೇಶ ಎಂಬರ್ಥವನ್ನು ವಿವಕ್ಷಿಸಬಾರದು

**किन्त्विन्द्रियान्तराण्यनित्यकोटौ निक्षिप्य मनसो नित्यत्वोक्तिरित्याह – इन्द्रियाणामनित्यत्वमिति ॥**

'ವಿಶೇಷ ಶ್ರುತಿವೈರೂಪ್ಯಂ' ಎಂಬುದಕ್ಕೆ ಹೀಗೆ ಅರ್ಥವನ್ನು ಹೇಳಬೇಕು. ಬೇರೆ ಇಂದ್ರಿಯಗಳನ್ನು ಅನಿತ್ಯಕೋಟಿಯಲ್ಲಿ ಸೇರಿಸಿ ಮನಸ್ಸನ್ನು ಮಾತ್ರ ನಿತ್ಯತ್ವಕೋಟಿಯಲ್ಲಿ ಸೇರಿಸಲಾಗಿದೆ. ಆದ್ದರಿಂದ ಹಿಂದಿನ ಅಧಿಕರಣದಿಂದ ಸಾಂಕರ್ಯ ದೋಷವು ಬರುವುದಿಲ್ಲ. 'ನಿತ್ಯಂ ಮನಃ' ಎಂಬಲ್ಲಿ ಸೂಕ್ಷ್ಮರೂಪದಿಂದ ಮನಸ್ಸಿಗೆ ಉತ್ಪತ್ತಿ ಇಲ್ಲ. ಆದರೂ ಕೂಡ ಪರಾಧೀನವಿಶೇಷಾವಾಪ್ತಿರೂಪವಾದ ಉತ್ಪತ್ತಿಯು ಇದೆ ಎಂಬುದಾಗಿ ಸಿದ್ಧಾಂತಿಗಳು ಹೇಳಬಹುದು. ಆದರೆ ಬೇರೆ ಇಂದ್ರಿಯಗಳಿಗೂ ಕೂಡ ಸೂಕ್ಷ್ಮರೂಪದಿಂದ ಉತ್ಪತ್ತಿಯು ಇರುವುದರಿಂದ ಬೇರೆ ಇಂದ್ರಿಯಗಳನ್ನೂ ಕೂಡ ನಿತ್ಯ ಎಂದೇ ಹೇಳಬೇಕಾದೀತು. ಅಥವಾ ಉಳಿದ ಇಂದ್ರಿಯಗಳ ಸಮಾನಕಕ್ಷೆಯಿಂದ ಮನಸ್ಸನ್ನೂ ಕೂಡ ಅನಿತ್ಯವೆಂದೇ ಹೇಳಬೇಕು. ಆದರೆ ಶ್ರುತಿಯು ಹಾಗೆ ಹೇಳದೇ ಇರುವುದರಿಂದ ಉಳಿದ ಇಂದ್ರಿಯಗಳಂತೆ ಮನಸ್ಸು ಅನಿತ್ಯವಲ್ಲ ನಿತ್ಯವೇ ಆಗಿದೆ ಎಂಬ ಪೂರ್ವಪಕ್ಷವು ಈಗ ನಿರ್ಧಾರವಾಗುತ್ತದೆ. ಇದನ್ನು 'ಇಂದ್ರಿಯಾಣಾಂ ಅನಿತ್ಯತ್ವಂ' ಎಂಬ ಟೀಕೆಯಿಂದ ತಿಳಿಸಿದ್ದಾರೆ.

**''विशेषश्रुतेः'' इति सिद्धान्तन्यायविवरणे विशेषश्रुतिर्न पूर्वपक्ष इवेन्द्रियान्तराणि नित्यकोटौ निक्षिप्य मनसोऽनित्यत्वोक्तिः । विषयवाक्ये तदभावात् । इन्द्रियान्तराणां नित्यकोटिनिवेशस्य सिद्धान्तविरोधित्वाच्च । किन्तु पृथक्कीर्तनमात्रम् ।**

ಸಿದ್ಧಾಂತದಲ್ಲಿ 'ವಿಶೇಷಶ್ರುತೇಃ' ಎಂಬುದನ್ನು ನ್ಯಾಯವನ್ನಾಗಿ ಹೇಳಲಾಗಿದೆ. ಇದರ ಅಭಿಪ್ರಾಯ ಹೀಗಿದೆ – ಪೂರ್ವಪಕ್ಷದಲ್ಲಿ ಹೇಳಿದಂತೆ ಇಲ್ಲಿಯೂ ಕೂಡ ಬೇರೆ ಇಂದ್ರಿಯಗಳು ನಿತ್ಯಕೋಟಿಯಲ್ಲಿ ಸೇರಿವೆ, ಮನಸ್ಸು ಅನಿತ್ಯಕೋಟಿಯಲ್ಲಿ ಸೇರಿದೆ ಎಂಬರ್ಥವನ್ನು ವಿವಕ್ಷಿಸಬಾರದು. ಈ ರೀತಿಯಲ್ಲಿ ಯಾವುದೇ ವಾಕ್ಯಗಳು ಶ್ರುತಿಯಲ್ಲಿ ಪಠಿತವೇ ಆಗಿಲ್ಲ. ಬೇರೆ ಇಂದ್ರಿಯಗಳನ್ನು ನಿತ್ಯಕೋಟಿಯಲ್ಲಿ ಸೇರಿಸಿ ಅನಿತ್ಯಕೋಟಿಯಲ್ಲಿ ಮನಸ್ಸನ್ನು ಸೇರಿಸುವುದು ಸಿದ್ಧಾಂತಕ್ಕೆ ವಿರುದ್ಧವೂ ಕೂಡ ಆಗಿದೆ. ಆದ್ದರಿಂದ ಪೂರ್ವಪಕ್ಷಕ್ಕೆ ವಿಪರೀತವಾದ ಅರ್ಥವನ್ನು ಸಿದ್ಧಾಂತದಲ್ಲಿ ಮಾಡಬಾರದು, ಕಿಂತು ಪೃಥಕ್ಕೀರ್ತನವನ್ನಷ್ಟೇ ಮಾಡಬೇಕು.

ಅಭಿಪ್ರಾಯ ಹೀಗಿದೆ – ಮನಸ್ಸನ್ನು ಬೇರೆ ಇಂದ್ರಿಯಗಳ ಜೊತೆ ಸೇರಿಸದೇ ಪ್ರತ್ಯೇಕವಾಗಿ ಪಠಿಸಲಾಗಿದೆ ಮತ್ತು ಎಲ್ಲ ಇಂದ್ರಿಯಗಳಿಗಿಂತ ಮೊದಲೇ ಅದನ್ನು ಉಲ್ಲೇಖ ಮಾಡಲಾಗಿದೆ. ಆದ್ದರಿಂದ ಮನಸ್ಸಿಗೂ ಕೂಡ ಉತ್ಪತ್ತಿಯನ್ನು ಒಪ್ಪಲೇಬೇಕು. ಹಾಗಾದರೆ ಬೇರೆ ಇಂದ್ರಿಯಗಳ ಜೊತೆ ಪಠಿಸದೇ ಪ್ರತ್ಯೇಕವಾಗಿ ಮನಸ್ಸನ್ನು ನಿತ್ಯವೆಂದು ಏಕೆ ಹೇಳಬೇಕು ಎಂದರೆ ಅದು ಅಲ್ಪೋಪಚಯದ ಕಾರಣದಿಂದಷ್ಟೇ ಹೊರತು ಉತ್ಪತ್ತಿಯೇ ಇಲ್ಲವೆಂಬ ಅಭಿಪ್ರಾಯದಿಂದಲ್ಲ.

ಪರಿಪೂರ್ಣಚಂದ್ರಿಕಾ

**तावता निरवकाशत्वसिद्धेरित्याह – अनेन सौत्रस्य प्राक्शब्दस्य न केवलं मनोविषयसूचनं फलम् । किन्तु श्रुतेर्निरवकाशत्वसूचनमपीत्युक्तं भवति । तस्य फलान्तरमप्याह – न चेति ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् तत्प्रागधिकरण सम्पूर्णम् ।।२।।**

ಯಾವ ಕಾರಣದಿಂದ ಮನಸ್ಸನ್ನು ಶ್ರುತಿಯಲ್ಲಿ ಪೃಥಕ್ ಆಗಿ ಹೇಳಲಾಗಿದೆಯೋ ಆ ಕಾರಣದಿಂದಲೇ ಅದಕ್ಕೆ ನಿರವಕಾಶತ್ವವು ಸಿದ್ಧವಾಗುತ್ತದೆ. ಹೀಗೆ ಹೇಳಿದ್ದರಿಂದ ಸೂತ್ರದಲ್ಲಿ ಪ್ರಾಕ್ ಶಬ್ದವು ಕೇವಲ ಮನೋವಿಷಯವನ್ನು ಸೂಚನೆ ಮಾಡುವುದಷ್ಟೇ ಇದರ ಪ್ರಯೋಜನವಲ್ಲ. ಕಿಂತು ಶ್ರುತಿಗೆ ನಿರವಕಾಶತ್ವವನ್ನು ಸೂಚನೆ ಮಾಡುವುದೂ ಕೂಡ ಫಲವಾಗಿದೆ ಎಂದು ತಿಳಿಸಿದಂತಾಯಿತು. ಹಿಂದಿನ ಅಧಿಕರಣದಲ್ಲಿ ಎಲ್ಲ ಇಂದ್ರಿಯಗಳಿಗೆ ಉತ್ಪತ್ತಿ ಇದೆ ಎಂದು ಹೇಳಲಾಯಿತು. ಈ ಅಧಿಕರಣದಲ್ಲಿರುವ ಸೂತ್ರದಲ್ಲಿ 'ತತ್ ಪ್ರಾಕ್' ಎಂಬ ಪದವನ್ನು ಪ್ರಯೋಗ ಮಾಡಿದ್ದರಿಂದ ಆ ಇಂದ್ರಿಯಗಳಲ್ಲಿ ಮೊದಲು ಮನಸ್ಸನ್ನು ಪ್ರಯೋಗ ಮಾಡಲಾಗಿದೆ. ಆದ್ದರಿಂದಲೇ ಇದಕ್ಕೆ ನಿರವಕಾಶತ್ವವು ಸಿದ್ಧವಾಯಿತು ಎಂಬುದು ಈ ಸೂತ್ರದ ಧ್ವನಿ. ಎಲ್ಲ ಇಂದ್ರಿಯಗಳು ಹುಟ್ಟುವ ಮೊದಲೇ ಮನಸ್ಸು ಹುಟ್ಟಿರುವುದರಿಂದ ಪೂರ್ವೋತ್ಪನ್ನತ್ವ ಎಂಬ ಮತ್ತೊಂದು ಫಲವನ್ನೂ ಕೂಡ 'ನ ಚ' ಎಂಬ ಟೀಕೆಯಿಂದ ಹೇಳುತ್ತಿದ್ದಾರೆ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ತತ್‌ಪ್ರಾಗಧಿಕರಣವು ಸಂಪೂರ್ಣವಾಯಿತು

## ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

तत्प्राक् श्रुतेश्च ।। अवान्तरेति ।। कृत्स्नप्राणोत्पत्त्याक्षेपसमाधानरूपा-वान्तरसङ्गतिमित्यर्थः । पूर्वोत्तरपक्षटीकासूचिताश्चिन्ताः सन्देहटीकां विवृण्वन्नाह – अत्रेति ।।

ಹಿಂದಿನ ಅಧಿಕರಣದಲ್ಲಿ ಎಲ್ಲಾ ಇಂದ್ರಿಯಗಳಿಗೂ ಉತ್ಪತ್ತಿ ಇದೆ ಎಂದು ಸಮರ್ಥನೆ ಮಾಡಲಾಯಿತು. ಆದರೆ ಮನಸ್ಸಿಗೆ ಉತ್ಪತ್ತಿ ಇಲ್ಲವೆಂದು ಆಕ್ಷೇಪ ಮಾಡಿ ಸಮಾಧಾನ ಮಾಡುತ್ತಿರುವುದರಿಂದ ಈ ಅಧಿಕರಣಕ್ಕೆ ಅವಾಂತರ ಸಂಗತಿಯು ಇರುತ್ತದೆ. ಪೂರ್ವಪಕ್ಷ ಟೀಕೆ ಹಾಗೂ ಸಿದ್ಧಾಂತಟೀಕೆಯಿಂದ ಸೂಚಿತವಾದ ಸಂಶಯ ಪರಂಪರೆಯನ್ನು ಹಾಗೂ ಸಂಶಯ ಟೀಕೆಯನ್ನು ವಿವರಿಸಲು 'ಅತ್ರ' ಇತ್ಯಾದಿ ಗ್ರಂಥವು ಹೊರಟಿದೆ.

**ಪ್ರಕಾಶಃ –** यदि बह्ववयवोपचयस्तदा तादृशेन्द्रियेभ्यो विशिष्य नित्यत्वोक्तय योगादनादित्वश्रुतिर्मुख्यार्था । पक्षान्तरे तु नेति भावः ।।

ಒಂದುವೇಳೆ ಮನಸ್ಸಿಗೆ ಅನೇಕ ಅವಯವಗಳ ಉಪಚಯವು ಇರುವುದಾದರೆ ಉಳಿದ ಇಂದ್ರಿಯಗಳಂತೆ ಇದೂ ಕೂಡ ಅನಿತ್ಯವಾಗುತ್ತಿತ್ತು. ಅವುಗಳಿಗಿಂತ ವಿಶೇಷವಾಗಿ ಅನಿತ್ಯತ್ವವನ್ನು ಹೇಳಿದ್ದು ಅಯುಕ್ತವಾಗುತ್ತಿತ್ತು. ಆದ್ದರಿಂದ ಮನಸ್ಸಿಗೆ ಅನಾದಿತ್ವವನ್ನು ಹೇಳುವ ಶ್ರುತಿಯು ಮುಖ್ಯವಾದ ಅರ್ಥವುಳ್ಳದ್ದಾಗಿದೆ ಎಂಬುದು ಪೂರ್ವಪಕ್ಷದ ಅಭಿಪ್ರಾಯ. ಸಿದ್ಧಾಂತ ಪಕ್ಷದಲ್ಲಿ ಅನಾದಿತ್ವ ಶ್ರುತಿಯು ಮುಖ್ಯಾರ್ಥವುಳ್ಳದ್ದಲ್ಲ ಎಂದು ಅಭಿಪ್ರಾಯ.

**ಪ್ರಕಾಶಃ – सादित्व इति ।।** उत्पत्तिमत्त्वेऽपीत्यर्थः ।। **निरवकाशत्वेति ।।** विशिष्य जन्माभिधायकत्वरूपेत्यर्थः । फलान्तरं पूर्वोत्पन्नत्वरूपमित्यर्थः ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते**
**चन्द्रिकाप्रकाशे तत्प्रागधिकरणं सम्पूर्णम् ।।२।।**

ಉತ್ಪತ್ತಿಮತ್ವ ಪಕ್ಷದಲ್ಲೂ ಕೂಡ ವಿಶಿಷ್ಟಧರ್ಮಿನಿರ್ದೇಶವು ಇದ್ದೇ ಇದೆ ಎಂಬುದನ್ನು 'ಸಾದಿತ್ವ' ಎಂಬ ವಾಕ್ಯದ ಅರ್ಥವನ್ನಾಗಿ ತಿಳಿಯಬೇಕು. 'ನಿರವಕಾಶತ್ವ ಸೂಚನಂ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಮನಸ್ಸಿಗೆ ಪ್ರತ್ಯೇಕವಾಗಿ ಜನ್ಮವನ್ನು ಹೇಳಿರುವುದರಿಂದ ಎಂದು ಇದರ ಅರ್ಥ. ಎಲ್ಲ ಇಂದ್ರಿಯಗಳಿಗಿಂತ ಮೊದಲೇ ಉತ್ಪನ್ನವಾಗಿದೆ ಎಂಬುದೇ ಫಲಾಂತರವೆಂದು ತಿಳಿಯಬೇಕು.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ತತ್ ಪ್ರಾಗಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು

# ತತ್ಪೂರ್ವಕತ್ವಾಧಿಕರಣ

(೨-೪-೩)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

॥ ಶ್ರೀಗುರುಭ್ಯೋ ನಮಃ ॥

# ತತ್ಪೂರ್ವಕತ್ವಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – तत्पूर्वकत्वाद्वाचः ।।**

ವಾಗಿಂದ್ರಿಯಕ್ಕೆ ಮನಸ್ಸು ಕಾರಣವಾಗಿದೆ ಎಂದು 'ಮನ ಏವ ಪೂರ್ವರೂಪಮ್' ಎಂಬುದಾಗಿ ಐತರೇಯೋಪನಿಷತ್ತು ಹೇಳುತ್ತಿದೆ. ವಾಗಿಂದ್ರಿಯಕ್ಕೆ ಮನಸ್ಸು ಕಾರಣವಾದ್ದರಿಂದ ನಿತ್ಯವಲ್ಲ. ಉತ್ಪತ್ತಿಯುಳ್ಳದ್ದಾಗಿದೆ

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** वाचः वागिन्द्रियस्य तत्पूर्वकत्वात् 'मन एव पूर्वरूपम्' मनःकारणकत्वश्रवणाद् वागिन्द्रियमुत्पत्तिमदेव न त्वनुत्पत्तिमदित्यर्थः ।।१।।

ವಾಚಃ = ವಾಗಿಂದ್ರಿಯಕ್ಕೆ, ತತ್ಪೂರ್ವಕತ್ವಾತ್ = 'ಮನ ಏವ ಪೂರ್ವರೂಪಮ್' ಎಂಬುದಾಗಿ ಮನಸ್ಸು ಕಾರಣವೆಂದು ಹೇಳಿದ್ದರಿಂದ ವಾಗಿಂದ್ರಿಯವು ಉತ್ಪತ್ತಿಯುಳ್ಳದ್ದೇ ಆಗಿದೆ. ಅನಾದಿಯಲ್ಲ.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ತತ್ಪೂರ್ವಕತ್ವಾಧಿಕರಣವು ಮುಗಿಯಿತು.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – 'नित्ययाऽनित्यया स्तौमि परमात्मानमच्युतम्' इति । 'वाग्वाव नित्या न ह्येषोत्पद्यतेऽस्यां हि श्रुतिरवतिष्ठते' इति सयुक्तिकं पौष्यायणश्रुतौ वाचाऽनुत्पत्तिरुच्यते ।**

ಅನುವಾದ - 'ನಿತ್ಯಯಾऽನಿತ್ಯಯಾ ಸ್ತೌಮಿ' ಅಚ್ಯುತನಾದ ಪರಮಾತ್ಮನನ್ನು ನಿತ್ಯವಾದ ವಾಗಿಂದ್ರಿಯದಿಂದ ನಿತ್ಯವಾದ ಮಂತ್ರವನ್ನು ಹೇಳಿ ಸ್ತೋತ್ರ ಮಾಡುತ್ತೇನೆ. ಹೀಗೆ ಶ್ರುತಿಯು ಹೇಳುತ್ತಿದೆ. 'ವಾಗ್ವಾವ ನಿತ್ಯಾ' ಎಂಬ ಶ್ರುತಿಯು ಯುಕ್ತಿಬದ್ಧವಾಗಿ ವಾಗಿಂದ್ರಿಯಕ್ಕೆ ನಿತ್ಯತ್ವವನ್ನು ಸಮರ್ಥನೆ ಮಾಡುತ್ತಿದೆ. ವಾಗಿಂದ್ರಿಯವು ನಿತ್ಯವಾಗಿದೆ. ಇದಕ್ಕೆ ಉತ್ಪತ್ತಿಯು ಇರುವುದಿಲ್ಲ. ಇಂಥ ನಿತ್ಯವಾದ ವಾಗಿಂದ್ರಿಯದಲ್ಲಿ ನಿತ್ಯವಾದ ಶ್ರುತಿಯು ಉಳಿಯುತ್ತದೆ. ಹೀಗೆ ಯುಕ್ತಿಬದ್ಧವಾಗಿ ಪೌಷ್ಯಾಯಣಶ್ರುತಿಯಲ್ಲಿ ವಾಗಿಂದ್ರಿಯಕ್ಕೆ ನಿತ್ಯತ್ವವನ್ನು ಹೇಳಲಾಗಿದೆ.

ಪ್ರತಿಪದಾರ್ಥ:- ಅಚ್ಯುತಂ = ಅಚ್ಯುತನೆನಿಸಿದ, ಪರಮಾತ್ಮಾನಮ್ = ಪರಮಾತ್ಮನನ್ನು, ನಿತ್ಯಯಾ = ನಿತ್ಯವಾದ ವಾಗಿಂದ್ರಿಯದಿಂದ, ಸ್ತೌಮಿ = ಸ್ತೋತ್ರ ಮಾಡುತ್ತೇನೆ, ವಾಗ್ವಾವ = ವಾಗಿಂದ್ರಿಯವಾದರೂ, ನಿತ್ಯಾ = ನಿತ್ಯವಾಗಿದೆ. ಏಷಃ = ಇದು, ನಹಿ ಉತ್ಪದ್ಯತೇ = ಹುಟ್ಟುವುದಿಲ್ಲ. ಹಿ = ಏಕೆಂದರೆ, ಅಸ್ಯಾಂ = ಈ ವಾಗಿಂದ್ರಿಯದಲ್ಲಿ, ಶ್ರುತಿಃ = ಶ್ರುತಿಯು, ಅವತಿಷ್ಠತೇ = ಇರುತ್ತದೆ. ಸಯುಕ್ತಿಕಂ = ಯುಕ್ತಿಬದ್ಧವಾಗಿ, ಪೌಷ್ಯಾಯಣಶ್ರುತೌ = ಪೌಷ್ಯಾಯಣಶ್ರುತಿಯಲ್ಲಿ, ವಾಚಃ = ವಾಗಿಂದ್ರಿಯಕ್ಕೆ, ಅನುತ್ಪತ್ತಿಃ = ಉತ್ಪತ್ತಿ ಇಲ್ಲದಿರುವಿಕೆಯನ್ನು, ಉಚ್ಯತೇ = ಹೇಳಲಾಗಿದೆ.

**भाष्यम् – अतो ब्रवीति –**

**।। तत्पूर्वकत्वाद् वाचः ।।१।।**

**'तस्मान्मन एव पूर्वरूपं वागुत्तररूपम्' (ऐ.आ.३.१.१.) इति मनःपूर्वकत्वाद् वाचो नानुत्पत्तिः ।**

ಅನುವಾದ - ಈ ಆಕ್ಷೇಪಕ್ಕೆ ಸೂತ್ರಕಾರರು ಉತ್ತರಿಸುತ್ತಿದ್ದಾರೆ -

ಮನಸ್ಸು ಇಂದ್ರಿಯಗಳಿಗೆ ಕಾರಣವಾಗಿದೆ. ವಾಗಿಂದ್ರಿಯವು ಕಾರ್ಯವಾಗಿದೆ. ಆದ್ದರಿಂದ ಮನಸ್ಸಿನಿಂದ ಮೊದಲು ನಿರ್ಧಾರ ಮಾಡಿ ಅನಂತರ ವಾಗಿಂದ್ರಿಯದಿಂದ ಮಾತನಾಡುತ್ತವೆ. ಮನಸ್ಸು ಮೊದಲು ಇರುವುದರಿಂದ ವಾಗಿಂದ್ರಿಯಕ್ಕೆ ಉತ್ಪತ್ತಿ ಇರುತ್ತದೆ ಎಂದು ಹೇಳಬೇಕು.

ಪ್ರತಿಪದಾರ್ಥ:- ಅತಃ = ಇದಕ್ಕೆ ಉತ್ತರ ರೂಪದಲ್ಲಿ ಸೂತ್ರಕಾರರು ಹೇಳುತ್ತಿದ್ದಾರೆ -

ತಸ್ಮಾತ್ = ಆದ್ದರಿಂದ, ಮನಃ ಏವ = ಮನಸ್ಸೇ, ಪೂರ್ವರೂಪಂ = ಮೊದಲು ನಿರ್ಧಾರ ಮಾಡುತ್ತದೆ. ವಾಕ್ = ವಾಗಿಂದ್ರಿಯವು, ಉತ್ತರರೂಪಂ = ಅನಂತರ ಮಾತನಾಡುತ್ತದೆ. ಇತಿ = ಹೀಗೆ, ವಾಚಃ = ವಾಗಿಂದ್ರಿಯವು, ಮನಃಪೂರ್ವಕತ್ವಾತ್ = ಮನಃಪೂರ್ವಕವಾದ್ದರಿಂದ, ನ ಅನುತ್ಪತ್ತಿಃ = ಉತ್ಪತ್ತಿಯನ್ನು ಹೊಂದಿರುವುದಿಲ್ಲ.

**ತತ್‌ಪೂರ್ವಕತ್ವಾಧಿಕರಣ (೨-೪-೩)**

भाष्यम् –

'वागिन्द्रियस्य नित्यत्वं श्रुतिसन्निधियोग्यता ।
उत्पत्तिर्मनसो यस्मान्न नित्यत्वं कुतश्चन ।।' इति वायुप्रोक्ते ।।१।।

।। इति श्रीमदानन्दतीर्थभगवत्पादाचार्यविरचिते
ब्रह्मसूत्रभाष्ये तत्पूर्वकत्वाधिकरणम् ।। ३ ।।

ಅನುವಾದ - ವಾಗಿಂದ್ರಿಯಕ್ಕೆ ನಿತ್ಯತ್ವವನ್ನು ಕೆಲವು ಕಡೆ ಹೇಳಿದ್ದಾರೆ. ಉದ್ದೇಶವೇನೆಂದರೆ ಸೂಕ್ಷ್ಮಾವಸ್ಥೆಯಲ್ಲಿದ್ದಾಗ ನಿತ್ಯವಾದ ಶ್ರುತ್ಯುಚ್ಚಾರಣೆಯ ಯೋಗ್ಯತೆಯು ವಾಗಿಂದ್ರಿಯಕ್ಕೆ ಇರುತ್ತದೆ. ಆದ್ದರಿಂದ ಕೆಲವು ಶ್ರುತಿಗಳು ವಾಗಿಂದ್ರಿಯವು ನಿತ್ಯವೆಂದು ಹೇಳುತ್ತಿವೆ. ವಾಗಿಂದ್ರಿಯಕ್ಕೆ ಮನಸ್ಸು ಕಾರಣವಾಗಿದೆ. ಆದ್ದರಿಂದ ವಾಗಿಂದ್ರಿಯ ಎಂದೂ ಕೂಡ ನಿತ್ಯವಾಗಲು ಸಾಧ್ಯವಿಲ್ಲ. ಹೀಗೆ ವಾಯುಪ್ರೋಕ್ತದಲ್ಲಿದೆ.

ಪ್ರತಿಪದಾರ್ಥ -- ಅತಃ = ವಾಗಿಂದ್ರಿಯದ ನಿತ್ಯತ್ವದ ನಿರಾಕರಣೆಗಾಗಿ, ಬ್ರವೀತಿ = ಸೂತ್ರಕಾರರು ಹೇಳುತ್ತಿದ್ದಾರೆ. ತಸ್ಮಾತ್ = ವಾಗಿಂದ್ರಿಯಕ್ಕಿಂತ, ಪೂರ್ವರೂಪಂ = ಮೊದಲಿನ ರೂಪವು, ಮನಃಏವ = ಮನಸ್ಸೇ ಆಗಿರುತ್ತದೆ. ವಾಕ್ = ಮಾತು, ಉತ್ತರರೂಪಂ = ಮುಂದಿನ ವ್ಯಾಪಾರವಾಗಿದೆ. ಇತಿ = ಹೀಗೆ, ವಾಚಃ = ಮಾತಿಗೆ, ಮನಃಪೂರ್ವಕತ್ವಾತ್ = ಮನಸ್ಸು ಕಾರಣವಾದ್ದರಿಂದ, ಅನುತ್ಪತ್ತಿ ನ = ಅನುತ್ಪತ್ತಿಯು ಇರುವುದಿಲ್ಲ.

ವಾಗಿಂದ್ರಿಯಸ್ಯ = ವಾಗಿಂದ್ರಿಯಕ್ಕೆ, ನಿತ್ಯತ್ವಮ್ = ನಿತ್ಯತ್ವವು, ಶ್ರುತಿಸನ್ನಿಧಿಯೋಗ್ಯತಾ = ಶ್ರುತ್ಯುಚ್ಚಾರಣದ ಯೋಗ್ಯತೆಯು, ಯಸ್ಮಾತ್ = ಏಕೆಂದರೆ, ಮನಸಾ = ಮನಸ್ಸಿನಿಂದ, ಉತ್ಪತ್ತಿಃ = ವಾಗಿಂದ್ರಿಯಕ್ಕೆ ಉತ್ಪತ್ತಿಯು ಇರುತ್ತದೆ. ಕುತಶ್ಚ = ಯಾವುದೇ ಕಾರಣದಿಂದಲೂ, ನಿತ್ಯತ್ವಮ್ = ನಿತ್ಯತ್ವವು, ನ = ಇರುವುದಿಲ್ಲ. ಇತಿ = ಹೀಗೆ ವಾಯುಪ್ರೋಕ್ತೇ = ವಾಯುಪ್ರೋಕ್ತದಲ್ಲಿದೆ.

ಇಲ್ಲಿಗೆ ತತ್‌ಪೂರ್ವಕತ್ವಾಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

## ತತ್ವಪ್ರಕಾಶಿಕಾ

तत्वप्रकाशिका – अत्र जगत्कारणे हरौ श्रुतीनां समन्वयसिद्ध्यर्थं वागुत्पत्ति विषयश्रुतिविरोधपरिहारादस्ति शास्त्रादिसङ्गतिः । श्रुतिसमन्वयेन जगत्कारणत्वं

**विष्णोरुक्तम् । तद्वागुत्पत्तिविषयश्रुतिविरोधेनाप्रामाण्येऽनुपपन्नं स्यादिति तस्य निराकरणमावश्यकम् । प्रकृतेन्द्रियान्तःपाति वागिन्द्रियमत्र विषयः । उत्पत्तिमत्र वेति सन्देहः ।'सर्वेन्द्रियाणि च' 'न ह्येषोत्पद्यते' इति श्रुतिविगानं सन्देहबीजम् ।**

ಈ ಅಧಿಕರಣದಲ್ಲಿ ಜಗತ್ಕಾರಣನಾದ ಶ್ರೀಹರಿಯಲ್ಲಿ ಶ್ರುತಿಗಳ ಸಮನ್ವಯವು ಸಿದ್ಧವಾಗುವುದಕ್ಕಾಗಿ ವಾಗುತ್ಪತ್ತಿ ವಿಷಯಕವಾದ ಶ್ರುತಿವಿರೋಧವನ್ನು ಪರಿಹಾರ ಮಾಡಲಾಗಿದೆ. ಆದ್ದರಿಂದ ಶಾಸ್ತ್ರ-ಅಧ್ಯಾಯ-ಪಾದ ಸಂಗತಿಗಳು ಇರುತ್ತವೆ. ಶ್ರುತಿಸಮನ್ವಯದ ಮೂಲಕ ವಿಷ್ಣುವಿನಲ್ಲಿ ಜಗತ್ಕಾರಣತ್ವವನ್ನು ಸಮರ್ಥಿಸಲಾಯಿತು. ಇದು ವಾಗುತ್ಪತ್ತಿವಿಷಯಕವಾದ ಶ್ರುತಿವಿರೋಧವು ಬಂದಾಗ ಅಪ್ರಾಮಾಣ್ಯದ ಮೂಲಕ ಅನುಪಪನ್ನವಾಗುತ್ತದೆ. ಆದ್ದರಿಂದ ವಾಗುತ್ಪತ್ತಿ ವಿಷಯಕವಾದ ಶ್ರುತಿವಿರೋಧದ ನಿರಾಕರಣೆಯನ್ನು ಅವಶ್ಯವಾಗಿ ಮಾಡಲೇಬೇಕು.

ಪ್ರಕೃತವಾದ ಇಂದ್ರಿಯಗಳ ಮಧ್ಯದಲ್ಲಿರುವ ವಾಗಿಂದ್ರಿಯವು ಈ ಅಧಿಕರಣಕ್ಕೆ ವಿಷಯವಾಗಿದೆ. ವಾಗಿಂದ್ರಿಯಕ್ಕೆ ಉತ್ಪತ್ತಿ ಇದೆಯೋ ಇಲ್ಲವೋ? ಎಂಬುದು ಅಧಿಕರಣದ ಸಂದೇಹ. 'ಸರ್ವೇಂದ್ರಿಯಾಣಿ ಚ' ಎಂಬ ಶ್ರುತಿಯು ಹಾಗೂ 'ನ ಹ್ಯೇಷೋತ್ಪದ್ಯತೇ' ಎಂಬ ಶ್ರುತಿಯು ಪರಸ್ಪರ ವಿರುದ್ಧವಾಗಿರುವುದರಿಂದ ಸಂದೇಹಕ್ಕೆ ಬೀಜವಾಗಿದೆ.

ವಿವರಣೆ – 'ಮನಃ ಪೂರ್ವರೂಪಂ' ಎಂಬುದಾಗಿ ಮನಸ್ಸಿನ ವಿಚಾರದ ಅನಂತರ 'ವಾಗುತ್ತರರೂಪಂ' ಎಂದು ವಾಗಿಂದ್ರಿಯದ ವಿಚಾರವು ಪ್ರಸಕ್ತವಾಗಿದೆ. ಆದ್ದರಿಂದ ಮನೋಽಧಿಕರಣದ ಅನಂತರ ವಾಗಧಿಕರಣಕ್ಕೆ ಆನಂತರ್ಯ ಸಂಗತಿಯು ಯುಕ್ತವಾಗುತ್ತದೆ.

**तत्वप्रकाशिका – पूर्वपक्षयति – नित्ययेति ।। न वागुत्पत्तिमती । अनादित्वे श्रुतिसद्भावात् । न चेयं श्रुतिर्वेदविषया । समाख्याश्रुतौ नित्ययाऽनित्ययेत्यवतार्य 'श्रुतिर्वाव नित्या' इति व्याख्यातत्वात्सामान्यवाक्शब्दस्य विशेषार्थकल्पनोपपत्तेरुत्पत्तिश्रुत्यानुकूल्याच्चेति वाच्यम् । 'अस्यां हि श्रुतिरवतिष्ठते' इति वाक्यशेषादस्याविशेषश्रुतित्वात् । न हि श्रुतौ श्रुतिरवतिष्ठते।**

ಅಧಿಕರಣದ ಪೂರ್ವಪಕ್ಷವನ್ನು 'ನಿತ್ಯಯಾ' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ. ವಾಗಿಂದ್ರಿಯಕ್ಕೆ ಉತ್ಪತ್ತಿಯು ಇರುವುದಿಲ್ಲ. ವಾಗಿಂದ್ರಿಯವು ಅನಾದಿ ಎಂಬ ವಿಷಯದಲ್ಲಿ ಶ್ರುತಿಯು ಪ್ರಮಾಣವಾಗಿದೆ. ಈ ಶ್ರುತಿಯು ವೇದನಿತ್ಯತ್ವವನ್ನು ಹೇಳಲು ಹೊರಟಿಲ್ಲ. ಸಮಾಖ್ಯಾ ಶ್ರುತಿಯಲ್ಲಿ 'ನಿತ್ಯಯಾ ಅನಿತ್ಯಯಾಸ್ತೌ ಮಿ' ಎಂದು ಅವತಾರಿಕೆ ನೀಡಿ 'ಶ್ರುತಿರ್ವಾವ ನಿತ್ಯಾ' ಎಂಬುದಾಗಿ 'ಶ್ರುತಿಗಳು ನಿತ್ಯವಾಗಿವೆ, ಸ್ಮೃತಿಗಳು ಅನಿತ್ಯವಾಗಿವೆ' ಎಂದು ವ್ಯಾಖ್ಯಾನ ಮಾಡಲಾಗಿದೆ. ಇವೆರಡಲ್ಲೂ ಸಾಧಾರಣವಾದ ವಾಕ್ ಶಬ್ದಕ್ಕೆ ವಿಶೇಷಾರ್ಥವನ್ನು ಕಲ್ಪನೆ ಮಾಡಿದ್ದು ಯುಕ್ತವಾಗಿದೆ. ಆದ್ದರಿಂದ ಉತ್ಪತ್ತಿಯನ್ನು ಹೇಳುವ ಶ್ರುತಿಗೆ ಆನುಕೂಲ್ಯವೂ ಕೂಡ ಸಿದ್ಧವಾಗುತ್ತದಲ್ಲವೇ? ಹೀಗೆ ಪ್ರಶ್ನಿಸಬಾರದು. ಈ ಶ್ರುತಿಯ ಮುಂದೆ 'ಅಸ್ಯಾಂ ಹಿ ಶ್ರುತಿಃ

ಅವತಿಷ್ಠತೇ' ಎಂಬುದಾಗಿ ಹೇಳಿದ್ದರಿಂದ 'ವಾಗ್ವಾವ ನಿತ್ಯಾ' ಎಂಬ ಶ್ರುತಿಯು ವಿಶೇಷಶ್ರುತಿಯಾಗಿದೆ ಎಂದು ನಿರ್ಣಯ ಮಾಡಬಹುದು. ಏಕೆಂದರೆ ವೇದದಲ್ಲಿ ವೇದವಿರಲು ಸಾಧ್ಯವಿಲ್ಲವಷ್ಟೆ!

ವಿವರಣೆ – ವಾಗಿಂದ್ರಿಯಕ್ಕೆ ಉತ್ಪತ್ತಿಯನ್ನು ಹೇಳುವ ಅವಶ್ಯಕತೆ ಇಲ್ಲ, ಅನಾದಿ ಎಂದೇ ಹೇಳಬಹುದು. ಈ ವಿಷಯದಲ್ಲಿ 'ವಾಗ್ವಾವ ನಿತ್ಯಾ' ಎಂಬ ಶ್ರುತಿಯು ಆಧಾರವಾಗಿದೆ.

ಇದೇ ಪೈಂಗಿಶ್ರುತಿಯಲ್ಲಿ 'ನಿತ್ಯಯಾ ಅನಿತ್ಯಯಾ' ಎಂಬುದಾಗಿ ಹೇಳಿ ಶ್ರುತಿಗಳನ್ನು ನಿತ್ಯವೆಂದೂ, ಸ್ಮೃತಿಗಳನ್ನು ಅನಿತ್ಯವೆಂದೂ ಹೇಳಲಾಗಿದೆ. ಈ ಶ್ರುತಿಸ್ಮೃತಿಗಳಲ್ಲಿ ಸಾಧಾರಣವಾದದ್ದು ವಾಕ್ ಎಂಬುದು. ಆದ್ದರಿಂದ ವಾಗ್ವಾವ ನಿತ್ಯಾ ಎಂಬ ಶ್ರುತಿಯಲ್ಲಿರುವ ವಾಕ್ ಶಬ್ದಕ್ಕೆ ವಾಗಿಂದ್ರಿಯವೆಂದು ಅರ್ಥವನ್ನು ಮಾಡಬೇಕಾಗಿಲ್ಲ, ವೇದವೆಂದೇ ಅರ್ಥವನ್ನು ಮಾಡಬಹುದು. ಆದ್ದರಿಂದ 'ವಾಗ್ವಾವ ನಿತ್ಯಾ' ಎಂಬ ಶ್ರುತಿಗೆ ವಾಗಿಂದ್ರಿಯ ನಿತ್ಯವೆಂದು ಅರ್ಥವಲ್ಲ, ವೇದವು ನಿತ್ಯವೆಂದರ್ಥ.

ಹೀಗೆ ಪ್ರಶ್ನಿಸಬಾರದು. 'ಅಸ್ಯಾಂ ಹಿ ಶ್ರುತಿರವತಿಷ್ಠತೇ' ಎಂಬ ವಾಕ್ಯಶೇಷದಿಂದ 'ವಾಗ್ವಾವ ನಿತ್ಯಾ' ಎಂಬ ಶ್ರುತಿಯು ವೇದಪರವಲ್ಲವೆಂದು ತಿಳಿಯುತ್ತದೆ. ಒಂದುವೇಳೆ ವಾಕ್ ಶಬ್ದಕ್ಕೆ ವೇದ ಎಂದು ಅರ್ಥೈಸುವುದಾದರೆ ವೇದದಲ್ಲಿ ವೇದ ಇದೆ ಎಂದು ಹೇಳಿದಂತಾಗುತ್ತದೆ. ಇದು ಅತ್ಯಂತ ಅಸಂಭಾವಿತ. ಆದ್ದರಿಂದ ವಾಕ್ ಶಬ್ದಕ್ಕೆ ವಾಗಿಂದ್ರಿಯವೆಂದು ಅರ್ಥವನ್ನು ಮಾಡಬೇಕು. ಆಗ ವಾಗಿಂದ್ರಿಯದಲ್ಲಿ ವೇದವು ಇದೆ ಎಂಬರ್ಥವು ಸಮಂಜಸವಾಗುತ್ತದೆ.

**तत्वप्रकाशिका – किं चोत्पत्तिमत्त्वे वाचः श्रुतं श्रुत्याश्रयत्वं तस्या नोपपद्यते। न हि नित्याश्रयोऽनित्यः क्वचित् दृष्टः । अथापि स्यात् । सूक्ष्मरूपानादित्वपरा श्रुतिः किं न स्यात् । उत्पत्तिश्रुत्यानुकूल्यादुपचयोऽप्यस्तीति। मैवम् । श्रुतश्रुत्याश्रयत्वादेव । श्रुत्याश्रयत्वं नाम वाचो नित्यं श्रुत्युच्चारणसामर्थ्यम्। नित्यसर्वगतानां वर्णानामन्यथा विशिष्य वागाश्रयत्वोक्तिवैयर्थ्यात् । सदा वेदोच्चारणसमर्थाया वाचो व्यर्थमुपचयकल्पनम् । अतः सयुक्तिकविशेष-श्रुतिविरोधादप्रामाण्यं वागुत्पत्तिश्रुतेरतो न श्रुतिसमन्वयेन हरेर्जगत्कारणत्वसिद्धिरिति भावः ।**

ಮತ್ತು ವಾಗಿಂದ್ರಿಯಕ್ಕೆ ಉತ್ಪತ್ತಿಯನ್ನು ಹೇಳುವುದಾದರೆ ಶ್ರುತವಾದ ಶ್ರುತ್ಯಾಶ್ರಯತ್ವವು ವಾಗಿಂದ್ರಿಯಕ್ಕೆ ಉಪಪನ್ನವಾಗುವುದಿಲ್ಲ. ಏಕೆಂದರೆ ನಿತ್ಯವಾದ ವೇದಕ್ಕೆ ಅನಿತ್ಯವಾದದ್ದು ಆಶ್ರಯವಾಗಿರುವುದು ಲೋಕದಲ್ಲಿ ಎಲ್ಲೂ ಕೂಡ ಕಂಡಿಲ್ಲ. ಇನ್ನು ಹೀಗೆ ಪ್ರಶ್ನಿಸಬಹುದು - ಸೂಕ್ಷ್ಮರೂಪವಾದ ಇಂದ್ರಿಯಕ್ಕೆ ಶ್ರುತಿಯು ಅನಾದಿತ್ವವನ್ನು ಹೇಳುತ್ತಿದೆ ಎಂದು ಏಕೆ ಹೇಳಬಾರದು. ಉತ್ಪತ್ತಿ ಶ್ರುತಿಯ ಅನುಕೂಲ್ಯವಿರುವುದರಿಂದ ಉಪಚಯವನ್ನೂ ಕೂಡ ಹೇಳಬಹುದಲ್ಲವೇ?

ಹೀಗೆ ಪ್ರಶ್ನಿಸಬಾರದು. ವಾಗಿಂದ್ರಿಯವು ವೇದಕ್ಕೆ ಆಶ್ರಯವಾಗಿದೆ ಎಂದು ಶ್ರುತಿಪ್ರಮಾಣವಿದೆ. ವೇದಕ್ಕೆ ಆಶ್ರಯವಾಗುವಿಕೆ ಎಂದರೆ ನಿತ್ಯವಾಗಿಯೂ ವೇದವನ್ನು ಉಚ್ಚಾರ ಮಾಡುವ ಸಾಮರ್ಥ್ಯ

ಹೊಂದಿದೆ ಎಂದರ್ಥ. ಹೀಗೊಪ್ಪದಿದ್ದರೆ ನಿತ್ಯವಾದ ಮತ್ತು ಎಲ್ಲೆಡೆಯೂ ವ್ಯಾಪ್ತವಾದ ವರ್ಣಗಳು ವಾಗಿಂದ್ರಿಯವನ್ನು ಆಶ್ರಯಿಸಿವೆ ಎಂಬ ವಿಶೇಷವಚನವೂ ಕೂಡ ವ್ಯರ್ಥವಾಗುವುದರಿಂದ ಅನುಪಪನ್ನವಾಗುತ್ತದೆ. ಆಗ ಯಾವಾಗಲೂ ವೇದೋಚ್ಚಾರಣೆಯ ಸಾಮರ್ಥ್ಯವನ್ನು ಹೊಂದಿರುವ ವಾಗಿಂದ್ರಿಯಕ್ಕೆ ಉಪಚಯವನ್ನು ಕಲ್ಪನೆ ಮಾಡುವುದೂ ಕೂಡ ವ್ಯರ್ಥವಾಗುತ್ತದೆ.

ಹೀಗೆ ಯುಕ್ತಿಬದ್ಧವಾದ ವಿಶೇಷಶ್ರುತಿಯ ವಿರೋಧವಿರುವುದರಿಂದ ವಾಗುತ್ಪತ್ತಿಶ್ರುತಿಗೆ ಅಪ್ರಾಮಾಣ್ಯವನ್ನೇ ಹೇಳಬೇಕು. ಹಾಗಾಗಿ ಶ್ರುತಿಸಮನ್ವಯದ ಮೂಲಕ ಶ್ರೀಹರಿಗೆ ಜಗತ್ಕಾರಣತ್ವವು ಸಿದ್ಧವಾಗುವುದಿಲ್ಲ. ಇಷ್ಟು ಅಧಿಕರಣದ ಪೂರ್ವಪಕ್ಷ.

**तत्वप्रकाशिका – सिद्धान्तयत्सूत्रमवतार्य व्याचष्टे – अत इति ।। वागुत्पत्तिमत्येव । 'मनः पूर्वरूपं वागुत्तररूपम्' इति मनोलक्षणकारणवत्त्वश्रुतेः। कारणवतश्च कार्यतानियमात् । न च वाक्शब्दस्य साधारणत्वाद् व्याहरणार्थता । 'वाचा व्याहरति' इति पूर्ववाक्यबलेनेन्द्रियार्थत्वे विशेषश्रुतित्वादिति भावः ।**

ಸಿದ್ಧಾಂತ ಸ್ಥಾಪಕವಾದ ಸೂತ್ರಕ್ಕೆ 'ಅತಃ' ಎಂದು ಅವತಾರಿಕೆ ನೀಡಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಾಗಿಂದ್ರಿಯಕ್ಕೆ ಉತ್ಪತ್ತಿಯು ಇದ್ದೇ ಇದೆ. 'ಮನಃ ಪೂರ್ವರೂಪಂ ವಾಗುತ್ತರರೂಪಂ' ಎಂಬ ಶ್ರುತಿಯಲ್ಲಿ ಮನಸ್ಸು ಕಾರಣವುಳ್ಳದ್ದಾಗಿದೆ ಎಂದು ಹೇಳಲಾಗಿದೆ. ಯಾವುದು ಕಾರಣವುಳ್ಳದ್ದೋ ಅದಕ್ಕೊಂದು ಕಾರ್ಯವಿರಲೇಬೇಕೆಂದು ನಿಯಮವಿದೆ. ವಾಕ್ ಶಬ್ದವು ಸಾಧಾರಣವಾದ್ದರಿಂದ ಮಾತನಾಡುವಿಕೆ ಎಂಬರ್ಥವನ್ನು ಹೊಂದುವುದಿಲ್ಲ. ಏಕೆಂದರೆ 'ವಾಚಾ ವ್ಯವಹರತಿ' ಎಂಬುದಾಗಿ ಹಿಂದಿನ ವಾಕ್ಯದಲ್ಲಿ ಹೇಳಿದ್ದರಿಂದ ಇದರ ಬಲದಿಂದ ವಾಕ್ ಶಬ್ದಕ್ಕೆ ವಾಗಿಂದ್ರಿಯ ಎಂಬ ಅರ್ಥದಲ್ಲಿ ಇದು ವಿಶೇಷಶ್ರುತಿ ಎಂದೇ ತಿಳಿಯಬೇಕು.

**तत्वप्रकाशिका – अत्र श्रुतौ पूर्वोत्तरशब्दौ कारणकार्यपरौ । वागिन्द्रियस्योत्पत्तिपक्षे श्रुत्यादिविरोध इत्यत आह – वागिन्द्रियस्येति ।। नित्यश्रुतिसन्निधानान्नित्यत्वोपचारो न तु नित्यत्वम् । न च नित्याश्रयत्वादेव नित्यत्वम्। यतो नितयाश्रयत्वं न नित्यदाऽपि तु तद्योग्यतैव । अत एव नोपचयवैयर्थ्य चेति भावः ।**

ಈ ಶ್ರುತಿಯಲ್ಲಿರುವ ಪೂರ್ವೋತ್ತರ ಶಬ್ದಗಳಿಗೆ ಕಾರಣಕಾರ್ಯ ಎಂದರ್ಥ. ವಾಗಿಂದ್ರಿಯಕ್ಕೆ ಉತ್ಪತ್ತಿಯನ್ನು ಹೇಳುವ ಪಕ್ಷದಲ್ಲಿ ಶ್ರುತ್ಯಾದಿವಿರೋಧವು ಬರುತ್ತದಲ್ಲವೇ? ಎಂಬ ಪ್ರಶ್ನೆಗೆ ವಾಗಿಂದ್ರಿಯಸ್ಯ ಇತ್ಯಾದಿಯಾಗಿ ಉತ್ತರವನ್ನು ನೀಡಿದ್ದಾರೆ. ವಾಗಿಂದ್ರಿಯವು ನಿತ್ಯವಲ್ಲ, ಹೊರತಾಗಿ ನಿತ್ಯದಲ್ಲಿಯೂ ಶ್ರುತಿಯ ಸನ್ನಿಧಾನವನ್ನು ಹೊಂದಿರುವುದರಿಂದ ಅದರಲ್ಲಿ ನಿತ್ಯತ್ವದ

ಪ್ರಯೋಗವನ್ನು ಔಪಚಾರಿಕವಾಗಿ ಮಾಡಲಾಗಿದೆ. ನಿತ್ಯವಾಗಿದೆ ಎಂಬ ಅಭಿಪ್ರಾಯದಿಂದಲ್ಲ. ನಿತ್ಯವಾದ ಶ್ರುತಿಗೆ ಆಶ್ರಯವಾಗಿದೆ ಎಂಬ ಕಾರಣದಿಂದ ವಾಗಿಂದ್ರಿಯಕ್ಕೆ ನಿತ್ಯತ್ವವು ಬರಲು ಸಾಧ್ಯವಿಲ್ಲ. ಏಕೆಂದರೆ ನಿತ್ಯಾಶ್ರಯತ್ವ ಎಂದರೆ ನಿತ್ಯದಲ್ಲಿಯೂ ಆಶ್ರಯವಾಗಿರುವಿಕೆ ಎಂಬರ್ಥವಲ್ಲ. ಕೇವಲ ಯೋಗ್ಯತೆ ಇರುವುದು ಎಂದಷ್ಟೇ ಅರ್ಥ. ಆದ್ದರಿಂದಲೇ ವಾಗಿಂದ್ರಿಯವು ಉಪಚಯವಾಯಿತು ಎಂದು ಹೇಳಿದ್ದಕ್ಕೆ ವೈಯರ್ಥ್ಯವು ಬರುವುದಿಲ್ಲ.

**तत्वप्रकाशिका – मनसः सकाशात् । एवमभ्युपगम एव नित्यत्वश्रुतिः श्रुत्याश्रयत्वश्रुतिरप्युपपन्ना न नित्यत्वे । तस्या अप्येतदर्थत्वात् । 'वाग्वाव नित्या' इत्युक्ते तत्कथमित्याशङ्कायामुपचारोऽयमित्युपचारबीजं त्वुच्यते – अस्यां हीति ।**

ಭಾಷ್ಯದಲ್ಲಿರುವ 'ಮನಸಃ' ಎಂದರೆ ಮನಸ್ಸಿನ ದೆಸೆಯಿಂದ ಎಂದರ್ಥ. ಹೀಗೆ ವಾಗಿಂದ್ರಿಯಕ್ಕೆ ಔಪಚಾರಿಕವಾದ ನಿತ್ಯತ್ವವನ್ನು ಒಪ್ಪಿದರೆ ಮಾತ್ರ 'ಅಸ್ಯಾಂ ಹಿ ಶ್ರುತಿಃ ಅವತಿಷ್ಠತೇ' ಎಂಬಲ್ಲಿ ಹೇಳಲ್ಪಟ್ಟ ಶ್ರುತ್ಯಾಶ್ರಯತ್ವವು ವಾಗಿಂದ್ರಿಯಕ್ಕೆ ಉಪಪನ್ನವಾಗುತ್ತದೆ. ವಾಗಿಂದ್ರಿಯಕ್ಕೆ ನಿತ್ಯತ್ವವನ್ನು ಒಪ್ಪಿದರೆ ಇದು ಯುಕ್ತವಾಗುವುದಿಲ್ಲ. 'ವಾಗ್ವಾವ ನಿತ್ಯಾ' ಎಂಬ ಶ್ರುತಿಗೂ ಕೂಡ ಇದೇ ರೀತಿಯಲ್ಲಿ ಅರ್ಥವನ್ನು ಮಾಡಬೇಕು. 'ವಾಗ್ವಾವ ನಿತ್ಯಾ' ವಾಗಿಂದ್ರಿಯವು ನಿತ್ಯ ಎಂಬುದಾಗಿ ಪ್ರತಿಜ್ಞೆಯನ್ನು ಮಾಡಿದಾಗ ಇದು ಹೇಗೆ? ಎಂಬ ಆಶಂಕೆಯು ಪ್ರಾಪ್ತವಾಗುತ್ತದೆ. ಆಗ ವಾಗಿಂದ್ರಿಯದಲ್ಲಿ ಹೇಳಲ್ಪಟ್ಟ ನಿತ್ಯತ್ವವು ಗೌಣವಾದದ್ದೇ ಹೊರತು ಮುಖ್ಯವಾದದ್ದಲ್ಲ ಎಂಬುದಾಗಿ ಗೌಣಾರ್ಥಕ್ಕೆ ಕಾರಣವನ್ನು ಕಲ್ಪನೆ ಮಾಡಬಹುದು. ಹೀಗೆ ಔಪಚಾರಿಕಾರ್ಥಕ್ಕೆ ಕಾರಣವನ್ನು 'ಅಸ್ಯಾಂ ಹಿ' ಇತ್ಯಾದಿಯಾಗಿ ಹೇಳಿದ್ದಾರೆ.

**तत्वप्रकाशिका – एवं च सति वेदाश्रयत्वेन नित्यया पुराणाद्याश्रयत्वेन चानित्ययेति वाक्यार्थो घटते । एवं च समाख्यानुरोधः । अन्यथा न वाक्यार्थोपपत्तिः । अतः श्रुत्यविरोधेनेत्पत्तिसिद्धेर्वाचो युक्तः श्रुतिसमन्वयो जगत्कारणे हराविति सिद्धम् ।।**

ಹೀಗೆ ವಾಗಿಂದ್ರಿಯವು ವೇದಕ್ಕೆ ಆಶ್ರಯವಾದ್ದರಿಂದ ನಿತ್ಯವೆಂದೂ, ಮತ್ತು ಪುರಾಣಾದಿಗಳಿಗೆ ಆಶ್ರಯವಾದ್ದರಿಂದ ಅನಿತ್ಯವೆಂದು ಶ್ರುತಿಯು ಹೇಳುತ್ತಿದೆ. ಹೀಗೆ ಹೇಳಿದಾಗ ಸಮಾಖ್ಯಾ ಶ್ರುತಿಯನ್ನೂ ಕೂಡ ಅನುಸರಿಸಿದಂತಾಗುತ್ತದೆ. ಹೀಗೊಪ್ಪದಿದ್ದರೆ ಶ್ರುತ್ಯರ್ಥವೇ ಉಪಪನ್ನವಾಗುವುದಿಲ್ಲ.

ಹೀಗೆ ಶ್ರುತಿಯ ವಿರೋಧವಿಲ್ಲದ್ದರಿಂದ ವಾಗಿಂದ್ರಿಯಕ್ಕೆ ಉತ್ಪತ್ತಿಯು ಸಿದ್ಧವಾಯಿತು. ಆದ್ದರಿಂದ ಜಗತ್ಕಾರಣನಾದ ವಿಷ್ಣುವಿನಲ್ಲಿ ಶ್ರುತಿಸಮನ್ವಯವು ಯುಕ್ತವೆಂದು ಸಾಧಿತವಾಯಿತು.

ಇಲ್ಲಿಗೆ ತತ್ತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ತತ್ ಪೂರ್ವಕತ್ವಾಧಿಕರಣ ಮುಗಿಯಿತು

ಪರಿಪೂರ್ಣಚಂದ್ರಿಕಾ

## ತತ್ಪೂರ್ವಕತ್ವಾಧಿಕರಣ
## (೨-೪-೩)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,
ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## तत्पूर्वकत्वाधिकरणम्

### ವಾಗಿಂದ್ರಿಯವೂ ಕೂಡ ಅನಿತ್ಯವೇ ಆಗಿದೆ

**।। तत्पूर्वकत्वाद्वाचः ।। अत्रोक्तं ब्रह्मण; सर्वस्रष्टृत्वं किं वाङ्नित्यत्व श्रुतिविरुद्धं नवेति चिन्ता । तदर्थं वाङ्नित्यत्वश्रुतिर्मुख्यार्थोत गौणीति ।**

ಈ ಅಧಿಕರಣದಲ್ಲಿ ಬ್ರಹ್ಮನ ಸರ್ವಸ್ರಷ್ಟೃತ್ವಕ್ಕೆ ವಾಗಿಂದ್ರಿಯಕ್ಕೆ ನಿತ್ಯತ್ವ ಹೇಳುವ ಶ್ರುತಿವಿರೋಧ ಇದೆಯೋ ಇಲ್ಲವೋ? ಎಂಬ ವಿಚಾರವನ್ನು ಮಾಡಲಾಗುತ್ತಿದೆ. ಒಂದುವೇಳೆ ವಾಗಿಂದ್ರಿಯವು ನಿತ್ಯವಾದರೆ ಸರ್ವಸ್ರಷ್ಟೃತ್ವವು ಬ್ರಹ್ಮನಿಗೆ ಕೂಡುವುದಿಲ್ಲ. ಆಗ ಜನ್ಮಾಧಿಕರಣದಲ್ಲಿ ಹೇಳಲ್ಪಟ್ಟ ಪ್ರಮೇಯವು ವಿರುದ್ಧವಾಗುತ್ತದೆ. ಆದ್ದರಿಂದ ವಾಗಿಂದ್ರಿಯವನ್ನು ಸೃಷ್ಟಿ ಮಾಡುತ್ತಾನೋ ಇಲ್ಲವೋ? ಎಂಬ ವಿಚಾರವನ್ನು ಮಾಡಲೇಬೇಕು. ಅದಕ್ಕಾಗಿ ವಾಙ್‌ನಿತ್ಯತ್ವಶ್ರುತಿಯು ಮುಖ್ಯವಾದ ಅರ್ಥವುಳ್ಳದ್ದೋ ಅಥವಾ ಗೌಣವಾದ ಅರ್ಥವುಳ್ಳದ್ದೋ? ಎಂಬುದರ ವಿಚಾರವನ್ನು ಮಾಡಬೇಕು.

**तदर्थं गौणत्वे ''अस्यां हि श्रुतिरवतिष्ठते'' इति श्रुतं नित्यवेदाश्रयत्वमयुक्तमुत युक्तमिति । तदर्थं वेदाश्रयत्वं किं वेदोच्चारणसामर्थ्यं किं वा तत्सन्निधियोग्यतेति ।**

ಈ ಸಂದರ್ಭದಲ್ಲಿ ಪೂರ್ವಪಕ್ಷಿಯು ವಾಗಿಂದ್ರಿಯಕ್ಕೆ ನಿತ್ಯತ್ವವನ್ನೇ ಹೇಳಬೇಕು ಎನ್ನುತ್ತಾನೆ. ಒಂದುವೇಳೆ ವಾಙ್‌ನಿತ್ಯತ್ವಶ್ರುತಿಗೆ ಗೌಣಾರ್ಥವನ್ನು ಹೇಳಿದರೆ ಆಗ 'ಅಸ್ಯಾಂ ಹಿ ಶ್ರುತಿರವತಿಷ್ಠತೇ' ಎಂಬ ಶ್ರುತಿಯಲ್ಲಿ ನಿತ್ಯವಾದ ವೇದಕ್ಕೆ ಆಶ್ರಯತ್ವವನ್ನು ಹೇಳಿದ್ದು ಅಯುಕ್ತವಾಗುತ್ತದೆ. ಇದರ ಅನ್ಯಥಾನುಪಪತ್ತಿಯಿಂದ ನಿತ್ಯತ್ವಶ್ರುತಿಯು ಮುಖ್ಯಾರ್ಥವುಳ್ಳದ್ದು ಎಂದೇ ಹೇಳಬೇಕೆನ್ನುತ್ತಾನೆ ಪೂರ್ವಪಕ್ಷಿ. ಸಿದ್ಧಾಂತದಲ್ಲಿ ಈ ಶ್ರುತಿಗೆ ಗೌಣಾರ್ಥವನ್ನು ಮಾಡಿದಾಗಲೂ ಕೂಡ ವೇದಾಶ್ರಯತ್ವವು ಯುಕ್ತವಾಗುತ್ತದೆ ಎಂಬುದಾಗಿ ಸಮರ್ಥನೆ ಮಾಡಲಾಗುತ್ತದೆ. ಆದ್ದರಿಂದ ವೇದಾಶ್ರಯತ್ವವು ವಾಗಿಂದ್ರಿಯಕ್ಕೆ ಅಯುಕ್ತವೋ ಅಥವಾ ಯುಕ್ತವೋ? ಎಂಬುದರ ಬಗ್ಗೆ ವಿಚಾರ ಮಾಡಬೇಕು.

ನಿತ್ಯಭೂತವಾದ ವೇದಕ್ಕೆ ಆಶ್ರಯವಾಗಿರುವಿಕೆ ಎಂದರೆ ಏನರ್ಥ? ಕ್ರಮವಿಶೇಷವಿಶಿಷ್ಟವಾದ ವರ್ಣಗಳ ಸಮೂಹವೇ ವೇದ ಎಂದು ಕರೆಸಿಕೊಳ್ಳುತ್ತದೆ. ವೇದದ ಉಚ್ಚಾರಣಸಾಮರ್ಥ್ಯವೆಂದೋ ಅಥವಾ ವೇದದ ಸನ್ನಿಧಿ ಯೋಗ್ಯತೆ ಇರುವಿಕೆ ಎಂದೋ? ಇದರ ಬಗ್ಗೆ ವಿಚಾರ ಮಾಡಬೇಕು.

**सामर्थ्यरूपत्वे सदा वेदोच्चारणसमर्थस्य वागिन्द्रियस्योपचयकल्पनं व्यर्थमिति नित्यत्वश्रुतिर्मुख्यार्था । अन्यथा तु गौणी ।**

ವೇದದ ಉಚ್ಚಾರಣೆಯ ಸಾಮರ್ಥ್ಯವನ್ನು ಹೊಂದಿರುವಿಕೆಯೇ ವೇದಾಶ್ರಯತ್ವ ಎಂದು ವಿವಕ್ಷಿಸುವುದಾದರೆ ಆಗ ಮುಖ್ಯವಾದ ಮುಖ್ಯನಿತ್ಯತ್ವವನ್ನೇ ಹೇಳಬೇಕು. ಏಕೆಂದರೆ ಪ್ರಳಯಕಾಲದಲ್ಲಿ ಎಲ್ಲಾ ಇಂದ್ರಿಯಗಳು ಸೂಕ್ಷ್ಮರೂಪದಲ್ಲಿದ್ದು ಸೃಷ್ಟಿಕಾಲದಲ್ಲಿ ಉಪಚಯವನ್ನು ಹೊಂದುತ್ತವೆ ಎಂದು ಹೇಳುತ್ತೇವೆ. ಆದರೆ ವಾಗಿಂದ್ರಿಯಕ್ಕೆ ಮಾತ್ರ ಹೀಗೆ ಹೇಳಬಾರದು. ನಿತ್ಯದಲ್ಲಿಯೂ ಕೂಡ ಈ ವಾಗಿಂದ್ರಿಯಕ್ಕೆ ವೇದೋಚ್ಚಾರಣಸಾಮರ್ಥ್ಯವಿದೆ ಎಂದು ಒಪ್ಪಿದ ಮೇಲೆ ಸೃಷ್ಟಿಕಾಲದಲ್ಲಿ ಅದಕ್ಕೆ ಉಪಚಯವನ್ನು ಕೂಡ ಕಲ್ಪನೆ ಮಾಡುವುದು ಅಸಾಧುವಾಗುತ್ತದೆ. ಅಥವಾ ವೇದಕ್ಕೆ ಆಶ್ರಯವಾಗಿರುವಾಗಿರುವಿಕೆ ಎಂದರೆ 'ತತ್ಸನ್ನಿಧಿಯೋಗ್ಯತಾ' ಎಂದರ್ಥ. ಯೋಗ್ಯತಾ ಎಂದರೆ 'ಸಹಕಾರಿವಿರಹಪ್ರಯುಕ್ತಕಾರ್ಯಾಭಾವಃ' ಎಂದರ್ಥ. ಇಲ್ಲಿ ಉಪಚಯವೆಂಬ ಸಹಕಾರಿ ಇದ್ದಾಗ ಮಾತ್ರ ಉಚ್ಚಾರಣೆಯು ಉಂಟಾಗುತ್ತದೆ, ಇಲ್ಲದಿದ್ದರೆ ಆಗುವುದಿಲ್ಲ. ಆದ್ದರಿಂದ ಉಪಚಯವನ್ನು ಕಲ್ಪನೆ ಮಾಡುವುದು ಸಾರ್ಥಕವಾಗುತ್ತದೆ. ಮತ್ತು ಇದರಿಂದ ನಿತ್ಯತ್ವಶ್ರುತಿಯು ಗೌಣವಾಗುತ್ತದೆ. ಹೀಗೆ ಫಲಫಲಿಭಾವವನ್ನೇ ಸಾಮರ್ಥ್ಯರೂಪತ್ವ ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. 'ಅನ್ಯಥಾ ತು' ಎಂದರೆ ಸಾಮರ್ಥ್ಯರೂಪವೆಂದು ಹೇಳದೇ ಸನ್ನಿಧಿ ಯೋಗ್ಯತಾ ರೂಪವೆಂದು ಹೇಳಿದರೆ ನಿತ್ಯತ್ವಶ್ರುತಿಯು ಗೌಣಾರ್ಥವುಳ್ಳದ್ದಾಗುತ್ತದೆ ಎಂದರ್ಥ.

**''नच विशेषश्रुतिविरोधः'' इति पूर्वपक्षन्यायविवरणे विशेषश्रुतिर्नाम नाद्याधिकरण इव विशिष्य धर्मिनिर्देशमात्रम् । तत्साङ्कर्यात् ।**

'ನಚ ವಿಶೇಷಶ್ರುತಿವಿರೋಧಃ' ಎಂಬ ಪೂರ್ವಪಕ್ಷನ್ಯಾಯವಿವರಣದಲ್ಲಿ ವಿಶೇಷಶ್ರುತಿ ಎಂದರೆ ಮೊದಲನೆಯ ಅಧಿಕರಣದಂತೆ ವಿಶೇಷವಾಗಿ ಧರ್ಮಿನಿರ್ದೇಶವೆಂದಷ್ಟೇ ಅರ್ಥವಲ್ಲ. ಹಾಗೆ ಹೇಳಿದರೆ ಪ್ರಸಮಾಧಿಕರಣದಿಂದ ಸಾಂಕರ್ಯ ಬರುತ್ತದೆಂದು ಹೇಳಿದ್ದಾರೆ.

ವಿವರಣೆ – ಈ ಅಧಿಕರಣದಲ್ಲಿ ವಿಶೇಷಶ್ರುತಿವಿರೋಧ ಎಂದರೆ ಏನರ್ಥ ಎಂಬುದನ್ನು ಇಲ್ಲಿ ವಿಚಾರ ಮಾಡಲಾಗಿದೆ. ಪ್ರಥಮಾಧಿಕರಣದಲ್ಲಿ ಇಂದ್ರಿಯಾದಿಗಳನ್ನು ಧರ್ಮಿ ಎಂದು ಪರಿಗಣಿಸಿ 'ಪ್ರಾಣಾ ಏವ ಅನಾದಯಃ ಪ್ರಾಣಾ ಏವ ನಿತ್ಯಾಃ' ಎಂಬುದಾಗಿ ನಿತ್ಯತ್ವವನ್ನು ಹೇಳಿದ್ದಾರೆ. ಇಲ್ಲಿಯೂ ಕೂಡ ಅದೇ ಅರ್ಥವನ್ನು ಹೇಳಿದರೆ ಎರಡೂ ಅಧಿಕರಣಗಳ ಪೂರ್ವಪಕ್ಷನ್ಯಾಯವು ಒಂದೇ ಆಗುವುದರಿಂದ ಗತಾರ್ಥವಾಗುತ್ತದೆ.

**नापि द्वितीय इवान्येषामनित्यत्वोक्तिः । तत्साङ्कर्यादेव । भाष्योक्ते ''नित्यया'' इत्यादिविशेषवाक्ये तदभावाच्च । किन्तु निरवकाशवाक्यशेषसाहित्यमपीत्याह – वाक्यशेषादिति ।।**

ತತ್‌ಪೂರ್ವಕತ್ವಾಧಿಕರಣ (೨-೪-೩)

ಇನ್ನು ಎರಡನೆಯ ಅಧಿಕರಣದಂತೆ ಬೇರೆ ಇಂದ್ರಿಯಗಳಿಗೆ ಅನಿತ್ಯತ್ವವನ್ನು ಹೇಳುವ ಮೂಲಕವಾಗಿ ವಾಗಿಂದ್ರಿಯಕ್ಕೆ ನಿತ್ಯತ್ವವನ್ನು ಹೇಳುವಿಕೆಯೇ ವಿಶೇಷಶ್ರುತಿವಿರೋಧ ಎಂದು ಕರೆಸಿಕೊಳ್ಳುತ್ತದೆ ಎಂದು ಹೇಳುವುದೂ ಕೂಡ ತಪ್ಪು. ದ್ವಿತೀಯಾಧಿಕರಣದಲ್ಲೇ ಈ ಪೂರ್ವಪಕ್ಷನ್ಯಾಯವನ್ನು ಹೇಳಿದ್ದರಿಂದ ಗತಾರ್ಥತ್ವದೋಷವು ಬರುತ್ತದೆ. ಮತ್ತು 'ನಿತ್ಯಯಾ ಅನಿತ್ಯಯಾ ಸೌಮಿ' ಎಂಬುದಾಗಿ ಭಾಷ್ಯದಲ್ಲಿ ಯಾವ ವಿಶೇಷವಾಕ್ಯವನ್ನು ಉಲ್ಲೇಖ ಮಾಡಿದ್ದರೋ ಇದರಲ್ಲಿ ಬೇರೆ ಇಂದ್ರಿಯಗಳಿಗೆ ಅನಿತ್ಯತ್ವವನ್ನು ಹೇಳುವ ಮೂಲಕ ವಾಗಿಂದ್ರಿಯಕ್ಕೆ ನಿತ್ಯತ್ವವನ್ನು ಹೇಳಬೇಕೆಂಬ ಅರ್ಥವು ಕಾಣಸುತ್ತಿಲ್ಲ. ಆದ್ದರಿಂದ ಹಿಂದಿನ ಎರಡು ಅಧಿಕರಣದಲ್ಲಿ ಮಾಡಿದ ಅರ್ಥವನ್ನು ಇಲ್ಲಿ ವಿವಕ್ಷಿಸಲೇಬಾರದು. ನಿರವಕಾಶವಾಕ್ಯಶೇಷಸಾಹಿತ್ಯವನ್ನೇ ವಿಶೇಷಶ್ರುತಿವಿರೋಧ ಎಂದು ವಿವಕ್ಷಿಸಬೇಕು. 'ಅಸ್ಯಾಂ ಹಿ ಶ್ರುತಿರವತಿಷ್ಠತೇ' ಎಂಬ ವಾಕ್ಯಶೇಷವು ನಿರವಕಾಶವಾಗಿದೆ. ಇದೇ ವಿಶೇಷಶ್ರುತಿ ಎಂದು ಕರೆಸಿಕೊಳ್ಳುತ್ತದೆ ಎಂಬುದನ್ನು 'ವಾಕ್ಯಶೇಷಾತ್' ಇತ್ಯಾದಿ ಶ್ರುತಿಯಿಂದ ಸಮರ್ಥನೆ ಮಾಡುತ್ತಿದ್ದಾರೆ.

**''विशेषश्रुतेः'' इति सिद्धान्तन्यायविवरणे पूर्वाधिकरणयोरिव विशिष्य कीर्तनमात्रं न विवक्षितम् । किन्तु निरवकाशवाक्यशेषसाहित्यमपीत्याह – पूर्ववाक्यबलेनेति ।।**

ಈ ಅಧಿಕರಣದಲ್ಲಿ ವಿಶೇಷಶ್ರುತಿ ಎಂಬುದೇ ಸಿದ್ಧಾಂತ ನ್ಯಾಯವಾಗಿದೆ. ಇದನ್ನು ವಿವರಣೆ ಮಾಡುವ ಸಂದರ್ಭದಲ್ಲಿ ಹೀಗೆ ಹೇಳಿದ್ದಾರೆ – ಹಿಂದಿನ ಎರಡು ಅಧಿಕರಣಗಳಲ್ಲಿ 'ಏತಸ್ಮಾಜ್ಜಾಯತೇ ಪ್ರಾಣಃ ಮನಃ' ಎಂಬುದಾಗಿ ವಿಶೇಷವಾಗಿ ಧರ್ಮಿನಿರ್ದೇಶ ಮಾಡಿದ್ದಾರೆ. ಅದೇ ರೀತಿಯಲ್ಲಿ ಈ ಅಧಿಕರಣದಲ್ಲೂ ಕೂಡ ವಾಗಿಂದ್ರಿಯವನ್ನು ವಿಶೇಷವಾಗಿ ಧರ್ಮಿನಿರ್ದೇಶ ಮಾಡಿದ್ದಾರೆ ಎಂಬರ್ಥವನ್ನು ವಿವಕ್ಷಿಸಿದರೆ ಹಿಂದಿನ ಅಧಿಕರಣಗಳ ಸಿದ್ಧಾಂತನ್ಯಾಯದಿಂದ ಇದು ಗತಾರ್ಥವಾಗುತ್ತದಲ್ಲವೇ? ಎಂದು ಪ್ರಶ್ನೆ ಬಂದರೆ ನಿರವಕಾಶವಾಕ್ಯಶೇಷಸಾಹಿತ್ಯವನ್ನೇ 'ವಿಶೇಷಶ್ರುತಿ' ಎಂಬುದಕ್ಕೆ ಅರ್ಥವನ್ನು ಮಾಡಬೇಕು. ಪೂರ್ವಪಕ್ಷದಲ್ಲಿ ಮಾತ್ರವಲ್ಲದೇ ಸಿದ್ಧಾಂತದಲ್ಲೂ ಕೂಡ ಅದೇ ಅರ್ಥವನ್ನು ವಿವಕ್ಷಿಸಬೇಕು ಎಂಬುದನ್ನು ಟೀಕೆಯಲ್ಲಿ 'ಪೂರ್ವವಾಕ್ಯಬಲೇನ' ಎಂಬುದರಿಂದ ಸಮರ್ಥಿಸಿದ್ದಾರೆ.

**उपलक्षणश्चैतत् । ''मनसो वागुदपद्यत वाचो व्याहरणम्'' इति न्यायविवरणोक्तश्रुतिस्योत्तरवाक्यबलेनेत्यपि ग्राह्यम् ।।**

ಉಪಲಕ್ಷಣಯಾ ಇದನ್ನು ವಿವಕ್ಷಿಸಬೇಕು. 'ಮನಸೋ ವಾಗುದಪದ್ಯತ ವಾಚೋ ವ್ಯಾಹರಣಮ್' ಎಂಬುದನ್ನು ನ್ಯಾಯವಿವರಣದಲ್ಲಿ ವಿಷಯವಾಕ್ಯವನ್ನಾಗಿ ಹೇಳಿದ್ದಾರೆ. ಈ ಶ್ರುತಿಯಲ್ಲಿ 'ವ್ಯಾಹರಣಂ' ಎಂಬ ವಾಕ್ಯಶೇಷದ ಬಲದಿಂದ ವಾಕ್ ಪದಕ್ಕೆ ವಾಕ್‌ವ್ಯವಹಾರ ಎಂಬರ್ಥವನ್ನು ವಿವಕ್ಷಿಸಲು ಸಾಧ್ಯವಿಲ್ಲ, ವಾಗಿಂದ್ರಿಯವನ್ನೇ ವಿವಕ್ಷಿಸಬೇಕು ಎಂಬರ್ಥವು ಸ್ಪಷ್ಟವಾಗುತ್ತದೆ.

ಪರಿಪೂರ್ಣಚಂದ್ರಿಕಾ

**मनसः सकाशादिति ।। ''उत्पत्तिर्मनस'' इतिभाष्योक्तस्मृतौ मनस इति पञ्चमी । नतु षष्ठीत्यर्थः ।**

ಭಾಷ್ಯದಲ್ಲಿ 'ಉತ್ಪತ್ತಿರ್ಮನಸಃ' ಎಂಬ ವಾಕ್ಯವನ್ನು ಉಲ್ಲೇಖ ಮಾಡಿದ್ದಾರೆ. ಇದನ್ನು ನೋಡಿದಾಗ ಮನಸ್ಸಿನ ಉತ್ಪತ್ತಿ ಎಂಬರ್ಥವು ಆಪಾತತಃ ತೋರುತ್ತದೆ. ಆದರೆ ಮನಸ್ಸಿನ ದೆಶೆಯಿಂದ ಉತ್ಪತ್ತಿಯಾಗುತ್ತದೆ ಎಂಬ ಪಂಚಮೀ ಅರ್ಥವನ್ನು ವಿವಕ್ಷಿಸಬೇಕು, ಷಷ್ಠ್ಯರ್ಥವನ್ನು ವಿವಕ್ಷಿಸಬಾರದು.

**ननु वाचो नित्यत्वं नित्यवेदाश्रयत्वेनैव । नतु स्वरूपेण । वाक्यशेषे तदाश्रयत्वोक्तेः । अनित्यत्वं तु नानित्यपुराणाद्यश्रयत्वेन । किन्तु स्वरूपेणैव । वाक्यशेषे तदाश्रयत्वानुक्तेरिति तटस्थशङ्कां निरस्यति ।। एवञ्च समाख्यानुरोध इति ।।**

ಸಿದ್ಧಾಂತಿ ಹೇಳಿದ ಶ್ರುತ್ಯರ್ಥದ ಮೇಲೆ ತಟಸ್ಥನು ಹೀಗೆ ಆಶಂಕಿಸುತ್ತಾನೆ– ಟೀಕೆಯಲ್ಲಿ ವಾಗಿಂದ್ರಿಯಕ್ಕೆ ಉತ್ಪತ್ತಿಯನ್ನು ಹೇಳಬೇಕು ಎಂದು ಹೇಳಿದರು. ಆದರೆ ವಾಗಿಂದ್ರಿಯವು ನಿತ್ಯವಾಗಿದೆ ಎಂಬುದರ ಅರ್ಥ ಹೀಗಿದೆ– ನಿತ್ಯವಾದ ವೇದಕ್ಕೆ ಆಶ್ರಯವಾಗಿದೆ. ಆದ್ದರಿಂದ ನಿತ್ಯವೆನಿಸುತ್ತದೆ ಹೊರತು ಸ್ವರೂಪತಃ ನಿತ್ಯವಾಗಿದೆ ಎಂದಭಿಪ್ರಾಯದಿಂದಲ್ಲ. ಏಕೆಂದರೆ ವಾಕ್ಯಶೇಷದಲ್ಲಿ ನಿತ್ಯವಾದ ವೇದಕ್ಕೆ ವಾಗೀಂದ್ರಿಯವು ಆಶ್ರಯವಾಗಿದೆ ಎಂದು ಹೇಳಲಾಗಿದೆ. ಅದೇ ವಾಗಿಂದ್ರಿಯವು ಅನಿತ್ಯವೆಂದೂ ಕೂಡ ಹೇಳುತ್ತಿದೆ. ಅನಿತ್ಯವೆಂದರೆ ಅನಿತ್ಯವಾದ ಪುರಾಣಗಳಿಗೆ ಆಶ್ರಯವಾಗಿದೆ ಎನ್ನುವ ಕಾರಣದಿಂದ ಅನಿತ್ಯವಾಗಿರುವುದಲ್ಲ, ಸ್ವರೂಪತಃ ಏವ ಅನಿತ್ಯವಾಗಿದೆ ಎಂದು ವಿವಕ್ಷಿಸಬೇಕು. ಏಕೆಂದರೆ ವಾಕ್ಯಶೇಷದಲ್ಲಿ ಅನಿತ್ಯವಾದ ಪುರಾಣಗಳಲ್ಲಿ ಆಶ್ರಯವಾಗಿದೆ ಎಂದು ಹೇಳಿರುವುದಿಲ್ಲ. ಈ ಆಶಂಕೆಯನ್ನು ನಿರಾಕರಿಸಲು 'ಏವಂ ಚ ಸಮಾಖ್ಯಾನುರೋಧಃ' ಇತ್ಯಾದಿ ಟೀಕಾವಾಕ್ಯವು ಹೊರಟದೆ.

**समाख्याश्रुतौ ''अनित्या वाव स्मृतयः'' इति वागिन्द्रियाश्रितस्मृतीनाम- नित्यत्वोक्तेरिहापि तदाश्रयत्वेनैवानित्यत्वं विवक्षितम् । नतु स्वरूपेणेत्यर्थः ।।**

ಸಮಾಖ್ಯಾಶ್ರುತಿಯಲ್ಲಿ 'ಅನಿತ್ಯಾ ವಾವ ಸ್ಮೃತಯಃ' ಎಂಬುದಾಗಿ ವಾಗಿಂದ್ರಿಯಕ್ಕೆ ಆಶ್ರಿತವಾದ ಸ್ಮೃತಿಗಳಿಗೆ ಅನಿತ್ಯತ್ವವನ್ನು ಹೇಳಿರುವುದರಿಂದ ಪ್ರಕೃತದಲ್ಲೂ ಕೂಡ ಆ ಸ್ಮೃತಿಗಳಿಗೆ ಆಶ್ರಯವಾಗಿರುವುದರಿಂದಲೇ ಇಂದ್ರಿಯಕ್ಕೆ ಅನಿತ್ಯತ್ವವನ್ನು ವಿವಕ್ಷಿಸಬೇಕು. ಸ್ವರೂಪತಃ ಅನಿತ್ಯತ್ವನ್ನು ವಿವಕ್ಷಿಸಬಾರದು.

**अन्यथेति ।। स्वरूपेणैव नित्यत्वानित्यत्वविवक्षायां विरोधात् स्वरूपेण नित्यत्वमुपचितांशैरनित्यत्वमिति विवक्षायाञ्च वाक्यशेषादौ नित्यवेदा- श्रयत्वाद्युक्त्ययोगात् वाक्शब्देन वेदविवक्षायाञ्च ''अस्यां हि श्रुतिरवतिष्ठते'' इति वाक्यशेषविरोधात् अन्यथा वाक्यार्थो न युक्त इत्यर्थः ।**

ನಾವು ಹೇಳಿದ ಅರ್ಥವನ್ನೇ ನೀವೂ ಕೂಡ ಒಪ್ಪಬೇಕು, ಬೇರೆ ಮಾರ್ಗವೇ ಇಲ್ಲ. ಸ್ವರೂಪತಃ ನಿತ್ಯವಾಗಿದೆ ಮತ್ತು ಸ್ವರೂಪತಃ ಅನಿತ್ಯವಾಗಿದೆ ಎಂಬರ್ಥವನ್ನು ವಿವಕ್ಷಿಸಿದರೆ ಪರಸ್ಪರ ವಿರೋಧ

ಬರುತ್ತದೆ. ಸೂಕ್ಷ್ಮರೂಪದಿಂದ ನಿತ್ಯವಾಗಿರುವುದನ್ನೇ ಸ್ವರೂಪತಃ ನಿತ್ಯವೆನ್ನಬೇಕು. ಉಪಚಿತವಾದ ಅಂಶಗಳ ಸೇರುವಿಕೆಯೇ ಅನಿತ್ಯವೆಂದು ವಿವಕ್ಷಿಸಬೇಕು. ಹೀಗೆ ಹೇಳಿದರೆ 'ಅಸ್ಯಾಂ ಹಿ ಶ್ರುತಿರವತಿಷ್ಠತೇ' ಎಂಬ ವಾಕ್ಯಶೇಷವೇ ವ್ಯರ್ಥವಾಗುತ್ತದೆ. ಏಕೆಂದರೆ 'ಅಸ್ಯಾಂ ಹಿ ಶ್ರುತಿರವತಿಷ್ಠತೇ' ಎಂಬುದಕ್ಕೆ 'ಸದಾ ವೇದೋಚ್ಚಾರಣಸಾಮರ್ಥ್ಯ' ಎಂಬರ್ಥವನ್ನು ಹೇಳಿರುವುದರಿಂದ ನಿತ್ಯತ್ವವು ಮುಖ್ಯ ಎಂದೇ ಹೇಳಿದಂತಾಗುತ್ತದೆ. ಅನಿತ್ಯತ್ವವನ್ನು ಕೂಡಿಸಲು ಬರುವುದೇ ಇಲ್ಲ. ಅನಿತ್ಯ ಎಂಬುದಕ್ಕೆ ಸ್ವರೂಪತಃ ಅನಿತ್ಯ ಎಂದು ವಿವಕ್ಷಿಸಿದರೆ 'ಅನಿತ್ಯಾ ವಾವ ಸ್ಮೃತಯಃ' ಎಂಬ ಸಮಾಖ್ಯಾ ಶ್ರುತಿಯು ಅಯುಕ್ತವಾಗುತ್ತದೆ. ಹೀಗೆ ಹೇಳಿದರೆ ವಾಕ್ಯಶೇಷದಲ್ಲಿ ನಿತ್ಯವೇದಾಶ್ರಯತ್ವ ಹೇಳಿದ್ದು ಅಯುಕ್ತವಾಗುತ್ತದೆ. ಆದಿ ಪದದಿಂದ ಸಮಾಖ್ಯಾದಲ್ಲಿ ಶ್ರುತಿ ಹಾಗೂ ಸ್ಮೃತಿಗಳನ್ನು ನಿತ್ಯ ಮತ್ತು ಅನಿತ್ಯವೆಂದು ಹೇಳಿದ್ದು ಅಯುಕ್ತವಾಗುತ್ತದೆ. ವಾಕ್ ಶಬ್ದದಿಂದ ವೇದ ಎಂಬ ಅರ್ಥವನ್ನು ವಿವಕ್ಷಿಸಿದರೆ 'ಅಸ್ಯಾಂ ಹಿ ಶ್ರುತಿರವತಿಷ್ಠತೇ' ಶ್ರುತಿಯಲ್ಲಿ ಶ್ರುತಿಯಿದೆ ಎಂಬರ್ಥವನ್ನು ಹೇಳಲು ಸಾಧ್ಯವಾಗುವುದಿಲ್ಲ. ಹೀಗೆ ವಾಕ್ಯಶೇಷ ವಿರೋಧವೂ ಬರುತ್ತದೆ. ನಾವು ಹೇಳಿದ ಅರ್ಥವನ್ನು ವಿವಕ್ಷಿಸದೇ ಇದ್ದರೆ ವಾಕ್ಯಾರ್ಥವೇ ಅಯುಕ್ತವಾಗುತ್ತದೆ ಎಂಬರ್ಥವನ್ನು ತಿಳಿಯಬೇಕು.

**अन्ये तु ''तथा'' इत्यादीनि ''तत्पूर्वकत्वात्'' इत्यन्तानि सूत्राण्येकमधिकरणम् । तत्र प्राणा अनादयः । ''तत्तेजोऽसृजत'' इति छान्दोग्ये सृष्टिप्रकरणे प्राणानाम् जन्माश्रवणात् ।**

ಅದ್ವೈತಿಗಳ ಅಧಿಕರಣ ರಚನೆ ಹೀಗಿದೆ– 'ತಥಾ ಪ್ರಾಣಾಃ' ಎಂಬ ಸೂತ್ರದಿಂದ ಪ್ರಾರಂಭ ಮಾಡಿ 'ತತ್ಪೂರ್ವಕತ್ವಾತ್' ಎಂಬ ಸೂತ್ರದ ತನಕ ಇರುವ ಸೂತ್ರಗಳು ಒಂದೇ ಅಧಿಕರಣದಲ್ಲಿವೆ. ಇಲ್ಲಿ ಪ್ರಾಣ ಎಂದರೆ ಇಂದ್ರಿಯಗಳನ್ನೇ ವಿವಕ್ಷಿಸಬೇಕು. ಇವೆಲ್ಲವೂ ಅನಾದಿಯಾಗಿವೆ. ಏಕೆಂದರೆ ಛಾಂದೋಗ್ಯದ ಸೃಷ್ಟಿ ಪ್ರಕರಣದಲ್ಲಿ 'ತತ್ತೇಜೋಽಸೃಜತ' ಇತ್ಯಾದಿಯಾಗಿ ಭೂತಪದಾರ್ಥಗಳ ಸೃಷ್ಟಿಯನ್ನು ಹೇಳಲಾಗಿದೆ. ಆದರೆ ಇಂದ್ರಿಯಗಳ ಉತ್ಪತ್ತಿಯನ್ನು ಹೇಳಿಯೇ ಇಲ್ಲ. ಆದ್ದರಿಂದ ಇಂದ್ರಿಯಗಳನ್ನು ಅನಾದಿ ಎಂದು ಹೇಳಬೇಕು.

**नचैवं वियदाद्यधिकरणैर्गतार्थता । ''असद्वा इदमग्र आसीत्तदाहुः किं तदसदासीदिति ऋषयो वाव ते अग्रे असदासीत् तदाहुःके ते ऋषय इति प्राणा वाव ऋषय'' इति जगदुत्पत्तेः प्राक् प्राणानां सत्त्वश्रुतेरिहाधिकत्वादिति प्राप्ते**

ಹಾಗಾದರೆ ವಿಯದಧಿಕರಣದಿಂದ ಇದು ಗತಾರ್ಥವಾಯಿತು. ಯಾವ ನ್ಯಾಯವನ್ನು ಆಧರಿಸಿ ವಿಯದಾದಿಗಳಿಗೆ ಅನಾದಿತ್ವ ಸಿದ್ಧವಾಗುತ್ತದೋ, ಅದೇ ನ್ಯಾಯದಿಂದ ಇಂದ್ರಿಯಗಳಿಗೂ ಅನಾದಿತ್ವ ಸಿದ್ಧವಾಗುತ್ತದೆ.

ಏಕೆಂದರೆ ಜಗತ್ತು ಹುಟ್ಟುವ ಮೊದಲು ಇಂದ್ರಿಯಗಳು ಇದ್ದವು ಎಂಬುದಾಗಿ ಈ ಶ್ರುತಿ ಹೇಳುತ್ತಿದೆ – 'ಅಸದ್ವಾ ಇದಮಗ್ರೇ ಆಸೀತ್ತದಾಹುಃ ಕಿಂ ತದಸದಾಸೀದಿತಿ ಋಷಯೋ ವಾವ ತೇ ಅಗ್ರೇ ಅಸದಾಸೀತ್ ತದಾಹುಃ ಕೇ ತೇ ಋಷಯ ಇತಿ ಪ್ರಾಣಾ ವಾವ ಋಷಯಃ' 'ಅಸತ್ತು' ಸೃಷ್ಟಿಯ

ಮೊದಲು ಇತ್ತು ಎಂದು ಗುರುಗಳು ಹೇಳಿದಾಗ ಶಿಷ್ಯರು ಕೇಳುತ್ತಾರೆ. ಮೊದಲು ಇದ್ದ ಆ ಅಸತ್ತು ಎಂದರೆ ಏನು ಎಂದು. ಆಗ ಗುರುಗಳು ಉತ್ತರಿಸುತ್ತಾರೆ 'ಋಷಿಗಳೇ ಅಸತ್ತು' ಎಂದು. ಪುನಃ ಶಿಷ್ಯರು ಕೇಳುತ್ತಾರೆ, ಆ ಋಷಿಗಳು ಯಾರು? ಎಂದು. ಆಗ 'ಇಂದ್ರಿಯಗಳೇ ಋಷಿಗಳು' ಎಂದು ಗುರುಗಳು ಉತ್ತರಿಸಿದರು' ಹೀಗೆ ಜಗದುತ್ಪತ್ತಿಯ ಮೊದಲು ಇಂದ್ರಿಯಗಳಿಗೆ ಅಸ್ತಿತ್ವವನ್ನು ಶ್ರುತಿಯು ಹೇಳುತ್ತಿರುವುದರಿಂದ ಈ ಅಧಿಕರಣದಲ್ಲಿ ಇದರ ವಿಚಾರವನ್ನು ಮಾಡಲೇಬೇಕು. ಈ ಅಧಿಕರಣದ ಪೂರ್ವಪಕ್ಷದಲ್ಲಿ ಅಧಿಕಾಶಂಕೆಯು ಇರುವುದರಿಂದ ಗತಾರ್ಥವಾಗುವುದಿಲ್ಲ. ಇಷ್ಟು ಪೂರ್ವಪಕ್ಷ.

**''एतस्माज्जायते प्राणो मनः सर्वेंद्रियाणि च । खं वायुर्ज्योतिः'' इत्यादौ जन्मश्रवणात् ''असद्वा'' इत्यादेश्चावान्तरप्रलयपरत्वात्सादय इति सिद्धान्त इत्याहुः।**

ಈ ಪೂರ್ವಪಕ್ಷವು ತಪ್ಪು. ಏಕೆಂದರೆ 'ಏತಸ್ಮಾಜ್ಜಾಯತೇ ಪ್ರಾಣಃ ಮನಃ ಸರ್ವೇಂದ್ರಿಯಾಣಿ ಚ। ಖಂ ವಾಯುರ್ಜ್ಯೋತಿಃ' ಎಂಬ ಶ್ರುತಿಯಲ್ಲಿ ಇಂದ್ರಿಯಗಳಿಗೆ ಜನ್ಮವಿದೆ ಎಂದು ಸ್ಪಷ್ಟವಾಗಿ ಹೇಳಲಾಗಿದೆ. ಆದ್ದರಿಂದ 'ಅಸದ್ವಾ ಇದಮಗ್ರಮಾಸೀತ್' ಎಂಬುದಕ್ಕೆ ಅವಾಂತರಪ್ರಳಯ ಪರವಾಗಿಯೇ ವ್ಯಾಖ್ಯಾನ ಮಾಡಬೇಕು. ಆದ್ದರಿಂದ ಇಂದ್ರಿಯಗಳೆಲ್ಲವೂ ಕೂಡ ಸಾದಿಯಾಗಿವೆ ಎಂಬುದು ಅಧಿಕರಣದ ಸಿದ್ಧಾಂತ.

**तन्न । एतस्मादिति श्रुतावुत्पत्तौ श्रुतायामपि क्वचिदश्रवणमात्रेण पूर्वपक्षानुदयात् । आकाशवाय्वादिष्वपि ''वायुश्चान्तरिक्षश्चैतदमृतं आपो वा इदमग्र आसुः'' इति श्रवणेनेह ततोऽधिकाशङ्काभावच्च ।**

ಅದ್ವೈತಿಗಳ ಈ ಅಧಿಕರಣರಚನೆಯು ಅಯುಕ್ತವಾಗಿದೆ. ಏಕೆಂದರೆ 'ಏತಸ್ಮಾಜ್ಜಾಯತೇ' ಎಂಬ ಶ್ರುತಿಯಲ್ಲಿ ಇಂದ್ರಿಯಗಳಿಗೆ ಉತ್ಪತ್ತಿ ಇದೆ ಎಂದು ಸ್ಪಷ್ಟವಾಗಿ ಹೇಳಲಾಗಿದೆ. ಆದ್ದರಿಂದ ಯಾವ ಶ್ರುತಿಯಲ್ಲೂ ಕೂಡ ಸ್ಪಷ್ಟವಾಗಿ ಇಂದ್ರಿಯಗಳಿಗೆ ಉತ್ಪತ್ತಿ ಇರುವುದು ಕೇಳಿಸುತ್ತಿಲ್ಲ ಎಂಬ ನಿನ್ನ ಪೂರ್ವಪಕ್ಷವೇ ಹುಟ್ಟುವುದಿಲ್ಲ. ಮತ್ತು ಆಕಾಶ, ವಾಯು ಮೊದಲಾದವೂ ಕೂಡ ಪ್ರಳಯಕಾಲದಲ್ಲಿ ಇದ್ದವು ಎಂದು ಶ್ರುತಿಯು ಹೇಳುತ್ತಿದೆ. 'ವಾಯುಶ್ಚಾಂತರಿಕ್ಷಂ ಚೈತದಮೃತಂ ಆಪೋ ವಾ ಇದಮಗ್ರ ಆಸುಃ' ಎಂದು. ಹೀಗಿರುವಾಗ ಅವುಗಳನ್ನೆಲ್ಲ ಬಿಟ್ಟು ಇಂದ್ರಿಯಗಳು ಮಾತ್ರ ಪ್ರಳಯಕಾಲದಲ್ಲಿ ಇದ್ದವು ಎಂಬುದಾಗಿ ನೀನು ಅಧಿಕಾಶಂಕಾವನ್ನು ತೋರಿಸುವುದು ಸಮಂಜಸವಾಗುವುದಿಲ್ಲ.

**तत्रामृतत्वाग्रत्वयोरापेक्षिकत्व इहाप्यग्रत्वं तथास्तु । तत्राप्शब्दस्य ब्रह्मणि समन्वय इहापि प्राणादिशब्दस्य सोऽस्तु । मम तु भाष्योक्तश्रुतौ स्मृतौ च प्राणानां भूतकारणत्वोक्तिरुपादाननिषेधश्च भूतेभ्योऽधिक इति पूर्वपक्षोदयः ।**

ಅಮೃತತ್ವವು ಆಪೇಕ್ಷಿಕವಾಗಿದೆ. ಬೇರೆ ಕಾಲಗಳ ಅಪೇಕ್ಷೆಯಿಂದ ಬಹುಕಾಲವಿದೆ ಎಂಬ ಅಭಿಪ್ರಾಯ ಮಾತ್ರ ಇರುತ್ತದೆ. ಮತ್ತು ಅಗ್ರತ್ವವೂ ಕೂಡ ಇದೇ ರೀತಿಯಲ್ಲಿ ವಿವಕ್ಷಿಸಬೇಕು. ತನಗಿಂತ ಅನಂತರ ಹುಟ್ಟಿದ ಪದಾರ್ಥಗಳಿಗಿಂತ ಮೊದಲು ಹುಟ್ಟಿದೆ ಎಂದಷ್ಟೇ ಇದರ ಅಭಿಪ್ರಾಯ. ಆದ್ದರಿಂದ ಭೂತಗಳನ್ನು ಅಮೃತವೆಂದು ಸಿದ್ಧಾಂತಿಗಳು ವ್ಯಾಖ್ಯಾನ ಮಾಡಲು ಬರುವುದಿಲ್ಲ. ಇದೇ ನ್ಯಾಯದಿಂದ

'ಅಸದ್ವಾ ಇದಮಗ್ರ ಆಸೀತ್' ಎಂಬುದರಲ್ಲಿ 'ಅಗ್ರೇ ಆಸೀತ್' ಎಂದು ಹೇಳಿರುವುದು ಘಟಪಟಾದಿ ಅಪೇಕ್ಷೆಯಿಂದ ಪೂರ್ವದಲ್ಲಿ ಇತ್ತು ಎಂದಷ್ಟೇ ಅಭಿಪ್ರಾಯದಿಂದ.

'ಆಪೋವಾ ಇದಮಗ್ರಮಾಸೀತ್' ಎಂಬಲ್ಲಿ ಅಪ್‌ಶಬ್ದಕ್ಕೆ ನೀರು ಎಂದರ್ಥವಲ್ಲ, ಬ್ರಹ್ಮ ಎಂದರ್ಥ. ಹೀಗೆ ಬ್ರಹ್ಮನಲ್ಲಿ ಸಮನ್ವಯ ಮಾಡುತ್ತಿರುವುದರಿಂದ ಅನಾದಿ ಎಂದು ನಿರ್ಣಯಿಸಬಹುದಲ್ಲವೇ?

ಇದೂ ಕೂಡ ತಪ್ಪು. ಹಾಗಾದರೆ 'ಅಸತ್ ಋಷಯಃ ಪ್ರಾಣಾಃ' ಇತ್ಯಾದಿಯಾಗಿ ಹೇಳಿ ಕೊನೆಯಲ್ಲಿ ಬ್ರಹ್ಮ ಎಂದು ಹೇಳಿರುವುದರಿಂದ ಎಲ್ಲಾ ಶ್ರುತಿಗಳೂ ಕೂಡ ಬ್ರಹ್ಮಪರವೇ ಆದವು.

ಅಧಿಕಾಶಂಕೆ ಇಲ್ಲದ್ದರಿಂದ ಈ ಅಧಿಕರಣವೇ ವ್ಯರ್ಥವೆಂದು ಸಿದ್ಧಾಂತಿಗಳಾದ ನೀವು ಆಕ್ಷೇಪ ಮಾಡುತ್ತಿದ್ದೀರಿ. ಹಾಗಾದರೆ ನಿಮಗೂ ಕೂಡ ಈ ಅಧಿಕರಣವು ವ್ಯರ್ಥವಾಗುತ್ತದೆ. ಏಕೆಂದರೆ ಎಲ್ಲಾ ಬಗೆಯ ಉತ್ಪತ್ತಿಗಳನ್ನು ಈ ಹಿಂದೆಯೇ ಹೇಳಿದ್ದಾಗಿದೆ. ಪ್ರಕೃತ ಇಂದ್ರಿಯಗಳೆಲ್ಲವೂ ಕೂಡ ಅನಾದಿಯಾಗಿವೆ ಎಂಬುದಾಗಿ ಪೂರ್ವಪಕ್ಷವನ್ನಾದರೂ ಹೇಗೆ ಮಾಡುತ್ತೀರಿ?

ಈ ಪ್ರಶ್ನೆಯೂ ಕೂಡ ತಪ್ಪು. ಕೇವಲ ಶ್ರುತಿ ಇರುವುದರಿಂದ ಇಂದ್ರಿಯಗಳನ್ನು ನಾವು ಅನಾದಿ ಎಂದು ಹೇಳಲು ಹೊರಟಿಲ್ಲ. ಯಾವ ಭೂತಗಳಿಗೆ ಉತ್ಪತ್ತಿಯನ್ನು ಸಮರ್ಥನೆ ಮಾಡಿದ್ದೇವೋ ಆ ಭೂತಗಳು ಇಂದ್ರಿಯಗಳಿಂದಲೇ ಹುಟ್ಟಿವೆ ಎಂದು ಕೇಳಿಬರುತ್ತಿವೆ. ಮತ್ತು ವಿಷಯವಾಕ್ಯದಲ್ಲಿ ಯಾವುದೇ ಉಪಾದಾನ ಕಾರಣವಿಲ್ಲವೆಂದು ಹೇಳಲಾಗಿದೆ. ಹೀಗೆ ಉಪಾದಾನಕಾರಣವಿಲ್ಲದ್ದರಿಂದ ಭೂತಗಳಿಗೂ ಕಾರಣವಾಗಿರುವುದರಿಂದ ಇಂದ್ರಿಯಗಳು ಅನಾದಿ ಎಂಬ ಪೂರ್ವಪಕ್ಷವು ನಮ್ಮ ಮತದಲ್ಲಿ ಉದ್ಭವವಾಗುತ್ತದೆ.

**किञ्च प्राणानां स्वरूपेण सादित्व सिद्धान्तो ''नित्यान्येतानि सौक्ष्म्येण'' इत्यादिभाष्योक्तस्मृतिविरुद्धः ।**

ಮತ್ತು ಅದ್ವೈತಮತದಲ್ಲಿ ಸಿದ್ಧಾಂತ ಮಾಡಿದ್ದೂ ಕೂಡ ತಪ್ಪಾಗಿದೆ. ಏಕೆಂದರೆ ಇಂದ್ರಿಯಗಳಿಗೆ ಸ್ವರೂಪತಃ ನಿತ್ಯತ್ವವಿದ್ದರೂ ಕೂಡ ಉಪಚಯರೂಪವಾದ ಉತ್ಪತ್ತಿ ಇದೆ ಎಂದು ಹಾಗೂ ನಾಶವಿದೆ ಎಂದು ನಾವು ಹೇಳುತ್ತೇವೆ. ಆದರೆ ನೀವು ಸ್ವರೂಪತಃ ಇಂದ್ರಿಯಗಳು ಸಾದಿಯಾಗಿವೆ ಎಂದು ಸಿದ್ಧಾಂತ ಮಾಡುತ್ತಿದ್ದೀರಿ. ಹೀಗೆ ಹೇಳಿದರೆ 'ನಿತ್ಯಾನ್ಯೇತಾನಿ ಸೌಕ್ಷ್ಮ್ಯೇಣ' ಇತ್ಯಾದಿ ಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿಗಳ ವಿರೋಧವು ನಿಮಗೆ ಬರುತ್ತದೆ.

**यच्चोक्तं उत्पत्तिश्रुतिर्नामुख्यार्था । गौणत्वासम्भवादिति ''गौणी'' इति सूत्रार्थ इति ।**

ಎರಡನೆಯ ಸೂತ್ರಕ್ಕೆ ಪರರು ಹೀಗೆ ವ್ಯಾಖ್ಯಾನವನ್ನು ಮಾಡಿದ್ದಾರೆ – ಉತ್ಪತ್ತಿಶ್ರುತಿಯು ಅಮುಖ್ಯಾರ್ಥವುಳ್ಳದ್ದಲ್ಲ ಎಂಬುದು ಈ ಸೂತ್ರದ ಪ್ರತಿಜ್ಞೆ. ಇಷ್ಟನ್ನೂ ಕೂಡ ಸೂತ್ರದಲ್ಲಿ ಅಧ್ಯಾಹಾರ ಮಾಡಿಕೊಳ್ಳಬೇಕು. 'ಗೌಣ್ಯಸಂಭವಾತ್' ಎಂಬುದು ಸಮಸ್ತ ಪದವಾಗಿದೆ. ಮತ್ತು ಭಾವಪ್ರಧಾನ-

ನಿರ್ದೇಶವಾಗಿರುವುದರಿಂದ 'ಗೌಣತ್ವಾಸಂಭವಾತ್' ಎಂಬುದು ಇದರ ಅರ್ಥ. ಇದು ಹೇತುವಾಚಕವಾಗಿದೆ. ಗೌಣತ್ವವು ಅಸಂಭಾವಿತವಾದ್ದರಿಂದ ಉತ್ಪತ್ತಿ ಶ್ರುತಿಯು ಮುಖ್ಯಾರ್ಥವುಳ್ಳದ್ದೇ ಆಗಿದೆ ಎಂಬುದಾಗಿ ವ್ಯಾಖ್ಯಾನವನ್ನು ಮಾಡಿದ್ದಾರೆ.

**तन्न । मम रीत्या वियदधिकरणस्थेन ''गौणि'' इति सूत्रेणेवात्रत्येनापि तेनावश्यवक्तव्यस्यानादित्वश्रुति गौंणीत्यस्यार्थस्य प्रतिज्ञाध्याहारादिकं विनैवोक्ति-सम्भवे उत्पत्तिश्रुतेर्गौणत्वस्यासम्भवादित्यस्यार्थस्य नामुख्यार्थेति प्रतिज्ञाध्याहारेणा-श्रुतसमस्तावयवषष्ठीकल्पनादिना चोक्त्ययोगात् ।**

ನೀವು ಮಾಡಿದ ಈ ವ್ಯಾಖ್ಯಾನವು ಅಯುಕ್ತವಾಗಿದೆ. ನಾವು ಹೇಳುವಂತೆ ವಿಯದಧಿಕರಣದಲ್ಲಿ ಇದೇ ಸೂತ್ರವು ಪ್ರಸಕ್ತವಾದಾಗ ಯಾವ ಅರ್ಥವನ್ನು ಹೇಳಬೇಕೋ ಅದೇ ಅರ್ಥವನ್ನು ಈ ಅಧಿಕರಣದಲ್ಲಿ ಬಂದಿರುವ 'ಗೌಣ್ಯಸಂಭವಾತ್' ಎಂಬ ಸೂತ್ರಕ್ಕೂ ಕೂಡ ಹೇಳಬೇಕು. ಪೂರ್ವಪಕ್ಷಿಯು ವಾಗಿಂದ್ರಿಯಕ್ಕೆ ಅನಾದಿತ್ವವನ್ನು ಆಕ್ಷೇಪ ಮಾಡಿದಾಗ ಅದಕ್ಕೆ ಉತ್ತರವನ್ನು ಕೊಡಲೇಬೇಕು. ಆ ಅನಾದಿತ್ವ ಶ್ರುತಿಯು ಗೌಣಾರ್ಥವುಳ್ಳದ್ದು ಎಂಬುದನ್ನು ತಿಳಿಸುವುದಕ್ಕಾಗಿಯೇ ಈ ಸೂತ್ರ ಹೊರಟಿದೆ ಎಂಬ ಅರ್ಥವು ಅತ್ಯಂತ ಸ್ವರಸವಾಗುತ್ತದೆ. ಮತ್ತು ಇದು ಅವಶ್ಯ ವಕ್ತವ್ಯವೂ ಕೂಡ ಆಗಿದೆ. ಮತ್ತು 'ಉತ್ಪತ್ತಿಶ್ರುತಿಃ ನ ಅಮುಖ್ಯಾರ್ಥಾ' ಎಂಬ ಪ್ರತಿಜ್ಞೆಯ ಅಧ್ಯಾಹಾರದ ಅವಶ್ಯಕತೆಯೂ ಇರುವುದಿಲ್ಲ. ಹಾಗೂ 'ಗೌಣತ್ವಾಸಂಭವಾತ್' ಎಂಬುದಾಗಿ ಭಾವಪ್ರಧಾನನಿರ್ದೇಶ ಮಾಡುವುದೂ ಕೂಡ ಅನಾವಶ್ಯಕ. ಮತ್ತು 'ಗೌಣ್ಯಸಂಭವಾತ್' ಎಂಬುದು ಸಮಸ್ತ ಪದವಾಗಿದೆ. ಇದಕ್ಕೆ 'ಉತ್ಪತ್ತಿ ಶ್ರುತೇಃ' ಎಂಬ ಷಷ್ಠ್ಯಂತವಾದ ಮತ್ತೊಂದು ಪದವನ್ನು ಸೇರಿಸಿಕೊಂಡು ಅನ್ವಯವನ್ನು ಹೇಳಿದ್ದೀರಿ. ಸಮಾಸಕ್ಕಿಂತ ಬಹಿರ್ಭೂತವಾದ ಪದಾರ್ಥದಿಂದ ಅನ್ವಯವನ್ನು ಹೇಳುವುದು ಅಸ್ವರಸವಾಗುತ್ತದೆ.

**प्रतिज्ञानुपरोधादिति सूत्रं तु परमते नास्त्येव । यच्चोक्तं ''एतस्मात्'' इति वाक्य आकाशादिभ्यः प्राचीनेषु प्राणादिषु श्रुतं ''जायते'' इत्येकमेव पदमुत्तरस्मिन्नाकाशादावप्यनुवर्तते । आकाशादेश्च मुख्यमेव जन्मेति प्राणानामपि तथा । सकृत्प्रयुक्तस्य ''जायते'' इति पदस्य वृत्तिद्वयायोगादिति तदिति सूत्रार्थ इति ।**

'ಪ್ರತಿಜ್ಞಾನುಪರೋಧಾತ್' ಎಂಬ ಸೂತ್ರ ಅದ್ವೈತ ಮತದಲ್ಲಿ ಇರುವುದೇ ಇಲ್ಲ. 'ತತ್ಪ್ರಾಕ್ ಶ್ರುತೇಶ್ಚ' ಎಂಬ ಸೂತ್ರದ ವ್ಯಾಖ್ಯಾನವನ್ನು ಹೀಗೆ ಮಾಡುತ್ತಾರೆ – 'ಏತಸ್ಮಾಜ್ಜಾಯತೇ' ಎಂಬ ವಾಕ್ಯದಲ್ಲಿ ಆಕಾಶಾದಿಗಳಿಗಿಂತ ಮೊದಲು ಪ್ರಾಣಾದಿಗಳು ಶ್ರುತವಾಗಿವೆ. ಈ ಪ್ರಾಣಾದಿಗಳಲ್ಲಿ 'ಜಾಯತೇ' ಎಂಬ ಪದವು ಉತ್ಪತ್ತಿಯನ್ನು ಹೇಳುತ್ತಿದೆ. ಇದೇ ಪದವು ಮುಂದೆ ಪ್ರಸಕ್ತವಾದ ಆಕಾಶಾದಿಗಳಲ್ಲೂ ಕೂಡ ಅನುವೃತ್ತಿಯನ್ನು ಹೊಂದುತ್ತದೆ. ನೀವೇ ಆಕಾಶಾದಿಗಳಲ್ಲಿ 'ಜಾಯತೇ'

ಎಂಬ ಪದವು ಮುಖ್ಯವಾದ ಜನ್ಮವನ್ನು ಹೇಳುತ್ತದೆ ಎಂದು ಹೇಳುವಿರಿ. ಹಾಗಾದರೆ ಮೊದಲಿರುವ ಪ್ರಾಣಾದಿಗಳಲ್ಲೂ ಕೂಡ ಇದೇ ಮುಖ್ಯಜನ್ಮವನ್ನು 'ಜಾಯತೇ' ಎಂಬ ಪದ ಹೇಳಬೇಕು. ಒಮ್ಮೆ ಪ್ರಯುಕ್ತವಾದ 'ಜಾಯತೇ' ಎಂಬ ಪದಕ್ಕೆ ಎರಡು ವೃತ್ತಿಯನ್ನು ಕಲ್ಪನೆ ಮಾಡುವುದು ಅಯುಕ್ತವಾಗುತ್ತದೆ.

**तन्न । मम रीत्या सौत्रस्य तच्छब्दस्य ''तथा प्राणा'' इति पूर्वसूत्रनिर्दिष्टप्राणपरतया तथा इन्द्रियोत्पत्त्यनुत्पत्तिश्रुतिविरोधनिरासानन्तरमधिकाशङ्क्योत्थितस्येन्द्रियविशेषमनोनित्यत्वानित्यत्वश्रुतिविरोधस्यावश्यनिरसनीयस्य निरासेन चाधिकरणान्तरत्वसम्भवे तच्छब्दस्य पूर्वसूत्रानिर्दिष्टाकाशादिपरतया मुख्याबाधेनैवा गौणत्वसिद्धेरवश्यावक्तव्यस्य गौणत्वे बाधकस्योक्त्या च पूर्वशेषत्वायोगात् ।**

ಇದೂ ಕೂಡ ತಪ್ಪು. 'ತತ್ಪ್ರಾಕ್‌ಶ್ರುತೇಶ್ಚ' ಎಂಬುದು ನಮ್ಮ ಪ್ರಕಾರ ಬೇರೆ ಅಧಿಕರಣವೇ ಆಗಿದೆ. ನೀವು ಇದನ್ನು ಪೂರ್ವಾಧಿಕರಣಶೇಷವೆಂದು ಹೇಳುತ್ತಿದ್ದೀರಿ. ನಮ್ಮ ಪ್ರಕಾರ ಬೇರೆ ಅಧಿಕರಣವಾದರೂ ಕೂಡ ತತ್ ಎಂಬ ಪದವು ಹಿಂದಿನ ಅಧಿಕರಣದಲ್ಲಿ ಪ್ರಸಕ್ತವಾದ ಇಂದ್ರಿಯಗಳನ್ನೇ ಪರಾಮರ್ಶೆ ಮಾಡುತ್ತಿದೆ. ಆದರೆ ನೀವು ಹಿಂದಿನ ಸೂತ್ರದಲ್ಲಿ ಪ್ರಸಕ್ತವಾದದ್ದನ್ನು ಹೇಳುತ್ತಿದೆ ಎಂದು ಹೇಳದೇ ಹಿಂದಿನ ಪಾದದಲ್ಲಿ ಪ್ರಸಕ್ತವಾದ ಆಕಾಶಾದಿಗಳನ್ನು ಪರಾಮರ್ಶೆ ಮಾಡುತ್ತಿದೆ ಎಂದು ವ್ಯಾಖ್ಯಾನ ಮಾಡುತ್ತಿರುವಿರಿ. ಆದ್ದರಿಂದ ನಿಮ್ಮ ವ್ಯಾಖ್ಯಾನವು ಅಸ್ವರಸವಾಗಿದೆ.

ಇಂದ್ರಿಯಗಳಿಗೆ ಉತ್ಪತ್ತಿಯನ್ನು ಹೇಳುವ ಶ್ರುತಿಗಳಿಗೂ, ಉತ್ಪತ್ತಿ ಇಲ್ಲವೆಂದು ಹೇಳುವ ಶ್ರುತಿಗಳಿಗೂ ಬರುವ ವಿರೋಧವನ್ನು ಹಿಂದಿನ ಅಧಿಕರಣದಲ್ಲಿ ನಿರಾಕರಣೆ ಮಾಡಿದ್ದಾಯಿತು. ಅನಂತರ ಮನಸ್ಸಿಗೆ ಉತ್ಪತ್ತಿ ಹಾಗೂ ಅನುತ್ಪತ್ತಿ ಹೇಳುವ ಶ್ರುತಿಗಳಿಗೆ ವಿರೋಧವು ಅಧಿಕಾಶಂಕೆಯಿಂದ ಪ್ರಾಪ್ತವಾದಾಗ ಅದರ ನಿರಾಕರಣೆಗಾಗಿ ಇದು ಅಧಿಕರಣಾಂತರವಾಗಿದೆ ಎಂದು ಹೇಳುತ್ತೇವೆ. ಆದರೆ ನೀವು 'ತತ್ಪ್ರಾಕ್‌ಶ್ರುತೇಶ್ಚ' ಎಂಬ ಸೂತ್ರಕ್ಕೆ ''ಆಕಾಶಕ್ಕಿಂತ ಮೊದಲೇ 'ಜಾಯತೇ' ಎಂಬ ಪದವು ಕೇಳಿಸುತ್ತಿದೆ, ಅದೇ ಇಲ್ಲಿಯೂ ಅನ್ವಯವು ಆಗುತ್ತದೆ. ಪ್ರಕೃತ ಅದು ಮುಖ್ಯಾರ್ಥವಾಗಿದೆ'' ಎಂದು ಹೇಳುತ್ತಿದ್ದೀರಿ. ಆದರೆ ಯಾವುದೇ ಒಂದು ಶಬ್ದವು ಮುಖ್ಯವಾಗಿದೆ ಎಂದು ಸಾಧನೆ ಮಾಡುವುದು ಬಹಳ ಕಷ್ಟ. ಗೌಣವಾಗಿದೆ ಎಂಬುದನ್ನು ಸುಲಭವಾಗಿ ಹೇಳಬಹುದು. ಏಕೆಂದರೆ ಮುಖ್ಯವಾದ ಅರ್ಥದಲ್ಲಿ ಅನುಪಪತ್ತಿಯು ಬಂದರೆ ಮಾತ್ರ ಗೌಣಾರ್ಥವನ್ನು ಸ್ವೀಕಾರ ಮಾಡಬೇಕು. 'ಜಾಯತೇ' ಎಂಬ ಪದದ ಮುಖ್ಯಾರ್ಥದಲ್ಲಿ ಯಾವುದೇ ಬಾಧಕವಿಲ್ಲದೇ ಇದ್ದಾಗ ಗೌಣಾರ್ಥ ಮಾಡುವುದು ಅಯುಕ್ತವಾಗುತ್ತದೆ. ಆದ್ದರಿಂದ ಈ ಸೂತ್ರವನ್ನು ಪೂರ್ವಾಧಿಕರಣದ ಶೇಷವೆಂದು ಹೇಳಿದ್ದು ಅಯುಕ್ತವಾಗುತ್ತದೆ.

**सर्वाणि भूतानि व्युचरन्तीति श्रुत्यन्तरे श्रुतस्य व्युचरन्तिशब्दस्य पूर्वैः प्राणादिभिरपि सम्बन्धाङ्गीकारेण तत्सङ्ग्रहार्थं तत्सहश्रुतेश्चेत्येव सूत्रणीयत्वेन ''तत्प्राक्श्रुतेश्च'' इति सूत्रणायोगाच्च ।**

'ಸರ್ವಾಣಿ ಭೂತಾನಿ ವ್ಯುಚ್ಚರಂತಿ' ಎಂಬ ಮತ್ತೊಂದು ಶ್ರುತಿಯಲ್ಲಿ 'ವ್ಯುಚ್ಚರಂತಿ' ಎಂಬ ಶಬ್ದವು 'ಜಾಯತೇ' ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. 'ಸರ್ವೇ ಪ್ರಾಣಾಃ ಸರ್ವಾಣಿ ಭೂತಾನಿ ವ್ಯುಚ್ಚರಂತಿ' ಎಂಬುದಾಗಿ ಎಲ್ಲಾ ಇಂದ್ರಿಯಗಳು ಹಾಗೂ ಭೂತಪದಾರ್ಥಗಳು ಹುಟ್ಟಿದವು ಎಂದು ಹೇಳುತ್ತಿದೆ. ಇಲ್ಲಿ ಒಮ್ಮೆ ಶ್ರುತವಾದ 'ವ್ಯುಚ್ಚರಂತಿ' ಎಂಬ ಶ್ರುತಿಯು ಭೂತಗಳ ಜೊತೆಯೂ ಅನ್ವಯವನ್ನು ಹೊಂದುತ್ತದೆ, ಇಂದ್ರಿಯಗಳ ಜೊತೆಯೂ ಅನ್ವಯವನ್ನು ಹೊಂದುತ್ತದೆ. ಒಮ್ಮೆ ಶ್ರುತವಾದ ಈ ವ್ಯುಚ್ಚರಂತಿ ಎಂಬ ಪದಕ್ಕೆ ವೃತ್ತಿದ್ವಯವನ್ನು ಒಪ್ಪಲು ಸಾಧ್ಯವಿಲ್ಲ. ಆದ್ದರಿಂದ ಭೂತಗಳಿಗೆ ಹೇಗೆ ಮುಖ್ಯವಾದ ಉತ್ಪತ್ತಿಯನ್ನು ಹೇಳುತ್ತಿದೆಯೋ ಅದರಂತೆ ಇಂದ್ರಿಯಗಳಿಗೂ ಕೂಡ ಮುಖ್ಯವಾದ ಉತ್ಪತ್ತಿಯನ್ನೇ ಇದು ಹೇಳುತ್ತಿದೆ. ಈ ಶ್ರುತಿಯಲ್ಲಿ 'ವ್ಯುಚ್ಚರಂತಿ' ಎಂಬುದು ಅನಂತರ ಶ್ರುತವಾಗಿದೆ. ಈ ಸಂದರ್ಭದಲ್ಲಿ ಸೂತ್ರಕಾರರು ನಿಮ್ಮ ವ್ಯಾಖ್ಯಾನದಂತೆ 'ತತ್ಪ್ರಾಕ್‌ಶ್ರುತೇಶ್ಚ' ಎಂದು ಹೇಳಲೇಬಾರದು. 'ತತಃ ಶ್ರುತೇಶ್ಚ' ಎಂದು ಹೇಳಬೇಕು. ಏಕೆಂದರೆ 'ಏತಸ್ಮಾಜ್ಜಾಯತೇ ಪ್ರಾಣಃ' ಎಂಬ ಮೊದಲಿರುವ ಶ್ರುತಿಯನ್ನು ಹಾಗೂ 'ಸರ್ವಾಣಿ ಭೂತಾನಿ ವ್ಯುಚ್ಚರಂತಿ' ಎಂಬ ಅನಂತರವಿರುವ ಶ್ರುತಿಯನ್ನು ಸಂಗ್ರಹ ಮಾಡುವುದಕ್ಕೋಸ್ಕರ ಸೂತ್ರಕಾರರು ಆಕಾಶಾದಿಗಳ ಜೊತೆ ಇಂದ್ರಿಯಗಳ ಜನ್ಮವು ಶ್ರುತವಾಗಿದೆ ಎಂದು ಹೇಳಬೇಕಿತ್ತು. ಇಲ್ಲಿ 'ವ್ಯುಚ್ಚರಂತಿ' ಎಂಬುದಕ್ಕೆ ಗೌಣಾರ್ಥವನ್ನು ಮಾಡಬಾರದಾದ್ದರಿಂದ ಇಂದ್ರಿಯಗಳ ವಿಷಯಗಳಲ್ಲೂ ಕೂಡ ಗೌಣಾರ್ಥವನ್ನು ಮಾಡಬಾರದು ಎಂದು ಹೇಳಬೇಕಾಗಿತ್ತು. 'ಪ್ರಾಕ್‌ಶ್ರುತೇಶ್ಚ' ಎಂದು ಹೇಳಿದ್ದರಿಂದ 'ಸರ್ವಾಣಿ ಭೂತಾನಿ ವ್ಯುಚ್ಚರಂತಿ' ಎಂಬ ಶ್ರುತಿಯ ಸಂಗ್ರಹವೇ ಆಗುವುದಿಲ್ಲ.

**मम मते तु प्राक्शब्देनैव मनसो लाभात्सूत्रे मनःपदाभावः । तथाऽधिकरणान्तरत्वेऽपि भाष्योक्तरीत्याऽनुक्तसमुच्चयार्थश्चशब्दश्च युक्तस्स्यात् ।**

ನಿಮ್ಮ ಮತದಲ್ಲಿ ಮನಸ್ಸಿನ ವಿಷಯದಲ್ಲಿ ಉತ್ಪತ್ತಿ ಅನುತ್ಪತ್ತಿಗಳ ಬಗ್ಗೆ ವಿಚಾರ ಮಾಡಲು ಈ ಅಧಿಕರಣ ಹೊರಟದೆ ಎಂದು ಹೇಳುತ್ತಿದ್ದೀರಿ. ಆದರೆ ಸೂತ್ರದಲ್ಲಿ ಮನಃ ಎಂಬ ಪದವೇ ಇರುವುದಿಲ್ಲ.

ಹೀಗೆ ಪ್ರಶ್ನಿಸಬಾರದು. ಪ್ರಾಕ್ ಎಂಬ ಶಬ್ದದಿಂದಲೇ ಮನಸ್ಸಿನ ಲಾಭವು ದೊರೆಯುತ್ತದೆ. ಹಿಂದಿನ ಅಧಿಕರಣದಲ್ಲೇ ವಾಯುದೇವರ ಬಗ್ಗೆ ವಿಚಾರ ಮಾಡಿದ್ದಾಯಿತು. 'ಪ್ರಾಣಃ ಮನಃ ಸರ್ವೇಂದ್ರಿಯಾಣಿ ಚ' ಎಂಬಲ್ಲಿ ನಂತರ ಪ್ರಸಕ್ತವಾಗುವುದು ಮನಸ್ಸೇ ಆಗಿದೆ. ಆದ್ದರಿಂದ ಪ್ರತ್ಯೇಕವಾಗಿ ಸೂತ್ರಕಾರರು ಮನಃ ಎಂಬ ಪದವನ್ನು ಪ್ರಯೋಗ ಮಾಡಿರುವುದಿಲ್ಲ.

ಇದು ಬೇರೆ ಅಧಿಕರಣ ಆಗುವುದಾದರೆ ಸೂತ್ರದಲ್ಲಿ 'ಚ' ಕಾರವು ವ್ಯರ್ಥವಲ್ಲವೇ?

ಈ ಆಕ್ಷೇಪವೂ ಕೂಡ ತಪ್ಪು. ಚಶಬ್ದವು ಅನುಕ್ತಸಮಚ್ಚಯಕ್ಕೋಸ್ಕರ ಪ್ರಯುಕ್ತವಾಗಿದೆ ಎಂದು ಭಾಷ್ಯದಲ್ಲಿ ಉತ್ತರಿಸಿದ್ದಾರೆ. ಆದ್ದರಿಂದ ನಮ್ಮ ಅಧಿಕರಣರಚನೆಯು ನಿರ್ದುಷ್ಟವಾಗಿದೆ.

## ತತ್‌ಪೂರ್ವಕತ್ವಾಧಿಕರಣ (೨-೪-೩)

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**तत्पूर्वकत्वाद्वाचः** ।। पूर्वत्र ''प्रकृतेन्द्रिय'' इत्यादिटीकाव्याख्यानेनैवेहापि ''प्रकृतेन्द्रियान्तःपातिवागिन्द्रियम्'' इति टीकापि **सङ्गतिसूचकत्वेन** व्याख्यातेत्यत्रत्यपूर्वपक्षटीकारीत्या नित्यं वेदोच्चारणसमर्थस्य वागिन्द्रियस्य व्यर्थमुपचयकल्पनमिति पूर्वस्माद्विशिष्य **शङ्कोत्थानात्पूर्वानन्तर्यं** च **स्पष्टमिति** वा परमतदोषोक्तिप्रस्तावे **स्पष्टयिष्यमाणत्वाद्वाऽत्र सङ्गत्यनुक्तिः** ।

ಪ್ರಕೃತ ಇಂದ್ರಿಯಾಂತರ್ಗತವಾದ ವಾಗಿಂದ್ರಿಯ ಎಂದು ಟೀಕೆಯಲ್ಲಿ ಹೇಳಿದ್ದಾರೆ. ಹಿಂದಿನ ಅಧಿಕರಣದಲ್ಲಿ ಮನಸ್ಸಿಗೆ ಸಂಬಂಧಪಟ್ಟದ್ದು ಎಂಬುದಾಗಿ ಸಂಗತಿಯನ್ನು ಹೇಳಲಾಯಿತು. ಅದರಂತೆ 'ಪ್ರಕೃತೇಂದ್ರಿಯಾಂತಃಪಾತಿವಾಗಿಂದ್ರಿಯಮ್' ಎಂಬ ಟೀಕೆಯೂ ಕೂಡ ಸಂಗತಿ ಸೂಚಕವಾಗಿದೆ ಎಂದು ವ್ಯಾಖ್ಯಾನ ಮಾಡಿದಂತಾಯಿತು.

ಮನಸ್ಸೆಂಬ ಇಂದ್ರಿಯದ ಬಗ್ಗೆ ವಿಚಾರ ಮಾಡಿದ ಮೇಲೆ ವಾಗಿಂದ್ರಿಯದ ಬಗ್ಗೆ ಏಕೆ ವಿಚಾರವು ಪ್ರಸಕ್ತವಾಗುತ್ತದೆ ಎಂಬ ಪ್ರಶ್ನೆಯು ಪ್ರಾಪ್ತವಾದರೆ ಎಲ್ಲಾ ಇಂದ್ರಿಯಗಳಿಗೂ ಸಾಮಾನ್ಯವಾದ ಉಪಚಯವಿದೆ, ಆದರೆ ಮನಸ್ಸಿಗೆ ಅಲ್ಪವಾದ ಉಪಚಯವಿದೆ, ವಾಗಿಂದ್ರಿಯಕ್ಕೆ ಉಪಚಯವೇ ಇಲ್ಲ. ಏಕೆಂದರೆ ವೇದೋಚ್ಚಾರಣಸಾಮರ್ಥ್ಯವು ಮನಸ್ಸಿಗೆ ಯಾವಾಗಲೂ ಇದ್ದೇ ಇರುತ್ತದೆ ಎಂದು ವಿವಕ್ಷಿಸಿದಾಗ ಉಪಚಯವೇ ವಾಗಿಂದ್ರಿಯಕ್ಕೆ ಬೇಡ ಎಂಬುದಾಗಿ ಹಿಂದಿನ ಅಧಿಕರಣದ ಮೇಲೆ ವೈಷಮ್ಯದಿಂದ ಆಶಂಕೆಯನ್ನು ಮಾಡಲಾಗುತ್ತದೆ. ಆದ್ದರಿಂದ ಪೂರ್ವಾನಂತರ್ಯ ಸಂಗತಿಯು ಅತ್ಯಂತ ಸ್ಪಷ್ಟವಾಗಿದೆ.

ಅಥವಾ ಪರಮತಕ್ಕೆ ದೋಷವನ್ನು ಹೇಳುವಾಗ ನಮ್ಮ ಪ್ರಕಾರ ಹಿಂದಿನ ಅಧಿಕರಣದಿಂದ ಇರುವ ಸಂಗತಿಯನ್ನು ಸ್ಪಷ್ಟವಾಗಿ ಹೇಳುವುದರಿಂದ ಗ್ರಂಥದಲ್ಲಿ ಸಂಗತಿಯನ್ನು ಹೇಳಿರುವುದಿಲ್ಲ.

**प्रकाशः –** सङ्गतिटीकां विवृण्वन् पूर्वोत्तरपक्षटीकासूचितचिन्तापरंपरां वदन् फलफलिभावं चाह **– अत्रेति** ।। टीकाक्षरार्थमाह **– नच विशेषेत्यादिना** ।।

ಸಂಗತಿಟೀಕೆಯನ್ನು ವಿವರಣೆ ಮಾಡುವವರಾಗಿ ಪೂರ್ವಪಕ್ಷ ಹಾಗೂ ಸಿದ್ಧಾಂತಪಕ್ಷದಿಂದ ಸೂಚಿತವಾದ ಸಂಶಯ ಪರಂಪರೆಯನ್ನು ತೋರಿಸುತ್ತಾ ಅಧಿಕರಣದ ಫಲಫಲಿಭಾವವನ್ನೂ ಕೂಡ 'ಅತ್ರ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ. ಟೀಕೆಯ ಅಕ್ಷರಾರ್ಥವನ್ನು 'ನಚ ವಿಶೇಷ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ.

**प्रकाशः –** ''नच वाग्वाव नित्येति विशेषश्रुतिविरोध'' इति न्यायविवरणवाक्येऽपेक्षितांशोक्तिमात्रमित्यविसंवादः । एवमग्रेऽपि ।।

ನ್ಯಾಯವಿವರಣದಲ್ಲಿ 'ನಚ ವಾಗ್ವಾವ ನಿತ್ಯ ಇತಿ ವಿಶೇಷಶ್ರುತಿವಿರೋಧಃ' ಎಂಬ ವಾಕ್ಯವು ಕಾಣಸುತ್ತಿದೆ. ಆದರೆ ಗ್ರಂಥದಲ್ಲಿ 'ನಚ ವಿಶೇಷಶ್ರುತಿವಿರೋಧಃ' ಎಂಬುದಾಗಿ ನ್ಯಾಯವಿವರಣದಲ್ಲಿ ಇದೆ ಎಂದು ಉಲ್ಲೇಖ ಮಾಡಿದ್ದಾರೆ. ಇದು ಹೇಗೆ? ಎಂದರೆ ಅಪೇಕ್ಷಿತವಾದ ವಿಶೇಷಶ್ರುತಿಯ ವಿಶೇಷಭಾಗವನ್ನಷ್ಟೇ ಇಲ್ಲಿ ಅನುವಾದ ಮಾಡಿದ್ದಾರೆ. ಇದರಂತೆ ಮುಂದೂ ಕೂಡ ತಿಳಿಯಬೇಕು.

**प्रकाशः – उत्तरवाक्येति ।।** ''वाचो व्याहरणम्'' इत्युत्तरवाक्येत्यर्थः ।। **तटस्थेति ।।** वाचो नित्यत्ववादिनः पूर्वपक्षिण एवं शङ्कानुदयादिति भावः ।।

'ವಾಚೋ ವ್ಯಾಹರಣಮ್' ಎಂಬ ಮುಂದಿನ ವಾಕ್ಯದ ಬಲದಿಂದ ವಾಕ್‌ಶಬ್ದವು ಇಂದ್ರಿಯ ಪರವಾಗಿದೆ ಎಂದು ತಿಳಿಯಬೇಕು. ತಟಸ್ಥಶಂಕೆ ಎಂದೇಕೆ ಹೇಳಿದ್ದಾರೆ ಎಂದರೆ ವಾಗಿಂದ್ರಿಯಕ್ಕೆ ನಿತ್ಯತ್ವವನ್ನು ಹೇಳುವ ಪೂರ್ವಪಕ್ಷಿಯು ಸ್ವರೂಪೇಣ ಅನಿತ್ಯ ಇತ್ಯಾದಿಯಾಗಿ ಆಕ್ಷೇಪವನ್ನು ಮಾಡಲು ಸಾಧ್ಯವಿಲ್ಲ. ಆದಕ್ಕೋಸ್ಕರ ತಟಸ್ಥಶಂಕೆ ಎಂದು ಗ್ರಂಥಕಾರರು ಹೇಳಿದ್ದಾರೆ.

**प्रकाशः – अन्ये त्विति ।।** अभ्यधिकाशङ्कां वक्तुं गतार्थत्वमाशङ्कते ।। **न चैवमिति ।।** तन्मते ''एतेन मातरिश्व'' इत्यादेरपि भूतोत्पत्तिसाधनार्थत्वाद्वियदाद्यधिकरणैरित्युक्तम् । एकविज्ञानेन सर्वविज्ञानप्रतिज्ञाविरोधादिभिः प्राणानामप्युत्पत्तिसिद्धेरिति भावः ।

ವಿಯದಧಿಕರಣದಿಂದ ಈ ಅಧಿಕರಣವು ಗತಾರ್ಥವಾಗುತ್ತದಲ್ಲವೇ ? ಎಂಬುದಾಗಿ 'ಅಭ್ಯಧಿಕಾಶಂಕೆಗೋಸ್ಕರ ಪರರು ತೋರಿಸುತ್ತಿದ್ದಾರೆ 'ನ ಚೈವಂ' ಇತ್ಯಾದಿ ಗ್ರಂಥದಿಂದ.

ನಮ್ಮ ಮತದಲ್ಲಿ 'ಏತೇನ ಮಾತರಿಶ್ವಾ' ಎಂಬ ಸೂತ್ರದಲ್ಲಿ ಮಾತರಿಶ್ವಾ ಪದಕ್ಕೆ ಭೂತವಾಯು ಎಂದು ಅರ್ಥವನ್ನು ಮಾಡಿಲ್ಲ. ವಾಯುದೇವರು ಎಂದು ಅರ್ಥವನ್ನು ಮಾಡಿದ್ದೇವೆ. ವಾಸ್ತವಿಕವಾಗಿ ಇದು ಭೂತಪ್ರಕರಣವಾಗಿದ್ದರೂ ಕೂಡ ಅವರು ಅದಕ್ಕೆ ಅಭಿಮಾನಿಯಾದ್ದರಿಂದ ವಾಯುದೇವರನ್ನೇ ವಿವಕ್ಷಿಸಬೇಕೆಂದು ಹೇಳಿದ್ದೇವೆ. ಆದರೆ ಅದ್ವೈತಿಗಳು ಈ ಮಾತರಿಶ್ವಾ ಎಂಬ ಪದವು ಭೂತವಾಯು ಪರವೆಂದೇ ಹೇಳಿದ್ದಾರೆ. ಆದ್ದರಿಂದ ಗ್ರಂಥಕಾರರು 'ವಿಯದಾದ್ಯಧಿಕರಣೈಃ' ಎಂಬುದಾಗಿ ಆದಿಪದವನ್ನು ಉಲ್ಲೇಖ ಮಾಡಿದ್ದಾರೆ. ವಿಯದಧಿಕರಣದಲ್ಲಿ ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಪ್ರತಿಜ್ಞೆ ಮಾಡಿರುವುದರಿಂದ ಸಮಸ್ತ ಜಗತ್ತು ಬ್ರಹ್ಮನಿಂದ ತಿಳಿಯುತ್ತದೆಂದು ಹೇಳಿದರೆ, ಸಮಸ್ತಜಗತ್ತಿಗೆ ಬ್ರಹ್ಮನು ಉಪಾದಾನಕಾರಣನಾಗಿದ್ದಾನೆ ಎಂದು ಹೇಳಿದಂತಾಯಿತು.

**प्रकाशः –** ननु भवतामपि ''प्राणा वा इदमग्र आसुः'' इति भाष्योक्तश्रुतिः ''आपो वा इदमग्र आसुः'' इति श्रुतितुल्येत्यत आह – **मम त्विति ।।** श्रुतौ स्मृतौ चेति यथाक्रमं भूतकारणत्वेत्यादिनाऽन्वयः ।

ಸಿದ್ಧಾಂತಿಗಳಾದ ನೀವೂ ಕೂಡ 'ಪ್ರಾಣಾ ವಾ ಇದಮಗ್ರ ಆಸುಃ' ಎಂಬ ಶ್ರುತಿಯನ್ನು ಭಾಷ್ಯದಲ್ಲಿ ಉದಾಹರಿಸಿದ್ದೀರಿ. ಈ ಶ್ರುತಿಯು ಅಲ್ಲಿ ಉದಾಹರಿಸಿದ 'ಆಪೋ ವಾ ಇದಮಗ್ರ ಆಸುಃ' ಎಂಬ ಶ್ರುತಿಗೆ ಸಮಾನವಾಗಿದೆ. ನೀರಿಗೆ ಉತ್ಪತ್ತಿಯು ಸಿದ್ಧವಾದ ಮೇಲೆ ಇಂದ್ರಿಯಗಳಿಗೂ ಕೂಡ ಉತ್ಪತ್ತಿಯು ಸಿದ್ಧವಾಯಿತಲ್ಲವೇ? ಎಂಬ ಪ್ರಶ್ನೆಗೆ 'ಮಮ ತು' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಶ್ರುತಿಯಲ್ಲಿ ಭೂತಕಾರಣತ್ವವನ್ನು ಹೇಳಿದ್ದಾರೆ. ಸ್ಮೃತಿಯಲ್ಲಿ ಉಪಾದಾನಕಾರಣತ್ವವನ್ನು ಹೇಳಿದ್ದಾರೆ. ಹೀಗೆ ಯಥಾಕ್ರಮವಾಗಿ ಅನ್ವಯವನ್ನು ತಿಳಿಯಬೇಕು.

**प्रकाशः –** यद्यपीदं टीकायां नोक्तम् । तथापि ''तेभ्यो भूतानि जज्ञिर इति भूतकारणत्वश्रुतेः'' इति तत्वप्रदीपोक्तेर्भूतकारणत्वोक्तिरधिकेत्युक्तम् । भूतोत्पत्तेः प्रागपि सतामुत्पत्तिरयुक्तेत्यधिका शङ्केत्यर्थः ।

ವಾಸ್ತವಿಕವಾಗಿ ಟೀಕೆಯಲ್ಲಿ ನಿರುಪಾದಾನತ್ವಯುಕ್ತಿಯನ್ನಷ್ಟೇ ಹೇಳಿದ್ದಾರೆ. ಭೂತಕಾರಣತ್ವಯುಕ್ತಿಯನ್ನು ಹೇಳಿರುವುದಿಲ್ಲ. ಆದರೆ ತತ್ವಪ್ರದೀಪದಲ್ಲಿ ಈ ಯುಕ್ತಿಯನ್ನು ಹೇಳಿದ್ದಾರೆ. 'ತೇಭ್ಯೋ ಭೂತಾನಿ ಜಜ್ಞಿರೇ ಇತಿ ಭೂತಕಾರಣತ್ವಶ್ರುತೇಃ' ಎಂಬುದಾಗಿ ಹೇಳಿದ್ದರಿಂದ ಗ್ರಂಥಕಾರರು ಭೂತಕಾರಣಯುಕ್ತಿಯನ್ನೂ ಕೂಡ ಅಧಿಕವಾಗಿ ಸೇರಿಸಿದ್ದಾರೆ.

ಉಪಾದಾನವೇ ಇಲ್ಲದ್ದರಿಂದ ಉತ್ಪತ್ತಿಯು ಯುಕ್ತವಾಗುವುದಿಲ್ಲ ಎಂಬುದು ಒಂದು. ಭೂತಗಳ ಉತ್ಪತ್ತಿಗಿಂತ ಮೊದಲು ಇಂದ್ರಿಯಗಳಿದ್ದವು ಎಂದು ಹೇಳಿರುವುದು ಮತ್ತೊಂದು. ಹೀಗೆ ಎರಡು ಕಾರಣಗಳಿರುವುದರಿಂದ ಅಭ್ಯಧಿಕಾಶಂಕೆಯು ಯುಕ್ತವಾಗುತ್ತದೆ ಎಂಬುದು ಅಭಿಪ್ರಾಯ.

**प्रकाशः** – सिद्धान्तं च निराह – **किञ्चेति** ।। एतेन प्राणा उत्पद्यन्त इत्याद्यसूत्रप्रतिज्ञार्थो दूषितः । अधिकाशङ्कायोगोक्तया तथेत्यतिदेशांशोऽपि निरस्तः। ''गौण्यसम्भवात्'' इति द्वितीयार्थं च निराह – **यच्चेति** ।। अन्यैरित्यन्वेति।

ಅದ್ವೈತಿಗಳ ಸಿದ್ಧಾಂತವನ್ನೂ ಕೂಡ 'ಕಿಂಚ' ಇತ್ಯಾದಿ ಗ್ರಂಥದಿಂದ ನಿರಾಕರಣೆ ಮಾಡುತ್ತಿದ್ದಾರೆ. 'ತಥಾ ಪ್ರಾಣಾಃ' ಎಂಬ ಮೊದಲನೆಯ ಸೂತ್ರದಲ್ಲಿ 'ಪ್ರಾಣಾಃ ಉತ್ಪತ್ತಿಮಂತಃ' ಎಂಬುದನ್ನು ಪ್ರತಿಜ್ಞೆಯಿಂದ ಎಂಬುದಾಗಿ ಅದ್ವೈತಿಗಳು ಹೇಳುತ್ತಾರೆ. ಹೀಗೆ ಹೇಳಿದರೆ ಸ್ವರೂಪೇಣ ಉತ್ಪತ್ತಿಯನ್ನು ಹೇಳುವುದಾದರೆ 'ನಿತ್ಯಾ ಪ್ರಾಣಾಃ' ಇತ್ಯಾದಿ ಶ್ರುತಿಗಳ ವಿರೋಧವೂ ಪ್ರಾಪ್ತವಾಗುತ್ತದೆ. ಆದ್ದರಿಂದ ಈ ಪ್ರತಿಜ್ಞಾರ್ಥವು ದೂಷಿತವಾಯಿತು. ಅಭ್ಯಧಿಕಾಶಂಕೆ ಇದ್ದರೆ ಮಾತ್ರ ಅತಿದೇಶವನ್ನು ಮಾಡಲು ಸಾಧ್ಯ. ಅದೇ ಕೂಡುವುದಿಲ್ಲವಾದ್ದರಿಂದ ತಥಾ ಎಂಬ ಅತಿದೇಶಾಂಶವೂ ನಿರಸ್ತವಾಯಿತು. ಹೀಗೆ ಎರಡನೆಯ ಸೂತ್ರವನ್ನು ಸಂಪೂರ್ಣವಾಗಿ ನಿರಾಕರಣೆ ಮಾಡಿದಂತಾಯಿತು. ಪ್ರಕೃತ 'ಗೌಣ್ಯಸಂಭವಾತ್' ಎಂಬ ಎರಡನೇ ಸೂತ್ರದ ಅರ್ಥವನ್ನು ನಿರಾಕರಣೆ ಮಾಡಲು 'ಯಚ್ಚ' ಇತ್ಯಾದಿ ಗ್ರಂಥವು ಹೊರಟಿದೆ. 'ಅನ್ಯೈಃ' ಎಂಬುದಕ್ಕೆ 'ಯಚ್ಚ' ಎಂಬುದರ ಜೊತೆ ಅನ್ವಯವನ್ನು ತಿಳಿಯಬೇಕು.

**प्रकाशः** – गौण्या असम्भवो गौण्यसम्भवस्तस्मादिति विग्रहे तत्तात्पर्यार्थमाह – **गौणत्वेति** ।। एकविज्ञानेन सर्वविज्ञानप्रतिज्ञाविरोधादिप्रसङ्गादिति भावः ।।

'ಗೌಣ್ಯಾಃ ಅಸಂಭವಃ ಗೌಣ್ಯಸಂಭವಃ ತಸ್ಮಾತ್ ಗೌಣ್ಯಸಂಭವಾತ್' ಎಂಬ ವಿಗ್ರಹವನ್ನು ಆಶ್ರಯಿಸಿ ಇದರ ತಾತ್ಪರ್ಯವನ್ನು ಗೌಣತ್ವ ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ. ಒಂದುವೇಳೆ 'ಜಾಯತೇ' ಎಂಬುದನ್ನು ಗೌಣಾರ್ಥವುಳ್ಳದ್ದು ಎಂದು ಅಂಗೀಕರಿಸಿ ಇಂದ್ರಿಯಗಳಿಗೆ ಉತ್ಪತ್ತಿ ಇಲ್ಲವೆಂದು ಅಂಗೀಕರಿಸಿದರೆ ಏಕವಿಜ್ಞಾನದಿಂದ ಸರ್ವವಿಜ್ಞಾನಪ್ರತಿಜ್ಞೆಯ ವಿರೋಧವು ಬರುತ್ತದೆ. ಆದ್ದರಿಂದ ಗೌಣಾರ್ಥವನ್ನು ವಿವಕ್ಷಿಸಬಾರದು ಎಂದಭಿಪ್ರಾಯ.

**प्रकाशः** – **गौणीति सूत्रेणेवेति** ।। एतेन त्वन्मते तु श्रुत्यादिविरोधेनाकाशोत्पत्त्यसम्भवात्तदुत्पत्तिश्रुतिर्गौणीति वियदधिकरणे व्याख्यातम् । इह तु बहिरेव साध्यमध्याहृत्य केवलहेतुमात्रपरतया व्याख्यातमिति वैरूप्यमिति सूचितम् ।। **अवश्येति** ।। अन्यथा प्राणोत्पत्तेरसिद्धेरिति भावः ।।

ಹಿಂದಿನ ಪಾದದಲ್ಲಿ ಇದೇ ಸೂತ್ರವು ಪ್ರಸಕ್ತವಾಗಿತ್ತು. ಅಲ್ಲಿ ಯಾವ ಅರ್ಥವನ್ನು ಹೇಳಿದ್ದೇವೋ ಅದೇ ಅರ್ಥವನ್ನು ಈ ಅಧಿಕರಣದಲ್ಲಿರುವ ಸೂತ್ರದಲ್ಲೂ ಕೂಡ ಹೇಳುತ್ತಿದ್ದೇವೆ ಎಂದು ಗ್ರಂಥದಲ್ಲಿ ಹೇಳಿದರು. ಹೀಗೆ ಹೇಳಿದ್ದರಿಂದ ಅದ್ವೈತಿಗಳು ವಿರುದ್ಧವಾಗಿ ವ್ಯಾಖ್ಯಾನ ಮಾಡಿದ್ದಾರೆ ಎಂದು ತಿಳಿಸಿದಂತಾಯಿತು.

ಅದ್ವೈತಿಗಳು ಹೀಗೆ ಹೇಳುತ್ತಾರೆ. ವಿಯದಧಿಕರಣದಲ್ಲಿ ಪ್ರಸಕ್ತವಾದ ಇದೇ ಸೂತ್ರಕ್ಕೆ ಉತ್ಪತ್ತಿಶ್ರುತಿಯು ಗೌಣವಾಗಿದೆ. ಏಕೆಂದರೆ 'ಅನಾದಿರ್ವಾ ಅಯಮಾಕಾಶಃ' ಎಂಬ ಶ್ರುತಿಯ ವಿರೋಧವು ಬರುತ್ತದೆ ಎಂದು ವ್ಯಾಖ್ಯಾನ ಮಾಡಿದ್ದಾರೆ. ಈ ಅಧಿಕರಣದಲ್ಲಿ ಇಂದ್ರಿಯಾದಿಗಳು ಉತ್ಪತ್ತಿ ಶ್ರುತಿಯು ಮುಖ್ಯಾರ್ಥವುಳ್ಳದ್ದೇ ಆಗಿದೆ, ಅಮುಖ್ಯಾರ್ಥವುಳ್ಳದ್ದಲ್ಲ. ಏಕೆಂದರೆ ಗೌಣವೃತ್ತಿಯು ಅಸಂಭಾವಿತವಾಗಿರುವುದರಿಂದ ಎಂದು ವ್ಯಾಖ್ಯಾನ ಮಾಡಿದ್ದಾರೆ. ಸೂತ್ರದಿಂದ ಹೊರಗೆ ಸಾಧ್ಯವನ್ನು ಅಧ್ಯಾಹಾರ ಮಾಡಿ ಅರ್ಥವನ್ನು ಹೇಳಿದ್ದಾರೆ. ಇದು ವಿರುದ್ಧವಾಗಿದೆ ಎಂದು.

ಪೂರ್ವಪಕ್ಷಿಯು ನೀಡಿದ ಅನಾದಿತ್ವಶ್ರುತಿಯು ಗೌಣವಾಗಿದೆ. ಅದಕ್ಕಾಗಿ ಈ ಸೂತ್ರವು ಉಪಯುಕ್ತವಾಗಿದೆ. ಇಲ್ಲದಿದ್ದರೆ ಪ್ರಾಣೋತ್ಪತ್ತಿಯು ಅಸಿದ್ಧವಾಗುತ್ತಿತ್ತು ಎಂದಭಿಪ್ರಾಯ.

**प्रकाशः – अश्रुतेति** ।। अश्रुता या षष्ठी समस्तस्य समासं प्राप्तस्य गौण्यसम्भवादिति वाक्यस्य योऽवयवो गौणीति पदरूपस्तत्सम्बन्धिनी तस्याः कल्पनादिनेत्यर्थः । आदिपदेन त्वप्रत्ययकल्पनं ग्राह्यम् । ''तत्प्राक् श्रुतेश्च'' इत्येतदर्थमनूद्य निराह – **यच्चेति** ।।

ಗ್ರಂಥದಲ್ಲಿ 'ಅಶ್ರುತಷಷ್ಠೀ' ಎಂದು ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ – 'ಉತ್ಪತ್ತಿಶ್ರುತೇಃ' ಎಂಬ ಷಷ್ಠಿಯು ಅಶ್ರುತವಾಗಿದೆ. ಇದಕ್ಕೆ 'ಗೌಣ್ಯಸಂಭವಾತ್' ಎಂಬ ಸಮಸ್ತವಾದ ಪದದ ಅವಯವವೆನಿಸಿದ ಗೌಣೀ ಎಂಬ ಪದದ ಜೊತೆ ಸಂಬಂಧವನ್ನು ಕಲ್ಪನೆ ಮಾಡುವುದು ತಪ್ಪು. ಹೀಗೆ ಅಶ್ರುತವಾದ ಷಷ್ಠೀವಿಭಕ್ತಿಯನ್ನು ಕಲ್ಪನೆ ಮಾಡುವುದು ಒಂದು ತಪ್ಪು, ಸಮಸ್ತಪದದ ಏಕದೇಶದಲ್ಲಿ ಅನ್ವಯ ಮಾಡುವುದು ಮತ್ತೊಂದು ತಪ್ಪು. ಗ್ರಂಥದಲ್ಲಿ ಆದಿ ಶಬ್ದದಿಂದ ತ್ವಪ್ರತ್ಯಯದ ಕಲ್ಪನೆಯನ್ನು ಮಾಡಬೇಕಾಗುತ್ತದೆ ಎಂಬ ದೋಷವನ್ನು ವಿವಕ್ಷಿಸಬೇಕು.

ಈಗ 'ತತ್ಪ್ರಾಕ್ ಶ್ರುತೇಶ್ಚ' ಎಂಬುದರ ಅನುವಾದ ಮಾಡಿ ನಿರಾಕರಣೆ ಮಾಡಲು 'ಯಚ್ಚ' ಇತ್ಯಾದಿ ಗ್ರಂಥಗಳು ಹೊರಟಿದೆ.

**प्रकाशः** – सौत्रतच्छब्दार्थमाह – **आकाशादिभ्य इति** ।। प्राक्शब्दार्थः प्राचीनेष्विति ।। श्रुतेश्च जायत इति शब्दस्येति शेषं मत्वाऽर्थमाह – **श्रुतमित्यादि**।। अत्रापि सूत्र उत्पत्तिश्रुतिः न अमुख्यार्थेत्यन्वयः । अवश्यावक्तव्यत्वे हेतुर्मुख्याबाधेनैवागौणत्वसिद्धेरिति ।।

ಸೂತ್ರದಲ್ಲಿರುವ ತತ್ ಶಬ್ದದ ಅರ್ಥವನ್ನು ಆಕಾಶಾದಿಭ್ಯಃ ಎಂದು ಹೇಳುತ್ತಿದ್ದಾರೆ. ಆಕಾಶಾದಿಗಳ ಜನನಕ್ಕಿಂತ ಮೊದಲು ಏನು ಶ್ರುತವಾಗಿದೆ ಎಂದರೆ ಇಂದ್ರಿಯಗಳು ಶ್ರುತವಾಗಿದೆ ಎಂದು ತಿಳಿಯಬೇಕು. 'ಜಾಯತೇ' ಎಂಬ ಪದವನ್ನು ಇಲ್ಲಿ ಅಧ್ಯಾಹಾರ ಮಾಡಬೇಕು. ಇದನ್ನು ಶ್ರುತಂ ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ. ಇಲ್ಲೂ ಕೂಡ ಸೂತ್ರದಲ್ಲಿ ಉತ್ಪತ್ತಿ ಶ್ರುತಿಯು ಮುಖ್ಯಾರ್ಥವುಳ್ಳದ್ದಲ್ಲ ಎಂದು ಅನ್ವಯವನ್ನು ತಿಳಿಯಬೇಕು.

ಮುಖ್ಯಾರ್ಥದಲ್ಲಿ ಬಾಧಕವಿಲ್ಲ ಎಂದು ಹೇಳಿದ್ದರಿಂದ ಮುಖ್ಯಾರ್ಥವನ್ನೇ ವಿವಕ್ಷಿಸಬೇಕು ಎಂದು ತಿಳಿಯುತ್ತದೆ. ಗೌಣಾರ್ಥವನ್ನು ಸ್ವೀಕರಿಸುವುದು ಬೇಡ ಎಂದು ತಿಳಿಯುತ್ತದೆ. ಪುನಃ ಗೌಣ ಎಂದು ಹೇಳಿದರೆ ಬಾಧಕವನ್ನು ಹೇಳುತ್ತಿದ್ದಾರೆ ಎಂದು ಹೇಳುವ ಅವಶ್ಯಕತೆ ಇಲ್ಲ ಎಂದಭಿಪ್ರಾಯ.

**प्रकाशः – पूर्वेति** ।। पूर्वाधिकरणशेषत्वायोगादित्यर्थः ।। **श्रुत्यन्तर इति** ।। ''एतस्मादात्मनस्सर्वे प्राणास्सर्वाणि भूतानि व्युच्चरन्ति'' इति श्रुत्यन्तर इत्यर्थः।।

ತತ್‌ಪೂರ್ವಕತ್ವಾಧಿಕರಣ (೨-೪-೩)

'ಪೂರ್ವಶೇಷ' ಎಂದರೆ ಹಿಂದಿನ ಅಧಿಕರಣದ ಶೇಷತ್ವವು ಈ ಸೂತ್ರಕ್ಕೆ ಯುಕ್ತವಾಗುವುದಿಲ್ಲ ಎಂದಭಿಪ್ರಾಯ. 'ಶ್ರುತ್ಯಂತರೇ' ಎಂದರೆ 'ಏತಸ್ಮಾದಾತ್ಮನಸ್ಸರ್ವೇ ಪ್ರಾಣಾಸ್ಸರ್ವಾಣಿ ಭೂತಾನಿ ವ್ಯುಚ್ಚರಂತಿ' ಎಂಬ ಶ್ರುತ್ಯಂತರದಲ್ಲಿ ಎಂದರ್ಥ. ಇಲ್ಲಿರುವ ವ್ಯುಚ್ಚರಂತಿ ಎಂಬ ಪದಕ್ಕೆ ಹಿಂದಿನ ಪದಗಳ ಜೊತೆ ಅನ್ವಯವನ್ನು ಮಾಡಿದ್ದೀರಿ.

**प्रकाशः – अङ्गीकारेणेति** ।। परभाष्येऽपि हि ''यत्रापि च पश्चाच्छत उत्पत्तिवचनः शब्दः पूर्वैस्सम्बध्यते तत्राप्येष एव न्यायः । यथा सर्वाणि भूतानि व्युचरन्तीत्ययमन्ते पठितो व्युचरन्तिशब्दः'' इत्युक्तेः ''तत्प्राक् श्रुतेः'' इत्युक्तया ''एतस्माज्जायत'' इत्यस्यैव ग्रहणापत्त्या व्युचरन्तीत्यस्यापि सङ्ग्रहार्थं तत्पश्चाच्छतेरित्युक्तौ तच्छब्दस्य पूर्वसूत्रप्रकृतप्राणपरत्वसम्भवेऽपि ''एतस्माज्जायत'' इति प्राक् श्रुतजन्मवाचिपदोपेतश्रुत्यसङ्ग्रहापत्तेरुभयसङ्ग्रहाय सौत्रतच्छब्दस्य पूर्वसूत्रप्रकृतप्राणपरत्वाय च तत्सहेत्येव सूत्रणीयम् । तैः प्राणैः सह भूतानां जन्मश्रुतेरिति वा तैर्भूतैस्सह प्राणानां जन्मश्रुतेरिति वा व्याख्यानसम्भवादित्यर्थः ।

'ಅಂಗೀಕಾರೇಣ' ಇತ್ಯಾದಿ ಗ್ರಂಥದ ಅಭಿಪ್ರಾಯ ಹೀಗಿದೆ – ಪರಭಾಷ್ಯದಲ್ಲಿ ಹೀಗೆ ಹೇಳಿದ್ದಾರೆ. 'ಯತ್ರಾಪಿ ಚ ಪಶ್ಚಾಚ್ಛ್ರುತ ಉತ್ಪತ್ತಿವಚನಃ ಶಬ್ದಃ ಪೂರ್ವೈಸ್ಸಂಬಧ್ಯ ತತ್ರಾಪ್ಯೇಷ ಏವ ನ್ಯಾಯಃ । ಯಥಾ ಸರ್ವಾಣಿ ಭೂತಾನಿ ವ್ಯುಚ್ಚರಂತೀತ್ಯಯಮಂತೇ ಪಠಿತೋ ವ್ಯುಚ್ಚರಂತಿಶಬ್ದಃ' 'ಮೊದಲು ಶ್ರುತವಾದ ಉತ್ಪತ್ತಿವಾಚಕವಾದ ಶಬ್ದವು ಅನಂತರ ಸಂಬಂಧವನ್ನು ಹೊಂದುತ್ತವೆ. ಅನಂತರ ಪ್ರಸಕ್ತವಾದ ಉತ್ಪತ್ತಿವಾಚಕವಾದ ಶಬ್ದವು ಮೊದಲ ಪದಗಳ ಜೊತೆ ಅನ್ವಯವನ್ನು ಹೊಂದುತ್ತದೆ. 'ಸರ್ವಾಣಿ ಭೂತಾನಿ ವ್ಯುಚ್ಚರಂತಿ' ಎಂಬಲ್ಲಿ ಕೊನೆಯಲ್ಲಿ ಪಠಿತವಾದ ವ್ಯುಚ್ಚರಂತಿ ಎಂಬ ಪದವೇ ಇದಕ್ಕೆ ಉದಾಹರಣೆ' ಎಂದು ಹೇಳಿದ್ದಾರೆ.

ಸೂತ್ರಕಾರರು 'ತತ್ಪ್ರಾಕ್ಶ್ರುತೇಃ' ಎಂದು ಹೇಳಬಾರದಿತ್ತು. 'ತತ್ಪಶ್ಚಾತ್ ಶ್ರುತೇಃ' ಎಂದು ಹೇಳಬೇಕಿತ್ತು. ಹೀಗೆ ಹೇಳಿದರೆ 'ತತ್' ಎಂಬ ಪದದಿಂದ ಇಂದ್ರಿಯಗಳನ್ನೇ ವಿವಕ್ಷಿಸಬಹುದು. ಈ ಇಂದ್ರಿಯಗಳು ಶ್ರುತವಾದ ಮೇಲೆ 'ವ್ಯುಚ್ಚರಂತಿ' ಎಂಬ ಪದವು ಕೇಳಿಸುತ್ತಿದೆ ಎಂಬ ಸೌಲಭ್ಯವೂ ಒದಗುತ್ತದೆ. ಆದರೆ ಸೂತ್ರಕಾರರು 'ಪ್ರಾಕ್ಶ್ರುತೇಃ' ಎಂದು ಹೇಳಿದರೆ 'ವ್ಯುಚ್ಚರಂತಿ' ಎಂಬ ಸಂಗ್ರಹವು ಆಗುವುದಿಲ್ಲ. ಅದರಂತೆ 'ತತ್ಪಶ್ಚಾತ್ ಶ್ರುತೇಃ' ಎಂದು ಹೇಳಿದರೆ 'ಏತಸ್ಮಾಜ್ಜಾಯತೇ' ಎಂಬುದರ ಸಂಗ್ರಹ ಆಗುವುದಿಲ್ಲ. ಎರಡೂ ಸಂಗ್ರಹವಾಗುವುದಕ್ಕಾಗಿ ಮತ್ತು ತತ್‌ಶಬ್ದದಿಂದ ಹಿಂದಿನ ಸೂತ್ರದಲ್ಲಿ ಪ್ರಕೃತವಾದ ಇಂದ್ರಿಯಗಳ ಲಾಭಕ್ಕೋಸ್ಕರ ಸೂತ್ರಕಾರರು 'ತತ್‌ಸಹಶ್ರುತೇಃ ಎಂದೇ ಹೇಳಬೇಕು. ಹೀಗೆ ಹೇಳಿದಾಗ ಆ ಇಂದ್ರಿಯಗಳ ಜೊತೆ ಭೂತಗಳಿಗೆ ಜನ್ಮವು ಶ್ರುತವಾಗಿರುವುದರಿಂದ ಎಂದು ಅಥವಾ ಭೂತಗಳ ಜೊತೆ ಇಂದ್ರಿಯಗಳಿಗೆ ಜನ್ಮವು ಶ್ರುತವಾಗಿರುವುದರಿಂದ ಎಂದು ಎರಡೂ ಬಗೆಯಿಂದಲೂ ವ್ಯಾಖ್ಯಾನ ಮಾಡುವುದು ಸ್ವರಸವಾಗುತ್ತದೆ. ಆದ್ದರಿಂದ ಅದ್ವೈತಿಗಳ ಪ್ರಕಾರ 'ತತ್ಪ್ರಾಕ್ಶ್ರುತೇಃ' ಎಂಬ ಸೂತ್ರವಿನ್ಯಾಸವೇ ತಪ್ಪಾಗುತ್ತದೆ.

**प्रकाशः –** सिद्धान्तेऽपि तत्प्राङ्मनःश्रुतेरिति निर्देशः स्यादित्यत आह – **मम मते त्विति** ।। चकारः पूर्वशेषतासूचक इत्यत आह – **तथेति** ।। ''सर्वधर्मोपपत्तेश्च'' इत्यादाविवेति भावः ।

ಸಿದ್ಧಾಂತಕಾರರಾದ ನೀವು 'ಮನಃ' ಎಂಬ ಪದವನ್ನು ಹೇಳಬೇಕಿತ್ತಲ್ಲವೇ ? ಎಂಬ ಪ್ರಶ್ನೆಗೆ 'ಮಮ ಮತೇ ತು' ಎಂಬುದರಿಂದ ಉತ್ತರಿಸುತ್ತಿದ್ದಾರೆ. 'ಪ್ರಾಕ್' ಎಂಬ ಪದದಿಂದಲೇ ಮನಸ್ಸಿನ ಸಂಗ್ರಹವೂ ಕೂಡ ಆಗಿದೆ ಎಂದಭಿಪ್ರಾಯ. ಸೂತ್ರದಲ್ಲಿ ಚ ಶಬ್ದ ಇರುವುದರಿಂದ ಇದನ್ನು ಪ್ರತ್ಯೇಕ ಅಧಿಕರಣವೆಂದು ಹೇಗೆ ಹೇಳುತ್ತೀರಿ? ಹಿಂದಿನ ಅಧಿಕರಣದ ಶೇಷವೆಂದು ಹೇಳಬೇಕಲ್ಲವೇ? ಎಂಬ ಪ್ರಶ್ನೆಗೆ ಅದು ಅನುಕ್ತಸಮುಚ್ಚಯವೆಂದು 'ತಥಾ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. 'ಸರ್ವಧರ್ಮೋಪಪತ್ತೇಶ್ಚ' ಎಂಬಲ್ಲಿ ಹೇಗೆ ಚಶಬ್ದವು ಪ್ರತ್ಯೇಕಧಿಕರಣವೆಂದು ಸೂಚನೆ ಮಾಡುವುದಿಲ್ಲವೋ ಅದರಂತೆ ಇಲ್ಲೂ ಕೂಡ ಪ್ರತ್ಯೇಕಧಿಕರಣವಲ್ಲವೆಂದೇ ತಿಳಿಯಬೇಕು.

## तात्पर्यचन्द्रिका

**यच्चोक्तं ''यत्रापि छान्दोग्ये प्राणानामुत्पत्तिरनुक्तेति ब्रूषे तत्राप्युक्तेति ब्रूमहे । यतोऽस्मिन्नेव प्रकरणे अन्नमयं हि सोम्य मन आपोमयः प्राणस्तेजोमयी वागिति वागादीनां तेजआदिपूर्वकत्वात्'' इति ''तत्पूर्वकत्वात्'' इति सूत्रार्थ इति ।**

ಅದ್ವೈತಿಗಳು 'ತತ್ಪೂರ್ವಕತ್ವಾದ್ವಾಚಃ' ಎಂಬ ಸೂತ್ರಕ್ಕೆ ಹೀಗೆ ವ್ಯಾಖ್ಯಾನ ಮಾಡುತ್ತಾರೆ – ಪೂರ್ವಪಕ್ಷಿಯನ್ನು ನೋಡಿ ಅದ್ವೈತಿಗಳು ಹೀಗೆ ಹೇಳುತ್ತಾರೆ– ಛಾಂದೋಗ್ಯದ ಸೃಷ್ಟಿ ಪ್ರಕರಣದಲ್ಲಿ 'ತತ್ತೇಜೋ ಅಸೃಜತ' ಇತ್ಯಾದಿಯಾಗಿ ತೇಜಸ್ಸು, ನೀರು ಮೊದಲಾದವುಗಳಿಗೆ ಸೃಷ್ಟಿಯನ್ನು ಹೇಳಲಾಗಿದೆ. ಆದರೆ ಇಂದ್ರಿಯಗಳಿಗೆ ಉತ್ಪತ್ತಿಯನ್ನು ಅಲ್ಲಿ ಹೇಳಿಯೇ ಇಲ್ಲ. ಆದ್ದರಿಂದ ಇಂದ್ರಿಯಗಳು ಅನಾದಿಯಾಗಿವೆ ಎಂದು ಪೂರ್ವಪಕ್ಷ ಮಾಡಬೇಕು. ಇದರ ಮೇಲೆ ಅಭ್ಯಧಿಕಾಶಂಕೆಯು ಬಂದಿತ್ತು. ಅದೇ ಛಾಂದೋಗ್ಯಪ್ರಕರಣದಲ್ಲಿ ಆಕಾಶ, ವಾಯುಗಳಿಗೂ ಕೂಡ ಉತ್ಪತ್ತಿಯನ್ನು ಹೇಳಿರುವುದಿಲ್ಲ. ಆದರೂ ಕೂಡ ಅವುಗಳಿಗೆ ಉತ್ಪತ್ತಿಯು ಸಿದ್ಧವಾಗುವುದಾದರೆ ಇಂದ್ರಿಯಗಳಿಗೂ ಕೂಡ ಉತ್ಪತ್ತಿಯು ಸಿದ್ಧವಾಗಲಿ ಎಂದು.

ಇದು ತಪ್ಪು. ಏಕೆಂದರೆ 'ಅಸದ್ವಾ ಇದಮಗ್ರ ಆಸೀತ್' ಇತ್ಯಾದಿಯಾಗಿ ಇಂದ್ರಿಯಗಳು ಜಗದುತ್ಪತ್ತಿಯ ಮೊದಲೂ ಕೂಡ ಅಸ್ತಿತ್ವವನ್ನು ಪಡೆದಿದ್ದವು ಎಂದು ಹೇಳಲಾಗಿದೆ. ಆದ್ದರಿಂದ ಇಂದ್ರಿಯಗಳು ಅನಾದಿಯಾಗಿವೆ ಎಂದು ಪೂರ್ವಪಕ್ಷ ಮಾಡಲಾಗಿದೆ. ಇಂತಹ ಪೂರ್ವಪಕ್ಷಿಯನ್ನು ಕುರಿತು ಸೂತ್ರಕಾರರು ಹೇಳುತ್ತಾರೆ – ಯಾವ ಛಾಂದೋಗ್ಯದ ಸೃಷ್ಟಿ ಪ್ರಕರಣದಲ್ಲಿ ಇಂದ್ರಿಯಗಳಿಗೆ ಉತ್ಪತ್ತಿಯು ಹೇಳಿಲ್ಲವೆಂದು ತಿಳಿದಿರುವೆಯೋ ಅದೇ ಪ್ರಕರಣದಲ್ಲೇ ಇಂದ್ರಿಯಗಳಿಗೆ ಉತ್ಪತ್ತಿಯು ಹೇಳಲ್ಪಟ್ಟಿದೆ. 'ಅನ್ನಮಯಂ ಹಿ ಸೋಮ್ಯ ಮನಃ ಆಪೋಮಯಃ ಪ್ರಾಣಸ್ತೇಜೋಮಯೀ ವಾಕ್' ಮನಸ್ಸು ಅನ್ನದಿಂದ ಹುಟ್ಟುತ್ತದೆ, ಪ್ರಾಣವು ಇಂದ್ರಿಯಗಳಿಂದ ಹುಟ್ಟುತ್ತದೆ, ವಾಗಿಂದ್ರಿಯವು ತೇಜಸ್ಸಿನಿಂದ ಹುಟ್ಟುತ್ತದೆ ಎಂದು. ಇಲ್ಲಿರುವ ವಾಕ್ ಎಂಬ ಪದವು ಮನಸ್ಸು ಹಾಗೂ ಪ್ರಾಣಗಳಿಗೆ ಉಪಲಕ್ಷಕವಾಗಿದೆ. 'ತತ್ಪೂರ್ವಕತ್ವಾತ್' ಎಂದರೆ ತೇಜಸ್ಸು, ವಾಕ್, ಪ್ರಾಣ ಇವುಗಳನ್ನು ವಿವಕ್ಷಿಸಬೇಕು. ಈಗ ಇಲ್ಲಿ ತೇಜಸ್ಸಿನ ಕಾರ್ಯ ವಾಗಿಂದ್ರಿಯವಾಗಿದೆ, ನೀರಿನ ಕಾರ್ಯ ಪ್ರಾಣ ಎನಿಸಿದೆ, ಅನ್ನದ ಕಾರ್ಯ ಮನಸ್ಸು ಆಗಿದೆ. ಹೀಗೆ ಸೂತ್ರಾರ್ಥವನ್ನು ಅದ್ವೈತಿಗಳು ಹೇಳಿದ್ದಾರೆ, ಇದು ತಪ್ಪು.

**तन्न । मम रीत्या सूत्रस्थतच्छब्दस्य पूर्वसूत्रप्रकृतमनःपरत्वं, वाक्शब्दस्य केवलवाक्परत्वञ्चाश्रित्य साधारणज्ञानेन्द्रियमनोनित्यत्वानित्यत्वश्रुतिविरोध परिहारेऽभ्यधिकाशङ्कयोत्थितस्यासाधारणकर्मेन्द्रियवाङ्नित्यत्वानित्यत्वश्रुति-विरोधस्यावश्यनिरसनीयस्य निरासेनाधिकरणान्तरत्वसम्भवे तच्छब्दस्य पूर्वाप्रकृत-तेजोबन्नपरत्वं वाक्शब्दस्य वाक्प्राणमनोलक्षकत्वञ्चाश्रित्यावश्यावक्तव्यस्याहङ्कारिकाणां मनआदीनां प्रत्यहमन्नादिभिराप्यायनस्योक्तया पूर्वशेषत्वायोगात् । नहि वायु विकारस्य प्राणस्याग्निद्वारा वायुकार्थअप्कार्यत्वं युक्तम् ।**

ಅದ್ವೈತಿಗಳ ಈ ಸೂತ್ರವ್ಯಾಖ್ಯಾನವು ಅಯುಕ್ತವಾಗಿದೆ. ಏಕೆಂದರೆ ನಾವು ಹೇಳುವಂತೆ ಸೂತ್ರದಲ್ಲಿರುವ ತತ್‌ಶಬ್ದವು ಹಿಂದಿನ ಸೂತ್ರದಲ್ಲಿ ಪ್ರಕೃತವಾದ ಮನಸ್ಸನ್ನು ಹೇಳುತ್ತಿದೆ ಎಂದು ಹೇಳುವುದು ಸುಲಭ. ಏಕೆಂದರೆ ಇಂದ್ರಿಯಗಳ ಜನ್ಮಕ್ಕಿಂತ ಪೂರ್ವದಲ್ಲಿ ಮನಸ್ಸಿನ ಜನ್ಮವನ್ನು ಆ ಸೂತ್ರವು ಹೇಳಿದೆ. ಹಿಂದಿನ ಸೂತ್ರದಲ್ಲಿ ಪ್ರಸಕ್ತವಾದ ಆ ಮನಸ್ಸನ್ನೇ ಪ್ರಕೃತ 'ತತ್ಪೂರ್ವಕತ್ವಾತ್' ಎಂಬಲ್ಲಿರುವ ತತ್ ಪದದಿಂದ ವಿವಕ್ಷಿಸಬೇಕು. ಹೀಗೆ ಪೂರ್ವಪ್ರಕೃತವಾದ ಮನಸ್ಸು ಎಂಬುದನ್ನು ಬಿಟ್ಟು ಅಪ್ರಕೃತವಾದ ತೇಜೋಬನ್ನಪರ ಎಂದು ಹೇಳುವುದು ಅಯುಕ್ತವಾಗಿದೆ.

ಮತ್ತೊಂದು ದೋಷ – ವಾಕ್ ಶಬ್ದವು ನಮ್ಮ ಪ್ರಕಾರ ವಾಗಿಂದ್ರಿಯವನ್ನಷ್ಟೇ ಹೇಳುತ್ತದೆ. ವಾಗಿಂದ್ರಿಯವು ಮನಸ್ಸಿನಿಂದ ಹುಟ್ಟುತ್ತದೆ ಎಂದು ಹೇಳಿದಂತಾಗುತ್ತದೆ. ಆದರೆ ನೀವು ಲಕ್ಷಣಾ ಮಾಡಿ ವಾಗಿಂದ್ರಿಯವನ್ನು ವಿವಕ್ಷಿಸಿ ಮನಸ್ಸು ಹಾಗೂ ಪ್ರಾಣಗಳನ್ನೂ ಕೂಡ ಸೇರಿಸಿಕೊಳ್ಳುತ್ತಿರುವಿರಿ. ಇದು ತಪ್ಪು.

ನಮಗೆ ಪೂರ್ವಸಂಗತಿ ಇರುತ್ತದೆ. ಮನಸ್ಸಿನ ಉತ್ಪತ್ತಿ ಅನುತ್ಪತ್ತಿ ಶ್ರುತಿಗಳ ವಿರೋಧವನ್ನು ಹಿಂದೆ ಪರಿಹಾರ ಮಾಡಿದ್ದಾಯಿತು. ಸಕಲ ಇಂದ್ರಿಯಗಳಿಂದ ಜ್ಞಾನವು ಹುಟ್ಟಬೇಕೆಂದರೆ ಮನಸ್ಸು ಅತ್ಯಂತ ಆವಶ್ಯಕ. ಹೀಗೆ ಸರ್ವಕರ್ಮ, ಸರ್ವಜ್ಞಾನಗಳಿಗೆ ಜನಕತ್ವೇನ ಸಾಮಾನ್ಯವಾದ ಇಂದ್ರಿಯವೆಂದರೆ ಅದು ಮನಸ್ಸು. ಈ ಮನಸ್ಸಿನ ವಿಷಯದಲ್ಲಿ ಉತ್ಪತ್ತಿ ಹಾಗೂ ಅನುತ್ಪತ್ತಿಯಲ್ಲಿ ಬರುವ ವಿರೋಧವನ್ನು ಹಿಂದಿನ ಅಧಿಕರಣದಲ್ಲಿ ಪರಿಹಾರ ಮಾಡಿದ್ದಾಯಿತು. ಹೀಗೆ ಹೇಳಿದಾಗ ವಾಗಿಂದ್ರಿಯವೂ ಕೂಡ ನಿತ್ಯವಾಗಿದೆ ಎಂದು ಶ್ರುತಿ ಹೇಳುತ್ತದೆ. ನಿತ್ಯ ಎಂದು ಹೇಳುವ ಶ್ರುತಿಯು ಸಯುಕ್ತಿಕವಾಗಿದೆ, ಆದ್ದರಿಂದ ಕೇವಲ ಉಪಚಯ ಮಾತ್ರದಿಂದ ಇದಕ್ಕೆ ಗೌಣಾರ್ಥವನ್ನು ಮಾಡಲು ಸಾಧ್ಯವಿಲ್ಲ ಎಂಬುದಾಗಿ ಅಧಿಕಾಶಂಕೆಯು ಪ್ರಾಪ್ತವಾಗುತ್ತದೆ. ತನ್ಮೂಲಕವಾಗಿ ವಾಗಿಂದ್ರಿಯದ ನಿತ್ಯತ್ವ, ಅನಿತ್ಯತ್ವ ಶ್ರುತಿಗಳ ವಿರೋಧವು ಪ್ರಾಪ್ತವಾಗುತ್ತದೆ. ಆದರೆ ಈ ವಾಗಿಂದ್ರಿಯವು ಕೇವಲ ಮಾತನಾಡುವಿಕೆ ಎಂಬ ಕ್ರಿಯೆಗೆ ಮಾತ್ರ ಕಾರಣವಾಗುತ್ತವೆ. ಆದ್ದರಿಂದ ಇದು ಅಸಾಧಾರಣಕಾರಣವಾಗಿದೆ. ಮತ್ತು ಮನಸ್ಸು ಜ್ಞಾನೇಂದ್ರಿಯವಾಗಿದೆ, ಈ ವಾಗಿಂದ್ರಿಯವು ಕರ್ಮೇಂದ್ರಿಯವಾಗಿದೆ. ಇಂತಹ ಜ್ಞಾನೇಂದ್ರಿಯದ ನಿತ್ಯತ್ವ, ಅನಿತ್ಯತ್ವ ಶ್ರುತಿ ವಿರೋಧವನ್ನು ಅವಶ್ಯವಾಗಿ ಪರಿಹಾರ ಮಾಡಲೇಬೇಕು. ಅದಕ್ಕಾಗಿ ಈ ಅಧಿಕರಣವು ಹೊರಟಿದೆ ಎಂದು ಸುಲಭವಾಗಿ ಹೇಳಲು ಬರುವಾಗ ನಿಮ್ಮ ವ್ಯಾಖ್ಯಾನ ಅಯುಕ್ತವಾಗಿದೆ.

ಪರಿಪೂರ್ಣಚಂದ್ರಿಕಾ

ಅದ್ವೈತಿಗಳ ಪ್ರಕಾರ ಈ ಅಧಿಕರಣವು ಅವಶ್ಯ ವಕ್ತವ್ಯವೇ ಆಗುವುದಿಲ್ಲ. ಏಕೆಂದರೆ ವಾಕ್, ಮನಸ್ಸು, ಪ್ರಾಣ ಈ ಮೂರೂ ಕೂಡ ತೇಜೋ, ಅಪ್, ಅನ್ನ ಇವುಗಳ ಕಾರ್ಯವಾಗಿದೆ ಎಂದು. ಆದರೆ ಇದು ಸರಿಯಲ್ಲ. ಮನಸ್ಸು ಅನ್ನದ ಕಾರ್ಯವೇ ಅಲ್ಲ. ವಾಕ್ ತೇಜಸ್ಸಿನ ಕಾರ್ಯವೂ ಅಲ್ಲ, ಪ್ರಾಣವು ಅಪ್‌ನ ಕಾರ್ಯವೂ ಅಲ್ಲ. ಕೇವಲ ವೈಕಾರಿಕ ತೇಜಸ್ಸಿನಿಂದ ಮನಸ್ಸಿನ ಉಪಚಯವಾಗುತ್ತದೆ. ವಾಗಿಂದ್ರಿಯಕ್ಕೆ ತೇಜಸಾಹಂಕಾರ ಹಾಗೂ ಭೂತಗಳಿಂದ ಉಪಚಯವಿದೆ. ಪ್ರಾಣ ಎಂದರೆ ಶರೀರದಲ್ಲಿರುವ ವಾಯುವಿಶೇಷ, ಇದು ವಾಯುವಿನ ವಿಕಾರವಾಗಿದೆ. ಇಂತಹ ವಾಕ್, ಮನಸ್ಸು, ಪ್ರಾಣ ಮೂರಕ್ಕೆ ಶ್ರುತಿಯು 'ಅನ್ನಮಯಂ ಹಿ ಸೌಮ್ಯ ಮನಃ' ಎಂಬ ಶ್ರುತಿ ಹಾಗೂ 'ಆಪೋಮಯೀ ಪ್ರಾಣಃ ತೇಜೋಮಯೀ ವಾಕ್' ಎಂಬುದಾಗಿ ಈ ಮೂರರಿಂದ ಮನಸ್ಸು ಮೊದಲಾದವುಗಳು ಆಪ್ಯಾಯನವನ್ನು ಹೊಂದುತ್ತವೆ ಎಂದಷ್ಟೇ ಅರ್ಥ. ಮನಸ್ಸು ವೈಕಾರಿಕ ಅಹಂಕಾರದಿಂದ ಜನ್ಮವನ್ನು ತಾಳಿದೆ. ಆದರೆ ನಾವು ಪ್ರತಿನಿತ್ಯ ಸೇವಿಸುವ ಅನ್ನದಿಂದ ಆಪ್ಯಾಯನವಾಗುತ್ತದೆ. ತಿಂದ ಅನ್ನವು ಮೂರು ವಿಧವಾಗುತ್ತದೆ. ಅದರಲ್ಲಿರುವ ಸೂಕ್ಷ್ಮಭಾಗದಿಂದ ಮನಸ್ಸು ಆಪ್ಯಾಯನ ಹೊಂದುತ್ತದೆ ಎಂದು ಇದೇ ಛಾಂದೋಗ್ಯ ಉಪನಿಷತ್ತು ವಿವರಿಸುತ್ತಿದೆ. ಆಪ್ಯಾಯನ ಎಂದರೆ 'ಸ್ವಕಾರ್ಯಕರಣೌನ್ಮುಖ್ಯಂ' ಎಂದರ್ಥ. ಇದರಂತೆ ನೀರಿನಿಂದ ಪ್ರಾಣಕ್ಕೆ ಆಪ್ಯಾಯನವಾಗುತ್ತದೆ. ತೇಜಸ್ಸಿನಿಂದ ವಾಗಿಂದ್ರಿಯಕ್ಕೆ ಆಪ್ಯಾಯನವಾಗುತ್ತದೆ. ಇದನ್ನು ಶ್ರುತಿ ಹೇಳುತ್ತಿದೆ ಹೊರತು ಕಾರ್ಯಕಾರಣಭಾವವನ್ನು ಹೇಳಲು ಶ್ರುತಿ ಹೊರಟಿಲ್ಲ.

ಮತ್ತು ಅಗ್ನಿಯ ಮೂಲಕ ವಾಯುವಿನ ಕಾರ್ಯ ನೀರು ಆಗಿದೆ. ಇಂತಹ ನೀರಿನ ಕಾರ್ಯ ವಾಯುವಾಗಲು ಸಾಧ್ಯವಿಲ್ಲ. ಏಕೆಂದರೆ ನೀರಿಗೆ ವಾಯು ಮೂಲಕಾರಣವಾಗಿದೆ. ಪುನಃ ಇದು ನೀರಿನ ಕಾರ್ಯವಾಗಲು ಸಾಧ್ಯವಿಲ್ಲ.

**केचित्तु यथा जीवोऽनादिस्तथा प्राणा अप्यनादयः । ''प्राणा वाव ऋषयः'' इति श्रुतेरिति ''तथा'' इति सूत्रेण पूर्वपक्षय्य तत्र प्राणशब्दो ब्रह्मपरः । बहुवचनश्रुतिस्तु गौणी । ब्रह्मणि बहुत्वासम्भवादिति ''गौणी'' इत्यादिसूत्रैः सिद्धान्तितमित्याहुः ।**

ರಾಮಾನುಜರ ವ್ಯಾಖ್ಯಾನ ಹೀಗಿದೆ – ಹೇಗೆ ಜೀವನು ಅನಾದಿಯಾಗಿದ್ದಾನೋ ಹಾಗೆ ಪ್ರಾಣಗಳೂ ಕೂಡ ಅನಾದಿಯಾಗಿವೆ. 'ಪ್ರಾಣಾ ವಾವ ಋಷಯಃ' ಎಂಬ ಶ್ರುತಿಯೇ ಇದಕ್ಕೆ ಆಧಾರವಾಗಿದೆ. ಹೀಗೆ 'ತಥಾ ಪ್ರಾಣಾಃ' ಎಂಬ ಸೂತ್ರವನ್ನು ಪೂರ್ವಪಕ್ಷಪರವಾಗಿ ವ್ಯಾಖ್ಯಾನ ಮಾಡುತ್ತಾರೆ. ಮತ್ತು ಈ ಸೂತ್ರದಲ್ಲಿರುವ ಪ್ರಾಣ ಶಬ್ದವು ಬ್ರಹ್ಮಪರವಾಗಿದೆ ಎಂದೂ, ಪ್ರಾಣಾಃ ಎಂಬ ಬಹುವಚನವು ಗೌಣವಾಗಿದೆ ಎಂದೂ ಹೇಳುತ್ತಾರೆ. ಬ್ರಹ್ಮನಲ್ಲಿ ಬಹುತ್ವವು ಅಸಂಭಾವಿತವಾದ್ದರಿಂದ ಬಹುವಚನವನ್ನು ಗೌಣಾರ್ಥವುಳ್ಳದ್ದು ಎಂದು ಹೇಳಬೇಕು ಎಂಬುದಾಗಿ ಸಿದ್ಧಾಂತವನ್ನು ಸ್ಥಾಪನೆ ಮಾಡಿದ್ದಾರೆ.

तन्न । जीवानुत्पत्तेर्वियदाद्युत्पत्तेश्च बहुव्यवधाने समानेऽपि जडेषु **प्राणेष्वभ्यर्हितस्योत्पत्तिमत्त्वेन वियदादिजडसाम्यस्योक्त्या सिद्धान्तत्वसम्भवे उत्तरत्र** सिद्धान्तद्योतकतुशब्दादेरभावे च ''तथा'' इति सूत्रस्य पूर्वपक्षत्वायोगात् ।

ಇದು ತಪ್ಪು. ತಥಾ ಎಂಬ ಪದದಿಂದ ಸಿದ್ಧಾಂತಿಗಳಾದ ನಾವು ಆಕಾಶದ ಉತ್ಪತ್ತಿಯನ್ನು ಪರಾಮರ್ಶೆ ಮಾಡುತ್ತೇವೆ. ನೀವು 'ಜ್ಞೋತ ಏವ' ಎಂಬ ಸೂತ್ರದಿಂದ ಪ್ರಸಕ್ತವಾದ ಜೀವನ ಅನಾದಿತ್ವವನ್ನು ಪರಾಮರ್ಶೆ ಮಾಡುತ್ತಿದ್ದೀರಿ. ಇಬ್ಬರೂ ಕೂಡ ಬಹುದೂರದಲ್ಲಿರುವುದನ್ನೇ ಪರಾಮರ್ಶೆ ಮಾಡುತ್ತಿರುವುದರಿಂದ ವ್ಯವಹಿತಪರಾಮರ್ಶ ಸಮಾನವಾಗುತ್ತದೆ. ಆದರೆ ನಿಮಗೆ ಒಂದು ಅಸಾಧಾರಣವಾದ ದೋಷವಿದೆ. ಜಡಪದಾರ್ಥದ ದೃಷ್ಟಾಂತವನ್ನು ನೀಡುವುದು ಸ್ವರಸವಾಗುತ್ತದೆ. ನಾವು ಇಂದ್ರಿಯಗಳ ಉತ್ಪತ್ತಿಗೆ ಭೂತಗಳ ಉತ್ಪತ್ತಿಯನ್ನು ದೃಷ್ಟಾಂತವನ್ನಾಗಿ ನೀಡಿದ್ದು ಸಾಧುವಾಗಿದೆ. ಆದರೆ ನೀವು ವಿಜಾತೀಯನಾದ ಜೀವನನ್ನು ಉದಾಹರಣೆಯನ್ನಾಗಿ ನೀಡುತ್ತಿದ್ದೀರಿ. ಮತ್ತು ಜೀವ ಹೇಗೆ ಅನಾದಿಯೋ ಅದರಂತೆ ಇಂದ್ರಿಯಗಳು ಅನಾದಿಯಾಗಿವೆ ಎನ್ನುವುದು ಪೂರ್ವಪಕ್ಷಸ್ಥಾಪಕವಾಗುತ್ತದೆ. ವೇದಾದಿಗಳು ಹೇಗೆ ಸಾದಿಯೋ ಅದರಂತೆ ಇಂದ್ರಿಯಗಳೂ ಕೂಡ ಸಾದಿಯಾಗಿವೆ ಎಂದರೆ ಸಿದ್ಧಾಂತಸೂತ್ರವಾಗುತ್ತದೆ. ಹೀಗೆ ಸುಲಭವಾಗಿ ಸಿದ್ಧಾಂತಸೂತ್ರವನ್ನಾಗಿ ಪರಿಗಣಿಸಲು ಬರುವಾಗ ಪೂರ್ವಪಕ್ಷ ಸೂತ್ರವೆನ್ನುವುದು ತಪ್ಪು. ಮತ್ತು ಮುಂದೆ ಸಿದ್ಧಾಂತ ದ್ಯೋತಕವಾದ ಯಾವುದೇ ತು ಶಬ್ದ ಮೊದಲಾದವು ಇಲ್ಲದಿದ್ದಾಗ 'ತಥಾ ಪ್ರಾಣಃ' ಎಂಬ ಸೂತ್ರವು ಪೂರ್ವಪಕ್ಷ ಪ್ರಾಪಕವಾಗಿದೆ ಎನ್ನುವುದು ಅಸಂಗತವಾಗುತ್ತದೆ.

**ननु जीवानुत्पत्त्यनन्तरस्य जीवाणुत्वादेः प्रासङ्गिकत्वादव्यवधायकत्वमिति चेन्न।**

ಜೀವನ ಅನಾದಿತ್ವವನ್ನು ಹೇಳಿದ ಮೇಲೆ ಜೀವನ ಅಣುತ್ವಾದಿಗಳು ಪ್ರಾಸಂಗಿಕವಾಗಿ ಪ್ರಸಕ್ತವಾಗುತ್ತವೆ. ಆದ್ದರಿಂದ ಜೀವನ ಅನಾದಿತ್ವವನ್ನು ದೃಷ್ಟಾಂತವನ್ನಾಗಿ ಸ್ವೀಕರಿಸುವುದು ಅವ್ಯವಧಾಯಕ ಆಗುವುದಿಲ್ಲ.

ಹೀಗೆ ಆಕ್ಷೇಪ ಮಾಡಬಾರದು.

**जन्मादिसूत्रनिर्वाहकवियदाद्युत्पत्त्यनन्तरस्य तदनिर्वाहकस्य जीवानुत्पत्त्यादेरपि प्रासङ्गिकत्वात् ।**

ಜನ್ಮಾದಿಸೂತ್ರದಲ್ಲಿ ಸಕಲ ಪದಾರ್ಥಗಳ ಸೃಷ್ಟಿಯನ್ನು ಬ್ರಹ್ಮನು ಮಾಡುತ್ತಾನೆಂದು ಹೇಳಲಾಗಿದೆ. ಆದ್ದರಿಂದ ಆಕಾಶಾದಿಗಳ ಉತ್ಪತ್ತಿಯು ಜನ್ಮಾದಿಸೂತ್ರದ ಪ್ರಮೇಯಕ್ಕೆ ನಿರ್ವಾಹಕವಾಯಿತು. ಇದರ ಅನಂತರ ಜೀವದ ಅನುತ್ಪತ್ತಿಯನ್ನು ಸಮರ್ಥನೆ ಮಾಡಲಾಗಿದೆ. ಇದು ಜನ್ಮಾದಿಸೂತ್ರದ ಪ್ರಮೇಯಕ್ಕೆ ವಿರುದ್ಧವಾದ್ದರಿಂದ ನಿರ್ವಾಹಕವಾಗಿರುವುದಿಲ್ಲ. ಪ್ರಕೃತ ಜೀವರ ಅಣುತ್ವವು ಪ್ರಾಸಂಗಿಕವೆನ್ನುವುದಾದರೆ ಜೀವರ ಅನಾದಿತ್ವವೂ ಕೂಡ ಪ್ರಾಸಂಗಿಕವಾಗಬೇಕಾದೀತು.

**प्राणा वाव ऋषय इति वाक्ये बहुत्वस्य गौणत्वेऽपि प्राणा एवानादय इति प्राणानादित्वश्रुतेर्गौणत्वं विनोत्पत्त्यसिध्या ''गौणि'' इति सूत्रेऽनादित्वश्रुतिर्गौणीत्येव वक्तव्यत्वाच्च ।**

ನೀವು 'ಪ್ರಾಣಾ ವಾವ ಋಷಯಃ' ಎಂಬ ವಾಕ್ಯದಲ್ಲಿರುವ ಬಹುತ್ವಕ್ಕೆ ಗೌಣತ್ವವನ್ನು ಹೇಳಲು ಗೌಣ್ಯಸಂಭವಾತ್ ಇತ್ಯಾದಿ ಸೂತ್ರಗಳು ಹೊರಟಿವೆ ಎಂದು ಹೇಳುವಿರಿ. ನಿಜವಾಗಿಯೂ ಕೂಡ ಬಹುತ್ವಕ್ಕೆ ಗೌಣತ್ವವನ್ನು ಹೇಳಲು ಈ ಸೂತ್ರವು ಹೊರಟಿಲ್ಲ. ಇಂದ್ರಿಯಗಳ ಅನಾದಿತ್ವ ಶ್ರುತಿಗೆ ಗೌಣತ್ವವನ್ನು ಹೇಳಲು ಹೊರಟಿದೆ ಎಂದು ನೀವು ಹೇಳಬೇಕು. ಏಕೆಂದರೆ 'ಪ್ರಾಣಾಃ ಏವ ಅನಾದಯಃ' ಎಂಬ ಶ್ರುತಿಯು ಇಂದ್ರಿಯಗಳಿಗೆ ಅನಾದಿತ್ವವನ್ನು ಹೇಳುತ್ತಿದೆ. ಈ ಶ್ರುತಿಗೆ ಗೌಣಾರ್ಥವನ್ನು ಮಾಡದೇ 'ಪ್ರಾಣಾ ವಾವ ಋಷಯಃ' ಎಂಬ ಶ್ರುತಿಯಿಂದ ಇಂದ್ರಿಯಗಳಿಗೆ ಉತ್ಪತ್ತಿಯನ್ನು ಸಮರ್ಥನೆ ಮಾಡಲು ನಿಮ್ಮಿಂದ ಸಾಧ್ಯವಾಗುವುದಿಲ್ಲ. ಆದ್ದರಿಂದ ಪ್ರಧಾನ ಪ್ರಮೇಯವೆಂದರೆ ಇಂದ್ರಿಯಗಳಿಗೆ ಅನಾದಿತ್ವವನ್ನು ಸಮರ್ಥಿಸುವ ಶ್ರುತಿಗೆ ಗೌಣಾರ್ಥವನ್ನು ಮಾಡುವುದೇ ಆಗಿದೆ. ಇದನ್ನೇ 'ಗೌಣ್ಯಸಂಭವಾತ್' ಎಂಬ ಸೂತ್ರವು ಪ್ರತಿಪಾದನೆ ಮಾಡಬೇಕು.

**यच्चोक्तं तस्यैव ब्रह्मणस्सृष्टेः प्राक्श्रुतेर्ब्रह्मैव प्राणशब्दार्थ इति ''तत्प्राक्'' इति सूत्रार्थ इति**

'ತತ್ಪ್ರಾಕ್‌ಶ್ರುತೇಶ್ಚ' ಎಂಬ ಸೂತ್ರದ ಖಂಡಕ್ಕೆ ಪರರು ಹೀಗೆ ವ್ಯಾಖ್ಯಾನ ಮಾಡಿದ್ದಾರೆ. ಸೃಷ್ಟಿಯ ಮೊದಲು ಬ್ರಹ್ಮನು ಇದ್ದನು ಎಂದು ಶ್ರುತಿಯು ಹೇಳುತ್ತಿರುವುದರಿಂದ ಪ್ರಾಣ ಶಬ್ದದಿಂದ ಬ್ರಹ್ಮ ಎಂಬ ಅರ್ಥವನ್ನೇ ವಿವಕ್ಷಿಸಬೇಕು ಎಂದು.

**तन्न । सौत्रस्य तच्छब्दस्य पूर्वसूत्रनिर्दिष्टावश्यवक्तव्यप्राक्तावधि-भूतेन्द्रियपरत्वसम्भवे तदप्रकृतावश्यावक्तव्यप्राक्त्वानवधिरूपब्रह्मपरत्वायोगात् । सृष्टेः प्राक्कालकर्मजीवप्रकृत्यादिवत्पूर्वपक्षे प्राणानामपि सत्त्वसम्भवेन ब्रह्मण एवेत्यवधारणायोगाच्च ।**

ಇದು ತಪ್ಪು. ನಮ್ಮ ಪ್ರಕಾರ ಈ ಸೂತ್ರದ ಅರ್ಥ ಹೇಳುವುದೇ ಸ್ವರಸವಾಗಿದೆ. 'ತತ್' ಎಂದರೆ ಇಂದ್ರಿಯಗಳು ಎಂದರ್ಥ. ಇಂದ್ರಿಯಗಳನ್ನು ಹೇಳುವ ಪೂರ್ವದಲ್ಲೇ ಮನಸ್ಸನ್ನು ಹೇಳಿರುವುದರಿಂದ ಮನಸ್ಸಿಗೂ ಕೂಡ ಉತ್ಪತ್ತಿಯನ್ನು ಹೇಳಬೇಕು ಎಂದು ವ್ಯಾಖ್ಯಾನ ಮಾಡುತ್ತೇವೆ. ಹಿಂದಿನ ಸೂತ್ರದಲ್ಲಿ ಪ್ರಕೃತವಾದ ಇಂದ್ರಿಯವನ್ನೇ ತತ್ ಶಬ್ದದಿಂದ ಇಲ್ಲಿ ಪರಾಮರ್ಶೆ ಮಾಡುವುದು ಸುಲಭವಾಗಿದೆ. ಮತ್ತು 'ಪ್ರಾಕ್' ಎಂಬ ಪದವು ಅವಧಿ ಎಂಬ ಅರ್ಥವನ್ನು ಹೇಳುತ್ತದೆ. ಇಂದ್ರಿಯಗಳೆಂಬ ಅವಧಿಯನ್ನು ವಿವಕ್ಷಿಸಿ ನಾವು ಅರ್ಥ ಮಾಡುತ್ತೇವೆ. ನೀವು ಇವೆರಡನ್ನೂ ಕೂಡ ಮಾಡುತ್ತಿಲ್ಲ. ತತ್ ಶಬ್ದದಿಂದ ಬ್ರಹ್ಮನನ್ನು ವಿವಕ್ಷಿಸುತ್ತಿದ್ದೀರಿ. ಇವನು ಪ್ರಕೃತನೇ ಆಗಿಲ್ಲ. ಮತ್ತು ಬ್ರಹ್ಮನಿಗಿಂತ ಪೂರ್ವದಲ್ಲಿ ಎಂಬುದಾಗಿ ಪ್ರಾಕ್ ಶಬ್ದವು ಅವಧ್ಯರ್ಥಕವೂ ಆಗುವುದಿಲ್ಲ.

ಮತ್ತು ಸೃಷ್ಟಿಯ ಪೂರ್ವದಲ್ಲಿ ಕಾಲ, ಕರ್ಮ, ಜೀವ, ಪ್ರಕೃತಿ ಇವುಗಳು ಇರುವಂತೆ ಇಂದ್ರಿಯಗಳೂ ಕೂಡ ಇರುವುದರಿಂದ ಬ್ರಹ್ಮನೊಬ್ಬನೇ ಇರುತ್ತಾನೆ ಎಂಬ ಅವಧಾರಣವು ಅಯುಕ್ತವಾಗುತ್ತದೆ. ಪೂರ್ವಪಕ್ಷಿಯು ಇವುಗಳನ್ನೆಲ್ಲಾ ಅಂಗೀಕಾರ ಮಾಡುತ್ತಿರುವಾಗ ಬ್ರಹ್ಮನೊಬ್ಬನೇ ಇದ್ದಾನೆಂದು ಹೇಳಿದರೆ ಅವನು ಅದನ್ನು ಒಪ್ಪುವುದಿಲ್ಲ.

ತತ್‌ಪೂರ್ವಕತ್ವಾಧಿಕರಣ (೨-೪-೩)

ಇದು ತಪ್ಪು. ತಥಾ ಎಂಬ ಪದದಿಂದ ಸಿದ್ಧಾಂತಿಗಳಾದ ನಾವು ಆಕಾಶದ ಉತ್ಪತ್ತಿಯನ್ನು ಪರಾಮರ್ಶೆ ಮಾಡುತ್ತೇವೆ. ನೀವು 'ಜ್ಞೋತ ಏವ' ಎಂಬ ಸೂತ್ರದಿಂದ ಪ್ರಸಕ್ತವಾದ ಜೀವನ ಅನಾದಿತ್ವವನ್ನು ಪರಾಮರ್ಶೆ ಮಾಡುತ್ತಿದ್ದೀರಿ. ಇಬ್ಬರೂ ಕೂಡ ಬಹುದೂರದಲ್ಲಿರುವುದನ್ನೇ ಪರಾಮರ್ಶೆ ಮಾಡುತ್ತಿರುವುದರಿಂದ ವ್ಯವಹಿತಪರಾಮರ್ಶ ಸಮಾನವಾಗುತ್ತದೆ. ಆದರೆ ನಿಮಗೆ ಒಂದು ಅಸಾಧಾರಣವಾದ ದೋಷವಿದೆ. ಜಡಪದಾರ್ಥದ ದೃಷ್ಟಾಂತವನ್ನು ನೀಡುವುದು ಸ್ವರಸವಾಗುತ್ತದೆ. ನಾವು ಇಂದ್ರಿಯಗಳ ಉತ್ಪತ್ತಿಗೆ ಭೂತಗಳ ಉತ್ಪತ್ತಿಯನ್ನು ದೃಷ್ಟಾಂತವನ್ನಾಗಿ ನೀಡಿದ್ದು ಸಾಧುವಾಗಿದೆ. ಆದರೆ ನೀವು ವಿಜಾತೀಯನಾದ ಜೀವನನ್ನು ಉದಾಹರಣೆಯನ್ನಾಗಿ ನೀಡುತ್ತಿದ್ದೀರಿ. ಮತ್ತು ಜೀವ ಹೇಗೆ ಅನಾದಿಯೋ ಅದರಂತೆ ಇಂದ್ರಿಯಗಳು ಅನಾದಿಯಾಗಿವೆ ಎನ್ನುವುದು ಪೂರ್ವಪಕ್ಷಸ್ಥಾಪಕವಾಗುತ್ತದೆ. ವೇದಾದಿಗಳು ಹೇಗೆ ಸಾದಿಯೋ ಅದರಂತೆ ಇಂದ್ರಿಯಗಳೂ ಕೂಡ ಸಾದಿಯಾಗಿವೆ ಎಂದರೆ ಸಿದ್ಧಾಂತಸೂತ್ರವಾಗುತ್ತದೆ. ಹೀಗೆ ಸುಲಭವಾಗಿ ಸಿದ್ಧಾಂತಸೂತ್ರವನ್ನಾಗಿ ಪರಿಗಣಿಸಲು ಬರುವಾಗ ಪೂರ್ವಪಕ್ಷ ಸೂತ್ರವೆನ್ನುವುದು ತಪ್ಪು. ಮತ್ತು ಮುಂದೆ ಸಿದ್ಧಾಂತ ದ್ಯೋತಕವಾದ ಯಾವುದೇ ತು ಶಬ್ದ ಮೊದಲಾದವು ಇಲ್ಲದಿದ್ದಾಗ 'ತಥಾ ಪ್ರಾಣಃ' ಎಂಬ ಸೂತ್ರವು ಪೂರ್ವಪಕ್ಷ ಪ್ರಾಪಕವಾಗಿದೆ ಎನ್ನುವುದು ಅಸಂಗತವಾಗುತ್ತದೆ.

**ननु जीवानुत्पत्त्यनन्तरस्य जीवाणुत्वादेः प्रासङ्गिकत्वादव्यवधायकत्वमिति चेन्न।**

ಜೀವನ ಅನಾದಿತ್ವವನ್ನು ಹೇಳಿದ ಮೇಲೆ ಜೀವನ ಅಣುತ್ವಾದಿಗಳು ಪ್ರಾಸಂಗಿಕವಾಗಿ ಪ್ರಸಕ್ತವಾಗುತ್ತವೆ. ಆದ್ದರಿಂದ ಜೀವನ ಅನಾದಿತ್ವವನ್ನು ದೃಷ್ಟಾಂತವನ್ನಾಗಿ ಸ್ವೀಕರಿಸುವುದು ಅವ್ಯವಧಾಯಕ ಆಗುವುದಿಲ್ಲ.

ಹೀಗೆ ಆಕ್ಷೇಪ ಮಾಡಬಾರದು.

**जन्मादिसूत्रनिर्वाहकवियदाद्युत्पत्त्यनन्तरस्य तदनिर्वाहकस्य जीवानुत्पत्त्यादेरपि प्रासङ्गिकत्वात् ।**

ಜನ್ಮಾದಿಸೂತ್ರದಲ್ಲಿ ಸಕಲ ಪದಾರ್ಥಗಳ ಸೃಷ್ಟಿಯನ್ನು ಬ್ರಹ್ಮನು ಮಾಡುತ್ತಾನೆಂದು ಹೇಳಲಾಗಿದೆ. ಆದ್ದರಿಂದ ಆಕಾಶಾದಿಗಳ ಉತ್ಪತ್ತಿಯು ಜನ್ಮಾದಿಸೂತ್ರದ ಪ್ರಮೇಯಕ್ಕೆ ನಿರ್ವಾಹಕವಾಯಿತು. ಇದರ ಅನಂತರ ಜೀವದ ಅನುತ್ಪತ್ತಿಯನ್ನು ಸಮರ್ಥನೆ ಮಾಡಲಾಗಿದೆ. ಇದು ಜನ್ಮಾದಿಸೂತ್ರದ ಪ್ರಮೇಯಕ್ಕೆ ವಿರುದ್ಧವಾದ್ದರಿಂದ ನಿರ್ವಾಹಕವಾಗಿರುವುದಿಲ್ಲ. ಪ್ರಕೃತ ಜೀವರ ಅಣುತ್ವವು ಪ್ರಾಸಂಗಿಕವೆನ್ನುವುದಾದರೆ ಜೀವರ ಅನಾದಿತ್ವವೂ ಕೂಡ ಪ್ರಾಸಂಗಿಕವಾಗಬೇಕಾದೀತು.

**प्राणा वाव ऋषय इति वाक्ये बहुत्वस्य गौणत्वेऽपि प्राणा एवानादय इति प्राणानादित्वश्रुतेर्गौणत्वं विनोत्पत्त्यसिध्या ''गौणि'' इति सूत्रेऽनादित्वश्रुति-गौणीत्येव वक्तव्यत्वाच्च ।**

ನೀವು 'ಪ್ರಾಣಾ ವಾವ ಋಷಯಃ' ಎಂಬ ವಾಕ್ಯದಲ್ಲಿರುವ ಬಹುತ್ವಕ್ಕೆ ಗೌಣತ್ವವನ್ನು ಹೇಳಲು ಗೌಣ್ಯಸಂಭವಾತ್ ಇತ್ಯಾದಿ ಸೂತ್ರಗಳು ಹೊರಟಿವೆ ಎಂದು ಹೇಳುವಿರಿ. ನಿಜವಾಗಿಯೂ ಕೂಡ ಬಹುತ್ವಕ್ಕೆ ಗೌಣತ್ವವನ್ನು ಹೇಳಲು ಈ ಸೂತ್ರವು ಹೊರಟಿಲ್ಲ. ಇಂದ್ರಿಯಗಳ ಅನಾದಿತ್ವ ಶ್ರುತಿಗೆ ಗೌಣತ್ವವನ್ನು ಹೇಳಲು ಹೊರಟಿದೆ ಎಂದು ನೀವು ಹೇಳಬೇಕು. ಏಕೆಂದರೆ 'ಪ್ರಾಣಾಃ ಏವ ಅನಾದಯಃ' ಎಂಬ ಶ್ರುತಿಯು ಇಂದ್ರಿಯಗಳಿಗೆ ಅನಾದಿತ್ವವನ್ನು ಹೇಳುತ್ತಿದೆ. ಈ ಶ್ರುತಿಗೆ ಗೌಣಾರ್ಥವನ್ನು ಮಾಡದೇ 'ಪ್ರಾಣಾ ವಾವ ಋಷಯಃ' ಎಂಬ ಶ್ರುತಿಯಿಂದ ಇಂದ್ರಿಯಗಳಿಗೆ ಉತ್ಪತ್ತಿಯನ್ನು ಸಮರ್ಥನೆ ಮಾಡಲು ನಿಮ್ಮಿಂದ ಸಾಧ್ಯವಾಗುವುದಿಲ್ಲ. ಆದ್ದರಿಂದ ಪ್ರಧಾನ ಪ್ರಮೇಯವೆಂದರೆ ಇಂದ್ರಿಯಗಳಿಗೆ ಅನಾದಿತ್ವವನ್ನು ಸಮರ್ಥಿಸುವ ಶ್ರುತಿಗೆ ಗೌಣಾರ್ಥವನ್ನು ಮಾಡುವುದೇ ಆಗಿದೆ. ಇದನ್ನೇ 'ಗೌಣ್ಯಸಂಭವಾತ್' ಎಂಬ ಸೂತ್ರವು ಪ್ರತಿಪಾದನೆ ಮಾಡಬೇಕು.

**यच्चोक्तं तस्यैव ब्रह्मणस्सृष्टेः प्राक्श्रुतेर्ब्रह्मैव प्राणशब्दार्थ इति ''तत्प्राक्'' इति सूत्रार्थ इति**

'ತತ್ಪ್ರಾಕ್‌ಶ್ರುತೇಶ್ಚ' ಎಂಬ ಸೂತ್ರದ ಖಂಡಕ್ಕೆ ಪರರು ಹೀಗೆ ವ್ಯಾಖ್ಯಾನ ಮಾಡಿದ್ದಾರೆ. ಸೃಷ್ಟಿಯ ಮೊದಲು ಬ್ರಹ್ಮನು ಇದ್ದನು ಎಂದು ಶ್ರುತಿಯು ಹೇಳುತ್ತಿರುವುದರಿಂದ ಪ್ರಾಣ ಶಬ್ದದಿಂದ ಬ್ರಹ್ಮ ಎಂಬ ಅರ್ಥವನ್ನೇ ವಿವಕ್ಷಿಸಬೇಕು ಎಂದು.

**तन्न । सौत्रस्य तच्छब्दस्य पूर्वसूत्रनिर्दिष्टावश्यवक्तव्यप्राक्तावधिभूतेन्द्रियपरत्वसम्भवे तदप्रकृतावश्यावक्तव्यप्राक्त्वानवधिरूपब्रह्मपरत्वायोगात् । सृष्टेः प्राक्कालकर्मजीवप्रकृत्यादिवत्पूर्वपक्षे प्राणानामपि सत्त्वसम्भवेन ब्रह्मण एवेत्यवधारणायोगाच्च ।**

ಇದು ತಪ್ಪು. ನಮ್ಮ ಪ್ರಕಾರ ಈ ಸೂತ್ರದ ಅರ್ಥ ಹೇಳುವುದೇ ಸ್ವರಸವಾಗಿದೆ. 'ತತ್' ಎಂದರೆ ಇಂದ್ರಿಯಗಳು ಎಂದರ್ಥ. ಇಂದ್ರಿಯಗಳನ್ನು ಹೇಳುವ ಪೂರ್ವದಲ್ಲೇ ಮನಸ್ಸನ್ನು ಹೇಳಿರುವುದರಿಂದ ಮನಸ್ಸಿಗೂ ಕೂಡ ಉತ್ಪತ್ತಿಯನ್ನು ಹೇಳಬೇಕು ಎಂದು ವ್ಯಾಖ್ಯಾನ ಮಾಡುತ್ತೇವೆ. ಹಿಂದಿನ ಸೂತ್ರದಲ್ಲಿ ಪ್ರಕೃತವಾದ ಇಂದ್ರಿಯವನ್ನೇ ತತ್ ಶಬ್ದದಿಂದ ಇಲ್ಲಿ ಪರಾಮರ್ಶೆ ಮಾಡುವುದು ಸುಲಭವಾಗಿದೆ. ಮತ್ತು 'ಪ್ರಾಕ್' ಎಂಬ ಪದವು ಅವಧಿ ಎಂಬ ಅರ್ಥವನ್ನು ಹೇಳುತ್ತದೆ. ಇಂದ್ರಿಯಗಳೆಂಬ ಅವಧಿಯನ್ನು ವಿವಕ್ಷಿಸಿ ನಾವು ಅರ್ಥ ಮಾಡುತ್ತೇವೆ. ನೀವು ಇವೆರಡನ್ನೂ ಕೂಡ ಮಾಡುತ್ತಿಲ್ಲ. ತತ್ ಶಬ್ದದಿಂದ ಬ್ರಹ್ಮನನ್ನು ವಿವಕ್ಷಿಸುತ್ತಿದ್ದೀರಿ. ಇವನು ಪ್ರಕೃತನೇ ಆಗಿಲ್ಲ. ಮತ್ತು ಬ್ರಹ್ಮನಿಗಿಂತ ಪೂರ್ವದಲ್ಲಿ ಎಂಬುದಾಗಿ ಪ್ರಾಕ್ ಶಬ್ದವು ಅವಧ್ಯರ್ಥಕವೂ ಆಗುವುದಿಲ್ಲ.

ಮತ್ತು ಸೃಷ್ಟಿಯ ಪೂರ್ವದಲ್ಲಿ ಕಾಲ, ಕರ್ಮ, ಜೀವ, ಪ್ರಕೃತಿ ಇವುಗಳು ಇರುವಂತೆ ಇಂದ್ರಿಯಗಳೂ ಕೂಡ ಇರುವುದರಿಂದ ಬ್ರಹ್ಮನೊಬ್ಬನೇ ಇರುತ್ತಾನೆ ಎಂಬ ಅವಧಾರಣವು ಅಯುಕ್ತವಾಗುತ್ತದೆ. ಪೂರ್ವಪಕ್ಷಿಯು ಇವುಗಳನ್ನೆಲ್ಲಾ ಅಂಗೀಕಾರ ಮಾಡುತ್ತಿರುವಾಗ ಬ್ರಹ್ಮನೊಬ್ಬನೇ ಇದ್ದಾನೆಂದು ಹೇಳಿದರೆ ಅವನು ಅದನ್ನು ಒಪ್ಪುವುದಿಲ್ಲ.

ತತ್‌ಪೂರ್ವಕತ್ವಾಧಿಕರಣ (೨-೪-೩)

**यच्चोक्तं ''अतश्च प्राणशब्दो ब्रह्मपरः । वाचो ब्रह्मान्यविषयस्य नामधेयस्य वाग्विषयभूतवियदादिसृष्टिपूर्वकत्वात्'' इति ''तत्पूर्वकत्वात्'' इति सूत्रार्थ इति ।**

'ತತ್ಪೂರ್ವಕತ್ವಾತ್' ಎಂಬ ಸೂತ್ರಕ್ಕೆ ಪರರು ಹೀಗೆ ವ್ಯಾಖ್ಯಾನ ಮಾಡಿದ್ದಾರೆ – ಮತ್ತೊಂದು ಕಾರಣದಿಂದ ಪ್ರಾಣ ಶಬ್ದವು ಬ್ರಹ್ಮಪರವಾಗಿದೆ. ಏಕೆಂದರೆ ವಾಕ್ ಎಂಬುದು ಬ್ರಹ್ಮವಿಷಯಕವಾಗಿದೆ. ನಾಮಧೇಯವು ತದ್ವಿಷಯೀಭೂತವಾದ ವೇದಾದಿಸೃಷ್ಟಿಪೂರ್ವಕವಾಗಿರುವುದರಿಂದ ಎಂದು.

ಅಭಿಪ್ರಾಯ ಹೀಗಿದೆ– ಸೃಷ್ಟಿಯ ಪ್ರಾರಂಭದಲ್ಲಿ ಪದಾರ್ಥಗಳು ಹುಟ್ಟಿದ ಮೇಲೆ ನಾಮಧೇಯವು ಹುಟ್ಟುತ್ತದೆ. ಆದರೆ ವಿಯದಾದಿಗಳು ಉತ್ಪತ್ತಿಯಾಗುವ ಮೊದಲೇ 'ಪ್ರಾಣೋ ವಾ' ಇತ್ಯಾದಿ ನಾಮಧೇಯವು ಶ್ರುತವಾಗಿದೆ. ಆದ್ದರಿಂದ ಇಂದ್ರಿಯವಿಷಯಕವಾಗಲು ಸಾಧ್ಯವಿಲ್ಲ, ಬ್ರಹ್ಮ ವಿಷಯಕವೇ ಆಗಬೇಕು ಎಂದು.

**तन्न । सौत्रस्य तच्छब्दस्य पूर्वसूत्रप्रकृतमनःपरत्वसम्भवे तदप्रकृतवियदादिपरत्वस्य, वाक्शब्दे सङ्कुचितार्थत्वस्य चायोगात् ।**

ಇದೂ ಕೂಡ ತಪ್ಪು. ತತ್ಪ್ರಾಕ್‌ಶ್ರುತೇಶ್ಚ' ಎಂಬ ಸೂತ್ರದಲ್ಲಿರುವ ತತ್‌ಶಬ್ದವು ಹಿಂದಿನ ಸೂತ್ರದಲ್ಲಿ ಪ್ರಕೃತವಾದ ಮನಸ್ಸನ್ನೇ ಹೇಳುತ್ತದೆ ಎಂದು ನಾವು ವ್ಯಾಖ್ಯಾನ ಮಾಡುತ್ತೇವೆ. ಇದೇ ಅರ್ಥವೇ ಸ್ವರಸವಾಗಿದೆ. ಇದನ್ನು ಬಿಟ್ಟು ಅಪ್ರಕೃತವಾದ ವಿಯದಾದಿಪರತ್ವವನ್ನು ಹೇಳುವುದು ಅಸಂಗತವಾಗುತ್ತದೆ. ಮತ್ತು ವಾಕ್ ಶಬ್ದಕ್ಕೆ ವಾಗಿಂದ್ರಿಯ ಎಂಬ ಅಸಂಕುಚಿತವಾದ ಅರ್ಥವನ್ನು ನಾವು ಮಾಡುತ್ತೇವೆ. ನೀವು ಬ್ರಹ್ಮನನ್ನು ಬಿಟ್ಟು ಉಳಿದ ನಾಮಧೇಯಗಳು ಎಂದು ಅರ್ಥ ಮಾಡುತ್ತಿದ್ದೀರಿ. ಇದು ಸಂಕುಚಿತವಾದ ಅರ್ಥವಾಗಿದೆ.

**प्राणा वा अनादय इति पूर्वश्रुतानादिशब्दस्यानादिविषयनामधेयस्य वा सृष्टिपूर्वत्वोपपत्तेश्च ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् तत्पूर्वकत्वाधिकरणं सम्पूर्णम् ।।३।।**

'ಪ್ರಾಣಾ ವಾ ಅನಾದಯಃ' ಎಂದು ಪೂರ್ವಶ್ರುತ ಅನಾದಿ ಶಬ್ದಕ್ಕೆ ಅಥವಾ ಅನಾದಿವಿಷಯನಾಮಧೇಯಕ್ಕೆ ಸೃಷ್ಟಿಪೂರ್ವಕತ್ವವು ಉಪಪನ್ನವಾಗುತ್ತದೆ.

ವಸ್ತುಗಳು ಹುಟ್ಟಿದ ಮೇಲೆ ನಾಮಧೇಯಗಳು ಹುಟ್ಟುತ್ತವೆ. ಆದ್ದರಿಂದ ಪ್ರಳಯಕಾಲದಲ್ಲಿ ಯಾವುದೇ ನಾಮಧೇಯಗಳಿರಲಿಲ್ಲ ಎಂಬ ನಿಮ್ಮ ವಾದವೇ ತಪ್ಪು. ಏಕೆಂದರೆ ಜನ್ಯಪದಾರ್ಥಗಳು ಪ್ರಳಯಕಾಲದಲ್ಲಿ ಇಲ್ಲದೇ ಇದ್ದರೂ ಕೂಡ ಅನಾದಿ ಪದಾರ್ಥಗಳು ಇದ್ದೇ ಇರುತ್ತವೆ. ಆದ್ದರಿಂದ ಪ್ರಕೃತಿ, ಕಾಲ, ಇತ್ಯಾದಿ ನಾಮಧೇಯಗಳು ಆಗ ಇರಬಹುದು. ಅಥವಾ ಅನಾದಿಯೆಂಬ

ನಾಮಧೇಯವೂ ಕೂಡ ಆಗ ಇರಬಹುದು. ಇನ್ನೂ ಹೇಳಬೇಕೆಂದರೆ 'ಪ್ರಾಣಾ ವಾ ಅನಾದಯಃ' ಎಂಬುದಾಗಿ ಯಾವ ಶ್ರುತಿಯಿಂದ ಇಂದ್ರಿಯಗಳಿಗೆ ಅನಾದಿತ್ವವು ಸಿದ್ಧವಾಗುತ್ತಿದೆ. ಆದ್ದರಿಂದ ಅನಾದಿಯಾದ ಇಂದ್ರಿಯಗಳೂ ಕೂಡ ಪ್ರಳಯಕಾಲದಲ್ಲಿ ಇದ್ದ ಮೇಲೆ ತದ್ವಾಚಕವಾದ ನಾಮಧೇಯವೂ ಕೂಡ ಇದೇ ಎಂದು ಪೂರ್ವಪಕ್ಷಿ ಹೇಳುತ್ತಾನೆ. ಆದ್ದರಿಂದ ನಿಮ್ಮ ವಾದವು ಅಯುಕ್ತವಾಗಿದೆ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ತತ್‌ಪೂರ್ವಕತ್ವಾಧಿಕರಣವು ಸಂಪೂರ್ಣವಾಯಿತು

**प्रकाशः –**

तत्पूर्वकत्वाद्वाच इति सूत्रार्थमनूद्य निराह – **छान्दोग्य इति** ।। वाच इत्यस्यार्थो वागादीनामिति ।। तत्पूर्वकत्वादित्यस्यार्थस्तेजआदीति ।। तेजआदिविकारत्वादित्यर्थः । आश्रित्येत्यस्य निरासेनाधिकरणान्तरत्वसम्भव इत्यन्वयः ।

ಅದ್ವೈತಿಗಳು ಹೇಳುವ 'ತತ್ಪೂರ್ವಕತ್ವಾದ್ವಾಚಃ' ಎಂಬ ಸೂತ್ರಾರ್ಥವನ್ನು ಅನುವಾದ ಮಾಡಿ ನಿರಾಕರಣೆ ಮಾಡಲು ಛಾಂದೋಗ್ಯ ಇತ್ಯಾದಿ ಗ್ರಂಥವು ಹೊರಟಿದೆ. ವಾಚಃ ಎಂಬುದರ ಅರ್ಥವನ್ನೇ ವಾಗಾದೀನಾಂ ಎಂದು ವ್ಯಾಖ್ಯಾನ ಮಾಡಿದ್ದಾರೆ. ತತ್ಪೂರ್ವಕತ್ವಾದ್ ಎಂಬುದರ ಅರ್ಥವನ್ನು ತೇಜಾದಿ ಇತ್ಯಾದಿಯಾಗಿ ತಿಳಿಸಿದ್ದಾರೆ. ತೇಜಸ್ಸು ಮೊದಲಾದವುಗಳ ವಿಕಾರವಾಗಿರುವುದರಿಂದ ಎಂದಭಿಪ್ರಾಯ. ಆಶ್ರಿತ್ಯ ಎಂಬ ಪದಕ್ಕೆ ಹೀಗೆ ಅನ್ವಯವನ್ನು ತಿಳಿಯಬೇಕ – ತತ್‌ಶಬ್ದವು ಕೇವಲ ಮನಃಪರ ಎಂದು ಆಶ್ರಯಿಸಿದಾಗ ವಾಕ್ ಶಬ್ದವು ವಾಗಿಂದ್ರಿಯಪರವೆಂದು ಆಶ್ರಯಿಸಿ ಅವಶ್ಯವಾಗಿ ನಿರಸನೀಯವಾದ ವಿರೋಧದ ಪರಿಹಾರಕ್ಕಾಗಿ ಬೇರೆ ಅಧಿಕರಣವೆಂದು ವಿವಕ್ಷಿಸಲು ಬರುವಾಗ ಎಂಬುದಾಗಿ ಅನ್ವಯವನ್ನು ತಿಳಿಯಬೇಕು. ಏಕೆಂದರೆ ಲ್ಯಂಬಂತವಾದ ಪದಕ್ಕೆ ಸಮಾನಾಶ್ರಿತವಾದ ಮತ್ತೊಂದು ಕ್ರಿಯೆಯಲ್ಲೇ ಅನ್ವಯವನ್ನು ಹೇಳಬೇಕು. 'ಅಧಿಕರಣಾಂತರಸಂಭವ' ಎಂಬುದು ಮತ್ತೊಂದು ಕ್ರಿಯೆಯಾದ್ದರಿಂದ ಆಶ್ರಯಣಕ್ಕೆ ಅಲ್ಲೇ ಅನ್ವಯವನ್ನು ತಿಳಿಯಬೇಕು.

**प्रकाशः –** वाङ्नित्यत्वादिश्रुतिविरोधोऽसङ्गत इत्यत उक्तं साधारणेति ।। ज्ञानेन्द्रियकर्मेन्द्रियसाधारणेन्द्रियमात्रस्य जन्माजन्मश्रुत्योर्विरोधस्य ''तथा प्राणा'' इत्याद्यनये ज्ञानेन्द्रियेषु प्रधानस्य मनसो विशेषशङ्कया प्राप्तस्य जन्माजन्मश्रुतिविरोधस्य ''तत्प्राक् श्रुतेश्च'' इत्यत्र परिहारेऽपीत्यर्थः ।

ವಾಗಿಂದ್ರಿಯಕ್ಕೆ ನಿತ್ಯತ್ವವು ಸಂಗತವೇ ಆಗಿಲ್ಲ. ಆದ್ದರಿಂದ ವಾಙ್‌ನಿತ್ಯತ್ವ ಶ್ರುತಿಯನ್ನು ಏಕೆ ಪರಿಹರಿಸಬೇಕು? ಎಂಬ ಪ್ರಶ್ನೆಗೆ ಸಂಗತಿಯನ್ನು ತೋರಿಸಲು 'ಸಾಧಾರಣ' ಇತ್ಯಾದಿ ವಾಕ್ಯವು ಹೊರಟಿದೆ. ಜ್ಞಾನೇಂದ್ರಿಯ ಕರ್ಮೇಂದ್ರಿಯಗಳಲ್ಲಿ ಇಂದ್ರಿಯವು ಸಾಧಾರಣವಾಗಿದೆ. ಅಂತಹ ಇಂದ್ರಿಯದ ಉತ್ಪತ್ತಿ

ಹಾಗೂ ಅನುತ್ಪತ್ತಿ ಶ್ರುತಿಗಳ ವಿರೋಧವು 'ತಥಾ ಪ್ರಾಣಾಃ' ಎಂಬುದರಿಂದ ಪರಿಹಾರವಾದ ಮೇಲೆ ಅವುಗಳಲ್ಲಿ ಪ್ರಧಾನವಾದ ಜ್ಞಾನೇಂದ್ರಿಯಗಳಲ್ಲೇ ಪ್ರಧಾನವಾದ ಮನಸ್ಸೆಂಬ ಇಂದ್ರಿಯದ ವಿಷಯದಲ್ಲಿರುವ ಶ್ರುತಿವಿರೋಧವನ್ನು ಪರಿಹರಿಸಲಾಯಿತು.

**प्रकाशः** – साधारणानां ज्ञानेन्द्रियमनसश्चेति विग्रहः । असाधारणज्ञानेन्द्रियमन इत्यपि कचित्पाठः ।। **कर्मेन्द्रियवागिति** ।। कर्मेन्द्रियरूपवागिन्द्रियेत्यर्थः । कर्मेन्द्रियमध्ये वाचः प्रधानत्वादिति भावः ।

'ಸಾಧಾರಣಾನಾಂ ಜ್ಞಾನೇಂದ್ರಿಯಮನಸಶ್ಚ 'ಎಂಬುದಾಗಿ ವಿಗ್ರಹವನ್ನು ತಿಳಿಯಬೇಕು. ಜ್ಞಾನೇಂದ್ರಿಯ, ಮನಸ್ಸು ಇವುಗಳಲ್ಲಿ ಸಾಧಾರಣವಾದದ್ದು ಇಂದ್ರಿಯ ಎಂದು ಅಭಿಪ್ರಾಯ. ಅಥವಾ ಕೆಲವು ಪುಸ್ತಕಗಳಲ್ಲಿ 'ಅಸಾಧಾರಣಜ್ಞಾನೇಂದ್ರಿಯಮನಃ' ಎಂಬ ಪಾಠವೂ ಕೂಡ ಇರುತ್ತದೆ. ಪ್ರಥಮಪಕ್ಷದಲ್ಲಿ ವಿಗ್ರಹವನ್ನು ಹೀಗೆ ತಿಳಿಯಬೇಕು. 'ಜ್ಞಾನೇಂದ್ರಿಯಂಚ ತತ್ ಮನಶ್ಚ, ಜ್ಞಾನೇಂದ್ರಿಯಮನಃ ಸಾಧಾರಣಾನಿ ಚ ಜ್ಞಾನೇಂದ್ರಿಯಮನಾಂಸಿಚ ಸಾಧಾರಣಜ್ಞಾನೇಂದ್ರಿಯಮನಾಂಸಿ' ಎಂದು ವಿಗ್ರಹವನ್ನು ಮಾಡಿ ತನ್ನಿಷ್ಠವಾದ ನಿತ್ಯತ್ವ ಅನಿತ್ಯತ್ವ ಶ್ರುತಿವಿರೋಧವನ್ನು ಪರಿಹರಿಸಲಾಗಿದೆ ಎಂದರ್ಥ. ಕೆಲವು ಪುಸ್ತಕಗಳಲ್ಲಿ 'ಅಸಾಧಾರಣಜ್ಞಾನೇಂದ್ರಿಯಮನಃ' ಎಂಬ ಪಾಠವನ್ನು ವಿವಕ್ಷಿಸಿದಾಗ ಮನಸ್ಸಿನಲ್ಲಿಯೇ ಅಸಾಧಾರಣ ಜ್ಞಾನೇಂದ್ರಿಯ ಎಂಬುದನ್ನು ಅನ್ವಯವನ್ನು ಮಾಡಬೇಕು. ಅಸಾಧಾರಣಜ್ಞಾನೇಂದ್ರಿಯ ಅಂದರೆ ಮನಸ್ಸು ಸರ್ವಕ್ಕೂ ನಿಯಾಮಕವಾದ ಉತ್ತಮವಾದ ಇಂದ್ರಿಯವಾಗಿದೆ ಎಂದು ತಿಳಿಯಬೇಕು. ಕರ್ಮೇಂದ್ರಿಯವಾಕ್ ಎಂದರೆ ಕರ್ಮೇಂದ್ರಿಯರೂಪವಾದ ವಾಗಿಂದ್ರಿಯ ಎಂದರ್ಥ. ಕರ್ಮೇಂದ್ರಿಯದ ಮಧ್ಯದಲ್ಲಿ ವಾಗಿಂದ್ರಿಯವೇ ಶ್ರೇಷ್ಠವಾಗಿದೆ ಎಂದು ತಿಳಿಯಬೇಕು.

**प्रकाशः** – ''तथा प्राणाः'' इत्यादिनैव सिद्धमित्यत उक्तमभ्यधिकाशङ्कयेति।। भाष्याद्युक्त्या इत्यर्थः । असाधारणज्ञानेन्द्रियमनश्चिन्तानन्तरमसाधारणकर्मेन्द्रिय-वाग्विचारोऽधिकाशङ्कयाऽवसरप्राप्त इति भावः । ''अन्नमयं हि सोम्य मन'' इत्यादावन्नाद्यवयवैरुपचय एव मनः प्रभृतेरुच्यते नतु भूतविकारत्वमित्यत्र हेतुराहंकारिकाणामिति । ''तैजसात्तु विकुर्वाणादिन्द्रियाणि दशाभवन्'' इत्यादेरिति भावः ।

'ತಥಾ ಪ್ರಾಣಾಃ' ಎಂಬ ಸೂತ್ರದಲ್ಲಿಯೇ ವಾಗಿಂದ್ರಿಯಕ್ಕೂ ಕೂಡ ಉತ್ಪತ್ತಿಯನ್ನು ಹೇಳಿದ್ದಾಗಿದೆ. ಪುನಃ ಈ ಅಧಿಕರಣವು ಏಕೆ ಬೇಕು? ಎಂಬ ಪ್ರಶ್ನೆಗೆ ಅಭ್ಯಧಿಕಾಶಂಕೆ ಇರುವುದರಿಂದ ಈ ಅಧಿಕರಣವು ಸಾರ್ಥಕವೆಂದು ಉತ್ತರಿಸುತ್ತಿದ್ದಾರೆ. ಅಭ್ಯಧಿಕಾಶಂಕೆಯನ್ನು ಭಾಷ್ಯಾದಿಗಳಲ್ಲಿ ತೋರಿಸಿದ್ದಾರೆ. ಅಸಾಧಾರಣಜ್ಞಾನೇಂದ್ರಿಯಮನಃ ಎಂಬ ಪಾಠವನ್ನೇ ವಿವಕ್ಷಿಸಿ ಹೀಗೆ ಅರ್ಥವನ್ನು ತಿಳಿಯಬೇಕು. ಅಸಾಧಾರಣ ಜ್ಞಾನೇಂದ್ರಿಯವೆನಿಸಿದ ಮನಸ್ಸಿನ ಬಗ್ಗೆ ಈ ಹಿಂದಿನ ಅಧಿಕರಣದಲ್ಲಿ ವಿಚಾರ ಮಾಡಿದ್ದಾಯಿತು. ಹಾಗಾದರೆ ಅಸಾಧಾರಣಕರ್ಮೇಂದ್ರಿಯವಾದ ವಾಗಿಂದ್ರಿಯದ ಬಗ್ಗೆ ವಿಚಾರ ಮಾಡುವುದು ಪ್ರಸಕ್ತವಾಗುತ್ತದೆ. ಹೀಗೆ ಅಧಿಕಾಶಂಕೆಯಿಂದ ಅವಸರಸಂಗತಿಯನ್ನು ಈ ಅಧಿಕರಣವು ತಿಳಿಯಬೇಕು.

'ಅನ್ನಮಯಂ ಹಿ ಸೌಮ್ಯ ಮನಃ' ಇತ್ಯಾದಿ ಶ್ರುತಿಯಲ್ಲಿ ಅನ್ನಾದಿಗಳಿಂದ ಉಪಚಯವನ್ನು ಹೊಂದುತ್ತದೆ. ಹೊರತು ಭೂತಪದಾರ್ಥಗಳ ವಿಕಾರ ಎಂಬ ಅಭಿಪ್ರಾಯವಲ್ಲ. ಏಕೆಂದರೆ ಇದು ಅಹಂಕಾರಿಕವೆನಿಸಿದೆ. 'ತೈಜಸಾತ್ತು ವಿಕುರ್ವಾಣಾತ್ ಇಂದ್ರಿಯಾಣಿ ದಶಾಭವನ್' ಎಂಬಲ್ಲಿ ಹತ್ತು ಇಂದ್ರಿಯಗಳು ತೈಜಸ ಅಹಂಕಾರದಿಂದ ಹುಟ್ಟಿವೆ ಎಂಬುದಾಗಿ ಪ್ರಮಾಣವಿದೆ. ಈ ದಶೇಂದ್ರಿಯಗಳಲ್ಲಿ ವಾಗಿಂದ್ರಿಯವೂ ಕೂಡಿದೆ. ಆದ್ದರಿಂದ ಇದು ತೈಜಸಾಹಂಕಾರದ ಕಾರ್ಯವೆಂದು ಸ್ಪಷ್ಟವಾಯಿತು. ಹೀಗಿರುವಾಗ ತೇಜಸ್ಸಿನ ವಿಕಾರವೆಂದು ಹೇಳುವುದು ಹೇಗೆ ಸಾಧ್ಯ ? ಅದರಂತೆ ಮನಸ್ಸು ವೈಕಾರಿಕ ಅಹಂಕಾರದಿಂದ ಹುಟ್ಟಿದೆ. ಇದು ಅನ್ನದ ಕಾರ್ಯವಾಗಲು ಹೇಗೆ ಸಾಧ್ಯ ? ಪ್ರಾಣನು ವಾಯುವಿನ ವಿಕಾರವಾಗಿದೆ, ಇದು ಜಲದಕಾರ್ಯವಾಗಲು ಹೇಗೆ ಸಾಧ್ಯ ? ಎಂದು ಅಭಿಪ್ರಾಯ.

**प्रकाशः** – ननु मयटो विकार एवार्थः किं न स्यादिति चेत् आहंकारिकाणां भूतविकारित्वायोगात् । किञ्च ''आपोमयः प्राण'' इत्यस्यानुपपत्तिरेव । तस्य वायुविकारत्वात् । न चाब्द्वारा तद्विकारत्वं प्राणस्य शङ्कार्हं भवतीत्याह – **न हीति।।**

ಶ್ರುತಿಯಲ್ಲಿ ಅನ್ನಮಯಂ ಹಿ ಇತ್ಯಾದಿಯಾಗಿ ಮಯಟ್ ಪ್ರತ್ಯಯವು ಮೂರೂ ಕಡೆ ಕೇಳಿಸುತ್ತಿದೆ. ಮಯಟ್ ಪ್ರತ್ಯಯವು ವಿಕಾರ ಎಂಬರ್ಥವನ್ನೇ ಹೇಳುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಅಹಂಕಾರಕಾರ್ಯವಾದ ಮೇಲೆ ಪುನಃ ಭೂತವಿಕಾರವಾಗಲು ಸಾಧ್ಯವಿಲ್ಲ. ಮತ್ತು 'ಆಪೋಮಯ ಪ್ರಾಣಃ' ಎಂಬುದೇ ಅನುಪಪನ್ನವಾಗುತ್ತದೆ. ಏಕೆಂದರೆ ಅದು ವಾಯುವಿನ ವಿಕಾರವಾಗಿದೆ. ಮತ್ತು ಅಪ್ ಮೂಲಕ ಪ್ರಾಣವು ಹುಟ್ಟಲು ಸಾಧ್ಯವಿಲ್ಲ ಎಂಬುದನ್ನು 'ನಹಿ' ಇತ್ಯಾದಿ ವಾಕ್ಯದಿಂದ ಉಪಪಾದನೆ ಮಾಡುತ್ತಿದ್ದಾರೆ. ಹಾಗಾಗಿದ್ದಲ್ಲಿ ವಿಕಾರಾರ್ಥಕವಾದ ಮಯಟ್ ಪ್ರತ್ಯಯವನ್ನು ವಿವಕ್ಷಿಸಬಹುದಿತ್ತು ಎಂದಭಿಪ್ರಾಯ.

**प्रकाशः** – येन विकारार्थत्वं मयट आश्रीयेतेति भावः ।। **केचित्त्विति** ।। तन्मतेऽपि ''तत्पूर्वकत्वाद्वाचः'' इत्यन्तानि ''तथा'' इत्यादिसूत्राण्येकमधिकरणम् । ''गौण्यसम्भवात् तत्प्राक्श्रुतेश्च'' इत्येकं सूत्रम् । ''प्रतिज्ञा'' इतिसूत्रं तन्मतेऽपि नास्त्येव ।

ರಾಮಾನುಜ ಮತದಲ್ಲೂ ಕೂಡ 'ತತ್ಪೂರ್ವಕತ್ವಾದ್ವಾಚಃ' ಎಂಬಲ್ಲಿಯ ತನಕ 'ತಥಾ ಪ್ರಾಣಾಃ' ಇತ್ಯಾದಿ ಸೂತ್ರಗಳು ಒಂದೇ ಅಧಿಕರಣದಲ್ಲಿ ಸೇರುತ್ತದೆ. ಮತ್ತು 'ಗೌಣ್ಯಸಂಭವಾತ್ ತತ್ಪ್ರಾಕ್‌ಶ್ರುತೇಶ್ಚ' ಎಂಬುದನ್ನು ಒಂದೇ ಸೂತ್ರವೆಂದು ಅವರು ಪರಿಗಣಿಸುತ್ತಾರೆ. 'ಪ್ರತಿಜ್ಞಾನುಪರೋಧಾಚ್ಚ' ಎಂಬ ಸೂತ್ರವನ್ನು ಅದ್ವೈತಿಗಳಂತೆ ಇವರೂ ಕೂಡ ಒಪ್ಪುವುದಿಲ್ಲ.

**प्रकाशः** – तत्र पूर्वं न वियदित्याद्यसम्भवस्तु इत्यन्तसूत्रात्मकाधिकरणेन, तेजोत इत्यादिचराचर इत्यन्तसूत्रात्मकाधिकरणेन च वियदादेस्सर्वस्य कार्यत्वेनोत्पत्तावुक्तायां जीवस्य कार्यत्वेऽपि स्वरूपान्यथाभावलक्षणोत्पत्तौ ''नात्मा श्रुतेः'' इत्यधिकरणेनापोदितायां तत्प्रसङ्गेन ''ज्ञोत एव'' इत्यारभ्यापादसमाप्ति जीवस्वरूपं विचार्य तदुपकरणानामिन्द्रियाणामत्र चिन्ता ।

ತತ್‌ಪೂರ್ವಕತ್ವಾಧಿಕರಣ (೨-೪-೩)

ಹಿಂದೆ 'ನ ವಿಯದಶ್ರುತೇಃ' ಎಂಬ ಸೂತ್ರದಿಂದ ಪ್ರಾರಂಭ ಮಾಡಿ 'ಅಸಂಭವಸ್ತು ಸತೋಽನುಪಪತ್ತೇಃ' ಎಂಬ ಸೂತ್ರದ ತನಕ ಒಂದೇ ಅಧಿಕರಣವೆಂದು ಹೇಗೆ ಪರಿಗಣಿಸಿದ್ದರೋ ಅದರಂತೆ ಈಗ 'ತೇಜೋತಸ್ತಥಾಹ್ಯಾಹ' ಎಂಬ ಸೂತ್ರದಿಂದ ಪ್ರಾರಂಭ ಮಾಡಿ ಚರಾಚರವ್ಯಪಾಶ್ರಯಸ್ತು' ಎಂಬ ಸೂತ್ರದ ತನಕ ಒಂದೇ ಅಧಿಕರಣವೆಂದು ಪರಿಗಣಿಸಿದ್ದಾರೆ. ಹಿಂದಿನ ಅಧಿಕರಣದಲ್ಲಿ ಆಕಾಶಾದಿ ಸಕಲಕಾರ್ಯಗಳಲ್ಲಿ ಉತ್ಪತ್ತಿಯನ್ನು ಸಮರ್ಥನೆ ಮಾಡಿದ ಮೇಲೆ ಜೀವನಿಗೂ ಕೂಡ ಉತ್ಪತ್ತಿ ಇದೆಯೇ ಎಂಬ ಆಶಂಕೆ ಪ್ರಾಪ್ತವಾದಾಗ 'ನಾತ್ಮಾ ಶ್ರುತೇಃ' ಇತ್ಯಾದಿ ಸೂತ್ರದಿಂದ ಅದನ್ನು ನಿರಾಕರಣೆ ಮಾಡಲಾಗಿದೆ. ಹೀಗೆ ಜೀವನು ಪ್ರಸಕ್ತವಾದಾಗ 'ಜ್ಞೋತ ಏವ' ಎಂಬ ಸೂತ್ರದಿಂದ ಪ್ರಾರಂಭ ಮಾಡಿ ಪಾದ ಮುಗಿಯುವ ತನಕ ಜೀವಸ್ವರೂಪದ ಬಗ್ಗೆ ವಿಚಾರ ಮಾಡಿದ್ದಾಯಿತು. ಪ್ರಕೃತ ಆ ಜೀವನಿಗೆ ಉಪಕರಣಭೂತವಾದ ಇಂದ್ರಿಯಗಳ ಬಗ್ಗೆ ವಿಚಾರ ಮಾಡಲಾಗುತ್ತಿದೆ.

**ಪ್ರಕಾಶಃ** – तत्र सूत्रार्थाननूद्य निराह – **यथेति ।। बहुवचनेति ।।** ''प्राणा वा'' इति बहुवचनरूपा श्रुतिरित्यर्थः । इत्यादिसूत्रैरिति बहुवचनं सिद्धान्ताभिप्रायम्।

ಅವರು ಹೇಳುವ ಸೂತ್ರದ ಅರ್ಥವನ್ನು ಅನುವಾದ ಮಾಡಿ ನಿರಾಕರಣೆ ಮಾಡಲು 'ಯಥಾ' ಇತ್ಯಾದಿ ಗ್ರಂಥಗಳು ಹೊರಟಿದೆ. ಬಹುವಚನ ಎಂದರೆ 'ಪ್ರಾಣೋ ವಾ' ಎಂಬಲ್ಲಿರುವ ಬಹುವಚನರೂಪವಾದ ಶ್ರುತಿ ಎಂದರ್ಥ. ಇತ್ಯಾದಿ ಸೂತ್ರೈಃ' ಎಂಬಲ್ಲಿ ಬಹುವಚನವನ್ನು ಪ್ರಯೋಗ ಮಾಡಿದ್ದು ನಮ್ಮ ಸಿದ್ಧಾಂತದ ಪ್ರಕಾರ ಎಂದು ತಿಳಿಯಬೇಕು. ಏಕೆಂದರೆ ಅವರ ಪ್ರಕಾರ ಅನೇಕ ಸೂತ್ರಗಳು ಇಲ್ಲದ ಕಾರಣ ಬಹುವಚನವು ಯುಕ್ತವಾಗುವುದಿಲ್ಲ.

**ಪ್ರಕಾಶಃ – नच ब्रह्मणि बहुत्वासम्भवेऽप्यन्य एव प्राणा इति बहुवचनोपपत्तिरिति युक्तम् । तत्प्राक्श्रुतेश्च । चोऽवधारणे तदित्यनेनान्वेति । तस्यैव परमात्मनः सृष्टेः प्रागवस्थानश्रुतेर्बह्वर्थासम्भवाद्ब्रह्मैव प्राणा न त्वन्ये ।**

ಬ್ರಹ್ಮನಲ್ಲಿ ಬಹುತ್ವವು ಅಸಂಭಾವಿತವಾಗಿದೆ. ಆದ್ದರಿಂದ ಬ್ರಹ್ಮನನ್ನು ಬಿಟ್ಟು ಇಂದ್ರಿಯಾದಿಗಳನ್ನೇ ಪ್ರಾಣ ಶಬ್ದದಿಂದ ವಿವಕ್ಷಿಸುವುದು ಸೂಕ್ತವಲ್ಲವೇ?

ಈ ಆಶಂಕೆಗೆ 'ತತ್ಪ್ರಾಕ್ಶ್ರುತೇಶ್ಚ' ಸೂತ್ರವು ಉತ್ತರಿಸುತ್ತಿದೆ. ಚ ಶಬ್ದವು ಅವಧಾರಣಾರ್ಥದಲ್ಲಿದೆ. ತತ್ ಎಂಬುದರ ಜೊತೆ ಅನ್ವಯವನ್ನು ಹೊಂದುತ್ತದೆ. ಆದ್ದರಿಂದ 'ತಸ್ಯೈವ' ಎಂಬರ್ಥವು ದೊರೆಯಿತು. ಸೃಷ್ಟಿಯ ಮೊದಲು ಪರಮಾತ್ಮನೊಬ್ಬನೇ ಇದ್ದನೆಂದು ಶ್ರುತಿಯು ಹೇಳುತ್ತಿದೆ. ಅನೇಕ ಬ್ರಹ್ಮಲಿಂಗಗಳು ಇರುವುದರಿಂದ ಇದನ್ನು ಬ್ರಹ್ಮಪರವಲ್ಲವೆಂದು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಪ್ರಾಣಾಃ ಎಂಬಲ್ಲಿರುವ ಬಹ್ವರ್ಥವು ಅಸಂಭಾವಿತವಾದ್ದರಿಂದ ಬಹುವಚನಕ್ಕೆ ಗೌಣಾರ್ಥವನ್ನೇ ಮಾಡಿ ಪ್ರಾಣ ಶಬ್ದದಿಂದ ಬ್ರಹ್ಮನನ್ನೇ ವಿವಕ್ಷಿಸಬೇಕು. ಬ್ರಹ್ಮನನ್ನು ಬಿಟ್ಟು ಇತರವಾದ ಇಂದ್ರಿಯಗಳನ್ನು ವಿವಕ್ಷಿಸಬಾರದು.

**ಪ್ರಕಾಶಃ** – किञ्च तत्पूर्वकत्वाद्वाचः । ब्रह्मान्यनामधेयस्य वियदादिसृष्टयनन्तर कालीनत्वाच्च प्राणा इति ब्रह्मैवोच्यते । नेन्द्रियाणि । तदेन्द्रियकार्याभावादिति सिद्धान्तितमित्याहुरित्यर्थः ।

ಮತ್ತು ತತ್ಪೂರ್ವಕತ್ವಾದ್ವಾಚಃ ಎಂಬ ಸೂತ್ರಕ್ಕೆ ಹೀಗೆ ವ್ಯಾಖ್ಯಾನ ಮಾಡಿದ್ದಾರೆ. ಸೃಷ್ಟಿಯ ಪೂರ್ವದಲ್ಲಿ ಬ್ರಹ್ಮನನ್ನು ಹೇಳುವ ನಾಮಧೇಯಗಳನ್ನು ಬಿಟ್ಟು ಬೇರೆ ನಾಮಧೇಯಗಳೇ ಇರಲಿಲ್ಲ. ಉಳಿದೆಲ್ಲ ನಾಮಧೇಯಗಳು ವಿಯದಾದಿ ಸೃಷ್ಟಿಯ ಅನಂತರದಲ್ಲಿಯೇ ಹುಟ್ಟುತ್ತದೆ. ಆದ್ದರಿಂದ ಪ್ರಾಣ ಎಂಬ ಶಬ್ದದಿಂದ ಬ್ರಹ್ಮನೇ ಪ್ರತಿಪಾದ್ಯ ಆಗುತ್ತಾನೆ ಹೊರತು ಇಂದ್ರಿಯಾದಿಗಳು ಪ್ರತಿಪಾದ್ಯವಾಗುವುದಿಲ್ಲ. ಮತ್ತು

ಸೃಷ್ಟಿಯ ಪೂರ್ವದಲ್ಲಿ ಇಂದ್ರಿಯಗಳಿಗೆ ಯಾವುದೇ ಕಾರ್ಯವೇ ಇಲ್ಲದ್ದರಿಂದ ಅವುಗಳ ಅಸ್ತಿತ್ವ ಒಪ್ಪುವುದರಲ್ಲಿ ಬೀಜ ಇಲ್ಲ. ಹೀಗೆ ಸಿದ್ಧಾಂತವನ್ನು ಮಾಡಿದ್ದಾರೆ.

**प्रकाशः** – ''वियदादिजड'' इति तन्मतरीत्या वा सिद्धान्ते जडपरत्वस्याप्यनुमतत्वाज्जडेत्युक्तिः ॥

ಗ್ರಂಥದಲ್ಲಿ 'ವಿಯದಾದಿಜಡಸಾಮ್ಯಸ್ಯ' ಎಂದು ಹೇಳಿದ್ದಾರೆ. ಇದು ತಪ್ಪಲ್ಲವೇ? ಏಕೆಂದರೆ ನಮ್ಮ ಸಿದ್ಧಾಂತದಲ್ಲಿ ಈ ಪಾದದಲ್ಲಿರುವ ಪ್ರತಿಯೊಂದು ಅಧಿಕರಣಗಳು ತತ್ತದಭಿಮಾನಿ ಚೇತನಪರವೆಂದೇ ಹೇಳುತ್ತೇವೆ. ಪ್ರಕೃತ ಈ ಅಧಿಕರಣವೂ ಕೂಡ ಇಂದ್ರಿಯಾಭಿಮಾನಿ ಚೇತನಪರವೇ ಆಗಿರುತ್ತದೆ. ಹೀಗಿರುವಾಗ 'ವಿಯದಾದಿಜಡಸಾಮ್ಯಸ್ಯ' ಎಂದು ಹೇಗೆ ಹೇಳಿದರು?

ಉತ್ತರ – 'ವಿಯದಾದಿಜಡಸಾಮ್ಯಸ್ಯ' ಎಂಬುದಾಗಿ ಅವರ ಸಿದ್ಧಾಂತದ ಪ್ರಕಾರ ಹೇಳಿದ್ದಾರೆ. ಅಥವಾ ನಮ್ಮ ಸಿದ್ಧಾಂತದಲ್ಲೂ ಗೌಣವಾಗಿ ಜಡಪರತ್ವವನ್ನು ಶಬ್ದಗಳಿಗೆ ಅಂಗೀಕಾರ ಮಾಡುವುದರಿಂದ ಜಡಸಾಮ್ಯಸ್ಯ ಎಂದು ಹೇಳಿರುವುದು ತಪ್ಪಾಗುವುದಿಲ್ಲ.

**प्रकाशः** – तुशब्दादेरिति ॥ ''अपि वा कर्तृसामान्यात् । विज्ञानादिभावे वा तदप्रतिषेध'' इत्यादाविव वाशब्दस्य वाऽभाव इत्यादिपदार्थः।

ಗ್ರಂಥದಲ್ಲಿ 'ತುಶಬ್ದಾದೇಃ' ಎಂಬಲ್ಲಿ ಆದಿಪದವನ್ನು ಪ್ರಯೋಗಿಸಿದ್ದಾರೆ. ಇದರಿಂದ ವಿವಕ್ಷಿಸಬೇಕಾದ ಅರ್ಥ ಹೀಗಿದೆ – ಜೈಮಿನೀಸೂತ್ರದಲ್ಲಿ 'ಅಪಿ ವಾ ಕರ್ತೃಸಾಮಾನ್ಯಾತ್' ಎಂಬುದಾಗಿ 'ವಾ' ಶಬ್ದದಿಂದ ಪೂರ್ವಪಕ್ಷವನ್ನು ಸೂಚನೆ ಮಾಡಿದ್ದಾರೆ. 'ವಿಜ್ಞಾನಾದಿಭಾವೇ ವಾ ತದಪ್ರತಿಷೇದಃ' ಎಂಬ ಸೂತ್ರದಲ್ಲಿ ಬಾದರಾಯಣರು ವಾ ಶಬ್ದದಿಂದ ಪೂರ್ವಪಕ್ಷವನ್ನು ಸೂಚನೆ ಮಾಡಿದ್ದಾರೆ. ಹೀಗೆ ತು ಶಬ್ದ ಹಾಗೂ ವಾ ಶಬ್ದಗಳು ಪೂರ್ವಪಕ್ಷಪ್ರಾಪಕವಾಗಿ ಇರುವುದಿಲ್ಲ ಎಂಬುದು ಗ್ರಂಥದ ಅಭಿಪ್ರಾಯ.

**प्रकाशः** – एतेन ''तुशब्दार्थेन चशब्देन सिद्धान्तद्योतनमित्युक्तं'' इति श्रुतप्रकाशोक्तं निरस्तम् । सूत्रैक्यस्यासांप्रदायिकत्वेन तस्य तृतीयसूत्रस्थत्वात् । तद्भाष्येऽवधारणार्थत्वोक्तेश्चेति भावः ।

ಹೀಗೆ ಹೇಳಿದ್ದರಿಂದ ಶ್ರುತಪ್ರಕಾಶವನ್ನೂ ಕೂಡ ನಿರಾಕರಣೆ ಮಾಡಿದಂತಾಯಿತು. ಶ್ರುತಪ್ರಕಾಶದಲ್ಲಿ 'ತುಶಬ್ದಾರ್ಥೇನ ಚಶಬ್ದೇನ ಸಿದ್ಧಾಂತದ್ಯೋತನಂ' ತತ್ಪ್ರಾಕ್‌ಶ್ರುತೇಶ್ಚ ಎಂಬಲ್ಲಿರುವ ಚಶಬ್ದವು ತುಶಬ್ದಾರ್ಥದಲ್ಲಿ, ಇದು ಸಿದ್ಧಾಂತವನ್ನು ತಿಳಿಸುತ್ತಿದೆ ಎಂದು ಹೇಳಲಾಗಿದೆ. ಆದರೆ ಇದೂ ಕೂಡ ತಪ್ಪು. ಏಕೆಂದರೆ ನೀವು 'ಗೌಣ್ಯಸಂಭವಾತ್ ತತ್ಪ್ರಾಕ್‌ಶ್ರುತೇಶ್ಚ' ಎಂಬುದು ಒಂದೇ ಸೂತ್ರವೆಂದು ಪರಿಗಣಿಸುತ್ತೀರಿ. ಇದು ಪ್ರಾಚೀನವೃತ್ತಿಕಾರರಿಗೆ ಹಾಗೂ ಭಾಷ್ಯಕಾರರಿಗೆ ಅಸಮ್ಮತವಾಗಿದ್ದರಿಂದ ಅಸಾಂಪ್ರದಾಯಿಕವಾಗಿದೆ. ಆದ್ದರಿಂದ 'ತತ್ಪ್ರಾಕ್‌ಶ್ರುತೇಶ್ಚ' ಎಂಬುದನ್ನು ಈ ಅಧಿಕರಣದ ಮೂರನೇ ಸೂತ್ರವನ್ನಾಗಿಯೇ ಪರಿಗಣನೆ ಮಾಡಬೇಕು. ಆಗ 'ಗೌಣ್ಯಸಂಭವಾತ್' ಎಂಬ ಹಿಂದಿನ ಸೂತ್ರದಲ್ಲಿಯೇ ಸಿದ್ಧಾಂತವು ಪ್ರಾರಂಭವಾಗಿರುವುದರಿಂದ ಮೂರನೇ ಸೂತ್ರದಲ್ಲಿ ಇರುವ ಚಶಬ್ದವು ಸಿದ್ಧಾಂತ ಸೂಚಕವಾಗಿದೆ ಎಂಬುದು ಅಸಂಗತವಾಯಿತು.

ಅಷ್ಟೇ ಅಲ್ಲದೇ ನಿಮ್ಮ ಭಾಷ್ಯಕಾರರೇ ಚಶಬ್ದಕ್ಕೆ ಅವಧಾರಣಾರ್ಥವನ್ನು ಹೇಳಿದ್ದಾರೆ. ಮತ್ತು ತತ್ ಎಂಬ ಪದದ ಜೊತೆ ಅನ್ವಯವನ್ನು ಹೊಂದುತ್ತದೆಂದು ಹೇಳಿ ಬ್ರಹ್ಮಪರವಾಗಿ ಅದನ್ನು ವ್ಯಾಖ್ಯಾನ ಮಾಡಿದ್ದಾರೆ. ನೀವು ಅದಕ್ಕೆ ವಿರುದ್ಧವಾಗಿ ಪೂರ್ವಪಕ್ಷದ್ಯೋತಕವಾಗಿದೆ ಎನ್ನುವುದು ಅತ್ಯಂತ ಹಾಸ್ಯಾಸ್ಪದವಿಚಾರ.

ತತ್‌ಪೂರ್ವಕತ್ವಾಧಿಕರಣ (೨-೪-೩)

**प्रकाशः – ''प्रासङ्गिकाधिकरणान्तरव्यवधिस्तु न दोषः'' इति श्रुतप्रकाशोक्तमाशङ्कते – नन्विति ।।**

ಜೀವನಿತ್ಯತ್ವವಿಚಾರಪರವಾದ ಈ ಪಾದದಲ್ಲಿ ಜೀವನಿತ್ಯತ್ವವಿಚಾರವನ್ನು ಸಮರ್ಥನೆ ಮಾಡುವುದೇ ಪ್ರಧಾನ ಪ್ರಮೇಯವಾಗಿದೆ. ಅದಕ್ಕೆ ಅನುಕೂಲವಾಗಿ ಜೀವಾಣುತ್ವವಿಚಾರ ಪ್ರಸಕ್ತವಾಗುತ್ತಿದೆ. ಆದ್ದರಿಂದ ಪ್ರಕೃತ ಈ ಅಧಿಕರಣದಲ್ಲಿ ಪುನಃ ಜೀವನಿತ್ಯತ್ವವನ್ನು ಪರಾಮರ್ಶೆ ಮಾಡುವುದು ವ್ಯವಹಿತವಾಗುವುದಿಲ್ಲ ಎಂದು ಶ್ರುತಪ್ರಕಾಶದಲ್ಲಿ ಆಶಂಕಿಸಲಾಗಿದೆ. ಅದನ್ನು 'ನನು' ಇತ್ಯಾದಿ ವಾಕ್ಯವನ್ನು ಅನುವಾದ ಮಾಡಿ ನಿರಾಕರಣೆ ಮಾಡುತ್ತಿದ್ದಾರೆ.

**प्रकाशः** – जीवाणुत्वादेरित्युक्तिरुभयसंमतत्वात् । तन्मतरीत्या जीवज्ञातृत्वादेरिति ज्ञेयम् । ज्ञोत इत्यादौ ज्ञातृत्वादेश्चिन्तनात् ।।

ಗ್ರಂಥದಲ್ಲಿ 'ಜೀವಾಣುತ್ವಾದೇಃ' ಎಂದು ಹೇಳಿರುವುದು ಉಭಯಸಮ್ಮತವಾಗಿದೆ. ಏಕೆಂದರೆ ಅವರ ಮತದ ಪ್ರಕಾರ ಹೇಳುವುದಾದರೆ 'ಜೀವಜ್ಞಾತೃತ್ವಾದೇಃ' ಎಂದು ಹೇಳಬೇಕಿತ್ತು. 'ಜ್ಞೋತ ಏವ' ಎಂಬ ಸೂತ್ರದಲ್ಲಿ ಜೀವನಲ್ಲಿ ಜ್ಞಾತೃತ್ವವನ್ನು ಸಮರ್ಥನೆಯನ್ನು ಮಾಡಲಾಗಿದೆ ಎಂದು ಅವರು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ನಾವು ಅದನ್ನು ಒಪ್ಪಿರುವುದಿಲ್ಲ. ಆದರೆ 'ಉತ್ಕ್ರಾಂತಿಗತ್ಯಾಗತೀನಾಂ' ಇತ್ಯಾದಿ ಸೂತ್ರಗಳಲ್ಲಿ ಜೀವಾಣುತ್ವವನ್ನು ಸಮರ್ಥಿಸಲಾಗಿದೆ ಎಂದು ಅವರು ಒಪ್ಪಿದ್ದಾರೆ, ನಾವೂ ಸಹ ಒಪ್ಪಿದ್ದೇವೆ. ಈ ವಿಷಯದಲ್ಲಿ ವಿಪ್ರತಿಪತ್ತಿ ಇಲ್ಲದ್ದರಿಂದ 'ಜೀವಾಣುತ್ವಾದೇಃ' ಎಂದು ಗ್ರಂಥಕಾರರು ಹೇಳಿದ್ದು ಸಾಧುವಾಗಿದೆ. ಅವರ ಪ್ರಕಾರ ಜ್ಞಾತೃತ್ವವು ಮೊದಲು ಪ್ರಸಕ್ತವಾಗಿರುವಾಗ ಅಣುತ್ವವನ್ನು ಮೊದಲು ಏಕೆ ಹೇಳಿದರು? ಎಂಬ ಪ್ರಶ್ನೆಗೆ ಈಗ ಅವಕಾಶವಿಲ್ಲ.

**प्रकाशः – जीवानुत्पत्त्यादेरपीति ।। तथा च यथा ''ज्ञोत'' इत्यादिकं प्रासङ्गिकमिति कृत्वाऽत्र तथाशब्दस्य ''नात्मा श्रुतेः'' इत्यत्रोक्तजीवसाम्य-परामर्शाव्यवधायकं तथा ''नात्मा'' इत्येतदपि ततः पूर्वोक्तवियदादिसाम्य-परामर्शाव्यवधायकमिति तत्साम्योक्त्या सिद्धान्तसूत्रत्वमेव स्यादिति भावः ।।**

ನೀವು ಜೀವನಿಗೆ ಅಣುತ್ವವನ್ನು ಒಪ್ಪಿ ಜ್ಞಾತೃತ್ವ, ಅಂಶತ್ವ, ಕರ್ತೃತ್ವ ಇವುಗಳೆಲ್ಲವೂ ಕೂಡ ಪ್ರಾಸಂಗಿಕವಾಗಿವೆ ಎಂದು ಹೇಳಿ ವ್ಯವಧಾಯಕವಲ್ಲವೆಂದು ಸಮರ್ಥನೆ ಮಾಡಿದಿರಿ. ಪ್ರಕೃತ ಜೀವನ ಸಾಮ್ಯವನ್ನು ಹೇಳುವುದಕ್ಕಾಗಿ ಜೀವನ ಬಗ್ಗೆ ಇರುವ ಯಾವುದೇ ಪ್ರಮೇಯಗಳು ಪ್ರಾಸಂಗಿಕವಲ್ಲವೆಂದು ಹೇಳುತ್ತಿರುವಿರಿ, ಅದರಂತೆ ನಾವೂ ಕೂಡ ಹೀಗೆ ಹೇಳುತ್ತೇವೆ – 'ನಾತ್ಮಾಶ್ರುತೇಃ' ಎಂಬ ಸೂತ್ರದಲ್ಲಿ ಜೀವನಿಗೆ ಯಾವ ಅಣುತ್ವವನ್ನು ಹೇಳಿದ್ದಾರೋ ಇದೂ ಕೂಡ ಪ್ರಾಸಂಗಿಕವಾಗಿದೆ. ಏಕೆಂದರೆ ಇದು ಜನ್ಮಾದಿಸೂತ್ರದ ಪ್ರಮೇಯಕ್ಕೆ ನಿರ್ವಾಹಕವಾಗಿರುವುದಿಲ್ಲ. ಹೀಗೆ ಜೀವಾಣುತ್ವವು ಪ್ರಾಸಂಗಿಕ-ವಾಗಿರುವುದರಿಂದ ಇದರ ಹಿಂದೆ ಪ್ರಸಕ್ತವಾದ ಆಕಾಶಾದಿಗಳ ಉತ್ಪತ್ತಿ ಮೊದಲಾದವುಗಳು ಅದನ್ನು ಪ್ರಕೃತ ಪರಾಮರ್ಶ ಮಾಡಿ ಅದರ ಸಾಮ್ಯವನ್ನು 'ತಥಾ ಪ್ರಾಣಾಃ' ಎಂಬ ಸೂತ್ರದಲ್ಲಿ ಪರಾಮರ್ಶ ಮಾಡುವುದಕ್ಕಾಗಿ ಮಧ್ಯದಲ್ಲಿರುವುದೆಲ್ಲವೂ ಅವ್ಯವಧಾಯಕವಾಗಿದೆ. 'ನವಿಯದಶ್ರುತೇಃ' ಎಂಬಲ್ಲಿ ಆಕಾಶಕ್ಕೆ ಉತ್ಪತ್ತಿಯನ್ನು ಹೇಳಿದ ಕೂಡಲೇ ಜೀವನ ವಿಚಾರವು ಪ್ರಸಕ್ತವಾಯಿತು. ಈ ಅಧಿಕರಣದ ತನಕ ಜೀವದ ಬಗ್ಗೆ ವಿಚಾರವೆಲ್ಲವೂ ಕೂಡ ಪ್ರಾಸಂಗಿಕವಾಗಿದೆ. ಆದ್ದರಿಂದ ವಿಯದಾದಿಗಳಿಗೆ ಹೇಗೆ ಉತ್ಪತ್ತಿ ಇದೆಯೋ

ಆದರಂತೆ ಇಂದ್ರಿಯಾದಿಗಳಿಗೂ ಕೂಡ ಉತ್ಪತ್ತಿ ಇದೆ ಎಂಬುದಾಗಿ ಪರಾಮರ್ಶವನ್ನು ಮಾಡಬೇಕು. ಮಧ್ಯದಲ್ಲಿರುವುದಕ್ಕೆ ವ್ಯವಧಾಯಕತ್ವವೇ ಬರುವುದಿಲ್ಲ. ಹೀಗೆ 'ತಥಾ ಪ್ರಾಣಾಃ' ಎಂಬುದು ಸಿದ್ಧಾಂತ ಸೂತ್ರವೆಂದೇ ಹೇಳಲು ಬರುವಾಗ ಪೂರ್ವಪಕ್ಷ ಸೂತ್ರವನ್ನಾಗಿ ಏಕೆ ಪರಿಗಣಿಸುತ್ತಿದ್ದೀರಿ?

**प्रकाशः – गौण्यसम्भवादित्येतदर्थं निराह – प्राणा वा इति ।।** इत्येवेत्येवकारेण समन्वयाध्याय एव सर्वशब्दानां समन्वयसिद्धेरिह प्राणपदसमन्वयोक्तेर-सङ्गतत्वात्तदपवादकलिङ्गादेरिह ''प्राणा वा ऋषयः'' इति वाक्येऽभावात्प्रत्युत प्रलयवृत्तित्वरूपब्रह्मलिङ्गश्रवणान्मुख्यासम्भवेन बहुवचनगौणताया न्याय्यत्वात् न त्वदुक्तार्थकत्वमस्य सूत्रस्येति सूचितम् ।

'ಗೌಣ್ಯಸಂಭವಾತ್' ಎಂಬ ಸೂತ್ರದ ಅರ್ಥವನ್ನೂ ಕೂಡ ನಿರಾಕರಣೆ ಮಾಡುತ್ತಿದ್ದಾರೆ 'ಪ್ರಾಣಾ ವಾ' ಇತ್ಯಾದಿ ಗ್ರಂಥದಿಂದ. ಗ್ರಂಥದಲ್ಲಿ ಅನಾದಿತ್ವಶ್ರುತಿಯನ್ನು ಗೌಣವೆಂದೇ ಪರಿಗಣಿಸಬೇಕು. ಏಕೆಂದರೆ ಮುಖ್ಯಾರ್ಥವು ಕೂಡುವುದಿಲ್ಲ. ಹೀಗೆ ಸೂತ್ರಾರ್ಥವನ್ನು ಹೇಳಬೇಕು ಎಂದು ಹೇಳಿದ್ದಾರೆ. 'ಇತ್ಯೇವ' ಎಂಬಲ್ಲಿ ಏವಕಾರದಿಂದ ಇದನ್ನು ಗ್ರಂಥಕಾರರು ಸೂಚನೆ ಮಾಡಿದ್ದಾರೆ – ಪ್ರಾಣಶಬ್ದವು ಬ್ರಹ್ಮಪರವೆಂದು ಈಗ ನೀವು ಸಮರ್ಥನೆ ಮಾಡುತ್ತಿದ್ದೀರಿ. ಆದರೆ ಸಮನ್ವಯಾಧ್ಯಾಯದಲ್ಲಿಯೇ ಸರ್ವಶಬ್ದದ ಸಮನ್ವಯವನ್ನು ಮಾಡುವಾಗ ತದ್ಗರ್ಭಿತವಾಗಿ ಪ್ರಾಣಸಮನ್ವಯವೂ ಕೂಡ ಸಿದ್ಧವಾಗಿದೆ. ಪುನಃ ಇಲ್ಲಿ ಅಸಂಗತವಾಗಿ ಪ್ರಾಣಪದಸಮನ್ವಯ ಮಾಡುವುದು ತಪ್ಪಾಗುತ್ತದೆ. ಮತ್ತು ಎಲ್ಲಾ ಶಬ್ದಗಳೂ ಬ್ರಹ್ಮಪರವೆಂದು ನಿರ್ಣಯವಾದ ಮೇಲೆ ಯಾವುದಾದರೂ ಅಪವಾದಕ ಲಿಂಗಗಳಿದ್ದಲ್ಲಿ ಅದರ ಪರಿಹಾರಕ್ಕಾಗಿ ಸಮನ್ವಯ ಮಾಡಿದ ವಿಷಯದಲ್ಲಿ ತೊಡಕನ್ನು ಪರಿಹಾರ ಮಾಡುವುದು ತಪ್ಪಾಗುವುದಿಲ್ಲ. ಉದಾಹರಣೆ – 'ಪ್ರಾಣಾ ವಾ ಋಷಯಃ' ಎಂಬ ವಾಕ್ಯದಲ್ಲಿ ಇಂದ್ರಿಯಗಳನ್ನೇ ವಿವಕ್ಷಿಸಬೇಕು, ಬ್ರಹ್ಮನನ್ನು ವಿವಕ್ಷಿಸಬಾರದು ಎಂಬ ವಿಷಯದಲ್ಲಿ ಯಾವುದಾದರೂ ಅಪವಾದಕ ಲಿಂಗವಿದ್ದಲ್ಲಿ ಪ್ರಾಣಶಬ್ದವು ಬ್ರಹ್ಮಪರವೆಂದು ಸಮರ್ಥಿಸುವುದು ತಪ್ಪಾಗುತ್ತಿರಲಿಲ್ಲ. ಆದರೆ ಇಂದ್ರಿಯಪರತ್ವಕ್ಕೆ ಸಾಧಕವಾದ ಯಾವುದೇ ಲಿಂಗಗಳೇ ಈ ವಾಕ್ಯದಲ್ಲಿ ಇಲ್ಲ. ವಿಪರೀತವಾಗಿ ಬ್ರಹ್ಮಲಿಂಗವೇ ಶ್ರುತವಾಗಿದೆ. 'ಅಸದ್ವಾ ಇದಮಗ್ರ ಆಸೀತ್' ಎಂಬುದಾಗಿ ಪ್ರಳಯವರ್ತಿತ್ವವು ಶ್ರುತವಾಗಿದೆ. ಇದು ಬ್ರಹ್ಮನ ಅಸಾಧಾರಣ ಲಿಂಗವಾಗಿದೆ.

'ಪ್ರಾಣಾಃ' ಎಂಬಲ್ಲಿರುವ ಬಹುವಚನವು ಬ್ರಹ್ಮಪರತ್ವಕ್ಕೆ ಬಾಧಕವಾಗಿದೆಯಲ್ಲವೇ? ಎಂಬ ಪೂರ್ವಪಕ್ಷವೇ ತಪ್ಪು. ಏಕೆಂದರೆ 'ಪ್ರಾಣ' ಶಬ್ದಕ್ಕೆ ಮುಖ್ಯಾರ್ಥವು ಕೂಡದೇ ಇದ್ದಾಗ ಬಹುವಚನವು ಸ್ವತಃ ಗೌಣವಾಗುತ್ತದೆ. 'ಗುಹಾಂಪ್ರವಿಷ್ಟೌ' ಇತ್ಯಾದಿ ಸೂತ್ರಗಳಲ್ಲಿ ಈ ವಿಷಯವನ್ನು ಸಮರ್ಥಿಸಿದ್ದೇವೆ. ಪ್ರಕೃತಿಗಿಂತ ಪ್ರತ್ಯಯವು ದುರ್ಬಲವಾದ್ದರಿಂದ ಪ್ರಕೃತ್ಯರ್ಥವನ್ನು ವಿರೋಧಿಸಲು ಪ್ರತ್ಯಯಾರ್ಥಕ್ಕೆ ಸಾಧ್ಯವಿಲ್ಲ. ಇದಕ್ಕೋಸ್ಕರ ಒಂದು ಸೂತ್ರವು ಹೊರಟಿದೆ ಎನ್ನುವುದು ಅಸಂಗತವಾಗುತ್ತದೆ. ಆದ್ದರಿಂದ ನೀವು ಹೇಳಿದ ಈ ಸೂತ್ರವ್ಯಾಖ್ಯಾನವು ಅಯುಕ್ತವಾಗಿದೆ ಎಂಬುದನ್ನು ಗ್ರಂಥಕಾರರು ಏವಕಾರದಿಂದ ಸೂಚನೆ ಮಾಡಿದ್ದಾರೆ.

**प्रकाशः – तत्प्राक्श्रुतेश्चेत्येतदर्थमनूद्य निराह – यच्चोक्तमिति ।। प्राणानामपीति।।** ''प्राणा एवानादयः नित्यान्येतानि सौक्ष्म्येण'' इत्यादिभाष्योक्तश्रुत्यादिबलेन सूक्ष्मरूपेण सत्त्वसम्भवेनेत्यर्थः ।

'ತತ್ಪ್ರಾಕ್ಶ್ರುತೇಶ್ಚ' ಎಂಬುದನ್ನು ಅನುವಾದ ಮಾಡಿ ನಿರಾಕರಣೆ ಮಾಡುತ್ತಿದ್ದಾರೆ 'ಯಚ್ಚೋಕ್ತಂ' ಇತ್ಯಾದಿಯಾಗಿ. 'ಪ್ರಾಣಾನಾಮಪಿ' ಎಂಬುದರ ಅಭಿಪ್ರಾಯ ಹೀಗಿದೆ – 'ಪ್ರಾಣಾ ಏವಾಽನಾದಯಃ

ನಿತ್ಯಾನ್ಯೇತಾನಿ ಸೌಕ್ಷ್ಮ್ಯೇಣ' ಇತ್ಯಾದಿ ಭಾಷ್ಯದಲ್ಲಿ ಉದಾಹರಿಸಿದ ಶ್ರುತ್ಯಾದಿಗಳ ಆಧಾರದಿಂದ ಇಂದ್ರಿಯಗಳು ಸೂಕ್ಷ್ಮರೂಪದಿಂದ ಇರುತ್ತವೆ ಎಂದು ಅಂಗೀಕರಿಸೋಣ. ಹೀಗಿರುವಾಗ ಬ್ರಹ್ಮನೊಬ್ಬನೇ ಇದ್ದನು ಎಂದು ಹೇಗೆ ಹೇಳುತ್ತೀರಿ.

**प्रकाशः** – साध्योक्तिपूर्वं सूत्रार्थमनुवदति ।। **अतश्चेति** ।। वक्ष्यमाणादपि हेतोरित्यर्थः । प्राङ्नामधेयात्पूर्वं स्वविषयभूतं यद्वियदादि तत्सृष्टिपूर्वकत्वादित्यर्थः। विषये सत्येव नामधेयस्य तत्र प्रवृत्तेरित्यर्थः ।।

ಪ್ರಾಣ ಶಬ್ದವು ಬ್ರಹ್ಮಪರವೇ ಆಗಿದೆ. ಏಕೆಂದರೆ ನಾಮಧೇಯಗಳೆಲ್ಲವೂ ಅನಂತರ ಸೃಷ್ಟವಾಗಿದೆ. ಹೀಗೆ ಸಾಧ್ಯವನ್ನು ಹೇಳುವ ಮೂಲಕ ಸೂತ್ರಾರ್ಥವನ್ನು 'ಅತಶ್ಚ' ಇತ್ಯಾದಿಯಾಗಿ ಅನುವಾದ ಮಾಡುತ್ತಿದ್ದಾರೆ. 'ಅತಶ್ಚ' ಎಂದರೆ ಮುಂದೆ ಹೇಳುವ ಕಾರಣದಿಂದಲೂ ಕೂಡ ಪ್ರಾಣಶಬ್ದವು ಬ್ರಹ್ಮಪರ ಎಂದರ್ಥ. ನಾಮಧೇಯಗಳು ಹುಟ್ಟುವ ಮೊದಲು ನಾಮಧೇಯಕ್ಕೆ ವಿಷಯವಾದ ವಿಯದಾದಿಗಳು ಸೃಷ್ಟವಾಗಿರುತ್ತವೆ. ಅನಂತರ ಹೆಸರುಗಳು ಹುಟ್ಟುತ್ತವೆ ಎಂಬುದು ಅದ್ವೈತಿಗಳ ಅಭಿಪ್ರಾಯ. ಏಕೆಂದರೆ ವಿಷಯ ಇದ್ದರೆ ಮಾತ್ರ ನಾಮಧೇಯಕ್ಕೆ ಅಲ್ಲಿ ಪ್ರವೃತ್ತಿ ಆಗಲು ಸಾಧ್ಯ. ಮಗು ಹುಟ್ಟಿದ ಮೇಲೆ ನಾಮಕರಣ ಮಾಡುತ್ತಾರೆ. ನಾಮಕರಣ ಮಾಡಿದ ಮೇಲೆ ಮಗು ಹುಟ್ಟುವುದಿಲ್ಲವಷ್ಟೆ?

**प्रकाशः** – **सङ्कुचितेति** ।। ब्रह्मान्येति सङ्कुचितार्थस्येत्यर्थः ।। **सृष्टिपूर्वकत्वेति**।। सृष्ट्यपेक्षया पूर्वकालीनत्वोपपत्तेरित्यर्थः ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे तत्पूर्वकत्वाधिकरणं सम्पूर्णम् ।।३।।**

ಗ್ರಂಥದಲ್ಲಿ 'ಸಂಕುಚಿತಾರ್ಥಸ್ಯ' ಎಂದು ಹೇಳಿದ್ದಾರೆ. ಬ್ರಹ್ಮನಿಗಿಂತ ಭಿನ್ನವಾದ ಅರ್ಥದಲ್ಲಿ ನೀವು ಸಂಕುಚಿತವಾದ ಅರ್ಥವನ್ನು ಮಾಡಬೇಕಾಗುತ್ತದೆ ಎಂದು ಇದರ ಅಭಿಪ್ರಾಯ. 'ಸೃಷ್ಟಿಪೂರ್ವಕತ್ವ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಸೃಷ್ಟಿಗಿಂತ ಮೊದಲಿರುವ ಪದಾರ್ಥಗಳಲ್ಲಿ ಶಬ್ದಗಳು ಉಪಪನ್ನವಾಗುತ್ತವೆ ಎಂಬುದು ಇದರ ಅಭಿಪ್ರಾಯ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ತತ್‌ಪೂರ್ವಕತ್ವಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

# ಸಪ್ತಗತ್ಯಧಿಕರಣ

(೨-೪-೪)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

॥ ಶ್ರೀಗುರುಭ್ಯೋ ನಮಃ ॥

# ಸಪ್ತಗತ್ಯಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – सप्तगतेर्विशेषितत्वाच्च ।।**

'ಗುಹಾಶಯಾಂ ನಿಹಿತಾಃ ಸಪ್ತ ಸಪ್ತ' 'ಜ್ಞಾನಕ್ಕೆ ಸಂಬಂಧಪಟ್ಟ ಇಂದ್ರಿಯಗಳು ಏಳು' ಎಂದು ವಿಶೇಷಣವನ್ನು ನೀಡಿರುವುದರಿಂದ ಜ್ಞಾನಜನಕವಾದ ಇಂದ್ರಿಯಗಳು ಏಳು ಎಂದು ಸಿದ್ಧವಾಗುತ್ತದೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका —** चशब्दः सप्तप्राणास्त्ववगतेरिति प्रमाणसमुच्चये । **गतेः** ज्ञानस्य। जनकानीन्द्रियाणि **सप्त** सप्तसङ्ख्याकानीति निर्णय एव । न त्वनिर्णयः। कुतः **विशेषितत्वात्** 'सप्त प्राणाः' इति श्रुतौ गुहाशयां बुद्ध्यर्थं निहिताः विशेषणयुक्ततया निर्दिष्टत्वादित्यर्थः ।।१।।

'ಚ'ಶಬ್ದವು 'ಸಪ್ತಪ್ರಾಣಾಃ ತ್ವವಗತೇಃ' ಎಂದು ಪ್ರಮಾಣವನ್ನು ಸಮುಚ್ಚಯ ಮಾಡುತ್ತಿದೆ. ಗತೇಃ = ಜ್ಞಾನಕ್ಕೆ ಜನಕವಾದ ಇಂದ್ರಿಯಗಳು, ಸಪ್ತ = ಏಳು ಎಂದು ನಿರ್ಣಯವಾಗುತ್ತದೆ. ಈ ವಿಷಯದಲ್ಲಿ ಗೊಂದಲವಿಲ್ಲ. ಏಕೆಂದರೆ ವಿಶೇಷಿತತ್ವಾತ್ = 'ಸಪ್ತ ಪ್ರಾಣಾಃ ಪ್ರಭವಂತಿ ತಸ್ಮಾತ್' ಎಂಬುದಾಗಿ ಶ್ರುತಿಯಲ್ಲಿ ಜ್ಞಾನಕ್ಕಾಗಿ ಏಳು ಇಂದ್ರಿಯಗಳಿವೆ ಎಂದು ವಿಶೇಷಣಗಳನ್ನು ಹೇಳಲಾಗಿದೆ.

ಪರಿಪೂರ್ಣಚಂದ್ರಿಕಾ

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – 'सप्त प्राणाः प्रभवन्ति तस्मात्' (मुं. २.१.८.) इति श्रुतिः ।**
**'सप्तैव मारुता बाह्ये प्राणस्सप्त तथाऽऽत्मनि ।**
**अधिदैवे तथाऽध्यात्मे सङ्ख्यासाम्यं विदो विदुः ।।'**
**इति च स्कान्दे ।**

ಅನುವಾದ - ಏಳು ಬಗೆಯ ಇಂದ್ರಿಯಗಳು ಪರಮಾತ್ಮನಿಂದ ಹುಟ್ಟಿದವು. ಹೀಗೆ ಮುಂಡಕೋಪನಿಷತ್ ಹೇಳುತ್ತಿದೆ -

ದೇಹದಲ್ಲಿರುವ ಇಂದ್ರಿಯಗಳು ಏಳು ಮಾತ್ರ ದೇಹದ ಹೊರಗಿರುವ ಅಭಿಮಾನಿ-ದೇವತೆಗಳಲ್ಲೂ ದೇಹದ ಒಳಗಿರುವ ಅಭಿಮನ್ಯಮಾನವಾದ ಇಂದ್ರಿಯಗಳಲ್ಲೂ ಏಳು ಎಂಬ ಸಂಖ್ಯೆ ಸಮಾನವಾಗಿದೆ ಎಂದು ಜ್ಞಾನಿಗಳು ತಿಳಿಯುತ್ತಾರೆ. ಹೀಗೆ ಸ್ಕಾಂದಪುರಾಣವು ಹೇಳಿದೆ.

ಪ್ರತಿಪದಾರ್ಥ -- ತಸ್ಮಾತ್ = ಆ ಪರಮಾತ್ಮನ ದೆಸೆಯಿಂದ, ಸಪ್ತ = ಏಳುಬಗೆಯ, ಪ್ರಾಣಾಃ = ಇಂದ್ರಿಯಗಳು, ಪ್ರಭವಂತಿ = ಹುಟ್ಟುತ್ತವೆ, ಇತಿ = ಹೀಗೆ, ಶ್ರುತಿಃ = ಶ್ರುತಿಯು ಹೇಳುತ್ತಿದೆ. ಬಾಹ್ಯೇ = ದೇಹದ ಹೊರಗಿರುವ, ಮಾರುತಾಃ = ಮರುತ್ ಎಂದು ಕರೆಸಿಕೊಳ್ಳುವ ಇಂದ್ರಿಯಾಭಿಮಾನಿದೇವತೆಗಳು, ಸಪ್ತೈವ = ಏಳು ಮಾತ್ರ. ತಥಾ = ಹಾಗೆಯೇ, ತಥಾ = ಹಾಗೆಯೇ, ಆತ್ಮನಿ = ದೇಹದಲ್ಲಿರುವ, ಪ್ರಾಣಾಃ = ಇಂದ್ರಿಯಗಳು, ಸಪ್ತೈವ = ಏಳು ಮಾತ್ರ. ಹೀಗೆ, ಅಧಿದೈವೇ = ದೇಹದ ಹೊರಗಿರುವ ಅಭಿಮಾನಿದೇವತೆಗಳಲ್ಲೂ, ತಥಾ = ಹಾಗೆ, ಅಧ್ಯಾತ್ಮೇ = ದೇಹದ ಒಳಗಿರುವ ಅಭಿಮಾನ್ಯವಾದ ಇಂದ್ರಿಯಗಳಲ್ಲೂ, ಸಂಖ್ಯಾಸಾಮ್ಯಂ = ಏಳು ಎಂಬ ಸಂಖ್ಯೆಯ ಸಾಮ್ಯತೆಯನ್ನು, ವಿದುಃ = ಜ್ಞಾನಿಗಳು ತಿಳಿಯುತ್ತಾರೆ. ಇತಿ ಚ = ಹೀಗೆ, ಸ್ಕಾಂದೇ = ಸ್ಕಾಂದಪುರಾಣದಲ್ಲಿ ಹೇಳಲಾಗಿದೆ.

**भाष्यम् –'द्वादश वा एते प्राणा द्वादश मासा द्वादशाऽऽदित्याः । द्वादश राशयो द्वादश ग्रहाः' इति कौण्डिन्यश्रुतौ द्वादशप्राणा दृश्यन्ते ।**

ಅನುವಾದ - ಆದರೆ ಕೌಂಡಿನ್ಯಶ್ರುತಿಯಲ್ಲಿ ಇಂದ್ರಿಯಗಳು ಹನ್ನೆರಡು ಎಂದು ಹೇಳಲಾಗಿದೆ. ಈ ಇಂದ್ರಿಯಗಳು ಒಟ್ಟು ಹನ್ನೆರಡು ಸಂಖ್ಯೆಯಲ್ಲಿವೆ. ಹನ್ನೆರಡು ಮಾಸಗಳು ಹನ್ನೆರಡು ಆದಿತ್ಯರು. ಹನ್ನೆರಡು ರಾಶಿಗಳು. ಹನ್ನೆರಡು ಗ್ರಹಗಳು.

ಪ್ರತಿಪದಾರ್ಥ-- ಏತೇ = ಈ ಪ್ರಾಣಾದಿ ಇಂದ್ರಿಯಗಳು, ದ್ವಾದಶ = ಹನ್ನೆರಡು, ಮಾಸಾಃ = ತಿಂಗಳುಗಳು, ದ್ವಾದಶ = ಹನ್ನೆರಡು, ಆದಿತ್ಯಃ = ಆದಿತ್ಯರು, ದ್ವಾದಶ = ಹನ್ನೆರಡು, ರಾಶಯಃ = ರಾಶಿಗಳು, ದ್ವಾದಶ = ಹನ್ನೆರಡು, ಗ್ರಹಾಃ = ಗ್ರಹಗಳು, ದ್ವಾದಶ = ಹನ್ನೆರಡು, ಇತಿ = ಹೀಗೆ, ಕೌಂಡಿನ್ಯಶ್ರುತೌ = ಕಾಂಡಿನ್ಯಶ್ರುತಿಯಲ್ಲಿ, ಪ್ರಾಣಾಃ = ಪ್ರಾಣಗಳು, ದ್ವಾದಶ = ಹನ್ನೆರಡು ಎಂದು, ದೃಶ್ಯಂತೇ = ಕಾಣಸುತ್ತಿದೆ.

ಸಪ್ತಗತ್ಯಧಿಕರಣ (೨-೪-೪)

**भाष्यम् – अतो वक्ति –**

**।। सप्त गतेर्विशेषितत्वाच्च ।।१।।**

**ज्ञानेन्द्रियापेक्षया सप्तत्वम् 'गुहाशयां निहिताः सप्त सप्त' (मुं.२.१.८.) इति विशेषणात् ।**

ಇಂದ್ರಿಯಗಳು ಏಳು ಅಥವಾ ಹನ್ನೆರಡು ಎಂಬ ವಿಷಯದಲ್ಲಿ ಪರಸ್ಪರವಿರೋಧ - ವಿರುವುದರಿಂದ ಸೂತ್ರಕಾರರು ಉತ್ತರಿಸುತ್ತಿದ್ದಾರೆ -

ಜ್ಞಾನೇಂದ್ರಿಯದ ವಿವಕ್ಷೆಯಿಂದ ಇಂದ್ರಿಯಗಳು ಒಟ್ಟು ಏಳು ಸಂಖ್ಯೆಯಲ್ಲಿ ಇರುತ್ತವೆ. ಏಕೆಂದರೆ 'ಗುಹಾಶಯಾಂ ನಿಹಿತಾಃ ಸಪ್ತಸಪ್ತ' ಜ್ಞಾನಕ್ಕಾಗಿ ಇಂದ್ರಿಯಗಳು ಏಳು ಸಂಖ್ಯೆಯಲ್ಲಿ ಇರುತ್ತವೆ. ಸಪ್ತಸಪ್ತ ಎಂಬುದಾಗಿ ಸಪ್ತ ಎಂಬ ವಿಶೇಷಣವನ್ನು ನೀಡಿರುವುದರಿಂದ ಸ್ಪಷ್ಟವಾಗುತ್ತದೆ.

ಪ್ರತಿಪದಾರ್ಥ -- ಅತಃ = ವಿರೋಧ ಪರಿಹಾರಕ್ಕಾಗಿ ಸೂತ್ರಕಾರರು, ವಕ್ತಿ = ಹೇಳುತ್ತಿದ್ದಾರೆ -

ಜ್ಞಾನೇಂದ್ರಿಯಾಪೇಕ್ಷಯಾ = ಜ್ಞಾನೇಂದ್ರಿಯ ದೃಷ್ಟಿಯಿಂದ, ಸಪ್ತತ್ವಮ್ = ಇಂದ್ರಿಯಗಳಿಗೆ ಏಳು ಎಂಬ ಸಂಖ್ಯೆಯು ಯುಕ್ತವಾಗುತ್ತದೆ. ಗುಹಾಶಯಾಂ = ಜ್ಞಾನದ ಪ್ರಾಪ್ತಿಗಾಗಿ, ಸಪ್ತ = ಏಳು ಇಂದ್ರಿಯಗಳು, ನಿಹಿತಾಃ = ವಿನಿಯೋಗ ಮಾಡಲ್ಪಟ್ಟವೆ. ಇತಿ = ಹೀಗೆ, ವಿಶೇಷಣಾತ್ = ವಿಶೇಷಣವನ್ನು ನೀಡಿದ್ದರಿಂದ ಸ್ಪಷ್ಟವಾಗುತ್ತದೆ.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

## ತತ್ವಪ್ರಕಾಶಿಕಾ

**तत्वप्रकाशिका – अत्र श्रुतिसमन्वयेन विष्णोर्जगत्कारणत्वसिद्धये प्राणसंख्याविषयश्रुतिविरोधपरिहारादस्ति शास्त्रादिसङ्गतिः । उक्तो जगत्कारणे ब्रह्मणि श्रुतिसमन्वयः प्राणसंख्याश्रुतीनां विरोधेनाप्रामाण्येऽनुपपन्नः (तां) प्राप्नोतीत्यश्यमयं पराकर्यः । प्रकृतप्राण एवात्र विषयः । किं सप्तोत द्वादशेति सन्देहः । सन्देहबीजं श्रुतिविगानं दर्शयन् पूर्वपक्षं च सूचयति – सप्तेति ।।**

ಈ ಅಧಿಕರಣದಲ್ಲಿ ಶ್ರುತಿಸಮನ್ವಯದ ಮೂಲಕ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗುವುದಕ್ಕಾಗಿ ಪ್ರಾಣಸಂಖ್ಯಾವಿಷಯಕವಾದ ಶ್ರುತಿವಿರೋಧವನ್ನು ಪರಿಹಾರ ಮಾಡಲಾಗಿದೆ. ಆದ್ದರಿಂದ ಶಾಸ್ತ್ರ-ಅಧ್ಯಾಯ-ಪಾದ ಸಂಗತಿಗಳು ಇರುತ್ತವೆ. ಜಗತ್ಕಾರಣನಾದ ಬ್ರಹ್ಮನಲ್ಲಿ ಶ್ರುತಿಸಮನ್ವಯವನ್ನು ಹಿಂದೆ ನಿರೂಪಣೆ ಮಾಡಲಾಯಿತು. ಈ ವಿಷಯದಲ್ಲಿ ಪ್ರಾಣಸಂಖ್ಯಾವಿಷಯಕ ಶ್ರುತಿಗಳ ವಿರೋಧವು ಬರುವುದರಿಂದ ಅಪ್ರಾಮಾಣ್ಯವು ಬರುವ

ಮೂಲಕ ಅನುಪಪನ್ನವಾಗುತ್ತದೆ. ಹಾಗಾಗಿ ಪ್ರಾಣಸಂಖ್ಯಾವಿಷಯಕ ಶ್ರುತಿಗಳ ವಿರೋಧವನ್ನು ಅವಶ್ಯವಾಗಿ ನಿರಾಕರಣೆ ಮಾಡಲೇಬೇಕು.

ಪ್ರಕೃತವಾದ ಇಂದ್ರಿಯಗಳೇ ಈ ಅಧಿಕರಣಕ್ಕೆ ವಿಷಯವಾಗಿವೆ. ಈ ಇಂದ್ರಿಯಗಳು ಏಳೋ ಅಥವಾ ಹನ್ನೆರಡೋ? ಎಂಬುದು ಸಂದೇಹ.

ಸಂದೇಹಕ್ಕೆ ಕಾರಣವೇ ಶ್ರುತಿಗಳ ಪರಸ್ಪರ ವಿರೋಧವಾಗಿದೆ. ಇದನ್ನು ತೋರಿಸುವ ಮೂಲಕ ಪೂರ್ವಪಕ್ಷವನ್ನು 'ಸಪ್ತ' ಇತ್ಯಾದಿಯಾಗಿ ಸೂಚನೆ ಮಾಡುತ್ತಿದ್ದಾರೆ.

ವಿವರಣೆ – ಉತ್ಪತ್ತಿಯು ಪ್ರಾಥಮಿಕವಾಗಿರುವುದರಿಂದ ಇಂದ್ರಿಯಗಳ ಉತ್ಪತ್ತಿಯ ಬಗ್ಗೆ ಇಲ್ಲಿಯ ತನಕ ವಿಚಾರ ಮಾಡಿದ್ದಾಯಿತು. ಪ್ರಕೃತ ಇಂದ್ರಿಯಗಳ ಸಂಖ್ಯೆಯ ಬಗ್ಗೆ ವಿಚಾರ ಮಾಡಲಾಗಿದೆ. ಆದ್ದರಿಂದ ಆನಂತರ್ಯ ಸಂಗತಿಯು ಇರುತ್ತದೆಂದು ತಿಳಿಯಬೇಕು.

**ತत्वप्रकाशिका – श्रुतिः प्राणानां सप्तत्वं वक्तीति शेषः । 'ग्रहाः सोमस्य सप्तैव प्राणाः सप्त प्राणाः' इति । न च द्वादशप्राणेषु सप्तापि सम्भवतीति द्वादशत्वाविरोधिनीयं श्रुतिरिति वाच्यम् । द्वादशत्वे कारणविशेषमन्तरेण-सप्तत्वोक्तेरयोगात् ।**

ಭಾಷ್ಯದಲ್ಲಿ 'ಶ್ರುತಿಃ' ಎಂಬ ಪದದ ಅನಂತರ 'ಪ್ರಾಣಾನಾಂ ಸಪ್ತತ್ವಂ ವಕ್ತಿ' 'ಇಂದ್ರಿಯಗಳಿಗೆ ಏಳು ಸಂಖ್ಯೆಯನ್ನು ಹೇಳುತ್ತಿದೆ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. 'ಗ್ರಹಾಃ ಸೋಮಸ್ಯ ಸಪ್ತೈವ ಪ್ರಾಣಾಃ ಸಪ್ತ ಪ್ರಾಣಾಃ' ಎಂಬ ಶ್ರುತಿ ಈ ವಿಷಯದಲ್ಲಿ ಆಧಾರವಾಗಿದೆ. ಇಂದ್ರಿಯಗಳನ್ನು ಹನ್ನೆರಡು ಎಂದೇ ವಿವಕ್ಷಿಸೋಣ. ಆ ಹನ್ನೆರಡರಲ್ಲಿ ಏಳೂ ಸಹ ಸೇರಿರುವುದರಿಂದ ಹನ್ನೆರಡು ಸಂಖ್ಯೆ ಎಂಬುದಕ್ಕೆ ವಿರೋಧವು ಬರುವುದಿಲ್ಲ ಎಂದು ಹೇಳಬಾರದು. ಇಂದ್ರಿಯಗಳು ಹನ್ನೆರಡೇ ಆಗಿವೆ. ಕಾರಣವಿಶೇಷವಿಲ್ಲದೇ ಏಳು ಎಂದು ಹೇಳಲು ಯುಕ್ತವಾಗುವುದಿಲ್ಲ.

ವಿವರಣೆ - 'ಗ್ರಹಾಃ ಸೋಮಸ್ಯ ಸಪ್ತೈವ ಪ್ರಾಣಾಃ ಸಪ್ತ ಪ್ರಾಣಾಃ' ಎಂಬ ಶ್ರುತಿಯಲ್ಲಿ ಸೋಮರಸದ ಗ್ರಹಣಕ್ಕಾಗಿ ಒಟ್ಟು ಏಳು ಪಾತ್ರೆಗಳಿವೆ. ಇಂದ್ರಿಯಗಳು ಏಳು ಎಂದು ಹೇಳಲಾಗಿದೆ. ಆದರೆ 'ದ್ವಾದಶ ವಾಃ ಏತೇ ಪ್ರಾಣಾಃ ದ್ವಾದಶ ಮಾಸಾಃ' ಎಂಬ ಶ್ರುತಿಯಲ್ಲಿ ಹನ್ನೆರಡು ಇಂದ್ರಿಯಗಳು, ಹನ್ನೆರಡು ತಿಂಗಳುಗಳು, ಹನ್ನೆರಡು ಆದಿತ್ಯರು ಇತ್ಯಾದಿಯಾಗಿ ಹೇಳಲಾಗಿದೆ. ಏಳು ಇಂದ್ರಿಯಗಳೇ ಎಂದು ತೀರ್ಮಾನ ಮಾಡಿದರೆ ಹನ್ನೆರಡು ಇಂದ್ರಿಯಗಳೆಂದು ಹೇಳುವ ಶ್ರುತಿಯ ವಿರೋಧವು ಪ್ರಾಪ್ತವಾಗುತ್ತವೆ. ಆದ್ದರಿಂದ ಇಂದ್ರಿಯಗಳನ್ನು ಹನ್ನೆರಡು ಎಂದೇ ವಿವಕ್ಷಿಸಿ ಹನ್ನೆರಡರಲ್ಲಿ ಏಳು ಇಂದ್ರಿಯಗಳೂ ಕೂಡ ಸೇರಿರುವುದರಿಂದ ಏಳು ಇಂದ್ರಿಯಗಳೆಂದು ಹೇಳುವ ಶ್ರುತಿಯೂ ಕೂಡ ಯುಕ್ತವಾಗುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಇಂದ್ರಿಯಗಳು ಹನ್ನೆರಡು ಇವೆ ಎನ್ನಲು ವಿಶೇಷ ಕಾರಣವಿಲ್ಲ. ಆದ್ದರಿಂದ ಇಂದ್ರಿಯಗಳನ್ನು ಏಳು ಎಂದೇ ಹೇಳಬೇಕು ಎಂಬುದು ಪೂರ್ವಪಕ್ಷದ ಅಭಿಪ್ರಾಯ.

ಸಪ್ತಗತ್ಯಧಿಕರಣ (೨-೪-೪)

**तत्वप्रकाशिका – किं चाभिमानिनां सप्तत्वाच्च प्राणानां सप्तत्वमभिमान्यभिमन्यमानयोः समसंख्यात्वनियमादिति । अथवा द्वादश प्राणाः । 'द्वादश वा एते प्राणाः' इति श्रुतेः । न च सयुक्तिकत्वेन बलवत्त्या सप्तत्वश्रुत्या बाधः । 'द्वादशमासाः' इत्यादिश्रुतेरेकदैवत्वाभिप्रायेण प्रवृत्तत्वेन प्राणाभिमानिनां द्वादात्वस्याभिप्रातत्वात्सप्तत्वे कथितयुक्तेरपि साम्यात् । अन्यथा श्रुतेरुन्मत्तवाक्यत्वापातात्।**

ಮತ್ತು ಅಭಿಮಾನಿದೇವತೆಗಳು ಏಳು ಸಂಖ್ಯೆಯಲ್ಲಿ ಇರುವುದರಿಂದ ಅಭಿಮನ್ಯಮಾನವಾದ ಇಂದ್ರಿಯಗಳೂ ಕೂಡ ಏಳೇ ಆಗಿರುತ್ತವೆ. ಅಭಿಮಾನಿಗಳಿಗೂ ಅಭಿಮನ್ಯಮಾನಿಗಳಿಗೂ ಸಮಸಂಖ್ಯಾತ್ವವು ನಿಯಮಸಿದ್ಧವಾಗಿದೆ.

ಅಥವಾ ಇಂದ್ರಿಯಗಳು ಹನ್ನೆರಡು ಎಂದೇ ಹೇಳೋಣ. 'ದ್ವಾದಶಾ ವಾ ಏತೇ ಪ್ರಾಣಾಃ' ಎಂಬ ಶ್ರುತಿಯು ಈ ವಿಷಯದಲ್ಲಿ ಆಧಾರವಾಗಿದೆ. ಇಂದ್ರಿಯಗಳು ಏಳು ಸಂಖ್ಯೆಯಲ್ಲಿವೆ ಎಂದು ಹೇಳುವ ಶ್ರುತಿಯು ಯುಕ್ತಿಬದ್ಧವಾದ್ದರಿಂದ ಬಲಿಷ್ಠವಾಗಿದೆ. ಆ ಶ್ರುತಿಯಿಂದ ಹನ್ನೆರಡು ಶ್ರುತಿ ಎಂದು ಹೇಳುವ ಶ್ರುತಿಗೆ ಬಾಧವು ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. 'ದ್ವಾದಶಮಾಸಾಃ' ಇತ್ಯಾದಿ ಶ್ರುತಿಯು ಸಮಸಂಖ್ಯಾಕ ದೇವತೆಗಳು ಎಂಬ ಅಭಿಪ್ರಾಯದಲ್ಲಿ ಪ್ರವೃತ್ತವಾಗಿದೆ. ಆದ್ದರಿಂದ ಇಂದ್ರಿಯಾಭಿಮಾನಿದೇವತೆಗಳು ಹನ್ನೆರಡು ಎಂದು ಶ್ರುತಿಯ ಅಭಿಪ್ರಾಯವಿದೆ ಎಂದು ತಿಳಿಯುತ್ತದೆ. ಹಾಗಾಗಿ ಇಂದ್ರಿಯಾಭಿಮಾನಿ ದೇವತೆಗಳು ಏಳು ಎಂದು ಹೇಳಲ್ಪಟ್ಟ ಯುಕ್ತಿಯು ಇಲ್ಲಿಯೂ ಕೂಡ ಸಮಾನವಾಗಿದೆ. ಒಂದೇ ನ್ಯಾಯವನ್ನು ಎರಡೂ ಕಡೆ ಅನುಸರಿಸದಿದ್ದರೆ ಶ್ರುತಿಯು ಉನ್ಮತ್ತವಾಕ್ಯಕ್ಕೆ ಸಮಾನವಾಗಬೇಕಾಗುತ್ತದೆ.

**तत्वप्रकाशिका – अत एव श्रुतिद्वयस्यापि समबलत्वेनान्यतरमात्रबाधायोगात् परस्परविरोधेनाप्रामाण्यान्न श्रुतिसमन्वयेन नारायणस्य जगत्कारणत्वमिति भावः । सिद्धान्तयत्सूत्रमवतार्य व्याचष्टे – अत इति ।।**

ಆದ್ದರಿಂದಲೇ ಎರಡೂ ಶ್ರುತಿಗಳು ಸಮಬಲವಾದ್ದರಿಂದ ಎರಡರಲ್ಲಿ ಒಂದಕ್ಕೆ ಇನ್ನೊಂದರಿಂದ ಬಾಧವನ್ನು ಹೇಳಲು ಸಾಧ್ಯವಿಲ್ಲ. ಪರಸ್ಪರ ವಿರೋಧವೇ ಬರುವುದರಿಂದ ಎರಡೂ ಕೂಡ ಅಪ್ರಮಾಣವಾಗುತ್ತವೆ. ಆದ್ದರಿಂದ ಶ್ರುತಿಸಮನ್ವಯದ ಮೂಲಕ ನಾರಾಯಣನಿಗೆ ಜಗತ್ಕಾರಣತ್ವವು ಸಿದ್ಧವಾಗುವುದಿಲ್ಲ. ಇಷ್ಟು ಅಧಿಕರಣದ ಪೂರ್ವಪಕ್ಷ. ಸಿದ್ಧಾಂತಸ್ಥಾಪಕವಾದ ಸೂತ್ರಕ್ಕೆ 'ಅತಃ' ಎಂದು ಅವತಾರಿಕೆ ನೀಡಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – न प्राणसंख्यानिर्णयाभावेन श्रुतिद्वयस्याप्रामाण्यं कल्प्यम् । द्वादशप्राणा इति निर्णयोपपत्तेः । न च सप्तत्वश्रुतियुक्तिविरोधः । द्वादशप್राणेषु सप्तप्राणानामपि विद्यमानत्वात् । नच विवक्षाविशेषमन्तरेण सप्तोक्तिर्व्यर्थेति**

**वाच्यम् । श्रोत्रचक्षुःस्पर्शनरसनघ्राणमनोबुद्धीनां ज्ञानसाधनेन्द्रियत्वात् तद्विवक्षया सप्तत्वश्रुतेः प्रवृत्तत्वात् ।**

ಇಂದ್ರಿಯಗಳ ಸಂಖ್ಯೆಯನ್ನು ನಿರ್ಣಯ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಎರಡು ಬಗೆಯ ಶ್ರುತಿಗಳಿಗೂ ಅಪ್ರಾಮಾಣ್ಯವನ್ನು ಕಲ್ಪನೆ ಮಾಡಬೇಕು. ಹೀಗೆ ಪೂರ್ವಪಕ್ಷ ಮಾಡಿದ್ದು ತಪ್ಪು. ಇಂದ್ರಿಯಗಳು ಹನ್ನೆರಡು ಎಂದು ನಿರ್ಣಯ ಮಾಡಬಹುದು.

ಏಳೇ ಇಂದ್ರಿಯಗಳೆಂದು ಹೇಳುವ ಶ್ರುತಿ ಹಾಗೂ ಯುಕ್ತಿಗಳ ವಿರೋಧವು ಬರುತ್ತದಲ್ಲವೇ? ಎಂದೂ ಕೂಡ ಪ್ರಶ್ನಿಸಬಾರದು. ಹನ್ನೆರಡು ಇಂದ್ರಿಯಗಳಲ್ಲಿ ಏಳು ಇಂದ್ರಿಯಗಳು ಸೇರಿರುವುದರಿಂದ ದೋಷವಿಲ್ಲ.

ಯಾವುದೇ ವಿಶೇಷ ವಿವಕ್ಷೆ ಇಲ್ಲದೆ ಏಳು ಇಂದ್ರಿಯಗಳೆಂದು ಶ್ರುತಿ ಹೇಳಿದ್ದು ವ್ಯರ್ಥವಲ್ಲವೇ? ಎಂದು ಪ್ರಶ್ನಿಸಬಾರದು. ಕಿವಿ, ಕಣ್ಣು, ಸ್ಪರ್ಶ, ರಸನ, ಘ್ರಾಣ, ಮನಸ್ಸು, ಬುದ್ಧಿ ಈ ಏಳು ಇಂದ್ರಿಯಗಳು ಜ್ಞಾನಕ್ಕೆ ಸಾಧನವಾಗಿವೆ. ಈ ವಿವಕ್ಷೆಯಿಂದಷ್ಟೆ ಶ್ರುತಿಯಲ್ಲಿ ಏಳು ಎಂಬ ವಿಭಾಗವನ್ನು ವಿವಕ್ಷಿಸಲಾಗಿದೆ.

**तत्वप्रकाशिका – सप्तानां श्रुत्युक्तानां ज्ञानेन्द्रियत्वं कुतः ? इति चेन्न । तद्वाक्यशेषे सप्तानां ज्ञानार्थत्वेन विशेषितत्वादिति भावः । गुहा हृदयमाशयः स्थानं यस्या बुद्धेस्तदर्थं ये प्रतिशरीरं सप्त सप्त प्राणा निहितास्ते यत्र चरन्तीत्यर्थः ।**

ಶ್ರುತಿಯಲ್ಲಿ ಹೇಳಲ್ಪಟ್ಟ ಏಳಕ್ಕೆ ಜ್ಞಾನೇಂದ್ರಿಯತ್ವವು ಯಾವ ಪ್ರಮಾಣದಿಂದ ಸಿದ್ಧವಾಗುತ್ತದೆ ಎಂದು ಪ್ರಶ್ನಿಸಬಾರದು. ಅದೇ ವಾಕ್ಯಶೇಷದಲ್ಲಿ ಏಳು ಇಂದ್ರಿಯಗಳು ಜ್ಞಾನಕ್ಕೋಸ್ಕರ ಎಂದು ವಿಶೇಷಣವನ್ನು ನೀಡಲಾಗಿದೆ.

ಗುಹಾ = ಹೃದಯವು, ಆಶಯಃ = ಸ್ಥಾನವು ಯಾವ ಬುದ್ಧಿಗೆ ಆಗಿದೆಯೋ ಅದೇ ಬುದ್ಧಿ ಎನಿಸುತ್ತದೆ. ಅದಕ್ಕೋಸ್ಕರ ಎಲ್ಲಾ ಶರೀರದಲ್ಲಿಯೂ ಏಳು ಏಳು ಇಂದ್ರಿಯಗಳು ಇಡಲ್ಪಟ್ಟಿವೆ ಎಂಬುದು 'ಗುಹಾಶಯಾಂ' ಇತ್ಯಾದಿ ಶ್ರುತಿಯ ಅಭಿಪ್ರಾಯ.

**तत्वप्रकाशिका – विशेषणबलेन तेषां ज्ञानार्थत्वमस्तु तथापि ते तावन्त एव किं न स्युरित्यत आह – सप्तेति ।। चशब्दात् सङ्गृहीतमिति शेषः । एतच्छ्रुतावेवं सावकाशायामितरापि श्रुतिरत्रोदाहर्तव्या ।।**

ವಿಶೇಷಣದ ಬಲದಿಂದ ಇಂದ್ರಿಯಗಳು ಜ್ಞಾನಕ್ಕೆ ಸಾಧನವಾಗಿವೆ ಎಂಬುದು ತಿಳಿಯಲಿ ಆದರೂ ಕೂಡ ಇಂದ್ರಿಯಗಳು ಕೇವಲ ಏಳು ಮಾತ್ರ ಎಂದೇಕೆ ನಿರ್ಣಯ ಮಾಡಬಾರದು? ಎಂಬ ಪ್ರಶ್ನೆಗೆ 'ಸಪ್ತ' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ. ಚ ಶಬ್ದದಿಂದ ಸಂಗೃಹೀತಂ ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಹೀಗೆ ಸಪ್ತತ್ವಶ್ರುತಿಯು ಸಾವಕಾಶವಾದ್ದರಿಂದ ದ್ವಾದಶತ್ವಶ್ರುತಿಯನ್ನೇ ಹನ್ನೆರಡು ಇಂದ್ರಿಯಗಳು ಎಂಬ ವಿಷಯದಲ್ಲಿ ಆಧಾರವನ್ನಾಗಿ

ತಿಳಿಯಬೇಕು. ಅಂದರೆ 'ದ್ವಾದಶಾ ವಾ ಏತೇ ಪ್ರಾಣಾಃ' ಎಂಬ ಶ್ರುತಿಯನ್ನು ಇಲ್ಲಿ ಉದಾಹರಿಸಬೇಕು.

ವಿವರಣೆ - ಸೂತ್ರದಲ್ಲಿ ಸಪ್ತತ್ವ ಶ್ರುತಿಗೆ ಸಾವಕಾಶತ್ವವನ್ನಷ್ಟೇ ಹೇಳಲಾಗಿದೆ. ಪ್ರತಿಜ್ಞೆ ಮಾಡಲ್ಪಟ್ಟ ಇಂದ್ರಿಯಗಳ ದ್ವಾದಶತ್ವ ವಿಷಯದಲ್ಲಿ ಪ್ರಮಾಣವನ್ನು ಹೇಳಿರುವುದಿಲ್ಲ. ಆದ್ದರಿಂದ ಇಂದ್ರಿಯಗಳು ಹನ್ನೆರಡು ಎಂದು ಹೇಗೆ ನಿರ್ಣಯಿಸುವುದು? ಎಂಬ ಪ್ರಶ್ನೆಯು ಬಂದರೆ ಸೂತ್ರದಲ್ಲಿರುವ ಚ ಶಬ್ದದಿಂದ ಇದನ್ನೂ ಕೂಡ ಹೇಳಲಾಗಿದೆ ಎಂಬ ಅಭಿಪ್ರಾಯದಿಂದ 'ಸಪ್ತ ಪ್ರಾಣಾಸ್ತ್ವವಗತೇಃ' ಇತ್ಯಾದಿ ಭಾಷ್ಯವಚನವು ಹೊರಟಿದೆ. ಇದನ್ನು ಟೀಕೆಯಲ್ಲಿ 'ವಿಶೇಷಣಬಲೇನ' ಎಂಬ ವಾಕ್ಯದಿಂದ ಪ್ರತಿಪಾದನೆ ಮಾಡಿದ್ದಾರೆ.

'ಸಪ್ತ ಪ್ರಾಣಾಃ' ಎಂಬ ಶ್ರುತಿಯು ಯುಕ್ತಿಯಿಂದ ಕೂಡಿದೆ. ಇದರ ವಿರೋಧ ಇರುವುದರಿಂದ 'ದ್ವಾದಶಾ ವಾ ಏತೇ' ಎಂಬ ಶ್ರುತಿಯು ಅಪ್ರಮಾಣವಾಗಿದೆ. ಹೀಗೆ ಹೇಳಿದಾಗ ಕೇವಲ ಸ್ಮೃತಿಯಿಂದ ಹನ್ನೆರಡು ಇಂದ್ರಿಯಗಳೆಂದು ನಿರ್ಣಯಿಸುವುದು ಹೇಗೆ ಸಾಧ್ಯ ? ಈ ಪ್ರಶ್ನೆಗೆ 'ಏತಚ್ಛ್ರುತೌ' ಎಂಬ ವಾಕ್ಯದಿಂದ ಉತ್ತರವನ್ನು ನೀಡುತ್ತಿದ್ದಾರೆ.

'ಸಪ್ತ ಪ್ರಾಣಾಃ' ಎಂಬ ಶ್ರುತಿಯೇ ಈ ಸ್ಮೃತಿಯ ವಾಕ್ಯದಿಂದ ಸಾವಕಾಶವೆಂದು ತಿಳಿಯುತ್ತಿದೆ. ಆದ್ದರಿಂದ 'ದ್ವಾದಶಾ ವಾ ಏತೇ ಪ್ರಾಣಾಃ' ಎಂಬ ಶ್ರುತಿಗೆ ಸಾವಕಾಶವಾದ 'ಸಪ್ತಪ್ರಾಣ' ಎಂಬ ಶ್ರುತಿಯಿಂದ ವಿರೋಧವನ್ನು ಹೇಳಲು ಸಾಧ್ಯವೇ ಇಲ್ಲ. ಆದ್ದರಿಂದ 'ದ್ವಾದಶಾವಾ ಏತೇ' ಎಂಬ ಶ್ರುತಿವಾಕ್ಯವು ಪ್ರಬಲ ಪ್ರಮಾಣವಾಗಿದೆ.

## ಬ್ರಹ್ಮಸೂತ್ರ

**सूत्रम् – हस्तादयस्तु स्थितेऽतो नैवम् ।।**

ಕ್ರಿಯೆಗಾಗಿ ಕೈ, ಕಾಲು ಮೊದಲಾದ ಐದು ಕರ್ಮೇಂದ್ರಿಯಗಳು ಇರುತ್ತವೆ. ಕ್ರಿಯೆಗಳಿಗಾಗಿ ಇಂದ್ರಿಯಗಳನ್ನು ಹೇಳಿರುವುದರಿಂದ ಜ್ಞಾನೇಂದ್ರಿಯಗಳ ಜೊತೆಯಲ್ಲಿ ಇವುಗಳನ್ನು ಸೇರಿಸಿಲ್ಲ.

## ಸೂತ್ರದೀಪಿಕಾ

**सूत्रदीपिका —** तुशब्दो वैलक्षण्यद्योतकः । यतो **हस्तादयस्तु** हस्तादीन्द्रियाणि तु। **स्थिते** स्थितं कर्म । तादर्थ्ये सप्तमी । कर्मार्थानि । **अतः** अस्माद्वैलक्षण्यात्तानि। एवं ज्ञानेन्द्रियसहभावेन **न** पठितानि। अतस्तेषां सप्तता सिद्धैवेत्यर्थः ।।२।।

'ತು' ಶಬ್ದವು ವೈಲಕ್ಷಣ್ಯಕ್ಕೆ ದ್ಯೋತಕವಾಗಿದೆ. ಯಾವ ಕಾರಣದಿಂದ, ಹಸ್ತಾದಯಃ = ಹಸ್ತ, ವಾಕ್, ಪಾದ, ಪಾಯು, ಉಪಸ್ಥಾ ಈ ಐದು ಇಂದ್ರಿಯಗಳು, ಸ್ಥಿತೇ = ಕರ್ಮಕ್ಕೋಸ್ಕರ ಇರುತ್ತವೆ. ಅತಃ = ಹೀಗೆ ವೈಲಕ್ಷಣ್ಯವಿರುವುದರಿಂದಲೇ, ಏವಂ = ಜ್ಞಾನೇಂದ್ರಿಯಗಳೊಂದಿಗೆ, ನ = ಪಠಿತವಾಗಿಲ್ಲ. ಆದ್ದರಿಂದ ಈ ಐದನ್ನು ಬಿಟ್ಟು, ಉಳಿದ ಏಳು ಇಂದ್ರಿಯಗಳನ್ನು ತಿಳಿಯಬೇಕು.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ಸಪ್ತಗತ್ಯಧಿಕರಣವು ಮುಗಿಯಿತು.

## ಬ್ರಹ್ಮಸೂತ್ರಭಾಷ್ಯ

**भाष्यम् –**

**'सप्त प्राणास्त्ववगतेः पञ्च प्राणाश्च कर्मणः ।**
**एवं प्राणद्वादशकं शरीरे नित्यसंस्थितम् ।।'**

**इति भविष्यत्पर्ववचनं चशब्दात् ।।२।।**

ಅನುವಾದ - ಜ್ಞಾನಕ್ಕೆ ಸಾಧನವಾದ ಇಂದ್ರಿಯಗಳು ಏಳು. ಕರ್ಮಕ್ಕೆ ಸಾಧನವಾದ ಇಂದ್ರಿಯಗಳು ಐದು. ಹೀಗೆ ಇಂದ್ರಿಯಗಳು ಒಟ್ಟು ಹನ್ನೆರಡು. ಈ ಭವಿಷ್ಯತ್ ಪರ್ವದ ಮಾತನ್ನು ಚ ಶಬ್ದವು ಸೂಚನೆ ಮಾಡುತ್ತಿದೆ.

ಪ್ರತಿಪದಾರ್ಥ :- ಅವಗತೇಃ = ಜ್ಞಾನಕ್ಕಾಗಿ, ಸಪ್ತಪ್ರಾಣಾಃ = ಏಳು ಇಂದ್ರಿಯಗಳಿವೆ. ಕರ್ಮಣಃ = ಕರ್ಮಕ್ಕಾಗಿ, ಪಂಚಪ್ರಾಣಾಃ = ಐದು ಇಂದ್ರಿಯಗಳಿವೆ, ಏವಂ = ಹೀಗೆ, ಶರೀರೇ = ಶರೀರದಲ್ಲಿ, ಪ್ರಾಣದ್ವಾದಶಕಂ = ಹನ್ನೆರಡು ಇಂದ್ರಿಯಗಳು, ನಿತ್ಯಸಂಸ್ಥಿತಮ್ = ಯಾವಾಗಲೂ ಇರುತ್ತದೆ. ಇತಿ = ಹೀಗೆ, ಭವಿಷ್ಯತ್ ಪರ್ವವಚನಂ = ಭವಿಷ್ಯತ್ ಪರ್ವದ ಮಾತನ್ನು, ಚ ಶಬ್ದಾತ್ = ಸೂತ್ರದಲ್ಲಿರುವ ಚ ಶಬ್ದದಿಂದ ತಿಳಿಯಬೇಕು.

## ಬ್ರಹ್ಮಸೂತ್ರಭಾಷ್ಯ

**भाष्यम् – ।। हस्तादयस्तु स्थितेऽतो नैवम् ।।३।।**

**हस्तादीनां कर्मविषयत्वान्न सहपाठः ।।**

**'संसारस्थितिहेतुत्वात् स्थितं कर्म विदो विदुः ।**
**तस्मादुद्गतिहेतुत्वाद् ज्ञानं गतिरिहोच्यते ।।'**

**इति वायुप्रोक्ते ।।३।।**

**।। इति श्रीमदानन्दतीर्थभगवत्पादाचार्यविरचिते**
**ब्रह्मसूत्रभाष्ये समगत्यधिकरणम् ।। ४ ।।**

ಅನುವಾದ - ಹಸ್ತಾದಿಗಳು ಕರ್ಮೇಂದ್ರಿಯಗಳಾದ್ದರಿಂದ ಜ್ಞಾನೇಂದ್ರಿಯದ ಜೊತೆ ಇವುಗಳನ್ನು ಸೇರಿಸಿರುವುದಿಲ್ಲ.

ಸ್ಥಿತಿಶಬ್ದಕ್ಕೆ ಕರ್ಮ ಎಂದರ್ಥ. ಸಂಸಾರದಲ್ಲಿ ಉಳಿಯಲು ಕಾರಣವಾದದ್ದು ಕರ್ಮವಾದ್ದರಿಂದ ಸ್ಥಿತಿಶಬ್ದದಿಂದ ಕರೆಯಲಾಗಿದೆ. ಆದ್ದರಿಂದ ಮೇಲೆ ಹೋಗಲು ಸಾಧನವಾದದ್ದು ಜ್ಞಾನ ಮಾತ್ರ. ಹೀಗೆ ವಾಯುಪ್ರೋಕ್ತದಲ್ಲಿ ಹೇಳಲಾಗಿದೆ.

ಪ್ರತಿಪದಾರ್ಥ :- ಹಸ್ತಾದೀನಾಂ = ಕೈ ಮೊದಲಾದವುಗಳು, ಕರ್ಮವಿಷಯತ್ವಾತ್ = ಕರ್ಮಕ್ಕಾಗಿ ಇರುವುದರಿಂದ, ನ ಸಹಪಾಠಃ = ಜ್ಞಾನೇಂದ್ರಿಯದ ಜೊತೆ ಹೇಳಿರುವುದಿಲ್ಲ.

ಸಪ್ತಗತ್ಯಧಿಕರಣ (೨-೪-೪)

ಸಂಸಾರಸ್ಥಿತಿಹೇತುತ್ವಾತ್ = ಸಂಸಾರದ ಸ್ಥಿತಿಗೆ ಕಾರಣವಾದ್ದರಿಂದ, ಕರ್ಮ = ಕರ್ಮವನ್ನು, ಸ್ಥಿತಂ = ಸ್ಥಿತಿ ಎಂಬುದಾಗಿ, ವಿದಃ = ಜ್ಞಾನಿಗಳು, ವಿದುಃ = ತಿಳಿಯುತ್ತಾರೆ. ಉದ್ಗತಿಹೇತುತ್ವಾತ್ = ಮೋಕ್ಷಕ್ಕೆ ಕಾರಣವಾದ್ದರಿಂದ, ಜ್ಞಾನಂ = ಜ್ಞಾನವನ್ನು, ಗತಿಃ = ಗತಿ ಎಂಬುದಾಗಿ, ಇಹ = ಇಲ್ಲಿ, ಉಚ್ಯತೇ = ಹೇಳಲಾಗಿದೆ. ಇತಿ = ಹೀಗೆ, ವಾಯುಪ್ರೋಕ್ತೇ = ವಾಯುಪ್ರೋಕ್ತದಲ್ಲಿ ತಿಳಿಸಿದ್ದಾರೆ.

ಇಲ್ಲಿಗೆ ಸಪ್ತಗತ್ಯಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

## ತತ್ವಪ್ರಕಾಶಿಕಾ

**तत्वप्रकाशिका – न सप्तप्राणेभ्योऽन्ये प्राणाः सन्ति । सद्भावेऽत्र सहपाठप्रसङ्गात् । अत्र च सहपाठाभावोऽनादित्वेन वा भवेत् परमात्मनो वा तदकारणत्वेन । तदुभयं चोक्तविरुद्धम् । नच कारणांन्तरं पश्यामः । अतः प्राणान्तराणामेभिः परमात्मनः सकाशादुत्पन्नत्वेनोच्यमानैः सहपाठाभावादभाव इत्याशङ्कां परिहरत्सूत्रं पठित्वा व्याचष्टे – हस्तादय इति ।।**

ಏಳು ಇಂದ್ರಿಯಗಳಿಗಿಂತ ಹೆಚ್ಚಿನ ಇಂದ್ರಿಯಗಳು ಇರುವುದಿಲ್ಲ. ಹಾಗೇನಾದರೂ ಇದ್ದಿದ್ದರೆ ಅವುಗಳನ್ನು ಇಲ್ಲಿ ಜೊತೆಗೆ ಹೇಳಬೇಕಿತ್ತು. ಇಲ್ಲಿ ಒಟ್ಟಿಗೆ ಹೇಳದಿರುವಿಕೆಯು ಅನಾದಿಯಾದ್ದರಿಂದ ಕೂಡಬೇಕು. ಅಥವಾ ಪರಮಾತ್ಮನು ಅವುಗಳಿಗೆ ಕಾರಣನಲ್ಲ ಎಂಬುದರಿಂದಲೂ ಯುಕ್ತವಾಗಬೇಕು. ಆದರೆ ಇವೆರಡೂ ಕೂಡ ಹಿಂದೆ ಹೇಳಿದ್ದಕ್ಕೆ ವಿರುದ್ಧವಾಗಿದೆ.

ಬೇರೆ ಕಾರಣ ಯಾವುದೂ ಇರುವುದಿಲ್ಲ. ಆದ್ದರಿಂದ ಪರಮಾತ್ಮನಿಂದ ಹುಟ್ಟಲ್ಪಟ್ಟ ಶ್ರೋತ್ರ ಚಕ್ಷುಸ್ಸು ಮೊದಲಾದವುಗಳ ಜೊತೆ ಬೇರೆ ಇಂದ್ರಿಯಗಳು ಸಹಪಠಿತವಲ್ಲದ್ದರಿಂದ ಅವುಗಳನ್ನು ಇಲ್ಲವೆಂದೇ ಹೇಳಬೇಕು. ಈ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು 'ಹಸ್ತಾದಯಃ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ – ಏಳು ಇಂದ್ರಿಯಗಳಿಗಿಂತ ಹೆಚ್ಚಿನ ಇಂದ್ರಿಯಗಳು ಇವೆ ಎಂದಾಗಿದ್ದರೆ ಆಗ ಏಳು ಇಂದ್ರಿಯಗಳ ಜೊತೆ ಅವುಗಳನ್ನೂ ಕೂಡ ಪಠಿಸಬೇಕಿತ್ತು. ಆದರೆ ಸಹಪಾಠವು ಕಾಣಸುತ್ತಿಲ್ಲ. ಸಹಪಾಠದ ಅನ್ಯಥಾನುಪತ್ತಿಯಿಂದ ಏಳು ಇಂದ್ರಿಯಗಳಿಗಿಂತ ಹೆಚ್ಚು ಇಂದ್ರಿಯಗಳಿಲ್ಲವೆಂದು ಆಕ್ಷೇಪ ಮಾಡಲಾಗಿದೆ. ಈ ಅನ್ಯಥಾನುಪಪತ್ತಿಯನ್ನು ಎರಡು ರೀತಿಯಲ್ಲಿ ಅನ್ಯಥಾ ಉಪಪನ್ನವಾಗಿ ಹೇಳಬಹುದಿತ್ತು. ಅನಾದಿಯಾಗಿದ್ದರೆ ಅಥವಾ ಪರಮಾತ್ಮನು ಅದಕ್ಕೆ ಕಾರಣನಲ್ಲವೆಂದಾಗಿದ್ದರೆ ಈ ಎರಡೂ ಕೂಡ ಯುಕ್ತವಾಗುವುದಿಲ್ಲ. ಏಕೆಂದರೆ 'ತಥಾ ಪ್ರಾಣಾಃ' ಎಂಬ ಸೂತ್ರದಲ್ಲಿ ಹಾಗೂ 'ಪ್ರತಿಜ್ಞಾಹಾನಿರವ್ಯತಿರೇಕಾತ್' ಎಂಬ ಸೂತ್ರದಲ್ಲಿ ಸಕಲವೂ ಕೂಡ ಪರಮಾತ್ಮನಿಂದಲೇ ಉತ್ಪನ್ನವಾಗಿವೆ ಎಂದು ಹೇಳಲಾಗಿದೆ. ಇನ್ನು ಸಾದಿತ್ವವನ್ನು ಅಂಗೀಕಾರ ಮಾಡಿ ಪರಮಾತ್ಮನಿಂದ ಹುಟ್ಟಲ್ಲವೆಂದು ಶಂಕಿಸಿದರೆ 'ನಚ ಕಾರಣಾಂತರಮ್' ಎಂಬ ವಾಕ್ಯದಿಂದ ಉತ್ತರಿಸುತ್ತಾರೆ.

ಪರಿಪೂರ್ಣಚಂದ್ರಿಕಾ

**तत्वप्रकाशिका – न सहापाठाभावेन प्राणान्तराभावः । अनादित्वाद्यभावेऽपि पाणिपादपायुगुह्यवाचः कर्मार्थानीन्द्रियाणि । अत एतावतैव वैलक्षण्येनासहपाठोपपत्तेरिति भावः ।**

ಸಹಪಾಠವು ಇಲ್ಲವೆಂಬ ಕಾರಣದಿಂದ ಏಳಕ್ಕಿಂತ ಹೆಚ್ಚಿನ ಇಂದ್ರಿಯಗಳೇ ಇಲ್ಲವೆಂದು ಹೇಳುವುದು ಯುಕ್ತವಲ್ಲ. ಆ ಹೆಚ್ಚಿನ ಇಂದ್ರಿಯಗಳಲ್ಲಿ ಅನಾದಿಯಾಗದಿದ್ದರೂ ಪಾಣಿ, ಪಾದ, ಪಾಯು, ಗುಹ್ಯ ಹಾಗೂ ವಾಕ್ ಎಂಬ ಇಂದ್ರಿಯಗಳು ಕರ್ಮಕ್ಕೋಸ್ಕರ ಇರುತ್ತವೆ. ಹೀಗೆ ಜ್ಞಾನೇಂದ್ರಿಯಗಳಿಗಿಂತ ವೈಲಕ್ಷಣ್ಯವಿರುವ ಕಾರಣ ಜ್ಞಾನೇಂದ್ರಿಯಗಳ ಜೊತೆ ಕರ್ಮೇಂದ್ರಿಯಗಳು ಸಹಪಠಿತವಾಗಿರುವುದಿಲ್ಲವೆಂದು ತಿಳಿಯಬೇಕು.

ವಿವರಣೆ - ಸೂತ್ರದಲ್ಲಿರುವ ತು ಶಬ್ದವು ವೈಲಕ್ಷಣ್ಯವನ್ನು ಹಾಗೂ ಅವಧಾರಣವನ್ನು ಹೇಳುತ್ತಿದೆ. 'ಅತಃ' ಎಂಬ ಶಬ್ದವು ಹೇತ್ವರ್ಥದಲ್ಲಿದೆ. ಮತ್ತು ವೈಲಕ್ಷಣ್ಯಪ್ರಕಾರವನ್ನು ಪರಾಮರ್ಶೆ ಮಾಡುತ್ತಿದೆ. ಆದ್ದರಿಂದ ಕರ್ಮಕ್ಕೋಸ್ಕರ ಇರುವ ಇಂದ್ರಿಯಗಳಾದ್ದರಿಂದ ಇದನ್ನು ಜ್ಞಾನೇಂದ್ರಿಯಗಳ ಜೊತೆ ಸೇರಿಸಿಲ್ಲ. ಈ ವೈಲಕ್ಷಣ್ಯವನ್ನೂ ಕೂಡ ಸೂತ್ರಾರೂಢ ಮಾಡಿರುತ್ತಾರೆ.

**तत्वप्रकाशिका – ननु गतिस्थितशब्दौ कुतो ज्ञानकर्मार्थावित्यत आह – संसारेति ।। सजातीयत्वेनान्यपि शब्दः प्रपदशब्दवदिति ज्ञातव्यम् । अतः श्रुत्यविधेन प्राणानां द्वादशत्वसिद्धेर्युक्तं श्रुतिसमन्वयेनेश्वरस्य जगत्कारणत्वमिति सिद्धम् ।।**

ಗತಿ ಶಬ್ದ ಸ್ಥಿತ ಶಬ್ದಗಳು ಜ್ಞಾನ ಮತ್ತು ಕರ್ಮ ಎಂಬರ್ಥಗಳಲ್ಲಿ ಪ್ರಯೋಗಿಸಲು ಏನು ಆಧಾರ ? ಎಂಬ ಪ್ರಶ್ನೆಗೆ ಸಂಸಾರ ಇತ್ಯಾದಿ ವಾಕ್ಯಗಳನ್ನು ಭಾಷ್ಯದಲ್ಲಿ ಉದಾಹರಿಸಿದ್ದಾರೆ.

ಸಜಾತೀಯವಾದ್ದರಿಂದ ಬೇರೆ ಕಡೆಯಲ್ಲಿಯೂ ಕೂಡ ಈ ಶಬ್ದವನ್ನು ಪ್ರಯೋಗಿಸಬಹುದು. ಪ್ರಪದ ಶಬ್ದದಂತೆ ತಿಳಿದುಕೊಳ್ಳಬೇಕು.

ಆದ್ದರಿಂದ ಶ್ರುತಿಯ ವಿರೋಧವಿಲ್ಲದ ಕಾರಣ ಇಂದ್ರಿಯಗಳು ಹನ್ನೆರಡು ಎಂದು ಸಿದ್ಧವಾಯಿತು. ಹಾಗಾಗಿ ಶ್ರುತಿಸಮನ್ವಯದ ಮೂಲಕ ಈಶ್ವರನಿಗೆ ಜಗತ್ಕಾರಣತ್ವವು ಯುಕ್ತವೆಂದು ಸಾಧಿತವಾಯಿತು.

ವಿವರಣೆ - ಗತಿ ಶಬ್ದವನ್ನು ಬ್ರಹ್ಮಜ್ಞಾನವೆಂಬರ್ಥದಲ್ಲಿ ಪ್ರಯೋಗಿಸಲಾಗಿದೆ. ಸ್ಥಿತ ಶಬ್ದವು ಸಕಾಮ ಕರ್ಮ ಎಂಬರ್ಥದಲ್ಲಿ ಪ್ರಯೋಗಿಸಲಾಗಿದೆ. ಆದರೆ ಪ್ರಥಮ ಸೂತ್ರದಲ್ಲಿರುವ ಗತಿ ಶಬ್ದಕ್ಕೆ ಬ್ರಹ್ಮಜ್ಞಾನವೆಂಬರ್ಥವನ್ನು ಸ್ವೀಕರಿಸಿ, ಎರಡನೇ ಸೂತ್ರದಲ್ಲಿರುವ ಸ್ಥಿತ ಶಬ್ದಕ್ಕೆ ನಿವೃತ್ತಕರ್ಮ ಎಂಬರ್ಥವನ್ನು ಸ್ವೀಕರಿಸಲಾಗಿದೆ. ನಿವೃತ್ತಕರ್ಮವು ಸಂಸಾರ ಸ್ಥಿತಿಗೆ ಕಾರಣವೇ ಅಲ್ಲ. ಲೌಕಿಕ ಜ್ಞಾನವು ಮೋಕ್ಷಕ್ಕೆ ಹೇತುವೇ ಅಲ್ಲ. ಆದ್ದರಿಂದ ನಿವೃತ್ತ ಕರ್ಮ ಎಂಬರ್ಥದಲ್ಲಿ ಸ್ಥಿತ ಶಬ್ದವನ್ನು, ಲೌಕಿಕ ಜ್ಞಾನ ಎಂಬರ್ಥದಲ್ಲಿ ಗತಿ ಶಬ್ದವನ್ನು ಹೇಗೆ ಪ್ರಯೋಗಿಸಿದರು ? ಎಂಬ ಪ್ರಶ್ನೆಗೆ 'ಸಜಾತೀಯತ್ವೇನ' ಇತ್ಯಾದಿ ಟೀಕೆಯಿಂದ ಉತ್ತರ ನೀಡುತ್ತಿದ್ದಾರೆ.

ಸಪ್ತಗತ್ಯಧಿಕರಣ (೨-೪-೪)

ಬ್ರಹ್ಮನು ತನ್ನ ಪಾದಾಗ್ರದಿಂದ ಪರಮಾತ್ಮನ ಕಡೆ ಹೋಗುತ್ತಾನೆ. ಆದ್ದರಿಂದ ಅವನ ಕಾಲಿನ ಅಗ್ರಭಾಗಕ್ಕೆ ಪ್ರಪದ ಎಂದು ಹೆಸರು. ಆದರೂ ಕೂಡ ಇತರರ ಪಾದಾಗ್ರಕ್ಕೂ ಪ್ರಪದ ಎಂದು ಕರೆಯುವ ಬಳಕೆ ಇದೆ. ಅದರಂತೆ ಪ್ರಕೃತ ಪ್ರವೃತ್ತಕರ್ಮವು ಸಂಸಾರ ಸ್ಥಿತಿಗೆ ಕಾರಣವಾದ್ದರಿಂದ ಬ್ರಹ್ಮಜ್ಞಾನವು ಮೋಕ್ಷಕ್ಕೆ ಕಾರಣವಾದ್ದರಿಂದ ಸಜಾತೀಯವಾದ ನಿವೃತ್ತಿಕರ್ಮ ಹಾಗೂ ಲೌಕಿಕಜ್ಞಾನಗಳಲ್ಲಿಯೂ ಕೂಡ ಸ್ಥಿತ ಶಬ್ದ, ಗತಿ ಶಬ್ದಗಳನ್ನು ಪ್ರಯೋಗಿಸಲಾಗಿದೆ. 'ಕ್ರಿಯತೇ ಅಸ್ಮಾತ್ ಸಂಸಾರೇ' ಎಂಬ ವ್ಯುತ್ಪತ್ತಿಯಿಂದ ಸ್ಥಿತ ಶಬ್ದವು ಸಂಸಾರದಲ್ಲಿ ಶ್ರುತಿಗೆ ಕಾರಣವಾದ ಸಕಾಮಕರ್ಮವನ್ನು ಹೇಳುತ್ತದೆ. 'ಉದ್ಗಚ್ಛತಿ ಸಂಸಾರಾತ್ ಅನೇನ' ಎಂಬ ವ್ಯುತ್ಪತ್ತಿಯಿಂದ ಗತಿ ಶಬ್ದವು ಸಂಸಾರದ ಬಿಡುಗಡೆಗೆ ಕಾರಣವಾದ ಬ್ರಹ್ಮಜ್ಞಾನವನ್ನು ಹೇಳುತ್ತದೆ.

ಇಲ್ಲಿಗೆ ತತ್ತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಸಪ್ತಗತ್ಯಧಿಕರಣ ಮುಗಿಯಿತು

ಸಪ್ತಗತ್ಯಧಿಕರಣ
(೨-೪-೪)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## सप्तगत्यधिकरणम्

### ಜ್ಞಾನೇಂದ್ರಿಯಗಳು ಏಳು, ಕರ್ಮೇಂದ್ರಿಗಳು ಐದು

**।। सप्तगतेर्विशेषितत्वाच ।। प्राणानां धर्मितामाश्रित्योत्पत्तिश्चिन्तिता । अथ सङ्ख्यारूपधर्माश्रयस्तद्विशेषश्चिन्त्यत इति सङ्गतिः ।**

ಇಂದ್ರಿಯಗಳನ್ನು ಧರ್ಮಿಯನ್ನಾಗಿ ವಿವಕ್ಷಿಸಿ ಅವುಗಳ ಉತ್ಪತ್ತಿಯ ವಿಚಾರವನ್ನು ಮಾಡಿದ್ದಾಯಿತು. ಈಗ 'ಸಂಖ್ಯಾ' ಎಂಬ ಧರ್ಮದ ವಿಷಯದಲ್ಲಿ ವಿಚಾರವನ್ನು ಮಾಡಲಾಗುತ್ತಿದೆ. ಇಂದ್ರಿಯಗಳ ಸಂಖ್ಯೆ ಎಷ್ಟು? ಎಂಬುದು ಈ ಅಧಿಕರಣದಲ್ಲಿ ಮಾದುತ್ತಿರುವ ವಿಚಾರ. ಆದ್ದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಸಂಗತಿ ಇರುತ್ತದೆ.

**अत्र ब्रह्मणः श्रुतिसमन्वयेनोक्तं गुणपूर्त्यादिकमयुक्तं न वेति चिन्ता । तदर्थं श्रुतिरप्रमाणमुत प्रमाणमिति । तदर्थं प्राणेषु सप्तत्वद्वादशत्वश्रुती परस्परविरुद्धे उत नेति । तदर्थं प्राणानां द्वादशत्वेऽपि सप्तत्वश्रुतिर्न घटत उत घटत इति । तदर्थं द्वादशत्वसप्तत्वसङ्ख्यावच्छेदकं नास्त्युतास्तीति ।**

ಬ್ರಹ್ಮನಿಗೆ ಶ್ರುತಿಸಮನ್ವಯದ ಮೂಲಕ ಗುಣಪೂರ್ಣತ್ವಾದಿಗಳನ್ನು ಸಮರ್ಥನೆ ಮಾಡಲಾಯಿತು. ಇದು ಅಯುಕ್ತವೋ, ಯುಕ್ತವೋ? ಎಂಬುದು ಪ್ರಧಾನ ವಿಚಾರ. ಅದಕ್ಕಾಗಿ ಶ್ರುತಿಯು ಅಪ್ರಮಾಣವೋ ಅಥವಾ ಪ್ರಮಾಣವೋ? ಎಂಬ ವಿಚಾರವನ್ನು ಮಾಡಬೇಕು. ಅದಕ್ಕಾಗಿ ಇಂದ್ರಿಯಗಳಲ್ಲಿ ಏಳು ಎಂಬ ಸಂಖ್ಯೆ ಹಾಗೂ ಹನ್ನೆರಡು ಎಂಬ ಸಂಖ್ಯೆ ಪರಸ್ಪರ ವಿರುದ್ಧವಾಗುತ್ತವೋ ಇಲ್ಲವೋ? ಎಂಬ ವಿಚಾರವನ್ನು ಮಾಡಬೇಕು. ಅದಕ್ಕಾಗಿ ಇಂದ್ರಿಯಗಳು ಹನ್ನೆರಡು ಸಂಖ್ಯೆಯಲ್ಲಿದ್ದರೂ ಏಳು ಎಂಬ ಸಂಖ್ಯೆಯನ್ನು ಹೇಳುವ ಸಪ್ತತ್ವ ಶ್ರುತಿಯು ಅಯುಕ್ತವಾಗುತ್ತದೋ ಅಥವಾ ಯುಕ್ತವಾಗುತ್ತದೋ? ಎಂಬ ವಿಚಾರವನ್ನು ಮಾಡಬೇಕು. ಅದಕ್ಕಾಗಿ ಸಪ್ತತ್ವ ಸಂಖ್ಯೆಗೆ ಅವಚ್ಛೇದಕವಾದ ಧರ್ಮವು ಮತ್ತು ದ್ವಾದಶತ್ವ ಸಂಖ್ಯೆಗೆ ಅವಚ್ಛೇದಕವಾದ ಧರ್ಮವು ಇಲ್ಲವೋ ಅಥವಾ ಇದೆಯೋ? ಎಂಬ ವಿಚಾರವನ್ನು ಮಾಡಬೇಕು.

**सोमस्य ग्रहाः सोमरसग्रहणार्थाः पात्रविशेषाः । ज्योतिष्टोमे हि उपांश्वन्तर्यामैन्द्रवायवमैत्रावरुणाश्विनाः पञ्च, शुक्रामन्थिनौ द्वौ ऋतुपात्रे द्वे अतिग्राह्यास्त्रय इति सोमग्रहा द्वादश । यद्यप्यंश्वदाभ्यावपि ग्रहौ तत्र स्तः । तथापि तयोरनित्यत्वात्सादनोपस्थापनाद्यभावाच्च नित्यसादनादियुक्तग्रहविवक्षया द्वादशत्वमिति द्रष्टव्यम् ।**

ಭಾಷ್ಯದಲ್ಲಿ 'ದ್ವಾದಶ ವಾ ಏತೇ ಪ್ರಾಣಾಃ ದ್ವಾದಶಮಾಸಾಃ ದ್ವಾದಶಾದಿತ್ಯಾಃ ದ್ವಾದಶರಾಶಯೋ ದ್ವಾದಶಗ್ರಹಾಃ' 'ಹನ್ನೆರಡು ಇಂದ್ರಿಯಗಳು, ಹನ್ನೆರಡು ಮಾಸಗಳು, ಹನ್ನೆರಡು ಆದಿತ್ಯರು, ಹನ್ನೆರಡು ರಾಶಿಗಳು, ಹನ್ನೆರಡು ಗ್ರಹಗಳು' ಎಂದು ಹೇಳಿದ್ದಾರೆ. ಗ್ರಹಗಳು ಒಂಭತ್ತು ಇರುವಾಗ ಹನ್ನೆರಡು ಎಂದು ಹೇಗೆ ಹೇಳಿದರು? ಎಂಬ ಪ್ರಶ್ನೆಗೆ ಗ್ರಂಥಕಾರರು ಇಲ್ಲಿ ಉತ್ತರಿಸುತ್ತಿದ್ದಾರೆ. ಜ್ಯೋತಿಷ್ಟೋಮ ಯಾಗದಲ್ಲಿ ಸೋಮರಸವನ್ನು ತುಂಬಿಸಲು ಆವಶ್ಯಕವಾಗಿರುವ ಹನ್ನೆರಡು ಪಾತ್ರೆಗಳನ್ನು ಇಲ್ಲಿ ದ್ವಾದಶಗ್ರಹಾಃ ಎಂಬುದರಿಂದ ವಿವಕ್ಷಿಸಬೇಕು.

ಜ್ಯೋತಿಷ್ಟೋಮಯಾಗದಲ್ಲಿ ಸೋಮರಸಕ್ಕಾಗಿ ಉಪಯೋಗಿಸುವ ಹನ್ನೆರಡು ಪಾತ್ರೆಗಳ ಹೆಸರು ಹೀಗಿದೆ – (೧) ಉಪಾಂಶು, (೨) ಅಂತರ್ಯಾಮ, (೩) ಐಂದ್ರವಾಯವ, (೪) ಮೈತ್ರಾವರುಣ, (೫) ಆಶ್ವಿನ - ಇವು ಒಟ್ಟು ಐದು ಪಾತ್ರೆಗಳು, (೬) ಶುಕ್ರ, (೭) ಮಂಥಿ - ಹೀಗೆ ಮತ್ತೆರಡು ಪಾತ್ರೆಗಳು, (೮) (೯) ಋತುಪಾತ್ರೆಗಳು, ಅತಿಗ್ರಾಹ್ಯ ಪಾತ್ರೆಗಳು - ೩. ಹೀಗೆ ಒಟ್ಟು ಹನ್ನೆರಡು ಪಾತ್ರೆಗಳಾದವು.

ವಾಸ್ತವಿಕವಾಗಿ ಅಂಶು, ಅದಾಭ್ಯ ಎಂಬ ಮತ್ತೆರಡು ಪಾತ್ರೆಗಳೂ ಕೂಡ ಇವೆ. ಅವುಗಳನ್ನು ಏಕೆ ಇಲ್ಲಿ ಉಲ್ಲೇಖ ಮಾಡಿಲ್ಲ? ಎಂದು ಪ್ರಶ್ನಿಸಬಾರದು. ಆ ಎರಡು ಪಾತ್ರೆಗಳು ಅನಿತ್ಯವಾಗಿವೆ. ಆದ್ದರಿಂದ ವಿವಕ್ಷಿಸಲೇಬೇಕೆಂಬ ನಿಯಮವಿಲ್ಲ. ಮತ್ತೊಂದು ಕಾರಣ ಪಾತ್ರಾಸಾಧನ, ಉಪಸ್ಥಾಪನ ಎಂಬೆರಡು ಸಂಸ್ಕಾರಗಳು ಅಂಶು ಮತ್ತು ಅದಾಭ್ಯ ಎಂಬೆರಡು ಪಾತ್ರೆಗಳಿಗೆ ಇರುವುದಿಲ್ಲ. ಆದ್ದರಿಂದಲೂ ಕೂಡ ಇವೆರಡನ್ನು ಪ್ರಕೃತ ಪರಿತ್ಯಾಗ ಮಾಡಿದ್ದಾರೆ. ಆದ್ದರಿಂದ ನಿತ್ಯವಾದ ಸಾಧನೆಗಳು ಎಂದರೆ ಹಾಗೂ ಪಾತ್ರಾಸಾಧನ, ಉಪಸ್ಥಾಪನ ಎಂಬ ಸಂಸ್ಕಾರವುಳ್ಳ ಪಾತ್ರೆಗಳೆಂದರೆ ಹನ್ನೆರಡು ಮಾತ್ರ. ಹದಿನಾಕು ಆಗುವುದಿಲ್ಲ. ಆದ್ದರಿಂದ ಭಾಷ್ಯದಲ್ಲಿ 'ದ್ವಾದಶಗ್ರಹಾಃ' ಎಂದು ಹೇಳಿದ್ದು ಸಾಧುವಾಗಿದೆ.

**अत्र ''श्रुत्योरेव परस्परविरोध'' इति न्यायविवरण उभयाप्रामाण्येन पूर्वपक्षितत्वाट्टीकायामपि ''सप्तैव प्राणा'' इत्यादिना ''अथवा द्वादश प्राणा'' इत्यादिना च सप्तत्वद्वादशत्वश्रुत्योः समबलत्वोक्त्या परस्परव्याघात इत्येक एव पूर्वपक्षो दर्शितः ।**

ಈ ಅಧಿಕರಣದ ಪೂರ್ವಪಕ್ಷ ಹೀಗಿದೆ – 'ಶ್ರುತ್ಯೋರೇವ ಪರಸ್ಪರವಿರೋಧಃ' ಶ್ರುತಿಗಳಿಗೆ ಪರಸ್ಪರ ವಿರೋಧ ಬರುತ್ತದೆ ಎಂಬ ನ್ಯಾಯವಿವರಣದಲ್ಲಿ ಎರಡೂ ಶ್ರುತಿಗಳಿಗೆ ಅಪ್ರಾಮಾಣ್ಯವನ್ನು ಹೇಳುವ ಮೂಲಕ ಪೂರ್ವಪಕ್ಷವನ್ನು ತೋರಿಸಲಾಗಿದೆ. ಅದಕ್ಕನುಗುಣವಾಗಿ ಟೀಕಾವಾಕ್ಯವನ್ನೂ ಕೂಡ ನಾವು ಅರ್ಥ ಮಾಡಿಕೊಳ್ಳಬೇಕು. 'ಸಪ್ತೈವ ಪ್ರಾಣಾಃ' ಎಂಬ ಶ್ರುತಿಯು ಏಳೇ ಇಂದ್ರಿಯಗಳಿವೆ ಎಂದು

ಹೇಳುತ್ತಿದೆ. 'ಸಪ್ತೈವ ಪ್ರಾಣಾಃ' ಎಂಬ ಶ್ರುತಿಯು ಇಂದ್ರಿಯಾಭಿಮಾನಿದೇವತೆಗಳು ಕೇವಲ ಏಳು ಮಂದಿ ಇದ್ದಾರೆ. ಆದ್ದರಿಂದ ಇಂದ್ರಿಯಗಳೂ ಕೂಡ ಏಳೇ ಆಗಿರಬೇಕು ಎಂಬ ಯುಕ್ತಿಯನ್ನು ಹೇಳುತ್ತಿದೆ. 'ದ್ವಾದಶಾ ವಾ ಏತೇ ಪ್ರಾಣಾಃ' ಎಂಬ ಶ್ರುತಿಯು ಇಂದ್ರಿಯಗಳು ಹನ್ನೆರಡು ಸಂಖ್ಯೆಯಲ್ಲೇ ಇವೆ ಎನ್ನುತ್ತಿದೆ. ಏಕೆಂದರೆ ಹನ್ನೆರಡು ಮಾಸ, ಹನ್ನೆರಡು ಆದಿತ್ಯರು, ಹನ್ನೆರಡು ರಾಶಿಗಳು, ಹನ್ನೆರಡು ಗ್ರಹಗಳಿಗೆ ಯಾರು ಅಭಿಮಾನಿ ದೇವತೆಗಳೋ ಅವರೇ ಹನ್ನೆರಡು ಇಂದ್ರಿಯಗಳಿಗೂ ಕೂಡ ಅಭಿಮಾನಿಗಳಾಗಿದ್ದಾರೆ. ಆದ್ದರಿಂದ ಈ ಪ್ರಮಾಣವಚನದ ಬಲದಿಂದ ಇಂದ್ರಿಯಗಳು ಹನ್ನೆರಡು ಎಂದು ತಿಳಿಯುತ್ತದೆ. ಹೀಗೆ 'ದ್ವಾದಶ ಪ್ರಾಣಾಃ' ಎಂಬ ಶ್ರುತಿಯು ಯುಕ್ತಿಯನ್ನು ಹೇಳುತ್ತಿದೆ. ಹೀಗೆ ಎರಡೂ ಶ್ರುತಿಗಳು ಸಯುಕ್ತಿಕವಾದುದರಿಂದ ಸಮಾನಬಲವುಳ್ಳವುಗಳಾಗಿವೆ. ಈ ಎರಡು ಶ್ರುತಿಗಳಿಗೆ ಪರಸ್ಪರ ವ್ಯಾಘಾತದೋಷವು ಪ್ರಾಪ್ತವಾಗುತ್ತಿವೆ. ಆದ್ದರಿಂದ ಅನಿರ್ಣಯಾತ್ಮಕವಾದ ಪೂರ್ವಪಕ್ಷವನ್ನೇ ತೋರಿಸಬೇಕು. ಎರಡೂ ವಾಕ್ಯಗಳಿಗೆ ಪರಸ್ಪರ ವ್ಯಾಘಾತ ಬರುವುದರಿಂದ ಅಪ್ರಾಮಾಣ್ಯದೋಷವು ಬರುತ್ತದೆಂದು ಪೂರ್ವಪಕ್ಷವನ್ನು ತೋರಿಸಿದ್ದಾರೆ.

**तदनुसारेण सन्देहटीकापि किं सप्तोत द्वादशेत्यनिर्णय उत द्वादशेति निर्णय इत्यध्याहारेण योज्या ।। एकदैवत्याभिप्रायेणेति ।। समसङ्ख्यदेवताकत्वाभिप्रायेणेत्यर्थः । द्वादशमासादीनां हि द्वादशादित्यादयो देवताः ।**

ಈ ಪೂರ್ವಪಕ್ಷಕ್ಕೆ ಅನುಸಾರವಾಗಿ ಸಂದೇಹಟೀಕೆಯಲ್ಲಿ 'ಕಿಂ ಸಪ್ತ, ಉತ ದ್ವಾದಶೇತ್ಯನಿರ್ಣಯಃ ಉತ ದ್ವಾದಶೇತಿ ನಿರ್ಣಯಃ' ಎಂಬುದನ್ನು ಅಧ್ಯಾಹಾರ ಮಾಡಿಕೊಳ್ಳಬೇಕು.

ಅಭಿಪ್ರಾಯ ಹೀಗಿದೆ – ವ್ಯಾಘಾತ ಇದೆ ಎಂಬುದಾಗಿ ಪೂರ್ವಪಕ್ಷದಲ್ಲಿ ಹೇಳಿದ್ದಾರೆ. ಸಿದ್ಧಾಂತದಲ್ಲಿ ವ್ಯಾಘಾತ ಇಲ್ಲ ಎಂದು ಹೇಳಿದ್ದಾರೆ. ಅದಕ್ಕನುಸಾರವಾಗಿ ಸಂದೇಹ ಟೀಕೆಯಲ್ಲಿ ಏಳು, ಹನ್ನೆರಡು ಎಂಬುದು ಅನಿರ್ಣಯಾತ್ಮಕವೋ? ಅಥವಾ ಹನ್ನೆರಡು ಎಂಬುದು ನಿರ್ಣಯಾತ್ಮಕವೋ? ಎಂಬುದಾಗಿ ಅರ್ಥೈಸಿಕೊಳ್ಳಬೇಕು.

ಟೀಕೆಯಲ್ಲಿ 'ಏಕದೈವತ್ಯಾಭಿಪ್ರಾಯೇಣ' ಎಂದು ಹೇಳಿದ್ದಾರೆ. ಕೌಂಡಿಣ್ಯಶ್ರುತಿಯಲ್ಲಿ 'ದ್ವಾದಶಾವಾ ಏತೇ ಪ್ರಾಣಾಃ' ಎಂಬ ವಾಕ್ಯವು ಎಲ್ಲಾ ಪದಾರ್ಥಗಳಿಗೂ ಸಮಸಂಖ್ಯಾಕವಾದ ದೇವತೆಗಳನ್ನು ಅಭಿಮಾನಿಯನ್ನಾಗಿ ಹೇಳುತ್ತಿದೆ ಎಂಬ ಅಭಿಪ್ರಾಯದಿಂದ ಎಂಬುದು ಇದರ ಅರ್ಥ. ಹನ್ನೆರಡು ಮಾಸಗಳು, ಹನ್ನೆರಡು ಆದಿತ್ಯರು, ಹನ್ನೆರಡು ರಾಶಿಗಳು, ಹನ್ನೆರಡು ಪಾತ್ರೆಗಳಿಗೆ ಹನ್ನೆರಡು ಎಂಬ ಸಂಖ್ಯೆಯಲ್ಲಿಯೇ ಅಭಿಮಾನಿದೇವತೆಗಳಿದ್ದಾರೆ. ಆದ್ದರಿಂದ ಇಂದ್ರಿಯಗಳಿಗೂ ಕೂಡ ಹನ್ನೆರಡು ಎಂಬ ಸಂಖ್ಯೆಯಲ್ಲಿಯೇ ಅಭಿಮಾನಿದೇವತೆಗಳು ಇರಬೇಕು ಎಂಬುದು ಇದರ ಅಭಿಪ್ರಾಯ.

**ननु निवृत्तकर्मणः संसारस्थित्यहेतुत्वात् अब्रह्मज्ञानस्य च तस्माद्गत्यहेतुत्वात्तयोः कथं स्थितगतिशब्दावत आह – सजातीयत्वेनान्यत्रापीति ।।**

ಟೀಕೆಯಲ್ಲಿ ಸ್ಥಿತ ಎಂದರೆ ಸಂಸಾರಕ್ಕೆ ಕಾರಣವಾದ್ದರಿಂದ ಕರ್ಮವನ್ನು 'ಸ್ಥಿತ' ಎನ್ನಬೇಕು. ಮೋಕ್ಷಕ್ಕೆ ಕಾರಣವಾದ್ದರಿಂದ ಜ್ಞಾನವನ್ನು 'ಗತಿ' ಎನ್ನಬೇಕು ಎಂದು ವ್ಯಾಖ್ಯಾನ ಮಾಡಿದ್ದಾರೆ. ಆದರೆ ಇದು ತಪ್ಪು. ಎಲ್ಲಾ ಕರ್ಮಗಳೂ ಸಂಸಾರದ ಸ್ಥಿತಿಗೆ ಕಾರಣವಲ್ಲ. ನಿವೃತ್ತಕರ್ಮವು ಮೋಕ್ಷಕ್ಕೆ ಕಾರಣವಾಗಿದೆ. ಅದರಂತೆ

ಎಲ್ಲಾ ಜ್ಞಾನವೂ ಕೂಡ ಮೋಕ್ಷಕ್ಕೆ ಕಾರಣವಲ್ಲ. ಅಬ್ರಹ್ಮಜ್ಞಾನವು ಸಂಸಾರಕ್ಕೇ ಕಾರಣವಾಗಿದೆ. ಹೀಗಿರುವಾಗ 'ಕರ್ಮ' ಮತ್ತು 'ಜ್ಞಾನ' ಗಳನ್ನು 'ಸ್ಥಿತ' ಮತ್ತು 'ಗತಿ' ಶಬ್ದದಿಂದ ಪ್ರತಿಪಾದ್ಯವಾಗುತ್ತದೆಂದು ಟೀಕೆಯಲ್ಲಿ ಹೇಳಿದ್ದು ಹೇಗೆ ಸರಿ? ಈ ಪ್ರಶ್ನೆಗೆ 'ಸಜಾತೀಯತ್ವೇನ ಅನ್ಯತ್ರಾಪಿ' ಎಂಬುದರಿಂದ ಉತ್ತರವನ್ನು ಟೀಕೆಯಲ್ಲಿ ನೀಡಿದ್ದಾರೆ. ಪ್ರವೃತ್ತಕರ್ಮವು ಸಂಸಾರದ ಸ್ಥಿತಿಗೆ ಕಾರಣವಾಗಿದೆ. ಬ್ರಹ್ಮಜ್ಞಾನವು ಮೋಕ್ಷಗಮನಕ್ಕೆ ಕಾರಣವಾಗಿದೆ. ಈ ಪ್ರವೃತ್ತಕರ್ಮ ಹಾಗೂ ಬ್ರಹ್ಮಜ್ಞಾನಗಳಿಗೆ ಸಜಾತೀಯವಾದ್ದರಿಂದ ಉಳಿದ ನಿವೃತ್ತಕರ್ಮ ಹಾಗೂ ಅಬ್ರಹ್ಮ ಜ್ಞಾನವನ್ನೂ ಕೂಡ 'ಸ್ಥಿತ' ಮತ್ತು 'ಗತಿ' ಶಬ್ದದಿಂದ ಕರೆದಿದ್ದಾರೆಂದಷ್ಟೇ ಟೀಕೆಯ ಅಭಿಪ್ರಾಯ.

**यथा ''यत्प्रपदाभ्यां प्रापद्यत ब्रह्मेमं पुरुषं तस्मात्प्रपदे'' इति श्रुत्युक्तस्य प्रपदशब्दनिमित्तस्य चतुर्मुखपादतलोपरिभागगतत्वेऽपि तज्जातीयपुरुषान्तर-सम्बन्धिन्यपि तस्मिन्प्रपदशब्दस्तथेह प्रवृत्तकर्मणः संसारस्थितिहेतुत्वाद्ब्रह्मज्ञानस्य च तस्माद्गतिहेतुत्वात्सजातीययोःकर्मान्तरज्ञानान्तरयोरपि स्थितगतिशब्दावित्यर्थः।**

ಸಜಾತೀಯವಾದದ್ದರಲ್ಲಿ ಶಬ್ದ ಪ್ರಯೋಗವು ಕಂಡಿದೆ ಎನ್ನಲು ಉದಾಹರಣೆಯನ್ನು ನೀಡುತ್ತಿದ್ದಾರೆ– 'ಯತ್ಪ್ರಪದಾಭ್ಯಾಂ ಪ್ರಾಪದ್ಯತ ಬ್ರಹ್ಮೇಮಂ ಪುರುಷಂ ತಸ್ಮಾತ್ಪ್ರಪದೇ' ಎಂಬುದಾಗಿ ಯಾವ ಚತುರ್ಮುಖನ ಪ್ರಪದದಿಂದ ಪರಮಾತ್ಮನು ಚತುರ್ಮುಖನ ಶರೀರವನ್ನು ಪ್ರವೇಶ ಮಾಡಿದನೋ ಆ ಕಾರಣದಿಂದ ಪ್ರಪದ ಎಂದು ಕರೆಸಿಕೊಳ್ಳುತ್ತದೆ ಎಂಬುದಾಗಿ ಶ್ರುತಿ ಹೇಳುತ್ತಿದೆ. ಚತುರ್ಮುಖಬ್ರಹ್ಮನ ಪಾದತಲದ ಮೇಲ್ಭಾಗವು ಪ್ರಪದ ಎಂದು ಏಕೆ ಕರೆಸಿಕೊಂಡಿತು ಎಂದರೆ ಪರಮಾತ್ಮನು ತನ್ಮೂಲಕವಾಗಿ ಪ್ರವೇಶ ಮಾಡಿದನು, ಆಕಾರಣದಿಂದ ಅದು ಪ್ರಪದ ಎಂದು ಕರೆಸಿಕೊಂಡಿತು. ಆದ್ದರಿಂದ ಪರಮಾತ್ಮಪ್ರವೇಶದ್ವಾರತ್ವ ಎಂಬುದು ಪ್ರಪದ ಪದದ ಪ್ರವೃತ್ತಿನಿಮಿತ್ತವಾಗಿದೆ. ಹಾಗಾಗಿ ಚತುರ್ಮುಖಬ್ರಹ್ಮನ ಪಾದತಲದ ಉಪರಿಭಾಗವನ್ನಷ್ಟೇ ನಾವು ಪ್ರಪದ ಎಂದು ಕರೆಯಬೇಕು. ಆದರೂ ಕೂಡ ಪ್ರತಿಯೊಬ್ಬ ಪುರುಷರ ಪಾದತಲದ ಮೇಲ್ಭಾಗವನ್ನು ಪ್ರಪದವೆಂದು ವ್ಯವಹರಿಸಲಾಗುತ್ತದೆ. ಇದಕ್ಕೆ ಕಾರಣ ಚತುರ್ಮುಖನ ಪ್ರಪದಕ್ಕೆ ಇದು ಸಜಾತೀಯವಾಗಿದೆ ಎಂಬುದಷ್ಟೇ ಹೊರತು ಬೇರೆ ಏನೂ ಅಲ್ಲ. ಅದರಂತೆ ಪ್ರಕೃತ ಪ್ರವೃತ್ತಕರ್ಮವು ಸಂಸಾರಸ್ಥಿತಿಗೆ ಕಾರಣವಾದ್ದರಿಂದ ಅದಕ್ಕೆ ಸಜಾತೀಯವಾದ ನಿವೃತ್ತಕರ್ಮವೂ ಕೂಡ ಸ್ಥಿತ ಎಂದೇ ಕರೆಸಿಕೊಳ್ಳುತ್ತದೆ. ಮತ್ತು ಬ್ರಹ್ಮಜ್ಞಾನವು ಮೋಕ್ಷಗತಿಗೆ ಕಾರಣವಾದ್ದರಿಂದ ಅದಕ್ಕೆ ಸಜಾತೀಯವಾದ ಅಬ್ರಹ್ಮಜ್ಞಾನವೂ ಕೂಡ ಗತಿ ಶಬ್ದದಿಂದ ಪ್ರತಿಪಾದ್ಯವಾಗುತ್ತದೆ. ಹೀಗೆ ಟೀಕೆಯಲ್ಲಿ ಹೇಳಿದ್ದು ಅರ್ಥಪೂರ್ಣವಾಗಿದೆ ಎಂದು ತಿಳಿಯಬೇಕು.

**अन्ये तु प्राणाःसप्तैव । ''सप्त प्राणा'' इत्यादिश्रुतिषु सप्तत्वावगतेः । ''सप्त वै शीर्षण्याःप्राणा'' इति विशेषितत्वाच्चेति''सप्त'' इतिसूत्रेण पूर्वपक्षयित्वा ''दशेमे पुरुषे प्राणा आत्मैकादश'' इति श्रुतेरेकादशेति ''हस्त'' इति सूत्रेण सिद्धान्तितम्। अक्षरार्थस्तु हस्तादयोऽपि प्राणाःसन्ति । अतोऽस्मिन्प्राणानामेकादशत्वे स्थिते सत्येवं सप्तत्वं नेतीत्याहुः ।**

ಸಪ್ತಗತ್ಯಧಿಕರಣ (೨-೪-೪)

ಅದ್ವೈತಿಗಳು 'ಸಪ್ತಗತೇರ್ವಿಶೇಷಿತತ್ವಾಚ್ಚ' ಎಂಬ ಸೂತ್ರದ ವ್ಯಾಖ್ಯಾನವನ್ನು ಹೀಗೆ ಮಾಡುತ್ತಾರೆ. ಇಂದ್ರಿಯಗಳ ಸಂಖ್ಯೆ ಏಳೇ ಹೊರತು, ಹನ್ನೆರಡಲ್ಲ. 'ಸಪ್ತ ಪ್ರಾಣಾಃ' ಎಂಬ ಶ್ರುತಿಯೇ ಇದಕ್ಕೆ ಆಧಾರವಾಗಿದೆ ಮತ್ತು 'ಸಪ್ತ ವೈಶೀರ್ಷಣ್ಯಾ ಪ್ರಾಣಾಃ' ಎಂಬುದಾಗಿ ವಿಶೇಷಣವನ್ನು ಹೇಳಿರುವುದರಿಂದ ಏಳು ಇಂದ್ರಿಯಗಳೇ ಆಗಬೇಕು. ತಲೆಯಲ್ಲಿ ನೆಲೆಸಿರುವ ಇಂದ್ರಿಯಗಳೆಂದರೆ ಜ್ಞಾನೇಂದ್ರಿಯಗಳು ಮಾತ್ರ. ಹಸ್ತ ಮೊದಲಾದ ಕರ್ಮೇಂದ್ರಿಯಗಳು ತಲೆಯಲ್ಲಿ ಇರುವ ಇಂದ್ರಿಯಗಳಲ್ಲ. ಆದ್ದರಿಂದ ಏಳು ಇಂದ್ರಿಯಗಳನ್ನೇ ವಿವಕ್ಷಿಸಬೇಕು ಎಂಬುದು ಅಧಿಕರಣದ ಪೂರ್ವಪಕ್ಷ.

'ಹಸ್ತಾದಯಸ್ತು ಸ್ಥಿತೇಽತೋ ನೈವಂ' ಎಂಬ ಮುಂದಿನ ಸೂತ್ರವು ಸಿದ್ಧಾಂತವನ್ನು ಸ್ಥಾಪನೆ ಮಾಡುತ್ತಿದೆ. ಈ ಸೂತ್ರದಲ್ಲಿ 'ತು' ಶಬ್ದ ಇರುವುದರಿಂದ ಹಿಂದಿನ ಶಬ್ದವು ಪೂರ್ವಪಕ್ಷಪ್ರಾಪಕವಾಗಿದೆ ಎಂದು ತಿಳಿಯಬೇಕು. 'ದಶೇಮೇ ಪುರುಷೇ ಪ್ರಾಣಾಃ ಆತ್ಮೈಕಾದಶಃ' ಎಂಬುದಾಗಿ ಪುರುಷನಲ್ಲಿ ಹತ್ತು ಇಂದ್ರಿಯಗಳಿವೆ, ಹನ್ನೊಂದನೆಯವನು ಆತ್ಮ ಎಂದು ಹೇಳಿದ್ದರಿಂದ, ಹನ್ನೊಂದು ಇಂದ್ರಿಯಗಳನ್ನು ವಿವಕ್ಷಿಸಬೇಕೇ ಹೊರತು ಏಳು ಇಂದ್ರಿಯಗಳಲ್ಲ.

ಸೂತ್ರದ ಅಕ್ಷರಾರ್ಥ ಹೀಗಿದೆ – 'ಹಸ್ತಾದಯಸ್ತು' ಕೈ ಮೊದಲಾದ ಇಂದ್ರಿಯಗಳನ್ನು ಶ್ರುತಿ ಹೇಳುತ್ತಿದೆ. 'ಅತಃ' ಎಂಬ ಪದವು ಅಸ್ಮಿನ್ ಎಂಬುದರ ಪ್ರತಿಪದವಾಗಿದೆ. ಇದಕ್ಕೆ 'ಇಂದ್ರಿಯಗಳು ಹನ್ನೊಂದು ಎಂದು ನಿರ್ಣಯವಾಗಿರುವುದರಿಂದ' ಎಂದರ್ಥ. ಹಾಗಾಗಿ ಏಳು ಇಂದ್ರಿಯಗಳು ಎಂದು ಹೇಳಬಾರದು. ಇಷ್ಟು ಸಿದ್ಧಾಂತ ಮಾಡಿದ್ದಾರೆ.

ವಿವರಣೆ – 'ಅತಃ' ಎಂಬ ಪದಕ್ಕೆ ಇನ್ನೊಂದು ಕಾರಣದಿಂದ ಎಂಬರ್ಥವನ್ನು ತಿಳಿಯಬಾರದು. 'ಅತಃ' ಎಂಬುದು 'ಅಸ್ಮಿನ್' ಎಂಬ ಪ್ರತಿಪದವಾಗಿದೆ. ಇಲ್ಲಿ ತಸಿಲ್ ಪ್ರತ್ಯಯವನ್ನು ವಿವಕ್ಷಿಸದೇ 'ತಸಿ' ಪ್ರತ್ಯಯವನ್ನು ವಿವಕ್ಷಿಸಬೇಕು. ಆಗ 'ಆದ್ಯಾದಿಭ್ಯಃ ಉಪಸಂಖ್ಯಾನಂ' ಎಂಬುದಾಗಿ ಎಲ್ಲಾ ವಿಭಕ್ತ್ಯರ್ಥದಲ್ಲೂ ಕೂಡ 'ತಸಿ' ಪ್ರತ್ಯಯವನ್ನು ವಿಧಾನ ಮಾಡಿರುವುದರಿಂದ ಪ್ರಕೃತ ಸಪ್ತಮ್ಯರ್ಥದಲ್ಲಿ 'ತಸಿ' ಪ್ರತ್ಯಯವು ಪ್ರಾಪ್ತವಾಗಿದೆ. ಆದ್ದರಿಂದ 'ಅಸ್ಮಿನ್' ಎಂಬುದರ ಅರ್ಥವನ್ನು 'ಅತಃ' ಎಂಬ ಪದವೇ ಹೇಳುತ್ತದೆ. 'ಅಸ್ಮಿನ್' ಎಂದರೆ 'ಇಂದ್ರಿಯಾಣಾಂ ಏಕಾದಶತ್ವೇ ನಿರ್ಣೀತೇ ಸತಿ' ಎಂದರ್ಥ.

**तन्न । मम रीत्या प्राणानां सप्तभ्योऽधिकसङ्ख्यत्वे ''सप्त प्राणा'' इति श्रुतिरयुक्ता । महासङ्ख्यायामवच्छेदकविशेषं विनाऽल्पसङ्ख्याव्यवहारायोगादिति शङ्किते घ्राणरसनचक्षुस्त्वक्श्रोत्रमनोबुद्धिषु ज्ञानेन्द्रियत्वरूपो विशेषो ''गुहाशयाम्'' इति वाक्यसूचितोऽस्तीत्यवश्यवक्तव्यपरिहारोक्त्या ''सप्त'' इति सूत्रस्यसिद्धान्तत्व-सम्भवेपरिहारोक्तिसूचितपूर्वपक्षपरत्वायोगात् ।**

ಅದ್ವೈತಿಗಳ ಈ ವ್ಯಾಖ್ಯಾನವು ತಪ್ಪು. ನಾವು ಹೇಳುವಂತೆ 'ಸಪ್ತಗತೇರ್ವಿಶೇಷಿತತ್ವಾಚ್ಚ' ಎಂಬ ಸೂತ್ರವು ಸಿದ್ಧಾಂತ ಸ್ಥಾಪಕವಾಗಿದೆ ಎನ್ನಲು ಬರುವಾಗ ಪೂರ್ವಪಕ್ಷ ಸೂತ್ರವೆಂದು ಏಕೆ ಪರಿಗಣಿಸುತ್ತೀರಿ? ಇಂದ್ರಿಯಗಳು ಏಳಕ್ಕಿಂತ ಅಧಿಕಸಂಖ್ಯೆಯಲ್ಲಿ ಇವೆ ಎನ್ನಲು 'ಸಪ್ತ ಪ್ರಾಣಾಃ' ಎಂಬ ಶ್ರುತಿಯು ಅಯುಕ್ತವಾಗಿದೆ. ಮಹಾಸಂಖ್ಯೆಯಲ್ಲಿ ಅವಚ್ಛೇದಕ ವಿಶೇಷ ಇಲ್ಲದೇ ಅಲ್ಪಸಂಖ್ಯೆಯ ವ್ಯವಹಾರವು ಯುಕ್ತವಾಗುವುದಿಲ್ಲವಲ್ಲವೇ? ಎಂಬ ಶಂಕೆಯು ಪ್ರಾಪ್ತವಾದರೆ ಅಲ್ಪಸಂಖ್ಯೆಯಿಂದ ಅವಚ್ಛೇದಕ ವಿಶೇಷ ಇದೆ ಎನ್ನಲು ಈ ಸೂತ್ರವು ಹೊರಟಿದೆ. ಘ್ರಾಣೇಂದ್ರಿಯ, ರಸನೇಂದ್ರಿಯ, ಚಕ್ಷುರಿಂದ್ರಿಯ,

ಶ್ರೋತ್ರೇಂದ್ರಿಯ, ಮನೋ ಇಂದ್ರಿಯ ಹಾಗೂ ಬುದ್ಧಿ ಇವುಗಳಲ್ಲಿ ಜ್ಞಾನೇಂದ್ರಿಯತ್ವ ಎಂಬ ವಿಶೇಷವಿದೆ. ಆದ್ದರಿಂದ ಶ್ರುತಿಯಲ್ಲಿ ಏಳು ಎಂಬುದಾಗಿ ಹೇಳಿದ್ದಾರೆ. ಶ್ರುತಿಯಲ್ಲಿರುವ 'ಗುಹಾಶಯಾಮ್' ಎಂಬ ವಿಷಯದಿಂದ ಇವು ಜ್ಞಾನಕ್ಕೋಸ್ಕರ ಇರುವ ಇಂದ್ರಿಯಗಳು ಎಂದು ತಿಳಿಯುತ್ತದೆ. ಹೀಗೆ ಅವಶ್ಯವಕ್ತವ್ಯವಾದ ಪರಿಹಾರದಿಂದಲೇ 'ಸಪ್ತಗತೇರ್ವಿಶೇಷಿತತ್ವಾಚ್ಚ' ಎಂಬ ಸೂತ್ರವು ಸಿದ್ಧಾಂತಸ್ಥಾಪಕವಾಗಿದೆ ಎಂದು ಹೇಳಲು ಬರುತ್ತದೆ. ಈ ಸಿದ್ಧಾಂತದಿಂದಲೇ ಪೂರ್ವಪಕ್ಷವು ಸೂಚಿತವಾಗುತ್ತಿರುವಾಗ ಇದನ್ನು ಪೂರ್ವಪಕ್ಷಪರವೆಂದು ಹೇಳುವುದು ತಪ್ಪಾಗುತ್ತದೆ.

**श्रौतावगतिवाचिना सौत्रेण गतिशब्देनैव ''सप्त प्राणा'' इत्यस्या इव ''सप्त वै शीर्षण्याः-प्राणा'' इत्यस्या अपि श्रौतावगतेर्वक्तुं शक्यत्वेन ''विशेषितत्वाच्च'' इत्यस्य वैयर्थ्याच्च ।**

'ಸಪ್ತಗತೇರ್ವಿಶೇಷಿತತ್ವಾಚ್ಚ' ಎಂಬ ಸೂತ್ರದಲ್ಲಿ 'ಗತಿ' ಶಬ್ದವು ಶ್ರುತಿಯಿಂದ ತಿಳಿಯುತ್ತದೆ ಎಂಬರ್ಥವನ್ನು ಹೇಳುತ್ತಿದೆ. ಯಾವ ಶ್ರುತಿ ಎಂದರೆ 'ಸಪ್ತ ಪ್ರಾಣಾಃ' ಎಂಬ ಶ್ರುತಿ ಎಂದು ನೀವು ವ್ಯಾಖ್ಯಾನ ಮಾಡುತ್ತೀರಿ. 'ಸಪ್ತ ಪ್ರಾಣಾಃ' ಎಂಬ ಶ್ರುತಿಯಿಂದ ಏಳು ಜ್ಞಾನೇಂದ್ರಿಯಗಳನ್ನು ವಿವಕ್ಷಿಸಬೇಕೆಂಬುದು ಗತಿ ಶಬ್ದದ ಅರ್ಥವೆಂದು ಒಪ್ಪಿದ್ದೀರಿ. ಹಾಗಾದರೆ 'ಸಪ್ತ ವೈ ಶೀರ್ಷಣ್ಯಾಃ ಪ್ರಾಣಾಃ' ಎಂಬ ಶ್ರುತಿಯನ್ನೂ ಕೂಡ ಗತಿ ಶಬ್ದದಿಂದಲೇ ಸಂಗ್ರಹಿಸಲು ಬರುತ್ತದೆ. ಹೀಗಿರುವಾಗ ಈ 'ಸಪ್ತ ವೈ ಶೀರ್ಷಣ್ಯಾಂ' ಎಂಬ ಶ್ರುತಿಯನ್ನು ಮಾತ್ರ ಸಂಗ್ರಹ ಮಾಡುವುದಕ್ಕಾಗಿ 'ವಿಶೇಷಿತತ್ವಾಚ್ಚ' ಎಂಬ ಸೂತ್ರದ ಭಾಗವನ್ನು ನಿವೇಶ ಮಾಡುವುದು ಅನಾವಶ್ಯಕ.

**किञ्च ''सप्त वै शीर्षण्याः प्राणाद्वाववाञ्चौ'' इति समाख्याश्रुतौ प्राणानां नवत्वोक्त्या न तया सप्तत्वसिद्धिः ।**

ಮತ್ತು 'ಸಪ್ತ ವೈ ಶೀರ್ಷಣ್ಯಾಃ ಪ್ರಾಣಾಃ' ಎಂಬ ಶ್ರುತಿಗೆ ಸಮಾಖ್ಯಾ ಶ್ರುತಿ ಎನಿಸಿದ ಮತ್ತೊಂದು 'ಸಪ್ತ ವೈ ಶೀರ್ಷಣ್ಯಾಃ ಪ್ರಾಣಾದ್ವಾವವಾಂಚೌ' ಎಂಬ ಶ್ರುತಿಯಲ್ಲಿ ಹನ್ನೆರಡು ಇಂದ್ರಿಯಗಳೆಂದು ಹೇಳಲಾಗಿದೆ. ವಾಯು ಹಾಗೂ ಉಪಸ್ಥ ಎಂಬೆರಡು ಇಂದ್ರಿಯಗಳನ್ನು ಸೇರಿಸಿ ಒಂಭತ್ತು ಇಂದ್ರಿಯಗಳೆಂದು ಈ ಶ್ರುತಿ ಹೇಳುತ್ತಿದೆ. ಆದ್ದರಿಂದ 'ಸಪ್ತ ವೈ ಶೀರ್ಷಣ್ಯಾಃ' ಎಂಬ ಶ್ರುತಿಯ ಬಲದಿಂದ ನಿಮಗೆ ಏಳು ಇಂದ್ರಿಯಗಳೆಂದು ಸಿದ್ಧಾಂತ ಮಾಡಲು ಸಾಧ್ಯವಾಗುವುದಿಲ್ಲ.

**किञ्च सिद्धान्ते ब्रह्ममुख्यप्राणादेरपि प्राणशब्दार्थत्वेन तत्रैकादशत्वनियमायोगा दिन्द्रियेष्वेव स वाच्य इति पूर्वपक्षेऽपि तेष्वेव सप्तत्वनियमो वाच्यः । न च द्वे श्रोत्रे द्वे नासिके द्वे चक्षुषी एका वागिति श्रोत्रादिचतुरिन्द्रियाधिष्ठानगोलकानां सप्तत्व इन्द्रियेषु तत्सिध्यति ।**

ಮತ್ತು ನಿಮ್ಮ ಸಿದ್ಧಾಂತದಲ್ಲಿ ಬ್ರಹ್ಮ, ಮುಖ್ಯಪ್ರಾಣಾದಿಗಳನ್ನೂ ಕೂಡ ಪ್ರಾಣ ಶಬ್ದಾರ್ಥವೆಂದು ಅಂಗೀಕರಿಸಿದ್ದೀರಿ. ಇವುಗಳನ್ನೂ ಪ್ರಾಣಶಬ್ದಾರ್ಥವೆಂದು ಪರಿಗಣಿಸಿದರೆ ಹನ್ನೊಂದು ಎಂಬ ಸಂಖ್ಯೆಯನ್ನು ಮೀರಿ ಅಧಿಕ ಸಂಖ್ಯೆಗಳಲ್ಲಿ ಪ್ರಾಣಗಳಿವೆ ಎಂದು ಒಪ್ಪುವ ಪರಿಸ್ಥಿತಿ ಬರುತ್ತದೆ. ಆದ್ದರಿಂದ ಪ್ರಾಣಶಬ್ದಾರ್ಥವನ್ನು ಇಲ್ಲಿ ವಿವಕ್ಷಿಸಬಾರದು, ಕೇವಲ ಇಂದ್ರಿಯಗಳಲ್ಲಷ್ಟೇ ವಿಚಾರ ಮಾಡುವುದು

ಸಂಗತವಾಗುತ್ತದೆ. ಆದ್ದರಿಂದ ಸಿದ್ಧಾಂತದಲ್ಲಿ ಹನ್ನೊಂದು ಇಂದ್ರಿಯಗಳೆಂದು ಸ್ಥಾಪನೆ ಮಾಡಬೇಕು. ಅದಕ್ಕನುಗುಣವಾಗಿ ಪೂರ್ವಪಕ್ಷದಲ್ಲೂ ಕೂಡ ಇಂದ್ರಿಯಗಳಲ್ಲಿಯೇ ಸಪ್ತತ್ವ ನಿಯಮವನ್ನು ಮಾಡಬೇಕು. ಆದರೆ ನೀವು ಹಾಗೆ ಮಾಡಿಲ್ಲ. ಎರಡು ಕಿವಿ, ಎರಡು ನಾಸಿಕ, ಎರಡು ಚಕ್ಷುಸ್ಸು, ಒಂದು ವಾಗಿಂದ್ರಿಯ ಎಂಬುದಾಗಿ ಇಂದ್ರಿಯಗಳಿಗೆ ಅಧಿಷ್ಠಾನವಾದ ಏಳು ಗೋಲಕಗಳನ್ನು ಪೂರ್ವಪಕ್ಷದಲ್ಲಿ ವಿವಕ್ಷಿಸಿದ್ದೀರಿ. ಈ ಗೋಲಕಗಳು ಇಂದ್ರಿಯಗಳೆಂದು ಕರೆಸಿಕೊಳ್ಳಲು ಸಾಧ್ಯವಿಲ್ಲ. ಆದ್ದರಿಂದ ನಿಮ್ಮ ಪೂರ್ವಪಕ್ಷವೇ ಅಯುಕ್ತವಾಗಿದೆ.

ವಿವರಣೆ – ಅದ್ವೈತಿಗಳು ಮುಖ್ಯಪ್ರಾಣದೇವರ ಸ್ವರೂಪವನ್ನೇ ಒಪ್ಪುವುದಿಲ್ಲ. ಆದ್ದರಿಂದ 'ಬ್ರಹ್ಮ ಮುಖ್ಯಪ್ರಾಣಾದೇರಪಿ' ಎಂದು ಹೇಗೆ ಹೇಳಿದ್ದಾರೆ? ಎಂದರೆ ನಾವು ಹೇಳುವ ವಾಯುದೇವರನ್ನು ಮುಖ್ಯಪ್ರಾಣ ಎಂದು ಅವರು ಹೇಳುವುದಿಲ್ಲ. ಚಿದಚಿತ್‌ಸಂವಲನಾತ್ಮಕವಾದ ಅಹಂಕಾರವನ್ನು ಮುಖ್ಯಪ್ರಾಣ ಎಂಬ ಶಬ್ದದಿಂದ ಕರೆಯುತ್ತಾರೆ.

**हस्तेति सूत्रेऽपि हस्तादयोऽप्यतो नैवमित्येतावतैव पूर्णत्वात् ''स्थितेत'' इति शब्दो व्यर्थः ।**

'ಹಸ್ತಾದಯಸ್ತು' ಎಂಬ ಸೂತ್ರದಲ್ಲೂ ಕೂಡ 'ಹಸ್ತಾದಯೋಽಪ್ಯತೋ ನೈವಂ' ಎಂದೇ ವಿವಕ್ಷೆ ಮಾಡಿದರೆ ಸಾಕು 'ಸ್ಥಿತೇಽತಃ' ಎಂಬ ಶಬ್ದವು ವ್ಯರ್ಥವಾಗುತ್ತದೆ.

ವಿವರಣೆ – ಅದ್ವೈತಿಗಳು 'ಹಸ್ತಾದಯಸ್ತು ಸ್ಥಿತೇಽತೋ ನೈವಂ' ಎಂಬ ಸೂತ್ರದಿಂದ ಇಂದ್ರಿಯಗಳನ್ನು ಏಳು ಎಂದು ವಿವಕ್ಷಿಸಬಾರದು. ಹಸ್ತ, ಪಾದ, ಪಾಯು, ಉಪಸ್ಥ ಎಂಬ ಮತ್ತೂ ನಾಕು ಇಂದ್ರಿಯಗಳಿರುವುದರಿಂದ ಹನ್ನೊಂದು ಎಂದೇ ನಿರ್ಣಯಿಸಬೇಕು ಎಂಬುದಾಗಿ ಈ ಸೂತ್ರಕ್ಕೆ ವ್ಯಾಖ್ಯಾನ ಮಾಡುತ್ತಾರೆ. ಇಷ್ಟೇ ಅಭಿಪ್ರಾಯ ಅವರಿಗೆ ಇರುವುದಾಗಿದ್ದಲ್ಲಿ 'ಸ್ಥಿತೇಽತಃ' ಎಂಬ ಪದವೇ ವ್ಯರ್ಥ. 'ಅತಃ' ಎಂಬುದು ಅಸ್ಮಿನ್ ಎಂಬುದರ ಪ್ರತಿಪದವಾಗಿದೆ. ಇದಕ್ಕೆ 'ಪ್ರಾಣಾನಾಂ ಏಕಾದಶತ್ವೇ' ಎಂಬರ್ಥವನ್ನು ಒಪ್ಪಿ, 'ಸ್ಥಿತೇ' ಎಂಬುದಕ್ಕೆ 'ನಿರ್ಣೀತೇಸತಿ' ಎಂಬರ್ಥವನ್ನು ಒಪ್ಪಿ ಈ ಎರಡು ಪದಗಳನ್ನು ನಿವೇಶ ಮಾಡುವುದರ ಅವಶ್ಯಕತೆಯೇ ಇಲ್ಲ. ಕೇವಲ 'ಹಸ್ತಾದಯೋಽಪಿ ಅತೋ ನೈವಂ' ಹಸ್ತಾದಿ ನಾಲ್ಕು ಇಂದ್ರಿಯಗಳು ಇರುವುದರಿಂದ ಏಳು ಇಂದ್ರಿಯ ಎಂಬುದು ಯುಕ್ತವಾಗುವುದಿಲ್ಲ ಎಂದಷ್ಟೇ ಹೇಳಿದರೆ ಸಾಕು.

**किञ्च हस्तादयःपञ्च पूर्वपक्ष्युक्तसमान्तर्गता एव चेन्न पूर्वपक्षनिरासः । अतिरिक्ताश्चेद्द्वादशत्वेनैव सिद्धान्तो वाच्यो न त्वेकादशत्वेन ।**

ಪೂರ್ವಪಕ್ಷದಲ್ಲಿ ಏಳು ಎಂಬ ಸಂಖ್ಯೆ, ಸಿದ್ಧಾಂತದಲ್ಲಿ ಹನ್ನೊಂದು ಎಂಬ ಸಂಖ್ಯೆಯ ಪರಿಗಣನೆಯೇ ನಿಮ್ಮಲ್ಲಿ ಸರಿ ಇಲ್ಲ. ಏಕೆಂದರೆ ಹಸ್ತ, ಪಾದ, ಪಾಯು, ಉಪಸ್ಥ, ವಾಕ್ ಈ ಐದು ಇಂದ್ರಿಯಗಳು ಕರ್ಮೇಂದ್ರಿಯಗಳೆನಿಸುತ್ತವೆ. ಇವುಗಳು ಏಳು ಇಂದ್ರಿಯಗಳಲ್ಲಿ ಸೇರಿರುವುದಿಲ್ಲವಾದ್ದರಿಂದ ಅತಿರಿಕ್ತವಾಗಿ ನೀವು ಇದನ್ನು ಪರಿಗಣಿಸಿದರೆ ದ್ವಾದಶ ಇಂದ್ರಿಯಗಳಾಗುತ್ತವೆ. ಅಥವಾ ಏಳರಲ್ಲಿಯೇ ಸೇರಿಸಿದರೆ ಪೂರ್ವಪಕ್ಷವನ್ನು ನಿರಾಕರಣೆ ಮಾಡಿದಂತೆಯೇ ಆಗುವುದಿಲ್ಲ. ಒಟ್ಟು ನೀವು ಹನ್ನೊಂದು ಎಂಬ ಸಂಖ್ಯೆಯಿಂದ ಸಿದ್ಧಾಂತ ಮಾಡಿದ್ದು ತಪ್ಪು.

**नच वाक्, षट् ज्ञानेन्द्रियाणि चेति सप्त ''सप्त'' इति सूत्रे विवक्षितानि । हस्तेति सूत्रे तु चत्वारि वागन्यकर्मेन्द्रियाणि । तथा चैकादशत्वमिति वाच्यम् ।**

**मम मते सप्तसु ज्ञानेन्द्रियत्ववत्, हस्तादिषु कर्मेन्द्रियत्ववच्च त्वन्मत एकस्यावच्छेदकस्याभावेनादिसूत्रे सप्तशब्दस्य, द्वितीय आदिशब्दस्य चायोगात् ।**

ಅದ್ವೈತಿಯ ಆಕ್ಷೇಪ – ವಾಗಿಂದ್ರಿಯ ಮತ್ತು ಆರು ಜ್ಞಾನೇಂದ್ರಿಯಗಳು ಸೇರಿ ಒಟ್ಟು ಏಳು ಇಂದ್ರಿಯಗಳಾದವು. ಇದನ್ನು 'ಸಪ್ತಗತೇರ್ವಿಶೇಷತತ್ವಾಚ್ಚ' ಎಂಬ ಸೂತ್ರದಿಂದ ವಿವಕ್ಷಿಸಲಾಗಿದೆ. ಏಳು ಇಂದ್ರಿಯಗಳೆಂದು ಪೂರ್ವಪಕ್ಷ ಮಾಡುವುದೂ ಕೂಡ ಸಾಧುವಾಗಿದೆ. 'ಹಸ್ತಾದಯಸ್ತು' ಎಂಬ ಸಿದ್ಧಾಂತ ಸೂತ್ರದಲ್ಲಿ ವಾಗಿಂದ್ರಿಯವನ್ನು ಬಿಟ್ಟು ಹಸ್ತ, ಪಾದ, ಪಾಯು, ಉಪಸ್ಥ ಎಂಬ ನಾಕು ಕರ್ಮೇಂದ್ರಿಯಗಳನ್ನು ವಿವಕ್ಷಿಸಲಾಗಿದೆ. ಆದ್ದರಿಂದ ಒಟ್ಟು ಹನ್ನೊಂದು ಇಂದ್ರಿಯಗಳೆಂದು ಸಿದ್ಧಾಂತ ಮಾಡಿದ್ದೂ ಕೂಡ ಸಾಧುವೇ ಆಗಿದೆ.

ಅದ್ವೈತಿಗಳ ನಿರಾಕರಣೆ – ನಮ್ಮ ಮತದಲ್ಲಿ ಏಳು ಜ್ಞಾನೇಂದ್ರಿಯಗಳಲ್ಲಿ ಜ್ಞಾನೇಂದ್ರಿಯತ್ವ ಎಂಬ ಅವಚ್ಛೇದಕ ಧರ್ಮವಿದೆ. ನಾಕು ಕರ್ಮೇಂದ್ರಿಯಗಳಲ್ಲಿ ಕರ್ಮೇಂದ್ರಿಯತ್ವ ಎಂಬ ಸಂಗ್ರಾಹಕವಾದ ಅವಚ್ಛೇದಕ ಧರ್ಮವಿದೆ. ಆದರೆ ನಿಮ್ಮ ಮತದಲ್ಲಿ ಹೀಗೆ ಅವಚ್ಛೇದಕ ಧರ್ಮವನ್ನೇ ಹೇಳಲು ಸಾಧ್ಯವಿಲ್ಲ.

ವಿವರಣೆ – ಏಳು ಇಂದ್ರಿಯಗಳೆಂಬ ಪೂರ್ವಪಕ್ಷ ಸೂತ್ರದಲ್ಲಿ ಅದ್ವೈತಿಗಳು ವಾಗಿಂದ್ರಿಯವನ್ನು ಸೇರಿಸಿದ್ದಾರೆ. ನಾಕು ಕರ್ಮೇಂದ್ರಿಯಗಳು ಎಂಬ ಸಿದ್ಧಾಂತ ಸೂತ್ರದಲ್ಲಿ ಕರ್ಮೇಂದ್ರಿಯವೆನಿಸಿದ ವಾಗಿಂದ್ರಿಯವನ್ನು ಬಿಟ್ಟಿದ್ದಾರೆ. ಆದ್ದರಿಂದ ಜ್ಞಾನೇಂದ್ರಿಯತ್ವ ಎಂಬ ಅವಚ್ಛೇದಕ ಧರ್ಮವನ್ನು ಏಳು ಇಂದ್ರಿಯಗಳು ಎಂಬಲ್ಲಿ ಹೇಳಲು ಅವರಿಗೆ ಸಾಧ್ಯವಿಲ್ಲ. ಅದರಂತೆ ಆದಿ ಶಬ್ದಾರ್ಥವೆನ್ನುವ ನಾಕು ಕರ್ಮೇಂದ್ರಿಯಗಳಲ್ಲಿ ಕರ್ಮೇಂದ್ರಿಯತ್ವ ಎಂಬ ಅವಚ್ಛೇದಕವನ್ನೂ ಅವರಿಗೆ ಹೇಳಲು ಸಾಧ್ಯವಿಲ್ಲ. ಏಕೆಂದರೆ ಈ ಕರ್ಮೇಂದ್ರಿಯತ್ವ ಎಂಬ ಅವಚ್ಛೇದಕ ಧರ್ಮವು ಅತಿರಿಕ್ತವಾದ ವಾಗಿಂದ್ರಿಯಲ್ಲೂ ಕೂಡ ವೃತ್ತಿಯಾಗಿದೆ. ಆದ್ದರಿಂದ ಪೂರ್ವಪಕ್ಷ ಸೂತ್ರದಲ್ಲಾಗಲೀ, ಸಿದ್ಧಾಂತ ಸೂತ್ರದಲ್ಲಾಗಲೀ ಅವಚ್ಛೇದಕ ಧರ್ಮವನ್ನು ಹೇಳಲಾಗದೆ ಅದ್ವೈತಿಗಳು ಸೋಲುತ್ತಾರೆ. ಇನ್ನು 'ಶೀರ್ಷಣ್ಯತ್ವ' ಎಂಬುದು ಪೂರ್ವಪಕ್ಷ ಸೂತ್ರದಲ್ಲಿ ವಿವಕ್ಷಿಸುವ ಅವಚ್ಛೇದಕ ಧರ್ಮವೆಂದು, ಅಶೀರ್ಷಣ್ಯತ್ವ ಎಂಬುದು ಸಿದ್ಧಾಂತದಲ್ಲಿ ವಿವಕ್ಷಿಸುವ ಅವಚ್ಛೇದಕ ಧರ್ಮವೆಂದು ಅದ್ವೈತಿಗಳು ಹೇಳಬಹುದು. ಇದೂ ಕೂಡ ಯುಕ್ತವಾಗುವುದಿಲ್ಲ. ಅದ್ವೈತಿಗಳು ರಸನೇಂದ್ರಿಯವನ್ನು ಏಳು ಇಂದ್ರಿಯಗಳಲ್ಲಿ ಸೇರಿಸಿಯೇ ಇಲ್ಲ. ಆದ್ದರಿಂದ ಶೀರ್ಷಣ್ಯತ್ವವು ರಸನೇಂದ್ರಿಯದಲ್ಲಿದ್ದೆ ಅಲ್ಲಿ ಸಪ್ತತ್ವವು ಇರುವುದಿಲ್ಲ. ಆದ್ದರಿಂದ ಶೀರ್ಷಣ್ಯತ್ವವು ಅತಿರಿಕ್ತವೃತ್ತಿಯೇ ಆಯಿತು. ಅಶೀರ್ಷಣ್ಯತ್ವವನ್ನೂ ಕೂಡ ಅವಚ್ಛೇದಕವೆಂದು ವಿವಕ್ಷಿಸಲು ಸಾಧ್ಯವಿಲ್ಲ. ತ್ವಗಿಂದ್ರಿಯದಲ್ಲೂ ಕೂಡ ಅಶೀರ್ಷಣ್ಯತ್ವವೂ ಇದೆ. ಆದರೆ ಅಲ್ಲಿ ಚತುಷ್ಟತ್ವವು ಇಲ್ಲ. ಆದ್ದರಿಂದ ಇದೂ ಕೂಡ ಅವಚ್ಛೇದಕಧರ್ಮ ಆಗುವುದಿಲ್ಲ.

ಅದ್ವೈತಿಗಳು ರಸನೇಂದ್ರಿಯ, ತ್ವಗಿಂದ್ರಿಯ, ಬುದ್ಧಿ ಈ ಮೂರನ್ನೂ ಕೂಡ ಬಿಟ್ಟು ಇಂದ್ರಿಯಗಳ ಪರಿಗಣನೆಯನ್ನು ಮಾಡುತ್ತಿದ್ದಾರೆ.

**गीयते च प्राणानां द्वादशत्वं ''इन्द्रियेभ्यःपरा ह्यर्था अर्थेभ्यश्च परं मनः । मनसस्तु परा बुद्धिः । इन्द्रियाणि हयानाहुः । बुद्धिन्तु सारथिं विद्धि मनः प्रग्रहमेव**

**च । यदा पञ्चावातिष्ठन्ते ज्ञानानि मनसा सह । बुद्धिश्च न विचेष्टते । द्वादश वा एते प्राणाः । द्वादशैवेन्द्रियाण्याहुर्मनोबुद्धी तु द्वादशे'' इत्यादिश्रुतिषु**

**विज्ञानतत्वाच्च मनो मनस्तत्वाच्च खादिकम् ।**
**सप्त प्राणास्त्ववगतेः पञ्च प्राणाश्च कर्मणः ।**
**श्रोत्रादीनि तु पञ्चैव तथा वागादिपञ्चकम् ।**
**मनोबुद्धिसहायानि द्वादशैवेन्द्रियाणितु ।।**

**इत्यादिस्मृतिषु च ।**

ಇಂದ್ರಿಯಗಳು ಹನ್ನೊಂದು ಎಂದು ಸಿದ್ಧಾಂತ ಮಾಡಿದ್ದೇ ತಪ್ಪು. ಒಟ್ಟು ಹನ್ನೆರಡು ಇಂದ್ರಿಯಗಳಿವೆ. ಮನಸ್ಸು ಹಾಗೂ ಬುದ್ಧಿಗಳನ್ನೂ ಕೂಡ ಇಂದ್ರಿಯಗಳಲ್ಲಿಯೇ ಸೇರಿಸಬೇಕು ಎನ್ನುವುದಕ್ಕೆ ಅನೇಕ ಶ್ರುತಿಸ್ಮೃತಿಗಳು ಹೀಗೆ ಆಧಾರವಾಗಿವೆ – 'ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ ಅರ್ಥೇಭ್ಯಶ್ಚ ಪರಂ ಮನಃ ಮನಸಸ್ತು ಪರಾ ಬುದ್ಧಿಃ' ಎಂಬ ಕಾಠಕೋಪನಿಷತ್ತಿನಲ್ಲಿ ಮನಸ್ಸು ಹಾಗೂ ಬುದ್ಧಿಯನ್ನು ಇಂದ್ರಿಯಗಳೆಂದು ಪರಿಗಣಿಸಲಾಗಿದೆ. 'ಇಂದ್ರಿಯಾಣಿ ಹಯಾನಾಹುಃ ಬುದ್ಧಿಂತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ' ಎಂಬಲ್ಲೂ ಕೂಡ ಬುದ್ಧಿ ಹಾಗೂ ಮನಸ್ಸನ್ನು ಜ್ಞಾನೇಂದ್ರಿಯವೆಂದು ಪರಿಗಣಿಸಲಾಗಿದೆ. 'ಯದಾ ಪಂಚಾವತಿಷ್ಠಂತೇ ಜ್ಞಾನಾನಿ ಮನಸಾ ಸಹ ಬುದ್ಧಿಶ್ಚ ನ ವಿಚೇಷ್ಟತೇ' ಎಂಬಲ್ಲೂ ಕೂಡ ಮನಸ್ಸು ಹಾಗೂ ಬುದ್ಧಿಗಳನ್ನು ವಿವಕ್ಷಿಸಲಾಗಿದೆ. 'ದ್ವಾದಶಾ ವಾ ಏತೇ ಪ್ರಾಣಾಃ' ಎಂಬ ಭಾಷ್ಯದಲ್ಲಿ ಉದಾಹರಿಸಿದ ಕೌಂಡಿಣ್ಯಶ್ರುತಿಯೂ ಕೂಡ ಹನ್ನೆರಡು ಇಂದ್ರಿಯಗಳೆಂದು ಹೇಳುತ್ತಿದೆ. 'ದ್ವಾದಶೈವೇಂದ್ರಿಯಾಣ್ಯಾಹುಃ ಮನೋಬುದ್ಧೀ ತು ದ್ವಾದಶೇ' ಒಟ್ಟು ಹನ್ನೆರಡೇ ಇಂದ್ರಿಯಗಳಿವೆ. ಮನಸ್ಸು ಹಾಗೂ ಬುದ್ಧಿಯನ್ನೂ ಕೂಡ ವಿವಕ್ಷಿಸಬೇಕು ಎಂಬ ಮತ್ತೊಂದು ಶ್ರುತಿಯು ಇದನ್ನೇ ಸ್ಪಷ್ಟಪಡಿಸುತ್ತಿದೆ. ಮತ್ತು 'ವಿಜ್ಞಾನತತ್ವಾಚ್ಚ ಮನೋ ಮನಸ್ತತ್ವಾಚ್ಚ ಖಾದಿಕಮ್' ವಿಜ್ಞಾನತತ್ವದಿಂದ ಮನಸ್ಸು, ಮನಸ್ತತ್ವದಿಂದ ಉಳಿದ ಇಂದ್ರಿಯಗಳು ಹುಟ್ಟಿದವು ಎಂಬಲ್ಲೂ ವಿಜ್ಞಾನತತ್ವದಿಂದ ಬುದ್ಧಿಯನ್ನೂ, ಮನಸ್ತತ್ವದಿಂದ ಮನಸ್ಸೆಂಬ ಇಂದ್ರಿಯವನ್ನು ವಿವಕ್ಷಿಸಲಾಗಿದೆ. 'ಸಪ್ತ ಪ್ರಾಣಾಸ್ತ್ವವಗತೇಃ ಪಂಚ ಪ್ರಾಣಾಶ್ಚ ಕರ್ಮಣಃ' ಎಂಬ ಭಾಷ್ಯದಲ್ಲಿ ಉದಾಹರಿಸಿದ ಭವಿಷ್ಯತ್‌ಪರ್ವದ ವಚನದಿಂದ ಏಳು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳೆಂದು ಒಟ್ಟು ಹನ್ನೆರಡು ಇಂದ್ರಿಯಗಳನ್ನು ಉಲ್ಲೇಖ ಮಾಡುತ್ತಿದೆ. 'ಶ್ರೋತ್ರಾದೀನಿ ತು ಪಂಚೈವ ತಥಾ ವಾಗಾದಿಪಂಚಕಮ್ ಮನೋಬುದ್ಧಿಸಹಾಯಾನಿ ದ್ವಾದಶೈವೇಂದ್ರಿಯಾಣಿ ತು' ಶ್ರೋತ್ರಾದಿ ಐದು ಜ್ಞಾನೇಂದ್ರಿಯಗಳು ವಾಗಾದಿ ಐದು ಕರ್ಮೇಂದ್ರಿಯಗಳು ಹಾಗೂ ಮನಸ್ಸು, ಬುದ್ಧಿ ಇವುಗಳನ್ನು ವಿವಕ್ಷಿಸಿ ಹನ್ನೆರಡು ಇಂದ್ರಿಯಗಳೆಂದು ಶ್ರುತಿವಾಕ್ಯವು ಸ್ಪಷ್ಟವಾಗಿ ಹೇಳುತ್ತಿದೆ.

**यद्यपि ''दशेमे पुरुषे प्राणा आत्मैकादश'' इत्यादिश्रुतिषु ''इन्द्रियाणि दशैकञ्च'' इत्यादिस्मृतिषु चैकादशत्वञ्च बुद्धिमनसोरभेदाश्रयणेनैवोच्यते ।**

ವಾಸ್ತವಿಕವಾಗಿ 'ದಶೇಮೇ ಪುರುಷೇ ಪ್ರಾಣಾ ಆತ್ಮೈಕಾದಶಃ' ಎಂಬ ಶ್ರುತಿಯಲ್ಲಿ ಹನ್ನೊಂದು ಇಂದ್ರಿಯಗಳೆಂದು ಹೇಳಲಾಗಿದೆ. 'ಇಂದ್ರಿಯಾಣಿ ದಶೈಕಂಚ' ಇತ್ಯಾದಿ ಸ್ಮೃತಿಗಳಲ್ಲೂ ಕೂಡ ಹನ್ನೊಂದೇ ಇಂದ್ರಿಯಗಳೆಂದು ಹೇಳಲಾಗಿದೆ. ಬುದ್ಧಿ ಹಾಗೂ ಮನಸ್ಸುಗಳಿಗೆ ಒಂದೇ ಗೋಲಕವಾದ್ದರಿಂದ ಎರಡಕ್ಕೂ ಅಭೇದವನ್ನು ವಿವಕ್ಷಿಸಿ ಕೆಲವೆಡೆ ಹನ್ನೊಂದು ಇಂದ್ರಿಯಗಳೆಂದು ಹೇಳಲಾಗಿದೆ.

**तथापीह सूत्रे ज्ञानेन्द्रियाणि सप्तोक्त्वा पुनः पञ्चकर्मेन्द्रियोक्तेर्भेदेन द्वादशत्वं विवक्षितम् ।**

ಆದರೂ ಕೂಡ ಪ್ರಕೃತ ಸೂತ್ರದಲ್ಲಿ ಜ್ಞಾನೇಂದ್ರಿಯಗಳು ಏಳು ಎಂಬುದಾಗಿ ಜ್ಞಾನೇಂದ್ರಿಯತ್ವ ಎಂಬ ಅವಚ್ಛೇದಕ ಧರ್ಮವನ್ನು ಆಶ್ರಯಿಸಿ ಹೇಳಲಾಗಿದೆ. ಪುನಃ ಐದು ಕರ್ಮೇಂದ್ರಿಯಗಳಲ್ಲಿ ಕರ್ಮೇಂದ್ರಿಯತ್ವ ಎಂಬ ಅವಚ್ಛೇದಕ ಧರ್ಮವನ್ನು ವಿವಕ್ಷಿಸಿ ಪ್ರತ್ಯೇಕವಾಗಿ ಹೇಳಲಾಗಿದೆ. ಆದ್ದರಿಂದ ಈ ಸೂತ್ರದಲ್ಲಿ ಇಂದ್ರಿಯಗಳು ಹನ್ನೆರಡು ಎಂದು ವಿವಕ್ಷಿಸಿದ್ದೂ ಕೂಡ ಸಾಧುವಾಗಿದೆ.

**एतेन यत्परैःसूत्रयोर्योजनान्तरमुक्तं प्राणानामेकादशत्वेऽपि सप्तैवोत्क्रामन्ति । ''सर्वे प्राणा अनूत्क्रामन्ति'' इत्यत्र सप्तानामेव गत्युक्तेः । तत्र सर्वशब्दश्रवणेऽपि ''न पश्यतीत्याहुः'' इत्यादौ ''न स्पृशति'' इत्यन्ते पूर्ववाक्ये चक्षुर्घ्राणरसनवाक्श्रोत्रमनस्स्पर्शनानामेव विशेषितत्वादिति ''सप्त'' इति सूत्रेण पूर्वपक्षिते ''दशेम'' इति वाक्ये ते यदाऽस्माच्छरीरात् मर्त्यादुत्क्रामन्ति'' इति श्रवणादेकादशाप्युत्क्रामन्तीति हस्तेति सूत्रेण सिद्धान्तितमिति तदपि निरस्तम् ।**

ಹೀಗೆ ಹೇಳಿದ್ದರಿಂದ ಅದ್ವೈತಿಗಳ ಮತ್ತೊಂದು ವ್ಯಾಖ್ಯಾನವನ್ನೂ ಕೂಡ ನಿರಾಕರಣೆ ಮಾಡಿದಂತಾಯಿತು. ಇದೇ ಸೂತ್ರಗಳಿಗೆ ಅದ್ವೈತಿಗಳ ವ್ಯಾಖ್ಯಾನಾಂತರ ಹೀಗಿದೆ – ಇಂದ್ರಿಯಗಳು ಹನ್ನೊಂದು ಆಗಿದ್ದರೂ ಕೂಡ ಏಳು ಇಂದ್ರಿಯಗಳಿಗಷ್ಟೆ ಉತ್ಕ್ರಮಣವು ಇರುತ್ತದೆ. ಏಕೆಂದರೆ 'ಸರ್ವೇ ಪ್ರಾಣಾಃ ಅನುತ್ಕ್ರಾಮಂತಿ' ಎಂಬ ಶ್ರುತಿಯು ಏಳಕ್ಕೆ ಮಾತ್ರ ಗತಿಯನ್ನು ಹೇಳುತ್ತಿದೆ. ಈ ಶ್ರುತಿಯಲ್ಲಿ ಸರ್ವಶಬ್ದವು ಎಲ್ಲಾ ಇಂದ್ರಿಯಗಳಿಗೂ ಗಮನವನ್ನು ಹೇಳುತ್ತಿದೆ ಎಂದು ಕಾಣಬಹುದು. ಆದರೆ 'ನ ಪಶ್ಯತಿ ಇತ್ಯಾಹುಃ' ಎಂಬಲ್ಲಿಂದ ಪ್ರಾರಂಭ ಮಾಡಿ 'ನ ಸ್ಪೃಶತಿ' ಎಂಬಲ್ಲಿಯ ತನಕ ಪೂರ್ವವಾಕ್ಯದಲ್ಲಿ ಚಕ್ಷುರಿಂದ್ರಿಯ, ಘ್ರಾಣೇಂದ್ರಿಯ, ರಸನೇಂದ್ರಿಯ, ವಾಗಿಂದ್ರಿಯ, ಶ್ರೋತ್ರೇಂದ್ರಿಯ, ಮನೋ ಇಂದ್ರಿಯ ಹಾಗೂ ಸ್ಪರ್ಶೇಂದ್ರಿಯವನ್ನು ಮಾತ್ರ ವಿವಕ್ಷಿಸಲಾಗಿದೆ. ಆದ್ದರಿಂದ ಸರ್ವಪದಕ್ಕೆ ಏಳು ಇಂದ್ರಿಯಗಳಲ್ಲಷ್ಟೇ ಸಂಕೋಚ ಮಾಡಬೇಕು. ಹೀಗೆ 'ಸಪ್ತಗತೇಃ' ಎಂಬ ಸೂತ್ರದಿಂದ ಪೂರ್ವಪಕ್ಷವನ್ನು ಮಾಡಲಾಗಿದೆ.

'ದಶೇಮೇ' ಇತ್ಯಾದಿ ವಾಕ್ಯದಲ್ಲಿ ಯಾವಾಗ ಶರೀರದಿಂದ ಇಂದ್ರಿಯಗಳು ಉತ್ಕ್ರಮಣ ಮಾಡುತ್ತವೋ ಎಂದು ಹೇಳಲಾಗಿದೆ. ಇಲ್ಲಿ ಮೊದಲು 'ದಶೇಮೇ ಪುರುಷೇ' ಎಂಬ ವಾಕ್ಯದಲ್ಲಿ ಹನ್ನೊಂದು ಇಂದ್ರಿಯಗಳನ್ನು ಉಲ್ಲೇಖ ಮಾಡಿ ಮರ್ತ್ಯವಾದ ಈ ಶರೀರದಿಂದ ಉತ್ಕ್ರಮಣವನ್ನು ಮಾಡುತ್ತವೆ ಎಂದು ಸ್ಪಷ್ಟವಾಗಿ ಹೇಳಲಾಗಿದೆ. ಆದ್ದರಿಂದ ಹನ್ನೊಂದು ಇಂದ್ರಿಯಗಳಿಗೂ ಕೂಡ ಉತ್ಕ್ರಮಣವು ಇರುತ್ತದೆ. ಈ ವ್ಯಾಖ್ಯಾನವೂ ಕೂಡ ಈಗ ನಿರಸ್ತವಾಯಿತು.

ಸಪ್ತಗತ್ಯಧಿಕರಣ (೨-೪-೪)

**उक्तरीत्या ''सप्त'' इति सूत्रस्याध्याहारं विनैव सिद्धान्तत्वसम्भव उत्क्रामन्तीत्यध्याहारायोगात् । पूर्ववाक्येनान्यपरेण पूर्वपक्षायोगाच्च ।**

ಹಿಂದೆ ನಾವು ಹೇಳಿದಂತೆ 'ಸಪ್ತಗತೇಃ' ಎಂಬ ಸೂತ್ರದಲ್ಲಿ ಅಧ್ಯಾಹಾರವಿಲ್ಲದೇ ಸಿದ್ಧಾಂತ ಮಾಡಲು ಬರುವುದರಿಂದ 'ಉತ್ಕ್ರಾಮಂತಿ' ಎಂಬುದನ್ನು ಅಧ್ಯಾಹಾರ ಮಾಡಿದ್ದು ಅಯುಕ್ತವಾಗಿದೆ. ನಮ್ಮ ಸಿದ್ಧಾಂತದಲ್ಲಿ 'ಪ್ರಾಣಾಃ' ಎಂಬುದು ಹಿಂದಿನ ಸೂತ್ರದಿಂದ ಅನುಗತವಾಗುತ್ತಿರುವುದರಿಂದ ಯಾವುದೇ ಪದಗಳ ಅಧ್ಯಾಹಾರವನ್ನು ಮಾಡಿರುವುದಿಲ್ಲ. ಮತ್ತು 'ನ ಪಶ್ಯತಿ ಇತ್ಯಾಹುಃ' ಇತ್ಯಾದಿ ಪೂರ್ವವಾಕ್ಯವು ಸುಷುಪ್ತಿಯ ಬಗ್ಗೆ ಹೇಳಲು ಹೊರಟಿದೆ. ಇದಕ್ಕೆ ಅನ್ಯಾರ್ಥವನ್ನು ವಿವಕ್ಷಿಸಿ ಪೂರ್ವಪಕ್ಷ ಮಾಡಿದ್ದು ತಪ್ಪು.

**एतेन यत्कैश्चिदुक्तं सप्तैव प्राणाः । ''येषु चरन्ति प्राणा गुहाशयां निहिताःसप्त सप्त'' इति श्रुतौ सप्तानामेव गत्युक्तेरित्याद्यसूत्रेण पूर्वपक्षिते हस्तेति सिद्धान्तितमिति तन्निरस्तम् । उत्तरसूत्रे स्थितपदवैयर्थ्यात् ।।**

## ।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् सप्तगत्यधिकरणं सम्पूर्णम् ।।४।।

ಹೀಗೆ ಹೇಳಿದ್ದರಿಂದ ರಾಮಾನುಜರ ವ್ಯಾಖ್ಯಾನವನ್ನು ನಿರಾಕರಣೆ ಮಾಡಿದಂತಾಯಿತು. ಅವರು ಹೀಗೆ ಹೇಳುತ್ತಾರೆ– ಇಂದ್ರಿಯಗಳು ಏಳು ಮಾತ್ರ, ಹನ್ನೊಂದಲ್ಲ. ಏಕೆಂದರೆ 'ಯೇಷು ಚರಂತಿ ಪ್ರಾಣಾಃ ಗುಹಾಶಯಾಂ ನಿಹಿತಃ ಸಪ್ತ ಸಪ್ತ' ಎಂಬ ಶ್ರುತಿಯು ಏಳು ಇಂದ್ರಿಯಗಳಿಗಷ್ಟೆ ಗಮನವನ್ನು ಹೇಳುತ್ತಿದೆ. ಹೀಗೆ 'ಸಪ್ತಗತಿ' ಎಂಬ ಮೊದಲನೇ ಸೂತ್ರವು ಪೂರ್ವಪಕ್ಷವನ್ನು ಸ್ಥಾಪನೆ ಮಾಡುತ್ತಿದೆ. 'ಹಸ್ತಾದಯಸ್ತು' ಎಂಬ ಮುಂದಿನ ಸೂತ್ರವು ಹನ್ನೊಂದು ಇಂದ್ರಿಯಗಳೆಂದು ಸಿದ್ಧಾಂತ ಮಾಡುತ್ತಿದೆ ಎಂದು. ಇದೂ ಕೂಡ ಅದ್ವೈತ ಮತದ ನಿರಾಕರಣೆಯಿಂದಲೇ ನಿರಾಕೃತವಾಯಿತು. ಹಾಗೂ ಮುಂದಿನ ಸೂತ್ರದಲ್ಲಿ ಸ್ಥಿತಪದಕ್ಕೆ ವೈಯರ್ಥ್ಯದೋಷವು ಬರುತ್ತದೆ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಸಪ್ತಗತ್ಯಧಿಕರಣವು ಸಂಪೂರ್ಣವಾಯಿತು

ಪರಿಪೂರ್ಣಚಂದ್ರಿಕಾ

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**सप्तगतेः** ।। **उत्पत्तिरिति** ।। श्रुतौ ''सप्त प्राणाः प्रभवन्ति'' इति प्रभवशब्दश्रवणात्प्राणास्सप्त जायन्तेऽथ द्वादशेति चिन्त्यत इत्यर्थः ।

'ಉತ್ಪತ್ತಿಃ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ – ಹಿಂದಿನ ಅಧಿಕರಣದಲ್ಲಿ ಇಂದ್ರಿಯಗಳ ಉತ್ಪತ್ತಿಯ ಬಗ್ಗೆ ವಿಚಾರ ಮಾಡಿದ್ದಾಯಿತು. ಈಗ ಸಂಖ್ಯೆ ಬಗ್ಗೆ ಏಕೆ ವಿಚಾರ ಮಾಡಬೇಕು? ಮುಂದಿನ ಅಧಿಕರಣಗಳಲ್ಲಿ ಮಾಡುವ ವಿಚಾರವನ್ನೇಕೆ ಇಲ್ಲಿ ಮಾಡುತ್ತಿಲ್ಲ? ಎಂಬ ಪ್ರಶ್ನೆಗೆ ಈ ವಾಕ್ಯದಲ್ಲಿ ಉತ್ತರಿಸುತ್ತಿದ್ದಾರೆ. 'ಸಪ್ತ ಪ್ರಾಣಾಃ ಪ್ರಭವಂತಿ' ಎಂಬುದು ಶ್ರುತಿವಾಕ್ಯ. ಏಳು ಇಂದ್ರಿಯಗಳು ಹುಟ್ಟಿದವು ಎಂದು ಇದು ಹೇಳುತ್ತಿದೆ. ಹುಟ್ಟುವಿಕೆಯ ಜೊತೆಗೆ ಸಪ್ತತ್ವವು ವಿಶೇಷವಾಗಿ ಶ್ರುತವಾಗಿರುವುದರಿಂದ ಸಂಖ್ಯಾವಿಚಾರವೇ ಬುದ್ಧಿಯಲ್ಲಿ ಪ್ರಸಕ್ತವಾಗುತ್ತದೆ. ಏಕೆಂದರೆ ಮತ್ತೊಂದು ಶ್ರುತಿ ದ್ವಾದಶ ಇಂದ್ರಿಯಗಳು ಹುಟ್ಟಿದವು ಎನ್ನುತ್ತಿದೆ. ಆದ್ದರಿಂದ ಇಂದ್ರಿಯಗಳ ಧರ್ಮಿಯ ವಿಚಾರವನ್ನು ಮಾಡಿದ ಕೂಡಲೇ ಧರ್ಮವಿಚಾರವು ಪ್ರಸಕ್ತವಾದಾಗ ಸಂಖ್ಯಾವಿಚಾರ ಮಾಡುವುದೇ ಸಂಗತವಾಗುತ್ತದೆ. ಹೀಗೆ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಇರುವ ಸಂಗತಿಯನ್ನು ತಿಳಿಯತಕ್ಕದ್ದು.

**प्रकाशः –** पूर्वोत्तरपक्षटीकासूचिताश्चिन्ता आह – **अत्रेति** ।। स्पष्टश्चिन्ताग्रन्थः फलफलिभावश्च । टीकाक्षरार्थमाह – **सोमस्येति** ।। पात्रविशेषाः उलूखलाकाराः ।

ಪೂರ್ವಪಕ್ಷ ಹಾಗೂ ಸಿದ್ಧಾಂತ ಪಕ್ಷದ ಟೀಕೆಯಿಂದ ಸೂಚಿತವಾದ ಸಂಶಯ ಪರಂಪರೆಯನ್ನು 'ಅತ್ರ' ಇತ್ಯಾದಿ ಗ್ರಂಥದಿಂದ ಪ್ರತಿಪಾದನೆ ಮಾಡುತ್ತಿದ್ದಾರೆ. ಸಂಶಯ ಗ್ರಂಥ ಹಾಗೂ ಪೂರ್ವಪಕ್ಷದ ಫಲ, ಸಿದ್ಧಾಂತ ಪಕ್ಷದ ಫಲವು ಸ್ಪಷ್ಟವಾಗಿರುವುದರಿಂದ ಅದನ್ನು ನಾವು ವಿವರಿಸುವುದಿಲ್ಲ. ಟೀಕೆಯ ಕಠಿಣ ಪದಾರ್ಥವನ್ನು 'ಸೋಮಸ್ಯ' ಇತ್ಯಾದಿಯಾಗಿ ನಿರೂಪಣೆ ಮಾಡುತ್ತಿದ್ದಾರೆ. 'ಪಾತ್ರವಿಶೇಷಾಃ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಈ ಎಲ್ಲಾ ಪಾತ್ರೆಗಳು ಒರಳಿನ ಆಕಾರದಲ್ಲಿ ಇರುತ್ತವೆ.

**प्रकाशः –** ''अग्निर्देवतेत्युपांशु पात्रमासादयति ।। सोमो देवतेत्युत्तरमन्तर्यामस्य। तं परेण प्रत्यञ्चि द्विदैवत्यपात्राणि । इन्द्रो देवतेत्यैन्द्रवायवस्य । बृहस्पतिर्देवतेति मैत्रावरुणस्य । अश्विनौ देवतेत्याश्विनस्य। तान्यपरेण शुक्रामन्थिनोः पात्रे । ते अपरेण ऋतुपात्रे । स्थाल्यावन्तरेण त्रीण्युदञ्चतिग्राह्यपात्राणि । आग्रेयमैन्द्रं सौर्यम्'' इति पात्राणामासादन- क्रमोक्तयनुरोधेनाह – **उपांश्वन्तर्यामेति** ।।

ಹನ್ನೆರಡು ಪಾತ್ರೆಗಳ ವಿವರಣೆ ಹೀಗಿದೆ– ಮೊದಲನೆಯ ಉಪಾಂಶು ಪಾತ್ರೆಯನ್ನು 'ಅಗ್ನಿರ್ದೇವತಾ' ಎಂಬುದಾಗಿ ಮೆಲ್ಲಗೆ ಹೇಳಿಕೊಂಡು ಇಡಬೇಕು. ಆದ್ದರಿಂದಲೇ ಇದಕ್ಕೆ ಉಪಾಂಶು ಪಾತ್ರೆ ಎನ್ನುತ್ತಾರೆ. ಎರಡನೆಯ ಅಂತರ್ಯಾಮ ಎಂಬ ಪಾತ್ರೆಯನ್ನು 'ಸೋಮೋ ದೇವತಾ' ಎಂಬುದಾಗಿ ಗಟ್ಟಿಯಾಗಿ ಹೇಳಿಯೇ

ಇಡಬೇಕು. ಈ ಅಂತರ್ಯಾಮ ಪಾತ್ರವನ್ನು ಉತ್ತರದಿಕ್ಕಿನಲ್ಲಿ ಇಡಬೇಕು. ಈ ಪಾತ್ರೆಯ ದಕ್ಷಿಣದಲ್ಲಿ ದ್ವಿದೈವತ್ಯವಾದ ಮೂರು ಪಾತ್ರೆಗಳನ್ನು ಇಡಬೇಕು. ಐಂದ್ರವಾಯವ, ಮೈತ್ರಾವರುಣ, ಆಶ್ವಿನ ಎಂಬುದು ಈ ಮೂರು ಪಾತ್ರೆಗಳ ಹೆಸರು. ಮೊದಲನೆಯದಕ್ಕೆ ಇಂದ್ರನು ದೇವತೆ, ಎರಡನೆಯದಕ್ಕೆ ಬೃಹಸ್ಪತಿಯು ದೇವತೆ, ಮೂರನೆಯದಕ್ಕೆ ಅಶ್ವಿನಿದೇವತೆಗಳು ದೇವತೆಗಳಾಗಿದ್ದಾರೆ. ಇದರ ಪಶ್ಚಿಮದಲ್ಲಿ ಶುಕ್ರ ಹಾಗೂ ಮಂಥಿದೇವತಾಕವಾದ ಎರಡು ಪಾತ್ರೆಗಳನ್ನು ಇಡಬೇಕು. ಅದರ ಪಶ್ಚಿಮದಲ್ಲಿ ಎರಡು ಋತುಪಾತ್ರೆಗಳನ್ನು ಇಡಬೇಕು. ಅದರ ಉತ್ತರದಲ್ಲಿ ಎರಡು ಸ್ಥಾಲಿಪಾತ್ರೆಗಳನ್ನು ಇಡಬೇಕು. ಅದರ ಉತ್ತರದಿಕ್ಕಿನಲ್ಲಿ ಮೂರು ಪಾತ್ರೆಗಳನ್ನು ಇಡಬೇಕು. ಸ್ಥಾಲೀ, ಆಗ್ನೇಯ, ಐಂದ್ರ, ಸೂರ್ಯ ಎಂಬುದು ಆ ಮೂರು ಪಾತ್ರೆಗಳ ಹೆಸರಾಗಿದೆ. ಹೀಗೆ ಪಾತ್ರೆಗಳ ಆಸಾದನಕ್ರಮಕ್ಕೆ ಅನುಗುಣವಾಗಿಯೇ ಗ್ರಂಥದಲ್ಲಿ 'ಉಪಾಶು, ಅಂತರ್ಯಾಮ' ಇತ್ಯಾದಿಯಾಗಿ ಹೇಳಿದ್ದಾರೆ.

**प्रकाशः** – शुक्रश्च मन्थी च शुक्रामन्थिनौ । ''देवताद्वन्द्वे च'' इति स्मरणात्। तयोर्द्वौ पात्रविशेषावित्यर्थः । अंश्वदाभ्यौ । अंशुनामकादाभ्यनामकावित्यर्थः ।।

'ಶುಕ್ರಶ್ಚ ಮಂಥೀ ಚ ಶುಕ್ರಾಮಂಥಿನೌ' ಎಂಬ ವಿಗ್ರಹವನ್ನು ತಿಳಿಯಬೇಕು. 'ದೇವತಾವಾಚಕವಾದ ದ್ವಂದ್ವ ಸಮಾಸದಲ್ಲಿ ಪೂರ್ವಪದದ ಮುಂದೆ ದೀರ್ಘ ಬಂದು 'ಶುಕ್ರಾಮಂಥಿನೌ' ಎಂಬ ರೂಪವಾಗಿದೆ. 'ದೇವತಾದ್ವಂದ್ವೇ ಚ' ಎಂಬ ಸೂತ್ರವು ಇದನ್ನು ಹೇಳುತ್ತದೆ. ಶುಕ್ರ ಮತ್ತು ಮಂಥಿ ಎಂಬುದು ಪಾತ್ರೆಗಳ ಹೆಸರಾಗಿವೆ. 'ಅಂಶ್ವದಾಭ್ಯೌ' ಎಂಬಲ್ಲಿ ಅಂಶು ಹಾಗೂ ದಾಭ್ಯ ಎಂಬುದಾಗಿ ಪದಚ್ಛೇದವನ್ನು ಮಾಡಬೇಕು.

**प्रकाशः** – **अनित्यत्वादिति** ।। ''काम्यावितरौ'' इत्युक्तेरिति भावः ।।

ಅಂಶು ಹಾಗೂ ದಾಭ್ಯ ಎಂಬೆರಡು ಕೊನೆ ಪಾತ್ರೆಗಳು ಅನಿತ್ಯವಾಗಿವೆ ಎಂದು ಗ್ರಂಥದಲ್ಲಿ ಹೇಳಿದ್ದಾರೆ. 'ಕಾಮ್ಯಾವಿತರೌ' ಎಂದು ಹೇಳಿದ್ದರಿಂದ ಇವೆರಡು ಪಾತ್ರೆಗಳನ್ನು ಇಡಬಹುದು ಅಥವಾ ಇಡದೇ ಇರಬಹುದು ಎಂಬುದು ಇದರ ಅಭಿಪ್ರಾಯ.

**प्रकाशः** – **विशेषितत्वाच्चेति** ।। शीर्षण्या इत्यनेन ''ये शीर्षण्याः शिरः स्थितास्सप्त ते प्राणा'' इति शीर्षण्यत्वेन प्राणत्वोक्त्या हस्तादीनामप्राणत्वावगमादिति भावः । अत इत्यस्य प्रतिपदमस्मिन्निति । तस्यार्थः प्राणानामिति ।।

'ವಿಶೇಷಿತತ್ವಾಚ್ಚ' ಎಂಬುದರ ಅಭಿಪ್ರಾಯ ಹೀಗಿದೆ – 'ಶೀರ್ಷಣ್ಯಾಃ' ಎಂಬ ವಿಶೇಷಣವನ್ನು ನೀಡಿದ್ದರಿಂದ ಹಸ್ತ, ಪಾದ ಮೊದಲಾದ ಕರ್ಮೇಂದ್ರಿಯಗಳನ್ನು ವಿವಕ್ಷಿಸಬಾರದೆಂದು ತಿಳಿಯುತ್ತದೆ. ಏಕೆಂದರೆ 'ಯೇ ಶೀರ್ಷಣ್ಯಾಃ ಶಿರಃ ಸ್ಥಿತಾಃ ಸಪ್ತ ತೇ ಪ್ರಾಣಾಃ' ಎಂಬುದಾಗಿ ತಲೆಯಲ್ಲಿ ಇರುವ ಇಂದ್ರಿಯಗಳನ್ನಷ್ಟೇ ಪ್ರಾಣ ಪದದಿಂದ ಶ್ರುತಿಯು ಹೇಳುತ್ತಿದೆ. ಹಸ್ತ ಪಾದಾದಿಗಳು ತಲೆಯಲ್ಲಿ ಇಲ್ಲದ್ದರಿಂದ ಇವುಗಳನ್ನು ವಿವಕ್ಷಿಸಬಾರದು.

ಸೂತ್ರದಲ್ಲಿರುವ 'ಅತಃ' ಎಂಬುದು 'ಅಸ್ಮಿನ್' ಎಂಬುದರ ಪ್ರತಿಪದವಾಗಿದೆ. ಇದರ ಅರ್ಥವನ್ನು 'ಪ್ರಾಣಾನಾಂ' ಎಂದು ಹೇಳಿದ್ದಾರೆ.

**प्रकाशः** – **श्रौतावगतीति** ।। श्रुतिसिद्धसप्तत्वावगतिवाचिनेत्यर्थः । श्रौतावगतेरित्यस्याप्येवमर्थः । विशेषित्वहेतोस्सप्तत्वासाधकत्वं चाह – **किञ्चेति**।। **द्वाववाञ्चाविति** ।। अवांचौ पायूपस्थौ द्वौ प्राणावित्यर्थः । तेषु इन्द्रियेष्वित्यर्थः । स तु सप्तत्वनियमस्तेष्वयुक्त इति भावः ।

'ಶ್ರೌತಾವಗತಿ' ಎಂದರೆ ಶ್ರುತಿಸಿದ್ಧವಾದ ಪ್ರಮೇಯದ ಅವಗತಿ ಎಂದರ್ಥ. ಶ್ರೌತಾವಗತೇಃ' ಎಂಬಲ್ಲಿಯೂ ಕೂಡ ಇದೇ ಅರ್ಥವನ್ನೇ ವಿವಕ್ಷಿಸಬೇಕು. 'ವಿಶೇಷಿತತ್ವಾತ್' ಎಂಬ ಹೇತುವು ಸಪ್ತತ್ವಸಾಧಕವೂ ಕೂಡ ಆಗುವುದಿಲ್ಲ ಎಂಬುದನ್ನು 'ಕಿಂಚ' ಇತ್ಯಾದಿ ಗ್ರಂಥದಿಂದ ಪ್ರತಿಪಾದನೆ ಮಾಡುತ್ತಿದ್ದಾರೆ. ಏಕೆಂದರೆ 'ಸಪ್ತ ಪ್ರಾಣಾಃ' ಎಂಬ ಶ್ರುತಿಗೆ ಸಮಾಖ್ಯಾ ಶ್ರುತಿ ಎನಿಸಿದ ಶ್ರುತಿಯಲ್ಲಿ ಪಾಯು ಹಾಗೂ ಉಪಸ್ಥ ಇಂದ್ರಿಯಗಳಿಗೂ ಕೂಡ 'ಅವಾಂಚೌ' ಎಂಬುದಾಗಿ ವಿವಕ್ಷಿಸಿ ಇವೆರಡು ಪ್ರಾಣ ಶಬ್ದದಿಂದ ಪ್ರತಿಪಾದ್ಯವಾದುದೆಂದು ಹೇಳಲಾಗಿದೆ. ಆದ್ದರಿಂದ ಒಂಭತ್ತು ಪ್ರಾಣಗಳೆಂದೇ ಹೇಳಬೇಕು, ಏಳು ಪ್ರಾಣಗಳೆಂದು ನೀನು ಪೂರ್ವಪಕ್ಷ ಮಾಡಿದ್ದೇ ತಪ್ಪಾಯಿತು. 'ತೇಷು' ಎಂದರೆ ಇಂದ್ರಿಯಗಳಲ್ಲಿ ಎಂದರ್ಥ. ಸಪ್ತತ್ವ ನಿಯಮವು ಇಂದ್ರಿಯದ ಗೋಲಕಗಳಲ್ಲಿ ಅಯುಕ್ತವಾಗಿದೆ ಎಂದಭಿಪ್ರಾಯ.

**ಪ್ರಕಾಶಃ** – भामत्युक्तसप्तत्वप्रकारमनूद्य निराह – न चेति ।। व्यर्थ इति ।। अनुवादे प्रयोजनाभावादिति भावः ।

ಭಾಮತಿಯಲ್ಲಿ ಹೇಳಲ್ಪಟ್ಟ ಸಪ್ತತ್ವ ಪ್ರಕಾರವನ್ನು ಅನುವಾದ ಮಾಡಿ 'ನ ಚ' ಇತ್ಯಾದಿ ಗ್ರಂಥದಿಂದ ನಿರಾಕರಣೆ ಮಾಡುತ್ತಿದ್ದಾರೆ. ವ್ಯರ್ಥಃ ಎಂದರೆ ಇಂದ್ರಿಯಗಳಲ್ಲಿ ಏಕಾದಶತ್ವ ನಿರ್ಣತವಾದಾಗ ಎಂಬ ಅನುವಾದವನ್ನು ಸೂತ್ರದಲ್ಲಿ ಮಾಡಲು ಯಾವುದೇ ಪ್ರಯೋಜನವಿಲ್ಲ ಎಂದಭಿಪ್ರಾಯ. ಮತ್ತು ಹನ್ನೊಂದು ಇಂದ್ರಿಯಗಳೆಂದು ನೀವು ಸಿದ್ಧಾಂತ ಮಾಡಿದ್ದು ಶ್ರುತಿವಿರುದ್ಧವಾಗಿದೆ ಎಂಬುದನ್ನು 'ಗೀಯತೇ' ಇತ್ಯಾದಿ ಗ್ರಂಥದಿಂದ ಪ್ರತಿಪಾದನೆ ಮಾಡಿದ್ದಾರೆ.

**ಪ್ರಕಾಶಃ** – एकादशत्वेन सिद्धान्तः श्रुतिविरुद्धश्चेत्याह – गीयते चेति ।। इन्द्रियेभ्य इत्युक्तदशेन्द्रियेभ्योऽन्ययोर्मनोबुद्ध्योरप्याम्नानादिति भावः ।

ಹನ್ನೊಂದು ಇಂದ್ರಿಯಗಳು ಎಂಬ ಸಿದ್ಧಾಂತ ಮಾಡಿದ್ದು ಶ್ರುತಿವಿರುದ್ಧವಾಗಿದೆ ಎಂಬುದನ್ನು ಗ್ರಂಥದಲ್ಲಿ 'ಗೀಯತೇ ಚ' ಎಂಬುದಾಗಿ ಪ್ರತಿಪಾದನೆ ಮಾಡುತ್ತಿದ್ದಾರೆ. 'ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ' ಎಂಬ ಕಾಠಕೋಪನಿಷತ್ತಿನ ಮಾತಿನಲ್ಲಿ ಮನಸ್ಸು ಹಾಗೂ ಬುದ್ಧಿಗಳೆರಡನ್ನೂ ಪ್ರತ್ಯೇಕವಾಗಿ ಹೇಳಿದ್ದರಿಂದ ಒಟ್ಟು ಹನ್ನೆರಡು ಇಂದ್ರಿಯಗಳೆಂದು ಸ್ಪಷ್ಟವಾಗುತ್ತದೆ.

**ಪ್ರಕಾಶಃ** – यद्वा मन्मतं सप्तत्वद्वादशत्वरूपविवक्षाद्वयमपि श्रुत्यादिप्रसिद्धमिति भावेन सप्तत्वे द्वादशत्वे च काठकादिवाक्यान्युदाहरति ।। इन्द्रियेभ्य इत्यादिना ।।

ವಾಸ್ತವಿಕವಾಗಿ ಈ ಕಾಠಕದ ಮಾತಿನಲ್ಲಿ ಹನ್ನೆರಡು ಇಂದ್ರಿಯಗಳೆಂದು ಹೇಳಿರುವುದಿಲ್ಲ. ಆದರೆ ನಮ್ಮ ಸಿದ್ಧಾಂತದಲ್ಲಿ ಇಂದ್ರಿಯಗಳಲ್ಲಿ ಸಪ್ತತ್ವ ಸಂಖ್ಯೆ ಜ್ಞಾನೇಂದ್ರಿಯದ ದೃಷ್ಟಿಯಿಂದ ಸಾಧುವಾಗುತ್ತದೆ. ಸಕಲೇಂದ್ರಿಯ ದೃಷ್ಟಿಯಿಂದ ದ್ವಾದಶತ್ವ ಎಂಬ ಸಂಖ್ಯೆಯೂ ಕೂಡ ಸಾಧುವಾಗುತ್ತದೆ. ಹೀಗೆ ಸಪ್ತತ್ವ, ದ್ವಾದಶತ್ವಗಳೆಂಬ ಎರಡೂ ಸಂಖ್ಯೆಯೂ ಯುಕ್ತವಾಗುತ್ತದೆಂಬುದನ್ನು ತಿಳಿಸಲು ಈ ಕಾಠಕವಾಕ್ಯವನ್ನು ಉದಾಹರಿಸಲಾಗಿದೆ.

**ಪ್ರಕಾಶಃ** – द्वादशत्वमिति सप्तत्वं चेत्यपि ध्येयम् । इन्द्रियेभ्यः चक्षुरादिपञ्चेन्द्रियेभ्य इत्यर्थः । इन्द्रियाणि चक्षुरादीनि पञ्चेत्यर्थः । इन्द्रियाणीति वाक्यान्तरम् । अस्य बुद्धिं त्वित्यर्धादुत्तरपादत्वेऽप्यर्थबोधसौकर्याय पूर्वमुक्तिः ।

ಗ್ರಂಥದಲ್ಲಿ 'ದ್ವಾದಶತ್ವಂ' ಎಂದು ಹೇಳಿದ್ದು ಸಪ್ತತ್ವಕ್ಕೆ ಉಪಲಕ್ಷಣವಾಗಿದೆ ಎಂದು ತಿಳಿಯಬೇಕು. 'ಇಂದ್ರಿಯೇಭ್ಯಃ' ಎಂಬ ಪದಕ್ಕೆ ಚಕ್ಷುರಾದಿ ಜ್ಞಾನೇಂದ್ರಿಯಗಳಿಗಿಂತ ಎಂದರ್ಥ. 'ಇಂದ್ರಿಯಾಣಿ' ಎಂಬ ಪದಕ್ಕೆ

ಚಕ್ಷುರಾದಿ ಐದು ಜ್ಞಾನೇಂದ್ರಿಯಗಳು ಎಂದರ್ಥ. 'ಇಂದ್ರಿಯಾಣಿ ಹಯಾನಾಹುಃ' ಎಂಬುದು ಬೇರೆ ಶ್ರುತಿಯ ವಾಕ್ಯವಾಗಿದೆ. 'ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ' ಎಂಬ ವಾಕ್ಯವು ಅನಂತರದಲ್ಲಿದ್ದರೂ ಬುದ್ಧಿಯ ಸೌಕರ್ಯಕ್ಕೋಸ್ಕರ ಮೊದಲೇ ಗ್ರಂಥಕಾರರು ನಿವೇಶ ಮಾಡಿದ್ದಾರೆ.

**प्रकाशः** – श्रुत्यन्तरं यदेति । ज्ञानानि ज्ञानसाधनानि । द्वादश वा इति भाष्योक्तश्रुतिः । द्वादशैवेन्द्रियाणीति तु ''त इन्द्रियाणि'' इत्यत्र भाष्योक्ता । विज्ञानेति स्मृतिः ''अन्तर'' इत्यत्र भाष्योक्ता । खादिकं इन्द्रियादिकमित्यर्थः ।

ಮತ್ತೊಂದು ಶ್ರುತಿಯನ್ನು 'ಯದಾ' ಎಂಬುದರಿಂದ ಉಲ್ಲೇಖ ಮಾಡುತ್ತಿದ್ದಾರೆ. 'ಜ್ಞಾನಾನಿ' ಎಂಬ ಪದಕ್ಕೆ ಜ್ಞಾನಸಾಧನಗಳು ಎಂದರ್ಥ. 'ದ್ವಾದಶ ವಾ' ಎಂಬ ಶ್ರುತಿಯನ್ನು ಇದೇ ಅಧಿಕರಣದ ಭಾಷ್ಯದಲ್ಲಿ ಉಲ್ಲೇಖ ಮಾಡಿದ್ದಾರೆ. 'ದ್ವಾದಶೈವ ಇಂದ್ರಿಯಾಣಿ' ಎಂಬ ಶ್ರುತಿಯನ್ನು 'ತ ಇಂದ್ರಿಯಾಣಿ' ಇತ್ಯಾದಿಯಾಗಿ ಮುಂದೆ ಬರುವ ಅಧಿಕರಣ ಭಾಷ್ಯದಲ್ಲಿ ಉದಾಹರಿಸುತ್ತಾರೆ. 'ವಿಜ್ಞಾನತತ್ವಾಚ್ಚ' ಎಂಬ ಶ್ರುತಿವಾಕ್ಯವನ್ನು 'ಅಂತರಾ ವಿಜ್ಞಾನಮನಸೀ ಕ್ರಮೇಣ' ಎಂಬ ಸೂತ್ರದ ಭಾಷ್ಯದಲ್ಲಿ ಹಿಂದೆ ಉದಾಹರಿಸಿದ್ದಾರೆ. 'ಖಾದಿಕಂ' ಎಂಬುದಕ್ಕೆ ಆಕಾಶಾದಿಗಳು ಎಂದರ್ಥ ಮಾಡಬಾರದು, ಇಂದ್ರಿಯಾದಿಗಳು ಎಂದು ಅರ್ಥ ಮಾಡಬೇಕು.

**प्रकाशः** – सप्तेति स्मृतिरत्रैव भाष्योक्ता । श्रोत्रादीनि त्विति तु ''त इन्द्रियाणि'' इत्यत्र भाष्योक्ता । स्मृतिष्वित्यस्य गीयते चेति पूर्वेणान्वयः ।

'ಸಪ್ತ ಪ್ರಾಣಾಃ' ಎಂಬ ಸ್ಮೃತಿವಾಕ್ಯವನ್ನು ಇದೇ ಅಧಿಕರಣದ ಭಾಷ್ಯದಲ್ಲಿ ಉದಾಹರಿಸಿದ್ದಾರೆ. 'ಶ್ರೋತ್ರಾದೀನಿ ತು ಪಂಚೈವ' ಎಂಬುದನ್ನು 'ತ ಇಂದ್ರಿಯಾಣಿ' ಎಂಬ ಸೂತ್ರದ ಭಾಷ್ಯದಲ್ಲಿ ಮುಂದೆ ಉದಾಹರಿಸುತ್ತಾರೆ. 'ಸ್ಮೃತಿಷು' ಎಂಬುದಕ್ಕೆ 'ಗೀಯತೇ' ಎಂಬ ಹಿಂದೆ ಇರುವ ಕ್ರಿಯಾಪದದ ಜೊತೆ ಅನ್ವಯವನ್ನು ತಿಳಿಯಬೇಕು.

**प्रकाशः** – यद्वा परभाष्यादौ यत्सप्तत्वप्रत्याख्यानेनैकादशत्वोक्त्या सिद्धान्तकरणं तदुभयमप्ययुक्तम् । सप्तेन्द्रियपक्षस्य द्वादशेन्द्रियपक्षस्य च श्रुत्यादावभिधानादिति भावेन ''गीयते च'' इत्यादिना श्रुत्याद्युक्तिरुभयत्रेति बोध्यम् ।

ಅಥವಾ ಪರಭಾಷ್ಯದಲ್ಲಿ ಇಂದ್ರಿಯಗಳಲ್ಲಿ ಸಪ್ತತ್ವ ಸಂಖ್ಯೆಯನ್ನು ನಿರಾಕರಣೆ ಮಾಡಿ ಏಕಾದಶತ್ವವನ್ನು ಸಮರ್ಥನೆ ಮಾಡಿದ್ದಾರೆ. ಇದೆರಡೂ ಕೂಡ ತಪ್ಪು. ಇಂದ್ರಿಯಗಳಲ್ಲಿ ಸಪ್ತತ್ವ ಸಂಖ್ಯೆಯನ್ನು ನಿರಾಕರಣೆ ಮಾಡಿದ್ದು ತಪ್ಪು. ಏಕೆಂದರೆ ಸಪ್ತತ್ವ ಸಂಖ್ಯೆ ಇದೆ ಎಂದು ವಿವಕ್ಷಾಭೇದದಿಂದ ನಾವು ಪ್ರತಿಪಾದನೆ ಮಾಡಿದ್ದೇವೆ. ಅದರಂತೆ ಏಕಾದಶತ್ವವನ್ನು ನಿರಾಕರಣೆ ಮಾಡಿದ್ದೂ ಕೂಡ ತಪ್ಪು. ಏಕೆಂದರೆ ಇಂದ್ರಿಯಗಳಲ್ಲಿ ದ್ವಾದಶತ್ವವೆಂಬ ಸಂಖ್ಯೆಯು ಶ್ರುತಿಯಿಂದ ಸಿದ್ಧವಾಗಿದೆ. ಈ ಅಭಿಪ್ರಾಯದಿಂದ 'ಗೀಯತೇ ಚ' ಇತ್ಯಾದಿಯಾಗಿ ಶ್ರುತಿಸ್ಮೃತಿಗಳ ಆಧಾರವನ್ನು ಎರಡು ವಿಷಯದಲ್ಲಿ ಗ್ರಂಥಕಾರರು ನೀಡಿದ್ದಾರೆ ಎಂದು ತಿಳಿಯಬೇಕು.

**प्रकाशः** – ननु द्वादशत्वादिपक्ष इवैकादशत्वपक्षोऽपि प्रमित इत्यत आह – **यद्यपीति** ।। आत्मा बुद्धिर्मनो वा । परमते त्वात्मैव ।। **अभेदेति** ।। न त्वेकस्याप्राणत्वबुद्ध्येति भावः ।।

ಹನ್ನೆರಡು ಅಥವಾ ಏಳು ಎಂಬ ವಿಷಯದಲ್ಲಿ ನೀವು ಹೇಗೆ ಪ್ರಮಾಣವನ್ನು ಹೇಳುತ್ತೀರೋ ಅದರಂತೆ ಇಂದ್ರಿಯಗಳು ಹನ್ನೊಂದು ಎಂಬ ವಿಷಯದಲ್ಲಿ ನಾವೂ ಕೂಡ ಪ್ರಮಾಣವನ್ನು ಹೇಳುತ್ತೇವೆ. ಈ ಪ್ರಶ್ನೆಗೆ ಗ್ರಂಥದಲ್ಲಿ 'ಯದ್ಯಪಿ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ಆತ್ಮಾ' ಎಂಬ ಪದಕ್ಕೆ ನಾವು ಬುದ್ಧಿ ಎಂದು ಅರ್ಥ ಮಾಡುತ್ತೇವೆ. ಆದ್ದರಿಂದ ಹನ್ನೊಂದು ಇಂದ್ರಿಯಗಳನ್ನು ಹೇಳಿರುವ ವಾಕ್ಯದಲ್ಲಿ ಆತ್ಮ ಶಬ್ದಕ್ಕೆ ಬುದ್ಧಿ ಎಂಬ ಅರ್ಥವಿರುವುದರಿಂದ ಹನ್ನೆರಡು ಇಂದ್ರಿಯಗಳೇ ಆಗುತ್ತವೆ. ಆದರೆ ಅದ್ವೈತ ಮತದಲ್ಲಿ ಆತ್ಮ ಶಬ್ದಕ್ಕೆ ಆತ್ಮ ಎಂದೇ ಅರ್ಥ ಮಾಡುತ್ತಾರೆ. ಬೇರೆ ಯಾವುದಾದರೂ ವಾಕ್ಯದಲ್ಲಿ ಹನ್ನೊಂದು ಎಂಬ ಸಂಖ್ಯೆ ಇದ್ದರೆ ಅದು ಬುದ್ಧಿ ಮತ್ತು ಮನಸ್ಸುಗಳಿಗೆ ಅಭೇದಾಭಿಪ್ರಾಯದಿಂದ ಹೊರತು ಒಂದಕ್ಕೆ ಇಂದ್ರಿಯತ್ವವನ್ನೇ ಅಲ್ಲಗಳೆಯುವುದರಲ್ಲಿ ಅಭಿಪ್ರಾಯವಲ್ಲ.

**ಪ್ರಕಾಶಃ** – **पञ्चेति** ।। यद्यपि सूत्रे पञ्चेति नास्ति तथापि ''स्थिते कर्मविषये हस्तादयः'' इत्युक्त्या कर्महेतुत्वस्य पञ्चस्वप्यविशेषात्, पूर्वत्र गतेर्ज्ञानस्येत्युक्त्वा पश्चात् ''हस्तादयः'' इत्युक्त्या तदन्यपञ्चानामपि लाभात्, आदिपद-सङ्कोचकाभावात्, ''पञ्च प्राणाश्च कर्मण'' इति स्मृतेश्च पञ्चेत्युक्तम् ।

ಗ್ರಂಥದಲ್ಲಿ 'ಸೂತ್ರೇ ಜ್ಞಾನೇಂದ್ರಿಯಾಣಿ ಸಪ್ತೋಕ್ತ್ವಾ ಪುನಃ ಪಂಚಕರ್ಮೇಂದ್ರಿಯೋಕ್ತೇಃ' ಸೂತ್ರದಲ್ಲಿ ಜ್ಞಾನೇಂದ್ರಿಯಗಳು ಏಳು ಎಂದು ಹೇಳಿ ಐದು ಕರ್ಮೇಂದ್ರಿಯಗಳನ್ನು ಪುನಃ ಹೇಳಿದ್ದಾರೆ ಎಂದಿದೆ. ಆದರೆ ಸೂತ್ರವನ್ನು ನೋಡಿದಾಗ ಏಳು ಜ್ಞಾನೇಂದ್ರಿಯಗಳ ಬಗ್ಗೆ ಹೇಳಿದ್ದು ಉಲ್ಲೇಖ ಕಾಣಸುತ್ತದೆ. ಐದು ಕರ್ಮೇಂದ್ರಿಯಗಳ ಬಗ್ಗೆ ಹೇಳಿದ್ದು ಕಾಣಿಸುವುದಿಲ್ಲ.

ಆದರೆ 'ಸ್ಥಿತೇ' ಎಂಬ ಪದಕ್ಕೆ ನಾವು ಕರ್ಮವಿಷಯದಲ್ಲಿ ಎಂದು ಅರ್ಥವನ್ನು ಮಾಡಿರುವುದರಿಂದ ಕರ್ಮಹೇತುತ್ವವನ್ನು ಸೂತ್ರದಲ್ಲಿ ಹೇಳಿದ್ದಾರೆ. ಕರ್ಮಹೇತುತ್ವವು ಐದುಕರ್ಮೇಂದ್ರಿಯಗಳಲ್ಲೂ ಸಾಧಾರಣವಾಗಿದೆ. ಹಿಂದೆ ಜ್ಞಾನಕ್ಕೋಸ್ಕರ ಇರುವ ಇಂದ್ರಿಯಗಳು ಏಳು ಎಂಬುದಾಗಿ ಹೇಳಿ ಅನಂತರ 'ಹಸ್ತಾದಯಃ' ಎಂದು ಹೇಳಿದ್ದರಿಂದಲೇ ಕರ್ಮಹೇತುವಾದ ಐದು ಇಂದ್ರಿಯಗಳು ಅವರಿಗೆ ಸಮ್ಮತವೆಂದು ಸ್ಪಷ್ಟವಾಗುತ್ತದೆ. ಮತ್ತೊಂದು ಕಾರಣ 'ಹಸ್ತಾದಯಃ' ಎಂಬಲ್ಲಿರುವ ಆದಿಪದಕ್ಕೆ ನಾವು ಸಂಕುಚಿತವಾದ ಅರ್ಥವನ್ನು ಮಾಡಿಲ್ಲ. ಐದು ಕರ್ಮೇಂದ್ರಿಯಗಳು ಇದರಿಂದ ಸಂಗ್ರಹವಾಗುತ್ತದೆ. ಅಷ್ಟೇ ಅಲ್ಲದೇ, 'ಪಂಚಪ್ರಾಣಾಶ್ಚ ಕರ್ಮಣಃ' ಎಂಬ ಸ್ಮೃತಿವಾಕ್ಯವಂತೂ ಐದು ಕರ್ಮೇಂದ್ರಿಯಗಳ ಬಗ್ಗೆ ಸ್ಪಷ್ಟವಾಗಿಯೇ ಉಲ್ಲೇಖ ಮಾಡುತ್ತಿದೆ.

**ಪ್ರಕಾಶಃ** – ''इयमपरा सूत्रद्वययोजन'' इत्यादिपरभाष्योक्तमनूद्य निराह – **एतेनेति** ।। मम रीत्येत्याद्युक्तदोषेणेत्यर्थः । सूत्रार्थमनुवदति – **सप्तैवोत्क्रामन्तीति**।।

ಎರಡು ಸೂತ್ರಗಳಿಗೆ ಅದ್ವೈತಿಗಳ ಮತ್ತೊಂದು ವ್ಯಾಖ್ಯಾನವನ್ನು ಅವರ ಭಾಷ್ಯದಲ್ಲಿ ಹೇಳಿದಂತೆ ಅನುವಾದ ಮಾಡಲು 'ಏತೇನ' ಇತ್ಯಾದಿ ಗ್ರಂಥವು ಹೊರಟಿದೆ. ಹಿಂದೆ 'ಮಮ ರೀತ್ಯಾ' ಇತ್ಯಾದಿಯಾಗಿ ಹೇಳಿದ ದೋಷವೂ ಕೂಡ ಈ ಪಕ್ಷದಲ್ಲಿ ನಿರಾಕೃತವಾಯಿತು ಎಂಬುದು 'ಏತೇನ' ಪದದ ಅರ್ಥ. ಸೂತ್ರದ ಅರ್ಥವನ್ನು 'ಸಪ್ತೈವೋತ್ ಕ್ರಾಮಂತಿ' ಎಂಬುದಾಗಿ ಅನುವಾದ ಮಾಡಿದ್ದಾರೆ.

ಸಪ್ತಗತ್ಯಧಿಕರಣ (೨-೪-೪)

ಚಕ್ಷುರಾದಿ ಐದು ಜ್ಞಾನೇಂದ್ರಿಯಗಳು ಎಂದರ್ಥ. 'ಇಂದ್ರಿಯಾಣಿ ಹಯಾನಾಹುಃ' ಎಂಬುದು ಬೇರೆ ಶ್ರುತಿಯ ವಾಕ್ಯವಾಗಿದೆ. 'ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ' ಎಂಬ ವಾಕ್ಯವು ಅನಂತರದಲ್ಲಿದ್ದರೂ ಬುದ್ಧಿಯ ಸೌಕರ್ಯಕ್ಕೋಸ್ಕರ ಮೊದಲೇ ಗ್ರಂಥಕಾರರು ನಿವೇಶ ಮಾಡಿದ್ದಾರೆ.

**प्रकाशः** – श्रुत्यन्तरं यदेति । ज्ञानानि ज्ञानसाधनानि । द्वादश वा इति भाष्योक्तश्रुतिः । द्वादशैवेन्द्रियाणीति तु ''त इन्द्रियाणि'' इत्यत्र भाष्योक्ता । विज्ञानेति स्मृतिः ''अन्तर'' इत्यत्र भाष्योक्ता । खादिकं इन्द्रियादिकमित्यर्थः ।

ಮತ್ತೊಂದು ಶ್ರುತಿಯನ್ನು 'ಯದಾ' ಎಂಬುದರಿಂದ ಉಲ್ಲೇಖ ಮಾಡುತ್ತಿದ್ದಾರೆ. 'ಜ್ಞಾನಾನಿ' ಎಂಬ ಪದಕ್ಕೆ ಜ್ಞಾನಸಾಧನಗಳು ಎಂದರ್ಥ. 'ದ್ವಾದಶ ವಾ' ಎಂಬ ಶ್ರುತಿಯನ್ನು ಇದೇ ಅಧಿಕರಣದ ಭಾಷ್ಯದಲ್ಲಿ ಉಲ್ಲೇಖ ಮಾಡಿದ್ದಾರೆ. 'ದ್ವಾದಶೈವ ಇಂದ್ರಿಯಾಣಿ' ಎಂಬ ಶ್ರುತಿಯನ್ನು 'ತ ಇಂದ್ರಿಯಾಣಿ' ಇತ್ಯಾದಿಯಾಗಿ ಮುಂದೆ ಬರುವ ಅಧಿಕರಣ ಭಾಷ್ಯದಲ್ಲಿ ಉದಾಹರಿಸುತ್ತಾರೆ. 'ವಿಜ್ಞಾನತತ್ತ್ವಾಚ್ಚ' ಎಂಬ ಶ್ರುತಿವಾಕ್ಯವನ್ನು 'ಅಂತರಾ ವಿಜ್ಞಾನಮನಸೀ ಕ್ರಮೇಣ' ಎಂಬ ಸೂತ್ರದ ಭಾಷ್ಯದಲ್ಲಿ ಹಿಂದೆ ಉದಾಹರಿಸಿದ್ದಾರೆ. 'ಖಾದಿಕಂ' ಎಂಬುದಕ್ಕೆ ಆಕಾಶಾದಿಗಳು ಎಂದರ್ಥ ಮಾಡಬಾರದು, ಇಂದ್ರಿಯಾದಿಗಳು ಎಂದು ಅರ್ಥ ಮಾಡಬೇಕು.

**प्रकाशः** – सप्तेति स्मृतिरत्रैव भाष्योक्ता । श्रोत्रादीनि त्विति तु ''त इन्द्रियाणि'' इत्यत्र भाष्योक्ता । स्मृतिष्वित्यस्य गीयते चेति पूर्वेणान्वयः ।

'ಸಪ್ತ ಪ್ರಾಣಾಃ' ಎಂಬ ಸ್ಮೃತಿವಾಕ್ಯವನ್ನು ಇದೇ ಅಧಿಕರಣದ ಭಾಷ್ಯದಲ್ಲಿ ಉದಾಹರಿಸಿದ್ದಾರೆ. 'ಶ್ರೋತ್ರಾದೀನಿ ತು ಪಂಚೈವ' ಎಂಬುದನ್ನು 'ತ ಇಂದ್ರಿಯಾಣಿ' ಎಂಬ ಸೂತ್ರದ ಭಾಷ್ಯದಲ್ಲಿ ಮುಂದೆ ಉದಾಹರಿಸುತ್ತಾರೆ. 'ಸ್ಮೃತಿಷು' ಎಂಬುದಕ್ಕೆ 'ಗೀಯತೇ' ಎಂಬ ಹಿಂದೆ ಇರುವ ಕ್ರಿಯಾಪದದ ಜೊತೆ ಅನ್ವಯವನ್ನು ತಿಳಿಯಬೇಕು.

**प्रकाशः** – यद्वा परभाष्यादौ यत्सप्तत्वप्रत्याख्यानेनैकादशत्वोक्त्या सिद्धान्तकरणं तदुभयमप्ययुक्तम् । सप्तेन्द्रियपक्षस्य द्वादशेन्द्रियपक्षस्य च श्रुत्यादावभिधानादिति भावेन ''गीयते च'' इत्यादिना श्रुत्याद्युक्तिरुभयत्रेति बोध्यम् ।

ಅಥವಾ ಪರಭಾಷ್ಯದಲ್ಲಿ ಇಂದ್ರಿಯಗಳಲ್ಲಿ ಸಪ್ತತ್ವ ಸಂಖ್ಯೆಯನ್ನು ನಿರಾಕರಣೆ ಮಾಡಿ ಏಕಾದಶತ್ವವನ್ನು ಸಮರ್ಥನೆ ಮಾಡಿದ್ದಾರೆ. ಇದೆರಡೂ ಕೂಡ ತಪ್ಪು. ಇಂದ್ರಿಯಗಳಲ್ಲಿ ಸಪ್ತತ್ವ ಸಂಖ್ಯೆಯನ್ನು ನಿರಾಕರಣೆ ಮಾಡಿದ್ದು ತಪ್ಪು. ಏಕೆಂದರೆ ಸಪ್ತತ್ವ ಸಂಖ್ಯೆ ಇದೆ ಎಂದು ವಿವಕ್ಷಾಭೇದದಿಂದ ನಾವು ಪ್ರತಿಪಾದನೆ ಮಾಡಿದ್ದೇವೆ. ಅದರಂತೆ ಏಕಾದಶತ್ವವನ್ನು ನಿರಾಕರಣೆ ಮಾಡಿದ್ದೂ ಕೂಡ ತಪ್ಪು. ಏಕೆಂದರೆ ಇಂದ್ರಿಯಗಳಲ್ಲಿ ದ್ವಾದಶತ್ವವೆಂಬ ಸಂಖ್ಯೆಯು ಶ್ರುತಿಯಿಂದ ಸಿದ್ಧವಾಗಿದೆ. ಈ ಅಭಿಪ್ರಾಯದಿಂದ 'ಗೀಯತೇ ಚ' ಇತ್ಯಾದಿಯಾಗಿ ಶ್ರುತಿಸ್ಮೃತಿಗಳ ಆಧಾರವನ್ನು ಎರಡು ವಿಷಯದಲ್ಲಿ ಗ್ರಂಥಕಾರರು ನೀಡಿದ್ದಾರೆ ಎಂದು ತಿಳಿಯಬೇಕು.

**प्रकाशः** – ननु द्वादशत्वादिपक्ष इवैकादशत्वपक्षोऽपि प्रमित इत्यत आह – **यद्यपीति** ।। आत्मा बुद्धिर्मनो वा । परमते त्वात्मैव ।। **अभेदेति** ।। न त्वेकस्याप्राणत्वबुद्ध्येति भावः ।।

ಹನ್ನೆರಡು ಅಥವಾ ಏಳು ಎಂಬ ವಿಷಯದಲ್ಲಿ ನೀವು ಹೇಗೆ ಪ್ರಮಾಣವನ್ನು ಹೇಳುತ್ತೀರೋ ಅದರಂತೆ ಇಂದ್ರಿಯಗಳು ಹನ್ನೊಂದು ಎಂಬ ವಿಷಯದಲ್ಲಿ ನಾವೂ ಕೂಡ ಪ್ರಮಾಣವನ್ನು ಹೇಳುತ್ತೇವೆ. ಈ ಪ್ರಶ್ನೆಗೆ ಗ್ರಂಥದಲ್ಲಿ 'ಯದ್ಯಪಿ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ಆತ್ಮ' ಎಂಬ ಪದಕ್ಕೆ ನಾವು ಬುದ್ಧಿ ಎಂದು ಅರ್ಥ ಮಾಡುತ್ತೇವೆ. ಆದ್ದರಿಂದ ಹನ್ನೊಂದು ಇಂದ್ರಿಯಗಳನ್ನು ಹೇಳಿರುವ ವಾಕ್ಯದಲ್ಲಿ ಆತ್ಮ ಶಬ್ದಕ್ಕೆ ಬುದ್ಧಿ ಎಂಬ ಅರ್ಥವಿರುವುದರಿಂದ ಹನ್ನೆರಡು ಇಂದ್ರಿಯಗಳೇ ಆಗುತ್ತವೆ. ಆದರೆ ಅದ್ವೈತ ಮತದಲ್ಲಿ ಆತ್ಮ ಶಬ್ದಕ್ಕೆ ಆತ್ಮ ಎಂದೇ ಅರ್ಥ ಮಾಡುತ್ತಾರೆ. ಬೇರೆ ಯಾವುದಾದರೂ ವಾಕ್ಯದಲ್ಲಿ ಹನ್ನೊಂದು ಎಂಬ ಸಂಖ್ಯೆ ಇದ್ದರೆ ಅದು ಬುದ್ಧಿ ಮತ್ತು ಮನಸ್ಸುಗಳಿಗೆ ಅಭೇದಾಭಿಪ್ರಾಯದಿಂದ ಹೊರತು ಒಂದಕ್ಕೆ ಇಂದ್ರಿಯತ್ವವನ್ನೇ ಅಲ್ಲಗಳೆಯುವುದರಲ್ಲಿ ಅಭಿಪ್ರಾಯವಲ್ಲ.

**ಪ್ರಕಾಶಃ – पञ्चेति ।।** यद्यपि सूत्रे पञ्चेति नास्ति तथापि ''स्थिते कर्मविषये हस्तादयः'' इत्युक्त्या कर्महेतुत्वस्य पञ्चस्वप्यविशेषात्, पूर्वत्र गतेर्ज्ञानस्येत्युक्त्वा पश्चात् ''हस्तादयः'' इत्युक्त्या तदन्यपञ्चानामपि लाभात्, आदिपद-सङ्कोचकाभावात्, ''पञ्च प्राणाश्च कर्मण'' इति स्मृतेश्च पञ्चेत्युक्तम् ।

ಗ್ರಂಥದಲ್ಲಿ 'ಸೂತ್ರೇ ಜ್ಞಾನೇಂದ್ರಿಯಾಣಿ ಸಪ್ತೋಕ್ತ್ವಾ ಪುನಃ ಪಂಚಕರ್ಮೇಂದ್ರಿಯೋಕ್ತೇಃ' ಸೂತ್ರದಲ್ಲಿ ಜ್ಞಾನೇಂದ್ರಿಯಗಳು ಏಳು ಎಂದು ಹೇಳಿ ಐದು ಕರ್ಮೇಂದ್ರಿಯಗಳನ್ನು ಪುನಃ ಹೇಳಿದ್ದಾರೆ ಎಂದಿದೆ. ಆದರೆ ಸೂತ್ರವನ್ನು ನೋಡಿದಾಗ ಏಳು ಜ್ಞಾನೇಂದ್ರಿಯಗಳ ಬಗ್ಗೆ ಹೇಳಿದ್ದು ಉಲ್ಲೇಖ ಕಾಣಸುತ್ತದೆ. ಐದು ಕರ್ಮೇಂದ್ರಿಯಗಳ ಬಗ್ಗೆ ಹೇಳಿದ್ದು ಕಾಣಸುವುದಿಲ್ಲ.

ಆದರೆ 'ಸ್ಥಿತೇ' ಎಂಬ ಪದಕ್ಕೆ ನಾವು ಕರ್ಮವಿಷಯದಲ್ಲಿ ಎಂದು ಅರ್ಥವನ್ನು ಮಾಡಿರುವುದರಿಂದ ಕರ್ಮಹೇತುತ್ವವನ್ನು ಸೂತ್ರದಲ್ಲಿ ಹೇಳಿದ್ದಾರೆ. ಕರ್ಮಹೇತುತ್ವವು ಐದುಕರ್ಮೇಂದ್ರಿಯಗಳಲ್ಲೂ ಸಾಧಾರಣವಾಗಿದೆ. ಹಿಂದೆ ಜ್ಞಾನಕ್ಕೋಸ್ಕರ ಇರುವ ಇಂದ್ರಿಯಗಳು ಏಳು ಎಂಬುದಾಗಿ ಹೇಳಿ ಅನಂತರ 'ಹಸ್ತಾದಯಃ' ಎಂದು ಹೇಳಿದ್ದರಿಂದಲೇ ಕರ್ಮಹೇತುವಾದ ಐದು ಇಂದ್ರಿಯಗಳು ಅವರಿಗೆ ಸಮ್ಮತವೆಂದು ಸ್ಪಷ್ಟವಾಗುತ್ತದೆ. ಮತ್ತೊಂದು ಕಾರಣ 'ಹಸ್ತಾದಯಃ' ಎಂಬಲ್ಲಿರುವ ಆದಿಪದಕ್ಕೆ ನಾವು ಸಂಕುಚಿತವಾದ ಅರ್ಥವನ್ನು ಮಾಡಿಲ್ಲ. ಐದು ಕರ್ಮೇಂದ್ರಿಯಗಳು ಇದರಿಂದ ಸಂಗ್ರಹವಾಗುತ್ತದೆ. ಅಷ್ಟೇ ಅಲ್ಲದೇ, 'ಪಂಚಪ್ರಾಣಾಶ್ಚ ಕರ್ಮಣಃ' ಎಂಬ ಸ್ಮೃತಿವಾಕ್ಯವಂತೂ ಐದು ಕರ್ಮೇಂದ್ರಿಯಗಳ ಬಗ್ಗೆ ಸ್ಪಷ್ಟವಾಗಿಯೇ ಉಲ್ಲೇಖ ಮಾಡುತ್ತಿದೆ.

**ಪ್ರಕಾಶಃ –** ''इयमपरा सूत्रद्वययोजन'' इत्यादिपरभाष्योक्तमनूद्य निराह – **एतेनेति ।।** मम रीत्येत्याद्युक्तदोषेणेत्यर्थः । सूत्रार्थमनुवदति – **सप्तैवोत्क्रामन्तीति।।**

ಎರಡು ಸೂತ್ರಗಳಿಗೆ ಅದ್ವೈತಿಗಳ ಮತ್ತೊಂದು ವ್ಯಾಖ್ಯಾನವನ್ನು ಅವರ ಭಾಷ್ಯದಲ್ಲಿ ಹೇಳಿದಂತೆ ಅನುವಾದ ಮಾಡಲು 'ಏತೇನ' ಇತ್ಯಾದಿ ಗ್ರಂಥವು ಹೊರಟಿದೆ. ಹಿಂದೆ 'ಮಮ ರೀತ್ಯಾ' ಇತ್ಯಾದಿಯಾಗಿ ಹೇಳಿದ ದೋಷವೂ ಕೂಡ ಈ ಪಕ್ಷದಲ್ಲಿ ನಿರಾಕೃತವಾಯಿತು ಎಂಬುದು 'ಏತೇನ' ಪದದ ಅರ್ಥ. ಸೂತ್ರದ ಅರ್ಥವನ್ನು 'ಸಪ್ತೈವೋತ್ ಕ್ರಾಮಂತಿ' ಎಂಬುದಾಗಿ ಅನುವಾದ ಮಾಡಿದ್ದಾರೆ.

ಸಪ್ತಗತ್ಯಧಿಕರಣ (೨-೪-೪)

**प्रकाशः – ''सप्तगतेः'' इति हेत्वर्थमाह – सर्व इति ।। ''तमुत्क्रामन्तं प्राणोनूत्क्रामति प्राणमनूत्क्रामन्तं सर्वे प्राणा अनूत्क्रामन्ति'' इति श्रुतावित्यर्थः। विशेषितत्वादित्यस्यार्थमाह – तत्र सर्वेति ।।**

ಏಳು ಇಂದ್ರಿಯಗಳಿಗಷ್ಟೇ ಗಮನವಿದೆ ಎಂಬುದಕ್ಕೆ ಮತ್ತೊಂದು ಹೇತುವನ್ನು 'ಸರ್ವ' ಇತ್ಯಾದಿ ವಾಕ್ಯದಿಂದ ತೋರಿಸಿದ್ದಾರೆ. 'ತಮುತ್ ಕ್ರಾಮಂತಂ ಪ್ರಾಣೋ ಅನುತ್ಕ್ರಾಮತಿ ಪ್ರಾಣೋ ಅನುತ್ಕ್ರಾಮಂತಂ ಸರ್ವೇ ಪ್ರಾಣಾಃ ಅನುತ್ಕ್ರಾಮಂತಿ' ಎಂಬ ಶ್ರುತಿಯಲ್ಲಿ ಏಳು ಇಂದ್ರಿಯಗಳಿಗಷ್ಟೇ ಉತ್ಕ್ರಮಣವನ್ನು ಅವರು ಹೇಳಿದ್ದಾರೆ.

**प्रकाशः – न पश्यतीति ।। ''यत्रैष चाक्षुषः पुरुषः पराङ्पर्यावर्तते । अथारूपज्ञो भवति न पश्यतीत्याहुर्न जिघ्रति न रसयति'' इत्यादावित्यर्थः ।।**

ವಿಶೇಷಿತತ್ವಾತ್ ಎಂಬ ಸೂತ್ರಭಾಗದ ಅರ್ಥವನ್ನು 'ತತ್ರ ಸರ್ವ' ಇತ್ಯಾದಿ ವಾಕ್ಯದಿಂದ ಸ್ಪಷ್ಟಪಡಿಸಿದ್ದಾರೆ. 'ನ ಪಶ್ಯತಿ' ಎಂಬ ಶ್ರುತಿಯು ಹೀಗಿದೆ – 'ಯತ್ರೈಷ ಚಾಕ್ಷುಷಃ ಪುರುಷಃ ಪರಾಙ್‌ಪರ್ಯಾವರ್ತತೇ । ಅಥಾರೂಪಜ್ಞೋ ಭವತಿ ನ ಪಶ್ಯತೀತ್ಯಾಹುರ್ನಜಿಘ್ರತಿ ನ ರಸಯತಿ' ಒಂದೊಂದೇ ಇಂದ್ರಿಯಗಳು ತೆರಳುತ್ತವೆ. ಮೊದಲು ಕಣ್ಣು ತೆರಳಿದಾಗ ರೂಪಜ್ಞಾನವಿಲ್ಲದವನಾಗುತ್ತಾನೆ. ಆಗ 'ನ ಪಶ್ಯತಿ' ಎಂಬ ವ್ಯವಹಾರವನ್ನು ಇವನಲ್ಲಿ ಮಾಡುತ್ತಾರೆ. ಅನಂತರ ಘ್ರಾಣ, ಅನಂತರ ರಸನೇಂದ್ರಿಯ ತೆರಳಿದಾಗ 'ನ ರಸಯತಿ' ಎನ್ನುತ್ತಾರೆ ಎಂದು.

**प्रकाशः – ते यदेति ।। ''दशेमे पुरुषे प्राणा आत्मैकादशस्ते यदाऽस्माच्छरीरान्मर्त्यादुत्क्रामन्ति'' इति श्रवणादित्यर्थः । दोषान्तरं चाह – पूर्ववाक्येनेति ।।**

'ತೇ ಯದಾ' ಎಂಬ ಶ್ರುತಿಯು ಹೀಗಿದೆ – 'ದಶೇಮೇ ಪುರುಷೇ ಪ್ರಾಣಾಃ ಆತ್ಮೈಕಾದಶಸ್ತೇ ಯದಾ ಅಸ್ಮಾತ್ ಶರೀರಾತ್ ಮರ್ತ್ಯಾದುತ್ಕ್ರಾಮಂತಿ' ಹತ್ತು ಇಂದ್ರಿಯಗಳು ಹನ್ನೊಂದನೆಯ ಆತ್ಮ, ಈ ಹನ್ನೊಂದು ಯಾವಾಗ ಮರ್ತ್ಯವಾದ ಈ ಶರೀರದಿಂದ ಉತ್ಕ್ರಮಣ ಮಾಡುತ್ತವೋ ಎಂಬುದಾಗಿ ಈ ಶ್ರುತಿಯು ಹನ್ನೊಂದು ಇಂದ್ರಿಯಗಳೆನ್ನುತ್ತಿದೆ. ಮತ್ತೊಂದು ದೋಷವನ್ನು 'ಪೂರ್ವವಾಕ್ಯೇನ' ಎಂಬುದರಿಂದ ತೋರಿಸಿದ್ದಾರೆ.

**प्रकाशः – अन्यपरेणेति ।। सुप्ताविन्द्रियाणां निर्व्यापाराद्युक्तिपरेणेत्यर्थः ।। एतेनेति ।। सिद्धान्तसूत्रत्वसम्भव इत्यादिदोषेण, द्वादशपरत्वसमर्थनादिना चेत्यर्थः।।**

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते**
**चन्द्रिकाप्रकाशे सप्तगत्यधिकरणं सम्पूर्णम् ।।४।।**

ಸುಷುಪ್ತಿಯಲ್ಲಿ ಇಂದ್ರಿಯಗಳಿಗೆ ಯಾವುದೇ ವ್ಯಾಪಾರವಿಲ್ಲವೆಂದು ಹೇಳಿದ್ದಾರೆ ಎಂದರ್ಥ. 'ಏತೇನ' ಎಂದರೆ ಎರಡನ್ನೂ ಕೂಡ ಸಿದ್ಧಾಂತ ಸೂತ್ರವೆಂದೇ ಹೇಳಲು ಬರುವಾಗ ಮೊದಲನೆಯದು ಪೂರ್ವಪಕ್ಷ ಪರ ಎಂದು ಹೇಳಿದ್ದು ತಪ್ಪು. ಹಾಗೂ ಇಂದ್ರಿಯಗಳು ಹನ್ನೆರಡು ಎಂದೇ ಹೇಳಲು ಬರುವಾಗ ಹನ್ನೊಂದು ಇಂದ್ರಿಯಗಳೆಂದು ಸಿದ್ಧಾಂತ ಮಾಡಿದ್ದೂ ಕೂಡ ತಪ್ಪು ಎಂದರ್ಥ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಸಪ್ತಗತ್ಯಧಿಕರಣವು ಮುಕ್ತಾಯವಾಯಿತು.

ಪರಿಪೂರ್ಣಚಂದ್ರಿಕಾ

# ಅಣ್ವಧಿಕರಣ

(೨-೪-೫)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

***

॥ ಶ್ರೀಗುರುಭ್ಯೋ ನಮಃ ॥

# ಅಣ್ವಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – अणवश्च ।।**

ಇಂದ್ರಿಯಗಳು ಅಣುಪರಿಮಾಣವನ್ನು ಹೊಂದಿದ್ದರೂ ಕೂಡ, ಪ್ರಕಾಶತಃ ಎಲ್ಲೆಡೆ ವ್ಯಾಪ್ತವಾಗಿವೆ. ಆದ್ದರಿಂದ ಕೆಲವು ಶ್ರುತಿಗಳು ಇಂದ್ರಿಯಗಳನ್ನು ಅಣುವೆಂದು, ಇನ್ನೂ ಕೆಲವು ಶ್ರುತಿಗಳು ವ್ಯಾಪ್ತವೆಂದು ಹೇಳಿದರೂ ಪರಸ್ಪರ ವಿರೋಧ ಬರುವುದಿಲ್ಲ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** प्राणाः इन्द्रियाणि **अणवः** स्वतोऽणूनीत्यर्थः । न केवलमणूनि किन्तु तेजसा व्याप्तानि चेति चशब्दार्थः ।।१।।

ಇಂದ್ರಿಯಗಳು ಅಣವಃ = ಸ್ವಾಭಾವಿಕವಾಗಿ ಅಣುಪರಿಮಾಣವುಳ್ಳವುಗಳು. ಕೇವಲ ಅಣುರೂಪವಷ್ಟೇ ಅಲ್ಲ, ತಮ್ಮ ಪ್ರಕಾಶದಿಂದ ದೇಹದಲ್ಲೆಲ್ಲೆಡೆ ವ್ಯಾಪ್ತವಾಗಿವೆ. ಇದನ್ನು 'ಚ' ಶಬ್ದವು ತಿಳಿಸುತ್ತಿದೆ.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ಅಣ್ವಧಿಕರಣವು ಮುಗಿಯಿತು.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

## ಬ್ರಹ್ಮಸೂತ್ರಭಾಷ್ಯ

**भाष्यम् – 'दिवीव चक्षुराततम्' (ऋ.१.२२.२०.) इति व्याप्तिः प्रतीयते । दूरश्रवणदर्शनादियुक्तिश्च ।**

ಪರಿಪೂರ್ಣಚಂದ್ರಿಕಾ

ಅನುವಾದ - ಕಣ್ಣು ಮೊದಲಾದ ಇಂದ್ರಿಯಗಳು ಆಕಾಶದಲ್ಲಿ ವ್ಯಾಪಿಸಿವೆ. ಇದರಂತೆ ಪರಮಾತ್ಮನು ಎಲ್ಲೆಡೆ ವ್ಯಾಪ್ತನಾಗಿದ್ದಾನೆ. 'ದಿವೀವ' ಎಂಬ ಶ್ರುತಿಯು ಇಂದ್ರಿಯಗಳಿಗೆ ಸರ್ವತ್ರ ವ್ಯಾಪ್ತಿಯನ್ನು ಹೇಳುತ್ತಿದೆ. ದೂರದಲ್ಲಿ ಇರುವ ಶಬ್ದಗಳನ್ನು ಕೇಳುವುದು ಮತ್ತು ದೂರದಲ್ಲಿರುವ ವಸ್ತುಗಳನ್ನು ನೋಡುವುದು ಇವೇ ಮೊದಲಾದ ಯುಕ್ತಿಗಳಿಂದ ಇದು ದೃಢವಾಗುತ್ತದೆ.

ಪ್ರತಿಪದಾರ್ಥ -- ಚಕ್ಷುಃ = ಕಣ್ಣು ಮೊದಲಾದ ಇಂದ್ರಿಯಗಳು, ದಿವಿ = ಆಕಾಶದಲ್ಲಿ ಆತತಮ್ = ವ್ಯಾಪ್ತವಾಗಿವೆ, ಇವ = ಈ ದೃಷ್ಟಾಂತದಂತೆ (ಪರಮಾತ್ಮನು ವ್ಯಾಪ್ತನಾಗಿದ್ದಾನೆ) ಇತಿ = ಹೀಗೆ, ವ್ಯಾಪ್ತಿಃ = ಇಂದ್ರಿಯಗಳಿಗೆ ಎಲ್ಲೆಡೆ ವ್ಯಾಪಿ ಇರುವಿಕೆ, ಪ್ರತೀಯತೇ = ತಿಳಿಯುತ್ತದೆ. ದೂರಶ್ರವಣದರ್ಶನಾದಿಯುಕ್ತಿಶ್ಚ = ದೂರದಲ್ಲಿರುವ ಶಬ್ದವನ್ನು ಕೇಳುವುದು ವಸ್ತುಗಳನ್ನು ನೋಡುವುದು ಇವೇ ಮೊದಲಾದ ಯುಕ್ತಿಗಳಿಂದಲೂ ಸಿದ್ಧವಾಗುತ್ತದೆ. (ಯುಕ್ತಿಸಹಿತವಾದ ಶ್ರುತಿಯಿಂದ ಇಂದ್ರಿಯಗಳು ವ್ಯಾಪ್ತವಾಗಿವೆ ಎಂದು ತಿಳಿಯುತ್ತದೆ.)

**भाष्यम् — 'अणुभिः पश्यत्यणुभिः कृणोति प्राणा वा अणवः प्राणैर्ह्येतद् भवति' इति च कौण्डिन्यश्रुतिः ।**

ಅನುವಾದ - ಆದರೆ ಮತ್ತೊಂದು ಕಡೆ ಕೌಂಡಿನ್ಯಶ್ರುತಿಯು 'ಪಶ್ಯತ್ಯಣುಭಿಃ ಕೃಣೋತಿ' ಎಂಬುದಾಗಿ ಅಣುಪರಿಮಾಣದ ಜ್ಞಾನೇಂದ್ರಿಯಗಳನ್ನು ತಿಳಿಯುತ್ತಾನೆ. ಅಣುಮಾತ್ರದ ಕರ್ಮೇಂದ್ರಿಯಗಳಿಂದ ಕೆಲಸ ಮಾಡುತ್ತಾನೆ. ಅಣುವಾದ ಇಂದ್ರಿಯಗಳಿಂದಲೇ ಜ್ಞಾನೇಂದ್ರಿಯಗಳನ್ನು ತಿಳಿಯುತ್ತಾನೆ. ಅಣುಮಾತ್ರದ ಕರ್ಮೇಂದ್ರಿಯಗಳಿಂದ ಕೆಲಸ ಮಾಡುತ್ತಾನೆ. ಅಣುವಾದ ಇಂದ್ರಿಯಗಳಿಂದಲೇ ಜ್ಞಾನ ಮತ್ತು ಕರ್ಮಗಳು ನಡೆಯುತ್ತವೆ ಎಂದು ಹೇಳಲಾಗಿದೆ.

ಪ್ರತಿಪದಾರ್ಥ -- ಅಣುಭಿಃ = ಅಣುಗಾತ್ರದಲ್ಲಿರುವ ಇಂದ್ರಿಯಗಳಿಂದ ಪಶ್ಯತಿ = ತಿಳಿಯುತ್ತಾನೆ. ಅಣುಭಿಃ = ಅಣುಗಾತ್ರದ ಇಂದ್ರಿಯಗಳಿಂದ, ಕೃಣೋತಿ = ಕೆಲಸಗಳನ್ನು ಮಾಡುತ್ತಾನೆ, ಪ್ರಾಣಾ ವಾ = ಇಂದ್ರಿಯಗಳಾದರೂ, ಅಣವಃ = ಅಣುಪರಿಮಾಣವುಳ್ಳವುಗಳು. ಪ್ರಾಣೈಃ = ಇಂದ್ರಿಯಗಳಿಂದವಾದರೂ, ಏತತ್ = ಜ್ಞಾನ ಹಾಗೂ ಕರ್ಮಗಳು, ಭವತಿ = ಆಗುತ್ತವೆ, ಇತಿ ಚ = ಹೀಗೆ, ಕೌಂಡಿನ್ಯಶ್ರುತಿಃ = ಕೌಂಡಿನ್ಯಶ್ರುತಿಯು ಹೇಳುತ್ತದೆ.

**भाष्यम् — अतो वक्ति - ।। अणवश्च ।।१।।**

**'तद् यथा' हाणुनश्चक्षसः प्रकाशो व्यातत एवमेवास्य पुरुषस्य प्रकाशो व्याततोऽणुर्ह्येवैष पुरुषो भवति' इति शाण्डिल्यश्रुतिः ।।१।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये अण्वधिकरणम् ।। ९ ।।**

ಅನುವಾದ - ಯುಕ್ತಿಸಹಿತವಾದ ಶ್ರುತಿಗೂ ಕೇವಲ ಶ್ರುತಿಗೂ ವಿರೋಧವನ್ನು ಸೂತ್ರಕಾರರು ಪರಿಹರಿಸುತ್ತಿದ್ದಾರೆ -

ಅಣ್ವಧಿಕರಣ (೨-೪-೫)

'ತದ್ ಯಥಾ' ಎಂಬ ಶ್ರುತಿಯು ಹೇಳುವಂತೆ ಇಂದ್ರಿಯಗಳು ಅಣುಪರಿಮಾಣವೇ ಆಗಿದ್ದರೂ ಪ್ರಕಾಶದಿಂದ ವ್ಯಾಪ್ತವಾಗಿವೆ. ಸೂಕ್ಷ್ಮವಾದ ಅಣುವಿನ ಬೆಳಕು ಹೇಗೆ ವ್ಯಾಪಿಸಿದೆಯೋ, ಅದರಂತೆ ಜೀವನೂ ಕೂಡ ಪ್ರಕಾಶದಿಂದ ವ್ಯಾಪಿಸಿದ್ದಾನೆ. ಇಂದ್ರಿಯಗಳಂತೆ ಜೀವನು ಅಣುವಾಗಿದ್ದಾನೆ ಎಂದು ಶ್ರುತಿಯು ಹೇಳುತ್ತಿದೆ.

ಪ್ರತಿಪದಾರ್ಥ -- ಅತ : = ಈ ಪೂರ್ವಪಕ್ಷದ ನಿರಾಕರಣೆಗಾಗಿ, ವಕ್ತಿ = ಸೂತ್ರಕಾರರು ಹೇಳುತ್ತಿದ್ದಾರೆ -

ತದ್ ಯಥಾ = ಅದು ಹೇಗೆಂದರೆ, ಅಣುನಃ = ಸೂಕ್ಷ್ಮವಾದ, ಚಕ್ಷುಷಃ = ಕಣ್ಣಿನ, ಪ್ರಕಾಶಃ = ಬೆಳಕು, ವ್ಯಾತತಃ = ಹೇಗೆ ವ್ಯಾಪಿಸಿದೆಯೋ, ಏವಮೇವ = ಅದರಂತೆ, ಅಸ್ಯಪುರುಷಸ್ಯ = ಈ ಜೀವನ, ಪ್ರಕಾಶಃ = ಪ್ರಕಾಶವು, ವ್ಯಾತತಃ = ವ್ಯಾಪಿಸಿದೆ, ಹಿ = ಏಕೆಂದರೆ, ಏಷಃ ಪುರುಷಃ = ಈ ಜೀವರು ಅಣುರ್ಹಿ = ಅಣುಪರಿಮಾಣವುಳ್ಳವನು, ಭವತಿ = ಆಗಿರುತ್ತಾನೆ. ಇತಿ = ಹೀಗೆ, ಶಾಂಡಿಲ್ಯಶ್ರುತಿಃ = ಶಾಂಡಿಲ್ಯಶ್ರುತಿಯು ಹೇಳುತ್ತಿದೆ.

ಇಲ್ಲಿಗೆ ಅಣ್ವಧಿಕರಣದ ಭಾಷ್ಯ ಹಾಗೂ ಭಾಷ್ಯಾನುವಾದ ಮುಗಿಯಿತು.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**तत्वप्रकाशिका – अत्र पुरुषोत्तमे जगज्जन्मादिकारणे श्रुतिसमन्वयसिद्ध्यर्थं प्राणपरिमाणविषयश्रुतिविरोधपरिहारादस्ति शास्त्रादिसङ्गतिः । जगत्कारणे ब्रह्मण्युक्तः श्रुतिसमन्वयः प्राणपरिमाणविषयश्रुतीनां विरोधेऽनुपपन्नः प्रसज्यतेऽतोऽसौ निराकर्तव्यः । प्रकृतप्राणा एवात्र विषयः । किं व्याप्ता उताणव इति सन्देहः । सन्देहबीजं श्रुतिविरोधं दर्शयन् पूर्वपक्षं च सूचयति – दिवीति ।।**

ಈ ಅಧಿಕರಣದಲ್ಲಿ ಪುರುಷೋತ್ತಮನಾದ ಶ್ರೀಮನ್ನಾರಾಯಣನೇ ಜಗಜ್ಜನ್ಮಾದಿಕಾರಣನಾಗಿದ್ದಾನೆ ಎಂಬ ವಿಷಯದಲ್ಲಿ ಶ್ರುತಿಸಮನ್ವಯವು ಸಿದ್ಧವಾಗುವುದಕ್ಕಾಗಿ ಇಂದ್ರಿಯಗಳ ಪರಿಮಾಣ ವಿಷಯದಲ್ಲಿರುವ ಶ್ರುತಿವಿರೋಧವನ್ನು ಪರಿಹಾರ ಮಾಡುವುದಕ್ಕಾಗಿ ಶಾಸ್ತ್ರ-ಅಧ್ಯಾಯ-ಪಾದ ಸಂಗತಿಗಳು ಇರುತ್ತವೆ. ಜಗತ್ಕಾರಣನಾದ ಬ್ರಹ್ಮನಲ್ಲಿ ಹೇಳಲ್ಪಟ್ಟ ಶ್ರುತಿಸಮನ್ವಯವು ಇಂದ್ರಿಯಗಳ ಪರಿಮಾಣ ವಿಷಯಕ ಶ್ರುತಿಗಳ ವಿರೋಧವು ಪ್ರಾಪ್ತವಾದಾಗ ಅನುಪಪನ್ನವಾಗುತ್ತದೆ. ಆದ್ದರಿಂದ ಈ ವಿರೋಧವನ್ನು ಪರಿಹಾರ ಮಾಡಲೇಬೇಕು.

ಹಿಂದೆ ಪ್ರಕೃತವಾದ ಇಂದ್ರಿಯಗಳೇ ಈ ಅಧಿಕರಣದ ವಿಷಯ. ಇವುಗಳು ವ್ಯಾಪ್ತವೋ ಅಥವಾ ಅಣುವೋ ? ಎಂಬುದು ಅಧಿಕರಣದ ಸಂದೇಹ. ಸಂದೇಹಕ್ಕೆ ಕಾರಣ ಶ್ರುತಿಗಳ ಪರಸ್ಪರ ವಿರೋಧ. ಇದನ್ನು ತೋರಿಸುವ ಮೂಲಕ ಪೂರ್ವಪಕ್ಷವನ್ನು 'ದಿವಿ' ಇತ್ಯಾದಿಯಾಗಿ ಸೂಚನೆ ಮಾಡುತ್ತಿದ್ದಾರೆ.

ವಿವರಣೆ - ಹಿಂದಿನ ಅಧಿಕರಣದಲ್ಲಿ ಇಂದ್ರಿಯಗಳ ಸಂಖ್ಯೆ ಎಷ್ಟು ಎಂಬುದನ್ನು ವಿಚಾರಣೆ ಮಾಡಲಾಯಿತು. ಈಗ ಆ ಇಂದ್ರಿಯಗಳ ಪರಿಮಾಣ ಎಷ್ಟು ಎಂಬ ವಿಚಾರವು ಪ್ರಾಪ್ತವಾಗುತ್ತದೆ. ಆದ್ದರಿಂದ ಈ ಅಧಿಕರಣಕ್ಕೆ ಆನಂತರ್ಯ ಸಂಗತಿ ಇರುತ್ತದೆಂದು ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

**तत्वप्रकाशिका – व्याप्तिः प्राणानामिति शेषः । श्रुतिः प्राणानामणुत्वं वक्तीति शेषः । पश्यति जानाति । कुतोऽत्रोक्ता अणवः प्राणाः । ज्ञानकर्मकरणत्वलिङ्गादित्यर्थः।**

ಭಾಷ್ಯದಲ್ಲಿ 'ವ್ಯಾಪ್ತಿಃ' ಎಂಬ ಶಬ್ದದ ಮುಂದೆ 'ಪ್ರಾಣಾನಾಂ' ಎಂಬ ಪದವನ್ನು ಶೇಷಪೂರಣ ಮಾಡಿಕೊಳ್ಳಬೇಕು. ಮತ್ತು 'ಶ್ರುತಿಃ' ಎಂಬ ಪದದ ಮುಂದೆ 'ಪ್ರಾಣಾನಾಂ ಅಣುತ್ವಂ ವಕ್ತಿ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. 'ಪಶ್ಯತಿ' ಎಂಬ ಪದಕ್ಕೆ ತಿಳಿಯುತ್ತಾನೆ ಎಂದರ್ಥ. ಇಲ್ಲಿ ಹೇಳಲ್ಪಟ್ಟ ಅಣುಗಳು ಇಂದ್ರಿಯಗಳೆಂದು ಹೇಗೆ ನಿರ್ಣಯಿಸುವುದು? ಎಂದರೆ ಜ್ಞಾನ ಹಾಗೂ ಕರ್ಮಕ್ಕೆ ಕರಣವಾದ್ದರಿಂದ ಲಿಂಗಗಳಾಗಿವೆ. ಆದ್ದರಿಂದ ಎಂದು ತಿಳಿಯಬೇಕು.

ವಿವರಣೆ - 'ಅಣುಭಿಃ ಪಶ್ಯತಿ' ಇತ್ಯಾದಿ ಶ್ರುತಿಯಲ್ಲಿ ಅಣು ಶಬ್ದದಿಂದ ಇಂದ್ರಿಯವೇ ಪ್ರತಿಪಾದ್ಯವಾಗುತ್ತದೆ. ಯಾವ ಕಾರಣದಿಂದ ಜ್ಞಾನ ಹಾಗೂ ಕರ್ಮಗಳು ಇಂದ್ರಿಯಗಳಿಂದ ಆಗುತ್ತವೋ ಆ ಕಾರಣದಿಂದ ಪ್ರಕೃತ ಈ ಶ್ರುತಿಯಲ್ಲಿ ಇಂದ್ರಿಯಗಳೇ ಪ್ರತಿಪಾದ್ಯವಾಗುತ್ತವೆ. ಪ್ರಾಣ ಹಾಗೂ ಅಣು ಶಬ್ದದಿಂದ ಇಂದ್ರಿಯಗಳೇ ಪ್ರತಿಪಾದ್ಯವಾಗುತ್ತವೆ. ಆದ್ದರಿಂದ ಇಂದ್ರಿಯಗಳಿಗೆ ಅಣುತ್ವವನ್ನು ಕೌಂಡಿನ್ಯಶ್ರುತಿ ಹೇಳುತ್ತಿದೆ ಎಂದು ತಿಳಿಯಬೇಕು.

**तत्वप्रकाशिका – व्याप्ताः प्राणाः । तथा श्रुतेः । न चाणुत्वश्रुतिविरोधेः। विष्णोर्व्याप्तत्वे दृष्टान्तत्वेन चक्षुर्व्याप्तेरुक्तत्वादेतच्छ्रुतेः प्राबल्यात् । अतिसुदृढं हि दृष्टान्तत्वेनोपादीयते ।**

ಇಂದ್ರಿಯಗಳು ವ್ಯಾಪ್ತವಾಗಿವೆ ಎಂದು ಪೂರ್ವಪಕ್ಷ. ಶ್ರುತಿಯು ಹಾಗೆಯೇ ಪ್ರತಿಪಾದನೆ ಮಾಡುತ್ತಿದೆ. ಅಣುತ್ವ ಶ್ರುತಿಯ ವಿರೋಧವು ಬರುವುದಿಲ್ಲ. ಏಕೆಂದರೆ ವಿಷ್ಣುವು ವ್ಯಾಪ್ತನಾಗಿದ್ದಾನೆಂಬ ವಿಷಯದಲ್ಲಿ ಚಕ್ಷುರಿಂದ್ರಿಯವನ್ನು ದೃಷ್ಟಾಂತವನ್ನಾಗಿ ಹೇಳಲಾಗಿದೆ. ಈ ಶ್ರುತಿಯು ಅತ್ಯಂತ ಪ್ರಬಲವಾಗಿದೆ. ಏಕೆಂದರೆ ಯಾವುದು ನಿಶ್ಚಿತವಾಗಿರುತ್ತದೋ ಅದನ್ನೇ ದೃಷ್ಟಾಂತವನ್ನಾಗಿ ನೀಡುತ್ತಾರೆ.

ವಿವರಣೆ - 'ತದ್ಯಥಾ' ಎಂಬ ಶ್ರುತಿಯಲ್ಲಿ ಚಕ್ಷುರಿಂದ್ರಿಯವನ್ನು ದೃಷ್ಟಾಂತವನ್ನಾಗಿ ನೀಡಿ ಪರಮಾತ್ಮನಿಗೆ ವ್ಯಾಪ್ತತ್ವವನ್ನು ಸಮರ್ಥಿಸಲಾಗಿದೆ. ದೃಷ್ಟಾಂತವನ್ನು ನೀಡಬೇಕೆಂದರೆ ನಿಶ್ಚಿತವಾಗಿರಬೇಕು. ಆದ್ದರಿಂದ ಚಕ್ಷುರಿಂದ್ರಿಯವು ವ್ಯಾಪ್ತವಾಗಿದೆ ಎಂದು ನಿಶ್ಚಿತವಾಗಿದೆ. ಯಾವ ರೀತಿಯಾಗಿ ಆ ಭಾಷ್ಯದಲ್ಲಿ ವ್ಯಾಪ್ತವಾದ ಚಕ್ಷುರಿಂದ್ರಿಯವು ಪ್ರತ್ಯಕ್ಷದಿಂದ ಅದೃಷ್ಟವಾಗಿದ್ದರೂ ವಿಷಯವು ಉಪಲಬ್ಧವಾಗುತ್ತಿರುವುದರಿಂದ ವ್ಯಾಪ್ತವಾಗಿದೆ ಎಂಬುದಾಗಿ ಅನುಮಾನದಿಂದ ತಿಳಿಯುತ್ತೇವೋ ಅದೇ ರೀತಿಯಾಗಿ ಜ್ಞಾನಿಗಳು ವಿಷ್ಣುವಿನ ವ್ಯಾಪ್ತಿಯು ಅತೀಂದ್ರಿಯವಾಗಿದ್ದರೂ, ಸತ್ತಾಪ್ರತೀತಿ, ಪ್ರವೃತ್ತಿ ಎಂಬ ಲಿಂಗದಿಂದ ವ್ಯಾಪ್ತನೆಂದು ತಿಳಿಯುತ್ತಾರೆ. ಹೀಗೆ 'ದಿವೀವ ಚಕ್ಷುರಾತತಂ' ಎಂಬ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ. ಆದ್ದರಿಂದ ಪರಮಾತ್ಮನ ವ್ಯಾಪ್ತಿಗೆ ಚಕ್ಷುಸ್ಸು ದೃಷ್ಟಾಂತವಾಗಿದೆ.

ವಾಸ್ತವಿಕವಾಗಿ ಈ ಶ್ರುತಿಯಲ್ಲಿ ಚಕ್ಷುರಿಂದ್ರಿಯಕ್ಕೆ ಮಾತ್ರ ವ್ಯಾಪ್ತಿಯನ್ನು ಹೇಳಲಾಗಿದೆ. ಉಳಿದ ಇಂದ್ರಿಯಗಳಿಗೆ ವ್ಯಾಪ್ತಿಯನ್ನು ಹೇಳಿರುವುದಿಲ್ಲ. ಆದರೂ ಸಮಾನನ್ಯಾಯದಿಂದ ಉಳಿದ ಇಂದ್ರಿಯಗಳೂ ಕೂಡ ವ್ಯಾಪ್ತವಾಗಿವೆ ಎಂಬ ವಿಷಯಕ್ಕೆ ಈ ಶ್ರುತಿಯು ಉದಾಹರಣೆಯಾಗುತ್ತದೆಂದು ತಿಳಿಯಬೇಕು (ವಾಕ್ಯಾರ್ಥಮುಕ್ತಾವಳಿ).

**तत्वप्रकाशिका – किं चास्ति तावद्दूरस्थवस्तुदर्शनश्रवणस्मरणादि तेन पश्यामोऽस्ति प्राणानां व्याप्तिरिति । इन्द्रियाणां प्राप्यकारित्वात् । अन्यथा**

**करणत्वविरोधात् । न च स्वस्थानं विहाय विषयणेन्द्रियं सन्निकृष्यत इति विशेषप्रमाणमस्ति । अतः प्रबलश्रुतिविरोधादणुत्वश्रुतिरप्रमाणमेवेति न जगत्कारणे ब्रह्मणि श्रुतिसमन्वयो युक्त इति भावः ।**

ಮತ್ತು ದೂರದಲ್ಲಿರುವ ವಸ್ತುವಿನ ದರ್ಶನ, ಶ್ರವಣ, ಸ್ಮರಣೆ ಮೊದಲಾದವುಗಳು ಬರುವುದು ಅನುಭವಸಿದ್ಧವಾಗಿದೆ. ಇದರಿಂದ ಇಂದ್ರಿಯಗಳಿಗೆ ವ್ಯಾಪ್ತಿ ಇದೆ ಎಂದು ಸಿದ್ಧವಾಗುತ್ತದೆ. ಇಂದ್ರಿಯಗಳು ಸ್ವತಃ ಹೋಗಿ ವಿಷಯವನ್ನು ಸ್ವೀಕಾರ ಮಾಡುತ್ತವೆ. ಇಲ್ಲದಿದ್ದರೆ ಇವುಗಳಿಗೆ ಕರಣತ್ವವೇ ಕೂಡುವುದಿಲ್ಲ. ವಿಷಯವಂತೂ ತನ್ನ ಸ್ಥಾನವನ್ನು ಬಿಟ್ಟು ಇಂದ್ರಿಯವನ್ನು ಸನ್ನಿಕರ್ಷ ಮಾಡುತ್ತದೆನ್ನಲು ಯಾವುದೇ ಪ್ರಮಾಣವಿಲ್ಲ. ಹಾಗಾಗಿ ಪ್ರಬಲಶ್ರುತಿವಿರೋಧ ಬರುವುದರಿಂದ ಇಂದ್ರಿಯಗಳಿಗೆ ಅಣುತ್ವವನ್ನು ಹೇಳುವ ಶ್ರುತಿಯನ್ನು ಅಪ್ರಮಾಣವೆಂದೇ ಹೇಳಬೇಕು.

ಹಾಗಾಗಿ ಜಗತ್ಕಾರಣನಾದ ಬ್ರಹ್ಮನಲ್ಲಿ ಶ್ರುತಿಸಮನ್ವಯವು ಅಯುಕ್ತವಾಗುತ್ತದೆ. ಇಷ್ಟು ಅಧಿಕರಣದ ಪೂರ್ವಪಕ್ಷ.

ವಿವರಣೆ - ವಸ್ತುವಿನ ಜ್ಞಾನ ಬರಬೇಕಾದರೆ ಇಂದ್ರಿಯಕ್ಕೂ ವಸ್ತುವಿಗೂ ಸನ್ನಿಕರ್ಷ ಆಗಬೇಕು. ಆದ್ದರಿಂದ ಇಂದ್ರಿಯಗಳು ಪದಾರ್ಥದ ತನಕ ಹೋಗಬೇಕೆಂದರೆ ವ್ಯಾಪ್ತವೇ ಆಗಿರಬೇಕು. ಒಂದುವೇಳೆ ಇಂದ್ರಿಯಗಳಿಗೆ ಗತ್ವಾಗ್ರಾಹಿತ್ವವನ್ನು ಒಪ್ಪದಿದ್ದರೆ ಕರಣತ್ವವೇ ಯುಕ್ತವಾಗುವುದಿಲ್ಲ. ಇಷ್ಟು ಪೂರ್ವಪಕ್ಷದ ಅಭಿಪ್ರಾಯ.

**तत्वप्रकाशिका – सिद्धान्तयत्सूत्रमवतारयति – अत इति ।। अणव एव प्राणाः । न चैतावता श्रुतियुक्तिविरोधः । यावता तेजसा व्याप्ताश्चेति सूत्रार्थः स्फुटतया नोक्तः । अतिसुदृढार्थश्रुतिसिद्धे व्याप्तत्वे कुतोऽणुत्वं प्राणानां तेजसा व्याप्तिश्चेत्येत आह – तद्यथेति ।।**

ಸಿದ್ಧಾಂತಸ್ಥಾಪಕವಾದ ಸೂತ್ರಕ್ಕೆ 'ಅತಃ' ಎಂಬುದಾಗಿ ಅವತಾರಿಕೆಯನ್ನು ನೀಡುತ್ತಿದ್ದಾರೆ. ಇಂದ್ರಿಯಗಳು ಅಣುವೇ ಆಗಿವೆ ಹೊರತು ವ್ಯಾಪ್ತವಲ್ಲ. ಹೀಗೆ ಹೇಳಿದ ಮಾತ್ರಕ್ಕೆ ಶ್ರುತಿ ಹಾಗೂ ಯುಕ್ತಿಗಳ ವಿರೋಧಕ್ಕೆ ಅವಕಾಶವಿಲ್ಲ. ಏಕೆಂದರೆ ಆ ಇಂದ್ರಿಯಗಳು ತಮ್ಮ ಪ್ರಕಾಶದಿಂದ ವ್ಯಾಪ್ತವಾಗಿವೆ ಎಂಬ ಸೂತ್ರದ ಅರ್ಥವು ಸ್ಪಷ್ಟವಾಗಿರುವುದರಿಂದ ಪ್ರತ್ಯೇಕವಾಗಿ ಭಾಷ್ಯಕಾರರು ಹೇಳಿರುವುದಿಲ್ಲ. ಅತ್ಯಂತ ಸುದೃಢವಾದ ಅರ್ಥವುಳ್ಳ ಶ್ರುತಿಯಿಂದ ಇಂದ್ರಿಯಗಳು ವ್ಯಾಪ್ತವೆಂದು ಸಿದ್ಧವಾಗಿದೆ. ಹೀಗಿರುವಾಗ ಅಣುವೆಂದು ಅಂಗೀಕರಿಸಿ ತಮ್ಮ ತೇಜಸ್ಸಿನಿಂದ ವ್ಯಾಪ್ತವಾಗಿವೆ ಎಂದು ಹೇಗೆ ಹೇಳುವಿರಿ? ಎಂಬ ಪ್ರಶ್ನೆಗೆ 'ತದ್ಯಥಾ' ಎಂಬ ಪ್ರಮಾಣದಿಂದ ಉತ್ತರವನ್ನು ನೀಡುತ್ತಿದ್ದಾರೆ.

ವಿವರಣೆ - ಪ್ರತಿಯೊಂದು ಇಂದ್ರಿಯಗಳೂ ಅಣುವೇ ಆಗಿವೆ. ಆದರೆ ಪ್ರಕಾಶದಿಂದ ವ್ಯಾಪ್ತವಾದ್ದರಿಂದ ವ್ಯಾಪ್ತತ್ವವನ್ನು ಹೇಳುವ ಶ್ರುತಿಯ ವಿರೋಧಕ್ಕೆ ಅವಕಾಶವಿಲ್ಲ. ಯಾವ ಶ್ರುತಿಗಳು ಇಂರಿಯಗಳಿಗೆ ವ್ಯಾಪ್ತತ್ವವನ್ನು ಹೇಳುತ್ತವೋ, ಅವುಗಳೆಲ್ಲವೂ ಸಾವಕಾಶವಾದ್ದರಿಂದ ಅವುಗಳ ವಿರೋಧದ ಭಯವೂ ಕೂಡ ಇಲ್ಲ.

**तत्वप्रकाशिका – चक्षसः चक्षुषः । न च व्याप्तिश्रुतेः सुदृढार्थतया बलवत्त्वम्। अत्राप्यात्मनोऽणुत्वादौ चक्षुषो दृष्टान्ततयोक्तत्वात् विशेषश्रुतित्वाच्च बलवत्त्वमिति।**

**यदीन्द्रियाणि स्वरूपतो वितत्यावस्थितानि तदा सर्वग्रहणं च प्रसज्येत सुप्त्याद्यभावश्च ।**

ಭಾಷ್ಯದಲ್ಲಿರುವ 'ಚಕ್ಷುಃ' ಎಂಬ ಪದಕ್ಕೆ ಕಣ್ಣಿನಿಂದ ಎಂದರ್ಥ. ವ್ಯಾಪ್ತಿಶ್ರುತಿಯು ಅಕ್ಷರಶಃ ಸುದೃಢವಾದ್ದರಿಂದ ಬಲಿಷ್ಠವಾಗಿದೆ ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಈ ಶ್ರುತಿಯಲ್ಲೂ ಕೂಡ ಜೀವಾತ್ಮನು ಅಣುವಾಗಿದ್ದಾನೆ ಎಂಬ ವಿಷಯದಲ್ಲಿ ಇದೇ ಚಕ್ಷುಸ್ಸಿನ ದೃಷ್ಟಾಂತವನ್ನು ನೀಡಲಾಗಿದೆ. ಮತ್ತು ಅಣುತ್ವವಿಷಯದಲ್ಲಿ ವಿಶೇಷ ಶ್ರುತಿ ಇರುವುದರಿಂದಲೂ ಇದು ಬಲಿಷ್ಠವಾಗಿದೆ. ಒಂದುವೇಳೆ ಇಂದ್ರಿಯಗಳು ಸ್ವರೂಪತಃ ವ್ಯಾಪ್ತವಾಗಿದ್ದರೆ ಎಲ್ಲಾ ವಸ್ತುಗಳೂ ಒಂದೇ ಕಾಲದಲ್ಲಿ ಗ್ರಹಣವಾಗಬೇಕಾಗುತ್ತದೆ. ಮತ್ತು ಸುಷುಪ್ತಿಯೇ ಬಾರದಿರಬೇಕಾಗುತ್ತದೆ.

ವಿವರಣೆ - ಇಂದ್ರಿಯಗಳು ಹಾಗೂ ವಿಷಯಗಳು ಇವೆರಡಕ್ಕೂ ನಿರಂತರವಾಗಿ ಸನ್ನಿಕರ್ಷ ಇರುವುದಾದರೆ ಯಾವಾಗಲೂ ಕೂಡ ಜ್ಞಾನವು ಬರಬೇಕಾಗುತ್ತಲೇ ಇರಬೇಕಾಗುತ್ತದೆ. ಆಗ ಸುಷುಪ್ತಿಯ ಅವಸ್ಥೆಯೇ ಇಲ್ಲದಂತಾಗುವ ಪರಿಸ್ಥಿತಿ ಬರುತ್ತದೆ. ಆದ್ದರಿಂದ ಇಂದ್ರಿಯಗಳಿಗೆ ಸ್ವರೂಪತಃ ವ್ಯಾಪ್ತಿಯನ್ನು ಅಂಗೀಕಾರ ಮಾಡಬಾರದು. ಇಂದ್ರಿಯಗಳು ಯಾವಾಗಲೂ ಸಂಬಂಧವನ್ನು ಹೊಂದುತ್ತವೆ. ಆದರೂ ಕೂಡ ಆಗಂತುಕ ಸಹಕಾರಿ ಇದ್ದಾಗ ಮಾತ್ರ ಜ್ಞಾನವನ್ನು ಹುಟ್ಟಿಸಲು ಸಮರ್ಥವಾಗುತ್ತವೆ ಎಂದು ಹೇಳಬಾರದು. ಹಾಗಾದರೆ ಇಂದ್ರಿಯಗಳಿಗೆ ವ್ಯಾಪ್ತಿಯನ್ನು ಒಪ್ಪಿದ್ದೇ ವ್ಯರ್ಥವಾಗುತ್ತದೆ. ಏಕೆಂದರೆ ಅಣುತ್ವವನ್ನು ಒಪ್ಪಿಯೂ ಕೂಡ ಇದನ್ನು ಕೂಡಿಸಬಹುದು.

ಪ್ರಕಾಶವು ವ್ಯಾಪ್ತವಾಗಿದೆ ಎಂಬ ಪಕ್ಷದಲ್ಲೂ ಕೂಡ ನಮಗೆ ಹೇಳಿದ ದೋಷ ಸಮಾನವಲ್ಲವೇ? ಎಂದು ಆಕ್ಷೇಪ ಮಾಡಬಹುದು. ಆದರೆ ಪ್ರಕಾಶಕ್ಕೆ ನಾವು ಸಂಕೋಚ ವಿಕಾಸಗಳನ್ನು ಒಪ್ಪಿರುವುದರಿಂದ ಆ ದೋಷಗಳು ಬರುವುದಿಲ್ಲ.

**तत्वप्रकाशिका – स्यादेतत् । शब्दो हि वक्तृवक्त्रादुत्पन्नः शब्दान्तरमुत्पादयति सोऽप्येवम् । यत्र तु प्रतिघातकारणेन द्रव्येणाऽहन्यते न तत्रोत्पादयति । तत्र यः कर्णशष्कुल्यवच्छिन्ने वियत्युत्पद्यते स श्रूयते इति कथं दूरस्यश्रवणमनुज्ञायत इति । मैवम् । श्रोत्रोत्पन्नशब्दग्रहणे मानाभावात्।**

ಆಕ್ಷೇಪ – ಇದು ಇರಲಿ. ಆದರೂ ಶಬ್ದವು ವಕ್ತೃವಿನ ಮುಖದಿಂದ ಹುಟ್ಟಿ ಬೇರೆ ಶಬ್ದವನ್ನು ಹುಟ್ಟಿಸುತ್ತದೆ. ಆ ಶಬ್ದವೂ ಕೂಡ ಇನ್ನೊಂದು ಶಬ್ದವನ್ನು ಹುಟ್ಟಿಸುತ್ತದೆ. ಆ ಶಬ್ದವೂ ಕೂಡ ಹೀಗಿಯೇ ಇನ್ನೊಂದು ಶಬ್ದವನ್ನು ಹುಟ್ಟಿಸುತ್ತದೆ. ಎಲ್ಲಿ ಆ ಶಬ್ದದ ಪರಂಪರೆಗೆ ತಡೆಯು ಬರುತ್ತದೋ ಅಲ್ಲಿ ಮಾತ್ರ ಇನ್ನೊಂದು ಶಬ್ದವು ಹುಟ್ಟುವುದಿಲ್ಲ. ಅಲ್ಲಿ ಯಾವುದು ಕಿವಿಯ ಒಳಗಡೆ ಆಕಾಶದಿಂದ ಉತ್ಪನ್ನವಾಗುತ್ತದೋ ಅದು ಮಾತ್ರ ಕೇಳಿಸುತ್ತದೆ. ಆದ್ದರಿಂದ ದೂರದಲ್ಲಿರುವ ಶಬ್ದದ ಶ್ರವಣವು ಆಗುತ್ತದೆಂಬುದನ್ನು ಸಿದ್ಧಾಂತಿಗಳಾದ ನೀವು ಹೇಗೆ ಒಪ್ಪುತ್ತೀರಿ?

ಸಮಾಧಾನ – ಇದು ತಪ್ಪು. ಕಿವಿಯಲ್ಲಿರುವ ಆಕಾಶದಲ್ಲಿರುವ ಶಬ್ದವೇ ಗ್ರಹಣವಾಗುತ್ತದೆಂಬ ವಿಷಯದಲ್ಲಿ ಪ್ರಮಾಣವಿಲ್ಲ.

ವಿವರಣೆ – ಹಿಂದೆ ಪೂರ್ವಪಕ್ಷ ಮಾಡುವಾಗ 'ದೂರಸ್ಥವಸ್ತುದರ್ಶನಶ್ರವಣಸ್ಮರಣಾದಿಃ' ಎಂಬುದಾಗಿ ಆಕ್ಷೇಪ ಮಾಡಿದ್ದನು. ಇಲ್ಲಿರುವ 'ದೂರಸ್ಥಶ್ರವಣಸ್ಯ' ಎಂಬುದನ್ನು ಸಿದ್ಧಾಂತಿಗಳು

ಖಂಡನೆ ಮಾಡಿರುವುದಿಲ್ಲ. ಆದ್ದರಿಂದ ಪೂರ್ವಪಕ್ಷಿಗಳು 'ಸ್ಯಾದೇತತ್' ಇತ್ಯಾದಿಯಾಗಿ ಸಮರ್ಥನೆ ಮಾಡುತ್ತಿದ್ದಾನೆ.

ಉತ್ತರೋತ್ತರ ಶಬ್ದಗಳ ಪರಂಪರೆಯಲ್ಲಿ ಗೋಡೆ ಮೊದಲಾದ ಪ್ರತಿಘಾತಗಳು ಬಂದಾಗ ಮುಂದಿನ ಶಬ್ದವು ಹುಟ್ಟುವುದಿಲ್ಲ. ಆದ್ದರಿಂದ ಶಬ್ದದ ಜೊತೆ ಶ್ರೋತ್ರೇಂದ್ರಿಯಕ್ಕೆ ಸನ್ನಿಕರ್ಷವನ್ನು ಹೇಳುವುದೇ ಕಷ್ಟವಾಗುತ್ತದೆ. ಹಾಗಾಗಿ ವೀಚಿತರಂಗನ್ಯಾಯದಿಂದ ಕರ್ಣಶಷ್ಕುಲ್ಯವಚ್ಛಿನ್ನವಾದ ಆಕಾಶದಲ್ಲಿ ಹುಟ್ಟುವ ಶಬ್ದವನ್ನೇ ಶ್ರವಣೇಂದ್ರಿಯವು ಗ್ರಹಣ ಮಾಡುತ್ತದೆಂದು ಹೇಳಬೇಕು. ಆದ್ದರಿಂದ ದೂರದಲ್ಲಿರುವ ಶಬ್ದವನ್ನು ಗ್ರಹಣ ಮಾಡುವ ಶಕ್ತಿ ಶ್ರೋತ್ರೇಂದ್ರಿಯಕ್ಕೆ ಇರುವುದಿಲ್ಲವೆಂದು ಪೂರ್ವಪಕ್ಷವನ್ನು ಮಾಡುತ್ತಿದ್ದಾನೆ. ಆದರೆ ಇದು ತಪ್ಪು. ಕರಣಶಷ್ಕುಲ್ಯವಚ್ಛಿನ್ನವಾದ ಆಕಾಶದಲ್ಲಿ ಉತ್ಪನ್ನವಾದ ಶಬ್ದವನ್ನೇ ಶ್ರೋತ್ರೇಂದ್ರಿಯವು ಗ್ರಹಣ ಮಾಡುತ್ತದೆನ್ನಲು ಪ್ರಮಾಣವಿದ್ದಿದ್ದರೆ ಹಾಗೆ ಹೇಳಬಹುದಿತ್ತು. ಆದರೆ ಆ ವಿಷಯದಲ್ಲಿ ಪ್ರಮಾಣವಿಲ್ಲ.

**तत्वप्रकाशिका – अन्यथाऽप्राप्यग्रहणप्रसङ्ग इति चेन्न । चक्षुर्वच्छ्रोत्रस्यैव गमनोपपत्तेः । श्रोत्रस्याकाशतयाऽमूर्तत्वान्नेति चेन्न । किमाकाशपदेनोच्यते । अवकाश इति चेत् तत्कुतोऽवकाशत्वं श्रोत्रस्य । परिशेषादिति चेन्न । भूताकाशस्य द्रव्यान्तरस्य विद्यमानत्वेन परिशेषानुपपत्तेः । तदनभ्युपगमे श्रुत्यादिविरोधः।**

ಆಕ್ಷೇಪ – ಶ್ರೋತ್ರಾಕಾಶದಲ್ಲಿ ಉತ್ಪನ್ನವಾದ ಶಬ್ದವನ್ನು ಗ್ರಹಣ ಮಾಡದಿದ್ದರೆ ಅಪ್ರಾಪ್ತಿಗ್ರಹಣ ಪ್ರಸಂಗವು ಬರುತ್ತದೆ. ವಿಷಯ ಸಂಬಂಧವಾಗದೆ ಶಬ್ದಗ್ರಹಣವಾಗಲಿ ಎಂಬ ಅತಿಪ್ರಸಂಗ ಬರುತ್ತದಲ್ಲವೇ?

ಸಮಾಧಾನ – ಈ ದೋಷ ಬರುವುದಿಲ್ಲ. ಏಕೆಂದರೆ ಚಕ್ಷುರಿಂದ್ರಿಯದಂತೆ ಶ್ರೋತ್ರೇಂದ್ರಿಯಕ್ಕೂ ಕೂಡ ಗಮನವು ಉಪಪನ್ನವಾಗುತ್ತದೆ.

ಆಕ್ಷೇಪ – ಶ್ರೋತ್ರೇಂದ್ರಿಯವು ಆಕಾಶಾತ್ಮಕವಾದ್ದರಿಂದ ಅಮೂರ್ತವಾಗಿದೆ. ಇದಕ್ಕೆ ಗಮನವನ್ನು ಹೇಗೆ ಹೇಳುವಿರಿ?

ಸಮಾಧಾನ – ಆಕಾಶ ಎಂದರೆ ಏನರ್ಥ? ಅವಕಾಶವೆಂದರ್ಥವನ್ನು ವಿವಕ್ಷಿಸಿದರೆ ಶ್ರೋತ್ರೇಂದ್ರಿಯಕ್ಕೆ ಅವಕಾಶಾತ್ಮಕತ್ವವು ಹೇಗೆ ಯುಕ್ತವಾಗುತ್ತದೆ? ಪರಿಶೇಷಪ್ರಮಾಣದಿಂದ ಎಂದು ಹೇಳಬೇಕು. ಹಾಗೆ ಹೇಳಲು ಸಾಧ್ಯವಿಲ್ಲ. ಏಕೆಂದರೆ ಭೂತಾಕಾಶವೆಂಬ ದ್ರವ್ಯಾಂತರವು ಇರುವಾಗ ಪರಿಶೇಷ ಪ್ರಮಾಣವನ್ನು ಸಮರ್ಥಿಸಲಾಗದು. ಪ್ರತ್ಯೇಕವಾಗಿ ಭೂತಾಕಾಶವನ್ನೇ ಒಪ್ಪದಿದ್ದರೆ ಶ್ರುತ್ಯಾದಿಗಳ ವಿರೋಧವು ಪ್ರಾಪ್ತವಾಗುತ್ತದೆ.

ವಿವರಣೆ – ಶ್ರೋತ್ರೇಂದ್ರಿಯವು ಚಕ್ಷುರಿಂದ್ರಿಯದಂತೆ ಗತ್ವಾಗ್ರಾಹಿ ಎಂದು ಹೇಳಿದರೆ ಶಬ್ದವಿಷಯದಲ್ಲಿ ದಿಕ್‌ಸಂಶಯವೇ ಬಾರದಿರಲಿ ಎಂಬ ಆಕ್ಷೇಪ ತಪ್ಪು. ಗತ್ವಾಗ್ರಾಹಿ ಅಲ್ಲವೆಂದು ಹೇಳಿದರೆ ದಿಙ್‌ನಿರ್ಣಯವೂ ಕೂಡ ಆಗದಿರಬೇಕಾಗುತ್ತದೆ. ಸಂಶಯಕ್ಕಿಂತಲೂ ನಿಶ್ಚಯವೇ ಶ್ರೇಷ್ಠವಷ್ಟೆ. ಕೆಲವೆಡೆ ಶಬ್ದದಲ್ಲಿ ದಿಕ್‌ಸಂಶಯವು ರೂಪಾದಿಗಳಂತೆ ವಿಶೇಷಬಲದಿಂದ ಯುಕ್ತವಾಗುತ್ತದೆ.

ಶ್ರೋತ್ರವು ಗತ್ವಾಗ್ರಾಹಿ ಎಂದರೆ ಸಂಕೋಚದಲ್ಲಿ ಕಾರಣವಿಲ್ಲದ್ದರಿಂದ ದೇವತೆಗಳ ಮಾತುಗಳು ಕೇಳಿಸಬೇಕಾದೀತು ಎಂದು ಪ್ರಶ್ನಿಸಬಾರದು. ಚಕ್ಷುರಿಂದ್ರಿಯಗಳು ಗತ್ವಾಗ್ರಾಹಿ ಎಂದು ಒಪ್ಪಿದಾಗಲು ದೇವತೆಗಳು ಕಾಣಿಸಬೇಕಾಗುತ್ತದೆಂಬ ಅತಿಪ್ರಸಂಗ ಇದ್ದೇ ಇದೆ.

ಪರಿಪೂರ್ಣಚಂದ್ರಿಕಾ

ಶ್ರೋತ್ರವು ಆಕಾಶ ಸ್ವರೂಪ ಎಂದು ಹೇಳಿದರೆ ಆಕಾಶ ಎಂದರೆ ಏನು? ಎಂಬ ಪ್ರಶ್ನೆ ಬರುತ್ತದೆ. ಅವಕಾಶವನ್ನು ಆಕಾಶವೆಂದರೆ ಯಾವ ಪ್ರಮಾಣದಿಂದ ಅವಕಾಶವೆಂಬ ಅರ್ಥವು ದೊರೆಯುತ್ತದೆ ಎಂದು ಪ್ರಶ್ನಿಸಲಾಗಿದೆ. ಇಲ್ಲಿರುವ ಅವಕಾಶ ಪದಕ್ಕೆ ಅವ್ಯಾಕೃತಾಕಾಶ ಎಂಬರ್ಥವನ್ನು ವಿವಕ್ಷಿಸಬೇಕು. ಶ್ರೋತ್ರವು ಗಂಧವನ್ನು ಗ್ರಹಣ ಮಾಡುತ್ತಿಲ್ಲ. ಆದ್ದರಿಂದ ಪೃಥಿವಿಯಲ್ಲ. ರಸವನ್ನು ಗ್ರಹಣ ಮಾಡುತ್ತಿಲ್ಲ. ಆದ್ದರಿಂದ ಜಲವಲ್ಲ. ಹೀಗೆ ಯಾವುದೇ ಒಂದು ಗುಣವನ್ನು ಗ್ರಹಣ ಮಾಡದೇ ಇರುವುದರಿಂದ ಶಬ್ದವನ್ನು ಮಾತ್ರ ಗ್ರಹಣ ಮಾಡುತ್ತಿರುವುದರಿಂದ ಆಕಾಶಯಾಗಬೇಕೆಂದು ಪರ್ಯವಸಾನ ಮಾಡುತ್ತೇವೆ. ಹೀಗೆ ಪರಿಶೇಷ ಪ್ರಮಾಣದಿಂದ ಶ್ರೋತ್ರಕ್ಕೆ ಅವ್ಯಾಕೃತಾಕಾಶಾತ್ಮಕತ್ವವು ಸಿದ್ಧವಾಗುತ್ತದಲ್ಲವೇ? ಎಂಬುದು ಆಕ್ಷೇಪಕಾರರ ಅಭಿಪ್ರಾಯ. ಆದರೆ ಇದು ಸರಿಯಲ್ಲ. ಏಕೆಂದರೆ ಅವ್ಯಾಕೃತಾಕಾಶಕಿಂತ ಭಿನ್ನವಾದ ಭೂತಾಕಾಶ ಇರಬೇಕಾದರೆ ಭೂತಾಕಾಶ ಸ್ವರೂಪವೆಂದೇ ಹೇಳಬಹುದಲ್ಲವೇ? ಅವ್ಯಾಕೃತಾಕಾಶ ಎಂದೇಕೆ ಹೇಳಬೇಕು? ಮತ್ತು ಭೂತಾಕಾಶಾತ್ಮಕತ್ವವೆಂದು ಹೇಳಿದಾಗ ಭೂತಾಕಾಶವು ಮೂರ್ತದ್ರವ್ಯವಾಗಿರುವ ಕಾರಣ ಶ್ರೋತ್ರೇಂದ್ರಿಯಕ್ಕೆ ಚಕ್ಷುರಿಂದ್ರಿಯದಂತೆ ಗಮನವನ್ನೂ ಕೂಡ ಸುಲಭವಾಗಿ ಉಪಪಾದನೆ ಮಾಡಲು ಸಾಧ್ಯವಿದೆ.

**तत्वप्रकाशिका – पृथिव्यादीनामप्युपपद्यते श्रोत्रत्वम् । अन्यत्रोपक्षीणानि तानीति चेत् । तच्छरीरानारम्भकत्वप्रसङ्गः । बधिराभावप्रसङ्ग इति चेत् सममवकाशेऽपि । अदृष्टकारणत्वं च समानम् । उपहतिश्च पृथिव्यादीनामेव सम्भवति नावकाशमात्रस्येति युक्त एवाभ्युपगमः ।**

ಅಥವಾ ಶ್ರೋತ್ರಾವಚ್ಛಿನ್ನವಾದ ಅವಕಾಶವು ಪೃಥಿವ್ಯಾದಿಗಳ ಸ್ವರೂಪವನ್ನೂ ಕೂಡ ತಾಳಬಹುದು. ಆ ಪೃಥಿವ್ಯಾದಿಗಳು ಅನ್ಯತ್ರ ಉಪಸ್ಥಿತವಾಗಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಹಾಗಾದರೆ ಪಾರ್ಥಿವಾದಿ ಶರೀರಗಳಿಗೂ ಪೃಥಿವ್ಯಾದಿಗಳು ಆರಂಭಕ ಆಗದೇ ಇರುವ ಪ್ರಸಂಗವು ಬರುತ್ತದೆ.

ಹಾಗಾದರೆ ಕಿವುಡನೇ ಇಲ್ಲದಂತಹ ಪರಿಸ್ಥಿತಿ ಬರುತ್ತದಲ್ಲವೇ? ಎಂದು ಪ್ರಶ್ನಿಸಿದರೆ ಅವಕಾಶ ಎಂಬ ಅರ್ಥದಲ್ಲಿಯೂ ಕೂಡ ಇದು ಸಮಾನ. ಇಂದ್ರಿಯವಿದ್ದರೂ ಕೆಲವೊಮ್ಮೆ ಶ್ರವಣವಾಗುವುದಿಲ್ಲ. ಇದಕ್ಕೆ ಅದೃಷ್ಟವೇ ಕಾರಣವೆಂದು ಹೇಳಬೇಕೆಂದರೆ ಎರಡು ಪಕ್ಷದಲ್ಲಿಯೂ ಸಮಾನವಾಗಿದೆ.

ಪೃಥಿವ್ಯಾದಿಗಳಿಗೆ ಉಪಹತಿಯು ಇರುತ್ತದೆ. ಅವಕಾಶಕ್ಕೆ ಈ ಉಪಹತಿಯು ಎಂದಿಗೂ ಇರುವುದಿಲ್ಲ. ಆದ್ದರಿಂದ ಅವಕಾಶಕ್ಕೆ ಎಂದಿಗೂ ಉಪಹತಿಯು ಸಂಭವಿಸುವುದಿಲ್ಲ. ಆದ್ದರಿಂದ ಹೀಗೆ ಹೇಳುವುದು ಯುಕ್ತವೇ ಆಗಿದೆ.

ವಿವರಣೆ – 'ತೇಷಾಂ ಭೂತೈಃ ಉಪಚಯಃ' ಎಂಬ ಭವಿಷ್ಯತ್‌ಪರ್ವದ ಮಾತಿನಂತೆ ಇಂದ್ರಿಯಗಳಿಗೆ ಪೃಥಿವ್ಯಾದಿಗಳಿಂದ ಉಪಚಯವಾಗುತ್ತದೆ. ಅಂದರೆ ಪೃಥಿವಿಯು ಹೇಗೆ ದೇಹಾದಿಗಳಿಗೆ ಆರಂಭಕವಾಗಿದೆಯೋ, ಅದರಂತೆ ಶ್ರೋತ್ರೇಂದ್ರಿಯಕ್ಕೂ ಕೂಡ ಆರಂಭಕವಾಗಿದೆ ಎಂದು ಹೇಳಬಹುದು.

ಆಕ್ಷೇಪ – ಪೃಥಿವ್ಯಾದಿಗಳು ಘ್ರಾಣೇಂದ್ರಿಯ, ರಸನೇಂದ್ರಿಯಾಗಳನ್ನು ಹುಟ್ಟಿಸುವುದರಲ್ಲಿಯೇ ಕೃತಕೃತ್ಯವಾಗಿದೆ. ಆದ್ದರಿಂದ ಶ್ರೋತ್ರಾರಂಭಕತ್ವವನ್ನು ಹೇಳಲು ಸಾಧ್ಯವಿಲ್ಲ. ಮತ್ತು ಪೃಥಿವ್ಯಾದಿಗಳಿಗೆ ಶ್ರೋತ್ರಾರಂಭಕತ್ವವನ್ನು ಅಂಗೀಕಾರ ಮಾಡಿದರೆ ಕಿವುಡರಿಗೂ ಕೂಡ ಶ್ರೋತ್ರ ಇರುವುದರಿಂದ ಅವರಿಗೂ ಶಬ್ದ ಗ್ರಹಣವಾಗಲಿ ಎಂಬ ಅತಿಪ್ರಸಂಗ ಬರುತ್ತದಲ್ಲವೇ?

ಅಣ್ವಧಿಕರಣ (೨-೪-೩)

ಸಮಾಧಾನ – ಅವ್ಯಾಕೃತಾಕಾಶವೇ ಶ್ರೋತ್ರವೆಂದು ಹೇಳುವ ನಿಮಗೂ ಕೂಡ ಈ ದೋಷವು ಸಮಾನವಾಗಿದೆ. ಏಕೆಂದರೆ ಕಿವುಡರ ಕರಣಶಷ್ಕುಲಿಯಲ್ಲಿ ಅವಕಾಶವು ಇದ್ದೇ ಇರುತ್ತದೆ. ಆದ್ದರಿಂದ ಶಬ್ದಗ್ರಹಣವಾಗಲಿ ಎಂಬ ಆಪತ್ತಿ ತಪ್ಪಿದ್ದಲ್ಲ.

ಆಕ್ಷೇಪ – ನಾವು ಶ್ರೋತ್ರವು ಕೇವಲ ಅವ್ಯಾಕೃತಾಕಾಶವೆಂದು ಹೇಳುವುದಿಲ್ಲ. ಅದೃಷ್ಟವಿಶೇಷವೂ ಕೂಡ ಶಬ್ದಗ್ರಹಣಕ್ಕೆ ಕಾರಣವಾಗಿದೆ. ಬದಿರನಲ್ಲಿ ಅದೃಷ್ಟವಿಲ್ಲದಕಾರಣ ಶಬ್ದಗ್ರಹಣವು ಆಗುವುದಿಲ್ಲ.

ಸಮಾಧಾನ – ಹಾಗಾದರೆ ಪೃಥಿವ್ಯಾದಿಗಳೇ ಶ್ರೋತ್ರೇಂದ್ರಿಯವೆಂದು ಅಂಗೀಕರಿಸಿ ಅದೃಷ್ಟವಿದ್ದರೆ ಮಾತ್ರ ಶಬ್ದಗ್ರಹಣವಾಗುತ್ತದೆ. ಅದೃಷ್ಟವಿಶೇಷವಿಲ್ಲದಿದ್ದರೆ ಶಬ್ದಗ್ರಹಣ- ವಾಗುವುದಿಲ್ಲ. ಬದಿರನಲ್ಲಿ ಅದೃಷ್ಟವಿಶೇಷವಿಲ್ಲದ ಕಾರಣ ಶಬ್ದಗ್ರಹಣವಾಗುತ್ತಿಲ್ಲ ಎಂಬ ಸಮಾಧಾನ ನಮ್ಮಲ್ಲೂ ಸಮಾನ.

ಆಕ್ಷೇಪ – ಅಪ್ರತಿಬದ್ಧವಾದ ಆಕಾಶವು ಶ್ರೋತ್ರಾತ್ಮಕವೆಂದು ಹೇಳುತ್ತೇವೆ. ಕೇವಲ ಆಕಾಶವು ಬದಿರಾದಿಗಳಲ್ಲಿದ್ದರೂ ಕೂಡ ವಾಯು ಮೊದಲಾದ ದ್ರವ್ಯದಿಂದ ಅದು ಪ್ರತಿಬದ್ಧವಾಗಿದೆ. ಅಪ್ರತಿಬದ್ಧವಾದ ಆಕಾಶವನ್ನು ಬದಿರಾದಿಗಳ ಶ್ರೋತ್ರೇಂದ್ರಿಯವೆಂದು ವಿವಕ್ಷಿಸಲು ಸಾಧ್ಯವಿಲ್ಲ. ಹಾಗಾಗಿ ಬದಿರಾದಿಗಳಿಗೆ ಶಬ್ದ ಜ್ಞಾನವು ಹುಟ್ಟುವುದಿಲ್ಲ.

ಸಮಾಧಾನ – ಬಲಿಷ್ಠವಾದ ದ್ರವ್ಯದಿಂದ ಉಪಹತಿಯು ಬದಿರಾದಿಗಳಿಗೆ ಇರುತ್ತದೆಂಬುದು ನಮ್ಮಲ್ಲೂ ಕೂಡಸಮಾನ. ಪೃಥಿವ್ಯಾದಿಗಳಿಂದಲೇ ಶ್ರೋತ್ರೇಂದ್ರಿಯವು ಉಪಚಿತವಾಗಿದೆ ಎಂದು ಒಪ್ಪಿದಾಗ ಬದಿರಾದಿಗಳಿಗೇಕೆ ಶಬ್ದಗ್ರಹಣವಾಗುವುದಿಲ್ಲವೆಂದರೆ ಬಲಿಷ್ಠವಾದ ವಾಯು ಮೊದಲಾದವುಗಳಿಂದ ಉಪಹತಿ ಇರುವುದರಿಂದ ಎಂದು ಉತ್ತರಿಸುತ್ತೇವೆ. ಆದ್ದರಿಂದ ಪೃಥಿವ್ಯಾದಿಗಳಿಂದಲೇ ಶ್ರೋತ್ರೇಂದ್ರಿಯ ಜನ್ಯವಾಗಿದೆ. ಇಂತಹ ಶ್ರೋತ್ರವು ಗತ್ವಾಗ್ರಾಹಿಯಾಗಿ ದೂರದಲ್ಲಿರುವ ಶಬ್ದವನ್ನು ಗ್ರಹಣ ಮಾಡುತ್ತದೆಂದೇ ಅಂಗೀಕಾರ ಮಾಡಬೇಕು. ಆ ಶಬ್ದವು ಕರಣಶಶ್ಕುಲ್ಯವಚ್ಛಿನ್ನವಾದ ಆಕಾಶದಲ್ಲಿ ಬಂದು ಗ್ರಹಣಮಾಡುತ್ತದೆಂದು ಹೇಳಬಾರದು.

**ತत्वप्रकाशिका – यद्वा चक्षुर्विषय एव तदभ्युपगमः । अत एव पूर्वोत्तरपक्षयोस्तद्विषयश्रुत्युदाहरणम् । अतः श्रुत्यविरोधेन प्राणानामणुत्वसिद्धेर्युक्तो जगत्कारणे हरौ श्रुतिसमन्वय इति सिद्धम् ।।**

ಅಥವಾ ಚಕ್ಷುಸ್ಸಿನ ವಿಷಯದಲ್ಲಿ ಮಾತ್ರ ದೂರಸ್ಥವಿಷಯಗ್ರಹಣವನ್ನು ಹೇಳುತ್ತೇವೆ. ಆದ್ದರಿಂದಲೇ ಪೂರ್ವಪಕ್ಷ ಹಾಗೂ ಸಿದ್ಧಾಂತಪಕ್ಷಗಳಲ್ಲಿ 'ದಿವೀವ ಚಕ್ಷುರಾತತಮ್' ಎಂಬ ಚಕ್ಷುರ್ವಿಷಯಶ್ರುತಿಯನ್ನು ಉಲ್ಲೇಖಿಸದ್ದು ಅರ್ಥಪೂರ್ಣವಾಗಿದೆ. ಹೀಗೆ ಶ್ರುತಿಯ ವಿರೋಧವಿಲ್ಲದ್ದರಿಂದ ಇಂದ್ರಿಯಗಳಿಗೆ ಅಣುತ್ವವು ಸಿದ್ಧವಾಗುತ್ತದೆ. ಆದ್ದರಿಂದ ಜಗತ್ಕಾರಣನಾದ ಶ್ರೀಹರಿಯಲ್ಲಿ ಶ್ರುತಿಸಮನ್ವಯವು ಯುಕ್ತವೆಂದು ಸಾಧಿತವಾಯಿತು.

ವಿವರಣೆ – ಅಥವಾ ಶ್ರೋತ್ರೇಂದ್ರಿಯವನ್ನು ಗತ್ವಾಗ್ರಾಹಿ ಎಂದು ಹೇಳುವುದಿಲ್ಲ. ಚಕ್ಷುರಿಂದ್ರಿಯದಲ್ಲಿ ಮಾತ್ರ ಹೀಗೆ ಹೇಳುತ್ತೇವೆ. ಆದ್ದರಿಂದಲೇ ಪೂರ್ವಪಕ್ಷ ಹಾಗೂ ಉತ್ತರಪಕ್ಷದಲ್ಲಿ ಚಕ್ಷುರಿಂದ್ರಿಯವಿಷಯಕವಾದ ಶ್ರುತಿಯನ್ನಷ್ಟೇ ಉದಾಹರಿಸಲಾಗಿದೆ.

ಇಂದ್ರಿಯಗಳು ಸ್ವರೂಪತಃ ಅಣುವಾಗಿವೆ. ಪ್ರಕಾಶತಃ ವ್ಯಾಪ್ತಿ ಉಳ್ಳವುಗಳಾಗಿವೆ ಎನ್ನಲು ಯಾವುದೇ ಶ್ರುತಿವಿರೋಧವಿಲ್ಲ. ಆದ್ದರಿಂದ ಎಲ್ಲಾ ಇಂದ್ರಿಯಗಳು ಅಣುರೂಪವೆಂಬ ಪ್ರಮೇಯವು ಈ ಅಧಿಕರಣದಿಂದ ಸಿದ್ಧವಾಯಿತು.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಅಣ್ವಧಿಕರಣ ಮುಗಿಯಿತು

ಪರಿಪೂರ್ಣಚಂದ್ರಿಕಾ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अण्वधिकरणम्

### ಇಂದ್ರಿಯಗಳೆಲ್ಲವೂ ಅಣು. ಆದರೆ ಪ್ರಕಾಶತಃ ವ್ಯಾಪ್ತವಾಗಿವೆ

**।। अणवश्च ।। पूर्वत्र प्राणानां सङ्ख्या विचारिता । तदनन्तरं परिमाणं विचार्यत इति सङ्गतिः ।**

ಹಿಂದಿನ ಅಧಿಕರಣದಲ್ಲಿ ಇಂದ್ರಿಯಗಳ ಸಂಖ್ಯೆಯ ಬಗ್ಗೆ ನಿರ್ಧಾರವನ್ನು ಮಾಡಿದ್ದಾಯಿತು. ಈಗ ಇಂದ್ರಿಯಗಳ ಪರಿಮಾಣದ ಬಗ್ಗೆ ವಿಚಾರ ಮಾಡಲಾಗಿದೆ. ಸಂಖ್ಯೆಯನ್ನು ವಿಚಾರ ಮಾಡಿ ಪರಿಮಾಣವನ್ನು ವಿಚಾರ ಮಾಡಲು ಆನಂತರ್ಯ ಸಂಗತಿಯು ಈ ಅಧಿಕರಣಕ್ಕೆ ಇದೆ.

**अत्र ब्रह्मणः श्रुतिसमन्वयेनोक्तं गुणपूर्त्यादि किं न युक्तमुत युक्तमिति चिन्ता। तदर्थं किं प्राणाणुत्वश्रुतिरप्रमाणमुत नेति । तदर्थं किं प्राणाणुत्वश्रुतिः प्रबलव्याप्तिश्रुतिबाधितोत नेति । तदर्थं किं व्याप्तिश्रुतिः स्वरूपव्याप्तिपरोत प्रकाशव्याप्तिपरेति ।**

ಅಧಿಕರಣದ ಸಂಶಯ ಪರಂಪರೆ ಹೀಗಿದೆ– ಬ್ರಹ್ಮನಿಗೆ ಶ್ರುತಿ ಸಮನ್ವಯದ ಮೂಲಕ ಹೇಳಲ್ಪಟ್ಟ ಗುಣಪೂರ್ಣತ್ವವು ಅಯುಕ್ತವೋ ಅಥವಾ ಯುಕ್ತವೋ? ಎಂಬುದು ಈ ಅಧಿಕರಣದ ಪ್ರಧಾನ ವಿಚಾರ. ಇದಕ್ಕಾಗಿ ಇಂದ್ರಿಯಗಳಿಗೆ ಅಣುತ್ವವನ್ನು ಹೇಳುವ ಶ್ರುತಿ ಅಪ್ರಮಾಣವೋ ಅಥವಾ ಅಲ್ಲವೋ? ಎಂಬುದು ಅನಂತರ ಪ್ರಸಕ್ತವಾಗುವ ವಿಚಾರ. ಇದರ ನಂತರ ಇಂದ್ರಿಯಗಳಿಗೆ ಅಣುತ್ವವನ್ನು ಹೇಳುವ ಶ್ರುತಿಯು ಅತ್ಯಂತ ಪ್ರಬಲವಾದ ವ್ಯಾಪ್ತಿ ಶ್ರುತಿಯಿಂದ ಬಾಧಿತವೋ ಅಥವಾ ಅಲ್ಲವೋ? ಎಂಬ ವಿಚಾರವು ಪ್ರಸಕ್ತವಾಗುತ್ತದೆ. ಇದರ ನಂತರ ವ್ಯಾಪ್ತಿ ಶ್ರುತಿಯು ಇಂದ್ರಿಯಗಳ ಸ್ವರೂಪಕ್ಕೆ ವ್ಯಾಪ್ತಿಯನ್ನು ಹೇಳಲು ಹೊರಟಿದೆಯೋ ಅಥವಾ ಪ್ರಕಾಶತಃ ವ್ಯಾಪ್ತಿಯನ್ನು ಹೇಳಲು ಹೊರಟಿದೆಯೋ? ಎಂಬ ವಿಚಾರವನ್ನು ಮಾಡಬೇಕು.

ವಿವರಣೆ – ಇಂದ್ರಿಯಗಳಿಗೆ ಸ್ವರೂಪತಃ ವ್ಯಾಪ್ತಿಯನ್ನೇ ಹೇಳಬೇಕು. ಏಕೆಂದರೆ ಇಂದ್ರಿಯಗಳಿಗೆ ಅಣುತ್ವವನ್ನು ಹೇಳುವ ಶ್ರುತಿಗೆ ಯುಕ್ತ್ಯಯುಕ್ತವಾದ ವ್ಯಾಪ್ತಿಶ್ರುತಿಯಿಂದ ಬಾಧವಿದೆ. ಆದ್ದರಿಂದ

ಅಪ್ರಾಮಾಣ್ಯವನ್ನೇ ಅಣುತ್ವ ಪ್ರತಿಪಾದಕ ಶ್ರುತಿಗೆ ಹೇಳಬೇಕು. ಹೀಗಿರುವಾಗ ಸಕಲ ಶ್ರುತಿಸಮನ್ವಯವನ್ನು ಬ್ರಹ್ಮನಲ್ಲಿ ಹೇಳಲು ಹೇಗೆ ಸಾಧ್ಯ ? ಎಂಬುದು ಪೂರ್ವಪಕ್ಷ.

ಇಂದ್ರಿಯಗಳಿಗೆ ಪ್ರಕಾಶತಃ ವ್ಯಾಪ್ತಿ ಇದೆಯೇ ಹೊರತು ಸ್ವರೂಪತಃ ವ್ಯಾಪ್ತಿಯು ಇರುವುದಿಲ್ಲ. ಇಂದ್ರಿಯಗಳಿಗೆ ಅಣುತ್ವವನ್ನು ಹೇಳುವ ಶ್ರುತಿಗೆ ವ್ಯಾಪ್ತಿ ಪ್ರತಿಪಾದಕವಾದ ಶ್ರುತಿಯಿಂದ ಬಾಧದೋಷವು ಇರುವುದಿಲ್ಲ. ಆದ್ದರಿಂದ ಅಪ್ರಾಮಾಣ್ಯದೋಷವು ಶ್ರುತಿಗೆ ಸರ್ವಥಾ ಇಲ್ಲ. ಸಕಲ ಶ್ರುತಿಗಳೂ ಕೂಡ ಪ್ರಮಾಣವೇ ಆಗಿರುತ್ತವೆ. ಏತನ್ಮೂಲಕವಾಗಿ ಶ್ರುತಿಸಮನ್ವಯವನ್ನು ಮಾಡಿ ವಿಷ್ಣುವಿನಲ್ಲಿ ಗುಣಪೂರ್ಣತ್ವವನ್ನು ಪ್ರತಿಪಾದನೆ ಮಾಡುತ್ತೇವೆ. ಇಷ್ಟು ಅಧಿಕರಣದ ಸಿದ್ಧಾಂತ.

**भाष्योक्तां युक्तिमाह – अतिसुदृढं हीति ।। न्यायविवरणोक्तां तामाह – किञ्चेति ।। मानाभावादिति ।। स एवायं शब्द इत्यादिबुद्धिबाधाचेत्यपि ग्राह्यम् ।।**

ಭಾಷ್ಯದಲ್ಲಿ ಹೇಳಿದ ಯುಕ್ತಿಯನ್ನು 'ಅತಿಸುದೃಢಂ ಹಿ' ಎಂಬ ಟೀಕೆಯಿಂದ ಹೇಳುತ್ತಿದ್ದಾರೆ. ನ್ಯಾಯವಿವರಣದಲ್ಲಿ ಹೇಳಿದ ಅದೇ ಯುಕ್ತಿಯನ್ನು 'ಕಿಂಚ' ಎಂಬ ಗ್ರಂಥದಿಂದ ಹೇಳಿದ್ದಾರೆ. 'ಮಾನಾಭಾವಾತ್' ಎಂಬಲ್ಲಿ 'ಸ ಏವಾಯಂ ಶಬ್ದಃ' ಇತ್ಯಾದಿಯಾದ ಬಾಧವು ಇರುವುದರಿಂದ ಎಂಬುದನ್ನೂ ಕೂಡ ಇಲ್ಲಿ ವಿವಕ್ಷಿಸಬೇಕು.

ವಿವರಣೆ – ಇಂದ್ರಿಯಗಳು ಲಕ್ಷಾಂತರ ಯೋಜನ ದೂರದಲ್ಲಿರುವ ಗ್ರಹ, ನಕ್ಷತ್ರಾದಿಗಳನ್ನು ನೋಡುತ್ತವೆ. ಇಂದ್ರಿಯಗಳು ಇಲ್ಲೇ ಇದ್ದರೆ ಅಷ್ಟು ದೂರದಲ್ಲಿರುವ ಗ್ರಹ, ನಕ್ಷತ್ರಗಳ ಜ್ಞಾನವು ಬರಲು ಸಾಧ್ಯವಿಲ್ಲ. ಇಲ್ಲಿಂದ ಹೊರಟು ಅಲ್ಲಿ ಹೋಗಿ ನೋಡುತ್ತವೆ ಎಂದು ಹೇಳುವುದೂ ಕೂಡ ಅಯುಕ್ತವಾಗುತ್ತದೆ. ಆದ್ದರಿಂದ ಇಂದ್ರಿಯಗಳು ವ್ಯಾಪ್ತವೆಂದೇ ಹೇಳಬೇಕು ಎಂಬ ಯುಕ್ತಿಯನ್ನು ಭಾಷ್ಯದಲ್ಲಿ ಹಾಗೂ ನ್ಯಾಯವಿವರಣದಲ್ಲಿ ಹೇಳಿದ್ದಾರೆ.

'ಮಾನಾಭಾವಾತ್' ಎಂಬ ವಾಕ್ಯವು ಸಿದ್ಧಾಂತವನ್ನು ಸ್ಥಾಪನೆ ಮಾಡುವ ಸಂದರ್ಭದಲ್ಲಿ ಟೀಕಾದಲ್ಲಿ ಪ್ರಸಕ್ತವಾಗಿದೆ. ಕರ್ಣಶಷ್ಕುಲ್ಯವಚ್ಛಿನ್ನವಾದ ಆಕಾಶದಲ್ಲಿ ವೀಚೀತರಂಗನ್ಯಾಯದಿಂದ ಶಬ್ದವು ಬಂದಿರುತ್ತದೆ. ಅದನ್ನೇ ಶ್ರೋತ್ರವು ಗ್ರಹಣ ಮಾಡುತ್ತದೆ ಎಂದು ಪೂರ್ವಪಕ್ಷಿಗಳು ಹೇಳುತ್ತಾರೆ. ಈ ವಿಷಯದಲ್ಲಿ ಯಾವುದೇ ಪ್ರಮಾಣವಿಲ್ಲ ಎಂದು ಟೀಕೆಯಲ್ಲಿ ಹೇಳಿದ್ದಾರೆ. ಉಪಲಕ್ಷಣಯಾ ಇದನ್ನೂ ಕೂಡ ವಿವಕ್ಷಿಸಬೇಕು. 'ಯಃ ಏವ ಭೇರಿಶಬ್ದಃ ಸ ಏವ ಅಯಂ ಮಯಾ ಶ್ರುತಃ' ಎಂಬುದಾಗಿ ನಮಗೆ ಅನುಭವವು ಬರುತ್ತಿದೆ. ವೀಚೀತರಂಗನ್ಯಾಯದಿಂದ ಶಬ್ದವು ಶ್ರುತವಾಗುತ್ತದೆನ್ನುವುದಾದರೆ ಭೇರಿಶಬ್ದವನ್ನಾಗಲೀ, ಮೃದಂಗಶಬ್ದವನ್ನಾಗಲೀ ನಾವು ಕೇಳಿದ್ದೇ ಇಲ್ಲ. ಅದರ ಪರಂಪರೆಯಲ್ಲಿ ಬಂದಿರುವ ಶಬ್ದವನ್ನಷ್ಟೇ ನಾವು ಕೇಳಿದ್ದೇವೆ. ಹೀಗಿರುವಾಗ ಭೇರಿ ಶಬ್ದವನ್ನೇ ಕೇಳಿದ್ದೇನೆ ಎಂಬ ಅನುಭವವನ್ನು ಅಪಲಾಪ ಮಾಡಿದಂತಾಗುತ್ತದೆ. ಹೀಗೆ ಪ್ರತ್ಯಭಿಜ್ಞಾಬಾಧದೋಷ ಪ್ರಯುಕ್ತವಾಗಿ ವೀಚಿ ತರಂಗ ನ್ಯಾಯವು ಅಪ್ರಾಮಾಣಿಕವಾಗಿದೆ.

**श्रोत्रस्यैव गमनोपपत्तेरिति ।। क्वचिच्छब्दादौ देशसन्देहस्तु रूपादाविव दोषबलाद्युक्तः । ब्रह्मभाषितादीनामग्रहणमपि ब्रह्मरूपादीनामग्रहणवद्युक्तम् । यथा हि चक्षुषो गमनं कार्यानुसारेण सङ्कुचितं कल्प्यते तथा श्रोत्रस्यापीति भावः । अन्यत्र घ्राणाद्यारम्भे ।**

'ಶ್ರೋತ್ರಸ್ಯೈವ ಗಮನೋಪಪತ್ತೇಃ' ಇತ್ಯಾದಿ ಟೀಕೆಯ ಅಭಿಪ್ರಾಯ ಹೀಗಿದೆ – ಶ್ರೋತ್ರೇಂದ್ರಿಯವು ಗತ್ವಾಗ್ರಾಹಿ ಆಗಿದೆ ಎಂದೇ ಹೇಳುತ್ತೇವೆ. ಗತ್ವಾಗ್ರಾಹಿಯಾದ ಮೇಲೆ ದೇಶದಲ್ಲಿ ಸಂದೇಹ ಏಕೆ ಬರುತ್ತದೆ ಎಂದು ಪ್ರಶ್ನಿಸಬಾರದು. ಕಣ್ಣು ಗತ್ವಾಗ್ರಾಹಿಯಾಗಿದೆ ಎಂದು ನೀವೂ ಕೂಡ ಒಪ್ಪುತ್ತೀರಿ. ಆದರೂ ರೂಪಾದಿಗಳ ಬಗ್ಗೆ ಸಂದೇಹ ಬರುವುದು ದೋಷಪ್ರಯುಕ್ತವಾಗಿ ಎಂದು ಕಂಡಿದೆ. ಅದರಂತೆ ದೇಶಸಂದೇಹಾದಿಗಳೂ ಕೂಡ ದೋಷ ಪ್ರಯುಕ್ತವಾಗಿ ಬರುವುದರಲ್ಲಿ ತಪ್ಪೇನಿಲ್ಲ. ಚಕ್ಷುರಿಂದ್ರಿಯದಂತೆ ಶ್ರೋತ್ರೇಂದ್ರಿಯವೂ ಕೂಡ ಗತ್ವಾಗ್ರಾಹಿ ಎನ್ನಲು ಯಾವುದೇ ಆತಂಕವಿಲ್ಲ.

ಬಹುದೂರದ ತನಕ ಶ್ರೋತ್ರೇಂದ್ರಿಯವು ತೆರಳಿ ವಿಷಯವನ್ನು ಗ್ರಹಣ ಮಾಡುತ್ತದೆನ್ನುವುದಾದರೆ ಸತ್ಯಲೋಕದಲ್ಲಿ ಮಾತನಾಡುತ್ತಿರುವ ಬ್ರಹ್ಮದೇವರ ಮಾತೂ ಕೂಡ ನಮಗೆ ಕೇಳಿಸಬೇಕಾದೀತು.

ಈ ಆಕ್ಷೇಪ ತಪ್ಪು. ಚಕ್ಷುರಿಂದ್ರಿಯವು ಗತ್ವಾಗ್ರಾಹಿ ಎಂದು ನೀವು ಹೇಳುತ್ತೀರಿ. ಹಾಗಾದರೆ ಇದೇ ಚಕ್ಷುರಿಂದ್ರಿಯವು ಬ್ರಹ್ಮಲೋಕದ ತನಕ ತೆರಳಿ ಬ್ರಹ್ಮದೇವರ ಶರೀರವನ್ನು, ರೂಪವನ್ನು ಗ್ರಹಣ ಮಾಡಬೇಕಾಗುತ್ತದೆ. ಅದನ್ನು ಹೇಗೆ ನೀವು ಸಾಧ್ಯವಿಲ್ಲ ಎನ್ನುತ್ತೀರೋ ಅದರಂತೆ ನಾವೂ ಕೂಡ ಬ್ರಹ್ಮನ ಮಾತುಗಳೂ ಕೇಳಿಸುವುದಿಲ್ಲ ಎಂದು ಹೇಳುತ್ತೇವೆ.

ಹೇಗೆ ಚಕ್ಷುರಿಂದ್ರಿಯವು ಗತ್ವಾಗ್ರಾಹಿಯಾದರೂ ಕಾರ್ಯಾನುಕೂಲವಾಗಿ ಗಮನವನ್ನು ಹೊಂದುತ್ತದೆಂದು ನೀವು ಸಂಕೋಚವನ್ನು ಮಾಡುತ್ತೀರೋ ಅದರಂತೆ ಶ್ರೋತ್ರೇಂದ್ರಿಯವೂ ಕೂಡ ಕಾರ್ಯಾನುಕೂಲವಾಗಿ ಇದರ ಗಮನವು ಸಂಕುಚಿತವಾಗುತ್ತದೆಂದು ತಿಳಿಯಬೇಕು. ಗತ್ವಾಗ್ರಾಹಿ ಎಂದ ಮಾತ್ರಕ್ಕೆ ಎಲ್ಲೆಡೆಯೂ ಹೋಗುತ್ತದೆ ಎಂದರ್ಥವಲ್ಲ. ಅದರ ಸಾಮರ್ಥ್ಯದಷ್ಟೇ ದೂರ ಹೋಗುತ್ತದೆ. ಅನ್ಯತ್ರ ಎಂದರೆ ಘ್ರಾಣಾದ್ಯಾರಂಭದಲ್ಲಿ ಎಂದರ್ಥ.

ವಿವರಣೆ – ಒಂದೇ ಪೃಥಿವಿಯು ಘ್ರಾಣಕ್ಕೆ ಆರಂಭಕವಾಗುವಂತೆ ಶ್ರೋತ್ರಕ್ಕೂ ಕೂಡ ಆರಂಭಕವಾಗಬಹುದು. ಹೇಗೆ ಶರೀರಕ್ಕೆ ಪಂಚಭೂತಗಳು ಆರಂಭಕವೆಂದು ಹೇಳಿ ಪುನಃ ಇಂದ್ರಿಯಗಳಿಗೂ ಆರಂಭಕವೆಂದು ಹೇಳುತ್ತೀರೋ ಅದರಂತೆ ಉಪಚಯ ಮಾತ್ರದಿಂದ ಇದನ್ನು ಕೂಡಿಸಲು ಯಾವುದೇ ಬಾಧವಿಲ್ಲ ಎಂದು ಇದರ ಅಭಿಪ್ರಾಯ.

**अन्ये तु साङ्ख्यमत इन्द्रियाणामाहङ्कारिकत्वादहङ्कारस्य च जगन्मण्डलव्यापित्वात्सर्वगताः प्राणा इति पूर्वपक्षितवन्तः ।**

ಅದ್ವೈತಿಗಳು ಈ ಅಧಿಕರಣದ ಪೂರ್ವಪಕ್ಷವನ್ನು ಹೀಗೆ ಹೇಳಿದ್ದಾರೆ. ಸಾಂಖ್ಯ ಮತದಲ್ಲಿ ಇಂದ್ರಿಯಗಳು ಅಹಂಕಾರ ತತ್ವದ ಕಾರ್ಯವಾಗಿದೆ. ಅಹಂಕಾರತತ್ವವು ಜಗನ್ಮಂಡಲದಲ್ಲೇ ವ್ಯಾಪಿಸಿರುವುದರಿಂದ ಇಂದ್ರಿಯಗಳೂ ಕೂಡ ವ್ಯಾಪಿಸಿವೆ ಎಂದು.

**तत्र । श्रुत्योः परस्परविरोधनिरासकेऽस्मिन् पादे साङ्ख्यस्मृतिविरोधनिरासस्यासङ्गतेः ।**

ಇದು ತಪ್ಪು. ಈ ಪಾದದಲ್ಲಿರುವ ಅಧಿಕರಣವು ಶ್ರುತಿಗಳ ಪರಸ್ಪರ ವಿರೋಧವನ್ನು ನಿರಾಕರಣೆ ಮಾಡಬೇಕು. ಸಮಯಗಳ ವಿರೋಧಗಳನ್ನು ಪರಿಹಾರ ಮಾಡಲು ಹೊರಟಿಲ್ಲ. ಆದ್ದರಿಂದ ಸಾಂಖ್ಯನಿಗೆ ಸಂಬಂಧಪಟ್ಟ ಸ್ಮೃತಿ ವಿರೋಧವನ್ನು ಇಲ್ಲಿ ನಿರಾಕರಣೆ ಮಾಡಲು ನೀವು ಹೊರಟಿರುವುದು ಅಸಂಗತವಾಗಿದೆ.

**त्वन्मते कारणस्य शुद्धस्याविद्यावच्छिन्नस्य वा ब्राह्मणोऽविद्याया वाऽनणुत्वेऽपि कार्यस्य मनसोनणुत्ववत् कारणस्याहङ्कारस्य व्यापित्वेऽपि कार्याणां प्राणानामव्यापित्वस्योपपत्त्या पूर्वपक्षानुदयाच्च ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् अण्वधिकरणं सम्पूर्णम् ।।५।।**

ಕಾರಣವು ವ್ಯಾಪ್ತವಾದ ಮಾತ್ರಕ್ಕೆ ಕಾರ್ಯವೂ ಕೂಡ ವ್ಯಾಪ್ತವಾಗುತ್ತದೆಂಬ ನಿಮ್ಮ ಪೂರ್ವಪಕ್ಷ ಯುಕ್ತಿಯೇ ತಪ್ಪು. ಏಕೆಂದರೆ ಸ್ವತಃ ನಿಮ್ಮ ಸಿದ್ಧಾಂತದಲ್ಲೇ ಇದನ್ನು ಒಪ್ಪಿರುವುದಿಲ್ಲ. ನೀವು ಶುದ್ಧ ಬ್ರಹ್ಮನನ್ನು ಕಾರಣವೆನ್ನಬೇಕು. ಅಥವಾ ಅವಿದ್ಯಾವಚ್ಛಿನ್ನನಾದ ಬ್ರಹ್ಮನನ್ನು ಕಾರಣವೆನ್ನಬೇಕು ಅಥವಾ ಅವಿದ್ಯೆಯನ್ನು ಕಾರಣವೆನ್ನಬೇಕು. ಈ ಮೂರು ಕೂಡ ವ್ಯಾಪ್ತವಾಗಿದೆ ಎಂದು ಹೇಳುತ್ತೀರಿ. ಆದರೆ ಈ ಮೂರರ ಕಾರ್ಯವೆನಿಸಿದ ಮನಸ್ಸು ಎಂಬ ಇಂದ್ರಿಯವು ಅಣುವೇ ಆಗಿದೆ. ಅದರಂತೆ ಅಹಂಕಾರತತ್ವವು ಎಲ್ಲೆಡೆ ವ್ಯಾಪಿಸಿದ್ದರೂ ಕೂಡ ಅದರ ಕಾರ್ಯವೆನಿಸಿದ ಇಂದ್ರಿಯಗಳು ವ್ಯಾಪ್ತವಾಗಿರಬೇಕಾಗಿಲ್ಲ, ಅಣುವೂ ಕೂಡ ಆಗಿರಬಹುದು. ಹೀಗೆ ನಿಮ್ಮ ಸಿದ್ಧಾಂತದಲ್ಲಿ ಪೂರ್ವಪಕ್ಷವೇ ಉದಯವಾಗುವುದಿಲ್ಲ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಅಣ್ವಧಿಕರಣವು ಸಂಪೂರ್ಣವಾಯಿತು

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**अणवश्च** ।। पूर्वोत्तरपक्षटीकासूचितचिन्ता आह – **अत्रेति** ।। ननु श्रोत्रस्य चक्षुष इव गत्वाशब्दग्रहणे कुत्रत्यः किमीय इति देशविशेषादिसन्देहो न स्यादित्यत आह – **क्वचिच्छब्देति** ।।

ಪೂರ್ವಪಕ್ಷ ಟೀಕೆ ಹಾಗೂ ಸಿದ್ಧಾಂತ ಪಕ್ಷದ ಟೀಕೆಯಿಂದ ಸೂಚಿತವಾದ ಸಂಶಯ ಪರಂಪರೆಯನ್ನು 'ಅತ್ರ' ಇತ್ಯಾದಿ ಗ್ರಂಥದಿಂದ ತೋರಿಸುತ್ತಿದ್ದಾರೆ.

ಚಕ್ಷುರಿಂದ್ರಿಯದಂತೆ ಶ್ರೋತ್ರೇಂದ್ರಿಯವೂ ಕೂಡ ಹೋಗಿ ಶಬ್ದವನ್ನು ಗ್ರಹಣ ಮಾಡುತ್ತದೆಂದು ಹೇಳುವುದಾದರೆ ಈ ಶಬ್ದವು ಎಲ್ಲಿದೆ? ಈ ಶಬ್ದವು ಯಾರಿಗೆ ಸಂಬಂಧಪಟ್ಟದ್ದು? ಎಂಬ ದೇಶವಿಶೇಷಾದಿ ಸಂದೇಹವೇ ಬಾರದೇ ಇರಬೇಕಾದೀತು ಎಂಬ ಆಕ್ಷೇಪಕ್ಕೆ 'ಕ್ವಚಿತ್ ಶಬ್ದ' ಎಂಬುದರಿಂದ ಉತ್ತರಿಸಿದ್ದಾರೆ.

ವಿವರಣೆ – 'ಕಿಮೀಯಃ' ಎಂಬ ಪ್ರಯೋಗವು ಅಪೂರ್ವವಾಗಿದೆ. ಯಾರಿಗೆ ಸಂಬಂಧಪಟ್ಟದ್ದು ಎಂಬುದು ಇದರ ಅರ್ಥ?

**प्रकाशः** – तर्ह्यतिदूरशब्दश्रवणमपि स्यादित्यत आह – **यथा हीति** ।। अन्यत्रेत्यनुवादेन घ्राणादीति व्याख्या । पूर्वपक्षांशमात्रमनूद्य निराह – **अन्ये त्विति।।**

ಗತ್ವಾಗ್ರಾಹಿಯಾಗುವುದಾದರೆ ಅತ್ಯಂತ ದೂರದಲ್ಲಿರುವ ಶಬ್ದವೂ ಕೂಡ ನಮಗೆ ಕೇಳಿಸಬೇಕಾದೀತು? ಎಂಬ ಪ್ರಶ್ನೆಗೆ 'ಯಥಾ ಹಿ' ಎಂಬುದರಿಂದ ಉತ್ತರಿಸುತ್ತಿದ್ದಾರೆ. 'ಅನ್ಯತ್ರ' ಎಂದು ಅನುವಾದ ಮಾಡಿ 'ಘ್ರಾಣಾದಿ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡಿದ್ದಾರೆ. ಪೂರ್ವಪಕ್ಷಾಂಶವನ್ನಷ್ಟೇ ಅನುವಾದ ಮಾಡಿ 'ಅನ್ಯೇತು' ಇತ್ಯಾದಿಯಾಗಿ ಪರಮತವನ್ನು ಅನುವಾದ ಮಾಡಿದ್ದಾರೆ.

**प्रकाशः** – सिद्धान्ते प्राणानामणुत्वोक्तिर्न विरुद्धा । तथा सर्वेऽनन्ता इत्यादिश्रुत्या प्राणानन्त्येन पूर्वपक्षे तदणुत्वेन सिद्धान्तयतां केषाञ्चिदपि पक्षो न विरुद्ध इति भावः ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे अण्वधिकरणं सम्पूर्णम् ।।९।।**

ಸಿದ್ಧಾಂತದಲ್ಲಿ ಇಂದ್ರಿಯಗಳಿಗೆ ಅಣುತ್ವವನ್ನು ಹೇಳಿದ್ದು ವಿರುದ್ಧವಲ್ಲ ಎಂಬ ಪ್ರಮೇಯವು ಸಿದ್ಧವಾಯಿತು. ರಾಮಾನುಜರ ಮತವನ್ನು ಇಲ್ಲಿ ಗ್ರಂಥಕಾರರು ನಿರಾಕರಣೆ ಮಾಡಿಲ್ಲ. ಏಕೆಂದರೆ ಅವರು ಇಂದ್ರಿಯಗಳು ವ್ಯಾಪ್ತವಾಗಿವೆ ಎಂದು ಪೂರ್ವಪಕ್ಷ ಮಾಡಿ ಅಣುವಾಗಿವೆ ಎಂದು ಸಿದ್ಧಾಂತ ಮಾಡಿದ್ದಾರೆ. ಇದು ನಮಗೂ ಕೂಡ ಸಮ್ಮತವೇ ಆಗಿದೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಅಣ್ವಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

ಪರಿಪೂರ್ಣಚಂದ್ರಿಕಾ

# ಶ್ರೇಷ್ಠಾಧಿಕರಣ

(೨-೪-೬)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

॥ ಶ್ರೀಗುರುಭ್ಯೋ ನಮಃ ॥

# ಶ್ರೇಷ್ಠಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – श्रेष्ठश्च ॥**

ಯಾವರೀತಿಯಾಗಿ ಇಂದ್ರಿಯಗಳು ಹುಟ್ಟುತ್ತವೋ, ಅದರಂತೆ ಮುಖ್ಯಪ್ರಾಣನೂ ಕೂಡ ಪರಮಾತ್ಮನಿಂದ ಹುಟ್ಟುತ್ತಾನೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** यथेतरे प्राणा उत्पद्यन्ते एवं **श्रेष्ठः** मुख्यप्राणोऽपि विष्णोरुत्पद्यत एव न त्वनुत्पत्तिमानित्यर्थः ॥१॥

ಯಾವರೀತಿಯಾಗಿ ಉಳಿದ ಇಂದ್ರಿಯಗಳು ವಿಷ್ಣುವಿನಿಂದ ಹುಟ್ಟುತ್ತವೋ, ಅದೇ ರೀತಿಯಾಗಿ ಶ್ರೇಷ್ಠಶ್ಚ = ಮುಖ್ಯಪ್ರಾಣನೂ ಕೂಡ ವಿಷ್ಣುವಿನಿಂದ ಹುಟ್ಟುತ್ತಾನೆ. ಮುಖ್ಯಪ್ರಾಣನು ಅನಾದಿನಿತ್ಯನಲ್ಲ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – 'नैष प्राण उदेति नास्तमेत्येकल एव मध्ये स्थाता । अथैनमाहुर्मध्यमः' इतीति मुख्यप्राणस्यानुत्पत्तिः श्रूयते ।**

**'यत्प्राप्तिर्यत्परित्याग उत्पत्तिर्मरणं तथा ।**
**तस्योत्पत्तिर्मृतिश्चैव कथं प्राणस्य युज्यते ।।'**

**इति च युक्तिर्वायुप्रोक्ते ।**

**'आत्मत एष प्राणो जायते' (प्र.३.३.) इति च ।**

ಅನುವಾದ - ಈ ಮುಖ್ಯಪ್ರಾಣನು ಹುಟ್ಟಲಾರ ಮರಣವನ್ನು ಹೊಂದಲಾರ ನಿರಂತರ ಒಂದೇ ರೀತಿಯಲ್ಲಿ ಇರುವವನಾಗಿ ಜನನ ಮರಣಗಳ ಮಧ್ಯಾವಸ್ಥೆಯಲ್ಲಿ ಇರುತ್ತಾನೆ. ಆದ್ದರಿಂದಲೇ ಜ್ಞಾನಿಜನರು ಇವನನ್ನು 'ಮಧ್ಯಮ' ಎಂದು ಹೇಳುತ್ತಾರೆ. ಹೀಗೆ ಮುಖ್ಯಪ್ರಾಣನಿಗೆ ಹುಟ್ಟು ಇರುವುದಿಲ್ಲ ಎಂದು ಶ್ರುತಿ ಹೇಳುತ್ತಿದೆ. ಆದರೆ ವಾಯುಪ್ರೋಕ್ತಗ್ರಂಥದಲ್ಲಿ ಮುಖ್ಯಪ್ರಾಣನಿಗೆ ಉತ್ಪತ್ತಿಯೇ ಇಲ್ಲವೆಂದು ಹೇಳಲಾಗಿದೆ.

ದೇಹದೊಳಗೆ ಮುಖ್ಯಪ್ರಾಣನು ಪ್ರವೇಶ ಮಾಡುವುದೇ ಜೀವರಿಗಾಗುವ ಹುಟ್ಟು. ದೇಹದಿಂದ ಮುಖ್ಯಪ್ರಾಣನು ತೆರಳುವುದು ಜೀವರಿಗೆ ಇರುವ ಮರಣ. ಹೀಗಿರುವಾಗ ಮುಖ್ಯಪ್ರಾಣನಿಗೆ ಜನನವನ್ನಾಗಲಿ ಮರಣವನ್ನಾಗಲಿ ಹೇಳಲು ಹೇಗೆ ಸಾಧ್ಯ? ನಮ್ಮ ಹುಟ್ಟು ಸಾವುಗಳು ಮುಖ್ಯಪ್ರಾಣನ ಅಧೀನವಾದ ಮೇಲೆ ಅವನಿಗೆ ಹುಟ್ಟುಸಾವುಗಳಿರಲು ಹೇಗೆ ಸಾಧ್ಯ? ಹೀಗೆ ಯುಕ್ತಿಬದ್ಧವಾಗಿ ಶ್ರುತಿಯು ಮುಖ್ಯಪ್ರಾಣನಿಗೆ ಅನುತ್ಪತ್ತಿಯನ್ನು ಸಮರ್ಥನೆ ಮಾಡುತ್ತಿದೆ.

ಪ್ರತಿಪದಾರ್ಥ:- ಏಷಃ = ಈ, ಪ್ರಾಣಃ = ಮುಖ್ಯಪ್ರಾಣನು, ನ ಉದೇತಿ = ಹುಟ್ಟುವುದಿಲ್ಲ, ನ ಅಸ್ತಮೇತಿ = ಮರಣವನ್ನು ಹೊಂದುವುದಿಲ್ಲ. ಏಕಃ = ನಿರಂತರ ಒಂದೇ ರೀತಿಯಲ್ಲಿ ಇರುತ್ತಾನೆ. ಮಧ್ಯೇ = ಜನನ ಮರಣಗಳ ಮಧ್ಯಾವಸ್ಥೆಯಲ್ಲಿ, ಸ್ಥಾತಾ = ಇರುತ್ತಾನೆ. ಅಥ = ಆದ್ದರಿಂದ, ಏನಮ್ = ಈ ಮುಖ್ಯಪ್ರಾಣನನ್ನು ಜ್ಞಾನಿಗಳು, ಮಧ್ಯಮಃ = ಮಧ್ಯಮ, ಇತಿ = ಎಂದು, ಆಹು = ಹೇಳುತ್ತಾರೆ.

ಇತಿ = ಹೀಗೆ, ಮುಖ್ಯಪ್ರಾಣಸ್ಯ = ಮುಖ್ಯಪ್ರಾಣನಿಗೆ, ಅನುತ್ಪತ್ತಿಃ = ಜನನ ಇಲ್ಲದಿರುವಿಕೆಯು, ಶ್ರೂಯತೇ = ಶ್ರುತವಾಗುತ್ತದೆ.

ಯತ್ = ಯಾವ ದೇಹದೊಳಗೆ, ಪ್ರಾಪ್ತಿಃ = ಮುಖ್ಯಪ್ರಾಣನ ಪ್ರವೇಶವೇ, ಉತ್ಪತ್ತಿಃ = ಜೀವರ ಜನನ ಎಂದು, ಯತ್ = ಯಾವ ದೇಹವನ್ನು, ಪರಿತ್ಯಾಗಃ = ಬಿಟ್ಟು ಹೋಗುವಿಕೆಯು, ಮರಣಂ = ಮರಣವೆಂದು ಹೇಳುತ್ತಾರೋ, ತಸ್ಯ = ಅಂಥ ಪ್ರಾಣಸ್ಯ = ಮುಖ್ಯಪ್ರಾಣನಿಗೆ, ಉತ್ಪತ್ತಿಃ = ಜನನವು, ಮೃತಿಶ್ಚ = ಮರಣವೂ ಕೂಡ, ಕಥಂ = ಹೇಗೆ, ಯುಜ್ಯತೇ = ಕೂಡುತ್ತದೆ ?

ಇತಿ ಚ = ಹೀಗೆ, ಯುಕ್ತಿಃ = ಯುಕ್ತಿಯನ್ನು, ವಾಯುಪ್ರೋಕ್ತೇ = ವಾಯುಪ್ರೋಕ್ತದಲ್ಲಿ ಹೇಳಲಾಗಿದೆ. ಆತ್ಮತಃ = ಆತ್ಮನಿಂದ, ಏಷ ಪ್ರಾಣಃ = ಈ ಮುಖ್ಯಪ್ರಾಣನಿಂದ, ಜಾಯತೇ = ಹುಟ್ಟುತ್ತಾನೆ. ಇತಿ ಚ = ಹೀಗೆ ಷಟ್‌ಪ್ರಶ್ನೋಪನಿಷತ್ತಿನಲ್ಲಿ ಹೇಳಲಾಗಿದೆ.

**भाष्यम् — अत आह —**

**।। श्रेष्ठश्च ।।१।।**

**'सौक्ष्म्येण ह वा एषोऽवतिष्ठते स्थूलत्वेनोदेति सूक्ष्मश्चाथो स्थूलश्च । प्रकृतितः सूक्ष्मोऽन्यतः स्थूलोऽथैनमाहुः सादिरनादिरिति गौपवनश्रुतेः ।।१।।**

ಈ ಪೂರ್ವಪಕ್ಷದ ನಿರಾಕರಣೆಗಾಗಿ ಸೂತ್ರಕಾರರು ಹೇಳುತ್ತಿದ್ದಾರೆ -

ಮುಖ್ಯಪ್ರಾಣನು ಸೂಕ್ಷ್ಮರೂಪದಿಂದ ನಿರಂತರವಿದ್ದರೂ ಶರೀರ ಸಂಬಂಧವೆಂಬ ಸ್ಥೂಲರೂಪದಿಂದ ಹುಟ್ಟುಸಾವುಗಳನ್ನು ಪಡೆದಿರುತ್ತಾನೆ. ಸ್ವಾಭಾವಿಕವಾಗಿ ಸೂಕ್ಷ್ಮರೂಪವನ್ನು ಪಡೆದಿದ್ದರೂ ಶಾರೀರಿಕವಾಗಿ ಸ್ಥೂಲನಾಗಿದ್ದಾನೆ. ಆದ್ದರಿಂದ ಅವನು ಸಾದಿ ಮತ್ತು ಅನಾದಿ ಎಂಬ ಎರಡು ಶಬ್ದಗಳಿಂದ ಕರೆಸಿಕೊಳ್ಳುತ್ತಾನೆ. ಹೀಗೆ ಗೌಪವನಶ್ರುತಿಯು ಹೇಳುತ್ತಿದೆ.

ಪ್ರತಿಪದಾರ್ಥ -- ಅತಃ = ಈ ಪೂರ್ವಪಕ್ಷಕ್ಕೆ, ಆಹ = ಸೂತ್ರಕಾರರು ಉತ್ತರಿಸುತ್ತಿದ್ದಾರೆ-

ಸೌಕ್ಷ್ಮ್ಯೇಣ = ಸೂಕ್ಷ್ಮರೂಪದಿಂದ, ಏಷ ಹ ವಾ = ಈ ಮುಖ್ಯಪ್ರಾಣನಾದರೂ, ಅವತಿಷ್ಠತೇ = ಇರುತ್ತಾನೆ. ಸ್ಥೂಲತ್ವೇನ = ಸ್ಥೂಲರೂಪದಿಂದ, ಉದೇತಿ = ದೇಹವನ್ನು ಪಡೆಯುತ್ತಾನೆ. ಅಥ = ಅನಂತರ, ಸೂಕ್ಷ್ಮಃ = ಸೂಕ್ಷನೆಂದು, ಸ್ಥೂಲಶ್ಚ = ಸ್ಥೂಲನೆಂದು ಕರೆಸಿಕೊಳ್ಳುತ್ತಾನೆ. ಪ್ರಕೃತಿತಃ = ಸ್ವಾಭಾವಿಕವಾಗಿ, ಸೂಕ್ಷ್ಮಃ = ಸೂಕ್ಷ್ಮನು, ಅನ್ಯತಃ = ಔಪಾಧಿಕವಾಗಿ, ಸ್ಥೂಲಃ = ಸ್ಥೂಲರೂಪವುಳ್ಳವನು, ಅಥ = ಆದ್ದರಿಂದ, ಏವಂ = ಇವನನ್ನು, ಸಾದಿಃ = ಉತ್ಪತ್ತಿವುಳ್ಳವನು, ಅನಾದಿಃ = ಉತ್ಪತ್ತಿರಹಿತನು, ಇತಿ = ಹೀಗೆ, ಆಹುಃ = ಜ್ಞಾನಿಜನರು ಹೇಳುತ್ತಾರೆ. ಗೌಪವನಶ್ರುತೇಃ = ಹೀಗೆ ಗೌಪವನಶ್ರುತಿಯು ಹೇಳುತ್ತಿದೆ.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

## ತತ್ವಪ್ರಕಾಶಿಕಾ

**तत्वप्रकाशिका – अत्र श्रुतिसमन्वयेन परमात्मनो जगत्कारणत्वसिध्यर्थं मुख्यप्राणजन्मविषयश्रुतिविरोधपरिहारादस्ति शास्त्रादिसङ्गतिः । जगत्कारणे हरावुक्तः श्रुतिसमन्वयो मुख्यप्राणजन्मविषयश्रुतीनां विरोधेऽनुपपन्नः स्यादतोऽसौ निरसनीय एव । सर्वप्राणप्रेरकः प्राणश्रुत्या सन्निधापितो मुख्यप्राणोऽत्र विषयः ।**

**उत्पत्तिमान्न वेतिसन्देहः । सन्देहबीजं श्रुतिविरोधं दर्शयन् पूर्वपक्षं च सूचयति – नेति ॥**

ಈ ಅಧಿಕರಣದಲ್ಲಿ ಶ್ರುತಿಸಮನ್ವಯ ಮಾಡುವ ಮೂಲಕ ಪರಮಾತ್ಮನಿಗೆ ಜಗತ್ಕಾರಣತ್ವವನ್ನು ಸಮರ್ಥನೆ ಮಾಡುವುದಕ್ಕಾಗಿ ಮುಖ್ಯಪ್ರಾಣನ ಜನ್ಮವಿಷಯದಲ್ಲಿ ಶ್ರುತಿವಿರೋಧವನ್ನು ಪರಿಹಾರ ಮಾಡಲಾಗಿದೆ. ಆದ್ದರಿಂದ ಶಾಸ್ತ್ರ, ಅಧ್ಯಾಯ, ಪಾದ ಸಂಗತಿಗಳು ಇರುತ್ತವೆ.

ಜಗತ್ಕಾರಣನಾದ ಶ್ರೀಹರಿಯಲ್ಲಿ ಹೇಳಲ್ಪಟ್ಟ ಶ್ರುತಿಸಮನ್ವಯವು ಮುಖ್ಯಪ್ರಾಣ-ಜನ್ಮವಿಷಯಕವಾದ ಶ್ರುತಿಗಳ ವಿರೋಧವು ಪ್ರಾಪ್ತವಾದರೆ ಅನುಪಪನ್ನವಾಗುತ್ತದೆ. ಆದ್ದರಿಂದ ಈ ವಿರೋಧವನ್ನು ಅವಶ್ಯವಾಗಿ ನಿರಾಕರಣೆ ಮಾಡಲೇಬೇಕು. ಸರ್ವಪ್ರಾಣಪ್ರೇರಕನಾದ ಹಾಗೂ ಪ್ರಾಣಶ್ರುತಿಯಿಂದ ಪ್ರತಿಪಾದ್ಯನಾದ ಮುಖ್ಯಪ್ರಾಣನೇ ಈ ಅಧಿಕರಣಕ್ಕೆ ವಿಷಯನಾಗಿದ್ದಾನೆ. ಇವನಿಗೆ ಜನ್ಮವು ಇದೆಯೋ ಇಲ್ಲವೋ ? ಎಂಬುದು ಅಧಿಕರಣದ ಸಂದೇಹ. ಸಂದೇಹಕ್ಕೆ ಕಾರಣವು ಶ್ರುತಿವಿರೋಧವೇ ಆಗಿದೆ. ಇದನ್ನು ತೋರಿಸುವುದರ ಮೂಲಕ 'ನ' ಇತ್ಯಾದಿಯಾಗಿ ಸೂಚನೆ ಮಾಡುತ್ತಿದ್ದಾರೆ.

ವಿವರಣೆ – ಹಿಂದಿನ ಅಧಿಕರಣದ ತನಕ ಇಂದ್ರಿಯಗಳ ಬಗ್ಗೆ ಹಾಗೂ ಅವುಗಳ ಪರಿಮಾಣದ ಬಗ್ಗೆ ವಿಚಾರವನ್ನು ಮಾಡಿದ್ದಾಯಿತು. ಪ್ರಕೃತ ಈ ಎಲ್ಲಾ ಇಂದ್ರಿಯಗಳಿಗೆ ಪ್ರೇರಕನಾದ ಅವನು ಮುಖ್ಯಪ್ರಾಣನಾಗಿದ್ದಾನೆ. ಇವನಿಗೆ ಜನ್ಮವಿದೆಯೋ, ಇಲ್ಲವೋ? ಎಂಬ ವಿಚಾರವನ್ನು ಈ ಅಧಿಕರಣದಲ್ಲಿ ಮಾಡುತ್ತಿದ್ದಾರೆ. ಆದ್ದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಆನಂತರ್ಯ ಸಂಗತಿಯು ಇರುತ್ತದೆ.

**तत्वप्रकाशिका – मध्ये जननमरणयोर्मध्यावस्थायाम् । इति चोत्पत्तिः श्रूयत इति शेषः । मुख्यप्राणो नोत्पत्तिमान् । 'नैष प्राण उदेति' इति श्रुतेः । न च मुख्यवाय्वनुत्पत्तिश्रुतिवदियमन्यथा योजनीयोत्पत्तिश्रुत्यानुकूल्यादिति युक्तम् । 'तस्याखिलोत्पत्तिमरणकारणत्वेनोत्पत्याद्ययोगयुक्तियुक्तानादित्वश्रुतेः प्राबल्यात् । न हि सर्वजननहेतोर्जन्मोपपद्यते ।**

'ಮಧ್ಯೇ' ಎಂದರೆ ಜನ್ಮ ಹಾಗೂ ಮರಣಗಳ ಮಧ್ಯಾವಸ್ಥೆಯಲ್ಲಿ ಎಂದರ್ಥ. ಭಾಷ್ಯದಲ್ಲಿರುವ 'ಇತಿ ಚ' ಎಂಬುದರ ಮುಂದೆ 'ಉತ್ಪತ್ತಿಃ ಶ್ರೂಯತೇ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು.

ಮುಖ್ಯಪ್ರಾಣನಿಗೆ ಉತ್ಪತ್ತಿಯು ಇರುವುದಿಲ್ಲವೆಂಬುದು ಅಧಿಕರಣದ ಪೂರ್ವಪಕ್ಷ. ಏಕೆಂದರೆ 'ನೈಷ ಪ್ರಾಣಃ ಉದೇತಿ' ಎಂಬ ಶ್ರುತಿಯು ಮುಖ್ಯಪ್ರಾಣನಿಗೆ ಜನ್ಮವಿಲ್ಲವೆಂಬುದನ್ನು ಸ್ಪಷ್ಟವಾಗಿ ಹೇಳುತ್ತಿದೆ. ಈ ಮುಖ್ಯಪ್ರಾಣನಿಗೆ ಉತ್ಪತ್ತಿ ಇಲ್ಲವೆಂದು ಹೇಳುವ ಶ್ರುತಿಯಂತೆ ಈ ಶ್ರುತಿಯನ್ನು ಅನ್ಯಥಾ ವ್ಯಾಖ್ಯಾನ ಮಾಡಲು ಸಾಧ್ಯವಿಲ್ಲ. ಏಕೆಂದರೆ ಮುಖ್ಯಪ್ರಾಣನು ಸಕಲರ ಉತ್ಪತ್ತಿ ಹಾಗೂ

ಮರಣಗಳಿಗೆ ಕಾರಣನಾಗಿದ್ದಾನೆ. ಇಂಥವನಿಗೆ ಉತ್ಪತ್ತಿ, ಮರಣಗಳು ಬರಲು ಸಾಧ್ಯವಿಲ್ಲ. ಹೀಗೆ ಯುಕ್ತಿಯುಕ್ತವಾದ್ದರಿಂದ ಜನ್ಮವಿಲ್ಲವೆಂದು ಹೇಳುವ ಶ್ರುತಿಯು ಅತ್ಯಂತ ಪ್ರಬಲವಾಗಿದೆ. ಸಕಲರ ಜನ್ಮಕ್ಕೆ ಕಾರಣನಾದವನಿಗೆ ಜನ್ಮ ಹೇಳುವುದು ಯುಕ್ತವಾಗುವುದಿಲ್ಲ.

ವಿವರಣೆ – ಮಧ್ಯೇ ಎಂಬ ಪದಕ್ಕೆ ಜನನ ಮರಣಗಳ ಮಧ್ಯಾವಸ್ಥೆಯಲ್ಲಿ ಎಂಬರ್ಥವನ್ನು ವಿವಕ್ಷಿಸಿ 'ಇಹ ಚ ಉತ್ಪತ್ತಿಃ ಶ್ರೂಯತೇ' ಎಂಬುದನ್ನು ಶೇಷಪೂರಣ ಮಾಡಿಕೊಂಡಾಗ ದೊರೆಯುವ ಅರ್ಥ ಹೀಗಿದೆ – 'ಮುಖ್ಯಪ್ರಾಣನು ಹುಟ್ಟುವುದಿಲ್ಲ. ಮರಣವನ್ನೂ ಕೂಡ ಹೊಂದುವುದಿಲ್ಲ. ಜನನ ಮರಣಗಳ ಮಧ್ಯಾವಸ್ಥೆಯಲ್ಲಿ ಇವನೇ ಪ್ರಧಾನನಾಗಿರುವನು. ಆದ್ದರಿಂದ ಮಧ್ಯಮ ಎಂದು ಇವನನ್ನು ಕರೆಯುತ್ತಾರೆ' ಎಂಬರ್ಥವು ದೊರೆಯುತ್ತದೆ. ಇದೇ ರೀತಿಯಾಗಿ ಮುಖ್ಯಪ್ರಾಣನಿಗೆ ಜನ್ಮವಿದೆ ಎಂದು ಮತ್ತೊಂದು ಶ್ರುತಿಯು ಹೇಳುತ್ತಿದೆ ಎಂದು.

ಮುಖ್ಯಪ್ರಾಣನು ಸ್ವರೂಪತಃ ನಿತ್ಯನಾಗಿದ್ದರೂ ಕೂಡ ದೇಹತಃ ಉತ್ಪತ್ತಿ ಉಳ್ಳವನಾಗಿದ್ದಾನೆ. ಆದ್ದರಿಂದ ಉತ್ಪತ್ತಿ ಶ್ರುತಿಗೆ ಅನುಗುಣವಾಗಿ ಅನಾದಿತ್ವ ಶ್ರುತಿಯನ್ನು ವ್ಯಾಖ್ಯಾನ ಮಾಡಬೇಕು. ಹೀಗೆ ಹೇಳಬಾರದು. ಏಕೆಂದರೆ ಮುಖ್ಯಪ್ರಾಣನು ಎಲ್ಲಾ ಜಗತ್ತಿನ ಉತ್ಪತ್ತಿ, ಮರಣಗಳಿಗೆ ಕಾರಣನಾದ್ದರಿಂದ ದೇಹದಿಂದಲೂ ಕೂಡ ಉತ್ಪತ್ತಿರಹಿತನಾಗಿದ್ದಾನೆ. ಆದ್ದರಿಂದ ಮುಖ್ಯಪ್ರಾಣನಿಗೆ ಸ್ವರೂಪತಃ ನಿತ್ಯತ್ವವನ್ನು ಹೇಗೆ ಹೇಳುತ್ತೇವೋ, ಅದರಂತೆ ದೇಹತಃ ನಿತ್ಯತ್ವವನ್ನೂ ಕೂಡ ಹೇಳಲೇಬೇಕು.

**ತತ್ವಪ್ರಕಾಶಿಕಾ – दुःखहेतवे स्वजननाय प्रवृत्ययोगात् । अतः प्रबलानादित्व-श्रुतिविरोधादुत्पत्तिश्रुतिरप्रमाणमेव । अतो न जगत्कारणे परमेश्वरे श्रुतिसमन्वयोऽपपत्तिरिति भावः । सिद्धान्तयत्सूत्रमवतारयति – अत इति ।।**

ದುಃಖಕ್ಕೆ ಕಾರಣವಾದ ತನ್ನ ಹುಟ್ಟುವಿಕೆಗೋಸ್ಕರ ಪ್ರವೃತ್ತಿಯನ್ನು ಮಾಡಲು ಸಾಧ್ಯವಿಲ್ಲ. ಆದ್ದರಿಂದ ಪ್ರಬಲವಾದ ಅನಾದಿತ್ವ ಶ್ರುತಿಯ ವಿರೋಧವಿರುವ ಕಾರಣ ಉತ್ಪತ್ತಿ ಶ್ರುತಿಗೆ ಅಪ್ರಾಮಾಣ್ಯವನ್ನೇ ಹೇಳಬೇಕು. ಹೀಗಿರುವಾಗ ಜಗತ್ಕಾರಣನಾದ ಪರಮೇಶ್ವರನಲ್ಲಿ ಶ್ರುತಿಸಮನ್ವಯವು ಹೇಗೆ ತಾನೇ ಯುಕ್ತವಾಗುತ್ತದೆ ? ಇಷ್ಟು ಅಧಿಕರಣದ ಪೂರ್ವಪಕ್ಷ.

ಸಿದ್ಧಾಂತ ಸ್ಥಾಪಕವಾದ ಸೂತ್ರಕ್ಕೆ 'ಅತಃ' ಇತ್ಯಾದಿಯಾಗಿ ಅವತಾರಿಕೆಯನ್ನು ನೀಡುತ್ತಿದ್ದಾರೆ.

**ತತ್ವಪ್ರಕಾಶಿಕಾ – यथेतरे प्राणा उत्पद्यन्ते तथा श्रेष्ठश्च प्राणो जायत इति सूत्रार्थोऽतिरोहित इति नाभिहितः । ननु कुतो मुख्यप्राणस्योत्पत्तिस्तदङ्गीकारेऽनादित्व-श्रुतिविरोधादित्यत आह – सौक्ष्म्येणेति ।। स्थूलादिभावस्य स्वरूपत्वात् कथं तस्योत्पत्यादीत्यत उक्तम् – प्रकृतित इति ।। स्वभावतः । अन्यतः शरीरादितः ।।**

ಯಾವ ರೀತಿಯಾಗಿ ಬೇರೆ ಇಂದ್ರಿಯಗಳಿಗೆ ಉತ್ಪತ್ತಿಯು ಇರುತ್ತದೋ, ಅದೇ ರೀತಿಯಾಗಿ ಎಲ್ಲ ಇಂದ್ರಿಯಗಳಿಗೆ ಒಡೆಯನಾದ ಮುಖ್ಯಪ್ರಾಣನಿಗೂ ಕೂಡ ಉತ್ಪತ್ತಿಯು ಇದ್ದೇ ಇರುತ್ತದೆ. ಹೀಗೆ ಸೂತ್ರಾರ್ಥವು ಅತ್ಯಂತ ಸ್ಪಷ್ಟವಾಗಿರುವುದರಿಂದ ಭಾಷ್ಯದಲ್ಲಿ ಪ್ರತ್ಯೇಕವಾಗಿ ವ್ಯಾಖ್ಯಾನ ಮಾಡಿರುವುದಿಲ್ಲ.

ಮುಖ್ಯಪ್ರಾಣನಿಗೆ ಉತ್ಪತ್ತಿಯನ್ನು ಹೇಳಲು ಹೇಗೆ ಸಾಧ್ಯ? ಒಂದುವೇಳೆ ಉತ್ಪತ್ತಿಯನ್ನು ಒಪ್ಪಿದರೆ ಅನಾದಿತ್ವ ಶ್ರುತಿಗೆ ವಿರೋಧವು ಬರುತ್ತದಲ್ಲವೇ? ಈ ಪ್ರಶ್ನೆಗೆ 'ಸೌಕ್ಷ್ಮ್ಯೇಣ' ಎಂಬ ಪ್ರಮಾಣವಚನದಿಂದ ಉತ್ತರಿಸುತ್ತಿದ್ದಾರೆ.

ಸ್ಥೂಲಸ್ವರೂಪನಾದ ಮುಖ್ಯಪ್ರಾಣನಿಗೆ ಉತ್ಪತ್ತಿಯನ್ನು ಹೇಳುವುದು ಹೇಗೆ ಸಾಧ್ಯ? ಎಂಬ ಪ್ರಶ್ನೆಗೆ 'ಪ್ರಕೃತಿತಃ' ಎಂಬ ಪದದಿಂದ ಉತ್ತರಿಸಿದ್ದಾರೆ. 'ಪ್ರಕೃತಿತಃ' ಎಂಬ ಪದಕ್ಕೆ 'ಸ್ವಭಾವತಃ' ಎಂದರ್ಥ. ಸ್ಥೌಲ್ಯಾದಿಗಳು ಸ್ವರೂಪವಲ್ಲವಾದ್ದರಿಂದ ಎಂದಭಿಪ್ರಾಯ.

ವಿವರಣೆ– ಶ್ರುತಿಯು ಸ್ಪಷ್ಟವಾಗಿ ಮುಖ್ಯಪ್ರಾಣನಿಗೆ ಉತ್ಪತ್ತಿಯನ್ನು ಹೇಳುತ್ತಿದೆ. ಸೂಕ್ಷ್ಮರೂಪದಿಂದ ಮುಖ್ಯಪ್ರಾಣನು ಇದ್ದರೂ ಕೂಡ ಸ್ಥೂಲರೂಪದಿಂದ ಉತ್ಪತ್ತಿಯನ್ನು ಹೊಂದುತ್ತಾನೆ ಎಂದು. ಜೀವಸ್ವಭಾವದಿಂದ ಸೂಕ್ಷ್ಮನಾಗಿದ್ದಾನೆ, ದೇಹತಃ ಸ್ಥೂಲನಾಗಿದ್ದಾನೆ. ಆದ್ದರಿಂದ ಗೋಪವನಶ್ರುತಿಯು ಮುಖ್ಯಪ್ರಾಣನನ್ನು ಜನನ ಉಳ್ಳವನೆಂದೇ ಹೇಳುತ್ತಿದೆ. ಸ್ಥೂಲವಾದ್ದರಿಂದ ಶರೀರತಃ ಉತ್ಪತ್ತ್ಯಾದಿಗಳು ಇವೇ ಹೊರತು, ಸ್ವಭಾವತಃ ಸ್ಥೂಲನಾಗಿದ್ದರಿಂದ ಎಂದು ತಿಳಿಯಬಾರದು. ಸೌಲ್ಯಾದಿಗಳು ಅವನ ಸ್ವಭಾವವಲ್ಲ. ಕೇವಲ ಶರೀರಾದಿಗಳಲ್ಲಿರುವ ಧರ್ಮ.

## ಬ್ರಹ್ಮಸೂತ್ರ

## सूत्रम् – न वायुक्रिये पृथगुपदेशात् ।।

ಬಾಹ್ಯವಾಯು ಮತ್ತು ಚೇಷ್ಟಾ ಎಂಬೆರಡು ಕರ್ಮಗಳಿಗೂ 'ಪ್ರಾಣ' ಎಂಬ ಹೆಸರು ಇರುವುದರಿಂದ 'ಪ್ರಾಣೋ ಜಾಯತೇ' ಎಂಬ ಶ್ರುತಿಯು ಇವೆರಡಕ್ಕೆ ಉತ್ಪತ್ತಿಯನ್ನು ಪ್ರತಿಪಾದನೆ ಮಾಡುತ್ತಿದೆ. ಹೊರತು, ಮುಖ್ಯಪ್ರಾಣನಿಗಲ್ಲ ಎಂದು ಆಶಂಕಿಸಬಾರದು. ಏಕೆಂದರೆ 'ಸ ಪ್ರಾಣಮಸೃಜತ' ಎಂಬುದಾಗಿ ಷಟ್ ಪ್ರಶ್ನೋಪನಿಷತ್ತಿನಲ್ಲಿ ಪ್ರತ್ಯೇಕವಾಗಿ ಅವೆರಡರ ಉತ್ಪತ್ತಿಯನ್ನು ಹೇಳಲಾಗಿದೆ. ಆದ್ದರಿಂದ ಮುಖ್ಯಪ್ರಾಣನಿಗೂ ಉತ್ಪತ್ತಿಯನ್ನು ಹೇಳಲೇಬೇಕು.

## ಸೂತ್ರದೀಪಿಕಾ

**सूत्रदीपिका –** **वायुक्रिये** बाह्यवायुचेष्टाख्यकर्मणी **न** । 'एतस्मात्' इति प्राणोत्पत्तिश्रुतिप्रतिपाद्ये **न** भवतः । किन्तु मुख्यवायुरेव तत्प्रतिपाद्यः । कुतः **पृथगुपदेशात्** 'स प्राणमसृजत' इत्यादौ मुख्यवायूत्पत्तेः वायुक्रियोत्पत्तिभ्यां सकाशात् पृथक् श्रवणादित्यर्थः ।।२।।

ವಾಯುಕ್ರಿಯೇ = ಬಾಹ್ಯವಾಯು ಮತ್ತು ಚೇಷ್ಟಾ ಎಂಬೆರಡು ಕ್ರಿಯೆಗಳು, ನ = 'ಏತಸ್ಮಾತ್ ಜಾಯತೇ ಪ್ರಾಣೋ ಮನಃಸರ್ವೇಂದ್ರಿಯಾಣಿ ಚ' ಎಂಬ ಮುಂಡಕೋಪನಿಷತ್ತಿನ ವಾಕ್ಯದಿಂದ ಪ್ರತಿಪಾದ್ಯವಾಗಿದೆ.

ಆದ್ದರಿಂದ ಇವೆರಡಕ್ಕೆ ಉತ್ಪತ್ತಿ ಇದೆ ಎಂದು ಆಕ್ಷೇಪ ಮಾಡುವುದು ಸರಿಯಲ್ಲ. ಮುಖ್ಯಪ್ರಾಣನೇ ಈ ಶ್ರುತಿಯಿಂದ ಪ್ರತಿಪಾದ್ಯನು. ಏಕೆಂದರೆ ಪೃಥಗುಪದೇಶಾತ್ = 'ಸ ಪ್ರಾಣಮಸೃಜತ' ಎಂಬುದಾಗಿ ಷಟ್‌ಪ್ರಶ್ನೋಪನಿಷತ್ತಿನಲ್ಲಿ ಮುಖ್ಯವಾಯುವಿನ ಉತ್ಪತ್ತಿಗಿಂತ ಪ್ರತ್ಯೇಕವಾಗಿ ಬಾಹ್ಯವಾಯು ಹಾಗೂ ಚೇಷ್ಟಾಗಳ ಉತ್ಪತ್ತಿಯನ್ನು ಹೇಳಲಾಗಿದೆ. ಆದ್ದರಿಂದ ಪ್ರಕೃತ ಮುಖ್ಯಪ್ರಾಣನ ಉತ್ಪತ್ತಿಯನ್ನು ವಿವಕ್ಷಿಸಬೇಕು.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ಶ್ರೇಷ್ಠಾಧಿಕರಣವು ಮುಗಿಯಿತು.

## ಬ್ರಹ್ಮಸೂತ್ರಭಾಷ್ಯ

**भाष्यम् – ।। न वायुक्रिये पृथगुपदेशात् ।।२।।**

**'चेष्टायां बाह्यवायौ च मुख्यप्राणे च गीयते ।**
**प्राणशब्दस्त्रिषु ह्येषु मुख्ये मुख्यः प्रकीर्तितः ।।'**
**इति वायुक्रिययोरपि व्यपदेशादुत्पत्तिस्तयोर्न स्यात् ।**

ಅನುವಾದ - ಪ್ರಾಣಶಬ್ದವು ಚೇಷ್ಟಾ, ಗಾಳಿ, ಮುಖ್ಯಪ್ರಾಣ ಎಂಬುದಾಗಿ ಮೂರರಲ್ಲಿ ಪ್ರಸಿದ್ಧವಾಗಿದೆ. ಆದರೆ ಮುಖ್ಯಪ್ರಾಣನಲ್ಲಿ ಹೆಚ್ಚು ಪ್ರಯೋಗ ಪಡೆದಿದೆ. ಹೀಗೆ ಗಾಳಿ ಹಾಗೂ ಕ್ರೀಯೆ ಇವೆರಡರ ಅರ್ಥದಲ್ಲಿ ಪ್ರಾಣಶಬ್ದ ಇರುವುದರಿಂದ ಮುಖ್ಯಪ್ರಾಣನಿಗೆ ಉತ್ಪತ್ತಿ ಇಲ್ಲವೆಂದು ಹೇಳಬಾರದು.

ಪ್ರತಿಪದಾರ್ಥ -- ಚೇಷ್ಟಾಯಾಂ = ಕ್ರಿಯೆಯಲ್ಲಿ, ಚ = ಮತ್ತು, ಬಾಹ್ಯವಾಯೌ = ಬಾಹ್ಯವಾದ ವಾಯುವಿನಲ್ಲಿ, ಚ = ಮತ್ತು, ಮುಖ್ಯಪ್ರಾಣೇ = ಮುಖ್ಯಪ್ರಾಣನಲ್ಲಿ, ಏಷ ತ್ರಿಷು = ಈ ಮೂರರಲ್ಲಿ, ಪ್ರಾಣಶಬ್ದಃ = ಪ್ರಾಣಶಬ್ದವು, ಗೀಯತೇ = ಹೇಳಲ್ಪಟ್ಟಿದೆ. ಮುಖೇ = ಮುಖ್ಯಪ್ರಾಣನಲ್ಲಿ, ಮುಖ್ಯಃ = ಪ್ರಾಣಶಬ್ದ ಮುಖ್ಯವಾಗಿ, ಪ್ರಕೀರ್ತಿತಃ = ಪ್ರಸಿದ್ಧಿ ಪಡೆದಿದೆ. ಇತಿ = ಹೀಗೆ, ವಾಯುಕ್ರಿಯಯೋರಪಿ = ಗಾಳಿ ಹಾಗೂ ಕ್ರಿಯೆಗಳಲ್ಲಿ, ವ್ಯಪದೇಶಾತ್ = ಪ್ರಾಣಶಬ್ದದ ವ್ಯಪದೇಶ ಇರುವುದರಿಂದ, ಉತ್ಪತ್ತಿಃ = ಉತ್ಪತ್ತಿಯು ತಯೋಃ = ಕ್ರಿಯೆಗೆ ಮತ್ತು ಗಾಳಿಗೆ, ನಸ್ಯಾತ್= ಹೇಳದೇ ಇರಬೇಕಾದೀತು.

**भाष्यम् – 'खं वायुस्तपो मन्त्राः कर्म' (प्र.६.४.) इति पृथगुपदेशात् ।**

**'भूतानि चेष्टा मन्त्राश्च मुख्यप्राणादिदं जगत् ।**
**मुख्यप्राणः परस्माच्च न परः कारणान्वितः ।।'**
**इति च वायुप्रोक्ते ।।२।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये श्रेष्ठाधिकरणम् ।। ६ ।।**

ಅನುವಾದ - 'ಪ್ರಾಣೋ ಜಾಯತ' ಎಂಬ ಉತ್ಪತ್ತಿವಾಕ್ಯವು ಗಾಳಿ ಮತ್ತು ಕ್ರಿಯೆಗಳಿಗೆ ಮಾತ್ರ ಉತ್ಪತ್ತಿಯನ್ನು ಹೇಳುತ್ತಿದೆ. ಹೀಗೆ ಹೇಳಬಾರದು. ಏಕೆಂದರೆ ಷಟ್‌ಪ್ರಶ್ನೋಪನಿಷತ್ತಿನಲ್ಲಿ ಪ್ರತ್ಯೇಕವಾಗಿ ಅವುಗಳಿಗೆ ಉತ್ಪತ್ತಿಯನ್ನು ಹೇಳಿದ್ದಾರೆ. ಆದ್ದರಿಂದ ಮುಖ್ಯಪ್ರಾಣನಿಗೂ ಉತ್ಪತ್ತಿಯನ್ನು ಹೇಳಲೇಬೇಕು.

ಭೂತವಸ್ತುಗಳು, ಕ್ರಿಯೆ, ಮಂತ್ರ ಇವೆಲ್ಲವೂ ಮುಖ್ಯಪ್ರಾಣನಿಂದ ಹುಟ್ಟಿವೆ. ಆ ಮುಖ್ಯಪ್ರಾಣನಾದರೂ ಪರಮಾತ್ಮನಿಂದ ಹುಟ್ಟಿದ್ದಾನೆ. ಆದ್ದರಿಂದ ಹಿಂದೆ ಹೇಳಿದಂತೆ ಉತ್ಪತ್ತಿ ಅನುತ್ಪತ್ತಿ ಎರಡನ್ನು ಮುಖ್ಯಪ್ರಾಣನಿಗೆ ಹೇಳಬೇಕು.

ಪ್ರತಿಪದಾರ್ಥ -- ಖಂ = ಆಕಾಶವು, ವಾಯುಃ = ಗಾಳಿಯು, ತಪಃ = ತಪಸ್ಸು, ಮಂತ್ರಾಃ = ಮಂತ್ರಗಳು, ಕರ್ಮ = ಕರ್ಮವು ಇವುಗಳು ಹುಟ್ಟಿದವು. ಇತಿ = ಹೀಗೆ, ಪೃಥುಗುಪದೇಶಾತ್ = ಮುಖ್ಯಪ್ರಾಣನಿಗಿಂತ ಪ್ರತ್ಯೇಕವಾಗಿಯೇ ಗಾಳಿ ಮೊದಲಾದವುಗಳಿಗೆ ಸೃಷ್ಟಿಯನ್ನು ಹೇಳಿರುವುದರಿಂದ ಮುಖ್ಯಪ್ರಾಣನಿಗೂ ಉತ್ಪತ್ತಿಯನ್ನು ಹೇಳಬೇಕು.

ಭೂತಾನಿ = ಭೂತಪದಾರ್ಥಗಳು, ಚೇಷ್ಟಾ = ಕ್ರಿಯೆಗಳು, ಮಂತ್ರಾಶ್ಚ = ಮಂತ್ರಗಳೂ ಕೂಡ, ಇದಂ ಜಗತ್ = ಈ ಸಮಸ್ತ ಜಗತ್ತು, ಮುಖ್ಯಪ್ರಾಣಾತ್ = ಮುಖ್ಯಪ್ರಾಣನಿಂದ ಹುಟ್ಟಿದವು, ಪರಸ್ಮಾಚ್ಚ = ಪರಮಾತ್ಮನಿಂದಲಾದರೂ, ಮುಖ್ಯಪ್ರಾಣಃ = ಮುಖ್ಯಪ್ರಾಣನು ಹುಟ್ಟಿದನು. ಪರಃ = ಪರಮಾತ್ಮನು, ನ ಕಾರಣಾನ್ವಿತಃ = ಯಾವುದೇ ಕಾರಣವನ್ನು ಹೊಂದಿದವನಲ್ಲ, ಇತಿ = ಹೀಗೆ, ವಾಯುಪ್ರೋಕ್ತೇ = ವಾಯುಪ್ರೋಕ್ತದಲ್ಲಿ ಹೇಳಲಾಗಿದೆ.

ಇಲ್ಲಿಗೆ ಶ್ರೇಷ್ಠಾಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

## ತತ್ವಪ್ರಕಾಶಿಕಾ

**तत्वप्रकाशिका – नन्वनादित्वश्रुतिः सयुक्तिकत्वेन प्रबला कथमुत्पत्तिश्रुतिमात्रानुसारेणान्यथा व्याख्यायते । अपि तूत्पत्तिश्रुतिरेव चेष्टाबाह्यवायुविषयतया व्याख्यातव्या तयोरपि चेष्टायामिति वाक्येन प्राणशब्दवाच्यत्वोक्तेः । उत्पत्त्यङ्गीकारे च विरोधाभावादित्याशङ्कां परिहरत्सूत्रमुपन्यस्य व्याचष्टे – नेति ।।**

ಮುಖ್ಯಪ್ರಾಣನಿಗೆ ಅನಾದಿತ್ವವನ್ನು ಹೇಳುವ ಶ್ರುತಿಯು ಯುಕ್ತಿಬದ್ಧವಾಗಿದೆ. ಆದ್ದರಿಂದಲೇ ಪ್ರಬಲವಾಗಿದೆ. ಹೀಗಿದ್ದರೂ ಕೂಡ ಉತ್ಪತ್ತಿ ಇದೆ ಎಂದು ಹೇಳುವ ಶ್ರುತಿಮಾತ್ರಕ್ಕೆ ಅನುಸಾರಿಯಾಗಿ ಅನಾದಿತ್ವ ಶ್ರುತಿಗೆ ಅನ್ಯಥಾ ವ್ಯಾಖ್ಯಾನ ಮಾಡುವುದು ಹೇಗೆ ಸಾಧ್ಯ? ಉತ್ಪತ್ತಿಯನ್ನು ಹೇಳುವ ಶ್ರುತಿಯನ್ನೇ ಚೇಷ್ಟಾ ಮತ್ತು ಬಾಹ್ಯವಾಯು ಇವುಗಳ ಸಂಬಂಧದಿಂದ ವ್ಯಾಖ್ಯಾನ ಮಾಡಬೇಕು. ಏಕೆಂದರೆ ಇವೆರಡೂ ಕೂಡ ಪ್ರಾಣಶಬ್ದದಿಂದ ವಾಚ್ಯವಾಗಿವೆ ಎಂದು ಹೇಳಲಾಗಿದೆ.

ಇವುಗಳಿಗೆ ಉತ್ಪತ್ತಿಯನ್ನು ಒಪ್ಪಿದರೆ ಯಾವುದೇ ವಿರೋಧವಿಲ್ಲ. ಈ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು ಪಠಿಸಿ 'ನ' ಇತ್ಯಾದಿಯಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ– ಮುಖ್ಯಪ್ರಾಣನಿಗೆ ಉತ್ಪತ್ತಿಯೇ ಇಲ್ಲವೆಂದು ಹೇಳುವ ಶ್ರುತಿಯು ಯುಕ್ತಿಯುಕ್ತವಾಗಿದೆ. ಆದ್ದರಿಂದ ಉತ್ಪತ್ತಿಯನ್ನು ಹೇಳುವ ಶ್ರುತಿಗೆ ಅನ್ಯಾರ್ಥವನ್ನೇ ಕಲ್ಪನೆ ಮಾಡಬೇಕು. ಮುಖ್ಯಪ್ರಾಣನು ಅನಾದಿಯಾಗಿದ್ದರೂ ಅವನ ಚೇಷ್ಟೆಗಳಿಗೆ ಉತ್ಪತ್ತಿ, ನಾಶಗಳಿರುತ್ತವೆ. ಈ ಅಭಿಪ್ರಾಯದಿಂದ ಕೆಲವು ಶ್ರುತಿಗಳು ಮುಖ್ಯಪ್ರಾಣನಿಗೆ ಉತ್ಪತ್ತಿ ಇದೆ ಎಂದು ಹೇಳುತ್ತಿವೆ. ಅಥವಾ ಬಾಹ್ಯವಾಯುವಿಗೆ ಉತ್ಪತ್ತಿ ನಾಶಗಳಿರುವುದರಿಂದಲೂ ವಾಯುವಿನ ಉತ್ಪತ್ತಿ ವಿಷಯ ಶ್ರುತಿಯನ್ನು ಕೂಡಿಸಬಹುದು ಎಂಬುದು ಆಕ್ಷೇಪದ ಅಭಿಪ್ರಾಯ.

**तत्वप्रकाशिका – प्राणशब्दस्य चेष्टायां बाह्यवायौ च वृत्युक्तेः प्राणोत्पत्ति श्रुतिस्तयोरुत्पत्तिवादिनी स्यादिति नोपपद्यते । 'सप्राणमसृजत' इति प्राणोत्पत्तिश्रु तेश्चेष्टादिविषयत्वानुननत्या मुख्यप्राणविषयत्वात् ।**

ಪ್ರಾಣ ಶಬ್ದವು ಚೇಷ್ಟೆ ಮತ್ತು ಬಾಹ್ಯವಾಯು ಇವೆರಡರ್ಥದಲ್ಲಿಯೂ ಇರುವುದರಿಂದ ಪ್ರಾಣೋತ್ಪತ್ತಿ ಶ್ರುತಿಯು ಇವುಗಳನ್ನೇ ವಿಷಯೀಕರಿಸುತ್ತದೆಂದು ಆಕ್ಷೇಪ ಮಾಡಿದ್ದು ತಪ್ಪು. ಏಕೆಂದರೆ 'ಸ ಪ್ರಾಣಮಸೃಜತ' ಇತ್ಯಾದಿಯಾಗಿ ಪ್ರಾಣೋತ್ಪತ್ತಿಯನ್ನು ಹೇಳುವ ಶ್ರುತಿಗೆ ಚೇಷ್ಟೆಯ ಉತ್ಪತ್ತ್ಯರ್ಥವನ್ನು ಒಪ್ಪಲು ಸಾಧ್ಯವೇ ಇಲ್ಲ. ಆದ್ದರಿಂದ ಅದಕ್ಕೆ ಮುಖ್ಯಪ್ರಾಣನನ್ನು ವಿಷಯೀಕರಿಸುತ್ತಿದೆ ಎಂದೇ ಹೇಳಬೇಕು.

**तत्वप्रकाशिका – न चात्रापि चेष्टादिकं वाच्यम् । 'स प्राणमसृजत' इति प्राणोत्पत्तिमुक्त्वा 'प्राणाच्छ्रद्धां खं वायुज्योतिरापः पृथिवीन्द्रियं मनोऽन्नमन्नाद्वीर्यं तपो मन्त्राः कर्म लोका लोकेषु नाम च' इति वायुकर्मणोः पृथगुत्पत्त्यभिधानात् । अन्यथा पुनरुक्तिप्रसङ्ग इति भावः ।**

'ತತ್ಪ್ರಾಣಮಸೃಜತ' ಎಂಬ ಶ್ರುತಿಯಲ್ಲೂ ಕೂಡ ಚೇಷ್ಟಾದಿಗಳನ್ನೇ ವಿಷಯವೆಂದು ಏಕೆ ಹೇಳಬಾರದು? ಹೀಗೆ ಪ್ರಶ್ನೆ ಮಾಡಬಾರದು. ಏಕೆಂದರೆ 'ತತ್ಪ್ರಾಣಮಸೃಜತಾ' ಎಂಬುದಾಗಿ ಪ್ರಾಣನ ಉತ್ಪತ್ತಿಯನ್ನು ಹೇಳಿ ಮುಂದೆ 'ಪ್ರಾಣಾತ್ ಶ್ರದ್ಧಾಂ ಖಂ ವಾಯುಃ ಜ್ಯೋತಿರಾಪಃ ಪೃಥಿವೀಂದ್ರಿಯಂ ಮನೋಽನ್ನಮನ್ನಾದ್ವೀರ್ಯಂ ತಪೋ ಮಂತ್ರಾಃ ಕರ್ಮ ಲೋಕಾಃ ಲೋಕೇಷು ನಾಮ ಚ' 'ಪ್ರಾಣನ ಮೂಲಕ ಶಬ್ದ, ಆಕಾಶ, ವಾಯು, ತೇಜಸ್ಸು, ಉದಕ, ಪೃಥಿವೀ, ಮನಸ್ಸು ಮೊದಲಾದ ಇಂದ್ರಿಯಗಳು ಅನ್ನ, ಅನ್ನದಿಂದ ವೀರ್ಯ, ತಪಸ್ಸು, ಮಂತ್ರ, ಕರ್ಮ ಇಂದ್ರಿಯಗಳ ಗೋಲಕ ಮತ್ತು ಘಟಪಟಾದಿ ನಾಮಗಳು ಉತ್ಪನ್ನವಾದವು ಎಂಬುದಾಗಿ ವಾಯು ಮತ್ತು ಕರ್ಮ ಇವುಗಳ ಉತ್ಪತ್ತಿಯನ್ನು ಬೇರೆ ಬೇರೆಯಾಗಿಯೇ ಹೇಳಲಾಗಿದೆ. ಹೀಗೊಪ್ಪದಿದ್ದರೆ ಪುನರುಕ್ತಿ ದೋಷವು ಬರುತ್ತದೆ ಎಂದಭಿಪ್ರಾಯ.

ವಿವರಣೆ – 'ತತ್ಪ್ರಾಣಮಸೃಜತ' ಎಂಬಲ್ಲಿರುವ ಪ್ರಾಣ ಶಬ್ದಕ್ಕೆ ಪ್ರಾಣನ ಕರ್ಮವನ್ನು (ಚೇಷ್ಟೆಯನ್ನು) ವಿವಕ್ಷಿಸಬಾರದು. ಏಕೆಂದರೆ 'ಪ್ರಾಣಾತ್ ಶ್ರದ್ಧಾಂ' ಎಂಬ ಮಂತ್ರವು ವಾಯುವಿನ ಉತ್ಪತ್ತಿಯನ್ನು ಹೇಳಿ ಅವನ ಚೇಷ್ಟೆಯ ಉತ್ಪತ್ತಿಯನ್ನು ಪ್ರತ್ಯೇಕವಾಗಿಯೇ ಹೇಳಿದೆ. ಒಂದು ವೇಳೆ ಪ್ರಾಣ ಶಬ್ದದಿಂದಲೇ ಚೇಷ್ಟೆಯನ್ನು ವಿವಕ್ಷಿಸಿದರೆ ಪುನರುಕ್ತಿ ದೋಷವು ಬರುತ್ತದೆಂದಭಿಪ್ರಾಯ. ಆದ್ದರಿಂದ 'ತತ್ಪ್ರಾಣಮಸೃಜತ' ಎಂಬ ಶ್ರುತಿಯು ಮುಖ್ಯಪ್ರಾಣನ ಉತ್ಪತ್ತಿಯನ್ನೇ ಹೇಳುತ್ತಿದೆ ಎಂದು ಒಪ್ಪಬೇಕು.

**तत्वप्रकाशिका – मुख्ये प्रधाने । 'मणिर्मुखं प्रधानश्चेत्युत्तमस्य वचो भवेत्' इत्यभिदानात् । श्रुत्यर्थनिश्चायिकां स्मृतिं चाह – भूतानीति ॥ 'स प्राणमसृजत' मुख्यप्राणः परस्माच्च' इति श्रुतिस्मृतिभ्यां युक्तिविरोघोऽपि परिहृतः। मुख्यप्राणस्य परमात्मजातत्वाभिधानात् ।**

'ಮುಖ್ಯೇ' ಎಂಬ ಪದಕ್ಕೆ 'ಪ್ರಧಾನ' ಎಂದರ್ಥ. ಏಕೆಂದರೆ 'ಮಣಿರ್ಮುಖಂ ಪ್ರಧಾನಶ್ಚ ಇತ್ಯುತ್ತಮಸ್ಯ ವಚೋ ಭವೇತ್' ಎಂಬುದಾಗಿ ಅಭಿಧಾನವಿದೆ. ಶ್ರುತ್ಯರ್ಥವನ್ನು ಸಮರ್ಥಿಸುವ ಸ್ಮೃತಿವಾಕ್ಯವನ್ನು 'ಭೂತಾನಿ' ಇತ್ಯಾದಿಯಾಗಿ ಉಲ್ಲೇಖ ಮಾಡುತ್ತಿದ್ದಾರೆ.

'ತತ್ಪ್ರಾಣಮಸೃಜತ' 'ಮುಖ್ಯಪ್ರಾಣಃ ಪರಸ್ಮಾಚ್ಚ' ಈ ಶ್ರುತಿಸ್ಮೃತಿಗಳಿಂದಲೂ ಯುಕ್ತಿಯ ವಿರೋಧವು ಪರಿಹಾರವಾಯಿತು. ಏಕೆಂದರೆ ಮುಖ್ಯಪ್ರಾಣನು ಪರಮಾತ್ಮನಿಂದಲೇ ಜನ್ಮವನ್ನು ತಾಳಿರುವನೆಂದು ಹೇಳಲಾಗಿದೆ.

ವಿವರಣೆ – ಎಲ್ಲರ ಜನನ ಹಾಗೂ ಮರಣಗಳಿಗೆ ಮುಖ್ಯಪ್ರಾಣನು ಕಾರಣನಾಗಿದ್ದಾನೆ. ಇಂತಹ ಮುಖ್ಯಪ್ರಾಣನಿಗೆ ಜನನಮರಣವನ್ನು ಹೇಳಿದರೆ ಇವನು ಉಳಿದವರ ಜನನಮರಣಗಳಿಗೆ ಕಾರಣನಾಗಲು ಸಾಧ್ಯವಿಲ್ಲ ಎಂಬ ಯುಕ್ತಿಯನ್ನು ಪೂರ್ವಪಕ್ಷದಲ್ಲಿ ಹೇಳಲಾಗಿತ್ತು. ಈಗ 'ತತ್ಪ್ರಾಣಮಸೃಜತಾ' ಎಂಬ ಶ್ರುತಿವಾಕ್ಯದಿಂದ ಹಾಗೂ 'ಮುಖ್ಯಪ್ರಾಣಃಪರಸ್ಮಾಚ್ಚ' ಎಂಬ ಶ್ರುತಿವಾಕ್ಯದಿಂದ ಯುಕ್ತಿವಿರೋಧವನ್ನು ಪರಿಹಾರ ಮಾಡಿದಂತಾಯಿತು. ಏಕೆಂದರೆ ಈ ಮುಖ್ಯಪ್ರಾಣನೇ ಸ್ವತಃ ಪರಮಾತ್ಮನಿಂದ ಹುಟ್ಟಿದ್ದಾನೆಂದು ಇವುಗಳು ಪ್ರತಿಪಾದನೆ ಮಾಡುತ್ತಿವೆ.

**तत्वप्रकाशिका – यत्प्राप्तिरित्याद्युक्तमाहात्म्यवतोऽपि मुख्यप्राणस्यातिमाहात्म्यवद्विष्णूत्पन्नत्वोपपत्तेः । तदुक्तम् । 'महत्त्वान्महतां विष्णुः कर्ता प्राणस्य चैकराट् । किं नाम न सृजेदेष येन शक्त्येदमावृतम् ॥' इति। अतः श्रुत्यविरोघेन मुख्यप्राणस्य जननसिद्धेर्युक्तं जगत्कारणत्वं श्रुतिसमन्वयेन वासुदेवस्येति सिद्धम् ॥**

'ಯತ್ಪ್ರಾಪ್ತಿಃ' ಎಂದು ಹೇಳಲ್ಪಟ್ಟ ಮುಖ್ಯಪ್ರಾಣನ ಮಹಿಮೆಯೂ ಕೂಡ ಮಹಾಮಹಿಮೋಪೇತನಾದ ಮಹಾವಿಷ್ಣುವಿನಿಂದಲೇ ಯುಕ್ತವಾಗುತ್ತದೆ. ಆದ್ದರಿಂದ ಮುಖ್ಯಪ್ರಾಣನಿಗೆ ವಿಷ್ಣುವಿನಿಂದ ಉತ್ಪತ್ತಿಯು ಯೋಗ್ಯವಾಗಿದೆ. ಇದನ್ನೇ

**ಮಹತ್ವಾತ್ ಮಹತಾಂ ವಿಷ್ಣುಃ ಕರ್ತಾ ಪ್ರಾಣಸ್ಯ ಚೈಕರಾಟ್ ।**
**ಕಿಂ ನಾಮು ನ ಸೃಜೇದೇಷ ಯೇನ ಶಕ್ತ್ಯೇದಮಾವೃತಂ ॥**

ಸ್ವತಂತ್ರನಾದ ಮಹಾವಿಷ್ಣುವು ಉತ್ತಮರಿಗೂ ಕೂಡ ಉತ್ತಮನಾಗಿದ್ದಾನೆ. ಆದ್ದರಿಂದ ಮುಖ್ಯಪ್ರಾಣನಿಗೂ ಕೂಡ ಇವನೇ ಜನಕನಾಗಿದ್ದಾನೆ. ಯಾವ ವಿಷ್ಣುವು ತನ್ನ ಶಕ್ತಿಯಿಂದ ಸಮಸ್ತ ಜಗತ್ತನ್ನೇ ಆವರಿಸಿದ್ದಾನೋ, ಅವನು ಮುಖ್ಯಪ್ರಾಣನನ್ನು ಹುಟ್ಟಿಸಲಾರನೇ? ಎಂಬ ವಚನವು ಸ್ಪಷ್ಟವಾಗಿ ಮುಖ್ಯಪ್ರಾಣನಿಗೆ ಜನ್ಮವನ್ನು ಹೇಳುತ್ತಿದೆ.

ಹೀಗೆ ಶ್ರುತಿಯ ವಿರೋಧವಿಲ್ಲದ್ದರಿಂದ ಮುಖ್ಯಪ್ರಾಣನ ಜನ್ಮವು ಸಿದ್ಧವಾಯಿತು. ಆದ್ದರಿಂದ ಶ್ರುತಿಸಮನ್ವಯದ ಮೂಲಕ ಜಗತ್ಕಾರಣತ್ವವು ವಾಸುದೇವನಲ್ಲಿ ಸಾಧಿತವಾಯಿತು.

ವಿವರಣೆ – ಈ ಅಧಿಕರಣದಲ್ಲಿ ಒಟ್ಟು ಎರಡು ಸೂತ್ರಗಳಿವೆ. ಪ್ರಥಮ ಸೂತ್ರದಲ್ಲಿ ಮುಖ್ಯಪ್ರಾಣನು ವಿಷ್ಣುವಿನಿಂದ ಜನ್ಮವನ್ನು ಪಡೆದಿದ್ದಾನೆಂದು ಸಮರ್ಥಿಸಲಾಯಿತು. ಎರಡನೆಯ ಸೂತ್ರದಲ್ಲಿ ಮುಖ್ಯಪ್ರಾಣನು ವಿಷ್ಣುವಿನಿಂದ ಜನ್ಮಪಡೆದಿದ್ದಾನೆಂಬ ವಿಷಯದಿಂದ ಶ್ರುತಿಸ್ಮೃತಿಗಳನ್ನು ಆಧಾರವಾಗಿ ನೀಡಲಾಯಿತು. ಮತ್ತು ಪ್ರಥಮ ಸೂತ್ರದಲ್ಲಿ ಹೇಳಲ್ಪಟ್ಟ ಶ್ರುತಿಗೆ ನಿರವಕಾಶತ್ವವನ್ನೂ ಕೂಡ ಸಮರ್ಥನೆ ಮಾಡಲಾಯಿತು.

**ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಶ್ರೇಷ್ಠಾಧಿಕರಣ ಮುಗಿಯಿತು**

ಶ್ರೇಷ್ಠಾಧಿಕರಣ
(೨-೪-೬)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## श्रेष्ठाधिकरणम्

### ಮುಖ್ಯಪ್ರಾಣನು ಸ್ವರೂಪತಃ ನಿತ್ಯ ಶರೀರತಃ ಅನಿತ್ಯ

**।। श्रेष्ठश्च ।। अत्र सङ्गतिं सूचयति ।। सर्वप्राणप्रेरकः प्राणश्रुतिसन्निधापितश्चेति ।। अत्रोक्तं ब्रह्मणस्सर्वस्रष्टृत्वं किं मुख्यप्राणानादित्वश्रुतिविरुद्धमुत नेति चिन्ता । तदर्थं तदुत्पत्तिश्रुतिः किं प्रबलानुत्पत्तिश्रुतिबाधितोत नेति । तदर्थमनुत्पत्तिश्रुतिः किं सर्वात्मनाऽनुत्पत्तिपरोत स्थौल्येनोत्पत्तावपि सौक्ष्म्येणानुत्पत्तिपरेति ।**

ಈ ಅಧಿಕರಣದ ಸಂಗತಿಯನ್ನು ಟೀಕೆಯಲ್ಲಿ 'ಸರ್ವಪ್ರಾಣಪ್ರೇರಕಃ ಪ್ರಾಣಶ್ರುತಿಸನ್ನಿಧಾಪಿತಶ್ಚ' ಎಂಬುದರಿಂದ ಸೂಚನೆ ಮಾಡಿದ್ದಾರೆ.

ಜನ್ಮಾದ್ಯಧಿಕರಣದಲ್ಲಿ ಬ್ರಹ್ಮನಿಗೆ ಸರ್ವಸ್ರಷ್ಟೃತ್ವವನ್ನು ಹೇಳಲಾಯಿತು. ಇದು ಮುಖ್ಯಪ್ರಾಣನು ಅನಾದಿಯಾಗಿದ್ದಲ್ಲಿ ಕೂಡುವುದಿಲ್ಲ. ಆದ್ದರಿಂದ ಬ್ರಹ್ಮನ ಸರ್ವಸ್ರಷ್ಟೃತ್ವ ಶ್ರುತಿಯು ಅನಾದಿತ್ವ ಶ್ರುತಿಯಿಂದ ವಿರುದ್ಧವಾಗಿದೆಯೋ ಇಲ್ಲವೋ? ಎಂಬುದು ಈ ಅಧಿಕರಣದಲ್ಲಿ ಮಾಡುತ್ತಿರುವ ಪ್ರಧಾನ ವಿಚಾರ. ಇದಕ್ಕೆ ಪೂರಕವಾಗಿ ಮುಖ್ಯಪ್ರಾಣನಿಗೆ ಉತ್ಪತ್ತಿ ಹೇಳುವ ಶ್ರುತಿಯು ಪ್ರಬಲವಾದ ಅನಾದಿತ್ವ ಶ್ರುತಿಯಿಂದ ಬಾಧಿತವಾಗಿದೆಯೋ, ಇಲ್ಲವೋ? ಎಂಬ ವಿಚಾರ ಮಾಡಲಾಗಿದೆ. ಇದಕ್ಕೆ ಪೂರಕವಾಗಿ ಅನಾದಿತ್ವ ಶ್ರುತಿಯು ಸರ್ವಾತ್ಮನಾ ಅನಾದಿತ್ವವನ್ನು ಹೇಳಲು ಹೊರಟಿದೆಯೋ ಅಥವಾ ದೇಹತಃ ಉತ್ಪತ್ತಿ ಇದ್ದರೂ ಸೂಕ್ಷ್ಮರೂಪದಿಂದ ಉತ್ಪತ್ತಿ ಇಲ್ಲ ಎಂದು ಹೇಳಲು ಹೊರಟಿದೆಯೋ? ಎಂಬ ವಿಚಾರವನ್ನು ಮಾಡಬೇಕು.

**[1](''प्राणादिदमाविरासीत्'' इति श्रुतिशेषे भाष्यकारवचनसामर्थ्येन मुख्यप्राणलिङ्गकल्पनान्न परब्रह्मपरः प्राणशब्द इति पूर्वपक्षोदयः । एवमुत्तरत्रापि द्रष्टव्यम् ।) ''एतेन मातरिश्व'' इत्यत्र बाह्येन मुख्यवायुरूपेणोत्पत्तिरुक्ता । इह तु अखिलमरणोत्पत्तिकारणेनाध्यात्मिकप्राणरूपेणाप्युत्पत्तिरुच्यत इति भेदः ।**

'ಏತೇನ ಮಾತರಿಶ್ವಾ' ಎಂಬ ಸೂತ್ರದಲ್ಲಿ ಮುಖ್ಯಪ್ರಾಣನಿಗೆ ಉತ್ಪತ್ತಿಯನ್ನು ಸಮರ್ಥನೆ ಮಾಡಲಾಗಿದೆ. ಪುನಃ ಈ ಅಧಿಕರಣದಲ್ಲೂ ಅದನ್ನೇ ಸಮರ್ಥನೆ ಮಾಡಿದರೆ ಪುನರುಕ್ತಿ ದೋಷ ಬರುತ್ತದಲ್ಲವೇ?

ಹೀಗೆ ಆಕ್ಷೇಪ ಮಾಡಬಾರದು. ಏಕೆಂದರೆ 'ಏತೇನ ಮಾತರಿಶ್ವಾ' ಎಂಬ ಸೂತ್ರದಲ್ಲಿ ಮುಖ್ಯಪ್ರಾಣನ ಬಾಹ್ಯ ರೂಪಕ್ಕೆ ಉತ್ಪತ್ತಿಯನ್ನು ಸಮರ್ಥನೆ ಮಾಡಲಾಯಿತು. ಈ ಅಧಿಕರಣದಲ್ಲಿ ಪ್ರತಿಯೊಬ್ಬರ ಮರಣ ಹಾಗೂ ಉತ್ಪತ್ತಿಗಳಿಗೆ ಕಾರಣನಾದ ದೇಹದ ಒಳಗೆ ನೆಲೆಸಿರುವ ಮುಖ್ಯಪ್ರಾಣನಿಗೂ ಕೂಡ ಉತ್ಪತ್ತಿಯನ್ನು ಸಮರ್ಥನೆ ಮಾಡಲಾಗಿದೆ. ಆದ್ದರಿಂದ ವಿಷಯ ಭೇದವಿರುವುದರಿಂದ ಅಧಿಕರಣ ಭೇದವು ಯುಕ್ತವಾಗುತ್ತದೆ.

**यदुक्तमुभाभ्यां ''आनीदवातम्'' इति श्रुतौ महाप्रलये प्राणव्यापारभूतानन-श्रवणादिहाधिकाशङ्केति । तन्न । ''को ह्येवान्यात्'' इत्यादिश्रुतौ ब्रह्मण्यप्यननश्रव-णादिह च ''अवातम्'' इति निषेधात्तेनाधिकाशङ्कायोगात् ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् श्रेष्ठाधिकरणं सम्पूर्णम् ।।६।।**

ಹಿಂದಿನ ಅಧಿಕರಣದಲ್ಲಿ ಎಲ್ಲಾ ಇಂದ್ರಿಯಗಳಿಗೆ ಉತ್ಪತ್ತಿ ಇದೆ ಎಂದು ಸಮರ್ಥನೆ ಮಾಡಲಾಯಿತು. ಇದರಿಂದಲೇ ಮುಖ್ಯಪ್ರಾಣನಿಗೂ ಕೂಡ ಉತ್ಪತ್ತಿ ಇದೆ ಎಂಬ ವಿಷಯವು ಸಿದ್ಧವಾಯಿತು. ಆದರೆ 'ಆನೀದವಾತಮ್' ಎಂಬ ಶ್ರುತಿಯು ಮಹಾಪ್ರಳಯದಲ್ಲಿ ಮುಖ್ಯಪ್ರಾಣನಿಗೂ ಚೇಷ್ಟೆ ಇದೆ ಎಂದು ಹೇಳುತ್ತಿದೆ. ಆದ್ದರಿಂದ ಉತ್ಪತ್ತಿ ಇಲ್ಲವೆಂಬ ಅಧಿಕಾಶಂಕೆಯು ಪ್ರಾಪ್ತವಾಗುತ್ತದೆ. ಅದಕ್ಕಾಗಿ ಈ ಅಧಿಕರಣ ಹೊರಟಿದೆ ಎಂಬುದಾಗಿ ಹೇಳಿದ್ದಾರೆ.

(೧) ಈ ವಾಕ್ಯ ಚಕ್ಷುರಾದ್ಯಧಿಕರಣದ್ದು. ಇಲ್ಲಿಗೆ ಸಂಬಂಧಪಟ್ಟದ್ದಲ್ಲ. ಈ ವಾಕ್ಯವು ಲಿಪಿಕಾರರ ದೋಷದಿಂದ ಈ ಅಧಿಕರಣದಲ್ಲಿ ಸೇರಿದೆಯೆಂದು ವ್ಯಾಖ್ಯಾನ ಮಾಡಿದ್ದರಿಂದ ವ್ಯಾಖ್ಯಾನ ಮಾಡಿದ್ದರಿಂದ ನಾವು ಕಂಸದಲ್ಲಿ ಮುದ್ರಿಸಿದ್ದೇವೆ.

ಇದು ತಪ್ಪು. ಏಕೆಂದರೆ 'ಕೋ ಹ್ಯೇವಾನ್ಯಾತ್ ಪ್ರಾಣ್ಯಾತ್ ಯದೇಶ ಆಕಾಶ ಆನಂದೋ ನ ಸ್ಯಾತ್' ಎಂಬ ತೈತ್ತಿರೀಯ ಉಪನಿಷತ್ತಿನಲ್ಲಿ ಪರಬ್ರಹ್ಮನೇ ಸಕಲರಿಗೂ ಚೇಷ್ಟಕನಾಗಿದ್ದಾನೆ ಎಂದು ಹೇಳಲಾಗಿದೆ. ಪ್ರಳಯಕಾಲದಲ್ಲಿ ಇಂತಹ ಬ್ರಹ್ಮನಿಗೆ ಮುಖ್ಯಪ್ರಾಣನು ಚೇಷ್ಟಕನಾಗಲು ಸಾಧ್ಯವೇ ಇಲ್ಲ ಎಂಬುದು ಇದೇ ಶ್ರುತಿಯಿಂದ ಸಿದ್ಧವಾಗುತ್ತದೆ. ಆದ್ದರಿಂದ ಅಧಿಕಾಶಂಕೆಗೆ ಅವಕಾಶವೇ ಇಲ್ಲ.

ಮತ್ತೊಂದು ಕಾರಣ – 'ಆನಾದವಾತಂ' ಎಂಬ ಶ್ರುತಿಯಲ್ಲಿಯೇ 'ಅವಾತಂ' ಎಂಬುದಾಗಿ ಪ್ರಾಣವಾಯುವು ಪ್ರಳಯಕಾಲದಲ್ಲಿ ಇರುವುದಿಲ್ಲ ಎಂದು ಸ್ಪಷ್ಟವಾಗಿಯೇ ನಿಷೇಧ ಮಾಡಲಾಗಿದೆ. ಹೀಗಿರುವಾಗ ಮುಖ್ಯಪ್ರಾಣನು ಪ್ರಳಯದಲ್ಲಿ ಇರಬಹುದು ಎಂಬ ಅಧಿಕಾಶಂಕೆಗೆ ಅವಕಾಶವೇ ಇರುವುದಿಲ್ಲ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಶ್ರೇಷ್ಠಾಧಿಕರಣವು ಸಂಪೂರ್ಣವಾಯಿತು

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**श्रेष्ठश्च ।।** पूर्वोत्तरपक्षसूचितचिन्ता आह – **अत्रोक्तमिति ।।** प्रागुक्तमित्यर्थः । गतार्थतां निराह – **एतेनेति ।।** ''प्राणादिदमाविरासीदिति श्रुतिशेष'' इत्यादिवाक्यस्य ''चक्षुरादिवत्'' इत्यत्र लेखनीयस्यात्र लेखनं लेखकदोषमूलम्।।

ಪೂರ್ವಪಕ್ಷ ಹಾಗೂ ಸಿದ್ಧಾಂತ ಪಕ್ಷಗಳಿಂದ ಸೂಚಿತವಾದ ಸಂಶಯವನ್ನು 'ಅತ್ರೋಕ್ತಂ' ಇತ್ಯಾದಿ ಗ್ರಂಥದಿಂದ ಪ್ರತಿಪಾದನೆ ಮಾಡಿದ್ದಾರೆ. 'ಅತ್ರೋಕ್ತಂ' ಎಂದರೆ ಹಿಂದೆ ಹೇಳಲ್ಪಟ್ಟ ಎಂದರ್ಥ. ಮಾತರಿಶ್ವಾಧಿಕರಣದಿಂದ ಬರುವ ಪುನರುಕ್ತಿ ದೋಷವನ್ನು 'ಏತೇನ' ಇತ್ಯಾದಿ ದೋಷದಿಂದ ನಿರಾಕರಣೆ ಮಾಡಿದ್ದಾರೆ. ಕೆಲವು ಪುಸ್ತಕಗಳಲ್ಲಿ 'ಪ್ರಾಣಾದಿದಮಾವಿರಾಸೀತ್ ಇತಿ ಶ್ರುತಿಶೇಷೇ'[1] ಇತ್ಯಾದಿ ವಾಕ್ಯವು ಮುದ್ರಿತವಾಗಿದೆ. ಆದರೆ ಈ ವಾಕ್ಯವು ಚಕ್ಷುರಾದಿವತ್ ಎಂಬ ಸೂತ್ರದ ಸಂದರ್ಭದಲ್ಲಿ ಬರೆಯಬೇಕು. ಲೇಖಕರ ದೋಷದಿಂದ ಈ ಅಧಿಕರಣದಲ್ಲಿ ಮುದ್ರಿತವಾಗಿದೆ.

(೧) ಮುದ್ರಣ ಮಾಡಿರುವ ಪ್ರಾಣಾದಿದಮಾವಿರಾಸೀತ್' ಎಂಬ ವಾಕ್ಯವನ್ನು ಚಕ್ಷುರಾದ್ಯಧಿಕರಣದಲ್ಲಿ ತಿಳಿಯಬೇಕು. ರಾಯರು ಸ್ಪಷ್ಟವಾಗಿ ಈ ವಾಕ್ಯವನ್ನು ಆ ಅಧಿಕರಣದಲ್ಲಿ ಹಾಕಬೇಕು ಎಂದು ಹೇಳಿದ್ದರೂ ಕೂಡ ಇದುವರೆಗೂ ಎಲ್ಲಾ ಪುಸ್ತಕಗಳಲ್ಲಿ ಇದೇ ಅಧಿಕರಣದಲ್ಲಿ ಮುದ್ರಿತವಾಗುತ್ತಿದೆ. ಇದು ಬಹಳ ಆಶ್ಚರ್ಯ.

**प्रकाशः – यदुक्तमुभाभ्यामिति ।। आनीदिति ।।** अन प्राणन इति धातोर्लङ् । अननं च प्राणव्यापार इति ''आनीत्'' इत्यनेनैव प्राणस्य प्रलये सद्भावोऽभिधीयत इति ''तथा प्राणा'' इत्यादि विशेषाशङ्केत्याहुरित्यर्थः ।

'ಆನೀತ್' ಎಂಬುದು 'ಅನ ಪ್ರಾಣನೇ' ಎಂಬ ಧಾತುವಿನ ಲಙ್‌ಲಕಾರ. 'ಅನನ' ಎಂದರೆ ಪ್ರಾಣನ ವ್ಯಾಪಾರ ಎಂದರ್ಥ. 'ಆನೀತ್' ಎಂಬ ಪದದಿಂದಲೇ ಪ್ರಾಣನಿಗೆ ಪ್ರಳಯದಲ್ಲಿ ಇರುವಿಕೆಯು ತಿಳಿಯುತ್ತಿದೆ. ಹೀಗೆ 'ತಥಾ ಪ್ರಾಣಾಃ' ಎಂಬುದರ ಮೇಲೆ ವಿಶೇಷಾಶಂಕೆಯು ಪ್ರಾಪ್ತವಾಗುತ್ತಿದೆ ಎಂಬುದು ಅದ್ವೈತಿಗಳ ವ್ಯಾಖ್ಯಾನ.

**प्रकाशः –** मतद्वयेऽपि श्रेष्ठो नाम मुख्यप्राणशब्दितो जडवायुविशेष इति बोध्यम् ।। **तन्नेति ।।** स्यादेवं यदि ''आनीत्'' इत्यनेनोक्तमननं प्राणस्यैवासाधारणो व्यापारो भवेत्तदा तेन प्रलये प्राणसत्त्वमुपस्थाप्येत ।

ಅದ್ವೈತಮತ ಹಾಗೂ ರಾಮಾನುಜ ಮತದಲ್ಲಿ ಶ್ರೇಷ್ಠ ಎಂಬ ಪದಕ್ಕೆ ಮುಖ್ಯಪ್ರಾಣ ಎಂದು ಅರ್ಥವನ್ನು ಹೇಳುತ್ತಾರೆ. ಆದರೆ ನಾವು ಹೇಳುವ ವಾಯುದೇವರನ್ನು ಅವರು ಮುಖ್ಯಪ್ರಾಣ ಶಬ್ದದಿಂದ ಪ್ರತಿಪಾದ್ಯ ಎಂಬ ಹೇಳುವುದಿಲ್ಲ. ಜಡವಾಯು ವಿಶೇಷವನ್ನೇ ಮುಖ್ಯಪ್ರಾಣ ಶಬ್ದದಿಂದ ಕರೆಯುತ್ತಾರೆ. 'ತನ್ನ' ಎಂದು ಗ್ರಂಥದ ವಾಕ್ಯದ ಅಭಿಪ್ರಾಯ ಹೀಗಿದೆ – ಒಂದು ವೇಳೆ 'ಆನೀತ್' ಎಂಬುದರಿಂದ ಹೇಳಲ್ಪಟ್ಟ ಚೇಷ್ಟೆಯು ಮುಖ್ಯಪ್ರಾಣನಲ್ಲಿಯೂ ಅಸಾಧಾರಣವಾಗಿ ಇರುವುದಾಗಿದ್ದರೆ ಆಗ ಆ ಮುಖ್ಯಪ್ರಾಣ ಶಬ್ದ ಪ್ರತಿಪಾದ್ಯವಾದದ್ದಕ್ಕೆ ಪ್ರಳಯಕಾಲದಲ್ಲಿ ಅಸ್ತಿತ್ವವನ್ನು ಅಂಗೀಕರಿಸಬಹುದಿತ್ತು.

**प्रकाशः – न चैवमित्याह – को हीति ।।** साधारण्येऽप्यस्ति प्राणस्याप्युपस्थापनमित्यत आह – **इह चेति ।।** अवातं वातं वायुर्नास्तीति निषेधात्तस्य प्राणव्यतिरिक्तवायुनिषेधकल्पकाभावान्न प्राणस्यात्रोपस्थितिरित्यर्थः।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे श्रेष्ठाधिकरणं सम्पूर्णम् ।।६।।**

ಆದರೆ ಮುಖ್ಯಪ್ರಾಣ ಎನಿಸಿದ ಜಡವಾಯುವಿಶೇಷಕ್ಕೆ ಪ್ರಳಯ ಕಾಲದಲ್ಲಿ ಯಾವುದೇ ಕ್ರಿಯೆ ಇಲ್ಲ ಎಂಬುದಾಗಿ 'ಕೋ ಹ್ಯೇವಾನ್ಯಾತ್' ಎಂಬ ಶ್ರುತಿಯೇ ಹೇಳುತ್ತಿದೆ. 'ಕೋ ಹ್ಯೇವಾನ್ಯಾತ್' ಎಂಬ ಶ್ರುತಿಯು ಸಾಧಾರಣ ವಾಕ್ಯವಾದ್ದರಿಂದ ಮುಖ್ಯಪ್ರಾಣವನ್ನು ಪ್ರಳಯಕಾಲದಲ್ಲಿ ಒಪ್ಪಬಹುದಲ್ಲವೇ? ಎಂಬ ಪ್ರಶ್ನೆಗೆ 'ಇಹ ಚ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. 'ಆನೀದವಾತಂ' ಎಂಬ ಶ್ರುತಿಯಲ್ಲಿ ಅವಾತಂ ಎಂಬ ಪದದಿಂದ

ವಾಯುವು ಇರುವುದಿಲ್ಲ ಎಂದು ನಿಷೇಧ ಮಾಡಲಾಗಿದೆ. ಈ ಪದಕ್ಕೆ ಪ್ರಾಣ ವ್ಯತಿರಿಕ್ತವಾದ ವಾಯು ನಿಷೇಧದಲ್ಲಿ ತಾತ್ಪರ್ಯವಿದೆ ಎಂದು ಕಲ್ಪನೆ ಮಾಡಲು ಯಾವುದೇ ವಿನಿಗಮಕವಿಲ್ಲ. ಆದ್ದರಿಂದ ಜಡಭೂತವಾದ ಪ್ರಾಣದ ಉಪಸ್ಥಿತಿಯೂ ಕೂಡ 'ಕೋ ಹ್ಯೇವಾನ್ಯಾತ್' ಎಂಬ ಶ್ರುತಿಯಿಂದ ಆಗುತ್ತದೆ. ಆದ್ದರಿಂದ ಪ್ರಳಯಕಾಲದಲ್ಲಿ ಮುಖ್ಯಪ್ರಾಣ ಇರಲಿಲ್ಲ ಎಂಬುದು ಸಿದ್ಧವಾಯಿತು. ಆದ್ದರಿಂದ ಅದ್ವೈತಿಗಳ ಹಾಗೂ ವಿಶಿಷ್ಟಾದ್ವೈತಿಗಳ ಅಧಿಕರಣ ರಚನೆಯು ಅಯುಕ್ತವೆಂದು ಸಿದ್ಧವಾಯಿತು.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಶ್ರೇಷ್ಠಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

# ಚಕ್ಷುರಾದ್ಯಧಿಕರಣ

(೨-೪-೭)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

***

॥ ಶ್ರೀಗುರುಭ್ಯೋ ನಮಃ ॥

# ಚಕ್ಷುರಾದ್ಯಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

### सूत्रम् – चक्षुरादिवत्तु तत्सहशिष्ट्यादिभ्यः ॥

ಚಕ್ಷುರಾದಿ ಇಂದ್ರಿಯಗಳಂತೆ ಮುಖ್ಯಪ್ರಾಣನೂ ಕೂಡ ಈಶ್ವರನ ಅಧೀನನಾಗಿದ್ದಾನೆ. 'ಸರ್ವಂ ಹ್ಯೇವೈತತ್ ಪರಮೇಽವತಿಷ್ಠತೇ' ಎಂಬ ಶ್ರುತಿಯು ಇದನ್ನು ಹೇಳುತ್ತಿದೆ. ಆದಿಪದದಿಂದ ಪ್ರಾಣನು ಈಶಾಧೀನ ಎಂದು ಹೇಳುವ ಶ್ರುತಿ ಹಾಗೂ ಯುಕ್ತಿಗಳು ಸೂತ್ರಕಾರರು ವಿವಕ್ಷಿಸಿದ್ದಾರೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** – तुशब्द एवार्थे । मुख्यप्राणोऽपि चक्षुरादिवत् परमात्माधीन एव न तु स्वतन्त्रः । कुतः । **तत्सहशिष्ट्यादिभ्यः** तैश्चक्षुरादिभिः सह मुख्यवायोरपि 'सर्वं ह्येवैतत्' इति श्रुतौ पराधीनत्वोक्तेः । सर्वकर्तेत्यादिवचनोक्त-युक्तिभ्यश्चेत्यर्थः ॥१॥

'ತು'ಶಬ್ದವು ಏವಕಾರಾರ್ಥದಲ್ಲಿದೆ. ಚಕ್ಷುರಾದಿವತ್ = ಮುಖ್ಯಪ್ರಾಣನೂ ಕೂಡ ಚಕ್ಷುರಾದಿ ಇಂದ್ರಿಯಗಳಂತೆ ಪರಮಾತ್ಮನ ಅಧೀನನಾಗಿರುತ್ತಾನೆ, ಸ್ವತಂತ್ರನಲ್ಲ. ಏಕೆಂದರೆ ತತ್ಸಹಶಿಷ್ಟ್ಯಾದಿಭ್ಯಃ = ಚಕ್ಷುರಾದಿ ಇಂದ್ರಿಯಗಳ ಜೊತೆಗೆ ಮುಖ್ಯಪ್ರಾಣನಿಗೂ ಕೂಡ 'ಸರ್ವಂ ಹ್ಯೇವೈತತ್ ಪರಮೇಽವತಿಷ್ಠತೇ

ಪ್ರಾಣಶ್ಚ ಪ್ರಾಣಾಶ್ಚ ಪ್ರಾಣನಶ್ಚ' ಎಂಬ ಶ್ರುತಿಯಲ್ಲಿ ಬೇರೆ ಇಂದ್ರಿಯಗಳ ಜೊತೆ ಪ್ರಾಣನೂ ಕೂಡ ಈಶ್ವರನ ಅಧೀನನಾಗಿದ್ದಾನೆಂದು ಹೇಳಲಾಗಿದೆ. ಆದಿಪದದಿಂದ 'ಸರ್ವಕರ್ತಾ' ಇತ್ಯಾದಿ ಶ್ರುತಿಗಳಲ್ಲಿ ಹೇಳಲ್ಪಟ್ಟ ಯುಕ್ತಿಗಳನ್ನು ವಿವಕ್ಷಿಸಬೇಕು.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – 'प्राणादिदमाविरासीत् प्राणो धत्ते प्राणे लयमभ्युपैति न प्राणः किञ्चिदाश्रितः इत्याग्निवेश्यश्रुतौ ।**

ಅನುವಾದ - ಮುಖ್ಯಪ್ರಾಣನಿಂದಲೇ ಈ ಜಗತ್ತು ಪ್ರಕಟವಾಯಿತು. ಮುಖ್ಯಪ್ರಾಣನು ಈ ಜಗತ್ತನ್ನು ಹಿಡಿದಿದ್ದಾನೆ. ಮುಖ್ಯಪ್ರಾಣನಲ್ಲೇ ಜಗತ್ತು ಲಯ ಹೊಂದುತ್ತದೆ. ಆ ಮುಖ್ಯಪ್ರಾಣನಾದರೋ ಯಾವುದೊಂದನ್ನೂ ಆಶ್ರಯಿಸಿಲ್ಲ. ಹೀಗೆ ಅಗ್ನಿವೇಶ್ಯಶ್ರುತಿಯು ಮುಖ್ಯಪ್ರಾಣನನ್ನು ಸ್ವತಂತ್ರನೆಂದು ಹೇಳುತ್ತಿದೆ.

ಪ್ರತಿಪದಾರ್ಥ -- ಪ್ರಾಣಾತ್ = ಮುಖ್ಯಪ್ರಾಣನಿಂದ. ಇದಂ = ಈ ಜಗತ್, ಆವಿರಾಸೀತ್ = ಆವಿರ್ಭಾವವಾಯಿತು. ಪ್ರಾಣಃ = ಮುಖ್ಯಪ್ರಾಣನು, ಧತ್ತೇ = ಈ ಜಗತ್ತನ್ನು ಧರಿಸಿದ್ದಾನೆ. ಪ್ರಾಣೇ = ಮುಖ್ಯಪ್ರಾಣನಲ್ಲಿ, ಲಯಂ = ಲಯವನ್ನು, ಅಭ್ಯುಪೈತಿ = ಹೊಂದುತ್ತಾರೆ. ಪ್ರಾಣಃ = ಮುಖ್ಯಪ್ರಾಣನಾದರೂ, ಕಿಂಚಿತ್ = ಯಾವುದೊಂದನ್ನು, ನ ಆಶ್ರಿತಃ = ಆಶ್ರಯಿಸಿರುವುದಿಲ್ಲ. ಇತಿ = ಹೀಗೆ, ಅಗ್ನಿವೇಶ್ಯಶ್ರುತೌ = ಅಗ್ನಿವೇಶ್ಯಶ್ರುತಿಯಲ್ಲಿ ಹೇಳಲಾಗಿದೆ.

**भाष्यम् –**

**'यदाश्रयादस्य चेष्टा सोऽन्यं कथमुपाश्रयेत् ।**
**यथा प्राणस्तथा राजा सर्वस्यैकाश्रयो भवेत् ।।'**
**इति च युक्तिर्भारते ।**

ಅನುವಾದ - ಈ ಜಗತ್ತು ಯಾರ ಆಶ್ರಯದಿಂದ ಚೇಷ್ಟೆಯುಳ್ಳದಾಗಿದೆಯೋ, ಅವನು ಮತ್ತೊಬ್ಬರನ್ನು ಹೇಗೆ ಅವಲಂಬಿಸುತ್ತಾನೆ? ಹೇಗೆ ಮುಖ್ಯಪ್ರಾಣನು ಎಲ್ಲದಕ್ಕೂ ಆಶ್ರಯನೋ ಅದರಂತೆ ರಾಜನಾದವನು ಎಲ್ಲರಿಗೂ ಆಶ್ರಯನಾಗಿರುತ್ತಾನೆ. ಹೀಗೆ ಯುಕ್ತಿಬದ್ಧವಾಗಿ ಮಹಾಭಾರತವು ಮುಖ್ಯಪ್ರಾಣನಿಗೆ ಸ್ವಾತಂತ್ರ್ಯವನ್ನು ಹೇಳುತ್ತಿದೆ.

ಪ್ರತಿಪದಾರ್ಥ -- ಅಸ್ಯ = ಈ ಜಗತ್ತು, ಯದಾಶ್ರಯಾತ್ = ಯಾರ ಆಶ್ರಯದಿಂದ, ಚೇಷ್ಟಾ = ಕ್ರಿಯಾಶೀಲವಾಗಿದೆಯೋ, ಸಃ = ಆ ಮುಖ್ಯಪ್ರಾಣನು, ಅನ್ಯಮ್ =

ಮತ್ತೊಬ್ಬರನ್ನು, ಕಥಂ = ಹೇಗೆ, ಉಪಾಶ್ರಯೇತ್ = ಅವಲಂಬಿಸುತ್ತಾನೆ? ಪ್ರಾಣಃ = ಮುಖ್ಯಪ್ರಾಣನು, ಯಥಾ = ಹೇಗೆ, ಸರ್ವಸ್ಯ = ಪ್ರತಿಯೊಂದಕ್ಕೂ, ಆಶ್ರಯಃ = ಆಶ್ರಯನಾಗಿದ್ದನೋ, ತಥಾ = ಹಾಗೆ, ರಾಜಃ = ರಾಜನು, ಭವೇತ್ = ಆಶ್ರಯನಾಗುತ್ತಾನೆ, ಇತಿ ಚ = ಹೀಗೆ, ಯುಕ್ತಿಃ = ಯುಕ್ತಿಯನ್ನು, ಭಾರತೇ = ಮಹಾಭಾರತದಲ್ಲಿ ಹೇಳಲಾಗಿದೆ.

**भाष्यम् –**

**'प्राणस्यैतद् वशे सर्वं प्राणः परवशे स्थितः ।**
**न परः किञ्चिदाश्रित्य वर्तते परमो यतः ।।' इति पैङ्गिश्रुतिः ।**

ಅನುವಾದ - ಸಕಲ ಜಗತ್ತು ಮುಖ್ಯಪ್ರಾಣನ ಅಧೀನವಾಗಿದೆ. ಆ ಮುಖ್ಯಪ್ರಾಣನು ಪರಮಾತ್ಮನ ಅಧೀನನಾಗಿದ್ದಾನೆ. ಆ ಪರಮಾತ್ಮನು ಯಾರ ಅಧೀನನೂ ಆಗಿರುವುದಿಲ್ಲ. ಆದ್ದರಿಂದ ಪರಮಾತ್ಮನೇ ಸರ್ವೋತ್ತಮನಾಗಿದ್ದಾನೆ.

ಪ್ರತಿಪದಾರ್ಥ:- ಏತತ್ ಸರ್ವಂ = ಈ ಸಮಸ್ತ ಜಗತ್ತು, ಪ್ರಾಣಸ್ಯ = ಈ ಮುಖ್ಯಪ್ರಾಣನ, ವಶೇ = ವಶದಲ್ಲಿದೆ, ಪ್ರಾಣಃ = ಆ ಮುಖ್ಯಪ್ರಾಣನು, ಪರವಶೇ = ಪರಮಾತ್ಮನ ಅಧೀನದಲ್ಲಿ, ಸ್ಥಿತಃ = ಇದ್ದಾನೆ. ಪರಃ = ಆ ಪರಮಾತ್ಮನು, ಕಿಂಚಿತ್ = ಯಾವುದನ್ನು, ಆಶ್ರಿತ್ಯ = ಆಶ್ರಯಿಸಿಕೊಂಡು, ನ ವರ್ತತೇ = ಇರುವುದಿಲ್ಲ. ಯತಃ = ಯಾವ ಕಾರಣದಿಂದ ಆ ಪರಮಾತ್ಮನು, ಪರಮಃ = ಸರ್ವೋತ್ತಮನಾಗಿದ್ದಾನೆ.

**भाष्यम् – अत आह –**

**।। चक्षुरादिवत्तु तत्सहशिष्ट्यादिभ्यः ।।१।।**

**चक्षुरादिवन्मुख्यप्राणोऽपि परमात्मवश एव । 'सर्वं ह्येवैतत् परमेऽवतिष्ठते प्राणश्च प्राणाश्च प्राणिनश्च स ह्येक एवैतान् नयत्युन्नयति वशीकरोति' इति गौपवनश्रुतौ चक्षुरादिभिः सह तद्वशत्वेनैव शासनात् ।।**

ಅನುವಾದ - ಈ ಪೂರ್ವಪಕ್ಷವನ್ನು ಸೂತ್ರಕಾರರು ನಿರಾಕರಣೆ ಮಾಡುತ್ತಿದ್ದಾರೆ -

ಚಕ್ಷುರಾದಿ ಇಂದ್ರಿಯಾಭಿಮಾನಿದೇವತೆಗಳು ಹೇಗೆ ಭಗವಂತನ ಅಧೀನರೋ ಹಾಗೆ ಮುಖ್ಯಪ್ರಾಣನು ಕೂಡ ಭಗವಂತನ ಅಧೀನನೇ ಆಗಿರುತ್ತಾನೆ. ಈ ಸಮಸ್ತ ಜಗತ್ತು ಪರಮಾತ್ಮನಲ್ಲಿ ಆಶ್ರಯ ಪಡೆದಿದೆ. ಇಂದ್ರಿಯಗಳು, ಜೀವರು, ಹಾಗೂ ಮುಖ್ಯಪ್ರಾಣ, ಈ ಎಲ್ಲವನ್ನು ಅವನೊಬ್ಬನೇ ಪ್ರೇರಣೆ ಮಾಡುತ್ತಾನೆ. ಮೋಕ್ಷಕ್ಕೆ ಕರೆದುಕೊಂಡು ಹೋಗುತ್ತಾನೆ. ನಿರಂತರ ತನ್ನ ವಶದಲ್ಲಿ ಇಟ್ಟುಕೊಂಡಿರುತ್ತಾನೆ ಹೀಗೆ ಗೌಪವನಶ್ರುತಿಯಲ್ಲಿ ಚಕ್ಷುರಾದಿ ಇಂದ್ರಿಯಗಳ ಜೊತೆಗೆ ಮುಖ್ಯಪ್ರಾಣನಿಗೂ ಭಗವದ್ ವಶತ್ವವನ್ನು ವಿಧಾನ ಮಾಡಲಾಗಿದೆ.

ಪ್ರತಿಪದಾರ್ಥ -- ಅತಃ = ಮೇಲಿನ ಪೂರ್ವಪಕ್ಷಕ್ಕೆ, ಆಹ = ಸೂತ್ರಕಾರರು ಉತ್ತರಿಸುತ್ತಿದ್ದಾರೆ. ಚಕ್ಷುರಾದಿವತ್ = ಚಕ್ಷುರಾದಿ ಇಂದ್ರಿಯಾದಿ ಅಭಿಮಾನಿದೇವತೆಗಳಂತೆ,

ಮುಖ್ಯಪ್ರಾಣೋಽಪಿ = ಮುಖ್ಯಪ್ರಾಣನೂ ಕೂಡ, ಪರಮಾತ್ಮವಶ ಏವ = ಪರಮಾತ್ಮನ ಅಧೀನವೇ ಆಗಿರುತ್ತಾನೆ. ಏತತ್ ಸರ್ವಂಹಿ = ಇವೆಲ್ಲವೂ, ಪರಮೇ = ಪರಮಾತ್ಮನಲ್ಲಿ, ಅವತಿಷ್ಠತೇ = ಆಶ್ರಯಪಡೆದಿದೆ. ಪ್ರಾಣಶ್ಚ = ಮುಖ್ಯಪ್ರಾಣನು, ಪ್ರಾಣಾಶ್ಚ = ಇಂದ್ರಿಯಗಳು, ಪ್ರಾಣಿನಶ್ಚ = ಜೀವಿಗಳನ್ನೂ ಕೂಡ, ಸಃ ಹಿ ಏಕ ಏವ = ಪರಮಾತ್ಮನೊಬ್ಬನೇ, ಏತಾನ್ = ಇವೆಲ್ಲರನ್ನು, ನಯತಿ = ಪ್ರೇರಣೆ ಮಾಡುತ್ತಾನೆ. ಉನ್ನಯತಿ = ಮೇಲಕ್ಕೆ ಎತ್ತುತ್ತಾನೆ, ವಶೀಕರೋತಿ = ತನ್ನ ವಶದಲ್ಲಿ ಇಟ್ಟುಕೊಂಡಿರುತ್ತಾನೆ. ಇತಿ = ಹೀಗೆ, ಗೌಪವನಶ್ರುತೌ = ಗೌಪವನ ಶ್ರುತಿಯಲ್ಲಿ, ಚಕ್ಷುರಾದಿಭಿಃ ಸಹ = ಚಕ್ಷುರಾದಿಇಂದ್ರಿಯಗಳ ಜೊತೆ, ತದ್ವಶತ್ವೇನೈವ = ಭಗವಂತನ ಅಧೀನನನ್ನಾಗಿಯೇ, ಶಾಸನಾತ್ = ವಿಧಾನ ಮಾಡಿರುವುದರಿಂದ ಮುಖ್ಯಪ್ರಾಣನು ಸ್ವತಂತ್ರನಲ್ಲ.

**भाष्यम् –**

**सर्वकर्ताऽपि सन् प्राणः परमाधारतः स्थितः ।**
**कथमेवान्यथा स स्याद् यतो नैवेश्वरद्वयम् ।।**
**अवान्तरेश्वरत्वेन तस्येश्वरवचो भवेत् ।**
**अतो मध्यमतामाहुस्तस्य वेदेषु वेदिनः ।।**
**अनन्येश्वरता प्राणे तदन्येश्वरवर्जना ।**
**यतो विशेषवाक्येन ह्रियते समतावचः ।।**

**'नान्योऽतोऽस्ति द्रष्टा' (बृ. ५.७.२३) 'नान्यदतोऽस्ति द्रष्टा' (बृ.५.८.११) इत्यादिवचनयुक्तः आदिशब्दोक्ताः ।।१।।**

ಅನುವಾದ - ಮುಖ್ಯಪ್ರಾಣನು ಸಕಲಜಗತ್ತಿಗೆ ಕಾರಣನಾಗಿದ್ದಾರೂ ಪರಮಾತ್ಮನ ಅಧೀನನಾಗಿಯೇ ಇರುತ್ತಾನೆ. ಭಗವಂತನ ಆಶ್ರಯವಿಲ್ಲದೆ ಮುಖ್ಯಪ್ರಾಣನು ಹೇಗೆ ಇರಲು ಸಾಧ್ಯ? ಏಕೆಂದರೆ ಇಬ್ಬರು ಸ್ವತಂತ್ರ ವ್ಯಕ್ತಿಗಳು ಇರಲು ಸಾಧ್ಯವೇ ಇಲ್ಲವಷ್ಟೇ.

ಮುಖ್ಯಪ್ರಾಣನಿಗೆ ಸ್ವತಂತ್ರತ್ವವನ್ನು ಹೇಳುವ ಶ್ರುತಿಗಳಿಗೆ ಭಗವದಧೀನವಾದ ಕರ್ತೃತ್ವ ಇರುತ್ತದೆ ಎಂದರ್ಥ. ಮುಖ್ಯವಾದ ಸ್ವಾತಂತ್ರ್ಯವು ಮುಖ್ಯಪ್ರಾಣನಿಗೆ ಇರುವುದೇ ಇಲ್ಲ. ಆ ಮುಖ್ಯಪ್ರಾಣನಿಗೆ ಜ್ಞಾನಿಗಳು 'ಮಧ್ಯಮಪ್ರಾಣ' ಎಂದು ಕರೆಯುತ್ತಾರೆ.

ಭಗವಂತನಿಗಿಂತ ಹೊರತಾದ ಬೇರೆ ಈಶ್ವರರು ಮುಖ್ಯಪ್ರಾಣನಿಗೆ ಇರುವುದಿಲ್ಲ ಎಂಬ ಧರ್ಮವಿದೆ. ಆದ್ದರಿಂದ 'ಪ್ರಾಣಾದಿದಮಾವಿರಾಸೀತ್' ಎಂಬ ಸಾಮಾನ್ಯ ಶ್ರುತಿಯು 'ಪ್ರಾಣಸ್ಯ ಏತಸ್ಯ ವಶೇ ಸರ್ವಂ' ಎಂಬ ವಿಶೇಷ ಶ್ರುತಿಯಿಂದ ಅವಾಂತರ ಈಶ್ವರನಾಗಿದ್ದಾನೆ ಎಂಬ ಅರ್ಥವನ್ನು ತಿಳಿಸುತ್ತದೆ.

ಪರಮಾತ್ಮನಿಗಿಂತ ಭಿನ್ನನಾದ ಮತ್ತೊಬ್ಬ ಸ್ವತಂತ್ರಜ್ಞಾನಿಯು ಇರುವುದಿಲ್ಲ. ಇವೇ ಮೊದಲಾದ ಪ್ರಮಾಣವಚನಗಳು 'ಮಧ್ಯಮಪ್ರಾಣ' ಇತ್ಯಾದಿ ಯುಕ್ತಿಗಳು ಮುಖ್ಯಪ್ರಾಣ ಸರ್ವೋತ್ತಮನಲ್ಲ ಎಂಬ ವಿಷಯದಲ್ಲಿ ಆಧಾರವಾಗಿದೆ.

ಪ್ರತಿಪದಾರ್ಥ -- ಪ್ರಾಣಃ = ಮುಖ್ಯಪ್ರಾಣನು, ಸರ್ವಕರ್ತಾಪಿಸನ್ = ಸರ್ವಕರ್ತೃವಾಗಿದ್ದರೂ, ಪರಮಾಧಾರತಃ = ಪರಮಾತ್ಮನ ಅಧೀನವಾಗಿಯೇ, ಸ್ಥಿತಃ = ಇರುತ್ತಾನೆ. ಅನ್ಯಥಾ = ಇಲ್ಲದಿದ್ದರೆ, ಸಃ = ಮುಖ್ಯಪ್ರಾಣನು, ಕಥಮೇವ = ಹೇಗೆ ತಾನೆ, ಸ್ಯಾತ್ = ಅಸ್ತಿತ್ವವನ್ನು ಪಡೆಯಲು ಸಾಧ್ಯ?, ಯತಃ = ಯಾವ ಕಾರಣದಿಂದ, ಈಶ್ವರದ್ವಯಮ್ = ಇಬ್ಬರು ಸ್ವತಂತ್ರವ್ಯಕ್ತಿಗಳು, ನೈವ = ಇರುವುದಿಲ್ಲವಷ್ಟೆ. ತಸ್ಯ = ಆ ಮುಖ್ಯಪ್ರಾಣನಿಗೆ, ಈಶ್ವರವಚಃ = ಸ್ವಾತಂತ್ರ್ಯವನ್ನು ಹೇಳುವ, 'ಪ್ರಾಣೋಧತ್ತೇ' ಎಂಬ ಮಾತಿಗೆ, ಅವಾಂತರೇಶ್ವರತ್ವೇನ = ಭಗವಂತನ ಅಧೀನವಾದ ಕರ್ತೃತ್ವವಿದೆ ಎಂಬುದಾಗಿ, ಭವೇತ್ = ಅರ್ಥೈಸಬೇಕು, ಅಥ = ಮುಖ್ಯವಾದ ಸ್ವಾತಂತ್ರ್ಯವು ಇಲ್ಲದ್ದರಿಂದ, ತಸ್ಯ = ಮುಖ್ಯಪ್ರಾಣನಿಗೆ, ವೇದಿನಃ = ಜ್ಞಾನಿಗಳು, ವೇದೇಷು = 'ಮಧ್ಯಮಪ್ರಾಣಃ' ಇತ್ಯಾದಿ ಶ್ರುತಿಗಳಲ್ಲಿ, ಮಧ್ಯಮತಾಮ್ = ಮಧ್ಯಮಪ್ರಾಣ ಎಂದು, ಆಹುಃ = ಹೇಳುತ್ತಾರೆ.

ಪ್ರಾಣೇ = ಮುಖ್ಯಪ್ರಾಣನಲ್ಲಿ, ಅನನ್ಯೇಶ್ವರತಾ = ಪರಮಾತ್ಮನನ್ನು ಬಿಟ್ಟು ಮತ್ತೊಬ್ಬ ಈಶ್ವರನು ಇರುವುದಿಲ್ಲ ಎಂಬ ಧರ್ಮವು, ತದನ್ಯೇಶ್ವರವರ್ಜನಾ = ಪರಮಾತ್ಮನನ್ನು ಬಿಟ್ಟು ಮತ್ತೊಬ್ಬ ಒಡೆಯನು ಇಲ್ಲವೆಂಬ ಕಾರಣದಿಂದಲೇ ಯುಕ್ತವಾಗುತ್ತದೆ. ಯತಃ = ಯಾವಕಾರಣದಿಂದ, ಸಮತಾವಚಃ = 'ಮುಖ್ಯಪ್ರಾಣಾದಿದಮಾವಿರಾಸೀತ್' ಎಂಬ ಸಾಮಾನ್ಯ ಮಾತು, ವಿಶೇಷವಾಕ್ಯೇನ = 'ಪ್ರಾಣಸ್ಯ ಏತತ್' ಎಂಬ ವಿಶೇಷ ವಾಕ್ಯದಿಂದ. ಕ್ರಿಯತೇ = ಅವಾಂತರ ಈಶ್ವರ ಎಂಬ ವಾಕ್ಯದ ಅರ್ಥ ಬರುವಂತೆ ವ್ಯಾಖ್ಯಾನ ಮಾಡಲಾಗುತ್ತದೆ.

ಅತಃ = ಪರಮಾತ್ಮನಿಂದ, ಅನ್ಯಃ = ಬೇರೆಯಾದ, ದ್ರಷ್ಟಾ = ಸ್ವತಂತ್ರನಾದ ಜ್ಞಾನಿಯು, ನ = ಇರುವುದಿಲ್ಲ. ಅತಃ = ಆ ಪರಮಾತ್ಮನಿಗಿಂತ, ಅನ್ಯತ್ = ಭಿನ್ನವಾದ, ದ್ರಷ್ಟಾ = ಜ್ಞಾನಿಯು, ನ = ಇರುವುದಿಲ್ಲ. ಇತ್ಯಾದಿ ವಚನಾತ್ = ಇವೇ ಮೊದಲಾದ ಶ್ರುತಿವಾಕ್ಯಗಳಿಂದ ಇಬ್ಬರು ಸ್ವತಂತ್ರವ್ಯಕ್ತಿಗಳು ಇರುವುದಿಲ್ಲ. ಮೊದಲಾದ ಯುಕ್ತಿಗಳಿಂದ ಮುಖ್ಯಪ್ರಾಣನು ಸರ್ವೋತ್ತಮನಲ್ಲವೆಂದು ತಿಳಿಯುತ್ತದೆ.

### ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

## ತತ್ವಪ್ರಕಾಶಿಕಾ

**तत्वप्रकाशिका** – अत्र जगत्कारणे हरौ श्रुतिसमन्वयसिध्यर्थं मुख्यप्राण-विषयश्रुतिविरोधपरिहारादस्ति शास्त्रादिसङ्गतिः । जगत्कारणे ब्रह्मण्युक्तः श्रुतिसमन्वयो मुख्यप्राणविषय श्रुतीनां विरोधेनाप्रामाण्ये अयुक्तः स्यादिति स निराकार्यः । प्रकृतो मुख्यप्राण एवात्र विषयः । स्वतन्त्रः परतन्त्रो वेति सन्देहः । सन्देहबीजं श्रुतिविगानं दर्शयन् पूर्वपक्षं च सूचयति – प्राणादिति ।।

ಈ ಅಧಿಕರಣವು ಜಗತ್ಕಾರಣನಾದ ಶ್ರೀಹರಿಯಲ್ಲಿ ಶ್ರುತಿಸಮನ್ವಯವನ್ನು ಸಾಧಿಸುವುದಕ್ಕಾಗಿ ಮುಖ್ಯಪ್ರಾಣ ವಿಷಯಕವಾದ ಶ್ರುತಿವಿರೋಧವನ್ನು ಪರಿಹಾರ ಮಾಡುತ್ತಿದೆ. ಆದ್ದರಿಂದ ಶಾಸ್ತ್ರ-ಅಧ್ಯಾಯ-ಪಾದ ಸಂಗತಿಗಳು ಇರುತ್ತವೆ.

ಜಗತ್ಕಾರಣನಾದ ಬ್ರಹ್ಮನಲ್ಲಿ ಶ್ರುತಿಗಳ ಸಮನ್ವಯವನ್ನು ಹಿಂದೆ ಹೇಳಲಾಯಿತು. ಈ ವಿಷಯಕ್ಕೆ ಮುಖ್ಯಪ್ರಾಣವಿಷಯಕವಾದ ಶ್ರುತಿಯ ವಿರೋಧವು ಪ್ರಾಪ್ತವಾದರೆ ಅಪ್ರಾಮಾಣ್ಯವು ಬರುವುದರಿಂದ ಅಯುಕ್ತವಾಗುತ್ತದೆ. ಆದ್ದರಿಂದ ಈ ವಿರೋಧವನ್ನು ಪರಿಹಾರ ಮಾಡಲೇಬೇಕು.

ಪ್ರಕೃತನಾದ ಮುಖ್ಯಪ್ರಾಣನೇ ಅಧಿಕರಣದ ವಿಷಯನು. ಇವನು ಸ್ವತಂತ್ರನೋ, ಅಸ್ವತಂತ್ರನೋ? ಎಂಬುದು ಅಧಿಕರಣದ ಸಂದೇಹ. ಸಂದೇಹಕ್ಕೆ ಕಾರಣವು ಶ್ರುತಿಗಳಲ್ಲಿರುವ ಪರಸ್ಪರ ವಿರೋಧವೇ ಆಗಿದೆ. ಇದನ್ನು ತೋರಿಸುತ್ತಾ ಪೂರ್ವಪಕ್ಷವನ್ನು 'ಪ್ರಾಣಾತ್' ಇತ್ಯಾದಿಯಾಗಿ ಸೂಚನೆ ಮಾಡುತ್ತಿದ್ದಾರೆ.

ವಿವರಣೆ – ಹಿಂದಿನ ಅಧಿಕರಣದಲ್ಲಿ ಮುಖ್ಯಪ್ರಾಣನು ಪರಮಾತ್ಮನಿಂದ ಜನ್ಮವನ್ನು ತಾಳುತ್ತಾನೆಂದು ಸಮರ್ಥಿಸಲಾಯಿತು. ಪ್ರಕೃತ ಈ ಅಧಿಕರಣದಲ್ಲಿ ಅವನನ್ನು ಸ್ವತಂತ್ರನೆಂದು ಆಕ್ಷೇಪ ಮಾಡಿ ಸಮಾಧಾನವನ್ನು ನೀಡಲಾಗಿದೆ. ಆದ್ದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಆನಂತರ್ಯರೂಪವಾದ ಸಂಗತಿಯು ಇರುತ್ತದೆ.

**तत्वप्रकाशिका – श्रुतौ 'प्राणस्य स्वातन्त्र्यं प्रतीयते' इति शेषः । उपाश्रयेत् 'तस्मात् प्राणः स्वातन्त्र्येण सर्वाश्रयः' इति शेषः । श्रुतिः 'पारतन्त्र्यं वक्ति' इति शेषः । मुख्यप्राणः स्वतन्त्र एव । न प्राणः किञ्चिदाश्रितः इति श्रुतेः ।**

ಶ್ರುತಿಯಲ್ಲಿ ಮುಖ್ಯಪ್ರಾಣನನ್ನು ಸ್ವತಂತ್ರನೆಂದು ಹೇಳಿರುವುದು ಕಾಣಸುತ್ತಿದೆ. ಆದ್ದರಿಂದ ಭಾಷ್ಯದಲ್ಲಿ 'ಶ್ರುತೌ' ಎಂಬ ಪದದ ಅನಂತರ 'ಪ್ರಾಣಸ್ಯ ಸ್ವಾತಂತ್ರ್ಯಂ ಪ್ರತೀಯತೇ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. 'ಉಪಾಶ್ರಯೇತ್' ಎಂಬ ಪದದ ಅನಂತರ ಆದ್ದರಿಂದ ಪ್ರಾಣನು. ಸ್ವತಂತ್ರನಾಗಿ, ಸಕಲಕ್ಕೂ ಆಶ್ರಯನಾಗಿದ್ದಾನೆ ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. 'ಶ್ರುತಿಃ' ಎಂಬ ಪದದ ಅನಂತರ 'ಪಾರತಂತ್ರ್ಯವನ್ನು ಹೇಳುತ್ತಿದೆ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು.

ಮುಖ್ಯಪ್ರಾಣನು ಸ್ವತಂತ್ರನೇ ಆಗಿದ್ದಾನೆ. ಏಕೆಂದರೆ 'ನ ಪ್ರಾಣಃ ಕಿಂಚಿದಾಶ್ರಿತಃ' 'ಮುಖ್ಯಪ್ರಾಣನು ಯಾರೊಬ್ಬರನ್ನೂ ಆಶ್ರಯಿಸಿಲ್ಲ' ಎಂಬ ಶ್ರುತಿಯು ಸ್ವಾತಂತ್ರ್ಯವನ್ನು ಮುಖ್ಯಪ್ರಾಣನಲ್ಲಿ ಹೇಳುತ್ತಿದೆ.

**तत्वप्रकाशिका – न च पारतन्त्र्येऽपि श्रुतिरस्तीति तद्विरोधः । अखिल-जगच्चेष्टकत्वमाहात्म्यवत्त्वेन तस्यानन्याश्रयत्वयुक्तियुक्ततया स्वातन्त्र्यश्रुतेः प्राबल्यात्।**

ಮುಖ್ಯಪ್ರಾಣನು ಅಸ್ವತಂತ್ರನಾಗಿದ್ದಾನೆ ಎಂಬುದರಲ್ಲೂ ಕೂಡ ಶ್ರುತಿ ಪ್ರಮಾಣ ಇರುತ್ತದೆ. ಆದ್ದರಿಂದ ಅದರ ವಿರೋಧ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಮುಖ್ಯಪ್ರಾಣನು ಸಮಸ್ತ ಜಗತ್ತಿನ ಚೇಷ್ಟಾಕಾರಣನಾಗಿದ್ದಾನೆ ಎಂಬುದಾಗಿ ಅವನ ಮಹಾತ್ಮ್ಯೆಯನ್ನು ಹೇಳಿರುವುದರಿಂದ ಅವನು ಮತ್ತೊಬ್ಬರನ್ನು ಆಶ್ರಯಿಸಲು ಸಾಧ್ಯವಿಲ್ಲ. ಈ ಯುಕ್ತಿಯಿಂದ ಸ್ವಾತಂತ್ರ್ಯವನ್ನು ಹೇಳುವ ಶ್ರುತಿಯು ಪ್ರಬಲವಾಗಿದೆ.

ವಿವರಣೆ – 'ಮುಖ್ಯಪ್ರಾಣಃ ನ ಪರತಂತ್ರಃ ಸಮಸ್ತ ಜಗಚ್ಚೇಷ್ಟಕತ್ವ ಮಾಹಾತ್ಮ್ಯವತ್ವಾತ್' ಎಂಬ ಯುಕ್ತಿಯಿಂದ 'ಪ್ರಾಣಾದಿದಮಾವಿರಾಸೀತ್' ಎಂದು ಸ್ವಾತಂತ್ರ್ಯ ಹೇಳುವ ಶ್ರುತಿಯು ಯುಕ್ತವಾಗಿದೆ. ಯುಕ್ತಿಯ ಸಹಕಾರವಿರುವುದರಿಂದ ಈ ಶ್ರುತಿಯು ಪ್ರಬಲವಾಗಿದೆ ಎಂದು ತಿಳಿಯಬೇಕು.

**तत्वप्रकाशिका – न चोत्पत्तिमतः स्वातन्त्र्यायोगात् पारतन्त्र्यश्रुतिरपि युक्तियुक्तेति वाच्यम् । स्वातन्त्र्यवादिनो जन्मासम्प्रतिपत्तेः । तच्छ्रुतीनामपि स्वातन्त्र्यश्रुतियुक्तिविरोधेनाप्रामाण्यात् । लीलया विग्रहग्रहणोपपत्तेश्च । अतः प्रबल-श्रुतिविरोधापरिहारादप्रमाणं पारतन्त्र्यनुतिः । अतो न नारायणस्य श्रुतिसमन्वयेन जगत्कारणत्वासिद्धिरिति भावः । सिद्धान्तयत्सूत्रमवतार्य व्याचष्टे – अत इति ।।**

ಯಾವುದಕ್ಕೆ ಜನ್ಮವು ಇರುತ್ತದೋ ಅದಕ್ಕೆ ಸ್ವಾತಂತ್ರ್ಯವು ಇರಲು ಸಾಧ್ಯವಿಲ್ಲ. ಹಾಗಾಗಿ ಪಾರತಂತ್ರ್ಯ ಹೇಳುವ ಶ್ರುತಿಯೂ ಕೂಡ ಯುಕ್ತಿಯಿಂದ ಉಪೋದ್ಬಲಿತವಾಗಿದೆ. ಅಭಿಪ್ರಾಯ ಹೀಗಿದೆ - ಯಾರು ಪ್ರಾಣನಿಗೆ ಸ್ವಾತಂತ್ರ್ಯವನ್ನು ಹೇಳುತ್ತಾನೋ, ಅವನು ಪ್ರಾಣನಿಗೆ ಜನ್ಮವನ್ನು ಒಪ್ಪುವುದಿಲ್ಲ. ಸ್ವಾತಂತ್ರ್ಯವನ್ನು ಹೇಳುವ ಶ್ರುತಿ ಹಾಗೂ ಯುಕ್ತಿಗಳಿಗೆ ಜನ್ಮವನ್ನು ಹೇಳುವ ಶ್ರುತಿಯಿಂದ ವಿರೋಧವು ಪ್ರಾಪ್ತವಾಗುತ್ತದೆ. ಆದ್ದರಿಂದ ಮುಖ್ಯಪ್ರಾಣನಿಗೆ ಜನ್ಮವನ್ನು ಹೇಳುವ ಶ್ರುತಿಯು ಅಪ್ರಮಾಣವೇ ಆಗುತ್ತದೆ.

ಮತ್ತು ಮುಖ್ಯಪ್ರಾಣನು ಸ್ವತಂತ್ರನಾಗಿದ್ದರೂ ಕೂಡ ಕೇವಲ ಲೀಲೆಯಿಂದ ದೇಹವನ್ನು ಧರಿಸುತ್ತಾನೆ ಎಂದು ಕೂಡಿಸಬಹುದು. ಪ್ರಬಲಶ್ರುತಿಯ ವಿರೋಧವು ಪರಿಹಾರವಾಗದೇ ಇರುವುದರಿಂದ ಮುಖ್ಯಪ್ರಾಣನಿಗೆ ಪಾರತಂತ್ರ್ಯವನ್ನು ಹೇಳುವ ಶ್ರುತಿಯು ಅಪ್ರಮಾಣವಾಗುತ್ತದೆ.

ಹಾಗಾಗಿ ನಾರಾಯಣನಲ್ಲಿ ಶ್ರುತಿಸಮನ್ವಯದ ಮೂಲಕ ಜಗತ್ಕಾರಣತ್ವವು ಸಿದ್ಧವಾಗುವುದಿಲ್ಲ. ಇಷ್ಟು ಪೂರ್ವಪಕ್ಷದ ಅಭಿಪ್ರಾಯ.

ವಿವರಣೆ – ಪಾರತಂತ್ರ್ಯವನ್ನು ಹೇಳುವವರೂ ಕೂಡ ತನಗಿಂತ ಭಿನ್ನವಾದ ಸಮಸ್ತ-ಜಗಚ್ಚೇಷ್ಟಕತ್ವವನ್ನು ಒಪ್ಪಲು ಸಾಧ್ಯವಿಲ್ಲ. ಆದ್ದರಿಂದ ಶ್ರುತಿಯು ಯುಕ್ತಿಯುಕ್ತವಾಗುವುದಿಲ್ಲ. ಒಂದು ವೇಳೆ ಜಗಚ್ಚೇಷ್ಟಕತ್ವವು ಶ್ರುತಿ ಸಿದ್ಧವೆಂದು ಹೇಳುವುದಾದರೆ ಆಗ ಮುಖ್ಯಪ್ರಾಣನ ಜನ್ಮವೂ ಕೂಡ ಶ್ರುತಿಸಿದ್ಧವಾಯಿತು. ಆದರೂ ಅದಕ್ಕೆ ಅಪ್ರಾಮಾಣ್ಯವನ್ನು ಹೇಳಿದರೆ ಜಗಚ್ಚೇಷ್ಟಕತ್ವ ಶ್ರುತಿಗೂ ಕೂಡ

ಅಪ್ರಾಮಾಣ್ಯವನ್ನು ಹೇಳಬೇಕು. ಆದ್ದರಿಂದ ಜನ್ಮ ಶ್ರುತಿಯನ್ನು ಸಾವಕಾಶವಾಗಿ ಅರ್ಥೈಸಬೇಕು. ಸಾವಕಾಶವಾದ್ದರಿಂದಲೇ ಅದು ದುರ್ಬಲವಾಗಿದೆ. ಈ ಅಭಿಪ್ರಾಯದಿಂದ 'ಲೀಲಯಾ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ.

ಪ್ರಶ್ನೆ – ಪ್ರಾಣಸಮನ್ವಯವನ್ನು ಹೇಳುತ್ತಿರುವ ಅಗ್ನಿವೇಶ್ಯಶ್ರುತಿಯು ಭಗವತ್ಪರವಾಗಿಯೇ ಇರುತ್ತದೆ. ಅಮುಖ್ಯವಾಗಿ ಪ್ರಾಣಪರತ್ವವನ್ನು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಎಲ್ಲಿ ವಿರೋಧವಿರುತ್ತದೋ ಅಲ್ಲಿ ಬ್ರಹ್ಮನೇ ಆಶ್ರಿತನಾಗಿ ಪ್ರತಿಪಾದ್ಯನಾಗುತ್ತಾನೆ ಎಂದು ಹೇಳಿರುವುದರಿಂದ ಮುಖ್ಯಪ್ರಾಣನಲ್ಲಿ ಸ್ವಾತಂತ್ರ್ಯವು ಕೂಡದಿದ್ದಾಗ ಬ್ರಹ್ಮನೇ ಪ್ರತಿಪಾದ್ಯನಾಗುತ್ತಾನೆಂದು ಒಪ್ಪಬೇಕಲ್ಲವೆ?

ಉತ್ತರ – ಹೀಗೆ ಆಕ್ಷೇಪ ಮಾಡಬಾರದು. ಮಹಾಭಾರತವು ಮುಖ್ಯಪ್ರಾಣನನ್ನು ಸ್ಪಷ್ಟವಾಗಿ ಪ್ರತಿಪಾದನೆ ಮಾಡುತ್ತಿದೆ. ಆದ್ದರಿಂದ ಮುಖ್ಯಪ್ರಾಣನಲ್ಲಿ ಸ್ವಾತಂತ್ರ್ಯವನ್ನು ಒಪ್ಪಲು ವಿರೋಧವೇ ಇರುವುದಿಲ್ಲ. ಆದ್ದರಿಂದ ಅಗ್ನಿವೇಶ್ಯ ಶ್ರುತಿಯನ್ನು ಬ್ರಹ್ಮಪರವೆಂದು ವಿವಕ್ಷಿಸುವ ಅವಶ್ಯಕತೆ ಇಲ್ಲ.

ಪ್ರಶ್ನೆ – ಆದರೂ ಕೂಡ ಹಿಂದಿನ ಹಾಗೂ ಮುಂದಿನ ಅಧಿಕರಣದಲ್ಲಿ ಮಹಾವಿಷ್ಣುವು ಮುಖ್ಯಪ್ರಾಣನಿಗಿಂತಲೂ ಶ್ರೇಷ್ಠವಾದ ಮಹಿಮೆಯುಳ್ಳವನೆಂದು ಸಿದ್ಧಾಂತ ಮಾಡಲಾಗಿದೆ. ಆದ್ದರಿಂದ ಈ ಅಧಿಕರಣದ ಪೂರ್ವಪಕ್ಷ ಹೇಗೆ ಹೊರಡುತ್ತದೆ?

ಉತ್ತರ – ಇದು ತಪ್ಪು. ಈ ಅಧಿಕರಣದಲ್ಲಿ 'ಸೋಽನ್ಯಂ ಕಥಮುಪಾಶ್ರಯೇತ್' 'ಅಂತಹವನು ಇನ್ನೊಬ್ಬನನ್ನು ಹೇಗೆ ಆಶ್ರಯಿಸುತ್ತಾನೆ' ಎಂಬ ವಚನವನ್ನು ಉಲ್ಲೇಖ ಮಾಡಿರುವುದರಿಂದ ಮುಖ್ಯಪ್ರಾಣನಲ್ಲಿ ಮಹಾಮಹಿಮೆಯ ಅತಿಶಯವು ಹೇಳಲ್ಪಟ್ಟಿದೆ. ಆದ್ದರಿಂದ ಇಲ್ಲಿನ ಪೂರ್ವಪಕ್ಷವು ಅತ್ಯಂತ ಪ್ರಬಲವಾಗಿದೆ. (ವಾಕ್ಯಾರ್ಥಮುಕ್ತಾವಳಿ)

**तत्वप्रकाशिका – मुख्यप्राणः परमात्माधीन एव न तु स्वतन्त्रः । तद्वशत्वेन श्रुत्युक्तत्वात् । न चोत्पत्ताविव पारतन्त्र्येऽपि काचन व्यवस्थाऽपि तु चक्षुरादिवदेव सर्वात्मना । तैः सह परमात्मवशत्वोक्तेरिति भावः । उन्नयति ऊर्ध्वं नयति ।**

ಸಿದ್ಧಾಂತಸ್ಥಾಪಕವಾದ ಸೂತ್ರಕ್ಕೆ 'ಅತಃ' ಎಂದು ಅವತಾರಿಕೆ ನೀಡಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಮುಖ್ಯಪ್ರಾಣನು ಪರಮಾತ್ಮನ ಅಧೀನನೇ ಆಗಿದ್ದಾನೆ ಹೊರತು ಸ್ವತಂತ್ರನಾಗಿರುವುದಿಲ್ಲ. ಏಕೆಂದರೆ ಶ್ರುತಿಯಲ್ಲಿ ಮುಖ್ಯಪ್ರಾಣನು ಪರಮಾತ್ಮನ ಅಧೀನನೆಂದು ಹೇಳಲಾಗಿದೆ. ಮುಖ್ಯಪ್ರಾಣನ ಜನ್ಮವಿಷಯದಲ್ಲಿ ಯಾವ ವ್ಯವಸ್ಥೆಯನ್ನು ಒಪ್ಪಲಾಗಿದೆಯೋ, ಅದೇ ವ್ಯವಸ್ಥೆಯನ್ನು ಅಸ್ವಾತಂತ್ರ್ಯದ ಸಮಯದಲ್ಲಿ ಒಪ್ಪಲು ಬರುವುದಿಲ್ಲ. ಚಕ್ಷುರಾದಿ ಇಂದ್ರಿಯಗಳಂತೆ ಮುಖ್ಯಪ್ರಾಣನಿಗೂ ಕೂಡ ಸರ್ವಾತ್ಮನಾ ಅಸ್ವಾತಂತ್ರ್ಯವನ್ನು ಹೇಳಬೇಕು. 'ಉನ್ನಯತಿ' ಎಂದರೆ ಮೇಲೆ ಒಯ್ಯುತ್ತಾನೆ ಎಂದರ್ಥ.

ವಿವರಣೆ – 'ಪರಮೇ ಅವತಿಷ್ಠತೇ' ಎಂಬ ಶ್ರುತಿಯು ಮುಖ್ಯಪ್ರಾಣನು ಪರಮಾತ್ಮನ ಅಧೀನವೆಂದು ಹೇಳುತ್ತಿದೆ. ಮುಖ್ಯಪ್ರಾಣನೂ ಕೂಡ ಚಕ್ಷುರಾದಿಗಳಂತೆ ಪರಮಾತ್ಮನ ಅಧೀನನೇ ಆಗಿದ್ದಾನೆಂದು ಒಪ್ಪಬೇಕು. ಈ ವಿಷಯವನ್ನು ಸಾವಕಾಶ ಮಾಡಲು ಸಾಧ್ಯವಿಲ್ಲ.

ಚಕ್ಷುರಾದ್ಯಧಿಕರಣ (೨-೪-೭)

ಮುಖ್ಯಪ್ರಾಣನು ಅಸ್ವತಂತ್ರನಾಗಿದ್ದಾನೆ ಎಂಬುದರಲ್ಲೂ ಕೂಡ ಶ್ರುತಿ ಪ್ರಮಾಣ ಇರುತ್ತದೆ. ಆದ್ದರಿಂದ ಅದರ ವಿರೋಧ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಮುಖ್ಯಪ್ರಾಣನು ಸಮಸ್ತ ಜಗತ್ತಿನ ಚೇಷ್ಟಾಕಾರಣನಾಗಿದ್ದಾನೆ ಎಂಬುದಾಗಿ ಅವನ ಮಹಾತ್ಮ್ಯೆಯನ್ನು ಹೇಳಿರುವುದರಿಂದ ಅವನು ಮತ್ತೊಬ್ಬರನ್ನು ಆಶ್ರಯಿಸಲು ಸಾಧ್ಯವಿಲ್ಲ. ಈ ಯುಕ್ತಿಯಿಂದ ಸ್ವಾತಂತ್ರ್ಯವನ್ನು ಹೇಳುವ ಶ್ರುತಿಯು ಪ್ರಬಲವಾಗಿದೆ.

ವಿವರಣೆ – 'ಮುಖ್ಯಪ್ರಾಣಃ ನ ಪರತಂತ್ರಃ ಸಮಸ್ತ ಜಗಚ್ಚೇಷ್ಟಕತ್ವ ಮಾಹಾತ್ಮ್ಯವತ್ವಾತ್' ಎಂಬ ಯುಕ್ತಿಯಿಂದ 'ಪ್ರಾಣಾದಿದಮಾವಿರಾಸೀತ್' ಎಂದು ಸ್ವಾತಂತ್ರ್ಯ ಹೇಳುವ ಶ್ರುತಿಯು ಯುಕ್ತವಾಗಿದೆ. ಯುಕ್ತಿಯ ಸಹಕಾರವಿರುವುದರಿಂದ ಈ ಶ್ರುತಿಯು ಪ್ರಬಲವಾಗಿದೆ ಎಂದು ತಿಳಿಯಬೇಕು.

**तत्वप्रकाशिका – न चोत्पत्तिमतः स्वातन्त्र्यायोगात् पारतन्त्र्यश्रुतिरपि युक्तियुक्तेति वाच्यम् । स्वातन्त्र्यवादिनो जन्मासम्प्रतिपत्तेः । तच्छ्रुतीनामपि स्वातन्त्र्यश्रुतियुक्तिविरोधेनाप्रामाण्यात् । लीलया विग्रहग्रहणोपपत्तेश्च । अतः प्रबल-श्रुतिविरोधापरिहारादप्रमाणं पारतन्त्र्यनुतिः । अतो न नारायणस्य श्रुतिसमन्वयेन जगत्कारणत्वासिद्धिरिति भावः । सिद्धान्तयत्सूत्रमवतार्य व्याचष्टे – अत इति ।।**

ಯಾವುದಕ್ಕೆ ಜನ್ಮವು ಇರುತ್ತದೋ ಅದಕ್ಕೆ ಸ್ವಾತಂತ್ರ್ಯವು ಇರಲು ಸಾಧ್ಯವಿಲ್ಲ. ಹಾಗಾಗಿ ಪಾರತಂತ್ರ್ಯ ಹೇಳುವ ಶ್ರುತಿಯೂ ಕೂಡ ಯುಕ್ತಿಯಿಂದ ಉಪೋದ್ಬಲಿತವಾಗಿದೆ. ಅಭಿಪ್ರಾಯ ಹೀಗಿದೆ - ಯಾರು ಪ್ರಾಣನಿಗೆ ಸ್ವಾತಂತ್ರ್ಯವನ್ನು ಹೇಳುತ್ತಾನೋ, ಅವನು ಪ್ರಾಣನಿಗೆ ಜನ್ಮವನ್ನು ಒಪ್ಪುವುದಿಲ್ಲ. ಸ್ವಾತಂತ್ರ್ಯವನ್ನು ಹೇಳುವ ಶ್ರುತಿ ಹಾಗೂ ಯುಕ್ತಿಗಳಿಗೆ ಜನ್ಮವನ್ನು ಹೇಳುವ ಶ್ರುತಿಯಿಂದ ವಿರೋಧವು ಪ್ರಾಪ್ತವಾಗುತ್ತದೆ. ಆದ್ದರಿಂದ ಮುಖ್ಯಪ್ರಾಣನಿಗೆ ಜನ್ಮವನ್ನು ಹೇಳುವ ಶ್ರುತಿಯು ಅಪ್ರಮಾಣವೇ ಆಗುತ್ತದೆ.

ಮತ್ತು ಮುಖ್ಯಪ್ರಾಣನು ಸ್ವತಂತ್ರನಾಗಿದ್ದರೂ ಕೂಡ ಕೇವಲ ಲೀಲೆಯಿಂದ ದೇಹವನ್ನು ಧರಿಸುತ್ತಾನೆ ಎಂದು ಕೂಡಿಸಬಹುದು. ಪ್ರಬಲಶ್ರುತಿಯ ವಿರೋಧವು ಪರಿಹಾರವಾಗದೇ ಇರುವುದರಿಂದ ಮುಖ್ಯಪ್ರಾಣನಿಗೆ ಪಾರತಂತ್ರ್ಯವನ್ನು ಹೇಳುವ ಶ್ರುತಿಯು ಅಪ್ರಮಾಣವಾಗುತ್ತದೆ.

ಹಾಗಾಗಿ ನಾರಾಯಣನಲ್ಲಿ ಶ್ರುತಿಸಮನ್ವಯದ ಮೂಲಕ ಜಗತ್ಕಾರಣತ್ವವು ಸಿದ್ಧವಾಗುವುದಿಲ್ಲ. ಇಷ್ಟು ಪೂರ್ವಪಕ್ಷದ ಅಭಿಪ್ರಾಯ.

ವಿವರಣೆ – ಪಾರತಂತ್ರ್ಯವನ್ನು ಹೇಳುವವರೂ ಕೂಡ ತನಗಿಂತ ಭಿನ್ನವಾದ ಸಮಸ್ತ-ಜಗಚ್ಚೇಷ್ಟಕತ್ವವನ್ನು ಒಪ್ಪಲು ಸಾಧ್ಯವಿಲ್ಲ. ಆದ್ದರಿಂದ ಶ್ರುತಿಯು ಯುಕ್ತಿಯುಕ್ತವಾಗುವುದಿಲ್ಲ. ಒಂದು ವೇಳೆ ಜಗಚ್ಚೇಷ್ಟಕತ್ವವು ಶ್ರುತಿ ಸಿದ್ಧವೆಂದು ಹೇಳುವುದಾದರೆ ಆಗ ಮುಖ್ಯಪ್ರಾಣನ ಜನ್ಮವೂ ಕೂಡ ಶ್ರುತಿಸಿದ್ಧವಾಯಿತು. ಆದರೂ ಅದಕ್ಕೆ ಅಪ್ರಾಮಾಣ್ಯವನ್ನು ಹೇಳಿದರೆ ಜಗಚ್ಚೇಷ್ಟಕತ್ವ ಶ್ರುತಿಗೂ ಕೂಡ

ಅಪ್ರಾಮಾಣ್ಯವನ್ನು ಹೇಳಬೇಕು. ಆದ್ದರಿಂದ ಜನ್ಮ ಶ್ರುತಿಯನ್ನು ಸಾವಕಾಶವಾಗಿ ಅರ್ಥೈಸಬೇಕು. ಸಾವಕಾಶವಾದ್ದರಿಂದಲೇ ಅದು ದುರ್ಬಲವಾಗಿದೆ. ಈ ಅಭಿಪ್ರಾಯದಿಂದ 'ಲೀಲಯಾ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ.

ಪ್ರಶ್ನೆ – ಪ್ರಾಣ..ಸಮನ್ವಯವನ್ನು ಹೇಳುತ್ತಿರುವ ಅಗ್ನಿವೇಶ್ಯಶ್ರುತಿಯು ಭಗವತ್ಪರವಾಗಿಯೇ ಇರುತ್ತದೆ. ಅಮುಖ್ಯವಾಗಿ ಪ್ರಾಣಪರತ್ವವನ್ನು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಎಲ್ಲಿ ವಿರೋಧವಿರುತ್ತದೋ ಅಲ್ಲಿ ಬ್ರಹ್ಮನೇ ಆಶ್ರಿತನಾಗಿ ಪ್ರತಿಪಾದ್ಯನಾಗುತ್ತಾನೆ ಎಂದು ಹೇಳಿರುವುದರಿಂದ ಮುಖ್ಯಪ್ರಾಣನಲ್ಲಿ ಸ್ವಾತಂತ್ರ್ಯವು ಕೂಡದಿದ್ದಾಗ ಬ್ರಹ್ಮನೇ ಪ್ರತಿಪಾದ್ಯನಾಗುತ್ತಾನೆಂದು ಒಪ್ಪಬೇಕಲ್ಲವೆ?

ಉತ್ತರ – ಹೀಗೆ ಆಕ್ಷೇಪ ಮಾಡಬಾರದು. ಮಹಾಭಾರತವು ಮುಖ್ಯಪ್ರಾಣನನ್ನು ಸ್ಪಷ್ಟವಾಗಿ ಪ್ರತಿಪಾದನೆ ಮಾಡುತ್ತಿದೆ. ಆದ್ದರಿಂದ ಮುಖ್ಯಪ್ರಾಣನಲ್ಲಿ ಸ್ವಾತಂತ್ರ್ಯವನ್ನು ಒಪ್ಪಲು ವಿರೋಧವೇ ಇರುವುದಿಲ್ಲ. ಆದ್ದರಿಂದ ಅಗ್ನಿವೇಶ್ಯ ಶ್ರುತಿಯನ್ನು ಬ್ರಹ್ಮಪರವೆಂದು ವಿವಕ್ಷಿಸುವ ಅವಶ್ಯಕತೆ ಇಲ್ಲ.

ಪ್ರಶ್ನೆ – ಆದರೂ ಕೂಡ ಹಿಂದಿನ ಹಾಗೂ ಮುಂದಿನ ಅಧಿಕರಣದಲ್ಲಿ ಮಹಾವಿಷ್ಣುವು ಮುಖ್ಯಪ್ರಾಣನಿಗಿಂತಲೂ ಶ್ರೇಷ್ಠವಾದ ಮಹಿಮೆವುಳ್ಳವನೆಂದು ಸಿದ್ಧಾಂತ ಮಾಡಲಾಗಿದೆ. ಆದ್ದರಿಂದ ಈ ಅಧಿಕರಣದ ಪೂರ್ವಪಕ್ಷ ಹೇಗೆ ಹೊರಡುತ್ತದೆ?

ಉತ್ತರ – ಇದು ತಪ್ಪು. ಈ ಅಧಿಕರಣದಲ್ಲಿ 'ಸೋಽನ್ಯಂ ಕಥಮುಪಾಶ್ರಯೇತ್' 'ಅಂತಹವನು ಇನ್ನೊಬ್ಬನನ್ನು ಹೇಗೆ ಆಶ್ರಯಿಸುತ್ತಾನೆ' ಎಂಬ ವಚನವನ್ನು ಉಲ್ಲೇಖ ಮಾಡಿರುವುದರಿಂದ ಮುಖ್ಯಪ್ರಾಣನಲ್ಲಿ ಮಹಾಮಹಿಮೆಯ ಅತಿಶಯವು ಹೇಳಲ್ಪಟ್ಟಿದೆ. ಆದ್ದರಿಂದ ಇಲ್ಲಿನ ಪೂರ್ವಪಕ್ಷವು ಅತ್ಯಂತ ಪ್ರಬಲವಾಗಿದೆ. (ವಾಕ್ಯಾರ್ಥಮುಕ್ತಾವಳಿ)

**ತत्वप्रकाशिका – मुख्यप्राणः परमात्माधीन एव न तु स्वतन्त्रः । तद्वशत्वेन श्रुत्युक्तत्वात् । न चोत्पत्ताविव पारतन्त्र्येऽपि काचन व्यवस्थाऽपि तु चक्षुरादिवदेव सर्वात्मना । तैः सह परमात्मवशत्वोक्तेरिति भावः । उन्नयति ऊर्ध्वं नयति ।**

ಸಿದ್ಧಾಂತಸ್ಥಾಪಕವಾದ ಸೂತ್ರಕ್ಕೆ 'ಅತಃ' ಎಂದು ಅವತಾರಿಕೆ ನೀಡಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಮುಖ್ಯಪ್ರಾಣನು ಪರಮಾತ್ಮನ ಅಧೀನನೇ ಆಗಿದ್ದಾನೆ ಹೊರತು ಸ್ವತಂತ್ರನಾಗಿರುವುದಿಲ್ಲ. ಏಕೆಂದರೆ ಶ್ರುತಿಯಲ್ಲಿ ಮುಖ್ಯಪ್ರಾಣನು ಪರಮಾತ್ಮನ ಅಧೀನನೆಂದು ಹೇಳಲಾಗಿದೆ. ಮುಖ್ಯಪ್ರಾಣನ ಜನ್ಮವಿಷಯದಲ್ಲಿ ಯಾವ ವ್ಯವಸ್ಥೆಯನ್ನು ಒಪ್ಪಲಾಗಿದೆಯೋ, ಅದೇ ವ್ಯವಸ್ಥೆಯನ್ನು ಅಸ್ವಾತಂತ್ರ್ಯದ ಸಮಯದಲ್ಲಿ ಒಪ್ಪಲು ಬರುವುದಿಲ್ಲ. ಚಕ್ಷುರಾದಿ ಇಂದ್ರಿಯಗಳಂತೆ ಮುಖ್ಯಪ್ರಾಣನಿಗೂ ಕೂಡ ಸರ್ವಾತ್ಮನಾ ಅಸ್ವಾತಂತ್ರ್ಯವನ್ನು ಹೇಳಬೇಕು. 'ಉನ್ನಯತಿ' ಎಂದರೆ ಮೇಲೆ ಒಯ್ಯುತ್ತಾನೆ ಎಂದರ್ಥ.

ವಿವರಣೆ – 'ಪರಮೇ ಅವತಿಷ್ಠತೇ' ಎಂಬ ಶ್ರುತಿಯು ಮುಖ್ಯಪ್ರಾಣನು ಪರಮಾತ್ಮನ ಅಧೀನವೆಂದು ಹೇಳುತ್ತಿದೆ. ಮುಖ್ಯಪ್ರಾಣನೂ ಕೂಡ ಚಕ್ಷುರಾದಿಗಳಂತೆ ಪರಮಾತ್ಮನ ಅಧೀನನೇ ಆಗಿದ್ದಾನೆಂದು ಒಪ್ಪಬೇಕು. ಈ ವಿಷಯವನ್ನು ಸಾವಕಾಶ ಮಾಡಲು ಸಾಧ್ಯವಿಲ್ಲ.

ಚಕ್ಷುರಾದ್ಯಧಿಕರಣ (೨-೪-೭)

ಪ್ರಶ್ನೆ – ಮುಖ್ಯಪ್ರಾಣನಿಗೆ ಉತ್ಪತ್ತಿಯನ್ನು ಹೇಳುವ ಶ್ರುತಿಗೆ ಸ್ವಾಭಾವಿಕವಾಗಿ ಸೂಕ್ಷ್ಮನಾಗಿದ್ದಾನೆ. ಶರೀರದಿಂದ ಸ್ಥೂಲತ್ವವನ್ನು ಹೊಂದಿದ್ದಾನೆ ಎಂದು ವ್ಯವಸ್ಥೆ ಮಾಡಲಾಯಿತು. ಅದರಂತೆ ಶ್ರುತಿಯಲ್ಲಿ ಹೇಳಲ್ಪಟ್ಟ ಸ್ವಾತಂತ್ರ್ಯವು ಸ್ವಾಭಾವಿಕವಾಗಿದೆ. ಅಸ್ವಾತಂತ್ರ್ಯವು ಔಪಾಧಿಕವಾಗಿದೆ ಎಂದು ವ್ಯವಸ್ಥೆ ಮಾಡಬಹುದಲ್ಲವೇ?

ಉತ್ತರ – ಹೀಗೆ ಪ್ರಶ್ನಿಸಬಾರದು. 'ಮುಖ್ಯಪ್ರಾಣನು ಸರ್ವಾತ್ಮನಾ ವಿಷ್ಣುವಿನ ಅಧೀನನೇ ಆಗಿದ್ದಾನೆ, ಚಕ್ಷುರಾದಿಗಳಂತೆ' ಎಂಬುದಾಗಿ 'ನ ಚ ಉತ್ಪತ್ತೌ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**तत्वप्रकाशिका – ननु स्वातन्त्र्ये युक्तियुक्तश्रुतिसद्भावान्न श्रुतिमात्रेण निर्णय इत्यत आह – सर्वेति ।। तर्हि तस्येश्वरत्वानन्येश्वरत्वश्रुतिविरोध इत्यत आह – कथमिति ।। युक्तिविरोधाच्छ्रुतिर्बाध्यत इति भावः । तर्हि कोऽर्थः श्रुतेः ? इत्यत आह – अवान्तरेति ।।**

ಸ್ವಾತಂತ್ರ್ಯ ವಿಷಯದಲ್ಲಿ ಯುಕ್ತಿಸಹಿತವಾದ ಶ್ರುತಿಪ್ರಮಾಣವಿದೆ. ಆದ್ದರಿಂದ ಕೇವಲ ಶ್ರುತಿಯಿಂದ ಮುಖ್ಯಪ್ರಾಣನನ್ನು ಅಸ್ವತಂತ್ರನೆಂದು ನಿರ್ಣಯಿಸಲು ಹೇಗೆ ಸಾಧ್ಯ ? ಎಂಬ ಪ್ರಶ್ನೆಗೆ 'ಸರ್ವ' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ. ಹಾಗಾದರೆ ಮುಖ್ಯಪ್ರಾಣನೇ ಈಶ್ವರನಾಗಿದ್ದಾನೆ. ಅವನಿಗೆ ಮತ್ತೊಬ್ಬ ಈಶ್ವರನಿಲ್ಲವೆಂದು ಹೇಳುವ ಶ್ರುತಿವಿರೋಧವು ಬರುತ್ತದಲ್ಲವೇ ? ಎಂಬ ಪ್ರಶ್ನೆಗೆ 'ಕಥಂ' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

ಯುಕ್ತಿಯ ವಿರೋಧವು ಬರುವುದರಿಂದ ಶ್ರುತಿಯು ಬಾಧಿತವಾಗುತ್ತದೆಂದು ಅಭಿಪ್ರಾಯ. ಹಾಗಾದರೆ ಶ್ರುತಿಗೆ ಏನು ಅರ್ಥ? ಎಂಬ ಪ್ರಶ್ನೆಗೆ 'ಅವಾಂತರ' ಇತ್ಯಾದಿ ಭಾಷ್ಯದಿಂದ ಉತ್ತರಿಸಿದ್ದಾರೆ.

ವಿವರಣೆ – ಮುಖ್ಯಪ್ರಾಣ ಹಾಗೂ ಪರಮಾತ್ಮ ಇಬ್ಬರನ್ನೂ ಕೂಡ ಪರಾಧೀನರೆಂದು ಒಪ್ಪಿದರೆ. ಒಬ್ಬರನ್ನೊಬ್ಬರು ಅನುಸರಿಸಿದೇ ಇದ್ದರೂ ಕೂಡ ಸರ್ವೈಶ್ವರ್ಯವು ಕೂಡುವುದಿಲ್ಲ. ಈ ಯುಕ್ತಿಯ ವಿರೋಧ ಬರುವ ಕಾರಣ ಮುಖ್ಯಪ್ರಾಣನಿಗೆ ಸ್ವಾತಂತ್ರ್ಯವನ್ನು ಹೇಳುವ ಶ್ರುತಿಗೆ ಬಾಧವನ್ನೇ ಹೇಳಬೇಕು. (ವಾಕ್ಯಾರ್ಥಮುಕ್ತಾವಳಿ)

**तत्वप्रकाशिका** – न केवलं युक्तिविरोधाच्छ्रुतेरन्यार्थता किं तु विशेषश्रुतेरपीत्याह – यत इति ।। विशेषवाक्येन 'प्राणस्यैतद्वशे सर्वम्' इत्यादिना समतावचः साधारणवाक्यं ह्रियते बाध्यत इत्यर्थः । यतोऽत उक्त एवार्थः इति शेषः । 'नोन्योऽतः' इत्यनेन भगवदितरस्य स्वातन्त्र्येण द्रष्टृत्वाद्यभाव उच्यते । वचनयुक्तयो वचनानि युक्तश्च वचनोक्ता युक्तय इति वा ।।

ಕೇವಲ ಯುಕ್ತಿವಿರೋಧದಿಂದಷ್ಟೇ ಶ್ರುತಿಗೆ ಅನ್ಯಾರ್ಥವನ್ನು ಕಲ್ಪನೆ ಮಾಡಬೇಕೆಂದು ಹೇಳುವುದಲ್ಲ. ವಿಶೇಷಶ್ರುತಿಯೂ ಕೂಡ ಈ ವಿಷಯದಲ್ಲಿ ಆಧಾರವಾಗಿದೆ ಎಂಬುದನ್ನು 'ಯತಃ' ಇತ್ಯಾದಿ ಭಾಷ್ಯದಿಂದ ಉತ್ತರಿಸಿದ್ದಾರೆ.

'ಪ್ರಾಣಸ್ಯ ಏತದ್ವಶೇ ಸರ್ವಮ್' ಇತ್ಯಾದಿ ವಿಶೇಷವಾಕ್ಯದಿಂದ ಸಾಮಾನ್ಯವಾಕ್ಯವೆನಿಸಿದ 'ಪ್ರಾಣಾದಿದಮಾವಿರಾಸೀತ್' ಎಂಬುದು ಬಾಧಿತವಾಗುತ್ತದೆಂದು ಅಭಿಪ್ರಾಯ.

ಯಾವ ಕಾರಣದಿಂದ ಶ್ರುತಿಗೆ ಹೀಗೆ ಬಾಧವನ್ನು ಹೇಳಬೇಕೋ, ಆದಕಾರಣದಿಂದ ಹಿಂದೆ ಹೇಳಿದ ಪ್ರಮೇಯವು ಸಿದ್ಧವಾಯಿತು ಎಂದು. 'ಯತೋಽತೋ ಉಕ್ತಃ ಏವಾರ್ಥಃ' ಎಂಬುದಾಗಿ ಭಾಷ್ಯದಲ್ಲಿ ಶೇಷಪೂರಣ ಮಾಡಿಕೊಳ್ಳಬೇಕು.

'ನಾನ್ಯೋಽತಃ' ಎಂಬ ಶ್ರುತಿಯಿಂದ ಪರಮಾತ್ಮನನ್ನು ಬಿಟ್ಟು ಸ್ವಾತಂತ್ರ್ಯೇಣ ದ್ರಷ್ಟೃತ್ವವು ಬೇರೆ ಯಾರಲ್ಲಿಯೂ ಕೂಡ ಇಲ್ಲವೆಂದು ಹೇಳಲಾಗಿದೆ. 'ವಚನಯುಕ್ತಯಃ' ಎಂಬುದಕ್ಕೆ ವಚನಗಳು ಹಾಗೂ ಯುಕ್ತಿಗಳು ಎಂದರ್ಥ. ಅಥವಾ ವಚನದಲ್ಲಿ ಹೇಳಲ್ಪಟ್ಟ ಯುಕ್ತಿಗಳು ಎಂದರ್ಥ.

ವಿವರಣೆ – ಪರಮಾತ್ಮನೇ ಎಲ್ಲರಿಗೂ ಕೂಡ ಒಡೆಯನಾಗಿದ್ದಾನೆ. ಮುಖ್ಯಪ್ರಾಣನೂ ಕೂಡ ಅವನ ಅಧೀನನೇ ಆಗಿದ್ದಾನೆ. ಮುಖ್ಯಪ್ರಾಣನಿಗೆ ಸ್ವಾಮಿತ್ವವನ್ನು ಹೇಳುವ ಶ್ರುತಿಗೆ ಭಗವಂತನ ಅಧೀನವಾಗಿ ತನಗಿಂತ ನೀಚರಾದವರಿಗೆ ಮಾತ್ರ ಈಶ್ವರನಾಗಿದ್ದಾನೆಂದು ವ್ಯಾಖ್ಯಾನ ಮಾಡಬೇಕು. ವಾಯುವಿಗೆ ಸರ್ವತಂತ್ರಸ್ವಾತಂತ್ರ್ಯವನ್ನು ಸರ್ವಥಾ ಹೇಳಬಾರದು. ಆದ್ದರಿಂದ ಪೈಂಗಿಶ್ರುತಿಯು ಹೇಳುವಂತೆ ಮುಖ್ಯಪ್ರಾಣನು ಪರತಂತ್ರನೇ ಆಗಿದ್ದಾನೆ. ಈ ವಿಷಯದಲ್ಲಿ ಶ್ರುತಿಯು ನಿರವಕಾಶವಾಗಿದೆ. ಮತ್ತು ಇಬ್ಬರೂ ಸ್ವತಂತ್ರರಾಗಲಾರರು ಎಂಬ ಯುಕ್ತಿಯಿಂದಲೂ ಕೂಡ ಪ್ರಬಲವಾಗಿದೆ. ಆದರೆ ಮುಖ್ಯಪ್ರಾಣನಿಗೆ ಸ್ವಾತಂತ್ರ್ಯವನ್ನು ಹೇಳುವ ಶ್ರುತಿಯು ಯುಕ್ತಿಯಿಂದ ಕೂಡಿದ್ದರೂ ಕೂಡ ಸಾವಕಾಶವಾಗಿದೆ. ಸಾವಕಾಶ ನಿರವಕಾಶಗಳಲ್ಲಿ ನಿರವಕಾಶವೇ ಶ್ರೇಷ್ಠವಾದ್ದರಿಂದ ಪರಾತಂತ್ರ್ಯವನ್ನು ಹೇಳುವ ನಿರವಕಾಶ ಶ್ರುತಿಯೇ ಪ್ರಬಲವಾಯಿತು.

ವಚನ, ಯುಕ್ತಿಗಳು ಎರಡೇ ಇವೆ. ಆದ್ದರಿಂದ ಬಹುವಚನವನ್ನು ಹೇಗೆ ಪ್ರಯೋಗ ಮಾಡಿದರು? ಎಂಬ ಪ್ರಶ್ನೆಗೆ 'ವಚನಯುಕ್ತಯಃ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ಶ್ರುತಿಗಳು ಅನೇಕ ಇವೆ. ಯುಕ್ತಿಗಳೂ ಅನೇಕ ಇವೆ. ಆದ್ದರಿಂದ ಬಹುವಚನವು ಯುಕ್ತವಾಗುತ್ತದೆಂಬುದು ಒಂದು ಉತ್ತರ. ಅಥವಾ ಶ್ರುತಿಯಲ್ಲಿ ಹೇಳಲ್ಪಟ್ಟ ಯುಕ್ತಿಗಳು ಎಂಬುದಾಗಿ ವ್ಯಾಖ್ಯಾನ ಮಾಡಿದಾಗ ಬಹುವಚನವು ಸರ್ವಾತ್ಮನಾ ಸಾಧುವಾಗುತ್ತದೆ. ಇಬ್ಬರು ಈಶ್ವರರಾಗಲಾರರು, ಮುಖ್ಯಪ್ರಾಣನು ಅವಾಂತರ ಈಶ್ವರನಾಗಿದ್ದಾನೆ, ವಿಶೇಷವಾಕ್ಯದಿಂದ ಸಾಮಾನ್ಯವಾಕ್ಯಕ್ಕೆ ವ್ಯಾಖ್ಯಾನ ಮಾಡಬೇಕು, ಸ್ವಾತಂತ್ರ್ಯೇಣ ನೋಡಲು ಸಮರ್ಥನಲ್ಲ. ಇವೇ ಮೊದಲಾದ ಯುಕ್ತಿಗಳಿವೆ ಎಂದು ತಿಳಿಯಬೇಕು.

## ಚಕ್ಷುರಾದ್ಯಧಿಕರಣ (೨-೪-೭)

## ಬ್ರಹ್ಮಸೂತ್ರ

**सूत्रम् — अकरणत्वाच्च न दोषस्तथा हि दर्शयति ।।**

ಬೇರೆ ಇಂದ್ರಿಯಗಳು ಹೇಗೆ ಅವಾಂತರ ಈಶ್ವರ ಅಲ್ಲವೋ, ಅದರಂತೆ ಪ್ರಾಣನೂ ಕೂಡ ಜೀವರೂಪನಾದ ಕರ್ತೃವಿನಿಂದ ಪ್ರಯೋಜ್ಯನಲ್ಲದ ಕಾರಣ ಅವಾಂತರ ಈಶ್ವರನಲ್ಲ ಎಂದು ಆಕ್ಷೇಪ ಮಾಡಬಾರದು. ಏಕೆಂದರೆ ಚಕ್ಷುರಾದಿ ಇಂದ್ರಿಯಗಳನ್ನು ಶ್ರುತಿಯು ಕರಣಗಳನ್ನಾಗಿ ಹೇಳುತ್ತಿದೆ.

## ಸೂತ್ರದೀಪಿಕಾ

**सूत्रदीपिका —** मुख्यप्राणस्य करणत्वात् । कर्तृप्रयोज्यत्वरूपकरणाभिन्नत्वात् चक्षुरादीनां तद्रूपत्वाच्च अस्मादेव वैलक्षण्यान्मुख्यस्येतरेभ्य उत्तमत्वसिद्धेः। **न दोषः** मुख्यप्राणस्वातन्त्र्यवाचिश्रुतेरवान्तरेश्वरपरत्वाभावदोषो नास्ति । कस्मादेवं कल्प्यत इति चेत् । **हि** यस्मात् । 'तानि ह वा' इति श्रुतिस्**तथा** उक्तप्रकारेण । **दर्शयति** ज्ञापयति । तस्मादित्यर्थः ।।२।।

ಮುಖ್ಯಪ್ರಾಣನು ಬೇರೆ ಇಂದ್ರಿಯಗಳಿಗಿಂತ ಉತ್ತಮನಾಗಿದ್ದಾನೆ. ಇಂದ್ರಿಯಗಳಂತೆ ಮುಖ್ಯಪ್ರಾಣನು ಈಶಾಧೀನನಾಗಿದ್ದರೂ, ಇಂದ್ರಿಯಗಳಂತೆ ಜೀವನಿಗೆ ಸಾಧನನಾಗಿರುವುದಿಲ್ಲ. ಜೀವನು ತನ್ನ ಇಚ್ಛೆಗೆ ಅನುಸಾರಿಯಾಗಿ ಇಂದ್ರಿಯಗಳನ್ನು ಉಪಯೋಗಿಸಿಕೊಳ್ಳುತ್ತಾನೆ. ಆದರೆ ಮುಖ್ಯಪ್ರಾಣನು ಜೀವನ ನಿಯಂತ್ರಣದಲ್ಲಿ ಇರುವುದಿಲ್ಲ. ಆದ್ದರಿಂದಲೇ ಮುಖ್ಯಪ್ರಾಣನು 'ಅವಾಂತರ ಈಶ್ವರ' ಅಂದರೆ ಜೀವ ಹಾಗೂ ಪರಮಾತ್ಮನ ಮಧ್ಯದಲ್ಲಿ ಇರುವ ಈಶನಾಗಿದ್ದಾನೆ. ಆದ್ದರಿಂದ ಅವಾಂತರ ಈಶ್ವರನಲ್ಲವೆಂಬ ದೋಷವು ಬರುವುದಿಲ್ಲ. 'ತಾನಿ ಹ ವಾ ಏತಾನಿ ಸರ್ವಾಣಿ' ಎಂಬ ಶ್ರುತಿಯು ಉಳಿದ ಇಂದ್ರಿಯಗಳಿಗಿಂತ ಮುಖ್ಯಪ್ರಾಣನಿಗೆ ಉತ್ತಮತ್ವವನ್ನು ಹೇಳುತ್ತಿದೆ.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ಚಕ್ಷುರಾದ್ಯಧಿಕರಣವು ಮುಗಿಯಿತು.

## ಬ್ರಹ್ಮಸೂತ್ರಭಾಷ್ಯ

**भाष्यम् — ।। अकरणत्वाच्च न दोषस्तथा हि दर्शयति ।।२।।**

**इतरेषां प्राणानां करणत्वान्मुख्यस्याकरणत्वात् तस्यान्येभ्य उत्तमत्त्वं युज्यते ।**

ಅನುವಾದ - ಬೇರೆ ಇಂದ್ರಿಯಗಳು ಕರಣಗಳಾಗಿದ್ದರೂ ಮುಖ್ಯಪ್ರಾಣನು ಕರಣನಲ್ಲ. ಆದ್ದರಿಂದ ಬೇರೆ ಇಂದ್ರಿಯಾಭಿಮಾನಿದೇವತೆಗಿಂತ ಇವನು ಉತ್ತಮನು. ಹೀಗೆ ಹೇಳುವುದು ಯುಕ್ತವಾಗುತ್ತದೆ.

ಪರಿಪೂರ್ಣಚಂದ್ರಿಕಾ

ಪ್ರತಿಪದಾರ್ಥ -- ಇತರೇಷಾಂ = ಬೇರೆ, ಪ್ರಾಣಾನಾಂ = ಇಂದ್ರಿಯಗಳು, ಕರಣತ್ವಾತ್ = ಕರಣವಾದ್ದರಿಂದ, ತಸ್ಯ = ಮುಖ್ಯಪ್ರಾಣನಿಗೆ, ಅನ್ಯೇಭ್ಯಃ = ಬೇರೆ ಇಂದ್ರಿಯಾಭಿಮಾನಿದೇವತೆಗಳಿಗಿಂತ, ಉತ್ತಮತ್ವಮ್ = ಉತ್ತಮತ್ವವು, ಯುಜ್ಯತೇ = ಯುಕ್ತವಾಗುತ್ತದೆ.

**भाष्यम् – माण्डव्यश्रुतिश्च 'तानि ह वा एतानि सर्वाणि करणान्यथ प्राण एवाकरणस्तस्मान्मुख्यस्तस्मान्मुख्य इत्याचक्षते' इति ।।२।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये चक्षुराद्यधिकरणम् ।। ७ ।।**

ಅನುವಾದ - ಆ ಇಂದ್ರಿಯಗಳೆಲ್ಲವೂ ಜೀವನಿಂದ ಪ್ರೇರಿತವಾಗಿವೆ. ಆದ್ದರಿಂದ ಮುಖ್ಯಪ್ರಾಣನೊಬ್ಬನೇ ಜೀವನಿಂದ ಪ್ರೇರಿತವಾಗುತ್ತಾನೆ ಎಂದು ಹೇಳುವುದು ತಪ್ಪು ಆದ್ದರಿಂದಲೇ ಮುಖ್ಯಪ್ರಾಣನೆಂದು ಕರೆಯುತ್ತಾರೆ. ಹೀಗೆ ಮಾಂಡವ್ಯ ಶ್ರುತಿಯು ಹೇಳುತ್ತದೆ.

ಪ್ರತಿಪದಾರ್ಥ -- ಮಾಂಡವ್ಯಶ್ರುತಿಶ್ಚ = ಮಾಂಡವ್ಯಶ್ರುತಿಯಿಂದಲೂ ಹಿಂದೆ ಹೇಳಿದ ವಿಷಯವು ಸ್ಪಷ್ಟವಾಗುತ್ತದೆ. ತಾನಿ ಹಾ ಏತಾನಿ ಸರ್ವಾಣಿ = ಈ ಎಲ್ಲಾ ಇಂದ್ರಿಯಗಳು, ಕರಣಾನಿ = ಕರ್ತೃವಾದ ಜೀವನಿಂದ ಪ್ರೇರಿತವಾಗಿವೆ. ಅತ = ಆದ್ದರಿಂದ, ಪ್ರಾಣ ಏವ = ಮುಖ್ಯಪ್ರಾಣನೊಬ್ಬನೇ, ಅಕರಣತಃ = ಜೀವನಿಂದ ಪ್ರೇರಿಸಲ್ಪಡುವವನಲ್ಲ. ತಸ್ಮಾತ್ = ಆದ್ದರಿಂದ, ಮುಖ್ಯಃ = ಮುಖ್ಯಪ್ರಾಣನು, ತಸ್ಮಾತ್ = ಆ ಇಂದ್ರಿಯಗಳಿಗಿಂತಲ್ಲ, ಮುಖ್ಯಃ = ಶ್ರೇಷ್ಠನು, ಇತಿ = ಹೀಗೆ, ಆಚಕ್ಷತೇ = ಕರೆಯುತ್ತಾರೆ. ಇತಿ = ಹೀಗೆ ಮಾಂಡವ್ಯ-ಶ್ರುತಿಯು ಹೇಳುತ್ತಿದೆ.

ಇಲ್ಲಿಗೆ ಚಕ್ಷುರಾದ್ಯಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

## ತತ್ವಪ್ರಕಾಶಿಕಾ

**तत्वप्रकाशिका – यदि चक्षुरादिवदेवेश्वराधीनत्वं मुख्यप्राणस्य तर्हि तस्यावान्तरेश्वरत्वाद्यसम्भवेन स्वातन्त्र्यश्रुतिर्व्यर्था स्यादित्याशङ्कां परिहर्तुं सूत्रं पठित्वा व्याचष्टे – अकरणत्वाच्चेति ।।**

ಒಂದುವೇಳೆ ಚಕ್ಷುರಾದಿ ಇಂದ್ರಿಯಗಳಂತೆ ಮುಖ್ಯಪ್ರಾಣನಿಗೆ ಭಗವದಧೀನತ್ವವನ್ನು ಒಪ್ಪಿದರೆ ಆಗ ಮುಖ್ಯಪ್ರಾಣನು ಅವಾಂತರ ಈಶ್ವರನಾಗುವುದೂ ಕೂಡ ಅಸಂಭಾವಿತವಾಗುತ್ತದೆ. ಮತ್ತು ಮುಖ್ಯಪ್ರಾಣನಿಗೆ ಸ್ವಾತಂತ್ರ್ಯವನ್ನು ಹೇಳುವ ಶ್ರುತಿಯು ವ್ಯರ್ಥವಾಗುತ್ತದೆ. ಈ ಆಶಂಕೆಯನ್ನು ಪರಿಹಾರ ಮಾಡಲು 'ಅಕರಣತ್ವಾಚ್ಚ' ಇತ್ಯಾದಿ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – चशब्दश्चक्षुरादीनां करणत्वसमुच्चयार्थः । प्राणस्य चक्षुरादीनां चेश्वरवशत्वसाम्येऽपि कर्तृप्रयोज्यत्वाप्रयोज्यत्ववैलक्षण्येनातिशयोपपत्तेर्नोक्तदोषः। एतच्च श्रुत्युक्तत्वात् सिध्यतीति भावः । अतः श्रुत्यविरोधेन मुख्यप्राणस्येश्वरवशत्वसिद्धर्युक्तं श्रुतिसमन्वयेन जगत्कारणत्वं हरेरिति सिद्धम् ।।**

ಚ ಶಬ್ದದಿಂದ ಚಕ್ಷುರಾದಿಗಳ ಕರಣತ್ವವನ್ನು ಸಮುಚ್ಚಯ ಮಾಡಬೇಕು. ಮುಖ್ಯಪ್ರಾಣನು ಹಾಗೂ ಚಕ್ಷುರಾದಿ ಇಂದ್ರಿಯಗಳು ಭಗವಂತನ ಅಧೀನವಾಗಿದ್ದರೂ ಕೂಡ ಚಕ್ಷುರಾದಿ ಇಂದ್ರಿಯಗಳು ಕರ್ತೃವಾದ ಜೀವನ ಅಧೀನಕ್ಕೆ ಒಳಗಾಗಿವೆ. ಮುಖ್ಯಪ್ರಾಣನು ಕರ್ತೃವಾದ ಜೀವನ ಅಧೀನಕ್ಕೆ ಒಳಪಟ್ಟಿಲ್ಲ. ಹೀಗೆ ವೈಲಕ್ಷಣ್ಯ ಇರುವುದರಿಂದ ಮುಖ್ಯಪ್ರಾಣನಲ್ಲಿ ಮಹಿಮೆಯ ಅತಿಶಯವು ಉಪಪನ್ನವಾಗುತ್ತದೆ. ಆದ್ದರಿಂದ ಹಿಂದಿನ ದೋಷವಿಲ್ಲ. ಇದೂ ಕೂಡ ಶ್ರುತಿಯಲ್ಲಿ ಹೇಳಿರುವುದರಿಂದಲೇ ಸಿದ್ಧವಾಗುತ್ತದೆಂದು ಅಭಿಪ್ರಾಯ.

ಶ್ರುತಿಯ ವಿರೋಧವಿಲ್ಲದ್ದರಿಂದ ಮುಖ್ಯಪ್ರಾಣನು ಈಶ್ವರನ ಅಧೀನನಾಗಿದ್ದಾನೆಂದು ಸಿದ್ಧವಾಯಿತು. ಹಾಗಾಗಿ ಜಗತ್ಕಾರಣನಾದ ಶ್ರೀಹರಿಯಲ್ಲಿ ಶ್ರುತಿಸಮನ್ವಯವು ನಿರಾತಂಕವಾಯಿತು.

ವಿವರಣೆ – ಕಣ್ಣು, ಕಿವಿ ಮೊದಲಾದ ಇಂದ್ರಿಯಗಳಿಗೂ ಮುಖ್ಯಪ್ರಾಣನಿಗೂ ಈಶ್ವರಾಧೀನತ್ವವು ಸಮಾನವೇ ಆಗಿದೆ. ಆದರೂ ಕೂಡ ಮುಖ್ಯಪ್ರಾಣನಲ್ಲಿ ಒಂದು ವೈಶಿಷ್ಟ್ಯವಿದೆ. ಚಕ್ಷುರಾದಿ ಇಂದ್ರಿಯಗಳು ಜೀವನ ವಶವಾಗಿವೆ. ತನ್ನ ಇಚ್ಛೆಯ ಅನುಗುಣವಾಗಿ ಇಂದ್ರಿಯಗಳನ್ನು ಜೀವನು ಉಪಯೋಗಿಸಿಕೊಳ್ಳಲು ಅರ್ಹನಾಗಿದ್ದಾನೆ. ಆದರೆ ಮುಖ್ಯಪ್ರಾಣನು ಜೀವನ ಅಧೀನನಾಗಿರುವುದಿಲ್ಲ. ಇಚ್ಛೆ ಇದ್ದರೆ ಮಾತ್ರ ಚಕ್ಷುರಾದಿಗಳು ಪ್ರವೃತ್ತವಾಗುತ್ತವೆ. ಜೀವನಿಗೆ ಇಚ್ಛೆಯಿಲ್ಲದಿದ್ದರೆ ಚಕ್ಷುರಾದಿಗಳು ಪ್ರವೃತ್ತವಾಗುವುದಿಲ್ಲ. ಆದರೆ ಸುಷುಪ್ತಿಯ ಅವಸ್ಥೆಯಲ್ಲಿ ಯಾವುದೇ ಇಂದ್ರಿಯಗಳ ವ್ಯಾಪಾರವಿಲ್ಲದಿದ್ದಾಗಲೂ ಮುಖ್ಯಪ್ರಾಣನು ಉಸಿರಾಟ ನಡೆಸಿರುತ್ತಾನೆ. ಇದರಿಂದಲೇ ಶ್ವಾಸರೂಪಕ್ರಿಯೆಯು ಜೀವನ ಅಧೀನವಲ್ಲವೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಮುಖ್ಯಪ್ರಾಣನಿಗೆ ಅವಾಂತರ ಈಶ್ವರತ್ವ ಎಂಬ ಸ್ವಾತಂತ್ರ್ಯವನ್ನು ವಿವಕ್ಷಿಸಬಹುದು.

ಈ ಅಧಿಕರಣದಲ್ಲಿ ಒಟ್ಟು ಎರಡು ಸೂತ್ರಗಳಿವೆ. ಮೊದಲನೆಯ ಸೂತ್ರವು ಸ್ವಪಕ್ಷದಲ್ಲಿ ಸಾಧಕ ಪ್ರಮಾಣವನ್ನು ಹೇಳಿದೆ. ಎರಡನೆಯ ಸೂತ್ರವು ಪರಪಕ್ಷದಲ್ಲಿ ಉಲ್ಲೇಖಿಸಿದ ಶ್ರುತಿಗೆ ಸಾವಕಾಶತ್ವವನ್ನು ಪ್ರತಿಪಾದನೆ ಮಾಡುತ್ತಿದೆ.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಚಕ್ಷುರಾದ್ಯಧಿಕರಣ ಮುಗಿಯಿತು

ಚಕ್ಷುರಾದ್ಯಧಿಕರಣ
(೨-೪-೭)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,
ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## चक्षुराद्यधिकरणम्

### ಮುಖ್ಯಪ್ರಾಣನು ಭಗವಂತನ ಅಧೀನ

**।। चक्षुरादिवत्तु तत्सहशिष्ट्यादिभ्यः ।। पूर्वत्रोक्ता प्राणस्योत्पत्तिरिह पूर्वपक्षे स्वातन्त्र्यादाक्षिप्यत इति सङ्गतिः ।**

ಹಿಂದಿನ ಅಧಿಕರಣದಲ್ಲಿ ಮುಖ್ಯಪ್ರಾಣನಿಗೆ ಉತ್ಪತ್ತಿ ಇದೆ ಎಂದು ಸಮರ್ಥನೆ ಮಾಡಲಾಯಿತು. ಅಂತಹ ಮುಖ್ಯಪ್ರಾಣನು ಸ್ವತಂತ್ರನಾಗಿದ್ದಾನಲ್ಲವೇ? ಎಂಬ ಅಧಿಕಾಕ್ಷೇಪಕ್ಕೆ ಉತ್ತರವನ್ನು ನೀಡಲು ಈ ಅಧಿಕರಣವು ಹೊರಟಿರುವುದರಿಂದ ಹಿಂದಿನ ಅಧಿಕರಣದಿಂದ ಆಕ್ಷೇಪಿಕೀ ಸಂಗತಿಯು ಇರುತ್ತದೆ.

**अत्रोक्तं ब्रह्मणः सर्वस्रष्टृत्वादिकं किं मुख्यप्राणस्वातन्त्र्यश्रुतिविरुद्धं न वेति चिन्ता । तदर्थं तत्पारतन्त्र्यश्रुतिः किं प्रबलस्वातन्त्र्यश्रुतिबाधितोत नेति । तदर्थं स्वातन्त्र्यश्रुतिः किं मुख्येश्वराभिप्राया उत अवान्तरेश्वराभिप्रायेति ।।**

ಹಿಂದೆ ಹೇಳಿದ ಬ್ರಹ್ಮನ ಸರ್ವಸ್ರಷ್ಟೃತ್ವವು ಮುಖ್ಯಪ್ರಾಣನ ಸ್ವಾತಂತ್ರ್ಯ ಶ್ರುತಿಗೆ ವಿರುದ್ಧವಾಗಿದೆಯೋ ಇಲ್ಲವೋ? ಎಂಬುದು ಈ ಅಧಿಕರಣದ ಪ್ರಧಾನವಿಚಾರ. ಇದಕ್ಕೆ ಪೂರಕವಾಗಿ ಮುಖ್ಯಪ್ರಾಣನಿಗೆ ಪಾರತಂತ್ರ್ಯ ಹೇಳುವ ಶ್ರುತಿಯು ಪ್ರಬಲವಾದ ಸ್ವಾತಂತ್ರ್ಯ ಶ್ರುತಿಯಿಂದ ಬಾಧಿತವೋ, ಅಲ್ಲವೋ? ಎಂಬುದು ವಿಚಾರ. ಇದಕ್ಕೆ ಪೂರಕವಾಗಿ ಸ್ವಾತಂತ್ರ್ಯ ಶ್ರುತಿಯು ಮುಖ್ಯೇಶ್ವರನ ಅಭಿಪ್ರಾಯದಲ್ಲಿ ಹೊರಟಿದೆಯೋ ಅಥವಾ ಅವಾಂತರೇಶ್ವರನ ಅಭಿಪ್ರಾಯದಲ್ಲಿ ಹೊರಟಿದೆಯೋ? ಎಂಬ ವಿಚಾರವನ್ನು ಮಾಡಲಾಗಿದೆ.

[1]"प्राणादिदमाविरासीत्" इति श्रुतिशेषे भाष्यकारवचनसामर्थ्येन मुख्यप्राणलिङ्गकल्पनान्न परब्रह्मपरः प्राणशब्द इति पूर्वपक्षोदयः । एवमुत्तरत्रापि द्रष्टव्यम् ।

'ಪ್ರಾಣಾದಿದಮಾವಿರಾಸೀತ್' ಎಂಬ ಶ್ರುತಿಶೇಷದಲ್ಲಿ ಭಾಷ್ಯಕಾರರ ಮಾತಿನಿಂದ ಮುಖ್ಯಪ್ರಾಣಲಿಂಗವೇ ಶ್ರುತವಾಗಿದೆ. ಆದ್ದರಿಂದ ಇದನ್ನು ಪರಬ್ರಹ್ಮಪರವೆಂದು ಹೇಳಬಾರದು, ಮುಖ್ಯಪ್ರಾಣಪರವೆಂದೇ ಹೇಳಬೇಕು ಎಂಬುದಾಗಿ ಈ ಅಧಿಕರಣದ ಪೂರ್ವಪಕ್ಷವು ಉದಯವಾಗುತ್ತಿದೆ. ಇಂತಹ ಪೂರ್ವಪಕ್ಷ ಲಿಂಗಗಳನ್ನು ಮುಂದೆಯೂ ಕೂಡ ತಿಳಿದುಕೊಳ್ಳಬೇಕು.

**कर्तृप्रयोज्यत्वेति ।। सुषुप्तौ जीवप्रयत्नाभावे चक्षुरादीनां व्यापारादर्शनाज्जीवप्रयोज्यत्वम् । मुख्यप्राणस्य तु तदा व्यापारदर्शनात्तदप्रयोज्यत्वमिति भावः ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् चक्षुराद्यधिकरणं सम्पूर्णम् ।।७।।**

ಟೀಕೆಯಲ್ಲಿ 'ಕರ್ತೃಪ್ರಯೋಜ್ಯತ್ವ' ಇತ್ಯಾದಿಯಾಗಿ ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ– ಸುಷುಪ್ತಿ ಅವಸ್ಥೆಯಲ್ಲಿ ಜೀವನು ಪ್ರಯತ್ನ ಇಲ್ಲದೇ ಇದ್ದಾಗ ಚಕ್ಷುರಾದಿ ಇಂದ್ರಿಯಗಳ ವ್ಯಾಪಾರವಾಗುವುದು ಕಂಡಿಲ್ಲ. ಆದ್ದರಿಂದ ಇಂದ್ರಿಯಗಳ ವ್ಯಾಪಾರವು ಜೀವಪ್ರಯೋಜ್ಯವಾಗಿದೆ ಎಂದು ಸಿದ್ಧವಾಗುತ್ತದೆ. ಆದರೆ ಮುಖ್ಯಪ್ರಾಣನಿಗೆ ಸುಷುಪ್ತಿಯ ಅವಸ್ಥೆಯಲ್ಲಿಯೂ ಕೂಡ ವ್ಯಾಪಾರದ ಅವಸ್ಥೆಯು ಕಾಣಿಸುತ್ತಿರುವುದರಿಂದ ಮುಖ್ಯಪ್ರಾಣನು ಜೀವನಿಂದ ಪ್ರಯೋಜ್ಯನಲ್ಲ ಎಂದು ತಿಳಿಯುತ್ತದೆ. ಇಷ್ಟು ಅಭಿಪ್ರಾಯ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಚಕ್ಷುರಾದ್ಯಧಿಕರಣವು ಸಂಪೂರ್ಣವಾಯಿತು

---

(೧) ಈ ವಾಕ್ಯ ಲಿಪಿಕಾರರ ದೋಷದಿಂದ ಹಿಂದಿನ ಅಧಿಕರಣದಲ್ಲಿ ಸೇರಿ ಹೋಗಿತ್ತು. ರಾಯರ ವ್ಯಾಖ್ಯಾನವನ್ನು ಓದಿ ಇಲ್ಲಿ ಮುದ್ರಿಸಲಾಗಿದೆ.

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**चक्षुरादिवत्तु ।। स्पष्टो ग्रन्थः ।।**

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे चक्षुराद्यधिकरणं सम्पूर्णम् ।।७।।**

'ಸ್ಪಷ್ಟೋ ಗ್ರಂಥಃ' ಗ್ರಂಥದ ಅರ್ಥವೆಲ್ಲವೂ ಸ್ಪಷ್ಟವಾಗಿರುವುದರಿಂದ ನಾವು ಪುನಃ ವ್ಯಾಖ್ಯಾನ ಮಾಡಿಲ್ಲ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಚಕ್ಷುರಾದ್ಯಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

# ಪಂಚವೃತ್ತ್ಯಧಿಕರಣ
(೨-೪-೮)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

॥ ಶ್ರೀಗುರುಭ್ಯೋ ನಮಃ ॥

# ಪಂಚವೃತ್ತ್ಯಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् — पञ्चवृत्तिर्मनोवद्व्यपदिश्यते ॥**

ಮನಸ್ಸು ಯಾವರೀತಿ ಐದು ಪ್ರಕಾರದಿಂದ ಯುಕ್ತವಾಗಿದೆಯೋ, ಆದರಂತೆ ಮುಖ್ಯಪ್ರಾಣನೂ ಕೂಡ ಐದು ರೂಪಗಳಿಂದ ಕೂಡಿರುತ್ತಾನೆ. ಹೀಗೆ 'ಅಥ ಪಂಚವೃತ್ತ್ಯೈತತ್ ಪ್ರವರ್ತತೇ' ಎಂಬ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका — मनोवत्** मनस इव । यथा मनसः मनोबुद्ध्यहङ्कारचित्तचेतनाख्य-पञ्चप्रकारोपेतत्वं तथा मुख्यप्राणोऽपि **पञ्चवृत्तिः** प्राणापानादिपञ्चरूपवान्। कुतः यस्मात् 'अथ पञ्चवृत्त्या' इति श्रुतौ तथा **व्यपदिश्यते** प्रतिपाद्यते । तस्मादित्यर्थः ॥१॥

ಮನೋವತ್ = ಮನಸ್ಸು ಯಾವ ರೀತಿಯಾಗಿ ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ, ಚೇತನ ಎಂಬ ಐದು ಪ್ರಕಾರಗಳನ್ನು ಹೊಂದಿದೆಯೋ, ಆದರಂತೆ ಮುಖ್ಯಪ್ರಾಣನೂ ಕೂಡ ಪಂಚವೃತ್ತಿಃ = ಪ್ರಾಣ ಅಪಾನ ವ್ಯಾನ ಉದಾನ, ಸಮಾನ ಎಂಬ ಐದ ರೂಪಗಳನ್ನು ಹೊಂದಿರುತ್ತಾನೆ. ವ್ಯಪದಿಶ್ಯತೇ = ಅಥ ಪಂಚವೃತ್ತ್ಯಾ ಎಂಬ ಶ್ರುತಿಯು ಹೀಗೆ ಪ್ರತಿಪಾದನೆ ಮಾಡುತ್ತಿದೆ.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ಪಂಚವೃತ್ತ್ಯಧಿಕರಣವು ಮುಗಿಯಿತು.

ಪರಿಪೂರ್ಣಚಂದ್ರಿಕಾ

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – 'सर्वे वा एते मुख्यदासाः प्राणोऽपानो व्यान उदानः समान इति । अथ प्राणो वाव सम्राट्' इति कौण्डिन्यश्रुतिः ।**
**'प्राणापानादयः सर्वे मुख्यदासा यतोऽनिशम् ।**
**अतस्तदाज्ञया नित्यं स्वानि कर्माणि कुर्वते ।।' इति युक्तिर्वायुप्रोक्ते ।**
**'मुख्यस्यैव स्वरूपाणि प्राणाद्याः पञ्च वायवः ।**
**स एव प्राणिनां देहे पञ्चधा वर्ततेऽनिशम् ।।' इति गौपवनश्रुतिः ।।**

ಅನುವಾದ - ಈ ಎಲ್ಲ ಪ್ರಾಣಗಳು ಮುಖ್ಯಪ್ರಾಣನ ದಾಸರು ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬುದು ದಾಸರಾದವರ ಹೆಸರು. ಆದ್ದರಿಂದ ಮುಖ್ಯಪ್ರಾಣನೊಬ್ಬನೇ ಸರ್ವೇಶ್ವರನು ಹೀಗೆ ಕೌಂಡಿನ್ಯಶ್ರುತಿಯು ಹೇಳುತ್ತಿದೆ.

ವಾಯುಪ್ರೋಕ್ತವು ಇದನ್ನು ಯುಕ್ತಿಬದ್ಧವಾಗಿ ಸಮರ್ಥನೆ ಮಾಡುತ್ತಿದೆ. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಈ ಐವರು ನಿರಂತರವಾಗಿ ಮುಖ್ಯಪ್ರಾಣನ ದಾಸರು. ಆ ಕಾರಣದಿಂದ ಮುಖ್ಯಪ್ರಾಣನ ಆಜ್ಞೆಯಿಂದಲೇ ಅವರು ತಮ್ಮ ಕೆಲಸವನ್ನು ಮಾಡುತ್ತಾರೆ. ಆದರೆ ಇದಕ್ಕೆ ವಿರುದ್ಧವಾಗಿ ಗೌಪವನಶ್ರುತಿಯು ಮುಖ್ಯಪ್ರಾಣನೇ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ ಐದು ಹೆಸರುಗಳನ್ನು ಪಡೆದಿದ್ದಾನೆಂದು ಆ ಮುಖ್ಯಪ್ರಾಣನೇ ಜೀವರ ದೇಹದಲ್ಲಿ ನಿರಂತರವಾಗಿ ಐದು ರೂಪಗಳಿಂದ ಇರುತ್ತಾನೆ ಎಂದು ಹೇಳುತ್ತಾರೆ.

ಪ್ರತಿಪದಾರ್ಥ -- ಪ್ರಾಣಃ = ಪ್ರಾಣನು, ಅಪಾನಃ = ಅಪಾನನು, ವ್ಯಾನಃ = ವ್ಯಾನನು, ಉದಾನಃ = ಉದಾನನು, ಸಮಾನಃ = ಸಮಾನನು, ಸರ್ವೇವಾ ಏತೇ = ಈ ಎಲ್ಲಾ ಪ್ರಾಣಗಳು, ಮುಖ್ಯದಾಸಾಃ = ಮುಖ್ಯಪ್ರಾಣನ ದಾಸರು. ಅಥ = ಆದ್ದರಿಂದ, ಪ್ರಾಣೋ ವಾವ = ಮುಖ್ಯಪ್ರಾಣನೊಬ್ಬನೇ, ಸಮ್ರಾಟ್ = ಇವರಿಗೆಲ್ಲ ಅಧಿಪತಿಯು, ಇತಿ = ಹೀಗೆ, ಕೌಂಡಿನ್ಯಶ್ರುತಿಃ = ಕೌಂಡಿನ್ಯ ಶ್ರುತಿಯು ಹೇಳುತ್ತಿದೆ.

ಪ್ರಾಣಾಪಾನಾದಯಃ = ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ, ಸರ್ವೇ = ಈ ಐದು ಪ್ರಾಣಗಳು, ಮುಖ್ಯದಾಸಾಃ = ಮುಖ್ಯಪ್ರಾಣನ ದಾಸರು. ಯತಃ = ಯಾವ ಕಾರಣದಿಂದ, ಅನಿಶಂ = ನಿರಂತರವಾಗಿ, ತದಾಜ್ಞಯಾ = ಮುಖ್ಯಪ್ರಾಣನ ಆಜ್ಞೆಯಿಂದ, ನಿತ್ಯಂ = ನಿರಂತರವಾಗಿ, ಸ್ವಾನಿ ಕರ್ಮಾಣಿ = ತಮ್ಮತಮ್ಮ ಕೆಲಸಗಳನ್ನು, ಕುರ್ವತೇ = ಮಾಡುತ್ತಾರೆ. ಇತಿ = ಹೀಗೆ, ಯುಕ್ತಿಃ = ಯುಕ್ತಿಯು, ವಾಯುಪ್ರೋಕ್ತೇ = ವಾಯುಪ್ರೋಕ್ತದಲ್ಲಿ ಹೇಳಲ್ಪಟ್ಟಿದೆ.

ಪ್ರಾಣಾದ್ಯಾಃ = ಪ್ರಾಣ ಮೊದಲಾದ, ಪಂಚ ವಾಯವಃ = ಐದುವಾಯುಗಳು, ಮುಖ್ಯಸ್ಯೈವ = ಮುಖ್ಯಪ್ರಾಣನದ್ದೇ, ಸ್ವರೂಪಾಣಿ = ಸ್ವರೂಪಗಳಾಗಿವೆ. ಸ ಏವ = ಆ ಮುಖ್ಯಪ್ರಾಣನೇ, ಪ್ರಾಣಿನಾಂ ದೇಹೇ = ಜೀವರ ದೇಹದಲ್ಲಿ, ಅನಿಶಂ = ನಿರಂತರವಾಗಿ, ಪಂಚಧಾ = ಐದು ರೂಪಗಳಿಂದ, ವರ್ತತೇ = ಇರುತ್ತಾನೆ. ಇತಿ = ಹೀಗೆ, ಗೌಪಮನಶ್ರುತಿಃ = ಗೌಪವನಶ್ರುತಿಯು ಹೇಳುತ್ತಿದೆ.

ಪಂಚವೃತ್ತ್ಯಧಿಕರಣ (೨-೪-೮)

**भाष्यम् – अतो वक्ति –**

**।। पञ्चवृत्तिर्मनोवद् व्यपदिश्यते ।।१।।**

**'अथ पञ्चवृत्त्यैतत् प्रवर्तते । प्राणो वाव पञ्चवृत्तिः । प्राणोऽपानो व्यान उदानः समान इति । तेभ्यो वा एतेभ्यः पञ्च दासाः प्रजायन्ते । प्राणाद् वाव प्राणोऽपानादपानो व्यानाद् व्यान उदानादुदानः समानादेव समानः ।'**

ಅನುವಾದ - ಮೇಲಿನ ಆಕ್ಷೇಪಕ್ಕೆ ಸೂತ್ರಕಾರರು ಉತ್ತರಿಸುತ್ತಿದ್ದಾರೆ -

ಹೇಗೆ ಮನಸ್ಸಿಗೆ ಐದು ಪ್ರಭೇದಗಳಿವೆಯೋ ಅದರಂತೆ ಪ್ರಾಣನಿಗೂ ಐದು ರೂಪಗಳಿವೆ. ಈ ವಿಷಯವನ್ನು ತಿಳಿಸಲು ಶ್ರುತಿ ಹೊರಟಿದೆ. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬುದು ಐದು ರೂಪಗಳು. ಇದೇ ಹೆಸರನ್ನು ಪಡೆದ ಐದು ವಾಯುಗಳು ಮುಖ್ಯಪ್ರಾಣನ ಐದು ರೂಪದ ದಾಸರಾಗಿದ್ದಾರೆ. ಹೀಗೆ ಶ್ರುತಿ ಹೇಳುತ್ತಿದೆ.

ಪ್ರತಿಪದಾರ್ಥ -- ಅತಃ = ಮೇಲಿನ ಶ್ರುತಿ ವಿರೋಧಪರಿಹಾರಕ್ಕಾಗಿ ಸೂತ್ರಕಾರರು, ವಕ್ತಿ = ಉತ್ತರಿಸುತ್ತಿದ್ದಾರೆ -

ಏತತ್ = ಈ ಶರೀರವು, ಪಂಚವೃತ್ಯಾ = ಐದು ರೂಪಗಳುಳ್ಳ ಪ್ರಾಣನಿಂದ ಕ್ರಿಯಾಶೀಲವಾಗಿದೆ. ಪ್ರಾಣೋ ವಾವ = ಆ ಮುಖ್ಯಪ್ರಾಣನೇ, ಪಂಚವೃತ್ತಿಃ = ಐದುರೂಪಗಳನ್ನು ತಾಳಿದ್ದಾನೆ. ಪ್ರಾಣಃ = ಪ್ರಾಣನು, ಅಪಾನಃ = ಅಪಾನನು, ವ್ಯಾನಃ = ವ್ಯಾನನು, ಸಮಾನಃ = ಸಮಾನನು, ಇತಿ = ಎಂದು, ತೇಭ್ಯಃ ಏತೇಭ್ಯಃ = ಈ ಐದುರೂಪಗಳಿಂದ, ಪಂಚದಾಸಾಃ = ಐದುಮಂದಿ ದಾಸರು, ಪ್ರಜಾಯಂತೇ = ಪ್ರಾಣಾದಿ ಹೆಸರುಗಳಿಂದ ಹುಟ್ಟಿದ್ದಾರೆ. ಪ್ರಾಣಾತ್ ವಾ = ಪ್ರಾಣನ ದೆಸೆಯಿಂದ, ಪ್ರಾಣಃ = ಪ್ರಾಣನು, ಅಪಾನಾತ್ = ಅಪಾನನ ದೆಸೆಯಿಂದ, ಅಪಾನಃ = ಅಪಾನನು, ವ್ಯಾನಾತ್ = ವ್ಯಾನನ ದೆಸೆಯಿಂದ, ವ್ಯಾನಃ = ವ್ಯಾನನು, ಉದಾನಾತ್ = ಉದಾನನ ದೆಸೆಯಿಂದ ಉದಾನಃ = ಉದಾನನು, ಸಮಾನಾತ್ = ಸಮಾನನ ದೆಸೆಯಿಂದ, ಸಮಾನಃ = ಸಮಾನನು ಜನ್ಮವನ್ನು ಪಡೆದಿರುತ್ತಾನೆ.

**भाष्यम् – 'यथा ह वै मनः पञ्चधा व्यपदिश्यते मनो बुद्धिरहङ्कारश्चित्तं चेतनेति । तेभ्यो वा एतेभ्यः पञ्च दासाः प्रजायन्ते ।**

**मनसो वाव मनो बुद्धेर्बुद्धिरहङ्कारादहङ्कारश्चित्ताच्चित्तं चेतनाया एव चेतनैवमिति' इति ।।१।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये पञ्चवृत्त्यधिकरणम् ।। ८ ।।**

ಅನುವಾದ - ಮನಸ್ಸು, ಬುದ್ಧಿ, ಅಂಹಕಾರ, ಚಿತ್ತ, ಚೇತನ ಎಂಬ ಐದು ಪ್ರಭೇದಗಳಿವೆ. ಐದರಿಂದ ಜ್ಞಾನಪ್ರಭೇದಗಳು ಹುಟ್ಟಿವೆ. ಮನಸ್ಸಿನಿಂದ ಮನಸ್ಸು, ಬುದ್ಧಿಯಿಂದ ಬುದ್ಧಿ,

ಅಹಂಕಾರದಿಂದ ಅಹಂಕಾರ, ಚಿತ್ತದಿಂದ ಚಿತ್ತ, ಚೇತನದಿಂದ ಚೇತನ, ಹೀಗೆ ಹುಟ್ಟಿದಂತೆ ಪ್ರಾಣನಿಂದಲೂ ಐದು ದಾಸಪ್ರಾಣರು ಹುಟ್ಟಿದ್ದಾರೆಂದು ತಿಳಿಯಬೇಕು.

ಪ್ರತಿಪದಾರ್ಥ -- ಯಥಾಹ ವೈ = ಯಾವ ರೀತಿಯಾಗಿ, ತೇಭ್ಯಃ = ಐದು ಮನಸ್ಸಿನ ಪ್ರಭೇದಗಳಿಂದ, ಮನಃ = ಮನಸ್ಸೆಂಬ ಇಂದ್ರಿಯವು, ಪಂಚಧಾ = ಐದು ಪ್ರಕಾರವುಳ್ಳದೆಂದು, ವ್ಯಪದಿಶ್ಯತೇ = ಕರೆಸಿಕೊಳ್ಳುತ್ತದೆ, ಮನಃ = ಮನಸ್ಸು, ಬುದ್ಧಿಃ = ಬುದ್ಧಿಯು, ಅಹಂಕಾರಃ = ಅಹಂಕಾರವು, ಚಿತ್ತಂ = ಚಿತ್ತವು, ಚೇತನಃ = ಚೇತನವು, ಇತಿ = ಎಂಬುದಾಗಿ, ಏತೇಭ್ಯಃ = ಈ ಐದರಿಂದ, ಪಂಚದಾಸಾಃ = ಐದು ಜ್ಞಾನಪ್ರಭೇದಗಳು, ಪ್ರಜಾಯಂತೇ = ಹುಟ್ಟುತ್ತವೆ. ಮನಸಃ = ಮನಸ್ಸಿನಿಂದ, ಮನಸೋ ವಾವ = ಮನಸ್ಸಿನಿಂದ, ಮನಃ = ಮನಸ್ಸು, ಬುದ್ಧೇಃ = ಬುದ್ಧಿಯಿಂದ, ಬುದ್ಧಿಃ = ಬುದ್ಧಿಯು, ಅಹಂಕಾರಾತ್ = ಅಹಂಕಾರದಿಂದ, ಅಹಂಕಾರಃ = ಅಹಂಕಾರವು, ಚಿತ್ತಾತ್ = ಚಿತ್ತದಿಂದ, ಚಿತ್ತಂ = ಚಿತ್ತವು, ಚೇತನಯಾ = ಚೇತನದಿಂದ, ಚೇತನ = ಚೇನತವು ಹುಟ್ಟುತ್ತದೆ. ಏವಂ = ಹೀಗೆ ತಿಳಿಯಬೇಕು. ಇತಿ = ಹೀಗೆ ಶ್ರುತಿ ಹೇಳುತ್ತಿದೆ.

ಇಲ್ಲಿಗೆ ಪಂಚವೃತ್ತ್ಯಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

## ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**तत्वप्रकाशिका – अत्र जगत्कारणे हरौ श्रुतिसमन्वयसिद्ध्यर्थं प्राणादिविषयश्रुतीनां विरोधपरिहारादस्ति शास्त्रादिसङ्गतिः । विष्णोर्जगत्कारणत्वे कथितः श्रुतिसमन्वयः प्राणादिविषयश्रुतीनां विरोधेनाप्रामाण्येऽनुपपन्नः स्यादित्यसौ निराकार्यः । मुख्यप्राणप्रसङ्गसन्निधापिताः प्राणादयोऽत्र विषयः । किं मुख्यप्राणस्य दासा उत तत्स्वरूपाणीति सन्देहः । संन्देहबीजं श्रुतिविगानं दर्शयन् पूर्वपक्षं च सूचयति – सर्व इति ।।**

ಈ ಅಧಿಕರಣದಲ್ಲಿ ಜಗತ್ಕಾರಣನಾದ ಶ್ರೀಹರಿಯಲ್ಲಿ ಸಕಲ ಶ್ರುತಿಗಳು ಸಮನ್ವಯವಾಗುತ್ತವೆ ಎಂಬ ಪ್ರಮೇಯವನ್ನು ಸಾಧಿಸುವುದಕ್ಕಾಗಿ ಪ್ರಾಣಾದಿವಿಷಯಕವಾದ ಶ್ರುತಿಗಳ ವಿರೋಧವನ್ನು ಪರಿಹಾರ ಮಾಡಲಾಗಿದೆ. ಆದ್ದರಿಂದ ಶಾಸ್ತ್ರ-ಅಧ್ಯಾಯ-ಪಾದ ಸಂಗತಿಗಳು ಇರುತ್ತವೆ.

ವಿಷ್ಣುವೇ ಜಗತ್ತಿಗೆ ಕಾರಣನಾಗಿದ್ದಾನೆಂಬ ವಿಷಯದಲ್ಲಿ ಶ್ರುತಿಸಮನ್ವಯವನ್ನು ಮಾಡಲಾಯಿತು. ಈ ವಿಷಯಕ್ಕೆ ಪ್ರಾಣಾದಿವಿಷಯಕವಾದ ಶ್ರುತಿಗಳ ವಿರೋಧವು ಬರುವುದರಿಂದ ಅಪ್ರಾಮಾಣ್ಯವು ಬರುವುದರಿಂದ ಅನುಪಪನ್ನವಾಗುತ್ತದೆ. ಆದ್ದರಿಂದ ಈ ವಿರೋಧವನ್ನು ಪರಿಹಾರ ಮಾಡಲೇಬೇಕು.

ಮುಖ್ಯಪ್ರಾಣನ ಸಂಬಂಧದಲ್ಲಿ ಶ್ರುತ್ಯುಕ್ತವಾದ ಪ್ರಾಣಾದಿಗಳೇ ಈ ಅಧಿಕರಣದ ವಿಷಯ. ಈ ಪ್ರಾಣಾದಿಗಳು ಮುಖ್ಯಪ್ರಾಣನ ದಾಸರೋ, ಅಥವಾ ಅವನ ಸ್ವರೂಪಭೂತರೋ? ಎಂಬುದು ಅಧಿಕರಣದ ಸಂದೇಹ. ಸಂದೇಹಕ್ಕೆ ಶ್ರುತಿಗಳ ಪರಸ್ಪರ ವಿರೋಧವೇ ಕಾರಣವಾಗಿದೆ. ಇದನ್ನು ತೋರಿಸುವ ಮೂಲಕ ಪೂರ್ವಪಕ್ಷವನ್ನು 'ಸರ್ವ' ಇತ್ಯಾದಿ ವಾಕ್ಯದಿಂದ ಸೂಚನೆ ಮಾಡುತ್ತಿದ್ದಾರೆ.

ವಿವರಣೆ - ಹಿಂದಿನ ಅಧಿಕರಣದಲ್ಲಿ ಎಲ್ಲ ಇಂದ್ರಿಯಗಳ ನಡುವೆ ಮುಖ್ಯಪ್ರಾಣನೇ ಶ್ರೇಷ್ಠನಾಗಿದ್ದಾನೆಂದು ಸಮರ್ಥಿಸಲಾಯಿತು. ಪ್ರಸಂಗ ಸಂಗತಿಯಿಂದ ಈಗ ಮುಖ್ಯಪ್ರಾಣನ ದಾಸರಾದ ಪಂಚಪ್ರಾಣಗಳು ಯಾರೆಂದು ವಿಚಾರ ಮಾಡಲಾಗಿದೆ. ಆದ್ದರಿಂದ ಈ ಅಧಿಕರಣಕ್ಕೆ ಅನಂತರ್ಯ ಸಂಗತಿಯು ಇರುತ್ತದೆ.

ವಾಸ್ತವಿಕವಾಗಿ ಮುಖ್ಯಪ್ರಾಣನಿಗೂ ಕೂಡ ಐದು ರೂಪಗಳಿವೆ. ಆದರೆ ಮುಖ್ಯಪ್ರಾಣನಿಗಿಂತ ಭಿನ್ನವಾದ ಪ್ರಾಣಗಳು ಯಾರು ಎಂದು ಇಲ್ಲಿ ವಿಚಾರ ಮಾಡುತ್ತಿರುವುದರಿಂದ 'ಪ್ರಸಂಗ ಸನ್ನಿಧಾಪಿತಾಃ' ಎಂಬ ಪದವನ್ನು ಪ್ರಯೋಗಿಸಿದ್ದಾರೆ.

**तत्वप्रकाशिका – श्रुतिर्दासत्वं स्वरूपत्वं च वक्तीति शेषः । तत्र प्राणादयो मुख्यप्राणदासाः । 'सर्वे वा एते मुख्यदासाः' इति श्रुतेः । न च श्रुत्यन्तरविरोधः । प्राणादयो मुख्यप्राणदासाः । तदाज्ञया कर्मकारित्वात् । यो यदाज्ञया कर्म करोति स तद्दासः यथा लोक इति युक्तियुक्तत्वात् । तथा च श्रुतिः । 'एष प्राण इतरान् प्राणान् पृथक् पृथगेव सन्निदत्ते' इत्यादि ।**

ಶ್ರುತಿಯು ಮುಖ್ಯಪ್ರಾಣನ ದಾಸರಾಗಿದ್ದಾರೆಂದು ಹೇಳುತ್ತಿದೆ. 'ಅವನ ಸ್ವರೂಪರಾಗಿದ್ದಾರೆ' ಎಂದೂ ಕೂಡ ಹೇಳುತ್ತಿದೆ ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು.

ಪ್ರಾಣಾದಿಗಳು ಮುಖ್ಯಪ್ರಾಣನ ದಾಸರಾಗಿದ್ದಾರೆ ಎಂಬುದು ಅಧಿಕರಣದ ಪೂರ್ವಪಕ್ಷ. 'ಸರ್ವೇ ವಾ ಏತೇ ಮುಖ್ಯದಾಸಾಃ' ಎಂಬ ಶ್ರುತಿಯು ಈ ವಿಷಯದಲ್ಲಿ ಆಧಾರವಾಗಿದೆ. ಇದಕ್ಕೆ ಬೇರೆ ಶ್ರುತಿಯ ವಿರೋಧವಿಲ್ಲ. ಏಕೆಂದರೆ ಪ್ರಾಣಾದಿಗಳು ಮುಖ್ಯಪ್ರಾಣನ ದಾಸರಾಗಿದ್ದಾರೆ. ಮುಖ್ಯಪ್ರಾಣನ ಆಜ್ಞೆಯಿಂದಲೇ ಸಕಲ ಕಾರ್ಯಗಳಲ್ಲಿ ತೊಡಗಿದ್ದಾರೆ. ಯಾರು ಯಾರ ಆಜ್ಞೆಯಿಂದ ಕೆಲಸವನ್ನು ಮಾಡುತ್ತಾರೋ, ಅವರು ಅವರ ದಾಸಾಗಿರುತ್ತಾರೆ ಎಂಬುದು ಲೋಕದಲ್ಲಿ ಕಂಡಿದೆ. ಈ ಯುಕ್ತಿಯಿಂದ ಶ್ರುತಿಯುಕ್ತವಾಗಿದೆ. ಇದನ್ನೇ ಶ್ರುತಿ ಹೀಗೆ ಹೇಳುತ್ತಿದೆ – 'ಏಷ ಪ್ರಾಣ ಇತರಾನ್ ಪ್ರಾಣಾನ್ ಪೃಥಕ್ ಪೃಥಗೇವ ಸನ್ನಿದತ್ತೇ' 'ಪ್ರಾಣನು ಬೇರೆ ಪ್ರಾಣರನ್ನು ಬೇರೆ ಬೇರೆ ರೀತಿಯಿಂದ ನಿಯಮನ ಮಾಡುತ್ತಾನೆ' ಇತ್ಯಾದಿಯಾಗಿ.

ವಿವರಣೆ – ಈ ಅಧಿಕರಣದಲ್ಲಿ ಎರಡು ಬಗೆಯ ಪೂರ್ವಪಕ್ಷವನ್ನು ಮಾಡುತ್ತಿದ್ದಾರೆ – (1) ಪಂಚಪ್ರಾಣರು ಮುಖ್ಯಪ್ರಾಣನ ದಾಸರು ಎಂದು. (2) ಪಂಚಪ್ರಾಣಗಳು ಮುಖ್ಯಪ್ರಾಣನ ಸ್ವರೂಪರೇ ಆಗಿದ್ದಾರೆ ಎಂದು. ಮೊದಲನೆಯ ಪೂರ್ವಪಕ್ಷವನ್ನು 'ತತ್ರಪ್ರಾಣಾದಯಃ' ಇತ್ಯಾದಿ ಟೀಕೆಯಿಂದ ಸಮರ್ಥನೆ ಮಾಡುತ್ತಿದ್ದಾರೆ. ಐದು ಬಗೆಯ ಪ್ರಾಣಾದಿಗಳು ಮುಖ್ಯಪ್ರಾಣನ ಆಜ್ಞೆಯನ್ನು ಅನುಸರಿಸಿ ಕರ್ತವ್ಯದಲ್ಲಿ ತೊಡಗಿದ್ದಾರೆ. ಆದ್ದರಿಂದ ಯಾರು ಯಾರ ಆಜ್ಞೆಯನ್ನು ಪರಿಪಾಲನೆ ಮಾಡುತ್ತಾರೋ, ಅವರು ಅವರ ದಾಸರಾಗಿರುತ್ತಾರೆಂಬ ಲೋಕನಿಯಮದಂತೆ ಪಂಚಪ್ರಾಣಗಳು ಮುಖ್ಯಪ್ರಾಣನ ದಾಸರಾಗಿದ್ದಾರೆಂಬುದು ಮೊದಲನೆಯ ಪೂರ್ವಪಕ್ಷದ ಅಭಿಪ್ರಾಯ.

**तत्वप्रकाशिका – मुख्यप्राणस्वरूपाणि चैतानि 'मुख्यस्यैव स्वरूपाणि प्राणाद्याः' इति श्रुतेः । नच सयुक्तिकश्रुतिविरोधः । प्राणादयो मुख्यप्राण(स्व) रूपाण्येव व्यक्तसद्गुणत्वादिति युक्तियुक्तत्वात् स्वरूपत्वश्रुतेरपि 'पायूपस्थेऽपानं चक्षुःश्रोत्रे मुखनासिकाभ्यां प्राणः स्वयं प्रतिष्ठते । मध्ये तु समान एष ह्येतद्धुतमन्नं समं नयति । तस्मादेताः सप्तार्चिषो भवन्ति' । 'नाडीसहस्राण्यासु व्यानश्चरत्यथैकयोर्ध्व उदानः पुण्येन पुण्यं लोकं नयति पापेन पापं पृथिव्यां या देवता सैषा पुरुषस्यापानमवष्टभ्य' इत्यादेः । न चैतद् व्यक्तसद्गुणत्वं दासेषु सम्भवति । उभयत्रापि तद्भावे स्वामिभृत्यभावानुपपत्तेः । एवं च श्रुतिद्वयस्यापि समानबलत्वेन विरुद्धत्वाचाप्रामाण्यम् । नचोभयं युक्तम् । वस्तुविकल्पा(पाता) भावादिति। अतो न विष्णौ जगत्कारणे श्रुतिसमन्वयो युक्त इति भावः ।**

ಅಥವಾ ಪ್ರಾಣಾದಿಗಳು ಮುಖ್ಯಪ್ರಾಣನ ಸ್ವರೂಪರೇ ಆಗಿದ್ದಾರೆಂದೇ ಪೂರ್ವಪಕ್ಷ. ಏಕೆಂದರೆ 'ಮುಖ್ಯಸ್ಯೈವ ಸ್ವರೂಪಾಣಿ ಪ್ರಾಣಾದ್ಯಾಃ' ಎಂಬ ಶ್ರುತಿಯು ಪ್ರಾಣಾದಿಗಳು ಮುಖ್ಯಪ್ರಾಣನ ಸ್ವರೂಪರೇ ಆಗಿದ್ದಾರೆಂದು ಹೇಳುತ್ತಿದೆ. ಈ ಶ್ರುತಿಗೆ ಹಿಂದೆ ಹೇಳಲ್ಪಟ್ಟ ಯುಕ್ತಿಸಹಿತವಾದ ಶ್ರುತಿಯ ವಿರೋಧವು ಬರುವುದಿಲ್ಲ. ಏಕೆಂದರೆ ಮುಖ್ಯಪ್ರಾಣನ ಸ್ವರೂಪವೇ ಆಗಿದ್ದಾರೆಂದು ಹೇಳುವ ಶ್ರುತಿಗೂ ಕೂಡ ಯುಕ್ತಿಯ ಸಹಾಯವಿರುತ್ತದೆ. ಅದು ಹೀಗೆ - 'ಪ್ರಾಣಾದಯಃ ಮುಖ್ಯಪ್ರಾಣಸ್ವರೂಪಾಣ್ಯೇವ ವ್ಯಕ್ತಸದ್ಗುಣತ್ವಾತ್' 'ಅಭಿವ್ಯಕ್ತವಾದ ಸದ್ಗುಣಗಳಿರುವುದರಿಂದ ಪ್ರಾಣಾದಿಗಳು ಮುಖ್ಯಪ್ರಾಣನ ಸ್ವರೂಪರೇ ಆಗಿರುತ್ತಾರೆ' ಎಂಬ ಅನುಮಾನದ ಸಹಾಯವನ್ನು ಶ್ರುತಿಯು ಹೊಂದಿದೆ. 'ಪಾಯೂಪಸ್ಥೇಽಪಾನಂ ಚಕ್ಷುः ಶ್ರೋತ್ರೇ ಮುಖನಾಸಿಕಾಭ್ಯಾಂ ಪ್ರಾಣಃ ಸ್ವಯಂ ಪ್ರತಿಷ್ಠತೇ । ಮಧ್ಯೇ ತು ಸಮಾನ ಏಷ ಹ್ಯೇತದ್ಧುತಮನ್ನಂ ಸಮಂ ನಯತಿ । ತಸ್ಮಾದೇತಾಃ ಸಪ್ತಾರ್ಚಿಷೋ ಭವಂತಿ । ನಾಡೀಸಹಸ್ರಾಣ್ಯಾಸು ವ್ಯಾನಶ್ಚರತ್ಯಥೈಕಯೋರ್ಧ್ವ ಉದಾನಃ ಪುಣ್ಯೇನ ಪುಣ್ಯಂ ಲೋಕಂ ನಯತಿ ಪಾಪೇನ ಪಾಪಂ ಪೃಥಿವ್ಯಾಂ ಯಾ ದೇವತಾ ಸೈಷಾ ಪುರುಷಸ್ಯಾಪಾನಮವಷ್ಟಭ್ಯಃ' ।'

'ಪಾಯು ಇಂದ್ರಿಯ ಗುಹ್ಯೇಂದ್ರಿಯಗಳಲ್ಲಿ ಅಪಾನನು ಇರುತ್ತಾನೆ. ಕಣ್ಣು, ಕಿವಿ, ಮುಖ ಮತ್ತು ಮೂಗು ಇವುಗಳಲ್ಲಿ ಪ್ರಾಣನು ಸ್ವತಃ ನೆಲೆಸಿರುತ್ತಾನೆ. ಇವುಗಳ ಮಧ್ಯದಲ್ಲಿ ಸಮಾನನು ಇರುತ್ತಾನೆ. ಇವನು ತಿಂದಿರುವ ಅನ್ನವನ್ನು ಸಕಲ ಶರೀರದಲ್ಲಿ ಸಮವಾಗಿ ತೆಗೆದುಕೊಂಡು ಹೋಗುತ್ತಾನೆ. ಆದ್ದರಿಂದ ಏಳು ಜ್ಞಾನೇಂದ್ರಿಯಗಳ ಪ್ರವೃತ್ತಿಯಾಗುತ್ತದೆ. ಈ ಶರೀರದಲ್ಲಿ ಸಾವಿರ ನಾಡಿಗಳಿವೆ. ಅವುಗಳಲ್ಲಿ ವ್ಯಾನನು ಸಂಚರಿಸುತ್ತಾನೆ. ಇವುಗಳಲ್ಲಿ ಮಧ್ಯದ ನಾಡಿಯೇ ಸುಷುಮ್ನಾ ಎಂದು ಕರೆಸಿಕೊಳ್ಳುತ್ತದೆ. ಇದು ಊರ್ಧ್ವಗತಿವುಳ್ಳದ್ದು. ಈ ಸುಷುಮ್ನಾ ನಾಡಿಯಲ್ಲಿ ಉದಾನನು ಸಂಚಾರ ಮಾಡುತ್ತಾನೆ. ಮತ್ತು ಆಯಾ ಜೀವರಲ್ಲಿ ಪುಣ್ಯದಿಂದ ಪುಣ್ಯಲೋಕಕ್ಕೆ, ಪಾಪದಿಂದ ಪಾಪಲೋಕಕ್ಕೆ ತೆಗೆದುಕೊಂಡು ಹೋಗುತ್ತಾನೆ. ಪೃಥಿವಿಯನ್ನು ಧಾರಣೆ ಮಾಡಿದ ಅಪಾನನೇ ದೇಹದಲ್ಲಿರುವ ಅಪಾನ ವಾಯುವಿನ ಧಾರಕನಾಗಿದ್ದಾನೆ'.

ಇಂತಹ ಪ್ರಸಿದ್ಧವಾದ ಉತ್ತಮ ಗುಣವು ದಾಸಪ್ರಾಣರಲ್ಲಿ ಬರಲು ಸಾಧ್ಯವೇ ಇಲ್ಲ. ಇಬ್ಬರಲ್ಲೂ ಸಮಾನವಾಗಿ ಗುಣವಿದ್ದಾಗ ಒಬ್ಬನು ಸ್ವಾಮಿ ಎಂದು, ಇನ್ನೊಬ್ಬನು ಭೃತ್ಯನೆಂದು ಕರೆಸಿಕೊಳ್ಳಲು ಸಾಧ್ಯವಿಲ್ಲ.

ಆದ್ದರಿಂದ ಎರಡೂ ಶ್ರುತಿಗಳು ಸಮಾನಬಲವುಳ್ಳದ್ದರಿಂದ ಪರಸ್ಪರ ವಿರುದ್ಧವಾಗುತ್ತವೆ. ಹಾಗಾಗಿ ಅಪ್ರಮಾಣವೆಂದೇ ಹೇಳಬೇಕು.

ದಾಸತ್ವ ಹಾಗೂ ಸ್ವರೂಪತ್ವಗಳೆರಡು ಒಂದೇ ಕಡೆ ಇರಲು ಸಾಧ್ಯವಿಲ್ಲ. ಏಕೆಂದರೆ ವಸ್ತುವಿನಲ್ಲಿ ದ್ವಿರೂಪತ್ವವು ಕೂಡುವುದೇ ಇಲ್ಲ.

ಆದ್ದರಿಂದ ಜಗತ್ಕಾರಣನಾದ ವಿಷ್ಣುವಿನಲ್ಲಿ ಶ್ರುತಿಸಮನ್ವಯವು ಅಸಂಭಾವಿತವಾಗುತ್ತದೆ. ಇಷ್ಟು ಅಧಿಕರಣದ ಪೂರ್ವಪಕ್ಷ.

ವಿವರಣೆ – ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನರಲ್ಲಿ ಒಂದೊಂದು ಗುಣಗಳು ಸ್ಪಷ್ಟವಾಗಿ ಗೋಚರಿಸುತ್ತಿವೆ.

೧) ಪ್ರಾಣ – ಚಕ್ಷುಸ್ಸು, ಶ್ರೋತ್ರ, ಮುಖ, ನಾಸಿಕಗಳಲ್ಲಿ ಪ್ರಾಣನು ಸ್ವತಃ ನೆಲೆಸಿ ಎಲ್ಲವನ್ನೂ ನಿಯಂತ್ರಣ ಮಾಡುತ್ತಿದ್ದಾನೆ. ಇವನಲ್ಲಿ ನಿಯಂತೃತ್ವ ಎಂಬ ಗುಣವು ಸ್ಪಷ್ಟವಾಗಿದೆ.

೨) ಅಪಾನ – ಪಾಯು ಮತ್ತು ಉಪಸ್ಥೇಂದ್ರಿಯಗಳಲ್ಲಿ ಅಪಾನನು ನೆಲೆಸಿದ್ದರಿಂದ ಈ ಎರಡು ಇಂದ್ರಿಯಗಳ ನಿಯಂತೃತ್ವ ಗುಣವು ಅಪಾನನಲ್ಲಿ ಸ್ಪಷ್ಟವಾಗಿದೆ.

೩) ವ್ಯಾನ – ಸಾವಿರ ನಾಡಿಗಳಲ್ಲಿ ಸಂಚರಿಸುವಿಕೆ ಎಂಬ ಗುಣವು ವ್ಯಾನನಲ್ಲಿ ಸ್ಪಷ್ಟವಾಗಿದೆ.

೪) ಉದಾನ – ಊರ್ಧ್ವಲೋಕ ಮತ್ತು ಅಧೋಲೋಕಗಳಲ್ಲಿ ಕಂಡೊಯ್ಯುವಿಕೆ ಎಂಬ ಗುಣವು ಉದಾನನಲ್ಲಿ ಸ್ಪಷ್ಟವಾಗಿದೆ.

೫) ಸಮಾನ – ತಿನ್ನಲ್ಪಟ್ಟ ಅನ್ನವನ್ನು ಶರೀರದ ಎಲ್ಲಾ ಭಾಗಗಳಲ್ಲಿಯೂ ಸಮಾನವಾಗಿ ಕೊಂಡೊಯ್ಯುವುದರಿಂದ ಸಮನೇತೃತ್ವ ಎಂಬ ಗುಣವು ಸಮಾನನಲ್ಲಿ ಸ್ಪಷ್ಟವಾಗಿದೆ.

**तत्वप्रकाशिका – सिद्धान्तयत्सूत्रमवतार्य तस्य स्पष्टार्थत्वात्तदुपात्तश्रुतिमेवोदाहरति ।। अति इति ।। न केवलं प्राणादयो मुख्यदासा एवापि तु तद्वृत्तयोऽपि । न च वस्तुविकल्पप्रसङ्गः । पृथगुभयविधाभ्युपगमात् । अत एव न श्रुतीनां युक्तियुक्तानामविरोधादप्रामाण्यम् । कुत एतत् । यतो मनोदृष्टान्तेन पञ्चदासवान् पञ्चवृत्तिश्च मुख्यप्राणो व्यपदिश्यतेऽत एवेति भावः।**

ಸಿದ್ಧಾಂತ ಸ್ಥಾಪಕವಾದ ಸೂತ್ರಕ್ಕೆ ಅವತಾರಿಕೆ ನೀಡಿ ಸೂತ್ರಾರ್ಥವು ಸ್ಪಷ್ಟವಾಗಿರುವುದರಿಂದ ಸೂತ್ರಗೃಹೀತವಾದ ಶ್ರುತಿಯನ್ನು 'ಅತಃ' ಇತ್ಯಾದಿಯಾಗಿ ಉಲ್ಲೇಖ ಮಾಡುತ್ತಿದ್ದಾರೆ.

ಪ್ರಾಣಾದಿಗಳು ಮುಖ್ಯಪ್ರಾಣನ ದಾಸರಾಗಿದ್ದಾರೆಂಬುದಷ್ಟೇ ಅಲ್ಲ. ಮುಖ್ಯಪ್ರಾಣನ ಸ್ವರೂಪಭೂತರೂ ಕೂಡ ಆಗಿರುತ್ತಾರೆ. ಇದರಿಂದ ವಸ್ತುವಿನಲ್ಲಿ ದ್ವಿರೂಪತ್ವವು ಬರುತ್ತದೆಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ಏಕೆಂದರೆ ದಾಸಪ್ರಾಣರೇ ಬೇರೆ ಮುಖ್ಯಪ್ರಾಣಸ್ವರೂಪಭೂತರಾದ ಪಂಚಪ್ರಾಣಗಳೇ ಬೇರೆ ಎಂದು ಅಂಗೀಕರಿಸಿದ್ದೇವೆ. ಆದ್ದರಿಂದಲೇ ಯುಕ್ತಿಸಹಿತವಾದ ಶ್ರುತಿಗಳಲ್ಲಿ

ಪರಸ್ಪರ ವಿರೋಧಕ್ಕೆ ಅವಕಾಶವಿಲ್ಲ. ಆದ್ದರಿಂದ ಅವುಗಳಿಗೆ ಅಪ್ರಾಮಾಣ್ಯವೂ ಕೂಡ ಬರುವುದಿಲ್ಲ. ಹೀಗೆ ಎರಡು ಪಕ್ಷಗಳನ್ನು ಒಪ್ಪಲು ಏನು ಪ್ರಮಾಣ ? ಎಂದರೆ ಮನಸ್ಸಿನ ದೃಷ್ಟಾಂತದಿಂದ ಮುಖ್ಯಪ್ರಾಣನಿಗೆ ಐದು ಮಂದಿ ದಾಸಪ್ರಾಣರು ಇದ್ದಾರೆಂಬುದು ಹಾಗೂ ತನಗೂ ಐದು ಸ್ವರೂಪಗಳು ಇದೆ ಎಂಬುದು ಯುಕ್ತವಾಗುತ್ತದೆ. ಇದು ಶ್ರುತಿಯ ಅಭಿಪ್ರಾಯವೆಂದು ತಿಳಿಯಬೇಕು.

ವಿವರಣೆ – ಸಕಲ ಇಂದ್ರಿಯಗಳಿಗೆ ಒಡೆಯನಾದ ಮುಖ್ಯಪ್ರಾಣನು ಐದು ರೂಪಗಳನ್ನು ಉಳ್ಳವನಾಗಿದ್ದಾನೆ. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂದು. ಆದ್ದರಿಂದ ಪ್ರಾಣಾದಿಗಳು ಮುಖ್ಯಪ್ರಾಣನ ಸ್ವರೂಪಭೂತವೆಂಬ ಪಕ್ಷವು ಸಾಧುವಾಗಿದೆ. ಇದರಂತೆ ಇದೇ ಹೆಸರಿನ ಐದು ಮಂದಿ ದಾಸ ಪ್ರಾಣರೂ ಇದ್ದಾರೆ. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ ಹೆಸರಿನಲ್ಲಿಯೇ ಇರುವ ಇವರು ಮುಖ್ಯಪ್ರಾಣನ ದಾಸರಾಗಿದ್ದಾರೆ. ಪೂರ್ವಪಕ್ಷವನ್ನು ಮಾಡುವಾಗ ದಾಸಪ್ರಾಣರನ್ನು ಹಾಗೂ ಮುಖ್ಯಪ್ರಾಣರ ಸ್ವರೂಪಭೂತವಾದ ಐದು ಪ್ರಾಣಗಳ ರೂಪವನ್ನು ಒಂದೇ ಎಂದು ವಿವಕ್ಷಿಸಿ ಆಕ್ಷೇಪ ಮಾಡಲಾಗಿತ್ತು. ಆದರೆ ದಾಸಪ್ರಾಣರೇ ಬೇರೆ. ಮುಖ್ಯಪ್ರಾಣನ ಸ್ವರೂಪಭೂತವಾದ ಪಂಚರೂಪಗಳೇ ಬೇರೆ ಎಂಬುದೇ ನಮ್ಮ ಸಿದ್ಧಾಂತವಾಗಿದೆ. ಆದ್ದರಿಂದ ವಸ್ತುವಿನಲ್ಲಿ ವಿಕಲ್ಪವು ಬರಲಿ ? ಎಂಬ ಆಕ್ಷೇಪಕ್ಕೂ ಅವಕಾಶವಿಲ್ಲ. ಶ್ರುತಿಗಳಲ್ಲಿ ಪರಸ್ಪರ ವಿರೋಧ ಬರುವುದರಿಂದ ಅಪ್ರಾಮಾಣ್ಯ ಬರುತ್ತದೆಂಬ ಆಕ್ಷೇಪಕ್ಕೂ ಅವಕಾಶವಿಲ್ಲ.

**तत्वप्रकाशिका – सङ्कल्पविकल्परूपं मनः निश्चयरूपा बुद्धिः । अस्वरूपे स्वरूपमतिरहङ्कारः । स्मरणहेतुश्चित्तम् । चेतसो व्याप्तिश्चेतना । नच प्राणादीनां मुख्यदासत्वे व्यक्तसद्गुणत्वविरोधः । दासानामपि तदुपपत्तेः । नच स्वामिभृत्यभावानुपपत्तिः । मुख्यप्राणस्य ततोऽधिकव्यक्तसद्गुणतया तदुपपत्तेः।**

ಮನಸ್ಸು ಸಂಕಲ್ಪ ವಿಕಲ್ಪಾತ್ಮಕವಾಗಿದೆ. ಬುದ್ಧಿಯು ನಿಶ್ಚಯರೂಪವಾಗಿದೆ. ನಮ್ಮ ಸ್ವರೂಪವಲ್ಲದ್ದರಲ್ಲಿ ನಮ್ಮದು ಎಂಬ ಭಾವನೆಯೇ ಅಹಂಕಾರ ಎನಿಸಿಕೊಳ್ಳುತ್ತದೆ. ಚಿತ್ತವು ಸ್ಮರಣಗೆ ಕಾರಣವಾಗಿದೆ. ಅಂತಃಕರಣದ ವ್ಯಾಪ್ತಿ ಎನಿಸಿದ ಚೇತಸ್ಸೇ ಚೇತನವೆಂದು ಕರೆಸಿಕೊಳ್ಳುತ್ತದೆ.

ಪ್ರಾಣಾದಿಗಳು ಮುಖ್ಯಪ್ರಾಣನ ದಾಸರೆಂದರೆ ಆ ಪ್ರಾಣಾದಿಗಳಲ್ಲಿರುವ ಸ್ಪಷ್ಟವಾದ ಸದ್ಗುಣತ್ವದ ವಿರೋಧವು ಬರುತ್ತದೆಂದು ಶಂಕಿಸಬಾರದು. ದಾಸಪ್ರಾಣರಲ್ಲಿಯೂ ಕೂಡ ಅಂತಹ ಉತ್ತಮ ಗುಣಗಳು ಉಪಪನ್ನವಾಗುತ್ತವೆ.

ಹಾಗಾದರೆ ಸ್ವಾಮಿಭೃತ್ಯಭಾವವು ಹೇಗೆ ಕೂಡುತ್ತದೆ ? ಎಂದು ಪ್ರಶ್ನಿಸಬಾರದು. ದಾಸಪ್ರಾಣರಿಗಿಂತಲೂ ಕೂಡ ಮುಖ್ಯಪ್ರಾಣನಲ್ಲಿ ಅಧಿಕವಾಗಿ ಸದ್ಗುಣಗಳಿರುವುದರಿಂದ ಸ್ವಾಮಿಭೃತ್ಯಭಾವ ಉಪಪನ್ನವಾಗುತ್ತದೆ.

ವಿವರಣೆ – ಭಾಷ್ಯದಲ್ಲಿ ಮನಸ್ಸಿನ ದೃಷ್ಟಾಂತವನ್ನು ನೀಡಿ, ಪ್ರಾಣಾಪಾನಾದಿ ಐದುರೂಪಗಳನ್ನು ಹೊಂದಿದ್ದಾನೆ. ಹಾಗೂ ಅದೇ ಹೆಸರಿನಲ್ಲಿ ಐದು ಮಂದಿ ದಾಸರೂ ಕೂಡ ಇದ್ದಾರೆಂದು ಸಮರ್ಥಿಸಲಾಗಿದೆ. ಮನಸ್ಸು ಈ ವಿಷಯದಲ್ಲಿ ಹೇಗೆ ದೃಷ್ಟಾಂತವಾಗುತ್ತದೆಂಬುದನ್ನು ಪ್ರಕೃತ ಸಮರ್ಥನೆ ಮಾಡುತ್ತಿದ್ದಾರೆ. ಮನಸ್ಸು ಒಟ್ಟು ಐದು ವಿಧವಾಗಿದೆ. (1) ಮನಸ್ಸು, (2) ಬುದ್ಧಿ, (3) ಅಹಂಕಾರ, (4) ಚಿತ್ತ, (5) ಚೇತನ ಎಂದು. ಈ ಐದು ವಿಧವಾದ ಮನಸ್ಸಿನಿಂದ ಅದೇ ಹೆಸರಿನ ಐದು ಜ್ಞಾನ ಪ್ರಭೇದಗಳಿವೆ. ಅದು ಹೀಗೆ – (1) ಸಂಕಲ್ಪ ವಿಕಲ್ಪಾತ್ಮಕವಾದ ಸಂಶಯಾತ್ಮಕವಾದದ್ದು ಮನಸ್ಸು. ಇದಕ್ಕೆ ಕಾರಣವಾದ

ಇಂದ್ರಿಯವೂ ಕೂಡ ಮನಸ್ಸು ಎಂದೇ ಕರೆಸಿಕೊಳ್ಳುತ್ತದೆ. (2) 'ಇದಮಿತ್ಥಂ' ಎಂದು ನಿಶ್ಚಯವನ್ನು ತಂದುಕೊಡುವುದೇ ಬುದ್ಧಿ. ಅದಕ್ಕೆ ಕಾರಣವಾದ ಇಂದ್ರಿಯಕ್ಕೂ ಕೂಡ ಬುದ್ಧಿ ಎಂದೇ ಹೆಸರು. (3) 'ಅಸ್ವರೂಪೇ ಸ್ವರೂಪಮತಿಃ' ತಾನು ಸ್ವತಂತ್ರನಲ್ಲದಿದ್ದರೂ ಸ್ವತಂತ್ರನೆಂದು ತಿಳಿಯುವುದೇ ಅಹಂಕಾರ. ಇದಕ್ಕೆ ಕಾರಣವಾದ ಇಂದ್ರಿಯವೂ ಕೂಡ ಅಹಂಕಾರವೆಂದು ಕರೆಸಿಕೊಳ್ಳುತ್ತದೆ. (4) ಸಕಲ ಪದಾರ್ಥಗಳ ಸ್ಮರಣೆಯೇ ಚಿತ್ತ. ಅದಕ್ಕೆ ಕಾರಣವಾದ ಇಂದ್ರಿಯಕ್ಕೂ ಕೂಡ ಚಿತ್ತ ಎಂದೇ ಹೆಸರು. (5) ಬಹುಸ್ಮರಣ ಶಕ್ತಿಯೇ ಚೇತನ. ಇದಕ್ಕೆ ಆಧಾರವಾದ ಇಂದ್ರಿಯವೂ ಕೂಡ ಚೇತನ ಎಂದು ಕರೆಸಿಕೊಳ್ಳುತ್ತದೆ. ಇದೇ ರೀತಿಯಲ್ಲಿ ಮುಖ್ಯಪ್ರಾಣನ ಐದುರೂಪವನ್ನು ಆಶ್ರಯಿಸಿಕೊಂಡಿರುವ ದಾಸರೂ ಕೂಡ ಪ್ರಾಣಾಪಾನಾದಿ ಹೆಸರಿನಿಂದಲೇ ಕರೆಸಿಕೊಳ್ಳುತ್ತಾರೆ.

**तत्वप्रकाशिका – 'अशेषगुणपूर्णानि मुख्यरूपाणि पञ्च च । तद्दासाः पञ्च चान्येऽपि प्राणाद्याः सद्गुणैर्युताः' । इति श्रुतेः । दासानुपक्रम्य सद्गुणत्वोक्तेर्न श्रुतेर्मुख्यप्राणविषयत्वम् । अतः श्रुत्यविरोदेन प्राणादिस्वरूपसिद्धेर्युक्तो जगत्कारणे ब्रह्मणि श्रुतिसमन्वय इति सिद्धम् ॥**

'ಅಶೇಷಗುಣಪೂರ್ಣಾನಿ ಮುಖ್ಯರೂಪಾಣಿ ಪಂಚ ಚ ।
ತದ್ದಾಸಾಃ ಪಂಚ ಚಾನ್ಯೇऽಪಿ ಪ್ರಾಣಾದ್ಯಾಃ ಸದ್ಗುಣೈರ್ಯುತಾಃ ॥

ಮುಖ್ಯಪ್ರಾಣನ ಐದು ರೂಪಗಳು ಶ್ರೇಷ್ಠವಾದ ಗುಣಗಳಿಂದ ಯುಕ್ತವಾಗಿವೆ. ಮತ್ತು ಅವರ ದಾಸರೆನಿಸಿದ ಪಂಚಪ್ರಾಣಗಳೂ ಕೂಡ ಇವನಿಗಿಂತ ಕಡಿಮೆ ಮಟ್ಟದಲ್ಲಿ ಇದೇ ಗುಣಗಳಿಂದ ಯುಕ್ತರಾಗಿರುತ್ತಾರೆ. ಹೀಗೆ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ.

ದಾಸಪ್ರಾಣಗಳನ್ನು ಉಪಕ್ರಮ ಮಾಡಿ ಉತ್ತಮಗುಣಗಳನ್ನು ಹೇಳಿರುವುದರಿಂದ ಈ ಶ್ರುತಿಯು ಮುಖ್ಯಪ್ರಾಣ ವಿಷಯವೆಂದು ಹೇಳಬಾರದು.

ಆದ್ದರಿಂದ ಶ್ರುತಿಗಳಿಗೆ ಯಾವುದೇ ವಿರೋಧವಿಲ್ಲದೇ ಪ್ರಾಣಾದಿಗಳ ಸ್ವರೂಪವು ಸಿದ್ಧವಾಗುತ್ತದೆ. ಆದ್ದರಿಂದ ಜಗತ್ಕಾರಣನಾದ ಮಹಾವಿಷ್ಣುವಿನಲ್ಲಿ ಶ್ರುತಿಸಮನ್ವಯವು ಯುಕ್ತವೆಂದು ಸಾಧಿತವಾಯಿತು.

ವಿವರಣೆ - 'ಪಾಯೂಪಸ್ಥೇ ಅಪಾನಂ' ಎಂಬುದಾಗಿ ಸ್ಪಷ್ಟವಾದ ಸದ್ಗುಣತ್ವವನ್ನು ಪ್ರತಿಪಾದನೆ ಮಾಡುವ ಯಾವ ಶ್ರುತಿ ಇದೆಯೋ, ಅದು ಮುಖ್ಯಪ್ರಾಣನನ್ನೇ ಪ್ರತಿಪಾದನೆ ಮಾಡುತ್ತಿದೆ. ದಾಸಪ್ರಾಣರನ್ನು ಪ್ರತಿಪಾದನೆ ಮಾಡುತ್ತಿಲ್ಲ. ಆದ್ದರಿಂದ ಸದ್ಗುಣದ್ವೈವಿಧ್ಯವನ್ನು ಏಕೆ ಕಲ್ಪನೆ ಮಾಡಬೇಕು? ಎಂದು ಪ್ರಶ್ನೆ ಬರುತ್ತದೆ. ಆದರೆ ಇದು ಸರಿಯಲ್ಲ. ಏಕೆಂದರೆ 'ಇತರಾನ್ ಪ್ರಾಣಾನ್ ಪೃಥಕ್ ಪೃಥಕ್ ಏವ ಸನ್ನಿಧತ್ತೇ' ಎಂದು ದಾಸಪ್ರಾಣರನ್ನು ಹೇಳಿ ಅನಂತರದಲ್ಲಿ ಪಾಯೂಪಾಸ್ಥೇ ಅಪಾನಂ' ಎಂದು ಸದ್ಗುಣತ್ವವನ್ನು ಹೇಳಲಾಗಿದೆ. ಹಾಗಾಗಿ ಪಾಯೂಪಸ್ಥೇ ಅಪಾನಂ' ಎಂಬ ಶ್ರುತಿಯು ಮುಖ್ಯಪ್ರಾಣಸ್ವರೂಪವನ್ನು ಪ್ರತಿಪಾದನೆ ಮಾಡಲು ಹೊರಟಿಲ್ಲ. ದಾಸಪ್ರಾಣರ ಬಗ್ಗೆ ಹೇಳಲು ಹೊರಟಿದೆ. ಆದ್ದರಿಂದ ಶ್ರುತಿವಿರೋಧಕ್ಕೆ ಅವಕಾಶವೇ ಇಲ್ಲ ಎಂದಭಿಪ್ರಾಯ.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಪಂಚವೃತ್ತ್ಯಧಿಕರಣ ಮುಗಿಯಿತು

ಪರಿಪೂರ್ಣಚಂದ್ರಿಕಾ

ಪಂಚವೃತ್ತ್ಯಧಿಕರಣ
(೨-೪-೮)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## पञ्चवृत्त्यधिकरणम्

### ಮನಸ್ಸಿನಂತೆ ಮುಖ್ಯಪ್ರಾಣನಿಗೂ ಪ್ರಾಣಾದಿ ಐದುರೂಪಗಳಿವೆ

**।। पञ्चवृत्तिर्मनोवद्व्यपदिश्यते ।। सङ्गतिं सूचयति ।। मुख्यप्राणप्रसङ्गसंनिधापिता इति ।।**

ಈ ಅಧಿಕರಣದ ಸಂಗತಿಯನ್ನು ಟೀಕೆಯಲ್ಲಿ 'ಮುಖ್ಯಪ್ರಾಣಪ್ರಸಂಗಸನ್ನಿಧಾಪಿತಾಃ' ಎಂಬುದರಿಂದ ಸೂಚನೆ ಮಾಡಿದ್ದಾರೆ. ಮುಖ್ಯಪ್ರಾಣನ ಪ್ರಸಂಗದಿಂದ ಸನ್ನಿಹಿತರಾದ ಪ್ರಾಣ, ಅಪಾನ ಮೊದಲಾದವರು ಈ ಅಧಿಕರಣಕ್ಕೆ ವಿಷಯಭೂತರಾಗಿದ್ದಾರೆ.

**अत्र श्रुतिसमन्वयेनोक्तं ब्रह्मणःसर्वस्रष्टृत्वादिकमयुक्तं न वेति चिन्ता । तदर्थं श्रुतिरप्रमाणमुत नेति । तदर्थं प्राणादेर्मुख्यप्राणस्वरूपत्वतद्दासत्वश्रुती किं परस्परविरुद्धे उत नेति । तदर्थं श्रुतिद्वयमप्येकप्राणादिविषयमुत भिन्नप्राणादिविषयमिति ।।**

ಜನ್ಮಾದ್ಯಧಿಕರಣದಲ್ಲಿ ಶ್ರುತಿ ಸಮನ್ವಯದ ಮೂಲಕ ಸರ್ವಸ್ರಷ್ಟೃತ್ವವು ಬ್ರಹ್ಮನಿಗೆ ಯುಕ್ತವಾಗುತ್ತದೆಂದು ತಿಳಿಸಲಾಯಿತು. ಈ ಪ್ರಮೇಯವು ಅಯುಕ್ತವೋ, ಅಲ್ಲವೋ? ಎಂಬುದು ಈ ಅಧಿಕರಣದ ಮುಖ್ಯ ವಿಚಾರ. ಇದಕ್ಕೆ ಪೂರಕವಾಗಿ ಶ್ರುತಿಯು ಅಪ್ರಮಾಣವೋ, ಅಲ್ಲವೋ? ಎಂಬ ವಿಚಾರ ಮಾಡಬೇಕು. ಅದಕ್ಕಾಗಿ ಪ್ರಾಣಾಪಾನಾದಿಗಳಿಗೆ ಮುಖ್ಯಪ್ರಾಣ ಸ್ವರೂಪತ್ವವನ್ನು ಹೇಳುವ ಶ್ರುತಿಗೆ ಹಾಗೂ ಪ್ರಾಣಾಪಾನಾದಿಗಳಿಗೆ ಮುಖ್ಯಪ್ರಾಣನ ದಾಸ್ಯತ್ವವನ್ನು ಹೇಳುವ ಶ್ರುತಿಗೆ ಪರಸ್ಪರ ವಿರೋಧವಿದೆಯೋ ಅಥವಾ ಇಲ್ಲವೋ? ಎಂಬ ವಿಚಾರವನ್ನು ಮಾಡಬೇಕು. ಅದಕ್ಕಾಗಿ ಎರಡೂ ಶ್ರುತಿಗಳು ಒಂದೇ ಪ್ರಾಣಾಪಾನಾದಿಗಳನ್ನು ವಿಷಯೀಕರಿಸುತ್ತಿವೆ ಎಂದು ಹೇಳಬೇಕೋ ಅಥವಾ ಬೇರೆ ಬೇರೆ ಪ್ರಾಣಾಪಾನಾದಿಗಳನ್ನು ವಿಷಯೀಕರಿಸುತ್ತಿವೆ ಎಂದು ಹೇಳಬೇಕೋ? ಎಂಬ ಸಂಶಯವು ಪರಿಹಾರವಾಗಬೇಕು.

**तदाज्ञया कर्मकारित्वादिति ।। प्राणादीनां कर्माणि**
**प्राणापानाविडायाञ्च पिङ्गलायाञ्च वर्ततः ।**
**व्यानःसन्धिषु सर्वत्र उदानो ब्रह्मनाडिगः ।**
**सर्वत्रैव समानस्तु समश्चरति सर्वगः ।।**
**इति भारतवचानाज्ज्ञेयानि ।**

ಟೀಕೆಯಲ್ಲಿ 'ತದಾಜ್ಞಯಾ ಕರ್ಮಕಾರಿತ್ವಾತ್' ಎಂದು ಹೇಳಿದ್ದಾರೆ. ಇದರ ಅಭಿಪ್ರಾಯವನ್ನು ಹೀಗೆ ತಿಳಿಯಬೇಕು. ಪ್ರಾಣಾಪಾನಾದಿಗಳು ಮುಖ್ಯಪ್ರಾಣನ ದಾಸರೇ ಆಗಿದ್ದಾರೆ. ಏಕೆಂದರೆ ಅವನ ಆಜ್ಞಾನುಸಾರವಾಗಿ ಕರ್ಮಗಳನ್ನು ಮಾಡುತ್ತಾರೆ. ಈ ವಿಷಯದಲ್ಲಿ ಮಹಾಭಾರತದ ವಚನ ಹೀಗಿದೆ–

ಪ್ರಾಣಾಪಾನಾವಿಡಾಯಾಂಚ ಪಿಂಗಲಾಯಾಂಚ ವರ್ತತಃ ।
ವ್ಯಾನಃಸಂಧಿಷು ಸರ್ವತ್ರ ಉದಾನೋ ಬ್ರಹ್ಮನಾಡಿಗಃ ।
ಸರ್ವತ್ರೈವ ಸಮಾನಸ್ತು ಸಮಶ್ಚರತಿ ಸರ್ವಗಃ ॥

ಇಡಾನಾಡಿಯಲ್ಲಿ ಪ್ರಾಣನು, ಪಿಂಗಲಾನಾಡಿಯಲ್ಲಿ ಅಪಾನನು, ಎಲ್ಲಾ ಸಂಧಿಗಳಲ್ಲಿ ವ್ಯಾನನು, ಬ್ರಹ್ಮನಾಡಿಯಲ್ಲಿ ಉದಾನನು, ಎಲ್ಲೆಡೆಯೂ ಸಮಾನನು ಸಂಚಾರವನ್ನು ಮಾಡುವನು ಎಂದು. ಈ ದಾಸಪ್ರಾಣರು ಮುಖ್ಯಪ್ರಾಣನ ಅಧೀನರಾಗಿದ್ದಾರೆ.

**''अतस्तदाज्ञयाः'' इति पूर्वपक्षभाष्ये मुख्यदासत्वे उक्तयुक्तेः, ''प्राणदिपञ्चकस्य व्यक्तसद्गुणत्वान्मुख्यप्राणवृत्तित्वम्'' इति न्यायविवरणे च मुख्यप्राणस्वरूपत्वे युक्तयुक्तेरुभयानुसरणाय ''एवं श्रुतिद्वयस्यापि समानबलत्वात्'' इति टीकायां श्रुत्योःसाम्येनानध्यवसायपूर्वपक्षो दर्शितः ।। चेतसो व्याप्तिश्चेतनेति ।। ''बहुस्मरणशक्तिस्तु चेतनेत्यभिधीयते'' इति वचनम् ।**

'ಅತಃ ತದಾಜ್ಞಯಾ' ಎಂಬ ಪೂರ್ವಪಕ್ಷಭಾಷ್ಯದಲ್ಲಿ ಪ್ರಾಣಾಪಾನಾದಿಗಳು ಮುಖ್ಯಪ್ರಾಣನ ದಾಸರಾದ್ದರಿಂದ ಅವನ ಆಜ್ಞೆಯಿಂದ ತಮ್ಮ ಕೆಲಸವನ್ನು ನಿರಂತರ ಮಾಡುತ್ತಾರೆ ಎಂಬ ಯುಕ್ತಿಯಿಂದ ಹೇಳಲಾಗಿದೆ. 'ಪ್ರಾಣಾದಿ ಪಂಚಕಸ್ಯ ವ್ಯಕ್ತಸದ್ಗುಣತ್ವಾನ್ಮುಖ್ಯಪ್ರಾಣವೃತ್ತಿತ್ವಮ್' ಎಂಬ ನ್ಯಾಯವಿವರಣದಲ್ಲಿ ಪ್ರಾಣಾಪಾನಾದಿ ಐದು ಪ್ರಾಣರಲ್ಲಿ ವ್ಯಕ್ತವಾದ ಸದ್ಗುಣವಿರುವುದರಿಂದ ಮುಖ್ಯಪ್ರಾಣನ ಸ್ವರೂಪವನ್ನೇ ವಿವಕ್ಷಿಸಬೇಕು ಎಂದು ಯುಕ್ತಿಯುಕ್ತವಾಗಿ ಹೇಳಲಾಗಿದೆ. ಈ ಎರಡೂ ಬಗೆಯ ಶ್ರೀಮದಾಚಾರ್ಯರ ವಾಕ್ಯಗಳನ್ನು ಅನುಸರಿಸುವುದಕ್ಕಾಗಿ ಟೀಕೆಯಲ್ಲಿ 'ಏವಂ ಶ್ರುತಿದ್ವಯಸ್ಯಾಪಿ ಸಮಾನಬಲತ್ವಾತ್' ಎಂದು ಹೇಳಿದ್ದಾರೆ. ಭಾಷ್ಯದಲ್ಲಿ ಉದಾಹರಿಸಿದಂತೆ ಪ್ರಾಣಾದಿಗಳಿಗೆ ದಾಸತ್ವವನ್ನು ಶ್ರುತಿ ಹೇಳುತ್ತಿದೆ. ನ್ಯಾಯವಿವರಣದಲ್ಲಿ ಹೇಳಿದಂತೆ ಪ್ರಾಣಾದಿಗಳಿಗೆ ಮುಖ್ಯಪ್ರಾಣಸ್ವರೂಪತ್ವವನ್ನು ಮತ್ತೊಂದು ಶ್ರುತಿಯು ಹೇಳುತ್ತಿದೆ. ಈ ಎರಡೂ ಶ್ರುತಿಗಳು ಸಮಾನಬಲವಾಗಿರುವುದರಿಂದ ಟೀಕೆಯಲ್ಲಿ 'ಶ್ರುತಿದ್ವಯಸ್ಯಾಪಿ

ಸಮಾನಬಲತ್ವಾತ್' ಎಂದಿದ್ದಾರೆ. ಸಮಾನಬಲವಾದ ಎರಡು ಶ್ರುತಿಗಳಿಂದ ಎರಡೂ ವಿಷಯವನ್ನು ಅಂಗೀಕರಿಸಿದರೆ ವಸ್ತುವಿನಲ್ಲಿ ವಿಕಲ್ಪವು ಕೂಡುವುದಿಲ್ಲ. ಆದ್ದರಿಂದ ಎರಡೂ ಶ್ರುತಿಗಳನ್ನು ಅಪ್ರಮಾಣವೆನ್ನಬೇಕು ಎಂಬ ಅನಧ್ಯವಸಾಯರೂಪವಾದ ಪೂರ್ವಪಕ್ಷವನ್ನು ಟೀಕೆಯಲ್ಲಿ ತೋರಿಸಿದ್ದಾರೆ. ಅನಧ್ಯವಸಾಯ ಪೂರ್ವಪಕ್ಷ ಎಂದರೆ ಸಮಾನವಾದ ಎರಡು ಶ್ರುತಿಗಳಲ್ಲಿ ಯಾವುದನ್ನೂ ನಿರ್ಧಾರ ಮಾಡದೇ ಮಾಡಿದ ಪೂರ್ವಪಕ್ಷ ಎಂದರ್ಥ.

'ಚೇತಸಃ ವ್ಯಾಪ್ತಿಃ ಚೇತನಾ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. 'ಬಹುಸ್ಮರಣಶಕ್ತಿಸ್ತು ಚೇತನೇತ್ಯಭಿಧೀಯತೇ' ಎಂಬ ಮಾತಿನಂತೆ ಬಹುಸ್ಮರಣಶಕ್ತಿಯನ್ನೇ ಚೇತನ ಎಂದು ತಿಳಿಯಬೇಕು ಎಂಬುದು ಇದರ ಅಭಿಪ್ರಾಯ.

**यदुक्तमुभाभ्यां ''न वायु'' इत्यादीनि ''अणुश्च'' इत्यतःप्राचीनानि सूत्राण्येकमधिकरणम् । तत्र मुख्यप्राणो न वायुमात्रम् । नापि साङ्ख्यरीत्या समस्तकरणक्रिया । ''एतस्माज्जायते प्राणो मन'' इति श्रुतौ वायुकर्मशब्दाभ्यां तयोः प्राणात्पृथगुपदेशात् । किन्त्वाध्यात्मिको वायुविकारविशेषो मुख्यप्राण इति न वाय्विति सूत्रार्थ इति ।**

'ನ ವಾಯುಕ್ರಿಯೇ ಪೃಥಗುಪದೇಶಾತ್' ಎಂಬಲ್ಲಿಂದ ಪ್ರಾರಂಭ ಮಾಡಿ 'ಅಣುಶ್ಚ' ಎಂಬಲ್ಲಿಯ ತನಕ ಇರುವ ಸೂತ್ರಗಳು ಒಂದೇ ಅಧಿಕರಣ ಎನಿಸುತ್ತವೆ. ಈ ಅಧಿಕರಣದಲ್ಲಿ ಮುಖ್ಯಪ್ರಾಣ ಎಂದರೆ ಕೇವಲ ವಾಯುವಲ್ಲ ಅಥವಾ ಸಾಂಖ್ಯರು ಹೇಳುವಂತೆ ಎಲ್ಲವನ್ನೂ ಮಾಡುವ ಕ್ರಿಯೆಯೂ ಅಲ್ಲ. 'ಏತಸ್ಮಾಜ್ಜಾಯತೇ ಪ್ರಾಣಃ ಮನಃ' ಎಂಬ ಶ್ರುತಿಯು ಹೇಳುವಂತೆ ವಾಯು ಹಾಗೂ ಕರ್ಮಶಬ್ದಗಳಿಂದ ಅವೆರಡನ್ನು ಪ್ರತ್ಯೇಕವಾಗಿ ಕರೆಯಲಾಗಿದೆ. ಆದ್ದರಿಂದ ಆಧ್ಯಾತ್ಮಿಕವಾದ ವಾಯುವಿಕಾರವಾದ ವಿಶೇಷವೇ ಮುಖ್ಯಪ್ರಾಣ ಎನಿಸುತ್ತದೆ. ಬೇರೆ ವಾಯುವಲ್ಲ. ಇಷ್ಟು ಸೂತ್ರಾರ್ಥ.

**तन्न । साङ्ख्यमतनिरासस्येहासङ्गतेः । किञ्च मम रीत्याऽवश्यनिरसनीयस्य पूर्वोक्तप्राणोत्पत्तिश्रुतेर्वाय्वादिपरत्वस्येह निरासेन ''नानुमानमतच्छब्दात्'' इत्यादेरिव च ''न वायु'' इत्यस्य सूत्राक्षरानुसारेण पूर्वशेषत्वसम्भवे प्राणसंवादादिना चेतनत्वेन निर्णीतमुख्यप्राणे जडत्वाङ्गीकारेण वायुक्रियात्वपूर्वपक्षो वायुविकारत्वसिद्धान्तश्चायुक्तः । नहि जडे श्रुतिषु क्वापि मुख्यप्राणशब्दो दृष्टः ।**

ಅದ್ವೈತಿಗಳ ಈ ಪ್ರಥಮಸೂತ್ರ ವ್ಯಾಖ್ಯಾನವು ಅಯುಕ್ತವಾಗಿದೆ. ಏಕೆಂದರೆ ಸಾಂಖ್ಯ ಮತದ ನಿರಾಕರಣೆಯು ಈ ಪಾದದಲ್ಲಿ ಸಂಗತವೇ ಅಲ್ಲ. ಇಲ್ಲಿ ಕೇವಲ ಶ್ರುತಿಗಳ ವಿರೋಧವನ್ನಷ್ಟೇ ಪರಿಹರಿಸಬೇಕು.

ಮತ್ತು ನಾವು ಹೇಳುವಂತೆ ಅವಶ್ಯವಾಗಿ ನಿರಾಕರಣೆ ಮಾಡಲೇಬೇಕಾದ ಹಿಂದಿನ ಅಧಿಕರಣದ ಪ್ರಾಣೋತ್ಪತ್ತಿ ಶ್ರುತಿಗೆ ವಾಯುಪರತ್ವವನ್ನೇ ಇಲ್ಲಿ ನಿರಾಕರಣೆ ಮಾಡಲಾಗಿದೆ ಎಂದು ಹೇಳಬೇಕು. ಹೇಗೆ

'ನಾನುಮಾನಮತಚ್ಛಬ್ದಾತ್' ಎಂಬ ಸೂತ್ರವು ಪೂರ್ವಾಧಿಕರಣದ ಶೇಷವೆಂದು ನಿರ್ಣಯವಾಗಿದೆಯೋ ಅದರಂತೆ 'ನ ವಾಯುಕ್ರಿಯೇ' ಎಂಬ ಸೂತ್ರವೂ ಕೂಡ ಹಿಂದಿನ ಶ್ರೇಷ್ಠಾಧಿಕರಣಕ್ಕೆ ಸಂಬಂಧಪಟ್ಟ ಸೂತ್ರವೆಂದೇ ಪರಿಗಣಿಸಬೇಕು. ಹೀಗಿರುವಾಗ ಪ್ರಾಣಸಂವಾದಾದಿಗಳಿಂದ ಚೇತನತ್ವದಿಂದ ನಿರ್ಣೀತನಾದ ಮುಖ್ಯಪ್ರಾಣನಲ್ಲಿ ಜಡತ್ವವನ್ನು ಅಂಗೀಕಾರ ಮಾಡಿ ದೇಹದ ಒಳಗಿರುವ ವಾಯುವಿನ ಕ್ರಿಯೆಯೇ ಇಲ್ಲಿ ಪ್ರತಿಪಾದನೆಯಾಗಿದೆ ಎಂಬ ಪೂರ್ವಪಕ್ಷವನ್ನು ಹಾಗೂ ವಾಯುವಿಕಾರವೆಂಬ ಸಿದ್ಧಾಂತವನ್ನು ಮಾಡುವುದು ಅಯುಕ್ತವಾಗಿದೆ. ಮುಖ್ಯಪ್ರಾಣಶಬ್ದವು ಚೇತನ ಎಂಬ ಅರ್ಥದಲ್ಲಿಯೇ ಶ್ರುತಿಯಲ್ಲಿ ಪ್ರಯೋಗಿಸಲಾಗಿದೆ. ಅದನ್ನು ನೀವು ಜಡಪರವಾಗಿ ವಾಯುವಿಕಾರ ಎಂದು ಸಿದ್ಧಾಂತ ಮಾಡುವುದು ಅಯುಕ್ತವಾಗಿದೆ.

**यच्चोक्तं परैः मुख्यप्राणस्य नामादीन् प्रति प्रधानत्वाच्छरीरे जीववत्स्वातन्त्र्यमिति प्राप्ते प्राणसंवादादिष्वप्रधानभूतचक्षुरादिभिः सह शासनादस्वातन्त्र्यमिति ''चक्षुः'' इति सूत्रार्थ इति ।**

ಪರರು 'ಚಕ್ಷುರಾದಿವತ್ತು ತತ್ಸಹಶಿಷ್ಟಾದಿಭ್ಯಃ' ಎಂಬ ಎರಡನೇ ಸೂತ್ರದ ಅರ್ಥವನ್ನು ಹೀಗೆ ಹೇಳುತ್ತಾರೆ. ನಾಮಾದಿಗಳನ್ನು ಕುರಿತು ಮುಖ್ಯಪ್ರಾಣನಿಗೆ ಸ್ವಾತಂತ್ರ್ಯವಿದೆ. ಜೀವನು ಹೇಗೆ ಈ ಶರೀರಕ್ಕೆ ಸ್ವತಂತ್ರನೋ ಅದರಂತೆ ಪ್ರಾಣನೂ ಕೂಡ ಸ್ವತಂತ್ರನಾಗಿದ್ದಾನೆ. ಉಳಿದ ಇಂದ್ರಿಯಗಳು ನಿಷ್ಕ್ರಿಯವಾದಾಗಲೂ ಪ್ರಾಣನು ಎಚ್ಚರವಾಗಿರುತ್ತಾನೆ. ತಾಯಿಯು ಮಕ್ಕಳನ್ನು ಪೋಷಣೆ ಮಾಡುವಂತೆ ಈ ಮುಖ್ಯಪ್ರಾಣನು ಇತರ ಇಂದ್ರಿಯಗಳನ್ನು ರಕ್ಷಿಸುತ್ತಾನೆ. ಆದ್ದರಿಂದ ಸ್ವತಂತ್ರನೆಂದು ಪೂರ್ವಪಕ್ಷ.

ಇದರ ನಿರಾಕರಣೆಗಾಗಿ 'ಚಕ್ಷುರಾದಿವತ್ತು' ಇತ್ಯಾದಿ ಸೂತ್ರವು ಹೊರಟಿದೆ. ಸೂತ್ರದಲ್ಲಿರುವ 'ತು' ಎಂಬ ಶಬ್ದವು ಜೀವನಿಗೆ ಸ್ವಾತಂತ್ರ್ಯವಿದ್ದಂತೆ ಮುಖ್ಯಪ್ರಾಣನಿಗೆ ಸ್ವಾತಂತ್ರ್ಯವಿಲ್ಲ ಎಂದು ತಿಳಿಸುತ್ತಿದೆ. ಕಣ್ಣು ಮೊದಲಾದ ಇಂದ್ರಿಯಗಳು ಹೇಗೆ ಸಹಾಯಕವಾಗಿ ದೇಹದಲ್ಲಿ ತಮ್ಮ ಕೆಲಸವನ್ನು ನಿರ್ವಹಿಸುತ್ತವೋ ಅದರಂತೆ ಈ ಮುಖ್ಯಪ್ರಾಣನೂ ಕೂಡ ಸಹಕಾರಿಯಾಗಿದ್ದುಕೊಂಡೇ ಕಾರ್ಯವನ್ನು ನಿರ್ವಹಿಸುತ್ತಾನೆ. ಪ್ರಾಣಸಂವಾದ ಪ್ರಕರಣದಲ್ಲಿ ಇಂದ್ರಿಯಗಳೊಂದಿಗೆ ಪ್ರಾಣನಿಗೆ ಜೀವಭೋಗಸಾಧನತ್ವವು ಶ್ರುತವಾಗಿದೆ. ಆದ್ದರಿಂದ ಚಕ್ಷುರಾದಿ ಇಂದ್ರಿಯಗಳಂತೆ ಇವನೂ ಕೂಡ ಅಸ್ವತಂತ್ರನಾಗಿದ್ದಾನೆ ಎಂದು.

**तन्न । पूर्वसूत्रे वायुविकारत्वेन जडतया निर्णीतमुख्यप्राणे जीववत्कर्तृत्वशङ्कानुदयात् । प्राणसंवादादिना मुख्यप्राणस्योक्तजडत्वाक्षेपे च चक्षुरादीनामपि तेनैव तदाक्षेपसम्भावनात् ।**

ಇದು ತಪ್ಪು. ಹಿಂದಿನ ಸೂತ್ರದಲ್ಲಿ ಮುಖ್ಯಪ್ರಾಣ ಎಂದರೆ ವಾಯುವಿಕಾರವೆಂಬ ಜಡಪದಾರ್ಥವೆಂದು ನಿರ್ಣಯಿಸಿದ್ದೀರಿ. ಹೀಗಿರುವಾಗ ಸ್ವತಂತ್ರಕರ್ತೃವಾಗಬಹುದೋ ಏನೋ? ಎಂಬ ಪೂರ್ವಪಕ್ಷವೇ ಇಲ್ಲಿ

ಹುಟ್ಟಲು ಸಾಧ್ಯವಿಲ್ಲ. ಮತ್ತು ಪ್ರಾಣಸಂವಾದಾದಿಗಳಿಂದ ಮುಖ್ಯಪ್ರಾಣನು ಚಕ್ಷುರಾದಿಗಳಂತೆ ಜಡ ಎಂದು ಆಕ್ಷೇಪ ಮಾಡುವುದಾದರೆ ಅದೇ ಪ್ರಾಣಸಂವಾದಾದಿಲಿಂಗಗಳಿಂದ ಚಕ್ಷುರಾದಿ ಇಂದ್ರಿಯಗಳಿಗೂ ಕೂಡ ಆಕ್ಷೇಪ ಮಾಡಲು ಬರುವುದರಿಂದ ಮುಖ್ಯಪ್ರಾಣನಿಗೆ ಮಾತ್ರ ಜಡತ್ವವನ್ನು ಆಕ್ಷೇಪ ಮಾಡಿದ್ದು ತಪ್ಪು.

**सिद्धान्ते चक्षुरादिसाहचर्येणाचेतनत्वसिद्धौ सौत्रादिपदेनाचेतनत्वोक्तिरिति त्वन्मतहानेः । अनुपकारकत्वाशङ्कायाश्च स्पष्टेन दृष्टशास्त्रविरोधेनानुदयात् । दृश्यते ह्यन्वयव्यतिरेकाभ्याञ्चक्षुरादे रूपादिज्ञानमिव प्राणस्य शरीरधारणाद्युपकारः ।**

ಸಿದ್ಧಾಂತದಲ್ಲಿ ಚಕ್ಷುರಾದಿ ಸಾಹಚರ್ಯದಿಂದ ಪ್ರಾಣನಿಗೆ ಅಚೇತನತ್ವವು ಸಿದ್ಧವಾಗುತ್ತದೆಂದು ಹೇಳಿದ್ದೀರಿ. ಹಾಗಾದರೆ ಸೂತ್ರದಲ್ಲಿರುವ ಆದಿ ಪದದಿಂದ ಅಚೇತನತ್ವವನ್ನು ಹೇಳಿದ್ದಾರೆಂಬ ನಿಮ್ಮ ಮತವು ಹಾನಿಯಾಯಿತು. ಅದ್ವೈತಿಗಳು ಸೂತ್ರದ ಆದಿಪದಕ್ಕೆ ಇಂದ್ರಿಯಗಳಿಗೆ ವಾಚಕವಾದ ಪ್ರಾಣಶಬ್ದವು ಪಂಚಪ್ರಾಣಗಳಿಗೂ ವಾಚಕವಾಗಿದೆ ಎಂಬುದನ್ನು ಸೂಚಿಸಲು ವ್ಯಾಖ್ಯಾನ ಮಾಡಿದ್ದಾರೆ. ಇದು ಈಗ ತಪ್ಪಾಯಿತು ಎಂದಭಿಪ್ರಾಯ. ಮತ್ತು ಪ್ರಾಣನು ಜೀವನಿಗೆ ಉಪಕಾರಕನಾಗುವುದಾದರೆ ಚಕ್ಷುರಾದಿ ಇಂದ್ರಿಯಗಳಂತೆ ಒಂದು ವಿಷಯವು ಇರಬೇಕಾದೀತು ಎಂಬ ಆಕ್ಷೇಪವೂ ಕೂಡ ತಪ್ಪು. ಶರೀರಕ್ಕೆ ಹೇಗೆ ವಿಷಯವೇ ಇಲ್ಲವೋ ಅದರಂತೆ ಪ್ರಾಣನಿಗೂ ಕೂಡ ವಿಷಯವಿಲ್ಲದೇ ಶರೀರದಂತೆ ಉಪಕಾರಕನಾಗಬಹುದು. ಆದ್ದರಿಂದ ಈ ಶಂಕೆಯೇ ಪ್ರಾಪ್ತವಾಗುವುದಿಲ್ಲ. ಅನ್ವಯ ವ್ಯತಿರೇಕಗಳಿಂದ ಚಕ್ಷುರಾದಿಗಳಿಗೆ ರೂಪಾದಿಗಳ ಜ್ಞಾನ ಬರುವುದು ಕಂಡಿದೆ. ಅದರಂತೆ ಶರೀರಧಾರಣಾದಿ ಉಪಕಾರವು ಪ್ರಾಣನಿಗೆ ಅನ್ವಯ ವ್ಯತಿರೇಕದಿಂದ ಸಿದ್ಧವಾಗಿದೆ. ಹೀಗಿರುವಾಗ ಶರೀರಕ್ಕೆ ಉಪಕಾರವೇ ಆಗುವುದಿಲ್ಲ ಎಂಬ ಆಕ್ಷೇಪ ಹುಟ್ಟಲು ಸಾಧ್ಯವಿಲ್ಲ ಎಂದಭಿಪ್ರಾಯ.

**श्रूयते च प्राणसंवादादिषु । अकरणत्वशङ्कायाश्च सिद्धान्तप्रतिकूलत्वं च । सिद्धान्तयिष्यते चोत्तरसूत्रेऽकरणत्वम् ।**

ಪ್ರಾಣಸಂವಾದಾದಿಗಳಲ್ಲಿ ಇದು ಕಂಡಿದೆ. ಇಂದ್ರಿಯಗಳ ಜೊತೆ ಪ್ರಾಣನಿಗೆ ಜೀವಭೋಗ ಸಾಧನತ್ವವು ಸ್ಪಷ್ಟವಾಗಿ ಶ್ರುತವಾಗಿದೆ. ಈ ಪ್ರಾಣವು ಇಂದ್ರಿಯವಲ್ಲ ಎಂಬ ಶಂಕೆಯು ನಿಮ್ಮ ಸಿದ್ಧಾಂತಕ್ಕೆ ಪ್ರತಿಕೂಲವೇ ಆಗಿದೆ. ಏಕೆಂದರೆ ನೀವೇ ಮುಂದಿನ ಸೂತ್ರದಲ್ಲಿ ಪ್ರಾಣವು ಇಂದ್ರಿಯವಲ್ಲ ಎಂಬುದಾಗಿ ಸಿದ್ಧಾಂತ ಮಾಡಿದ್ದೀರಿ. ಹೀಗಿರುವಾಗ ಇಂದ್ರಿಯವಲ್ಲ ಎಂಬ ಪೂರ್ವಪಕ್ಷವು ಇಲ್ಲಿ ಕೂಡುವುದಿಲ್ಲ.

**यत्तु कैश्चिदुक्तं प्राणो वायुविकारश्चेत्किमग्न्यादिवद्भूतान्तरमिति शङ्कानिरासार्थश्चक्षुरिति सूत्रमिति ।**

ರಾಮಾನುಜರು 'ಚಕ್ಷುರಾದಿವತ್ತು' ಎಂಬ ಸೂತ್ರದ ವ್ಯಾಖ್ಯಾನವನ್ನು ಹೀಗೆ ಮಾಡುತ್ತಾರೆ. ಪ್ರಾಣನು ವಾಯುವಿನ ವಿಕಾರ ಎನ್ನುವುದಾದರೆ ಅಗ್ನಿ ಮೊದಲಾದವಂತೆ ಇದೂ ಕೂಡ ಪ್ರತ್ಯೇಕ

ಭೂತಪದಾರ್ಥವಾಗಬೇಕಾದೀತು. ಈ ಆಶಂಕೆಯ ಪರಿಹಾರಕ್ಕಾಗಿ 'ಚಕ್ಷುರಾದಿವತ್ತು' ಇತ್ಯಾದಿ ಸೂತ್ರವು ಹೊರಟಿದೆ ಎಂದು.

**तन्न । प्रत्यक्षादिविरोधेन प्राणे भूतान्तरत्वशङ्कानुदयात् । विशेषहेत्वभावेनाग्न्यादिविकारस्य चक्षुरादेरपि तथात्वशङ्कानिरासापाताच्च ।**

ಇದು ತಪ್ಪು. ಪ್ರತ್ಯಕ್ಷ ವಿರೋಧವಿರುವುದರಿಂದ ಇದು ಪ್ರತ್ಯೇಕ ಭೂತಪದಾರ್ಥವಾಗಲಿ ಎಂಬ ಆಶಂಕೆಯೇ ಹುಟ್ಟುವುದಿಲ್ಲ. ಯಾವುದೇ ವಿಶೇಷ ಕಾರಣವಿಲ್ಲದೇ ಹೀಗೆ ಆಶಂಕೆ ಹುಟ್ಟುವುದಾದರೆ ಅಗ್ನಿಯ ವಿಕಾರವೆನಿಸಿದ ಚಕ್ಷುರಿಂದ್ರಿಯವೂ ಕೂಡ ಪ್ರತ್ಯೇಕ ಭೂತಪದಾರ್ಥವಾಗಲಿ ಎಂಬ ಆಶಂಕೆಯನ್ನೂ ಕೂಡ ಪರಿಹರಿಸಲು ಇನ್ನೊಂದು ಸೂತ್ರವನ್ನು ನೀವು ಉಲ್ಲೇಖ ಮಾಡಬೇಕಾಗುತ್ತದೆ. ಆದ್ದರಿಂದ ನೀವು ಮಾಡಿದ ಪೂರ್ವಪಕ್ಷವೇ ತಪ್ಪು.

**यच्चोक्तं परैः चक्षुरादिभिः सहशासनेन करणश्चेत्प्राणस्तर्हि चक्षुरादिविषयरूपादिवदस्यापि विषयान्तरं वाच्यम् । नच तच्छक्यम् । करणैकादशत्वव्याकोपदोष इति शङ्कानिरासार्थं सूत्रमकरणत्वादिति ।**

ಅದ್ವೈತಿಗಳು 'ಅಕರಣತ್ವಾಚ್ಚ' ಎಂಬ ಸೂತ್ರದ ವ್ಯಾಖ್ಯಾನವನ್ನು ಹೀಗೆ ಮಾಡುತ್ತಾರೆ – ಚಕ್ಷುರಾದಿ ಇಂದ್ರಿಯಗಳ ಜೊತೆ ಪ್ರಾಣವನ್ನೂ ಕೂಡ ಉಲ್ಲೇಖ ಮಾಡಲಾಗಿದೆ. ಹಾಗಾದರೆ ಚಕ್ಷುರಾದಿ ಇಂದ್ರಿಯಗಳಂತೆ ಇದೂ ಕೂಡ ಇಂದ್ರಿಯವಾಗುತ್ತದೆ ಎಂದಂತಾಯಿತು. ಚಕ್ಷುರಾದಿ ಇಂದ್ರಿಯಗಳಿಗೆ ಹೇಗೆ ಪ್ರತ್ಯೇಕವಾದ ರೂಪಾದಿಗಳು ವಿಶೇಷವಾಗಿವೆಯೋ ಅದರಂತೆ ಈ ಪ್ರಾಣಕ್ಕೂ ಕೂಡ ಪ್ರತ್ಯೇಕವಾದ ಒಂದು ವಿಷಯವು ಇರಬೇಕಾಗುತ್ತದೆ. ಆದರೆ ಇದು ಸಾಧ್ಯವಿಲ್ಲ. ಮತ್ತು ಏಕಾದಶ ಇಂದ್ರಿಯಗಳು ಎಂಬ ವ್ಯವಹಾರದ ವಿರೋಧವೂ ಕೂಡ ಬರುತ್ತದೆ. ಈ ಆಕ್ಷೇಪದ ಪರಿಹಾರಕ್ಕಾಗಿ 'ಅಕರಣತ್ವಾತ್' ಇತ್ಯಾದಿ ಸೂತ್ರವು ಹೊರಟಿದೆ.

**प्राणस्याकरणत्वान्नायं दोषः । तथा हि दर्शयति ''तत्प्राण उत्क्रान्ते पद्यत'' इत्यादिका श्रुतिः प्राणनिमित्तां शरीरस्थितिमित्यकरणत्वादिति सूत्रार्थ इति ।**

ಪ್ರಾಣವು ಇಂದ್ರಿಯವಾಗಿಲ್ಲ. ಆದ್ದರಿಂದಲೇ ಪ್ರತ್ಯೇಕವಾದ ಒಂದು ವಿಷಯವಿರಲಿ ಎಂಬ ದೋಷಕ್ಕೆ ಆಸ್ಪದವಿಲ್ಲ ಎಂಬುದು 'ಅಕರಣತ್ವಾಚ್ಚ ನ ದೋಷಃ' ಎಂಬುದರ ಅಭಿಪ್ರಾಯವಾಗಿದೆ. 'ತಥಾಹಿ ದರ್ಶಯತಿ' ಎಂದರೆ 'ತತ್ಪ್ರಾಣಃ ಉತ್ಕ್ರಾಂತೇ ಪದ್ಯತೇ' ಇತ್ಯಾದಿ ಶ್ರುತಿಯು ಶರೀರದ ಧಾರಣೆಗೆ ಪ್ರಾಣನ ಅವಶ್ಯಕತೆಯು ಇದ್ದೇ ಇದೆ ಎಂದು ಹೇಳುತ್ತಿದೆ. ಪ್ರಾಣನು ತನ್ನನ್ನು ಐದು ಭಾಗವನ್ನಾಗಿ ಮಾಡಿಕೊಂಡು ಈ ಶರೀರವನ್ನು ಧರಿಸಿದ್ದಾನೆ. ಅವನಿಲ್ಲದಿದ್ದರೆ ಈ ಶರೀರವು ನಿಲ್ಲುವುದಿಲ್ಲ ಎಂದು ಹೇಳುತ್ತಿದೆ. ಇಷ್ಟು ಅದ್ವೈತಿಗಳ ವ್ಯಾಖ್ಯಾನ.

## ಪಂಚವೃತ್ತ್ಯಧಿಕರಣ (೨-೪-೮)

**तन्न । शरीरस्य कर्मेन्द्रियादीनाञ्चोपकरणत्वेऽपि विषयाभावेन कार्यमात्रस्य शरीरकर्मेन्द्रियादाविव प्राणेऽपि प्रत्यक्षादिसिद्धत्वेन शङ्कानुदयात् । ''तथा हि दर्शयति'' इत्यस्य मम मत इव ''अकरणत्वाच्च न दोष'' इति पूर्वोक्तार्थपरत्वाभावेनास्वारस्याच्च ।**

ಇದು ತಪ್ಪು. ಶರೀರಕ್ಕೆ ಕರ್ಮೇಂದ್ರಿಯಗಳು ಉಪಕರಣವಾಗಿವೆ. ಆದರೆ ಈ ಕರ್ಮೇಂದ್ರಿಯಗಳಿಗೆ ಯಾವುದೇ ವಿಷಯವಿಲ್ಲ. ಕಾರ್ಯಮಾತ್ರವು ಶರೀರ ಹಾಗೂ ಕರ್ಮೇಂದ್ರಿಯಗಳಂತೆ ಪ್ರಾಣನಲ್ಲೂ ಕೂಡ ಸಮಾನವಾಗಿದೆ. ಇದು ಪ್ರತ್ಯಕ್ಷದಿಂದಲೇ ಸಿದ್ಧವಾಗಿರುವುದರಿಂದ ವಿಷಯವಿಲ್ಲದ್ದರಿಂದ ಉಪಕಾರಿಯಾಗಲು ಸಾಧ್ಯವಿಲ್ಲ ಎಂಬ ಆಕ್ಷೇಪವೇ ಹುಟ್ಟುವುದಿಲ್ಲ. ಇನ್ನು 'ತಥಾ ಹಿ ದರ್ಶಯತಿ' ಎಂಬ ಸೂತ್ರದ ಭಾಗಕ್ಕೆ ನಾವು ಹೇಳುವಂತೆ ಮುಖ್ಯಪ್ರಾಣನು ಕರ್ತೃವಾಗಿರುವ ಕಾರಣ ಇಂದ್ರಿಯಗಳಂತೆ ಅವಾಂತರ ಈಶ್ವರನಲ್ಲ ಎಂಬ ದೋಷವಿಲ್ಲ. ಏಕೆಂದರೆ ಚಕ್ಷುರಾದಿಗಳನ್ನು ಕರಣಗಳೆಂದು ಶ್ರುತಿಯು ಹೇಳುತ್ತಿದೆ ಎಂದು ಸ್ವರಸವಾಗಿಯೇ ವ್ಯಾಖ್ಯಾನ ಮಾಡಲು ಬರುವುದರಿಂದ ನಿಮ್ಮ ಅರ್ಥವು ಅಸ್ವರಸವಾಗಿದೆ.

**यत्तु कैश्चिदुक्तं अकरणत्वादक्रियत्वाज्जीवं प्रत्युपकाररूपक्रियाविशेषराहित्याद्योदोषः प्राप्नोति स नास्ति । तथा हि दर्शयति श्रुतिस्तत्प्राण इत्यादिनोपकारविशेषं शरीरधारणादिकमित्यकरणत्वादिति सूत्रार्थ इति ।**

ರಾಮಾನುಜರ 'ಅಕರಣತ್ವಾಚ್ಚ' ಎಂಬ ಸೂತ್ರದ ವ್ಯಾಖ್ಯಾನ ಹೀಗಿದೆ – 'ಅಕರಣತ್ವಾತ್' ಎಂದರೆ 'ಅಕ್ರಿಯತ್ವಾತ್' ಎಂದರ್ಥ. ಜೀವನಿಗೆ ಪ್ರಾಣನು ಉಪಕಾರವೆಂಬ ಕ್ರಿಯಾವಿಶೇಷರಹಿತನಾಗಿದ್ದಾನೆ. ಒಂದುವೇಳೆ ಪ್ರಾಣನು ಉಪಕರಣನಾದರೆ ಏನಾದರೂ ಉಪಕಾರವನ್ನು ಮಾಡಬೇಕು. ಯಾವುದೇ ಉಪಕಾರವು ಇಲ್ಲದ್ದರಿಂದ ಪ್ರಾಣನು ಉಪಕಾರಕನಲ್ಲ ಎಂಬುದಾಗಿ ಯಾವ ದೋಷವನ್ನು ಹೇಳಲಾಯಿತೋ ಇದು ನಮಗೆ ಬರುವುದಿಲ್ಲ. ಏಕೆಂದರೆ 'ತಥಾ ಹಿ ದರ್ಶಯತಿ' ಪ್ರಾಣನಿಂದ ಜೀವನಿಗೆ ಆಗುವ ಉಪಕಾರ ವಿಶೇಷವನ್ನು ಶ್ರುತಿಯೇ ಹೇಳುತ್ತಿದೆ. 'ಯಸ್ಮಿನ್ ಉತ್ಕ್ರಾಂತೇ' ಇತ್ಯಾದಿ ಶ್ರುತಿಯು ಪ್ರಾಣ, ಅಪಾನ ಮೊದಲಾದ ಐದು ರೂಪಗಳಿಂದ ಜೀವನ ಶರೀರವನ್ನು ಪ್ರಾಣನು ಧಾರಣೆ ಮಾಡಿದ್ದಾನೆ ಎಂಬುದು ಈ ಸೂತ್ರದ ಅರ್ಥ.

**तन्न । स्फुटप्रत्यक्षादिविरोधेन चक्षुरादाविवानुपकारकत्वशङ्कानुदयस्योक्तत्वात् । पूर्वसूत्रस्थचक्षुरादिशब्दसन्निधानाद्बहुव्रीहितः कर्मधारयस्य बलवत्त्वाच्चाकरणत्वशब्देन प्रसिद्धकरणत्वाभावस्यैव प्रतीतौ बहुव्रीह्याद्याश्रयणेनोपकाररूपक्रियाविशेषराहित्यपरत्वकल्पनायोगाच्च ।**

ಇದು ತಪ್ಪು. ಸ್ಪಷ್ಟವಾದ ಪ್ರತ್ಯಕ್ಷದಿಂದ ಪ್ರತಿಯೊಬ್ಬರಿಗೂ ಪ್ರಾಣವಾಯುವಿನ ಉಪಕಾರವು ಅನುಭವ ಸಿದ್ಧವಾಗುತ್ತಿದೆ. ಹೀಗಿರುವಾಗ ಚಕ್ಷುರಾದಿ ಇಂದ್ರಿಯಗಳಂತೆ ಪ್ರಾಣವಾಯುವಿನ ಯಾವುದೇ ಉಪಯೋಗವಿಲ್ಲವೆಂಬ ಪೂರ್ವಪಕ್ಷವೇ ಹುಟ್ಟುವುದಿಲ್ಲ.

ಮತ್ತು ಹಿಂದಿನ ಸೂತ್ರದಲ್ಲಿ 'ಚಕ್ಷುರಾದಿವತ್' ಎಂಬ ಪದವು ಪ್ರಸಕ್ತವಾಗಿದೆ. ಅದರ ಸನ್ನಿಧಾನದಿಂದ ಈ ಸೂತ್ರದಲ್ಲಿರುವ ಅಕರಣತ್ವಾತ್ ಎಂಬುದಕ್ಕೆ ಕರ್ಮಧಾರಯ ಸಮಾಸವನ್ನೇ ಮಾಡಬೇಕು. ಆದ್ದರಿಂದಲೇ ಬಹುವ್ರೀಹಿಗಿಂತ ಇಲ್ಲಿ ಕರ್ಮಧಾರಯವು ಬಲಿಷ್ಠವಾಗುತ್ತದೆ. ಕರ್ಮಧಾರಯಸಮಾಸ ಮಾಡಿದಾಗ 'ಅಕರಣತ್ವಾತ್' ಎಂಬುದಕ್ಕೆ ಪ್ರಸಿದ್ಧವಾದ ಕರಣವಲ್ಲದ್ದರಿಂದ ಎಂಬ ಅರ್ಥವೇ ಪ್ರತೀತವಾಗುತ್ತದೆ. ಇದನ್ನು ಬಿಟ್ಟು ಬಹುವ್ರೀಹಿ ಸಮಾಸವನ್ನು ನೀವು ಆಶ್ರಯಿಸಿ ಉಪಕಾರವೆಂಬ ಕ್ರಿಯಾವಿಶೇಷವು ಇಲ್ಲದ್ದರಿಂದ ಎಂಬುದಾಗಿ ಅರ್ಥವನ್ನು ಕಲ್ಪನೆ ಮಾಡುವುದು ಅಯುಕ್ತವಾಗಿದೆ.

**सिद्धान्तसूत्रस्याकरणत्वहेतोः स्वतः प्राप्तसिद्धान्तहेतुत्वत्यागेन व्यवहितान्वयेन च पूर्वपक्षहेतुत्वकल्पनायोगाच्च ।**

ಮತ್ತು ಸಿದ್ಧಾಂತ ಸೂತ್ರದಲ್ಲಿರುವ ಹೇತುವಿಗೆ ಸಿದ್ಧಾಂತ ಹೇತುತ್ವವು ಸ್ವತಃ ಪ್ರಾಪ್ತವಾಗುತ್ತದೆ. ಇದನ್ನು ಬಿಟ್ಟು ವ್ಯವಹಿತವಾದದ್ದರಿಂದ ಅನ್ವಯವನ್ನು ಮಾಡಿ ಪೂರ್ವಪಕ್ಷ ಹೇತುತ್ವವನ್ನು ಕಲ್ಪನೆ ಮಾಡುವುದೂ ಕೂಡ ಅಯುಕ್ತವಾಗಿದೆ.

**यच्चोक्तं परैः इतश्च मुख्यप्राणः कार्यविशेषवान् । यतः स उच्छ्वासादिव्यापारयुक्तप्राणापानादिपञ्चवृत्तिर्व्यपदिश्यते । यथा मनोयोगशास्त्रे प्रमाण विपर्ययविकल्पनिद्रास्मृतय इति पञ्चवृत्तीति पञ्चेति सूत्रार्थ इति ।**

ಪಂಚವೃತ್ತಿ ಇತ್ಯಾದಿ ಸೂತ್ರಕ್ಕೆ ಅದ್ವೈತಿಗಳ ವ್ಯಾಖ್ಯಾನ ಹೀಗಿದೆ – ಮತ್ತೊಂದು ಕಾರಣದಿಂದಲೂ ಮುಖ್ಯಪ್ರಾಣನು ದೇಹದಲ್ಲಿ ಕಾರ್ಯವಿಶೇಷವುಳ್ಳವನಾಗಿದ್ದಾನೆ. ಯಾವ ಕಾರಣದಿಂದ ಆ ಮುಖ್ಯಪ್ರಾಣನು ದೇಹದಲ್ಲಿ ವಿವಿಧ ಕ್ರಿಯೆಗಳನ್ನು ಮಾಡಲು ಶ್ವಾಸ, ಉಚ್ಛ್ವಾಸಗಳೆಂಬ ವ್ಯಾಪಾರವುಳ್ಳವನಾಗಿ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ ಐದು ರೂಪಗಳನ್ನು ತಾಳುತ್ತಾನೆ. ಹೇಗೆ ಮನೋಯೋಗಶಾಸ್ತ್ರದಲ್ಲಿ ಪ್ರಮಾಣ, ವಿಪರ್ಯಯ, ವಿಕಲ್ಪ, ನಿದ್ರಾ, ಸ್ಮೃತಿ ಎಂಬ ಐದು ವೃತ್ತಿಗಳನ್ನು ಪ್ರತಿಪಾದನೆ ಮಾಡಲಾಗಿದೆಯೋ ಅದರಂತೆ ಇವನೂ ಕೂಡ ಐದು ರೂಪಗಳನ್ನು ತಾಳುತ್ತಾನೆ ಎಂದು.

**तन्न । सूत्रे चशब्दाभावेन हेत्वन्तरत्वस्यास्वरसत्वात् । ''तथा हि दर्शयति'' इति पूर्वसूत्रभागेनैवास्यापि कार्यविशेषस्य वक्तुं शक्यत्वेनास्य वैयर्थ्याच्च ।**

ಈ ಸೂತ್ರವ್ಯಾಖ್ಯಾನವೂ ಕೂಡ ತಪ್ಪು. ಇದು ಹೇತ್ವಂತರಸ್ಥಾಪಕವಾಗಿದ್ದಲ್ಲಿ 'ಚ' ಶಬ್ದ ಇರಬೇಕಿತ್ತು. ಆದ್ದರಿಂದ ಇದರ ಅರ್ಥ ಅಸ್ವರಸವಾಯಿತು. ಮತ್ತು 'ತಥಾ ಹಿ ದರ್ಶಯತಿ' ಎಂಬ ಹಿಂದಿನ

ಸೂತ್ರಭಾಗದಿಂದಲೇ ಈ ಕಾರ್ಯವಿಶೇಷವನ್ನೂ ಕೂಡ ಮುಖ್ಯಪ್ರಾಣನಲ್ಲಿ ತಿಳಿಯಲು ಬರುತ್ತಿರುವಾಗ ಈ ಸೂತ್ರ ಹೊರಟದ್ದ ವ್ಯರ್ಥವಾಗುತ್ತದೆ.

**मम रीत्या श्रौतदार्ष्टान्तिकस्य ''यथा ह वै मनः पञ्चधा'' इति श्रुत्युक्तदृष्टान्तस्य च सम्भवे ''एतेन योगः प्रत्युक्त'' इत्यत्र निराकृतयोगशास्त्रोक्तदृष्टान्तोक्त्ययोगाच्च ।**

ನಾವು ಹೇಳುವಂತೆ 'ಯಥಾ ಹ ವೈ ಮನಃ ಪಂಚಧಾ' ಎಂಬ ಶ್ರುತಿಯಲ್ಲಿ ಹೇಳಿದ ದೃಷ್ಟಾಂತವನ್ನೇ ವಿವಕ್ಷಿಸಲು ಬರುತ್ತದೆ. ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ, ಚೇತನ ಎಂಬ ಐದು ಬಗೆಯ ಅಂತಃ ಕರಣವನ್ನು ಇಲ್ಲಿ ದೃಷ್ಟಾಂತವನ್ನಾಗಿ ಹೇಳಲು ಬರುವಾಗ 'ಏತೇನ ಯೋಗಃ ಪ್ರತ್ಯುಕ್ತಃ' ಎಂಬ ಸೂತ್ರದಿಂದ ನಿರಾಕೃತವಾದ ಯೋಗಶಾಸ್ತ್ರದ ದೃಷ್ಟಾಂತವನ್ನು ನೀಡಿದ್ದು ಅಯುಕ್ತವಾಗಿದೆ.

**केचित्तु यथा कामादयो मनसो वृत्तिविशेषाः न तत्वान्तरं तथा प्राणापानादयः प्राणस्य वृत्तिविशेषाः न तत्वान्तरमिति पञ्चेति सूत्रार्थ इत्याहुः ।**

ರಾಮಾನುಜರ ಸೂತ್ರ ವ್ಯಾಖ್ಯಾನ ಹೀಗಿದೆ – ಯಾವ ರೀತಿಯಾಗಿ ಕಾಮ, ಸಂಕಲ್ಪ, ವಿಚಿಕಿತ್ಸಾ, ಶ್ರದ್ಧಾ, ಧೈರ್ಯ ಮುಂತಾದ ಮನೋಭಾವನೆಗಳು ವಿಭಿನ್ನವಾಗಿದ್ದರೂ ಒಂದೇ ಮನಸ್ಸಿನ ವಿಕಾರವೇ ಆಗಿವೆಯೋ ಅದರಂತೆ ಪ್ರಾಣಾಪಾನಾದಿಗಳೂ ಕೂಡ ಒಂದೇ ಪ್ರಾಣದ ವೃತ್ತಿವಿಶೇಷವಾಗಿದೆ, ಪ್ರತ್ಯೇಕ ತತ್ವಗಳೆಂದು ಪರಿಗಣಿಸಬಾರದು ಎಂದು.

**तन्न । प्राणस्य प्राणवृत्तित्वायोगात् । ''कामःसङ्कल्पो विचिकित्साश्रद्धाऽश्रद्धा श्रीर्धीर्भीरित्येतत्सर्वं मन एव'' इति श्रुत्या कामादीनामधिकत्वेन पञ्चवृत्तित्वेन मनसो दृष्टान्तत्वायोगाच्च ॥**

**॥ इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् पञ्चवृत्त्यधिकरणं सम्पूर्णम् ॥८॥**

ಇದೂ ಕೂಡ ತಪ್ಪು. ಏಕೆಂದರೆ ಪ್ರಾಣವು ಪ್ರಾಣದ ವೃತ್ತಿವಿಶೇಷವಾಗಲು ಸಾಧ್ಯವಿಲ್ಲ ಮತ್ತು 'ಕಾಮಃ ಸಂಕಲ್ಪೋ ವಿಚಿಕಿತ್ಸಾ ಶ್ರದ್ಧಾಶ್ರದ್ಧಾಶ್ರೀರ್ಧೀರ್ಭೀರಿತ್ಯೇತತ್ಸರ್ವಂ ಮನ ಏವ' ಎಂಬ ಶ್ರುತಿಯಿಂದ ಕಾಮಾದಿಗಳು ನೀವು ಹೇಳುವ ಐದು ಎಂಬ ಸಂಖ್ಯೆಗಿಂತ ಅಧಿಕವಾಗಿ ಪರಿಗಣಿತವಾಗಿವೆ. ಆದ್ದರಿಂದ ಇದು ದೃಷ್ಟಾಂತವೇ ಆಗುವುದಿಲ್ಲ. ಆದ್ದರಿಂದ ಪಂಚವೃತ್ತಿತ್ವೇನ ಮನಸ್ಸಿನ ದೃಷ್ಟಾಂತವನ್ನು ಕೊಟ್ಟಿದ್ದು ಅಯುಕ್ತವಾಯಿತು.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಪಂಚವೃತ್ತ್ಯಧಿಕರಣವು ಸಂಪೂರ್ಣವಾಯಿತು
ಪರಿಪೂರ್ಣಚಂದ್ರಿಕಾ

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**पञ्चवृत्तिः ।।** पूर्वोत्तरपक्षटीकासूचितचिन्ता आह – **अत्रेति ।। प्राणादीनां कर्माणीति ।।** यद्यपि ''प्राणापानौ'' इति स्मृतौ प्राणादीनां स्थानान्येव प्रतीयन्ते नतु कर्माणि तथापि तत्वप्रदीपे प्राणादीनां व्यापारानुक्त्वा ''प्राणापानौ'' इति वाक्यस्य पठितत्वात् ''समं चरति'' इति समानव्यापारोक्त्यैव प्राणादीनां प्राणनादिव्यापारस्य शब्दनिरुक्त्यैव लाभेन प्राणादिकर्मप्रतिपादकत्वमस्येत्यभिप्रेत्य प्राणेति वाक्योक्तिः ।।

ಪೂರ್ವಪಕ್ಷ ಹಾಗೂ ಸಿದ್ಧಾಂತಪಕ್ಷದ ಟೀಕೆಯಿಂದ ಸೂಚಿತವಾದ ಸಂಶಯ ಪರಂಪರೆಯನ್ನು 'ಅತ್ರ' ಇತ್ಯಾದಿ ಗ್ರಂಥದಿಂದ ತೋರಿಸುತ್ತಿದ್ದಾರೆ.

ವಾಸ್ತವಿಕವಾಗಿ 'ಪ್ರಾಣಾಪಾನೌ' ಎಂಬ ಸ್ಮೃತಿಯಲ್ಲಿ ಪ್ರಾಣಾದಿಗಳ ಸ್ಥಾನವಷ್ಟೇ ಹೇಳಲಾಗಿದೆ. ಕರ್ಮದ ಬಗ್ಗೆ ಹೇಳಿರುವುದಿಲ್ಲ. ಆದರೂ ಕೂಡ ತತ್ವಪ್ರದೀಪದಲ್ಲಿ ಪ್ರಾಣಾದಿಗಳ ವ್ಯಾಪಾರವನ್ನು ಹೇಳುವ 'ಪ್ರಾಣಾಪಾನೌ' ಎಂಬ ಶ್ರುತಿವಾಕ್ಯವನ್ನು ಪಠಿಸಿದ್ದಾರೆ. 'ಸಮಂ ಚರತಿ' ಎಂಬ ಸಮಾನನ ವ್ಯಾಪಾರವನ್ನು ಹೇಳಿದ್ದರಿಂದಲೇ ಪ್ರಾಣಾದಿಗಳ ಪ್ರಾಣನಾದಿವ್ಯಾಪಾರವೂ ಕೂಡ ಶಬ್ದನಿರುಕ್ತಿಯಿಂದಲೇ ಲಾಭವಾಗುತ್ತದೆ. ಆದ್ದರಿಂದ ಪ್ರಾಣನಾದಿಕರ್ಮಪ್ರತಿಪಾದಕತ್ವವೂ ಕೂಡ ಈ ಶ್ರುತಿಗೆ ಅಭಿಪ್ರೇತವಾಗಿದೆ. ಹಾಗಾಗಿ 'ಪ್ರಾಣಾದೀನಾಂ ಕರ್ಮಾಣಿ' ಎಂಬುದಾಗಿ ಗ್ರಂಥದಲ್ಲಿ ಹೇಳಿರುತ್ತಾರೆ.

**प्रकाशः – इति भारतेति ।।** द्वितीयस्कन्धद्वितीयाध्यायतात्पर्योक्तभारतवचनमेतत्। एतेन ''हृदि प्राण'' इत्याद्यमरोक्तिर्नादरणीयेति सूचितम् ।। **इति वचनमिति ।।** चतुर्थस्कन्धतात्पर्ये ।। **नामादीनिति ।।** नामवाक्चित्तादीञ्छान्दोग्याम्नातान् प्रतीत्यर्थः।

ಭಾಗವತದ ದ್ವಿತೀಯಸ್ಕಂಧದ ಎರಡನೇ ಅಧ್ಯಾಯದ ತಾತ್ಪರ್ಯದಲ್ಲಿ ಮಹಾಭಾರತದ 'ಪ್ರಾಣಾಪಾನೌ' ಎಂಬ ವಚನವನ್ನು ಉಲ್ಲೇಖ ಮಾಡಿದ್ದಾರೆ ಎಂದು ತಿಳಿಯಬೇಕು. ಹೀಗೆ ಹೇಳಿದ್ದರಿಂದ 'ಹೃದಿ ಪ್ರಾಣಃ' ಎಂಬ ಅಮರ ಕೋಶದಲ್ಲಿ ಹೇಳಿದ್ದನ್ನು ತಿರಸ್ಕರಿಸಬೇಕು ಎಂದು ಸೂಚಿತವಾಯಿತು. ಅಮರಕೋಶದಲ್ಲಿ ಹೇಳಿದ ಪ್ರಾಣಾಪಾನಾದಿ ವ್ಯಾಪಾರವು ಅಯುಕ್ತವಾಗಿದೆ. ಮಹಾಭಾರತದಲ್ಲಿ ಹೇಳಿದ ವ್ಯಾಪಾರಗಳನ್ನೇ ಪ್ರಾಣಪಾನಾದಿಗಳು ಮಾಡುತ್ತಾರೆ ಎಂಬುದು ಸ್ಪಷ್ಟವಾಯಿತು. 'ಇತಿ ವಚನಂ' ಎಂದರೆ ಚತುರ್ಥಸ್ಕಂದದ ತಾತ್ಪರ್ಯದಲ್ಲಿ ಎಂದರ್ಥ. 'ಮುಖ್ಯಪ್ರಾಣಸ್ಯ ನಾಮಾದೀನ್ ಪ್ರತಿ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಛಾಂದೋಗ್ಯದಲ್ಲಿ ಹೇಳಲ್ಪಟ್ಟ ನಾಮ, ವಾಕ್, ಚಿತ್ತ ಇವುಗಳನ್ನು ಕುರಿತು ಎಂದರ್ಥ.

ಪಂಚವೃತ್ತ್ಯಧಿಕರಣ (೨-೪-೮)

**प्रकाशः** – चक्षुरादेरिव प्राणस्य जीवान् प्रत्युपकर्तृत्वाभावादकरणत्व-शङ्काऽत्रेत्यत आह – **दृश्यते हीति** ।। श्रुतिसिद्धश्चेत्याह – **श्रूयते चेति** ।। ''तत्प्राणे प्रपन्न उदतिष्ठत्'' इत्यादिश्रुतेरिति भावः ।

ಚಕ್ಷುರಾದಿ ಇಂದ್ರಿಯಗಳು ಹೇಗೆ ಜೀವನಿಗೆ ಉಪಕಾರಿಗಳಾಗಿವೆಯೋ ಅದರಂತೆ ಪ್ರಾಣವು ಉಪಕಾರಿಯಾಗಿರುವುದಿಲ್ಲ. ಆದ್ದರಿಂದ ಚಕ್ಷುರಾದಿ ಇಂದ್ರಿಯಗಳಂತೆ ಪ್ರಾಣಾದಿಗಳು ಕರಣವಾಗುವುದಿಲ್ಲ ಎಂಬ ಶಂಕೆಯು ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ದೃಶ್ಯತೇ' ಎಂಬುದಾಗಿ ಉತ್ತರಿಸುತ್ತಿದ್ದಾರೆ. ಪ್ರಾಣಾದಿಗಳಿಗೆ ಶರೀರ ಧಾರಣಾದ್ಯುಪಕಾರವು ಶ್ರುತಿ ಸಿದ್ಧವೂ ಕೂಡ ಆಗಿದೆ ಎಂಬುದನ್ನು 'ಶ್ರೂಯತೇ ಚ' ಎಂಬ ವಾಕ್ಯದಿಂದ ಪ್ರತಿಪಾದನೆ ಮಾಡಿದ್ದಾರೆ. 'ತತ್ಪ್ರಾಣೇ ಪ್ರಪನ್ನೇ ಉದತಿಷ್ಠತ್' ಇತ್ಯಾದಿ ಶ್ರುತಿಯು ಇದನ್ನು ಹೇಳುತ್ತಿದೆ ಎಂದಭಿಪ್ರಾಯ.

**प्रकाशः** – सिद्धान्तप्रतिकूलत्वं चेत्युक्तं व्यनक्ति ।। **सिद्धान्तयिष्यते चेति** ।। नायं दोष इति ।। विषयान्तरकल्पनादोष इत्यर्थः ।

ನಿಮ್ಮ ಸಿದ್ಧಾಂತಕ್ಕೆ ಈ ಪೂರ್ವಪಕ್ಷವು ಪ್ರತಿಕೂಲ ಆಗಿದೆ ಎಂಬುದಕ್ಕೆ 'ಸಿದ್ಧಾಂತಯಿಷ್ಯತೇ ಚ' ಎಂಬುದರಿಂದ ಸಮರ್ಥನೆ ಮಾಡಿದ್ದಾರೆ. 'ನಾಯಂ ದೋಷಃ' ಎಂದರೆ ವಿಷಯಾಂತರಕಲ್ಪನಾದೋಷ ಎಂದರ್ಥ.

**प्रकाशः** – ननु प्राणस्य जीवोपकरणत्वे केनचिदुपकाररूपकार्येण भाव्यमित्यत आह – **तथा हीति** ।। **कार्यमात्रस्येति** ।। कार्यसामान्यस्य शरीरधारणादिरूपस्येत्यर्थः।।

ಪ್ರಾಣತತ್ವವು ಜೀವನಿಗೆ ಉಪಕಾರಿಯಾಗುವುದಾದರೆ ಯಾವುದಾದರೂ ಉಪಕಾರ ಮಾಡಿದ ಕಾರ್ಯವು ಕಾಣಸಬೇಕು. ಅದೇ ಕಾಣಸುತ್ತಿಲ್ಲ ಎಂಬ ಪ್ರಶ್ನೆಗೆ 'ತಥಾ ಹಿ' ಎಂಬುದರಿಂದ ಉತ್ತರಿಸುತ್ತಿದ್ದಾರೆ. 'ಕಾರ್ಯಮಾತ್ರಸ್ಯ' ಎಂದರೆ ಶರೀರಧಾರಣಾದಿ ರೂಪವಾದ ಕಾರ್ಯಸಾಮಾನ್ಯಕ್ಕೆ ಎಂದರ್ಥ.

**प्रकाशः** – **पूर्वोक्तार्थेति** ।। मुख्यप्राणस्याकरणत्वाज्जीवप्रयोज्यत्वदोषो नेत्येतदर्थपरत्वमिव त्वन्मतेऽकरणत्वाद्विषयान्तरकल्पनादोषो नेत्येतदर्था-प्रतिपादकत्वादित्यर्थः ।

ನಾವು 'ಅಕರಣತ್ವಾಚ್ಚ' ಎಂಬ ಸೂತ್ರಕ್ಕೆ ಹೀಗೆ ವ್ಯಾಖ್ಯಾನ ಮಾಡುತ್ತೇವೆ. ಮುಖ್ಯಪ್ರಾಣನು ಕರಣನಲ್ಲದ್ದರಿಂದ ಜೀವನಿಂದ ಪ್ರಯೋಜ್ಯನಾಗಿದ್ದಾನೆ ಎಂಬ ದೋಷವು ಬರುವುದಿಲ್ಲ ಎಂದು ಹೇಗೆ ಅರ್ಥವನ್ನು ಹೇಳುತ್ತೇವೋ ಹಾಗೆ ನಿಮ್ಮ ಮತದಲ್ಲಿ ಕರಣವಲ್ಲದ್ದರಿಂದ ಮತ್ತೊಂದು ವಿಷಯವನ್ನು ಕಲ್ಪನೆ ಮಾಡಬೇಕಾದ ದೋಷವಿಲ್ಲ ಎಂಬರ್ಥವನ್ನು ಪ್ರತಿಪಾದನೆ ಮಾಡಲು ಸಾಧ್ಯವಿಲ್ಲ ಎಂದಭಿಪ್ರಾಯ.

**प्रकाशः** – अकरणत्वादित्यत्र ''करणं क्रिया'' इत्यादितद्भाष्योक्तमर्थमन्वाह – **अकरणत्वादक्रियत्वादिति** ।। तस्यैव विवरणं जीवं प्रतीत्यादि । यो दोषः चक्षुरादिवज्जीवोपकरणविशेष एव । नतु भूतान्तरमिति प्रागुक्तप्रमेयभङ्गरूपो दोष इत्यर्थः।।

'ಅಕರಣತ್ವಾತ್' ಎಂಬ ಸೂತ್ರಕ್ಕೆ 'ಕರಣಂ ಕ್ರಿಯಾ' ಇತ್ಯಾದಿಯಾಗಿ ಪರರ ಭಾಷ್ಯದಲ್ಲಿ ಹೇಳಿದ ಅರ್ಥವನ್ನು ನಿರೂಪಣೆ ಮಾಡಿ ನಿರಾಕರಣೆ ಮಾಡುತ್ತಿದ್ದಾರೆ 'ಅಕರಣತ್ವಾತ್ ಅಕ್ರಿಯತ್ವಾತ್' ಇತ್ಯಾದಿಯಾಗಿ, ಅಕರಣತ್ವಾತ್ ಅಕ್ರಿಯತ್ವಾತ್' ಎಂಬ ವಿವರಣೆಯನ್ನೇ 'ಜೀವಂ ಪ್ರತಿ ಚ' ಎಂಬ ವಾಕ್ಯದಿಂದ ಮಾಡಿದ್ದಾರೆ. 'ಯೋ ದೋಷಃ' ಎಂದರೆ ಚಕ್ಷುರಾದಿಗಳಂತೆ ಜೀವನಿಗೆ ಉಪಕರಣವಾಗಲಿ ಎಂಬ ದೋಷವನ್ನು ವಿವಕ್ಷಿಸಬೇಕು ಹೊರತು ಮತ್ತೊಂದು ಭೂತಪದಾರ್ಥವಾಗಲಿ ಎಂಬ ಹಿಂದೆ ಹೇಳಿದ ಪ್ರಮೇಯಭಂಗರೂಪವಾದ ದೋಷವನ್ನು ವಿವಕ್ಷಿಸಬಾರದು.

**प्रकाशः – कर्मधारयस्येति** ।। अकरणत्वादित्यत्र न करणमकरणमित्येवं-रूपेणेत्यर्थः । तत्र हेतुः पूर्वसूत्रस्येत्यादि । बहुव्रीह्यादीत्यादिपदेन करणशब्दस्य क्रियारूपार्थपरत्वं ग्राह्यम् ।। **व्यवहितेति** ।। दोषपदान्वयेन चेत्यर्थः ।

'ಅಕರಣತ್ವಾತ್' ಎಂಬಲ್ಲಿ 'ನ ಕರಣಂ ಅಕರಣಂ' ಎಂಬುದಾಗಿ ಕರ್ಮಧಾರಯಸಮಾಸವನ್ನೇ ಮಾಡಬೇಕು. ಇದಕ್ಕೆ ಹೇತುವನ್ನು ಪೂರ್ವಸೂತ್ರಸ್ಯ' ಇತ್ಯಾದಿಯಾಗಿ ಹೇಳಿದ್ದಾರೆ. ಬಹುವ್ರೀಹ್ಯಾದಿ ಎಂಬಲ್ಲಿರುವ ಆದಿ ಪದದಿಂದ ಕರಣಶಬ್ದಕ್ಕೆ ಕ್ರಿಯಾರೂಪವೆಂಬ ಅರ್ಥವನ್ನೂ ಕೂಡ ವಿವಕ್ಷಿಸಬೇಕು. ಆದ್ದರಿಂದ ಬಹುವ್ರೀಹಿ ಸಮಾಸ ಮಾಡುವುದು ಕರಣ ಶಬ್ದಕ್ಕೆ ಕ್ರಿಯಾ ಎಂಬ ಅರ್ಥವನ್ನು ಹೇಳುವುದು ಅಯುಕ್ತ ಎಂದು ತಿಳಿಯುತ್ತದೆ. ವ್ಯವಹಿತ' ಎಂದರೆ ದೋಷ ಎಂಬ ಪದದ ಅನ್ವಯದ ಮೂಲಕ ವ್ಯವಹಿತವಾಗುತ್ತದೆ ಎಂದರ್ಥ.

**प्रकाशः** – भाष्योक्तार्थमन्वाह – **इतश्चेति** ।। मुख्यप्राणस्तावत्प्राणापान-व्यानोदानसमानरूपपञ्चवृत्तिमान् । प्राणादयश्चोच्छ्वासनिश्वासवीर्यवत्कर्मकरणोर्ध्वनयन समनयनादिरूपव्यापारवन्त इत्युच्छ्वासादिव्यापारयुक्तपञ्चवृत्तिमान् मुख्यप्राणोऽपि कार्यविशेषवानित्यर्थः ।

ಭಾಷ್ಯದಲ್ಲಿ ಹೇಳಿದ ಅರ್ಥವನ್ನು 'ಇತಶ್ಚ' ಎಂಬುದರಿಂದ ನಿರೂಪಣೆ ಮಾಡಿದ್ದಾರೆ. ಮುಖ್ಯಪ್ರಾಣನು ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ ಐದು ವ್ಯಾಪಾರಗಳುಳ್ಳವನಾಗಿದ್ದಾನೆ. ಈ ಪ್ರಾಣಾದಿಗಳೂ ಕೂಡ ಉಚ್ಛ್ವಾಸ, ನಿಶ್ವಾಸ, ವೀರ್ಯವತ್ವ, ಕರ್ಮಕರಣತ್ವ, ಊರ್ಧ್ವನಯನ, ಸಮನಯನ ಮೊದಲಾದ ವ್ಯಾಪಾರಗಳುಳ್ಳವುಗಳಾಗಿವೆ. ಹೀಗೆ ಉಚ್ಛ್ವಾಸಾದಿ ವ್ಯಾಪಾರದಿಂದ ಕೂಡಿರುವ ಪಂಚವೃತ್ತಿಗಳು ಮುಖ್ಯಪ್ರಾಣನಲ್ಲೂ ಕೂಡ ಇರುತ್ತವೆ. ಆದ್ದರಿಂದ ಇವನೂ ಕೂಡ ಕಾರ್ಯವಿಶೇಷವುಳ್ಳವನಾಗಿದ್ದಾನೆ ಎಂದರ್ಥ.

**प्रकाशः** – प्रमाणं प्रमितिः । विपर्ययः मिथ्याज्ञानम् । शब्दज्ञानानुपाती वस्तुशून्यो विकल्पः । विक्षेपसंस्कारलक्षणमनोवृत्तिर्निद्रा । स्मृतिः प्रसिद्धेति भामत्युक्तोऽर्थः ।।

ಪ್ರಮಾಣ ಎಂದರೆ ಪ್ರಮಿತಿ ಎಂದರ್ಥ. ವಿಪರ್ಯಯ ಎಂದರೆ ಮಿಥ್ಯಾಜ್ಞಾನ ಎಂದರ್ಥ. ಶಬ್ದಜ್ಞಾನ ಅನುಪಾತಿಯಾದ ವಸ್ತುಶೂನ್ಯವಾದದ್ದೇ ವಿಕಲ್ಪ ಎನಿಸಿಕೊಳ್ಳುತ್ತದೆ. ವಿಕ್ಷೇಪ ಎಂಬ ಸಂಸ್ಕಾರವೆನಿಸಿದ ಮನೋವೃತ್ತಿಯೇ ನಿದ್ರಾ ಎನಿಸುತ್ತದೆ. ಸ್ಮರಣರೂಪವಾದ ಸ್ಮೃತಿಯು ಪ್ರಸಿದ್ಧಾರ್ಥವುಳ್ಳದ್ದಾಗಿದೆ. ಹೀಗೆ ಭಾಮತಿಯಲ್ಲಿ ಪ್ರಮಾಣಂ' ಇತ್ಯಾದಿ ಪದಗಳಿಗೆ ಅರ್ಥವನ್ನು ಹೇಳಲಾಗಿದೆ.

ಪಂಚವೃತ್ತ್ಯಧಿಕರಣ (೨-೪-೮)

**प्रकाशः – श्रौतेति ।।** ''अथ पञ्चवृत्त्यैतत्प्रवर्तत'' इत्यादिभाष्यस्थश्रुत्युक्त-दार्ष्टान्तिकस्येत्यर्थः ।। **केचित्त्विति** ।। यदि प्राणः प्राणापानाद्याकारेण पञ्चधाऽवस्थितो देहधारणादि कुर्यात्तर्हि प्राणापानादिकं तत्वान्तरं स्यादिति शङ्कानिरासार्थं सूत्रम् । तदर्थमन्वाह – **यथेति** ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे पञ्चवृत्त्यधिकरणं सम्पूर्णम् ।।८।।**

'ಅಥ ಪಂಚವೃತ್ಯಾ ಏತತ್ಪ್ರವರ್ತತೇ' ಇತ್ಯಾದಿ ಭಾಷ್ಯದಲ್ಲಿರುವ ಶ್ರುತ್ಯುಕ್ತವಾದ ದಾರ್ಷ್ಟಾಂತಿಕವನ್ನೇ ವಿವಕ್ಷಿಸಬಹುದು ಎಂಬುದು 'ಶ್ರೌತ' ಇತ್ಯಾದಿ ವಾಕ್ಯದ ಅಭಿಪ್ರಾಯವಾಗಿದೆ. 'ಕೇಚಿತ್ತು' ಎಂಬುದರಿಂದ ಇದನ್ನು ವಿವಕ್ಷಿಸಿದ್ದಾರೆ. ಒಂದುವೇಳೆ ಪ್ರಾಣವು ಪ್ರಾಣ, ಅಪಾನ ಮೊದಲಾದ ಆಕಾರದಿಂದ ಐದು ಅವಸ್ಥೆಗಳನ್ನು ಹೊಂದಿ ದೇಹಧಾರಣೆಯನ್ನು ಮಾಡಿದ್ದಾನೆ ಎನ್ನುವುದಾಗಿದ್ದಲ್ಲಿ ಆಗ ಪ್ರಾಣಾಪಾನಾದಿಗಳೂ ಕೂಡ ಬೇರೆ ತತ್ವವೆಂದಾಗಬೇಕಾದೀತು ಎಂಬ ಆಶಂಕೆಯನ್ನು ನಿರಾಕರಣೆ ಮಾಡಲು ಈ ಸೂತ್ರವು ಹೊರಟಿದೆ ಎಂದು ರಾಮಾನುಜರು ಹೇಳುತ್ತಾರೆ. ಅದನ್ನೇ ಗ್ರಂಥದಲ್ಲಿ 'ಯಥಾ' ಇತ್ಯಾದಿಯಾಗಿ ನಿರೂಪಣೆ ಮಾಡಿದ್ದಾರೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಪಂಚವೃತ್ತ್ಯಧಿಕರಣವು ಮುಕ್ತಾಯವಾಯಿತು.

* * * * * * *

# ಅಣ್ವಧಿಕರಣ

(೨-೪-೯)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

॥ ಶ್ರೀಗುರುಭ್ಯೋ ನಮಃ ॥

# ಅಣ್ವಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – अणुश्च ।।**
ಮುಖ್ಯಪ್ರಾಣನು ದೇಹದ ಒಳಗಡೆ ಪ್ರಾಣರೂಪದಿಂದ ಅಣುಸ್ವರೂಪನಾಗಿದ್ದಾನೆ. ದೇಹದ ಹೊರಗಡೆ ವಾಯುರೂಪದಿಂದ ವ್ಯಾಪ್ತನಾಗಿರುತ್ತಾನೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका – मुख्यप्राणः प्राणरूपेणाणुः वायुरूपेण व्याप्तश्चेत्यर्थः ।।१।।**
ಅಣುಶ್ಚ = ಮುಖ್ಯಪ್ರಾಣನು ಪ್ರಾಣರೂಪದಿಂದ ಅಣು ಸ್ವರೂಪನು, ವಾಯುರೂಪದಿಂದ ವ್ಯಾಪ್ತನೂ ಕೂಡ ಆಗಿದ್ದಾನೆ.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ಅಣ್ವಧಿಕರಣವು ಮುಗಿಯಿತು.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् — 'प्राण एवाधस्तात् प्राण उपरिष्टात् प्राणो मध्यतः प्राणः सर्वतः प्राण एवेदं सर्वम्' इति प्राणस्य व्याप्तिः प्रतीयते ।**

ಅನುವಾದ - ಮುಖ್ಯಪ್ರಾಣನೇ ಕೆಳಗಿನ ಲೋಕದಲ್ಲಿ ಇದ್ದಾನೆ. ಅವನೇ ಮೇಲಿನ ಲೋಕದಲ್ಲಿ ಇದ್ದಾನೆ. ಮಧ್ಯ ಲೋಕದಲ್ಲೂ ಇದ್ದಾನೆ. ಎಲ್ಲಡೆಯು ಅವನು ವ್ಯಾಪ್ತನಾಗಿದ್ದಾನೆ. ಹೀಗೆ ಪ್ರಾಣನಿಗೆ ಸರ್ವತ್ರ ವ್ಯಾಪ್ತಿಯನ್ನು ಹೇಳಲಾಗಿದೆ.

ಪ್ರತಿಪದಾರ್ಥ -- ಪ್ರಾಣಃಏವ = ಮುಖ್ಯಪ್ರಾಣನೇ, ಅಧಸ್ತಾತ್ = ಕೆಳಗಿನ ಲೋಕದಲ್ಲಿ, ಉಪರಿಷ್ಟಾತ್ = ಮೇಲಿನ ಲೋಕದಲ್ಲಿ, ಪ್ರಾಣಃ = ಪ್ರಾಣನು, ಉಪರಿಷ್ಟಾತ್ = ಮೇಲಿನ ಲೋಕದಲ್ಲಿ , ಪ್ರಾಣಃ = ಪ್ರಾಣನು, ಮಧ್ಯತಃ = ಮಧ್ಯಲೋಕದಲ್ಲಿ, ಪ್ರಾಣಃ = ಪ್ರಾಣನು, ಸರ್ವತಃ = ಎಲ್ಲೆಡೆ, ಪ್ರಾಣಃ ಏವ = ಮುಖ್ಯಪ್ರಾಣನೇ, ಇದಂ ಸರ್ವಂ = ಇವೆಲ್ಲವೂ ಆಗಿರುತ್ತಾನೆ. ಇತಿ = ಹೀಗೆ, ಪ್ರಾಣಸ್ಯ = ಪ್ರಾಣನಿಗೆ, ವ್ಯಾಪ್ತಿಃ = ವ್ಯಾಪ್ತಿಯು, ಪ್ರತೀಯತೇ = ತಿಳಿಯುತ್ತದೆ.

**भाष्यम् — 'यतस्सर्वं जगद् व्याप्य तिष्ठति प्राण एव तु ।
अतो धृतं जगत् सर्वमन्यथा केन धार्यते ।।'
इति च युक्तिर्वायुप्रोक्ते ।**

ಅನುವಾದ - ಯಾವ ಕಾರಣದಿಂದ ಮುಖ್ಯಪ್ರಾಣನೇ ಜಗತ್ತನ್ನು ವ್ಯಾಪಿಸಿ ಇದ್ದಾನೋ, ಅದರಂತೆ ಸಮಸ್ತ ಜಗತ್ತು ಮುಖ್ಯಪ್ರಾಣನಿಂದಲೇ ಧರಿಸಲ್ಪಟ್ಟಿದೆ. ಇಲ್ಲದಿದ್ದರೆ ಯಾರು ತಾನೇ ಈ ಜಗತ್ತನ್ನು ಧಾರಣೆ ಮಾಡುತ್ತಿದ್ದರು. ಹೀಗೆ ಯುಕ್ತಿಯನ್ನು ವಾಯುಪ್ರೋಕ್ತವು ಹೇಳಿದೆ.

ಪ್ರತಿಪದಾರ್ಥ -- ಯತಃ = ಯಾವ ಕಾರಣದಿಂದ, ಪ್ರಾಣಃ ಏವ = ಮುಖ್ಯಪ್ರಾಣನೇ, ಜಗತ್ = ಜಗತ್ತನ್ನು, ವ್ಯಾಪ್ಯ = ವ್ಯಾಪಿಸಿ, ತಿಷ್ಠತಿ = ಇದ್ದಾನೋ, ಪ್ರಾಣಃ ಏವ = ಮುಖ್ಯಪ್ರಾಣನೇ, ಅತಃ = ಆ ಕಾರಣದಿಂದ, ಸರ್ವಂ ಜಗತ್ = ಈ ಎಲ್ಲ ಜಗತ್ತನ್ನು, ಧೃತಮ್ = ಧರಿಸಿರುತ್ತಾನೆ. ಅನ್ಯಥಾ = ಮುಖ್ಯಪ್ರಾಣನು ಧಾರಣೆ ಮಾಡದಿದ್ದರೆ, ಕೇನ = ಯಾರು ತಾನೆ, ಧಾರ್ಯತೇ = ಈ ಜಗತ್ತನ್ನು ಧಾರಣೆ ಮಾಡುತ್ತಿದ್ದರು. ಇತಿ ಚ = ಹೀಗೆ, ಯುಕ್ತಿಃ = ಯುಕ್ತಿಯನ್ನು, ವಾಯುಪ್ರೋಕ್ತೇ = ವಾಯುಪ್ರೋಕ್ತದಲ್ಲಿ ಹೇಳಲಾಗಿದ.

**भाष्यम् — 'अणुनैतत् सृज्यते अणुनैतद् धार्यते अणौ लयमभ्युपैति प्राणो वा अणुः प्राणो ह्येतद्भवति' इति च सौत्रायणश्रुतिः ।**

ಅನುವಾದ - ಅಣುಗಾತ್ರನಾದ ಮುಖ್ಯಪ್ರಾಣನಿಂದ ಈ ಸಮಸ್ತ ಜಗತ್ತು ಸೃಷ್ಟವಾಗಿದೆ. ಅಣುಗಾತ್ರನಾದ ಪ್ರಾಣನಿಂದ ಈ ಸಮಸ್ತ ಜಗತ್ತು ಧರಿಸಲ್ಪಟ್ಟಿದೆ. ಅಣುಗಾತ್ರನಾದ ಮುಖ್ಯಪ್ರಾಣನಲ್ಲಿ ನಾಶವನ್ನು ಹೊಂದುತ್ತದೆ. ಅಂಥ ಅಣುಗಾತ್ರನಾದ ಮುಖ್ಯಪ್ರಾಣನಿಂದಲೇ ಈ ಜಗತ್ತು ನಡೆಯುತ್ತಿದೆ. ಹೀಗೆ ಸೌತ್ರಾಯಣಶ್ರುತಿಯು ಹೇಳುತ್ತಿದೆ.

ಪ್ರತಿಪದಾರ್ಥ -- ಅಣುನಾ = ಅಣುಗಾತ್ರದ ಪ್ರಾಣನಿಂದ, ಏತತ್ = ಈ ಸಮಸ್ತ ಜಗತ್, ಸೃಜ್ಯತೇ = ಸೃಷ್ಟಿಗೊಂಡಿದೆ. ಅಣುನಾ = ಅಣುಗಾತ್ರನಾದ ಮುಖ್ಯಪ್ರಾಣನಿಂದ, ಏತತ್ = ಈ ಸಮಸ್ತ ಜಗತ್ತು, ಧಾರ್ಯತೇ = ಧರಿಸಲ್ಪಟ್ಟಿದೆ. ಅಣುಃ = ಅಣುಗಾತ್ರನಾದ ಮುಖ್ಯಪ್ರಾಣನಲ್ಲೇ, ಲಯಂ = ನಾಶವನ್ನು, ಅಭ್ಯುಪೈತಿ = ಹೊಂದುತ್ತದೆ. ಪ್ರಾಣೋ ವಾವ ಅಣುಃ = ಇಂಥ ಅಣುಪ್ರಾಣನೇ, ಅಣುಃ ಪ್ರಾಣೋ ಹಿ = ಅಣುಪ್ರಾಣನೆಂದರೆ, ಏತತ್= ಈ ಜಗತ್ ಭವತಿ ಹುಟ್ಟುತ್ತದೆ, ಇತಿ ಚ = ಸೌತ್ರಾಯಣಶ್ರುತಿಯು ಹೇಳುತ್ತಿದೆ.

**भाष्यम् — अत आह —**

**।। अणुश्च ।।१।।**

**'स वा एष प्राणोऽणुर्महान् नामान्तर्वाऽणुर्ब्रहिर्महान् । प्राणो वा ईशितव्येश ईशो ह्यसौ सर्वस्येशितव्यश्च परस्य' इति हि कौण्डिन्यश्रुतिः ।।१।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये अण्वधिकरणम् ।। ९ ।।**

ಅನುವಾದ - ಈ ಪೂರ್ವಪಕ್ಷಕ್ಕೆ ಸೂತ್ರಕಾರರು ಉತ್ತರಿಸುತ್ತಿದ್ದಾರೆ -

ಆ ಮುಖ್ಯಪ್ರಾಣನು ಅಣುವು ಆಣುಪರಿಮಾಣನು ಮಹತ್‌ಪರಿಮಾಣನು ಆಗಿದ್ದಾನೆ. ನಮ್ಮ ದೇಹದೊಳಗೆ ಅಣುಗಾತ್ರನಾಗಿ ದೇಹದ ಹೊರಗೆ ವ್ಯಾಪ್ತನಾಗಿದ್ದಾನೆ. ಮುಖ್ಯಪ್ರಾಣನು ಮತ್ತೊಬ್ಬರ ನಿಯಂತ್ರಣದಲ್ಲಿರುವ ಒಡೆಯನಾಗಿದ್ದಾನೆ. ಇವನು ಸಮಸ್ತ ವಿಶ್ವಕ್ಕೆ ಒಡೆಯನು ಮತ್ತು ಪರಮಾತ್ಮನಿಗೆ ಅಧೀನಾದವನು. ಹೀಗೆ ಕೌಂಡಿನ್ಯಶ್ರುತಿಯು ಹೇಳುತ್ತಿದೆ.

ಪ್ರತಿಪದಾರ್ಥ -- ಸ ವಾ ಏಷ ಪ್ರಾಣಃ = ಆ ಮುಖ್ಯಪ್ರಾಣನಾದರೂ, ಅಣುಃ = ಅಣುಗಾತ್ರನಾದವನು, ಮಹಾನ್‌ನಾಮ = ಮಹತ್‌ಪರಿಮಾಣವುಳ್ಳವನು, ಅಂತವಾನ್ = ನಮ್ಮ ದೇಹದೊಳಗೆ, ಅಣುಃ = ಅಣುಗಾತ್ರನು, ಬಹಿಃ = ಹೊರಗಡೆ, ಮಹಾನ್ = ವ್ಯಾಪ್ತನು, ಪ್ರಾಣೋವಾ = ಮುಖ್ಯಪ್ರಾಣನು, ಈಶಿತವ್ಯೇಶಃ = ಮತ್ತೊಬ್ಬರ ನಿಯಂತ್ರಣದಲ್ಲಿರುವ ಒಡೆಯನು, ಅಸೌ = ಇವನು, ಸರ್ವಸ್ಯ = ಸಮಸ್ತ ವಿಶ್ವಕ್ಕೂ, ಈಶಃ = ಒಡೆಯನು, ಪರಸ್ಯ = ಪರಮಾತ್ಮನಿಗೆ, ಏಷಿತವ್ಯಃ = ಅಧೀನನಾದವನು, ಇತಿ = ಹೀಗೆ ಕೌಂಡಿನ್ಯಶ್ರುತಿಯು ಹೇಳುತ್ತಿದೆ.

ಇಲ್ಲಿಗೆ ಅಣ್ವಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

ಪರಿಪೂರ್ಣಚಂದ್ರಿಕಾ

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**तत्वप्रकाशिका – अत्रेश्वरे जगत्कारणे श्रुतिसमन्वयसिध्यर्थं मुख्यप्राणपरिमाण-विषयश्रुतिविरोधपरिहारादस्ति शास्त्रादिसङ्गतिः । जगत्कारणत्वसिद्धये हरावुक्तः श्रुतिसमन्वयः मुख्यप्राणपरिमाणविषयश्रुतीनां विरोधेनाप्रामाण्येऽयुक्तः स्यादिति स निराकार्यः । प्रकृतो मुख्यप्राण एव विषयः व्याप्तोऽणुर्वेति सन्देहः । सन्देहबीजं श्रुतिविरोधं दर्शयन् पूर्वपक्षं च सूचयति – प्राण एवेति ।**

ಈ ಅಧಿಕರಣದಲ್ಲಿ ಜಗತ್ಕಾರಣನಾದ ಈಶ್ವರನಲ್ಲಿ ಶ್ರುತಿಸಮನ್ವಯವು ಸಿದ್ಧವಾಗುವುದಕ್ಕಾಗಿ ಮುಖ್ಯಪ್ರಾಣನ ಪರಿಮಾಣ ವಿಷಯದಲ್ಲಿರುವ ಶ್ರುತಿವಿರೋಧವನ್ನು ಪರಿಹಾರ ಮಾಡಲಾಗಿದೆ. ಆದ್ದರಿಂದ ಶಾಸ್ತ್ರ-ಅಧ್ಯಾಯ-ಪಾದ ಸಂಗತಿಗಳು ಇರುತ್ತವೆ.

ಜಗತ್ಕಾರಣತ್ವವು ಸಿದ್ಧವಾಗಬೇಕೆಂದರೆ ಶ್ರೀಹರಿಯಲ್ಲಿ ಹೇಳಲ್ಪಟ್ಟ ಶ್ರುತಿಸಮನ್ವಯವು ಮುಖ್ಯಪ್ರಾಣ ಪರಿಮಾಣವಿಷಯಕವಾದ ಶ್ರುತಿಗಳ ವಿರೋಧದಿಂದ ಅಪ್ರಮಾಣವಾಗುತ್ತದೆ. ಆದ್ದರಿಂದ ಈ ವಿರೋಧವನ್ನು ಪರಿಹಾರ ಮಾಡಲೇಬೇಕು.

ಪ್ರಕೃತನಾದ ಮುಖ್ಯಪ್ರಾಣನೇ ಅಧಿಕರಣಕ್ಕೆ ವಿಷಯನಾಗಿದ್ದಾನೆ. ಇವನು ವ್ಯಾಪ್ತನೋ, ಅಣುವೋ ? ಎಂಬುದು ಅಧಿಕರಣದ ಸಂದೇಹ. ಸಂದೇಹಕ್ಕೆ ಕಾರಣ ಶ್ರುತಿಗಳಲ್ಲಿರುವ ಪರಸ್ಪರ ವಿರೋಧವೇ ಆಗಿದೆ. ಇದನ್ನು ತೋರಿಸುವ ಮೂಲಕ ಪೂರ್ವಪಕ್ಷವನ್ನು 'ಪ್ರಾಣ ಏವ' ಇತ್ಯಾದಿಯಾಗಿ ಸೂಚನೆ ಮಾಡುತ್ತಿದ್ದಾರೆ.

ವಿವರಣೆ – ಹಿಂದಿನ ಅಧಿಕರಣದಲ್ಲಿ ಮುಖ್ಯಪ್ರಾಣನು ಐದು ಪ್ರಾಣಾದಿಗಳಿಗೆ ಪ್ರೇರಕನಾಗಿದ್ದಾನೆ ಮತ್ತು ಅವುಗಳಿಗಿಂತ ಶ್ರೇಷ್ಠವಾದ ಗುಣಗಳನ್ನು ಹೊಂದಿದ್ದಾನೆಂದು 'ಅಶೇಷಗುಣಪೂರ್ಣಾನಿ' ಎಂಬುದರ ಆಧಾರದಲ್ಲಿ ಸಮರ್ಥನೆ ಮಾಡಲಾಯಿತು. ಇವನು ಅಧಿಕಗುಣಗಳುಳ್ಳವನಾಗಬೇಕೆಂದರೆ ವ್ಯಾಪ್ತನಾಗಿರಲೇಬೇಕು ಎಂಬ ಪ್ರಶ್ನೆ ಹುಟ್ಟುತ್ತದೆ. ಈ ಪ್ರಶ್ನೆಗೆ ಈ ಅಧಿಕರಣದಲ್ಲಿ ಉತ್ತರ ನೀಡುತ್ತಿರುವುದರಿಂದ ಹಿಂದಿನ ಅಧಿಕರಣದಿಂದ ಈ ಪ್ರಾಣಾಣುತ್ವಾಧಿಕರಣಕ್ಕೆ ಆನಂತರ್ಯ ಸಂಗತಿಯು ಇರುತ್ತದೆ.

**तत्वप्रकाशिका – सर्वं सर्वसत्ताप्रदः । अन्यथा व्याप्त्याभावेऽसौ न धारयेत्। तथाच केन धार्यत इत्यर्थः । श्रुतिरणुत्वं वक्तीति शेषः । व्याप्त एव मुख्यप्राणः 'प्राण एवाधस्तात्' इति श्रुतेः । न चाणुत्वेऽपि श्रतिरस्तीति तद्विरोधः । सर्वजगद्धारकत्वयुक्तियुक्तत्वात् व्याप्तिश्रुतेः ।**

ಭಾಷ್ಯದಲ್ಲಿರುವ 'ಸರ್ವಂ' ಎಂಬ ಪದಕ್ಕೆ ಎಲ್ಲ ಪದಾರ್ಥಗಳಿಗೂ ಅಸ್ತಿತ್ವವನ್ನು ಕೊಡುವವನು ಎಂದರ್ಥ. 'ಅನ್ಯಥಾ' ಎಂಬ ಪದಕ್ಕೆ ಆ ಮುಖ್ಯಪ್ರಾಣನಿಗೆ ವ್ಯಾಪ್ತಿಯನ್ನು ಒಪ್ಪದಿದ್ದರೆ ಎಂದರ್ಥ. ಅವನು ಈ ಜಗತ್ತಿನ ಧಾರಣೆಯನ್ನು ಮಾಡದಿದ್ದರೆ ಬೇರೆ ಯಾರು ಧಾರಣೆಯನ್ನು ಮಾಡುತ್ತಾರೆ. ಈ ಅಭಿಪ್ರಾಯವನ್ನು ತಿಳಿಯಬೇಕು. 'ಶ್ರುತಿಃ' ಎಂಬ ಪದದ ಮುಂದೆ 'ಅಣುತ್ವಂ ವಕ್ತಿ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು.

ಮುಖ್ಯಪ್ರಾಣನು ವ್ಯಾಪ್ತನೇ ಆಗಿದ್ದಾನೆ. ಏಕೆಂದರೆ 'ಪ್ರಾಣ ಏವ ಅಧಸ್ತಾತ್' ಇತ್ಯಾದಿ ಶ್ರುತಿಯು ಇದನ್ನು ಪ್ರತಿಪಾದನೆ ಮಾಡುತ್ತಿದೆ. ಅಣುತ್ವ ವಿಷಯದಲ್ಲೂ ಕೂಡ ಶ್ರುತಿ ಇರುವುದರಿಂದ ಅದರ ವಿರೋಧವು ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಮುಖ್ಯಪ್ರಾಣನಿಗೆ ವ್ಯಾಪ್ತಿಯನ್ನು ಹೇಳುವ ಶ್ರುತಿಯು ಸಕಲ ಜಗತ್ತನ್ನು ಧಾರಣೆ ಮಾಡುತ್ತಾನೆಂಬ ಯುಕ್ತಿಯಿಂದ ಉಪೋದ್ಬಲಿತವಾಗಿದೆ.

ವಿವರಣೆ – 'ಪ್ರಾಣ ಏವೇದಂ ಸರ್ವಂ' ಎಂಬ ಶ್ರುತಿಯನ್ನು ನೋಡಿದಾಗ ಸಮಸ್ತ ಜಗತ್ತು ಪ್ರಾಣನಿಗಿಂತ ಅಭಿನ್ನವಾಗಿದೆ ಎಂಬ ಅಪಾರ್ಥವಾಗುತ್ತದೆ. ಆದರೆ ಯಾವ ವಸ್ತುವು ಯಾವುದರ ಅಧೀನವೋ ಅಂತಹ ಸಂದರ್ಭದಲ್ಲೂ ಕೂಡ ಐಕ್ಯವ್ಯಪದೇಶವು ಶಾಸ್ತ್ರದಲ್ಲಿ ಕಾಣಸುತ್ತದೆ. ಆದ್ದರಿಂದ ಇಲ್ಲಿರುವ ಸಕಲ ಶಬ್ದಕ್ಕೆ ಸಮಸ್ತ ಜಗತ್ತಿನ ಇರುವಿಕೆಗೆ ಕಾರಣನಾದವನು ಎಂಬರ್ಥವನ್ನೇ ವಿವಕ್ಷಿಸಬೇಕು.

'ಸರ್ವಮನ್ಯಥಾ ಕೇನ ಧಾರ್ಯತೇ' ಎಂಬ ವಾಯುಪ್ರೋಕ್ತ ವಚನವನ್ನು ನೋಡಿದಾಗ ವಾಕ್ಯವು ಪರಿಪೂರ್ಣವಾಗಿ ಅರ್ಥವಾಗುವುದಿಲ್ಲ. ಅದಕ್ಕಾಗಿ ಶೇಷಪೂರಣ ಮಾಡಿಕೊಂಡು ಅರ್ಥ ಮಾಡಿಕೊಂಡಾಗ ಮುಖ್ಯಪ್ರಾಣನು ವ್ಯಾಪ್ತನಾಗದಿದ್ದರೆ ಅವನು ಜಗತ್ತನ್ನು ಧಾರಣೆ ಮಾಡಲಾರ. ಆದ್ದರಿಂದ ಈ ಜಗತ್ತು ಯಾರಿಂದ ಧರಿಸಲ್ಪಡುತ್ತದೆ ಎಂಬರ್ಥವು ದೊರೆಯುತ್ತದೆ.

'ಮುಖ್ಯಪ್ರಾಣಃ ವ್ಯಾಪ್ತಃ ಸರ್ವಜಗದ್ಧಾರಕತ್ವಾತ್' ಎಂಬ ಯುಕ್ತಿಯಿಂದ 'ಸ ಏವ...' ಎಂಬ ಶ್ರುತಿಯು ಉಪೋದ್ಬಲಿತವಾಗಿದೆ. ಆದ್ದರಿಂದ ಮುಖ್ಯಪ್ರಾಣನು ವ್ಯಾಪ್ತನಾಗಿದ್ದಾನೆಂಬುದು ಯುಕ್ತಿಯುಕ್ತವಾಯಿತು.

**तत्वप्रकाशिका – तथा च श्रुतिः । 'महान् वै मुख्यप्राणो येन व्याप्तं चराचरम्' इति । 'सप्तस्कन्धगतो लोकान्यो बिभर्ति महाबलः, इति च हरिवंशे । अतः प्रबलश्रुतिविरोधादप्रमाणमणुत्वश्रुतिरिति न श्रुतिसमन्वयेन हरेर्जगत्कारणत्वसिद्धिरिति भावः ।**

ಮುಖ್ಯಪ್ರಾಣನು ವ್ಯಾಪ್ತನಾಗಿದ್ದಾನೆಂಬ ವಿಷಯದಲ್ಲಿ ಶ್ರುತಿಪ್ರಮಾಣ ಹೀಗಿದೆ – 'ಮಹಾನ್ವೈ ಮುಖ್ಯಪ್ರಾಣೋ ಯೇನ ವ್ಯಾಪ್ತಂ ಚರಾಚರಮ್' 'ಯಾವ ಮುಖ್ಯಪ್ರಾಣನಿಂದ ಈ ಸ್ಥಾವರ ಜಂಗಮಾತ್ಮಕವಾದ ಪ್ರಪಂಚವು ವ್ಯಾಪ್ತವಾಗಿದೆಯೋ, ಅಂಥ ಮುಖ್ಯಪ್ರಾಣನು ಶ್ರೇಷ್ಠನಾಗಿದ್ದಾನೆಂಬುದು ಪ್ರಸಿದ್ಧವಾಗಿದೆ.

'ಸಪ್ತಸ್ಕಂದಗತೋ ಲೋಕಾನ್ ಯೋ ಬಿಭರ್ತಿ ಮಹಾಬಲಃ' 'ಜಗತ್ತೆಂಬ ವೃಕ್ಷಕ್ಕೆ ಕೊಂಬೆಯಂತಿರುವ ಏಳು ಲೋಕಗಳಲ್ಲಿರುವವನಾಗಿ ಅಲ್ಲಿ ನೆಲೆಸಿರುವ ಸರ್ವರನ್ನು ಯಾವ ಮುಖ್ಯಪ್ರಾಣನು ಧರಿಸಿದ್ದಾನೋ, ಅವನೇ ಮಹಾಬಲಶಾಲಿಯಾಗಿದ್ದಾನೆ' ಎಂಬುದಾಗಿ ಹರಿವಂಶವು ಹೇಳುತ್ತಿದೆ.

ಆದ್ದರಿಂದ ಪ್ರಬಲವಾದ ಶ್ರುತಿವಿರೋಧವಿರುವ ಕಾರಣ ಮುಖ್ಯಪ್ರಾಣನಿಗೆ ಅಣುತ್ವವನ್ನು ಹೇಳುವ ಶ್ರುತಿಯು ಅಪ್ರಮಾಣವಾಗುತ್ತದೆ. ಆದ್ದರಿಂದ ಶ್ರುತಿಸಮನ್ವಯದ ಮೂಲಕ ಶ್ರೀಹರಿಗೆ ಜಗತ್ಕಾರಣತ್ವವು ಸಿದ್ಧವಾಗುವುದಿಲ್ಲ. ಇಷ್ಟು ಅಧಿಕರಣದ ಪೂರ್ವಪಕ್ಷ.

**ತತ್ವಪ್ರಕಾಶಿಕಾ – सिद्धान्तयत्सूत्रमवतारयति – अत इति ।। अणुरेव मुख्यप्राणः । न च श्रुत्यादिविरोधः । यतोऽसौ बहिर्देहाद्वर्तमानेन मुख्यरूपेण व्याप्तश्चेति सूत्रार्थः । कुतोऽयं विशेष इत्यत आह – स इति ।।**

ಸಿದ್ಧಾಂತಸ್ಥಾಪಕವಾದ ಸೂತ್ರಕ್ಕೆ 'ಅತಃ' ಎಂಬುದಾಗಿ ಅವತಾರಿಕೆಯನ್ನು ನೀಡುತ್ತಿದ್ದಾರೆ.

ಮುಖ್ಯಪ್ರಾಣನು ಅಣುವೇ ಆಗಿದ್ದಾನೆ. ಇದರಿಂದ ಶ್ರುತ್ಯಾದಿ ವಿರೋಧಕ್ಕೆ ಅವಕಾಶವಿಲ್ಲ.

ದೇಹಾಂತರ್ಗತವಾದ ರೂಪದಿಂದ ಇವನು ಅಣುವಾಗಿದ್ದರೂ ಮುಖ್ಯವಾಯು ರೂಪದಿಂದ ದೇಹದ ಹೊರಗಡೆ ವ್ಯಾಪ್ತನಾಗಿದ್ದಾನೆ. ಆದ್ದರಿಂದ ವ್ಯಾಪ್ತಿಶ್ರುತಿಯ ವಿರೋಧವಿಲ್ಲ ಎಂಬುದು ಸೂತ್ರದ ಅರ್ಥ.

ಹೀಗೇಕೆ ವಿಶೇಷಾರ್ಥವನ್ನು ಹೇಳಬೇಕು? ಎಂಬ ಪ್ರಶ್ನೆಗೆ 'ಸಃ' ಇತ್ಯಾದಿಯಾಗಿ ಭಾಷ್ಯದಲ್ಲಿ ಉತ್ತರಿಸುತ್ತಿದ್ದಾರೆ.

ವಿವರಣೆ – ಪ್ರಾಣಶಬ್ದವು ಮುಖ್ಯಪ್ರಾಣನಲ್ಲಿಯೇ ಯುಕ್ತವಾಗುತ್ತದೆಂದು ತಿಳಿಸುವುದಕ್ಕಾಗಿ 'ಪ್ರಾಣೋ ವಾ ಈಶಿತವ್ಯೇಷಃ' ಎಂಬ ವಾಕ್ಯಶೇಷವನ್ನು ಉದಾಹರಿಸಿದ್ದಾರೆ.

ಕೇವಲ ಶ್ರುತಿಯು ಯುಕ್ತಿಬದ್ಧವಾದ ಶ್ರುತಿಯನ್ನು ಬಾಧಿಸಲು ಸಾಧ್ಯವಿಲ್ಲವೆಂದು ಹೇಳಬಾರದು. ಏಕೆಂದರೆ ಇದು ವಿಶೇಷಶ್ರುತಿ ಆಗಿರುತ್ತದೆ.

ಮತ್ತು ಪ್ರಾಣನ ನಾಡಿಯಲ್ಲಿ ಸಂಚರಿಸುವಿಕೆ ಎಂಬ ಯುಕ್ತಿಯ ಬೆಂಬಲವೂ ಕೂಡ ಇದಕ್ಕೆ ಇದೆ. 'ಅಣುರ್ವ್ಯೆ ಮುಖ್ಯಪ್ರಾಣೋಯ ಉತ್ಕ್ರಾಮತಿ ನಾಡೀಭಿಃ' 'ಈ ಮುಖ್ಯಪ್ರಾಣನು ಅಣುವಾಗಿದ್ದು ನಾಡಿಯಿಂದ ಉತ್ಕ್ರಮಣ ಮಾಡುತ್ತಾನೆ' ಎಂಬುದಾಗಿ ಶ್ರುತಿಯು ಆಧಾರವಾಗಿದೆ.

ಆದ್ದರಿಂದ ಶ್ರುತಿಗೆ ವಿರೋಧವಿಲ್ಲದ್ದರಿಂದ ಮುಖ್ಯಪ್ರಾಣನು ಅಣುವೆಂದು ಸಿದ್ಧವಾಗುತ್ತದೆ. ಆದ್ದರಿಂದ ಜಗತ್ಕಾರಣನಾದ ಬ್ರಹ್ಮನಲ್ಲಿ ಶ್ರುತಿಸಮನ್ವಯವು ಯೋಗ್ಯವೆಂಬುದು ಸಿದ್ಧವಾಯಿತು.

**ತತ್ವಪ್ರಕಾಶಿಕಾ – प्राणश्च मुख्य एवेति ज्ञापनाय वाक्यशेषोद्धारः । नचेदं श्रुतिमात्रं सयुक्तिकश्रुतिबाधनाय नालमिति वाच्यम् । विशेषश्रुतित्वात् ।**

ಭಾಷ್ಯದಲ್ಲಿರುವ 'ಸರ್ವಂ' ಎಂಬ ಪದಕ್ಕೆ ಎಲ್ಲ ಪದಾರ್ಥಗಳಿಗೂ ಅಸ್ತಿತ್ವವನ್ನು ಕೊಡುವವನು ಎಂದರ್ಥ. 'ಅನ್ಯಥಾ' ಎಂಬ ಪದಕ್ಕೆ ಆ ಮುಖ್ಯಪ್ರಾಣನಿಗೆ ವ್ಯಾಪ್ತಿಯನ್ನು ಒಪ್ಪದಿದ್ದರೆ ಎಂದರ್ಥ. ಅವನು ಈ ಜಗತ್ತಿನ ಧಾರಣೆಯನ್ನು ಮಾಡದಿದ್ದರೆ ಬೇರೆ ಯಾರು ಧಾರಣೆಯನ್ನು ಮಾಡುತ್ತಾರೆ. ಈ ಅಭಿಪ್ರಾಯವನ್ನು ತಿಳಿಯಬೇಕು. 'ಶ್ರುತಿಃ' ಎಂಬ ಪದದ ಮುಂದೆ 'ಅಣುತ್ವಂ ವಕ್ತಿ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು.

ಮುಖ್ಯಪ್ರಾಣನು ವ್ಯಾಪ್ತನೇ ಆಗಿದ್ದಾನೆ. ಏಕೆಂದರೆ 'ಪ್ರಾಣ ಏವ ಅಧಸ್ತಾತ್' ಇತ್ಯಾದಿ ಶ್ರುತಿಯು ಇದನ್ನು ಪ್ರತಿಪಾದನೆ ಮಾಡುತ್ತಿದೆ. ಅಣುತ್ವ ವಿಷಯದಲ್ಲೂ ಕೂಡ ಶ್ರುತಿ ಇರುವುದರಿಂದ ಅದರ ವಿರೋಧವು ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಮುಖ್ಯಪ್ರಾಣನಿಗೆ ವ್ಯಾಪ್ತಿಯನ್ನು ಹೇಳುವ ಶ್ರುತಿಯು ಸಕಲ ಜಗತ್ತನ್ನು ಧಾರಣೆ ಮಾಡುತ್ತಾನೆಂಬ ಯುಕ್ತಿಯಿಂದ ಉಪೋದ್ಬಲಿತವಾಗಿದೆ.

ವಿವರಣೆ – 'ಪ್ರಾಣ ಏವೇದಂ ಸರ್ವಂ' ಎಂಬ ಶ್ರುತಿಯನ್ನು ನೋಡಿದಾಗ ಸಮಸ್ತ ಜಗತ್ತು ಪ್ರಾಣನಿಗಿಂತ ಅಭಿನ್ನವಾಗಿದೆ ಎಂಬ ಅಪಾರ್ಥವಾಗುತ್ತದೆ. ಆದರೆ ಯಾವ ವಸ್ತುವು ಯಾವುದರ ಅಧೀನವೋ ಅಂತಹ ಸಂದರ್ಭದಲ್ಲೂ ಕೂಡ ಐಕ್ಯವ್ಯಪದೇಶವು ಶಾಸ್ತ್ರದಲ್ಲಿ ಕಾಣಸುತ್ತದೆ. ಆದ್ದರಿಂದ ಇಲ್ಲಿರುವ ಸಕಲ ಶಬ್ದಕ್ಕೆ ಸಮಸ್ತ ಜಗತ್ತಿನ ಇರುವಿಕೆಗೆ ಕಾರಣನಾದವನು ಎಂಬರ್ಥವನ್ನೇ ವಿವಕ್ಷಿಸಬೇಕು.

'ಸರ್ವಮನ್ಯಥಾ ಕೇನ ಧಾರ್ಯತೇ' ಎಂಬ ವಾಯುಪ್ರೋಕ್ತ ವಚನವನ್ನು ನೋಡಿದಾಗ ವಾಕ್ಯವು ಪರಿಪೂರ್ಣವಾಗಿ ಅರ್ಥವಾಗುವುದಿಲ್ಲ. ಅದಕ್ಕಾಗಿ ಶೇಷಪೂರಣ ಮಾಡಿಕೊಂಡು ಅರ್ಥ ಮಾಡಿಕೊಂಡಾಗ ಮುಖ್ಯಪ್ರಾಣನು ವ್ಯಾಪ್ತನಾಗದಿದ್ದರೆ ಅವನು ಜಗತ್ತನ್ನು ಧಾರಣೆ ಮಾಡಲಾರ. ಆದ್ದರಿಂದ ಈ ಜಗತ್ತು ಯಾರಿಂದ ಧರಿಸಲ್ಪಡುತ್ತದೆ ಎಂಬರ್ಥವು ದೊರೆಯುತ್ತದೆ.

'ಮುಖ್ಯಪ್ರಾಣಃ ವ್ಯಾಪ್ತಃ ಸರ್ವಜಗದ್ಧಾರಕತ್ವಾತ್' ಎಂಬ ಯುಕ್ತಿಯಿಂದ 'ಸ ಏವ...' ಎಂಬ ಶ್ರುತಿಯು ಉಪೋದ್ಬಲಿತವಾಗಿದೆ. ಆದ್ದರಿಂದ ಮುಖ್ಯಪ್ರಾಣನು ವ್ಯಾಪ್ತನಾಗಿದ್ದಾನೆಂಬುದು ಯುಕ್ತಿಯುಕ್ತವಾಯಿತು.

**तत्वप्रकाशिका – तथा च श्रुतिः । 'महान् वै मुख्यप्राणो येन व्याप्तं चराचरम्' इति । 'सप्तस्कन्धगतो लोकान्यो बिभर्ति महाबलः, इति च हरिवंशे । अतः प्रबलश्रुतिविरोधादप्रमाणमणुत्वश्रुतिरिति न श्रुतिसमन्वयेन हरेर्जगत्कारणत्व-सिद्धिरिति भावः ।**

ಮುಖ್ಯಪ್ರಾಣನು ವ್ಯಾಪ್ತನಾಗಿದ್ದಾನೆಂಬ ವಿಷಯದಲ್ಲಿ ಶ್ರುತಿಪ್ರಮಾಣ ಹೀಗಿದೆ – 'ಮಹಾನ್ವೈ ಮುಖ್ಯಪ್ರಾಣೋ ಯೇನ ವ್ಯಾಪ್ತಂ ಚರಾಚರಮ್' 'ಯಾವ ಮುಖ್ಯಪ್ರಾಣನಿಂದ ಈ ಸ್ಥಾವರ ಜಂಗಮಾತ್ಮಕವಾದ ಪ್ರಪಂಚವು ವ್ಯಾಪ್ತವಾಗಿದೆಯೋ, ಅಂಥ ಮುಖ್ಯಪ್ರಾಣನು ಶ್ರೇಷ್ಠನಾಗಿದ್ದಾನೆಂಬುದು ಪ್ರಸಿದ್ಧವಾಗಿದೆ.

'ಸಪ್ತಸ್ಕಂದಗತೋ ಲೋಕಾನ್ ಯೋ ಬಿಭರ್ತಿ ಮಹಾಬಲಃ' 'ಜಗತ್ತೆಂಬ ವೃಕ್ಷಕ್ಕೆ ಕೊಂಬೆಯಂತಿರುವ ಏಳು ಲೋಕಗಳಲ್ಲಿರುವವನಾಗಿ ಅಲ್ಲಿ ನೆಲೆಸಿರುವ ಸರ್ವರನ್ನು ಯಾವ ಮುಖ್ಯಪ್ರಾಣನು ಧರಿಸಿದ್ದಾನೋ, ಅವನೇ ಮಹಾಬಲಶಾಲಿಯಾಗಿದ್ದಾನೆ' ಎಂಬುದಾಗಿ ಹರಿವಂಶವು ಹೇಳುತ್ತಿದೆ.

ಆದ್ದರಿಂದ ಪ್ರಬಲವಾದ ಶ್ರುತಿವಿರೋಧವಿರುವ ಕಾರಣ ಮುಖ್ಯಪ್ರಾಣನಿಗೆ ಅಣುತ್ವವನ್ನು ಹೇಳುವ ಶ್ರುತಿಯು ಅಪ್ರಮಾಣವಾಗುತ್ತದೆ. ಆದ್ದರಿಂದ ಶ್ರುತಿಸಮನ್ವಯದ ಮೂಲಕ ಶ್ರೀಹರಿಗೆ ಜಗತ್ಕಾರಣತ್ವವು ಸಿದ್ಧವಾಗುವುದಿಲ್ಲ. ಇಷ್ಟು ಅಧಿಕರಣದ ಪೂರ್ವಪಕ್ಷ.

**ತತ್ವಪ್ರಕಾಶಿಕಾ – सिद्धान्तयत्सूत्रमवतारयति – अत इति ।। अणुरेव मुख्यप्राणः । न च श्रुत्यादिविरोधः । यतोऽसौ बहिर्देहाद्वर्तमानेन मुख्यरूपेण व्याप्तश्चेति सूत्रार्थः । कुतोऽयं विशेष इत्यत आह – स इति ।।**

ಸಿದ್ಧಾಂತಸ್ಥಾಪಕವಾದ ಸೂತ್ರಕ್ಕೆ 'ಅತಃ' ಎಂಬುದಾಗಿ ಅವತಾರಿಕೆಯನ್ನು ನೀಡುತ್ತಿದ್ದಾರೆ.

ಮುಖ್ಯಪ್ರಾಣನು ಅಣುವೇ ಆಗಿದ್ದಾನೆ. ಇದರಿಂದ ಶ್ರುತ್ಯಾದಿ ವಿರೋಧಕ್ಕೆ ಅವಕಾಶವಿಲ್ಲ.

ದೇಹಾಂತರ್ಗತವಾದ ರೂಪದಿಂದ ಇವನು ಅಣುವಾಗಿದ್ದರೂ ಮುಖ್ಯವಾಯು ರೂಪದಿಂದ ದೇಹದ ಹೊರಗಡೆ ವ್ಯಾಪ್ತನಾಗಿದ್ದಾನೆ. ಆದ್ದರಿಂದ ವ್ಯಾಪ್ತಿಶ್ರುತಿಯ ವಿರೋಧವಿಲ್ಲ ಎಂಬುದು ಸೂತ್ರದ ಅರ್ಥ.

ಹೀಗೇಕೆ ವಿಶೇಷಾರ್ಥವನ್ನು ಹೇಳಬೇಕು? ಎಂಬ ಪ್ರಶ್ನೆಗೆ 'ಸಃ' ಇತ್ಯಾದಿಯಾಗಿ ಭಾಷ್ಯದಲ್ಲಿ ಉತ್ತರಿಸುತ್ತಿದ್ದಾರೆ.

ವಿವರಣೆ – ಪ್ರಾಣಶಬ್ದವು ಮುಖ್ಯಪ್ರಾಣನಲ್ಲಿಯೇ ಯುಕ್ತವಾಗುತ್ತದೆಂದು ತಿಳಿಸುವುದಕ್ಕಾಗಿ 'ಪ್ರಾಣೋ ವಾ ಈಶಿತವ್ಯೇಷಃ' ಎಂಬ ವಾಕ್ಯಶೇಷವನ್ನು ಉದಾಹರಿಸಿದ್ದಾರೆ.

ಕೇವಲ ಶ್ರುತಿಯು ಯುಕ್ತಿಬದ್ಧವಾದ ಶ್ರುತಿಯನ್ನು ಬಾಧಿಸಲು ಸಾಧ್ಯವಿಲ್ಲವೆಂದು ಹೇಳಬಾರದು. ಏಕೆಂದರೆ ಇದು ವಿಶೇಷಶ್ರುತಿ ಆಗಿರುತ್ತದೆ.

ಮತ್ತು ಪ್ರಾಣನ ನಾಡಿಯಲ್ಲಿ ಸಂಚರಿಸುವಿಕೆ ಎಂಬ ಯುಕ್ತಿಯ ಬೆಂಬಲವೂ ಕೂಡ ಇದಕ್ಕೆ ಇದೆ. 'ಅಣುರ್ವೈ ಮುಖ್ಯಪ್ರಾಣೋಯ ಉತ್ಕ್ರಾಮತಿ ನಾಡೀಭಿಃ' 'ಈ ಮುಖ್ಯಪ್ರಾಣನು ಅಣುವಾಗಿದ್ದು ನಾಡಿಯಿಂದ ಉತ್ಕ್ರಮಣ ಮಾಡುತ್ತಾನೆ' ಎಂಬುದಾಗಿ ಶ್ರುತಿಯು ಆಧಾರವಾಗಿದೆ.

ಆದ್ದರಿಂದ ಶ್ರುತಿಗೆ ವಿರೋಧವಿಲ್ಲದ್ದರಿಂದ ಮುಖ್ಯಪ್ರಾಣನು ಅಣುವೆಂದು ಸಿದ್ಧವಾಗುತ್ತದೆ. ಆದ್ದರಿಂದ ಜಗತ್ಕಾರಣನಾದ ಬ್ರಹ್ಮನಲ್ಲಿ ಶ್ರುತಿಸಮನ್ವಯವು ಯೋಗ್ಯವೆಂಬುದು ಸಿದ್ಧವಾಯಿತು.

**ತತ್ವಪ್ರಕಾಶಿಕಾ – प्राणश्च मुख्य एवेति ज्ञापनाय वाक्यशेषोद्धारः । नचेदं श्रुतिमात्रं सयुक्तिकश्रुतिबाधनाय नालमिति वाच्यम् । विशेषश्रुतित्वात् ।**

**नाडीसञ्चारित्वयुक्तेश्च । 'अणुर्वै मुख्यप्राणो य उत्क्रामति नाडीभिः' इति श्रुतेः । अतः श्रुत्यविरोधेन मुख्यप्राणस्याणुत्वसिद्धेर्युक्तो जगत्कारणे ब्रह्मणि श्रुतिसमन्वय इति सिद्धम् ।।**

ಒಂದುವೇಳೆ 'ಪ್ರಾಣೋವಾ ಈಶಿತವ್ಯೇಷಃ' ಎಂಬ ಕೌಂಡಿನ್ಯ ಶ್ರುತಿಯ ವಾಕ್ಯಶೇಷವನ್ನು ಉದಾಹರಣೆ ಮಾಡದಿದ್ದರೆ ಇದು ಪರಮಾತ್ಮನ ಪ್ರಕರಣವೆಂಬ ಶಂಕೆಯು ಪ್ರಾಪ್ತವಾಗುತ್ತಿತ್ತು. ಆದರೆ ಇದು ಮುಖ್ಯಪ್ರಾಣನ ಪ್ರಕರಣವೆಂದು ತಿಳಿಸಬೇಕಾಗಿದೆ. ವಾಕ್ಯಶೇಷದಿಂದ ಈ ವಿಷಯವು ಸ್ಪಷ್ಟವಾಗುತ್ತದೆ.

ಶರೀರದಲ್ಲಿ ಇರುವ ಮುಖ್ಯಪ್ರಾಣನು ಅಣುರೂಪನಾಗಿದ್ದಾನೆ. ಹೊರಗಡೆ ಇರುವವನು ವ್ಯಾಪ್ತನಾಗಿದ್ದಾನೆ ಎಂಬ ವ್ಯವಸ್ಥೆಯನ್ನು ಈ ವಿಶೇಷ ಶ್ರುತಿಯು ಮಾಡುತ್ತಿದೆ. ಮತ್ತು ನಾಡಿಯ ಒಳಗಡೆ ಸಂಚಾರ ಮಾಡಬೇಕೆಂದರೆ ಆ ಮುಖ್ಯಪ್ರಾಣನು ಅಣುರೂಪನೇ ಆಗಿರಬೇಕು. ಹಾಗಾಗಿ 'ಮುಖ್ಯಪ್ರಾಣಃ ಅಣುಃ ನಾಡೀಷು ಸಂಚಾರಿತ್ವಾತ್' ಎಂಬ ಯುಕ್ತಿಯು ಇದಕ್ಕೆ ಆಧಾರವಾಗಿದೆ. ಹೀಗೆ ಅಣುತ್ವ ಶ್ರುತಿಯು ಅತ್ಯಂತ ಪ್ರಬಲವಾಗಿದೆ ಎಂದು ತಿಳಿಯಬೇಕು.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಅಣುತ್ವಾಧಿಕರಣ ಮುಗಿಯಿತು

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अण्वधिकरणम्

ಮುಖ್ಯಪ್ರಾಣನು ಅಣುಸ್ವರೂಪನು ಬಾಹ್ಯದಲ್ಲಿ ವಾಯುರೂಪದಿಂದ ವ್ಯಾಪ್ತನು

**।। अणुश्च ।। पूर्वोक्ताधिकसद्गुणत्ववत्प्राणस्य विभुत्वमप्यस्त्विति पूर्वपक्षोदयात् सङ्गतिः ।**

ಹಿಂದಿನ ಅಧಿಕರಣದಲ್ಲಿ 'ವ್ಯಕ್ತಸದ್ಗುಣತ್ವ' ಎಂಬ ಗುಣವನ್ನು ಮುಖ್ಯಪ್ರಾಣನಲ್ಲಿ ಸಮರ್ಥನೆ ಮಾಡಲಾಯಿತು. ಅದರಂತೆ 'ವಿಭುತ್ವ' ಎಂಬ ಗುಣವೂ ಕೂಡ ಮುಖ್ಯಪ್ರಾಣನಲ್ಲಿ ಒಪ್ಪಬಹುದಲ್ಲವೇ? ಎಂಬುದಾಗಿ ಅಧಿಕಾಕ್ಷೇಪವು ಬಂದರೆ ಈ ಅಧಿಕರಣವು ಉತ್ತರಿಸುತ್ತಿದೆ. ಆದ್ದರಿಂದ ಪೂರ್ವಾಧಿಕರಣದಿಂದ ಆನಂತರ್ಯಸಂಗತಿಯು ಇದಕ್ಕೆ ಯುಕ್ತವಾಗುತ್ತದೆ.

**अत्र श्रुतिसमन्वयेनोक्तं ब्रह्मणः सर्वस्रष्टृत्वादिकमयुक्तं न वेति चिन्ता । तदर्थं श्रुतिरप्रमाणमुत नेति । तदर्थं मुख्यप्राणस्याणुत्वश्रुतिरप्रमाणमुत नेति । तदर्थमणुत्वश्रुतिः प्रबलव्याप्तत्वश्रुतिबाधितोत नेति । तदर्थं व्याप्तत्वश्रुतिः किमान्तरमुख्यप्राणरूपाभिप्राया किं वा बाह्यमुख्यवायुरूपाभिप्रायेति ।**

ಶ್ರುತಿ ಸಮನ್ವಯದ ಮೂಲಕ ಬ್ರಹ್ಮನಿಗೆ ಸರ್ವಸ್ರಷ್ಟೃತ್ವಾದಿಗಳನ್ನು ಪ್ರತಿಪಾದನೆ ಮಾಡಿದ್ದಾಯಿತು. ಆದರೆ ಇದು ಅಯುಕ್ತವೋ ಅಥವಾ ಅಲ್ಲವೋ? ಎಂಬುದು ಈ ಅಧಿಕರಣದಲ್ಲಿ ವಿಚಾರ ಮಾಡುತ್ತಿದ್ದಾರೆ. ಇದಕ್ಕೆ ಪೂರಕವಾಗಿ ಶ್ರುತಿಯು ಅಪ್ರಮಾಣವೋ ಅಲ್ಲವೋ? ಎಂಬ ವಿಚಾರವನ್ನು ಮಾಡಬೇಕು. ಅದಕ್ಕಾಗಿ ಮುಖ್ಯಪ್ರಾಣನಿಗೆ ಅಣುತ್ವವನ್ನು ಹೇಳುವ ಶ್ರುತಿಯು ಅಪ್ರಮಾಣವೋ

ಅಥವಾ ಅಲ್ಲವೋ? ಎಂಬ ವಿಚಾರವನ್ನು ಮಾಡಬೇಕು. ಅದಕ್ಕಾಗಿ ಅಣುತ್ವ ಶ್ರುತಿಯು ಪ್ರಬಲವಾದ ವ್ಯಾಪ್ತತ್ವ ಶ್ರುತಿಯಿಂದ ಬಾಧಿತವೋ ಅಲ್ಲವೋ? ಎಂಬುದನ್ನು ವಿಚಾರ ಮಾಡಬೇಕು. ಇದಕ್ಕಾಗಿ ವ್ಯಾಪ್ತತ್ವ ಶ್ರುತಿಯು ದೇಹದ ಒಳಗಿರುವ ಮುಖ್ಯಪ್ರಾಣನನ್ನು ವಿಷಯೀಕರಿಸುತ್ತಿದೆಯೋ ಅಥವಾ ದೇಹದ ಹೊರಗೇ ಇರುವ ಮುಖ್ಯಪ್ರಾಣನನ್ನು ವಿವಕ್ಷಿಸುತ್ತಿದೆಯೋ? ಎಂಬುದಾಗಿ ವಿಚಾರ ಮಾಡಬೇಕು.

ವ್ಯಾಪ್ತತ್ವ ಶ್ರುತಿಯು ದೇಹದ ಒಳಗಿರುವ ಮುಖ್ಯಪ್ರಾಣವಿಷಯಕವೆಂದು ಸಿದ್ಧವಾದರೆ ಅಣುತ್ವ ಶ್ರುತಿಯು ವ್ಯಾಪ್ತತ್ವ ಶ್ರುತಿಯಿಂದ ಬಾಧಿತವಾಗುತ್ತದೆ. ಆಗ ಮುಖ್ಯಪ್ರಾಣನಿಗೆ ಅಣುತ್ವವನ್ನು ಹೇಳುವ ಶ್ರುತಿಯು ಅಪ್ರಮಾಣವಾಯಿತು. ಅಪ್ರಮಾಣವಾದ್ದರಿಂದಲೇ ಸಕಲ ಶ್ರುತಿಸಮನ್ವಯವು ಬ್ರಹ್ಮನಲ್ಲಿ ಸಿದ್ಧವಾಗುವುದಿಲ್ಲ. ಹೀಗೆ ಪೂರ್ವಪಕ್ಷಿಗಳು ಹೇಳುತ್ತಾರೆ.

ವ್ಯಾಪ್ತತ್ವ ಶ್ರುತಿಯು ದೇಹದ ಹೊರಗಿರುವ ಮುಖ್ಯಪ್ರಾಣನನ್ನೇ ವಿಷಯೀಕರಿಸುತ್ತಿದೆ. ಆದ್ದರಿಂದ ಅಣುತ್ವ ಶ್ರುತಿಯು ವ್ಯಾಪ್ತತ್ವಶ್ರುತಿಯಿಂದ ಬಾಧಿತವಾಗುವುದಿಲ್ಲ. ಆದ್ದರಿಂದ ಮುಖ್ಯಪ್ರಾಣನಿಗೆ ಅಣುತ್ವವನ್ನು ಹೇಳುವ ಶ್ರುತಿಯು ಪ್ರಮಾಣವೇ ಆಯಿತು. ಹಾಗಾಗಿ ಶ್ರುತಿಸಮನ್ವಯದ ಮೂಲಕ ಬ್ರಹ್ಮನಿಗೆ ಸರ್ವಸ್ರಷ್ಟೃತ್ವವನ್ನು ಉಪಪಾದನೆ ಮಾಡಬಹುದು ಎಂಬುದು ಅಧಿಕರಣದ ಸಿದ್ಧಾಂತ.

**अन्ये तु ''सम एभिस्त्रिभिर्लोकैः'' इति प्राणस्य सर्वगतत्वश्रुतिराधिदैविकेन हिरण्यगर्भप्राणात्मना । आध्यात्मिकेन तु परिच्छिन्नत्वमित्याहुः ।**

ಇಲ್ಲಿ ಪರವಾದಿಗಳು 'ಸಮ ಏಭಿಸ್ತ್ರಿಭಿರ್ಲೋಕೈಃ' ಎಂಬ ಶ್ರುತಿಯಿಂದ ಯಾವ ಮುಖ್ಯಪ್ರಾಣನಿಗೆ ಸರ್ವಗತತ್ವವು ಶ್ರುತವಾಗುತ್ತಿದೆಯೋ ಇದು ಆದಿದೈವಿಕವಾದ ಹಿರಣ್ಯಗರ್ಭವೆಂಬ ಮುಖ್ಯಪ್ರಾಣನಿಗೆ ಸಂಬಂಧಪಟ್ಟಂತೆ ಹೇಳುತ್ತಿದೆ. ಆಧ್ಯಾತ್ಮಿಕವಾದ ದೇಹದ ಒಳಗೆ ಇರುವ ಮುಖ್ಯಪ್ರಾಣನೇ ಆದರೂ ಪರಿಚ್ಛಿನ್ನನೇ ಆಗಿದ್ದಾನೆ ಎಂಬ ಸಮರ್ಥನೆಗಾಗಿ 'ಅಣುಶ್ಚ' ಎಂಬ ಸೂತ್ರವು ಹೊರಟಿದೆ ಎಂದು ಹೇಳುತ್ತಾರೆ

**तन्न । हिरण्यगर्भस्य तद्बुद्धेर्वा परिच्छिन्नत्वेन सर्वगतत्वोक्त्ययोगात् ।**

ಇದು ತಪ್ಪು. ಹಿರಣ್ಯಗರ್ಭನಾಗಲಿ, ಅವನ ಬುದ್ಧಿಯಾಗಲಿ ಪರಿಚ್ಛಿನ್ನವಾಗಿರುವುದರಿಂದ ಸರ್ವಗತವಾಗುವುದಿಲ್ಲ. ಏಕೆಂದರೆ ಹಿರಣ್ಯಗರ್ಭನು ವ್ಯಾಪ್ತನೆಂದು ನಾವು ಅಂಗೀಕಾರ ಮಾಡಿಲ್ಲ. ಅಣುವೆಂದೇ ಈ ಹಿಂದೆ ಉಪಪಾದನೆ ಮಾಡಿದ್ದೇವೆ. ಹಿರಣ್ಯಗರ್ಭನ ಬುದ್ಧಿಯನ್ನು ವ್ಯಾಪ್ತವೆಂದು ನೀವೂ ಕೂಡ ಅಂಗೀಕಾರ ಮಾಡಿಲ್ಲ. ಹಾಗಾಗಿ ಸರ್ವಗತತ್ವವನ್ನು ಹೇಳಲು ಸಾಧ್ಯವಿಲ್ಲ.

ಅಣ್ವಧಿಕರಣ (೨-೪-೯)

**केचित्तु सर्वप्रवृत्तिहेतुत्वात् प्राणस्य सर्वगतत्वोक्तिरित्याहुः । तन्न । ''अन्तर्वा अणुर्बहिर्महानिति श्रुत्युक्तसमाधौ सति मनआदिसाधारणेन सर्वप्रवृत्तिहेतुत्वेन सर्वगतत्वोक्तेरयोगात् ॥**

**॥ इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् अण्वधिकरणं सम्पूर्णम् ॥९॥**

ರಾಮಾನುಜರು ಹೀಗೆ ಹೇಳುತ್ತಾರೆ. ಎಲ್ಲಾ ಪ್ರವೃತ್ತಿಗಳಿಗೆ ಕಾರಣನಾಗಿರುವುದರಿಂದ ಮುಖ್ಯಪ್ರಾಣನಿಗೆ ಸರ್ವಗತತ್ವವು ಹೇಳಲ್ಪಟ್ಟಿದೆ ಎಂದು.

ಇದೂ ಕೂಡ ತಪ್ಪು. 'ಅಂತರ್ವಾ ಅಣುರ್ಬಹಿರ್ಮಹಾನ್' ಎಂಬ ಶ್ರುತಿಯಲ್ಲಿ ಒಳಗಿರುವ ಮುಖ್ಯಪ್ರಾಣನು ಅಣುವಾಗಿದ್ದಾನೆ. ಹೊರಗೆ ಇರುವವನು ವ್ಯಾಪ್ತನಾಗಿದ್ದಾನೆಂಬ ಸಮಾಧಾನವೇ ಇರಬೇಕಾದರೆ ಸರ್ವಪ್ರವೃತ್ತಿಗೆ ಕಾರಣನಾಗಿರುವುದರಿಂದ ಮುಖ್ಯಪ್ರಾಣನು ಸರ್ವಗತನಾಗಿದ್ದಾನೆಂಬ ಗೌಣಾರ್ಥವನ್ನು ಅಂಗೀಕರಿಸುವುದು ಅಯುಕ್ತವಾಗಿದೆ. ಒಂದುವೇಳೆ ಸರ್ವಪ್ರವೃತ್ತಿಗೆ ಕಾರಣವಾದ ಮಾತ್ರಕ್ಕೆ ಸರ್ವಗತನಾಗಿದ್ದಾನೆಂದು ಹೇಳುವುದಾದಲ್ಲಿ ಮನಸ್ಸೂ ಕೂಡ ಸರ್ವಪ್ರವೃತ್ತಿಗೆ ಕಾರಣವಾಗಿದೆ ಆದ್ದರಿಂದ ಇದನ್ನೂ ಕೂಡ ಸರ್ವಗತ ಎಂದು ಹೇಳಬೇಕಾದೀತು? ಆದ್ದರಿಂದ ರಾಮಾನುಜರ ಮತವು ಅಯುಕ್ತವಾಗಿದೆ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಅಣ್ವಧಿಕರಣವು ಸಂಪೂರ್ಣವಾಯಿತು

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**अणुश्च** ।। तदर्थं मुख्यप्राणस्याणुत्वश्रुतिरिति ।। तदप्रामाण्ये हि ''तत्सामान्यात्'' इति न्यायेन ब्रह्मणि समन्वितश्रुतिमात्राप्रामाण्यं भवतीति भावः।। **अन्ये त्विति** ।। अणुश्च मुख्यप्राण इति सूत्रार्थः ।

'ತದರ್ಥಂ ಮುಖ್ಯಪ್ರಾಣಸ್ಯ ಅಣುತ್ವಶ್ರುತಿಃ' ಎಂಬ ಸಂಶಯಕೋಟಿಯ ಅಭಿಪ್ರಾಯ ಹೀಗಿದೆ – ಮುಖ್ಯಪ್ರಾಣನಿಗೆ ಅಣುತ್ವವನ್ನು ಹೇಳುವ ಶ್ರುತಿಯು ಅಪ್ರಮಾಣವಾದರೆ 'ತತ್ಸಾಮಾನ್ಯಾತ್' ಎಂಬ ಗೌತಮ ಸೂತ್ರದ ನ್ಯಾಯದಂತೆ ಅದೇ ಶ್ರುತಿಯ ಸಾದೃಶ್ಯದಿಂದ ಬ್ರಹ್ಮನಲ್ಲಿ ಸಮನ್ವಯ ಮಾಡಲಪಟ್ಟ ಶ್ರುತಿಯೂ ಕೂಡ ಅಪ್ರಮಾಣವಾಗುತ್ತದೆಂದು,

ಅದ್ವೈತಿಗಳು ದೇಹದ ಒಳಗಿರುವ ಮುಖ್ಯಪ್ರಾಣವನ್ನು ಅಣು ಎಂದು ಹೇಳುವ ಮೂಲಕ ಸೂತ್ರಾರ್ಥವನ್ನು ನಿರೂಪಣೆ ಮಾಡುತ್ತಾರೆ.

**प्रकाशः –** ''समः प्लुषिणा समो मशकेन समो नागेन सम एभिस्त्रिभिर्लोकैः समोऽनेन सर्वेण'' इति विभुत्वमपि श्रूयत इत्यत आह – **सम इति** ।। हिरण्यगर्भप्राणात्मना सर्वगतत्वश्रुतिरित्यर्थः ।।

'ಸಮಃ ಪ್ಲುಷಿಣಾ ಸಮೋ ಮಶಕೇನ ಸಮೋ ನಾಗೇನ ಸಮ ಏಭಿಸ್ತ್ರಿಭಿರ್ಲೋಕೈಃ ಸಮೋಽನೇನ ಸರ್ವೇಣ' ಜಲಬಿಂದುವಿಗೆ ಸಮಾನನು, ಸೊಳ್ಳೆಗೆ ಸಮಾನನು, ಆನೆಗೆ ಸಮಾನನು, ಈ ಲೋಕದಲ್ಲಿರುವ ಎಲ್ಲ ಪದಾರ್ಥಗಳಿಗೆ ಸಮಾನನು, ಸಮಸ್ತ ಲೋಕಕ್ಕೆ ಸಮಾನನು ಎನ್ನುವ ಈ ಬೃಹದಾರಣ್ಯಕದ ಶ್ರುತಿಯು ಅಣುರೂಪನಾಗಿರುವವನು ವ್ಯಾಪ್ತನೂ ಕೂಡ ಆಗಿರುವವನು ಎಂದು ಹೇಳುತ್ತಿದೆ. ಆದ್ದರಿಂದ ಪ್ರಾಣನಿಗೆ ಸರ್ವಗತತ್ವವನ್ನು ಒಪ್ಪಬೇಕು. ಈ ಪ್ರಶ್ನೆಗೆ 'ಸಮಃ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ಹಿರಣ್ಯಗರ್ಭಪ್ರಾಣಾತ್ಮನಾ' ಎಂದರೆ ಆದಿದೈವಿಕವಾದ ಹಿರಣ್ಯಗರ್ಭನ ಪ್ರಾಣರೂಪದಿಂದ ಸರ್ವಗತತ್ವವನ್ನು ಹೇಳುತ್ತಿದೆ ಎಂದರ್ಥ.

**प्रकाशः – आध्यात्मिकेनेति** ।। प्राणात्मनेत्यन्वयः । ''समः प्लुषिणा'' इत्याद्युक्तपरिच्छिन्नत्वमित्यर्थः । सौत्राणुशब्देनापि तस्यैव विवक्षितत्वेन भाषणादिति

भावः । बुद्धिव्याप्त्यापि न सर्वगतत्वश्रुतिरिति भावेनोक्तं तद्बुद्धेर्वेति । सर्वगतत्वश्रुतिगतिं मतान्तरोक्तां निराह – **केचित्त्विति** ।। इति श्रुतीति ।। भाष्योक्तश्रुत्युक्तेत्यर्थः ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते**
**चन्द्रिकाप्रकाशे अण्वधिकरणं सम्पूर्णम् ।।९।।**

'ಆಧ್ಯಾತ್ಮಿಕೇನ' ಎಂದರೆ ಆಧ್ಯಾತ್ಮಿಕವಾದ ದೇಹದ ಒಳಗಿರುವ ಪ್ರಾಣರೂಪದಿಂದ ಎಂಬುದಾಗಿ ಅನ್ವಯಕ್ರಮವನ್ನು ತಿಳಿಯಬೇಕು. 'ಸಮಃ ಪ್ಲುಷಿಣಾ' ಇತ್ಯಾದಿ ಶ್ರುತಿಯಲ್ಲಿ ಪರಿಚ್ಛಿನ್ನತ್ವವು ಹೇಳಲ್ಪಟ್ಟಿದೆ ಎಂದರ್ಥ. ಸೂತ್ರದಲ್ಲಿರುವ ಅಣು ಶಬ್ದದಿಂದಲೂ ಕೂಡ ಅದೇ ಅರ್ಥವು ವಿವಕ್ಷಿತವಾಗಿದೆ ಎಂದು ವಿವಕ್ಷಿಸಿದ್ದಾರೆ.

ಬುದ್ಧಿವ್ಯಾಪ್ತಿಯಿಂದಲೂ ಕೂಡ ಸರ್ವಗತತ್ವ ಶ್ರುತಿಯನ್ನು ಉಪಪಾದಿಸಲು ಸಾಧ್ಯವಿಲ್ಲ ಎಂದು ತಿಳಿಸಲು 'ತದ್ಬುದ್ಧೇರ್ವಾ' ಎಂದಿದ್ದಾರೆ.

ಸರ್ವಗತತ್ವ ಶ್ರುತಿಗೆ ರಾಮಾನುಜರು ಮಾಡಿದ ವ್ಯಾಖ್ಯಾನವನ್ನು 'ಕೇಚಿತ್ತು' ಇತ್ಯಾದಿಯಾಗಿ ಅನುವಾದ ಮಾಡಿ ನಿರಾಕರಣೆ ಮಾಡುತ್ತಿದ್ದಾರೆ. 'ಇತಿ ಶ್ರುತಿಃ' ಎಂದರೆ ಶ್ರೀಮದಾಚಾರ್ಯರ ಭಾಷ್ಯದಲ್ಲಿ ಉದಾಹರಿಸಲ್ಪಟ್ಟ ಶ್ರುತಿ ಎಂದರ್ಥ.

**ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ**
**ಅಣ್ವಧಿಕರಣವು ಮುಕ್ತಾಯವಾಯಿತು.**

* * * * * * *

**ಶ್ರೀಕೃಷ್ಣಾರ್ಪಣಮಸ್ತು**

# ಜ್ಯೋತಿರಾದ್ಯಧಿಕರಣ

(೨-೪-೧೦)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

॥ ಶ್ರೀಗುರುಭ್ಯೋ ನಮಃ ॥

# ಜ್ಯೋತಿರಾದ್ಯಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – ज्योतिराद्यधिष्ठानं तु तदामननात् ।।**

'ಯಸ್ತೇಜಸಿ ತಿಷ್ಠನ್' ಎಂಬುದಾಗಿ ಜ್ಯೋತಿರಾದಿಗಳಿಗೆ ಅಧಿಷ್ಠಾನವಾಗಿ ಯಾವ ಬ್ರಹ್ಮನು ಶ್ರುತಿ ಪ್ರತಿಪಾದ್ಯನಾಗಿದ್ದಾನೋ, ಅವನೇ ಚಕ್ಷುರಾದಿ ಇಂದ್ರಿಯಗಳಲ್ಲಿಯೂ ನೆಲೆಸಿ ಅವುಗಳ ಮೂಲಕ ಜೀವನಿಗೆ ಪ್ರೇರಣೆಯನ್ನು ಉಂಟುಮಾಡುತ್ತಾನೆ. 'ಯಶ್ಚಕ್ಷುಷಿ ತಿಷ್ಠನ್' ಇತ್ಯಾದಿ ಶ್ರುತಿಯು ಹೀಗೆ ಹೇಳುತ್ತಿದೆ -

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका — ज्योतिराद्यधिष्ठानमित्यावर्तते । तत्त्वित्यन्वयः । तथाच ज्योतिराद्यधिष्ठानं अग्न्यादिभूतप्रेरकं तत् ब्रह्मैव । ज्योतिराद्यधिष्ठानं च चक्षुरादिप्रेरकं न जीवः । कुतः? तदामननात् 'यश्चक्षुषि तिष्ठन्' इत्यादिना तथा प्रतिपादनादित्यर्थः ।।१।।**

'ಜ್ಯೋತಿರಾದ್ಯಧಿಷ್ಠಾನಮ್' ಎಂಬ ಪದವನ್ನು ಎರಡು ಬಾರಿ ಆವೃತ್ತಿ ಮಾಡಿಕೊಳ್ಳಬೇಕು. 'ತತ್ತು' ಎಂಬುದು ಅನ್ವಿತವಾಗಿದೆ. ಆದ್ದರಿಂದ ಜ್ಯೋತಿರಾದ್ಯಧಿಷ್ಠಾನಮ್ = ಚಕ್ಷುರಾದಿ ಇಂದ್ರಿಯಗಳು ಅಜ್ಞಾದಿ ದೇವತೆಗಳಿಂದ ಅಧಿಷ್ಠಿತವಾಗಿ ತಮ್ಮ ಕಾರ್ಯಗಳನ್ನು ನಿರ್ವಹಿಸುತ್ತವೆ. ತತ್ = ಅವನು ಬ್ರಹ್ಮನೇ ಆಗಿರುತ್ತಾನೆ. ಜ್ಯೋತಿರಾದ್ಯಧಿಷ್ಠಾನಮ್ = ಚಕ್ಷುರಾದಿಪ್ರೇರಕನಾದವನು ಜೀವನಲ್ಲ. ಏಕೆಂದರೆ ತದಾಮನನಾತ್ = 'ಯಶ್ಚಕ್ಷುಷಿ ತಿಷ್ಠನ್' ಇತ್ಯಾದಿಯಾಗಿ ಪರಮಾತ್ಮನೇ ಚಕ್ಷುರಾದಿ ಇಂದ್ರಿಯಗಳಲ್ಲಿ ನೆಲೆಸಿ ಪ್ರೇರಣೆ ಮಾಡುತ್ತಾನೆಂದು ಹೇಳಲಾಗಿದೆ.
ಪರಿಪೂರ್ಣಚಂದ್ರಿಕಾ

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् — करणत्वं प्राणानामुक्तम् ।।१।।**

**'जीवस्य करणान्याहुः प्राणानेतांस्तु सर्वशः ।**
**यस्मात् तद्वशगा एते दृश्यन्ते सर्वदेहिषु ।।'**

**इति सौत्रायणश्रुतौ सयुक्तिकं जीवकरणत्वं प्रतीयते । 'ब्रह्मणो वा एतानि करणानि चक्षुःश्रोत्रं मनो वागिति । तद्धचैतैः कारयति' इति काषायणश्रुतौ ।**

ಅನುವಾದ - ಇಂದ್ರಿಯಗಳು ಜೀವನಿಗೆ ಸಂಬಂಧಪಟ್ಟ ಕರಣಗಳೆಂದು ಹಿಂದೆ ಅಕರಣತ್ವಾಚ್ಚ ಎಂಬಲ್ಲಿ ಸಮರ್ಥನೆ ಮಾಡಲಾಯಿತು. ಸೌತ್ರಾಯಣಶ್ರುತಿಯಲ್ಲಿ ಇಂದ್ರಿಯಗಳು ಜೀವನಿಗೆ ಸಂಬಂಧಪಟ್ಟ ಇಂದ್ರಿಯಗಳೆಂದು ಹೇಳಲಾಗಿದೆ. ಅದು ಹೀಗೆ -

ಈ ಎಲ್ಲಾ ಇಂದ್ರಿಯಗಳು ಜೀವನ ಉಪಕರಣಗಳಾಗಿವೆ. ಆದ್ದರಿಂದ ಎಲ್ಲಾ ಪ್ರಾಣಿಗಳಲ್ಲಿಯೂ ಇಂದ್ರಿಯಗಳು ಅವುಗಳ ಅಧೀನವಾಗಿ ಕಾಣಿಸುತ್ತವೆ. ಹೀಗೆ ಜೀವನಿಗೆ ಸಂಬಂಧಪಟ್ಟ ಕರಣಗಳೆಂದು ಯುಕ್ತಿಬದ್ಧವಾಗಿ ಹೇಳಲಾಗಿದೆ.

ಆದರೆ ಇದಕ್ಕೆ ವಿರುದ್ಧವಾಗಿ ಕಾಷಾಯಣಶ್ರುತಿಯಲ್ಲಿ ಬ್ರಹ್ಮನ ಕರಣಗಳೆಂದು ಹೇಳಿದ್ದಾರೆ - ಕಣ್ಣು ಕಿವಿ, ಮನಸ್ಸು, ನಾಲಿಗೆ, ಈ ಇಂದ್ರಿಯಗಳು ಪರಮಾತ್ಮನ ಕರಣಗಳು. ಆ ಬ್ರಹ್ಮನೇ ಇವುಗಳಿಂದ ಕಾರ್ಯಗಳನ್ನು ಮಾಡಿಸುತ್ತಾನೆ ಎಂದು.

ಪ್ರತಿಪದಾರ್ಥ -- ಪ್ರಾಣಾನಾಮ್ = ಇಂದ್ರಿಯಗಳಿಗೆ, ಕರಣತ್ವಮ್ = ಕರಣತ್ವವನ್ನು, ಉಕ್ತಂ = ಅಕರಣತ್ವಾಚ್ಚ ಎಂಬ ಸೂತ್ರದಲ್ಲಿರುವ ಚ ಶಬ್ದದಿಂದ ಹಿಂದೆ ಹೇಳಲಾಯಿತು.

ಏತಾನ್ ಸರ್ವಶಃ ಪ್ರಾಣಾನ್ = ಈ ಎಲ್ಲಾ ಇಂದ್ರಿಯಗಳು, ಜೀವಸ್ಯ = ಜೀವನ, ಕರಣಾನಿ = ಕರಣಗಳೆಂದು, ಆಹುಃ = ಜ್ಞಾನಿಜನರು ಹೇಳುತ್ತಾರೆ. ಯಸ್ಮಾತ್ = ಯಾವ ಕಾರಣದಿಂದ, ಸರ್ವದೇಹಿಷು = ಎಲ್ಲಾ ಪ್ರಾಣಿಗಳಲ್ಲಿ, ಏತೇ = ಈ ಇಂದ್ರಿಯಗಳು, ತದ್ವಶಗಾಃ = ಅವುಗಳ ಅಧೀನವಾಗಿ, ದೃಶ್ಯಂತೇ = ಕಾಣಿಸುತ್ತವೆ, ಇತಿ = ಹೀಗೆ, ಸೌತ್ರಾಯಣಶ್ರುತೌ = ಸೌತ್ರಾಯಣಶ್ರುತಿಯಲ್ಲಿ, ಸಯುಕ್ತಿಕಂ = ಯುಕ್ತಬದ್ಧವಾಗಿ, ಜೀವಕರಣತ್ವಂ = ಜೀವನಿಗೆ ಸಂಬಂಧಪಟ್ಟ ಇಂದ್ರಿಯಗಳು ಎಂದು, ಪ್ರತೀಯತೇ = ಹೇಳಿದ್ದು ಕಾಣಿಸುತ್ತದೆ.

ಆದರೆ ಚಕ್ಷುಃ = ಕಣ್ಣು, ಶ್ರೋತ್ರಂ = ಶ್ರೋತ್ರವು, ಮನಃ = ಮನಸ್ಸು, ವಾಕ್ = ಮಾತು, ಏತಾನಿ = ಇಂದ್ರಿಯಗಳು , ಬ್ರಹ್ಮಣಃ = ಪರಮಾತ್ಮನ, ಕರಣಾನಿ = ಇಂದ್ರಿಯಗಳು, ತದ್ಧಿ = ಆ ಬ್ರಹ್ಮನೇ, ಏತೈಃ = ಇವುಗಳಿಂದ, ಕಾರಯತಿ = ಕಾರ್ಯಗಳನ್ನು ಮಾಡಿಸುತ್ತಾನೆ.

ಜ್ಯೋತಿರಾದ್ಯಧಿಕರಣ (೨-೪-೧೦)

ಇತಿ = ಹೀಗೆ, ಕಾಷಾಯಣಶ್ರುತೌ = ಕಾಷಾಯಣಶ್ರುತಿಯಲ್ಲಿ ಹೇಳಲಾಗಿದೆ. ಹೀಗೆ ಯುಕ್ತಿಬದ್ಧವಾದ ಸೌತ್ರಾಯಣಶ್ರುತಿಗೂ ಮತ್ತು ಕಾಷಾಯಣಶ್ರುತಿಗೂ ಪರಸ್ಪರ ವಿರೋಧವು ಪ್ರಾಪ್ತವಾಗುತ್ತದೆ.

**भाष्यम् — अत आह —**

**।। ज्योतिराद्यधिष्ठानं तु तदामननात् ।।१।।**

**यज्ज्योतिराद्यधिष्ठानं ब्रह्म तदेवैतैः कारणैः प्रवर्तयति । 'यः प्राणे तिष्ठन्' (बृ.५.७.१६.) इत्यादि तदामननात् ।।१।।**

ಅನುವಾದ - ಈ ಪೂರ್ವಪಕ್ಷವನ್ನು ಸೂತ್ರಕಾರರು ನಿರಾಕರಣೆ ಮಾಡುತಿದ್ದಾರೆ -

ಜ್ಯೋತಿರಾದಿಗಳಿಗೆ ಅಧಿಷ್ಠಾನಭೂತನಾಗಿ ಯಾವ ಬ್ರಹ್ಮನು ಶ್ರುತನಾಗಿದ್ದಾನೋ ಅವನೇ ಚಕ್ಷುರಾದಿ ಇಂದ್ರಿಯಗಳಲ್ಲಿ ಇದ್ದು ಅವುಗಳನ್ನು ಪ್ರೇರಣೆ ಮಾಡುವ ಮೂಲಕ ಚಟುವಟಿಕೆಗಳನ್ನು ಮಾಡಿಸುತ್ತಾನೆ. 'ಯಃ ಪ್ರಾಣೇ ತಿಷ್ಠನ್' ಎಂಬ ಶ್ರುತಿಯು ಇದನ್ನು ಸಮರ್ಥನೆ ಮಾಡುತ್ತಿದೆ.

ಪ್ರತಿಪದಾರ್ಥ -- ಅತಃ = ಮೇಲಿನ ಪೂರ್ವಪಕ್ಷದ ಪರಿಹಾರಕ್ಕಾಗಿ ಸೂತ್ರಕಾರರು ಉತ್ತರಿಸುತ್ತಿದ್ದಾರೆ -

ಯಜ್ಜ್ಯೋತಿಃ = ಯಾವ ಜ್ಯೋತಿ ಮೊದಲಾದವುಗಳಿಗೆ, ಅಧಿಷ್ಠಾನಂ = ಅಧಿಷ್ಠಾನಭೂತನಾದ, ಬ್ರಹ್ಮ = ಬ್ರಹ್ಮನು ಶ್ರುತನಾಗಿದ್ದಾನೋ, ತದೇವ = ಆ ಬ್ರಹ್ಮನೇ, ಏತೈಃ ಕಾರಣೈಃ = ಈ ಎಲ್ಲಾ ಚಕ್ಷುರಾದಿ ಇಂದ್ರಿಯಗಳಿಂದ, ಪ್ರವರ್ತಯತಿ = ಪ್ರೇರಣೆ ಮಾಡುತ್ತಾನೆ. ಯಃ ಪ್ರಾಣೇ ತಿಷ್ಠನ್ = ಇತ್ಯಾದಿ ಉಪನಿಷತ್ ಹೇಳುವಂತೆ, ತದಾಮನನಾತ್ = ಶ್ರುತಿಗಳು ಹೇಳುತ್ತವೆ ಆದ್ದರಿಂದ.

## ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**तत्वप्रकाशिका — अत्र जगत्कारणे नारायणे श्रुतिसमन्वयसिध्यर्थमिन्द्रिय-विषयश्रुतिविरोधपरिहारादस्ति शास्त्रादिसङ्गतिः । श्रुतिसमन्वयेनोक्तं हरेजगत्कारणत्वमिन्द्रियविषयश्रुतीनां विरोधेनाप्रामाण्येऽयुक्तं स्यादिति निरसनीयोऽसौ । अधिकरणसङ्गतिं दर्शयति — करणत्वमिति।।**

ಈ ಅಧಿಕರಣವು ಜಗತ್ಕಾರಣನಾದ ನಾರಾಯಣನಲ್ಲಿ ಶ್ರುತಿಸಮನ್ವಯವು ಸಿದ್ಧವಾಗುವುದಕ್ಕಾಗಿ ಇಂದ್ರಿಯ ವಿಷಯಕವಾದ ಶ್ರುತಿವಿರೋಧವನ್ನು ಪರಿಹಾರ ಮಾಡುತ್ತಿದೆ. ಆದ್ದರಿಂದ ಶಾಸ್ತ್ರ-ಅಧ್ಯಾಯ-ಪಾದ ಸಂಗತಿಗಳು ಇರುತ್ತವೆ.

ಶ್ರುತಿಸಮನ್ವಯದ ಮೂಲಕ ಶ್ರೀಹರಿಯಲ್ಲಿ ಹೇಳಲ್ಪಟ್ಟ ಜಗತ್ಕಾರಣತ್ವವು ಇಂದ್ರಿಯವಿಷಯಕವಾದ ಶ್ರುತಿಗಳ ವಿರೋಧ ಬರುವುದರಿಂದ ಅಪ್ರಮಾಣವಾಗುತ್ತದೆ. ಆದ್ದರಿಂದಲೇ ಅಯುಕ್ತವಾಗುತ್ತದೆ. ಹಾಗಾಗಿ ಈ ವಿರೋಧವನ್ನು ಪರಿಹಾರ ಮಾಡಲೇಬೇಕು.

ಅಧಿಕರಣದ ಸಂಗತಿಯನ್ನು 'ಕರಣತ್ವಮ್' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ.

**तत्वप्रकाशिका – अकरणत्वाचेति च शब्देनेन्द्रियाणं करणत्वमुक्तम् । तान्येव विषयः । किं जीवकरणान्युत ब्रह्मकरणानीति सन्देहः । सन्देहबीजं श्रुतिविगानं दर्शयन् पूर्वपक्षं सूचयति – जीवस्येति ।। श्रुतौ ब्रह्मकरणत्वं प्रतीयत इति शेषः ।**

'ಅಕರಣತ್ವಾಚ್ಚ' ಎಂಬ ಸೂತ್ರದಲ್ಲಿರುವ ಚ ಶಬ್ದದಿಂದ ಇಂದ್ರಿಯಗಳಿಗೆ ಕರಣತ್ವವನ್ನು ಹೇಳಲಾಗಿದೆ. ಅದೇ ಈ ಅಧಿಕರಣಕ್ಕೆ ವಿಷಯವಾಗಿದೆ. ಈ ಇಂದ್ರಿಯಗಳು ಜೀವನಿಗೆ ಕರಣವಾಗಿದೆಯೋ ಅಥವಾ ಬ್ರಹ್ಮನಿಗೋ ಎಂಬುದು ಸಂದೇಹ. ಸಂದೇಹಕ್ಕೆ ಕಾರಣ ಶ್ರುತಿಗಳ ಪರಸ್ಪರ ವಿರೋಧವೇ ಆಗಿದೆ. ಈ ವಿರೋಧವನ್ನು ತೋರಿಸುವ ಮೂಲಕ ಪೂರ್ವಪಕ್ಷವನ್ನು 'ಜೀವಸ್ಯ' ಇತ್ಯಾದಿ ವಾಕ್ಯದಿಂದ ಸೂಚನೆ ಮಾಡುತ್ತಿದ್ದಾರೆ.

'ಕಾಷಾಯಣಶ್ರುತೌ' ಎಂಬ ಪದದ ಮುಂದೆ 'ಬ್ರಹ್ಮಕರಣತ್ವಂ ಪ್ರತೀಯತೇ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು.

ವಿವರಣೆ – 'ಅಕರಣತ್ವಾಚ್ಚ ನ ದೋಷಃ' ಎಂಬ ಸೂತ್ರದಲ್ಲಿ ಇಂದ್ರಿಯಗಳು ಕರಣವಾಗಿವೆ ಎಂದು ಹೇಳಲಾಗಿದೆ. ಆದರೆ ಯಾರ ಇಂದ್ರಿಯಗಳೆಂದು ಸ್ಪಷ್ಟಪಡಿಸಿಲ್ಲ. ಈ ಅಧಿಕರಣದಲ್ಲಿ ಈ ಇಂದ್ರಿಯಗಳು ಬ್ರಹ್ಮನಿಗೋ ಅಥವಾ ಜೀವನಿಗೋ? ಎಂಬುದರ ಬಗ್ಗೆ ವಿಚಾರ ಮಾಡಲಾಗಿದೆ. ಹಿಂದಿನ ಅಧಿಕರಣದಲ್ಲಿ ಮುಖ್ಯಪ್ರಾಣನು ಪರಮಾತ್ಮನಿಂದ ಉತ್ಪನ್ನನಾಗಿದ್ದಾನೆಂದು ಹೇಳಿ ಅಣುರೂಪನಾಗಿದ್ದಾನೆಂದು ಹೇಳಲಾಯಿತು. ಇವನಿಗೆ ಹಿಂದೆ ಹೇಳಲ್ಪಟ್ಟ ಇಂದ್ರಿಯಗಳು ಇರುವುದಿಲ್ಲ ಎಂಬ ಆಕ್ಷೇಪವು ಪ್ರಾಪ್ತವಾದರೆ ಈ ಇಂದ್ರಿಯಗಳು ಮುಖ್ಯಪ್ರಾಣನಿಗೂ ಇರುತ್ತವೆ ಎಂಬುದರ ಪ್ರತಿಪಾದನೆಗಾಗಿ ಹೊರಟಿದೆ. ಮುಖ್ಯಪ್ರಾಣನನ್ನು ಉಪಲಕ್ಷಣಯಾ ವಿವಕ್ಷಿಸಿ ಸಕಲ ಜೀವರಿಗೂ ಇಂದ್ರಿಯಗಳು ಇವೆ ಎಂದು ಪ್ರತಿಪಾದನೆ ಮಾಡುವುದೇ ಅಧಿಕರಣದ ಮುಖ್ಯ ಉದ್ದೇಶ. ಆದ್ದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಆನಂತರ್ಯ ಸಂಗತಿಯು ಇರುತ್ತದೆ.

**तत्वप्रकाशिका – जीवकरणानीन्द्रियाणि । 'जीवस्य करणान्याहुः प्राणान्' इति श्रुतेः । न च श्रुत्यन्तरविरोधः । जीववशत्वेन प्राणानां दृश्यमानत्वयुक्तियुक्तत्वेन जीवकरणत्वश्रुतेः प्राबल्यात् । अनुभूयते खलु स्वाधीनत्वमिन्द्रियाणाम् । अतः प्रबलश्रुतिविरोधाद् ब्रह्मकरणत्वश्रुतिरप्रमाणमेवेति न श्रुतिसमन्वयेन विष्णोर्जगत्कारणत्वसिद्धिरिति भावः ।**

ಇಂದ್ರಿಯಗಳು ಜೀವನಿಗೆ ಸಂಬಂಧಪಟ್ಟಿವೆ. ಏಕೆಂದರೆ 'ಜೀವಸ್ಯ ಕರಣಾನ್ಯಾಹುಃ ಪ್ರಾಣಾನ್' ಎಂಬುದಾಗಿ ಶ್ರುತಿಯು ಹೇಳುತ್ತಿದೆ. ಇದಕ್ಕೆ ಮತ್ತೊಂದು ಶ್ರುತಿಯ ವಿರೋಧವು ಬರುವುದಿಲ್ಲ. ಏಕೆಂದರೆ ಇಂದ್ರಿಯಗಳು ಜೀವನ ಅಧೀನವಾಗಿದೆ ಎಂಬುದು ಪ್ರತ್ಯಕ್ಷದಿಂದ ಸಿದ್ಧವಾಗಿದೆ. ಹೀಗೆ ದೃಶ್ಯಮಾನತ್ವ ಎಂಬ ಯುಕ್ತಿಯಿಂದ ಕೂಡಿರುವುದರಿಂದ ಜೀವಕರಣತ್ವ ಶ್ರುತಿಯೇ ಪ್ರಬಲವಾಗುತ್ತದೆ. ಇಂದ್ರಿಯಗಳು ನಮ್ಮ ಅಧೀನವಾಗಿರುವುದು ಅನುಭವ ಸಿದ್ಧವೂ ಕೂಡ ಆಗಿದೆ.

ಹೀಗೆ ಪ್ರಬಲವಾದ ಶ್ರುತಿ ವಿರೋಧವಿರುವುದರಿಂದ ಇಂದ್ರಿಯಗಳು ಬ್ರಹ್ಮನದ್ದು ಎಂದು ಹೇಳುವ ಶ್ರುತಿಯು ಅಪ್ರಮಾಣವೇ ಆಗುತ್ತದೆ. ಆದ್ದರಿಂದ ಶ್ರುತಿಸಮನ್ವಯದ ಮೂಲಕ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗುವುದಿಲ್ಲ. ಇಷ್ಟು ಅಧಿಕರಣದ ಪೂರ್ವಪಕ್ಷ.

**तत्वप्रकाशिका – सिद्धान्तयत्सूत्रमवतार्य व्याचष्टे – अत इति ।। ब्रह्मैव चक्षुरादिभिः करणैर्दर्शनादि कारयति न पुनर्जीवकरणानि । ब्रह्मण एव तेजःप्रभृतिभूत-प्रेरकत्वेन तदंशभूतानामपि चक्षुरादीनां ब्रह्म(प्र)योज्यत्वस्यैवोपपत्तेः ।सर्वप्राणप्रेरकमुख्यप्राणप्रेरकत्व श्रुतेः 'यश्चक्षुषि तिष्ठन्' इत्यादिश्रुतेश्चेति भावः । चक्षुरादिवदिति प्रकृतत्वाज्ज्योतिरादिग्रहणम् ।।**

ಸಿದ್ಧಾಂತಸ್ಥಾಪಕವಾದ ಸೂತ್ರಕ್ಕೆ 'ಅತಃ' ಎಂದು ಅವತಾರಿಕೆ ನೀಡಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಬ್ರಹ್ಮನೇ ಚಕ್ಷುರಾದಿ ಇಂದ್ರಿಯಗಳ ಮೂಲಕ ದರ್ಶನಾದಿಗಳನ್ನು ಮಾಡಿಸುತ್ತಾನೆ ಹೊರತು ಆ ಇಂದ್ರಿಯಗಳಿಗೆ ಜೀವನು ಪ್ರೇರಕನಾಗಿರುವುದಿಲ್ಲ. ಸ್ವತಃ ಬ್ರಹ್ಮನೇ ತೇಜಸ್ಸು ಮೊದಲಾದ ಭೂತಗಳಿಗೆ ಪ್ರೇರಕನಾಗಿದ್ದಾನೆ. ಅದೇ ತೇಜಸ್ಸಿನ ಅಂಶವೆನಿಸಿದ ಚಕ್ಷುರಾದಿಗಳಿಗೂ ಕೂಡ ಅವನೇ ಪ್ರೇರಕನಾಗುತ್ತಾನೆ. ಅವನಿಂದಲೇ ಇಂದ್ರಿಯಗಳೆಲ್ಲವೂ ನಿಯಮ್ಯವಾಗಿವೆ.

ಸಕಲ ಪ್ರೇರಕನಾದ ಮುಖ್ಯಪ್ರಾಣನಿಗೂ ಕೂಡ ಪ್ರೇರಕನಾದವನು ಬ್ರಹ್ಮನೆಂದು ಶ್ರುತಿಯು ಹೇಳುತ್ತಿದೆ. ಅದರಂತೆ 'ಯಃ ಚಕ್ಷುಷಿ ತಿಷ್ಠನ್' ಎಂಬ ಶ್ರುತಿಯು ಕಣ್ಣಿನಲ್ಲಿ ನಿಂತು ಆ ಬ್ರಹ್ಮನೇ ನಿಯಮನ ಮಾಡುತ್ತಾನೆ ಎಂದು ಹೇಳುತ್ತಿದೆ. 'ಚಕ್ಷುರಾದಿವತ್' ಎಂಬ ಸೂತ್ರದಲ್ಲಿ ಚಕ್ಷುಸ್ಸು ಪ್ರಕೃತವಾದ್ದರಿಂದ ಸೂತ್ರದಲ್ಲಿ ಜ್ಯೋತಿರಾದಿ ಎಂದೇ ಹೇಳಿದ್ದಾರೆ.

ವಿವರಣೆ – ಇಂದ್ರಿಯಗಳು ಜೀವನ ಕರಣಗಳೋ ಅಥವಾ ಬ್ರಹ್ಮನ ಕರಣಗಳೋ? ಎಂಬ ವಿವಾದ ಬಂದಾಗ 'ಜ್ಯೋತಿರಾದ್ಯಧಿಷ್ಠಾನಂ ತು' ಎಂಬ ಸೂತ್ರವು ಇಂದ್ರಿಯಗಳು ಬ್ರಹ್ಮನಿಂದಲೇ ಪ್ರೇರ್ಯವಾಗಿವೆ ಎಂದು ಉತ್ತರಿಸುತ್ತಿದೆ. ಇಲ್ಲಿ ಗಮನಿಸಬೇಕಾದ ಅಂಶವಿಷ್ಟು - ಇಂದ್ರಿಯಗಳು ಜೀವನಿಗೆ ಸಂಬಂಧಪಟ್ಟದ್ದವಾಗಿದ್ದರೂ ಕೂಡ ಅವುಗಳ ನಿಯಾಮಕತ್ವವು ಜೀವನಿಗೆ ಸ್ವತಂತ್ರವಾಗಿ ಇರುವುದಿಲ್ಲ. ಅಸ್ವತಂತ್ರವಾಗಷ್ಟೇ ಇರುತ್ತವೆ. ನಿಜವಾದ ಪ್ರೇರಕನಾದವನು ಪರಮಾತ್ಮನೇ ಆಗಿದ್ದಾನೆಂಬ ಪ್ರಮೇಯವನ್ನು ತಿಳಿಸುವುದೇ ಈ ಸೂತ್ರದ ಉದ್ದೇಶವಾಗಿದೆ. ಚಕ್ಷುರಾದಿ ಇಂದ್ರಿಯಗಳ ಮೂಲಕ ವಿಷ್ಣುವೇ ಜೀವರಿಂದ ನೋಡುವಿಕೆ ಮೊದಲಾದ ಕಾರ್ಯಗಳನ್ನು ಮಾಡಿಸುತ್ತಾನೆ.

ಇಂದ್ರಿಯಗಳಿಗೆ ಪ್ರೇರಕನಾಗಬೇಕಾದರೆ ಯಾವ ಭೂತಗಳ ಅಂಶವಾಗಿದೆಯೋ, ಅಂಶಗಳ ಪ್ರೇರಕತ್ವವೂ ಕೂಡ ಅವನಿಗೆ ಇರಬೇಕಾಗುತ್ತದೆ. ಪಂಚಭೂತಗಳಿಗೆ ಪ್ರೇರಕನಾದವನು ಮಹಾವಿಷ್ಣು ಎಂದು ತೀರ್ಮಾನವಾಗಿರುವುದರಿಂದ ಅವುಗಳ ಅಂಶವೆನಿಸಿದ ಇಂದ್ರಿಯಗಳಿಗೂ ಕೂಡ ಅವನೇ ಪ್ರೇರಕನಾಗುತ್ತಾನೆ ಎಂಬುದು ಸಿದ್ಧಾಂತದ ರಹಸ್ಯ.

ಸೂತ್ರದಲ್ಲಿ 'ಜ್ಯೋತಿರಾದಿ' ಎಂದು ಏಕೆ ಹೇಳಿದ್ದಾರೆ. ಪಂಚಭೂತಗಳಲ್ಲಿ ಆಕಾಶ ಪ್ರಥಮಪ್ರಾಪ್ತವಾದ್ದರಿಂದ ಆಕಾಶ ಶಬ್ದವನ್ನೇ ಉಪಯೋಗಿಸಬೇಕಿತ್ತಲ್ಲವೇ? ಎಂಬ ಪ್ರಶ್ನೆಗೆ ಟೀಕೆಯಲ್ಲಿ 'ಚಕ್ಷುರಾದಿವತ್' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. 'ಚಕ್ಷುರಾದಿವತ್ತು ತತ್ಸಹಶಿಷ್ಟ್ಯಾದಿಭ್ಯಃ' ಎಂಬುದು ಹಿಂದಿನ ಸೂತ್ರ. ಆ ಸೂತ್ರದಲ್ಲಿರುವ ಚಕ್ಷುಸ್ ಶಬ್ದವನ್ನೇ ಗ್ರಹಣ ಮಾಡಿ ಅದಕ್ಕೂ ಕಾರಣನಾದ ಜ್ಯೋತಿಯನ್ನು ಇಲ್ಲಿ ಸೂತ್ರಕಾರರು ಗ್ರಹಣ ಮಾಡಿದ್ದಾರೆ. ಆದ್ದರಿಂದ ಹಿಂದಿನ ಸೂತ್ರದಿಂದ ಈ ರೀತಿಯ ಸಂಗತಿಯನ್ನು ತಿಳಿಯಬೇಕು.

## ಬ್ರಹ್ಮಸೂತ್ರ

**सूत्रम् – प्राणवता शब्दात् ।।**

ಪರಮಾತ್ಮನು ತನ್ನ ಅಧೀನವಾದ ಚಕ್ಷುರಾದಿ ಇಂದ್ರಿಯಗಳಿಂದಲೇ ಜೀವನಿಗೆ ದರ್ಶನಾದಿ ಕ್ರಿಯೆಗಳನ್ನು ಮಾಡಿಸುತ್ತಾನೆ. ಆದ್ದರಿಂದ ಜೀವನ ಇಂದ್ರಿಯಗಳು ಎಂಬ ಶ್ರುತಿಯ ವಿರೋಧಕ್ಕೆ ಅವಕಾಶವಿಲ್ಲ. 'ಏಷ ಹ್ಯನೇನ' ಎಂಬ ಶ್ರುತಿಯು ಹೀಗೆ ಪ್ರತಿಪಾದನೆ ಮಾಡುತ್ತಿದೆ.

## ಸೂತ್ರದೀಪಿಕಾ

**सूत्रदीपिका –** परमात्मा स्वप्रयोज्यैरेव चक्षुरादिभिः करणैः **प्राणवता** जीवेन कर्त्रा दर्शनादि कारयति न जीवप्रयोज्यैः । कुतः? **शब्दात्** 'एष ह्यनेन' इति श्रुतेरित्यर्थः ।।२।।

ಪರಮಾತ್ಮನು ತನ್ನ ಅಧೀನವಾದ ಚಕ್ಷುರಾದಿ ಇಂದ್ರಿಯಗಳಿಂದಲೇ, ಪ್ರಾಣವತಾ = ಜೀವನಿಂದ ದರ್ಶನಾದಿ ಕ್ರಿಯೆಗಳನ್ನು ಮಾಡಿಸುತ್ತಾನೆ. ಅಂಥ ಇಂದ್ರಿಯಗಳು ಜೀವನ ಅಧೀನವಲ್ಲ. ಏಕೆಂದರೆ ಶಬ್ದಾತ್ = 'ಏಷ ಹ್ಯನೇನ' ಎಂಬ ಶ್ರುತಿಯು ಹಾಗೇ ಪ್ರತಿಪಾದನೆ ಮಾಡುತ್ತಿದೆ.

## ಬ್ರಹ್ಮಸೂತ್ರಭಾಷ್ಯ

**भाष्यम् – कथं जीवकरणत्वश्रुतिरित्यतो वक्ति –**

**।। प्राणवता शब्दात् ।।२।।**

**जीवेनैव करणैः कारयति परमात्मा । अतो न विरोधः ।**

ಜ್ಯೋತಿರಾದ್ಯಧಿಕರಣ (೨-೪-೧೦)

ಅನುವಾದ - ಒಂದುವೇಳೆ ಇಂದ್ರಿಯಗಳು ಬ್ರಹ್ಮನ ಅಧೀನವಾದರೆ ಜೀವನ ಆಧೀನವೆಂದು ಹೇಳುವ ಶ್ರುತಿಗೆ ಹೇಗೆ ಅರ್ಥಮಾಡಬೇಕು ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ -

ಪರಮಾತ್ಮನು ತನ್ನ ಅಧೀನವಾದ ಇಂದ್ರಿಯಗಳಿಂದ ಜೀವನ ಮೂಲಕ ದರ್ಶನಾದಿ ಕ್ರಿಯೆಗಳನ್ನು ಮಾಡಿಸುತ್ತಾನೆ. ಆದ್ದರಿಂದ ಇಂದ್ರಿಯಗಳು ಜೀವನ ಅಧೀನವಾಗಿದೆ ಎಂಬ ಶ್ರುತಿಗೆ ವಿರೋಧ ಬರುವುದಿಲ್ಲ.

ಪ್ರತಿಪದಾರ್ಥ -- ಜೀವಕರಣತ್ವಶ್ರುತಿಃ = ಜೀವನಿಗೆ ಸಂಬಂಧಪಟ್ಟ ಕರ್ಣಗಳು ಎಂದು ಹೇಳುವ ಶ್ರುತಿಗೆ, ಕಥಂ = ಹೇಗೆ ಅರ್ಥೈಸಬೇಕು?, ಇತ್ಯತಃ = ಈ ಪ್ರಶ್ನೆಗೆ, ವಕ್ತಿ = ಉತ್ತರಿಸುತ್ತಿದ್ದಾರೆ -

ಸ್ವಕರಣೈಃ = ತನ್ನ ಅಧೀನವಾದ ಇಂದ್ರಿಯಗಳಿಂದ, ಪರಮಾತ್ಮಾ = ಪರಮಾತ್ಮನು, ಜೀವೇನೈವ = ಜೀವನ ಮೂಲಕ, ಕಾರಯತಿ = ಕ್ರಿಯೆಗಳನ್ನು ಮಾಡಿಸುತ್ತಾನೆ. ಅಥ = ಆದ್ದರಿಂದ, ನ ವಿರೋಧಃ = ವಿರೋಧವಿರುವುದಿಲ್ಲ.

**भाष्यम् — 'एष ह्यनेनाऽत्मना चक्षुषा दर्शयति श्रोत्रेण श्रावयति मनसा मनयति बुद्ध्या बोधयति तस्मादेतावाहुः सृतिरसृतिरिति' इति भाल्लवेयश्रुतेः ।।**

ಅನುವಾದ - ಈ ಪರಮಾತ್ಮನೇ ಕಣ್ಣಿನಿಂದ ಜೀವನ ಮೂಲಕ ಕಾಣಿಸುತ್ತಾನೆ. ಕಿವಿಯಿಂದ ಕೇಳಿಸುತ್ತಾನೆ. ಮನಸ್ಸಿನಿಂದ ವಿಚಾರ ಮಾಡಿಸುತ್ತಾನೆ. ಬುದ್ಧಿಯಿಂದ ನಿರ್ಧಾರ ಬರುವಂತೆ ಮಾಡುತ್ತಾನೆ. ಆದ್ದರಿಂದ ಜೀವನು ಅಸ್ವತಂತ್ರನು, ಪರಮಾತ್ಮನು ಸ್ವತಂತ್ರನು ಎಂದು ಜ್ಞಾನಿ ಜನರು ಹೇಳುತ್ತಾರೆ. ಹೀಗೆ ಭಾಲ್ಲವೇಯ ಶ್ರುತಿಯು ಹೇಳುತ್ತಿದೆ.

ಪ್ರತಿಪದಾರ್ಥ -- ಏಷ ಹಿ = ಈ ಪರಮಾತ್ಮನೇ, ಅನೇನ = ಈ, ಆತ್ಮನಾ = ಜೀವನ ಮೂಲಕ, ಚಕ್ಷುಷಾ = ಕಣ್ಣಿನಿಂದ, ದರ್ಶಯತಿ = ನೋಡಿಸುತ್ತಾನೆ, ಶ್ರೋತ್ರೇಣ = ಕಿವಿಯಿಂದ, ಶ್ರಾವಯತಿ = ಕೇಳಿಸುತ್ತಾನೆ. ಮನಸಾ = ಮನಸ್ಸಿನಿಂದ, ಮಾನಯತಿ = ವಿಚಾರ ಮಾಡಿಸುತ್ತಾನೆ, ಬುದ್ಧ್ಯಾ = ಬುದ್ಧಿಯಿಂದ, ಬೋಧಯತಿ = ನಿರ್ಧಾರಜ್ಞಾನ ಬರುವಂತೆ ಮಾಡುತ್ತಾನೆ. ತಸ್ಮಾತ್ = ಆದ್ದರಿಂದ, ಏತೌ = ಪರಮಾತ್ಮ ಮತ್ತು ಜೀವರನ್ನು ಕ್ರಮವಾಗಿ, ಸೃತಿಃ = ಸ್ವತಂತ್ರನು, ಅಸೃತಿಃ = ಅಸ್ವತಂತ್ರನು, ಇತಿ = ಹೀಗೆ, ಆಹುಃ = ಜ್ಞಾನಿಗಳು ಹೇಳುತ್ತಾರೆ. ಇತಿ = ಹೀಗೆ, ಭಾಲ್ಲವೇಯಶ್ರುತೇಃ = ಭಾಲ್ಲವೇಯಶ್ರುತಿಯಲ್ಲಿ ಹೇಳಲಾಗಿದೆ.

**भाष्यम् —**

**'करणैः कारणं ब्रह्म पुरुषापेक्षयाऽखिलम् ।**
**श्रोत्रादिभिः कारयति करणानीत्यतो विदुः ।।**

ಪರಿಪೂರ್ಣಚಂದ್ರಿಕಾ

**न जीवापेक्षया मुख्यं कारयेत् परमेश्वरः ।**
**केवलात्मेच्छया तस्मान्मुख्यत्वं तस्य निश्चितम् ।।'**
**इति च वाराहे ।।२।।**

ಅನುವಾದ - ಶ್ರೋತ್ರಾದಿ ಇಂದ್ರಿಯಗಳ ಮೂಲಕ ಜೀವವಿವಕ್ಷೆಗೆ ಅನುಕೂಲವಾಗಿ ಸಕಲ ಕಾರ್ಯಗಳನ್ನು ಬ್ರಹ್ಮನು ಮಾಡಿಸುತ್ತಾನೆ. ಆದ್ದರಿಂದ ಶ್ರೋತ್ರಾದಿಗಳು ಜೀವನಿಗೆ ಸಂಬಂಧಪಟ್ಟ ಕರಣಗಳು ಎಂದು ಹೇಳುತ್ತಾರೆ. ಆದರೆ ಇಂದ್ರಿಯದಲ್ಲಿರುವ ಮುಖ್ಯಪ್ರಾಣನಿಂದ ಪುರುಷನ ಅಪೇಕ್ಷೆಯಂತೆ ಕಾರ್ಯಗಳು ನಡೆಯುತ್ತಿಲ್ಲ. ತನ್ನ ಇಚ್ಛೆಗೆ ಅನುಗುಣವಾಗಿಯೇ ಕಾರ್ಯಗಳನ್ನು ಪರಮಾತ್ಮನು ಮಾಡಿಸುತ್ತಿದ್ದಾನೆ. ಆದ್ದರಿಂದ ಅವನು ಮುಖ್ಯಪ್ರಾಣ ಎಂದು ವರಾಹಪುರಾಣದಲ್ಲಿ ಹೇಳಲಾಗಿದೆ.

ಪ್ರತಿಪದಾರ್ಥ -- ಕಾರಣಂ ಬ್ರಹ್ಮ = ಕಾರಣಸ್ವರೂಪನಾದ ಸಕಲಕ್ರಿಯೆಗಳಿಗೆ ಕಾರಣನಾದ ಬ್ರಹ್ಮನು, ಶ್ರೋತ್ರಾದಿಭಿಃ ಕರಣೈಃ = ಕಿವಿ ಮೊದಲಾದ ಇಂದ್ರಿಯಗಳಿಂದ, ಅಖಿಲಮ್ = ಎಲ್ಲಾ, ಪುರುಷಾಪೇಕ್ಷಯಾ = ಜೀವನ ಅಪೇಕ್ಷೆಯಂತೆ, ಕಾರಯತಿ = ಮಾಡಿಸುತ್ತಾನೆ. ಇತ್ಯತಃ = ಈ ಕಾರಣದಿಂದ, ಕರಣಾನಿ = ಇಂದ್ರಿಯಗಳನ್ನು ಸಾಧನೆಗಳೆಂದು, ವಿದುಃ = ತಿಳಿಯುತ್ತಾರೆ.

ಮುಖ್ಯಂ = ಮುಖ್ಯಪ್ರಾಣನನ್ನು ಮಾತ್ರ, ಜೀವಾಪೇಕ್ಷಯಾ = ಜೀವರ ಇಚ್ಛೆಯಿಂದ, ಪರಮೇಶ್ವರಃ = ಪರಮಾತ್ಮನು, ನ ಕಾರಯೇತ್ = ಮಾಡಿಸುವುದಿಲ್ಲ. ಕೇವಲಾತ್ಮೇಚ್ಛಯಾ = ತನ್ನ ಇಚ್ಛೆಯಂತೆ ಮಾಡಿಸುತ್ತಾನೆ. ತಸ್ಮಾತ್ = ಆದ್ದರಿಂದ, ತಸ್ಯ = ಪ್ರಾಣನಿಗೆ, ಮುಖ್ಯತ್ವಮ್ = ಮುಖ್ಯಪ್ರಾಣ ಎಂಬ ಬಿರುದು, ನಿಶ್ಚಿತಮ್ = ನಿಶ್ಚಯಿಸಲ್ಪಟ್ಟಿದೆ.

## ತತ್ವಪ್ರಕಾಶಿಕಾ

**तत्वप्रकाशिका – यदि प्राणानां करणत्वं कथं तर्हि जीवकरणत्वश्रुतिरुपपद्येत किं तु ब्रह्मकरणत्वस्य विरोध एवेत्याशङ्क्य तत्परिहारत्वेन सूत्रमवतार्य व्याचष्टे – कथमिति ।।**

ಒಂದುವೇಳೆ ಇಂದ್ರಿಯಗಳು ಬ್ರಹ್ಮನ ಕರಣಗಳೆಂದು ಆಗಿದ್ದರೆ ಆಗ ಅದೇ ಇಂದ್ರಿಯಗಳು ಜೀವನಿಗೆ ಕರಣಗಳಾಗುತ್ತವೆಂದು ಹೇಳುವ ಶ್ರುತಿಯನ್ನು ಹೇಗೆ ಕೂಡಿಸುವುದು? ಮತ್ತು ಬ್ರಹ್ಮನ ಕರಣಗಳೆಂದು ಹೇಳುವ ಶ್ರುತಿಗೆ ಜೀವನ ಕರಣಗಳೆಂದು ಹೇಳುವ ಶ್ರುತಿಯಿಂದ ವಿರೋಧ ಪ್ರಾಪ್ತವಾಗುತ್ತದಲ್ಲವೇ? ಈ ಸಮಸ್ಯೆಯನ್ನು ಪರಿಹರಿಸಲು 'ಕಥಂ' ಇತ್ಯಾದಿಯಾಗಿ ಸೂತ್ರಕ್ಕೆ ಅವತಾರಿಕೆ ನೀಡಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ – ಎಲ್ಲಾ ಇಂದ್ರಿಯಗಳು ಜೀವನ ಅಧೀನವೆಂದೇ ಪ್ರತ್ಯಕ್ಷ ದೃಷ್ಟವಾಗಿದೆ ಮತ್ತು ಶ್ರುತಿಯೂ ಕೂಡ 'ಜೀವಸ್ಯ ಕರಣಾನ್ಯಾಹುಃ' ಎಂದು ಜೀವನ ಕರಣಗಳೆಂದೇ ಹೇಳುತ್ತಿದೆ. ಹೀಗಿರುವಾಗ ಬ್ರಹ್ಮನ ಕರಣಗಳೆಂದು ಸಮರ್ಥಿಸುವುದು ಹೇಗೆ? ಎಲ್ಲಾ ಇಂದ್ರಿಯಗಳಿಗೂ ಬ್ರಹ್ಮನೇ ಪ್ರೇರಕನಾಗಿದ್ದಾನೆಂದು ಹೇಳುವುದು ತಪ್ಪಲ್ಲವೇ? ಎಂಬ ಪ್ರಶ್ನೆಗೆ 'ಪ್ರಾಣವತಾ ಶಬ್ದಾತ್' ಎಂಬ ಸೂತ್ರವು ಉತ್ತರಿಸುತ್ತಿದೆ. ಜೀವನಿಂದ ತನ್ನಿಂದ ಪ್ರೇರ್ಯವಾದ ಇಂದ್ರಿಯದ ಮೂಲಕವೇ ಜೀವನಿಗೆ ಜ್ಞಾನವನ್ನು ನೀಡುತ್ತಾನೆಂಬುದು ಸೂತ್ರದಲ್ಲಿ ನೀಡಿದ ಉತ್ತರ.

**तत्वप्रकाशिका – ब्रह्मकरणत्वाङ्गीकारेऽपि प्राणानां न जीवकरणत्वश्रुतिविरोधः। स्वकरणैरेव प्राणैर्ब्रह्म जीवेन दर्शनादि कारयतीत्येतदर्थत्वोपपत्तेर्जीवकरणत्व-वाक्यस्य । ब्रह्मेन्द्रियैर्जीवेन दर्शनादि कारयतीत्येतच्च श्रुतिसिद्धमिति भावः ।**

ಇಂದ್ರಿಯಗಳು ಬ್ರಹ್ಮನಿಂದ ಪ್ರೇರ್ಯವಾಗಿವೆ ಎಂದು ಅಂಗೀಕಾರ ಮಾಡಿದರೂ ಕೂಡ ಜೀವಕರಣತ್ವವನ್ನು ಹೇಳುವ ಶ್ರುತಿಗೆ ವಿರೋಧವು ಬರುವುದಿಲ್ಲ. ತನ್ನ ಅಧೀನವಾದ ಕರಣಗಳ ಮೂಲಕವಾಗಿಯೇ ಬ್ರಹ್ಮನು ಜೀವನಿಗೆ ದರ್ಶನಾದಿಗಳನ್ನು ಮಾಡಿಸುತ್ತಾನೆಂಬುದು ಶ್ರುತಿಯ ಅರ್ಥ. ಆದ್ದರಿಂದ ಬ್ರಹ್ಮನೇ ಜೀವನಿಗೆ ಇಂದ್ರಿಯಗಳ ಮುಖಾಂತರ ದರ್ಶನಾದಿಗಳನ್ನು ಮಾಡಿಸುತ್ತಾನೆಂಬ ಅರ್ಥವು ಶ್ರುತಿಸಿದ್ಧವಾಯಿತು.

ವಿವರಣೆ – ಪ್ರಾಣ ಶಬ್ದಕ್ಕೆ ಇಂದ್ರಿಯಗಳು ಎಂದರ್ಥ. 'ಪ್ರಾಣವಾನ್' ಎಂದರೆ ಇಂದ್ರಿಯಗಳುಳ್ಳವನು ಎಂದರ್ಥ. ಜೀವನಿಗೆ ಪ್ರಾಣವಾನ್ ಎಂದು ಹೆಸರಿರುವುದರಿಂದ ಇಂದ್ರಿಯಗಳು ಜೀವನ ಕರಣಗಳಾಗಬೇಕಲ್ಲವೇ? ಎಂದು ಪೂರ್ವಪಕ್ಷ ಮಾಡಲಾಗಿತ್ತು. ಆದರೆ ಬ್ರಹ್ಮನು ತನ್ನ ಕರಣಗಳಿಂದಲೇ ದರ್ಶನಾದಿಗಳನ್ನು ಮಾಡಿಸುತ್ತಾನಾದ್ದರಿಂದ ಜೀವನು 'ಪ್ರಾಣವಾನ್' ಎಂದು ಕರೆಸಿಕೊಳ್ಳುತ್ತಾನೆಂಬುದಾಗಿ ಸೂತ್ರದ ಅಭಿಪ್ರಾಯವನ್ನು ಭಾಷ್ಯದಲ್ಲಿ ವ್ಯಾಖ್ಯಾನ ಮಾಡಿದ್ದಾರೆ.

**तत्वप्रकाशिका – सृतिरसृतिरिति । स्वातन्त्र्येण प्रवृत्तियुक्तस्तद्विहीनश्च। अस्तु ब्रह्म जीवेन चक्षुरादिना दर्शनादि कारयतीति तथापि जीवकरणत्वश्रुतिस्तदर्थेत्येतत्कुत इत्यत आह – करणैरिति ।। करणानि जीवस्य यद्येतानि ब्रह्मणस्तर्हि मुख्यप्राणस्याप्येतत्सम्भवतीत्यकरणत्वहेतुना प्राण एवाकरणस्तस्मान्मुख्य इत्युक्तं मुख्यत्वं विरुद्धं स्यादिन्द्रियाणां जीवकरणत्वे तदुपपत्तिरित्यत आह – नेति ।। जीवापेक्षया ब्रह्मकरणत्वं तत्र विवक्षितमिति भावः । मुख्यं मुख्यप्राणम् ।।**

ಭಾಷ್ಯದಲ್ಲಿ ಉದಾಹರಿಸಲ್ಪಟ್ಟ ಶ್ರುತಿಯಲ್ಲಿ ಶ್ರುತಿ ಶಬ್ದಕ್ಕೆ ಸ್ವಾತಂತ್ರ್ಯದಿಂದ ಪ್ರವೃತ್ತಿ ಮಾಡುವ ಶ್ರೀಹರಿ ಎಂದರ್ಥ. ಅಸೃತಿ ಎಂದರೆ ಸ್ವಾತಂತ್ರ್ಯವಿಲ್ಲದ ಜೀವನು ಎಂದರ್ಥ.

ಬ್ರಹ್ಮನು ಜೀವನಿಗೆ ತನ್ನ ಅಧೀನವಾದ ಚಕ್ಷುರಾದಿಗಳ ಮೂಲಕ ದರ್ಶನಾದಿಗಳನ್ನು ಮಾಡಿಸುತ್ತಾನೆಂದು ಒಪ್ಪೋಣ. ಆದರೂ ಕೂಡ ಜೀವಕರಣತ್ವ ಶ್ರುತಿಗೆ ಇದೇ ಅರ್ಥವನ್ನು

ಅಂಗೀಕರಿಸಬೇಕೆಂಬುದು ಯಾವ ಪ್ರಮಾಣದಿಂದ ಸಿದ್ಧವಾಗುತ್ತದೆ ? ಎಂಬ ಪ್ರಶ್ನೆಗೆ 'ಕರಣೈಃ' ಇತ್ಯಾದಿ ಭಾಷ್ಯದಿಂದ ಉತ್ತರಿಸಿದ್ದಾರೆ.

'ಕರಣಾನಿ' ಎಂಬ ಪದಕ್ಕೆ ಜೀವನ ಕರಣಗಳು ಎಂದರ್ಥ.

ಒಂದು ವೇಳೆ ಈ ಇಂದ್ರಿಯಗಳು ಬ್ರಹ್ಮನ ಕರಣಗಳು ಎಂದು ಹೇಳುವುದಾದರೆ ಆಗ ಮುಖ್ಯಪ್ರಾಣನ ಇಂದ್ರಿಯಗಳಿಗೂ ಕೂಡ ಬ್ರಹ್ಮನೇ ಕಾರಣನೆಂದು ಹೇಳಿದಂತಾಗುತ್ತದೆ. ಆಗ ಅಕರಣತ್ವ ಎಂಬ ಹೇತುವಿನಿಂದಲೇ 'ಪ್ರಾಣಃ ಏವ ಅಕರಣಃ ತಸ್ಮಾನ್ ಮುಖ್ಯಃ' ಎಂಬುದಾಗಿ ಮುಖ್ಯಪ್ರಾಣನಿಗೆ ಹೇಳಲ್ಪಟ್ಟ ಮುಖ್ಯತ್ವವೇ ಕೂಡುವುದಿಲ್ಲ. ಎಲ್ಲಾ ಇಂದ್ರಿಯಗಳು ಜೀವನ ಕರಣಗಳೆಂದು ಒಪ್ಪಿದಾಗ ಮಾತ್ರ ಮುಖ್ಯಪ್ರಾಣನಿಗೆ ಮುಖ್ಯತ್ವವು ಮುಕ್ತವಾಗುತ್ತದೆ. ಈ ಆಶಂಕೆಯನ್ನು ಪರಿಹಾರ ಮಾಡಲು 'ನ' ಇತ್ಯಾದಿ ಭಾಷ್ಯವಾಕ್ಯವು ಹೊರಟಿದೆ.

ಜೀವನ ಅಪೇಕ್ಷೆಯಿಂದ ಇಂದ್ರಿಯಗಳಿಗೆ ಬ್ರಹ್ಮಕರಣತ್ವವನ್ನು ಹೇಳುವ ಉದ್ದೇಶವಿರುತ್ತದೆಂಬುದು ಅಭಿಪ್ರಾಯ. 'ಮುಖ್ಯ' ಎಂದರೆ ಮುಖ್ಯಪ್ರಾಣ ಎಂದರ್ಥ.

ವಿವರಣೆ – ಇಂದ್ರಿಯಗಳು ಬ್ರಹ್ಮನ ಕರಣಗಳಾಗಿವೆ ಎಂದು ಹೇಳಿದರೆ ಬ್ರಹ್ಮನಿಂದಲೇ ಪ್ರೇರಣೆಗೆ ಒಳಪಟ್ಟವೆ ಎಂದರ್ಥ. ಹೀಗೆ ಹೇಳಿದರೆ ಮುಖ್ಯಪ್ರಾಣನೂ ಕೂಡ ಕರಣನಾಗಬೇಕಾಗುತ್ತದೆ. ಆದರೆ 'ಕರಣತ್ವಾಚ್ಚ' ಎಂಬ ಸೂತ್ರವು ಮುಖ್ಯಪ್ರಾಣನಿಗೆ ಕರಣತ್ವ ಇಲ್ಲದ್ದರಿಂದಲೇ ಮುಖ್ಯಪ್ರಾಣನಾಗಿದ್ದಾನೆಂದು ಸಮರ್ಥನೆ ಮಾಡಿದೆ. ಇದು ಪ್ರಕೃತ ಕೂಡುವುದಿಲ್ಲ. ಹಾಗಾಗಿ ಎಲ್ಲಾ ಇಂದ್ರಿಯಗಳೂ ಜೀವನ ಕರಣಗಳೆಂದೇ ಹೇಳಬೇಕು. ಆಗ ಜೀವೋತ್ತಮನಾದ ಪ್ರಾಣನಲ್ಲಿ ಜೀವನಿಂದ ಪ್ರಯೋಜ್ಯತ್ವವು ಯುಕ್ತವಾಗುವುದಿಲ್ಲವಾದ್ದರಿಂದ ಕರಣತ್ವವೂ ಕೂಡ ಬರುವುದಿಲ್ಲ ಎಂದು ಹೇಳುವುದು ಯುಕ್ತವಾಗುತ್ತದೆ. ಮತ್ತು ಅಕರಣತ್ವ ಹೇತುವಿನಿಂದ ಮುಖ್ಯಪ್ರಾಣನಲ್ಲಿ ಮುಖ್ಯತ್ವವನ್ನು ಸಾಧಿಸುವುದು ಯುಕ್ತವಾಗುತ್ತದೆ. ಆದ್ದರಿಂದ ಎಲ್ಲಾ ಇಂದ್ರಿಯಗಳೂ ಬ್ರಹ್ಮಕರಣಗಳೆಂದು ಹೇಳುವುದು ತಪ್ಪಲ್ಲವೇ?

ಈ ಪ್ರಶ್ನೆ ತಪ್ಪು. ಪರಮಾತ್ಮನು ಜೀವನ ಇಚ್ಛೆ, ಪ್ರಯತ್ನಾದಿಗಳನ್ನು ಅನುಸರಿಸಿ ಮುಖ್ಯಪ್ರಾಣನನ್ನು ಪ್ರೇರಣೆ ಮಾಡುತ್ತಿಲ್ಲ. ತನ್ನ ಇಚ್ಛೆ, ಪ್ರಯತ್ನಗಳನ್ನು ಅನುಸರಿಸಿಯೇ ಮುಖ್ಯಪ್ರಾಣನನ್ನು ಪ್ರೇರಣೆ ಮಾಡುತ್ತಾನೆ. ಆದ್ದರಿಂದ 'ಅಕರಣತ್ವಾಚ್ಚ' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ಅಕರಣತ್ವ ಹೇತುವು ಸಮಂಜಸವೇ ಆಗಿದೆ. ಆ ಸೂತ್ರವು ಜೀವನ ಇಚ್ಛಾದಿಗಳಿಗೆ ಅನುಗುಣವಾದ ಕರಣತ್ವ ಇಲ್ಲವೆಂದೇ ಹೇಳುತ್ತಿದೆ.

ಅಭಿಪ್ರಾಯವಿಷ್ಟು – ಈ ಅಧಿಕರಣದಲ್ಲಿ ಎಲ್ಲಾ ಇಂದ್ರಿಯಗಳು ಜೀವನ ಇಂದ್ರಿಯಗಳಲ್ಲ, ಬ್ರಹ್ಮನ ಇಂದ್ರಿಯಗಳೇ ಆಗಿವೆಯೆಂದು ಹೇಳಲಾಗಿದೆ. ಈ ವಿಷಯವನ್ನು ಗಮನಿಸಿ ಪರಮಾತ್ಮನ ಸ್ವರೂಪಭೂತವಾದ ಇಂದ್ರಿಯಗಳು ಹೇಗೆ ಜ್ಞಾನಾನಂದಾತ್ಮಕವೋ, ಅದರಂತೆ ನಮ್ಮ ಇಂದ್ರಿಯಗಳು ಜ್ಞಾನಾನಂದಾತ್ಮಕ ಮತ್ತು ಭಗವತ್‌ಸ್ವರೂಪವೆಂದು ಸರ್ವಥಾ ತಿಳಿಯಬಾರದು. ಇಂದ್ರಿಯಗಳೆಲ್ಲವೂ ಬ್ರಹ್ಮನ ಕರಣಗಳು ಎಂಬುದರ ಅಭಿಪ್ರಾಯವೇನೆಂದರೆ ನಮ್ಮ ದೇಹದಲ್ಲಿರುವ ಚಕ್ಷುರಾದಿ ಇಂದ್ರಿಯಗಳು

ನಮ್ಮ ಅಧೀನವಾಗಿ ಕಾರ್ಯನಿರತವಾಗಿರುವುದಲ್ಲ, ಶ್ರೀಹರಿಯ ಅಧೀನವಾಗಿ ಕಾರ್ಯನಿರತವಾಗಿವೆ ಎಂದಷ್ಟೇ ಅಭಿಪ್ರಾಯ. ಪರಮಾತ್ಮನ ಅಧೀನವಾಗಿ ನಮ್ಮಿಂದ ಪ್ರೇರ್ಯವಾದ್ದರಿಂದ ಮುಖ್ಯವಾಗಿ ಈ ಇಂದ್ರಿಯಗಳು ಬ್ರಹ್ಮನ ಇಂದ್ರಿಯಗಳೆಂದು ಕರೆಸಿಕೊಳ್ಳುತ್ತವೆ ಎಂದು ತಿಳಿಯಬೇಕು. ಮುಖ್ಯಪ್ರಾಣನು ಉಳಿದ ಇಂದ್ರಿಯಗಳಂತೆ ನಮ್ಮಿಂದ ಪ್ರೇರ್ಯನಲ್ಲ. ಕೇವಲ ಪರಮಾತ್ಮನಿಂದಷ್ಟೇ ಪ್ರೇರ್ಯನಾಗಿದ್ದಾನೆ. ಆದ್ದರಿಂದ ಬ್ರಹ್ಮಕರಣತ್ವವು ಉಳಿದ ಇಂದ್ರಿಯಗಳಂತೆ ಅವನಲ್ಲಿ ಪ್ರಾಪ್ತವಾಗುವುದಿಲ್ಲ.

## ಬ್ರಹ್ಮಸೂತ್ರ

**सूत्रम् – तस्य च नित्यत्वात् ।।**

ಜೀವರಿಗೆ ಚಕ್ಷುರಾದಿ ಇಂದ್ರಿಯಗಳು ಬ್ರಹ್ಮನ ಅಧೀನವಾಗಿದ್ದರೂ ಜೀವರಿಗೆ ಚಕ್ಷುರಾದಿ ಇಂದ್ರಿಯಗಳ ಸಂಬಂಧವು ಅನಾದಿನಿತ್ಯವಾಗಿದೆ. ಹೀಗೆ ಹೇಳಿದ್ದರಿಂದ ಜೀವನ ಕರಣಗಳು ಪ್ರತಿಪಾದನೆ ಮಾಡುವ ಶ್ರುತಿಯು ಉಪಪನ್ನವಾಗುತ್ತದೆ.

## ಸೂತ್ರದೀಪಿಕಾ

**सूत्रदीपिका – चक्षुरादीनां ब्रह्मकरणत्वेऽपि तस्य जीवस्य करणस्य च तयोः सम्बन्धस्य च नित्यत्वात् । तद्विवक्षया जीवकरणत्वश्रुतिरप्युपपद्यत इत्यर्थः ।।३।।**

ಚಕ್ಷುರಾದಿ ಇಂದ್ರಿಯಗಳು ಬ್ರಹ್ಮನ ಅಧೀನವಾದ್ದರಿಂದ ಬ್ರಹ್ಮನ ಇಂದ್ರಿಯಗಳೆಂದು ಕರೆಯಲ್ಪಟ್ಟಿದ್ದರೂ ತಸ್ಯ = ಜೀವನಿಗೂ ಮತ್ತು ಇಂದ್ರಿಯಗಳಿಗೂ, ಚ = ಅವೆರಡರ ಸಂಬಂಧವು, ನಿತ್ಯತ್ವಾತ್ = ನಿತ್ಯವಾಗಿರುವುದರಿಂದ, ಜೀವನ ಕರಣಗಳು ಎಂದು ಹೇಳುವ ಶ್ರುತಿಯು ಉಪಪನ್ನವಾಗುತ್ತದೆ.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ಜ್ಯೋತಿರಾದ್ಯಧಿಕರಣವು ಮುಗಿಯಿತು.

## ಬ್ರಹ್ಮಸೂತ್ರಭಾಷ್ಯ

**भाष्यम् – ।। तस्य च नित्यत्वात् ।।३।।**

**अनादिनित्यत्वाज्जीवकरणसम्बन्धस्य युज्यते तत्करणत्वश्रुतिः ।**

ಅನುವಾದ - ಜೀವ ಹಾಗೂ ಇಂದ್ರಿಯಗಳಿಗೆ ಅನಾದಿಯಾದ ಸಂಬಂಧ ಇರುವುದರಿಂದ ಬ್ರಹ್ಮನ ಅಧೀನವಾಗಿದ್ದರೂ ಜೀವನ ಕರಣಗಳು ಎಂದು ಹೇಳುವುದು ಯುಕ್ತವಾಗುತ್ತದೆ.

ಪ್ರತಿಪದಾರ್ಥ -- ಜೀವಕರಣಸಂಬಂಧಸ್ಯ = ಜೀವ ಹಾಗೂ ಇಂದ್ರಿಯಗಳ ಸಂಬಂಧ, ಅನಾದಿನಿತ್ಯತ್ವಾತ್ = ಅನಾದಿನಿತ್ಯವಾಗಿರುವ ಕಾರಣದಿಂದ, ತತ್ಕರಣತ್ವಶ್ರುತಿಃ = ಜೀವನಿಗೆ ಸಂಬಂಧಪಟ್ಟ ಇಂದ್ರಿಯಗಳು ಎಂಬುದಾಗಿ ಹೇಳುವ ಶ್ರುತಿಯು, ಯುಜ್ಯತೇ = ಯುಕ್ತವಾಗುತ್ತದೆ.

**भाष्यम् — 'अथावियोगीनि । करणैर्वाव न वियुज्यते देहेनैव वियुज्यते इत्येतद् वाव करणानां करणत्वं यद् वाव न वियुज्यते' इति गौपवनश्रुतिः। चशब्दः करणसम्बन्धग्राही ।।३।।**

## ।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये ज्योतिराद्यधिकरणम् ।। १० ।।

ಅನುವಾದ - ಇಂದ್ರಿಯಗಳು ಜೀವನಿಂದ ಎಂದೂ ಬೇರೆಯಾಗುವುದಿಲ್ಲ. ದೇಹದಿಂದ ಮಾತ್ರ ಬೇರೆಯಾಗುತ್ತವೆ. ಆದ್ದರಿಂದಲೇ ಇಂದ್ರಿಯಗಳಿಗೆ ಕರಣತ್ವವು ಯುಕ್ತವಾಗುತ್ತದೆ. ಹೀಗೆ ಗೌಪವನಶ್ರುತಿಯು ಹೇಳುತ್ತಿದೆ. ಸೂತ್ರದಲ್ಲಿರುವ ಚ ಶಬ್ದವು ಜೀವನಿಗಿರುವ ಕರಣಸಂಬಂಧವನ್ನು ಸಮುಚ್ಚಯ ಮಾಡುತ್ತಿದೆ.

ಪ್ರತಿಪದಾರ್ಥ -- ಅಥ = ಆದ್ದರಿಂದ, ಕರಣೈಃ = ಇಂದ್ರಿಯಗಳಿಂದ, ಅವಿಯೋಗಿನೀ = ಇಂದ್ರಿಯಗಳು ವಿಯೋಗವನ್ನು ಹೊಂದುವುದಿಲ್ಲ. ನವಿಯುಜ್ಯತೇ = ಎಂದೂ ಬೇರೆ ಯಾವುವುದಿಲ್ಲ. ದೇಹೇನೈವ = ದೇಹದಿಂದ ಮಾತ್ರ, ವಿಯುಜ್ಯತೇ = ಬೇರೆಯಾಗುತ್ತದೆ. ಯದ್ ವಾವ ನ ವಿಯುಜ್ಯತೇ = ಯಾವ ಕಾರಣದಿಂದ ಇಂದ್ರಿಯಗಳು ಬೇರೆಯಾಗುವುದಿಲ್ಲವೋ, ಇತ್ಯೇತದ್ ವಾವ = ಇದೇ ಕಾರಣದಿಂದ, ಕರಣಾನಾಂ = ಇಂದ್ರಿಯಗಳಿಗೆ, ಕರಣತ್ವಂ = ಕರಣತ್ವವು ಯುಕ್ತವಾಗುತ್ತದೆ. ಇತಿ = ಹೀಗೆ, ಗೌಪವನಶ್ರುತಿಃ = ಗೌಪವನಶ್ರುತಿಯು ಹೇಳುತ್ತಿದೆ.

ಚ ಶಬ್ದಃ = ಸೂತ್ರದಲ್ಲಿರುವ ಚ ಶಬ್ದವು, ಕರಣಸಂಬಂಧಗ್ರಾಹೀ = ಜೀವನಿಗಿರುವ ಇಂದ್ರಿಯಗಳ ಸಂಬಂಧವನ್ನು ಸಮುಚ್ಚಯ ಮಾಡುತ್ತಿದೆ.

ಇಲ್ಲಿಗೆ ಜ್ಯೋತಿರಾದ್ಯಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

ತತ್ವಪ್ರಕಾಶಿಕಾ

**तत्वप्रकाशिका – 'एवमस्वतन्त्रकर्तुः करणान्यन्याधीनान्यपि साधनत्वात् तत्करणानीत्युच्यन्ते । यथा परकीयकुठारेणापि वृश्चतोऽसौ तत्करणमुच्यत इत्येकमर्थं जीवकरणत्वश्रुतेरुक्त्वार्थान्तरप्रतिपादकं च सूत्रं पठित्वा व्याचष्टे – तस्य चेति ।।**

ಹೀಗೆ ಅಸ್ವತಂತ್ರಕರ್ತೃವಾದ ಜೀವನ ಕರಣಗಳು ಭಗವದಧೀನವಾಗಿದ್ದರೂ ಕೂಡ ಈ ಇಂದ್ರಿಯಗಳು ಜೀವನಿಗೆ ಬರುವ ಜ್ಞಾನಕ್ಕೆ ಸಾಧನವಾದ್ದರಿಂದ ಜೀವನ ಕರಣಗಳು ಎಂದೇ ವ್ಯವಹಾರವಿದೆ. ಉದಾಹರಣೆ – ಮತ್ತೊಬ್ಬರ ಕೊಡಲಿಯಿಂದ ಮರವನ್ನು ಕಡೆದರೂ ಕೂಡ ಕೊಡಲಿಯನ್ನು ಕಡಿಯುವವನ ಕರಣವೆಂದೇ ಹೇಳುತ್ತಾರೆ. ಹೀಗೆ ಜೀವಕರಣತ್ವ ಶ್ರುತಿಗೆ ಮತ್ತೊಂದು ಅರ್ಥವನ್ನು ಹೇಳುವ ಸೂತ್ರವನ್ನು ಪಠಿಸಿ 'ತಚ್ಛ್ರುತೇಃ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ – ಹಿಂದಿನ ಸೂತ್ರದಲ್ಲಿ ಪರಮಾತ್ಮನು ತನ್ನಿಂದ ಪೇರ್ಯವಾದ ಚಕ್ಷುರಾದಿ ಇಂದ್ರಿಯಗಳಿಂದ ಜೀವನಿಗೆ ಜ್ಞಾನವನ್ನು ನೀಡುತ್ತಾನಾದ್ದರಿಂದ ಜೀವಕರಣತ್ವವನ್ನು ವ್ಯಾಖ್ಯಾನ ಮಾಡಲಾಯಿತು. ಪ್ರಕೃತ ಈ ಸೂತ್ರದಲ್ಲಿ ಇಂದ್ರಿಯಗಳು ಭಗವದಧೀನವಾದರೂ ಕೂಡ ಜೀವಕರಣತ್ವ ಶ್ರುತಿಯು ಯುಕ್ತವಾಗುತ್ತದೆಂದು ಹೇಳಲಾಗಿದೆ.

**तत्वप्रकाशिका – प्राणानां ब्रह्मकरणत्वेऽपि युज्यते जीवकरणत्वश्रुतिः । जीवकरणसम्बन्धस्यानादिनित्यत्वात् । परकीयेऽपि बहुकालसम्बन्धिन्युपचारतस्त-दीयत्वव्यवहारदर्शनादिति भावः । एतेनानुभवोऽप्याभिमानिकतया व्याख्यातः । अनादिसम्बन्धनिबन्धनोऽयं व्यवहारः । श्रौत इति कुत एतदित्यत आह –अथेति ।**

ಇಂದ್ರಿಯಗಳು ಬ್ರಹ್ಮಕರಣವಾದರೂ ಕೂಡ ಜೀವಕರಣತ್ವ ಶ್ರುತಿಗೆ ವಿರೋಧವು ಬರುವುದಿಲ್ಲ. ಏಕೆಂದರೆ ಜೀವ ಹಾಗೂ ಇಂದ್ರಿಯಗಳ ಸಂಬಂಧವು ಅನಾದಿನಿತ್ಯವಾಗಿದೆ. ಮತ್ತೊಬ್ಬರ ವಸ್ತು ಬಹಳ ಕಾಲ ತನ್ನ ವಶವಾಗಿದ್ದರೆ ಅದು ತನ್ನದೇ ಎಂದು ತಿಳಿಯುವ ವ್ಯವಹಾರವು ಲೋಕದಲ್ಲಿ ಕಂಡಿದೆ ಎಂದಭಿಪ್ರಾಯ. ಹೀಗೆ ಹೇಳಿದ್ದರಿಂದ ಇದು ನನ್ನ ಇಂದ್ರಿಯ ಎಂಬ ಅನುಭವವು ಕೇವಲ ಅಭಿಮಾನಮೂಲಕವಾಗಿದೆ ಎಂದು ತಿಳಿಯಬೇಕು. ಈ ಶ್ರುತಿಯಲ್ಲಿ ಹೇಳಲ್ಪಟ್ಟ ಜೀವನ ಕರಣತ್ವವು ಅನಾದಿ ಸಂಬಂಧದ ಮೂಲಕವಾಗಿದೆ ಎಂಬುದು ಶ್ರುತಿಸಿದ್ಧವಾಗಿದೆ ಎಂದು ಹೇಳಿದ ಪ್ರಶ್ನೆಗೆ 'ಅತಃ' ಇತ್ಯಾದಿಯಾದ ಭಾಷ್ಯವು ಉತ್ತರಿಸುತ್ತಿದೆ.

ವಿವರಣೆ – ಬೇರೊಬ್ಬರ ವಸ್ತು ಇನ್ನೊಬ್ಬರ ಬಳಿ ಬಹಳ ಕಾಲವಿದ್ದರೆ ಅದು ಅವನ ವಸ್ತು ಎಂದು ಗೌಣವಾಗಿ ವ್ಯವಹರಿಸುವುದು ಲೋಕದಲ್ಲಿ ಕಂಡಿದೆ. ಅದೇ ರೀತಿಯಾಗಿ ಇಂದ್ರಿಯಗಳು ಭಗವದಧೀನವಾಗಿದ್ದರೂ ಅನಾದಿಕಾಲದಿಂದ ಮೋಕ್ಷದಲ್ಲಿ ಜೀವನ ಜೊತೆಯೇ ಇರುತ್ತವೆ. ಆದ್ದರಿಂದ

ಇದನ್ನು ಜೀವನಿಗೆ ಸಂಬಂಧಪಟ್ಟ ಇಂದ್ರಿಯಗಳೆಂದೇ ಲೋಕವ್ಯವಹಾರವಿದೆ. ಶ್ರುತಿಯೂ ಕೂಡ ಅದನ್ನೇ ಅನುವಾದ ಮಾಡುತ್ತಿದೆ. ಇಂದ್ರಿಯಗಳು ತನ್ನ ಅಧೀನವೆಂದೇ ಅನುಭವವಿದೆ ಎಂದು ಪೂರ್ವಪಕ್ಷದಲ್ಲಿ ಹೇಳಲಾಗಿತ್ತು. ಆದರೆ ಜೀವನಿಗೂ ಇಂದ್ರಿಯಗಳಿಗೂ ಇರುವ ಸಂಬಂಧವು ಅನಾದಿನಿತ್ಯ ಎಂಬರ್ಥದಲ್ಲಷ್ಟೇ ಇಂದ್ರಿಯಗಳು ಜೀವನಿಗೆ ಸಂಬಂಧಪಟ್ಟವು ಎಂಬ ವ್ಯವಹಾರವು ಲೋಕದಲ್ಲಿದೆ ಎಂದು ತಿಳಿಯಬೇಕು. ಆದ್ದರಿಂದ ಈ ಅನುಭವವು ಭ್ರಮಮೂಲಕವೇ ಹೊರತು ಸತ್ಯವಾದದ್ದಲ್ಲ. ಹಾಗಾಗಿ ಇಂದ್ರಿಯಗಳು ಸರ್ವಥಾ ಜೀವನ ಅಧೀನವಾದುದಲ್ಲ, ಭಗವದಧೀನವಾಗಿವೆ ಎಂಬುದನ್ನು ತಿಳಿಯಬೇಕು.

**ತत्वप्रकाशिका – अवियोगिनी जीवेनेति शेषः करणानां करणत्वमिन्द्रियाणां जीवकरणत्व-व्यवहारे निमित्तमित्यर्थः । प्राणवतेति जीवस्य प्रकृतत्वादत्र तत्परामर्शो युक्तोऽतः कथमुच्यते सम्बन्धस्येत्यत आह – चशब्द इति ।। तच्छब्देन जीवपरामर्शेऽपि चशब्देन प्राणवत्पदसन्निधापिताः प्राणाः प्राणसम्बन्धश्च समुच्चीयन्ते । न हि प्राणान् प्राणवत्त्वं च विना प्राणवान् भवति । अतो युक्तेयं व्याख्येति भावः ।**

'ಅವಿಯೋಗಿನೀ' ಎಂಬಲ್ಲಿ 'ಜೀವೇನ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಕರಣಗಳಿಗೆ ಕರಣತ್ವವಿದೆಯೆಂದರೆ ಇಂದ್ರಿಯಗಳಿಗೆ ಜೀವಕರಣತ್ವ ವ್ಯವಹಾರದಲ್ಲಿ ನಿಮಿತ್ತವಿದೆ ಎಂದರ್ಥ. ಹಿಂದಿನ ಸೂತ್ರದಲ್ಲಿ 'ಪ್ರಾಣವತಾ' ಎಂಬ ಶಬ್ದದಿಂದ ಜೀವನು ಪ್ರಕೃತನಾಗಿದ್ದಾನೆ. ಈ ಸೂತ್ರದಲ್ಲೂ ಅವನ ಪರಾಮರ್ಶ ಮಾಡಬೇಕು. ಆದ್ದರಿಂದ ಸೂತ್ರದಲ್ಲಿ 'ತಸ್ಯ' ಎಂಬುದಕ್ಕೆ 'ಸಂಬಂಧಸ್ಯ' ಎಂಬರ್ಥವನ್ನು ಹೇಗೆ ಹೇಳುತ್ತೀರಿ ? ಎಂಬ ಪ್ರಶ್ನೆಗೆ 'ಚಶಬ್ದಸ್ಯ' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

'ತತ್' ಶಬ್ದದಿಂದ ಜೀವನನ್ನು ಪರಾಮರ್ಶೆ ಮಾಡಿದರೂ ಕೂಡ 'ಪ್ರಾಣವತಾ' ಎಂಬ ಪದದಿಂದ ಬುದ್ಧ್ಯಾರೂಢವಾದ ಪ್ರಾಣ ಮತ್ತು ಅವನಿಗೆ ಸಂಬಂಧಪಟ್ಟ ಇಂದ್ರಿಯಗಳು ಹಾಗೂ ಇಂದ್ರಿಯ ಸಂಬಂಧ ಇವುಗಳನ್ನು ಸಮುಚ್ಚಯ ಮಾಡಬೇಕು. ಏಕೆಂದರೆ ಪ್ರಾಣ ಮತ್ತು ಪ್ರಾಣವತ್ವ ಇವೆರಡೂ ಇಲ್ಲದೇ ಪ್ರಾಣವಾನ್ ಎಂಬ ವ್ಯವಹಾರವು ಸರ್ವಥಾ ಕೂಡುವುದಿಲ್ಲ. ಆದ್ದರಿಂದ ಹೀಗೆ ವ್ಯಾಖ್ಯಾನ ಮಾಡುವುದು ಯೋಗ್ಯವಾಗಿದೆ ಎಂದಭಿಪ್ರಾಯ.

ವಿವರಣೆ – ಇಂದ್ರಿಯಗಳಿಗೂ ಜೀವನಿಗೂ ಎಂದೆಂದೂ ವಿಯೋಗವಿಲ್ಲ. ದೇಹವನ್ನು ಬಿಟ್ಟಾಗಲೂ ಜೀವನು ಆ ಇಂದ್ರಿಯಗಳನ್ನು ತೆಗೆದುಕೊಂಡೇ ತೆರಳುತ್ತಾನೆ. ಆದ್ದರಿಂದ ಇಂದ್ರಿಯಗಳು ಜೀವನ ಕರಣಗಳೆಂದು ಭಾಷ್ಯದಲ್ಲಿ ಹೇಳಲಾಗಿದೆ. 'ಕರಣಾನಾಂ ಕರಣತ್ವಂ' ಎಂಬ ಭಾಷ್ಯದ ಮಾತಿಗೆ ಇಂದ್ರಿಯಗಳು ಜೀವನ ಕರಣಗಳು ಎಂಬ ವ್ಯವಹಾರಕ್ಕೆ ನಿಮಿತ್ತವಾಗಿದೆ ಎಂದರ್ಥ.

ಸೂತ್ರದಲ್ಲಿರುವ 'ತಸ್ಯ' ಎಂಬ ಪದಕ್ಕೆ ಭಾಷ್ಯದಲ್ಲಿ 'ಜೀವಕರಣಸಂಬಂಧಸ್ಯ' ಎಂಬರ್ಥವನ್ನು ಬರೆದಿದ್ದಾರೆ. ಆದರೆ 'ಜೀವಸ್ಯ' ಎಂಬರ್ಥವನ್ನು ಹೇಳಬೇಕು. ಹಿಂದಿನ ಸೂತ್ರದಲ್ಲಿ ಜೀವನೇ ಪ್ರಕೃತನಾಗಿದ್ದಾನೆ. ಈ ಗೊಂದಲಕ್ಕೆ 'ಚಶಬ್ದಃ ಕರಣಸಂಬಂಧಗ್ರಾಹೀ'' ಎಂಬುದಾಗಿ ಭಾಷ್ಯದಲ್ಲಿ

ಉತ್ತರವನ್ನು ನೀಡಿದ್ದಾರೆ. ಸೂತ್ರದಲ್ಲಿರುವ ಚಶಬ್ದವು ಇಂದ್ರಿಯಗಳು ಹಾಗೂ ಇಂದ್ರಿಯಗಳ ಸಂಬಂಧವನ್ನೇ ಸಂಗ್ರಹ ಮಾಡುತ್ತಿದೆ. ಸೂತ್ರದಲ್ಲಿ ಜೀವ ಹಾಗೂ ಇಂದ್ರಿಯಗಳ ಸಂಬಂಧವು ಅನಾದಿನಿತ್ಯವೆಂದು ಹೇಳಲಾಗಿದೆ. ನಿತ್ಯ ಎಂದು ಹೇಳಿದರೆ ನಾಶವಿಲ್ಲದ್ದು ಎಂದಷ್ಟೇ ಅರ್ಥ ತಿಳಿಯುತ್ತದೆ. ಉತ್ಪತ್ತಿ ಇಲ್ಲ ಎಂಬ ಅನಾದಿತ್ವವನ್ನೂ ಕೂಡ ಇಲ್ಲಿ ವಿವಕ್ಷಿಸಬೇಕು.

ಜೀವನು ಇಂದ್ರಿಯಗಳುಳ್ಳವನು ಎಂದು ಕರೆಸಿಕೊಳ್ಳಬೇಕೆಂದರೆ ತತ್‌ಶಬ್ದ ಹಾಗೂ ಚಶಬ್ದದಿಂದ ಜೀವಕರಣ ಸಂಬಂಧವನ್ನೇ ವಿವಕ್ಷಿಸಬೇಕು. ಜೀವ ಹಾಗೂ ಇಂದ್ರಿಯಗಳ ಸಂಬಂಧವು ಅನಾದಿ ನಿತ್ಯವೆಂದು ಹೇಳಿ ಜೀವಕರಣತ್ವ ಶ್ರುತಿಯನ್ನು ಗೌಣವಾಗಿ ವ್ಯಾಖ್ಯಾನ ಮಾಡುವಾಗ ಜೀವ ಹಾಗೂ ಕರಣಗಳು ಅನಾದಿ ನಿತ್ಯವೆಂದು ಹೇಳುವುದು ಅಸಂಗತವಲ್ಲವೇ? ಎಂಬ ಪ್ರಶ್ನೆಗೆ ಸಂಬಂಧಿಗಳಿಲ್ಲದೇ ಸಂಬಂಧವೂ ಕೂಡ ಕೂಡುವುದಿಲ್ಲ. ಸಂಬಂಧವು ಸಂಬಂಧಿಸಾಪೇಕ್ಷ್ಯವಾದ್ದರಿಂದ ಸಂಬಂಧಿಗಳಾದ ಜೀವ ಹಾಗೂ ಇಂದ್ರಿಯಗಳನ್ನು ಪ್ರಕೃತ ಅನಾದಿನಿತ್ಯ ಎಂದು ಸಾಧಿಸಲಾಗಿದೆಯೆಂಬ ಅಭಿಪ್ರಾಯವನ್ನು ತಿಳಿಯಬೇಕು.

**तत्वप्रकाशिका – सम्बन्धिनोरभावे सम्बन्धाभावात्तदुक्तिः । तस्माच्छ्रुत्यविरोधेन प्राणानां ब्रह्मकरणत्वसिद्धेर्युक्तो जगत्कारणे हरौ श्रुतिसमन्वय इति सिद्धम् ।।**

ಎರಡು ಸಂಬಂಧಿಗಳು ಇಲ್ಲದಿದ್ದರೆ ಅವುಗಳಿಗೆ ಸಂಬಂಧವೇ ಕೂಡುವುದಿಲ್ಲ. ಆದ್ದರಿಂದ ಹೀಗೆ ಹೇಳಿದ್ದಾರೆ.

ಹೀಗೆ ಶ್ರುತಿಯ ವಿರೋಧವಿಲ್ಲದ ಕಾರಣ ಇಂದ್ರಿಯಗಳಿಗೆ ಬ್ರಹ್ಮಕರಣತ್ವವು ಸಿದ್ಧವಾಯಿತು. ಹಾಗಾಗಿ ಜಗತ್ಕಾರಣನಾದ ಶ್ರೀಹರಿಯಲ್ಲಿ ಶ್ರುತಿಸಮನ್ವಯವೂ ಕೂಡ ಯುಕ್ತವಾಗಿದೆ ಎಂದು ಸಾಧಿತವಾಯಿತು.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಜ್ಯೋತಿರಾದ್ಯಧಿಕರಣ ಮುಗಿಯಿತು

ಜ್ಯೋತಿರಾದ್ಯಧಿಕರಣ
(೨-೪-೧೦)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## ज्योतिराद्यधिकरणम्

ಇಂದ್ರಿಯಗಳು ಭಗವದಧೀನವಾದರೂ ಕೂಡ ಜೀವಾತ್ಮನಿಗೆ ಕರ್ಣಗಳು

**।। ज्योतिराद्यधिष्ठानन्तु तदामननात् ।। प्राणान्, मुख्यप्राणश्च निरूप्येह तेषां कं प्रति करणत्वमिति चिन्त्यत इति सङ्गतिः ।**

ಇಂದ್ರಿಯಗಳ ಬಗ್ಗೆ ಹಾಗೂ ಮುಖ್ಯಪ್ರಾಣನ ಬಗ್ಗೆ ಇಲ್ಲಿಯತನಕ ನಿರೂಪಣೆ ಮಾಡಿದ್ದಾಯಿತು. ಈ ಅಧಿಕರಣದಲ್ಲಿ ಆ ಇಂದ್ರಿಯಗಳು ಜೀವನಿಗೆ ಕರಣಗಳಾಗಿವೆಯೋ ಅಥವಾ ಬ್ರಹ್ಮನಿಗೆ ಕರಣಗಳಾಗಿವೆಯೋ ಎಂಬುದರ ಬಗ್ಗೆ ವಿಚಾರ ಮಾಡಲಾಗುತ್ತಿದೆ. ಆದ್ದರಿಂದ ಈ ಅಧಿಕರಣಕ್ಕೆ ಆನಂತರ್ಯ ಸಂಗತಿಯು ಯುಕ್ತವಾಗುತ್ತದೆ.

**अत्र श्रुतिसमन्वयेनोक्तं ब्रह्मणः सर्वस्रष्टृत्वादिकमयुक्तमुत नेति चिन्ता । तदर्थं किं श्रुतिरप्रमाणमुत नेति । तदर्थमिन्द्रियाणाङ्करणत्वाम्नानं जीवस्वामिकत्वाभिप्रायमुतेश्वरस्वामिकत्वेऽपि जीवं प्रति क्रियासाधनत्वमात्राभिप्रायमिति । (ब्रह्मकरणत्वश्रुतिप्रमाणमुत नेति । तदर्थं सा प्रत्यक्षानुगृहीतप्रबलजीवकरणत्वश्रुति बाधिता न वेति । तदर्थं जीवकरणत्वश्रुतिः करणानाञ्जीवस्वामिकत्वाभिप्रायोतेश्वरस्वामिकत्वेऽपि जीवं प्रति क्रियासाधनत्वमात्राभिप्रायेति ।)**

ಶ್ರುತಿಸಮನ್ವಯದ ಮೂಲಕ ಬ್ರಹ್ಮನಿಗೆ ಹೇಳಲ್ಪಟ್ಟ ಸರ್ವಸ್ರಷ್ಟೃತ್ವಾದಿಗಳು ಅಯುಕ್ತವೋ ಅಥವಾ ಯುಕ್ತವೋ? ಎಂಬುದು ಈ ಅಧಿಕರಣದಲ್ಲಿ ಮಾಡಬೇಕಾದ ಪ್ರಧಾನ ವಿಚಾರ. ಇದಕ್ಕೆ ಪೂರಕವಾಗಿ ಶ್ರುತಿಯು ಅಪ್ರಮಾಣವೋ ಅಲ್ಲವೋ? ಎಂಬ ವಿಚಾರ ಮಾಡಬೇಕು. ಇದಕ್ಕಾಗಿ ಇಂದ್ರಿಯಗಳು ಕರಣಗಳಾಗಿವೆ ಎಂದು ಶ್ರುತಿಯಲ್ಲಿ ಹೇಳಲ್ಪಟ್ಟಿದೆ. ಈ ಇಂದ್ರಿಯಗಳು ಜೀವಸ್ವಾಮಿಕವೋ ಅಥವಾ ಈಶ್ವರಸ್ವಾಮಿಕವಾದರೂ ಕೂಡ ಜೀವನನ್ನು ಕುರಿತು ಕ್ರಿಯಾ ಸಾಧನಗಳು ಮಾತ್ರ ಎಂದು ಅಭಿಪ್ರಾಯವೋ?

ಅಥವಾ ಹೀಗೂ ಸಂಶಯವನ್ನು ತಿಳಿಯಬಹುದು. ಬ್ರಹ್ಮನಿಗೆ ಈ ಇಂದ್ರಿಯಗಳು ಕರಣವಾಗಿವೆ ಎಂದು ಹೇಳುವ ಶ್ರುತಿಯು ಅಪ್ರಮಾಣವೋ ಅಥವಾ ಅಲ್ಲವೋ? ಅದಕ್ಕಾಗಿ ಆ ಶ್ರುತಿಯು ಪ್ರತ್ಯಕ್ಷಾನುಗೃಹೀತವಾದ ಪ್ರಬಲವಾದ ಜೀವಕರಣತ್ವಶ್ರುತಿಯಿಂದ ಬಾಧಿತವೋ ಅಲ್ಲವೋ? ಅದಕ್ಕಾಗಿ ಜೀವಕರಣತ್ವ ಶ್ರುತಿಯು ಇಂದ್ರಿಯಗಳು 'ಜೀವಸ್ವಾಮಿಕತ್ವಾಭಿಪ್ರಾಯವುಳ್ಳವುಗಳೋ ಅಥವಾ ಈಶ್ವರಸ್ವಾಮಿಕತ್ವವಾದರೂ ಕೂಡ ಜೀವನನ್ನು ಕುರಿತು ಕೇವಲ ಕ್ರಿಯಾಸಾಧನಗಳಾಗಿವೆ ಎಂಬ ಅಭಿಪ್ರಾಯ ಉಳ್ಳವುಗಳೋ? ಎಂದು.

**यदग्न्यादिरूपज्योतिराद्यधिष्ठातृ ब्रह्म तदेव तत्कार्यभूतचक्षुरादिरूपज्योतिराद्यधिष्ठानमिति सूत्रं योज्यमित्याह भाष्यकारः जीवेनैव करणैःकारयतीति ।। एवञ्च ब्रह्मप्रयोजकजीवकर्तृत्वाभ्याञ्चक्षुरादिकरणसम्बन्धित्वाच्छ्रुत्योरविरोध इति भावः ।**

'ಜ್ಯೋತಿರಾದ್ಯಧಿಷ್ಠಾನಂತು' ಎಂಬ ಸೂತ್ರದ ಅಭಿಪ್ರಾಯವನ್ನು ಭಾಷ್ಯಕಾರರು ಹೀಗೆ ಹೇಳಿದ್ದಾರೆ. ಅಗ್ನ್ಯಾದಿ ರೂಪವಾದ ಜ್ಯೋತಿಗೆ ಬ್ರಹ್ಮನೇ ನಿಯಾಮಕನಾಗಿದ್ದಾನೆ. ಇವನೇ ತತ್ಕಾರ್ಯವೆನಿಸಿದ ಚಕ್ಷುರಾದಿ ಇಂದ್ರಿಯಗಳಿಗೆ ನಿಯಾಮಕನಾಗಿದ್ದಾನೆ. ಏಕೆಂದರೆ 'ಯಃ ಚಕ್ಷುಷಿ ತಿಷ್ಠನ್ನಿತ್ಯಾದಿ' ಉಪನಿಷತ್ತು ಹೀಗೆ ಹೇಳುತ್ತಿದೆ ಎಂಬುದಾಗಿ ಭಾಷ್ಯಕಾರರು ಹೇಳಿದ್ದಾರೆ. ಬ್ರಹ್ಮನು ತನ್ನ ಕರಣಗಳಾದ ಇಂದ್ರಿಯಗಳಿಂದ ಜೀವನಿಗೆ ದರ್ಶನಾದಿ ಕ್ರಿಯೆಗಳನ್ನು ಮಾಡಿಸುತ್ತಾನೆ. ಹಾಗೂ ತನ್ನ ಅಧೀನವಾಗಿ ಜೀವಕರ್ತೃತ್ವದಿಂದಲೂ ಚಕ್ಷುರಾದಿ ಕರಣಗಳಿಗೆ ಸಂಬಂಧಪಟ್ಟ ಕಾರ್ಯಗಳನ್ನು ಮಾಡಿಸುತ್ತಾನೆ. ಆದ್ದರಿಂದ ಇಂದ್ರಿಯಗಳು ಜೀವನ ಕರಣಗಳು ಎಂಬ ಶ್ರುತಿಗೆ ಹಾಗೂ ಬ್ರಹ್ಮನ ಕರಣಗಳು ಎಂಬ ಶ್ರುತಿಗೆ ಪರಸ್ಪರ ವಿರೋಧವು ಬರುವುದಿಲ್ಲ.

**अन्ये तु वागादिकरणजातं स्वशक्त्यैवाभिवदनादिकारीति प्राप्ते अग्न्यादिभिरभिमानिदेवैरधिष्ठितमेव कार्यकारि । अग्निर्वाग्भूत्वा मुखं प्राविशदित्याद्यामननादिति सिद्धान्तयन्ति ।**

ಅದ್ವೈತಿಗಳು 'ಜ್ಯೋತಿರಾದ್ಯಧಿಷ್ಠಾನಂತು' ಎಂಬ ಸೂತ್ರದ ವ್ಯಾಖ್ಯಾನವನ್ನು ಹೀಗೆ ಮಾಡುತ್ತಾರೆ. ವಾಗಿಂದ್ರಿಯವೇ ಮೊದಲಾದ ಇಂದ್ರಿಯಗಳ ಸಮೂಹವು ತಮ್ಮ ಶಕ್ತಿಯಿಂದಲೇ ಮಾತನಾಡುವಿಕೆ ಮೊದಲಾದ ಕ್ರಿಯೆಗಳಲ್ಲಿ ತೊಡಗುತ್ತವೆ ಎಂಬುದು ಪೂರ್ವಪಕ್ಷ. ಅಗ್ನ್ಯಾದಿ ಅಭಿಮಾನಿ ದೇವತೆಗಳಿಂದ ನಿಯಮ್ಯವಾಗಿಯೇ ವಾಗಾದಿ ಇಂದ್ರಿಯಗಳು ಅಭಿವದನಾದಿ ಕಾರ್ಯಕಾರಿಗಳಾಗಿವೆ. ಏಕೆಂದರೆ 'ಅಗ್ನಿರ್ವಾಭೂತ್ವಾಮುಖಂ ಪ್ರಾವಿಶತ್' ಇತ್ಯಾದಿ ಶ್ರುತಿಯು ಇದನ್ನೇ ಹೇಳುತ್ತಿದೆ ಎಂಬುದು ಅಧಿಕರಣದ ಸಿದ್ಧಾಂತ ಎನ್ನುತ್ತಾನೆ.

**तन्न । ''अभिमानिव्यपदेशस्तु'' इत्यत्रैवाभिमानिदेवतासमर्थनात् । त्वन्मते तस्य पूर्वपक्षसूत्रत्वेऽपि सिद्धान्ते तस्यानिरासेनानुमतत्वात् ।**

ಇದು ತಪ್ಪು. 'ಅಭಿಮಾನಿವ್ಯಪದೇಶಸ್ತು' ಎಂಬ ಅಭಿಮಾನ್ಯಧಿಕರಣದಲ್ಲಿ ಪ್ರತಿಯೊಂದು ಪದಾರ್ಥಗಳಲ್ಲೂ ಅಭಿಮಾನಿದೇವತೆಗಳಿದ್ದಾರೆಂದು ಸಮರ್ಥನೆ ಮಾಡಲಾಗಿದೆ. ಆದರಿಂದಲೇ ಈ ಸೂತ್ರಾರ್ಥವು ಗತಾರ್ಥವಾಯಿತು. ನೀವು 'ಅಭಿಮಾನಿವ್ಯಪದೇಶಸ್ತು' ಎಂಬುದನ್ನು ಪೂರ್ವಪಕ್ಷಸ್ಥಾಪಕ ಸೂತ್ರವೆಂದು ಹೇಳಿದ್ದೀರಿ. ಆದರೂ ಕೂಡ ಸಿದ್ಧಾಂತದಲ್ಲಿ ಅದನ್ನು ನಿರಾಕರಣೆ ಮಾಡಿಯೇ ಇಲ್ಲ. ಅರ್ಥಾತ್ ಅಭಿಮಾನಿದೇವತೆಗಳು ವಿವಕ್ಷಿತವೆಂಬುದು ನಿಮಗೂ ಅಭಿಮತವೇ ಆಯಿತು. ಆದ್ದರಿಂದ ಎರಡೂ ಸೂತ್ರಗಳಲ್ಲಿ ಒಂದೇ ವಿಷಯವನ್ನು ಪ್ರತಿಪಾದನೆ ಮಾಡಿದಂತಾಯಿತು.

**यच्चोक्तमधिष्ठातृत्वेन देवतानां भोक्तृत्वं स्यादिति शङ्कानिरासार्थं ''प्राणवता'' इति सूत्रमिति ।**

'ಪ್ರಾಣವತಾ ಶಬ್ದಾತ್'– ಸಕಲ ಇಂದ್ರಿಯಗಳಿಗೆ ಅಗ್ನ್ಯಾದಿದೇವತೆಗಳೇ ನಿಯಾಮಕರಾಗಿದ್ದಾರೆ. ಆದರೆ ಇಂದ್ರಿಯಗಳಿಂದ ಉಂಟಾಗುವ ಭೋಗವು ಶರೀರಕ್ಕೆ ಆಗುವ ಭೋಗವು ನಿಯಾಮಕರಾದ ದೇವತೆಗಳಿಗೂ ಕೂಡ ಆಗಬೇಕಾಗುತ್ತದೆ ಎಂಬ ಆಶಂಕೆಯ ನಿರಾಸಕ್ಕೋಸ್ಕರ ಈ ಸೂತ್ರವು ಹೊರಟಿದೆ ಎಂದು ವ್ಯಾಖ್ಯಾನ ಮಾಡುತ್ತಾರೆ.

**तन्न । तस्य ''वैशेष्यात्'' इत्युक्तन्यायेनाभिमानिसूत्रस्थविशेषशब्देनैव निरासस‌म्भवात् ।**

ಇದೂ ಕೂಡ ತಪ್ಪು. ಏಕೆಂದರೆ 'ವೈಶೇಷ್ಯಾತ್' ಎಂಬಲ್ಲಿ ಹೇಳಿದ ನ್ಯಾಯದಂತೆ ಅಭಿಮಾನಿ ಸೂತ್ರದಲ್ಲಿರುವ ವಿಶೇಷ ಶಬ್ದದಿಂದಲೇ ಅಧಿಷ್ಠಾತೃದೇವತೆಗಳಿಗೆ ಭೋಕ್ತೃತ್ವವು ಬರುವುದಿಲ್ಲ ಎಂದು ನಿರಾಕರಣೆ ಮಾಡಲು ಬರುವಾಗ ಅದಕ್ಕೋಸ್ಕರ 'ಪ್ರಾಣವತಾ ಶಬ್ದಾತ್' ಎಂಬ ಸೂತ್ರ ಈ ಅಧಿಕರಣದಲ್ಲಿ ಹೊರಡುವುದು ಅನಾವಶ್ಯಕ.

**केचित्तु ज्योतिरिति सूत्रं प्राणेति सूत्रञ्चैकीकृत्य प्राणवता जीवेन सह ज्योतिरादिदेवातानामिन्द्रियविषयं यदधिष्ठानं तत्तदामननात् । परमात्मसङ्कल्पात् । ''य आत्मानमन्तरो यमयति योऽग्निमन्तरो यमयतीति शब्दादिति सूत्रार्थ इत्याहुः।**

ರಾಮಾನುಜರು 'ಜ್ಯೋತಿರಾದ್ಯಧಿಷ್ಠಾನಂ ತು' ಎಂಬ ಸೂತ್ರದ ವ್ಯಾಖ್ಯಾನವನ್ನು ಹೀಗೆ ಮಾಡುತ್ತಾರೆ– 'ಜ್ಯೋತಿರಾದ್ಯಧಿಷ್ಠಾನಂ ತು ತದಾಮನನಾತ್ ಪ್ರಾಣವತಾ ಶಬ್ದಾತ್' ಇಷ್ಟು ಒಂದೇ ಸೂತ್ರ. ಎರಡು ಸೂತ್ರಗಳನ್ನು ಸೇರಿ ಒಂದೇ ಸೂತ್ರವೆಂದು ಪರಿಗಣಿಸಿದ್ದಾರೆ. ಇದಕ್ಕೆ ಹೀಗೆ ಅರ್ಥ – ಪ್ರಾಣವತಾ = ಜೀವನ ಜೊತೆ, ಜ್ಯೋತಿರಾದ್ಯಧಿಷ್ಠಾನಂ= ಅಗ್ನ್ಯಾದಿ ದೇವತೆಗಳಿಗೆ ಅಧಿಷ್ಠಾನ ಆಗಿರುವಿಕೆಯು, ತದಾಮನನಾತ್ = ಆ ಪರಮಾತ್ಮನ ಸಂಕಲ್ಪದಿಂದ, ಏಕೆಂದರೆ ಶಬ್ದಾತ್ = 'ಯ ಆತ್ಮಾನಂ ಅಂತರೋ ಯಮಯತಿ ಯೋ ಅಗ್ನಿಮಂತರೋ ಯಮಯತಿ' ಇವೇ ಮೊದಲಾದ ಶ್ರುತಿಗಳು ಆಧಾರವಾಗಿರುವುದರಿಂದ ಎಂದು ಹೇಳುತ್ತಾರೆ.

**तन्न । परात्तु तच्छ्रुतेरित्यत्रैव ''य आत्मानम्'' इत्यादिश्रुत्या जीवकर्तृत्वमीशाधिष्ठानमित्युक्तत्वात् । प्राणवतेति तृतीयायाः कारकविभक्तित्वसम्भवे सहयोगसापेक्षोपपदविभक्तित्वकल्पनायोगाच्च ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् ज्योतिराद्यधिकरणं सम्पूर्णम् ।।१०।।**

ಈ ವಿಷಯವೂ ಕೂಡ ಈಗಾಗಲೇ ಹೇಳಿದ್ದಾಗಿದೆ. 'ಪರಾತ್ತುತಚ್ಛ್ರುತೇಃ' ಎಂಬ ಸೂತ್ರದಲ್ಲಿಯೇ 'ಯ ಆತ್ಮಾನಂ' ಎಂಬ ಶ್ರುತಿಯ ಆಧಾರದಿಂದ ಜೀವಕರ್ತೃತ್ವವು ಈಶ್ವರಾಧೀನವಾಗಿದೆ ಎಂದು ಹೇಳಿದ್ದಾಗಿದೆ. ಮತ್ತು 'ಪ್ರಾಣವತಾ' ಎಂಬಲ್ಲಿರುವ ತೃತೀಯಾವಿಭಕ್ತಿಯು ಕಾರಕವಿಭಕ್ತಿ ಎಂದೇ ಹೇಳಲು ಬರುವಾಗ 'ಸಹ' ಶಬ್ದದ ಅಪೇಕ್ಷೆ ಇರುವುದರಿಂದ ಉಪಪದ ವಿಭಕ್ತಿಯಾಗಿದೆ ಎಂದು ಕಲ್ಪನೆ ಮಾಡುವುದು ಅಯುಕ್ತವಾಗಿದೆ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಜ್ಯೋತಿರಾದ್ಯಧಿಕರಣವು ಸಂಪೂರ್ಣವಾಯಿತು

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः —**

**ज्योतिराद्यधिष्ठानं तु ।। तेषामिति ।।** मुख्यप्राणान्यप्राणानामित्यर्थः । करणत्वं कर्तृप्रयोज्यत्वरूपम् । ''उतेश्वर'' इत्यारभ्य सर्वाप्येका सिद्धान्तकोटिः ।। **ब्रह्मप्रयोजकेति ।।** ब्रह्मनिष्ठप्रयोजकत्वजीवनिष्ठकर्तृत्वाभ्यामित्यर्थः । चक्षुरादिकरणसम्बन्धित्वाद्ब्रह्मजीवयोरुभयकरणत्वश्रुत्यविरोध इत्यर्थः ।।

'ತೇಷಾಂ' ಎಂಬ ಪದಕ್ಕೆ ಮುಖ್ಯಪ್ರಾಣನನ್ನು ಬಿಟ್ಟು ಉಳಿದ ಇಂದ್ರಿಯಗಳಿಗೆ ಎಂದರ್ಥ. ಕರಣತ್ವವು ಕರ್ತೃ ಪ್ರಯೋಜತ್ವ ರೂಪವಾಗಿದೆ. 'ಉತೇಶ್ವರಃ' ಎಂಬಲ್ಲಿಂದ ಪ್ರಾರಂಭ ಮಾಡಿ ಎಲ್ಲವೂ ಕೂಡ ಸಿದ್ಧಾಂತಕೋಟಿಯಾಗಿದೆ. ಅಂದರೆ 'ಈಶ್ವರಸ್ವಾಮಿಕತ್ವೇಪಿ ಜೀವಂ ಪ್ರತಿಕ್ರಿಯಾಸಾಧನತ್ವಮಾತ್ರಂ ಅಭಿಪ್ರಾಯಂ' ಇಷ್ಟು ಸಿದ್ಧಾಂತ ಕೋಟಿ ಎಂದು ತಿಳಿಯಬೇಕು. 'ಬ್ರಹ್ಮಪ್ರಯೋಜಕ' ಎಂದರೆ ಬ್ರಹ್ಮನಲ್ಲಿರುವ ನಿಯಾಮಕತ್ವ, ಜೀವನಲ್ಲಿರುವ ಕರ್ತೃತ್ವ ಇವೆರಡರಿಂದ ಎಂದರ್ಥ. ಚಕ್ಷುರಾದಿ ಇಂದ್ರಿಯಗಳಿಗೆ ಸಂಬಂಧ

ಇರುವುದರಿಂದ ಬ್ರಹ್ಮಕರಣಕವಾಗಿವೆ ಹಾಗೂ ಜೀವಕರಣಕವಾಗಿವೆ ಎಂದು ಹೇಳುವ ಎರಡು ಬಗೆಯ ಶ್ರುತಿಗಳಿಗೆ ವಿರೋಧ ಬರುವುದಿಲ್ಲ ಎಂದು ತಿಳಿಯಬೇಕು.

**प्रकाशः – इति सूत्रमिति ।।** ''सतीष्वप्यधिष्ठात्रीषु प्राणवता जीवेनैवैषां प्राणानां सम्बन्धः । यत्राकाशमनुविषण्णं चक्षुस्स चाक्षुषः पुरुषः । दर्शनाय चक्षुः'' इत्यर्थोक्तेश्शङ्कानिरासः ।।

'ಇತಿ ಸೂತ್ರಂ' ಎಂಬುದಾಗಿ ಅದ್ವೈತ ಮತದ ಎರಡನೆಯ ಸೂತ್ರಾರ್ಥವನ್ನು ಅನುವಾದ ಮಾಡಿದ್ದಾರೆ. 'ಸತೀಷ್ವಪ್ಯಧಿಷ್ಠಾತ್ರೀಷು ಪ್ರಾಣವತಾ ಜೀವೇನೈವೈಷಾಂ ಪ್ರಾಣಾನಾಂ ಸಂಬಂಧಃ । ಯತ್ರಾಕಾಶಮನುವಿಷಣ್ಣಂ ಚಕ್ಷುಸ್ಸ ಚಾಕ್ಷುಷಃ ಪುರುಷಃ । ದರ್ಶನಾಯ ಚಕ್ಷುಃ' ಎಂಬ ಅರ್ಥವನ್ನು ಹೇಳಿರುವುದರಿಂದ ಪರಸ್ಪರ ಎರಡೂ ಬಗೆಯ ಶ್ರುತಿಗಳಿಗೆ ವಿರೋಧವಿಲ್ಲ ಎಂದು ತಿಳಿಯಬೇಕು. ಹೀಗೆ ಜೀವನ ಜೊತೆ ಸಂಬಂಧವಿರುವುದರಿಂದ ಅಧಿಷ್ಠಾತೃಗಳಿದ್ದರೂ ಅವರಿಗೆ ಭೋಗವಾಗುವುದಿಲ್ಲ ಎಂಬುದಾಗಿ ಶಂಕೆಯನ್ನು ನಿರಾಕರಣೆ ಮಾಡಲಾಗಿದೆ.

**प्रकाशः – केचित्त्विति ।।** चक्षुरादिप्राणानां ह्यग्न्यादिदेवताधिष्ठितत्वमभिमानिनयसिद्धम् । जीवाधिष्ठितत्वं च जीवभोगसाधनत्वेन लोकसिद्धम् । तथा चार्थमाह – **प्राणवतेति ।।**

'ಕೇಚಿತ್ತು' ಎಂಬುದಾಗಿ ರಾಮಾನುಜರ ಮತವನ್ನು ಅನುವಾದ ಮಾಡಿದ್ದಾರೆ. ಚಕ್ಷುರಾದಿ ಇಂದ್ರಿಯಗಳು ಅಗ್ನ್ಯಾದಿ ದೇವತೆಗಳಿಂದ ಅಧಿಷ್ಠಿತವಾಗಿವೆ ಎಂಬುದು ಅಭಿಮಾನ್ಯಧಿಕರಣದಿಂದಲೇ ಸಿದ್ಧವಾಗಿದೆ. ಜೀವಾಧಿಷ್ಠಿತವಾಗಿವೆ ಎಂಬುದು ಜೀವಭೋಗಸಾಧನತ್ವೇನ ಲೋಕದಿಂದಲೇ ಸಿದ್ಧವಾಗಿವೆ. ಆದ್ದರಿಂದ ಸೂತ್ರದ ಅರ್ಥವನ್ನು 'ಪ್ರಾಣವತಾ' ಎಂಬುದಾಗಿ ನಿರೂಪಣೆ ಮಾಡಿದ್ದಾರೆ.

**प्रकाशः – जीवेन सह** ज्योतिरादिदेवतानामित्यस्यायमर्थः । प्राणवतः प्राणाधिष्ठातुर्जीवस्याग्न्यादिदेवतानां चाधिष्ठात्रीणां यदिन्द्रियविषयकमधिष्ठानम् । भावे ल्युट् । तन्नियमनादिरूपो व्यापार इत्यर्थः । तज्जीवाद्यायत्तं न भवति । किन्तु तदामननाद्भवति । तदामननादित्यस्यार्थमाह – **परमात्मसङ्कल्पादिति ।।**

'ಜೀವೇನ ಸಹ ಜ್ಯೋತಿರಾದಿದೇವತಾನಾಂ' ಎಂಬ ಗ್ರಂಥದ ಅಭಿಪ್ರಾಯ ಹೀಗಿದೆ – ಪ್ರಾಣವತಃ ಜೀವನ ಜೊತೆ ಅಗ್ನ್ಯಾದಿ ದೇವತೆಗಳಿಗೆ ಅಧಿಷ್ಠಾನವಾಗಿರುವುದು ಪರಮಾತ್ಮನ ಸಂಕಲ್ಪದಿಂದ. ಇಂದ್ರಿಯ ವಿಷಯಕವಾದ ಅಧಿಷ್ಠಾನ ಎಂದು ಇಲ್ಲಿ ತಿಳಿಯಬೇಕು. ಭಾವಾರ್ಥದಲ್ಲಿ 'ಲ್ಯುಟ್' ಪ್ರತ್ಯಯವು ಬಂದಿದೆ. ಆದ್ದರಿಂದ ತನ್ನಿಯಮನ ರೂಪವಾದ ವ್ಯಾಪಾರವು ವಿವಕ್ಷಿತವಾಗುತ್ತದೆ. ಇದು ಜೀವನ ಅಧೀನವಾಗಲು ಸಾಧ್ಯವಿಲ್ಲ. ಕಿಂತು ಪರಮಾತ್ಮನ ಆಭಿಮುಖ್ಯದಿಂದ ಯುಕ್ತವಾಗುತ್ತದೆ. ಆಭಿಮುಖ್ಯ ಎಂಬುದರ ಅರ್ಥವನ್ನು ಪರಮಾತ್ಮಸಂಕಲ್ಪಾತ್ ಎಂಬುದರಿಂದ ತಿಳಿಸಿದ್ದಾರೆ.

ಪರಿಪೂರ್ಣಚಂದ್ರಿಕಾ

**प्रकाशः** – आमननमाभिमुख्येन गमनम् । परमात्मसङ्कल्पादेव भवतीति तदीयभाष्योक्तेः ।। **इतिशब्दादिति** ।। जीवस्याग्न्यादिदेवतानां च स्वस्वकार्येषु परमात्माधीनत्वप्रतिपादकशब्दादित्यर्थः ।।

'ಆಮನನ' ಎಂದರೆ ಆಭಿಮುಖ್ಯೇನ ಗಮನ ಎಂದರ್ಥ. ಪರಮಾತ್ಮನ ಸಂಕಲ್ಪದಿಂದಲೇ ಅಗ್ನ್ಯಾದಿ ದೇವತೆಗಳಿಗೆ ಜೀವನ ಜೊತೆ ಅಧಿಷ್ಠಾನವಾಗಿರುತ್ತದೆ ಎಂದು ರಾಮಾನುಜ ಭಾಷ್ಯದಲ್ಲಿ ಹೇಳಲಾಗಿದೆ. 'ಇತಿ ಶಬ್ದಾತ್' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಜೀವನಿಗೆ ಹಾಗೂ ಅಗ್ನ್ಯಾದಿ ದೇವತೆಗಳಿಗೆ ತಮ್ಮ ತಮ್ಮ ಕಾರ್ಯಗಳಲ್ಲಿ ಪರಮಾತ್ಮ ಅಧೀನತ್ವವನ್ನು ಪ್ರತಿಪಾದನೆ ಮಾಡುವ ಶ್ರುತಿಪ್ರಮಾಣ ಇರುವುದರಿಂದ ಎಂಬುದು ಇದರ ಅರ್ಥ.

**प्रकाशः** – **इत्युक्तत्वादिति** ।। ननूक्तमत्र श्रुतप्रकाशिकायां ''परात्तु तच्छ्रुतेः'' इत्यधिकरणे जीवस्य परायत्तकर्तृत्वे सिद्धेऽत्र प्राणवच्छब्देन जीवस्योपादानं दृष्टान्ततयेतीति चेन्न । दृष्टान्तोक्तेरतिशयाभावात् । प्राणवद्यथेत्यादिनिर्देशापाताच्च । भाष्ये शब्दादित्यनेन ''य आत्मानम्'' इत्यस्योपादानेन जीवकर्तृत्वस्यान्याधीनत्वोपपादनायोगाच्च । अग्न्यादीनामपि जीवत्वेन तेनैव सिद्धेश्चेति भावः ।

'ಇತ್ಯುಕ್ತತ್ವಾತ್' ಎಂಬಲ್ಲಿ ಹೀಗೆ ತಿಳಿಯಬೇಕು. ರಾಮಾನುಜ ಭಾಷ್ಯದ ವ್ಯಾಖ್ಯಾನವೆನಿಸಿದ ಶ್ರುತಪ್ರಕಾಶದಲ್ಲಿ ಹೀಗೆ ಹೇಳಿದ್ದಾರೆ – 'ಪರಾತ್ತುತಚ್ಛ್ರುತೇಃ' ಎಂಬ ಅಧಿಕರಣದಲ್ಲಿ ಜೀವನಿಗೆ ಪರಾಧೀನಕರ್ತೃತ್ವವು ಸಿದ್ಧವಾಯಿತು. ಈ ಅಧಿಕರಣದಲ್ಲಿ ಪ್ರಾಣವತಾ' ಎಂಬ ಶಬ್ದದಿಂದ ದೃಷ್ಟಾಂತವನ್ನು ಹೇಳಲಾಗಿದೆ ಎಂಬ ಸಮಾಧಾನವನ್ನು ಹೇಳಲಾಗಿದೆ. ಇದೂ ಕೂಡ ತಪ್ಪು. ಏಕೆಂದರೆ ದೃಷ್ಟಾಂತವನ್ನು ಹೇಳಿದ ಮಾತ್ರಕ್ಕೆ ಪ್ರಮೇಯದಲ್ಲಿ ಅತಿಶಯವು ಉಂಟಾಗುವುದಿಲ್ಲ. ಮತ್ತು ದೃಷ್ಟಾಂತವೇ ಸೂತ್ರಕಾರರಿಗೆ ವಿವಕ್ಷಿತವಾಗಿದ್ದಲ್ಲಿ 'ಪ್ರಾಣವದ್ಯಥಾ' ಎಂದು ಸೂತ್ರವನ್ನು ಉಲ್ಲೇಖ ಮಾಡುತ್ತಿದ್ದರು. ಮತ್ತು ಭಾಷ್ಯದಲ್ಲಿ 'ಶಬ್ದಾತ್' ಎಂಬುದರಿಂದ 'ಯ ಆತ್ಮಾನಂ' ಎಂಬುದನ್ನು ಉಪಪಾದನೆ ಮಾಡಿರುವುದರಿಂದ ಜೀವಕರ್ತೃತ್ವವು 'ಅನ್ಯಾಧೀನ' ಎಂಬ ಉಪಪಾದನೆಯು ಅಯುಕ್ತವಾಗುತ್ತದೆ. ಅಗ್ನ್ಯಾದಿಗಳೂ ಕೂಡ ಜೀವರೇ ಆಗಿರುವುದರಿಂದ ಹಿಂದಿನ 'ಪರಾತ್ತುತಚ್ಛ್ರುತೇಃ' ಎಂಬ ಸೂತ್ರದಿಂದಲೇ ಈ ದೇವತೆಗಳು ಪರಮಾತ್ಮನ ಅಧೀನವಾಗಿದ್ದಾರೆ ಎಂಬುದು ಸಿದ್ಧವಾಗುತ್ತದೆ.

**प्रकाशः** – दोषान्तरं चाह – **प्राणवतेतीति** ।। ''जीवेन करणैः कारयति परमात्मा'' इत्यस्मद्भाष्योक्तदिशा ''कर्तृकरणयोस्तृतीया'' इत्युक्तकर्तृकारकविभक्तित्वे सम्भवति ''सह युक्तेऽप्रधाने'' इत्युक्तोपपदनिबन्धनविभक्तित्वकल्पनमयुक्तम् ।

''उपपदविभक्तेःकारकविभक्तिर्बलीयसी'' इत्युक्तेरित्यर्थः । ज्योतिरादीनामिति पृथङ्निर्देशाभावेन क्लिष्टयोजनायोगाच्चेत्यपि ध्येयम् ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे ज्योतिराद्यधिकरणं सम्पूर्णम् ।।१०।।**

ರಾಮಾನುಜ ಮತಕ್ಕೆ ಮತ್ತೊಂದು ದೋಷವನ್ನು 'ಪ್ರಾಣವತಾ' ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ. 'ಜೀವೇನ ಕರಣೈಃ ಕಾರಯತಿ ಪರಮಾತ್ಮಾ' ಜೀವನಿಗೆ ಸಂಬಂಧಪಟ್ಟ ಇಂದ್ರಿಯಗಳಿಗೆ ಪರಮಾತ್ಮನೇ ಮಾಡಿಸುತ್ತಾನೆ ಎಂಬುದಾಗಿ ಭಾಷ್ಯದಲ್ಲಿ ಹೇಳಿದಂತೆ 'ಕರ್ತೃಕರಣಯೋಸ್ತೃತೀಯಾ' ಎಂಬ ಸೂತ್ರದಿಂದ ಕರ್ತೃಕಾರಕವಿಭಕ್ತಿಯನ್ನೇ ವಿವಕ್ಷಿಸಲು ಬರುತ್ತದೆ. ಹೀಗಿರುವಾಗ 'ಸಹ ಯುಕ್ತೇ ಅಪ್ರಧಾನೇ' ಎಂಬ ಉಪಪದನಿಬಂಧ ರೂಪವಾದ ತೃತೀಯಾ ವಿಭಕ್ತಿಯನ್ನು ಕಲ್ಪನೆ ಮಾಡುವುದು ಅಯುಕ್ತವಾಗಿದೆ. ಏಕೆಂದರೆ ಉಪಪದವಿಭಕ್ತಿಗಿಂತ ಕಾರಕ ವಿಭಕ್ತಿಯೇ ಶ್ರೇಷ್ಠವಾಗಿದೆ ಎಂಬುದಾಗಿ ವೈಯಾಕರಣರು ಒಪ್ಪಿದ್ದಾರೆ.

ಅಗ್ನ್ಯಾದಿಗಳನ್ನು ಪ್ರತ್ಯೇಕ ನಿರ್ದೇಶ ಮಾಡಿಲ್ಲವಾದ್ದರಿಂದ ಕ್ಲಿಷ್ಟಯೋಜನೆಯನ್ನು ಮಾಡುತ್ತಿರುವುದೂ ಕೂಡ ಅಯುಕ್ತವಾಗುತ್ತದೆ. ಆದ್ದರಿಂದ ಅದ್ವೈತಿಗಳ ಹಾಗೂ ರಾಮಾನುಜರ ಸೂತ್ರವ್ಯಾಖ್ಯಾನಗಳು ಅಯುಕ್ತವಾಗಿವೆ.

**ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಜ್ಯೋತಿರಾದ್ಯಧಿಕರಣವು ಮುಕ್ತಾಯವಾಯಿತು.**

* * * * * * *

ಶ್ರೀಕೃಷ್ಣಾರ್ಪಣಮಸ್ತು.

ಪರಿಪೂರ್ಣಚಂದ್ರಿಕಾ

# ೩ ಇಂದ್ರಿಯಾಧಿಕರಣ

(೨-೪-೧೧)

# ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

***

॥ ಶ್ರೀಗುರುಭ್ಯೋ ನಮಃ ॥

# ತ ಇಂದ್ರಿಯಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – त इन्द्रियाणि तद्व्यपदेशादन्यत्र श्रेष्ठात् ।।**

ಮುಖ್ಯಪ್ರಾಣನನ್ನು ಬಿಟ್ಟು, ಉಳಿದವುಗಳು ಮಾತ್ರ ಇಂದ್ರಿಯಗಳು. ಏಕೆಂದರೆ 'ದ್ವಾದಶೈವೇಂದ್ರಿಯಾಣಿ' ಎಂಬುದಾಗಿ ಪೌತ್ರಾಯಣಶ್ರುತಿಯು ಹನ್ನೆರಡು ಮಾತ್ರ ಇಂದ್ರಿಯಗಳು ಎನ್ನುತ್ತಿದೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका – श्रेष्ठात्** मुख्यप्राणात् **अन्यत्र** ये प्राणाः । **त** एवेन्द्रियाणि न तु मुख्यप्राणोऽपि । कुतः **तद्व्यपदेशात्** 'द्वादशैवेन्द्रियाणि' इति श्रुतौ तथोक्तत्वादित्यर्थः ।।१।।

ಶ್ರೇಷ್ಠಾತ್ = ಮುಖ್ಯಪ್ರಾಣನಿಗಿಂತ, ಅನ್ಯತ್ರ = ಇತರವಾದ, ತೇ = ಪ್ರಾಣಗಳು, ಇಂದ್ರಿಯಾಣಿ = ಇಂದ್ರಿಯಗಳು ಹೊರತು, ಮುಖ್ಯಪ್ರಾಣನೂ ಕೂಡ ಇಂದ್ರಿಯನೆಂದು ಕರೆಸಿಕೊಳ್ಳುವುದಿಲ್ಲ. ಏಕೆಂದರೆ 'ತದ್ವ್ಯಪದೇಶಾತ್' = 'ದ್ವಾದಶೈವೇಂದ್ರಿಯಾಣಿ' ಎಂಬುದಾಗಿ ಹನ್ನೆರಡು ಮಾತ್ರ ಇಂದ್ರಿಯಗಳೆಂದು ಪೌತ್ರಾಯಣಶ್ರುತಿಯು ಸಾರುತ್ತಿದೆ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – 'अथेन्द्रियाणि प्राणा वा इन्द्रियाणि प्राणा हीदं द्रवन्ति' इति 'सयुक्तिका पौत्रायणश्रुतिः सामान्येन प्राणानामिन्द्रियत्वं वक्ति । 'द्वादशैवेन्द्रियाण्याहुर्मनोबुद्धी तु द्वादशे' इति च काषायणश्रुतिः । अतः कस्येन्द्रियत्वं निवार्यते इति ।**

ಅನುವಾದ - ಹೀಗೆ ಯುಕ್ತಿಬದ್ಧವಾಗಿ ಪೌತ್ರಾಯಣಶ್ರುತಿಯು ಪ್ರಾಣಗಳನ್ನು ಇಂದ್ರಿಯ ಎಂದು ಕರೆದಿದೆ. ಪ್ರಾಣಶಬ್ದವಾಚ್ಯನಾದ ಮುಖ್ಯಪ್ರಾಣನನ್ನು ಕೂಡ ಇಂದ್ರಿಯಗಳ ಜೊತೆ ಸೇರಿಸಿ ಶ್ರುತಿಯು ಹದಿಮೂರು ಇಂದ್ರಿಯಗಳನ್ನು ಹೇಳಿದೆ.

ಆದರೆ ಕಾಷಾಯಣಶ್ರುತಿಯಲ್ಲಿ ಹನ್ನೆರಡು ಮಾತ್ರ ಇಂದ್ರಿಯಗಳಿವೆ ಮನಸ್ಸು ಬುದ್ಧಿಗಳನ್ನು ಸೇರಿಸಿ ಹನ್ನೆರಡು ಇಂದ್ರಿಯಗಳನ್ನು ಪರಿಗಣಿಸಬೇಕು ಎಂದು ಹೇಳಲಾಗಿದೆ. ಆದ್ದರಿಂದ ಯಾವುದನ್ನು ಇಂದ್ರಿಯವಲ್ಲವೆಂದು ಒಪ್ಪಿ ಹನ್ನೆರಡು ಎಂಬ ಸಂಖ್ಯೆಯನ್ನು ಉಪಪಾದನೆ ಮಾಡಬೇಕು. ಎಂಬುದು ಆಶಂಕೆ.

ಪ್ರತಿಪದಾರ್ಥ:- ಅಥ = ಆದ್ದರಿಂದ, ಇಂದ್ರಿಯಾಣಿ = ಇಂದ್ರಿಯಗಳು, ಪ್ರಾಣಾ ವಾ = ಪ್ರಾಣಶಬ್ದವಾಚ್ಯವಾದವುಗಳು, ಇಂದ್ರಿಯಾಣಿ = ಇಂದ್ರಿಯಗಳು, ಪ್ರಾಣಾಃ = ಪ್ರಾಣಗಳು, ಇದಂ = ವಿಷಯಗಳ ಕಡೆ, ದ್ರವಂತಿ = ಹರಿಯುತ್ತವೆ. ಹಿ = ಇದು ಪ್ರಸಿದ್ಧವಾಗಿವೆ. ಇತಿ = ಹೀಗೆ, ಸಯುಕ್ತಿಕಾ = ಯುಕ್ತಿಬದ್ಧವಾದ, ಪೌತ್ರಾಯಣಶ್ರುತಿಃ = ಪೌತ್ರಾಯಣಶ್ರುತಿಯು, ಸಾಮಾನ್ಯೇನ = ಸಾಮಾನ್ಯವಾಗಿ, ಪ್ರಾಣಾನಾಂ = ಪ್ರಾಣಗಳಿಗೆ, ಇಂದ್ರಿಯತ್ವಂ = ಇಂದ್ರಿಯತ್ವವನ್ನು, ವಕ್ತಿ = ಹೇಳುತ್ತಿದೆ.

ಇಂದ್ರಿಯಾಣಿ = ಇಂದ್ರಿಯಗಳು, ದ್ವಾದಶೈವ = ಹನ್ನೆರಡೇ ಎಂದು, ಆಹುಃ = ಜ್ಞಾನಿಜನರು ಹೇಳುತ್ತಾರೆ. ಮನೋಬುದ್ಧೀ ತು = ಮನಸ್ಸು ಮತ್ತು ಬುದ್ಧಿ ಇವೆರಡು ಸೇರಿ, ದ್ವಾದಶೇ = ಹನ್ನೆರಡು ಸಂಖ್ಯೆಯೆಂದು ಉಪಪಾದನೆ ಮಾಡುತ್ತಾರೆ. ಇತಿ ಚ = ಹೀಗೂ, ಕಾಷಾಯಣಶ್ರುತಿಃ = ಕಾಷಾಯಣಶ್ರುತಿ ಹೇಳುತ್ತಿದೆ. ಅತಃ = ಆದ್ದರಿಂದ, ಕಸ್ಯ = ಯಾವುದಕ್ಕೆ, ಇಂದ್ರಿಯತ್ವಂ = ಇಂದ್ರಿಯತ್ವವನ್ನು, ನಿವಾರ್ಯತೇ = ಬಿಡಲ್ಪಡಬೇಕು. ಇತಿ = ಹೀಗೆ.

**भाष्यम् – अतो वक्ति –**

**।। त इन्द्रियाणि तद्व्यपदेशादन्यत्र श्रेष्ठात् ।।१।।**

**मुख्यप्राणमृते एवेन्द्रियाणि ।।**

**'द्वादशैवेन्द्रियाण्याहुः प्राणो मुख्यस्त्वनिन्द्रियम् ।**

ತ ಇಂದ್ರಿಯಾಧಿಕರಣ (೨-೪-೧೧)

द्रवतामिन्द्रियाणां तु नियन्ता प्राण एकराट् ।।'
इति पौत्रायणश्रुतिः ।

ಅನುವಾದ - ಮುಖ್ಯಪ್ರಾಣನನ್ನು ಬಿಟ್ಟು ಉಳಿದ ಇಂದ್ರಿಯಗಳಲ್ಲಿ ಮಾತ್ರ ಇಂದ್ರಿಯತ್ವದ ಪ್ರಯೋಗವನ್ನು ಶ್ರುತಿಯು ಮಾಡುತ್ತದೆ. ಏಕೆಂದರೆ ವಿಷಯಗಳ ಕಡೆ ಹರಿಯುವ ಕರಣಗಳು ಮಾತ್ರ ಇಂದ್ರಿಯಗಳಾಗುತ್ತವೆ. ಏಕೆಂದರೆ ವಿಷಯಗಳ ಕಡೆ ಹರಿಯುವ ಕರಣಗಳು ಮಾತ್ರ ಇಂದ್ರಿಯಗಳಾಗುತ್ತವೆ. ಆದರೆ ಪ್ರಾಣನು ಈ ಎಲ್ಲಾ ಇಂದ್ರಿಯಗಳಿಗೆ ನಿಯಾಮಕನಾಗಿದ್ದಾನೆ. ಮತ್ತು ಸ್ವತಂತ್ರನಾಗಿದ್ದಾನೆ. ಹೀಗೆ ಪೌತ್ರಾಯಣಶ್ರುತಿಯು ಹೇಳುತ್ತಿದೆ.

ಪ್ರತಿಪದಾರ್ಥ -- ಅತಃ = ಈ ಆಶಂಕೆಯನ್ನು ಪರಿಹರಿಸಲು, ವಕ್ತಿ = ಸೂತ್ರಕಾರರು ಹೇಳುತ್ತಿದ್ದಾರೆ -

ಮುಖ್ಯಪ್ರಾಣಮ್ = ಮುಖ್ಯಪ್ರಾಣನನ್ನು, ಋತೇ = ಬಿಟ್ಟು, ಏವ = ಉಳಿದ ಹನ್ನೆರಡು ಕರಣಗಳು ಮಾತ್ರ, ಇಂದ್ರಿಯಾಣಿ = ಇಂದ್ರಿಯಶಬ್ದದಿಂದ ಪ್ರತಿಪಾದ್ಯವಾಗುತ್ತವೆ.

ದ್ವಾದಶೈವ = ಹನ್ನೆರಡು ಮಾತ್ರ, ಇಂದ್ರಿಯಾಣಿ = ಇಂದ್ರಿಯಗಳು ಎಂದು, ಆಹುಃ = ಹೇಳುತ್ತಾರೆ. ಮುಖ್ಯಸ್ತು ಪ್ರಾಣಃ = ಮುಖ್ಯಪ್ರಾಣನಾದರೂ, ಅನಿಂದ್ರಿಯಮ್ = ಇಂದ್ರಿಯನಲ್ಲ, ಹಿ = ಏಕೆಂದರೆ, ದ್ರವತಾಮ್ = ಹರಿಯುವ, ಇಂದ್ರಿಯಾಣಾಮ್ = ಇಂದ್ರಿಯಗಳಿಗೆ, ನಿಯಂತಾ = ನಿಯಮನ ಮಾಡುವವನು, ಏಕರಾಟ್ = ಒಬ್ಬನೇ ಆದ, ಮುಖ್ಯಪ್ರಾಣಃ = ಮುಖ್ಯಪ್ರಾಣನು, ಇತಿ = ಹೀಗೆ, ಪೌತ್ರಾಯಣಶ್ರುತಿಃ = ಪೌತ್ರಾಯಣಶ್ರುತಿಯು ಹೇಳುತ್ತಿದೆ.

भाष्यम् –

'श्रोत्रादीनि तु पञ्चैव तथा वागादिपञ्चकम् ।
मनोबुद्धिसहायानि द्वादशैवेन्द्रियाणि तु ।।
विषयद्रवणात् तेषाम् इन्द्रियत्वमुदाहृतम् ।
तेषां नियामकः प्राणः स्थित एवाखिलप्रभुः ।।'
इति बृहत्संहितायाम् ।।१।।

ಅನುವಾದ - ಶ್ರೋತ್ರ ಮೊದಲಾದ ಐದು ಜ್ಞಾನೇಂದ್ರಿಯಗಳು ಹಾಗೆಯೇ ವಾಕ್ ಮೊದಲಾದ ಐದು ಕರ್ಮೇಂದ್ರಿಯಗಳು ಇವುಗಳು ಮನಸ್ಸು ಮತ್ತು ಬುದ್ಧಿಗಳ ಜೊತೆ ಸೇರಿಕೊಂಡು ಒಟ್ಟು ಹನ್ನೆರಡು ಇಂದ್ರಿಯಗಳಾಗುತ್ತವೆ. ಅವುಗಳಿಗೆ ವಿಷಯಗಳ ಕಡೆ ಹರಿಯುವ ಕಾರಣದಿಂದ ಇಂದ್ರಿಯಶಬ್ದದ ಪ್ರವೃತ್ತಿನಿಮಿತ್ತವು ಯುಕ್ತವಾಗುತ್ತದೆ. ಈ ಎಲ್ಲಾ ಇಂದ್ರಿಯಗಳಿಗೆ ಮುಖ್ಯಪ್ರಾಣನು ಸರ್ವಸ್ವಾಮಿಯೂ ನಿಯಾಮಕನೂ ಆಗಿರುತ್ತಾನೆ.

ಪ್ರತಿಪದಾರ್ಥ -- ಶ್ರೋತ್ರಾದೀನಿ ತು = ಕಿವಿ ಮೊದಲಾದ, ಪಂಚೈವ = ಐದು ಮಾತ್ರ ಜ್ಞಾನೇಂದ್ರಿಯಗಳು, ತಥಾ = ಹಾಗೆ, ವಾಗಾದಿಪಂಚಕಮ್ = ವಾಕ್ ಮೊದಲಾದ ಐದು ಕರ್ಮೇಂದ್ರಿಯಗಳು, ಮನೋಬುದ್ಧಿಸಹಾಯಾನಿ = ಮನಸ್ಸು ಮತ್ತು

ಬುದ್ಧಿಗಳ ಸಹಾಯದಿಂದ, ಇಂದ್ರಿಯಾಣಿ ತು = ಇಂದ್ರಿಯಗಳಾದರೂ, ದ್ವಾದಶೈವ = ಹನ್ನೆರಡು ಮಾತ್ರ, ತೇಷಾಂ = ಅವುಗಳಿಗೆ, ವಿಷಯದ್ರವಣಾತ್ = ವಿಷಯಗಳ ಕಡೆ ಹರಿಯುವುದರಿಂದ, ಇಂದ್ರಿಯತ್ವಮ್ = ಇಂದ್ರಿಯಶಬ್ದದ ಪ್ರವೃತ್ತಿನಿಮಿತ್ತವು, ಉದಾಹೃತಮ್ = ಯುಕ್ತವಾಗುತ್ತದೆ ಎಂದು ಹೇಳಿದ್ದಾರೆ. ತೇಷಾಂ = ಅವುಗಳಿಗೆ, ಅಖಿಲಪ್ರಭುಃ = ಸರ್ವಸ್ವಾಮಿಯಾದ, ಪ್ರಾಣಃ = ಮುಖ್ಯಪ್ರಾಣನು, ನಿಯಾಮಕಃ = ನಿಯಾಮಕನಾಗಿ, ಸ್ಥಿತಃ = ಇದ್ದಾನೆ, ಇತಿ = ಹೀಗೆ, ಬೃಹತ್‌ಸಂಹಿತಾಯಾಮ್ = ಬೃಹತ್‌ಸಂಹಿತೆಯಲ್ಲಿ ಹೇಳಲಾಗಿದೆ.

### ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

## ತತ್ತ್ವಪ್ರಕಾಶಿಕಾ

**तत्वप्रकाशिका – अत्र जगत्कारणे हरौ श्रुतिसमन्वयसिद्ध्यर्थं प्राणविषयश्रुतिविरोधपरिहारादस्ति शास्त्रादिसङ्गतिः । विष्णौ जगत्कारणे कथितः श्रुतिसमन्वयः प्राणविषयश्रुतीनां विरोधेनाप्रामाण्ये न सेत्स्यतीत्यसौ निराकर्तव्यः । तत्र संशयबीजं श्रुतीतिविगानं दर्शयन् विषयसंशयपूर्वपक्षांश्च सूचयति – अथेति।।**

ಈ ಅಧಿಕರಣದಲ್ಲಿ ಜಗತ್ಕಾರಣನಾದ ಶ್ರೀಹರಿಯಲ್ಲಿ ಸಕಲ ಶ್ರುತಿಗಳ ಸಮನ್ವಯವು ಸಿದ್ಧವಾಗುವುದಕ್ಕಾಗಿ ಪ್ರಾಣವಿಷಯಕವಾದ ಶ್ರುತಿವಿರೋಧವನ್ನು ಪರಿಹಾರ ಮಾಡಲಾಗಿದೆ. ಆದ್ದರಿಂದ ಶಾಸ್ತ್ರ-ಅಧ್ಯಾಯ-ಪಾದ ಸಂಗತಿಗಳು ಇರುತ್ತವೆ.

ಪ್ರಾಣವಿಷಯಕವಾದ ಶ್ರುತಿಗಳಲ್ಲಿ ಪರಸ್ಪರ ವಿರೋಧವು ಪ್ರಾಪ್ತವಾದರೆ ಜಗತ್ಕಾರಣನಾದ ವಿಷ್ಣುವಿನಲ್ಲಿ ಹೇಳಲ್ಪಟ್ಟ ಶ್ರುತಿಸಮನ್ವಯದಲ್ಲಿ ಅಪ್ರಾಮಾಣ್ಯವು ಬರುತ್ತದೆ. ಆದ್ದರಿಂದ ಶ್ರುತಿಸಮನ್ವಯವೇ ಸಿದ್ಧವಾಗದ ಪ್ರಸಂಗ ಬರುತ್ತದೆ. ಆದಕಾರಣ ವಿರೋಧವನ್ನು ಪರಿಹಾರ ಮಾಡಲೇಬೇಕು.

ಶ್ರುತಿಗಳ ಪರಸ್ಪರ ವಿರೋಧವೇ ಸಂಶಯಕ್ಕೆ ಕಾರಣವಾಗಿದೆ ಎಂದು ತೋರಿಸುತ್ತಾ ವಿಷಯ ಹಾಗೂ ಪೂರ್ವಪಕ್ಷಗಳನ್ನು 'ಅತಃ' ಇತ್ಯಾದಿ ಭಾಷ್ಯದಿಂದ ಸೂಚನೆ ಮಾಡುತ್ತಿದ್ದಾರೆ.

ವಿವರಣೆ – ಇಂದ್ರಿಯದ ವಿಷಯವು ಪ್ರಕೃತವಾಗಿದೆ. ಆದ್ದರಿಂದ ಮುಖ್ಯಪ್ರಾಣನು ಜೀವನಿಗೆ ಕರಣನಾಗಿರುವುದಿಲ್ಲವೆಂದು ಹೇಳಲಾಯಿತು. ಆದರೆ ಇದು ತಪ್ಪು. ಮುಖ್ಯಪ್ರಾಣನೂ ಕೂಡ ಇಂದ್ರಿಯನೇ ಆಗಿದ್ದಾನೆ ಎಂಬ ಪೂರ್ವಪಕ್ಷವನ್ನು ಇಲ್ಲಿ ಮಾಡುತ್ತಿರುವುದರಿಂದ ಈ ಅಧಿಕರಣಕ್ಕೆ ಆನಂತರ್ಯ ಸಂಗತಿಯು ಇರುತ್ತದೆ.

**तत्वप्रकाशिका – प्राक् प्रकृतमिन्द्रियत्वमत्र विषयः । तत्काचिच्छ्रुतिः प्राणशब्दवाच्यानां त्रयोदशानामपि वक्ति । सामान्येनोक्तत्वात् । सामान्यवचनस्य च सर्वगामित्वात् । अन्या श्रुतिर्द्वादशानामेव तद्वक्ति । अतो विप्रतिपत्तेः संशयः ।**

**किं सर्वेषां प्राणानामिन्द्रियत्वमुतैकस्य निवार्य द्वादशानामेवेति । सर्वेऽपि प्राणा इन्द्रियाणि । 'प्राणा वा इन्द्रियाणि' इति श्रुतेः ।**

ಹಿಂದೆ 'ಸಪ್ತಗತೇರ್ವಿಶೇಷಿತತ್ವಾತ್' ಎಂಬ ಸೂತ್ರದಲ್ಲಿ ಪ್ರಸಕ್ತವಾದ ಇಂದ್ರಿಯತ್ವವೇ ಈ ಅಧಿಕರಣಕ್ಕೆ ವಿಷಯವಾಗಿದೆ. ಒಂದು ಶ್ರುತಿಯಲ್ಲಿ ಪ್ರಾಣ ಶಬ್ದದಿಂದ ವಾಚ್ಯವಾದವುಗಳು ಇಂದ್ರಿಯಗಳು ಹದಿಮೂರು ಎಂದು ಹೇಳಲಾಗಿದೆ. ಇದು ಸಾಮಾನ್ಯವಾಕ್ಯವಾದ್ದರಿಂದ ಸರ್ವಸಂಗ್ರಾಹಕವಾಗಿದೆ. ಮತ್ತೊಂದು ಶ್ರುತಿಯು ಪ್ರಾಣ ಶಬ್ದದಿಂದ ವಾಚ್ಯವಾದವು ಹನ್ನೆರಡು ಮಾತ್ರ ಇಂದ್ರಿಯಗಳೆಂದು ಹೇಳುತ್ತಿದೆ. ಇವೆರಡು ಶ್ರುತಿಗಳನ್ನು ನೋಡಿದಾಗ ವಿಪ್ರತಿಪತ್ತಿಯು ಉಂಟಾಗಿ ಸಂಶಯವು ಬರುತ್ತದೆ.

ಎಲ್ಲಾ ಪ್ರಾಣಗಳಿಗೂ ಕೂಡ ಇಂದ್ರಿಯತ್ವವಿದೆಯೋ ಅಥವಾ ಹನ್ನೆರಡಕ್ಕೆ ಮಾತ್ರ ಇಂದ್ರಿಯತ್ವವಿದೆಯೋ? ಎಂಬ ಸಂಶಯವು ಬರುತ್ತದೆ. ಸಕಲ ಪ್ರಾಣಗಳು ಇಂದ್ರಿಯಗಳೇ ಆಗಿವೆ. ಏಕೆಂದರೆ 'ಪ್ರಾಣೋ ವಾ ಇಂದ್ರಿಯಾಣಿ' ಎಂಬ ಶ್ರುತಿಯು ಇದಕ್ಕೆ ಆಧಾರವಾಗಿದೆ.

**तत्वप्रकाशिका – नच सामान्यश्रुतित्वाद्विशेषश्रुत्येतरया बाधः । इदं द्रवणयुक्तियुक्तत्वात् । अस्ति खलु सर्वेषां प्राणानामिदं द्रवणमिति । दुष्करं च द्वादशानामेवेन्द्रियत्वग्रहणम् । अन्यतमनिवारणस्याशक्यत्वात् ।**

ಇದು ಸಾಮಾನ್ಯ ಶ್ರುತಿಯಾದ್ದರಿಂದ ವಿಶೇಷ ಶ್ರುತಿಯಿಂದ ಇದಕ್ಕೆ ಬಾಧವು ಬರುತ್ತದೆಂದು ಹೇಳಬಾರದು. ಏಕೆಂದರೆ 'ಇದಂ ದ್ರವಣತ್ವ' ಎಂಬ ಯುಕ್ತಿಯಿಂದ ಇದು ಯುಕ್ತವಾಗಿದೆ. ಸಕಲ ಇಂದ್ರಿಯಗಳಿಗೂ ಕೂಡ ವಿಷಯದ ಕಡೆ ಗಮನವಿರುವುದು ಪ್ರಸಿದ್ಧವೇ ಆಗಿದೆ. ಮತ್ತು ಹನ್ನೆರಡಕ್ಕೆ ಮಾತ್ರ ಇಂದ್ರಿಯತ್ವವನ್ನು ಉಪಪಾದನೆ ಮಾಡುವುದು ಬಹಳ ಕಠಿಣವೂ ಆಗಿದೆ. ಏಕೆಂದರೆ ಅವುಗಳಲ್ಲಿ ಒಂದಕ್ಕೆ ಮಾತ್ರ ಇಂದ್ರಿಯತ್ವ ಇಲ್ಲವೆಂಬುದು ಸಾಧನೆ ಮಾಡಲಾಗದ ವಿಚಾರ.

**तत्वप्रकाशिका – मुख्यप्राणो नेन्द्रियमिति चेन्न । तथात्वे चक्षुषोऽनिन्द्रियत्वं किं न स्यात् । न हि मुख्यप्राणचक्षुषोः कश्चन विशेषोऽस्ति येन मुख्यप्राणो नेन्द्रियं चक्षुरिन्द्रियमिति निश्चिनुमः । उभयोरीशवशत्वाविशेषात् । प्रातिस्विकविशेषाणां तु श्रोत्रादिष्वपि सम्यात्। चक्षुरादिष्वप्येवं द्रष्टव्यम् । अतो युक्तियुक्ताद्यश्रुतिविरोधात् द्वितीयाऽप्रमाणमेवेति न जगत्कारणे ब्रह्मणि श्रुतिसमन्वयो युक्त इति भावः।**

ಮುಖ್ಯಪ್ರಾಣನು ಇಂದ್ರಿಯನೇ ಅಲ್ಲ. ಒಂದು ವೇಳೆ ಅವನನ್ನು ಇಂದ್ರಿಯನೆಂದು ಹೇಳಿದರೆ ಚಕ್ಷುರಿಂದ್ರಿಯವು ಕೂಡ ಇಂದ್ರಿಯ ಆಗದೇ ಇರಬೇಕಾಗುತ್ತದೆ. ಏಕೆಂದರೆ ಮುಖ್ಯಪ್ರಾಣನಿಗೂ ಚಕ್ಷುರಿಂದ್ರಿಯಕ್ಕೂ ಯಾವುದೇ ವಿಶೇಷವಿರುವುದಿಲ್ಲ. ಯಾವ ಕಾರಣಕ್ಕೂ ಮುಖ್ಯಪ್ರಾಣನು ಇಂದ್ರಿಯನಲ್ಲನೆಂದು ಹೇಳುತ್ತೀರೋ, ಅದೇ ಕಾರಣದಿಂದ ಚಕ್ಷುರಿಂದ್ರಿಯವು ಇಂದ್ರಿಯವಲ್ಲವೆಂದು

ನಾವು ನಿಶ್ಚಯಿಸುತ್ತೇವೆ. ಏಕೆಂದರೆ ಎರಡೂ ಕೂಡ ಈಶನ ವಶದಲ್ಲಿಯೇ ಇರುತ್ತದೆಂಬುದು ಸಮಾನವಾಗಿದೆ. ಆಯಾ ಇಂದ್ರಿಯಗಳ ಜ್ಞಾನವು ತಮ್ಮ ತಮ್ಮಲ್ಲಿರುವ ಕರಣಾದಿಗಳಲ್ಲಿ ಕಂಡಿರುತ್ತದೆ. ಚಕ್ಷುರಾದಿಗಳಲ್ಲೂ ಕೂಡ ಹೀಗೆ ಉತ್ತರವನ್ನು ತಿಳಿಯಬೇಕು. ಹೀಗೆ ಯುಕ್ತಿಯುಕ್ತವಾಗಿ ಪ್ರಾರಂಭದ ಶ್ರುತಿಯ ವಿರೋಧ ಬರುವ ಕಾರಣ ಎರಡನೇ ಶ್ರುತಿಯು ಅಪ್ರಮಾಣವೆಂದು ಒಪ್ಪಲೇಬೇಕು. ಆದ್ದರಿಂದ ಜಗತ್ಕಾರಣನಾದ ಬ್ರಹ್ಮನಲ್ಲಿ ಶ್ರುತಿಸಮನ್ವಯವು ಯೋಗ್ಯವಲ್ಲವೆಂದು ಹೇಳುತ್ತೇವೆ. ಇಷ್ಟು ಅಧಿಕರಣದ ಪೂರ್ವಪಕ್ಷ.

**तत्वप्रकाशिका – द्वादशे एकादशद्वादशे । सिद्धान्तयत्सूत्रमवतार्य व्याचष्टे – अत इति ।। न ते प्राणा इन्द्रियाणि किं तर्ह्येकमृते द्वादशैव तत्र च मुख्यप्राणमृतेऽन्ये प्राणा इन्द्रियाणि न मुख्यस्तथा विशेषश्रुतेरिति भावः । इदं द्रवणवतस्तस्य कथमिन्द्रियत्वं नास्तीत्यत उक्तम् – द्रवतामिति ।। अत्रैव स्मृतिमाह – श्रोत्रादीनीति ।।**

ದ್ವಾದಶೇ ಎಂದರೆ ಹನ್ನೊಂದನೆಯ ಮತ್ತು ಹನ್ನೆರಡನೆಯ ಎಂದರ್ಥ. ಸಿದ್ಧಾಂತಸ್ಥಾಪನೆಗೆ 'ಅತಃ' ಎಂದು ಅವತಾರಿಕೆ ನೀಡಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಆ ಎಲ್ಲಾ ಪ್ರಾಣಗಳು ಇಂದ್ರಿಯಗಳಲ್ಲ. ಮತ್ತೇನೆಂದರೆ ಒಂದನ್ನು ಬಿಟ್ಟು ಉಳಿದ ಹನ್ನೆರಡು ಮಾತ್ರ ಇಂದ್ರಿಯಗಳು. ಅವುಗಳಲ್ಲಿ ಮುಖ್ಯಪ್ರಾಣನ ಹೊರತು ಉಳಿದ ಪ್ರಾಣಗಳೆಲ್ಲವೂ ಕೂಡ ಇಂದ್ರಿಯ ಎಂದೇ ಕರೆಸಿಕೊಳ್ಳುತ್ತವೆ. ಮುಖ್ಯಪ್ರಾಣನು ಇಂದ್ರಿಯನೆಂದು ಕರೆಸಿಕೊಳ್ಳುವುದಿಲ್ಲ. ಈ ವಿಷಯದಲ್ಲಿ ವಿಶೇಷ ಶ್ರುತಿಯು ಆಧಾರವಾಗಿದೆ ಎಂಬುದು ಶ್ರುತಿಯ ಅಭಿಪ್ರಾಯ. ವಿಷಯದ ಕಡೆ ಚಲಿಸುವ ಸ್ವಭಾವವುಳ್ಳ ಮುಖ್ಯಪ್ರಾಣನನ್ನು ಇಂದ್ರಿಯನಲ್ಲವೆಂದು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಗೆ 'ದ್ರವತಾಮ್' ಇತ್ಯಾದಿ ಭಾಷ್ಯದಿಂದ ಉತ್ತರಿಸಿದ್ದಾರೆ. ಇದೇ ವಿಷಯದಲ್ಲಿ ಸ್ಮೃತಿ ಪ್ರಮಾಣವನ್ನೂ ಕೂಡ 'ಶ್ರೋತ್ರಾದಿ' ಇತ್ಯಾದಿಯಾಗಿ ಉಲ್ಲೇಖಿಸಿದ್ದಾರೆ.

## ಬ್ರಹ್ಮಸೂತ್ರ

**सूत्रम् – भेदश्रुतेः ।।**

ಮುಖ್ಯಪ್ರಾಣನು ತಾನಿದ್ದಲ್ಲೇ ನೆಲೆಸಿ ಎಲ್ಲ ಇಂದ್ರಿಯಗಳಿಂದ ಕಾರ್ಯಗಳನ್ನು ಮಾಡಿಸುತ್ತಾನೆ. ಇಂಥ ಕರ್ತೃತ್ವಶಕ್ತಿಯು ಉಳಿದ ಇಂದ್ರಿಯಗಳಲ್ಲಿ ಇಲ್ಲದ ಕಾರಣ ಮುಖ್ಯಪ್ರಾಣನು ಇಂದ್ರಿಯಗಳ ಜೊತೆಗೆ ಸೇರುವುದಿಲ್ಲ.

## ಸೂತ್ರದೀಪಿಕಾ

**सूत्रदीपिका –** मुख्यप्राणस्य सर्वकर्तृत्वकारयितृत्व रूपभेदकधर्मस्यान्येषां तदभावस्य 'स्थित एव हि' इति श्रुतौ श्रुतत्वात् न तस्य चक्षुराद्यविशेष इत्यर्थः ।।२।।

ಭೇದಶ್ರುತೇಃ= ಮುಖ್ಯಪ್ರಾಣನಿಗೆಸರ್ವಕರ್ತೃತ್ವಕಾರಯಿತೃತ್ವಮೊದಲಾದಭೇದಕಧರ್ಮಗಳಿರುವುದರಿಂದ ಉಳಿದ ಇಂದ್ರಿಯಗಳಲ್ಲಿ ಇಂಥ ಧರ್ಮಗಳು ಇಲ್ಲದ ಕಾರಣ, 'ಸ್ಥಿತ ಏವ ಹಿ' ಎಂಬ ಶ್ರುತಿಯು ಹೇಳುವಂತೆ ಉಳಿದೆಲ್ಲ ಇಂದ್ರಿಯಗಳಿಂದ ವೈಲಕ್ಷಣ್ಯವು ಪ್ರಾಣನಲ್ಲಿ ಇರುತ್ತದೆ. ಆದ್ದರಿಂದ ಚಕ್ಷುರಾದಿ ಇಂದ್ರಿಯಗಳ ಜೊತೆಗೆ ಮುಖ್ಯಪ್ರಾಣನನ್ನು ಸೇರಿಸಬಾರದು.

## ಬ್ರಹ್ಮಸೂತ್ರಭಾಷ್ಯ

**भाष्यम् — ।। भेदश्रुतेः ।।२।।**

**'स्थित एव हीदं मुख्यः प्राणः करोति कारयति बलति बालयति धत्ते धारयति प्रभुं वा एनमाहुरथेन्द्रियाणि न स्थितानि न कुर्वन्ति न कारयन्ति न बलन्ति न बालयन्ति न दधते न धारयन्ति तानि वा एतान्यबलानि तस्मादाहुरिन्द्रियाणि करणानि' इति पौत्रायणश्रुतेः ।।२।।**

ಅನುವಾದ - ಮುಖ್ಯಪ್ರಾಣನು ಇದ್ದಲ್ಲೇ ಇದ್ದು ಎಲ್ಲವನ್ನು ಪ್ರೇರಣೆ ಮಾಡುತ್ತಾನೆ. ಮತ್ತೊಬ್ಬರಿಂದ ಮಾಡಿಸುತ್ತಾನೆ. ಬಲಶಾಲಿಯಂತೆ ಕಾಣಿಸುತ್ತಾನೆ. ಮತ್ತೊಬ್ಬರನ್ನು ಬಲಶಾಲಿಗಳನ್ನಾಗಿ ಮಾಡಿಸುತ್ತಾನೆ. ಧರಿಸುತ್ತಾನೆ. ಮತ್ತೊಬ್ಬರನ್ನು ಧರಿಸುವಂತೆ ಮಾಡುತ್ತಾನೆ. ಆದ್ದರಿಂದ ಇವನನ್ನು 'ಸ್ವಾಮಿ' ಎಂದು ಹೇಳುತ್ತಾರೆ. ಇಂದ್ರಿಯಗಳು ಒಂದೆಡೆ ಇರುವುದಿಲ್ಲ. ತಾನಾಗಿಯೇ ನೋಡುವುದಿಲ್ಲ. ಮತ್ತೊಬ್ಬರಿಂದ ಏನನ್ನು ಮಾಡಿಸುವುದಿಲ್ಲ. ಬಲಶಾಲಿಗಳಂತೆ ಕಾಣಿಸುವುದಿಲ್ಲ. ಮತ್ತೊಬ್ಬರನ್ನು ಹಾಗೆ ತೋರಿಸುವುದಿಲ್ಲ. ಅವು ಏನನ್ನು ಧಾರಣೆ ಮಾಡುವುದೂ ಇಲ್ಲ. ಮತ್ತೊಬ್ಬರನ್ನು ಧಾರಣೆ ಮಾಡುವಂತೆಯೂ ಮಾಡುವುದಿಲ್ಲ. ಆದ್ದರಿಂದ ಇಂದ್ರಿಯಗಳು ದುರ್ಬಲಗಳು. ಆದ್ದರಿಂದಲೇ ಕರಣಗಳೆಂದು ಹೇಳುತ್ತಾರೆ. ಹೀಗೆ ಪೌತ್ರಾಯಣಶ್ರುತಿಯು ಹೇಳುತ್ತಿದೆ.

ಪ್ರತಿಪದಾರ್ಥ -- ಮುಖ್ಯಪ್ರಾಣಃ = ಮುಖ್ಯಪ್ರಾಣನು, ಸ್ಥಿತಃ ಏವ = ಇದ್ದಲ್ಲೇ ಇದ್ದು, ಇದಮ್ = ಇವೆಲ್ಲವನ್ನು, ಕರೋತಿ = ಮಾಡುತ್ತಾನೆ. ಕಾರಯತಿ = ಮಾಡಿಸುತ್ತಾನೆ. ಬಲತಿ = ಬಲಶಾಲಿಯಾಗಿದ್ದಾನೆ. ಬಾಲಯತಿ = ಬಲಶಾಲಿಗಳಂತೆ ಮಾಡುತ್ತಾನೆ. ಧತ್ತೇ = ಧರಿಸುತ್ತಾನೆ, ಧಾರಯತಿ = ಧರಿಸುವಂತೆ ಮಾಡುತ್ತಾನೆ. ಏನಮ್ = ಇವನನ್ನು, ಪ್ರಭುಮ್ = ಸ್ವಾಮಿಯನ್ನಾಗಿ, ಆಹುಃ = ಹೇಳುತ್ತಾರೆ. ಅಥ = ಹಾಗೆಯೇ ಇಂದ್ರಿಯಾಣಿ = ಇಂದ್ರಿಯಗಳು, ನಸ್ಥಿತಾನಿ = ಇದ್ದಲ್ಲೇ ಇರುವುದಿಲ್ಲ. ನ ಕುರ್ವಂತಿ = ಏನನ್ನೂ ಮಾಡುವುದಿಲ್ಲ. ನ ಕಾರಯಂತಿ = ಮಾಡಿಸುವುದೂ ಇಲ್ಲ. ನ ಬಲಂತಿ = ಬಲಶಾಲಿಗಳಲ್ಲ, ನ ಬಾಲಯಂತಿ = ಬಲಶಾಲಿಗಳನ್ನಾಗಿಯೂ ಮಾಡುವುದಿಲ್ಲ. ನ ಧತ್ತೇ = ಧಾರಣೆ ಮಾಡುವುದಿಲ್ಲ. ನ ಧಾರಯಂತಿ = ಏನನ್ನು ಧರಿಸುವುದಿಲ್ಲ, ತಸ್ಮಾತ್ = ಆದ್ದರಿಂದ, ಇಂದ್ರಿಯಾಣಿ = ಇಂದ್ರಿಯಗಳನ್ನು, ಕರಣಾನಿ = ಕರಣಗಳೆಂದು, ಆಹುಃ = ಹೇಳುತ್ತಾರೆ. ಇತಿ = ಹೀಗೆ, ಪೌತ್ರಾಯಣಶ್ರುತೇಃ = ಪೌತ್ರಾಯಣಶ್ರುತಿಯು ಹೇಳುತ್ತಿದೆ.

ಪರಿಪೂರ್ಣಚಂದ್ರಿಕಾ

## ತತ್ವಪ್ರಕಾಶಿಕಾ

**तत्वप्रकाशिका – यदि मुख्यप्राणो नेन्द्रियं तर्हि चक्षुरपि न स्यात् विशेषाभावादित्याशङ्कां परिहरत्सूत्रमुपन्यस्य तदुपात्तश्रुतिमेवोदाहरति – भेदेति ।।**

ಮುಖ್ಯಪ್ರಾಣನನ್ನು ಇಂದ್ರಿಯನಲ್ಲವೆಂದು ಹೇಳಿದಿರಿ. ಹಾಗಾದರೆ ಮುಖ್ಯಪ್ರಾಣನಂತೆ ಚಕ್ಷುರಿಂದ್ರಿಯವೂ ಕೂಡ ಇಂದ್ರಿಯವಲ್ಲ ಎಂದಾಗಬೇಕಾದೀತು. ಏಕೆಂದರೆ ಇವರೆಡರಲ್ಲೂ ಯಾವುದೇ ವ್ಯತ್ಯಾಸವಿಲ್ಲ ? ಈ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು ಉಲ್ಲೇಖ ಮಾಡುತ್ತಿದ್ದಾರೆ. ಮತ್ತು ಆ ಸೂತ್ರದಲ್ಲಿ ಉಲ್ಲೇಖ ಮಾಡಲ್ಪಟ್ಟ ಶ್ರುತಿಯನ್ನೇ ಭಾಷ್ಯದಲ್ಲಿ ಭೇದ ಇತ್ಯಾದಿಯಾಗಿ ಉದಾಹರಿಸುತ್ತಿದ್ದಾರೆ.

**तत्वप्रकाशिका – न मुख्यप्राणस्य चक्षुरादीनां चाविशेषो मन्तव्यो येन तस्य विशिष्यानिन्द्रियत्वोक्तिविरोधः । मुख्यप्राणस्य सर्वकर्तृकारयितृत्वेनेश्वरसाम्यस्यान्येषां च तदभावस्य श्रुतत्वादिति भावः ।।**

ಮುಖ್ಯಪ್ರಾಣನಿಗೆ ಚಕ್ಷುರಾದಿ ಇಂದ್ರಿಯಗಳಿಗಿಂತ ಯಾವುದೇ ವ್ಯತ್ಯಾಸವಿಲ್ಲವೆಂದು ಹೇಳಬಾರದು. ಹಾಗಾಗಿದ್ದಲ್ಲಿ ಮುಖ್ಯಪ್ರಾಣನಂತೆ ಚಕ್ಷುರಿಂದ್ರಿಯಗಳೂ ಕೂಡ ಇಂದ್ರಿಯವಲ್ಲ ಎಂದಾಗುತ್ತಿತ್ತು. ಮುಖ್ಯಪ್ರಾಣನನ್ನು ಬಿಟ್ಟು ಚಕ್ಷುರಿಂದ್ರಿಯಕ್ಕೆ ಮಾತ್ರ ಇಂದ್ರಿಯತ್ವ ಹೇಳಿದ್ದರ ವಿರೋಧ ಬರುತ್ತಿತ್ತು. ಆದರೆ ಸರ್ವಕರ್ತೃತ್ವ, ಸರ್ವಕಾರಯಿತೃತ್ವ ಮೊದಲಾದ ಧರ್ಮಗಳು ಮುಖ್ಯಪ್ರಾಣನಲ್ಲಿವೆ. ಭಗವಂತನಲ್ಲಿ ಈ ಧರ್ಮಗಳು ಮುಖ್ಯಪ್ರಾಣನಲ್ಲಿ ಸಮಾನವಾಗಿವೆ. ಆದರೆ ಉಳಿದ ಇಂದ್ರಿಯಗಳಲ್ಲಿ ಈ ಧರ್ಮಗಳಿರುವುದಿಲ್ಲ. ಹೀಗೆ ಶ್ರುತಿಯ ಆಧಾರದಿಂದ ಮುಖ್ಯಪ್ರಾಣನು ಇಂದ್ರಿಯನಲ್ಲವೆಂದು ನಿರ್ಣಯವಾಗುತ್ತದೆ.

## ಬ್ರಹ್ಮಸೂತ್ರ

**सूत्रम् – वैलक्षण्याच ।।**

ಉಳಿದೆಲ್ಲ ಇಂದ್ರಿಯಗಳು ಈಶ್ವರನ ಹಾಗೂ ಜೀವನ ಅಧೀನವಾಗಿ ಕೆಲಸವನ್ನು ಮಾಡುತ್ತವೆ. ಆದರೆ ಮುಖ್ಯಪ್ರಾಣನು ಹಾಗಲ್ಲ. ಆದ್ದರಿಂದ ಉಳಿದ ಇಂದ್ರಿಯಗಳ ನಡುವೆ ಪ್ರಾಣನನ್ನು ಸೇರಿಸಬಾರದು.

## ಸೂತ್ರದೀಪಿಕಾ

**सूत्रदीपिका –** मुख्यप्राणस्य तदितरप्राणानाञ्च केवलेश्वराधीनत्वेश्वर-जीवोभयाधीनत्वरूपवैलक्षण्यसत्त्वाच्च न तस्येन्द्रियत्वं किन्तु चक्षुरादीनामेवेत्यर्थः ।।३।।

ಭೇದಶ್ರುತೇಃ= ಮುಖ್ಯಪ್ರಾಣನಿಗೆಸರ್ವಕರ್ತೃತ್ವಕಾರಯಿತೃತ್ವಮೊದಲಾದಭೇದಕಧರ್ಮಗಳಿರುವುದರಿಂದ ಉಳಿದ ಇಂದ್ರಿಯಗಳಲ್ಲಿ ಇಂಥ ಧರ್ಮಗಳು ಇಲ್ಲದ ಕಾರಣ, 'ಸ್ಥಿತ ಏವ ಹಿ' ಎಂಬ ಶ್ರುತಿಯು ಹೇಳುವಂತೆ ಉಳಿದೆಲ್ಲ ಇಂದ್ರಿಯಗಳಿಂದ ವೈಲಕ್ಷಣ್ಯವು ಪ್ರಾಣನಲ್ಲಿ ಇರುತ್ತದೆ. ಆದ್ದರಿಂದ ಚಕ್ಷುರಾದಿ ಇಂದ್ರಿಯಗಳ ಜೊತೆಗೆ ಮುಖ್ಯಪ್ರಾಣನನ್ನು ಸೇರಿಸಬಾರದು.

## ಬ್ರಹ್ಮಸೂತ್ರಭಾಷ್ಯ

**भाष्यम् – ।। भेदश्रुतेः ।।२।।**

**'स्थित एव हीदं मुख्यः प्राणः करोति कारयति बलति बालयति धत्ते धारयति प्रभुं वा एनमाहुरथेन्द्रियाणि न स्थितानि न कुर्वन्ति न कारयन्ति न बलन्ति न बालयन्ति न दधते न धारयन्ति तानि वा एतान्यबलानि तस्मादाहुरिन्द्रियाणि करणानि' इति पौत्रायणश्रुतेः ।।२।।**

ಅನುವಾದ - ಮುಖ್ಯಪ್ರಾಣನು ಇದ್ದಲ್ಲೇ ಇದ್ದು ಎಲ್ಲವನ್ನು ಪ್ರೇರಣೆ ಮಾಡುತ್ತಾನೆ. ಮತ್ತೊಬ್ಬರಿಂದ ಮಾಡಿಸುತ್ತಾನೆ. ಬಲಶಾಲಿಯಂತೆ ಕಾಣಿಸುತ್ತಾನೆ. ಮತ್ತೊಬ್ಬರನ್ನು ಬಲಶಾಲಿಗಳನ್ನಾಗಿ ಮಾಡಿಸುತ್ತಾನೆ. ಧರಿಸುತ್ತಾನೆ. ಮತ್ತೊಬ್ಬರನ್ನು ಧರಿಸುವಂತೆ ಮಾಡುತ್ತಾನೆ. ಆದ್ದರಿಂದ ಇವನನ್ನು 'ಸ್ವಾಮಿ' ಎಂದು ಹೇಳುತ್ತಾರೆ. ಇಂದ್ರಿಯಗಳು ಒಂದೆಡೆ ಇರುವುದಿಲ್ಲ. ತಾನಾಗಿಯೇ ನೋಡುವುದಿಲ್ಲ. ಮತ್ತೊಬ್ಬರಿಂದ ಏನನ್ನು ಮಾಡಿಸುವುದಿಲ್ಲ. ಬಲಶಾಲಿಗಳಂತೆ ಕಾಣಿಸುವುದಿಲ್ಲ. ಮತ್ತೊಬ್ಬರನ್ನು ಹಾಗೆ ತೋರಿಸುವುದಿಲ್ಲ. ಅವು ಏನನ್ನು ಧಾರಣೆ ಮಾಡುವುದೂ ಇಲ್ಲ. ಮತ್ತೊಬ್ಬರನ್ನು ಧಾರಣೆ ಮಾಡುವಂತೆಯೂ ಮಾಡುವುದಿಲ್ಲ. ಆದ್ದರಿಂದ ಇಂದ್ರಿಯಗಳು ದುರ್ಬಲಗಳು. ಆದ್ದರಿಂದಲೇ ಕರಣಗಳೆಂದು ಹೇಳುತ್ತಾರೆ. ಹೀಗೆ ಪೌತ್ರಾಯಣಶ್ರುತಿಯು ಹೇಳುತ್ತಿದೆ.

ಪ್ರತಿಪದಾರ್ಥ -- ಮುಖ್ಯಪ್ರಾಣಃ = ಮುಖ್ಯಪ್ರಾಣನು, ಸ್ಥಿತಃ ಏವ = ಇದ್ದಲ್ಲೇ ಇದ್ದು, ಇದಮ್ = ಇವೆಲ್ಲವನ್ನು, ಕರೋತಿ = ಮಾಡುತ್ತಾನೆ. ಕಾರಯತಿ = ಮಾಡಿಸುತ್ತಾನೆ. ಬಲತಿ = ಬಲಶಾಲಿಯಾಗಿದ್ದಾನೆ. ಬಾಲಯತಿ = ಬಲಶಾಲಿಗಳಂತೆ ಮಾಡುತ್ತಾನೆ. ಧತ್ತೇ = ಧರಿಸುತ್ತಾನೆ, ಧಾರಯತಿ = ಧರಿಸುವಂತೆ ಮಾಡುತ್ತಾನೆ. ಏನಮ್ = ಇವನನ್ನು, ಪ್ರಭುಮ್ = ಸ್ವಾಮಿಯನ್ನಾಗಿ, ಆಹುಃ = ಹೇಳುತ್ತಾರೆ. ಅಥ = ಹಾಗೆಯೇ ಇಂದ್ರಿಯಾಣಿ = ಇಂದ್ರಿಯಗಳು, ನಸ್ಥಿತಾನಿ = ಇದ್ದಲ್ಲೇ ಇರುವುದಿಲ್ಲ. ನ ಕುರ್ವಂತಿ = ಏನನ್ನೂ ಮಾಡುವುದಿಲ್ಲ. ನ ಕಾರಯಂತಿ = ಮಾಡಿಸುವುದೂ ಇಲ್ಲ. ನ ಬಲಂತಿ = ಬಲಶಾಲಿಗಳಲ್ಲ, ನ ಬಾಲಯಂತಿ = ಬಲಶಾಲಿಗಳನ್ನಾಗಿಯೂ ಮಾಡುವುದಿಲ್ಲ. ನ ಧತ್ತೇ = ಧಾರಣೆ ಮಾಡುವುದಿಲ್ಲ. ನ ಧಾರಯಂತಿ = ಏನನ್ನು ಧರಿಸುವುದಿಲ್ಲ, ತಸ್ಮಾತ್ = ಆದ್ದರಿಂದ, ಇಂದ್ರಿಯಾಣಿ = ಇಂದ್ರಿಯಗಳನ್ನು, ಕರಣಾನಿ = ಕರಣಗಳೆಂದು, ಆಹುಃ = ಹೇಳುತ್ತಾರೆ. ಇತಿ = ಹೀಗೆ, ಪೌತ್ರಾಯಣಶ್ರುತೇಃ = ಪೌತ್ರಾಯಣಶ್ರುತಿಯು ಹೇಳುತ್ತಿದೆ.

ಪರಿಪೂರ್ಣಚಂದ್ರಿಕಾ

## ತತ್ವಪ್ರಕಾಶಿಕಾ

**तत्वप्रकाशिका – यदि मुख्यप्राणो नेन्द्रियं तर्हि चक्षुरपि न स्यात् विशेषाभावादित्याशङ्कां परिहरत्सूत्रमुपन्यस्य तदुपात्तश्रुतिमेवोदाहरति – भेदेति ।।**

ಮುಖ್ಯಪ್ರಾಣನನ್ನು ಇಂದ್ರಿಯನಲ್ಲವೆಂದು ಹೇಳಿದಿರಿ. ಹಾಗಾದರೆ ಮುಖ್ಯಪ್ರಾಣನಂತೆ ಚಕ್ಷುರಿಂದ್ರಿಯವೂ ಕೂಡ ಇಂದ್ರಿಯವಲ್ಲ ಎಂದಾಗಬೇಕಾದೀತು. ಏಕೆಂದರೆ ಇವರೆಡರಲ್ಲೂ ಯಾವುದೇ ವ್ಯತ್ಯಾಸವಿಲ್ಲ ? ಈ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು ಉಲ್ಲೇಖ ಮಾಡುತ್ತಿದ್ದಾರೆ. ಮತ್ತು ಆ ಸೂತ್ರದಲ್ಲಿ ಉಲ್ಲೇಖ ಮಾಡಲ್ಪಟ್ಟ ಶ್ರುತಿಯನ್ನೇ ಭಾಷ್ಯದಲ್ಲಿ ಭೇದ ಇತ್ಯಾದಿಯಾಗಿ ಉದಾಹರಿಸುತ್ತಿದ್ದಾರೆ.

**तत्वप्रकाशिका – न मुख्यप्राणस्य चक्षुरादीनां चाविशेषो मन्तव्यो येन तस्य विशिष्यानिन्द्रियत्वोक्तिविरोधः । मुख्यप्राणस्य सर्वकर्तृकारयितृत्वेनेश्वरसाम्यस्यान्येषां च तदभावस्य श्रुतत्वादिति भावः ।।**

ಮುಖ್ಯಪ್ರಾಣನಿಗೆ ಚಕ್ಷುರಾದಿ ಇಂದ್ರಿಯಗಳಿಗಿಂತ ಯಾವುದೇ ವ್ಯತ್ಯಾಸವಿಲ್ಲವೆಂದು ಹೇಳಬಾರದು. ಹಾಗಾಗಿದ್ದಲ್ಲಿ ಮುಖ್ಯಪ್ರಾಣನಂತೆ ಚಕ್ಷುರಿಂದ್ರಿಯಗಳೂ ಕೂಡ ಇಂದ್ರಿಯವಲ್ಲ ಎಂದಾಗುತ್ತಿತ್ತು. ಮುಖ್ಯಪ್ರಾಣನನ್ನು ಬಿಟ್ಟು ಚಕ್ಷುರಿಂದ್ರಿಯಕ್ಕೆ ಮಾತ್ರ ಇಂದ್ರಿಯತ್ವ ಹೇಳಿದ್ದರ ವಿರೋಧ ಬರುತ್ತಿತ್ತು. ಆದರೆ ಸರ್ವಕರ್ತೃತ್ವ, ಸರ್ವಕಾರಯಿತೃತ್ವ ಮೊದಲಾದ ಧರ್ಮಗಳು ಮುಖ್ಯಪ್ರಾಣನಲ್ಲಿವೆ. ಭಗವಂತನಲ್ಲಿ ಈ ಧರ್ಮಗಳು ಮುಖ್ಯಪ್ರಾಣನಲ್ಲಿ ಸಮಾನವಾಗಿವೆ. ಆದರೆ ಉಳಿದ ಇಂದ್ರಿಯಗಳಲ್ಲಿ ಈ ಧರ್ಮಗಳಿರುವುದಿಲ್ಲ. ಹೀಗೆ ಶ್ರುತಿಯ ಆಧಾರದಿಂದ ಮುಖ್ಯಪ್ರಾಣನು ಇಂದ್ರಿಯನಲ್ಲವೆಂದು ನಿರ್ಣಯವಾಗುತ್ತದೆ.

## ಬ್ರಹ್ಮಸೂತ್ರ

**सूत्रम् – वैलक्षण्याच्च ।।**

ಉಳಿದೆಲ್ಲ ಇಂದ್ರಿಯಗಳು ಈಶ್ವರನ ಹಾಗೂ ಜೀವನ ಅಧೀನವಾಗಿ ಕೆಲಸವನ್ನು ಮಾಡುತ್ತವೆ. ಆದರೆ ಮುಖ್ಯಪ್ರಾಣನು ಹಾಗಲ್ಲ. ಆದ್ದರಿಂದ ಉಳಿದ ಇಂದ್ರಿಯಗಳ ನಡುವೆ ಪ್ರಾಣನನ್ನು ಸೇರಿಸಬಾರದು.

## ಸೂತ್ರದೀಪಿಕಾ

**सूत्रदीपिका –** मुख्यप्राणस्य तदितरप्राणानाञ्च केवलेश्वराधीनत्वेश्वर-जीवोभयाधीनत्वरूपवैलक्षण्यसत्त्वाच्च न तस्येन्द्रियत्वं किन्तु चक्षुरादीनामेवेत्यर्थः ।।३।।

ಮುಖ್ಯಪ್ರಾಣನು ಕೇವಲ ಈಶ್ವರನ ಅಧೀನನಾಗಿರುತ್ತಾನೆ. ಉಳಿದೆಲ್ಲ ಇಂದ್ರಿಯಗಳು ಈಶ್ವರ ಹಾಗೂ ಜೀವ ಇಬ್ಬರ ಅಧೀನವೂ ಆಗಿರುತ್ತವೆ. ಹೀಗೆ ವೈಲಕ್ಷಣ್ಯವಿರುವುದರಿಂದ ಇಂದ್ರಿಯಗಳ ಗಣದಲ್ಲಿ ಪ್ರಾಣನನ್ನು ಸೇರಿಸಬಾರದು. ಹೊರತು, ಚಕ್ಷುರಾದಿ ಹನ್ನೆರಡು ಕರಣಗಳನ್ನು ಮಾತ್ರ ಸೇರಿಸಬೇಕು.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ತ ಇಂದ್ರಿಯಾಧಿಕರಣವು ಮುಗಿಯಿತು.

## ಬ್ರಹ್ಮಸೂತ್ರಭಾಷ್ಯ

**भाष्यम् — ।। वैलक्षण्याच्च ।।३।।**

**पुरुषापेक्षया प्रवृत्तिरिन्द्रियाणां दृश्यते, न मुख्यस्य । 'प्राणाग्नय एवैतस्मिन् पुरे जाग्रति' (प्र.४.३.) इति च श्रुतेः ।।२०।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये त इन्द्रियाधिकरणम् ।। ११ ।।**

ಅನುವಾದ - ಇಂದ್ರಿಯಗಳು ಜೀವರ ಅಪೇಕ್ಷೆಯಂತೆ ಪ್ರವೃತ್ತಿ ಮಾಡುತ್ತವೆ ಆದರೆ ಮುಖ್ಯಪ್ರಾಣನು ಹಾಗಲ್ಲ. ನಿದ್ರಾಕಾಲದಲ್ಲಿ ಎಲ್ಲಾ ಇಂದ್ರಿಯಗಳು ವಿಶ್ರಾಂತಿಯನ್ನು ಪಡೆದರೂ ಮುಖ್ಯಪ್ರಾಣನು ಮಾತ್ರ ಎಚ್ಚರವಾಗಿರುತ್ತಾನೆ. ಹೀಗೆ ಶ್ರುತಿ ಹೇಳುತ್ತಿದೆ.

ಪ್ರತಿಪದಾರ್ಥ -- ಪುರುಷಾಪೇಕ್ಷಯಾ = ಪುರುಷನ ಅಪೇಕ್ಷೆಗೆ ಅನುಸಾರಿಯಾಗಿ, ಇಂದ್ರಿಯಾಣಾಮ್ = ಇಂದ್ರಿಯಗಳ ಪ್ರವೃತ್ತಿ ಕಾಣಸುತ್ತದೆ. ಮುಖ್ಯಸ್ಯ = ಮುಖ್ಯಪ್ರಾಣನಿಗೆ, ನ = ಹೀಗಿರುವುದಿಲ್ಲ ಏಕೆಂದರೆ, ಪ್ರಾಣಾಗ್ನಯ ಏವ = ಪ್ರಾಣನೆಂಬ ಅಗ್ನಿಯು, ಏತಸ್ಮಿನ್ ಪುರೇ = ಈ ದೇಹದಲ್ಲಿ, ಜಾಗ್ರತಿ = ನಿದ್ರಾಕಾಲದಲ್ಲಿ ಎಚ್ಚರವಾಗಿರುತ್ತಾನೆ, ಇತಿ ಶ್ರುತೇಃ = ಹೀಗೆ ಶ್ರುತಿಯು ಹೇಳುತ್ತಿದೆ.

ಇಲ್ಲಿಗೆ ತ ಇಂದ್ರಿಯಾಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

## ತತ್ವಪ್ರಕಾಶಿಕಾ

**तत्वप्रकाशिका — नन्वयं मुख्यप्राणः परमात्मवशो न वा । आद्ये न तस्यैवानिन्द्रियत्वसिद्धिरीश्वरवशत्वसाम्यात् । अवान्तरवैलक्षण्यस्यान्यत्रापि सम्भवात् । द्वितीये प्रागुक्तविरोधः इत्याशङ्कां परिहरत्सूत्रं पठित्वा व्याचष्टे — वैलक्षण्याच्चेति ।।**

ಪ್ರಶ್ನೆ – ಮುಖ್ಯಪ್ರಾಣನು ಪರಮಾತ್ಮನ ಅಧೀನನಾಗಿದ್ದಾನೋ? ಇಲ್ಲವೋ? ಅಧೀನನಾಗಿದ್ದಾನೆಂದು ಹೇಳಿದರೆ, ಅವನಿಗೆ ಇಂದ್ರಿಯವಿಲ್ಲ ಎಂಬುದೇ ಯುಕ್ತವಾಗುವುದಿಲ್ಲ. ಏಕೆಂದರೆ ಬೇರೆ ಇಂದ್ರಿಯಗಳಂತೆ ಅವನೂ ಕೂಡ ಈಶ್ವರನ ಅಧೀನನಾಗಿರುತ್ತಾನೆ. ಅವಾಂತರವೈಲಕ್ಷಣ್ಯವು ಬೇರೆ ಇಂದ್ರಿಯಗಳಲ್ಲೂ ಕೂಡ ಸಮಾನವಾಗಿದೆ.

ಮುಖ್ಯಪ್ರಾಣನು ಪರಮಾತ್ಮನ ಅಧೀನನಲ್ಲ ಎಂದು ಹೇಳಿದರೆ ಹಿಂದೆ ಹೇಳಿದ ವಿರೋಧವು ತಪ್ಪಿದ್ದಲ್ಲ. ಈ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು 'ವೈಲಕ್ಷಣ್ಯಾಚ್ಚ' ಎಂಬುದಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ – ಒಂದು ವೇಳೆ ಮುಖ್ಯಪ್ರಾಣನು ಭಗವಂತನ ವಶವಾಗುವುದಾದರೆ ಎಲ್ಲಾ ಇಂದ್ರಿಯಗಳೂ ಕೂಡ ಭಗವದಧೀನವಾಗಿರುವುದರಿಂದ ಮುಖ್ಯಪ್ರಾಣನು ಇಂದ್ರಿಯ- ನಲ್ಲವೆಂಬುದು ಇದಕ್ಕೆ ಕಾರಣವೇ ಆಗುವುದಿಲ್ಲ. ಆದ್ದರಿಂದ ಮುಖ್ಯಪ್ರಾಣನು ಈಶ್ವರನ ಅಧೀನನಲ್ಲ ಎಂದು ಹೇಳಬೇಕು. ಹಾಗೆ ಹೇಳಿದರೆ 'ಚಕ್ಷುರಾದಿವತ್' ಎಂಬ ಸೂತ್ರದಲ್ಲಿ ಚಕ್ಷುರಾದಿ ಇಂದ್ರಿಯಗಳಂತೆ ಮುಖ್ಯಪ್ರಾಣನೂ ಕೂಡ ಭಗವಂತನ ಅಧೀನನಾಗಿದ್ದಾನೆಂಬುದು ಸಾಧನೆ ಮಾಡಿದ್ದರ ವಿರೋಧವು ಬರುತ್ತದೆ. ಆದ್ದರಿಂದ ಮುಖ್ಯಪ್ರಾಣನನ್ನು ಭಗವಂತನ ಅಧೀನನೆಂದು ಒಪ್ಪಿದರೂ ಇಂದ್ರಿಯತ್ವವು ಸಿದ್ಧವಾಗುವುದಿಲ್ಲ. ಇಲ್ಲವೆಂದರೂ ಕೂಡ ಇಂದ್ರಿಯತ್ವವು ಸಿದ್ಧವಾಗುವುದಿಲ್ಲ ಎಂಬ ಆಶಂಕೆಯ ಪರಿಹಾರಕ್ಕಾಗಿ ಈ ಸೂತ್ರ ಹೊರಟಿದೆ.

**ತत्वप्रकाशिका – भवेदीशवशः प्राणस्तथापि नोक्तविरोधः । ईशाधीनत्वेऽपि वैलक्षण्यात् । ईश्वरपरवशा हीन्द्रियाणां प्रवृत्तिर्जीवप्रयत्नापेक्षैव जाग्रत्येव भावेन सुषुप्तावभावेन च तथा दर्शनात् । मुख्यप्राणस्य हि केवलेश्वरेच्छाधीनैव प्रवृत्तिर्न जीवापेक्षेति भावः ।**

ಮುಖ್ಯಪ್ರಾಣನು ಭಗವದಧೀನನವೆಂದೇ ಹೇಳುತ್ತೇವೆ. ಆದರೂ ಕೂಡ ಇಂದ್ರಿಯ-ನಾಗುವುದಿಲ್ಲ ಎಂದು ಹೇಳಲು ಸಾಧ್ಯವಿಲ್ಲ. ಹಿಂದಿನ ವಿರೋಧಕ್ಕೆ ಇಲ್ಲಿ ಅವಕಾಶವಿಲ್ಲ. ಏಕೆಂದರೆ ಅವನು ಭಗವದಧೀನವಾದರೂ ಕೂಡ ಇತರ ಇಂದ್ರಿಯಗಳಿಗಿಂತ ಇವನಲ್ಲಿ ವೈಲಕ್ಷಣ್ಯವಿದೆ. ಪ್ರತಿಯೊಂದು ಇಂದ್ರಿಯಗಳ ಪ್ರವೃತ್ತಿಯು ಭಗವದಧೀನವಾಗಿದ್ದರೂ ಕೂಡ ಜೀವನ ಪ್ರವೃತ್ತಿಯನ್ನೂ ಕೂಡ ಅದು ಅಪೇಕ್ಷೆ ಪಡುತ್ತದೆ. ಏಕೆಂದರೆ ಜಾಗ್ರತ್ಕಾಲದಲ್ಲಿಯೇ ಆ ಇಂದ್ರಿಯಗಳ ಪ್ರವೃತ್ತಿ ಇರುತ್ತದೆ. ಸುಷುಪ್ತಿಯಲ್ಲಿ ಇರುವುದಿಲ್ಲವೆಂಬುದು ನಮ್ಮ ಅನುಭವ ಸಿದ್ಧವಾಗಿದೆ. ಮುಖ್ಯಪ್ರಾಣನು ಕೇವಲ ಈಶ್ವರಾಧೀನವಾಗಿದ್ದಾನೆ. ಪುರುಷನ ಅಪೇಕ್ಷೆಯೇ ಇರುವುದಿಲ್ಲವೆಂಬುದು ಸಿದ್ಧಾಂತದ ಅಭಿಪ್ರಾಯ.

ವಿವರಣೆ – ಮುಖ್ಯಪ್ರಾಣನು ಕೇವಲ ಭಗವದಧೀನವಾಗಿದ್ದಾನೆ. ಆದರೆ ಉಳಿದ ಇಂದ್ರಿಯಗಳು ಹಾಗಲ್ಲ. ಭಗವದಧೀನವಾಗಿದ್ದರೂ ಜೀವರ ಅಧೀನವೂ ಕೂಡ ಆಗಿರುತ್ತದೆ. ಮಲಗಿದಾಗ ಯಾವುದೇ ಇಂದ್ರಿಯಗಳು ಕೆಲಸ ಮಾಡುವುದಿಲ್ಲ. ಎಚ್ಚರದಲ್ಲಿ ಮಾತ್ರ ಜೀವರ ಅಪೇಕ್ಷೆಗೆ ಅನುಗುಣವಾಗಿ ಎಲ್ಲಾ ಇಂದ್ರಿಯಗಳು ಕೆಲಸ ಮಾಡುತ್ತವೆ. ಆದರೆ ಮುಖ್ಯಪ್ರಾಣನ ಪ್ರವೃತ್ತಿ ಹಾಗಲ್ಲ. ಜೀವನು ಸುಷುಪ್ತ್ಯವಸ್ಥೆಯಲ್ಲಿದ್ದಾಗಲೂ ಕೂಡ ತಾನು ಏಕೈಕವಾಗಿ ಪ್ರವೃತ್ತಿಯನ್ನು ಮಾಡುತ್ತಲೇ ಇರುತ್ತಾನೆ. ಇದರಿಂದಲೇ ಸಿದ್ಧವಾಗುತ್ತದೆ ಮುಖ್ಯಪ್ರಾಣನು ಜೀವನ ಅಪೇಕ್ಷ್ಯಾಧೀನವಾಗಿರುವುದಿಲ್ಲ, ಕೇವಲ ಭಗವದಧೀನನಾಗಿರುತ್ತಾನೆ ಎಂದು. ಇದನ್ನೇ 'ಪ್ರಾಣಾಗ್ನಯಃ' ಎಂಬ ಶ್ರುತಿಯು ಸಮರ್ಥನೆ ಮಾಡುತ್ತಿದೆ.

**तत्वप्रकाशिका – मुख्यप्राणस्य प्रवृत्तिर्न पुरुषप्रयत्नापेक्षयेत्येतत्कुत इत्यतश्चब्दसूचितां श्रुतिं पठति – प्राणेति ।। 'एष पुरुषो न श्रुणोति न पश्यति न**

**जिघ्रति न रसयते न स्पृशते नाभिवदते नादत्ते नानन्दयते न विसृजते नेयायते स्वपितीत्याचक्षते' इतीन्द्रियाणां सुप्तौ प्रवृत्त्यभावमभिधाय 'प्राणाग्नयः' इति मुख्यप्राणरूपाणां पुरुषप्रयत्नानपेक्षा भगवदधीनप्रवृत्तिरुच्यते । न हि सुषुप्तस्य प्रयत्नोऽस्ति । अतः श्रुत्यविरोधेन मुख्यप्राणस्यानिन्द्रियत्वसिद्धेर्युक्तो जगत्कारणे विष्णौ श्रुतिसमन्वय इति सिद्धम् ।।**

ಮುಖ್ಯಪ್ರಾಣನ ಪ್ರವೃತ್ತಿಯು ಕೇವಲ ಭಗವದಧೀನವಾಗಿದೆ, ಪುರುಷ ಪ್ರಯತ್ನದ ಅಪೇಕ್ಷೆಯನ್ನು ಹೊಂದಿರುವುದಿಲ್ಲ ಎಂಬುದು ಯಾವ ಪ್ರವೃತ್ತಿಯಿಂದ ಸಿದ್ಧವಾಗಿದೆ ? ಎಂಬ ಪ್ರಶ್ನೆಗೆ ಸೂತ್ರದಲ್ಲಿರುವ ಚಶಬ್ದದಿಂದ ಸೂಚಿತವಾದ ಶ್ರುತಿಯನ್ನು 'ಪ್ರಾಣಃ' ಇತ್ಯಾದಿಯಾಗಿ ಭಾಷ್ಯಕಾರರು ಉಲ್ಲೇಖ ಮಾಡುತ್ತಿದ್ದಾರೆ.

'ಏಷ ಪುರುಷೋ ನ ಶ್ರುಣೋಽತಿ ನ ಪಶ್ಯತಿ ನ ಜಿಘ್ರತಿ ನ ರಸಯತೇ ನ ಸ್ಪೃಶತೇ
ನಾಭಿವದತೇ ನಾದತ್ತೇ ನಾನಂದಯತೇ ನ ವಿಸೃಜತೇ ನ ನೇಯಾಯತೇ ಸ್ವಪಿತಿ ಇತ್ಯಾಚಕ್ಷತೇ।।'

ಈ ಜೀವನು ಯಾವಾಗ ಕೇಳುವುದಿಲ್ಲ, ನೋಡುವುದಿಲ್ಲ, ಆಘ್ರಾಣ ಮಾಡುವುದಿಲ್ಲ, ರುಚಿಯನ್ನು ಕಾಣುವುದಿಲ್ಲ, ಸ್ಪರ್ಶ ಮಾಡುವುದಿಲ್ಲ, ಮಾತನಾಡುವುದಿಲ್ಲ, ತೆಗೆದುಕೊಳ್ಳುವುದಿಲ್ಲ, ಆನಂದವನ್ನು ಹೊಂದುವುದಿಲ್ಲ, ಮಲಮೂತ್ರ ವಿಸರ್ಜನೆಗಳನ್ನು ಮಾಡುವುದಿಲ್ಲ, ಗಮನವನ್ನೂ ಮಾಡುವುದಿಲ್ಲ ಆಗ ಅವನು ನಿದ್ರಿಸಿದ್ದಾನೆಂದು ಹೇಳುತ್ತಾರೆ.

ಹೀಗೆ ಸುಷುಪ್ತಿಯಲ್ಲಿ ಇಂದ್ರಿಯಗಳ ವ್ಯಾಪಾರವಿರುವುದಿಲ್ಲ ಎಂಬುದಾಗಿ ಶ್ರುತಿಯು ಹೇಳಿ ಮುಂದಿನ ವಾಕ್ಯದಲ್ಲಿ 'ಪ್ರಾಣಾಗ್ನಯಃ ಏವ' ಎಂಬುದಾಗಿ ಮುಖ್ಯಪ್ರಾಣನ ರೂಪಗಳಿಗೆ ಪುರುಷಪ್ರಯತ್ನವಿಲ್ಲದೇ ಪ್ರವೃತ್ತಿಯನ್ನು ಹೇಳಿದ್ದಾರೆ. ಇದು ಕೇವಲ ಭಗವದಧೀನವಾದ ಪ್ರವೃತ್ತಿ ಎಂದು ಸಿದ್ಧವಾಗುತ್ತದೆ. ಏಕೆಂದರೆ ಸುಷುಪ್ತ್ಯವಸ್ಥೆಯಲ್ಲಿ ಜೀವನು ಯಾವುದೇ ಪ್ರಯತ್ನವನ್ನು ಮಾಡುವುದಿಲ್ಲ. ಹೀಗೆ ಶ್ರುತಿಗೆ ಯಾವುದೇ ವಿರೋಧವಿಲ್ಲವಾದ್ದರಿಂದ ಮುಖ್ಯಪ್ರಾಣನಿಗೆ ಅನಿಂದ್ರಿಯತ್ವವು ಸಿದ್ಧವಾಗುತ್ತದೆ. ಆದ್ದರಿಂದ ಜಗತ್ಕಾರಣನಾದ ವಿಷ್ಣುವಿನಲ್ಲಿ ಸಕಲ ಶ್ರುತಿಗಳು ಸಮನ್ವಯಗೊಳ್ಳುತ್ತವೆಂಬುದು ಸಿದ್ಧವಾಯಿತು.

ವಿವರಣೆ – ಮುಖ್ಯಪ್ರಾಣನು ಅನಿಂದ್ರಿಯ ಎಂದು ಶ್ರುತಿಯಲ್ಲಿ ಹೇಳಿದೆ. ಇದರ ಅಭಿಪ್ರಾಯ ಏನೆಂದರೆ ಜೀವನ ಅಪೇಕ್ಷೆಗೆ ಅನುಗುಣವಾಗಿ ವಿಷಯ ಪದಾರ್ಥವನ್ನು ಕುರಿತು ಹೋಗುವಿಕೆ ಎಂಬುದು ಮುಖ್ಯಪ್ರಾಣನಲ್ಲಿ ಕೂಡುವುದಿಲ್ಲ. 'ಇದಂ ದ್ರವಣ' ಎಂಬ ಯುಕ್ತಿಯು ಉಳಿದೆಲ್ಲ ಇಂದ್ರಿಯಗಳಲ್ಲಿ ಯುಕ್ತವಾಗುತ್ತದೆ. ಆದರೆ ಪ್ರಾಣನಿಗೆ ಇದು ಯುಕ್ತವಾಗುವುದಿಲ್ಲ. ಆದ್ದರಿಂದ ಪೌತ್ರಾಯಣ ಶ್ರುತಿಯು ಕೇವಲ ಹನ್ನೆರಡು ಪ್ರಾಣಗಳಿಗೆ ಮಾತ್ರ ಇಂದ್ರಿಯತ್ವವನ್ನು ಹೇಳಿದೆ. ಆದ್ದರಿಂದ ಶ್ರುತಿಯ ವಿರೋಧಕ್ಕೆ ಅವಕಾಶವಿಲ್ಲ.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ತ ಇಂದ್ರಿಯಾಧಿಕರಣ ಮುಗಿಯಿತು

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## त इन्द्रियाधिकरणम्

ಮುಖ್ಯಪ್ರಾಣನು ಇಂದ್ರಿಯನಲ್ಲ

**।। त इन्द्रियाणि तव्द्यपदेशादन्यत्र श्रेष्ठात् ।। पूर्वोक्तं मुख्यप्राणस्य जीवं प्रत्यकरणत्वमयुक्तम् । तस्यापीन्द्रियत्वेन तं प्रति करणत्वादिति पूर्वपक्षोत्थानात्सङ्गतिः ।**

ಹಿಂದಿನ ಅಧಿಕರಣದಲ್ಲಿ ಮುಖ್ಯಪ್ರಾಣನು ಜೀವನನ್ನು ಕುರಿತು ಕರಣನಾಗಲಾರ ಎಂದು ಸಮರ್ಥನೆ ಮಾಡಲಾಯಿತು. ಇದು ತಪ್ಪು. ಏಕೆಂದರೆ ಮುಖ್ಯಪ್ರಾಣನೂ ಕೂಡ ಚಕ್ಷುರಾದಿ ಇಂದ್ರಿಯಗಳಂತೆ ಜೀವನನ್ನು ಕುರಿತು ಇಂದ್ರಿಯನೇ ಆಗಿದ್ದಾನೆ. ಹೀಗೆ ಪೂರ್ವಪಕ್ಷವು ಹುಟ್ಟುವುದರಿಂದ ಇಂದ್ರಿಯಾಧಿಕರಣಕ್ಕೆ ಪೂರ್ವಾಧಿಕರಣದಿಂದ ಸಂಗತಿಯು ಇರುತ್ತದೆ.

**अत्र श्रुतिसमन्वयेनोक्तं ब्रह्मणः सर्वस्रष्टृत्वादिकमयुक्तमुत नेति चिन्ता । तदर्थं श्रुतिरप्रमाणं न वेति । तदर्थं द्वादशानामेवेन्द्रियत्वश्रुतिरप्रमाणमुत नेति ।**

ಸಮಗ್ರ ಶ್ರುತಿಗಳ ಸಮನ್ವಯದಿಂದ ಬ್ರಹ್ಮನಿಗೆ ಸರ್ವಸ್ರಷ್ಟೃತ್ವವನ್ನು ಸಮರ್ಥನೆ ಮಾಡಲಾಯಿತು. ಇದು ಅಯುಕ್ತವೋ ಯುಕ್ತವೋ? ಎಂಬುದು ಈ ಅಧಿಕರಣದ ಪ್ರಧಾನ ಸಂಶಯ. ಇದಕ್ಕಾಗಿ ಶ್ರುತಿಯು ಅಪ್ರಮಾಣವೋ ಅಲ್ಲವೋ? ಎಂಬ ವಿಚಾರ ಮಾಡಲಾಗಿದೆ. ಇದಕ್ಕೆ ಪೂರಕವಾಗಿ ಹನ್ನೆರಡೇ ಇಂದ್ರಿಯಗಳೆಂದು ಪ್ರತಿಪಾದನೆ ಮಾಡುವ ಶ್ರುತಿಯು ಅಪ್ರಮಾಣವೋ ಅಲ್ಲವೋ? ಎಂಬುದರ ಬಗ್ಗೆ ವಿಚಾರ ಮಾಡಲಾಗಿದೆ.

**तदर्थं सा इदं द्रवणयुक्तियुक्तत्वेन प्रबलया सामान्येन त्रयोदशप्राणानामिन्द्रियत्वश्रुत्या बाध्यते न वेति । तदर्थं सामान्यश्रुतिर्द्वादशत्वरूपविशेषश्रुत्यनुसारेण मुख्यप्राणं परिहृत्य न वर्तत उत वर्तत इति । तदर्थमिन्द्रियत्वप्रयोजकत्वेन सामान्यश्रुत्युक्तमिदं द्रवणं मुख्यप्राणस्यास्ति न वेति ।**

ಮೇಲಿನ ವಿಚಾರಕ್ಕೆ ಪೂರಕವಾಗಿ 'स इदं द्रवति' ಎಂಬ ಇಂದ್ರಿಯ ಶಬ್ದದ ಪ್ರವೃತ್ತಿನಿಮಿತ್ತವನ್ನು ಹೊಂದಿರುವ ಯುಕ್ತಿಯಿಂದ ಹದಿಮೂರು ಇಂದ್ರಿಯಗಳನ್ನು ಹೇಳುವ ಶ್ರುತಿಯು ಪ್ರಬಲವಾಗಿದೆ. ಆದ್ದರಿಂದ ಸಾಮಾನ್ಯವಾಗಿ ಒಟ್ಟು ಹದಿಮೂರು ಇಂದ್ರಿಯಗಳು ಇವೆ ಎಂದು ಪ್ರತಿಪಾದನೆ ಮಾಡುವ ಶ್ರುತಿಯಿಂದ ಹನ್ನೆರಡು ಇಂದ್ರಿಯಗಳೆಂದು ಪ್ರತಿಪಾದನೆ ಮಾಡುವ ಶ್ರುತಿಗೆ ಬಾಧವು ಬರುತ್ತದೋ ಅಥವಾ ಇಲ್ಲವೋ? ಎಂಬ ವಿಚಾರವನ್ನು ಮಾಡಲಾಗಿದೆ.

ಈ ವಿಚಾರಕ್ಕೆ ಪೂರಕವಾಗಿ ಹದಿಮೂರು ಇಂದ್ರಿಯಗಳೆಂದು ಪ್ರತಿಪಾದನೆ ಮಾಡುವ ಸಾಮಾನ್ಯ ಶ್ರುತಿಯು ಹನ್ನೆರಡು ಇಂದ್ರಿಯಗಳೆಂದು ಪ್ರತಿಪಾದನೆ ಮಾಡುವ ವಿಶೇಷ ಶ್ರುತಿಗೆ ಅನುಸಾರಿಯಾಗಿ ಮುಖ್ಯಪ್ರಾಣನನ್ನು ವಿವಕ್ಷಿಸುವುದಿಲ್ಲವೋ ಅಥವಾ ವಿವಕ್ಷಿಸುತ್ತದೋ? ಎಂಬ ವಿಚಾರವನ್ನು ಮಾಡಲಾಗಿದೆ.

ಇದಕ್ಕೆ ಪೂರಕವಾಗಿ ಇಂದ್ರಿಯತ್ವ ಪ್ರಯೋಜಕವಾದ್ದರಿಂದ ಸಾಮಾನ್ಯ ಶ್ರುತಿಯಲ್ಲಿ ಹೇಳಲ್ಪಟ್ಟ 'ಇದಂ ದ್ರವಣಂ' ಎಂಬ ಪ್ರವೃತ್ತಿನಿಮಿತ್ತವು ಮುಖ್ಯಪ್ರಾಣನಲ್ಲಿ ಇದೆಯೋ, ಇಲ್ಲವೋ? ಎಂಬ ವಿಚಾರವನ್ನು ಮಾಡಲಾಗಿದೆ.

**''भेदश्रुतेः'' इति सूत्रे प्राणस्येन्द्रियान्तराद्भेदे श्रुतिरुक्ता । ''वैलक्षण्यात्'' इति सूत्रे तु प्रत्यक्षमिति भेदः । मनोपि सत्यतिप्रयत्ने पुमधीनप्रवृत्त्येव । नहि सुषुप्तौ पुंप्रयत्ना-भावेऽपि प्राणस्येव मनसः प्रवृत्तिरस्ति ।**

ಈ ಅಧಿಕರಣದಲ್ಲಿ 'ಭೇದಶ್ರುತೇಃ' ಎಂಬ ಸೂತ್ರದ ಅನಂತರ 'ವೈಲಕ್ಷಣ್ಯಾತ್' ಎಂಬ ಸೂತ್ರವಿದೆ. ಎರಡೂ ಕೂಡ ಒಂದೇ ವಿಷಯವನ್ನು ಹೇಳಲು ಹೊರಟಿರುವಂತೆ ಕಾಣಿಸುತ್ತದೆ. ಆದರೆ 'ಭೇದಶ್ರುತೇಃ' ಎಂಬ ಸೂತ್ರವು ಮುಖ್ಯಪ್ರಾಣನು ಇಂದ್ರಿಯಗಳಿಗಿಂತ ಭಿನ್ನನಾಗಿದ್ದಾನೆಂಬ ವಿಷಯದಲ್ಲಿ ಶ್ರುತಿಪ್ರಮಾಣವನ್ನು ಹೇಳಲು ಹೊರಟಿದೆ. 'ವೈಲಕ್ಷಣ್ಯಾತ್' ಎಂಬ ಸೂತ್ರವು ಮುಖ್ಯಪ್ರಾಣನು ಉಳಿದ ಇಂದ್ರಿಯಗಳಿಗಿಂತ ಭಿನ್ನನಾಗಿದ್ದಾನೆನ್ನಲು ಪ್ರತ್ಯಕ್ಷ ಪ್ರಮಾಣವನ್ನು ಹೇಳಲು ಹೊರಟಿದೆ. ಆದ್ದರಿಂದ ಸೂತ್ರಗಳಲ್ಲಿ ಭೇದವು ಯುಕ್ತವಾಗಿದೆ.

ಜೀವನ ಇಚ್ಛೆಯಂತೆ ಇಂದ್ರಿಯಗಳು ಕಾರ್ಯದಲ್ಲಿ ಪ್ರವೃತ್ತವಾಗುತ್ತವೆ. ಆದರೆ ಮುಖ್ಯಪ್ರಾಣನು ಜೀವನ ಇಚ್ಛೆಯ ಅಧೀನವಾಗಿ ಕಾರ್ಯಪ್ರವೃತ್ತನಾಗಲಾರ. ಆದ್ದರಿಂದ ಇಂದ್ರಿಯನೂ ಕೂಡ ಆಗಲು

ಸಾಧ್ಯವಿಲ್ಲ ಎಂದು ಹೇಳುವುದಾದರೆ ಮನಸ್ಸೂ ಕೂಡ ಜೀವನ ಇಚ್ಛೆಯಂತೆ ಪ್ರವೃತ್ತಿ ಮಾಡುತ್ತಿಲ್ಲ. ಮನಸ್ಸಿನ ಅಧೀನವಾಗಿಯೇ ನಾವು ಪ್ರವೃತ್ತಿ ಮಾಡುತ್ತಿದ್ದೇವೆ. ಆದ್ದರಿಂದ ಮುಖ್ಯಪ್ರಾಣನಂತೆ ಮನಸ್ಸೂ ಕೂಡ ಇಂದ್ರಿಯವಾಗುವುದು ಬೇಡ.

ಈ ಆಕ್ಷೇಪವು ತಪ್ಪು. ಏಕೆಂದರೆ ಅತಿಪ್ರಯತ್ನ ಮಾಡಿದಾಗ ಮನಸ್ಸಿನಲ್ಲಿ ಪುರುಷಾಧೀನ ಪ್ರವೃತ್ತಿ ಎಂಬುದು ಕಂಡಿದೆ. ಆದರೆ ಅತಿಪ್ರಯತ್ನ ಮಾಡಿದಾಗಲೂ ಮುಖ್ಯಪ್ರಾಣನಲ್ಲಿ ಜೀವಾಧೀನವಾದ ಪ್ರಯತ್ನವು ಕಾಣಿಸುತ್ತಿಲ್ಲ. ಸುಷುಪ್ತಿ ಅವಸ್ಥೆಯಲ್ಲಿ ಪುರುಷ ಪ್ರಯತ್ನವು ಯತ್ಕಿಂಚಿತ್ ಇಲ್ಲದಿದ್ದರೂ ಕೂಡ ಮುಖ್ಯಪ್ರಾಣನು ಪ್ರವೃತ್ತಿ ಮಾಡುತ್ತಿದ್ದಾನೆ. ಆದರೆ ಮನಸ್ಸಿಗೆ ಆ ಸಂದರ್ಭದಲ್ಲಿ ಪ್ರವೃತ್ತಿ ಇರುವುದಿಲ್ಲ. ಹಾಗಾಗಿ ಮನಸ್ಸು ಇಂದ್ರಿಯವಾಗುತ್ತದೆ, ಮುಖ್ಯಪ್ರಾಣನು ಇಂದ್ರಿಯನಾಗಲಾರ.

**परेषां भाष्ये तु प्रकृता वागादयः प्राणाः प्राणादिवन्मुख्यप्राणस्य वृत्तिभेदा इति प्राप्ते तत्वान्तराणि । एतस्माज्जायते प्राणो मनः सर्वेन्द्रियाणि चेत्यादौ भेदव्यपदेशादिति सिद्धान्त इत्युक्तम् ।**

ಶಾಂಕರಭಾಷ್ಯದಲ್ಲಿ 'ತ ಇಂದ್ರಿಯಾಣಿ' ಇತ್ಯಾದಿ ಸೂತ್ರಗಳಿಗೆ ಹೀಗೆ ವ್ಯಾಖ್ಯಾನ ಮಾಡಿದ್ದಾರೆ. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಇವುಗಳು ಹೇಗೆ ಮುಖ್ಯವಾಯುವಿನ ವಿಕಾರವಿಶೇಷಗಳಾಗಿವೆಯೋ ಆದರಂತೆ ವಾಕ್ ಮೊದಲಾದ ಇಂದ್ರಿಯಗಳೂ ಕೂಡ ಮುಖ್ಯವಾಯುವಿನ ವಿಕಾರ ವಿಶೇಷಗಳಾಗಿವೆ. ಈ ಪೂರ್ವಪಕ್ಷವನ್ನು ಪರಿಹಾರ ಮಾಡುವುದಕ್ಕಾಗಿ 'ತ ಇಂದ್ರಿಯಾಣಿ' ಇತ್ಯಾದಿ ಸೂತ್ರವು ಹೊರಟಿದೆ. 'ಏತಸ್ಮಾಜ್ಜಾಯತೇ ಪ್ರಾಣಃ ಮನಸ್ಸರ್ವೇಂದ್ರಿಯಾಣಿ ಚ' ಎಂಬುದಾಗಿ ಪ್ರಾಣನಿಗಿಂತ ಪ್ರತ್ಯೇಕವಾಗಿ ಇಂದ್ರಿಯಗಳಿಗೆ ಉತ್ಪತ್ತಿಯನ್ನು ಹೇಳಲಾಗಿದೆ. ಪ್ರಾಣ ಎಂಬ ಹೆಸರು ಸಮಾನವಾಗಿರುವುದರಿಂದ ವಾಗಾದಿ ಇಂದ್ರಿಯಗಳನ್ನು ಪ್ರಾಣನ ವಿಕಾರಗಳು ಎಂದು ತಿಳಿಯಬಾರದು.

ಇಂದ್ರಿಯಗಳಿಗಿಂತ ಭಿನ್ನವಾಗಿ ಪ್ರಾಣನನ್ನು ಉಲ್ಲೇಖ ಮಾಡಿರುವುದರಿಂದ ಪ್ರಾಣನನ್ನು ಇಂದ್ರಿಯ ಎಂದು ತಿಳಿಯಬಾರದು ಎಂಬುದನ್ನು ತಿಳಿಸಲು ಭೇದ ಎಂಬ ಶ್ರುತಿಯು ಹೊರಟಿದೆ. ಹೀಗೆ ಅಧಿಕರಣದ ಸಿದ್ಧಾಂತವನ್ನು ಮಾಡಿದ್ದಾರೆ.

**तत्र तत्वान्तरणीति प्रतिज्ञाध्याहारः । तद्व्यपदेशादित्यस्य भेदश्रुतेरित्यनेन पौनरुक्त्यम् । तच्छब्दस्याध्याहृततत्वान्तरपरतेति दोषा इति स्वमतमेव दूषितं भामतीकारेण ।**

ಈ ಅದ್ವೈತ ಮತವು ತಪ್ಪು. ಏಕೆಂದರೆ 'ತ ಇಂದ್ರಿಯಾಣಿ ತತ್ವಾಂತರಾಣಿ' ಎಂಬುದಾಗಿ ಪ್ರಥಮ ಸೂತ್ರದಲ್ಲಿ ಪ್ರಧಾನವಾಗಿರುವ 'ತತ್ವಾಂತರಾಣಿ' ಎಂಬ ವಿಷಯವನ್ನೇ ಅಧ್ಯಾಹಾರ ಮಾಡಿದ್ದಾರೆ. ಸೂತ್ರಕಾರರಿಗೆ ಇದು ಸಮ್ಮತವಲ್ಲ.

ಮತ್ತು 'ತದ್ವ್ಯಪದೇಶಾತ್' ಎಂಬ ಪ್ರಥಮ ಸೂತ್ರದಲ್ಲಿರುವ ಅಂಶಕ್ಕೂ 'ಭೇದಶ್ರುತೇಃ' ಎಂಬ ಸೂತ್ರಕ್ಕೂ ಅರ್ಥದಲ್ಲಿ ಯಾವುದೇ ವ್ಯತ್ಯಾಸವಿಲ್ಲ. ಆದ್ದರಿಂದ ಪುನರುಕ್ತಿ ದೋಷವು ಬರುತ್ತದೆ.

ಶಾಂಕರಭಾಷ್ಯದಲ್ಲಿರುವ ದೋಷವನ್ನು ನಾವು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಈ ಅಧ್ಯಾಹಾರ ಮಾಡಬೇಕಾದ ದೋಷವನ್ನು ಸ್ವತಃ ಭಾಮತಿಕಾರನೇ ಉಲ್ಲೇಖ ಮಾಡಿ ಶಾಂಕರಭಾಷ್ಯವನ್ನು ದೂಷಿಸಿದ್ದಾನೆ.

**कैश्चिच मुख्यप्राणोऽपीन्द्रियमिति प्राप्ते तद्वर्जमेकादशैवेन्द्रियाणीति सिद्धान्तितम् । तत्रेन्द्रियस्यैकादशत्वं प्रागेव निरस्तम् । अन्यत्त्वविरुद्धम् ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् त इन्द्रियाधिकरणं सम्पूर्णम् ।।११।।**

ರಾಮಾನುಜರು ಮುಖ್ಯಪ್ರಾಣನೂ ಕೂಡ ಇಂದ್ರಿಯನಾಗಬಹುದಲ್ಲವೇ? ಎಂದು ಪೂರ್ವಪಕ್ಷ ಮಾಡಿ ಮುಖ್ಯಪ್ರಾಣನನ್ನು ಬಿಟ್ಟು ಹನ್ನೊಂದು ಇಂದ್ರಿಯಗಳಷ್ಟೆ ಇರುತ್ತವೆ ಎಂದು ಸಿದ್ಧಾಂತ ಮಾಡಿದ್ದಾರೆ. ಈಗಾಗಲೇ ಹನ್ನೊಂದು ಇಂದ್ರಿಯಗಳು ಎಂಬುದನ್ನು ನಿರಾಕರಣೆ ಮಾಡಿದ್ದೇವೆ. ಉಳಿದ ವಿಚಾರದಲ್ಲಿ ನಮಗೇನೂ ವಿರೋಧವಿಲ್ಲ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ತ ಇಂದ್ರಿಯಾಧಿಕರಣವು ಸಂಪೂರ್ಣವಾಯಿತು

## ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**त इन्द्रियाणि ।। पूर्वोक्तमिति ।।** प्राणवतेत्यत्र ''न जीवापेक्षया मुख्यं कारयेत्परमेश्वर'' इति भाष्योक्तमित्यर्थः । पूर्वोत्तरपक्षटीकासूचिताश्चिन्ता आह – **अत्रेति ।।**

ಗ್ರಂಥದಲ್ಲಿ 'ಪೂರ್ವೋಕ್ತಂ' ಎಂದು ಹೇಳಿದ್ದಾರೆ. ಪ್ರಾಣವತಾ ಎಂಬ ಸೂತ್ರದ ಭಾಷ್ಯದಲ್ಲಿ 'ನ ಜೀವಾಪೇಕ್ಷಯಾ ಮುಖ್ಯಂ ಕಾರಯೇತ್ಪರಮೇಶ್ವರಃ' ತನ್ನ ಇಚ್ಛೆಗೆ ಅನುಗುಣವಾಗಿಯೇ ಕ್ರಿಯೆಗಳನ್ನು ಮುಖ್ಯಪ್ರಾಣನು ಮಾಡಿಸುತ್ತಾನೆ ಎಂಬುದಾಗಿ ಭಾಷ್ಯದಲ್ಲಿ ಹೇಳಿದ್ದಾರೆ. ಇದರ ಆಧಾರದಿಂದ ಈ ಅಧಿಕರಣದ ಪೂರ್ವಪಕ್ಷವು ಹೊರಟಿದೆ ಎಂಬರ್ಥವನ್ನು ತಿಳಿಯಬೇಕು. ಪೂರ್ವಪಕ್ಷ ಹಾಗೂ ಸಿದ್ಧಾಂತ ಪಕ್ಷಗಳ ಟೀಕೆಯಿಂದ ಸೂಚಿತವಾದ ಸಂಶಯ ಪರಂಪರೆಯನ್ನು ಅತ್ರ ಇತ್ಯಾದಿ ಗ್ರಂಥದಿಂದ ಉಪಪಾದನೆ ಮಾಡುತ್ತಿದ್ದಾರೆ.

**ಪ್ರಕಾಶಃ – इन्द्रियत्वश्रुतिरिति ।।** तदप्रामाण्यप्रामाण्ययोः सतोः ''तत्सामान्यात्'' इति न्यायेन समन्वितश्रुतिमात्राप्रामाण्यप्रामाण्ययोः प्रसक्तेरिति भावः । अन्यत्स्पष्टम् । वैलक्षण्यसूत्रे भाष्यटीकयोर्जीवाधीनप्रवृत्तित्वमिन्द्रियाणामुक्तम् । मनसस्तद्व्यनक्ति ।। **मनोऽपीति ।।**

'ಇಂದ್ರಿಯತ್ವ ಶ್ರುತಿಃ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಅಭಿಪ್ರಾಯ ಹೀಗಿದೆ – ಹನ್ನೆರಡು ಮಾತ್ರ ಇಂದ್ರಿಯಗಳೆಂದು ಹೇಳುವ ಶ್ರುತಿಯು ಅಪ್ರಮಾಣವಾದರೆ 'ತತ್ಸಾಮಾನ್ಯಾತ್' ಎಂಬ ನ್ಯಾಯದಂತೆ ಸಮನ್ವಯ ಮಾಡಲ್ಪಟ್ಟ ಸಕಲ ಶ್ರುತಿಗಳಿಗೂ ಅಪ್ರಾಮಾಣ್ಯವು ಪ್ರಾಪ್ತವಾಗುತ್ತದೆ. ಒಂದುವೇಳೆ ಹನ್ನೆರಡು ಮಾತ್ರ ಇಂದ್ರಿಯಗಳು ಎಂದು ಹೇಳುವ ಶ್ರುತಿಗೆ ಪ್ರಾಮಾಣ್ಯವು ಪ್ರಾಪ್ತವಾದರೆ ಇದೇ 'ತತ್ಸಾಮಾನ್ಯಾತ್' ಎಂಬ ನ್ಯಾಯದಿಂದ ಸಮನ್ವಯ ಮಾಡಲ್ಪಟ್ಟ ಸಕಲ ಶ್ರುತಿಗಳಿಗೆ ಪ್ರಾಮಾಣ್ಯವು ಪ್ರಾಪ್ತವಾಗುತ್ತದೆ ಎಂದು. ಉಳಿದ ಸಂಶಯಗಳ ವಿಚಾರವು ಸ್ಪಷ್ಟವಾಗಿರುವುದರಿಂದ ವ್ಯಾಖ್ಯಾನ ಮಾಡುವ ಅವಶ್ಯಕತೆ ಇರುವುದಿಲ್ಲ.

'ವೈಲಕ್ಷಣ್ಯಾಚ್ಚ' ಎಂಬ ಸೂತ್ರದಲ್ಲಿ ಇಂದ್ರಿಯಗಳಿಗೆ ಜೀವಾಧೀನವಾದ ಪ್ರವೃತ್ತಿಯನ್ನು ಭಾಷ್ಯ ಹಾಗೂ ಟೀಕೆಗಳಲ್ಲಿ ಹೇಳಿದ್ದಾರೆ. ಮನಸ್ಸಿಗೂ ಕೂಡ ಜೀವಾಧೀನವಾದ ಈ ಪ್ರವೃತ್ತಿಯನ್ನು ವಿವಕ್ಷಿಸಬೇಕೆಂದು ಗ್ರಂಥಕಾರರು 'ಮನೋಽಪಿ' ಎಂಬ ವಾಕ್ಯದಿಂದ ಪ್ರತಿಪಾದನೆ ಮಾಡುತ್ತಿದ್ದಾರೆ.

**ಪ್ರಕಾಶಃ – प्राणादिवदिति ।।** यथा प्राणापानादयो मुख्यप्राणवृत्तिभेदा एवं वागादिप्राणा अपि । न तत्वान्तराणीति प्राप्त इत्यर्थः । अन्यत्र श्रेष्ठात् श्रेष्ठं वर्जयित्वा । ते प्रकृतप्राणरूपवागादीन्द्रियाणि तत्वान्तराणि । कुतः । तद्व्यपदेशात् तेषां प्राणानां श्रेष्ठाद्भेदव्यपदेशादिति योजनं हृदि कृत्वाऽनुवदति ।। **एतस्मादिति ।।**

ಹೇಗೆ ಪ್ರಾಣ, ಅಪಾನಾದಿಗಳು ಮುಖ್ಯಪ್ರಾಣನ ವಿಕಾರವಿಶೇಷಗಳಾಗಿವೆಯೋ ಅದರಂತೆ ವಾಗಾದಿ ಇಂದ್ರಿಯಗಳೂ ಕೂಡ ಮುಖ್ಯಪ್ರಾಣನ ವಿಕಾರ ವಿಶೇಷಗಳಾಗಿವೆ ಹೊರತು ಪ್ರತ್ಯೇಕ ತತ್ವಗಳಲ್ಲ ಎಂಬ ಪೂರ್ವಪಕ್ಷವನ್ನು 'ಪ್ರಾಣಾದಿವತ್' ಎಂಬುದರಿಂದ ಸೂಚನೆ ಮಾಡಿದ್ದಾರೆ. 'ಅನ್ಯತ್ರ ಶ್ರೇಷ್ಠಾತ್' ಎಂಬ ಪದಕ್ಕೆ ಮುಖ್ಯವಾಯುವನ್ನು ಬಿಟ್ಟು ಎಂದರ್ಥ. 'ತೇ' ಎಂಬ ಪದಕ್ಕೆ ಪ್ರಕೃತವಾದ ಎಂದರ್ಥ. 'ಇಂದ್ರಿಯಾಣಿ' ಎಂದರೆ ವಾಕ್ ಮೊದಲಾದ ಇಂದ್ರಿಯಗಳು ಪ್ರತ್ಯೇಕ ತತ್ವಗಳಾಗಿವೆ ಎಂದರ್ಥ. ಏಕೆಂದರೆ ತದ್ವ್ಯಪದೇಶಾತ್=

ಆ ಇಂದ್ರಿಯಗಳಿಗೆ ಪ್ರಾಣನಿಗಿಂತ ಭೇದವ್ಯಪದೇಶವನ್ನು 'ಏತಸ್ಮಾಜ್ಜಾಯತೇ' ಎಂಬ ಶ್ರುತಿಯಲ್ಲಿ ಮಾಡಿರುವುದರಿಂದ. ಹೀಗೆ ಸೂತ್ರದ ಯೋಜನಾಕ್ರಮವನ್ನು ಮನಸ್ಸಿನಲ್ಲಿಟ್ಟುಕೊಂಡು 'ಏತಸ್ಮಾಜ್ಜಾಯತೇ' ಇತ್ಯಾದಿ ವಾಕ್ಯದಿಂದ ಅವರ ಮತವನ್ನು ಅನುವಾದ ಮಾಡುತ್ತಿದ್ದಾರೆ.

**प्रकाशः** – स्वमतमेव दूषितं भामतीकारेणेति ।। भामत्यां हि यथाश्रुतभाष्यं व्याख्याय ''अन्ये तु भेदशब्दाध्याहारभिया भेदश्रुतेश्चेति पौनरुक्तयभिया तच्छब्दस्यानन्तरोक्तपरामर्शकत्वादन्यथा वर्णयांचक्रुः'' इत्यादिना स्वभाष्योक्तं स्वमतमेव स्वयं दोषत्रयेण दूषयित्वाऽन्यथा वक्ष्यमाणदिशाऽधिकरणशरीरं वर्णितवानिति स्वमतमेव दूषितमित्यर्थः । दोषत्रयसमर्थनं च कल्पतरावेव व्यक्तम्। भाष्यभामतीवाक्ये भेदशब्दस्य तत्वान्तररूपार्थकत्वस्य कल्पतरावुक्तेः ''तत्वान्तराणीति प्रतिज्ञाध्याहार'' इत्याद्यनुवादः कृतः ।।

'ಸ್ವಮತಮೇವ ದೂಷಿತಂ ಭಾಮತಿಕಾರೇಣ' ಎಂಬುದಾಗಿ ತಮ್ಮ ಮತವನ್ನೇ ಭಾಮತಿಕಾರನು ದೂಷಣೆ ಮಾಡಿದ್ದಾನೆ ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಅದು ಹೀಗೆ – ಭಾಮತಿಕಾರನು ಮೊದಲು ಶಂಕರಭಾಷ್ಯದಿಂದ ಯಥಾಶ್ರುತವಾದ ಅರ್ಥವನ್ನು ವ್ಯಾಖ್ಯಾನ ಮಾಡಿದನು. ಅನಂತರ 'ಅನ್ಯೇ ತು ಭೇದಶಬ್ದಾಧ್ಯಾಹಾರಭಿಯಾ ಭೇದಶ್ರುತೇಶ್ಚೇತಿ ಪೌನರುಕ್ತಿಭಿಯಾ ತಚ್ಛಬ್ದಸ್ಯಾನಂತರೋಕ್ತಪರಾಮರ್ಶಕತ್ವಾದನ್ಯಥಾ ವರ್ಣಯಾಂಚಕ್ರುಃ' ಕೆಲವರು ಭೇದ ಶಬ್ದದ ಅಧ್ಯಾಹಾರ ಭಯದಿಂದ ಮತ್ತು 'ಭೇದಶ್ರುತೇಶ್ಚ' ಎಂಬುದರ ಜೊತೆ ಪುನರುಕ್ತಿಯ ಭಯದಿಂದ ತಚ್ಛಬ್ದಕ್ಕೆ ಅನಂತರ ಹೇಳಲ್ಪಟ್ಟದ್ದನ್ನು ಪರಾಮರ್ಶೆ ಮಾಡುತ್ತಿರುವುದರಿಂದ ಬೇರೆ ರೀತಿಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಹೀಗೆ ಸ್ವಭಾಷ್ಯೋಕ್ತವಾದ ಸ್ವಮತವನ್ನು ಸ್ವತಃ ತಾನೇ ದೋಷತ್ರಯದಿಂದ ದೂಷಣೆ ಮಾಡಿದ್ದಾನೆ. ಅನಂತರ ಹೀಗೆ ದೂಷಿಸಿ ಮುಂದೆ ಹೇಳುವಂತೆ ಅಧಿಕರಣ ಶರೀರವನ್ನು ಭಾಮತಿಕಾರನು ವರ್ಣಿಸಿ ಸ್ವಮತವನ್ನೇ ದೂಷಣೆ ಮಾಡಿದ್ದಾನೆ ಎಂದರ್ಥ. ಆ ದೋಷತ್ರಯವನ್ನು ಕಲ್ಪತರುಕಾರ ಸ್ಪಷ್ಟಪಡಿಸಿದ್ದಾನೆ.

ಭಾಷ್ಯದ ವ್ಯಾಖ್ಯಾನ ರೂಪವಾದ ಭಾಮತಿ ವಾಕ್ಯದಲ್ಲಿ ಭೇದ ಶಬ್ದಕ್ಕೆ ತತ್ತ್ವಾಂತರ ಎಂಬರ್ಥವನ್ನು ವಿವಕ್ಷಿಸಿದ್ದು ಕಲ್ಪತರುವಿನಲ್ಲಿ ಹೇಳಲಾಗಿದೆ. ಆದ್ದರಿಂದ 'ತತ್ತ್ವಾಂತರಾಣೀತಿ ಪ್ರತಿಜ್ಞಾ ಅಧ್ಯಾಹಾರಃ' ಎಂಬುದನ್ನು ಗ್ರಂಥಕಾರರು ಇಲ್ಲಿ ಅನುವಾದ ಮಾಡಿದ್ದಾರೆ.

**प्रकाशः** – **तद्वर्जमिति** ।। मुख्यप्राणवर्जमित्यर्थः ।। **प्रागेवेति** ।। सप्तगतेरित्यत्रेत्यर्थः। एतेन भामत्यभिमतवर्णकमपि प्रत्युक्तं ध्येयम् ।। **अन्यत्त्विति**।। भेदश्रुतेर्वैलक्षण्याच्चेत यनयोरेकयोगकरणं त्वसांप्रदायिकमित्युपेक्षणीयमिति भावः ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते**

**चन्द्रिकाप्रकाशे त इन्द्रियाधिकरणं सम्पूर्णम् ।।११।।**

ತ ಇಂದ್ರಿಯಾಧಿಕರಣ (೨-೪-೧೧)

ರಾಮಾನುಜಮತವನ್ನು ಅನುವಾದ ಮಾಡುವಾಗ ಗ್ರಂಥದಲ್ಲಿ 'ತದ್ವರ್ಜಂ' ಎಂದಿದ್ದಾರೆ. ಮುಖ್ಯಪ್ರಾಣನನ್ನು ಬಿಟ್ಟು ಎಂದು ಇದರ ಅರ್ಥ. 'ಪ್ರಾಗೇವ' ಎಂದರೆ ಸಪ್ತಗತೇಃ ಎಂಬ ಸೂತ್ರದಲ್ಲಿ ಎಂದರ್ಥ. ಹೀಗೆ ಹೇಳಿದ್ದರಿಂದ ಭಾಮತಿಕಾರನ ವ್ಯಾಖ್ಯಾನವನ್ನು ನಿರಾಕರಣೆ ಮಾಡಿದಂತಾಯಿತು. ಏಕೆಂದರೆ ಭಾಮತಿಕಾರನೂ ಕೂಡ ಹನ್ನೊಂದೇ ಇಂದ್ರಿಯಗಳೆಂದು ಸಮರ್ಥನೆ ಮಾಡಿದ್ದಾನೆ.

'ಅನ್ಯತ್ತು ಅವಿರುದ್ಧಂ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ರಾಮಾನುಜರು 'ಭೇದಶ್ರುತೇರ್ವೈಲಕ್ಷಣ್ಯಾಚ್ಚ' ಎಂಬುದಾಗಿ ಎರಡು ಸೂತ್ರಗಳನ್ನು ಒಂದೇ ಸೂತ್ರವನ್ನಾಗಿ ಪರಿಗಣನೆ ಮಾಡಿದ್ದಾರೆ. ಇದು ಅಸಾಂಪ್ರದಾಯಿಕವಾದುದರಿಂದ ಅತ್ಯಂತ ಉಪೇಕ್ಷಾರ್ಹವಾಗಿದೆ ಎಂದು ವಿವಕ್ಷಿಸಿ ಉಳಿದದ್ದು ವಿರುದ್ಧವಲ್ಲ ಎಂದು ತಿಳಿಯಬೇಕು.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ತ ಇಂದ್ರಿಯಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

ಪರಿಪೂರ್ಣಚಂದ್ರಿಕಾ

# ಸಂಜ್ಞಾಕ್ಲೃಪ್ತ್ಯಧಿಕರಣ

(೨-೪-೧೨)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

***

॥ ಶ್ರೀಗುರುಭ್ಯೋ ನಮಃ ॥

# ಸಂಜ್ಞಾಮೂರ್ತಿಕ್ಲೃಪ್ತ್ಯಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् – सञ्ज्ञामूर्तिक्लृप्तिस्तु त्रिवृत्कुर्वत उपदेशात् ।।**

ನಾಮರೂಪಾತ್ಮಕವಾದ ದೇಹೇಂದ್ರಿಯಾದಿಗಳೆಂಬ ಪ್ರಪಂಚದ ಸೃಷ್ಟಿಯು ಪೃಥಿವೀ, ಅಪ್, ತೇಜಸ್ಸು ಇವುಗಳ ಮಿಶ್ರಣವನ್ನು ಮಾಡುವ ಪರಮಾತ್ಮನಿಂದಲೇ ಉತ್ಪನ್ನವಾಗುತ್ತದೆ. ಚತುರ್ಮುಖಬ್ರಹ್ಮನಿಂದ ಉತ್ಪನ್ನವಾಗುವುದಿಲ್ಲ. ಏಕೆಂದರೆ 'ಸರ್ವಾಣಿ ರೂಪಾಣಿ ವಿಚಿತ್ಯ ಧೀರಃ' ಎಂಬ ಶ್ರುತಿಯು ಪರಮಾತ್ಮನಿಂದಲೇ ಎಲ್ಲದರ ಸೃಷ್ಟಿಯೆಂದು ಸಾರುತ್ತಿದೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** – तुशब्दोऽवधारणे । **सञ्ज्ञामूर्तिक्लृप्तिर्**नामरूपात्मकदेहेन्द्रियप्रपञ्चोत्पत्तिः । **त्रिवृत्कुर्वतः** पृथिव्यप्तेजसां मिश्रीभावं कुर्वतः परमात्मनः सकाशादेव भवति । न विरिञ्चात्। कुतः? उपदेशात् 'सर्वाणि रूपाणि विचित्य धीरः' इति श्रुतेरित्यर्थः ।।१।।

'ತು'ಶಬ್ದವು ಅವಧಾರಣಾರ್ಥದಲ್ಲಿ ಪ್ರಯುಕ್ತವಾಗಿದೆ. ಸಂಜ್ಞಾಮೂರ್ತಿಕ್ಲೃಪ್ತಿಃ = ನಾಮರೂಪಾತ್ಮಕವಾದ ದೇಹೇಂದ್ರಿಯಾದಿಗಳೆಂಬ ಪ್ರಪಂಚದ ಸೃಷ್ಟಿಯು, ತಿವೃತ್‌ಕುರ್ವತಃ = ಪೃಥಿವೀ, ಅಪ್, ತೇಜಸ್ಸು ಇವುಗಳ ಮಿಶ್ರಣವನ್ನು ಮಾಡುವ ಪರಮಾತ್ಮನ ದೆಸೆಯಿಂದಲೇ ಹುಟ್ಟುತ್ತದೆ ಹೊರತು, ಚತುರ್ಮುಖಬ್ರಹ್ಮನಿಂದ ಹುಟ್ಟುವುದಿಲ್ಲ. ಏಕೆಂದರೆ ಉಪದೇಶಾತ್ = ಸರ್ವಾಣಿ ರೂಪಾಣಿ ವಿಚಿತ್ಯ ಧೀರಃ' ಎಂಬುದಾಗಿ ತೈತ್ತಿರೀಯ ಅರಣ್ಯಕವು ಹಾಗೇ ಸಾರುತ್ತಿದೆ.

ಇಲ್ಲಿಗೆ ಸೂತ್ರದೀಪಿಕೆಯಲ್ಲಿ ಸಂಜ್ಞಾಕ್ಲೃಪ್ತ್ಯಧಿಕರಣವು ಮುಗಿಯಿತು.
ಪರಿಪೂರ್ಣಚಂದ್ರಿಕಾ

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – 'विरिञ्चो वा इदं सर्वं विरेचयति विदधाति ब्रह्मा वाव विरिञ्च एतस्माद्धीमे रूपनामनी' इति गौपवनश्रुतिः ।**

ಅನುವಾದ - ಚತುರ್ಮುಖಬ್ರಹ್ಮನೇ ಈ ಜಗತ್ತನ್ನು ಸೃಷ್ಟಿ ಮಾಡುತ್ತಾನೆ ಎಂದು ಗೌಪವನಶ್ರುತಿಯು ಹೇಳುತ್ತಿದೆ. ಇವನಿಂದಲೇ ನಾಮ ಹಾಗೂ ರೂಪಾತ್ಮಕವಾದ ವಿಶ್ವವು ಹುಟ್ಟುತ್ತದೆ ಎಂದು.

ಪ್ರತಿಪದಾರ್ಥ -- ವಿರಿಂಚೋ ವಾ = ಚತುರ್ಮುಖನೇ, ಇದಂ = ಈ ಪ್ರಪಂಚವನ್ನು, ವಿದಧಾತಿ = ಸೃಷ್ಟಿ ಮಾಡುತ್ತಾನೆ. ಬ್ರಹ್ಮಾ ವಾವ = ಚತುರ್ಮುಖಬ್ರಹ್ಮನೇ, ವಿರಿಂಚಃ = ವಿರಿಂಚಿ ಎಂದು ಕರೆಸಿಕೊಳ್ಳುತ್ತಾನೆ. ಏತಸ್ಮಾದ್ಧಿ = ಇವನಿಂದಲೇ, ಇಮೇ = ಈ, ರೂಪನಾಮಾನೀ = ರೂಪ ಹಾಗೂ ನಾಮಾತ್ಮಕವಾದ ವಿಶ್ವವು ಹುಟ್ಟುತ್ತದೆ. ಇತಿ = ಹೀಗೆ, ಗೌಪವನಶ್ರುತಿಃ = ಗೌಪವನಶ್ರುತಿಯು ಹೇಳುತ್ತಿದೆ.

**भाष्यम् –**

**'यस्माद् विरेचयेत् सर्वं विरिञ्चस्तेन भण्यते ।**
**एको हि कर्ता जगतो ब्रह्मैव तु चतुर्मुखः ॥' इति च युक्तिर्ब्राह्मे ।**

**'अथ कस्मादुच्यते परम इति परमाद्ध्येते नामरूपे व्याक्रियेते तस्मादेनमाहुः परम इति । अथ कस्मादुच्यते ब्रह्मेति बृहत्त्वाद्बृंहितत्वाच' इत्याग्निवेश्यश्रुतिः ।**

ಅನುವಾದ - ಯಾವ ಕಾರಣದಿಂದ ಎಲ್ಲವನ್ನು ಹುಟ್ಟಿಸುತ್ತಾನೋ ಆದ್ದರಿಂದಲೇ ವಿರಿಂಚಿ ಎಂದು ಕರೆಸಿಕೊಳ್ಳುತ್ತಾನೆ. ಈ ಜಗತ್ತಿಗೆ ಕರ್ತೃವಾಗಿರುವವನು ಒಬ್ಬನು ಮಾತ್ರ ಅವನು ಮಾತ್ರ ಚತುರ್ಮುಖನು. ಹೀಗೆ ಯುಕ್ತಿಸಹಿತವಾಗಿ ಶ್ರುತಿಯು ಬ್ರಹ್ಮನಿಗೆ ಜಗತ್‌ಸೃಷ್ಟಿಕರ್ತೃತ್ವವನ್ನು ವಿಧಾನ ಮಾಡುತ್ತಿದೆ.

ಆದರೆ ಮತ್ತೊಂದು ಶ್ರುತಿಯು ವಿಷ್ಣುವಿಗೆ ಜಗತ್‌ಕರ್ತೃತ್ವವನ್ನು ಹೇಳುತ್ತಿದೆ. ಶ್ರೀಹರಿಯು ಪರಮ ಎಂದು ಕರೆಸಿಕೊಳ್ಳುತ್ತಾನೆ, ಏಕೆಂದರೆ ಅವನಿಂದಲೇ ಈ ನಾಮರೂಪಾತ್ಮಕವಾದ ಜಗತ್ತು ಸೃಷ್ಟಿ ಮಾಡಲ್ಪಟ್ಟಿದೆ. ಆದ್ದರಿಂದ ಈ ವಿಷ್ಣುವನ್ನು 'ಸರ್ವೋತ್ತಮ' ಎಂದು ಜ್ಞಾನಿಗಳು ಹೇಳುತ್ತಾರೆ. ಯಾವ ಕಾರಣಕ್ಕಾಗಿ ಬ್ರಹ್ಮನೆಂದು ಕರೆಸಿಕೊಳ್ಳುತ್ತಾನೆಂದರೆ ಸಕಲಗುಣ ಪರಿಪೂರ್ಣನಾದ್ದರಿಂದ. ಹೀಗೆ ಅಗ್ನಿವೇಶ್ಯಶ್ರುತಿಯು ಹೇಳುತ್ತಿದೆ.

ಪ್ರತಿಪದಾರ್ಥ -- ಯಸ್ಮಾತ್ = ಯಾವ ಕಾರಣದಿಂದ, ಸರ್ವಂ = ಸಮಸ್ತ ಈ ಜಗತ್ತನ್ನು, ವಿರೇಚಯೇತ್ = ಸೃಷ್ಟಿ ಮಾಡುತ್ತಾನೋ, ತೇನ = ಆ ಕಾರಣದಿಂದ, ವಿರಿಂಚಃ = ವಿರಿಂಚ ಎಂದು, ಭಣ್ಯತೇ = ಕರೆಸಿಕೊಳ್ಳುತ್ತಾನೆ. ಹಿ = ಏಕೆಂದರೆ, ಜಗತಃ = ಜಗತ್ತಿಗೆ, ಚತುರ್ಮುಖಃ = ನಾಲ್ಮೊಗನಾದ, ಬ್ರಹ್ಮೈವ ಏಕಃ = ಒಬ್ಬನೇ ಬ್ರಹ್ಮನು, ಕರ್ತಾ = ಕರ್ತನು, ಇತಿ = ಹೀಗೆ, ಯುಕ್ತಿಃ = ಯುಕ್ತಿಯು, ಬ್ರಾಹ್ಮೇ = ಬ್ರಹ್ಮವಚನದಲ್ಲಿ ಹೇಳಲಾಗಿದೆ.

ಅಥ = ಅನಂತರ, ಕಸ್ಮಾತ್ = ಯಾವ ಕಾರಣದಿಂದ, ಪರಮಃ ಇತಿ = ಪರಮನೆಂದು ಉಚ್ಯತೇ = ಕರೆಸಿಕೊಳ್ಳುತ್ತಾನೋ, ಹಿ = ಏಕೆಂದರೆ, ಪರಮಾತ್ = ವಿಷ್ಣುವಿನಿಂದಲೇ, ಏತೇ = ಈ, ನಾಮರೂಪೇ = ನಾಮ ಹಾಗೂ ರೂಪಾತ್ಮಕವಾದ ಪ್ರಪಂಚವು, ವ್ಯಾಕ್ರಿಯೇತೇ = ಸೃಷ್ಟಿ ಮಾಡಲ್ಪಡುತ್ತದೆ, ತಸ್ಮಾತ್ = ಆ ಕಾರಣದಿಂದ, ಏನಂ = ಈ ವಿಷ್ಣುವನ್ನು, ಪರಮಃ ಇತಿ = ಸರ್ವೋತ್ತಮನೆಂದು, ಆಹುಃ = ಜ್ಞಾನಿಗಳು ಹೇಳುತ್ತಾರೆ. ಕಸ್ಮಾತ್ = ಯಾವ ಕಾರಣಕ್ಕಾಗಿ, ಬ್ರಹ್ಮೇತಿ = ಬ್ರಹ್ಮನೆಂದು, ಉಚ್ಯತೇ = ಕರೆಸಿಕೊಳ್ಳುತ್ತಾನೆ ಎಂದರೆ, ಬೃಹತ್ವಾತ್ = ಎಲ್ಲೆಡೆ ವ್ಯಾಪ್ತನಾದ್ದರಿಂದ, ಬೃಹಿತತ್ವಾಚ್ಚ = ಗುಣಪೂರ್ಣನಾದ್ದರಿಂದ, ಇತಿ = ಹೀಗೆ, ಅಗ್ನಿವೇಶ್ಯಶ್ರುತಿಃ = ಅಗ್ನಿವೇಶ್ಯಶ್ರುತಿಯು ಹೇಳುತ್ತಿದೆ.

भाष्यम् — अत आह —

**।। सञ्ज्ञामूर्तिक्लृप्तिस्तु त्रिवृत्कुर्वत उपदेशात् ।।१।।**

**नामरूपक्लृप्तिः परादेव । 'सर्वाणि रूपाणि विचित्य धीरो नामानि कृत्वाऽभिवदन्य आस्ते' (तै.आ. ३.१२.) इति श्रुतेः ।**

ಅನುವಾದ - ಈ ಆಕ್ಷೇಪಕ್ಕೆ ಸೂತ್ರಕಾರರು ಉತ್ತರಿಸುತ್ತಿದ್ದಾರೆ -

ನಾಮ ಹಾಗೂ ರೂಪಾತ್ಮಕವಾದ ಸೃಷ್ಟಿಯು ಪರಮಾತ್ಮನಿಂದಲೇ ನಡೆಯಬೇಕು. ಚತುರ್ಮುಖನಿಂದಲ್ಲ. ಏಕೆಂದರೆ ಯಾವ ಜ್ಞಾನಿಯಾದ ಪುರುಷನು ಎಲ್ಲಾ ಪ್ರಪಂಚವನ್ನು ಸೃಷ್ಟಿ ಮಾಡಿ ಅವುಗಳಿಗೆ ಹೆಸರನ್ನಿಟ್ಟು ಅವುಗಳನ್ನು ಆಯಾ ಹೆಸರಿನಿಂದ ಕರೆಯುತ್ತಾನೋ ಅಂಥವನನ್ನು ತಿಳಿದರೆ ಮೋಕ್ಷವು ದೊರೆಯುತ್ತದೆ. ಹೀಗೆ ಶ್ರುತಿಯು ಹೇಳುತ್ತಿದೆ.

ಪ್ರತಿಪದಾರ್ಥ -- ಅತಃ = ಮೇಲಿನ ಆಕ್ಷೇಪಕ್ಕೆ, ಆಹ = ಸೂತ್ರಕಾರರು ಉತ್ತರಿಸುತ್ತಿದ್ದಾರೆ-

ನಾಮರೂಪಕ್ಲೃಪ್ತಿಃ = ನಾಮ ಮತ್ತು ರೂಪ ಪ್ರಪಂಚದ ಸೃಷ್ಟಿಯು, ಪರಾದೇವ = ಪರಮಾತ್ಮನಿಂದಲೇ ಆಗಿದೆ. ಏಕೆಂದರೆ ಸರ್ವಾಣಿ = ಸಮಸ್ತವಾದ, ರೂಪಾಣಿ = ವಸ್ತುಗಳು ವಿಚಿತ್ಯ = ಸೃಷ್ಟಿಸಿ, ಧೀರಃ = ಜ್ಞಾನಿಯಾದ ಪುರುಷನು, ನಾಮಾನಿ = ಅವುಗಳಿಗೆ ಹೆಸರನ್ನು, ಅಭಿವದನ್ = ಇಟ್ಟು, ಆಸ್ತೇ = ಇರುವನೋ, ಇತಿ = ಹೀಗೆ, ಶ್ರುತೇಃ = ಪುರುಷಸೂಕ್ತವು ಹೇಳುತ್ತಿದೆ.

भाष्यम् —

**त्रिवृत्कुर्वत इति हेतुगर्भः । त्रिवृत्करणापेक्षत्वान्नामरूपयोः ।।**

**'सर्वनाम्नां च रूपाणां व्यवहारेषु केशवः ।**

**एक एव यतः स्रष्टा ब्रह्माद्यास्तदवान्तराः ।।' इति च पाद्मे ।**
**त्रिवृत्क्रिया यतो विष्णो रूपं च तदपेक्षया ।**
**रूपापेक्षं तथा नाम व्यवहारस्तदात्मकः ।।**
**अतो नाम्नश्च रूपस्य व्यवहारस्य चैकराट् ।**
**हरिरेव यतः कर्ता पिताऽतो भगवान् प्रभुः ।।' इति च ब्रह्माण्डे ।।१।।**

**।। इति श्रीमदानन्दतीर्थभगवत्पादाचार्यविरचिते**
**ब्रह्मसूत्रभाष्ये सञ्ज्ञामूर्त्यधिकरणम् ।। १२ ।।**

ಅನುವಾದ - 'ತ್ರಿವೃತ್ಕುರ್ವತಃ' ಎಂದು ಸೂತ್ರದಲ್ಲಿ ಹೇಳಿರುವ ವಿಶೇಷಣವು ಪರಮಾತ್ಮನೇ ಸೃಷ್ಟಿಕರ್ತಾ ಎಂಬ ಹೇತುವಿನಿಂದ ಗರ್ಭಿತವಾಗಿದೆ. ಏಕೆಂದರೆ ನಾಮರೂಪಗಳನ್ನು ಸೃಷ್ಟಿ ಮಾಡಬೇಕಾದರೆ ತ್ರಿವೃತ್ಕರಣವನ್ನು ಮಾಡಲೇಬೇಕು.

ವಾಗ್‌ವ್ಯವಹಾರದಲ್ಲಿ ಬ್ರಹ್ಮ, ರುದ್ರ ಮೊದಲಾದ ಹೆಸರುಗಳ ಮತ್ತು ವ್ಯಕ್ತಿಗಳ ಸೃಷ್ಟಿಕರ್ತನು ಒಬ್ಬನೇ ಆಗಿರುತ್ತಾನೆ. ಆದ್ದರಿಂದ ಬ್ರಹ್ಮಾದಿದೇವತೆಗಳು ಸೃಷ್ಟ್ಯಾದಿ ಕ್ರಿಯೆಯಲ್ಲಿ ಅಮುಖ್ಯರು ಎಂದು ಪಾದ್ಮಪುರಾಣವು ಹೇಳುತ್ತಿದೆ.

ಯಾವ ಕಾರಣದಿಂದ ತ್ರಿವೃತ್ಕರಣವು ವಿಷ್ಣುವಿನಿಂದಲೇ ಉಂಟಾಗುತ್ತದೋ ರೂಪಾತ್ಮಕವು ತ್ರಿವೃತ್ಕರಣದ ಅಪೇಕ್ಷೆಯನ್ನು ಹೊಂದುತ್ತದೆಯೋ ಮತ್ತು ಹೆಸರೂ ಕೂಡ ರೂಪಪ್ರಪಂಚದ ಅಪೇಕ್ಷಿಸಿದೆಯೋ, ಆ ಕಾರಣದಿಂದ ನಾಮಪ್ರಪಂಚಕ್ಕೆ ಮತ್ತು ರೂಪಪ್ರಪಂಚಕ್ಕೆ ವ್ಯವಹಾರಪ್ರಪಂಚಕ್ಕೆ ಸ್ವತಂತ್ರಕರ್ತೃ ಶ್ರೀಹರಿ ಮಾತ್ರ. ಆದ್ದರಿಂದಲೇ ಅವನು ತಂದೆಯು ಮಾತ್ರವಲ್ಲ ಸ್ವಾಮಿಯು ಆಗಿರುತ್ತಾನೆ.

ಪ್ರತಿಪದಾರ್ಥ -- ತ್ರಿವೃತ್ಕುರ್ವತಃ ಇತಿ = ಸೂತ್ರದಲ್ಲಿ 'ತ್ರಿವೃತ್ಕುರ್ವತಃ' ಎಂದು ವಿಶೇಷಣ ಕೊಟ್ಟಿರುವುದು, ಹೇತುಗರ್ಭಃ = ಹೇತುವಿನಿಂದ ಗರ್ಭಿತವಾಗಿದೆ. ಏಕೆಂದರೆ ನಾಮರೂಪಯೋಃ = ನಾಮ ಹಾಗೂ ರೂಪಾತ್ಮಕವಾದ ಪ್ರಪಂಚವು, ತ್ರಿವೃತ್ಕರಣಾಪೇಕ್ಷತ್ವಾತ್ = ತ್ರಿವೃತ್ಕರಣವನ್ನು ಅಪೇಕ್ಷೆಪಟ್ಟಿದೆ.

ವ್ಯವಹಾರೇಷು = ವ್ಯವಹಾರದಲ್ಲಿ, ಸರ್ವನಾಮ್ನಾಂ = ಬ್ರಹ್ಮರುದ್ರಾದಿ ಸಕಲರ ಹೆಸರುಗಳ, ರೂಪಾಣಾಂ = ರೂಪಗಳ, ಸ್ರಷ್ಟಾ = ಸೃಷ್ಟಿ ಮಾಡುವವನು. ಏಕಃ ಏವ = ಒಬ್ಬನೇ ಶ್ರೀಹರಿಯು, ಯತಃ = ಯಾವ ಕಾರಣದಿಂದ, ಏಕಏವ = ಒಬ್ಬನೇ ಆಗಿರುವನೋ, ತತ್ = ಆದ್ದರಿಂದ, ಬ್ರಹ್ಮಾದ್ಯಾಃ = ಬ್ರಹ್ಮಾದಿದೇವತೆಗಳು, ಅವಾಂತರಾಃ = ಸೃಷ್ಟ್ಯಾದಿಗಳಲ್ಲಿ ಅವಾಂತರಕಾರಣರಾಗಿರುತ್ತಾರೆ.

ಯತಃ = ಯಾವ ಕಾರಣದಿಂದ, ತ್ರಿವೃತ್‌ಕ್ರಿಯಾ = ತ್ರಿವೃತ್ಕರಣವು, ವಿಷ್ಣೋಃ = ವಿಷ್ಣುವಿನಿಂದ ನಡೆಯುತ್ತದೋ, ರೂಪಂ = ರೂಪಾತ್ಮವಾದ ಪ್ರಪಂಚವು, ತದಪೇಕ್ಷಯಾ = ತ್ರಿವೃತ್ಕರಣಾಪೇಕ್ಷಯಾಗಿದೆಯೋ, ತಥಾ = ಹಾಗೆ, ನಾಮ ಚ = ಹೆಸರೂ ಕೂಡ, ರೂಪಾಪೇಕ್ಷಂ = ರೂಪಪ್ರಪಂಚವನ್ನು ಅಪೇಕ್ಷಿಸಿದೆಯೋ, ಅತಃ = ಆ ಕಾರಣದಿಂದ, ನಾಮ್ನಃ = ನಾಮ ಪ್ರಪಂಚಕ್ಕೂ, ರೂಪಸ್ಯ = ರೂಪಪ್ರಪಂಚಕ್ಕೂ, ವ್ಯವಹಾರಶ್ಚ =

ಭಾಷೆಗೂ, ಏಕರಾಟ್ = ಸ್ವತಂತ್ರಕರ್ತನು, ಹರಿರೇವ = ಶ್ರೀಹರಿಯೊಬ್ಬನೇ ಆಗಿದ್ದಾನೆ. ಯತಃ = ಯಾವ ಕಾರಣದಿಂದ, ಭಗವಾನ್ = ಶ್ರೀಹರಿಯು, ಕರ್ತಾ = ಕರ್ತೃವು, ಅತಃ = ಆದ್ದರಿಂದ, ಪಿತಾ = ತಂದೆಯು, ಪ್ರಭುಃ = ಸ್ವಾಮಿಯೂ ಕೂಡ ಆಗಿರುತ್ತಾನೆ. ಇತಿ ಚ = ಹೀಗೆ, ಬ್ರಹ್ಮಾಂಡಪುರಾಣೇ = ಬ್ರಹ್ಮಾಂಡಪುರಾಣದಲ್ಲಿ ಹೇಳಲಾಗಿದೆ.

ಇಲ್ಲಿಗೆ ಸಂಜ್ಞಾಮೂರ್ತಿಕ್ಲೃಪ್ತ್ಯಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**तत्वप्रकाशिका – अत्र जगत्कारणे ब्रह्मणि श्रुतिसमन्वयसिद्ध्यर्थं शरीरादिविषयश्रुतिविरोधपरिहारादस्ति शास्त्रादिसङ्गतिः । जगत्कारणे हरावुक्तश्रुतिसमन्वयः शरीरादिविषयश्रुतीनां विरोधेनाप्रामाण्ये न सिध्येदित्यसाववश्यं निरसनीयः । तत्रेन्द्रियादीनामाश्रयः शरीरं तत्प्रसङ्गसन्निधापितं विषयः । किं विरिञ्चसृष्टं परमात्मसृष्टं वेति सन्देहः । सन्देहबीजं श्रुतिविगानं दर्शयन् पूर्वपक्षं च सूचयति – विरिञ्च इति ।।**

ಈ ಅಧಿಕರಣದಲ್ಲಿ ಜಗತ್ಕಾರಣನಾದ ಬ್ರಹ್ಮನಲ್ಲಿ ಶ್ರುತಿಸಮನ್ವಯವು ಸಿದ್ಧವಾಗುವುದಕ್ಕಾಗಿ ಶರೀರಾದಿ ವಿಷಯಕವಾದ ಶ್ರುತಿವಿರೋಧವನ್ನು ಪರಿಹಾರ ಮಾಡಲಾಗುತ್ತಿದೆ. ಆದ್ದರಿಂದ ಶಾಸ್ತ್ರ-ಅಧ್ಯಾಯ-ಪಾದ ಸಂಗತಿಗಳು ಇರುತ್ತವೆ.

ಜಗತ್ಕಾರಣನಾದ ಶ್ರೀಹರಿಯಲ್ಲಿ ಶ್ರುತಿಸಮನ್ವಯವನ್ನು ಈ ಹಿಂದೆ ಸಮರ್ಥನೆ ಮಾಡಲಾಯಿತು. ಈ ವಿಷಯಕ್ಕೆ ಶರೀರಾದಿ ವಿಷಯಕವಾದ ಶ್ರುತಿಗಳಿಗೆ ಪರಸ್ಪರ ವಿರೋಧವು ಬಂದರೆ ಅಪ್ರಾಮಾಣ್ಯವು ಬರುವುದರಿಂದ ಶ್ರೀಹರಿಯಲ್ಲಿ ಶ್ರುತಿಸಮನ್ವಯವು ಸಿದ್ಧವಾಗುವುದಿಲ್ಲ. ಆದ್ದರಿಂದ ಈ ವಿರೋಧವನ್ನು ಪರಿಹಾರ ಮಾಡಲೇಬೇಕು.

ಇಂದ್ರಿಯಸಂಬಂಧದಿಂದ ಇಂದ್ರಿಯಗಳಿಗೆ ಆಶ್ರಯವಾದ ಈ ಶರೀರವೇ ಪ್ರಾಸಂಗಿಕವಾಗಿ ಬುದ್ಧಿಯಲ್ಲಿ ಸನ್ನಿಹಿತವಾಗಿದೆ. ಆದ್ದರಿಂದ ಈ ಶರೀರವೇ ಅಧಿಕರಣಕ್ಕೆ ವಿಷಯ. ಈ ಶರೀರವು ಚತುರ್ಮುಖ ಬ್ರಹ್ಮನಿಂದ ಸೃಷ್ಟವಾಗಿದೆಯೋ, ಅಥವಾ ಪರಮಾತ್ಮನಿಂದಲೋ ? ಎಂಬುದು ಅಧಿಕರಣದ ಸಂದೇಹ. ಶ್ರುತಿಗಳಲ್ಲಿರುವ ಪರಸ್ಪರ ವಿರೋಧವೇ ಸಂದೇಹಕ್ಕೆ ಕಾರಣ ಎಂಬುದನ್ನು ತೋರಿಸುತ್ತಾ ಪೂರ್ವಪಕ್ಷವನ್ನೂ ಕೂಡ 'ವಿರಂಚಃ' ಇತ್ಯಾದಿ ಭಾಷ್ಯದಿಂದ ಸೂಚನೆ ಮಾಡುತ್ತಿದ್ದಾರೆ.

ವಿವರಣೆ – ಇಲ್ಲಿಯ ತನಕ ಇಂದ್ರಿಯಗಳ ಬಗ್ಗೆ ವಿಚಾರ ಮಾಡಿದ್ದಾಯಿತು. ಈಗ ಆ ಇಂದ್ರಿಯಗಳಿಗೆ ಆಶ್ರಯವಾದ ಶರೀರವೇ ಬುದ್ಧಿಯಲ್ಲಿ ಸನ್ನಿಹಿತವಾಗುವುದರಿಂದ ಶರೀರದ ಬಗ್ಗೆ ವಿಚಾರವನ್ನು ಪ್ರಾರಂಭ ಮಾಡಿದ್ದಾರೆ. ಆದ್ದರಿಂದ ಈ ಅಧಿಕರಣಕ್ಕೆ ಹಿಂದಿನ ಅಧಿಕರಣದಿಂದ ಆನಂತರ್ಯ ಸಂಗತಿಯು ಇರುತ್ತದೆ.

ಪರಿಪೂರ್ಣಚಂದ್ರಿಕಾ

**तत्वप्रकाशिका – विरेचयतीत्यस्य याख्यानं विदघातीति । नामरूपकर्तृत्वम् परमत्वे हेतुरुच्यते ब्रह्मशब्दस्तु निरुच्यते । श्रुतिर्विरिञ्चस्य विष्णोश्च नामरूपकर्तृत्वं वक्तीति क्रमेण शेषः । विरिञ्चस्यैव देहादिकर्तृत्वम्। 'विरिञ्चो वा इदम्' इति श्रुतेः।**

'ವಿರೇಚಯತಿ' ಎಂಬುದಾಗಿ ಶ್ರುತಿಯಲ್ಲಿದೆ. ಇದಕ್ಕೆ 'ಮಾಡುತ್ತಾನೆ' ಎಂದರ್ಥ. ನಾಮರೂಪ ಕರ್ತೃತ್ವವನ್ನು ವಿಷ್ಣುವಿನ ಪರಮತ್ವ ವಿಷಯದಲ್ಲಿ ಹೇತುವನ್ನಾಗಿ ಹೇಳಲಾಗಿದೆ. ಮತ್ತು ಬ್ರಹ್ಮ ಶಬ್ದದ ನಿರ್ವಚನವನ್ನು ಮಾಡಲಾಗಿದೆ.

ಶ್ರುತಿಯು ಚತುರ್ಮುಖಬ್ರಹ್ಮನ ಮತ್ತು ವಿಷ್ಣುವಿನ ನಾಮರೂಪ ಕರ್ತೃತ್ವವನ್ನು ಹೇಳುತ್ತದೆ ಎಂಬುದನ್ನು ಕ್ರಮವಾಗಿ ಶೇಷಪೂರಣ ಮಾಡಿಕೊಳ್ಳಬೇಕು.

ಚತುರ್ಮುಖ ಬ್ರಹ್ಮನಿಗೆ ಮಾತ್ರ ದೇಹಾದಿಗಳ ಕರ್ತೃತ್ವವು ಯುಕ್ತವಾಗುತ್ತದೆ. 'ವಿರಿಂಚೋ ವಾ ಇದಂ' ಎಂಬ ಶ್ರುತಿಯು ಇದಕ್ಕೆ ಆಧಾರವಾಗಿದೆ.

ವಿವರಣೆ – ಭಾಷ್ಯದಲ್ಲಿ ಉದಾಹರಿಸಿದ ಗೋಪವನ ಶ್ರುತಿಯಲ್ಲಿ 'ವಿರೇಚಯತಿ ವಿದಧಾತಿ ಬ್ರಹ್ಮ' ಎಂಬುದಾಗಿ ಹೇಳಲಾಗಿದೆ. 'ವಿರೇಚಯತಿ' ಎಂಬ ಪದದ ಅರ್ಥವನ್ನೇ ವಿದಧಾತಿ ಎಂಬ ಪದವೂ ಕೂಡ ಹೇಳುತ್ತಿರುವುದರಿಂದ ಪುನರುಕ್ತಿ ದೋಷವು ಬರುತ್ತದಲ್ಲವೇ? ಎಂಬ ಪ್ರಶ್ನೆಯು ಪ್ರಾಪ್ತವಾಗುತ್ತದೆ. ಅದಕ್ಕಾಗಿ ಟೀಕೆಯಲ್ಲಿ 'ವಿರೇಚಯತಿ' ಎಂಬ ಪದದ ಅರ್ಥವನ್ನೇ ಶ್ರುತಿಯು 'ವಿದಧಾತಿ' ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದೆ ಎಂದು ಹೇಳುತ್ತಾರೆ. ಆದ್ದರಿಂದ ಪುನರುಕ್ತಿಗೆ ಅವಕಾಶವಿಲ್ಲ.

ಭಾಷ್ಯದಲ್ಲಿ ಅಗ್ನಿವೇಶ್ಯ ಶ್ರುತಿಯನ್ನು ಉದಾಹರಣೆ ಮಾಡುವಾಗ 'ಅಥಸ್ಮಾದುಚ್ಯತೇ' ಎಂಬಲ್ಲಿಂದ ಪ್ರಾರಂಭ ಮಾಡಿ 'ಬ್ರಹ್ಮಣಾ ಚ' ಎಂಬಲ್ಲಿಯ ತನಕ ಹೇಳಿರುತ್ತಾರೆ. ಆದರೆ 'ಪರಮಾದ್ಧಿ ಏತೇ ನಾಮರೂಪೇ ವ್ಯಾಕ್ರಿಯೇತೇ' ಎಂಬ ಭಾಗವನ್ನಷ್ಟೇ ಉಲ್ಲೇಖ ಮಾಡಿದರೆ ಸಾಕಾಗುತ್ತಿತ್ತು. ಉಳಿದ ಶ್ರುತಿಯನ್ನು ಉಲ್ಲೇಖಿಸುವ ಅವಶ್ಯಕತೆ ಇರುವುದಿಲ್ಲ. ಆದರೆ ನಾಮರೂಪಕರ್ತೃತ್ವವನ್ನು ಪರಮಾತ್ಮನಿಗೆ ಹೇಳುವುದಷ್ಟೇ ಅಲ್ಲದೇ ಅವನಲ್ಲಿ ಪಾರಮ್ಯಾರ್ಥವನ್ನೂ ಕೂಡ ಸಾಧನೆ ಮಾಡಬೇಕಾಗಿದೆ. ಅದಕ್ಕಾಗಿ ಉಳಿದ ಭಾಗವನ್ನು ಉಲ್ಲೇಖ ಮಾಡಿದ್ದಾರೆ. ಅಷ್ಟೇ ಅಲ್ಲದೇ, ಅದೇ ಮುಂದಿನ ವಾಕ್ಯದಲ್ಲಿ ಬ್ರಹ್ಮಶಬ್ದದ ನಿರ್ವಚನವೂ ಕೂಡ ಕಾಣಿಸುತ್ತಿದೆ. ಇದರಿಂದ ನಾಮರೂಪ ಕರ್ತೃತ್ವ ಯುಕ್ತಿಯಿಂದ ಬ್ರಹ್ಮತ್ವವನ್ನು ಸಾಧಿಸಿದಂತಾಗುತ್ತದೆ.

'ಇತಿ ಗೋಪವನಶ್ರುತಿಃ' ಎಂಬ ಪದದ ಅನಂತರ 'ವಿರಿಂಚಸ್ಯ ನಾಮರೂಪಕರ್ತೃತ್ವಂ ವಕ್ತಿ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. 'ಇತಿ ಅಗ್ನಿವೇಶ್ಯಶ್ರುತಿಃ' ಎಂಬುದರ ಅನಂತರ 'ವಿಷ್ಣೋಃ ನಾಮರೂಪಕರ್ತೃತ್ವಂ ವಕ್ತಿ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು.

**तत्वप्रकाशिका – न च श्रुत्यन्तरविरोधः । विरिञ्चत्वयुक्तियुक्तत्वादाद्यश्रुते। नच सृष्टिद्वारत्वेन श्रुत्याद्युपपत्तिरिति वाच्यम् । असम्भवे हि मुख्यार्थस्यामुख्यार्थत्वं कल्प्यते । नच विरिञ्चे नामरूपात्मकदेहादिसृष्टिशक्तिर्न सम्भवति येनात्र श्रुत्यादेरमुख्यार्थत्वं कल्पयामः । अतः सयुक्तिकैतच्छ्रुतिविरोधेनाप्रमाणमन्या श्रुतिस्तथाच न श्रुतिसमन्वयेन परमात्मनो जगत्कारणत्वसिद्धिरिति भावः ।**

ವಿರಂಚನೇ ದೇಹಾದಿಕರ್ತೃ ಎಂಬ ಪ್ರಮೇಯಕ್ಕೆ ಮತ್ತೊಂದು ಶ್ರುತಿಯ ವಿರೋಧವು ಬರುವುದಿಲ್ಲ. ಏಕೆಂದರೆ ಮೊದಲನೆಯ ಶ್ರುತಿಯು ಯುಕ್ತಿಯುಕ್ತವಾಗಿದೆ. ಚತುರ್ಮುಖನು ಪರಮಾತ್ಮನು ಮಾಡುವ ಸೃಷ್ಟಿಗೆ ದ್ವಾರಭೂತನಾಗಿದ್ದಾನಾದ್ದರಿಂದ ಶ್ರುತಿಯು ಉಪಪನ್ನವಾಗುತ್ತದೆಂದು ಹೇಳಬಾರದು. ಏಕೆಂದರೆ ಮುಖ್ಯಾರ್ಥವು ಅಸಂಭಾವಿತವಾದರೆ ಮಾತ್ರ ಅಮುಖ್ಯಾರ್ಥವನ್ನು ಒಪ್ಪಬೇಕು. ಆದರೆ ಚತುರ್ಮುಖನಲ್ಲಿ ನಾಮರೂಪಾತ್ಮಕವಾದ ದೇಹದ ಸೃಷ್ಟಿಯನ್ನು ಮಾಡುವ ಸಾಮರ್ಥ್ಯವಿಲ್ಲವೆಂದು ಹೇಳಲಾಗದು. ಹಾಗೇನಾದರೂ ಹೇಳಿದರೆ ಶ್ರುತ್ಯಾದಿಗಳಿಗೆ ಅಮುಖ್ಯಾರ್ಥವನ್ನು ಕಲ್ಪನೆ ಮಾಡಬೇಕಾದ ಪ್ರಸಂಗ ಬರುತ್ತಿತ್ತು. ಹೀಗೆ ಯುಕ್ತಿಸಹಿತವಾದ ಶ್ರುತಿಯ ವಿರೋಧ ಬರುವುದರಿಂದ ಎರಡನೇ ಶ್ರುತಿಗೆ ಅಪ್ರಾಮಾಣ್ಯವನ್ನೇ ಹೇಳಬೇಕು.

ಆದ್ದರಿಂದ ಪರಮಾತ್ಮನ ಜಗತ್ಕಾರಣತ್ವವು ಶ್ರುತಿಸಮನ್ವಯದ ಮೂಲಕ ಸಿದ್ಧವಾಗುವುದಿಲ್ಲ. ಇಷ್ಟು ಅಧಿಕರಣದ ಪೂರ್ವಪಕ್ಷ.

ವಿವರಣೆ – ವಿರಿಂಚನೇ ದೇಹಾದಿಗಳ ಸೃಷ್ಟಿಗೆ ಕಾರಣನಾಗಿದ್ದಾನೆನ್ನಲು ಬ್ರಾಹ್ಮವಾಕ್ಯಕ್ಕೆ ವಿರಿಂಚತ್ವ ಯುಕ್ತಿಯೂ ಕೂಡ ಕಾರಣವಾಗಿದೆ. ವಿರೇಚಕತ್ವ ಎಂಬುದು ವಿರಿಂಚ ಶಬ್ದದ ಪ್ರವೃತ್ತಿನಿಮಿತ್ತವಾಗಿದೆ. ನಾಮರೂಪಾತ್ಮಕವಾದ ಶರೀರದ ಸೃಷ್ಟಿ ಮಾಡುವ ಶಕ್ತಿ ಇದ್ದರೆ ಮಾತ್ರ ಈ ವಿರೇಚಕತ್ವ ಎಂಬ ಪ್ರವೃತ್ತಿ ನಿಮಿತ್ತವು ಯುಕ್ತವಾಗುತ್ತದೆ. ಒಂದು ವೇಳೆ ವಿರಿಂಚನಿಗೆ ಸ್ರಷ್ಟೃತ್ವವಿಲ್ಲವೆಂದರೆ ವಿರಿಂಚಶಬ್ದದ ಪ್ರವೃತ್ತಿ ನಿಮಿತ್ತವೇ ಯುಕ್ತವಾಗುವುದಿಲ್ಲ ಎಂಬ ವಿಪಕ್ಷದಲ್ಲಿ ಬಾಧಕತರ್ಕವಿರುವುದರಿಂದ 'ವಿರಿಂಚಶಬ್ದವಿಧೇಯತ್ವ ಯುಕ್ತಿಯುಕ್ತತ್ವಾತ್' ಎಂಬ ಹೇತುವನ್ನು ಅಪ್ರಯೋಜಕವೆಂದು ತಿಳಿಯಬಾರದು.

**तत्वप्रकाशिका – सिद्धान्तयत्सूत्रमवतार्य व्याचष्टे – अत इति ।। परमात्मनः सकाशादेव नामरूपात्मकदेहादिप्रपञ्चस्योत्पत्तिर्भवति । 'सर्वाणि रूपाणि' इति पुरुषसूक्तमन्त्रोक्तत्वादिति भावः । यदिति लिङ्गविपर्यासः । नामरूपयोर्विरिञ्च-सृष्टत्वेऽप्यस्ति श्रुतिरतः कथमयं निश्चय इति तत्राह – त्रिवृदिति ।। विशेषणस्य हेतुगर्भत्वेन नामरूपकर्ता परः । पृथिव्यादिभूतत्रयस्य मिश्रीभावस्त्रिवृत्त्वं तत्कर्तृत्वादिति युक्तिरुक्ता भवति । तत्र त्रिवृत्कर्तृत्वे कुतो नामादिकर्तृत्वं हरेरित्यत आह – त्रिवृदिति ।।**

ಸಿದ್ಧಾಂತಸ್ಥಾಪಕವಾದ ಸೂತ್ರಕ್ಕೆ ಅವತಾರಿಕೆ ನೀಡಿ ವ್ಯಾಖ್ಯಾನ ಮಾಡಲು 'ಅತಃ' ಇತ್ಯಾದಿ ಭಾಷ್ಯವು ಹೊರಟಿದೆ. ಪರಮಾತ್ಮನಿಂದಲೇ ನಾಮರೂಪಾತ್ಮಕವಾದ ಶರೀರದ ಸೃಷ್ಟಿಯು ಉಂಟಾಗುತ್ತದೆ. ಏಕೆಂದರೆ 'ಸರ್ವಾಣಿ ರೂಪಾಣಿ' ಎಂಬ ಪುರುಷಸೂಕ್ತದ ಮಂತ್ರದಲ್ಲಿ ಹಾಗೆಯೇ ಹೇಳಲಾಗಿದೆ.

'ಯತ್' ಎಂಬುದರ ಲಿಂಗವಿಪರ್ಯಯವೇ 'ಯಃ' ಎಂಬುದನ್ನು ತಿಳಿಯಬೇಕು. ನಾಮರೂಪಗಳನ್ನು ವಿರಿಂಚನು ಸೃಷ್ಟಿ ಮಾಡುತ್ತಾನೆನ್ನಲೂ ಕೂಡ ಶ್ರುತಿಯು ಪ್ರಮಾಣವಾಗಿದೆ. ಹೀಗಿರುವಾಗ ನಿಶ್ಚಯ ಮಾಡುವುದು ಹೇಗೆ? ಎಂದರೆ ತ್ರಿವೃದಿತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

'ತ್ರಿವೃತ್ಕುರ್ವತಃ' ಎಂಬ ವಿಶೇಷಣವು ಹೇತುಗರ್ಭವಾಗಿರುವುದರಿಂದ ನಾಮರೂಪದ ಕರ್ತೃವು ಪರಮಾತ್ಮನೇ ಆಗಿದ್ದಾನೆಂದು ತಿಳಿಯುತ್ತದೆ. ಏಕೆಂದರೆ ಪೃಥಿವೀ, ಜಲ, ತೇಜಸ್ಸು ಎಂಬ ತ್ರಿವೃತ್ತ್ವವು ಭೂತಗಳ ಮಿಶ್ರಣರೂಪವಾಗಿದೆ. ಇವುಗಳನ್ನು ಸೃಷ್ಟಿ ಮಾಡುವವನು ಪರಮಾತ್ಮನೇ ಆಗಿದ್ದಾನೆಂಬ ಯುಕ್ತಿಯನ್ನು ಶ್ರುತಿಯು ಹೇಳುತ್ತಿದೆ. ಹೀಗೆ ಪರಮಾತ್ಮನಿಗೆ ತ್ರಿವೃತ್ಕರ್ತೃತ್ವವಿರುವುದರಿಂದ ನಾಮಾದಿಕರ್ತೃತ್ವವನ್ನು ಹೇಗೆ ಸಮರ್ಥನೆ ಮಾಡುತ್ತೀರಿ? ಎಂಬ ಪ್ರಶ್ನೆಗೆ 'ತ್ರಿವೃತ್' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

**ವಿವರಣೆ** – ಪರಮಾತ್ಮನು ಪೃಥಿವ್ಯಪ್ತೇಜಸ್ಸುಗಳ ಕರ್ತೃವಾಗಿರುವುದರಿಂದ ನಾಮರೂಪಗಳ ಕರ್ತೃವಾಗಲು ಹೇಗೆ ಸಾಧ್ಯ? ಎಂಬ ಪ್ರಶ್ನೆಗೆ ಅವಕಾಶವಿಲ್ಲ. ತ್ರಿವೃತ್ಕರಣ ಹೇತುವಿನಿಂದಲೇ ನಾಮರೂಪಕರ್ತೃತ್ವವನ್ನು ಪರಮಾತ್ಮನಲ್ಲಿ ಸಾಧನೆ ಮಾಡಬೇಕು. ಅದು ಹೀಗೆ – ಪ್ರತಿಯೊಂದು ಪದಾರ್ಥಗಳೂ ಕೂಡ ಪೃಥಿವ್ಯಪ್ತೇಜಸ್ಸುಗಳಿಂದ ಉತ್ಪನ್ನವಾಗುತ್ತವೆ. ರೂಪ ಶಬ್ದಕ್ಕೆ ಪದಾರ್ಥ ಎಂಬ ಅರ್ಥವಿರುವುದರಿಂದ ರೂಪವೂ ಕೂಡ ತ್ರಿವೃತ್ಕರಣವನ್ನು ಅಪೇಕ್ಷಿಪಟ್ಟಿತು ಎಂದಂತಾಯಿತು. ಪದಾರ್ಥಗಳೇ ಇಲ್ಲದಿದ್ದರೆ ನಾಮದಿಂದ ಅದನ್ನು ವ್ಯವಹರಿಸಲು ಸಾಧ್ಯವಿಲ್ಲ. ಆದ್ದರಿಂದ ನಾಮವು ರೂಪದ ಅಪೇಕ್ಷೆಯನ್ನು ಹೊಂದಿತು. ಹೀಗೆ ತ್ರಿವೃತ್ಕರಣವನ್ನು ನಾಮ ಹಾಗೂ ರೂಪಾತ್ಮಕವಾದ ಪ್ರಪಂಚವನ್ನು ಅಪೇಕ್ಷಿ ಪಡುತ್ತದೆ. ತ್ರಿವೃತ್ಕರಣಕ್ಕೆ ಕರ್ತೃವಾದ ಪರಮಾತ್ಮನು ನಾಮರೂಪಗಳಿಗೂ ಕರ್ತೃವಾಗಿದ್ದಾನೆಂದು ಅರ್ಥಾತ್ ಸಿದ್ಧವಾಗುತ್ತದೆಂಬುದು ಸಿದ್ಧಾಂತದ ಅಭಿಪ್ರಾಯ.

**तत्वप्रकाशिका – नामादिकरणं त्रिवृत्करणापेक्षं त्रिवृत्करणमन्तरेण रूपोत्पत्त्यभावस्य वक्ष्यमाणात्वात्तदभावे नामानुपपत्तेः । त्रिवृत्कर्तृत्वं च विष्णोरेव। 'सेयं देवतेमास्तिस्रो देवता अनेनैव जीवेनात्मनाऽनुप्रविश्य नामरूपे व्याकरोत्तासां त्रिवृतं त्रिवृतमेकैकामकरोत्' इत्यादिश्रुतेः । अतः स एव नामादिकर्तेति भावः ।**

ನಾಮ ಹಾಗೂ ರೂಪಗಳ ಹುಟ್ಟುವಿಕೆಗೆ ತ್ರಿವೃತ್ಕರಣದ ಅಪೇಕ್ಷೆಯು ಇದ್ದೇ ಇರುತ್ತದೆ. ತ್ರಿವೃತ್ಕರಣವು ಇಲ್ಲದಿದ್ದರೆ ರೂಪದ (ಪದಾರ್ಥದ) ಉತ್ಪತ್ತಿಯೇ ಉಪಪನ್ನವಾಗುವುದಿಲ್ಲ. ಇದನ್ನು ಮುಂದೆ ಸಮರ್ಥನೆ ಮಾಡುತ್ತಾರೆ. ರೂಪದ ಉತ್ಪತ್ತಿಯೇ ಆಗದಿದ್ದರೆ ನಾಮದ ಉತ್ಪತ್ತಿಯೂ ಕೂಡ ಅನುಪಪನ್ನವಾಗುತ್ತದೆ. ತ್ರಿವೃತ್ಕರ್ತೃತ್ವವಂತೂ ವಿಷ್ಣುವಿನದ್ದೇ ಧರ್ಮವಾಗಿದೆ. ಏಕೆಂದರೆ 'ಸೇಯಂ ದೇವತಾ ಇಮಾಸ್ತಿಸ್ರೋ ದೇವತಾ ಅನೇನೈವ ಜೀವೇನಾತ್ಮಾನಾನುಪ್ರವಿಶ್ಯ ನಾಮರೂಪೇ ವ್ಯಾಕರೋತ್ತಾಸಾಂ ತ್ರಿವೃತಂ ತ್ರಿವೃತಮೇಕೈಕಾಮಕರೋತ್' ಆ ದೇವತೆಯು ಪೃಥಿವೀ, ಅಪ್, ತೇಜಸ್ಸುಗಳ ಅಭಿಮಾನಿದೇವತೆಗಳಲ್ಲಿ ಅನಿರುದ್ಧರೂಪದಿಂದ ಪ್ರವೇಶವನ್ನು ಮಾಡಿ ನಾಮರೂಪಗಳನ್ನು ಸೃಷ್ಟಿ ಮಾಡುತ್ತಾನೆ. ಆಕಾರಣದಿಂದ ಅವುಗಳಲ್ಲಿ ಪ್ರತ್ಯೇಕವಾಗಿ ಉಳಿದೆರಡರಲ್ಲಿ ದೇವತೆಗಳು ಮಿಶ್ರಿತವಾಗಿ ಇರುತ್ತಾರೆ ಎಂದು ಹೇಳಲಾಗಿದೆ. ಆದ್ದರಿಂದ ಅವನೇ ನಾಮರೂಪಗಳ ಕರ್ತೃವಾಗಿದ್ದಾನೆಂಬುದು ಸಿದ್ಧಾಂತದ ಅಭಿಪ್ರಾಯ.

ಸಂಜ್ಞಾಮೂರ್ತಿಕ್ಳ್ಪಪ್ತ್ಯಧಿಕರಣ (೨-೪-೧೨)

**तत्वप्रकाशिका – विरिञ्चत्वादियुक्तियुक्तेयमपि श्रुतिरित्यतस्तस्याः सावकाशत्वं स्मृत्यैव दर्शयति – सर्वेति ।। सर्वकर्तृत्वशक्तिस्तु त्रिवृत्कर्तृत्वेन विष्णोरेवेति सूत्रार्थे स्मृतिसम्मतिं चाह – त्रिवृदिति।।**

'ವಿರಿಂಚೋ ವಾ ಇದಂ' ಎಂಬ ಶ್ರುತಿಯೂ ಕೂಡ ಯುಕ್ತಿಯಿಂದ ಸಹಿತವಾಗಿದೆ. ಆದ್ದರಿಂದ ಸ್ಮೃತಿವಚನದಿಂದಲೇ ಈ ಶ್ರುತಿಯು ಸಾವಕಾಶವಾಗಿದೆ ಎಂಬುದನ್ನು 'ಸರ್ವ' ಇತ್ಯಾದಿ ಭಾಷ್ಯದಿಂದ ತೋರಿಸುತ್ತಿದ್ದಾರೆ.

ಪರಮಾತ್ಮನಲ್ಲಿ ತ್ರಿವೃತ್ಕರ್ತೃತ್ವ ಶಕ್ತಿಯು ಇರುವುದರಿಂದಲೇ ಸರ್ವಕರ್ತೃತ್ವವು ಇದೆ ಎಂಬುದು ಸೂತ್ರದ ಅಭಿಪ್ರಾಯ. ಈ ವಿಷಯದಲ್ಲಿ ಸ್ಮೃತಿಯ ಸಮ್ಮತಿಯನ್ನು 'ತ್ರಿವೃತ್' ಇತ್ಯಾದಿ ಭಾಷ್ಯದಿಂದ ಸಮರ್ಥನೆ ಮಾಡಿದ್ದಾರೆ.

**तत्वप्रकाशिका – त्रिवृत्क्रिया यतो विष्णोरतो नाम्नश्चेत्यन्वयः । तदुपपादनं रूपमित्यादि। हरिरेव कर्ता यतश्च कर्ताऽतः पितेत्यर्थः । अतः श्रुत्यविरोधेन शरीरस्य हरिकर्तृत्वसिद्धेयुक्तं तस्य श्रुतिसमन्वयेन जगत्कारणत्वमिति सिद्धम् ।।**

ಪರಮಾತ್ಮನಿಗೆ ತ್ರಿವೃತ್ಕರ್ತೃತ್ವವು ಯಾವ ಕಾರಣದಿಂದ ಇದೆಯೋ ಅದೇ ಕಾರಣದಿಂದಲೇ ನಾಮರೂಪಗಳ ಕರ್ತೃತ್ವವೂ ಕೂಡ ಇರುತ್ತದೆ ಎಂದು ಅನ್ವಯ ಮಾಡಿಕೊಳ್ಳಬೇಕು. ಇದನ್ನೇ 'ರೂಪಂ' ಇತ್ಯಾದಿಯಾಗಿ ಉಪಪಾದನೆ ಮಾಡಿದ್ದಾರೆ.

ಶ್ರೀಹರಿಯೇ ಕರ್ತೃವಾಗಿದ್ದಾನೆ. ಆದ್ದರಿಂದಲೇ ತಂದೆಯೂ ಕೂಡ ಆಗಿದ್ದಾನೆಂಬುದು ಶ್ರುತಿಯ ಅಭಿಪ್ರಾಯ.

ಶ್ರುತಿಯ ವಿರೋಧವಿಲ್ಲದ್ದರಿಂದ ಶ್ರೀಹರಿಯೇ ಶರೀರಕ್ಕೆ ಕರ್ತೃವಾಗಿದ್ದಾನೆಂಬ ಪ್ರಮೇಯವು ಸಿದ್ಧವಾಗುತ್ತದೆ. ಆದ್ದರಿಂದ ಅವನಲ್ಲಿ ಮಾಡಲ್ಪಟ್ಟ ಶ್ರುತಿಸಮನ್ವಯದಿಂದ ಜಗತ್ಕಾರಣತ್ವ ಎಂಬ ಧರ್ಮವು ಸಿದ್ಧವಾಯಿತು.

**ವಿವರಣೆ** – 'ತ್ರಿವೃತ್ಕ್ರಿಯಾ ಯತೋ ವಿಷ್ಣೋಃ ಅತೋ ನಾಮ್ನಶ್ಚ' ಎಂಬುದಾಗಿ ಬ್ರಹ್ಮಾಂಡ ಪುರಾಣದ ಶ್ಲೋಕದಲ್ಲಿ ಅನ್ವಯಕ್ರಮವನ್ನು ತಿಳಿಯಬೇಕು. 'ರೂಪಂ ಚ ತದಪೇಕ್ಷಯಾ' ಎಂಬಲ್ಲಿಂದ 'ಯತಃ ಕರ್ತಾ' ಎಂಬಲ್ಲಿಯ ತನಕ ನಾಮರೂಪಕರ್ತೃತ್ವವನ್ನು ಪ್ರತಿಪಾದನೆ ಮಾಡಲಾಗಿದೆ. ಪೂರ್ವಪಕ್ಷಗಳು ಹೇಳಿದ ಯುಕ್ತಿಯು ಸಾವಕಾಶವಾಗಿದೆ. ಸಿದ್ಧಾಂತದಲ್ಲಿ ಹೇಳಲ್ಪಟ್ಟ ಯುಕ್ತಿಯು ನಿರವಕಾಶವಾಗಿದೆ. ಚತುರ್ಮುಖ ಪರವಾದ ಶ್ರುತಿಗಳೆಲ್ಲವೂ ವಿಷ್ಣುವಿನಲ್ಲಿ ಸಾವಕಾಶವಾಗಿವೆ. ವಿರಿಂಚತ್ವ ಲಿಂಗವೂ ಕೂಡ ಮುಖ್ಯಪ್ರಾಣನ ಲಿಂಗದಂತೆ ಪರಮಾತ್ಮನಲ್ಲಿ ಸಾವಕಾಶವಾಗಿದೆ. ವಿರಿಂಚನಲ್ಲಿರುವ ಕರ್ತೃತ್ವ ಶಕ್ತಿಯೂ ಕೂಡ 'ಪರಾತ್ತು ತಚ್ಛ್ರುತೇಃ' ಎಂಬ ಸೂತ್ರದಲ್ಲಿ ಹೇಳಿದ ನ್ಯಾಯದಿಂದ ಶ್ರೀಹರಿಯಲ್ಲಿ ಸಾವಕಾಶವಾಗಿದೆ. ಆದ್ದರಿಂದ ತ್ರಿವೃತ್ಕರ್ತೃತ್ವವು ಕೇವಲ ವಿಷ್ಣುವಿನಲ್ಲಿರುವುದರಿಂದ ಶರೀರಕರ್ತೃತ್ವವೂ ಕೂಡ ಅವನಲ್ಲಿ ಮಾತ್ರ ಇರುತ್ತದೆಂಬ ಪ್ರಮೇಯವು ಈ ಅಧಿಕರಣದಲ್ಲಿ ಸಿದ್ಧವಾಯಿತು.

ಇಲ್ಲಿಗೆ ತತ್ವಪ್ರಕಾಶಿಕಾದ ಕನ್ನಡಾನುವಾದದಲ್ಲಿ ಸಂಜ್ಞಾಮೂರ್ತಿಕ್ಲೃಪ್ತ್ಯಧಿಕರಣ ಮುಗಿಯಿತು

## ಸಂಜ್ಞಾಮೂರ್ತಿಕ್ಲೃಪ್ತ್ಯಧಿಕರಣ
## (೨-೪-೧೨)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,
ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## संज्ञामूर्तिक्लृप्त्यधिकरणम्

ನಾಮರೂಪಾತ್ಮಕವಾದ ಪ್ರಪಂಚವನ್ನು ಸೃಷ್ಟಿಸುವವನು ಚತುರ್ಮುಖನಲ್ಲ

**॥ संज्ञामूर्तिक्लृप्तिस्तु त्रिवृत्कुर्वत उपदेशात् ॥ सङ्गतिमाह – तत्प्रसङ्गसन्निधापितमिति ॥ न केवलं चिन्ताविषयस्य शरीरस्य प्राणाश्रयत्वात्पेटिकाधिकरणसङ्गती । किन्तु विरिञ्चस्य मुख्यप्राणत्वाच्चेत्यपि द्रष्टव्यम् ।**

ಈ ಅಧಿಕರಣದ ಸಂಗತಿಯನ್ನು 'ತತ್ಪ್ರಸಂಗಸನ್ನಿಧಾಪಿತಂ' ಎಂಬ ಟೀಕಾವಾಕ್ಯದಿಂದ ಹೇಳಿದ್ದಾರೆ. ಕೇವಲ ಸಂಶಯಕ್ಕೆ ವಿಷಯವಾದ ಶರೀರವು ಇಂದ್ರಿಯಗಳಿಗೆ ಆಶ್ರಯವಾಗಿದೆ ಎನ್ನುವ ಕಾರಣದಿಂದ ಪೇಟಿಕಾಧಿಕರಣ ಸಂಗತಿ ಇರುವುದಲ್ಲ ಮುಖ್ಯಪ್ರಾಣನೇ ಮುಂದೆ ವಿರಿಂಚ ಪದವಿಯನ್ನು ಹೊಂದುವುದರಿಂದಲೂ ಕೂಡ ಹಿಂದಿನ ಅಧಿಕರಣದಿಂದ ಆನಂತರ್ಯಸಂಗತಿ ಇದೆ ಎಂದು ತಿಳಿಯಬೇಕು.

**अत्र पूर्वोक्तं विष्णोः सर्वस्रष्टृत्वं ''विरिञ्चो वा इदं सर्वं विरेचयति'' इति विरिञ्चस्य सर्वस्रष्टृत्वश्रुतिविरुद्धं न वेति चिन्ता ।**

ಹಿಂದೆ ಪ್ರತಿಪಾದನೆ ಮಾಡಲ್ಪಟ್ಟ ವಿಷ್ಣುವಿಗೆ ಸರ್ವಸ್ರಷ್ಟೃತ್ವವು 'ವಿರಿಂಚೋ ವಾ ಇದಂ ಸರ್ವಂ ವಿರೇಚಯತಿ' ಎಂಬ ವಿರಿಂಚನಿಗೆ ಸರ್ವಸ್ರಷ್ಟೃತ್ವವನ್ನು ಹೇಳುವ ಶ್ರುತಿಯಿಂದ ವಿರುದ್ಧವಾಗಿದೆಯೋ, ಇಲ್ಲವೋ? ಎಂಬುದು ಈ ಅಧಿಕರಣದಲ್ಲಿ ಮಾಡುತ್ತಿರುವ ಪ್ರಧಾನ ವಿಚಾರ.

**तदर्थं विरिञ्चस्य स्रष्टृत्वश्रुतिः किं विरिञ्चस्य स्वातन्त्र्येण सर्वस्रष्टृत्वाभिप्राया किं वा कतिपयपदार्थसृष्टौ विरिञ्चस्य द्वारत्वमात्राभिप्रायेति ।**

ಇದಕ್ಕೆ ಪೂರವಾಗಿ ಚತುರ್ಮುಖಬ್ರಹ್ಮನೇ ಜಗತ್ತನ್ನು ಸೃಷ್ಟಿ ಮಾಡುತ್ತಾನೆಂದು ಪ್ರತಿಪಾದನೆ ಮಾಡುವ ಶ್ರುತಿಯು ಸ್ವತಂತ್ರವಾಗಿ ಸೃಷ್ಟಿ ಮಾಡುತ್ತಾನೆ ಎಂಬ ಅಭಿಪ್ರಾಯದಿಂದ ಹೊರಟಿದೆಯೋ

ಅಥವಾ ಕೆಲವು ಪದಾರ್ಥಗಳ ಸೃಷ್ಟಿಗೆ ಚತುರ್ಮುಖನು ಕೇವಲ ದ್ವಾರನಾಗಿದ್ದಾನೆ ಎಂಬ ಅಭಿಪ್ರಾಯದಿಂದ ಹೊರಟಿದೆಯೋ? ಎಂಬುದನ್ನು ವಿಚಾರ ಮಾಡಲಾಗಿದೆ.

**तदर्थं सर्वस्रष्टृत्वं किं त्रिवृत्कुर्वतोऽप्युत त्रिवृत्कुर्वत एवेति । तदर्थं रूपादिकं किं त्रिवृत्करणानपेक्षमुत तत्सापेक्षमिति ।**

ಈ ವಿಚಾರಕ್ಕೆ ಪೂರಕವಾಗಿ ಸರ್ವಸ್ರಷ್ಟೃತ್ವವು ಚತುರ್ಮುಖನ ಜೊತೆ ತ್ರಿವೃತ್ಕರಣವನ್ನು ಮಾಡುವ ವಿಷ್ಣುವಿಗೂ ಇದೆಯೋ ಅಥವಾ ವಿಷ್ಣುವಿಗೆ ಮಾತ್ರ ಸರ್ವಸ್ರಷ್ಟೃತ್ವವು ಇದೆಯೋ? ಎಂಬ ವಿಚಾರವನ್ನು ಮಾಡಲಾಗಿದೆ. ಇದಕ್ಕೆ ಪೂರಕವಾಗಿ ನಾಮ ಹಾಗೂ ರೂಪಗಳು ತ್ರಿವೃತ್ಕರಣವನ್ನು ಅಪೇಕ್ಷೆ ಪಡುವುದಿಲ್ಲವೋ ಅಥವಾ ಅಪೇಕ್ಷೆ ಪಡುತ್ತವೋ? ಎಂಬ ವಿಚಾರವನ್ನು ಮಾಡಲಾಗಿದೆ.

ವಿವರಣೆ – ನಾಮ ಮತ್ತು ರೂಪಾತ್ಮಕವಾದ ಜಗತ್ತಿನ ಸೃಷ್ಟಿಯು ವಿಷ್ಣುವಿನಿಂದಲೇ ಆಗುತ್ತದೆ. ಏಕೆಂದರೆ ಪೃಥಿವೀ, ನೀರು, ತೇಜಸ್ಸುಗಳನ್ನು ಪರಸ್ಪರ ಮಿಶ್ರಣ ಮಾಡುವವನು ಮಾತ್ರ ನಾಮ ಹಾಗೂ ರೂಪಾತ್ಮಕವಾದ ಪ್ರಪಂಚವನ್ನು ಸೃಷ್ಟಿ ಮಾಡಲು ಸಾಧ್ಯ ಎಂಬುದಾಗಿ ಶ್ರುತಿ ಹೇಳಿದೆ. ಆದ್ದರಿಂದ ಪರಮಾತ್ಮನೇ ಸಮಸ್ತ ಜಗತ್ತಿನ ಸೃಷ್ಟಿ ಮಾಡುವವನಾಗಿದ್ದಾನೆ ಎಂಬುದು ಈ ಅಧಿಕರಣದಲ್ಲಿ ಮಾಡಿದ ಸಿದ್ಧಾಂತ.

**अन्ये तु नामरूपव्याकरणं जीवकर्तृकम् । ''अनेन जीवेनात्मनानुप्रविश्य नामरूपे व्याकरवाणि'' इति श्रुतेरिति प्राप्ते ईश्वरकर्तृकम् । ''सेयं देवता'' इत्युपक्रम्य ''नामरूपे व्याकरवाणि'' इत्युत्तमपुरुषोपदेशात् । ''जीवेन'' इत्येतत्तु ''अनुप्रविश्य'' इत्यनेन सम्बध्यते । नतु ''व्याकरवाणि'' इत्यनेनेत्याहुः ।**

ಅದ್ವೈತಿಗಳು ಸೂತ್ರವನ್ನು ಹೀಗೆ ವ್ಯಾಖ್ಯಾನ ಮಾಡುತ್ತಾರೆ. ನಾಮರೂಪಗಳನ್ನು ಸೃಷ್ಟಿ ಮಾಡುವವನು ಜೀವನೇ ಆಗಿದ್ದಾನೆ. ಏಕೆಂದರೆ 'ಅನೇನ ಜೀವೇನಾತ್ಮನಾಽನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ' ನಾನು ಈ ಜೀವರೂಪದಿಂದ ನಾಮಾತ್ಮಕವಾದ ಹಾಗೂ ರೂಪಾತ್ಮಕವಾದ ಪ್ರಪಂಚವನ್ನು ಸೃಷ್ಟಿ ಮಾಡುತ್ತೇನೆ ಎಂದು ಬ್ರಹ್ಮನು ತಿಳಿದನು ಎಂಬ ಶ್ರುತಿಯು ಈ ವಿಷಯದಲ್ಲಿ ಆಧಾರವಾಗಿದೆ. ಇಷ್ಟು ಅಧಿಕರಣದ ಪೂರ್ವಪಕ್ಷ.

ಈಶ್ವರನೇ ಕರ್ತೃವಾಗಿದ್ದಾನೆ ಹೊರತು ಜೀವನಲ್ಲ. ಏಕೆಂದರೆ 'ಸೇಯಂ ದೇವತಾ ಎಂಬುದಾಗಿ ಪ್ರಾರಂಭ ಮಾಡಿ 'ನಾಮರೂಪೇ ವ್ಯಾಕರವಾಣಿ' ಎಂಬುದಾಗಿ ಉತ್ತಮ ಪುರುಷವನ್ನು ಪ್ರಯೋಗ ಮಾಡಿದೆ. ಉತ್ತಮ ಪುರುಷನಾದವನು ಈಶ್ವರನೇ ಆಗಿರುವುದರಿಂದ ಅವನೇ ನಾಮರೂಪಾತ್ಮಕ ಪ್ರಪಂಚವನ್ನು ಸೃಷ್ಟಿ ಮಾಡುತ್ತಾನೆ. ಹಾಗಾದರೆ 'ಅನೇನ ಜೀವೇನ' ಎಂಬ ಶ್ರುತಿಗೆ ಹೇಗೆ ಅರ್ಥ ಮಾಡಬೇಕು? ಎಂದರೆ 'ಜೀವೇನ' ಎಂಬ ಪದಕ್ಕೆ ಅನುಪ್ರವಿಶ್ಯ ಎಂಬುದರ ಜೊತೆ ಅನ್ವಯವನ್ನು ಮಾಡಬೇಕು. ಆಗ ಜೀವನ ಜೊತೆ ನಾನು ದೇಹವನ್ನು ಪ್ರವೇಶ ಮಾಡುತ್ತೇನೆ ಎಂಬುದು ತಿಳಿಯುತ್ತದೆ. ಹೊರತು ವ್ಯಾಕರವಾಣಿ ಎಂಬುದರ ಜೊತೆ ಜೀವೇನ ಎಂಬ ಪದಕ್ಕೆ ಅನ್ವಯವನ್ನು ತಿಳಿಯಬಾರದು. ಇಷ್ಟು ಅಧಿಕರಣದ ಸಿದ್ಧಾಂತ.

ಸಂಜ್ಞಾಮೂರ್ತಿಕ್ಲೃಪ್ತ್ಯಧಿಕರಣ (೨-೪-೧೨)

**तन्न । जीवेश्वरशब्देन नामरूपवद्विशिष्टविवक्षायां तस्य स्वनामरूपकर्तृत्वाभावात्, चिन्मात्रविवक्षायाञ्च तस्याकर्तृत्वाज्जीवकर्तृत्वपूर्वपक्षस्य ईश्वरकर्तृत्वसिद्धान्तस्य चायोगात् । जीवभावस्य प्रतिबिम्बनरूपप्रवेशाधीनत्वेन जीवरूपेण प्रवेशोक्त्ययोगाच्च ॥**

**॥ इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् संज्ञामूर्तिकॢप्त्यधिकरणं सम्पूर्णम् ॥१२॥**

ಅದ್ವೈತಿಗಳ ಈ ಅಧಿಕರಣ ರಚನೆಯು ಅಯುಕ್ತವಾಗಿದೆ. 'ಅನೇನ ಜೀವೇನ' ಎಂಬ ಶ್ರುತಿಯಲ್ಲಿರುವ ಜೀವ ಹಾಗೂ ಈಶ್ವರ ಶಬ್ದದಿಂದ ನಾಮರೂಪಗಳುಳ್ಳ ವಿಶಿಷ್ಟ ಚೇತನರನ್ನು ವಿವಕ್ಷಿಸುವಿರೋ ಅಥವಾ ಚಿನ್ಮಾತ್ರಗಳನ್ನಷ್ಟೇ ವಿವಕ್ಷಿಸುವಿರೋ? ನಾಮರೂಪಗಳುಳ್ಳ ವಿಶಿಷ್ಟ ಚೈತನ್ಯನನ್ನು ವಿವಕ್ಷಿಸಿದರೆ ಪೂರ್ವಪಕ್ಷವೇ ಹುಟ್ಟುವುದಿಲ್ಲ. ಏಕೆಂದರೆ ಸೃಷ್ಟಿ ಮಾಡಿದ ಮೇಲೆ ಜೀವನು ಹುಟ್ಟಲು ಸಾಧ್ಯ. ಜೀವಭಾವ ಹೊಂದಿರುವ ವ್ಯಕ್ತಿಯು ನಾಮರೂಪವನ್ನು ಸೃಷ್ಟಿ ಮಾಡುತ್ತಾನೆ ಎಂದು ಹೇಳಲು ಹೇಗೆ ಸಾಧ್ಯವಾಗುತ್ತದೆ? ಏಕೆಂದರೆ ಈ ಜೀವಾತ್ಮನ ರೂಪವನ್ನು ಹಾಗೂ ನಾಮವನ್ನು ಸೃಷ್ಟಿ ಮಾಡಿದವರು ಯಾರು? ಎಂಬ ಪ್ರಶ್ನೆ ಪ್ರಾಪ್ತವಾಗುತ್ತದೆ. ಇದರಂತೆ ಸಿದ್ಧಾಂತವೂ ಕೂಡ ಯುಕ್ತವಲ್ಲ. ಅದ್ವೈತ ಮತದಲ್ಲಿ ವಿಶಿಷ್ಟ ಬ್ರಹ್ಮನಿಗೆ ಸ್ವನಾಮಕರ್ತೃತ್ವವನ್ನು ಅಂಗೀಕಾರ ಮಾಡಿರುವುದಿಲ್ಲ.

ಜೀವೇಶ್ವರ ಶಬ್ದದಿಂದ ಚಿನ್ಮಾತ್ರನನ್ನು ವಿವಕ್ಷಿಸುತ್ತೇವೆ ಎಂಬ ಎರಡನೇ ಪಕ್ಷವೂ ಕೂಡ ತಪ್ಪು. ಚಿನ್ಮಾತ್ರನು ಕರ್ತೃವೆಂದು ಅದ್ವೈತಿಗಳು ಒಪ್ಪಿಲ್ಲ. ಅಷ್ಟೇ ಅಲ್ಲದೇ, ಚಿನ್ಮಾತ್ರನೇ ಚಿನ್ಮಾತ್ರನನ್ನು ಸೃಷ್ಟಿ ಮಾಡಿದನು ಎಂದು ಹೇಳಿದರೆ ಬಧಿರಕಲಹದಂತೆ ಪೂರ್ವಪಕ್ಷ ಹಾಗೂ ಸಿದ್ಧಾಂತ ಎರಡೂ ಕೂಡ ಅಸಂಗತವಾಗುತ್ತವೆ. ಹೀಗೆ ಜೀವಕರ್ತೃತ್ವ ಪೂರ್ವಪಕ್ಷವಾಗಲೀ, ಈಶ್ವರಕರ್ತೃತ್ವ ಸಿದ್ಧಾಂತವಾಗಲೀ ಅಸಮಂಜಸವೆಂದು ಸಿದ್ಧವಾಯಿತು.

ಅದ್ವೈತ ಸಿದ್ಧಾಂತದಲ್ಲಿ ಅನುಪ್ರವೇಶ ಎಂಬ ಶಬ್ದಕ್ಕೆ ಪ್ರತಿಬಿಂಬವಾಗುವುದು ಎಂದರ್ಥ. ಹೀಗಿರುವಾಗ ಬ್ರಹ್ಮನು ಜೀವರಲ್ಲಿ ಪ್ರವೇಶಿಸಿದನು ಎಂಬುದಕ್ಕೆ ಪ್ರತಿಬಿಂಬಭಾವವನ್ನು ಹೊಂದಿದನು ಎಂದೇ ಅರ್ಥವನ್ನು ಹೇಳಬೇಕು. ಆದ್ದರಿಂದ ಜೀವಭಾವವು ಪ್ರತಿಬಿಂಬನವೆಂಬ ಪ್ರವೇಶಾಧೀನವಾಯಿತು. ಇಂತಹ ಜೀವನಲ್ಲಿ ಬ್ರಹ್ಮನ ಪ್ರವೇಶವು ಯುಕ್ತವಾಗಲು ಹೇಗೆ ಸಾಧ್ಯ? ಪ್ರತಿಬಿಂಬನವು ಸಿದ್ಧವಾದರೆ ಜೀವಭಾವ ಸಿದ್ಧವಾಗುತ್ತದೆ. ಜೀವಭಾವ ಸಿದ್ಧವಾದ ಮೇಲೆ ಪ್ರತಿಬಿಂಬನವು ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯ ದೋಷ ಬರುವುದರಿಂದ ಸಿದ್ಧಾಂತ ಶ್ರುತಿ ವ್ಯಾಖ್ಯಾನವು ಅಯುಕ್ತವಾಯಿತು.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ ಸಂಜ್ಞಾಮೂರ್ತಿಕ್ಲೃಪ್ತ್ಯಧಿಕರಣವು ಸಂಪೂರ್ಣವಾಯಿತು

ಪರಿಪೂರ್ಣಚಂದ್ರಿಕಾ

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**संज्ञामूर्तिक्लृप्तिः ।। पेटिकेति ।।** प्राणचिन्तापेटिकायां तदाश्रयशरीरचिन्ताया अन्तर्भावसङ्गतिः पूर्वाधिकरणेनानन्तरसङ्गतिश्चेत्यर्थः । यद्वा प्राणपेटिका प्राक्तनी सर्वापि चिन्तेति तदनन्तरसङ्गतिः पूर्वाधिकरणानन्तरसङ्गतिश्चेत्यर्थ इति द्रष्टव्यम्।।

ಗ್ರಂಥದಲ್ಲಿ ಪೇಟಿಕಾಧಿಕರಣಸಂಗತಿ ಎಂದು ಹೇಳಿದ್ದಾರೆ. ಇದರ ಅಭಿಪ್ರಾಯವನ್ನು ಎರಡು ರೀತಿಯಲ್ಲಿ ತಿಳಿಯಬೇಕು. ಇಲ್ಲಿಯ ತನಕ ಇಂದ್ರಿಯಗಳ ಬಗ್ಗೆ ವಿಚಾರವನ್ನು ಮಾಡಿದ್ದಾಯಿತು. ಈ ಇಂದ್ರಿಯಗಳ ವಿಚಾರ ಎಂಬ ಪೇಟಿಕೆಯಲ್ಲಿ ಇಂದ್ರಿಯಗಳಿಗೆ ಆಶ್ರಯವಾದ ಶರೀರದ ವಿಚಾರವೂ ಕೂಡ ಗರ್ಭಿತವಾಗಿದೆ. ಆದ್ದರಿಂದ ಅಂತರ್ಭಾವ ರೂಪವಾದ ಸಂಗತಿಯು ಈ ಅಧಿಕರಣಕ್ಕೆ ಇದೆ. ಹಾಗೂ ಹಿಂದಿನ ಅಧಿಕರಣದ ತನಕ ಇಂದ್ರಿಯಗಳ ಬಗ್ಗೆ ವಿಚಾರ ಮಾಡಿದ್ದಾಯಿತು. ಅಂತಹ ಇಂದ್ರಿಯಗಳಿಗೆ ಆಶ್ರಯವಾದದ್ದು ಶರೀರವಾಗಿರುವುದರಿಂದ ಈಗ ಶರೀರದ ಬಗ್ಗೆ ವಿಚಾರವು ಪ್ರಸಕ್ತವಾಗಿದೆ. ಹೀಗೆ ಹಿಂದಿನ ಅಧಿಕರಣದ ಆನಂತರ್ಯರೂಪವಾದ ಸಂಗತಿಯನ್ನೂ ಕೂಡ ತಿಳಿಯಬೇಕು. ಗ್ರಂಥದಲ್ಲಿ 'ಅಧಿಕರಣಸಂಗತಿ' ಎಂಬಲ್ಲಿರುವ ದ್ವಿವಚನಕ್ಕೆ ಅಂತರ್ಭಾವರೂಪವಾದ ಪೇಟಿಕಾಸಂಗತಿ ಹಾಗೂ ಆನಂತರ್ಯ ಸಂಗತಿ ಎಂಬೆರಡು ಸಂಗತಿಗಳು ಇವೆ ಎಂದರ್ಥ.

ಹಿಂದಿನ ಅಧಿಕರಣದಲ್ಲಿ ಇಂದ್ರಿಯಗಳ ಬಗ್ಗೆ ವಿಚಾರವನ್ನು ಮಾಡಿದ್ದಾಯಿತು. ಆದ್ದರಿಂದ ಪೇಟಿಕಾ ಸಂಗತಿ ಎಂದರೆ ಇಂದ್ರಿಯಗಳ ಬಗ್ಗೆ ವಿಚಾರ ಮಾಡುವಿಕೆ ಎಂಬ ಪೇಟಿಕಾ ಸಂಗತಿಯು ಹಿಂದೆ ಮುಗಿಯಿತು. ಆ ಪೇಟಿಕಾ ಸಂಗತಿಯಿಂದ ಈ ಅಧಿಕರಣಕ್ಕೆ ಆನಂತರ್ಯ ಸಂಗತಿಯು ಇದೆ. ಏಕೆಂದರೆ ಇಂದ್ರಿಯಗಳ ಬಗ್ಗೆ ಪೇಟಿಕಾ ಸಂಗತಿ ಆದ ಮೇಲೆ ತದಾಶ್ರಯವಾದ ಶರೀರದ ಬಗ್ಗೆ ವಿಚಾರವು ಪ್ರಾಪ್ತವಾಗುತ್ತದೆ. ಹೀಗೆ ಪೇಟಿಕಾಧಿಕರಣ ಸಂಗತಿ ಎಂಬುದಕ್ಕೆ ಮತ್ತೊಂದು ವ್ಯಾಖ್ಯಾನವನ್ನು ತಿಳಿಯಬೇಕು.

**प्रकाशः – किन्तु विरिञ्चस्येति ।।** एतच ''न चात्र चतुर्मुखस्याप्रसक्तिराशङ्कनीया। स्वयमेवायं भगवान् प्राणत्वादूर्ध्वं चतुर्मुखपदमधिष्ठास्यतीति ज्ञापयन् प्राणस्वरूपनिरूपणावसरे चतुर्मुखं प्रसञ्जयति'' इति तत्वप्रदीपोक्तं ध्येयम् ।

'ಕಿಂತು ವಿರಿಂಚಸ್ಯ' ಎಂಬುದರಿಂದ ತತ್ವಪ್ರದೀಪದ ಅಭಿಪ್ರಾಯವನ್ನು ಗ್ರಂಥಕಾರರು ವ್ಯಾಖ್ಯಾನ ಮಾಡಿದ್ದಾರೆ. ತತ್ವಪ್ರದೀಪದಲ್ಲಿ ಹೀಗೆ ಹೇಳಿದ್ದಾರೆ – 'ನ ಚಾತ್ರ ಚತುರ್ಮುಖಸ್ಯಾಪ್ರಸಕ್ತಿರಾಶಂಕನೀಯಾ । ಸ್ವಯಮೇವಾಯಂ ಭಗವಾನ್ ಪ್ರಾಣತ್ವಾದೂರ್ಧ್ವಂ ಚತುರ್ಮುಖಪದಮಧಿಷ್ಠಾಸ್ಯತೀತಿ ಜ್ಞಾಪಯನ್ ಪ್ರಾಣಸ್ವರೂಪನಿರೂಪಣಾವಸರೇ ಚತುರ್ಮುಖಂ ಪ್ರಸಂಜಯತಿ' ಚತುರ್ಮುಖ ಬ್ರಹ್ಮನಿಗೆ ಜಗತ್ ಸ್ರಷ್ಟೃತ್ವವಿದೆಯೋ ಇಲ್ಲವೋ? ಎಂಬ ವಿಚಾರವನ್ನು ಮಾಡುತ್ತಿರುವುದು ಅಪ್ರಸಕ್ತ ಎಂದು ತಿಳಿಯಬಾರದು. ಏಕೆಂದರೆ ಸ್ವತಃ ಪರಮಾತ್ಮನೇ ಮುಖ್ಯಪ್ರಾಣನಿಗೆ ಮುಂದೆ ಚತುರ್ಮುಖಪದವಿಯನ್ನು ನೀಡುತ್ತಾನೆ ಎಂದು

ಶ್ರುತಿಯು ಹೇಳುತ್ತಿದೆ. ಆದ್ದರಿಂದ ಹಿಂದಿನ ಅಧಿಕರಣದಲ್ಲಿ ಮುಖ್ಯಪ್ರಾಣನ ಬಗ್ಗೆ ವಿಚಾರ ಮಾಡಿದ್ದಾಯಿತು. ಈ ಮುಖ್ಯಪ್ರಾಣನೇ ಮುಂದೆ ಚತುರ್ಮುಖ ಬ್ರಹ್ಮ ಪದವಿಯನ್ನು ಹೊಂದುವುದರಿಂದ ಈಗ ಚತುರ್ಮುಖ ಬ್ರಹ್ಮನ ಬಗ್ಗೆ ವಿಚಾರವು ಪ್ರಸಕ್ತವಾಗುತ್ತದೆ. ಹೀಗೆ ತತ್ವಪ್ರದೀಪದಲ್ಲಿ ಹೇಳಿದ್ದಾರೆ.

**प्रकाशः** – पूर्वोत्तरपक्षटीकासूचितचिन्ता आह – **अत्रेति** ।। **स्पष्टः** फलफलिभावः। मतद्वयेऽपि संज्ञेत्यादिसूत्रत्रयमेकमधिकरणम् ।। **जीवकर्तृकमिति**।। लोके डित्थादिनामकरणे घटादिरूपकरणे च जीवस्य कर्तृत्वदर्शनाच्छतेश्चेति भावः।।

ಪೂರ್ವಪಕ್ಷ ಹಾಗೂ ಸಿದ್ಧಾಂತ ಪಕ್ಷದಿಂದ ಸೂಚಿತವಾದ ಸಂಶಯ ಪರಂಪರೆಯನ್ನು 'ಅತ್ರ' ಇತ್ಯಾದಿ ಗ್ರಂಥದಿಂದ ತೋರಿಸುತ್ತಿದ್ದಾರೆ. ಪೂರ್ವಪಕ್ಷದ ಹಾಗೂ ಸಿದ್ಧಾಂತದ ಫಲಫಲಿಭಾವವು ಸ್ಪಷ್ಟವಾಗಿರುವುದರಿಂದ ಪ್ರತ್ಯೇಕವಾಗಿ ಅದನ್ನು ಉಲ್ಲೇಖ ಮಾಡಿಲ್ಲ.

ಅದ್ವೈತ ಮತದಲ್ಲಿ ಹಾಗೂ ವಿಶಿಷ್ಟಾದ್ವೈತ ಮತದಲ್ಲಿ ಈ ಅಧಿಕರಣದಲ್ಲಿರುವ ಎರಡು ಸೂತ್ರಗಳು ಹಾಗೂ ಮುಂದಿನ ಮಾಂಸಾದಿಭೂಮ ಎಂಬ ಸೂತ್ರವು ಸೇರಿ ಒಂದೇ ಅಧಿಕರಣವೆಂದು ಪರಿಗಣಿಸಿದ್ದಾರೆ 'ಜೀವಕರ್ತೃಕಂ' ಎಂದು. ಅಭಿಪ್ರಾಯ ಹೀಗಿದೆ – ಲೋಕದಲ್ಲಿ ದೇವದತ್ತ ಮೊದಲಾದ ನಾಮಕರಣವನ್ನು ಜೀವರೇ ಮಾಡುತ್ತಿದ್ದಾರೆ. ಘಟಪಟ ಮೊದಲಾದ ರೂಪದ ಸೃಷ್ಟಿಯನ್ನೂ ಕೂಡ ಜೀವರೇ ಮಾಡುತ್ತಿದ್ದಾರೆ. ಹೀಗೆ ಜೀವರಿಗೆ ಕರ್ತೃತ್ವವು ಪ್ರತ್ಯಕ್ಷ ಸಿದ್ಧವಾಗಿದೆ. ಹಾಗೂ ಶ್ರುತಿಪ್ರಮಾಣದಿಂದಲೂ ಸಿದ್ಧವಾಗಿದೆ. ಹಾಗಾಗಿ ಅದ್ವೈತಿಗಳು ಜೀವಕರ್ತೃಕಪೂರ್ವಪಕ್ಷವನ್ನು ರಚನೆ ಮಾಡಿದ್ದಾರೆ.

**प्रकाशः** – **उत्तमपुरुषेति** ।। ''व्याकरवाणि'' इति लोडुत्तमपुरुषप्रयोगेण देवताया एव नामरूपव्याकर्तृत्वप्रतीतेरित्यर्थः । चिन्मात्रपक्षे दोषान्तरमाह – **जीवेति** ।। तत्रापि चिन्मात्रस्य सत्त्वेन तदितरकर्तृत्वसिद्धान्तो न युक्त इत्यर्थः । श्रुतिगत्युक्तिं च निराह – **जीवभावस्येति** ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे संज्ञामूर्तिक्लृप्त्यधिकरणं सम्पूर्णम् ।।१२।।**

'ವ್ಯಾಕರವಾಣಿ' ಎಂಬುದು ಲೋಟ್‌ಲಕಾರದ ಉತ್ತಮ ಪುರುಷ. ಯಾರು ಜಗತ್ತಿನ ಸೃಷ್ಟಿಯನ್ನು ಮಾಡಬೇಕೆಂದು ಇಚ್ಛೆಯನ್ನು ಪಟ್ಟನೋ ಅಂತಹ ಬ್ರಹ್ಮನೇ ಸೃಷ್ಟಿ ಮಾಡುತ್ತೇನೆ ಎಂಬುದಾಗಿ ಉತ್ತಮ ಪುರುಷವನ್ನು ಪ್ರಯೋಗ ಮಾಡಿರುವುದರಿಂದ ನಾಮರೂಪ ವ್ಯಾಕರಣ ಕರ್ತೃತ್ವವು ಬ್ರಹ್ಮನಿಗೆ ಸಿದ್ಧವಾಗುತ್ತದೆ.

ಚಿನ್ಮಾತ್ರನನ್ನು ಜೀವೇಶ್ವರ ಪದಗಳಿಂದ ವಿವಕ್ಷಿಸಿದರೆ 'ಅಕರ್ತೃತ್ವಾತ್' ಎಂಬುದಾಗಿ ದೋಷವನ್ನು ಹೇಳಿ ಜೀವಕರ್ತೃತ್ವ ಪೂರ್ವಪಕ್ಷಸ್ಯ' ಎಂಬುದರಿಂದ ಮತ್ತೊಂದು ದೋಷವನ್ನು ಹೇಳಿದ್ದಾರೆ. ಚಿನ್ಮಾತ್ರನಷ್ಟೇ ಇರುವುದರಿಂದ ತದಿತರಕರ್ತೃತ್ವ ಸಿದ್ಧಾಂತವು ಅಯುಕ್ತವಾಗುತ್ತದೆಂದು ತಿಳಿಯಬೇಕು. ಮತ್ತು ಶ್ರುತಿಗೆ ಅವರು ಮಾಡಿದ ವ್ಯಾಖ್ಯಾನವನ್ನು ನಿರಾಕರಣೆ ಮಾಡಲು 'ಜೀವಭಾವಸ್ಯ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಸಂಜ್ಞಾಮೂರ್ತಿಕ್ಲೃಪ್ತ್ಯಧಿಕರಣವು ಮುಕ್ತಾಯವಾಯಿತು.

ಪರಿಪೂರ್ಣಚಂದ್ರಿಕಾ

# ಮಾಂಸಾಧಿಕರಣ

(೨-೪-೧೩)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ,
ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

***

॥ ಶ್ರೀಗುರುಭ್ಯೋ ನಮಃ ॥

# ಮಾಂಸಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

**सूत्रम् — मांसादिभौमं यथाशब्दमितरयोश्च ॥**

ಮಾಂಸವು ಪಾರ್ಥಿವವಾಗಿದೆ ಹೊರತು ಸಮಗ್ರ ಶರೀರವನ್ನು ಪಾರ್ಥಿವವನ್ನು ಪರಿಗಣಿಸಬಾರದು. 'ಯತ್ಕಠಿಣಂ ಸಾ ಪೃಥಿವೀ' ಎಂಬ ಶ್ರುತಿಗೆ ಅನುಸಾರಿಯಾಗಿ ಕಠಿಣವಾದ ಭಾಗವನ್ನಷ್ಟೇ ಪಾರ್ಥಿವವೆನ್ನಬೇಕು. ನೀರು ಮತ್ತು ತೇಜಸ್ಸಿನ ಭಾಗ ಯಾವುದೆಂಬುದನ್ನು ಶ್ರುತಿಯಿಂದಲೇ ತಿಳಿದುಕೊಳ್ಳಬೇಕು. ಅಷ್ಟೇ ಅಲ್ಲದೇ ಮಾಂಸವು ಜಲ ಮತ್ತು ತೇಜಸ್ಸುಗಳ ಕಾರ್ಯವೂ ಆಗಿರುತ್ತದೆ. ಇದನ್ನೂ ಕೂಡ ಶ್ರುತಿಗೆ ಅನುಗುಣವಾಗಿ ಅಂಗೀಕರಿಸಬೇಕು.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** — भौममित्युपलक्षणम् । तच्छरीरे कठिणं **मांसादि** तदेव **भौमं** पार्थिवं न सर्वशरीरम् । किं तर्हि **यथाशब्दं** 'यत्कठिणं सा पृथिवी' इति श्रुतिमनुसृत्य। शरीरे **इतरयोः** अप्तेजसोश्च कार्यं शोणितमज्जादिरूपमङ्गीकार्यम् । यथा मांसादिकं भौमं पृथिवीकार्यम् । न केवलं पृथिवीकार्यं किन्नामेतरयोरप्तेजसोश्च कार्यं यथाश्रुत्यङ्गीकार्यमित्यर्थः ॥१॥

ಭೌಮಮ್ ಎಂಬುದನ್ನು ಉಪಲಕ್ಷಣವೆಂದು ತಿಳಿಯಬೇಕು. ಶರೀರದಲ್ಲಿ ಕಠಿಣವಾದ, ಮಾಂಸಾದಿ = ಮಾಂಸವೇ ಮೊದಲಾದ ಭಾಗವು, ಭೌಮಂ = ಪಾರ್ಥಿವವಾಗಿದೆ. ಸಮಗ್ರ ಶರೀರವು ಪಾರ್ಥಿವವಲ್ಲ. ಯಥಾಶಬ್ದಂ = 'ಯತ್ಕಠಿನಂ ಸಾ ಪೃಥಿವೀ' ಎಂಬ ಶ್ರುತಿಗೆ ಅನುಸಾರಿಯಾಗಿ ಇದನ್ನು ತಿಳಿಯಬೇಕು. ಇತರಯೋಃ = ಉಳಿದ ರಕ್ತ, ಮಜ್ಜ ಮೊದಲಾದವು ಎಂದು ಅಂಗೀಕರಿಸಬೇಕು. ಯಾವರೀತಿಯಾಗಿ ಮಾಂಸಾದಿಗಳು ಪೃಥಿವಿಯ ಕಾರ್ಯವೋ, ಅದರಂತೆ ರಕ್ತಾದಿಗಳು ಅಪ್ ಮತ್ತು ತೇಜಸ್ಸು ಮೊದಲಾದವುಗಳ ಕಾರ್ಯವಾಗಿದೆ. ಮಾಂಸವು ಕೇವಲ ಪೃಥಿವಿಯ ಕಾರ್ಯವಷ್ಟೇ ಅಲ್ಲ. ಅಪ್ ಮತ್ತು ತೇಜಸ್ಸುಗಳ ಕಾರ್ಯವೂ ಆಗಿರುತ್ತದೆಂಬುದನ್ನು ಶ್ರುತಿಗೆ ಅನುಗುಣವಾಗಿ ಅಂಗೀಕರಿಸಬೇಕು.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – 'अद्भ्यो हीदमुत्पद्यते आपो वाव मांसमस्थि च भवत्यापः शरीरमाप एवेदं सर्वम्' इति कौण्डिन्यश्रुतिः ।**

ಅನುವಾದ - ಈ ಶರೀರವು ನೀರಿನಿಂದ ಹುಟ್ಟುತ್ತದೆ. ನೀರೇ ಮಾಂಸವಾಗಿದೆ. ಎಲುಬಾಗಿದೆ. ನೀರೆ ಈ ದೇಹವಾಗಿದೆ. ಈ ಶರೀರವೆಲ್ಲವೂ ಜಲಮಯ. ಹೀಗೆ ಕೌಂಡಿನ್ಯಶ್ರುತಿಯು ಹೇಳುತ್ತಿದೆ.

ಪ್ರತಿಪದಾರ್ಥ -- ಅದ್ಭ್ಯಃ ಹಿ = ನೀರಿನಿಂದಲೇ, ಇದಂ = ಈ ಶರೀರವು, ಉತ್ಪದ್ಯತೇ = ಹುಟ್ಟುತ್ತದೆ, ಆಪೋ ವಾವ = ನೀರೇ, ಮಾಂಸಮ್ = ಮಾಂಸವು, ಅಸ್ಥಿಚ = ಅಸ್ಥಿಯೂ ಕೂಡ, ಭವಂತಿ = ಆಗುತ್ತದೆ. ಆಪಃ = ನೀರೇ, ಶರೀರಮ್ = ಈ ದೇಹವು, ಆಪಃ ಏವ = ನೀರೇ, ಇದಂ ಸರ್ವಂ = ಈ ಶರೀರವೆಲ್ಲವೂ, ಇತಿ = ಹೀಗೆ, ಕೌಂಡಿನ್ಯಶ್ರುತಿಃ = ಕೌಂಡಿನ್ಯಶ್ರುತಿಯು ಹೇಳುತ್ತಿದೆ.

**भाष्यम् – 'अम्मयं तु यतो मांसमतस्तृप्तिश्च मांसतः ।' इति च भारते ।।**

**'पृथिवी शरीरमाकाशमात्मा' (बृ.५.२.१३.) इति च ।**

ಅನುವಾದ - ಯಾವ ಕಾರಣದಿಂದ ಮಾಂಸವು ಜಲಮಯವಾಗಿದೆಯೋ ಆದ್ದರಿಂದಲೇ ಮಾಂಸದಿಂದ ತೃಪ್ತಿ ಸಿಗುತ್ತದೆ. ಹೀಗೆ ಮಹಾಭಾರತವು ಹೇಳಿದೆ ಆದರೆ ಬೃಹದಾರಣ್ಯಕೋಪನಿಷತ್ತಿನಲ್ಲಿ ಶರೀರವು ಪೃಥಿವಿಯಲ್ಲಿ ಸೇರುತ್ತದೆ ಎಂಬ ಶ್ರುತಿಯು ಶರೀರವನ್ನು 'ಪೃಥಿವೀ ಶರೀರಮಾಕಾಶಮಾತ್ಮಾ' ಎಂಬುದಾಗಿ ಪಾರ್ಥಿವವೆಂದು ಕರೆದಿದೆ. ಇಷ್ಟು ಪೂರ್ವಪಕ್ಷ.

ಪ್ರತಿಪದಾರ್ಥ -- ಯತಃ = ಯಾವ ಕಾರಣದಿಂದ, ಮಾಂಸಂ = ಮಾಂಸವು, ಅಮ್ಮಯಂ = ಜಲಮಯವಾಗಿದೆಯೋ ಆದ್ದರಿಂದ, ಮಾಂಸತಃ = ಮಾಂಸದಿಂದ, ತೃಪ್ತಿಶ್ಚ = ತೃಪ್ತಿಯು, ದೊರೆಯುತ್ತದೆ. ಇತಿ ಚ = ಹೀಗೆ, ಭಾರತೇ = ಮಹಾಭಾರತದಲ್ಲಿ ಹೇಳಿದೆ.

ಮಾಂಸಾಧಿಕರಣ (೨-೪-೧೩)

ಶರೀರಂ = ಶರೀರವು, ಪೃಥಿವೀಂ = ಪೃಥಿವಿಯನ್ನು, ಆತ್ಮಾ = ದೇಹದೊಳಗಿನ ಪರಮಾತ್ಮನ ರೂಪವು, ಆಕಾಶಂ = ಆಕಾಶವನ್ನು ಸೇರುತ್ತದೆ. ಹೀಗೆ ಶರೀರವನ್ನು 'ಪಾರ್ಥಿವ' ಎಂದು ಶ್ರುತಿ ಹೇಳುತ್ತದೆ.

**भाष्यम् — अतो ब्रवीति —**

**।। मांसादिभौमं यथाशब्दमितरयोश्च ।।१।।**

**'यत् कठिनं सा पृथिवी यद् द्रवं तदापो यदुष्णं तत् तेजः' (गर्भ.३.) इति श्रुतेर्मांसाद्येव भौमं, न सर्वशरीरम् । अप्तेजसोश्च कार्यं यथाशब्दमङ्गीकर्तव्यम् ।**

ಅನುವಾದ - ಈ ಆಕ್ಷೇಪಕ್ಕೆ ಸೂತ್ರಕಾರರು ಉತ್ತರಿಸುತ್ತಿದ್ದಾರೆ -

ಈ ಶರೀರದ ಕಠಿಣಭಾಗವು ಪೃಥಿವಿಯಾಗಿದೆ. ದ್ರವಭಾಗವು ನೀರು. ಬಿಸಿ ಅಂಶವು ತೇಜೋರೂಪವಾಗಿದೆ. ಹೀಗೆ ಗರ್ಭೋಪನಿಷತ್ತು ಹೇಳುತ್ತಿರುವುದರಿಂದ ಮಾಂಸಾದಿ ಕಠಿಣಭಾಗ ಮಾತ್ರ ಪಾರ್ಥಿವವಾಗಿದೆ. ಸಕಲಶರೀರವಲ್ಲ. ನೀರಿನ ಭಾಗವನ್ನು ಹಾಗೂ ತೇಜಸ್ಸಿನ ಭಾಗವನ್ನು ಶ್ರುತಿಯಲ್ಲಿ ಹೇಳಿದಂತೆ ತಿಳಿಯಬೇಕು.

ಪ್ರತಿಪದಾರ್ಥ -- ಅತೋ ಬ್ರವೀತಿ = ಸಿದ್ಧಾಂತಕ್ಕಾಗಿ ಸೂತ್ರಕಾರರು ಹೇಳುತ್ತಿದ್ದಾರೆ -

ಯತ್ = ಯಾವ ಭಾಗವು, ಕಠಿಣಂ = ಕಠಿಣವಾಗಿದೆಯೋ, ಸಾ = ಅದು, ಪೃಥಿವೀ = ಪಾರ್ಥಿವಭಾಗ, ಯತ್ = ಯಾವ ಭಾಗವು, ದ್ರವಂ = ದ್ರವರೂಪವಾಗಿದೆಯೋ, ತತ್ = ಅದು, ಆಪಃ = ನೀರಿನ ಭಾಗವು, ಯತ್ = ಯಾವ ಭಾಗವು, ಉಷ್ಣಂ = ಬಿಸಿಯಾಗಿದೆಯೋ, ತತ್ = ಅದು, ತೇಜಃ = ತೇಜಭಾಗವು, ಇತಿ = ಹೀಗೆ, ಶ್ರುತೇಃ = ಗರ್ಭಶ್ರುತಿಯು ಹೇಳುತ್ತಿರುವುದರಿಂದ, ಮಾಂಸಾದ್ಯೇವ = ಮಾಸಾಂದಿಗಳು ಮಾತ್ರ, ಭೌಮಂ = ಪಾರ್ಥಿವವಾಗಿದೆ. ನ ಸರ್ವಶರೀರಮ್ = ಸಕಲ ಶರೀರವಲ್ಲ. ಅಪ್ ತೇಜಸೋಶ್ಚ = ಅಗ್ನಿ ಹಾಗೂ ತೇಜಸ್ಸಿನ, ಕಾರ್ಯಂ = ಕಾರ್ಯವು, ಯಥಾಶಬ್ದಂ = ಶ್ರುತಿಯಲ್ಲಿ ಹೇಳಿರುವಂತೆ, ಅಂಗೀಕರ್ತವ್ಯಮ್ = ಒಪ್ಪಬೇಕು.

**भाष्यम् — 'यद् वावाथो विमिश्रं मिश्राद्ध्येतद् भवति मिश्राणि हि भूतानि तस्मादेवैवमाचक्षते भूतानि' इति हि काषायणश्रुतिः ।**

**'पञ्चभूतात्मकं सर्वं तथाप्येकविवक्षया ।**
**एकभूतात्मकत्वेन व्यवहारस्तु वैदिके ।।**
**भौममित्येव काठिन्याच्छैत्यादौदकमित्यपि ।**
**तेजिष्ठत्वात् तैजसं च यथाऽस्थ्नां वचनं श्रुतौ ।।'**

**इति वायुप्रोक्ते ।।१।।**

ಪರಿಪೂರ್ಣಚಂದ್ರಿಕಾ

ಅನುವಾದ - ಯಾವ ಕಾರಣದಿಂದ ಪೃಥಿವೀ, ಜಲ, ತೇಜಸ್ಸು ಇವುಗಳ ಮಿಶ್ರಣವು ಆಗಿದೆಯೋ ಆ ಕಾರಣದಿಂದ ಮಾಂಸಾದಿಗಳು ಭೂತತ್ರಯದ ಮಿಶ್ರಣವೇ ಆಗಿವೆ. ಏಕೆಂದರೆ ಇವುಗಳು ಪರಸ್ಪರ ಮಿಶ್ರಣಗೊಂಡ ಪೃಥಿವಿಯಿಂದಲೇ ಹುಟ್ಟಿವೆ. ಆದ್ದರಿಂದ ಇವುಗಳಿಗೆ ಭೂತಗಳೆಂದು ಹೆಸರು. ಹೀಗೆ ಕಾಷಾಯಣಶ್ರುತಿಯು ಹೇಳುತ್ತಿದೆ.

ಈ ದೇಹದಲ್ಲಿರುವ ಮಾಂಸಾದಿಗಳೆಲ್ಲವೂ ಪಾಂಚಭೂತಿಕವಾದವು. ಆದರೂ ಕೂಡ ಈ ಐದರಲ್ಲಿ ಒಂದು ಭೂತದ್ರವ್ಯವನ್ನು ಪರಿಗಣಿಸಿ ಮಾಂಸಾದಿಗಳಲ್ಲಿ 'ಪಾರ್ಥಿವ' ಎಂಬ ವ್ಯವಹಾರವು ಇರುತ್ತದೆ.

ಕಠಿಣವಾಗಿರುವುದರಿಂದಲೇ ಪಾರ್ಥಿವ ಎಂದು ಬಿಳಿಯಾಗಿರುವುದರಿಂದ ಜಲೀಯವೆಂದು ತೇಜೋಭಾಗ ಹೆಚ್ಚಾಗಿರುವುದರಿಂದ ಎಲುಬುಗಳಿಗೆ ತೇಜಸ್ಸು ಎಂದು ಶ್ರುತಿಯಲ್ಲಿ ಹೇಳಲಾಗಿದೆ. ಹೀಗೆ ವಾಯುಪ್ರೋಕ್ತದಲ್ಲಿದೆ.

ಪ್ರತಿಪದಾರ್ಥ -- ಯತ್ = ಯಾವ ಕಾರಣದಿಂದ, ವಿಶ್ರಾಣಿ ಹಿ ಭೂತಾನಿ = ಪೃಥಿವೀ ಜಲ ತೇಜಸ್ಸು ಇವುಗಳು ಮಿಶ್ರವಾಗಿಯೋ, ಅಥೋ = ಆ ಕಾರಣದಿಂದ, ವಿಮಿಶ್ರಂ = ಮೂರುಭೂತಗಳು ಮಿಶ್ರಣವೇ, ಭವತಿ = ಆಗಿವೆ, ಹಿ = ಏಕೆಂದರೆ, ಏತತ್ = ಈ ಮಾಂಸಾದಿಗಳು, ಮಿಶ್ರಾತ್ = ಪರಸ್ಪರ ಮಿಶ್ರಣಗೊಂಡ ಪೃಥಿವಿಯಿಂದಲೇ, ಭವತಿ = ಹುಟ್ಟಿದೆ, ತಸ್ಮಾತ್ = ಈ ಕಾರಣದಿಂದಲೇ, ಏವಂ = ಹೀಗೆ, ಭೂತಾನಿ = ಭೂತಗಳೆಂದು, ಆಚಕ್ಷತೇ = ಹೇಳುತ್ತಾರೆ.

ಸರ್ವಂ = ದೇಹದಲ್ಲಿರುವ ಮಾಂಸಾದಿಗಳೆಲ್ಲವೂ, ಪಂಚಭೂತಾತ್ಮಕಂ = ಪಾಂಚಭೌತಿಕವಾಗಿವೆ, ತಥಾಪಿ = ಆದರೂ ಕೂಡ, ಏಕವಿವಕ್ಷಯಾ = ಒಂದನ್ನು ವಿವಕ್ಷಿಸಿ, ಏಕಭೂತಾತ್ಮಕತ್ವೇನ = ಮಾಂಸಾದಿಗಳನ್ನು ಪಾರ್ಥಿವ ಎಂದು, ವೈದಿಕೇ = ವೇದಗ್ರಂಥಗಳಲ್ಲಿ, ವ್ಯವಹಾರಸ್ತು = ವ್ಯವಹಾರವಿರುತ್ತದೆ.

ಕಾಠಿಣ್ಯಾತ್ = ಕಠಿಣವಾಗಿರುವುದರಿಂದ, ಭೌಮಮಿತಿ = ಪಾರ್ಥಿವ ಎಂಬ, ಶೌಕ್ಲ್ಯಾತ್ = ಬಿಳಿಯಾಗಿರುವುದರಿಂದ, ಔದುಕಮಿತ್ಯಪಿ = ಜಲೀಯವೆಂದು, ತೇಜಿಷ್ಠತ್ವಾತ್ = ತೇಜೋಭಾಗ ಹೆಚ್ಚಾಗಿರುವುದರಿಂದ, ಅಸ್ಥ್ನಾಂ = ಎಲುಬುಗಳಿಗೆ, ತೈಜಸಾಮ್ = ತೈಜಸವೆಂಬ, ವಚನಂ = ವ್ಯವಹಾರವು, ಶ್ರುತೌ = ಶ್ರುತಿಯಲ್ಲಿರುತ್ತದೆ. ಇತಿ = ಹೀಗೆ ವಾಯುಪ್ರೋಕ್ತೇ = ವಾಯುಪ್ರೋಕ್ತದಲ್ಲಿದೆ.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**तत्वप्रकाशिका – अत्रेश्वरे जगत्कारणे श्रुतिसमन्वयसिद्ध्यर्थं शरीरकारणविषयश्रुतिविरोधपरिहारादस्ति शास्त्रादिसङ्गतिः । जगत्कारणे हरावुक्तः श्रुतिसमन्वयो देहकारणश्रुतीनां विरोधेनाप्रामाण्येऽनुपपन्नः प्राप्नोतीत्यवश्यमसौ परिहर्तव्यः ।**

ಈ ಅಧಿಕರಣವು ಜಗತ್ಕಾರಣನಾದ ಶ್ರೀಹರಿಯಲ್ಲಿ ಶ್ರುತಿಸಮನ್ವಯವು ಸಿದ್ಧವಾಗುವುದಕ್ಕಾಗಿ ಶರೀರ ಕಾರಣ ವಿಷಯಕವಾದ ಶ್ರುತಿಗಳ ವಿರೋಧವನ್ನು ಪರಿಹಾರ ಮಾಡುತ್ತಿದೆ. ಆದ್ದರಿಂದ ಶಾಸ್ತ್ರ-ಅಧ್ಯಾಯ-ಪಾದ ಸಂಗತಿಗಳು ಇರುತ್ತವೆ. ಜಗತ್ಕಾರಣನಾದ ಶ್ರೀಹರಿಯಲ್ಲಿ ಹೇಳಲ್ಪಟ್ಟ ಶ್ರುತಿಸಮನ್ವಯವು ದೇಹಕಾರಣ ವಿಷಯಕವಾದ ಶ್ರುತಿಗಳಿಗೆ ವಿರೋಧವು ಬಂದಾಗ ಅಪ್ರಾಮಾಣ್ಯವು ಬರುವುದರಿಂದ ಅನುಪಪನ್ನವಾಗುತ್ತದೆ. ಆದ್ದರಿಂದ ಈ ಶ್ರುತಿಗಳ ವಿರೋಧವನ್ನು ಅತ್ಯವಶ್ಯವಾಗಿ ಪರಿಹಾರ ಮಾಡಲೇಬೇಕು.

ವಿವರಣೆ – ಹಿಂದಿನ ಸಂಜ್ಞಾಧಿಕರಣದಲ್ಲಿ ದೇಹಾದಿಗಳಿಗೆ ಪರಮಾತ್ಮನೇ ಕರ್ತೃವಾಗಿದ್ದಾನೆಂದು ಸಮರ್ಥನೆ ಮಾಡಲಾಯಿತು. ಈ ಅಧಿಕರಣದಲ್ಲಿ ಶರೀರಕ್ಕೆ ಯಾವುದು ಉಪಾದಾನಕಾರಣವೋ ಅದರ ಬಗ್ಗೆ ವಿಚಾರ ಮಾಡಲಾಗಿದೆ. ಆದ್ದರಿಂದ ದೇಹಾದಿಗಳ ಕರ್ತೃತ್ವದ ವಿಚಾರದ ಅನಂತರ ಕಾರಣತ್ವದ ವಿಚಾರವು ಪ್ರಸಕ್ತವಾಗುವುದರಿಂದ ಈ ಅಧಿಕರಣಕ್ಕೆ ಆನಂತರ್ಯ ಸಂಗತಿಯು ಇರುತ್ತದೆ.

**तत्वप्रकाशिका – प्रकृतो देह एवात्र विषयः । किमाप्यः किं वा पार्थिव उत तैजसौ भूतत्रयात्मको वेति सन्देहः । लेशतः सन्देहबीजं दर्शयन्पूर्वपक्षं सूजयति – अभ्य इति ।। 'अभ्यो हीदम्' इति प्रतिज्ञा । आप इत्युपपादनम् । आप एवेति निगमनम् । श्रुतिराप्यत्वं शरीरस्य वक्तीति शेषः ।**

ಪ್ರಸಕ್ತವಾದ ದೇಹವೇ ಈ ಅಧಿಕರಣಕ್ಕೆ ವಿಷಯವಾಗಿದೆ. ಈ ದೇಹವು ನೀರಿನಿಂದ ಹುಟ್ಟಿದೆಯೋ, ಪೃಥಿವಿಯಿಂದ ಹುಟ್ಟಿದೆಯೋ, ತೇಜಸ್ಸಿನಿಂದ ಹುಟ್ಟಿದೆಯೋ ಅಥವಾ ಮೂರು ಭೂತಗಳಿಂದ ಹುಟ್ಟಿದೆಯೋ ? ಎಂಬುದು ಅಧಿಕರಣದ ಸಂದೇಹ. ಸಂದೇಹಕ್ಕೆ ಕಾರಣವನ್ನು ಸ್ವಲ್ಪ ಮಾತ್ರ ತೋರಿಸುತ್ತಾ, ಪೂರ್ವಪಕ್ಷವನ್ನು 'ಅದ್‌ಭ್ಯಃ' ಇತ್ಯಾದಿಯಾಗಿ ಸೂಚನೆ ಮಾಡುತ್ತಿದ್ದಾರೆ.

ಅದ್‌ಭ್ಯೋ ಹೀದಮ್' ಎಂಬುದು ಪ್ರತಿಜ್ಞಾವಾಕ್ಯ. ಇದರ ಉಪಪಾದನೆಯನ್ನು 'ಆಪೋ ವಾವ ಮಾಂಸಂ' ಎಂಬುದರಿಂದ ಮಾಡಿದ್ದಾರೆ. 'ಆಪ ಏವ ಇದಂ' ಎಂಬುದು ಉಪಸಂಹಾರ ವಾಕ್ಯ. 'ಶ್ರುತಿಃ' ಎಂಬ ಪದದ ಮುಂದೆ 'ಆಪ್ಯತ್ವಂ ಶರೀರಸ್ಯ ವಕ್ತಿ' ಶರೀರವು ಜಲಾತ್ಮಕವಾಗಿದೆ ಎಂದು ಹೇಳುತ್ತದೆ ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು.

ವಿವರಣೆ – 'ಲೇಶತಃ ಸಂದೇಹಬೀಜಂ ದರ್ಶಯನ್' ಎಂಬುದರ ಅಭಿಪ್ರಾಯ ಹೀಗಿದೆ - ಭಾಷ್ಯದಲ್ಲಿ ಶರೀರವು ಜಲಜನ್ಯವೋ, ಪೃಥಿವೀಜನ್ಯವೋ? ಎಂಬ ಎರಡು ವಿಕಲ್ಪಗಳನ್ನಷ್ಟೇ

ಮಾಡಿದ್ದಾರೆ. ಟೀಕೆಯಲ್ಲಿ ನಾಲ್ಕು ವಿಕಲ್ಪಗಳನ್ನು ಮಾಡುತ್ತಿದ್ದಾರೆ. ಆದ್ದರಿಂದ ಭಾಷ್ಯಕಾರರಿಗೆ ಟೀಕೆಯಲ್ಲಿ ಹೇಳಿದ ನಾಲ್ಕು ವಿಕಲ್ಪಗಳು ಸಮ್ಮತವಾಗಿದ್ದರೂ ಕೂಡ ಎರಡನ್ನು ಮಾತ್ರ ಉಲ್ಲೇಖ ಮಾಡಿದ್ದಾರೆ. ಈ ವಿಷಯವನ್ನು ತಿಳಿಸುವುದಕ್ಕಾಗಿ 'ಲೇಶತಃ' ಎಂಬ ಪದವನ್ನು ಟೀಕೆಯಲ್ಲಿ ಉಲ್ಲೇಖಿಸಿದ್ದಾರೆ.

**तत्वप्रकाशिका – 'पृथिवीं शरीरमप्येति' इति श्रुतिः शरीरस्य पार्थिवत्वमाह। कार्यस्य स्वकारण एवाप्ययनियमात् । आकाशं परमात्मानम्। तैजसत्वेऽपि श्रुतिः 'सोऽग्नेर्देवयोन्या आहुतिभ्यः सम्भूय हिरण्यशरीर ऊर्ध्वं स्वर्गलोकमेति' इति ॥ भूतत्रयात्मकत्वञ्च श्रूयते 'इमास्तिस्रो देवताः पुरुषं प्राप्य' इत्यादौ ।**

'ಪೃಥಿವೀ ಶರೀರಮಪ್ಯೇತಿ' ಎಂಬ ಶ್ರುತಿಯು ಶರೀರವು ಪಾರ್ಥಿವವೆಂದು ಹೇಳುತ್ತಿದೆ. ಕಾರ್ಯವು ತನ್ನ ಉಪಾದಾನ ಕಾರಣದಲ್ಲೇ ಲಯ ಹೊಂದುತ್ತದೆಂಬ ನಿಯಮವು ಲೋಕಸಿದ್ಧವಾಗಿದೆ. ಈ ಶ್ರುತಿಯಲ್ಲಿರುವ ಆಕಾಶವೆಂಬ ಪದಕ್ಕೆ ಪರಮಾತ್ಮನೆಂದು ಎಂದರ್ಥ.

ಶರೀರವು ತೈಜಸವೆಂಬುದನ್ನೂ ಕೂಡ ಶ್ರುತಿಯೇ ಹೇಳುತ್ತಿದೆ - 'ಸೋಽಗ್ನೇರ್ದೇವಯೋನ್ಯಾ ಆಹುತಿಭ್ಯಃ ಸಂಭೂಯ ಹಿರಣ್ಯಶರೀರ ಊರ್ಧ್ವಂ ಸ್ವರ್ಗಲೋಕಮೇತಿ' ಎಂದು.

ಶರೀರವು ಭೂತತ್ರಯಾತ್ಮಕವಾಗಿದೆ ಎಂಬುದನ್ನು ಶ್ರುತಿಯೇ ಹೇಳುತ್ತಿದೆ – 'ಇಮಾಸ್ತಿಸ್ರೋ ದೇವತಾಃ ಪುರುಷಂ ಪ್ರಾಪ್ಯ' ಇತ್ಯಾದಿಯಾಗಿ.

ವಿವರಣೆ – ಶರೀರವು ಪಾರ್ಥಿವವೆಂದೂ ಬೃಹದಾರಣ್ಯಕ ಹೇಳಿದರೆ, ತೈಜಸವೆಂದು ಐತರೇಯ ಬ್ರಾಹ್ಮಣ ಹೇಳುತ್ತಿದೆ, ಛಾಂದೋಗ್ಯವು ಭೂತತ್ರಯಾತ್ಮಕ ಎಂದು ಹೇಳುತ್ತಿದೆ. ಹೀಗೆ ಶ್ರುತಿಗಳಲ್ಲೇ ಪರಸ್ಪರ ವಿರೋಧವಿರುವುದೇ ಪ್ರಕೃತ ಸಂಶಯಕ್ಕೆ ಕಾರಣವಾಗಿದೆ. ಅದು ಹೀಗೆ-

'ಯತ್ರಾಸ್ಯ ಪುರುಷಸ್ಯ ಮೃತಸ್ಯ ಅಗ್ನಿಂ ವಾಗಪ್ಯೇತಿ ವಾತಂ ಪ್ರಾಣ ಚಕ್ಷುರಾದಿತ್ಯಂ ಮನಶ್ಚಂದ್ರಮಸಂ ದಿಶಃ ಶ್ರೋತ್ರಂ ಪೃಥಿವೀಂ ಶರೀರಂ, ಆಕಾಶಂ ಆತ್ಮಾ' ಎಂದು. ಪೃಥಿವೀಂ ಶರೀರಂ' ಎಂಬಲ್ಲಿ 'ಅಪ್ಯೇತಿ' ಎಂಬ ಪದವಿಲ್ಲ. ಆದರೆ ಹಿಂದೆ ಅದು ಪ್ರಸಕ್ತವಾದ್ದರಿಂದ ಇಲ್ಲೂ ಕೂಡ ಅದನ್ನು ಟೀಕೆಯಲ್ಲಿ ಅನ್ವಯ ಮಾಡಿಕೊಂಡು 'ಪೃಥಿವೀಂ ಶರೀರಮಪ್ಯೇತಿ' ಎಂಬುದಾಗಿ ಪ್ರಯೋಗಿಸಿದ್ದಾರೆ. ಶರೀರವು ಪೃಥಿವಿಯನ್ನು ಸೇರುತ್ತದೆ ಎಂಬುದು ಇದರ ಅಭಿಪ್ರಾಯ. ಆದ್ದರಿಂದ ಶರೀರವು ಪಾರ್ಥಿವವೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಏಕೆಂದರೆ ತನ್ನ ಕಾರ್ಯವಷ್ಟೇ ತನ್ನಲ್ಲಿ ಲಯ ಹೊಂದಲು ಸಾಧ್ಯ.

ಪೃಥಿವಿಯು ತೈಜಸವೆಂಬುದನ್ನು ಐತರೇಯಬ್ರಾಹ್ಮಣ ಹೀಗೆ ಹೇಳುತ್ತಿದೆ – 'ಸೋಽಗ್ನೇರ್ದೇವಯೋನ್ಯಾ ಆಹುತಿಭ್ಯಃ ಸಂಭೂಯ ಹಿರಣ್ಯಶರೀರಃ ಊರ್ಧ್ವಂ ಲೋಕಮೇತಿ' ಎಂದು. ಸಃ = ಆ ಯಜಮಾನನು, ಆಹುತಿಭ್ಯಃ = ಆಹುತಿಯನ್ನು ನೀಡಿದ ಕಾರಣದಿಂದ, ದೇವಯೋನ್ಯಾ = ದೇವತೆಗಳಿಗೆ ಆಹುತಿಯನ್ನು ನೀಡುತ್ತಿರುವುದರಿಂದ ದೇವಯೋನಿ ಎಂದು ಕರೆಸಿಕೊಳ್ಳಲ್ಪಟ್ಟ ಅಗ್ನಿಯಿಂದ, ಹಿರಣ್ಯಶರೀರಃ = ಬಂಗಾರದ ಶರೀರವುಳ್ಳವನಾಗಿ, ಊರ್ಧ್ವಂ ಲೋಕಂ = ಸ್ವರ್ಗಲೋಕಕ್ಕೆ, ಏತಿ = ತೆರಳುತ್ತಾನೆಂಬುದು ಇದರ ಅರ್ಥ. ಈ ಶ್ರುತಿಯಲ್ಲಿ

ಹಿರಣ್ಮಶರೀರ ಎಂಬ ಪದದಿಂದ ತೈಜಸ ಶರೀರವನ್ನು ಧಾರಣೆ ಮಾಡುತ್ತಾನೆಂದು ಹೇಳಲಾಗಿದೆ. ಆದ್ದರಿಂದ ಶರೀರವು ತೈಜಸವೆಂದು ತಿಳಿಯುತ್ತದೆ.

'ಇಮಾಸ್ತಿಸ್ರೋ ದೇವತಾಃ ಪುರುಷಂ ಪ್ರಾಪ್ಯ ತ್ರಿವೃತ್ತ್ರಿವೃದೇಕೈಕಾ ಭವತಿ ತನ್ಮೇ ವಿಜಾನಿಹಿ' ಎಂಬ ಶ್ರುತಿಯು ಶರೀರವು ಭೂತತ್ರಯಾತ್ಮಕವೆನ್ನುತ್ತಿದೆ. ಈ ಮೂರು ಮಂದಿ ದೇವತೆಗಳು ಪುರುಷನನ್ನು ಹೊಂದಿ ಒಂದೊಂದು ಶರೀರವನ್ನಾಗಿ ನಿರ್ಮಾಣ ಮಾಡುತ್ತಾರೆ. ಅದನ್ನು ತಿಳಿದುಕೋ ಎಂಬುದಾಗಿ ಶ್ರುತಿಯು ಶರೀರವನ್ನು ಭೂತತ್ರಯಾತ್ಮಕವೆನ್ನುತ್ತಿದೆ.

**तत्वप्रकाशिका – आप्यमिति तावत्प्राप्तम् । 'आपो वाव मांसम्' इति श्रुतेः। न च श्रुत्यन्तरविरोधः । मांसादौ तृप्तिजनकत्वदर्शनेनाप्यत्वश्रुतेर्युक्तियुक्तत्वात् । अपां हि तर्पकत्वं धर्मः।**

ಶರೀರವು ಜಲೀಯವೆಂದು ಪೂರ್ವಪಕ್ಷ. ಏಕೆಂದರೆ 'ಆಪೋ ವಾವ ಮಾಂಸಂ' ಎಂಬ ಶ್ರುತಿಯು ಇದಕ್ಕೆ ಆಧಾರವಾಗಿದೆ. ಈ ಶ್ರುತಿಗೆ ಮತ್ತೊಂದು ಶ್ರುತಿಯ ವಿರೋಧವಿಲ್ಲ. ಏಕೆಂದರೆ ಮಾಂಸಾದಿಗಳಲ್ಲಿ ತೃಪ್ತಿಜನಕತ್ವವು ಅನುಭವಸಿದ್ಧವಾಗಿದೆ. ಆದ್ದರಿಂದ ಜಲೀಯವೆಂದು ಹೇಳುವ ಶ್ರುತಿಯು ಯುಕ್ತಿಯುಕ್ತವಾಯಿತು. ಏಕೆಂದರೆ ತೃಪ್ತಿಯನ್ನುಂಟುಮಾಡುವಿಕೆ ಎಂಬ ಧರ್ಮವು ನೀರಿನದ್ದೇ ಆಗಿದೆ.

ವಿವರಣೆ – ನೀರಿನಲ್ಲಿ ತೃಪ್ತಿಜನಕತ್ವವಿರುವುದು ಸರ್ವಾನುಭವಸಿದ್ಧವಾಗಿದೆ. ಮಾಂಸಭಕ್ಷಣದಲ್ಲೂ ಕೂಡ ಇದೇ ಅನುಭವವಿದೆ. ಆದ್ದರಿಂದ ಮಾಂಸವು ಜಲೀಯವೆಂದು ಸಿದ್ಧವಾಯಿತು. ಮಾಂಸವು ಜಲೀಯವಾದ್ದರಿಂದ ಮಾಂಸಮಯವಾದ ಶರೀರವೂ ಕೂಡ ಜಲೀಯವೇ ಆಗುತ್ತದೆಂಬುದು ಪೂರ್ವಪಕ್ಷಿಗಳ ಅಭಿಪ್ರಾಯ. ಆದ್ದರಿಂದ 'ಆಪೋ ವಾವ' ಎಂಬ ಕೌಂಡಿನ್ಯಶ್ರುತಿಯು ಯುಕ್ತಿಯುಕ್ತವಾದ್ದರಿಂದ ಉಳಿದ ಶ್ರುತಿಗಳಿಗಿಂತಲೂ ಪ್ರಬಲವಾಯಿತು.

**तत्वप्रकाशिका – पार्थिवमित्यपरः पक्षः 'पृथिवीं शरीरम्' इति श्रुतेः । काठिन्यगन्धवत्त्वादित्युक्तेश्च ।**

ಶರೀರವು ಪಾರ್ಥಿವ ಎಂಬುದು ಮತ್ತೊಂದು ಪಕ್ಷ. ಏಕೆಂದರೆ 'ಪೃಥಿವೀಂ ಶರೀರಮ್' ಎಂಬುದು ಇದಕ್ಕೆ ಆಧಾರವಾಗಿದೆ. ಶರೀರದಲ್ಲಿ ಕಾಠಿಣ್ಯವಿದೆ ಮತ್ತು ಗಂಧವಿದೆ ಎಂಬ ಯುಕ್ತಿಯೂ ಕೂಡ ಇದಕ್ಕಿದೆ.

ವಿವರಣೆ – ಪೃಥಿವಿಯಲ್ಲಿ ಕಾಠಿಣ್ಯ, ಗಂಧ, ಕೃಷ್ಣವರ್ಣ ಈ ಮೂರು ಇರುವುದು ಸರ್ವಾನುಭವಸಿದ್ಧವಾಗಿದೆ. ಇದೇ ಮೂರು ಧರ್ಮಗಳು ಶರೀರದಲ್ಲೂ ಇದೆ. ಶರೀರವು ಕಠಿಣವಾಗಿದೆ, ಗಂಧವುಳ್ಳದ್ದಾಗಿದೆ, ಕೃಷ್ಣವರ್ಣವುಳ್ಳದ್ದಾಗಿದೆ. ಆದ್ದರಿಂದ ಶರೀರವನ್ನು ಪಾರ್ಥಿವವೆನ್ನಬೇಕೆಂಬುದು ಎರಡನೇ ಪೂರ್ವಪಕ್ಷದ ಮುಖ್ಯ ಯುಕ್ತಿ.

**तत्वप्रकाशिका – तैजसमित्यन्यः । तथा श्रवणादौष्ण्यदर्शनाच्च ।**

ಶರೀರವು ತೈಜಸವೆಂಬುದು ಮತ್ತೊಂದು ಪಕ್ಷ. ಹಾಗೆಯೇ ಶ್ರುತಿಯೂ ಕೂಡ ಪ್ರತಿಪಾದನೆ ಮಾಡುತ್ತಿದೆ. ಮತ್ತು ಉಷ್ಣತ್ವವಿರುವುದು ಅನುಭವ ಸಿದ್ಧವಾಗಿದೆ.

**ವಿವರಣೆ** – ಔಷ್ಣ್ಯವು ತೇಜಸ್ಸಿನ ಗುಣ. ಇದೇ ಔಷ್ಣ್ಯವು ಶರೀರದಲ್ಲಿರುವುದರಿಂದ ಶರೀರವು ತೈಜಸವೇ ಆಗಬೇಕೆಂಬುದು ಈ ಪೂರ್ವಪಕ್ಷದ ಯುಕ್ತಿ. ಈ ಯುಕ್ತಿಯಿಂದ 'ಸೋಽಗ್ನೇಃ' ಎಂಬ ಶ್ರುತಿಯು ಯುಕ್ತವಾಗಿದೆ.

**तत्वप्रकाशिका – सर्वथा श्रुतोऽपि न चतुर्थः पक्षो युक्तः । शरीरे भूतानां मिश्रतायामभ्युपेतायामापः शरीरमित्यादिविशेषोक्त्ययोगान्मिश्रत्वादेव । नहि बहुषु विद्यमानेषु कारणविशेषं विना अत्र देवदत्तो विद्यत इति विशेषोक्तिर्दृष्टा । न चात्र कारणविशेषं पश्यामः । अतो विरोधेन कासाञ्चिच्छ्रुतीनामप्रामाण्यान्न विष्णौ जगत्कारणे श्रुतिसमन्वयो युक्त इति भावः । सिद्धान्तयत्सूत्रमवतार्य व्याचष्टे – अत इति ।।**

ಭೂತತ್ರಯಾತ್ಮಕ ಎಂಬ ನಾಲ್ಕನೆಯ ಪಕ್ಷವು ಶ್ರುತಿಯಲ್ಲಿ ಹೇಳಲ್ಪಟ್ಟಿದ್ದರೂ ಕೂಡ ಯುಕ್ತವಾಗುವುದಿಲ್ಲ. ಶರೀರವು ಸಕಲ ಭೂತಗಳಿಂದ ಮಿಶ್ರಣವಾಗಿದೆ ಎಂದು ಅಂಗೀಕಾರ ಮಾಡಿದರೆ 'ಆಪಃ ಶರೀರಂ' 'ಪೃಥಿವೀ ಶರೀರಂ' ಇತ್ಯಾದಿಯಾಗಿ ವಿಶೇಷ ಪ್ರಕಾರದಿಂದ ನಿರ್ದೇಶ ಮಾಡಿದ್ದು ತಪ್ಪಾಗುತ್ತದೆ. ಏಕೆಂದರೆ ಅನೇಕ ಜನರು ಸೇರಿದಾಗ ವಿಶೇಷ ಕಾರಣವಿಲ್ಲದೆ ಇಲ್ಲಿ ದೇವದತ್ತನಿದ್ದಾನೆಂದು ವಿಶೇಷ ವಚನವನ್ನು ಪ್ರಯೋಗಿಸುವುದು ಎಲ್ಲೂ ಕೂಡ ಕಂಡಿಲ್ಲ. ಪ್ರಕೃತ ಅಂಥ ವಿಶೇಷಕಾರಣವು ಕಾಣಿಸುತ್ತಿಲ್ಲ. ಆದ್ದರಿಂದ ಬೇರೆ ಶ್ರುತಿಗಳ ವಿರೋಧವಿರುವುದರಿಂದ ಕೆಲವು ಶ್ರುತಿಗಳಿಗೆ ಅಪ್ರಾಮಾಣ್ಯವು ಪ್ರಾಪ್ತವಾಗುತ್ತದಾದ್ದರಿಂದ ಜಗತ್ಕಾರಣನಾದ ವಿಷ್ಣುವಿನಲ್ಲಿ ಶ್ರುತಿಸಮನ್ವಯವು ಯುಕ್ತವಾಗುವುದಿಲ್ಲ. ಇಷ್ಟು ಪೂರ್ವಪಕ್ಷದ ಅಭಿಪ್ರಾಯ.

**ವಿವರಣೆ** – ಶರೀರವನ್ನು ಭೂತತ್ರಯಾತ್ಮಕವೆಂದು ಹೇಳಲೇಬಾರದು. ಏಕೆಂದರೆ ಒಂದೊಂದೇ ಪ್ರಕಾರದಲ್ಲಿ ಶರೀರವನ್ನು ನಿರ್ದೇಶ ಮಾಡುವ 'ಆಪಃ ಶರೀರಮ್' ಇತ್ಯಾದಿ ಶ್ರುತಿಗಳ ವಿರೋಧವು ಪ್ರಾಪ್ತವಾಗುತ್ತದೆ. ಮೂರು ವಸ್ತುವು ಮಿಶ್ರಣವಾದಾಗ ಒಂದನ್ನೇ ಹೇಳುವುದು ತಪ್ಪಾಗುತ್ತದೆ. ಏಕೆಂದರೆ ಶರೀರವು ಭೂತತ್ರಯಾತ್ಮಕವಾಗಿರುವುದರಿಂದ ಇದು ಜಲೀಯ ಅಥವಾ ಇದು ಪಾರ್ಥಿವ ಎಂದು ಪ್ರತ್ಯೇಕವಾಗಿ ನಿರ್ದೇಶಿಸುವುದಕ್ಕೆ ಯಾವುದೇ ಕಾರಣವಿಲ್ಲ. ಆದ್ದರಿಂದ ಶರೀರವನ್ನು ಕೇವಲ ಜಲೀಯವೆಂದು ಅಥವಾ ಕೇವಲ ಪಾರ್ಥಿವವೆಂದು ಅಥವಾ ಕೇವಲ ತೈಜಸವೆಂದೇ ಹೇಳಬೇಕು. ಹಾಗೆ ಒಪ್ಪಿದಾಗ ಶ್ರುತಿಗಳಲ್ಲಿ ಪರಸ್ಪರ ವಿರೋಧವು ಬಂದೇ ಬರುತ್ತದೆ. ಆದ್ದರಿಂದ ಜಗತ್ಕಾರಣನಲ್ಲಿ ಶ್ರುತಿಸಮನ್ವಯವು ಅಯುಕ್ತವಾಗುತ್ತದೆ. ಇಷ್ಟು ಅಧಿಕರಣದ ಪೂರ್ವಪಕ್ಷ.

**तत्वप्रकाशिका – यच्छरीरे कठिनं मांसादि तदेव पार्थिवं न सवशरीरं किं तर्ह्यप्तेजसोश्च कार्यं शरीरेऽस्थिशोणितमज्जादीत्यङ्गीकार्यम् । यत्कठिनमिति श्रुतेः । एवमङ्गीकारस्यैव यथाशब्दत्वादिति भावः । अयं चैकपक्षप्रतिषेधः । इतरावपि पक्षावेवं निषेध्यौ ।**

ಮಾಂಸಾಧಿಕರಣ (೨-೪-೧೩)

ಸಿದ್ಧಾಂತ ಸ್ಥಾಪಕವಾದ ಸೂತ್ರಕ್ಕೆ 'ಅತಃ' ಇತ್ಯಾದಿಯಾಗಿ ಅವತಾರಿಕೆ ನೀಡಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಶರೀರದಲ್ಲಿ ಕಠಿಣವಾದ ಯಾವ ಮಾಂಸಾದಿ ಭಾಗವಿದೆಯೋ ಅದು ಮಾತ್ರ ಪಾರ್ಥಿವವಾಗಿದೆ. ಸಕಲ ಶರೀರವು ಪಾರ್ಥಿವವೆಂದು ಹೇಳಬಾರದು. ಶರೀರದಲ್ಲಿರುವ ಮೂಳೆ, ರಕ್ತ, ಮಜ್ಜ ಇವುಗಳು ನೀರು ಹಾಗೂ ತೇಜಸ್ಸುಗಳ ಕಾರ್ಯಗಳಾಗಿವೆ ಎಂದು ಅಂಗೀಕಾರ ಮಾಡಬೇಕು. ಏಕೆಂದರೆ 'ಯತ್ಕಠಿಣಂ' ಇತ್ಯಾದಿ ಶ್ರುತಿಯು ಇದಕ್ಕೆ ಆಧಾರವಾಗಿದೆ. ಹೀಗೆ ಅಂಗೀಕಾರ ಮಾಡಬೇಕೆಂಬುದನ್ನೇ ಸೂತ್ರದಲ್ಲಿ 'ಯಥಾಶಬ್ದಂ' ಎಂಬುದರಿಂದ ತಿಳಿಸಿದ್ದಾರೆ. ಇದರಿಂದ ಒಂದು ಪಕ್ಷವನ್ನು ನಿರಾಕರಣೆ ಮಾಡಿದಂತಾಯಿತು. ಉಳಿದೆರಡು ಪಕ್ಷಗಳನ್ನೂ ಕೂಡ ಇದೇ ರೀತಿಯಲ್ಲಿ ನಿರಾಕರಣೆ ಮಾಡಬೇಕು.

ವಿವರಣೆ – ಶರೀರದಲ್ಲಿ ಮಜ್ಜ ಇಂದ್ರಿಯಗಳು ತೈಜಸ. ರಕ್ತ ಮೊದಲಾದವುಗಳು ಜಲೀಯಕಾರ್ಯಗಳು. ಉಳಿದ ಕಠಿಣಭಾಗವು ಪಾರ್ಥಿವ. ಹೀಗೆ ಒಂದೊಂದು ಭಾಗಗಳು ಒಂದೊಂದು ಭೂತಗಳ ಪರಿಣಾಮವೆಂದು ತಿಳಿಯಬೇಕು. ಹೀಗೆ ಹೇಳುವುದೇ ಪ್ರಮಾಣಪ್ರಮಿತವಾಗಿದೆ.

ಪೂರ್ವಪಕ್ಷದಲ್ಲಿ ಒಟ್ಟು ನಾಕು ಪಕ್ಷಗಳು ಪ್ರಸಕ್ತವಾಗಿದ್ದವು. 'ಮಾಂಸಾದ್ಯೇವ ಭೌಮಂ' ಎಂಬ ಭಾಷ್ಯದ ಮಾತಿನಿಂದ ಒಂದು ಪಕ್ಷವನ್ನಷ್ಟೇ ನಿರಾಕರಣೆ ಮಾಡಿದ್ದಾರೆ. ಉಪಲಕ್ಷಣಯಾ ಉಳಿದೆರಡು ಪಕ್ಷಗಳ ನಿರಾಕರಣೆಯನ್ನು ತಿಳಿಯಬೇಕು. ಅದು ಹೀಗೆ – 'ಮಾಂಸಾದ್ಯೇವ ಭೌಮಂ' ಎಂದರೆ 'ಮಾಂಸಾದಿಗಳು ಮಾತ್ರ ಪೃಥಿವೀ' ಎಂದು ತಿಳಿಯಬೇಕು. ಇದರಿಂದ ಶರೀರದಲ್ಲಿ ಯಾವುದು ದ್ರವ್ಯವೋ ಅದು ಮಾತ್ರ ಆಪ್ಯವಾಗಿದೆ ಹೊರತು ಸರ್ವಶರೀರವು ಆಪ್ಯವಲ್ಲ. ಅದರಂತೆ ಶರೀರದಲ್ಲಿ ಯಾವ ಮಜ್ಜ ಮೊದಲಾದ ಉಷ್ಣಭಾಗಗಳಿದೆಯೋ ಅದು ಮಾತ್ರ ತೈಜಸ. ಸರ್ವಶರೀರವು ತೈಜಸವಲ್ಲ. ಹೀಗೆ ಉಳಿದ ಪೂರ್ವಪಕ್ಷಗಳ ನಿರಾಕರಣೆಯನ್ನು ತಿಳಿಯಬೇಕು.

**तत्वप्रकाशिका – ननु कथं मांसस्य पार्थिवत्वमुच्यते । 'अपो वाव मांसम्' इति श्रुतेर्युक्तेश्चेत्यतो वाऽह – अप्तेजसोश्चेति ।। न मांसादीनां केवलपार्थिवत्वं किं नाम तत्राप्तेजसोश्च कार्यमङ्गीक्रियते शब्दवशात् । अतो मांसस्याप्यत्वोक्तिर्युक्तेति भावः । कोऽसौ शब्दो यतो मांसादीनां नैकभूतकार्यत्वमिति तं दर्शयति – यदिति।।**

ಮಾಂಸವು ಪಾರ್ಥಿವವೆಂದು ಹೇಗೆ ಹೇಳುತ್ತೀರಿ? ಏಕೆಂದರೆ 'ಆಪೋ ವಾವ ಮಾಂಸಮ್' ಎಂಬ ಶ್ರುತಿಯು ಮಾಂಸವು ಜಲೀಯಕಾರ್ಯವೆನ್ನುತ್ತಿದೆ. ಮತ್ತು ಈ ಶ್ರುತಿಯು ಯುಕ್ತಿಯುಕ್ತಯಾಗಿದೆಯಲ್ಲವೇ? ಈ ಪ್ರಶ್ನೆಗೆ 'ಅಪ್ತೇಜಸೋಶ್ಚ' ಇತ್ಯಾದಿಯಾಗಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

ಮಾಂಸಾದಿಗಳು ಕೇವಲ ಪಾರ್ಥಿವವಲ್ಲ, ಉದಕ ಮತ್ತು ತೇಜಸ್ಸುಗಳ ಕಾರ್ಯವೂ ಕೂಡ ಆಗಿದೆ ಎಂದು ಶ್ರುತಿಯು ಹೇಳುತ್ತಿದೆ. ಆದ್ದರಿಂದ ಮಾಂಸಕ್ಕೆ ಜಲೀಯತ್ವವನ್ನು ಹೇಳುವುದು ಯುಕ್ತವೇ ಆಗಿದೆ ಎಂದು ತಾತ್ಪರ್ಯ.

ಮಾಂಸವು ಕೇವಲ ಪೃಥಿವಿಯ ಕಾರ್ಯವಲ್ಲ ಎಂದು ಯಾವ ಶ್ರುತಿಯು ಹೇಳುತ್ತಿದೆ ? ಎಂಬ ಪ್ರಶ್ನೆಗೆ 'ಯತ್' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ.

**ವಿವರಣೆ** – ಮಾಂಸವು ಕೇವಲ ಪಾರ್ಥಿವವಲ್ಲ. ಏಕೆಂದರೆ ಪೂರ್ವಪಕ್ಷದಲ್ಲಿ ಹೇಳಿದಂತೆ ನೀರಿನಲ್ಲಿರುವ ತರ್ಪಕತ್ವವು ಮಾಂಸದಲ್ಲೂ ಇದೆ. ಮತ್ತು 'ಆಪೋ ವಾ ಮಾಂಸಂ' ಎಂಬ ಶ್ರುತಿಯು ಅದೇ ಕಾರಣದಿಂದ ಮಾಂಸವು ಜಲೀಯಕಾರ್ಯವೆಂದು ಹೇಳುತ್ತಿದೆ. ಆದ್ದರಿಂದ ಇದನ್ನು ಕೇವಲ ಪಾರ್ಥಿವವೆಂದು ಹೇಳದೆ ಜಲದ ಕಾರ್ಯವೂ ಕೂಡ ಆಗಿದೆ ಎಂದು ತಿಳಿಯಬೇಕು. ಒಂದೇ ಮಾಂಸದಲ್ಲಿ ಅನೇಕ ಭೂತಗಳ ಮಿಶ್ರಣವಾಗಿದೆ ಎಂದು ತಿಳಿಯಬೇಕು.

**तत्वप्रकाशिका – भूम्यादिभूतानां स्वत एव मिश्रत्वान्नैकभूतत्वं मांसादीनां सम्भवतीति विज्ञायते । तस्मात् सम्भूतत्वान्मांसादीनामनेकभूतकार्यत्वात्तदपेक्षया ऽप्यत्वाद्युक्तिर्युक्तेति । उक्तार्थे स्मृतिं चाह – पञ्चेति ।।२२।।**

ಪೃಥಿವೀ ಇತ್ಯಾದಿ ಭೂತಗಳು ಸ್ವತಃ ಮಿಶ್ರಣವಾಗಿರುವುದರಿಂದ ಕೇವಲ ಒಂದರ ಕಾರ್ಯವೆಂದು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಪ್ರತಿಯೊಂದು ಶರೀರದ ಭಾಗಗಳು ಎಲ್ಲಾ ಭೂತಗಳ ಕಾರ್ಯವೇ ಆಗಿರುತ್ತದೆಂಬ ದೃಷ್ಟಿಯಿಂದ ಈ ಉದ್ದೇಶವನ್ನು ವಿವಕ್ಷಿಸಿ ಶ್ರುತಿಯು ಆಪ್ಯ ಇತ್ಯಾದಿಯಾಗಿ ಹೇಳುತ್ತಿದೆ. ಆದ್ದರಿಂದ ಈ ವಚನಗಳು ಯುಕ್ತವಾಗಿವೆ.

ಈ ವಿಷಯದಲ್ಲಿ ಶ್ರುತಿಸಮ್ಮತಿಯನ್ನು 'ಪಂಚ' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ.

**ವಿವರಣೆ** – ಒಂದೇ ವಸ್ತು ಅನೇಕ ಭೂತಗಳಿಂದ ನಿರ್ಮಾಣವಾದಾಗ ಅನೇಕ ಶಬ್ದಗಳಿಂದ ಕರೆಯುವ ಉದಾಹರಣೆ ಇರುತ್ತದೆ. ಆದ್ದರಿಂದ ಒಂದೇ ಅಸ್ಥಿಯಲ್ಲಿ ಕಾಠಿಣ್ಯವಿರುವುದರಿಂದ ಭೂಮವೆಂದು, ಶ್ವೇತವರ್ಣವಿರುವುದರಿಂದ ಜಲೀಯವೆಂದೂ, ತೇಜಸ್ಸಿನ ಸಂಬಂಧವಿರುವುದರಿಂದ ತೈಜಸವೆಂದು ಶ್ರುತಿಯಲ್ಲಿ ವ್ಯವಹರಿಸಲಾಗಿದೆ.

## ಬ್ರಹ್ಮಸೂತ್ರ

**सूत्रम् – वैशेष्यात्तु तद्वादस्तद्वादः ।।**

ಒಂದೇ ಶರೀರವನ್ನು ಕೆಲವರು ಪಾರ್ಥಿವವೆನ್ನುತ್ತಾರೆ. ಆಪ್ಯವೆನ್ನುತ್ತಾರೆ. ಮತ್ತು ತೇಜಸ್ ಎನ್ನುತ್ತಾರೆ. ಹೀಗೆ ಹೇಳುವ ಬೇರೆ ಬೇರೆ ವಾದಗಳೂ ಕೂಡ ಆಯಾ ಭೂತಗಳ ಸಂಯೋಗವಿಶೇಷದಿಂದ ಕೂಡಿಸಬೇಕು. ಅಂದರೆ ಯಾರಿಗೆ ಪೃಥಿವೀ ಭಾಗದ ಆಧಿಕ್ಯವುಳ್ಳ ಶರೀರವಿರುತ್ತದೋ, ಅದನ್ನು ಪಾರ್ಥಿವಶರೀರವೆಂದು ಜಲದ ಭಾಗವು ಅಧಿಕವಾಗಿದ್ದರೆ ಆಪ್ಯದೇಹವೆಂದು, ತೇಜಸ್ಸಿನ ಭಾಗವು ಅಧಿಕವಾಗಿದ್ದರೆ ತೈಜಸ ದೇಹವೆಂದು ವಿವಕ್ಷಿಸಬೇಕು. ಆದ್ದರಿಂದ ಅಂಥ ವಚನಗಳ ವಿರೋಧವೂ ಕೂಡ ಬರುವುದಿಲ್ಲ. ಅವಿರೋಧಾಧ್ಯಾಯದಲ್ಲಿ ಹೇಳಿದ ಸಕಲ ಪ್ರಮೇಯಗಳು ಅತ್ಯಂತ ದೃಢವಾಗಿವೆ. ಇದನ್ನು ಸಮರ್ಥಿಸಲು ಅಧ್ಯಾಯದ ಕೊನೆಯಲ್ಲಿ 'ತದ್ವಾದಃ' ಎಂಬುದಾಗಿ ಎರಡು ಬಾರಿ ಹೇಳಿರುತ್ತಾರೆ.

ಇಲ್ಲಿಗೆ ಶ್ರೀಮದ್‌ಕೃಷ್ಣದ್ವೈಪಾಯನರಿಂದ ರಚಿತವಾದ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ದ್ವಿತೀಯಾಧ್ಯಾಯದ ನಾಲ್ಕನೆಯ ಪಾದವು ಮುಗಿಯಿತು ॥

॥ ಶ್ರೀ ಕೃಷ್ಣಾರ್ಪಣಮಸ್ತು ॥

ಮಾಂಸಾಧಿಕರಣ (೨-೪-೧೩)

## ಸೂತ್ರದೀಪಿಕಾ

**सूत्रदीपिका** — पार्थिवमाप्यं तैजसमिति विशेषोक्तिस्तु **वैशेष्यात्** पृथिव्यादिभूतानां तत्तच्छरीरविशेषसंयोगमपेक्ष्य युज्यते । अतः न तद्विरोध इत्यर्थः। एतदध्ययोक्तसर्वस्यार्थस्यावधारणार्थमध्यायान्ते द्विरुक्तिः ।।२।।

।। इति श्रीजगन्नाथयतिविरचितायां सूत्रदीपिकायां
द्वितीयाध्यायस्य चतुर्थः पादः ।।२।।४।। ।। इति द्वितीयाध्यायः समाप्तः ।।

ಪಾರ್ಥಿವ, ಆಪ್ಯ, ತೇಜಸ ಎಂಬುದಾಗಿ ಶರೀರವನ್ನು ಮೂರು ಬಗೆಯಲ್ಲಿ ಗುರುತಿಸುವ ವಾಕ್ಯಗಳಿವೆ. ಇವನ್ನು ವೈಶೇಷ್ಯಾತ್ = ಪೃಥಿವ್ಯಾದಿಭೂತಗಳು ಆಯಾ ಶರೀರದಲ್ಲಿ ವಿಶೇಷವಾದ ಸಂಯೋಗವನ್ನು ಹೊಂದಿರುವ ಅಪೇಕ್ಷೆಯಿಂದ ಕೂಡಿಸಬೇಕು. ಆದ್ದರಿಂದ ವಿರೋಧಕ್ಕೆ ಅವಕಾಶವಿಲ್ಲ. ಈ ಅಧ್ಯಾಯದಲ್ಲಿ ಸಮರ್ಥಿಸಿದ ಸಕಲ ಅರ್ಥವು ನಿಶ್ಚಿತವಾಗಿದೆ ಎಂಬುದನ್ನು ಸಮರ್ಥಿಸಲು ಅಧ್ಯಾಯದ ಕೊನೆಯಲ್ಲಿ 'ತದ್ವಾದಃ ತದ್ವಾದಃ' ಎಂದು ಸೂತ್ರಕಾರರು ಹೇಳಿರುತ್ತಾರೆ.

ಇಲ್ಲಿಗೆ ಶ್ರೀಜಗನ್ನಾಥಯತಿಗಳಿಂದ ವಿರಚಿತವಾದ ಸೂತ್ರದೀಪಿಕೆಯಲ್ಲಿ
ದ್ವಿತೀಯಾಧಾಯ್ಯದ ನಾಕನೇ ಪಾದವು ಸಮಾಪ್ತವಾಯಿತು.

## ಬ್ರಹ್ಮಸೂತ್ರಭಾಷ್ಯ

**भाष्यम् — कथं तर्हि विशेषवचनमित्यत आह —**

**।। वैशेष्यात्तु तद्वादस्तद्वादः ।।२।।**

**भूतानां तु विशेषसंयोगादेव विशेषव्यवहारः ।**

ಅನುವಾದ - ಈ ಶರೀರವು ಒಂದು ಭೂತದಿಂದ ಹುಟ್ಟಲ್ಲವೆಂದು ಹೇಳಲಾಯಿತು. ಹಾಗಾದರೆ ಪಾರ್ಥಿವ ಶರೀರ ಇತ್ಯಾದಿ ವ್ಯವಹಾರವು ಹೇಗೆ ಯುಕ್ತವಾಗುತ್ತದೆ ? ಎಂಬ ಪ್ರಶ್ನೆಗೆ ಸೂತ್ರಕಾರರು ಉತ್ತರಿಸುತ್ತಿದ್ದಾರೆ.

ಒಂದೊಂದು ಭೂತವಸ್ತುಗಳ ವಿಶೇಷಸಂಯೋಗವಿರುವುದರಿಂದ ಪಾರ್ಥಿವವೆಂಬ ವಿಶೇಷ ವ್ಯವಹಾರವಿದೆ.

ಪ್ರತಿಪದಾರ್ಥ -- ತರ್ಹಿ = ಹಾಗಾದರೆ, ವಿಶೇಷವಚನಮ್ = ಪಾರ್ಥಿವಶರೀರವೆಂಬ ವ್ಯವಹಾರವು, ಕಥಂ = ಹೇಗೆ? ಇತ್ಯತಃ = ಈ ಆಕ್ಷೇಪಕ್ಕೆ, ಆಹ = ಉತ್ತರಿಸುತ್ತಿದ್ದಾರೆ.

ಪರಿಪೂರ್ಣಚಂದ್ರಿಕಾ

ಭೂತಾನಾಂತು = ಪಂಚಭೂತಗಳಲ್ಲಿ, ವಿಶೇಷಸಂಯೋಗಾದೇವ = ಯಾವುದರ ಸಂಬಂಧವು ಅಧಿಕವಾಗಿರುತ್ತದೋ, ವಿಶೇಷವ್ಯವಹಾರಃ = ಅದರ ವ್ಯವಹಾರವೇ ಇರುತ್ತದೆ.

**भाष्यम् –**

**'पार्थिवानां शरीराणामर्धेन पृथिवी स्मृता ।**
**इतरेऽर्धे त्रिभागिन्य आपस्तेजस्तु भागतः ।।**
**इति सामान्यतो ज्ञेयं भेदं च प्रतिपूरुषम् ।**
**स्वर्गस्थानां शरीराणामर्धं तेज उदाहृतम् ।।' इति च बृहत्संहितायाम् ।**

ಅನುವಾದ - ಪಾರ್ಥಿವ ಶರೀರದ ಅರ್ಧಭಾಗವು ಪೃಥಿವಿಯಿಂದ ಕೂಡಿದೆ, ಉಳಿದ ಅರ್ಧಭಾಗದಲ್ಲಿ ಮೂರು ಅಂಶ ನೀರಿನಿಂದ, ಮತ್ತೊಂದು ಅಂಶ ತೇಜಸ್ಸಿನಿಂದ ಸೇರಿರುತ್ತದೆ. ಹೀಗೆ ಪ್ರತಿಯೊಂದು ಶರೀರದಲ್ಲಿಯೂ ಒಂದೇ ಕ್ರಮವನ್ನು ತಿಳಿಯಬೇಕು. ಹೀಗೆ ಸಾಮಾನ್ಯವಾಗಿ ತಿಳಿಯಬೇಕು. ವಿಶೇಷಭೂತಗಳ ಸಂಯೋಗವು ಪ್ರತಿಯೊಂದು ಪಾರ್ಥಿವಶರೀರದಲ್ಲಿ ನಿಯತವಾಗಿರುತ್ತದೆ. ಸ್ವರ್ಗದಲ್ಲಿರುವ ಶರೀರಗಳ ಅರ್ಧಭಾಗ ತೇಜೋಭಾಗದಿಂದ ಕೂಡಿರುತ್ತವೆ. ಆದ್ದರಿಂದ ಅವರದ್ದು 'ತೇಜಶ್ಶರೀರ' ಹೀಗೆ ಬೃಹತ್‌ಸಂಹಿತೆಯು ಹೇಳಿದೆ.

ಪ್ರತಿಪದಾರ್ಥ -- ಪಾರ್ಥಿವಾನಾಂ ಶರೀರಾಣಾಮ್ = ಪಾರ್ಥಿವ ಶರೀರಗಳ ಇರುವವರೆಗೆ, ಅರ್ಧೇನ = ಅರ್ಧಭಾಗವು, ಪೃಥಿವೀ = ಪೃಥಿವಿಯೆಂದು, ಸ್ಮೃತಾ = ಕರೆಯಲಾಗಿದೆ. ಇತರೇ ಅರ್ಧೇ = ಉಳಿದ ಅರ್ಧಭಾಗದಲ್ಲಿ, ತ್ರಿಭಾಗಿನ್ಯಃ = ಮೂರುಭಾಗವು, ಆಪಃ = ನೀರಿನದ್ದು, ಭಾಗತಃ = ಇನ್ನು ಒಂದು ಅಂಶವು, ತೇಜಸ್ತು = ತೇಜಸ್ಸಿಗೆ ಸಂಬಂಧಪಟ್ಟದ್ದು, ಇತಿ = ಹೀಗೆ, ಸಾಮಾನ್ಯತಃ = ಸಾಮಾನ್ಯವಾಗಿ, ಜ್ಞೇಯಂ = ತಿಳಿಯಬೇಕು. ಭೇದಂಚ = ಆಯಾ ಭೂತಪದಾರ್ಥಗಳ ವಿಶೇಷ ಸಂಯೋಗವು, ಪ್ರತಿಪೂರುಷಮ್ = ಪ್ರತಿಯೊಂದು ಪಾರ್ಥಿವ ಶರೀರದಲ್ಲಿಯೂ ಇರುತ್ತದೆ. ಸ್ವರ್ಗಸ್ಥಾನಾಂ = ಸ್ವರ್ಗದಲ್ಲಿರುವವರ, ಶರೀರಾಣಾಮ್ = ಶರೀರದಲ್ಲಿ, ಅರ್ಧಂತೇಜ = ಅರ್ಧಭಾಗವು ತೇಜಸ್ಸೇ ಆಗಿರುತ್ತದೆ ಎಂದು, ಉದಾಹೃತಮ್ = ಹೇಳಲಾಗಿದೆ. ಇತಿ ಚ = ಹೀಗೆ, ಬೃಹತ್ಸಂಹಿತಾಯಾಮ್ = ಬೃಹಸ್ಸಂಹಿತೆಯಲ್ಲಿ ಹೇಳಿದ್ದಾರೆ.

**भाष्यम् – सर्वाध्यायार्थावधारणार्थाऽध्यायान्ते द्विरुक्तिः ।**

**गारुडे च –**

**'अध्यायान्ते द्विरुक्तिः स्याद् वेदे वा वैदिकेऽपि वा ।**
**विचारो यत्र सज्येत पूर्वोक्तस्यावधारणे ।।**

ಮಾಂಸಾಧಿಕರಣ (೨-೪-೧೩)

**अनुक्तानां प्रमाणानां स्वीकारश्च कृतो भवेत् ।**
**विनिन्द्य चेतरान् मार्गान् सम्पूर्णफलता तथा ।।' इति च ।।**

**।। इति मांसाधिकरणम् ।। १३ ।।**

**।। इति श्रीमदानन्दतीर्थभगवत्पादाचार्यविरचिते**
**ब्रह्मसूत्रभाष्ये द्वितीयस्याध्यायस्य चतुर्थः पादः ।। ४ ।।**
**।। द्वितीयाध्यायः समाप्तः ।।**

**ಅನುವಾದ - ಈ ಅಧ್ಯಾಯದಲ್ಲಿ ಹೇಳಿರುವ ಸಕಲ ವಿಷಯವು ನಿಶ್ಚಿತವಾಗಿದೆ. ಇದನ್ನು ತಿಳಿಸಲು ಸೂತ್ರಕಾರರು ಅಧ್ಯಾಯದ ಕೊನೆಯಲ್ಲಿ 'ತದ್‌ವಾದಃ' ಎಂಬ ದ್ವಿರುಕ್ತಿಯನ್ನು ಮಾಡಿರುತ್ತಾರೆ.**

**ವೇದದಲ್ಲಿ ಮತ್ತು ವೈದಿಕಸಾಹಿತ್ಯದಲ್ಲಿ ಅಧ್ಯಾಯವು ಮುಗಿಯಬೇಕಾದರೆ ದ್ವಿರುಕ್ತಿ ಇರುತ್ತದೆ ಹಿಂದೆ ಹೇಳಿದ ವಿಚಾರಗಳೆಲ್ಲವೂ ನಿಶ್ಚಿತವಾಗಿವೆ ಎಂಬ ಅವಧಾರಣವನ್ನು ದ್ವಿರುಕ್ತಿಯಿಂದ ತಿಳಿಸುತ್ತಾರೆ.**

**ಅಥವಾ ಯಾವ ಪ್ರಮಾಣವನ್ನು ಉದಾಹರಿಸಿಲ್ಲವೊ ಅವುಗಳ ಸಮ್ಮತಿಯೂ ಕೂಡ ಇರುತ್ತದೆ ಎಂಬುದನ್ನು ಸೂಚನೆ ಮಾಡಲು ದ್ವಿರುಕ್ತಿಯು ಸಾರ್ಥಕವಾಗಿದೆ. ಅಥವಾ ಸೂತ್ರದಲ್ಲಿ ಯಾವ ಸಿದ್ಧಾಂತ ಮಾಡಿರುತ್ತದೋ ಅದಕ್ಕೆ ವಿರುದ್ಧವಾದ ಸಿದ್ಧಾಂತವು ಅಪ್ರಾಮಾಣಿಕ ಎಂಬುದನ್ನು ತಿಳಿಸಲು ದ್ವಿರುಕ್ತಿ ಸಾರ್ಥಕವಾಗುತ್ತದೆ.**

ಪ್ರತಿಪದಾರ್ಥ -- ಸರ್ವಾಧ್ಯಾಯಾರ್ಥಾವಧಾರಣಾರ್ಥಃ = ಸಂಪೂರ್ಣವಾಗಿ ಅಧ್ಯಾಯದ ಪ್ರಮೇಯದ ಅವಧಾರಣೆಗೋಸ್ಕರ, ಅಧ್ಯಾಯಾಂತೇ = ಪ್ರತಿಯೊಂದು ಅಧ್ಯಾಯದ ಕೊನೆಯಲ್ಲಿ, ದ್ವಿರುಕ್ತಃ = ದ್ವಿರುಕ್ತಿ ಇರುತ್ತದೆ. ಗಾರುಡೇ ಚ = ಗರುಡ ಪುರಾಣದಲ್ಲಿ ಹೀಗೆ ಹೇಳಲಾಗಿದೆ -

ವೇದೇ ವಾ = ವೇದದಲ್ಲಾದರೂ, ವೈದಿಕೇಽಪಿ ವಾ = ವೈದಿಕಸಾಹಿತ್ಯದಲ್ಲಿ, ಅಧ್ಯಾಯಾಂತೇ = ಅಧ್ಯಾಯದ ಕೊನೆಯ ಭಾಗದಲ್ಲಿ, ದ್ವಿರುಕ್ತಃ = ದ್ವಿರುಕ್ತಿಯು, ಸ್ಯಾತ್ = ಇರುತ್ತದೆ. ಯತ್ರ = ಯಾವ ಸಂದರ್ಭದಲ್ಲಿ, ವಿಚಾರಃ = ವಿಚಾರವು, ಸಜ್ಜೇತ = ಪ್ರಸಕ್ತವಾಗಿರುತ್ತದೋ ಅಲ್ಲಿ, ಪೂರ್ವೋಕ್ತಸ್ಯ = ಹಿಂದೆ ಹೇಳಿದ ವಿಷಯಗಳಲ್ಲಿ, ಅವಧಾರಣೇ = ಅವಧಾರಣವನ್ನು ತಿಳಿಸಲು ದ್ವಿರುಕ್ತಿಯು ಸಾರ್ಥಕವಾಗುತ್ತದೆ.

ಅಥವಾ ಅನುಕ್ತಾನಾಂ = ಗ್ರಂಥದಲ್ಲಿ ತಿಳಿಸದ, ಪ್ರಮಾಣಾನಾಂ = ಪ್ರಮಾಣಗಳ, ಸ್ವೀಕಾರಶ್ಚ = ಸ್ವೀಕಾರವನ್ನು, ಕೃತೋ ಭವೇತ್ = ಮಾಡಬೇಕೆಂದು ತಿಳಿಸಲು, ಇತರಾನ್ = ಸೂತ್ರದಲ್ಲಿ ಹೇಳದ, ಮಾರ್ಗಾನ್ = ಜ್ಞಾನದ ಉಪಾಯಗಳನ್ನು, ವಿನಿಂದ್ಯ =

ಅನುಪಾದೇಯವೆಂದು ತಿಳಿದು, ತಥಾ = ಹಾಗೆ, ಸಂಪೂರ್ಣಫಲತಾ = ವಿಶಿಷ್ಟವಾದ ಮೋಕ್ಷಸಾಧನತ್ವವನ್ನು ತಿಳಿಸಲು ದ್ವಿರುಕ್ತಿಯು ಸಾರ್ಥಕವಾಗುತ್ತದೆ, ಇತಿ ಚ = ಹೀಗೆ ಮತ್ತೊಂದು ಪ್ರಮಾಣವಿದೆ.

**ಇಲ್ಲಿಗೆ ಮಾಂಸಾಧಿಕರಣದ ಭಾಷ್ಯ ಹಾಗೂ ಭಾಷ್ಯಾನುವಾದ ಮುಗಿಯಿತು.**

**ಇಲ್ಲಿಗೆ ಶ್ರೀಮದಾನಂದತೀರ್ಥಪಾದಾಚಾರ್ಯರಿಂದ ವಿರಚಿತವಾದ ಬ್ರಹ್ಮಸೂತ್ರಭಾಷ್ಯದಲ್ಲಿ ಎರಡನೆ ಅಧ್ಯಾಯದ ನಾಕನೇ ಪಾದವು ಸಮಾಪ್ತವಾಯಿತು.**

ಶ್ರೀಕೃಷ್ಣಾರ್ಪಣಮಸ್ತು

## ತತ್ವಪ್ರಕಾಶಿಕಾ

**तत्वप्रकाशिका – यदि शरीरं नैकविधभूतप्रकृतिकं कथं तर्हि विशेषोक्तिरित्युक्तमाशङ्क्य तत्परिहारार्थं सूत्रमवतार्य व्याचष्टे – कथमिति ।।**

ಶರೀರವು ಒಂದೇ ಭೂತದಿಂದ ಹುಟ್ಟಿಲ್ಲ. ಅನೇಕ ಭೂತಪದಾರ್ಥಗಳಿಂದ ಹುಟ್ಟಿದೆ ಎಂದು ಹೇಳಿದರೆ ಆಗ 'ಇದು ಆಪ್ಯಶರೀರ' 'ಇದು ಭೌಮಶರೀರ' ಎಂಬ ವಿಶೇಷವಚನವು ಹೇಗೆ ಯುಕ್ತವಾಗುತ್ತದೆ? ಈ ಆಶಂಕೆಯನ್ನು ಪರಿಹಾರ ಮಾಡುತ್ತಿದ್ದಾರೆ ಮತ್ತು ಸೂತ್ರಕ್ಕೆ ಅವತಾರಿಕೆ ನೀಡುವ ಮೂಲಕ ವ್ಯಾಖ್ಯಾನ ಮಾಡಲು 'ಕಥಮ್' ಇತ್ಯಾದಿ ಭಾಷ್ಯವಾಕ್ಯವು ಪ್ರವೃತ್ತವಾಗಿದೆ.

**तत्वप्रकाशिका – शरीरस्यानेकभूतप्रकृतित्वेऽपि न विशेषोक्तिविरोधः । तत्तद्भूतविशेषसंयोगापेक्षया तदुपपत्तेरिति भावः । मांसादीनां विशेषोक्तेरप्ययमर्थो ज्ञातव्यः ।**

ಶರೀರವು ಅನೇಕ ಭೂತಪದಾರ್ಥಗಳಿಂದ ಜನ್ಯವಾಗಿದೆ ಎಂದೇ ಹೇಳುತ್ತೇವೆ. ಅಂದಮಾತ್ರಕ್ಕೆ 'ಇದು ಭೌಮಶರೀರ', 'ಇದು ಆಪ್ಯಶರೀರ' ಎಂಬುದರ ವಿಶೇಷೋಕ್ತಿಯು ವಿರುದ್ಧವಾಗುವುದಿಲ್ಲ. ಏಕೆಂದರೆ ಆಯಾ ಭೂತಪದಾರ್ಥಗಳ ಸಂಬಂಧವು ವಿಶೇಷವಾಗಿರುತ್ತದೆಂಬ ನಿಮಿತ್ತದಿಂದ ಯುಕ್ತವಾಗುತ್ತದೆ. 'ಮಾಂಸಾದಿಗಳು ಆಪ್ಯ' ಇತ್ಯಾದಿ ವಿಶೇಷವ್ಯವಹಾರವೂ ಕೂಡ ಆಯಾಭೂತಗಳು ಅಧಿಕವಾಗಿವೆ ಎಂಬರ್ಥದಲ್ಲಿ ಕೂಡಿಸಬೇಕು.

**तत्वप्रकाशिका – शरीरे भूतानां विशेषसंयोग एव कुतस्तद्भावे च पुनर्विशेषोक्त्ययोग इत्यत आह – पार्थिवानामिति ।।**

ಶರೀರದಲ್ಲಿ ಆಯಾ ಭೂತಗಳು ಅಧಿಕವಾಗಿವೆ ಎನ್ನಲು ಏನು ಪ್ರಮಾಣ ? ಮತ್ತು ಒಂದೇ ದೇಹದಲ್ಲಿ ಎಲ್ಲಾ ಭೂತಗಳ ಸಂಬಂಧವಿದೆ ಎಂದು ಹೇಳಿದರೆ ಇದು ಭೌಮಶರೀರ ಇತ್ಯಾದಿ ವಿಶೇಷವ್ಯವಹಾರವು ಹೇಗೆ ಕೂಡುತ್ತದೆ ? ಈ ಎರಡು ಪ್ರಶ್ನೆಗಳಿಗೆ ಬೃಹತ್‌ಸಂಹಿತೆಯಲ್ಲಿರುವ 'ಪಾರ್ಥಿವಾನಾಮ್' ಎಂಬ ಶ್ಲೋಕವನ್ನು ಉಲ್ಲೇಖ ಮಾಡುವ ಮೂಲಕ ಉತ್ತರಿಸುತ್ತಿದ್ದಾರೆ.

**तत्वप्रकाशिका – पृथिवीस्थितानामित्यर्थः । अर्धं तेज इतरेऽर्धे त्रिभागिन्य आपः पृथिवीभागतः। अन्येषामापोऽर्धत इतरेऽर्धे त्रिभागिनी पृथिवी भागमात्रं तेज इति द्रष्टव्यम् । देहभेदेन विशेषस्योक्तत्वान्नोक्तदोषः । द्विरुक्तेः प्रयोजनविशेषं प्रमाणविशेषेण दर्शयति – सर्वेति ।।**

ಬೃಹತ್‌ಸಂಹಿತೆಯಲ್ಲಿರುವ 'ಪಾರ್ಥಿವಾನಾಮ್' ಎಂಬ ಮಾತಿಗೆ ಪೃಥಿವಿಯಲ್ಲಿರುತ್ತದೆ. ಎಷ್ಟು ಪೃಥಿವೀ ಭಾಗವಿದೆಯೋ, ಅದರ ಮೂರುಭಾಗದಷ್ಟು ಜಲವಿದೆ. ಅದರ ಅರ್ಧದಷ್ಟು ತೇಜಸ್ಸಿದೆ. ಇದರಂತೆ ಯಾರು ವರುಣಲೋಕದಲ್ಲಿ ಶರೀರವನ್ನು ಹೊಂದುತ್ತಾರೋ, ಅವರ ಶರೀರದಲ್ಲಿ ಅರ್ಧಭಾಗ ನೀರಿರುತ್ತದೆ. ಉಳಿದರ್ಧಭಾಗ ಪೃಥಿವಿಯು ಒಂದು ಭಾಗದಷ್ಟು ತೇಜಸ್ಸು ಇರುತ್ತದೆ. ಹೀಗೆ ಜಲೀಯಾದಿ ಶರೀರಗಳ ಪರಿಮಾಣಕ್ರಮವನ್ನು ತಿಳಿಯಬೇಕು. ಆದ್ದರಿಂದಲೇ 'ಇದು ಆಪ್ಯಶರೀರ' ಇತ್ಯಾದಿ ವಿಶೇಷವಚನವು ಹೇಗೆ ಯುಕ್ತವಾಗುತ್ತದೆ ? ಎಂಬ ಪ್ರಶ್ನೆಗೂ ಉತ್ತರಿಸಿದಂತಾಯಿತು.

ಕೊನೆಯ ಈ ಸೂತ್ರದಲ್ಲಿ ಏಕೆ ದ್ವಿರುಕ್ತಿಯನ್ನು ಮಾಡಿದ್ದಾರೆ ? ಎಂಬ ಪ್ರಶ್ನೆಗೆ ವಿಶೇಷ ಪ್ರಯೋಜನವನ್ನು ಹೇಳುವ ಮೂಲಕ ವಿಶೇಷಪ್ರಮಾಣವನ್ನು 'ಸರ್ವ' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ.

**तत्वप्रकाशिका – अवधारणे अवधारणार्थम् । सम्पूर्णफलता शास्त्रस्योक्ता भवतीति शेषः । अतः श्रुत्यविरोधेन शरीरस्य पाञ्चभौतिकत्वसिद्धेर्युक्तो जगत्कारणे नारायणे श्रुतिसमन्वयो न पुनस्तत्र विरोधगन्धोऽपीति सिद्धम् ।।**

**।। इति श्रीमदानन्दतीर्थभगवत्पादाचार्यविरचितस्य श्रीमद्ब्रह्मसूत्रभाष्यस्य टीकायं श्रीमज्जयतीर्थमुनिविरचितायां तत्वप्रकाशिकायां द्वितीयाध्यायस्य चतुर्थः पादः ।।**

**श्रीरस्तु ।।**

ಭಾಷ್ಯದಲ್ಲಿ ಉಲ್ಲೇಖಿಸಿದ ಶ್ಲೋಕದಲ್ಲಿ ಅವಧಾರಣೆ ಎಂಬ ಪದವಿದೆ. ಇದು ಅವಧಾರಣರೂಪವಾದ ಪ್ರಯೋಜನವನ್ನು ಹೇಳುತ್ತಿದೆ. 'ಸಂಪೂರ್ಣಫಲತಾ' ಎಂಬಲ್ಲಿ ಉಕ್ತಾ ಭವತಿ ಎಂಬುದನ್ನು ಶೇಷಪೂರಣ ಮಾಡಿಕೊಂಡು ಮೋಕ್ಷವೆಂಬ ವಿಶೇಷಪ್ರಯೋಜನವನ್ನು ತಿಳಿಸುವುದೇ ಇದರ ಸಾರ್ಥಕ್ಯವೆಂದು ತಿಳಿಯಬೇಕು.

ಹೀಗೆ ಶ್ರುತಿವಿರೋಧ ಇಲ್ಲದ ಕಾರಣ ಶರೀರಕ್ಕೆ ಪಾಂಚಭೌತಿಕತ್ವವು ಸಿದ್ಧವಾಗುತ್ತದೆ. ಜಗತ್ಕಾರಣನಾದ ನಾರಾಯಣನಲ್ಲಿ ಶ್ರುತಿಸಮನ್ವಯವೂ ಕೂಡ ಸಿದ್ಧವಾಯಿತು. ಈ ವಿಷಯದಲ್ಲಿ ಬೇರೆ ವಿರೋಧದ ಗಂಧಕ್ಕೂ ಕೂಡ ಅವಕಾಶವಿಲ್ಲವೆಂಬುದು ಸಿದ್ಧವಾಯಿತು.

ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ
ಶ್ರೀಮದ್ಬ್ರಹ್ಮಸೂತ್ರಭಾಷ್ಯದ ಟೀಕೆಯಲ್ಲಿ ಶ್ರೀಮಜ್ಜಯತೀರ್ಥಮುನಿಗಳಿಂದ ವಿರಚಿತವಾದ ತತ್ವಪ್ರಕಾಶಿಕೆಯಲ್ಲಿ
ಎರಡನೇ ಅಧ್ಯಾಯದ ನಾಲ್ಕನೇ ಪಾದವು ಸಮಾಪ್ತವಾಯಿತು.

॥ ಶ್ರೀಕೃಷ್ಣಾರ್ಪಣಮಸ್ತು ॥
ಪರಿಪೂರ್ಣಚಂದ್ರಿಕಾ

ಮಾಂಸಾಧಿಕರಣ

(೨-೪-೧೩)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## मांसाधिकरणम्

ದೇಹದಲ್ಲಿ ಮಾಂಸವು ಮಾತ್ರ ಪಾರ್ಥಿವ ಜಲೀಯ ಹಾಗೂ ತೈಜಸ

**।। मांसादिभौमं यथाशब्दमितरयोश्च ।। पूर्वं देहादेः कर्तोक्तः । इहोपादानमुच्यत इति सङ्गतिः ।**

ಹಿಂದಿನ ಅಧಿಕರಣದಲ್ಲಿ ದೇಹವನ್ನು ಸೃಷ್ಟಿ ಮಾಡುವವನು ಯಾರು ಎಂಬುದರ ಬಗ್ಗೆ ವಿಚಾರವನ್ನು ಮಾಡಲಾಯಿತು. ಈ ಅಧಿಕರಣದಲ್ಲಿ ದೇಹಕ್ಕೆ ಯಾವುದು ಉಪಾದಾನಕಾರಣ ಎಂಬುದರ ಬಗ್ಗೆ ವಿಚಾರ ಮಾಡಲಾಗುತ್ತಿದೆ. ಕರ್ತೃತ್ವದ ಬಗ್ಗೆ ವಿಚಾರ ಮಾಡಿ ಅನಂತರ ಉಪಾದಾನಕಾರಣತ್ವವನ್ನು ವಿಚಾರ ಮಾಡುತ್ತಿರುವುದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಆನಂತರ್ಯ ಎಂಬ ಸಂಗತಿಯು ಇರುತ್ತದೆ.

**अत्र श्रुतिसमन्वयेनोक्तं ब्रह्मणः सर्वस्रष्टृत्वादिकमयुक्तमुत युक्तमिति चिन्ता । तदर्थं श्रुतिरप्रमाणं न वेति ।**

ಈ ಅಧಿಕರಣದಲ್ಲಿ ಶ್ರುತಿ ಸಮನ್ವಯದ ಮೂಲಕ ಬ್ರಹ್ಮನ ಸರ್ವಸ್ರಷ್ಟೃತ್ವವು ಅಯುಕ್ತವಾಗುತ್ತದೋ ಇಲ್ಲವೋ? ಎಂಬುದೇ ಪ್ರಧಾನ ವಿಚಾರ. ಅದಕ್ಕಾಗಿ ಶ್ರುತಿಯು ಅಪ್ರಮಾಣವೋ ಅಲ್ಲವೋ? ಎಂಬುದು ಅವಾಂತರ ವಿಚಾರ. ಅದಕ್ಕೆ ಪೂರಕವಾಗಿ ದೇಹಾದಿಗಳು ಭೂತತ್ರಯಾತ್ಮಕವಾಗಿವೆ ಎಂಬುದಾಗಿ ಪ್ರತಿಪಾದನೆ ಮಾಡುವ ಶ್ರುತಿಯು ಅಪ್ರಮಾಣವೋ ಅಲ್ಲವೋ? ಎಂಬ ವಿಚಾರ ಮಾಡಲಾಗಿದೆ.

**तदर्थं देहादेर्भूतत्रयात्मकत्वश्रुतिरप्रमाणं न वेति । तदर्थं मांसादेस्तर्पकत्वयुक्त्यनुगृहीतयाऽऽप्यत्वादिश्रुत्या बाधिता न वेति । तदर्थं भूतत्रयात्मकत्वेऽप्याप्यत्वादिश्रुत्यादिकं तत्तद्भूतस्य विशेषसंयोगेन नोपपद्यत उतोपपद्यत इति ।। नोक्तदोष इति ।। पुनर्विशेषोक्त्ययोग इत्युक्तदोषो नेत्यर्थः ।**

ಹಿಂದಿನ ವಿಚಾರಕ್ಕೆ ಅನುಕೂಲವಾಗಿ ಮಾಂಸಾದಿಗಳಲ್ಲಿ ತರ್ಪಕತ್ವ ಇರುವುದರಿಂದ ಇದೇ ಯುಕ್ತಿಯ ಬೆಂಬಲದಿಂದ ಮಾಂಸವು ನೀರಿನ ಕಾರ್ಯವಾಗಿದೆ ಎಂದು ಪ್ರತಿಪಾದನೆ ಮಾಡುವ ಶ್ರುತಿಯಿಂದ ಭೂತತ್ರಯಾತ್ಮಕವೆಂದು ಹೇಳುವ ಶ್ರುತಿಯು ಬಾಧಿತವೋ ಅಲ್ಲವೋ? ಎಂಬುದನ್ನು ವಿಚಾರ ಮಾಡಲಾಗಿದೆ. ಅದಕ್ಕಾಗಿ ಭೂತತ್ರಯಾತ್ಮಕ ಎಂದು ಒಪ್ಪಿದರೂ ಮಾಂಸವು ನೀರಿನಿಂದಾಗಿದೆ ಎಂಬುದಾಗಿ ಪ್ರತಿಪಾದನೆ ಮಾಡುವ ಶ್ರುತಿಯು ನೀರಿನ ವಿಶೇಷ ಸಂಯೋಗ ಇರುವುದರಿಂದ ಕೂಡುತ್ತದೆ ಎಂದು ಹೇಳಬಾರದೋ ಅಥವಾ ಹೇಳಬೇಕೋ? ಎಂಬುದನ್ನು ವಿಚಾರ ಮಾಡಲಾಗಿದೆ. ಪುನಃ 'ವಿಶೇಷೋಕ್ತ್ಯಯೋಗಃ' ಎಂದು ಹಿಂದೆ ಹೇಳಿದ ದೋಷವು ಬರುವುದಿಲ್ಲ ಎಂಬುದನ್ನು 'ನೋಕ್ತದೋಷಃ' ಎಂಬ ಟೀಕೆಯಲ್ಲಿ ಹೇಳಿದ್ದಾರೆ.

ವಿವರಣೆ – ಈ ಶರೀರವನ್ನು ಕೆಲವು ಶ್ರುತಿಗಳು ಪಾರ್ಥಿವ ಎನ್ನುತ್ತಿವೆ, ಕೆಲವು ಜಲೀಯ ಎನ್ನುತ್ತಿವೆ. ಇಂತಹ ಶ್ರುತಿಗಳ ವಿರೋಧ ಪರಿಹಾರಕ್ಕಾಗಿ ಕೊನೆಯ ಈ ಮಾಂಸಾಧಿಕರಣವು ಹೊರಟಿದೆ. ಈ ಶರೀರವು ಪೃಥಿವೀ, ಅಪ್, ತೇಜಸ್ಸು ಇವುಗಳ ಮಿಶ್ರಣದಿಂದ ಆಗಿದೆ. ಮಾಂಸದಲ್ಲಿ ಜಲದ ಅಂಶ ಹೆಚ್ಚು ಇದೆ, ಅಸ್ಥಿಯಲ್ಲಿ ತೇಜಸ್ಸಿನ ಅಂಶ ಹೆಚ್ಚು ಇದೆ, ಹೀಗೆ ಒಂದೊಂದು ಶರೀರದ ಭಾಗದಲ್ಲಿ ಒಂದೊಂದು ಹೆಚ್ಚಾಗಿ ಇರುವುದರಿಂದ ಶ್ರುತಿಗಳು ವಿಶೇಷ ಸಂಯೋಗದಿಂದ ಹಾಗೆ ಹೇಳಿವೆ ಹೊರತು ಕೇವಲ ಜಲೀಯವೆಂದಾಗಲಿ, ಕೇವಲ ತೈಜಸ ಎಂದಾಗಲಿ ಶ್ರುತಿಗಳ ಅಭಿಪ್ರಾಯವಲ್ಲ. ಈ ವಿಷಯವನ್ನು ಪ್ರತಿಪಾದನೆ ಮಾಡಲು ಈ ಮಾಂಸಾಧಿಕರಣವು ಹೊರಟಿದೆ.

**यदुक्तं परेषां भाष्ये उत्तरसूत्रविषयप्रदर्शनाय मांसादिसर्वभौतिकं त्रिवृत्कृतभूतकार्यमिति मांसादीति सूत्रेणोक्त्वा यदि सर्वं त्रिवृत्कृतभूतकार्यं तर्हि कथं तैजसमिदमाप्यमिदमिति व्यवस्थेत्याशङ्क्य भूयस्त्वाद्व्यवस्थेति समाधातुं वैशेष्यादित्युत्तरसूत्रमिति ।**

ಅದ್ವೈತ ಭಾಷ್ಯದಲ್ಲಿ ಈ ಸೂತ್ರದ ಬಗ್ಗೆ ಹೀಗೆ ಹೇಳಿದ್ದಾರೆ. 'ವೈಶೇಷ್ಯಾತ್ತು ತದ್ವಾದಃ' ಎಂಬ ಸೂತ್ರಕ್ಕೆ ವಿಷಯವನ್ನು ಸ್ಥಾಪನೆ ಮಾಡುವುದಕ್ಕಾಗಿ 'ಮಾಂಸಾಧಿಭೌಮಂ' ಎಂಬ ಸೂತ್ರವು ಹೊರಟಿದೆ. ಮಾಂಸ ಮೊದಲಾದ ಸಕಲ ಭೌತಿಕ ಕಾರ್ಯಗಳು ತ್ರಿವೃತ್ಕೃತವಾದ ಭೂತಗಳ ಕಾರ್ಯವಾಗಿದೆ ಎಂಬುದಾಗಿ ಈ ಸೂತ್ರದಲ್ಲಿ ಹೇಳಿದಾಗ ಒಂದುವೇಳೆ ತ್ರಿವೃತ್ಕೃತವಾದ ಭೂತದ ಕಾರ್ಯವು ಆಗುವುದಾದರೆ ಶರೀರದ ಎಲ್ಲಾ ಭಾಗಗಳೂ ಕೂಡ ತೈಜಸವಾಗಿದೆ ಅಥವಾ ಎಲ್ಲಾ ಭಾಗವು ಜಲೀಯವಾಗಿದೆ ಎಂದು ಹೇಳುವ ಶ್ರುತಿಗಳಿಗೆ ಹೇಗೆ ವ್ಯವಸ್ಥೆ ಮಾಡುವುದು ಎಂಬ ಆಶಂಕೆಯು ಪ್ರಾಪ್ತವಾಗುತ್ತದೆ. ಆಗ ತೇಜಸ್ಸು, ಜಲ ಮೊದಲಾದವುಗಳು ಹೆಚ್ಚಾಗಿರುವುದರಿಂದ ವಿರೋಧವಿಲ್ಲ ಎಂಬುದಾಗಿ 'ಭೂಯಸ್ತ್ವ' ಎಂಬ ಹೇತುವಿನಿಂದ ವ್ಯವಸ್ಥೆಯನ್ನು ಮಾಡಿ ಸಿದ್ಧಾಂತವನ್ನು ವ್ಯವಸ್ಥೆ ಮಾಡುವುದಕ್ಕಾಗಿ 'ವೈಶೇಷ್ಯಾತ್ತು' ಇತ್ಯಾದಿ ಮುಂದಿನ ಸೂತ್ರವು ಹೊರಟಿದೆ. ಹೀಗೆ ಅದ್ವೈತಿಗಳು ಹೇಳಿದ್ದಾರೆ.

**तन्न । मांसादेस्त्रिवृत्कृतभूतकार्यत्वात्सूत्रेण विनापि भूतानां भौतेन त्रिवृत्कृतत्वमात्रेण मांसादेरपि तेन त्रिवृत्कृतभूतकार्यत्वेनाव्यवस्था शङ्काया भूयस्त्वेन व्यवस्थेति समाधेश्च सम्भवेन मांसादिसूत्रस्य निष्फलत्वात् ।**

ಇದು ತಪ್ಪು. ಹೀಗೆ ಅಭಿಪ್ರಾಯ ಪಡುವುದಾದರೆ 'ಮಾಂಸಾದಿಭೌಮಂ' ಎಂಬ ಸೂತ್ರವೇ ವ್ಯರ್ಥ. ಯಾವ ರೀತಿಯಾಗಿ ಭೂತಗಳು ತ್ರಿವೃತ್ಕೃತವಾದ ಭೂತಕಾರ್ಯವಾಗಿವೆ, ಇದನ್ನು ಸಮರ್ಥನೆ ಮಾಡುವುದಕ್ಕಾಗಿ ಯಾವುದೇ ಸೂತ್ರ ಹೊರಟಿಲ್ಲವೋ, ಅದರಂತೆ ಮಾಂಸಾದಿಗಳೂ ಕೂಡ ತ್ರಿವೃತ್ಕೃತವಾದ ಭೂತಕಾರ್ಯವಾಗಿರುವುದರಿಂದ ಇದನ್ನು ಪ್ರತಿಪಾದನೆ ಮಾಡುವುದಕ್ಕಾಗಿ ಸೂತ್ರವೇ ಬೇಕಾಗಿಲ್ಲ. ಆದ್ದರಿಂದ ಭೌತಿಕವಾದ ತ್ರಿವೃತ್ಕೃತತ್ವ ಮಾತ್ರದಿಂದ ಮಾಂಸಾದಿಗಳಿಗೂ ತ್ರಿವೃತ್ಕೃತವಾದ ಭೂತಕಾರ್ಯದಿಂದ ಅವ್ಯವಸ್ಥೆಯನ್ನು ಆಶಂಕೆ ಮಾಡಿ ಭೂಯಸ್ತ್ವದಿಂದ ವ್ಯವಸ್ಥೆಯನ್ನು ಮಾಡುವ ಮೂಲಕ ಸಮಾಧಾನ ಮಾಡುವುದು ವ್ಯರ್ಥವಾಗಿದೆ.

**ವಿವರಣೆ** – 'ಭೂತಾನಾಂ' ಎಂಬ ಪದಕ್ಕೆ ಸ್ಪಷ್ಟವಾಗಿ ಅನ್ವಯವು ಕಾಣಿಸುವುದಿಲ್ಲ. ಆದ್ದರಿಂದ ದೃಷ್ಟಾಂತ ಪ್ರದರ್ಶನಕ್ಕಾಗಿ 'ಭೂತಾನಾಂ' ಎಂದು ಹೇಳಿದ್ದಾರೆ ಎಂದು ವಿವಕ್ಷಿಸುವುದೇ ಸ್ವರಸವಾಗುತ್ತದೆ. 'ಮಾಂಸಾದೇರಪಿ' ಎಂಬಲ್ಲಿರುವ ಅಪಿ ಪದದಿಂದ ಭೂತಾನಾಂ ಎಂಬುದನ್ನು ದೃಷ್ಟಾಂತವನ್ನಾಗಿ ವಿವಕ್ಷಿಸುವುದು ಸಾಧುವಾಗುತ್ತದೆಂದು ತಿಳಿಯಬೇಕು.

'ಸಂಜ್ಞಾಮೂರ್ತಿ:' ಎಂಬುದು ಹಿಂದಿನ ಸೂತ್ರ. ಅಲ್ಲಿ ಭೂತಗಳಲ್ಲಿ ತ್ರಿವೃತ್ಕರಣವನ್ನು ಈಶ್ವರ ಮಾಡಿದ್ದಾನೆಂದು ಹೇಳಲಾಗಿದೆ. ಅರ್ಥಾತ್ ಮಾಂಸಾದಿಗಳೂ ಕೂಡ ತ್ರಿವೃತ್ಕೃತವಾದ ಭೂತಕಾರ್ಯವೆಂದು ಅದರಿಂದಲೇ ಸಿದ್ಧವಾಯಿತು. ಹೀಗೆ ಸಿದ್ಧವಾದ ಮೇಲೆ ಪರಸ್ಪರ ಅವ್ಯವಸ್ಥಾ ಶಂಕೆಯು ಬರುತ್ತದಲ್ಲವೇ? ಎಂದು ಆಶಂಕೆ ಮಾಡಿಕೊಂಡು ಅದಕ್ಕೆ ಉತ್ತರ ರೂಪದಲ್ಲಿ 'ವೈಶೇಷ್ಯಾತ್' ಎಂಬ ಸೂತ್ರವು ಹೊರಟಿದೆ ಎಂದು ಹೇಳಲು ಬರುತ್ತದೆ. ಮಧ್ಯದಲ್ಲಿ 'ಮಾಂಸಾದಿಭೌಮಂ' ಎಂಬ ಸೂತ್ರವು ಅನಾವಶ್ಯಕ.

**भामत्यां तु ''अन्नमयं हि सोम्य मनस्तेजोमयी वाक्'' इति श्रुत्युक्तं मनसः-पार्थिवत्वं वाचस्तैजसत्वञ्चायुक्तम् । काणादैर्मनसो नित्यत्वोक्तेः । साङ्ख्यैश्चाहङ्कारि-कत्वोक्तेरिति शङ्कानिरासार्थं मांसादीति सूत्रम् ।**

ಈ ಸಮಸ್ಯೆ ಇರುವುದರಿಂದ ಭಾಮತಿಯಲ್ಲಿ ಬೇರೆ ರೀತಿಯಲ್ಲಿಯೇ ವ್ಯಾಖ್ಯಾನ ಮಾಡಲಾಗಿದೆ. 'ಅನ್ನಮಯಂ ಹಿ ಸೋಮ್ಯ ಮನಸ್ತೇಜೋಮಯೀ ವಾಕ್' ಎಂಬ ಶ್ರುತಿಯಲ್ಲಿ ಮನಸ್ಸು ಪಾರ್ಥಿವವೆಂದು, ವಾಗಿಂದ್ರಿಯವು ತೈಜಸವೆಂದು ಹೇಳಲಾಗಿದೆ. ಇದು ಕೂಡುವುದಿಲ್ಲ. ಏಕೆಂದರೆ ಕಾಣಾದರು ಮನಸ್ಸನ್ನು ನಿತ್ಯವೆಂದು ಒಪ್ಪಿರುವುದರಿಂದ ಪೃಥಿವಿಯಿಂದ ಜನ್ಯವೆಂದು ಹೇಳಲಾಗದು. ಸಾಂಖ್ಯರು ಮನಸ್ಸನ್ನು ಅಹಂಕಾರತತ್ವದ ಕಾರ್ಯವೆಂದು ಹೇಳಿದ್ದಾರೆ. ಅದರ ನಿರಾಸಕ್ಕಾಗಿ 'ಮಾಂಸಾದಿಭೌಮಂ' ಇತ್ಯಾದಿ ಸೂತ್ರವು ಹೊರಟಿದೆ.

ವಿವರಣೆ – ಸೂತ್ರದಲ್ಲಿ ಮನಸ್ಸನ್ನು ಪಾರ್ಥಿವವೆಂದೂ, ವಾಗಿಂದ್ರಿಯವನ್ನು ತೈಜಸವೆಂದು ಹೇಳಿರುವುದಿಲ್ಲ. ಆದರೆ ಮಾಂಸಾದಿ ಭೌಮಂ ಎಂದು ಹೇಳಿದ್ದರಿಂದ ದೃಷ್ಟಾಂತವನ್ನು ತಿಳಿದು ಇದರಿಂದ ದಾರ್ಷ್ಟಾಂತಿಕದಿಂದ ಸಮನ್ವಯವನ್ನು ಮಾಡಿಕೊಳ್ಳಬೇಕು. ಮಾಂಸವು ಪಾರ್ಥಿವವಾಗಿದೆ, ರುದಿರವು ಜಲಿಯವಾಗಿದೆ, ಅಸ್ಥಿಯು ತೈಜಸವಾಗಿದೆ. ಈ ದೃಷ್ಟಾಂತದಂತೆ ವಾಗಿಂದ್ರಿಯವನ್ನು ತೈಜಸವೆಂದು ಮನಸ್ಸನ್ನು ಪಾರ್ಥಿವವೆಂದು ತಿಳಿಯಬೇಕು ಎಂಬುದು ಭಾಮತಿಕಾರನ ಅಭಿಪ್ರಾಯ.

ಪರಿಪೂರ್ಣಚಂದ್ರಿಕಾ

**तत्र च वाङ्मनसे इति वक्तव्ये मांसाद्यभिधानं सिद्धेन सह साध्यस्योपादाने दृष्टान्तलाभाय । यथा मांसादि भौमाद्येवं वाङ्मनसे अपि तैजसभौमे इति । काणादादिमतं तु श्रुत्यादिविरुद्धमित्युक्तम् ।**

ಸೂತ್ರದಲ್ಲಿ ವಾಙ್ಮನಸ್ಸೆಂದೇ ಹೇಳಬೇಕಿತ್ತು. 'ಮಾಂಸಾದಿಭೌಮಂ' ಎಂದು ಹೇಳಿದ್ದರ ಉದ್ದೇಶವೇನೆಂದರೆ ಸಿದ್ಧದ ಜೊತೆ ಸಾಧ್ಯವನ್ನು ಹೇಳಿದಾಗ ದೃಷ್ಟಾಂತವು ಲಾಭವಾಗುತ್ತದೆ ಎಂಬುದೇ ಪ್ರಯೋಜನವಾಗಿದೆ. ಆದ್ದರಿಂದ ಮಾಂಸಾದಿಗಳು ಹೇಗೆ ಪಾರ್ಥಿವಗಳಾಗಿವೆಯೋ ಅದರಂತೆ ವಾಗಿಂದ್ರಿಯವು ತೈಜಸವು, ಮನಸ್ಸು ಎಂಬ ಇಂದ್ರಿಯವು ಪಾರ್ಥಿವವು ಆಗಿದೆ. ಆದ್ದರಿಂದ ಕಾಣಾದಾದಿಗಳು ಮನಸ್ಸನ್ನು ನಿತ್ಯವೆಂದು, ಸಾಂಖ್ಯರು ಅಹಂಕಾರಿಕವೆಂದು ಹೇಳಿದ್ದು ಶ್ರುತ್ಯಾದಿ ವಿರುದ್ಧವೆಂದು ಸಿದ್ಧವಾಯಿತು.

**तन्न । साङ्ख्यादिस्मृत्यविरोधोक्तेरिहासङ्गतेः । किञ्च सौत्रेण भौमशब्देन तैजसत्वाद्युपलक्षणे ''यथाशब्दमितरयोः'' इति व्यर्थम् ।**

ಭಾಮತಿಕಾರನ ಈ ವ್ಯಾಖ್ಯಾನವೂ ಕೂಡ ಅಯುಕ್ತವಾಗಿದೆ. ಏಕೆಂದರೆ ಸಾಂಖ್ಯಾದಿ ಸ್ಮೃತಿಗಳ ವಿರೋಧವನ್ನು ಪರಿಹಾರ ಮಾಡುವುದಾದರೆ ಎರಡನೇ ಪಾದದಲ್ಲಿ ಈ ಅಧಿಕರಣವನ್ನು ನಿವೇಶ ಮಾಡಬೇಕಿತ್ತು. ಶ್ರುತಿಗಳ ವಿರೋಧ ಪರಿಹಾರಕ್ಕಾಗಿ ಹೊರಟಿರುವ ಈ ಪಾದದಲ್ಲಿ ಮಾಂಸಾದಿಕರಣವು ಅಸಂಗತವಾಗುತ್ತದೆ.

ಮತ್ತು ಸೂತ್ರದಲ್ಲಿರುವ ಭೌಮ ಶಬ್ದಕ್ಕೆ ತೈಜಸತ್ವ ಮತ್ತು ಆಪ್ಯತ್ವವು ಉಪಲಕ್ಷಣಯಾ ವಿವಕ್ಷಿಸುತ್ತೀರೋ ಇಲ್ಲವೋ? ಭೌಮ ಶಬ್ದದಿಂದ ಉಪಲಕ್ಷಣಯಾ ತೈಜಸತ್ವ ಮತ್ತು ಆಪ್ಯತ್ವವನ್ನು ವಿವಕ್ಷಿಸುವುದಾದರೆ ಆಗ 'ಯಥಾಶಬ್ದಮಿತರಯೋಃ' ಎಂಬ ಶಬ್ದವು ವ್ಯರ್ಥವಾಗುತ್ತದೆ.

**''मांसादि'' इत्यादिशब्दोक्तलोहितमज्जारूपदृष्टान्तगताप्यतैजसत्वयोरपि भौमशब्देनैव लाभात् । अनुपलक्षणे च ''मांसादि'' इत्यादिशब्दोक्तवाग्भूतदार्ष्टान्तिकस्य तैजसत्वं सिध्येदिति यत्किञ्चिदेतत् ।**

'ಮಾಂಸಾದಿ' ಎಂಬಲ್ಲಿರುವ ಆದಿ ಶಬ್ದದಿಂದ ರಕ್ತ ಲೋಹಿತ ಮತ್ತು ಮಜ್ಜಗಳಿಗೆ ಆಪ್ಯತ್ವ ಹಾಗೂ ತೈಜಸತ್ವಗಳ ಜೊತೆ ಅನ್ವಯವು ತಿಳಿಯಿತು. ಹೀಗೆ 'ಮಾಂಸಾದಿಭೌಮಂ' ಎಂಬುದರಿಂದಲೇ ಎಲ್ಲವೂ ತಿಳಿಯುವುದರಿಂದ 'ಯಥಾಶಬ್ದಮಿತರಯೋಃ' ಎಂಬ ಸೂತ್ರವು ವ್ಯರ್ಥವಾಗುತ್ತದೆ. ಮಾಂಸ ಶಬ್ದವು ತೈಜಸತ್ವ ಮತ್ತು ಆಪ್ಯತ್ವಗಳಿಗೆ ಉಪಲಕ್ಷಕವಾಗಿಲ್ಲ ಎಂದು ಹೇಳುವುದಾದರೆ ಮಾಂಸಾದಿ ಎಂಬಲ್ಲಿರುವ ಆದಿ ಶಬ್ದದಿಂದ ಹೇಳಲ್ಪಟ್ಟ ವಾಕ್ ಎಂಬ ದಾರ್ಷ್ಟಾಂತಿಕಕ್ಕೆ ತೈಜಸತ್ವವು ಸಿದ್ಧವಾಗಬೇಕಾದೀತು?

ವಿವರಣೆ – ವಾಗಿಂದ್ರಿಯಕ್ಕೆ ತೈಜಸತ್ವವನ್ನು ಸಾಧನೆ ಮಾಡುವುದು ಪೂರ್ವಪಕ್ಷಗಳಿಗೆ ಇಷ್ಟವೇ ಆಗಿರುವಾಗ ಗ್ರಂಥಕಾರರು 'ಮಾಂಸಾದಿ' ಎಂಬಲ್ಲಿರುವ ಆದಿ ಶಬ್ದದಿಂದ ತಿಳಿಯಲ್ಪಡುವ ವಾಗಿಂದ್ರಿಯಕ್ಕೆ

ತೈಜಸತ್ವವು ಸಿದ್ಧವಾಗಬೇಕಾದೀತು ಎಂಬ ಆಕ್ಷೇಪವನ್ನು ಹೇಗೆ ಮಾಡಿದರು? ಈ ಆಪಾದನೆಯು ಅನಿಷ್ಟವೇ ಆಗಿರುವುದಿಲ್ಲ.

ಉತ್ತರವನ್ನು ಹೀಗೆ ತಿಳಿಯಬೇಕು. ಭಾಮತಿಕಾರನಿಗೆ ವಾಗಿಂದ್ರಿಯಕ್ಕೆ ತೈಜಸತ್ವ ಸಿದ್ಧವಾಗುವುದು ಇಷ್ಟವೇ ಆಗಿದೆ. ಆದರೆ ಇದನ್ನು ಸೂತ್ರದಲ್ಲಿರುವ 'ಭೌಮ' ಶಬ್ದದಿಂದ ಉಪಲಕ್ಷಣಯಾ ಸಾಧನೆ ಮಾಡಿರುತ್ತಾನೆ. 'ಇತರಯೋಃ' ಎಂಬುದರಿಂದ ತೈಜಸತ್ವವನ್ನು ವಿವಕ್ಷಿಸಿ ಅದನ್ನು ವಾಗಿಂದ್ರಿಯದಲ್ಲಿ ಅನ್ವಯ ಮಾಡುವುದು ಅವನ ಉದ್ದೇಶವಲ್ಲ. ಏಕೆಂದರೆ 'ಇತರಯೋಃ' ಎಂಬುದರಿಂದ ತಿಳಿಯುವ ತೈಜಸತ್ವ ಮತ್ತು ಆಪ್ಯತ್ವಗಳನ್ನು ಮಜ್ಜ ಹಾಗೂ ಲೋಹಿತಗಳಲ್ಲಿ ಅನ್ವಯವನ್ನು ಮಾಡಿರುತ್ತಾನೆ. ಆದ್ದರಿಂದ ರುದಿರವು ಆಪ್ಯವಾಗಿದೆ, ಮಜ್ಜ ಎಂಬುದು ತೈಜಸವಾಗಿದೆ ಎಂಬ ವಿಷಯ 'ಇತರಯೋಃ' ಎಂಬುದರಿಂದ ತಿಳಿಯುತ್ತದೆ. ವಾಗಿಂದ್ರಿಯವು ತೈಜಸವಾಗಿದೆ ಎಂಬುದು ಉಪಲಕ್ಷಣಯಾ ತಿಳಿಯುತ್ತದೆ ಎಂಬುದಾಗಿ ಭಾಮತಿಕಾರನು ವ್ಯಾಖ್ಯಾನ ಮಾಡಿದ್ದಾನೆ. ಪ್ರಕೃತ ಗ್ರಂಥಕಾರರು 'ಇತರಯೋಃ' ಎಂಬುದರಿಂದ ಯಾವ ತೈಜಸತ್ವವು ಸಿದ್ಧವಾಗಿದೆಯೋ ಅದು ಮಾಂಸದಲ್ಲಿ ಸಿದ್ಧವಾಗಬೇಕಾದೀತು ಎಂದು ಆಪಾದನೆ ಮಾಡುತ್ತಿದ್ದಾರೆ.

ಇಲ್ಲಿ ಸ್ಪಷ್ಟವಾಗಿ ಹೀಗೆ ತಿಳಿಯಬೇಕು – ಮಾಂಸಾದಿ ಎಂಬುದರಿಂದ ದೃಷ್ಟಾಂತ ಹಾಗೂ ದಾರ್ಷ್ಟಾಂತಗಳೆಲ್ಲವೂ ಸಂಗ್ರಹವಾಗಿವೆ. ಮಾಂಸ, ಮಜ್ಜ, ರುದಿರ, ಮನಸ್ಸು, ವಾಕ್ ಈ ಐದು ಪದಾರ್ಥಗಳು ಇಲ್ಲಿ ಪ್ರಸಕ್ತವಾಗಿವೆ. ಮಾಂಸವು ಭೌಮವಾಗಿದೆ, ಮಜ್ಜ ಎಂಬುದು ತೈಜಸವಾಗಿದೆ, ರುದಿರವು ಆಪ್ಯವಾಗಿದೆ ಎಂಬುದು ಮೂರು ದೃಷ್ಟಾಂತಗಳೆನಿಸಿವೆ. ದಾರ್ಷ್ಟಾಂತಿಕವಾದ ಮನಸ್ಸು ಭೌಮವಾಗಿದೆ ಎಂಬುದು ಸ್ಪಷ್ಟವಾಗಿ ತಿಳಿಯುತ್ತದೆ. ಉಳಿದ ವಾಕ್ ಇಂದ್ರಿಯಕ್ಕೆ ತೈಜಸತ್ವವು ಯಾವುದರಿಂದ ಸಿದ್ಧವಾಗುತ್ತದೆ ಎಂಬುದರ ಬಗ್ಗೆ ಈಗ ಚರ್ಚೆ ನಡೆದಿದೆ. ಉಪಲಕ್ಷಣಯಾ ತಿಳಿಯುತ್ತದೋ ಅಥವಾ 'ಇತರಯೋಃ' ಎಂಬುದರಿಂದ ತಿಳಿಯುತ್ತದೋ? ಎಂದು ಸಂಶಯ. ಉಪಲಕ್ಷಣಯಾ ತಿಳಿಯುತ್ತದೆ ಎಂದು ಹೇಳಿದರೆ 'ಯಥಾಶಬ್ದಮಿತರಯೋಃ' ಎಂಬ ಸೂತ್ರವೇ ವ್ಯರ್ಥವಾಗುತ್ತದೆ. ಉಪಲಕ್ಷಣಯಾ ತೈಜಸತ್ವವು ತಿಳಿಯುವುದಿಲ್ಲ ಎಂದು ಹೇಳಿದರೆ 'ಇತರಯೋಃ' ಎಂಬುದರಿಂದ ಯಾವ ತೈಜಸತ್ವವು ತಿಳಿಯುತ್ತದೋ ಅದರ ಜೊತೆಯೇ ಅನ್ವಯವನ್ನು ಮಾಡಲು ಬರುತ್ತದೆ. ಆಗ ಪುನಃ ಉಪಲಕ್ಷಣ ಮಾಡಿದ್ದು ವ್ಯರ್ಥವಾಗುತ್ತದೆ. ಇತರ ಶಬ್ದದಿಂದಲೇ ನೇರವಾಗಿ ತೈಜಸತ್ವವು ತಿಳಿಯಬೇಕಾದರೆ ಉಪಲಕ್ಷಣಯಾ ತೈಜಸತ್ವವು ತಿಳಿಯುತ್ತದೆ ಎಂದು ಹೇಳಿದ್ದು ವ್ಯರ್ಥವಾಗಿದೆ.

**केचित्तु ''अनेन जीवनेति श्रुतेर्जीवविशेषहिरण्यगर्भकर्तृकं नामरूपव्याकरणमिति पूर्वपक्षयन्ति । तन्न । जीवशब्दमात्रेण हिरण्यगर्भाप्राप्तेरिति । परोक्तं पूर्वमेव दूषितम् ।।**

**इति श्रीमद्ब्रह्मण्यतीर्थपूज्यपादानां शिष्येण व्यासयतिना विरचितायां श्रीमद्ब्रह्मभाष्यटीकाविवृतौ तात्पर्यचन्द्रिकायां द्वितीयाध्यायस्य चतुर्थः पादः ।।**

**अध्यायश्च सम्पूर्णः ।।**

ಪರಿಪೂರ್ಣಚಂದ್ರಿಕಾ

ರಾಮಾನುಜರು 'ಅನೇನ ಜೀವೇನ' ಎಂಬ ವಿಷಯವಾಕ್ಯವನ್ನು ಆಶ್ರಯಿಸಿ ಜೀವವಿಶೇಷನೆನಿಸಿದ ಹಿರಣ್ಯಗರ್ಭನೇ ನಾಮರೂಪಗಳ ಕರ್ತೃವಾಗಿದ್ದಾನೆ ಎಂದು ಪೂರ್ವಪಕ್ಷ ಮಾಡಿದ್ದಾರೆ. ಇದು ತಪ್ಪು. ಕೇವಲ ಜೀವ ಶಬ್ದದಿಂದ ಹಿರಣ್ಯಗರ್ಭನ ಪ್ರಾಪ್ತಿಯೇ ಆಗುವುದಿಲ್ಲ. ಹೀಗೆ ಇವರ ಮತದಲ್ಲಿರುವ ದೋಷವನ್ನು ನಾವು ಈ ಹಿಂದೆಯೇ ತಿಳಿಸಿದ್ದೇವೆ.

**ವಿವರಣೆ** – ಶ್ರುತಿಯಲ್ಲಿ ಜೀವ ಎಂಬ ಶಬ್ದಕ್ಕೆ ಚತುರ್ಮುಖ ಎಂಬ ಅರ್ಥವು ಸ್ಪಷ್ಟವಾಗಿ ತಿಳಿಯುವುದಿಲ್ಲ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಮಾಂಸಾಧಿಕರಣವು ಸಂಪೂರ್ಣವಾಯಿತು

ದ್ವಿತೀಯಾಧ್ಯಾಯದ ಚತುರ್ಥಪಾದವು ಸಮಾಪ್ತವಾಯಿತು.

ಶ್ರೀ ಕೃಷ್ಣಾರ್ಪಣಮಸ್ತು

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**मांसादिभौमं** ।। ''प्रकृतो देहः किमाप्यः किं वा पार्थिव'' इत्यादिटीकासूचितामाह – **पूर्वमिति** ।। फलोक्तिपूर्वोत्तरपक्षटीकासूचिताश्चिन्ता आह – **अत्रेति** ।। आद्यचिन्ताद्वयं फलोक्तिपरटीकासूचितम् ।।

ಪ್ರಕೃತವಾದ ದೇಹವು ಜಲೀಯವೋ ಅಥವಾ ಪಾರ್ಥಿವವೋ ಎಂಬುದಾಗಿ 'ಪ್ರಕೃತೋ ದೇಹಃ ಕಿಮಾಪ್ಯಃ ಕಿಂ ವಾ ಪಾರ್ಥಿವಃ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಇದರಿಂದ ಸೂಚಿತವಾದ ಸಂಗತಿಯನ್ನು 'ಪೂರ್ವಂ' ಎಂಬ ವಾಕ್ಯದಿಂದ ಗ್ರಂಥಕಾರರು ಹೇಳಿರುತ್ತಾರೆ. ಫಲವನ್ನು ಹೇಳುವ ಪೂರ್ವಪಕ್ಷ ಟೀಕೆ ಹಾಗೂ ಸಿದ್ಧಾಂತ ಪಕ್ಷದ ಟೀಕೆಯಿಂದ ಸೂಚಿತವಾದ ಸಂಶಯ ಪರಂಪರೆಯನ್ನು 'ಅತ್ರ' ಇತ್ಯಾದಿಯಾಗಿ ನಿರೂಪಣೆ ಮಾಡುತ್ತಿದ್ದಾರೆ. ಇವುಗಳಲ್ಲಿ ಮೊದಲಿನ ಎರಡು ಸಂಶಯಗಳು ಪೂರ್ವಪಕ್ಷ ಹಾಗೂ ಸಿದ್ಧಾಂತ ಫಲಗಳನ್ನು ಹೇಳುವ ಟೀಕೆಯಿಂದ ಸೂಚಿತವಾಗಿವೆ.

**प्रकाशः – भूतत्रयात्मकत्वश्रुतिरिति ।।** ''इमास्तिस्रो देवताः पुरुषं प्राप्य'' इत्यादिश्रुतिरित्यर्थः । एतदप्रामाण्ये हि पूर्वोक्तदिशा श्रुतिमात्राप्रामाण्यमिति तादर्थ्यमेतच्चिन्ताया इति भावः ।।

'ಭೂತತ್ರಯಾತ್ಮಕತ್ವಶ್ರುತಿಃ' ಎಂದರೆ 'ಇಮಾಸ್ತಿಸ್ರೋ ದೇವತಾಃ ಪುರುಷಂ ಪ್ರಾಪ್ಯ' ಇತ್ಯಾದಿ ಶ್ರುತಿ ಎಂದರ್ಥ. ಈ ಶ್ರುತಿಯು ಅಪ್ರಮಾಣವಾದರೆ ಈ ಹಿಂದೆ ಹೇಳಿದಂತೆ ಸಕಲ ಶ್ರುತಿಗಳೂ ಕೂಡ ಇದೇ ಉದಾಹರಣೆಯಿಂದ ಅಪ್ರಮಾಣವಾಗುತ್ತವೆ. ಈ ಶ್ರುತಿಯು ಪ್ರಮಾಣವಾದರೆ ಇದರ ಉದಾಹರಣೆಯಿಂದ ಸಕಲ ಶ್ರುತಿಗಳು ಪ್ರಮಾಣವಾಗುತ್ತವೆ. ಅದಕ್ಕೋಸ್ಕರ ವಿಚಾರವನ್ನು ಇಲ್ಲಿ ಮಾಡುತ್ತಿದ್ದಾರೆ ಎಂದಭಿಪ್ರಾಯ.

**प्रकाशः – आप्यत्वादीति ।।** आप्यत्वपार्थिवत्वादिश्रुत्या भाष्याद्युक्तयेत्यर्थः । ''भाष्यकृतोत्तरसूत्रशेषतया सूत्रमिदं विषयोपदर्शनपरतया व्याख्यातम्'' इति भामत्युक्तं हृदि कृत्वाऽऽह – **उत्तरसूत्रेति ।।**

ಗ್ರಂಥದಲ್ಲಿ 'ಆಪ್ಯತ್ವಾದಿಶ್ರುತ್ಯಾದಿಕಂ' ಎಂದು ಹೇಳಿದ್ದಾರೆ. ಆಪ್ಯತ್ವ ಪ್ರತಿಪಾದಕವಾದ ಮತ್ತು ಪಾರ್ಥಿವತ್ವ ಪ್ರತಿಪಾದಕವಾದ ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಗಳಿಂದ ಎಂಬುದು ಇದರ ಅರ್ಥ.

'ಭಾಷ್ಯಕೃತೋತ್ತರಸೂತ್ರಶೇಷತಯಾ ಸೂತ್ರಮಿದಂ ವಿಷಯೋಪದರ್ಶನಪರತಯಾ ವ್ಯಾಖ್ಯಾತಮ್' ಭಾಷ್ಯಕಾರರು ಮುಂದಿನ ಸೂತ್ರಕ್ಕೆ ಅಂಗಭೂತವಾಗಿ ಈ ಸೂತ್ರವು ವಿಷಯಪ್ರದರ್ಶನ ಮಾಡಲು ಹೊರಟದೆ. ಹೀಗೆ ಭಾಮತಿಕಾರನು ವ್ಯಾಖ್ಯಾನ ಮಾಡಿದ್ದಾನೆ. ಇವನ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡು ಗ್ರಂಥಕಾರರು 'ಉತ್ತರಸೂತ್ರ' ಇತ್ಯಾದಿಯಾಗಿ ಅದ್ವೈತ ಮತವನ್ನು ಅನುವಾದ ಮಾಡಿದ್ದಾರೆ.

**प्रकाशः – यदि सर्वमिति ।।** भूतं भौतिकं चेत्यर्थः ।। **तैजसमिदमिति ।।** अस्थ्यादीत्यर्थः ।। **आप्यमिदमिति ।।** लोहितादीत्यर्थः । सूत्रेण मांसादीति सूत्रेण विनापीत्यर्थः । भौतेन भूतसम्बन्धिनाऽत्र त्रिवृत्कृतत्वमात्रेणेत्यर्थः ।

'ಯದಿ ಸರ್ವಂ' ಎಂಬಲ್ಲಿರುವ 'ಸರ್ವಂ' ಎಂಬ ಪದಕ್ಕೆ ಭೂತ ಮತ್ತು ಭೌತಿಕ ಪದಾರ್ಥ ಎಂದರ್ಥ. 'ತೈಜಸಮಿದಂ' ಎಂದರೆ ಅಸ್ಥಿ ಮೊದಲಾದ ತೈಜಸವಾಗಿವೆ ಎಂದು ತಿಳಿಯಬೇಕು. 'ಆಪ್ಯಮಿದಂ' ಎಂದರೆ ರಕ್ತ ಮೊದಲಾದವುಗಳು ಜಲೀಯವಾಗಿವೆ ಎಂದು ತಿಳಿಯಬೇಕು. 'ಸೂತ್ರೇಣ ವಿನಾಪಿ' ಎಂದರೆ ಮಾಂಸಾದಿ ಸೂತ್ರವು ಇಲ್ಲದಿದ್ದರೂ ಕೂಡ ಎಂದರ್ಥ. 'ಭೌತೇನ' ಎಂದರೆ ಭೂತಸಂಬಂಧಿಯಾದ ತ್ರಿವೃತ್ಕೃತತ್ವ ಮಾತ್ರದಿಂದ ಎಂದರ್ಥ.

**प्रकाशः –** तेनेत्यस्यार्थस्त्रिवृत्कृतेत्यादि । ''शङ्कानिराकरणार्थत्वमप्यस्य शक्यं वक्तुम्'' इत्यादिनोक्तमाह – **भामत्यां त्विति ।।** इतरयोरप्तेजसोश्च कार्यं यथाशब्दमुपेयमित्यर्थादिति भावः ।

'ತೇನ' ಎಂಬುದರ ಅರ್ಥವನ್ನೇ 'ತ್ರಿವೃತ್ಕೃತಭೂತಕಾರ್ಯತ್ವೇನ' ಎಂಬುದಾಗಿ ವಿವರಣೆ ಮಾಡಿದ್ದಾರೆ. 'ಶಂಕಾನಿರಾಕರಣಾರ್ಥಮಪಿ ಅಸ್ಯ ಶಕ್ಯಂ ವಕ್ತುಮ್' ಶಂಕಾನಿರಾಕರಣೆಗೋಸ್ಕರವು ಇದನ್ನು ಹೇಳಬಹುದು ಎಂಬುದಾಗಿ ಭಾಮತಿಯಲ್ಲಿ ಹೇಳಿದ್ದನ್ನು 'ಭಾಮತ್ಯಾಂ ತು' ಎಂಬುದಾಗಿ ಅನುವಾದ ಮಾಡಿದ್ದಾರೆ. 'ಇತರಯೋಃ' ಎಂಬುದಕ್ಕೆ ಅಪ್ ಹಾಗೂ ತೇಜಸ್ಸುಗಳ ಕಾರ್ಯವು ಶಬ್ದಕ್ಕೆ ಅನುಗುಣವಾಗಿ ವಿವಕ್ಷಿಸಬೇಕು ಎಂದಭಿಪ್ರಾಯ.

**प्रकाशः** – ''मांसादीत्यादिपदेनाप्तेजःकार्ययोर्मज्जालोहितयोर्ग्रहणम्'' इति कल्पतरूक्तं हृदि कृत्वाऽऽह – **मांसादीत्यादिशब्दोक्तेति** ।।

'ಮಾಂಸಾದಿ' ಎಂಬಲ್ಲಿರುವ ಆದಿ ಪದದಿಂದ ಅಪ್ ಮತ್ತು ತೇಜಸ್ಸುಗಳ ಕಾರ್ಯವೆನಿಸಿದ ಮಜ್ಜ ಮತ್ತು ಲೋಹಿತಗಳನ್ನು ವಿವಕ್ಷಿಸಬೇಕು ಎಂಬುದಾಗಿ ಕಲ್ಪತರುವಿನಲ್ಲಿ ಹೇಳಿದ್ದನ್ನು ವಿವಕ್ಷಿಸಿ ಗ್ರಂಥಕಾರರು 'ಮಾಂಸಾದಿ' ಇತ್ಯಾದಿಯಾಗಿ ಹೇಳಿರುತ್ತಾರೆ.

**प्रकाशः** – **वाग्भूतेति** ।। अनुपलक्षणपक्षे मांसादीत्यादिपदेन वाचो ग्रहणं कार्यम् । तथा च मांसादिभौममितरयोश्च कार्यमित्युक्त आदिपदोपात्तवाच इतरयोरित्यत्रोक्ततेजः-कार्यत्वं सिध्यतीत्यर्थः ।

'ವಾಗ್ಭೂತ' ಇತ್ಯಾದಿ ಗ್ರಂಥದ ಅಭಿಪ್ರಾಯ ಹೀಗಿದೆ– ಅನುಪಲಕ್ಷಣ ಪಕ್ಷದಲ್ಲಿ 'ಮಾಂಸಾದಿ' ಎಂಬಲ್ಲಿರುವ ಆದಿ ಪದದಿಂದ ವಾಗಿಂದ್ರಿಯವನ್ನು ಸ್ವೀಕರಿಸಬೇಕು. ಆದ್ದರಿಂದ 'ಮಾಂಸಾದಿಭೌಮಂ ಇತರಯೋಶ್ಚ ಕಾರ್ಯಂ' ಎಂದು ಹೇಳಿದರೆ ಆದಿ ಪದದಿಂದ ತಿಳಿಯಲ್ಪಟ್ಟ ವಾಗಿಂದ್ರಿಯಕ್ಕೆ 'ಇತರಯೋಃ' ಎಂಬಲ್ಲಿ ಹೇಳಲ್ಪಟ್ಟ ತೇಜಸ್ಸಿನ ಕಾರ್ಯತ್ವವು ಸಿದ್ಧವಾಗಬೇಕಾದೀತು ಎಂದರ್ಥ. 'ಇತರಯೋಃ' ಎಂಬಲ್ಲಿ ಹೇಳಲ್ಪಟ್ಟ ಯಾವ ತೇಜಸ್ಸಿನ ಕಾರ್ಯತ್ವವಿದೆಯೋ ಅದು ಸಿದ್ಧವಾಗಬೇಕಾದೀತು ಎಂಬುದು ಆಪಾದನೆ. ಇದು ಅದ್ವೈತಿಗಳಿಗೆ ಅನಿಷ್ಟವಾಗಿದೆ.

**प्रकाशः** – नन्वेवमितरयोरित्यत्रापामपि ग्रहणमनन्वितं स्यादिति चेत्तर्हि तदन्वयायादिपदेन प्राणस्यापि ग्रहणमस्तु । प्राण आप्यत्वानाप्यत्वविवादो नेति तदुक्तिर्व्यर्था । मनसो भौमत्वोक्तिरपि नोक्ता स्यादिति चेत्तर्हि वाङ्मनसोरेव दार्ष्टान्तिकत्वपक्षेऽपि तैजसभौमयोर्मज्जामांसयोरेव दृष्टान्ततयोपादातव्यत्वेनादिपदेन मज्जालोहितयोस्स्वशब्देन मांसस्य चेति त्रयाणामितरयोरिति भौममिति शब्दाभ्यामुक्ततेजोजलपृथिवीकार्याणां दृष्टान्ततयोपादानं कार्यम् । तदेतदभिप्रेत्याह – **यत्किञ्चिदेतदिति** ।। जीवशब्दमात्रेणेति ।। तस्य साधारण्यादिति भावः ।।

निर्दोषगुणपूर्णेन श्रीप्राणपतिनेरितः ।
यदवोचमहं तेन प्रीणातु पुरुषोत्तमः ।।

इति श्रीसुधीन्द्रगुरुपादशिष्यराघवेन्द्रयतिकृते चन्द्रिकाप्रकाशे
द्वितीयाध्यायस्य चतुर्थः पादः ।।
अध्यायश्च सम्पूर्णः ।। ग्रन्थश्चायं सम्पूर्णः ।।

'ಮಾಂಸಾದಿ' ಎಂಬಲ್ಲಿರುವ ಆದಿ ಪದದಿಂದ ವಾಗಿಂದ್ರಿಯವು ವಿವಕ್ಷಿತವಾಗಿದೆ. ಅದಕ್ಕೆ ತೈಜಸತ್ವವನ್ನು ಮಾತ್ರ 'ಇತರಯೋಃ' ಎಂಬುದರಿಂದ ಸಿದ್ಧವಾಗುತ್ತದೆ ಎಂದು ಹೇಳಬಾರದು. ಏಕೆಂದರೆ 'ಇತರಯೋಃ' ಎಂಬಲ್ಲಿ ದ್ವಿವಚನವಿರುವುದರಿಂದ 'ಅಪ್' ಕಾರ್ಯವನ್ನೂ ಕೂಡ ವಿವಕ್ಷಿಸಲಾಗಿದೆ. ಇದು ಅನನ್ವಿತವಾಗಬೇಕಾಗುತ್ತದೆ. ಆದ್ದರಿಂದ ಆದಿ ಪದದಿಂದ ತಿಳಿಯಲ್ಪಡುವ ವಾಗಿಂದ್ರಿಯಕ್ಕೆ 'ಇತರಯೋಃ' ಎಂಬಲ್ಲಿ ಅನ್ವಯವನ್ನು ಮಾಡಬಾರದು.

ಇದು ತಪ್ಪು. ಏಕೆಂದರೆ 'ಇತರಯೋಃ' ಎಂಬುದರಿಂದ ತೇಜಸ್ಸಿನ ಕಾರ್ಯ ಹಾಗೂ ಅಪ್‌ನ ಕಾರ್ಯವು ತಿಳಿಯುವುದಾದರೆ ಆದಿ ಪದದಿಂದ ಪ್ರಾಣನನ್ನೂ ಕೂಡ ವಿವಕ್ಷಿಸಿರಿ. ಏಕೆಂದರೆ ಯಾವ ಶ್ರುತಿಯಲ್ಲಿ ಮನಸ್ಸು ಮತ್ತು ವಾಗಿಂದ್ರಿಯವು ಉಕ್ತವಾಗಿದೆಯೋ ಅದೇ ಶ್ರುತಿಯಲ್ಲಿ ಪ್ರಾಣನೂ ಕೂಡ ಉಕ್ತನಾಗಿದ್ದಾನೆ. ಆದ್ದರಿಂದ ಪ್ರಾಣನನ್ನು ಬಿಡಲು ಯಾವುದೇ ಕಾರಣವಿಲ್ಲ. ಈ ಪ್ರಾಣನಿಗೆ 'ಇತರಯೋಃ' ಎಂಬುದರಿಂದ ಹೇಳಲ್ಪಟ್ಟ ಅಪ್‌ನ ಕಾರ್ಯ ಎಂದು ವಿವಕ್ಷಿಸುವುದು ಸುಲಭವಾಗುತ್ತದೆ. ಹೀಗೆ ವಿವಕ್ಷಿಸಿದಾಗ 'ಇತರಯೋಃ' ಎಂಬಲ್ಲಿ ಅಪ್‌ನ ಕಾರ್ಯಕ್ಕೆ ಆದಿ ಪದದಿಂದ ವಿವಕ್ಷಿತವಾದ ಪ್ರಾಣನಲ್ಲಿ ಅನ್ವಯವನ್ನು ಮಾಡುತ್ತೇವೆ. ಆದ್ದರಿಂದ ಅನನ್ವಯ ದೋಷಕ್ಕೆ ಅವಕಾಶವಿಲ್ಲ.

ವಾಗಿಂದ್ರಿಯ ಹಾಗೂ ಮನೋ ಇಂದ್ರಿಯಗಳಲ್ಲಿ ವಿವಾದವಿದೆ. ಆದರೆ ಪ್ರಾಣನ ವಿಷಯದಲ್ಲಿ ಆಪ್ಯವೋ, ಅನಾಪ್ಯವೋ ಎಂಬ ವಿಷಯದಲ್ಲಿ ವಿವಾದವೇ ಇಲ್ಲ. ಆದ್ದರಿಂದ ಪ್ರಾಣನಿಗೆ ಆಪ್ಯತ್ವವನ್ನು ಹೇಳುವುದು ವ್ಯರ್ಥವಾಗಿದೆ. ಮತ್ತು ಆದಿ ಪದದಿಂದ ಪ್ರಾಣನನ್ನು ವಿವಕ್ಷಿಸುವುದಾದರೆ ಮನಸ್ಸನ್ನು ವಿವಕ್ಷಿಸಲು ಸಾಧ್ಯವೇ ಆಗುವುದಿಲ್ಲ. ಆಗ ಮನಸ್ಸಿಗೆ ಭೌಮತ್ವವೂ ಕೂಡ ಸಿದ್ಧವಾಗುವುದಿಲ್ಲ. ಹಾಗಾಗಿ ಆದಿ ಪದದಿಂದ ಮನಸ್ಸನ್ನು ಮಾತ್ರ ವಿವಕ್ಷಿಸಬೇಕು. ಪ್ರಾಣನನ್ನು ವಿವಕ್ಷಿಸಬಾರದು.

ಇದು ತಪ್ಪು. ಪ್ರಾಣಗಳಲ್ಲಿ ವಿವಾದವಿಲ್ಲ. ಆದ್ದರಿಂದ ಪ್ರಾಣನನ್ನು ವಿವಕ್ಷಿಸುವುದಿಲ್ಲ ಎಂದು ಹೇಳುತ್ತಿದ್ದೀರಿ. ಹಾಗಾದರೆ ದಾರ್ಷ್ಟಾಂತಿಕಗಳು ವಾಕ್ ಮತ್ತು ಮನಸ್ಸುಗಳು ಮಾತ್ರ ಆದವು. ದಾರ್ಷ್ಟಾಂತಿಕಕ್ಕೆ ಅನುಗುಣವಾಗಿ ಎರಡೇ ದೃಷ್ಟಾಂತವನ್ನು ಹೇಳಬೇಕು. ಲೋಹಿತವನ್ನು ಆಗ ಹೇಳಬಾರದಿತ್ತು. ಮಾಂಸ ಮತ್ತು ಮಜ್ಜ ಎರಡನ್ನು ಮಾತ್ರ ಹೇಳಿದ್ದರೆ ಸಾಕಾಗಿತ್ತು. ಯಾವ ರೀತಿಯಾಗಿ ಮಾಂಸ ಮತ್ತು ಮಜ್ಜ ಇವೆರಡು ಪಾರ್ಥಿವ ಹಾಗೂ

ತೈಜಸವಾಗಿದೆಯೋ ಅದೇ ರೀತಿಯಾಗಿ ಮನಸ್ಸು ಮತ್ತು ವಾಗಿಂದ್ರಿಯವು ಪಾರ್ಥಿವ ಹಾಗೂ ತೈಜಸಗಳಾಗಿವೆ. ಇಷ್ಟು ಹೇಳಿದ್ದರೆ ಸಾಕಾಗಿತ್ತು. ಮೂರು ದೃಷ್ಟಾಂತ ಹೇಳಿದ್ದು ತಪ್ಪಾಗುತ್ತದೆ. ನೀವು ಆದಿ ಪದದಿಂದ ಮಜ್ಜ ಲೋಹಿತಗಳನ್ನೂ, ಸ್ವ ಶಬ್ದದಿಂದ ಮಾಂಸವನ್ನು ಮೂರನ್ನು ವಿವಕ್ಷಿಸಿದ್ದೀರಿ. 'ಇತರಯೋಃ' ಎಂಬುದರಿಂದ ಹಾಗೂ 'ಭೌಮಂ' ಎಂಬ ಶಬ್ದದಿಂದ ತೇಜಸ್ಸು, ಜಲ, ಪೃಥಿವಿ ಇವುಗಳ ಕಾರ್ಯವೆನಿಸಿದ ಮೂರನ್ನೂ ಕೂಡ ದೃಷ್ಟಾಂತವನ್ನಾಗಿ ನೀಡಬೇಕಿತ್ತು. ಈ ಅಭಿಪ್ರಾಯದಿಂದ 'ಯದ್ಕಿಂಚಿದೇತತ್' ಎಂಬುದಾಗಿ ಗ್ರಂಥಕಾರರು ಹೇಳಿದ್ದಾರೆ.

ರಾಮಾನುಜರು ಪ್ರತಿಯೊಬ್ಬರಲ್ಲೂ ಸಮನ್ವಯವಾಗುವ ಜೀವ ಶಬ್ದವನ್ನು ಉಲ್ಲೇಖ ಮಾಡಿ ವಿರಿಂಚನಲ್ಲಿ ಪೂರ್ವಪಕ್ಷವನ್ನು ಸ್ಥಾಪನೆ ಮಾಡಿದ್ದಾರೆ. ಇದು ಅಯುಕ್ತವಾಗಿದೆ. ವಿರಿಂಚನಲ್ಲಿ ಪೂರ್ವಪಕ್ಷವನ್ನು ಸ್ಥಾಪನೆ ಮಾಡಬೇಕೆಂದರೆ ಅಸಾಧಾರಣವಾದ ವಿರಿಂಚ್ಯಾದಿ ಶಬ್ದಗಳನ್ನೇ ಉಲ್ಲೇಖ ಮಾಡಬೇಕಿತ್ತು. ಸಾಧಾರಣವಾದ ಜೀವ ಶಬ್ದವನ್ನು ಉಲ್ಲೇಖ ಮಾಡಿದ್ದು ಅಸಾಧುವಾಗಿದೆ.

ನಿರ್ದೋಷಗುಣಪೂರ್ಣೇನ ಶ್ರೀಪ್ರಾಣಪತಿನೇರಿತಃ ।
ಯದವೋಚಮಹಂ ತೇನ ಪ್ರೀಣಾತು ಪುರುಷೋತ್ತಮಃ ॥

ನಿರ್ದುಷ್ಟವಾದ ಗುಣಗಳಿಂದ ಪರಿಪೂರ್ಣನಾದ ಲಕ್ಷ್ಮೀದೇವಿ ಹಾಗೂ ಮುಖ್ಯಪ್ರಾಣನಿಗೆ ಪತಿಯಾದ ಭಗವಂತನಿಂದ ಪ್ರೇರಿತನಾಗಿ ಇಲ್ಲಿಯತನಕ ಏನನ್ನು ಹೇಳಿರುವೆನೋ ಇದರಿಂದ ಪುರುಷೋತ್ತಮನು ಪ್ರೀತನಾಗಲಿ.

ಇಲ್ಲಿಗೆ ಶ್ರೀಸುಧೀಂದ್ರತೀರ್ಥಗುರುಪಾದರ ಶಿಷ್ಯರಾದ ಶ್ರೀರಾಘವೇಂದ್ರ ಯತಿಗಳಿಂದ ರಚಿತವಾದ ಚಂದ್ರಿಕಾ ಪ್ರಕಾಶದಲ್ಲಿ ದ್ವಿತೀಯಾಧ್ಯಾಯದ ನಾಕನೇ ಪಾದವು ಸಮಾಪ್ತವಾಯಿತು.
ಅಧ್ಯಾಯವೂ ಕೂಡ ಸಂಪೂರ್ಣವಾಯಿತು. ಗ್ರಂಥವು ಸಮಾಪ್ತವಾಯಿತು.

॥ ಶ್ರೀಮಧ್ವೇಶಾರ್ಪಣಮಸ್ತು ॥

ಗ್ರಹಣದಲಿ ಮಂಕಲ್ಲವೇ ಚಂದ್ರ ಚಂದ್ರಿಕೆಗಳು
ಎಣೆಯುಂಟೆ ವ್ಯಾಸರಾಜರ ತಾತ್ಪರ್ಯಚಂದ್ರಿಕೆಗೆ ?!
ಪರಿಪೂರ್ಣಚಂದ್ರಿಕೆ ಪುನರುದಯಿಸಿದೆಯಿಂದು
ನೂರಾರು ವರುಷ ನಲಿದಾಡಲೆಂದು

ವ್ಯಯವೆನಗೆ ಅವ್ಯಯವಾಯಿತು ! ದುರ್ಮುಖವೆನಗೆ ಸುಮುಖವಾಯಿತು !
ದಶ ಸಂವತ್ಸರವೆನಗೆ ಸಾರ್ಥಕವಾಯಿತು
ವಿಷದವಿಷಯಗಳೆಲ್ಲ ಬಹುದೂರವಾಯಿತು
ಕನ್ನಡದ ಅನುವಾದ ಪರಿಪೂರ್ಣವಾಯಿತು
ಪೆಸರು ಶ್ರೀನಿವಾಸನದು ಬೆಮ್ಮತಿಯೆನಗೆ ಸಾಧನೆಯ ನೆಲೆಯು

ಇರುವುದೆಲ್ಲಾ ಗುರುಗಳ ಹೊನ್ನುಡಿ
ಮೈಮರೆಯಲಿಲ್ಲ...... ಬರೆಯಲಿಲ್ಲ ಇಲ್ಲಸಲ್ಲದ ಮಾತು
ಸಜ್ಜನರೆಲ್ಲ ಕೊಂಡಾಡಲಿ ..... ನುಸುಳಿದ ದೋಷ ತಿದ್ದಿ ಹರಸಲಿ
ಭಾವದೀಪವೇನು ! ಚಂದ್ರಿಕೆಯೇನು ! ಟೀಕೆಯೇನು ! ಭಾಷ್ಯವೇನು ! ಸೂತ್ರವೇನು !
ಬೆಳಗಿದಾ ಗುರುಗಳ ಒಲುಮೆ ಎನದಾಗಲಿ

ಅಸ್ಮದ್ಗುರ್ವಂತರ್ಗತ-ಹನುಮದ್-ಭೀಮ-ಮಧ್ವಾಂತರ್ಗತ-ರಾಮಕೃಷ್ಣವೇದವ್ಯಾಸಾತ್ಮಕ-
ಲಕ್ಷ್ಮೀಹಯಗ್ರೀವಾತ್ಮಕ-ಲಕ್ಷ್ಮೀವೇಂಕಟೇಶಃ ಪ್ರಿಯತಾಂ ।
॥ ಶ್ರೀಕೃಷ್ಣಾರ್ಪಣಮಸ್ತು ॥

ದುರ್ಮುಖ ॥ ಫಾಲ್ಗುಣ ॥ ಬಹುಳ ॥
ಶ್ರೀವ್ಯಾಸರಾಜಗುರುಸಾರ್ವಭೌಮರ ಆರಾಧನೆ
ದಿನಾಂಕ : 16-3-2017



## ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯರು
## ಸಂಪಾದನೆ ಹಾಗೂ ಅನುವಾದ ಮಾಡಿದ ಕೃತಿಗಳು

| | ಕೃತಿಗಳು | ಸಂಪುಟಗಳು | ಪುಟಗಳು |
|---|---|---|---|
| 1. | ಸುಧಾಸೌರಭ | 7 | 7000 |
| 2. | ಪರಿಪೂರ್ಣಚಂದ್ರಿಕಾ<br>(15ಕ್ಕೂ ಹೆಚ್ಚಿನ ಗ್ರಂಥಗಳನ್ನೊಳಗೊಂಡಿದೆ) | 12 | 11000 |
| 3. | ತತ್ವಪ್ರಕಾಶಿಕಾ ಭಾವದೀಪ<br>(ಸತ್ತರ್ಕದೀಪಾವಳಿ, ತತ್ವಪ್ರದೀಪಗಳ ಜೊತೆ) | 9 | 6658 |
| 4. | ತರ್ಕತಾಂಡವ ವಿಶ್ವರೂಪ | 2 | 1500 |
| 5. | ಮಹಾಭಾರತ ಕಿರುಹೊತ್ತಿಗೆಗಳು | 10 | 600 |
| 6. | ಮಿಂಚಿನ ಮಾರ್ಗ | | 200 |
| 7. | ಪರಿಮಳ ವಿಶೇಷಾಧ್ಯಯನ<br>(ವಾಕ್ಯಾರ್ಥಚಂದ್ರಿಕಾ ಸಹಿತ 8 ಗ್ರಂಥಗಳ<br>ಅನುವಾದ ಹಾಗೂ ಹತ್ತಾರು ಟಿಪ್ಪಣಿಗಳ ರಸಘಟ್ಟ) | 2 | 1500 |

ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯ
ನಂ. 71, ಕೃಷ್ಣ ರೋಡ್,
ಸೀತಾ ಸರ್ಕಲ್ ಹತ್ತಿರ, ಗಿರಿನಗರ,
ಬೆಂಗಳೂರು – 85. ಮೊ.: 9141495120

